لَا يَمَسُّهُ إِلَّا الْمُطَهَّرُونَ

# قرآن مجيد

# ಪವಿತ್ರ ಖುರ್‌ಆನ್

## ಕನ್ನಡ ಭಾಷಾಂತರ

# THE HOLY QUR'AN

**Arabic Text with**

**KANNADA TRANSLATION**

**PAVITRA QUR'AN**
KANNADA BHASHANTHARA

**THE HOLY QUR'AN**
KANNADA TRANSLATION

*Translated by :*
MUHAMMAD YUSUF
Mangalore

*Revised by :*
M. P. IBRAHIM
Manjeshwar

*Published by :*
NAZARAT NASHRO ISHAAT
Sadr Anjuman Ahmadiyya
Qadian - 143516

© ISLAM INTERNATIONAL PUBLICATIONS LTD., U.K.

*First Edition : 2004*

*Type Setting by :*
MADHUBAN GRAPHICS
Mangalore

*Printed at :*
PRINTWELL
146, Industrial Focal Point, Amritsar

**ISBN - 81-7912-062-7**

# THE HOLY QURAN

## ARABIC TEXT WITH KANNADA TRANSLATION

*Translated by :*
**Mr. Muhammad Yusuf**
*Revised by :*
**Mr. M.P. Ibrahim**

**Islam International Publications Ltd., U.K.**
**2004**

# THE HOLY QURAN

## KANNADA TRANSLATION

*is published under the auspices of*
HAZRAT MIRZA MASROOR AHMAD
KHALIFATUL MASIH V
*Supreme Head of the World-wide*
*Ahmadiyya Muslim Community*


*Available at :*

**AHMADIYYA MUSLIM MISSION**
**1, Third Cross Road, Vilsan Garden,**
**Bangalore-560027**
**Phone : 080-22246133**

•

**NAZARAT NASHR-O-ISHAAT**
**Sadr Anjuman Ahmadiyya, Qadian-143516**
**Distt. Gurdaspur, (Pb.) India**


# ಪವಿತ್ರ ಖುರ್‌ಆನ್

## ಕನ್ನಡ ಭಾಷಾಂತರ

★

*ಅನುವಾದಕ :*
**ಮುಹಮ್ಮದ್ ಯೂಸುಫ್**
ಮಂಗಳೂರು

★

*ಪರಿಶೀಲಕ :*
**ಎಂ. ಪಿ. ಇಬ್ರಾಹಿಂ**
ಮಂಜೇಶ್ವರ

★


*ಪ್ರಕಾಶಕರು :*
**ನಝಾರತ್ ನಶ್‌ರೋ ಇಶಾಅತ್**
ಭಾರತ

بِسْمِ اللّٰهِ الرَّحْمٰنِ الرَّحِيْمِ

# ಮುನ್ನುಡಿ

ಸರ್ವಲೋಕಗಳ ಪ್ರಭುವಾದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು; ಕೋಟಾನುಕೋಟಿ ನಮನಗಳು.

ಪವಿತ್ರ ಖುರ್‌ಆನಿನ ಕನ್ನಡ ಭಾಷಾಂತರವನ್ನು ಪ್ರಕಟಿಸುವ ನಮ್ಮ ಹಲವಾರು ವರ್ಷಗಳ ಮಹತ್ವಾಕಾಂಕ್ಷೆ ಇಂದು ಈಡೇರಿದೆ.

ಈ ಭಾಷಾಂತರವನ್ನು ಸಿದ್ಧಪಡಿಸಲು ಮೌಲವಿ ಶೇರ್ ಅಲಿ ಸಾಹೇಬರ ಖುರ್‌ಆನ್ ಭಾಷಾಂತರ "THE HOLY QUR'AN", ಅಹ್ಮದಿಯಾ ಮುಸ್ಲಿಂ ಜಮಾಅತಿನ ದ್ವಿತೀಯ ಖಲೀಫರಾದ ಹಝ್ರತ್ ಮಿರ್ಝಾ ಬಶೀರುದ್ದೀನ್ ಮಹ್ಮೂದ್ ಅಹ್ಮದ್ ಸಾಹೇಬರ ಖುರ್‌ಆನ್ ಭಾಷಾಂತರಗಳಾದ "ತಫ್‌ಸೀರ್ ಸಗೀರ್", "ತಫ್‌ಸೀರ್ ಕಬೀರ್" ಮತ್ತು "THE HOLY QUR'AN With English Translation and Commentary" (Vol. I to V), ಜನಾಬ್ ಮಲಿಕ್ ಗುಲಾಂ ಫರೀದ್ ಸಾಹೇಬರ ಖುರ್‌ಆನ್ ಭಾಷಾಂತರ "THE HOLY QUR'AN English Translation & Commentary", ಅಹ್ಮದಿಯಾ ಜಮಾಅತಿನ ಚತುರ್ಥ ಖಲೀಫರಾದ ಹಝ್ರತ್ ಮಿರ್ಝಾ ತಾಹಿರ್ ಅಹ್ಮದ್ ಸಾಹೇಬರ ಖುರ್‌ಆನ್ ಉರ್ದು ಭಾಷಾಂತರ "ಖುರ್‌ಆನ್ ಕರೀಂ", ಮೌಲವಿ ಮುಹಮ್ಮದ್ ಅಬುಲ್‌ವಫಾ ಸಾಹೇಬರ ಖುರ್‌ಆನ್ ಭಾಷಾಂತರ "ವಿಶುದ್ಧ ಖುರ್‌ಆನ್ ಮಲಯಾಳ ಪರಿಭಾಷ" ಇತ್ಯಾದಿಗಳ ಸಹಾಯವನ್ನು ಪಡೆಯಲಾಗಿದೆ.

ಕನ್ನಡ ಓದುಗರಿಗೆ ಅರಬಿ ಮೂಲ ಭಾಷೆಯಲ್ಲಿರುವ ಪವಿತ್ರ ಖುರ್‌ಆನಿನ ವಚನಗಳನ್ನು ಸರಿಯಾಗಿ ಮನವರಿಕೆಯಾಗುವಂತೆ ಮಾಡಲಿಕ್ಕಾಗಿ ಈ ಭಾಷಾಂತರದಲ್ಲಿ ಆವರಣಗಳನ್ನೂ (Brackets) ಇಟಾಲಿಕ್ ಅಕ್ಷರಗಳನ್ನೂ (Italics) ಬಳಸಲಾಗಿದೆ.

ಈ ಕನ್ನಡ ಭಾಷಾಂತರವನ್ನು ಜನಾಬ್ ಎಂ. ಪಿ. ಇಬ್ರಾಹಿಂ ಸಾಹೇಬರು ಆಮೂಲಾಗ್ರವಾಗಿಯೂ ಕೂಲಂಕಷವಾಗಿಯೂ ಪರಿಶೀಲಿಸಿರುತ್ತಾರೆ. ಬೇರೆಯೂ ಕೆಲವರು ಯೋಗ್ಯ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಇನ್ನು ಕೆಲವರು ಬೇರೆ ವಿಧದಲ್ಲಿ ನೆರವು ನೀಡಿದ್ದಾರೆ. ಅವರೆಲ್ಲರಿಗೂ ನಾವು ಆಭಾರಿಯಾಗಿದ್ದೇವೆ. ಅಲ್ಲಾಹನು ಅವರೆಲ್ಲರಿಗೂ ತಕ್ಕುದಾದ ಪ್ರತಿಫಲವನ್ನು ನೀಡಲಿ; ಆಮೀನ್.

ಪವಿತ್ರ ಖುರ್‌ಆನಿನ ಈ ಕನ್ನಡ ಭಾಷಾಂತರವನ್ನು ಅಲ್ಲಾಹನು ನಮ್ಮ ಒಂದು ಸತ್ಕರ್ಮವಾಗಿ ಸ್ವೀಕರಿಸಲಿ; ಆಮೀನ್.

ಮಂಗಳೂರು

30-6-2004

**ಮುಹಮ್ಮದ್ ಯೂಸುಫ್**

*ಅನುವಾದಕ*

# ಅಧ್ಯಾಯಾನುಕ್ರಮಣಿಕೆ

سُوْرَةُ الْفَاتِحَةِ مَكِّيَّةٌ وَّهِيَ مَعَ الْبَسْمَلَةِ سَبْعُ اٰيَاتٍ

# 1. ಅಲ್‌ಫಾತಿಹಃ[1]

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 7 ಆಯತ್ (ಸೂಕ್ತ)ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ﴿١﴾

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ**[2] (ಪ್ರಾರಂಭಿಸುತ್ತೇನೆ).

اَلْحَمْدُ لِلّٰهِ رَبِّ الْعٰلَمِيْنَ ﴿٢﴾

**2. ಎಲ್ಲ ಸ್ತುತಿ ಸರ್ವ ಲೋಕಗಳ ಪರಿಪಾಲಕನಾದ ಅಲ್ಲಾಹನಿಗೆ.**

الرَّحْمٰنِ الرَّحِيْمِ ﴿٣﴾

**3.** ಅವನು **ಪರಮ ದಯಾವಂತನೂ ಕಾರುಣ್ಯ ನಿಧಿಯೂ**

مٰلِكِ يَوْمِ الدِّيْنِ ﴿٤﴾

**4. ನ್ಯಾಯ ತೀರ್ಮಾನ ದಿನದ ಅಧಿಪತಿಯೂ** *ಆಗಿದ್ದಾನೆ.*

اِيَّاكَ نَعْبُدُ وَاِيَّاكَ نَسْتَعِيْنُ ﴿٥﴾

**5.** (ಓ ದೇವಾ,) **ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯವನ್ನು ಯಾಚಿಸುತ್ತೇವೆ.**[3]

اِهْدِنَا الصِّرَاطَ الْمُسْتَقِيْمَ ﴿٦﴾

**6. ನೀನು ನಮ್ಮನ್ನು ಸರಿಯಾದ ಮಾರ್ಗದಲ್ಲಿ ನಡೆಸು.**[4]

صِرَاطَ الَّذِيْنَ اَنْعَمْتَ عَلَيْهِمْ ۙ غَيْرِ الْمَغْضُوْبِ عَلَيْهِمْ وَلَا الضَّآلِّيْنَ ﴿٧﴾ ع

**7. ನಿನ್ನ ಅನುಗ್ರಹಕ್ಕೆ ಪಾತ್ರರಾದವರ,**[5] **ಕ್ರೋಧಕ್ಕೆ ಈಡಾಗದವರ ಮತ್ತು ದಾರಿತಪ್ಪದವರ ಮಾರ್ಗದಲ್ಲಿ**[6].

1. 'ಅಲ್‌ಫಾತಿಹಃ' ಪವಿತ್ರ ಖುರ್‌ಆನಿನ ಪ್ರಥಮ ಸೂರಃ ಅಥವಾ ಅಧ್ಯಾಯವಾಗಿದೆ. ಇದು ಪರಿಪೂರ್ಣವಾದೊಂದು ಪ್ರಾರ್ಥನೆಯಾಗಿದೆ. ಲೋಕದಲ್ಲಿ ಎಲ್ಲ ಕಾರ್ಯಗಳ ಶುಭಕ್ಕೋಸ್ಕರ ಪ್ರತ್ಯೇಕ ಪ್ರಾರ್ಥನೆ ಮಾಡಲಾಗುತ್ತದೆ. ಪವಿತ್ರ ಖುರ್‌ಆನ್ ಒಂದು ಪರಿಪೂರ್ಣ ಗ್ರಂಥವಾಗಿದ್ದು ಅದರ ಪ್ರಾರ್ಥನೆ ಸಹ ಅದರಲ್ಲೇ ಅಡಕವಾಗಿದೆ.

'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಂ' ಸಹಿತ ಈ ಅಧ್ಯಾಯದಲ್ಲಿ ಏಳು ವಚನಗಳಿವೆ. 'ಫಾತಿಹಃ' ಎಂಬ ಅರಬಿ ಪದಕ್ಕೆ ಪ್ರಾರಂಭ ಎಂದು ಅರ್ಥ. ಅಸ್ಸಲಾತ್ (ಪ್ರಾರ್ಥನೆ), ಅಲ್‌ಹಮ್ದ್ (ಸ್ತುತಿ), ಉಮ್ಮುಲ್ ಖುರ್‌ಆನ್ (ಖುರ್‌ಆನಿನ ಮೂಲ), ಖುರ್‌ಆನುಲ್ ಅಝೀಂ (ಮಹತ್ತರ ಖುರ್‌ಆನ್), ಅಸ್ಸಬ್‌ಅಲ್ ಮಸಾನಿ (ಪದೇ ಪದೇ ಪಠಿಸಲ್ಪಡುವ ಏಳು ವಚನಗಳು), ಉಮ್ಮುಲ್ ಕಿತಾಬ್ (ಗ್ರಂಥದ ಮೂಲ), ಅಶ್ಶಿಫಾಅ್ (ಶಮನ), ಅರ್ರುಖ್‌ಯಃ (ಮಂತ್ರ), ಅಲ್‌ಕನ್‌ಸ್ (ನಿಧಿ) ಎಂಬೀ ನಾಮಗಳು ಸಹ ಈ ಅಧ್ಯಾಯಕ್ಕೆ ಇವೆ.





ಖುರ್‌ಆನ್ ಪಾರಾಯಣ ಮಾಡುವುದಕ್ಕೆ ಮುಂಚೆ اَعُوْذُ بِاللّٰهِ مِنَ الشَّيْطٰنِ الرَّجِيْمِ **"ಅಊದು ಬಿಲ್ಲಾಹಿ ಮಿನಶ್ಶೈತಾನಿರ್ರಜೀಂ"** (ತಿರಸ್ಕೃತನಾದ ಶೈತಾನನ ಉಪದ್ರದಿಂದ ನಾನು ಅಲ್ಲಾಹನ ಅಭಯವನ್ನು ಯಾಚಿಸುತ್ತೇನೆ) ಎಂದು ಪ್ರಾರ್ಥಿಸಲು ಆದೇಶವಿದೆ. ಈ ಪ್ರಾರ್ಥನೆ ಸಹ ಖುರ್‌ಆನಿನ ಒಂದು ಅಂಶವೇ ಆಗಿದೆ. ಖುರ್‌ಆನಿನಲ್ಲಿ ಹೀಗೆ ಉಲ್ಲೇಖವಿದೆ :

فَاِذَا قَرَاْتَ الْقُرْاٰنَ فَاسْتَعِذْ بِاللّٰهِ مِنَ الشَّيْطٰنِ الرَّجِيْمِ

**"ಫ ಇದಾ ಖರಅ್‌ತಲ್ ಖುರ್‌ಆನ ಫಸ್ತ‌ಇದ್ ಬಿಲ್ಲಾಹಿ ಮಿನಶ್ಶೈತಾನಿ ರ್ರಜೀಂ"**

"ನೀನು ಖುರ್‌ಆನ್ ಪಾರಾಯಣ ಮಾಡುವಾಗ ತಿರಸ್ಕೃತನಾದ ಶೈತಾನನ ಉಪದ್ರದಿಂದ (ರಕ್ಷಿಸಲ್ಪಡಲಿಕ್ಕಾಗಿ) ಅಲ್ಲಾಹನ ಅಭಯವನ್ನು ಯಾಚಿಸು." (16:99)

ಖುರ್‌ಆನಿನ ಒಂದು ಅಧ್ಯಾಯದ ಆರಂಭದಿಂದ ಅಥವಾ ಮಧ್ಯದಿಂದ ಪಾರಾಯಣ ಮಾಡುವುದಾದರೂ ಈ ಪ್ರಾರ್ಥನೆ ಮಾಡಬೇಕಾಗಿದೆ.

2. ನಾವು "ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಂ" ಎಂಬ ವಚನವನ್ನು ಅಧ್ಯಾಯದ ಅಂಶವೆಂದು ಪರಿಗಣಿಸುತ್ತೇವೆ. ಏಕೆಂದರೆ ಹಝ್ರತ್ ಮುಹಮ್ಮದ್ ಪೈಗಂಬರ್ ಸಲ್ಲಲ್ಲಾಹು ಅಲೈಹಿ ವ ಸಲ್ಲಮರಿಂದ ಹಾಗೆ ಸಾಬೀತಾಗಿದೆ. [ವಿವರಣೆಗೆ ಅಹ್ಮದಿಯಾ ಮುಸ್ಲಿಂ ಜಮಾಅತಿನ ದ್ವಿತೀಯ ಖಲೀಫರಾದ ಹಝ್ರತ್ ಮಿರ್ಝಾ ಬಶೀರುದ್ದೀನ್ ಮಹ್ಮೂದ್ ಅಹ್ಮದ್ ಸಾಹೇಬ್ (ರಝಿಯಲ್ಲಾಹು ಅನ್‌ಹು) ಬರೆದ "ತಫ್ಸೀರ್ ಕಬೀರ್" ಪ್ರಥಮ ಸಂಪುಟ, ಸೂರತುಲ್ ಫಾತಿಹಃ ನೋಡಿರಿ]

ಅಲ್ಲಾಹನ ಅತಿ ಪ್ರಧಾನವಾದ ಎರಡು ಗುಣಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ -- "ರಹ್ಮಾನ್" ಮತ್ತು "ರಹೀಂ." "ರಹ್ಮಾನ್" ಎಂಬ ಗುಣವು, ಅವನು ಮನುಷ್ಯರೆಲ್ಲರಿಗೂ - ವಿಶ್ವಾಸಿಗಳಿಗೂ ಅವಿಶ್ವಾಸಿಗಳಿಗೂ - ಇಡೀ ಪ್ರಪಂಚಕ್ಕೂ ಪರಮ ದಯಾವಂತನಾಗಿದ್ದಾನೆಂದು ಸೂಚಿಸುತ್ತದೆ. ಆದರೆ "ರಹೀಂ" ಎಂಬ ಅವನ ಗುಣವು, ಮನುಷ್ಯರ ಪ್ರಯತ್ನದೊಂದಿಗೆ ಸಂಬಂಧಪಟ್ಟ ಅವನ ಕಾರುಣ್ಯವನ್ನು ಸೂಚಿಸುತ್ತದೆ. ಸೂರ್ಯ, ಚಂದ್ರ, ವಾಯು, ನೀರು ಇತ್ಯಾದಿ ಅನುಗ್ರಹಗಳು ಮೊದಲ ವರ್ಗಕ್ಕೆ ಸೇರುತ್ತವೆ. ಮನುಷ್ಯನು ಸೃಷ್ಟಿಸಲ್ಪಡುವುದಕ್ಕಿಂತ ಮುಂಚೆಯೇ ಮೇಲೆ ಹೇಳಿದ ಅನುಗ್ರಹಗಳನ್ನು ಅವನು ಸಿದ್ಧಪಡಿಸಿಟ್ಟಿರುವನು. ಇದು ಮನುಷ್ಯನ ಪ್ರಯತ್ನ ಅಥವಾ ಪ್ರಾರ್ಥನೆಯ ಫಲವಲ್ಲ. ಮನುಷ್ಯನ ಸನ್ಮಾರ್ಗಕ್ಕಾಗಿ ಅಲ್ಲಾಹನು ಪ್ರವಾದಿಗಳನ್ನು ನಿಯೋಜಿಸುವುದು ಸಹ "ರಹ್ಮಾನ್" ಎಂಬ ಗುಣದ ಅರ್ಥದಲ್ಲಿ ಸೇರುತ್ತದೆ. ಆದರೆ ಪ್ರವಾದಿಗಳ ಅಧ್ಯಾಪನೆಗಳನ್ನು ಅನುಸರಿಸಿ ಮನುಷ್ಯನು ಸತ್ಕರ್ಮಗಳನ್ನು ಮಾಡುವುದರ ಮೂಲಕ ಸತ್ಫಲಗಳನ್ನು ಅನುಭವಿಸುವುದು ಅಲ್ಲಾಹನ "ರಹೀಂ" ಎಂಬ ಗುಣದ ಅರ್ಥದಲ್ಲಿ ಒಳಗೊಳ್ಳುತ್ತದೆ. ಈ ಕಾರುಣ್ಯವು ಪ್ರಧಾನವಾಗಿ ಪರಲೋಕದಲ್ಲಿ ಅನುಭವಿಸಲಿಕ್ಕಿರುವುದಾಗಿದೆ. ಆದರೂ ಐಹಿಕ ಜೀವಿತದಲ್ಲಿ ಮನುಷ್ಯನ ಪ್ರಯತ್ನ ಮತ್ತು ಗವೇಷಣೆಗಳ ಯಶಸ್ವಿ ಹಾಗೂ ಪ್ರಾರ್ಥನಾಫಲ ಸಹ ಈ ವಿಶೇಷಣದಲ್ಲೇ ಅಡಕವಾಗಿರುತ್ತದೆ.

3. ಇದರಲ್ಲಿ ಮತ್ತು ಇದರ ನಂತರದ ವಚನಗಳಲ್ಲಿ ಬಹುವಚನ ಪ್ರಯೋಗಿಸಲ್ಪಟ್ಟದ್ದು ಗಮನಾರ್ಹ. ಇದೊಂದು ಸಾಮೂಹಿಕ ಪ್ರಾರ್ಥನೆಯಾಗಿದೆ. ಇಸ್ಲಾಂ ಎಲ್ಲರ ಸರ್ವತೋಮುಖವಾದ ಪ್ರಗತಿಯನ್ನು ಬಯಸುವ ಒಂದು ನಾಗರಿಕ ಧರ್ಮವಾಗಿದೆ ಎಂಬ ಸೂಚನೆ ಇದರಲ್ಲಿದೆ. ಪ್ರತಿಯೊಬ್ಬ ಮುಸ್ಲಿಮನು ಇತರರ ಮೇಲ್ನೋಟಗಾರನಾಗಿದ್ದಾನೆಂಬುದು ಇಸ್ಲಾಮಿನ ತತ್ವವಾಗಿದೆ. ತಾನು ಪ್ರಾರ್ಥಿಸುವುದರ ಜೊತೆಗೆ ಇತರರನ್ನು ಪ್ರಾರ್ಥಿಸಲಿಕ್ಕೆ ಪ್ರೇರೇಪಿಸುವುದು ಅವನ ಕರ್ತವ್ಯ. ತಾನು ಸತ್ಪಥದಲ್ಲಿ ಚಲಿಸುವುದರೊಂದಿಗೆ ಇತರರು ಸಹ ಸರಿಯಾದ ದಾರಿಯಲ್ಲಿ ನಡೆಯಲಿಕ್ಕಾಗಿ ಉಪದೇಶ-ನಿರ್ದೇಶನಗಳನ್ನು ನೀಡಬೇಕಾಗಿದೆ. ಬೋಧನೆ ಮತ್ತು ಶಿಕ್ಷಣದ ಮಹತ್ವ ಇದರಲ್ಲಿ ಅಡಕವಾಗಿದೆ. ಆರಾಧನೆ, ದೈವಿಕ ಸಹಾಯ ಯಾಚನೆ ಮತ್ತು ಸನ್ಮಾರ್ಗ ಸಿದ್ಧಿಗೋಸ್ಕರ ಪ್ರಾರ್ಥನೆ - ಇವು ಸಾಮೂಹಿಕ ನೆಲೆಯಲ್ಲಿ ಮಾತ್ರವೇ ಪರಿಪೂರ್ಣವಾಗುತ್ತವೆ. ಒಬ್ಬನು ಒಬ್ಬಂಟಿಗನಾಗಿ ಆರಾಧಿಸುವನಾದರೆ ಪರಿಮಿತವಾದ ಸಮಯ ಮತ್ತು ವೃತ್ತದಲ್ಲಿ ಮಾತ್ರ ಆತನ ಆರಾಧನೆ ಸೀಮಿತಗೊಳ್ಳುತ್ತದೆ. ಆದರೆ ಓರ್ವನು ತನ್ನ ಪತ್ನಿ-ಮಕ್ಕಳನ್ನೂ ಬಂಧು ಬಾಂಧವರನ್ನೂ ಸಮಾಜವನ್ನೂ ಸೇರಿಸಿಕೊಂಡು ಸಾಮೂಹಿಕವಾಗಿ ಪ್ರಾರ್ಥಿಸುವಾಗ ಆತನ ಆರಾಧನೆಯ ಮಂಡಲ ವಿಶಾಲವಾಗುತ್ತದೆ.

4. ಸರ್ವೋನ್ನತವೂ ಪರಿಪೂರ್ಣವೂ ನಿಸ್ತುಲ್ಯವೂ ಆದ ಒಂದು ಪ್ರಾರ್ಥನೆಯನ್ನು ಈ ಸೂಕ್ತಿಯಲ್ಲಿ ಕಲಿಸಲಾಗಿದೆ. ಈ ಪ್ರಾರ್ಥನೆ ಸೀಮಿತವಾದ ಉದ್ದೇಶವನ್ನಿರಿಸಿಕೊಂಡಿಲ್ಲ. ಕಿರಿದು ಮತ್ತು ಹಿರಿದಾದ ಎಲ್ಲ ವಿಧ ಆವಶ್ಯಕತೆಗಳೂ ಇದರಲ್ಲಿ ಒಳಗೊಳ್ಳುತ್ತವೆ.

ಧಾರ್ಮಿಕ ಮತ್ತು ಭೌತಿಕವಾದ ಎಲ್ಲ ಕಾರ್ಯಗಳಿಗೂ ಇದು ಪ್ರಯೋಜನಕಾರಿಯಾಗಿದೆ. ಧಾರ್ಮಿಕ ಅಥವಾ ಭೌತಿಕವಾದ ಯಾವುದೇ ಕಾರ್ಯವನ್ನು ಗಳಿಸಲಿಕ್ಕೆ ಅದರದೇ ಆದ ಒಂದು ಮಾರ್ಗವಿರುತ್ತದೆ. ಆ ಮಾರ್ಗವನ್ನು ಅವಲಂಬಿಸುವುದರ ಮೂಲಕ ಮಾತ್ರವೇ ಮನುಷ್ಯನಿಗೆ ವಿಜಯ ದೊರಕುತ್ತದೆ. ಕೆಲವೊಮ್ಮೆ ಒಂದು ಕಾರ್ಯ ಮಾಡಲಿಕ್ಕೆ ವಿಭಿನ್ನ ಮಾರ್ಗಗಳಿರಬಹುದು. ಅವುಗಳಲ್ಲಿ ಕೆಲವು ಅಹಿತ ಮತ್ತು ಕೆಲವು ವಿಹಿತ ಆಗಿರಬಹುದು. ವಿಹಿತವಾದವುಗಳಲ್ಲಿ ಸಹ ಕೆಲವು ಬೇಗನೇ ಮತ್ತು ಕೆಲವು ತಡವಾಗಿ ಈಡೇರುತ್ತವೆ. "ಇಹ್ದಿನಸ್ಸಿರಾತಲ್ ಮುಸ್ತಖೀಮ್" ಎಂಬ ವಚನದಲ್ಲಿ ಅತಿ ಉತ್ತಮ ಹಾಗೂ ಬೇಗನೇ ಜಯಸಿಗುವಂತಹ ಮಾರ್ಗದಲ್ಲಿ "ನೀನು ನಮ್ಮನ್ನು ನಡೆಸು" ಎಂದು ಪ್ರಾರ್ಥಿಸಲಿಕ್ಕೆ ಕಲಿಸಲಾಗಿದೆ.

ಸತ್ಪಥವನ್ನು ಗಳಿಸಿದ ಮುಸ್ಲಿಮರು ಮಾತ್ರವಲ್ಲ, ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಸಹ ಎಲ್ಲ ನಮಾಝ್‌ಗಳಲ್ಲೂ ಹೀಗೆ ಪ್ರಾರ್ಥಿಸಬೇಕೆಂದು ನಿರ್ದೇಶಿಸಲ್ಪಟ್ಟದ್ದು ಏಕೆಂದು ಪ್ರಶ್ನೆ ಉದ್ಭವಿಸಬಹುದು. ದಿವ್ಯಜ್ಞಾನ ಮತ್ತು ದೇವಸಾಮೀಪ್ಯದ ಪದವಿಗಳು ಅನಂತವೆಂಬ ನಿಜಸ್ಥಿತಿಯನ್ನು ಗ್ರಹಿಸುವಾಗ ಈ ಪ್ರಶ್ನೆಗೆ ಸ್ಥಾನವಿಲ್ಲ. ಮುಹಮ್ಮದ್ ಪೈಗಂಬರ್ (ಸ) ಪರಿಪೂರ್ಣತೆಯನ್ನು ಪಡೆದವರೂ ದೇವಸಾಮೀಪ್ಯದ ಪರಮೋನ್ನತಿಯನ್ನು ಗಳಿಸಿದವರೂ ಆಗಿದ್ದರೂ ದೇವರು ಅಪರಿಮಿತವಾದ ಶಕ್ತಿ ಸಾಮರ್ಥ್ಯವುಳ್ಳವನೂ ಅಪಾರವಾದ ಅನುಗ್ರಹದಾಯಕನೂ ಆಗಿದ್ದಾನೆ. ಆಧ್ಯಾತ್ಮಿಕವಾಗಿ ಒಬ್ಬನು ಎಷ್ಟೇ ಅಭಿವೃದ್ಧಿ ಹೊಂದಿದರೂ ಅದರಾಚೆ ಸಹ ಆತನಿಗೆ ಪ್ರಗತಿ ಗಳಿಸಲಿಕ್ಕಿರುವ ಮಾರ್ಗಗಳು ತೆರೆದಿರಿಸಲ್ಪಟ್ಟಿವೆ. ಆದ್ದರಿಂದ "ಇಹ್ದಿನಸ್ಸಿರಾತಲ್ ಮುಸ್ತಖೀಮ್" ಎಂಬ ಈ ಪ್ರಾರ್ಥನೆ ಅವಶ್ಯವಿಲ್ಲದ ಒಂದು ಸ್ಥಿತಿ ಯಾರಿಗೂ ಉಂಟಾಗುವುದಿಲ್ಲ.

5. ಪೂರ್ವಕಾಲದಲ್ಲಿ ಅನುಗ್ರಹೀತರಾದ ಮಹಾತ್ಮರುಗಳಿಗೂ ಅನುಗ್ರಹೀತ ಸಮುದಾಯಗಳಿಗೂ ಲಭಿಸಿದ ಎಲ್ಲ ವಿಧ ಅನುಗ್ರಹಗಳು ಮತ್ತು ಅವುಗಳ ಕಡೆಗೆ ಅವರನ್ನು ಕೊಂಡೊಯ್ದ ಮಾರ್ಗಗಳು ಈ ಸಮುದಾಯಕ್ಕೆ ಸಹ ಲಭಿಸುವಂತೆ ಮಾಡು ಎಂದು ಈ ಸಾಮೂಹಿಕ ಪ್ರಾರ್ಥನೆಯ ತಾತ್ಪರ್ಯವಾಗಿದೆ.

6. ಮುಹಮ್ಮದ್ ಪೈಗಂಬರ್ (ಸ) ಸೂರತುಲ್ ಫಾತಿಹಃ ಓದಿ وَلَا الضَّآلِّيْنَ ತನಕ ತಲಪಿದರೆ آمين ಎಂದು ಹೇಳಿಕೊಂಡು ನಿಲ್ಲಿಸುತ್ತಿದ್ದರೆಂದು ಹದೀಸುಗಳಲ್ಲಿದೆ. ಇದು ಪ್ರಾರ್ಥನೆಯ ಅನುಬಂಧವಾಗಿ ಹೇಳಲ್ಪಡುವ ಒಂದು ಪದ. ಈ ಪ್ರಾರ್ಥನೆಯನ್ನು ಸ್ವೀಕರಿಸು ಎಂದು ಇದರ ಅರ್ಥ.



سُورَةُ الْبَقَرَةِ مَدَنِيَّةٌ وَهِيَ مَعَ الْبَسْمَلَةِ مِائَتَانِ وَسَبْعٌ وَثَمَانُونَ آيَةً وَأَرْبَعُونَ رُكُوعًا

## 2. ಅಲ್‌ಬಖರಃ

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 287 ಆಯತ್‌ಗಳು ಹಾಗೂ
40 ರುಕೂಅ್ (ಖಂಡಿಕೆ)ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಅಲಿಫ್ ಲಾಮ್ ಮೀಮ್**[7]

الٓمٓ ②

**3. ಇದು**[7A] **ಪರಿಪೂರ್ಣ ಗ್ರಂಥವಾಗಿದೆ. ಇದರಲ್ಲಿ ಸಂದೇಹವೇನೂ ಇಲ್ಲ. ಭಯಭಕ್ತಿಯುಳ್ಳವರಿಗೆ** (ಇದು) **ಒಂದು ಮಾರ್ಗದರ್ಶನವಾಗಿದೆ –**

ذٰلِكَ الْكِتٰبُ لَا رَيْبَ ۛ فِيْهِ ۛ هُدًى لِّلْمُتَّقِيْنَ ②

---

7. الٓمٓ - ಅನ ಅಲ್ಲಾಹು ಅಅ್‌ಲಮು (ನಾನು ಅಲ್ಲಾಹ್ ಎಲ್ಲವನ್ನೂ ಬಲ್ಲವನು). ಈ ರೀತಿಯ ಪ್ರಯೋಗಗಳು ಬೇರೆ ಕೆಲವು ಅಧ್ಯಾಯಗಳ ಆರಂಭದಲ್ಲೂ ಇವೆ. ಇವುಗಳನ್ನು 'ಮುಖತ್ತಆತ್' مُقَطَّعَات ಎಂದು ಹೇಳಲಾಗುತ್ತದೆ ಈ ಅಕ್ಷರಗಳು ಬೇರೆ ಬೇರೆಯಾಗಿ ಉಚ್ಚರಿಸಲ್ಪಡುತ್ತವೆ. ಇವುಗಳಲ್ಲಿರುವ ಒಂದೊಂದು ಅಕ್ಷರ ಒಂದೊಂದು ಪದದ ಸಂಕ್ಷಿಪ್ತ ರೂಪವಾಗಿದೆ. ಉದಾಹರಣೆಗೆ, الٓمٓ ಎಂಬುದರಲ್ಲಿ ಆಲಿಫ್ انا ದ ಸ್ಥಾನದಲ್ಲೂ ಲಾಮ್ الله ಎಂಬುದರ ಸ್ಥಾನದಲ್ಲೂ ಮೀಂ اعلم ಎಂಬುದರ ಸ್ಥಾನದಲ್ಲೂ ಇವೆ. ಅಂದರೆ الٓمٓ ಎಂಬ ಮೂರಕ್ಷರಗಳು ಸೇರಿ انا الله اعلم (ನಾನು ಅಲ್ಲಾಹ್ ಎಲ್ಲವನ್ನೂ ಬಲ್ಲವನು) ಎಂದರ್ಥವಾಗುತ್ತದೆ. ಈ ಅಕ್ಷರಗಳ ಮೂಲಕ ಈ ಅಧ್ಯಾಯದಲ್ಲಿ ವಿವರಿಸಲಾದ ಅಲ್ಲಾಹನ ಗುಣಗಳ ಬಗ್ಗೆ ಸಂಕ್ಷಿಪ್ತವಾದ ಸೂಚನೆಗಳು ಲಭಿಸುತ್ತವೆ. ಇಂತಹ ಮುಖತ್ತಅ ಮೂಲಕ ಪ್ರಾರಂಭಿಸಲ್ಪಡದ ಅಧ್ಯಾಯಗಳು ಅದಕ್ಕಿಂತ ಮುಂಚೆ ಬಂದ ಮುಖತ್ತಅ ಇರುವ ಅಧ್ಯಾಯಗಳ ಮುಂದುವರಿಕೆಯಾಗಿದೆ. ಕೆಲವು ಖುರ್‌ಆನ್ ವ್ಯಾಖ್ಯಾನಗಾರರು ಈ ಅಕ್ಷರಗಳ ಮೂಲಕ 'ಇಲ್ಮುಲ್ ಅಬ್‌ಜದ್' ಪ್ರಕಾರ ಲೆಕ್ಕ ಹಾಕಿದ್ದಾರೆ. ಈ ಅಧ್ಯಾಯಗಳಲ್ಲಿ ವಿವರಿಸಲ್ಪಟ್ಟ ಕೆಲವು ಘಟನೆಗಳ ಬಗ್ಗೆ ಆ ಮೂಲಕ ಸೂಚನೆ ನೀಡಲಾಗಿದೆಯೆಂದು ಅವರು ಹೇಳುತ್ತಾರೆ. (ಹೆಚ್ಚಿನ ವಿವರಣೆಗೆ ತಫ್ಸೀರ್ ಕಬೀರ್ ನೋಡಿರಿ.)

7A. ذٰلِكَ ಅದು ಎಂದು ಅರ್ಥ. ಕೆಲವೊಮ್ಮೆ 'ಇದು' ಎಂದು ಸಹ ಅರ್ಥಕೊಡಲಾಗುತ್ತದೆ. ಸೂಚಿಸಲ್ಪಡುವ ವಸ್ತು ಸಮೀಪವಿದ್ದರೂ ಅದರ ಮಹತ್ವವನ್ನು ತೋರಿಸಲಿಕ್ಕಾಗಿ ಈ ಪದ ಪ್ರಯೋಗಿಸಲ್ಪಡುತ್ತದೆ. ಇದಲ್ಲದೆ ಸೂರತುಲ್ ಫಾತಿಹಃ ದಲ್ಲಿ "ಇಹ್ದಿನಸ್ಸಿರಾತಲ್ ಮುಸ್ತಖೀಂ" (ನೀನು ನಮ್ಮನ್ನು ಸರಿಯಾದ ಮಾರ್ಗದಲ್ಲಿ ನಡೆಸು) ಎಂಬ ವಚನ ಮೂಲಕ ಸೂಚಿಸಲ್ಪಟ್ಟ ಮಾರ್ಗವನ್ನು ತೋರಿಸುವ ಆ ಗ್ರಂಥವಾಗಿದೆ ذٰلِكَ ಎಂಬ ಪದದ ಇನ್ನೊಂದು ಉದ್ದೇಶ. ಅಂದರೆ ಯಾವ ಸರಿಯಾದ ಮಾರ್ಗಕ್ಕೋಸ್ಕರ ಪ್ರಾರ್ಥನೆಯು ಸೂರತುಲ್ ಫಾತಿಹಃದಲ್ಲಿ ಕಲಿಸಲ್ಪಟ್ಟಿದೆಯೋ ಆ ಸರಿಯಾದ ಮಾರ್ಗ ಒಳಗೊಂಡಿರುವ ಪರಿಪೂರ್ಣ ಗ್ರಂಥವೆಂದು ತಾತ್ಪರ್ಯ. ಆಗ ذٰلِكَ ಎಂಬ ಪದಕ್ಕೆ ಅದು ಎಂದೇ ಅರ್ಥ ಕೊಡಬಹುದಾಗಿದೆ. ಏಕೆಂದರೆ ಸೂರತುಲ್ ಫಾತಿಹಃ ಬೇರೆ ಅಧ್ಯಾಯವಷ್ಟೆ.

4. ಅವರಾದರೋ ಅದೃಶ್ಯ ವಿಚಾರಗಳಲ್ಲಿ ನಂಬಿಕೆಯುಳ್ಳವರೂ ನಮಾಝನ್ನು ನಿಷ್ಠೆಯಿಂದ ನಿರ್ವಹಿಸುವವರೂ ನಾವು ಅವರಿಗೆ ನೀಡಿದವುಗಳಿಂದ ಖರ್ಚು ಮಾಡುವವರೂ ಆಗಿದ್ದಾರೆ.

الَّذِيْنَ يُؤْمِنُوْنَ بِالْغَيْبِ وَ يُقِيْمُوْنَ الصَّلٰوةَ وَمِمَّا رَزَقْنٰهُمْ يُنْفِقُوْنَ ﴿٣﴾

5. ನಿನಗೆ ಅವತೀರ್ಣವಾದುದರಲ್ಲಿಯೂ ನಿನಗಿಂತ ಮುಂಚೆ ಅವತೀರ್ಣವಾದುದರಲ್ಲಿಯೂ ಅವರು ವಿಶ್ವಾಸವಿಡುತ್ತಾರೆ. ಪರಲೋಕ (ಜೀವಿತ)ದಲ್ಲೂ[8] ಅವರು ದೃಢ ನಂಬಿಕೆಯುಳ್ಳವರಾಗಿದ್ದಾರೆ.

وَالَّذِيْنَ يُؤْمِنُوْنَ بِمَآ اُنْزِلَ اِلَيْكَ وَمَآ اُنْزِلَ مِنْ قَبْلِكَ ۚ وَبِالْاٰخِرَةِ هُمْ يُوْقِنُوْنَ ﴿٤﴾

6. ಅವರು ತಮ್ಮ ಪ್ರಭುವಿನ ಮಾರ್ಗ ದರ್ಶನವನ್ನು ಅನುಸರಿಸುವವರಾಗಿದ್ದಾರೆ. ಅವರೇ ವಿಜಯ ಹೊಂದುವವರು.

اُولٰٓئِكَ عَلٰى هُدًى مِّنْ رَّبِّهِمْ ۙ وَاُولٰٓئِكَ هُمُ الْمُفْلِحُوْنَ ﴿٥﴾

7. ಅವಿಶ್ವಾಸಿಗಳಾದರೋ - ನೀನು ಅವರಿಗೆ ಮುನ್ನೆಚ್ಚರಿಕೆ ನೀಡಿದರೂ ನೀಡದಿದ್ದರೂ ಅವರಿಗೆ ಅದು ಸಮ - (ಅವರ ಸ್ಥಿತಿಯಲ್ಲಿ ಬದಲಾವಣೆ ಉಂಟಾಗುವವರೆಗೂ) ಅವರು ನಂಬಲಾರರು.

اِنَّ الَّذِيْنَ كَفَرُوْا سَوَآءٌ عَلَيْهِمْ ءَاَنْذَرْتَهُمْ اَمْ لَمْ تُنْذِرْهُمْ لَا يُؤْمِنُوْنَ ﴿٦﴾

8. ಅವರ ಹೃದಯಗಳ ಮೇಲೂ ಕಿವಿಗಳ ಮೇಲೂ ಅಲ್ಲಾಹನು ಮುದ್ರೆ ಹಾಕಿದ್ದಾನೆ. ಅವರ ಕಣ್ಣುಗಳ ಮೇಲೆ ಪರದೆ ಇದೆ. ಅವರಿಗೆ ಘೋರ ಶಿಕ್ಷೆಯೂ ಇದೆ.

خَتَمَ اللّٰهُ عَلٰى قُلُوْبِهِمْ وَعَلٰى سَمْعِهِمْ ؕ وَعَلٰٓى اَبْصَارِهِمْ غِشَاوَةٌ ۫ وَّلَهُمْ عَذَابٌ عَظِيْمٌ ﴿٧﴾

9. ಜನರ ಪೈಕಿ ಕೆಲವರು, 'ನಾವು ಅಲ್ಲಾಹನನ್ನೂ ಅಂತ್ಯ ದಿನದ ಕುರಿತೂ ನಂಬುತ್ತೇವೆ' ಎಂದು ಹೇಳುತ್ತಾರೆ. ಆದರೆ ಅವರು (ವಾಸ್ತವಿಕವಾಗಿ) ವಿಶ್ವಾಸಿಗಳಲ್ಲ.

وَمِنَ النَّاسِ مَنْ يَّقُوْلُ اٰمَنَّا بِاللّٰهِ وَبِالْيَوْمِ الْاٰخِرِ وَمَا هُمْ بِمُؤْمِنِيْنَ ﴿٨﴾

10. ಅವರು ಅಲ್ಲಾಹನಿಗೂ ವಿಶ್ವಾಸಿಗಳಿಗೂ ಮೋಸ ಮಾಡಲು ಬಯಸುತ್ತಾರೆ. ಆದರೆ, ಸ್ವಯಂ ಅವರನ್ನೇ

يُخٰدِعُوْنَ اللّٰهَ وَ الَّذِيْنَ اٰمَنُوْا ۚ وَمَا

8. 'ಆಖಿರತ್' ಎಂಬ ಪದದ ಪ್ರಥಮ ಅರ್ಥ ಪರಲೋಕ ಎಂದಾಗಿದೆ. ಈ ಪದಕ್ಕೆ - ಬರಲಿಕ್ಕಿರುವ, ನಂತರ ಬರುವ, ಉತ್ತರ ಕಾಲದ, ಕೊನೆಯ ಎಂಬೀ ಅರ್ಥಗಳು ಸಹ ಇವೆ. ಈ ಅರ್ಥ ಪ್ರಕಾರ ಮುಂದೆ ಘಟಿಸುವ ವಾಗ್ದತ್ತ ಸಂಭವಗಳು ಎಂದು ತಾತ್ಪರ್ಯ.





ಹೊರತು ಬೇರೆ ಯಾರನ್ನೂ ಅವರು ವೋಸ ಮಾಡಲಾರರು. ಆದರೆ ಅದನ್ನು ಅವರು ಗ್ರಹಿಸುವುದಿಲ್ಲ.

يَخْدَعُوْنَ اِلَّآ اَنْفُسَهُمْ وَمَا يَشْعُرُوْنَ ﴿٩﴾

11. ಅವರ ಹೃದಯಗಳಲ್ಲಿ ರೋಗವಿದೆ. ಅಲ್ಲಾಹನು ಅವರ ರೋಗವನ್ನು ವೃದ್ಧಿಗೊಳಿಸಿದನು. ಅವರು ಪರಸ್ಪರ ಸುಳ್ಳು ಹೇಳುತ್ತಿದ್ದ ಕಾರಣ ಅವರಿಗೆ ಕಠೋರ ಶಿಕ್ಷೆ ಕಾದಿದೆ.

فِيْ قُلُوْبِهِمْ مَّرَضٌ ۙ فَزَادَهُمُ اللّٰهُ مَرَضًا ۚ وَلَهُمْ عَذَابٌ اَلِيْمٌ ۢ ۙ بِمَا كَانُوْا يَكْذِبُوْنَ ﴿١٠﴾

12. 'ಭೂಮಿಯಲ್ಲಿ ಕಲಹವನ್ನುಂಟು ಮಾಡಬೇಡಿರಿ' ಎಂದು ಅವರೊಡನೆ ಹೇಳುವಾಗ, 'ನಾವು ಶಾಂತಿಗಾಗಿ ಶ್ರಮಿಸುವವರು' ಎಂದು ಅವರು ಮರು ನುಡಿಯುತ್ತಾರೆ.

وَاِذَا قِيْلَ لَهُمْ لَا تُفْسِدُوْا فِى الْاَرْضِ ۙ قَالُوْٓا اِنَّمَا نَحْنُ مُصْلِحُوْنَ ﴿١١﴾

13. ಎಚ್ಚರಿಕೆಯಿಂದಿರಿ! ಖಂಡಿತವಾಗಿಯೂ ಅವರೇ ಕಲಹವನ್ನು ಸೃಷ್ಟಿಸುವವರಾಗಿದ್ದಾರೆ. ಆದರೆ ಅವರು ಅದನ್ನು ಗ್ರಹಿಸುವುದಿಲ್ಲ.

اَلَآ اِنَّهُمْ هُمُ الْمُفْسِدُوْنَ وَلٰكِنْ لَّا يَشْعُرُوْنَ ﴿١٢﴾

14. 'ಇತರರು ನಂಬಿದಂತೆ ನೀವು ಸಹ ನಂಬಿರಿ' ಎಂದು ಅವರೊಡನೆ ಹೇಳುವಾಗ, 'ಮೂಢ ಜನರು ನಂಬಿದಂತೆ ನಾವು ಸಹ ನಂಬಬೇಕೇ?' ಎಂದು ಅವರು ಹೇಳುತ್ತಾರೆ. ತಿಳಿಯಿರಿ, ಖಂಡಿತವಾಗಿಯೂ ಅವರೇ ಮೂಢರು; ಆದರೆ ಅವರು (ಅದನ್ನು) ತಿಳಿಯುವುದಿಲ್ಲ.

وَاِذَا قِيْلَ لَهُمْ اٰمِنُوْا كَمَآ اٰمَنَ النَّاسُ قَالُوْٓا اَنُؤْمِنُ كَمَآ اٰمَنَ السُّفَهَآءُ ؕ اَلَآ اِنَّهُمْ هُمُ السُّفَهَآءُ وَلٰكِنْ لَّا يَعْلَمُوْنَ ﴿١٣﴾

15. ಅವರು ವಿಶ್ವಾಸಿಗಳನ್ನು ಭೇಟಿಯಾದಾಗ, 'ನಾವು (ಸಹ) ನಂಬಿಕೆಯಿಟ್ಟಿದ್ದೇವೆ' ಎಂದು ಹೇಳುತ್ತಾರೆ. ಆದರೆ ಅವರು ತಮ್ಮ ಮುಖಂಡರನ್ನು[9] ಏಕಾಂತದಲ್ಲಿ ಭೇಟಿಯಾಗುವಾಗ, 'ನಾವು ಖಂಡಿತವಾಗಿಯೂ ನಿಮ್ಮ ಜೊತೆಗಿದ್ದೇವೆ; ನಾವು ಅವರನ್ನು ಕೇವಲ ಅಪಹಾಸ್ಯ ಮಾಡುತ್ತಿದ್ದೇವೆ' ಎಂದು ಹೇಳುತ್ತಾರೆ.

وَاِذَا لَقُوا الَّذِيْنَ اٰمَنُوْا قَالُوْٓا اٰمَنَّا ۚۖ وَاِذَا خَلَوْا اِلٰى شَيٰطِيْنِهِمْ ۙ قَالُوْٓا اِنَّا مَعَكُمْ ۙ اِنَّمَا نَحْنُ مُسْتَهْزِءُوْنَ ﴿١٤﴾

9. 'ಶಯಾತೀನ್' ಎಂಬುದು 'ಶೈತಾನ್' ಎಂಬ ಪದದ ಬಹುವಚನವಾಗಿದೆ. 'ಧಿಕ್ಕಾರಿಯಾದ ಅತಿಕರ್ಮಿ' ಎಂದಾಗಿದೆ ಅದರರ್ಥ. 'ದೂರವಿರುವವನು' ಎಂದು ಸಹ ಅರ್ಥವಿದೆ (ಅಖ್‌ರಬ್). ಇಲ್ಲಿ 'ಕಪಟ ವಿಶ್ವಾಸಿಗಳ ಮುಖಂಡರು' ಎಂದು ತಾತ್ಪರ್ಯ.

**16. ಅವರ ಅಪಹಾಸ್ಯಕ್ಕೆ ಅಲ್ಲಾಹನು ಶಿಕ್ಷೆ ನೀಡುವನು[9A] ಹಾಗೂ ಅವರು ತಮ್ಮ ಮಿತಿಮೀರಿದ ವರ್ತನೆಯಲ್ಲಿ ಕುರುಡಾಗಿ ವಿಹರಿಸುವಂತೆ ಅಲ್ಲಾಹನು ಅವರನ್ನು ಬಿಟ್ಟುಬಿಡುವನು.**

اَللّٰهُ يَسْتَهْزِئُ بِهِمْ وَيَمُدُّهُمْ فِيْ طُغْيَانِهِمْ يَعْمَهُوْنَ ﴿١٥﴾

**17. ಅವರಾದರೋ ಸನ್ಮಾರ್ಗದರ್ಶನದ ಬದಲಿಗೆ ದುರ್ಮಾರ್ಗವನ್ನು ವಿನಿಮಯ ಮಾಡಿಕೊಂಡವರಾಗಿದ್ದಾರೆ. ಆದರೆ ಅವರ** (ಈ) **ವ್ಯಾಪಾರ ಅವರಿಗೆ ಲಾಭವನ್ನೇನೂ ತರಲಿಲ್ಲ. ಅವರಿಗೆ ಸರಿಯಾದ ಮಾರ್ಗದರ್ಶನವೂ ಸಿಗಲಿಲ್ಲ.**

اُولٰٓئِكَ الَّذِيْنَ اشْتَرَوُا الضَّلٰلَةَ بِالْهُدٰى ۖ فَمَا رَبِحَتْ تِّجَارَتُهُمْ وَمَا كَانُوْا مُهْتَدِيْنَ ﴿١٦﴾

**18. ಅವರ ಹೋಲಿಕೆ ಬೆಂಕಿ ಹೊತ್ತಿಸಿದ ಒಬ್ಬ ವ್ಯಕ್ತಿಯಂತೆ[9B] - ಅದರ ಬೆಳಕು ಸುತ್ತಮುತ್ತಲೂ ಹರಡಿದಾಗ ಅಲ್ಲಾಹನು ಅವರ ಪ್ರಕಾಶವನ್ನು ಕಿತ್ತುಕೊಂಡು ಅವರನ್ನು ಕತ್ತಲೆಯಲ್ಲಿ ಬಿಟ್ಟು ಬಿಟ್ಟ ಕಾರಣ ಅವರು ಏನನ್ನೂ ಕಾಣದಂತಾದರು.**

مَثَلُهُمْ كَمَثَلِ الَّذِى اسْتَوْقَدَ نَارًا ۚ فَلَمَّآ اَضَآءَتْ مَا حَوْلَهٗ ذَهَبَ اللّٰهُ بِنُوْرِهِمْ وَتَرَكَهُمْ فِيْ ظُلُمٰتٍ لَّا يُبْصِرُوْنَ ﴿١٧﴾

**19. ಅವರು ಕಿವುಡರೂ ಮೂಕರೂ ಕುರುಡರೂ ಆಗಿದ್ದಾರೆ. ಆದ್ದರಿಂದ ಅವರು** (ಸತ್ಯದೆಡೆಗೆ) **ಹಿಂತಿರುಗಲಾರರು.**

صُمٌّۢ بُكْمٌ عُمْىٌ فَهُمْ لَا يَرْجِعُوْنَ ﴿١٨﴾

**20. ಅಥವಾ** (ಅವರ ಹೋಲಿಕೆ) **- ಮುಗಿಲಿನಿಂದ ಧಾರಕಾರವಾಗಿ ಜಡಿ ಮಳೆ ಸುರಿಯುತ್ತಲಿದ್ದು ಕತ್ತಲೆಯಿಂದಲೂ ಗುಡುಗು ಮಿಂಚುಗಳಿಂದಲೂ ಕೂಡಿಕೊಂಡಿದೆ; ಗುಡುಗಿನ ಶಬ್ದ ಕೇಳಿ ಮರಣಭಯದಿಂದ ಅವರು ತಮ್ಮ ಬೆರಳುಗಳನ್ನು ಕಿವಿಯೊಳಗೆ ಹಾಕಿಕೊಂಡಿರುವಂತೆ. ಅಲ್ಲಾಹನು ಅವಿಶ್ವಾಸಿಗಳನ್ನು ಸುತ್ತುವರಿಯುತ್ತಾನೆ.**

اَوْ كَصَيِّبٍ مِّنَ السَّمَآءِ فِيْهِ ظُلُمٰتٌ وَّرَعْدٌ وَّبَرْقٌ ۚ يَجْعَلُوْنَ اَصَابِعَهُمْ فِىْٓ اٰذَانِهِمْ مِّنَ الصَّوَاعِقِ حَذَرَ الْمَوْتِ ۗ وَاللّٰهُ مُحِيْطٌۢ بِالْكٰفِرِيْنَ ﴿١٩﴾

9A. 'ಯಸ್ತಹ್‌ಝಿವು' ಎಂಬ ಪದಕ್ಕೆ 'ಅಪಹಾಸ್ಯಮಾಡು' ಎಂದಾಗಿದೆ ಅರ್ಥ. ಕಪಟ ವಿಶ್ವಾಸಿಗಳಿಗೆ ಸಂಬಂಧಿಸಿ ಹೇಳುವಾಗ ಅದೇ ತಾತ್ಪರ್ಯವಾಗಿದೆ. ಆದರೆ 'ಅಲ್ಲಾಹು ಯಸ್ತಹ್‌ಝಿವು ಬಿಹಿಮ್' ಎಂಬ ವಚನದ ತಾತ್ಪರ್ಯ 'ಅವರ ಅಪಹಾಸ್ಯಕ್ಕೆ ಅಲ್ಲಾಹನು ಅವರನ್ನು ಶಿಕ್ಷಿಸುವನು' ಎಂದಾಗಿದೆ. ಇಮಾಂ ರಾಗಿಬ್ (ರಹ್ಮತುಲ್ಲಾಹಿ ಅಲೈಹಿ) ತನ್ನ 'ಮುಫ್ರದಾತ್'ನಲ್ಲಿ ಈ ವಚನಕ್ಕೆ ಹಾಗೆಯೇ ಅರ್ಥ ಕೊಟ್ಟಿದ್ದಾರೆ.

9B. 'ನಾರ್' ಎಂಬ ಪದ 'ಯುದ್ಧ' ಎಂಬರ್ಥದಲ್ಲಿ ಸಹ ಪ್ರಯೋಗಿಸಲ್ಪಡುತ್ತದೆ. ಕಪಟ ವಿಶ್ವಾಸಿಗಳು, ಮುಸ್ಲಿಮರಿಗೆ ಸೋಲುಂಟಾಗುವಂತಾಗಲು ಮುಸ್ಲಿಮರು ಮತ್ತು ಅವಿಶ್ವಾಸಿಗಳು ಪರಸ್ಪರ ಯುದ್ಧ ಮಾಡುವಂತೆ ಪ್ರೇರೇಪಿಸಿದರೆಂದು ತಾತ್ಪರ್ಯ. ಯುದ್ಧ ವ್ಯಾಪಿಸಿದಾಗ ಪರಿಣಾಮವು ತದ್ವಿರುದ್ಧವಾಗಿ ಮುಸ್ಲಿಮರು ಗೆದ್ದರು. ಈ ವಿಪತ್ತಿನಿಂದ ರಕ್ಷೆಹೊಂದಲು ಯಾವುದೇ ಮಾರ್ಗವಿಲ್ಲದೆ ಕಪಟ ವಿಶ್ವಾಸಿಗಳು ಕಂಗಾಲಾದರು. ಅವರು ಕುರುಡರಂತೆ ಅತ್ತ ಇತ್ತ ಅಲೆದಾಡಬೇಕಾಯಿತು.





**21. ಮಿಂಚು ಅವರ ದೃಷ್ಟಿಯನ್ನು ಕಿತ್ತುಕೊಳ್ಳುವಂತಿದೆ. ಅದು ಅವರಿಗೆ ಬೆಳಕು ಕೊಡುವಾಗ ಅವರು ನಡೆಯುತ್ತಾರೆ. ಕತ್ತಲೆಯಾದಾಗ ಅವರು ನಿಲ್ಲುತ್ತಾರೆ. ಅಲ್ಲಾಹನು ಬಯಸಿದ್ದರೆ ಅವರ ಶ್ರವಣ ಶಕ್ತಿಯನ್ನೂ ದೃಷ್ಟಿಯನ್ನೂ ತೆಗೆದು ಬಿಡುತ್ತಿದ್ದನು. ನಿಶ್ಚಯವಾಗಿಯೂ ಅಲ್ಲಾಹನು** (ತಾನು ಇಚ್ಛಿಸುವ) **ಎಲ್ಲವನ್ನೂ ಮಾಡಲು ಶಕ್ತನು.**

يَكَادُ الْبَرْقُ يَخْطَفُ اَبْصَارَهُمْ ۗ كُلَّمَآ اَضَآءَ لَهُمْ مَّشَوْا فِيْهِ ۙ وَاِذَآ اَظْلَمَ عَلَيْهِمْ قَامُوْا ۗ وَلَوْ شَآءَ اللّٰهُ لَذَهَبَ بِسَمْعِهِمْ وَاَبْصَارِهِمْ ۗ اِنَّ اللّٰهَ عَلٰى كُلِّ شَىْءٍ قَدِيْرٌ ﴿٢٠﴾

**22. ಓ ಜನರೇ, ನಿಮ್ಮನ್ನೂ ನಿಮಗಿಂತ ಮುಂಚಿನವರನ್ನೂ ಸೃಷ್ಟಿಸಿದ ನಿಮ್ಮ ರಕ್ಷಕನನ್ನು ಆರಾಧಿಸಿರಿ - ನೀವು** (ಎಲ್ಲ ವಿಧದ ಆಪತ್ತುಗಳಿಂದಲೂ) **ಸುರಕ್ಷಿತರಾಗಲಿಕ್ಕಾಗಿ.**

يٰٓاَيُّهَا النَّاسُ اعْبُدُوْا رَبَّكُمُ الَّذِىْ خَلَقَكُمْ وَالَّذِيْنَ مِنْ قَبْلِكُمْ لَعَلَّكُمْ تَتَّقُوْنَ ﴿٢١﴾

**23. ಅವನು ನಿಮಗೋಸ್ಕರ ಭೂಮಿಯನ್ನು ಹಾಸಿಗೆಯನ್ನಾಗಿಯೂ ಆಕಾಶವನ್ನು ಚಾವಣಿಯನ್ನಾಗಿಯೂ ಮಾಡಿರುವನು. ಮುಗಿಲಿನಿಂದ ಮಳೆ ಸುರಿಯುವಂತೆ ಮಾಡಿ, ಅದರಿಂದ ನಿಮಗೋಸ್ಕರ ಹಣ್ಣು ಹಂಪಲುಗಳಿಂದ ಕೂಡಿದ ಆಹಾರವನ್ನು ಸೃಷ್ಟಿಸಿರುವನು. ಆದ್ದರಿಂದ ನೀವು ತಿಳಿದು ಸಹ ಯಾರನ್ನೂ ಅಲ್ಲಾಹನಿಗೆ ಸರಿಸಾಟಿ ಮಾಡದಿರಿ.**

الَّذِىْ جَعَلَ لَكُمُ الْاَرْضَ فِرَاشًا وَّالسَّمَآءَ بِنَآءً ۖ وَّاَنْزَلَ مِنَ السَّمَآءِ مَآءً فَاَخْرَجَ بِهٖ مِنَ الثَّمَرٰتِ رِزْقًا لَّكُمْ ۚ فَلَا تَجْعَلُوْا لِلّٰهِ اَنْدَادًا وَّاَنْتُمْ تَعْلَمُوْنَ ﴿٢٢﴾

**24. ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿದುದರ ಬಗ್ಗೆ ನಿಮಗೇನಾದರೂ ಸಂದೇಹವಿದ್ದರೆ, ನೀವು ಪ್ರಾಮಾಣಿಕರಾಗಿದ್ದರೆ ಇದರಂತಹ ಒಂದು ಅಧ್ಯಾಯವನ್ನು ತನ್ನಿರಿ.** (ಅದಕ್ಕಾಗಿ) **ಅಲ್ಲಾಹನ ಹೊರತಾದ ನಿಮ್ಮ ಸಹಾಯಕರನ್ನು ಕರೆದುಕೊಳ್ಳಿರಿ.**

وَاِنْ كُنْتُمْ فِىْ رَيْبٍ مِّمَّا نَزَّلْنَا عَلٰى عَبْدِنَا فَاْتُوْا بِسُوْرَةٍ مِّنْ مِّثْلِهٖ ۖ وَادْعُوْا شُهَدَآءَكُمْ مِّنْ دُوْنِ اللّٰهِ اِنْ كُنْتُمْ صٰدِقِيْنَ ﴿٢٣﴾

**25. ನೀವು ಹಾಗೆ ಮಾಡದಿದ್ದರೆ - ನಿಮಗೆ ಅದು ಎಂದಿಗೂ ಸಾಧ್ಯವಿಲ್ಲ - ಅವಿಶ್ವಾಸಿಗಳಿಗೆ ಸಿದ್ಧಪಡಿಸಿರುವ ಬೆಂಕಿಯ ಕುರಿತು ಜಾಗ್ರತರಾಗಿರಿ. ಆ ಬೆಂಕಿಯ ಇಂಧನ ಮನುಷ್ಯರು ಮತ್ತು ಕಲ್ಲುಗಳು.**

فَاِنْ لَّمْ تَفْعَلُوْا وَلَنْ تَفْعَلُوْا فَاتَّقُوا النَّارَ الَّتِىْ وَقُوْدُهَا النَّاسُ وَالْحِجَارَةُ ۖ اُعِدَّتْ لِلْكٰفِرِيْنَ ﴿٢٤﴾

**26.** ಸತ್ಯ ವಿಶ್ವಾಸ ಕೈಗೊಂಡು ಸತ್ಕರ್ಮಗಳನ್ನು ಮಾಡುವವರಿಗೆ ಶುಭವಾರ್ತೆಯನ್ನು ತಿಳಿಸು. ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳು ಅವರಿಗೋಸ್ಕರ ಇವೆ. ಅದರ ಫಲಗಳಿಂದ ಅವರಿಗೆ ಆಹಾರವಾಗಿ ನೀಡಲ್ಪಟ್ಟಾಗ, 'ಇದು ನಮಗೆ ಮೊದಲು (ಐಹಿಕ ಜೀವಿತದಲ್ಲಿ) ನೀಡಲಾದ ಆಹಾರದಂತೆಯೇ ಇದೆ' ಎಂದು ಅವರು ಹೇಳುವರು. ಪರಸ್ಪರ ಹೋಲಿಕೆಯುಳ್ಳವುಗಳನ್ನು ಅವರಿಗೆ ನೀಡಲಾಗುವುದು. ಅಲ್ಲಿ ಪರಿಶುದ್ಧರಾದ ಸಂಗಾತಿಗಳು[10] ಅವರಿಗೆ ದೊರೆಯುವರು. ಅಲ್ಲೇ ಅವರು ವಾಸಿಸುವರು.

وَبَشِّرِ الَّذِيْنَ اٰمَنُوْا وَعَمِلُوا الصّٰلِحٰتِ
اَنَّ لَهُمْ جَنّٰتٍ تَجْرِيْ مِنْ تَحْتِهَا
الْاَنْهٰرُ ؕ كُلَّمَا رُزِقُوْا مِنْهَا مِنْ
ثَمَرَةٍ رِّزْقًا ۙ قَالُوْا هٰذَا الَّذِيْ رُزِقْنَا
مِنْ قَبْلُ ۙ وَاُتُوْا بِهٖ مُتَشَابِهًا ؕ وَلَهُمْ
فِيْهَاۤ اَزْوَاجٌ مُّطَهَّرَةٌ ۙ وَّهُمْ فِيْهَا
خٰلِدُوْنَ ﴿٢٦﴾

**27.** ಒಂದು ಸೊಳ್ಳೆಯನ್ನಾಗಲಿ, ಅದರ ಮೇಲಿರುವುದನ್ನಾಗಲಿ[10A] ಅಲ್ಲಾಹನು ಉಪಮೆಯಾಗಿ ಹೇಳಲು ಏನೂ ಸಂಕೋಚಪಡುವುದಿಲ್ಲ. ಅದು ಅಲ್ಲಾಹನ ಕಡೆಯಿಂದಿರುವ ಸತ್ಯವೆಂದು ವಿಶ್ವಾಸಿಗಳು ತಿಳಿಯುತ್ತಾರೆ. ಆದರೆ ಅವಿಶ್ವಾಸಿಗಳು: 'ಇಂತಹ ಉಪಮೆಯಿಂದ ಅಲ್ಲಾಹನು ಉದ್ದೇಶಿಸುವುದಾದರೂ ಏನು?' ಎಂದು ಪ್ರಶ್ನಿಸುತ್ತಾರೆ. (ವಾಸ್ತವದಲ್ಲಿ) ಈ (ಖುರ್‌ಆನ್) ಮೂಲಕ ಅವನು ಹಲವರನ್ನು ದಾರಿತಪ್ಪಿದವರೆಂದು ತೀರ್ಮಾನಿಸುತ್ತಾನೆ[11] ಮತ್ತು ಹಲವರನ್ನು ಸರಿಯಾದ ದಾರಿಗೆ ಕೊಂಡೊಯ್ಯುತ್ತಾನೆ. ಅವಿಧೇಯತೆ ತೋರಿಸುವವರ ವಿನಾ ಅವನು ಯಾರನ್ನೂ ದಾರಿತಪ್ಪಿದವರೆಂದು ತೀರ್ಮಾನಿಸುವುದಿಲ್ಲ.

اِنَّ اللّٰهَ لَا يَسْتَحْيٖۤ اَنْ يَّضْرِبَ مَثَلًا
مَّا بَعُوْضَةً فَمَا فَوْقَهَا ؕ فَاَمَّا الَّذِيْنَ
اٰمَنُوْا فَيَعْلَمُوْنَ اَنَّهُ الْحَقُّ مِنْ رَّبِّهِمْ ۚ
وَاَمَّا الَّذِيْنَ كَفَرُوْا فَيَقُوْلُوْنَ مَاذَاۤ
اَرَادَ اللّٰهُ بِهٰذَا مَثَلًا ۘ يُضِلُّ بِهٖ كَثِيْرًا
وَّيَهْدِيْ بِهٖ كَثِيْرًا ؕ وَمَا يُضِلُّ بِهٖۤ
اِلَّا الْفٰسِقِيْنَ ﴿٢٧﴾

10. ಇಲ್ಲಿ 'ಅಝ್‌ವಾಜ್' ಎಂದರೆ ಸ್ವರ್ಗವಾಸಿಗಳಾದವರ ಎಲ್ಲ ರೀತಿಯ ಅಭಿವೃದ್ಧಿಗೂ ಮನಸ್ಸಮಾಧಾನಕ್ಕೂ ಅವಶ್ಯವುಳ್ಳ ಜೊತೆಗಾರರು ಎಂದು ತಾತ್ಪರ್ಯ. ದೇವಸತ್ತೆ ಹೊರತು ಎಲ್ಲ ವಸ್ತುಗಳಿಗೂ ಒಂದು ಜೋಡಿಯ ಅಗತ್ಯವಿದೆಯೆಂದು ಖುರ್‌ಆನಿನಿಂದ ಮನವರಿಕೆಯಾಗುತ್ತದೆ. ಈ ನಿಯಮಾನುಸಾರ ಸ್ವರ್ಗವಾಸಿಗಳಿಗೂ ಜೋಡಿಯ ಆವಶ್ಯಕತೆಯಿದೆ. ಸ್ವರ್ಗವಾಸಿಯಾದ ಪುರುಷ ಅಥವಾ ಸ್ತ್ರೀಗೆ ಅದು ಅನುಭವವಾಗುವಾಗ ಮಾತ್ರವೇ ಅದರ ನಿಜರೂಪವನ್ನು ತಿಳಿಯಲು ಸಾಧ್ಯ.

10A. ಸೊಳ್ಳೆಯು ಹರಡಿಸುವ ರೋಗಾಣುಗಳು ಇಲ್ಲಿ ಸೂಚಿಸಲ್ಪಟ್ಟಿವೆ.

11. اِضْلَال ಎಂಬ ಪದಕ್ಕೆ 'ದಾರಿ ತಪ್ಪಿಸು' ಎಂದೂ 'ದಾರಿತಪ್ಪಿದವನೆಂದು ತೀರ್ಮಾನಿಸು' ಎಂದೂ ಅರ್ಥವಿದೆ. (ಮುಫ್ರದಾತ್)





**28.** ಅವರು ಅಲ್ಲಾಹನೊಡನೆ ಮಾಡಿದ ಒಡಂಬಡಿಕೆಯನ್ನು ಉಲ್ಲಂಘಿಸುವವರೂ ಒಂದು ಗೂಡಿಸಲು ಅಲ್ಲಾಹನು ಆದೇಶಿಸಿರುವುದನ್ನು ಮುರಿಯುವವರೂ ಭೂಮಿಯಲ್ಲಿ ಕಲಹವನ್ನುಂಟು ಮಾಡುವವರೂ ಆಗಿದ್ದಾರೆ. ಅವರೇ ನಷ್ಟಹೊಂದಿದವರು.

الَّذِيْنَ يَنْقُضُوْنَ عَهْدَ اللّٰهِ مِنْۢ بَعْدِ
مِيْثَاقِهٖ ۪ وَيَقْطَعُوْنَ مَاۤ اَمَرَ اللّٰهُ بِهٖۤ
اَنْ يُّوْصَلَ وَيُفْسِدُوْنَ فِى الْاَرْضِ ؕ
اُولٰٓئِكَ هُمُ الْخٰسِرُوْنَ ﴿٢٨﴾

**29.** ನೀವು ಅಲ್ಲಾಹನ ಅಸ್ತಿತ್ವವನ್ನು ಹೇಗೆ ಅಲ್ಲಗಳೆಯಬಲ್ಲಿರಿ? ನೀವು ನಿರ್ಜೀವರಾಗಿದ್ದಾಗ ಅವನು ನಿಮಗೆ ಜೀವ ನೀಡಿದನು. ಮುಂದೆ ಅವನು ನಿಮ್ಮನ್ನು ಮೃತ ಪಡಿಸುವನು ಮತ್ತು ಪುನಃ ಜೀವಂತಗೊಳಿಸುವನು. ಅವನ ಕಡೆಗೆಯೇ ನೀವು ಹಿಂತಿರುಗಿಸಲ್ಪಡುವಿರಿ.

كَيْفَ تَكْفُرُوْنَ بِاللّٰهِ وَكُنْتُمْ اَمْوَاتًا
فَاَحْيَاكُمْ ۚ ثُمَّ يُمِيْتُكُمْ ثُمَّ يُحْيِيْكُمْ
ثُمَّ اِلَيْهِ تُرْجَعُوْنَ ﴿٢٩﴾

**30.** ಅವನು ಭೂಮಿಯಲ್ಲಿರುವ ಸರ್ವವನ್ನೂ ನಿಮಗಾಗಿ ಸೃಷ್ಟಿಸಿರುವನು. ನಂತರ ಅವನು ಗಗನದ ಕಡೆಗೆ ತಿರುಗಿದನು. (ಹಾಗೆ) ಅವನು ಅದನ್ನು ಏಳು ಆಕಾಶಗಳನ್ನಾಗಿ (ಅನ್ಯೂನವಾಗಿ) ರೂಪಿಸಿದನು. ಅವನು ಎಲ್ಲವನ್ನೂ ಬಲ್ಲವನಾಗಿದ್ದಾನೆ.

هُوَ الَّذِيْ خَلَقَ لَكُمْ مَّا فِى الْاَرْضِ
جَمِيْعًا ۗ ثُمَّ اسْتَوٰۤى اِلَى السَّمَآءِ
فَسَوّٰىهُنَّ سَبْعَ سَمٰوٰتٍ ؕ وَهُوَ بِكُلِّ
شَىْءٍ عَلِيْمٌ ﴿٣٠﴾

**31.** 'ನಾನು ಭೂಮಿಯಲ್ಲಿ ಒಬ್ಬ ಪ್ರತಿನಿಧಿಯನ್ನು ನೇಮಿಸಲಿದ್ದೇನೆ' ಎಂದು ದೇವದೂತರೊಡನೆ ನಿನ್ನ ಪ್ರಭು ಹೇಳಿದ ಸಂದರ್ಭ - ಆಗ ಅವರು 'ಅಲ್ಲಿ ಕ್ರಮಭಂಗ ಮಾಡುವವರನ್ನೂ ರಕ್ತ ಹರಿಸುವವರನ್ನೂ ನೀನು ಉಂಟುಮಾಡುವೆಯಾ? ನಾವಾದರೋ ನಿನ್ನ ಸ್ತುತಿ ಕೀರ್ತನೆ ಮಾಡುವವರೂ ನಿನ್ನ ಪಾವಿತ್ರ್ಯವನ್ನು ಕೊಂಡಾಡುವವರೂ ಆಗಿದ್ದೇವೆ' ಎಂದು ಹೇಳಿದರು.[12] ಆಗ ಅವನು, 'ನೀವು ತಿಳಿಯದೆ ಇದ್ದುದನ್ನು ನಾನು ತಿಳಿದಿರುತ್ತೇನೆ' ಎಂದು ನುಡಿದನು.

وَاِذْ قَالَ رَبُّكَ لِلْمَلٰٓئِكَةِ اِنِّىْ جَاعِلٌ
فِى الْاَرْضِ خَلِيْفَةً ؕ قَالُوْۤا اَتَجْعَلُ
فِيْهَا مَنْ يُّفْسِدُ فِيْهَا وَيَسْفِكُ
الدِّمَآءَ ۚ وَنَحْنُ نُسَبِّحُ بِحَمْدِكَ وَ
نُقَدِّسُ لَكَ ؕ قَالَ اِنِّىْۤ اَعْلَمُ مَا لَا
تَعْلَمُوْنَ ﴿٣١﴾

12. ದೇವದೂತರು ಹೀಗೆ ಹೇಳಿದ್ದು 'ಆದಮರಿಗಿಂತ ತಾವು ಉತ್ಕೃಷ್ಟರು' ಎಂಬ ಅರ್ಥದಲ್ಲಲ್ಲ. ಅಲ್ಲಾಹನು ಕೈಗೊಳ್ಳಲಿರುವ ತೀರ್ಮಾನಕ್ಕೆ ತಮ್ಮ ಆಕ್ಷೇಪವೆಂಬ ರೀತಿಯಲ್ಲೂ ಅಲ್ಲ. ಅಲ್ಲಾಹನು ತನ್ನ ಖಲೀಫ (ಪ್ರತಿನಿಧಿ, ಪ್ರವಾದಿ) ರನ್ನು ನಿಯೋಜಿಸುವುದು ಜನರು ಭೂಮಿಯ ಮೇಲೆ ಕಲಹವನ್ನುಂಟು ಮಾಡಿ ಪರಸ್ಪರ ರಕ್ತ ಹರಿಸುವ ಸಂದರ್ಭದಲ್ಲಿ ಎಂದು ದೇವದೂತರಿಗೆ ಗೊತ್ತು. ಅಂತಹ ಕಲಹಪ್ರಿಯ ಜನರನ್ನು ನೀನು ಸೃಷ್ಟಿಸುವಿಯಾ ಎಂಬುದೇ ಅವರು ಕೇಳಿದುದರ ತಾತ್ಪರ್ಯ.

**32. ಅವನು ಆದಮನಿಗೆ ಎಲ್ಲ ಹೆಸರುಗಳನ್ನು ಕಲಿಸಿದನು.[12A] ಅನಂತರ ಅವುಗಳನ್ನು ದೇವದೂತರ ಮುಂದಿಡುತ್ತಾ 'ನಿಮ್ಮ ಭಾವನೆ ಸರಿಯೆಂದಾದರೆ ಇವುಗಳ ಹೆಸರುಗಳನ್ನು ನನ್ನೊಡನೆ ಹೇಳಿರಿ' ಎಂದು ನುಡಿದನು.**

وَعَلَّمَ آدَمَ الْأَسْمَاءَ كُلَّهَا ثُمَّ عَرَضَهُمْ عَلَى الْمَلَائِكَةِ فَقَالَ أَنْبِئُونِي بِأَسْمَاءِ هَٰؤُلَاءِ إِنْ كُنْتُمْ صَادِقِينَ ﴿٣٢﴾

**33. ಆಗ ಅವರು, 'ನೀನು ಪವಿತ್ರನು. ನೀನು ನಮಗೆ ಕಲಿಸಿದ ವಿನಾ ನಮಗೆ ಬೇರೇನೂ ಅರಿವಿಲ್ಲ. ಖಂಡಿತವಾಗಿಯೂ ನೀನು ಸಕಲವನ್ನು ಬಲ್ಲವನೂ ಪ್ರಾಜ್ಞನೂ ಆಗಿರುವಿ' ಎಂದು ಹೇಳಿದರು.**

قَالُوا سُبْحَانَكَ لَا عِلْمَ لَنَا إِلَّا مَا عَلَّمْتَنَا ۖ إِنَّكَ أَنْتَ الْعَلِيمُ الْحَكِيمُ ﴿٣٣﴾

**34. 'ಓ ಆದಂ, ಅವುಗಳ ನಾಮಗಳನ್ನು ಅವರಿಗೆ ಹೇಳಿಕೊಡು' ಎಂದು ಅವನು** (ಅಲ್ಲಾಹನು) **ಹೇಳಿದನು. ಆದಂ ಅವುಗಳ ಹೆಸರುಗಳನ್ನು ಅವರಿಗೆ ಹೇಳಿಕೊಟ್ಟಾಗ ಅವನು** (ಅಲ್ಲಾಹನು) **'ಆಕಾಶಗಳ ಮತ್ತು ಭೂಮಿಯ ಸಕಲ ರಹಸ್ಯಗಳನ್ನು ನಾನು ತಿಳಿದಿದ್ದೇನೆಂದೂ ನೀವು ಬಹಿರಂಗ ಪಡಿಸುವ ಮತ್ತು ಗುಪ್ತವಾಗಿರಿಸುವ ಎಲ್ಲವನ್ನೂ ಬಲ್ಲೆನೆಂದೂ ನಾನು ನಿಮ್ಮೊಡನೆ ಹೇಳಿರಲಿಲ್ಲವೇ?' ಎಂದು ನುಡಿದನು.**[12B]

قَالَ يَا آدَمُ أَنْبِئْهُمْ بِأَسْمَائِهِمْ ۖ فَلَمَّا أَنْبَأَهُمْ بِأَسْمَائِهِمْ قَالَ أَلَمْ أَقُلْ لَكُمْ إِنِّي أَعْلَمُ غَيْبَ السَّمَاوَاتِ وَالْأَرْضِ وَأَعْلَمُ مَا تُبْدُونَ وَمَا كُنْتُمْ تَكْتُمُونَ ﴿٣٤﴾

12A. 'ಅಸ್‌ಮಾಅ್' ಎಂದರೆ ದೇವನಾಮಗಳೆಂದು ಇಲ್ಲಿ ಅರ್ಥಕೊಡಬಹುದು.

ಸೃಷ್ಟಿಕರ್ತ ಮತ್ತು ಸೃಷ್ಟಿ ಅನ್ಯೋನ್ಯ ಸಂಬಂಧವನ್ನೇರ್ಪಡಿಸಲಿಕ್ಕಾಗಿ ಆದಂ (ಅಲೈಹಿಸ್ಸಲಾಂ) ನಿಯುಕ್ತರಾದರು. ಆದ್ದರಿಂದಲೇ ದೇವರನಾಮಗಳನ್ನೂ ಅವನ ವಿಶೇಷ ಗುಣಗಳನ್ನೂ ಕಲಿಯಬೇಕಾದುದು ಅವಶ್ಯವೆನಿಸುತ್ತದೆ. ಹಾಗೆ ಈ ನಾಮಗಳ ಮೂಲಕ ಮನುಷ್ಯನು ಅಲ್ಲಾಹನನ್ನು ಅರಿತು ಅವನೊಡನೆ ಸಂಬಂಧವನ್ನು ಸ್ಥಾಪಿಸುತ್ತಾನೆ.

ಇದರ ಮತ್ತೊಂದು ವ್ಯಾಖ್ಯಾನವೇನೆಂದರೆ, ಆದಂ ಮುಖಾಂತರ ನಾಗರಿಕತೆಯೆಡೆಗೆ ಬರುತ್ತಿದ್ದ ಮನುಷ್ಯನಿಗೆ ಒಂದು ಭಾಷೆಯ ಅಗತ್ಯವಿತ್ತು. ಹಾಗೆ ಅಲ್ಲಾಹನು ಮನುಷ್ಯ ಭಾಷೆಗಳ ಮೂಲತತ್ವಗಳನ್ನು ಕಲಿಸಿದನು. ಅದಕ್ಕನುಗುಣವಾಗಿ ಅವರಿಗೆ ಭಾಷೆಯನ್ನು ರಚಿಸಲು ಸಾಧ್ಯವಾಯಿತು. ಆ ಭಾಷೆ ಅರಬಿಯಾಗಿತ್ತೆಂದು ತಿಳಿದು ಬರುತ್ತದೆ. ಏಕೆಂದರೆ, ಆದಮರಿಗೆ ಕಲಿಸಿದ ಆ ಭಾಷೆಯು ವಸ್ತುಗಳ ಗುಣ ಮತ್ತು ಅವುಗಳ ಹೆಸರುಗಳು ಪರಸ್ಪರ ಹೊಂದಾಣಿಕೆಯುಳ್ಳ ಆಧಾರದಲ್ಲಾಗಿತ್ತು. ಆಯಾಯ ವಸ್ತುವಿನ ವಿಶೇಷತೆಯ ಆಧಾರದಲ್ಲಿ ಎಲ್ಲ ಹೆಸರುಗಳನ್ನು ನೀಡಲಾಗಿದೆ. ಈ ವೈಶಿಷ್ಟ್ಯ ಅರಬಿ ಭಾಷೆಗೆ ಮಾತ್ರವೇ ಇದೆ.

12B. ಇದು ತನಗೆ ಕಲಿಸಿದ ನಾಮಗಳನ್ನು ಆದಂ ದೇವದೂತರಿಗೆ ವಿವರಿಸಿ ಕೊಟ್ಟಾಗ ಅಲ್ಲಾಹನು ದೇವದೂತರೊಡನೆ ಹೇಳಿದ ಮಾತಾಗಿದೆ. ಆದಮರಿಗೆ ಸೃಷ್ಟಿಗಳ ವೈಶಿಷ್ಟ್ಯದ ಕುರಿತು ಅರಿವಿಲ್ಲದಿರುವಾಗ ಸೃಷ್ಟಿಗಳ ಮೇಲೆ ಅವರು ಹೇಗೆ ಆಧಿಪತ್ಯ ನಡೆಸುವರು ಎಂಬುದಾಗಿತ್ತು ದೇವದೂತರಿಗೆ ಇದ್ದ ಸಂದೇಹ. 'ಆದರೆ ಪ್ರಪಂಚದ ವೈಶಿಷ್ಟ್ಯಗಳನ್ನು ತಿಳಕೊಳ್ಳುವಂತಹ ಜ್ಞಾನವನ್ನು ನಾನು ಆದಮರಿಗೆ ನೀಡಿರುವುದಾಗಿ ನಿಮಗೆ ಗ್ರಹಿಸಲು ಸಾಧ್ಯವಾಯಿತಲ್ಲವೇ? ನನ್ನ ಜ್ಞಾನ ಸರಿ ಮತ್ತು ನಿಮ್ಮದು ತಪ್ಪು ಎಂದು ಸಾಬೀತಾಯಿತಲ್ಲವೇ?' ಎಂದು ಅಲ್ಲಾಹನು ದೇವದೂತರೊಡನೆ ಹೇಳಿದುದರ ತಾತ್ಪರ್ಯ.





**35. 'ಆದಮರ ಆಜ್ಞಾನುಸರಣೆ ಮಾಡಿರಿ'[12C] ಎಂದು ನಾವು ದೇವದೂತರೊಡನೆ ಹೇಳಿದಾಗ ಅವರು** (ಎಲ್ಲರೂ) **ಆಜ್ಞಾನುಸರಣೆ ಮಾಡಿದರು; ಆದರೆ ಇಬ್‌ಲೀಸ್** ವಿಧೇಯನಾಗಲಿಲ್ಲ. **ಅವನು ನಿರಾಕರಿಸಿದನು ಮತ್ತು ಅಹಂಕಾರ ತೋರಿಸಿದನು. ಅವನು ಅವಿಶ್ವಾಸಿಗಳ ಪೈಕಿಯವನಾಗಿದ್ದನು.**

وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ أَبَىٰ وَاسْتَكْبَرَ وَكَانَ مِنَ الْكَافِرِينَ ﴿٣٥﴾

**36. ಓ ಆದಂ, ನೀನು ಮತ್ತು ನಿನ್ನ ಪತ್ನಿ ಈ ತೋಟದಲ್ಲಿ[12D] ವಾಸಿಸುತ್ತಾ ಎಲ್ಲಿಂದ ಬೇಕಾದರೂ ಯಥೇಷ್ಟವಾಗಿ ತಿನ್ನಿರಿ. ಆದರೆ ನೀವು ದುಷ್ಕರ್ಮಿಗಳಾಗದಿರಲಿಕ್ಕಾಗಿ ಈ ವೃಕ್ಷವನ್ನು[12E] ಸಮೀಪಿಸ ಬೇಡಿರಿ.**

وَقُلْنَا يَا آدَمُ اسْكُنْ أَنْتَ وَزَوْجُكَ الْجَنَّةَ وَكُلَا مِنْهَا رَغَدًا حَيْثُ شِئْتُمَا وَلَا تَقْرَبَا هَٰذِهِ الشَّجَرَةَ فَتَكُونَا مِنَ الظَّالِمِينَ ﴿٣٦﴾

**37. ಆದರೆ ಶೈತಾನನು ಆ ಮೂಲಕ ಅಲ್ಲಿಂದ ಅವರಿಬ್ಬರನ್ನೂ ದಾರಿಗೆಡಿಸಿ ಅವರು ಮೊದಲಿದ್ದ ಸ್ಥಿತಿಯಿಂದ ಹೊರಗೆ ಎಳೆದನು. ಆಗ ನಾವು, 'ಇಲ್ಲಿಂದ ಹೊರ ನಡೆಯಿರಿ, ನಿಮ್ಮಲ್ಲಿ ಕೆಲವರು ಇನ್ನು ಕೆಲವರ ಶತ್ರುಗಳಾಗಿದ್ದೀರಿ. ನಿಮಗೆ ಭೂಮಿಯಲ್ಲಿ ಒಂದು ನಿರ್ದಿಷ್ಟ ಕಾಲದ ವರೆಗೆ ವಾಸಸ್ಥಳ ಮತ್ತು ಆಹಾರ ಸಾಮಗ್ರಿಗಳು ಇರುವುವು' ಎಂದು ಹೇಳಿದೆವು.**

فَأَزَلَّهُمَا الشَّيْطَانُ عَنْهَا فَأَخْرَجَهُمَا مِمَّا كَانَا فِيهِ ۖ وَقُلْنَا اهْبِطُوا بَعْضُكُمْ لِبَعْضٍ عَدُوٌّ ۖ وَلَكُمْ فِي الْأَرْضِ مُسْتَقَرٌّ وَمَتَاعٌ إِلَىٰ حِينٍ ﴿٣٧﴾

12C. 'ಸುಜೂದ್' ಎಂಬ ಪದಕ್ಕೆ ಸಾಷ್ಟಾಂಗ ಪ್ರಣಾಮ ಅಲ್ಲದೆ, ಆಜ್ಞಾನುಸರಣೆ ಎಂಬ ಅರ್ಥವೂ ಇದೆ (ಅಖ್‌ರಬ್). ಆದಮರ ಆಜ್ಞಾನುಸರಣೆ ಮಾಡಬೇಕೆಂದಾಗಿದೆ ಇಲ್ಲಿ ತಾತ್ಪರ್ಯ. ಅಲ್ಲಾಹನು ಆದಮರನ್ನು ಸೃಷ್ಟಿಸಿದುದಕ್ಕೆ ಅಲ್ಲಾಹನಿಗೆ ಸಾಷ್ಟಾಂಗವೆರಗಿರಿ ಎಂದು ಸಹ ಇದಕ್ಕೆ ಅರ್ಥವಿದೆ. ಅಲ್ಲದೆ, ಆದಮರಿಗೆ ಸಾಷ್ಟಾಂಗವೆರಬೇಕೆಂದಲ್ಲ.

12D. ಇಲ್ಲಿ 'ಜನ್ನತ್' (ತೋಟ - ಉದ್ಯಾನ) ಎಂದು ಹೇಳಲ್ಪಟ್ಟದ್ದು ಮರಣಾನಂತರ ದೊರಕುವ ಸ್ವರ್ಗವಲ್ಲವೆಂದು ಪವಿತ್ರ ಖುರ್‌ಆನಿನಿಂದ ತಿಳಿದುಬರುತ್ತದೆ. ಆದಮರೊಡನೆ "ನೀನು ಮತ್ತು ನಿನ್ನ ಪತ್ನಿ ತೋಟದಲ್ಲಿ ವಾಸಿಸಿರಿ" ಎಂದು ಅಲ್ಲಾಹನು ಹೇಳಿರುವ ಅದೇ ಜಾಗದಲ್ಲಿ ಶೈತಾನ್ ಸಹ ಇದ್ದನೆಂಬುದು ಗಮನಾರ್ಹ. ಅಷ್ಟೇ ಅಲ್ಲ, ಈ 'ಜನ್ನತ್'ನಲ್ಲೇ ಶೈತಾನನ ಪ್ರೇರಣೆಯಿಂದ ಅವರು ಅಲ್ಲಾಹನ ಆಜ್ಞೆಯನ್ನು ಉಲ್ಲಂಘಿಸಿದ್ದು ಕೂಡ. ಪವಿತ್ರ ಖುರ್‌ಆನಿನ ಇನ್ನೊಂದೆಡೆಯಲ್ಲಿ ಪಾರತ್ರಿಕ ಸ್ವರ್ಗದ ಕುರಿತು ಹೇಳುವುದನ್ನು ನೋಡಿರಿ: "ಅವರಿಗೆ ಅಲ್ಲಿ ದಣಿವು ಉಂಟಾಗಲಾರದು. ಅವರು ಅಲ್ಲಿಂದ ಹೊರಕಟ್ಟಲ್ಪಡಲಾರರು" (15:49). ಆದರೆ ಯಾವ ಜನ್ನತ್‌ನಲ್ಲಿ ಆದಂ (ಅ) ವಾಸಿಸುತ್ತಿದ್ದರೋ ಅಲ್ಲಿಂದ ಅವರು ಹೊರಕ್ಕೆ ಅಟ್ಟಲ್ಪಟ್ಟರು. ಹೀಗಿರುವಾಗ, ಇಲ್ಲಿ ಪ್ರಸ್ತಾಪಿಸಿರುವುದು ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ವಾಗ್ದಾನ ಮಾಡಿರುವ ಸ್ವರ್ಗದ ಬಗ್ಗೆ ಎಂದು ಭಾವಿಸಲು ಸಾಧ್ಯವಿಲ್ಲ. ಬದಲು, ಸುಖವಾಸಕ್ಕೆ ಯೋಗ್ಯವಾಗಿರುವ ಒಂದು ಭೂಪ್ರದೇಶವನ್ನು ಇಲ್ಲಿ ಜನ್ನತ್ ಎಂದು ಹೇಳಲಾಗಿದೆ ಎಂದು ಭಾವಿಸುವುದೇ ಸರಿ.

ಯೂಫ್ರಟಿಸ್-ಟೈಗ್ರಿಸ್ ನದೀತಟಗಳಲ್ಲಿ ನಡೆಸಲಾದ ಉತ್ಖನನಗಳಿಂದ ಪುರಾತನವಾದೊಂದು ನಾಗರಿಕತೆ ಅಲ್ಲಿತ್ತೆಂದು ಬಹಳ ಮುಂಚೆಯೇ ಸಾಬೀತಾಗಿದೆ. ಹಝ್ರತ್ ಮಿರ್ಝಾ ಬಶೀರುದ್ದೀನ್ ಮಹ್‌ಮೂದ್ ಅಹ್ಮದ್ (ರಝಿಯಲ್ಲಾಹು ಅನ್‌ಹು) ತನ್ನ ಸಂಶೋಧನಾತ್ಮಕ ಅಧ್ಯಯನದಿಂದ ಆದಂ (ಅ) ರವರ ಜನ್ಮಸ್ಥಳ ಈಗಿನ ಇರಾಖಿನ ಭಾಗವಾದ ಇದೇ ಪ್ರದೇಶದಲ್ಲಾಗಿತ್ತೆಂದು ರುಜುಪಡಿಸಿದ್ದಾರೆ. ಅಲ್ಲೇ ಇರುವ ಫಲವತ್ತಾದ, ಪೈರು ಪಚ್ಚೆಯಿಂದ ಕಂಗೊಳಿಸುತ್ತಿದ್ದ ಒಂದು ನಿರ್ದಿಷ್ಟ ಸ್ಥಳವನ್ನು ಪವಿತ್ರ ಖುರ್‌ಆನ್ ಇಲ್ಲಿ 'ಜನ್ನತ್' ಎಂದು ಹೇಳಿದೆ.

12E. ಪವಿತ್ರ ಖುರ್‌ಆನಿನಲ್ಲಿ ಒಳಿತನ್ನು ಒಳ್ಳೆಯ ವೃಕ್ಷಕ್ಕೆ ಮತ್ತು ಕೆಡುಕನ್ನು ಕೆಟ್ಟ ವೃಕ್ಷಕ್ಕೆ ಹೋಲಿಸಿ ಹೇಳಲಾಗಿದೆ (14:25, 27). ಆದಂ ಮತ್ತು ಪತ್ನಿ ಕೆಡುಕಿನ ಕಡೆಗೆ ಸುಳಿಯಬಾರದೆಂದು ಇಲ್ಲಿ ತಾತ್ಪರ್ಯ.

**38.** ಅನಂತರ ಆದಂ ತನ್ನ ಪ್ರಭುವಿನಿಂದ ಕೆಲವು (ಪ್ರಾರ್ಥನೆಯ) ವಚನಗಳನ್ನು ಕಲಿತರು. ಹಾಗೆ ಅವನು (ಅಲ್ಲಾಹನು) ಅವರ ಮೇಲೆ ಕರುಣೆ ತೋರಿಸಿದನು. ಖಂಡಿತವಾಗಿಯೂ ಅವನು (ಅಲ್ಲಾಹನು) ಕರುಣೆಯ ಸಹಿತ ಮರಳುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

فَتَلَقّٰٓى اٰدَمُ مِنْ رَّبِّهٖ كَلِمٰتٍ فَتَابَ عَلَيْهِ ۭ اِنَّهٗ هُوَ التَّوَّابُ الرَّحِيْمُ ۝

**39.** ನಾವು ಹೇಳಿದೆವು: 'ಇಲ್ಲಿಂದ ನೀವೆಲ್ಲರೂ ಹೊರ ನಡೆಯಿರಿ. ನನ್ನಿಂದ ನಿಮ್ಮ ಕಡೆಗೆ ಮಾರ್ಗ ದರ್ಶನ ಬಂದರೆ ಯಾರು ಆ ಮಾರ್ಗದರ್ಶನವನ್ನು ಸ್ವೀಕರಿಸುತ್ತಾರೋ, ಅವರಿಗೆ ಹೆದರಿಕೆ ಇಲ್ಲ; ಅವರು ದುಃಖಿತರಾಗಲಿಕ್ಕೂ ಇಲ್ಲ.'

قُلْنَا اهْبِطُوْا مِنْهَا جَمِيْعًا ۚ فَاِمَّا يَاْتِيَنَّكُمْ مِّنِّىْ هُدًى فَمَنْ تَبِعَ هُدَاىَ فَلَا خَوْفٌ عَلَيْهِمْ وَلَا هُمْ يَحْزَنُوْنَ ۝

**40.** ಆದರೆ ಯಾರು ಅವಿಶ್ವಾಸಿಗಳಾಗುತ್ತಾರೋ ಮತ್ತು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುತ್ತಾರೋ ಅವರು ನರಕದವರು. ಅವರು ಅಲ್ಲೇ ನಿವಾಸಿಸುವರು.

وَالَّذِيْنَ كَفَرُوْا وَكَذَّبُوْا بِاٰيٰتِنَآ اُولٰۗىِٕكَ اَصْحٰبُ النَّارِ ۚ هُمْ فِيْهَا خٰلِدُوْنَ ۝

**41.** ಓ ಇಸ್ರಾಈಲ್ ಸಂತತಿಗಳೇ,[13] ನಾನು ನಿಮ್ಮ ಮೇಲೆ ತೋರಿಸಿದ ಅನುಗ್ರಹವನ್ನು ಸ್ಮರಿಸಿರಿ ಮತ್ತು ನನ್ನೊಂದಿಗೆ ಮಾಡಿದ ಒಡಂಬಡಿಕೆಯನ್ನು ಈಡೇರಿಸಿರಿ. ನಾನು ಸಹ ನಿಮ್ಮೊಡನೆ ಮಾಡಿದ ಒಪ್ಪಂದವನ್ನು ಪೂರೈಸುವೆನು. ನೀವು ನನಗೆ ಮಾತ್ರ ಭಯಪಡಬೇಕು.

يٰبَنِىْٓ اِسْرَاۗءِيْلَ اذْكُرُوْا نِعْمَتِىَ الَّتِىْٓ اَنْعَمْتُ عَلَيْكُمْ وَاَوْفُوْا بِعَهْدِىْٓ اُوْفِ بِعَهْدِكُمْ ۚ وَاِيَّاىَ فَارْهَبُوْنِ ۝

**42.** ನಿಮ್ಮ ಬಳಿಯಿರುವ *ಧರ್ಮಗ್ರಂಥವನ್ನು* ಸತ್ಯಪಡಿಸುವ, ನಾನು ಅವತೀರ್ಣಗೊಳಿಸಿದ ಈ ಗ್ರಂಥದ ಮೇಲೆ ವಿಶ್ವಾಸವಿಡಿರಿ. ನೀವು ಸತ್ಯವನ್ನು ನಿರಾಕರಿಸುವವರಲ್ಲಿ ಮೊದಲಿಗರಾಗದಿರಿ ಹಾಗೂ ನನ್ನ

وَاٰمِنُوْا بِمَآ اَنْزَلْتُ مُصَدِّقًا لِّمَا مَعَكُمْ وَلَا تَكُوْنُوْٓا اَوَّلَ كَافِرٍۢ بِهٖ ۠ وَلَا تَشْتَرُوْا بِاٰيٰتِىْ ثَمَنًا قَلِيْلًا ۡ وَّاِيَّاىَ

13. ಬನೀ ಇಸ್ರಾಈಲ್ ಅಂದರೆ ಇಸ್ರಾಈಲ್ ಸಂತತಿಗಳು ಎಂದರ್ಥ. ಅದು ಪ್ರವಾದಿ ಯಅ್‌ಖೂಬ್ (ಅಲೈಹಿಸ್ಸಲಾಂ) ಅವರ ಅಕ್ಕರೆಯ ಹೆಸರಾಗಿದೆ. ಅದರ ಅರ್ಥ ದೇವರ ಪಹಿಲ್ವಾನ್ ಅಥವಾ ದೇವದಾಸ ಎಂದಾಗಿದೆ. ಅವರಿಗೆ ಹನ್ನೆರಡು ಮಂದಿ ಮಕ್ಕಳಿದ್ದರು. ಆ ಹನ್ನೆರಡು ಮಂದಿ ಮಕ್ಕಳ ಸಂತಾನ ಪಾರಂಪರ್ಯಕ್ಕೆ ಬನೀ ಇಸ್ರಾಈಲ್ (ಇಸ್ರಾಈಲ್ ಸಂತತಿಗಳು) ಎಂದು ಹೇಳಲಾಗುತ್ತದೆ. ಆ ಹನ್ನೆರಡು ಮಕ್ಕಳಲ್ಲಿ ಒಬ್ಬ ಮಗನ ಹೆಸರು ಯಹೂದಃ ಎಂದಾಗಿತ್ತು. ಕಾಲ ಕ್ರಮೇಣ ಈ ಸಮುದಾಯವನ್ನು ಈ ಹೆಸರಿನೊಂದಿಗೆ ಸೇರಿಸಿ 'ಯಹೂದ್' ಎಂದು ಕರೆಯಲಾಯಿತು. ಆದರೆ ಸಮುದಾಯವೆಂಬ ಪರಿಗಣನೆಯಲ್ಲಿ ಬನೀ ಇಸ್ರಾಈಲ್ ಎಂದೂ ಪ್ರವಾದಿ ಮೂಸಾ(ಅಲೈಹಿಸ್ಸಲಾಂ) ಪ್ರಬೋಧಿಸಿದ ಧರ್ಮದ ಅನುಯಾಯಿಗಳೆಂಬ ನೆಲೆಯಲ್ಲಿ ಯಹೂದ್ಯರೆಂದೂ ಹೇಳಲಾಗುತ್ತದೆ.





ವಚನಗಳನ್ನು ತುಚ್ಛವಾದ ಬೆಲೆಗೆ ವಿನಿಮಯ ಮಾಡದಿರಿ.[13A] ನೀವು ನನಗೆ ಮಾತ್ರ ಭಯಪಡಿರಿ.

فَاتَّقُوْنِ ۝

**43.** ನೀವು ಸತ್ಯವನ್ನು ಅಸತ್ಯದೊಂದಿಗೆ ಕಲಬೆರಕೆ ಮಾಡಬೇಡಿರಿ ಹಾಗೂ ತಿಳಿದುಕೊಂಡೇ ಸತ್ಯವನ್ನು ಮುಚ್ಚಿಡಬೇಡಿರಿ.

وَلَا تَلْبِسُوا الْحَقَّ بِالْبَاطِلِ وَتَكْتُمُوا الْحَقَّ وَاَنْتُمْ تَعْلَمُوْنَ ۝

**44.** ನೀವು ಪ್ರಾರ್ಥನೆಯನ್ನು ನಿಷ್ಠೆಯಿಂದ ಸಲ್ಲಿಸಿರಿ; ಝಕಾತ್ (ಕಡ್ಡಾಯ ದಾನ) ಕೊಡಿರಿ ಮತ್ತು ಅಲ್ಲಾಹನಿಗೆ ನಮಿಸುವವರೊಂದಿಗೆ ನಮಿಸಿರಿ.

وَاَقِيْمُوا الصَّلٰوةَ وَاٰتُوا الزَّكٰوةَ وَارْكَعُوْا مَعَ الرّٰكِعِيْنَ ۝

**45.** ಸತ್ಕರ್ಮ ಮಾಡಲು ಅನ್ಯರಿಗೆ ನೀವು ಉಪದೇಶಿಸುತ್ತಿದ್ದರೂ ನಿಮ್ಮನ್ನೇ ನೀವು ಮರೆತು ಬಿಡುತ್ತೀರಾ? ನೀವು (ದಿವ್ಯ) ಗ್ರಂಥವನ್ನು ಓದುತ್ತಿದ್ದರೂ ಏನೂ ಯೋಚಿಸುವುದಿಲ್ಲವೇ?

اَتَاْمُرُوْنَ النَّاسَ بِالْبِرِّ وَتَنْسَوْنَ اَنْفُسَكُمْ وَاَنْتُمْ تَتْلُوْنَ الْكِتٰبَ ۭ اَفَلَا تَعْقِلُوْنَ ۝

**46.** ಸಹನೆ ಮತ್ತು ಪ್ರಾರ್ಥನೆ ಮೂಲಕ ನೀವು ಸಹಾಯವನ್ನು ಯಾಚಿಸಿರಿ. ವಿನಯವಂತರಿಗೆ ಹೊರತು ಇತರರಿಗೆ ಇದು ಕಷ್ಟ ಸಾಧ್ಯ-

وَاسْتَعِيْنُوْا بِالصَّبْرِ وَالصَّلٰوةِ ۭ وَاِنَّهَا لَكَبِيْرَةٌ اِلَّا عَلَى الْخٰشِعِيْنَ ۝

**47.** ತಾವು ತಮ್ಮ ಪ್ರಭುವನ್ನು ಭೇಟಿಯಾಗಲಿದ್ದೇವೆ ಹಾಗೂ ಅವನೆಡೆಗೆ ಮರಳಲಿದ್ದೇವೆ ಎಂದು ಅವರು (ವಿನಯವಂತರು) ನಂಬುತ್ತಾರೆ.

الَّذِيْنَ يَظُنُّوْنَ اَنَّهُمْ مُّلٰقُوْا رَبِّهِمْ وَاَنَّهُمْ اِلَيْهِ رٰجِعُوْنَ ۝

**48.** ಓ ಇಸ್ರಾಈಲ್ ಸಂತತಿಗಳೇ, ನಿಮಗೆ ದಯಪಾಲಿಸಿದ ಅನುಗ್ರಹವನ್ನೂ ಸಮಸ್ತ ಜನರೆಡೆಯಲ್ಲಿ[13B] ನಿಮಗೆ ನೀಡಿದ ಉನ್ನತ ಸ್ಥಾನವನ್ನೂ ಸ್ಮರಿಸಿರಿ.

يٰبَنِىْٓ اِسْرَاۗءِيْلَ اذْكُرُوْا نِعْمَتِىَ الَّتِىْٓ اَنْعَمْتُ عَلَيْكُمْ وَاَنِّىْ فَضَّلْتُكُمْ عَلَى الْعٰلَمِيْنَ ۝

**49.** ಒಂದು ಆತ್ಮವು ಇನ್ನೊಂದು ಆತ್ಮಕ್ಕೆ ನೆರವಾಗಲು ಅಸಮರ್ಥವಾಗುವ ದಿನದ ಕುರಿತು ನೀವು ಭಯಪಡಿರಿ. ಅಂದು ಯಾವ ಶಿಫಾರಸ್ಸೂ ಸ್ವೀಕರಿಸಲ್ಪಡಲಾರದು. ಯಾವುದೇ ಪ್ರಾಯಶ್ಚಿತ್ತ ಮಾಡಿಕೊಳ್ಳಲಾಗದು. ಯಾವ ನೆರವೂ ದೊರಕಲಾರದು.

وَاتَّقُوْا يَوْمًا لَّا تَجْزِىْ نَفْسٌ عَنْ نَّفْسٍ شَـيْــــًٔـا وَّلَا يُقْبَلُ مِنْهَا شَفَاعَةٌ وَّلَا يُؤْخَذُ مِنْهَا عَدْلٌ وَّلَا هُمْ يُنْصَرُوْنَ ۝

13A. ಇದರ ಅರ್ಥ ಹೆಚ್ಚು ಬೆಲೆಗೆ ವಿನಿಮಯ ಮಾಡಬಹುದೆಂದಲ್ಲ. ಲೌಕಿಕವನ್ನು ಧಾರ್ಮಿಕದೊಂದಿಗೆ ವಿನಿಮಯ ಮಾಡಬಾರದೆಂದು ತಾತ್ಪರ್ಯ. ಏಕೆಂದರೆ ಧರ್ಮವಿಚಾರದ ಮುಂದೆ ಲೋಕವಿಚಾರ ಬಹಳ ತುಚ್ಛವಾದುದು.

13B. ಇಲ್ಲಿ 'ಆಲಮೀನ್' (ಸಮಸ್ತ ಜನರು) ಎಂಬುದರ ತಾತ್ಪರ್ಯ ಆ ಕಾಲದ ಜನರೆಂದಾಗಿದೆ ; ಹಿಂದಿನ ಮತ್ತು ಮುಂದಿನ ಎಲ್ಲ ಜನರೆಂದಲ್ಲ.

**50. ಫಿರ್‌ಔನನ ಜನರು ನಿಮಗೆ ನೀಡುತ್ತಿದ್ದ ಕಠಿಣ ಯಾತನೆಯಿಂದ ನಿಮ್ಮನ್ನು ವಿಮೋಚನೆಗೊಳಿಸಿದ ಸಂದರ್ಭ** (ಸ್ಮರಿಸಿರಿ). **ಅವರು ನಿಮ್ಮ ಗಂಡು ಮಕ್ಕಳನ್ನು ಹತ್ಯೆಗೈಯ್ಯುತ್ತಾ ಸ್ತ್ರೀಯರನ್ನು ಜೀವಂತ ಬಿಟ್ಟುಬಿಡುತ್ತಿದ್ದರು. ಅದರಲ್ಲಿ ನಿಮ್ಮ ಪ್ರಭುವಿನ ಕಡೆಯಿಂದ ನಿಮಗೆ ದೊಡ್ಡದಾದ ಸತ್ವಪರೀಕ್ಷೆ ಇತ್ತು.**

وَإِذْ نَجَّيْنَاكُم مِّنْ آلِ فِرْعَوْنَ يَسُومُونَكُمْ سُوءَ الْعَذَابِ يُذَبِّحُونَ أَبْنَاءَكُمْ وَيَسْتَحْيُونَ نِسَاءَكُمْ ۚ وَفِي ذَٰلِكُم بَلَاءٌ مِّن رَّبِّكُمْ عَظِيمٌ ﴿٥٠﴾

**51. ನಿಮಗೋಸ್ಕರ ನಾವು ಸಮುದ್ರವನ್ನು ವಿಭಾಗಿಸಿ[14] ನಿಮ್ಮನ್ನು ರಕ್ಷಿಸಿದ ಸಂದರ್ಭವನ್ನೂ** ಜ್ಞಾಪಿಸಿರಿ. **ನಿಮ್ಮ ಕಣ್ಣ ಮುಂದೆ, ಫಿರ್‌ಔನನ ಜನರನ್ನು ನಾವು ಮುಳುಗಿಸಿದೆವು.**

وَإِذْ فَرَقْنَا بِكُمُ الْبَحْرَ فَأَنجَيْنَاكُمْ وَأَغْرَقْنَا آلَ فِرْعَوْنَ وَأَنتُمْ تَنظُرُونَ ﴿٥١﴾

**52. ನಾವು ಮೂಸಾರಿಗೆ ನಲ್ವತ್ತು ರಾತ್ರಿಗಳನ್ನು ವಾಗ್ದಾನಮಾಡಿದ ಸಂದರ್ಭವನ್ನು ಸಹ** ನೆನೆಯಿರಿ. **ಅವರಿಲ್ಲದಾಗ ನೀವು ದುಷ್ಕರ್ಮಿಗಳಾಗಿ ಕರುವನ್ನು ಆರಾಧಿಸಲು ತೊಡಗಿದಿರಿ.**

وَإِذْ وَاعَدْنَا مُوسَىٰ أَرْبَعِينَ لَيْلَةً ثُمَّ اتَّخَذْتُمُ الْعِجْلَ مِن بَعْدِهِ وَأَنتُمْ ظَالِمُونَ ﴿٥٢﴾

**53. ನೀವು ಕೃತಜ್ಞತೆಯುಳ್ಳವರಾಗಲಿಕ್ಕಾಗಿ ಆ ಬಳಿಕವೂ ನಾವು ನಿಮಗೆ ಕ್ಷಮೆ ನೀಡಿದೆವು.**

ثُمَّ عَفَوْنَا عَنكُم مِّن بَعْدِ ذَٰلِكَ لَعَلَّكُمْ تَشْكُرُونَ ﴿٥٣﴾

**54. ನಿಮ್ಮ ಮಾರ್ಗದರ್ಶನಕ್ಕಾಗಿ ನಾವು ಮೂಸಾರಿಗೆ ಗ್ರಂಥ ಮತ್ತು ವಿವೇಚನೆಯನ್ನು ನೀಡಿದಾಗ,**

وَإِذْ آتَيْنَا مُوسَى الْكِتَابَ وَالْفُرْقَانَ لَعَلَّكُمْ تَهْتَدُونَ ﴿٥٤﴾

**55. ಮೂಸಾ ತನ್ನ ಜನರೊಡನೆ ಹೇಳಿದ ಸಂದರ್ಭವನ್ನು** ಜ್ಞಾಪಿಸಿರಿ : **'ನೀವು ಕರುವನ್ನು ಆರಾಧನೆಗೆ ಸ್ವೀಕರಿಸಿಕೊಂಡು ನಿಮ್ಮ ಸ್ವಂತಕ್ಕೇ ಹಾನಿಯನ್ನುಂಟು ಮಾಡಿದ್ದೀರಿ. ಆದ್ದರಿಂದ ನೀವು ನಿಮ್ಮ ಸೃಷ್ಟಿಕರ್ತನ ಕಡೆಗೆ** (ಪಶ್ಚಾತ್ತಾಪದೊಂದಿಗೆ) **ತಿರುಗಿರಿ. ನಿಮ್ಮ ಕೆಟ್ಟ ಬಯಕೆಗಳನ್ನು ಸಂಹರಿಸಿರಿ.**[14A] **ಇದು ನಿಮ್ಮ ಸೃಷ್ಟಿಕರ್ತನ ಬಳಿಯಲ್ಲಿ ನಿಮಗೆ ಬಲು ಉತ್ತಮವಾದುದು.'** (ಅವರು ಹಾಗೆ ಮಾಡಿದಾಗ) **ಅವನು ಅವರ ಮೇಲೆ ದಯೆದೋರಿದನು. ನಿಶ್ಚಯವಾಗಿಯೂ ಅವನು ಅತಿ ಹೆಚ್ಚು ದಯೆದೋರುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.**

وَإِذْ قَالَ مُوسَىٰ لِقَوْمِهِ يَا قَوْمِ إِنَّكُمْ ظَلَمْتُمْ أَنفُسَكُم بِاتِّخَاذِكُمُ الْعِجْلَ فَتُوبُوا إِلَىٰ بَارِئِكُمْ فَاقْتُلُوا أَنفُسَكُمْ ذَٰلِكُمْ خَيْرٌ لَّكُمْ عِندَ بَارِئِكُمْ فَتَابَ عَلَيْكُمْ ۚ إِنَّهُ هُوَ التَّوَّابُ الرَّحِيمُ ﴿٥٥﴾

**56. 'ಓ ಮೂಸಾ, ನಾವು ಕಣ್ಣ ಮುಂದೆ ಅಲ್ಲಾಹನನ್ನು ಕಾಣುವ ತನಕ ನಿನ್ನನ್ನು ಎಂದಿಗೂ ನಂಬಲಾರೆವು' ಎಂದು ನೀವು ಹೇಳಿದ ಸಂದರ್ಭ - ಆಗ ನೀವು ನೋಡುತ್ತಿದ್ದಂತೆಯೇ ನಿಮ್ಮ ಮೇಲೆ ವಿನಾಶಕಾರಿ ಶಿಕ್ಷೆ ಬಂದೆರಗಿತು.**

وَإِذْ قُلْتُمْ يَا مُوسَىٰ لَن نُّؤْمِنَ لَكَ حَتَّىٰ نَرَى اللَّهَ جَهْرَةً فَأَخَذَتْكُمُ الصَّاعِقَةُ وَأَنتُمْ تَنظُرُونَ ﴿٥٦﴾

**57. ಮತ್ತೆ ನಿಮ್ಮ ಅಧಃಪತನದ ನಂತರ ನಿಮ್ಮನ್ನು ನಾವು ಪುನಃ ಉತ್ಥಾನಗೊಳಿಸಿದೆವು[15] - ನೀವು ಕೃತಜ್ಞತೆ ತೋರಿಸುವವರಾಗಲೆಂದು.**

ثُمَّ بَعَثْنَاكُم مِّن بَعْدِ مَوْتِكُمْ لَعَلَّكُمْ تَشْكُرُونَ ﴿٥٧﴾

**58. ಮೋಡಗಳಿಂದ ನಾವು ನಿಮಗೆ ನೆರಳನ್ನು ಮಾಡಿಕೊಟ್ಟೆವು ಹಾಗೂ 'ಮನ್ನ'[16] ಮತ್ತು**

وَظَلَّلْنَا عَلَيْكُمُ الْغَمَامَ وَأَنزَلْنَا عَلَيْكُمُ

14. ಸಮುದ್ರದ ಇಳಿತ-ಭರತ ಕ್ರಮವನ್ನನುಸರಿಸಿ ಇದು ಸಂಭವಿಸಿತು. ನೀರಿನ ಇಳಿತ ಸಮಯದಲ್ಲಿ ಪ್ರವಾದಿ ಮೂಸಾ (ಅಲೈಹಿಸ್ಸಲಾಂ) ಮತ್ತು ಅನುಯಾಯಿಗಳು ದುರ್ಗಮವಾದ ಆ ಸ್ಥಳವನ್ನು ದಾಟಿದರು. ಆದರೆ ಬೆನ್ನಟ್ಟಿ ಬಂದ ಫಿರ್‌ಔನ್ ಮತ್ತು ಅವನ ಸೈನ್ಯ ಅಲ್ಲಿಗೆ ತಲಪಿದಾಗ, ಗಾಳಿ ತಿರುಗಿ ಬೀಸಿ ನೀರು ಒಮ್ಮೆಗೇ ಏರಿ ಬಂತು. ಹಾಗೆ ಅವರು ಅದರಲ್ಲಿ ಮುಳುಗಿ ಬಿಟ್ಟರು. ಇಳಿತ-ಭರತ ಮತ್ತು ಗಾಳಿಯ ಬೀಸುವಿಕೆ ಅಲ್ಲಾಹನು ನಿಶ್ಚಯಿಸಿದ ನಿಸರ್ಗ ನಿಯಮ ಮತ್ತು ನಿಯಂತ್ರಣ ಪ್ರಕಾರ ಉಂಟಾಗುತ್ತವೆ. ಪ್ರವಾದಿ ಮೂಸಾ ಮತ್ತು ಫಿರ್‌ಔನ್ ಇಬ್ಬರನ್ನೂ ಸಮುದ್ರದ ಬದಿಯಲ್ಲಿ ಆ ದುರ್ಗಮ ದಾರಿಯಲ್ಲಿ ಮುಂದೆ ಮತ್ತು ಹಿಂದೆಯಾಗಿ ಸಾಗುವಂತೆ ಮಾಡಿದ್ದು ಅಲ್ಲಾಹನೇ. ಇಳಿತ-ಭರತದ ಗುಣ ಮತ್ತು ದೋಷ ಯಥಾವಿಧಿ ಪ್ರವಾದಿ ಮೂಸಾರಿಗೆ ಮತ್ತು ಫಿರ್‌ಔನನಿಗೆ ಉಂಟಾಗಬೇಕಿತ್ತು. ಆದ್ದರಿಂದಲೇ "ನಾವು ಸಮುದ್ರವನ್ನು ವಿಭಾಗಿಸಿ ನಿಮ್ಮನ್ನು ರಕ್ಷಿಸಿದೆವು" ಎಂದು ಪ್ರಪಂಚದ ನಿಯಾಮಕನಾದ ಅಲ್ಲಾಹನು ಹೇಳಿದ್ದು.

14A. "ಫಖ್ತುಲೂ ಅನ್‌ಫುಸಕುಂ"= ನಿಮ್ಮನ್ನು ನೀವೇ ಸಂಹರಿಸಿರಿ.

ಪ್ರತಿಯೊಬ್ಬನು ಅಣ್ಣ-ತಮ್ಮ, ಗೆಳೆಯ-ನೆರೆಯವ ಎಂದು ಲಕ್ಷಿಸದೆ ಜನರನ್ನು ಸಂಹರಿಸಬೇಕೆಂದು ಬೈಬಲ್‌ನಲ್ಲಿ ಹೇಳಲಾಗಿದೆ. ಈ ದಿನ ಹೆಚ್ಚು ಕಡಿಮೆ ಮೂರು ಸಾವಿರ ಮಂದಿ ಕೊಲ್ಲಲ್ಪಟ್ಟರಂತೆ (ವಿಮೋಚನ ಕಾಂಡ 32 : 27, 28). ಆದರೆ ಕೊಂದವನನ್ನು ಮಾತ್ರ ಕೊಲ್ಲಬೇಕೆಂಬ ಬೈಬಲಿನ ಅಧ್ಯಾಪನಕ್ಕೆ ಇದು ವಿರುದ್ಧವಾಗಿದೆ.

ಇದರ ಶಬ್ದಾರ್ಥವನ್ನು ಮಾತ್ರ ತೆಗೆದುಕೊಂಡು 'ಪ್ರತಿಯೊಬ್ಬನು ಆತ್ಮಹತ್ಯೆ ಮಾಡಲಿ' ಎಂದು ಕೆಲವು ಮುಸ್ಲಿಂ ವ್ಯಾಖ್ಯಾನಗಾರರು ಸಹ ಅನುವಾದಿಸಿದ್ದಾರೆ. ಆದರೆ ಆತ್ಮಹತ್ಯೆ ನಿಷಿದ್ಧವಾದುದು. ಅದು ದೇವಾಜ್ಞೆಯಾಗಲು ನಿರ್ವಾಹವಿಲ್ಲ. ಆದ್ದರಿಂದ ಇದೊಂದು ಆಲಂಕಾರಿಕ ಪ್ರಯೋಗವೆಂದು ನಾವು ತಿಳಿಯಬೇಕಾಗಿದೆ. ಅಂದರೆ, ತಮ್ಮ ಆತ್ಮಗಳನ್ನು ಪಶ್ಚಾತ್ತಾಪ ಮತ್ತು ದೇವಭಯದಿಂದ ಶುದ್ಧೀಕರಿಸಿ ಸ್ವೇಚ್ಛೆಗಳನ್ನು ನಿಗ್ರಹಿಸಿರಿ ಎಂದು ತಾತ್ಪರ್ಯ.

15. ಮರಣದ ನಂತರ ಪುನಃ ಎಬ್ಬಿಸಿದೆವು ಎಂದು ಮೂಲದಲ್ಲಿದೆ. ನಿಮ್ಮ ಸಾಮುದಾಯಿಕ ಅಧಃಪತನದ ನಂತರ ನಿಮ್ಮ ಈಮಾನ್ (ಸತ್ಯ ವಿಶ್ವಾಸ) ಮತ್ತು ಸಂತಾನಗಳಲ್ಲಿ ವೃದ್ಧಿಯನ್ನುಂಟುಮಾಡಿ ನಿಮ್ಮನ್ನು ಶಕ್ತರನ್ನಾಗಿ ಮಾಡಿದೆವು ಎಂದು ಇದರ ತಾತ್ಪರ್ಯವಾಗಿದೆ.

16. ಮನ್ನ=ಔದಾರ್ಯ, ಒಂದು ಬಗೆಯ ಅಣಬೆ. ದೇವಾನುಗ್ರಹದಿಂದ ಲಭಿಸುವ ವಸ್ತುವನ್ನು 'ಮನ್ನ'ಎಂದು ಹೇಳಲಾಗುತ್ತದೆ. ಅಣಬೆ 'ಮನ್ನ' ವರ್ಗದಲ್ಲಿ ಸೇರುತ್ತದೆಂದು ಹದೀಸಿನಲ್ಲಿದೆ. ಲಿಂಬೆಯಂತಹ ಒಂದು ಜಾತಿಯ ಫಲವನ್ನೂ 'ಮನ್ನ' ಎಂದು ಹೇಳುತ್ತಾರೆ.

الْمَنَّ وَالسَّلْوٰى ۖ كُلُوْا مِنْ طَيِّبٰتِ مَا رَزَقْنٰكُمْ ۖ وَمَا ظَلَمُوْنَا وَلٰكِنْ كَانُوْٓا اَنْفُسَهُمْ يَظْلِمُوْنَ ﴿٥٨﴾

'ಸಲ್ವಾ'[17]ವನ್ನು ಸಹ ನಿಮಗೆ ನಾವು ಇಳಿಸಿ ಕೊಟ್ಟು 'ನಾವು ನಿಮಗೆ ಪೂರೈಸಿಕೊಟ್ಟ ಒಳ್ಳೆಯ ಆಹಾರಗಳಿಂದ ಭುಜಿಸಿರಿ' ಎಂದು ಹೇಳಿದೆವು. ಆದರೆ ಅವರು (ಅವಿಧೇಯತೆ ತೋರಿಸಿಕೊಂಡು) ನಮಗೇನೂ ಹಾನಿಮಾಡಲಿಲ್ಲ. ಬದಲಾಗಿ, ಅವರು ತಮ್ಮ ಸ್ವಂತಕ್ಕೇ ಕೇಡನ್ನುಂಟು ಮಾಡಿದರು.

وَاِذْ قُلْنَا ادْخُلُوْا هٰذِهِ الْقَرْيَةَ فَكُلُوْا مِنْهَا حَيْثُ شِئْتُمْ رَغَدًا وَّادْخُلُوا الْبَابَ سُجَّدًا وَّقُوْلُوْا حِطَّةٌ نَّغْفِرْ لَكُمْ خَطٰيٰكُمْ ۗ وَسَنَزِيْدُ الْمُحْسِنِيْنَ ﴿٥٩﴾

59. ನಾವು ಹೀಗೆ ಹೇಳಿದ ಸಂದರ್ಭವನ್ನೂ ಸ್ಮರಿಸಿರಿ: "ಈ ಊರನ್ನು ಪ್ರವೇಶಿಸಿ ನೀವು ಇಚ್ಛಿಸುವಲ್ಲಿಂದ (ಯಥೇಷ್ಟ) ತಿನ್ನಿರಿ. ನೀವು ವಿಧೇಯರಾಗಿದ್ದುಕೊಂಡು '(ದೇವಾ) ನಮ್ಮ ಭಾರವನ್ನು ಲಘೂಕರಿಸು' ಎಂದು ಹೇಳುತ್ತಾ ಪಟ್ಟಣದ ದ್ವಾರವನ್ನು ಪ್ರವೇಶಿಸಿರಿ. ನಾವು ನಿಮ್ಮ ತಪ್ಪುಗಳನ್ನು ಕ್ಷಮಿಸುವೆವು. ಒಳಿತು ಮಾಡುವವರಿಗೆ ನಾವು ಹೆಚ್ಚಿನ ಪ್ರತಿಫಲ ನೀಡುವೆವು."

فَبَدَّلَ الَّذِيْنَ ظَلَمُوْا قَوْلًا غَيْرَ الَّذِيْ قِيْلَ لَهُمْ فَاَنْزَلْنَا عَلَى الَّذِيْنَ ظَلَمُوْا رِجْزًا مِّنَ السَّمَآءِ بِمَا كَانُوْا يَفْسُقُوْنَ ﴿٦٠﴾

60. ಆದರೆ ದುಷ್ಕರ್ಮಿಗಳು ಅವರೊಡನೆ ಹೇಳಲ್ಪಟ್ಟ ಮಾತನ್ನು ಬೇರೊಂದು ಮಾತಿಗೆ ಬದಲಾಯಿಸಿದರು. ಹಾಗೆ ಅವರು ಅಜ್ಞೋಲ್ಲಂಘನೆ ಮಾಡಿದುದರಿಂದ ಆ ದುಷ್ಕರ್ಮಿಗಳ ಮೇಲೆ ನಾವು ಆಕಾಶದಿಂದ ಒಂದು ಶಿಕ್ಷೆಯನ್ನು ಇಳಿಸಿದೆವು.

وَاِذِ اسْتَسْقٰى مُوْسٰى لِقَوْمِهٖ فَقُلْنَا اضْرِبْ بِّعَصَاكَ الْحَجَرَ ۖ فَانْفَجَرَتْ مِنْهُ اثْنَتَا عَشْرَةَ عَيْنًا ۖ قَدْ عَلِمَ كُلُّ اُنَاسٍ مَّشْرَبَهُمْ ۖ كُلُوْا وَاشْرَبُوْا مِنْ

61. ಮೂಸಾ ತನ್ನ ಜನರಿಗೋಸ್ಕರ ನೀರಿಗಾಗಿ ಪ್ರಾರ್ಥಿಸಿದ ಸಂದರ್ಭ- ಆಗ ನಾವು: 'ನಿನ್ನ ಬಡಿಗೆಯಿಂದ ಆ ಬಂಡೆಗೆ ಬಡಿ ಎಂದು ಹೇಳಿದೆವು.[17A] ಆಗ ಅಲ್ಲಿಂದ ಹನ್ನೆರಡು ಬುಗ್ಗೆಗಳು ಚಿಮ್ಮಿದವು. ಹಾಗೆ ಪ್ರತಿಯೊಂದು ಜನಾಂಗದವರು ನೀರು ಕುಡಿಯಲು ತಂತಮ್ಮ

17. ಸಲ್ವಾ = ಲಾವಕ್ಕಿ.

ಮನ್ನ ಮತ್ತು ಸಲ್ವಾ ಎಂಬುದು ಸಸ್ಯಾಹಾರ ಮತ್ತು ಮಾಂಸಾಹಾರದ ವೃದ್ಧಿಯನ್ನು ಸೂಚಿಸುತ್ತದೆ.

17A. 'ಆ ಬಂಡೆಗೆ ಬಡಿ' - ಈ ವಚನದಲ್ಲಿ 'ಹಜರ್' (ಬಂಡೆ) ಎಂಬ ಪದಕ್ಕೆ 'ಅಲ್' ಸೇರಿಸಲಾಗಿದೆ. ಒಂದು ನಿರ್ದಿಷ್ಟ ಬಂಡೆಯನ್ನು ಇದು ಸೂಚಿಸುತ್ತದೆ. ಹಾಗಲ್ಲದೆ, ಯಾವುದಾದರೂ ಬಂಡೆಗೆ ಬಡಿ ಎಂದು ಇದರ ಅರ್ಥವಲ್ಲ. ತಳಭಾಗದಲ್ಲಿ ನೀರಿನ ಬುಗ್ಗೆಯಿರುವ ಒಂದು ನಿರ್ದಿಷ್ಟ ಬಂಡೆಯನ್ನು ಬಡಿದು ಒಡೆಯಲು ಹಝ್ರತ್ ಮೂಸಾ (ಅ)ರಿಗೆ ದೇವಾಜ್ಞೆ ಲಭಿಸಿತು. "ನಾನು ಕಾಶ್ಮೀರದಲ್ಲಿ ಒಂದು ನೀರ ಬುಗ್ಗೆಯನ್ನು ಕಂಡೆನು. ಅದು ಒಂದು ಬಂಡೆಯ ತಳದಿಂದ ಚಿಮ್ಮುತ್ತಿತ್ತು. ಅದರಿಂದ 12 ಶಾಖೆಗಳು ಹರಿಯುತ್ತಿದ್ದವು." (ಹಝ್ರತ್ ಖಲೀಫತುಲ್ ಮಸೀಹ್ II)





رِّزْقِ اللّٰهِ وَلَا تَعْثَوْا فِى الْاَرْضِ مُفْسِدِيْنَ ﴿٦١﴾

ಸ್ಥಳಗಳನ್ನು ತಿಳಿದುಕೊಂಡರು. (ನಾವು ಅವರೊಡನೆ ಹೇಳಿದೆವು:) 'ಅಲ್ಲಾಹನು ನಿಮಗೆ ಒದಗಿಸಿದವುಗಳಿಂದ ತಿನ್ನಿರಿ ಮತ್ತು ಕುಡಿಯಿರಿ; ಕಲಹವನ್ನುಂಟುಮಾಡಿ ಭೂಮಿಯಲ್ಲಿ ದುಷ್ಟತನವನ್ನು ಹರಡಬೇಡಿರಿ.'

وَاِذْ قُلْتُمْ يٰمُوْسٰى لَنْ نَّصْبِرَ عَلٰى طَعَامٍ وَّاحِدٍ فَادْعُ لَنَا رَبَّكَ يُخْرِجْ لَنَا مِمَّا تُنْۢبِتُ الْاَرْضُ مِنْۢ بَقْلِهَا وَقِثَّآئِهَا وَفُوْمِهَا وَعَدَسِهَا وَبَصَلِهَا ۖ قَالَ اَتَسْتَبْدِلُوْنَ الَّذِيْ هُوَ اَدْنٰى بِالَّذِيْ هُوَ خَيْرٌ ۖ اِهْبِطُوْا مِصْرًا فَاِنَّ لَكُمْ مَّا سَاَلْتُمْ ۖ وَضُرِبَتْ عَلَيْهِمُ الذِّلَّةُ وَالْمَسْكَنَةُ ۖ وَبَآءُوْ بِغَضَبٍ مِّنَ اللّٰهِ ۖ ذٰلِكَ بِاَنَّهُمْ كَانُوْا يَكْفُرُوْنَ بِاٰيٰتِ اللّٰهِ وَيَقْتُلُوْنَ النَّبِيّٖنَ بِغَيْرِ الْحَقِّ ۖ ذٰلِكَ بِمَا عَصَوْا وَّكَانُوْا يَعْتَدُوْنَ ﴿٦٢﴾

62. ನೀವು 'ಓ ಮೂಸಾ, ಒಂದೇ ಬಗೆಯ ಆಹಾರದಲ್ಲಿ ನಮಗೆ ತೃಪ್ತಿಯಿಲ್ಲ. ಆದುದರಿಂದ ಭೂಮಿಯಲ್ಲಿ ಬೆಳೆಯುವ ಸೊಪ್ಪು, ಸೌತೆ, ಗೋದಿ, ಧಾನ್ಯ, ನೀರುಳ್ಳಿ ಇತ್ಯಾದಿಗಳನ್ನೂ ನಮಗೆ ಒದಗಿಸುವಂತೆ ನೀನು ನಿನ್ನ ಪ್ರಭುವಿನೊಡನೆ ಪ್ರಾರ್ಥಿಸು' ಎಂದು ಹೇಳಿದಾಗ, ಮೂಸಾ ಅವರೊಡನೆ: 'ಏನು, ನೀವು ಉತ್ತಮ ವಸ್ತುಗಳನ್ನು ಕೀಳು ವಸ್ತುಗಳಿಗೆ ಬದಲಾಯಿಸಿ ಕೊಳ್ಳುತ್ತೀರಾ? ನೀವು ಯಾವುದಾದರೂ ಪಟ್ಟಣಕ್ಕೆ ಹೋಗಿರಿ; ಅಲ್ಲಿ ನೀವು ಕೇಳಿದ್ದೆಲ್ಲ ದೊರಕುವುವು' ಎಂದು ಹೇಳಿದರು. ಅವರು ಅಲ್ಲಾಹನ ದೃಷ್ಟಾಂತಗಳನ್ನು ನಿರಾಕರಿಸಿ ಪ್ರವಾದಿಗಳನ್ನು ಅನ್ಯಾಯವಾಗಿ ಕೊಲ್ಲಲು ಯತ್ನಿಸುತ್ತಿದ್ದುದರಿಂದಲೂ ಅವಿಧೇಯರೂ ಅಕ್ರಮಿಗಳೂ ಆಗಿರುವುದರಿಂದಲೂ ಹೀನ ಸ್ಥಿತಿಗೂ ದಾರಿದ್ರ್ಯಕ್ಕೂ ಗುರಿಯಾದರು ಹಾಗೂ ಅಲ್ಲಾಹನ ಕೋಪಕ್ಕೆ ಈಡಾದರು.

اِنَّ الَّذِيْنَ اٰمَنُوْا وَالَّذِيْنَ هَادُوْا وَالنَّصٰرٰى وَالصّٰبِـِٕيْنَ مَنْ اٰمَنَ بِاللّٰهِ وَالْيَوْمِ الْاٰخِرِ وَعَمِلَ صَالِحًا فَلَهُمْ اَجْرُهُمْ عِنْدَ رَبِّهِمْ ۚ وَلَا خَوْفٌ عَلَيْهِمْ وَلَا هُمْ يَحْزَنُوْنَ ﴿٦٣﴾

63. ಖಂಡಿತವಾಗಿಯೂ ವಿಶ್ವಾಸಿಗಳಿಗೂ ಹಾಗೂ ಯಹೂದ್ಯರು ಕ್ರೈಸ್ತರು ಮತ್ತು ಸಾಬಿಗಳು - (ಇವರ ಪೈಕಿ) ಯಾರೇ ಆಗಲಿ, ಪ್ರಾಮಾಣಿಕವಾಗಿ ಅಲ್ಲಾಹ್ ಮತ್ತು ಅಂತ್ಯ ದಿನದ ಬಗ್ಗೆ ನಂಬಿಕೆಯಿರಿಸಿ ಸತ್ಕರ್ಮಗಳನ್ನು ಮಾಡಿದರೆ ಅವರಿಗೂ ತಮ್ಮ ಪ್ರಭುವಿನ ಬಳಿ ಪ್ರತಿಫಲ ವಿದೆ.[17B] ಅವರಿಗೆ ಭಯವಾಗಲಿ, ಶೋಕವಾಗಲಿ ಇರಲಾರದು.

17B. ಇದರ ತಾತ್ಪರ್ಯ ಮೋಕ್ಷ ಪ್ರಾಪ್ತಿಗೆ ಅಲ್ಲಾಹ್ ಮತ್ತು ಅಂತ್ಯದಿನದ ಬಗ್ಗೆ ನಂಬಿಕೆ ಮತ್ತು ಸತ್ಕರ್ಮ ಮಾತ್ರ ಸಾಕೆಂದು ತಪ್ಪು ಭಾವಿಸಬಾರದು. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮತ್ತು ಇತರ ಎಲ್ಲ ಪ್ರವಾದಿಗಳನ್ನು ನಂಬುವುದು ಮತ್ತು ಪೈಗಂಬರರನ್ನು ಅನುಸರಿಸಿ ಜೀವಿಸುವುದು ಮೋಕ್ಷ ಪ್ರಾಪ್ತಿಗೆ ಅನಿವಾರ್ಯವೆಂದು ಖುರ್‌ಆನ್ ಕಲಿಸುತ್ತದೆ. ಅಲ್ಲಾಹನ ಪ್ರವಾದಿಗಳ ಪೈಕಿ ಯಾರಾದರೊಬ್ಬರನ್ನು ನಿರಾಕರಿಸುವುದು ನರಕ ಶಿಕ್ಷೆಗೆ ಗುರಿಯಾಗುವ ಮಹಾಪಾಪವೆಂದು ಸಹ ಖುರ್‌ಆನ್ ಸ್ಪಷ್ಟಪಡಿಸಿದೆ. ಅನೇಕ ಖುರ್‌ಆನ್ ವಚನಗಳು ಇದಕ್ಕೆ ಆಧಾರವಾಗಿ ಇವೆ. ಉದಾಹರಣೆಗೆ 2:99, 4:65, 4:137, 4:151, 152, 4:171, 24:55 ಎಂಬೀ ವಚನಗಳನ್ನು ನೋಡಿರಿ. ಅಷ್ಟೇ ಅಲ್ಲ, "ಅಲ್ಲಾಹನ ಬಳಿ ಸ್ವೀಕೃತ ಧರ್ಮ

**64. ನಾವು ನಿಮ್ಮಿಂದ ಒಂದು ಕರಾರನ್ನು ಪಡಕೊಂಡು** (ಸಿನಾಯಿ) **ಬೆಟ್ಟವನ್ನು ನಿಮ್ಮ ಮೇಲೆ ಉನ್ನತಿಗೊಳಿಸಿದ[18] ಸಂದರ್ಭ-** (ನಾವು ಆಗ ಹೇಳಿದೆವು:) **'ನಾವು ನಿಮಗೆ ನೀಡಿದುದನ್ನು ಬಿಗಿಯಾಗಿ ಹಿಡಿಯಿರಿ. ಅದರಲ್ಲಿರುವುದನ್ನು ನೆನಪಿಟ್ಟುಕೊಳ್ಳಿರಿ - ನೀವು ರಕ್ಷೆ ಹೊಂದಲಿಕ್ಕಾಗಿ.**

وَإِذْ أَخَذْنَا مِيثَاقَكُمْ وَرَفَعْنَا فَوْقَكُمُ الطُّورَ خُذُوا مَا آتَيْنَاكُم بِقُوَّةٍ وَاذْكُرُوا مَا فِيهِ لَعَلَّكُمْ تَتَّقُونَ ﴿٦٣﴾

**65. ಆ ಬಳಿಕ ನೀವು ಪುನಃ ಹಿಮ್ಮೆಟ್ಟಿದಿರಿ. ಅಲ್ಲಾಹನ ಅನುಗ್ರಹ ಮತ್ತು ಕರುಣೆ ನಿಮ್ಮ ಮೇಲೆ ಇಲ್ಲದಿರುತ್ತಿದ್ದರೆ ನೀವು ಖಂಡಿತವಾಗಿಯೂ ನಷ್ಟ ಹೊಂದುತ್ತಿದ್ದಿರಿ.**

ثُمَّ تَوَلَّيْتُم مِّن بَعْدِ ذَٰلِكَ ۖ فَلَوْلَا فَضْلُ اللَّهِ عَلَيْكُمْ وَرَحْمَتُهُ لَكُنتُم مِّنَ الْخَاسِرِينَ ﴿٦٤﴾

**66. ನಿಮ್ಮ ಪೈಕಿ ಸಬ್ಬತ್ ದಿನದ ನಿಯಮೋಲ್ಲಂಘನೆ ಮಾಡಿದವರ ಅಂತ್ಯವನ್ನು ನೀವು ತಿಳಿದಿದ್ದೀರಿ. 'ನೀವು ನಿಕೃಷ್ಟ ಕಪಿಗಳಾಗಿರಿ'[18A] ಎಂದು ನಾವು ಅವರೊಡನೆ ಹೇಳಿದೆವು.**

وَلَقَدْ عَلِمْتُمُ الَّذِينَ اعْتَدَوْا مِنكُمْ فِي السَّبْتِ فَقُلْنَا لَهُمْ كُونُوا قِرَدَةً خَاسِئِينَ ﴿٦٥﴾

ಇಸ್ಲಾಂ ಮಾತ್ರ " (3:20) ಮತ್ತು "ಯಾರಾದರೂ ಇಸ್ಲಾಂ ಧರ್ಮದ ಹೊರತು ಬೇರೆ ಯಾವುದಾದರೂ ಧರ್ಮವನ್ನು ಕೈಗೊಂಡರೆ ಅದು ಸ್ವೀಕೃತವಾಗದು" (3.86) ಎಂದು ಖುರ್‌ಆನ್ ಸ್ಪಷ್ಟಪಡಿಸುತ್ತದೆ. ಸಂಕ್ಷಿಪ್ತವಾಗಿ, ಸಮಸ್ತ ಜನರಿಗೆ ಮಾರ್ಗದರ್ಶಕರಾಗಿ ಹಝ್ರತ್ ಮುಹಮ್ಮದ್ ಪೈಗಂಬರ್ (ಸ)ರವರನ್ನು ಅಲ್ಲಾಹನು ನಿಯುಕ್ತಗೊಳಿಸಿ ಸರ್ವಲೋಕಕ್ಕೆ ಅಗತ್ಯವಿರುವ ನಿರ್ದೇಶನಗಳು ಒಳಗೊಂಡಿರುವ ಒಂದು ಗ್ರಂಥವನ್ನು ಅವರ ಮೂಲಕ ಅವನು ಅವತೀರ್ಣಗೊಳಿಸಿದನು. ಈ ವಾಸ್ತವಾಂಶವನ್ನು ಕಡೆಗಣಿಸುವ ಪಕ್ಷದಲ್ಲಿ, ಮುಹಮ್ಮದ್ ಪೈಗಂಬರ್ (ಸ)ರವರನ್ನು ಅಂಗೀಕರಿಸದೆಯೇ ಮೋಕ್ಷ ಪಡೆಯಬಹುದೆಂದೂ ಆ ಮಹಾಪುರುಷನ ಆಗಮನ ಅನಾವಶ್ಯಕವಾಗಿತ್ತೆಂದೂ ಖುರ್‌ಆನ್ ವ್ಯರ್ಥವೆಂದೂ ಹೇಳಬೇಕಾದೀತು. (ನಊದುಬಿಲ್ಲಾಹ್)

ಮೇಲಿನ ವಚನ ಹಾಗೂ ಅದೇ ರೀತಿಯ ಇನ್ನಿತರ ವಚನಗಳಲ್ಲಿ ಪ್ರಸ್ತಾಪಿಸಿದ ವಿಷಯವು ಪವಿತ್ರ ಖುರ್‌ಆನಿನ ಅತಿ ಮಹತ್ತರವಾದ ನ್ಯಾಯನಿಷ್ಠೆಗೆ ಒಂದು ಉದಾಹರಣೆಯಾಗಿದೆ. ಇಸ್ಲಾಮಿನ ಸಂದೇಶ ಸರಿಯಾದ ರೀತಿಯಲ್ಲಿ ತಲಪದೆ ಇರುವ ಅದೆಷ್ಟೋ ಕೋಟಿ ಜನರು ಪ್ರಪಂಚದಲ್ಲಿದ್ದಾರೆ. ಅಂಥ ಜನರು ಪರಮಾತ್ಮನಲ್ಲಿ ಪ್ರಾಮಾಣಿಕವಾದ ನಂಬಿಕೆ ಇರಿಸಿಕೊಂಡು, ಮರಣೋತ್ತರ ಜೀವಿತದ ಬಗ್ಗೆ ದೃಢ ವಿಶ್ವಾಸ ಹೊಂದಿದರೆ ಹಾಗೂ ತಮ್ಮ ಧರ್ಮಗ್ರಂಥದ ಪ್ರಕಾರ ನಡೆಯುವವರಾದರೆ ಅವರು ದೇವ ಸಂಪ್ರೀತಿಗಾಗಿ ಮಾಡುವ ಸತ್ಕರ್ಮಗಳು ವ್ಯರ್ಥವಾಗಲಾರವು; ಅವುಗಳಿಗೆ ತಕ್ಕುದಾದ ಪ್ರತಿಫಲ ಲಭಿಸುವುದು ಎಂದು ಇದನ್ನು ಅರ್ಥೈಸಬಹುದು.

18. ಬೆಟ್ಟದ ಬುಡದಲ್ಲಿ ನಿಮ್ಮನ್ನು ನಿಲ್ಲಿಸಿದೆವು ಎಂದು ತಾತ್ಪರ್ಯ. (ವಿಮೋಚನ ಕಾಂಡ 19:17)

18A. ಕೆಲವು ಖುರ್‌ಆನ್ ವ್ಯಾಖ್ಯಾನಗಾರರು 'ಕಪಿಗಳಾಗಿರಿ' ಎಂಬ ಮಾತಿಗೆ ಆ ಮನುಷ್ಯರನ್ನು ನಿಜವಾದ ಕಪಿಗಳಾಗಿ ಪರಿವರ್ತಿಸಲಾಯಿತೆಂದು ಅರ್ಥ ಬರೆದಿದ್ದಾರೆ. ಆದರೆ ಅದು ಸರಿಯಲ್ಲ. ಅವರ ಮನಸ್ಸು ಮಲಿನಗೊಂಡು ಮಂಗಗಳಂತೆ ಚೇಷ್ಟೆ ಮಾಡಲು ತೊಡಗಿದರೆಂದು ತಾತ್ಪರ್ಯವಾಗಿದೆ- ಮಂಗಗಳ ಸ್ವಭಾವವುಳ್ಳ ಮನುಷ್ಯರು.





**67. ಹಾಗೆ ನಾವು ಅದನ್ನು ಆ ಕಾಲದವರಿಗೂ ಆ ಬಳಿಕದವರಿಗೂ ಒಂದು ದೃಷ್ಟಾಂತವನ್ನಾಗಿ ಮಾಡಿದೆವು. ಭಯಭಕ್ತಿಯುಳ್ಳವರಿಗೆ ಅದೊಂದು ನೀತಿಪಾಠವೂ ಆಗಿದೆ.**

فَجَعَلْنَاهَا نَكَالًا لِّمَا بَيْنَ يَدَيْهَا وَمَا خَلْفَهَا وَمَوْعِظَةً لِّلْمُتَّقِينَ ﴿٦٦﴾

**68. 'ಒಂದು ಹಸುವನ್ನು[19] ಬಲಿಕೊಡಲು ಅಲ್ಲಾಹನು ನಿಮಗೆ ಆಜ್ಞಾಪಿಸುತ್ತಾನೆ' ಎಂದು ಮೂಸಾ ತನ್ನ ಜನರೊಡನೆ ಹೇಳಿದ ಸಂದರ್ಭ - ಅವರು ಕೇಳಿದರು: 'ಏನು, ನೀನು ನಮ್ಮನ್ನು ತಮಾಷೆ ಮಾಡುತ್ತಿದ್ದೀಯಾ? ಆಗ ಅವರು** (ಮೂಸಾ) **ಹೇಳಿದರು: 'ಅಂತಹ ಮೂರ್ಖರ ಪೈಕಿ ನಾನು ಆಗದಂತೆ ಅಲ್ಲಾಹನ ಮೊರೆ ಹೋಗುತ್ತೇನೆ.'**

وَإِذْ قَالَ مُوسَىٰ لِقَوْمِهِ إِنَّ اللَّهَ يَأْمُرُكُمْ أَن تَذْبَحُوا بَقَرَةً ۖ قَالُوا أَتَتَّخِذُنَا هُزُوًا ۖ قَالَ أَعُوذُ بِاللَّهِ أَنْ أَكُونَ مِنَ الْجَاهِلِينَ ﴿٦٧﴾

**69. ಅವರು ಹೇಳಿದರು: 'ಆ ಹಸು ಯಾವ ತರದ್ದೆಂದು ಅವನು** (ಅಲ್ಲಾಹನು) **ನಮಗೆ ವಿವರಿಸಿ ಕೊಡಲಿಕ್ಕಾಗಿ ನಿನ್ನ ಪ್ರಭುವನ್ನು ನಮಗೋಸ್ಕರ ನೀನು ಪ್ರಾರ್ಥಿಸು.' ಮೂಸಾ ಉತ್ತರಿಸಿದರು: 'ಅದು ಮುದಿಯೂ ಅಲ್ಲ; ಎಳೆಯ ಪ್ರಾಯದ್ದೂ ಅಲ್ಲ. ಅವೆರಡಕ್ಕೂ ಮಧ್ಯ ಪ್ರಾಯದ, ಪೂರ್ಣವಾಗಿ ಬೆಳೆದದ್ದು. ಈಗ ನೀವು ನಿಮ್ಮೊಡನೆ ಆಜ್ಞಾಪಿಸಿದಂತೆ ವರ್ತಿಸಿರಿ.'**

قَالُوا ادْعُ لَنَا رَبَّكَ يُبَيِّن لَّنَا مَا هِيَ ۚ قَالَ إِنَّهُ يَقُولُ إِنَّهَا بَقَرَةٌ لَّا فَارِضٌ وَلَا بِكْرٌ عَوَانٌ بَيْنَ ذَٰلِكَ ۖ فَافْعَلُوا مَا تُؤْمَرُونَ ﴿٦٨﴾

**70. ಅವರು ಹೇಳಿದರು: 'ಆ ಹಸು ಯಾವ ಬಣ್ಣದ್ದಾಗಿರಬೇಕೆಂದು ಅವನು ನಮಗೆ ವಿಶದಪಡಿಸುವಂತೆ ನೀನು ನಮಗೋಸ್ಕರ ನಿನ್ನ ಪ್ರಭುವನ್ನು ಪ್ರಾರ್ಥಿಸು.' ಅವರು** (ಮೂಸಾ) **ಉತ್ತರಿಸಿದರು: 'ಅದು ನಯನಾನಂದಕರವಾದ ಹೊಂಬಣ್ಣದಿಂದ ಕೂಡಿದ ಹಸುವೆಂದು ಅವನು** (ಅಲ್ಲಾಹನು) **ಹೇಳುತ್ತಾನೆ.'**

قَالُوا ادْعُ لَنَا رَبَّكَ يُبَيِّن لَّنَا مَا لَوْنُهَا ۚ قَالَ إِنَّهُ يَقُولُ إِنَّهَا بَقَرَةٌ صَفْرَاءُ فَاقِعٌ لَّوْنُهَا تَسُرُّ النَّاظِرِينَ ﴿٦٩﴾

**71. ಅವರು ಹೇಳಿದರು: 'ಆ ಹಸು ಯಾವ ತರದ್ದೆಂದು ಅವನು ನಮಗೆ ಸ್ಪಷ್ಟಪಡಿಸಿಕೊಡಲಿಕ್ಕಾಗಿ ನಮಗೋಸ್ಕರ ನಿನ್ನ ಪ್ರಭುವನ್ನು** (ಪುನಃ) **ನೀನು ಪ್ರಾರ್ಥಿಸು. ಏಕೆಂದರೆ** (ಅಂತಹ) **ಎಲ್ಲ ಹಸುಗಳೂ ನಮಗೆ ಒಂದೇ ತರ ಕಾಣಿಸುತ್ತವೆ. ಅಲ್ಲಾಹನು ಇಚ್ಛಿಸಿದರೆ ನಾವು ಮಾರ್ಗದರ್ಶನ ಪಡೆಯುವೆವು.'**

قَالُوا ادْعُ لَنَا رَبَّكَ يُبَيِّن لَّنَا مَا هِيَ إِنَّ الْبَقَرَ تَشَابَهَ عَلَيْنَا وَإِنَّا إِن شَاءَ اللَّهُ لَمُهْتَدُونَ ﴿٧٠﴾

19. ಈಜಿಪ್ಟಿನ ಜನರು ಗೋಪೂಜಕರಾಗಿದ್ದರು. ದೀರ್ಘಕಾಲ ಅಲ್ಲಿ ವಾಸಿಸುತ್ತಾ ಬಂದ ಕಾರಣ ಆ ಸಂಪ್ರದಾಯ ಇಸ್ರಾಈಲ್ಯರಲ್ಲೂ ಕಂಡು ಬಂದಿತ್ತು. ಅವರ ಈ ರೂಢಿಯನ್ನು ತಡೆಯುವುದೇ ಈ ಆಜ್ಞೆಯ ಉದ್ದೇಶ.

**72. ಅವರು** (ಮೂಸಾ) **ಉತ್ತರಿಸಿದರು: 'ಅದು ನೆಲವನ್ನು ಉಳಲಿಕ್ಕಾಗಿ ನೊಗಕ್ಕೆ ಕಟ್ಟಲ್ಪಡದ, ಬೇಸಾಯಕ್ಕಾಗಿ ನೀರೆತ್ತಲು ಉಪಯೋಗಿಸಲ್ಪಡದ, ಯಾವ ನ್ಯೂನತೆಯೂ ಇಲ್ಲದ ಕಲೆರಹಿತವಾದ ಹಸುವಾಗಿದೆ ಎಂದು ಅವನು** (ಅಲ್ಲಾಹನು) **ಹೇಳುತ್ತಾನೆ.' ಅವರು ಹೇಳಿದರು: 'ನೀನೀಗ ಸತ್ಯವನ್ನು ತಿಳಿಯಪಡಿಸಿದ್ದಿ.' ಆ ಬಳಿಕ ಅವರು ಅದನ್ನು ಬಲಿಗೊಟ್ಟರು - ಹಾಗೆ ಮಾಡಲು ಅವರು ಇಷ್ಟಪಡದಿದ್ದರೂ ಕೂಡ.**

قَالَ إِنَّهُ يَقُولُ إِنَّهَا بَقَرَةٌ لَّا ذَلُولٌ تُثِيرُ الْأَرْضَ وَلَا تَسْقِي الْحَرْثَ مُسَلَّمَةٌ لَّا شِيَةَ فِيهَا ۚ قَالُوا الْآنَ جِئْتَ بِالْحَقِّ ۚ فَذَبَحُوهَا وَمَا كَادُوا يَفْعَلُونَ ﴿٧١﴾

**73. ನೀವು ಒಬ್ಬ ಮನುಷ್ಯನನ್ನು ಕೊಲೆಮಾಡಿದ**[20] **ಸಂದರ್ಭ - ಆ ಬಗ್ಗೆ ನಿಮ್ಮೊಳಗೆ ಭಿನ್ನಾಭಿಪ್ರಾಯ ವುಂಟಾಯಿತು. ನೀವು ಬಚ್ಚಿಟ್ಟಿದ್ದನ್ನು ಅಲ್ಲಾಹನು ಬಹಿರಂಗಪಡಿಸುವನು.**

وَإِذْ قَتَلْتُمْ نَفْسًا فَادَّارَأْتُمْ فِيهَا ۖ وَاللَّهُ مُخْرِجٌ مَّا كُنتُمْ تَكْتُمُونَ ﴿٧٢﴾

**74. ನಾವು ಹೇಳಿದೆವು: 'ಇದನ್ನು ಬೇರೆ ಯಾವುದಾದರೊಂದಿಗೆ ಹೋಲಿಸಿರಿ.'**[21] (ಆಗ ನಿಮಗೆ ನಿಜಸ್ಥಿತಿ ಮನವರಿಕೆಯಾಗಬಹುದು.) **ಹೀಗೆ ಅಲ್ಲಾಹನು ಮೃತರಾದವರಿಗೆ ಜೀವನೀಡುತ್ತಾನೆ ಮತ್ತು ನಿಮ್ಮ ತಿಳುವಳಿಕೆಗಾಗಿ ಅವನ ದೃಷ್ಟಾಂತಗಳನ್ನು ತೋರಿಸುತ್ತಾನೆ.**[22]

فَقُلْنَا اضْرِبُوهُ بِبَعْضِهَا ۚ كَذَٰلِكَ يُحْيِي اللَّهُ الْمَوْتَىٰ وَيُرِيكُمْ آيَاتِهِ لَعَلَّكُمْ تَعْقِلُونَ ﴿٧٣﴾

**75. ಅನಂತರ ನಿಮ್ಮ ಹೃದಯಗಳು ಕಠೋರ ವಾದುವು. ಎಲ್ಲಿಯವರೆಗೆಂದರೆ ಅವು ಬಂಡೆಕಲ್ಲಿನಂತೆ ಅಥವಾ ಅದಕ್ಕಿಂತಲೂ ಕಠಿಣ. ನಿಶ್ಚಯವಾಗಿಯೂ**

ثُمَّ قَسَتْ قُلُوبُكُم مِّن بَعْدِ ذَٰلِكَ فَهِيَ كَالْحِجَارَةِ أَوْ أَشَدُّ قَسْوَةً ۚ وَإِنَّ مِنَ

20. 'ಖತಲ್ತುಮ್' ಅಂದರೆ 'ನೀವು ಕೊಲೆಮಾಡಿದ' ಎಂದು ಶಬ್ದಾರ್ಥವಾದರೂ ನೀವು ಕೊಲ್ಲಲು ಯತ್ನಿಸಿದ, ಕೊಂದೆವೆಂದು ವಾದಿಸಿದ ಎಂದು ಇಲ್ಲಿ ತಾತ್ಪರ್ಯ. ಪ್ರವಾದಿ ಯೇಸು (ಈಸಾನಬಿ ಅಲೈಹಿಸ್ಸಲಾಮ್) ರನ್ನು ಯಹೂದ್ಯರು ಶಿಲುಬೆಗೇರಿಸಿ ಹತ್ಯೆ ಮಾಡಲು ಯತ್ನಿಸಿದ ಸಂದರ್ಭವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

21. ಈ ಘಟನೆಯನ್ನು ಇದೇ ರೀತಿಯ ಬೇರೆ ಘಟನೆಗೆ ಹೋಲಿಸಿ ನೋಡಿರಿ ಎಂದರ್ಥ. ಚಾರಿತ್ರಿಕ ಹಾಗೂ ವೈದ್ಯಕೀಯ ದಾಖಲೆಗಳಿಂದ ತಿಳಿದು ಬರುವುದೇನೆಂದರೆ ಶಿಲುಬೆಗೇರಿಸಲ್ಪಟ್ಟವರು ಕೊಂಚ ಸಮಯದಲ್ಲೇ ಅದರಿಂದ ಇಳಿಸಲ್ಪಟ್ಟರೆ ಅವರು ಮೃತಪಟ್ಟಂತೆ ಭಾಸವಾದರೂ ಕೆಲವು ಸಂದರ್ಭಗಳಲ್ಲಿ ಅವರು ಮರಣಹೊಂದಿರುವುದಿಲ್ಲ. ಅದೇ ರೀತಿ ಪ್ರವಾದಿ ಈಸಾರನ್ನು ಶಿಲುಬೆಯಿಂದ ಕೆಳಗಿಳಿಸಿದಾಗ ಅವರು ಮೃತರಾಗಿರಲಿಲ್ಲ.

22. 'ಮೃತರಾದವರಿಗೆ ಜೀವನೀಡಿ ದೃಷ್ಟಾಂತಗಳನ್ನು ತೋರಿಸುತ್ತಾನೆ' ಎಂಬುದರ ತಾತ್ಪರ್ಯ ನಿಮ್ಮ ಭಾವನೆಯಲ್ಲಿ ಮೃತಪಟ್ಟವರಾಗಿ ಗಣಿಸಲ್ಪಡುವವರು ಮೃತರಲ್ಲ; ಬದಲು, ಅವರು ಜೀವಂತರೆಂಬ ಯಥಾರ್ಥತೆಯನ್ನು ಅಲ್ಲಾಹನು ಮನಗಾಣಿಸಿಕೊಡುತ್ತಾನೆ ಎಂದಾಗಿದೆ.





**ಬಂಡೆಗಳ ಮೇಲಿಂದ ನದಿಗಳು ಉಕ್ಕಿ ಹರಿಯುತ್ತವೆ. ಇನ್ನು ಕೆಲವು ಬಂಡೆಗಳು ಸೀಳಲ್ಪಟ್ಟು ಅವುಗಳಿಂದ ನೀರು ಚಿಮ್ಮುತ್ತವೆ. ಅವುಗಳ ಪೈಕಿ ಕೆಲವು ಅಲ್ಲಾಹನ ಭಯದಿಂದ ಕುಸಿದು ಬೀಳುತ್ತವೆ.**[23] **ನಿಮ್ಮ ಕೃತ್ಯಗಳ ಕುರಿತು ಅಲ್ಲಾಹನು ಗಮನವಿಲ್ಲದವನಲ್ಲ.**

الْحِجَارَةِ لَمَا يَتَفَجَّرُ مِنْهُ الْأَنْهَارُ ۚ وَإِنَّ مِنْهَا لَمَا يَشَّقَّقُ فَيَخْرُجُ مِنْهُ الْمَاءُ ۚ وَإِنَّ مِنْهَا لَمَا يَهْبِطُ مِنْ خَشْيَةِ اللَّهِ ۗ وَمَا اللَّهُ بِغَافِلٍ عَمَّا تَعْمَلُونَ ﴿٧٤﴾

**76.** (ಓ ಮುಸ್ಲಿಮರೇ) **ಅವರು** (ಯಹೂದ್ಯರು) **ನಿಮ್ಮ ಮಾತನ್ನು ನಂಬುವರೆಂದು ನೀವು ನಿರೀಕ್ಷಿಸುತ್ತೀರಾ? ಅವರ ಪೈಕಿ ಒಂದು ಪಂಗಡದವರು ಅಲ್ಲಾಹನ ವಚನಗಳನ್ನು ಆಲಿಸುತ್ತಾರೆ. ಅನಂತರ ಅದನ್ನು ಅರಿತುಕೊಂಡ ಬಳಿಕ ಬೇಕುಬೇಕೆಂದೇ ಅದರ ತಾತ್ಪರ್ಯವನ್ನು ತಿರುವು ಮುರುವು ಮಾಡುತ್ತಾರಷ್ಟೆ.**

أَفَتَطْمَعُونَ أَن يُؤْمِنُوا لَكُمْ وَقَدْ كَانَ فَرِيقٌ مِّنْهُمْ يَسْمَعُونَ كَلَامَ اللَّهِ ثُمَّ يُحَرِّفُونَهُ مِن بَعْدِ مَا عَقَلُوهُ وَهُمْ يَعْلَمُونَ ﴿٧٥﴾

**77. ಸತ್ಯ ವಿಶ್ವಾಸಿಗಳನ್ನು ಅವರು ಭೇಟಿಯಾಗುವಾಗ 'ನಾವು ನಂಬಿದ್ದೇವೆ' ಎಂದು ಹೇಳುತ್ತಾರೆ. ಮತ್ತೆ ಅವರು ರಹಸ್ಯವಾಗಿ ಪರಸ್ಪರ ಭೇಟಿಯಾದಾಗ,** (ಒಬ್ಬರನ್ನೊಬ್ಬರು ಆಕ್ಷೇಪಿಸುತ್ತಾ) **ಹೇಳುತ್ತಾರೆ - ಅಲ್ಲಾಹನು ನಿಮಗೆ ಬಹಿರಂಗಪಡಿಸಿದುದನ್ನು ನೀವು ಅವರಿಗೆ ಹೇಳಿಕೊಡುವುದೇ? - ನಿಮ್ಮ ಪ್ರಭುವಿನ ಮುಂದೆ ಆ ಮೂಲಕ ಅವರು ನಿಮ್ಮೊಡನೆ ವಾದಿಸಲಿಕ್ಕಾಗಿ? ನೀವು ಗ್ರಹಿಸುವುದಿಲ್ಲವೇ?**

وَإِذَا لَقُوا الَّذِينَ آمَنُوا قَالُوا آمَنَّا وَإِذَا خَلَا بَعْضُهُمْ إِلَىٰ بَعْضٍ قَالُوا أَتُحَدِّثُونَهُم بِمَا فَتَحَ اللَّهُ عَلَيْكُمْ لِيُحَاجُّوكُم بِهِ عِندَ رَبِّكُمْ ۚ أَفَلَا تَعْقِلُونَ ﴿٧٦﴾

**78. ಅವರು ಏನನ್ನು ಬಚ್ಚಿಡುತ್ತಾರೆ ಮತ್ತು ಏನನ್ನು ಬಹಿರಂಗಪಡಿಸುತ್ತಾರೆ ಎಂಬುದನ್ನು ಅಲ್ಲಾಹನು ಬಲ್ಲನೆಂದು ಅವರು ತಿಳಿದಿಲ್ಲವೇ?**

أَوَلَا يَعْلَمُونَ أَنَّ اللَّهَ يَعْلَمُ مَا يُسِرُّونَ وَمَا يُعْلِنُونَ ﴿٧٧﴾

**79. ಅವರ ಪೈಕಿ ಕೆಲವರು ಅನಕ್ಷರಸ್ಥರು. ಕೆಲವು ಕಟ್ಟು ಕಥೆಗಳ ಹೊರತು ಅವರಿಗೆ ತಮ್ಮ ಗ್ರಂಥದ ಬಗ್ಗೆ**

وَمِنْهُمْ أُمِّيُّونَ لَا يَعْلَمُونَ الْكِتَابَ إِلَّا

23. ಈ ವಾಕ್ಯಕ್ಕೆ ಎರಡು ರೀತಿಯಲ್ಲಿ ಅರ್ಥ ಕೊಡಬಹುದು. (i) 'ಹಾ' ಎಂಬ ಸರ್ವ ನಾಮ ಬಂಡೆಕಲ್ಲುಗಳನ್ನೇ ಸೂಚಿಸುತ್ತದೆ. ಅಂದರೆ ಅಲ್ಲಾಹನ ಬಗ್ಗೆ ಭಯವನ್ನುಂಟು ಮಾಡುವ ವಸ್ತುಗಳೆಂದು ತಾತ್ಪರ್ಯ. ಉದಾ: ಬಿರುಗಾಳಿ, ಜಲಪ್ರಳಯ, ಭೂಕಂಪ ಇತ್ಯಾದಿಗಳು ಸಂಭವಿಸುವಾಗ ಬಂಡೆಕಲ್ಲುಗಳು ಉರುಳುತ್ತವೆ. ತನ್ನಿಮಿತ್ತ ದೇವಭಯವುಂಟಾಗುತ್ತದೆ. (ii) 'ಹಾ' ಎಂಬುದು ಹೃದಯಗಳನ್ನು ಸೂಚಿಸುತ್ತದೆ. ಅಂದರೆ, ಕೆಲವು ಹೃದಯಗಳು ಅಲ್ಲಾಹನ ಭಯದಿಂದ ಕ್ಷಮೆಯಾಚಿಸಿ ಕುಸಿಯುತ್ತವೆ ಎಂದು ತಾತ್ಪರ್ಯ.

أَمَانِيَّ وَإِنْ هُمْ إِلَّا يَظُنُّونَ ﴿٧٨﴾

ಏನೂ ತಿಳಿಯದು. ಅವರು ಕೇವಲ ಊಹಾಪೋಹ ಮಾತ್ರ ಮಾಡುತ್ತಾರೆ.

فَوَيْلٌ لِّلَّذِينَ يَكْتُبُونَ الْكِتَابَ بِأَيْدِيهِمْ ثُمَّ يَقُولُونَ هَٰذَا مِنْ عِندِ اللَّهِ لِيَشْتَرُوا بِهِ ثَمَنًا قَلِيلًا ۖ فَوَيْلٌ لَّهُم مِّمَّا كَتَبَتْ أَيْدِيهِمْ وَوَيْلٌ لَّهُم مِّمَّا يَكْسِبُونَ ﴿٧٩﴾

**80.** ಆದುದರಿಂದ, ತಮ್ಮ ಸ್ವಂತ ಕೈಗಳಿಂದ ಗ್ರಂಥವನ್ನು ಬರೆದು, ಆ ಮೂಲಕ ತುಚ್ಛವಾದ ಬೆಲೆಯನ್ನು ಪಡೆಯಲಿಕ್ಕಾಗಿ 'ಇದು ಅಲ್ಲಾಹನ ಕಡೆಯಿಂದ ಬಂದುದು' ಎಂದು ಹೇಳುವವರಿಗೆ ನಾಶ ಕಾದಿದೆ. ಅವರ ಕೈಗಳು ಏನನ್ನು ಬರೆದುವೋ ಅದಕ್ಕಾಗಿ ಅವರಿಗೆ ವಿಪತ್ತು ಕಾದಿದೆ. ಅವರು ಏನನ್ನು ಸಂಪಾದಿಸಿದರೋ ಅದಕ್ಕಾಗಿಯೂ ಅವರಿಗೆ ವಿನಾಶ ಕಾದಿದೆ.

وَقَالُوا لَن تَمَسَّنَا النَّارُ إِلَّا أَيَّامًا مَّعْدُودَةً ۚ قُلْ أَتَّخَذْتُمْ عِندَ اللَّهِ عَهْدًا فَلَن يُخْلِفَ اللَّهُ عَهْدَهُ ۖ أَمْ تَقُولُونَ عَلَى اللَّهِ مَا لَا تَعْلَمُونَ ﴿٨٠﴾

**81.** 'ಕೆಲವೇ ದಿನಗಳ ಹೊರತು ಬೆಂಕಿ ನಮ್ಮನ್ನು ಸ್ಪರ್ಶಿಸಲಾರದು' ಎಂದು ಅವರು ಹೇಳುತ್ತಾರೆ. ನೀನು ಹೇಳು: 'ಏನು ನೀವು ಹಾಗೇನಾದರೂ ಭರವಸೆಯನ್ನು ಅಲ್ಲಾಹನಿಂದ ಪಡೆದಿದ್ದೀರಾ? ಹಾಗಿದ್ದರೆ, ಅಲ್ಲಾಹನು ವಾಗ್ದಾನವನ್ನು ಉಲ್ಲಂಘಿಸಲಾರನು. ಅಥವಾ ನೀವು ಅಲ್ಲಾಹನ ಬಗ್ಗೆ ತಿಳಿಯದಿರುವ ವಿಚಾರವನ್ನು ಹೇಳುತ್ತಿದ್ದೀರಾ?'

بَلَىٰ مَن كَسَبَ سَيِّئَةً وَأَحَاطَتْ بِهِ خَطِيئَتُهُ فَأُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿٨١﴾

**82.** ಹಾಗಲ್ಲ, ಯಾವನಾದರೂ ಕೆಡುಕು ಮಾಡಿದರೆ, ಅವನ ಪಾಪಕರ್ಮ ಅವನನ್ನು ಸುತ್ತುವರಿಯುತ್ತದೆ - ಅಂತಹವರು ನರಕವಾಸಿಗಳು; ಅವರು ಅಲ್ಲಿ ದೀರ್ಘಕಾಲ ವಾಸಿಸುವರು.

وَالَّذِينَ آمَنُوا وَعَمِلُوا الصَّالِحَاتِ أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ﴿٨٢﴾ ع

**83.** ಯಾರು ನಂಬಿಕೆಯಿಟ್ಟು ಸತ್ಕರ್ಮಗಳನ್ನು ಮಾಡುತ್ತಾರೋ ಅವರು ಸ್ವರ್ಗವಾಸಿಗಳು. ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು.[23A]

وَإِذْ أَخَذْنَا مِيثَاقَ بَنِي إِسْرَائِيلَ لَا تَعْبُدُونَ إِلَّا اللَّهَ وَبِالْوَالِدَيْنِ إِحْسَانًا وَذِي الْقُرْبَىٰ وَالْيَتَامَىٰ وَ

**84.** ನಾವು ಇಸ್ರಾಈಲ್ ಸಂತತಿಗಳಿಂದ (ಹೀಗೊಂದು) ಕರಾರನ್ನು ಪಡೆದ ಸಂದರ್ಭ - 'ನೀವು ಅಲ್ಲಾಹನನ್ನು ಹೊರತು ಬೇರೆ ಯಾರನ್ನೂ ಆರಾಧಿಸಬಾರದು. ಮಾತಪಿತರಿಗೂ ಸಂಬಂಧಿಕರಿಗೂ





الْمَسَاكِينِ وَقُولُوا لِلنَّاسِ حُسْنًا وَأَقِيمُوا الصَّلَاةَ وَآتُوا الزَّكَاةَ ثُمَّ تَوَلَّيْتُمْ إِلَّا قَلِيلًا مِّنكُمْ وَأَنتُم مُّعْرِضُونَ ﴿٨٣﴾

ಅನಾಥರಿಗೂ ಬಡಬಗ್ಗರಿಗೂ ಕರುಣೆಯನ್ನು ತೋರಿಸಬೇಕು. ಜನರೊಡನೆ ವಿನಯದಿಂದ ಮಾತನಾಡಬೇಕು. ಪ್ರಾರ್ಥನೆಯನ್ನು ನಿಷ್ಠೆಯಿಂದ ನಿರ್ವಹಿಸುತ್ತಿರಬೇಕು. ಝಕಾತನ್ನು ನೀಡಬೇಕು.' ಅನಂತರ ನಿಮ್ಮ ಪೈಕಿ ಕೆಲವರ ಹೊರತು ಬಾಕಿಯವರೆಲ್ಲರೂ ವಿಮುಖತೆ ತೋರಿಸಿದಿರಿ.

وَإِذْ أَخَذْنَا مِيثَاقَكُمْ لَا تَسْفِكُونَ دِمَاءَكُمْ وَلَا تُخْرِجُونَ أَنفُسَكُم مِّن دِيَارِكُمْ ثُمَّ أَقْرَرْتُمْ وَأَنتُمْ تَشْهَدُونَ ﴿٨٤﴾

**85.** 'ನೀವು ಪರಸ್ಪರ ರಕ್ತ ಹರಿಸಬಾರದು; ನಿಮ್ಮ ಜನರನ್ನು ನಿಮ್ಮ ಮನೆಯಿಂದ ಹೊರಹಾಕಬಾರದು' ಎಂಬ ಒಡಂಬಡಿಕೆಯನ್ನು ಸಹ ನಿಮ್ಮಿಂದ ಪಡೆದ ಸಂದರ್ಭ- ಆಗ ನೀವು ಅದನ್ನು ದೃಢೀಕರಿಸಿದಿರಿ ಮತ್ತು ಅದಕ್ಕೆ ನೀವು ಸಾಕ್ಷಿಗಳಾದಿರಿ.[24]

ثُمَّ أَنتُمْ هَٰؤُلَاءِ تَقْتُلُونَ أَنفُسَكُمْ وَتُخْرِجُونَ فَرِيقًا مِّنكُم مِّن دِيَارِهِمْ تَظَاهَرُونَ عَلَيْهِم بِالْإِثْمِ وَالْعُدْوَانِ وَإِن يَأْتُوكُمْ أُسَارَىٰ تُفَادُوهُمْ وَهُوَ مُحَرَّمٌ عَلَيْكُمْ إِخْرَاجُهُمْ ۚ أَفَتُؤْمِنُونَ بِبَعْضِ الْكِتَابِ وَتَكْفُرُونَ بِبَعْضٍ ۚ فَمَا جَزَاءُ مَن يَفْعَلُ ذَٰلِكَ مِنكُمْ إِلَّا خِزْيٌ فِي الْحَيَاةِ الدُّنْيَا ۖ وَيَوْمَ الْقِيَامَةِ

**86.** ಹಾಗಿದ್ದರೂ ಅನಂತರ ನೀವು ನಿಮ್ಮ ಸ್ವಂತ ಜನರನ್ನೇ ಕೊಲ್ಲುತ್ತಿದ್ದೀರಿ ಮತ್ತು ನಿಮ್ಮ ಜನರ ಪೈಕಿ ಒಂದು ಪಂಗಡದವರನ್ನು ನೀವು ಕೇಡು ಮತ್ತು ಅನ್ಯಾಯದಿಂದ ಅವರಿಗೆದುರಾಗಿ ಅವರ ಶತ್ರುಗಳನ್ನು ಬೆಂಬಲಿಸುತ್ತಾ ಅವರ ಮನೆಗಳಿಂದ ಹೊರಗೆ ಅಟ್ಟುತ್ತಿದ್ದೀರಿ. ಅವರು ಸೆರೆಯಾಳಾಗಿ ನಿಮ್ಮ ಸಮೀಪಕ್ಕೆ ಬಂದರೆ ನೀವು ದಂಡತೆತ್ತು ಅವರನ್ನು ಬಿಡಿಸುತ್ತೀರಿ - ನೀವು ಅವರನ್ನು ಹೊರದೂಡಿದ್ದಾದರೋ ನ್ಯಾಯವಿರುದ್ಧ ವಾಗಿತ್ತು. ಏನು, ನೀವು ಗ್ರಂಥದ ಒಂದು ಭಾಗವನ್ನು ಅಂಗೀಕರಿಸಿ ಇನ್ನೊಂದು ಭಾಗವನ್ನು ತಿರಸ್ಕರಿಸುತ್ತೀರೋ? ನಿಮ್ಮ ಪೈಕಿ ಅಂತಹವರಿಗೆ

23A. 'ಖಾಲಿದೂನ್' ಎಂಬ ಪದ 82ನೇ ವಚನದಲ್ಲಿ ನರಕವಾಸಿಗಳ ಬಗ್ಗೆಯೂ ಪ್ರಯುಕ್ತವಾಗಿದೆ. ಈ ಪದವನ್ನು ನರಕವಾಸಿಗಳಿಗೆ ಸಂಬಂಧಿಸಿ, "ದೀರ್ಘಕಾಲ ವಾಸ" ಎಂದೂ ಸ್ವರ್ಗವಾಸಿಗಳಿಗೆ ಸಂಬಂಧಿಸಿ "ಶಾಶ್ವತ ವಾಸ" ಎಂದೂ ಭಾಷಾಂತರಿಸಲಾಗಿದೆ. ಏಕೆಂದರೆ ಸ್ವರ್ಗವಾಸಿಗಳು ಶಾಶ್ವತವಾಗಿ ಅಲ್ಲಿ ವಾಸಿಸುವರು ಎಂದು ಖುರ್‌ಆನ್ ಸ್ಪಷ್ಟಪಡಿಸುತ್ತದೆ. ಆದರೆ ನರಕ ಶಿಕ್ಷೆಗೆ ಕೊನೆಯಿದೆಯೆಂದು ಸಹ ಖುರ್‌ಆನ್‌ನಿಂದ ಸ್ಪಷ್ಟವಾಗುತ್ತದೆ. ಅಲ್ಲಾಹನು ಹೇಳುತ್ತಾನೆ: "ಫಉಮ್ಮುಹು ಹಾವಿಯಃ" ಅಂದರೆ ನರಕವು ಅವನಿಗೆ ಮಾತೆಯಂತೆ (101 : 10). ಅರ್ಥಾತ್, ಪಾಪಿಗೆ ನರಕವು ಮಾತೆಯ ಗರ್ಭಾಶಯದಂತೆ. ಪಾಪಿಯು ನರಕದಲ್ಲಿ ಹಲವು ತರ ಯಾತನಾಮಯ ಹಂತಗಳನ್ನು ದಾಟಿ ಕೊನೆಗೆ, ಶಿಶುವು ಗರ್ಭಾಶಯದಿಂದ ಹೊರಬೀಳುವಂತೆ ನರಕದಿಂದ ಹೊರಬರುತ್ತಾನೆ. ಈ ಕೆಳಗಿನ ಪ್ರವಾದಿ ವಚನದಿಂದ ಸಹ ಈ ವಿಚಾರ ಸ್ಪಷ್ಟವಾಗುತ್ತದೆ:

لیأتین علی جهنم یوم تصفق فیه ابوابها لیس فیه احد و
ذلك بعد ما یلبثون فیها احقابا

"ಒಂದು ದಿನ ಬರುವುದು - ಆಗ ನರಕದ ಬಾಗಿಲುಗಳು (ಗಾಳಿಗೆ) ಬಡಿದುಕೊಳ್ಳುವುವು. ಅದರ ಒಳಗೆ ಯಾರೂ ಇರಲಾರರು. ಅದರ ನಿವಾಸಿಗಳು ನೂರಾರು ವರ್ಷಗಳ ಕಾಲ ಅದರಲ್ಲಿ ವಾಸಿಸದ ಬಳಿಕ ಇದು ಸಂಭವಿಸುವುದು." (ಮುಸ್ನದ್ ಅಹ್ಮದ್)

24. 'ವಿಮೋಚನ ಕಾಂಡ' ಅಧ್ಯಾಯ 20,21 ಮತ್ತು 24:3 ನೋಡಿರಿ.

ಇಹಲೋಕದಲ್ಲಿ ಅಪಕೀರ್ತಿಯಲ್ಲದೆ ಬೇರೇನು ಪ್ರತಿಫಲವಿದೆ? ವಿಧಿ ನಿರ್ಣಾಯಕ ದಿನದಂದು ಅವರು ಕಠೋರ ಶಿಕ್ಷೆಗೆ ಗುರಿಯಾಗುವರು. ನಿಮ್ಮ ಕೃತ್ಯಗಳನ್ನು ಅಲ್ಲಾಹನು ಗಮನಿಸದಿರುವುದಿಲ್ಲ.

يُرَدُّوْنَ اِلٰٓى اَشَدِّ الْعَذَابِ ۭ وَمَا اللّٰهُ بِغَافِلٍ عَمَّا تَعْمَلُوْنَ ﴿٨٦﴾

87. ಇಹಲೋಕ ಜೀವನಕ್ಕೆ ಪರಲೋಕ ಜೀವನಕ್ಕಿಂತ ಹೆಚ್ಚಿನ ಮಹತ್ವ ನೀಡಿದವರು ಇವರೇ ಆಗಿದ್ದಾರೆ. ಆದ್ದರಿಂದ ಅವರ ಶಿಕ್ಷೆಯು ಲಘೂಕರಿಸಲ್ಪಡಲಾರದು. (ಬೇರೆ ವಿಧಾನದಲ್ಲಿ) ಅವರಿಗೆ ಸಹಾಯವೂ ಲಭಿಸಲಾರದು.

اُولٰۗىِٕكَ الَّذِيْنَ اشْتَرَوُا الْحَيٰوةَ الدُّنْيَا بِالْاٰخِرَةِ ۡ فَلَا يُخَفَّفُ عَنْهُمُ الْعَذَابُ وَلَا ھُمْ يُنْصَرُوْنَ ﴿٨٧﴾ ع

88. ನಿಶ್ಚಯವಾಗಿಯೂ ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು ಹಾಗೂ ಅವರ ಬಳಿಕ ಅವರನ್ನು ಅನುಸರಿಸುವ ಪ್ರವಾದಿಗಳನ್ನು[25] ನಾವು ಕಳುಹಿಸಿದೆವು. ಮರ್ಯಮರ ಪುತ್ರ ಈಸಾರಿಗೂ ನಾವು ಸ್ಪಷ್ಟವಾದ ದೃಷ್ಟಾಂತಗಳನ್ನು ನೀಡಿದೆವು ಹಾಗೂ ಪವಿತ್ರಾತ್ಮದ ಮೂಲಕ ಅವರಿಗೆ ಶಕ್ತಿ ನೀಡಿದೆವು. (ಅವರೆಲ್ಲರನ್ನೂ ನೀವು ನಿರಾಕರಿಸಿದಿರಿ.) ಹಾಗೆ, ನಿಮ್ಮ ಮನಸ್ಸಿಗೆ ಹಿಡಿಸದ ಸಂದೇಶದೊಂದಿಗೆ ಪ್ರತಿಯೊಬ್ಬ ಪ್ರವಾದಿ ನಿಮ್ಮ ಬಳಿ ಬಂದಾಗಲೂ ನೀವು ಅವರನ್ನು ಧಿಕ್ಕರಿಸಿದಿರಿ. ಅವರಲ್ಲಿ ಕೆಲವರನ್ನು ನೀವು ಮಿಥ್ಯಾವಾದಿಗಳೆಂದು ಹೇಳಿ ನಿರಾಕರಿಸಿ ಕೆಲವರನ್ನು ಹತ್ಯೆ ಮಾಡಿದಿರಿ.[26]

وَلَقَدْ اٰتَيْنَا مُوْسَى الْكِتٰبَ وَقَفَّيْنَا مِنْۢ بَعْدِهٖ بِالرُّسُلِ ۡ وَاٰتَيْنَا عِيْسَى ابْنَ مَرْيَمَ الْبَيِّنٰتِ وَاَيَّدْنٰهُ بِرُوْحِ الْقُدُسِ ۭ اَفَكُلَّمَا جَاۗءَكُمْ رَسُوْلٌۢ بِمَا لَا تَهْوٰٓى اَنْفُسُكُمُ اسْتَكْبَرْتُمْ ۚ فَفَرِيْقًا كَذَّبْتُمْ ۡ وَفَرِيْقًا تَقْتُلُوْنَ ﴿٨٨﴾

89. ನಮ್ಮ ಹೃದಯಗಳು ಸುರಕ್ಷಿತವಾಗಿ ಮುಚ್ಚಲ್ಪಟ್ಟಿವೆ ಎಂದು ಅವರು ಹೇಳುತ್ತಾರೆ. ಅಲ್ಲ, ಅವರು ನಂಬದೆ ಇದ್ದ ಕಾರಣ ಅಲ್ಲಾಹನು ಅವರನ್ನು ಶಪಿಸಿದ್ದಾನೆ. ಅವರು ನಂಬುವುದಾದರೋ ಅತ್ಯಲ್ಪ.

وَقَالُوْا قُلُوْبُنَا غُلْفٌ ۭ بَلْ لَّعَنَهُمُ اللّٰهُ بِكُفْرِھِمْ فَقَلِيْلًا مَّا يُؤْمِنُوْنَ ﴿٨٩﴾

90. ಅವರೊಡನಿದ್ದ ಗ್ರಂಥವನ್ನು ದೃಢೀಕರಿಸುವ ಒಂದು ಗ್ರಂಥವು ಅವರ ಬಳಿಗೆ ಬಂದಾಗ - ಅದಕ್ಕಿಂತ

وَلَمَّا جَاۗءَھُمْ كِتٰبٌ مِّنْ عِنْدِ اللّٰهِ

25. ಅವರನ್ನು ಅನುಸರಿಸಿಕೊಂಡು ಮತ್ತು ಅವರ ಧರ್ಮಕ್ಕೆ ಸೇವೆ ಸಲ್ಲಿಸುತ್ತಾ ಅವರ ನಂತರ ಬಂದಿರುವ ಪ್ರವಾದಿಗಳು ಎಂದು ತಾತ್ಪರ್ಯ.

26. ಹತ್ಯೆ ಮಾಡಲು ಯತ್ನಿಸಿದಿರಿ ಎಂದು ತಾತ್ಪರ್ಯ.





ಮೊದಲಾದರೋ, ಅವಿಶ್ವಾಸಿಗಳ ಮೇಲೆ ವಿಜಯ ಸಾಧನೆಗಾಗಿ ಅವರು ಪ್ರಾರ್ಥಿಸಿದ್ದರು - ಹಾಗೆ, ಅವರಿಗೆ ಪರಿಚಿತವಾದ ಆ ಗ್ರಂಥ ಬಂದಾಗ ಅವರದನ್ನು ತಿರಸ್ಕರಿಸಿದರು. ಅಂತಹ ಅವಿಶ್ವಾಸಿಗಳ ಮೇಲೆ ಅಲ್ಲಾಹನ ಶಾಪವಿದೆ.

مُصَدِّقٌ لِّمَا مَعَھُمْ ۙ وَكَانُوْا مِنْ قَبْلُ يَسْتَفْتِحُوْنَ عَلَي الَّذِيْنَ كَفَرُوْا ښ فَلَمَّا جَاۗءَھُمْ مَّا عَرَفُوْا كَفَرُوْا بِهٖ ۡ فَلَعْنَةُ اللّٰهِ عَلَي الْكٰفِرِيْنَ ﴿٩٠﴾

91. ತಮ್ಮ ಆತ್ಮಗಳನ್ನು ಮಾರಿಬಿಟ್ಟ ಅವರ ವ್ಯವಹಾರ ಅದೆಷ್ಟು ನಿಕೃಷ್ಟ! ಅಲ್ಲಾಹನು ತಾನಿಚ್ಛಿಸುವ ತನ್ನ ಇಷ್ಟದಾಸರಿಗೆ ಅನುಗ್ರಹಗಳನ್ನು ವರ್ಷಿಸುತ್ತಿದ್ದಾನೆಂಬ ವಿಚಾರದಲ್ಲಿ ಅಸೂಯೆಪಟ್ಟುಕೊಂಡು ಅಲ್ಲಾಹನು ಅವತೀರ್ಣಗೊಳಿಸಿದುದನ್ನು ಅವರು ನಂಬುವುದಿಲ್ಲ. ಅವರು ಕೋಪದ ಮೇಲೆ ಕೋಪಕ್ಕೆ ಈಡಾದರು. ಅವಿಶ್ವಾಸಿಗಳಿಗೆ ಅಪಮಾನಕರವಾದ ಶಿಕ್ಷೆ ಇದೆ.

بِئْسَمَا اشْتَرَوْا بِهٖٓ اَنْفُسَھُمْ اَنْ يَّكْفُرُوْا بِمَآ اَنْزَلَ اللّٰهُ بَغْيًا اَنْ يُّنَزِّلَ اللّٰهُ مِنْ فَضْلِهٖ عَلٰي مَنْ يَّشَاۗءُ مِنْ عِبَادِهٖ ۚ فَبَاۗءُوْ بِغَضَبٍ عَلٰي غَضَبٍ ۭ وَلِلْكٰفِرِيْنَ عَذَابٌ مُّهِيْنٌ ﴿٩١﴾

92. 'ಅಲ್ಲಾಹನು ಅವತೀರ್ಣಗೊಳಿಸಿದುದರಲ್ಲಿ ವಿಶ್ವಾಸವಿಡಿರಿ' ಎಂದು ಅವರೊಡನೆ ಹೇಳಿದಾಗ, 'ನಮಗೆ ಅವತೀರ್ಣಗೊಳಿಸಿದುದರಲ್ಲಿ ನಾವು ವಿಶ್ವಾಸ ವಿಡುತ್ತೇವೆ' ಎಂದು ಅವರು ಹೇಳುತ್ತಾರೆ. ಆ ಬಳಿಕ ಬಂದುದರಲ್ಲಿ ಅವರು ನಂಬಿಕೆಯಿಡುವುದಿಲ್ಲ- ಅದು ಅವರ ಬಳಿಯಿರುವ ಗ್ರಂಥವನ್ನು ದೃಢೀಕರಿಸುವ ಸತ್ಯಗ್ರಂಥವಾಗಿದ್ದು ಕೂಡ. ಹೇಳಿರಿ: 'ನೀವು ನಿಜವಾಗಿಯೂ ಸತ್ಯವಿಶ್ವಾಸಿಗಳಾಗಿದ್ದರೆ ಇದಕ್ಕೆ ಮೊದಲು ಅಲ್ಲಾಹನ ಪ್ರವಾದಿಗಳನ್ನು ಹತ್ಯೆ ಮಾಡಲು ಏಕೆ ಪ್ರಯತ್ನಿಸಿದಿರಿ?'

وَاِذَا قِيْلَ لَھُمْ اٰمِنُوْا بِمَآ اَنْزَلَ اللّٰهُ قَالُوْا نُؤْمِنُ بِمَآ اُنْزِلَ عَلَيْنَا وَيَكْفُرُوْنَ بِمَا وَرَاۗءَهٗ ۤ وَھُوَ الْحَقُّ مُصَدِّقًا لِّمَا مَعَھُمْ ۭ قُلْ فَلِمَ تَقْتُلُوْنَ اَنْۢبِيَاۗءَ اللّٰهِ مِنْ قَبْلُ اِنْ كُنْتُمْ مُّؤْمِنِيْنَ ﴿٩٢﴾

93. ಖಂಡಿತವಾಗಿಯೂ ಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಮೂಸಾ ನಿಮ್ಮ ಬಳಿಗೆ ಬಂದರು. ಅನಂತರ ಅವರ ಅನುಪಸ್ಥಿತಿಯಲ್ಲಿ ನೀವು ಅಧರ್ಮಿಗಳಾಗಿ ಕರುವನ್ನು ಆರಾಧಿಸಲು ತೊಡಗಿದಿರಿ.

وَلَقَدْ جَاۗءَكُمْ مُّوْسٰى بِالْبَيِّنٰتِ ثُمَّ اتَّخَذْتُمُ الْعِجْلَ مِنْۢ بَعْدِهٖ وَاَنْتُمْ ظٰلِمُوْنَ ﴿٩٣﴾

94. ನಾವು ನಿಮ್ಮಿಂದ ಬಲವಾದ ಒಡಂಬಡಿಕೆ ಪಡೆದು ಕೊಂಡು ನಿಮ್ಮ ಮೇಲೆ (ಸಿನಾಯಿ) ಬೆಟ್ಟವನ್ನು

وَاِذْ اَخَذْنَا مِيْثَاقَكُمْ وَرَفَعْنَا فَوْقَكُمُ الطُّوْرَ ۭ خُذُوْا مَآ اٰتَيْنٰكُمْ

**ಎತ್ತಿಹಿಡಿದ ಸಂದರ್ಭ**[26A] - (ಆಗ ನಾವು ಹೇಳಿದೆವು:) **'ನಾವು ನಿಮಗೆ ನೀಡಿದುದನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ ಮತ್ತು ಅದನ್ನು ಅನುಸರಿಸಿರಿ.' ಅವರು** (ನಿಮ್ಮ ಪೂರ್ವಜರು) **ಹೇಳಿದರು: 'ನಾವು ಆಲಿಸಿದೆವು. ಆದರೆ ನಾವು ಅದನ್ನು ಧಿಕ್ಕರಿಸುತ್ತೇವೆ.' ಅವರ ಅವಿಶ್ವಾಸದ ಹೇತುವಾಗಿ ಅವರ ಹೃದಯಗಳು ಕರುವಿನ ಮೇಲೆ ಅಪಾರ ಪ್ರೀತಿಯಿಂದ ತುಂಬಿಕೊಂಡಿದ್ದವು. ಹೇಳು: 'ನೀವು ಹೇಳುವಂತೆ ನಿಮಗೇನಾದರೂ ನಂಬಿಕೆಯಿದ್ದರೆ, ಆ ನಂಬಿಕೆ ನಿಮಗೆ ನೀಡುವ ಆದೇಶ ಬಹಳ ಕೆಟ್ಟದ್ದಾಗಿದೆ.**

بِقُوَّةٍ وَّاسْمَعُوْا ۗ قَالُوْا سَمِعْنَا وَعَصَيْنَا ۗ وَاُشْرِبُوْا فِيْ قُلُوْبِهِمُ الْعِجْلَ بِكُفْرِهِمْ ۗ قُلْ بِئْسَمَا يَاْمُرُكُمْ بِهٖٓ اِيْمَانُكُمْ اِنْ كُنْتُمْ مُّؤْمِنِيْنَ ﴿٩٣﴾

**95. ಹೇಳು : 'ಅಲ್ಲಾಹನ ಬಳಿಯಿರುವ ಪರಲೋಕ ಗೃಹವು ಬೇರೆಲ್ಲ ಜನರನ್ನು ಬಿಟ್ಟು ನಿಮಗೆ ಮಾತ್ರ ಮೀಸಲಾಗಿದ್ದರೆ, ನೀವು ಸತ್ಯವಂತರೆಂದಾದರೆ ಮರಣವನ್ನು ಬಯಸಿರಿ.**[27]

قُلْ اِنْ كَانَتْ لَكُمُ الدَّارُ الْاٰخِرَةُ عِنْدَ اللّٰهِ خَالِصَةً مِّنْ دُوْنِ النَّاسِ فَتَمَنَّوُا الْمَوْتَ اِنْ كُنْتُمْ صٰدِقِيْنَ ﴿٩٤﴾

**96.** (ಓ ಮುಸ್ಲಿಮರೇ, ನೆನಪಿಡಿರಿ) **ಅವರ ಕೈಗಳು ಮೊದಲೇ ಮಾಡಿಟ್ಟ** (ದುಷ್ಕೃತ್ಯಗಳ) **ಕಾರಣ ಅವರು ಅದನ್ನು** (ಆ ಮರಣವನ್ನು) **ಎಂದಿಗೂ ಇಚ್ಛಿಸಲಿಕ್ಕಿಲ್ಲ. ದುಷ್ಕರ್ಮಿಗಳನ್ನು ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.**

وَلَنْ يَّتَمَنَّوْهُ اَبَدًاۢ بِمَا قَدَّمَتْ اَيْدِيْهِمْ ۗ وَاللّٰهُ عَلِيْمٌۢ بِالظّٰلِمِيْنَ ﴿٩٥﴾

**97. ಜನರ ಪೈಕಿ ಬೇರೆಲ್ಲರಿಗಿಂತ ಹೆಚ್ಚು ಐಹಿಕ ಜೀವಿತದಲ್ಲಿ ಹಂಬಲವನ್ನು ತೋರಿಸುವವರಾಗಿ ನೀನು ಅವರನ್ನೂ ಕೆಲವು ಬಹುದೇವಾರಾಧಕರನ್ನೂ ಕಾಣುವೆ. ಅವರಲ್ಲಿ ಪ್ರತಿಯೊಬ್ಬನೂ ತನಗೆ ಸಾವಿರ ವರ್ಷ ಆಯುಷ್ಯ ಸಿಗುತ್ತಿದ್ದರೆ! ಎಂದು ಬಯಸುತ್ತಾನೆ. ಆದರೆ ಹಾಗೆ ಅವನಿಗೆ ದೀರ್ಘಾಯಸ್ಸು ದೊರೆತರೂ ಅವನು ಶಿಕ್ಷೆಯಿಂದ ಮುಕ್ತನಾಗಲಾರನು. ಅವರು ಮಾಡುವುದನ್ನೆಲ್ಲ ಅಲ್ಲಾಹನು ಕಾಣುತ್ತಿದ್ದಾನೆ.**

وَلَتَجِدَنَّهُمْ اَحْرَصَ النَّاسِ عَلٰى حَيٰوةٍ ۛ وَمِنَ الَّذِيْنَ اَشْرَكُوْا ۛ يَوَدُّ اَحَدُهُمْ لَوْ يُعَمَّرُ اَلْفَ سَنَةٍ ۚ وَمَا هُوَ بِمُزَحْزِحِهٖ مِنَ الْعَذَابِ اَنْ يُّعَمَّرَ ۗ وَاللّٰهُ بَصِيْرٌۢ بِمَا يَعْمَلُوْنَ ﴿٩٦﴾

26A. ಬೆಟ್ಟದ ತಪ್ಪಲಲ್ಲಿ ನಿಮ್ಮನ್ನು ನಾವು ಒಂದು ಗೂಡಿಸಿದ ಸಂದರ್ಭ ಎಂದರ್ಥ.

27. ಅಂದರೆ, ಸತ್ಯಾಸತ್ಯ ಬಹಿರಂಗಗೊಳ್ಳಲಿಕ್ಕಾಗಿ ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರೊಂದಿಗೆ ಮುಬಾಹಲ (ಪ್ರಾರ್ಥನಾ ಸಮರ) ಮಾಡಿರಿ - ಸೂರ ಆಲಿ ಇಮ್ರಾನ್ ಆಯತ್ 62ರಲ್ಲಿ ಹೇಳಿದಂತೆ.





**98. ಹೇಳು: ಜಿಬ್ರೀಲ್ ಅಲ್ಲಾಹನ ಅನುಮತಿಯೊಂದಿಗೆ, ಪೂರ್ವ ಗ್ರಂಥಗಳನ್ನು ದೃಢೀಕರಿಸುವ ಮತ್ತು ವಿಶ್ವಾಸಿಗಳಿಗೆ ಮಾರ್ಗದರ್ಶಕವೂ ಶುಭವಾರ್ತೆಯೂ ಆಗಿರುವ ಇದನ್ನು** (ಖುರ್‌ಆನನ್ನು) **ನಿನ್ನ ಹೃದಯದಲ್ಲಿ ಅವತೀರ್ಣಗೊಳಿಸಿದ ಕಾರಣದಿಂದ ಯಾರಾದರೂ ಆತನ ಶತ್ರುವಾಗುವುದಾದರೆ,** (ಅವರು ತಿಳಿದಿರಲಿ) -

قُلْ مَنْ كَانَ عَدُوًّا لِّجِبْرِيْلَ فَاِنَّهٗ نَزَّلَهٗ عَلٰى قَلْبِكَ بِاِذْنِ اللّٰهِ مُصَدِّقًا لِّمَا بَيْنَ يَدَيْهِ وَهُدًى وَّبُشْرٰى لِلْمُؤْمِنِيْنَ ﴿٩٧﴾

**99. ಅಲ್ಲಾಹನಿಗೂ ಅವನ ದೂತರಿಗೂ ಅವನ ಪ್ರವಾದಿಗಳಿಗೂ ಜಿಬ್ರೀಲ್ ಮತ್ತು ಮೀಕಾಈಲ್ ರಿಗೂ ಶತ್ರು ಯಾರೇ ಆಗಿರಲಿ - ಅಲ್ಲಾಹನು** (ಅಂತಹ) **ಅವಿಶ್ವಾಸಿಗಳ ಶತ್ರುವಾಗಿದ್ದಾನೆ.**

مَنْ كَانَ عَدُوًّا لِّلّٰهِ وَمَلٰٓئِكَتِهٖ وَرُسُلِهٖ وَجِبْرِيْلَ وَمِيْكٰىلَ فَاِنَّ اللّٰهَ عَدُوٌّ لِّلْكٰفِرِيْنَ ﴿٩٨﴾

**100. ದಿಟವಾಗಿಯೂ ನಾವು ನಿನಗೆ ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸಿದ್ದೇವೆ. ದುಷ್ಕರ್ಮಿಗಳ ಹೊರತು ಬೇರಾರೂ ಅದನ್ನು ಅಲ್ಲಗಳೆಯಲಾರರು.**

وَلَقَدْ اَنْزَلْنَآ اِلَيْكَ اٰيٰتٍۢ بَيِّنٰتٍ ۚ وَمَا يَكْفُرُ بِهَآ اِلَّا الْفٰسِقُوْنَ ﴿٩٩﴾

**101. ಏನು ? ಅವರು ಒಡಂಬಡಿಕೆ ಮಾಡಿದಾಗಲೆಲ್ಲ ಅವರ ಪೈಕಿ ಒಂದು ಪಂಗಡ ಅದನ್ನು ಉಲ್ಲಂಘಿಸುತ್ತಲೇ ಇರುವುದು** *ದುರ್ವರ್ತನೆಯಲ್ಲವೇ?* (ಅಷ್ಟೇ ಅಲ್ಲ) **ಅವರಲ್ಲಿ ಹೆಚ್ಚಿನವರು ನಂಬದವರೇ ಆಗಿದ್ದಾರೆ.**

اَوَكُلَّمَا عٰهَدُوْا عَهْدًا نَّبَذَهٗ فَرِيْقٌ مِّنْهُمْ ۗ بَلْ اَكْثَرُهُمْ لَا يُؤْمِنُوْنَ ﴿١٠٠﴾

**102. ಅವರ ಬಳಿಯಿರುವ** *ಗ್ರಂಥವನ್ನು* **ದೃಢೀಕರಿಸುವ ಓರ್ವ ಪ್ರವಾದಿ ಅಲ್ಲಾಹನಿಂದ ಅವರ ಬಳಿಗೆ ಆಗಮಿಸಿದಾಗ, ಗ್ರಂಥ ನೀಡಲ್ಪಟ್ಟವರ ಪೈಕಿ ಒಂದು ಪಂಗಡ ತಮಗೇನೂ ತಿಳಿದಿಲ್ಲವೆಂಬಂತೆ ಅಲ್ಲಾಹನ** (ಈ) **ಗ್ರಂಥವನ್ನು ಬೆನ್ನ ಹಿಂದೆ ಬಿಸಾಡಿ ಬಿಟ್ಟರು.**

وَلَمَّا جَآءَهُمْ رَسُوْلٌ مِّنْ عِنْدِ اللّٰهِ مُصَدِّقٌ لِّمَا مَعَهُمْ نَبَذَ فَرِيْقٌ مِّنَ الَّذِيْنَ اُوْتُوا الْكِتٰبَ ۙ كِتٰبَ اللّٰهِ وَرَآءَ ظُهُوْرِهِمْ كَاَنَّهُمْ لَا يَعْلَمُوْنَ ﴿١٠١﴾

**103. ಸುಲೈಮಾನರ ಆಡಳಿತದ ವಿರುದ್ಧವಾಗಿ ಶೈತಾನರು** (ಬಂಡುಕೋರರು) **ವರ್ತಿಸಿದ್ದನ್ನು ಇವರು** (ಯಹೂದ್ಯರು) **ಸಹ ಅನುಕರಿಸಿದರು. ಸುಲೈಮಾನ್ ಅವಿಶ್ವಾಸಿ ಆಗಿರಲಿಲ್ಲ. ಆದರೆ ಶೈತಾನರು ಅವಿಶ್ವಾಸಿ**

وَاتَّبَعُوْا مَا تَتْلُوا الشَّيٰطِيْنُ عَلٰى مُلْكِ سُلَيْمٰنَ ۚ وَمَا كَفَرَ سُلَيْمٰنُ وَلٰكِنَّ الشَّيٰطِيْنَ كَفَرُوْا يُعَلِّمُوْنَ النَّاسَ

السِّحْرَ وَمَا أُنزِلَ عَلَى الْمَلَكَيْنِ
بِبَابِلَ هَارُوتَ وَمَارُوتَ وَمَا
يُعَلِّمَانِ مِنْ أَحَدٍ حَتَّىٰ يَقُولَا إِنَّمَا
نَحْنُ فِتْنَةٌ فَلَا تَكْفُرْ فَيَتَعَلَّمُونَ
مِنْهُمَا مَا يُفَرِّقُونَ بِهِ بَيْنَ الْمَرْءِ
وَزَوْجِهِ وَمَا هُم بِضَارِّينَ بِهِ مِنْ أَحَدٍ
إِلَّا بِإِذْنِ اللَّهِ وَيَتَعَلَّمُونَ مَا يَضُرُّهُمْ
وَلَا يَنفَعُهُمْ وَلَقَدْ عَلِمُوا لَمَنِ اشْتَرَاهُ
مَا لَهُ فِي الْآخِرَةِ مِنْ خَلَاقٍ وَلَبِئْسَ
مَا شَرَوْا بِهِ أَنفُسَهُمْ لَوْ كَانُوا
يَعْلَمُونَ ﴿١٠٢﴾

**ಗಳಾಗಿದ್ದರು. ಅವರು ಜನರಿಗೆ ಕುತಂತ್ರಗಳನ್ನು ಕಲಿಸುತ್ತಿದ್ದರು.** (ಈ ಯಹೂದ್ಯರು ಸ್ವಯಂ ಹೇಳಿಕೊಳ್ಳುವಂತೆ) **ಬ್ಯಾಬಿಲೋನಿಯದಲ್ಲಿ ಹಾರೂತ್ ಮತ್ತು ಮಾರೂತ್ ಎಂಬ ಇಬ್ಬರು ದೇವದೂತರಿಗೆ**[28] **ಅವತೀರ್ಣಗೊಳಿಸಿದುದನ್ನೂ ಅವರು** ಅನುಕರಿಸುತ್ತಾರೆ. **ಆದರೆ 'ನಾವು ನಿಮಗೆ ಒಂದು ಪರೀಕ್ಷೆಯಾಗಿದ್ದೇವೆ; ನೀವು ನಂಬದಿರಬೇಡಿ' ಎಂದು ಹೇಳಿಕೊಂಡಲ್ಲದೆ ಅವರೀರ್ವರೂ ಯಾರಿಗೂ ಏನೂ ಕಲಿಸಿರಲಿಲ್ಲ. ಹಾಗೆ ಅವರಿಬ್ಬರಿಂದಲೂ ಇವರು ಓರ್ವ ಗಂಡು ಮತ್ತು ಓರ್ವ ಹೆಣ್ಣು** (ಪತಿ-ಪತ್ನಿ) **ಪರಸ್ಪರ ಹೇಗೆ ಭಿನ್ನಾಭಿಪ್ರಾಯವುಳ್ಳವರಾಗುವರೆಂದು ಕಲಿತರು. ಆದರೆ ಅವರು** (ಹಾರೂತ್-ಮಾರೂತ್) **ಆ ಮೂಲಕ ಯಾರಿಗೂ ಕೇಡನ್ನುಂಟುಮಾಡಿರಲಿಲ್ಲ - ದೇವಾಜ್ಞೆಯ ವಿನಾ.**[29] (ತದ್ವಿರುದ್ಧವಾಗಿ) **ಈ ಜನರು** (ಮುಹಮ್ಮದ್ ಪೈಗಂಬರರ ವೈರಿಗಳಾದ ಯಹೂದ್ಯರು) **ತಮಗೆ ಹಾನಿ ಮಾಡುವ ಹಾಗೂ ಯಾವ ಒಳಿತನ್ನೂ ಮಾಡದಂತಹ ವಿಚಾರಗಳನ್ನೂ ಕಲಿಯುತ್ತಾರೆ. ಅದನ್ನು ಯಾರು ವಿನಿಮಯ ಮಾಡುವನೋ ಅವನಿಗೆ ಪರಲೋಕದ ಒಳ್ಳೆಯ ಪ್ರತಿಫಲದಲ್ಲಿ ಏನೂ ಪಾಲಿಲ್ಲವೆಂದು ಅವರು ತಿಳಿದಿದ್ದಾರೆ. ಅವರು ತಮ್ಮ ಆತ್ಮಗಳ ಬದಲಿಗೆ ಕೊಂಡುಕೊಂಡದ್ದು ಅದೆಷ್ಟು ನಿಕೃಷ್ಟ! ಅಕಟಾ, ಅವರು ಅದನ್ನು ತಿಳಿದಿದ್ದರೆ!**

وَلَوْ أَنَّهُمْ آمَنُوا وَاتَّقَوْا لَمَثُوبَةٌ
مِّنْ عِندِ اللَّهِ خَيْرٌ لَّوْ كَانُوا
يَعْلَمُونَ ﴿١٠٣﴾

**104. ಅವರು ನಂಬಿಕೆಯಿರಿಸಿ ಭಯ ಭಕ್ತಿಯನ್ನು ತೋರಿಸಿರುತ್ತಿದ್ದರೆ, ಖಂಡಿತವಾಗಿಯೂ ಅವರಿಗೆ ಅಲ್ಲಾಹನಿಂದ ಒಳ್ಳೆಯ ಪ್ರತಿಫಲ ದೊರಕುತ್ತಿತ್ತು. ಅಕಟಾ, ಅವರು ಅದನ್ನು ತಿಳಿದಿದ್ದರೆ!**

يَا أَيُّهَا الَّذِينَ آمَنُوا لَا تَقُولُوا رَاعِنَا

**105. ಓ ಸತ್ಯ ವಿಶ್ವಾಸಿಗಳೇ,** (ಪೈಗಂಬರರೊಡನೆ)

28. ಆ ಇಬ್ಬರು ದೇವದೂತರೆಂದರೆ, ದೇವದೂತರಿಗೆ ಸಮಾನರಾದ ಇಬ್ಬರು ಸಾತ್ವಿಕರೆಂದು ತಾತ್ಪರ್ಯ.

29. ಅವರು ನೀಡುವ ಧಾರ್ಮಿಕ ಶಿಕ್ಷಣದಿಂದ ಒಬ್ಬ ಪತಿ ಅಥವಾ ಪತ್ನಿ ಸತ್ಯಧರ್ಮವನ್ನು ಸ್ವೀಕರಿಸುವಾಗ ಅವರಿಬ್ಬರ ಮಧ್ಯೆ ಭಿನ್ನಾಭಿಪ್ರಾಯವುಂಟಾಗುತ್ತದೆ.





وَقُولُوا انظُرْنَا وَاسْمَعُوا وَلِلْكَافِرِينَ
عَذَابٌ أَلِيمٌ ﴿١٠٤﴾

**ನೀವು 'ರಾಇನಾ'**[30] **ಎಂದು ಹೇಳಬೇಡಿರಿ, 'ಉನ್‌ಝುರ್‌ನಾ' ಎಂದು ಹೇಳಿರಿ ಮತ್ತು** (ಅವರ ಮಾತುಗಳನ್ನು) **ಗಮನವಿಟ್ಟು ಕೇಳಿರಿ. ಅವಿಶ್ವಾಸಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆ.**

مَّا يَوَدُّ الَّذِينَ كَفَرُوا مِنْ أَهْلِ الْكِتَابِ
وَلَا الْمُشْرِكِينَ أَن يُنَزَّلَ عَلَيْكُم مِّنْ خَيْرٍ
مِّن رَّبِّكُمْ وَاللَّهُ يَخْتَصُّ بِرَحْمَتِهِ
مَن يَشَاءُ وَاللَّهُ ذُو الْفَضْلِ الْعَظِيمِ ﴿١٠٥﴾

**106. ಗ್ರಂಥ ನೀಡಲ್ಪಟ್ಟವರ ಮತ್ತು ಬಹುದೇವಾರಾಧಕರ ಪೈಕಿ ಅವಿಶ್ವಾಸಿಗಳು ನಿಮ್ಮ ಪ್ರಭುವಿನಿಂದ ನಿಮಗೆ ಏನಾದರೂ ಒಳಿತುಂಟಾಗುವುದನ್ನು ಇಷ್ಟಪಡುವುದಿಲ್ಲ. ಆದರೆ ಅಲ್ಲಾಹನು ತಾನು ಇಚ್ಛಿಸುವವರನ್ನು ತನ್ನ ಅನುಗ್ರಹಕ್ಕೆ ಪಾತ್ರರನ್ನಾಗಿ ಮಾಡುತ್ತಾನೆ. ಅಲ್ಲಾಹನು ಮಹಾ ಅನುಗ್ರಹದಾತನಾಗಿದ್ದಾನೆ.**

مَا نَنسَخْ مِنْ آيَةٍ أَوْ نُنسِهَا نَأْتِ بِخَيْرٍ
مِّنْهَا أَوْ مِثْلِهَا أَلَمْ تَعْلَمْ أَنَّ اللَّهَ عَلَىٰ
كُلِّ شَيْءٍ قَدِيرٌ ﴿١٠٦﴾

**107. ನಾವು ರದ್ದುಪಡಿಸುವ ಅಥವಾ ಮರೆತು ಹೋಗುವಂತೆ ಮಾಡುವ ದೃಷ್ಟಾಂತಕ್ಕೆ**[31] **ಬದಲಾಗಿ ಅದಕ್ಕಿಂತ ಉತ್ತಮವಾದುದನ್ನು ಅಥವಾ ತತ್ತುಲ್ಯವಾದುದನ್ನು ನಾವು ತರುವೆವು. ಅಲ್ಲಾಹನು ತಾನಿಚ್ಛಿಸುವುದನ್ನೆಲ್ಲ ಮಾಡಲು ಶಕ್ತನೆಂದು ನಿನಗೆ ತಿಳಿಯದೇ?**

30. ಸಂಬೋಧಕ ಮತ್ತು ಸಂಬೋಧಿತ ಸಮಾನ ಸ್ಥಾನದಲ್ಲಿರುವವರಾದರೆ ಅರಬಿ ಭಾಷೆಯಲ್ಲಿ ಸಂಬೋಧಕನು ಸಂಬೋಧಿತನಿಗೆ 'ರಾಇನಾ' ಎಂದು ಹೇಳುತ್ತಾನೆ. ನೀನು ನಮ್ಮ ಕಾಳಜಿ ವಹಿಸಿದರೆ ನಾವು ನಿನ್ನ ಕಾಳಜಿ ವಹಿಸುವೆವು ಎಂದು ಅದರ ಅರ್ಥ. ಆದರೆ ಸಂಬೋಧಿತನು ಸಂಬೋಧಕನಿಗಿಂತ ಉನ್ನತ ದರ್ಜೆಯವನಾದರೆ, 'ಉನ್‌ಝುರ್‌ನಾ' ಎಂದು ಹೇಳಬೇಕು. ಅಂದರೆ, ತಾವು ನಮ್ಮನ್ನು ಗಮನದಲ್ಲಿಟ್ಟು ನಮಗೆ ಗ್ರಾಹ್ಯವಾಗುವ ರೀತಿಯಲ್ಲಿ ಹೇಳಿರಿ ಎಂದು. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರೊಡನೆ ಅನುಯಾಯಿಗಳು 'ರಾಇನಾ' ಎಂದು ಹೇಳುವುದು ಸಭ್ಯತೆಯಲ್ಲ. ಯಹೂದ್ಯರು ಈ ಪದವನ್ನು ಪೈಗಂಬರರೊಡನೆ ಮಾತನಾಡುವಾಗ ಪ್ರಯೋಗಿಸುತ್ತಿದ್ದರು. 'ಉನ್‌ಝುರ್‌ನಾ' ಎಂಬ ಪದವು ಗೌರವವನ್ನು ಸೂಚಿಸುತ್ತದೆ.

31. ಖುರ್‌ಆನಿನ ಯಾವುದೇ ವಚನವನ್ನು ರದ್ದುಪಡಿಸಲಾಗುವುದೆಂದು ಇದರರ್ಥವಲ್ಲ. ಯಾವುದೇ ಸೂಚಕ ಕಾರ್ಯವನ್ನು ರದ್ದು ಪಡಿಸಿದರೆ ಅದಕ್ಕಿಂತ ಮಿಗಿಲಾದ ಅಥವಾ ಅದಕ್ಕೆ ಸಮಾನವಾದ ಬೇರೆ ಸೂಚಕ ಕಾರ್ಯವನ್ನು ತೋರ್ಪಡಿಸುವೆವು ಎಂದು ತಾತ್ಪರ್ಯವಾಗಿದೆ. ಇಲ್ಲಿ ಆಯತ್ ಎಂದರೆ ವಚನವಲ್ಲ.

ಖುರ್‌ಆನ್ ವ್ಯಾಖ್ಯಾನಗಾರರಲ್ಲಿ ಹಲವರು, ಖುರ್‌ಆನಿನಲ್ಲಿ ರದ್ದುಪಡಿಸಲಾದ (ಮನ್‌ಸೂಖ್) ಹಲವಾರು ವಚನಗಳಿವೆಯೆಂದು ಹೇಳಿದ್ದಾರೆ. ಅವರು ತಮ್ಮ ಹೇಳಿಕೆಗೆ ಈ ವಚನವನ್ನು ಆಧಾರವಾಗಿಟ್ಟುಕೊಂಡಿದ್ದಾರೆ. ಎಂದರೆ, ಖುರ್‌ಆನಿನ ಯಾವುದಾದರೂ ಒಂದು ವಚನವನ್ನು ರದ್ದುಪಡಿಸಿದರೆ ಬೇರೊಂದು ವಚನವನ್ನು ಅಲ್ಲಾಹನು ಅವತೀರ್ಣಗೊಳಿಸುತ್ತಾನೆಂದು. ಇದು ಸರಿಯಲ್ಲ. ಇದು ಅಸಂಬದ್ಧವೂ ಪವಿತ್ರ ಖುರ್‌ಆನಿನ ಮಹತ್ವಕ್ಕೆ ಹಾನಿಮಾಡುವಂತಹದೂ ಪವಿತ್ರ ಖುರ್‌ಆನಿನ ಅಧ್ಯಾಪನಗಳಿಗೆ ತೀರಾ ವಿರುದ್ಧವೂ ಆದ ವಿಚಾರವಾಗಿದೆ. ಆದರೆ 'ತೌರಾತ್' ಅಥವಾ 'ಇಂಜೀಲ್' ಗ್ರಂಥಗಳ ಯಾವುದೇ ವಚನ ರದ್ದುಗೊಳಿಸಲ್ಪಟ್ಟರೆ, ಅದಕ್ಕೆ ಸಮಾನವಾದ ಅಥವಾ ಅದಕ್ಕಿಂತ ಉತ್ತಮವಾದ ಬೇರೆ ವಚನವನ್ನು ಖುರ್‌ಆನಿನಲ್ಲಿ ಅವತೀರ್ಣಗೊಳಿಸಲಾಗುವುದೆಂದು ತಾತ್ಪರ್ಯ ಹೇಳುವುದು ತಪ್ಪೆನಿಸುವುದಿಲ್ಲ.

108. ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ನಿಶ್ಚಯವಾಗಿಯೂ ಅಲ್ಲಾಹನಿಗೆ ಮಾತ್ರವಿದೆಯೆಂದು ನಿನಗೆ ತಿಳಿಯದೇ? ಅಲ್ಲಾಹನ ಹೊರತು ರಕ್ಷಕನಾಗಿ ಅಥವಾ ಸಹಾಯಕನಾಗಿ ನಿಮಗೆ ಯಾರೂ ಇಲ್ಲ.

أَلَمْ تَعْلَمْ أَنَّ اللَّهَ لَهُ مُلْكُ السَّمٰوٰتِ
وَالْأَرْضِ ۗ وَمَا لَكُمْ مِّنْ دُوْنِ اللَّهِ مِنْ
وَّلِيٍّ وَّلَا نَصِيْرٍ ﴿١٠٨﴾

109. ಇದಕ್ಕಿಂತ ಮುಂಚೆ ಮೂಸಾ ಪ್ರಶ್ನಿಸಲ್ಪಟ್ಟ ಹಾಗೆ ನಿಮಗೆ ಕಳುಹಿಸಲ್ಪಟ್ಟ ಪ್ರವಾದಿಯನ್ನು ನೀವು ಸಹ ಪ್ರಶ್ನಿಸಲು ಉದ್ದೇಶಿಸುತ್ತೀರೋ? ಸತ್ಯವಿಶ್ವಾಸದ ಬದಲಿಗೆ ಅವಿಶ್ವಾಸವನ್ನು ಹೊಂದುವವನು ನಿಸ್ಸಂದೇಹ ವಾಗಿಯೂ ಸತ್ಪಥದಿಂದ ವ್ಯತಿಕ್ರಮಿಸಿದನು.

أَمْ تُرِيْدُوْنَ أَنْ تَسْئَلُوْا رَسُوْلَكُمْ
كَمَا سُئِلَ مُوْسٰى مِنْ قَبْلُ ۗ وَمَنْ يَّتَبَدَّلِ
الْكُفْرَ بِالْإِيْمَانِ فَقَدْ ضَلَّ سَوَاءَ
السَّبِيْلِ ﴿١٠٩﴾

110. ಸತ್ಯವು ಅವರಿಗೆ ಸ್ಪಷ್ಟಪಡಿಸಲ್ಪಟ್ಟ ನಂತರವೂ ಗ್ರಂಥ ನೀಡಲ್ಪಟ್ಟವರಲ್ಲಿ ಹೆಚ್ಚಿನವರು ತಮ್ಮಲ್ಲಿರುವ ಅಸೂಯೆ ನಿಮಿತ್ತ, ನೀವು ವಿಶ್ವಾಸಿಗಳಾದ ಬಳಿಕ ನಿಮ್ಮನ್ನು ಅವಿಶ್ವಾಸಿಗಳನ್ನಾಗಿ ಮಾಡಿ ಮರಳಿ ಕೊಂಡೊಯ್ಯಲು ಬಯಸುತ್ತಾರೆ. ಆದರೆ, ಅಲ್ಲಾಹನು ತನ್ನ ಆಜ್ಞೆಯನ್ನು ಜಾರಿಗೊಳಿಸುವ ವರೆಗೆ ನೀವು ಅವರನ್ನು ಕ್ಷಮಿಸಿರಿ ಮತ್ತು ನಿರ್ಲಕ್ಷಿಸಿರಿ. ನಿಶ್ಚಯವಾಗಿಯೂ ಅಲ್ಲಾಹನು ತಾನಿಚ್ಛಿಸುವುದನ್ನೆಲ್ಲ ಮಾಡಲು ಶಕ್ತನು.

وَدَّ كَثِيْرٌ مِّنْ أَهْلِ الْكِتٰبِ لَوْ يَرُدُّوْنَكُمْ
مِّنْ بَعْدِ إِيْمَانِكُمْ كُفَّارًا ۚ حَسَدًا مِّنْ
عِنْدِ أَنْفُسِهِمْ مِّنْ بَعْدِ مَا تَبَيَّنَ لَهُمُ
الْحَقُّ ۚ فَاعْفُوْا وَاصْفَحُوْا حَتّٰى يَأْتِيَ
اللَّهُ بِأَمْرِهٖ ۗ إِنَّ اللَّهَ عَلٰى كُلِّ شَيْءٍ
قَدِيْرٌ ﴿١١٠﴾

111. ನೀವು ಪ್ರಾರ್ಥನೆ (ನಮಾಝ್)ಯನ್ನು ಸ್ಥಿರಗೊಳಿಸಿರಿ ಮತ್ತು ಝಕಾತ್ ನೀಡಿರಿ. ನೀವು ನಿಮ್ಮ ಆತ್ಮಗಳಿಗೋಸ್ಕರ ಮುಂಚಿತವಾಗಿ ಏನನ್ನು ಕಳುಹಿಸುತ್ತೀರೋ ಅದನ್ನು ನೀವು ಅಲ್ಲಾಹನ ಬಳಿ ಕಾಣುವಿರಿ. ಖಂಡಿತವಾಗಿಯೂ ನೀವು ಮಾಡುವುದನ್ನೆಲ್ಲ ಅಲ್ಲಾಹನು ಕಾಣುತ್ತಾನೆ.

وَأَقِيْمُوا الصَّلٰوةَ وَاٰتُوا الزَّكٰوةَ ۗ وَمَا
تُقَدِّمُوْا لِأَنْفُسِكُمْ مِّنْ خَيْرٍ تَجِدُوْهُ
عِنْدَ اللَّهِ ۗ إِنَّ اللَّهَ بِمَا تَعْمَلُوْنَ
بَصِيْرٌ ﴿١١١﴾

112. ಯಹೂದ ಅಥವಾ ಕ್ರಿಸ್ತೀಯನ ಹೊರತು ಯಾರೂ ಸ್ವರ್ಗವನ್ನು ಪ್ರವೇಶಿಸಲಾರ[32] ಎಂದು ಅವರು (ಯಹೂದ್ಯರೂ ಕ್ರೈಸ್ತರೂ) ಹೇಳುತ್ತಾರೆ. ಇದು ಅವರ

وَقَالُوْا لَنْ يَّدْخُلَ الْجَنَّةَ إِلَّا مَنْ
كَانَ هُوْدًا أَوْ نَصٰرٰى ۗ تِلْكَ أَمَانِيُّهُمْ ۗ

32. ಯಹೂದ್ಯನು ಮಾತ್ರ ಸ್ವರ್ಗದಲ್ಲಿ ಪ್ರವೇಶಿಸುವನೆಂದು ಯಹೂದ್ಯರೂ ಕ್ರಿಸ್ತೀಯನು ಮಾತ್ರ ಸ್ವರ್ಗದಲ್ಲಿ ಪ್ರವೇಶಿಸುವನೆಂದು ಕ್ರೈಸ್ತರೂ ಹೇಳುತ್ತಾರೆಂದು ತಾತ್ಪರ್ಯ.





ವೃಥಾ ವ್ಯಾಮೋಹ ಮಾತ್ರವಾಗಿದೆ. 'ನೀವು ಹೇಳುವುದು ಸತ್ಯವೆಂದಾದರೆ ಪುರಾವೆ ತನ್ನಿರಿ' ಎಂದು ಹೇಳು.

قُلْ هَاتُوْا بُرْهَانَكُمْ إِنْ كُنْتُمْ
صٰدِقِيْنَ ﴿١١٢﴾

113. ಹಾಗಲ್ಲ, ಯಾರು ಸಂಪೂರ್ಣವಾಗಿ ಅಲ್ಲಾಹನಿಗೆ ಶರಣಾಗಿ ಸತ್ಕರ್ಮಿಯಾಗಿರುತ್ತಾನೋ ಅವನಿಗೆ ತನ್ನ ಪ್ರಭುವಿನಿಂದ ಪ್ರತಿಫಲವಿದೆ. ಅಂತಹವರಿಗೆ ಭಯವಿಲ್ಲ, ಅವರು ದುಃಖಿತರೂ ಅಲ್ಲ.

بَلٰى ۚ مَنْ أَسْلَمَ وَجْهَهٗ لِلّٰهِ وَهُوَ مُحْسِنٌ
فَلَهٗ أَجْرُهٗ عِنْدَ رَبِّهٖ ۖ وَلَا خَوْفٌ
عَلَيْهِمْ وَلَا هُمْ يَحْزَنُوْنَ ﴿١١٣﴾

114. 'ಕ್ರೈಸ್ತರು ಸತ್ಯಾಧಾರಿತರಲ್ಲ' ಎಂದು ಯಹೂದ್ಯರು ಹೇಳುತ್ತಾರೆ. 'ಯಹೂದ್ಯರು ಸತ್ಯಾಧಾರಿತರಲ್ಲ' ಎಂದು ಕ್ರೈಸ್ತರೂ ಹೇಳುತ್ತಾರೆ. ಅವರು ಉಭಯ ಪಕ್ಷದವರೂ (ಒಂದೇ) ಗ್ರಂಥವನ್ನು ಓದುತ್ತಾರೆ. ಇವರ ಮಾತಿಗೆ ತುಲ್ಯವಾಗಿ, ತಿಳುವಳಿಕೆಯಿಲ್ಲದ ಜನರು ಸಹ ಇದೇ ಪ್ರಕಾರ ಹೇಳಿದ್ದರು. ಆದರೆ ಅವರ ಮಧ್ಯೆ ಭಿನ್ನಾಭಿಪ್ರಾಯವಿರುವ ವಿಚಾರದಲ್ಲಿ ಪುನರುತ್ಥಾನ ದಿನದಂದು ಅಲ್ಲಾಹನು ತೀರ್ಮಾನ ಮಾಡುವನು.

وَقَالَتِ الْيَهُوْدُ لَيْسَتِ النَّصٰرٰى عَلٰى
شَيْءٍ ۖ وَّقَالَتِ النَّصٰرٰى لَيْسَتِ الْيَهُوْدُ
عَلٰى شَيْءٍ ۙ وَّهُمْ يَتْلُوْنَ الْكِتٰبَ ۗ
كَذٰلِكَ قَالَ الَّذِيْنَ لَا يَعْلَمُوْنَ
مِثْلَ قَوْلِهِمْ ۚ فَاللَّهُ يَحْكُمُ بَيْنَهُمْ
يَوْمَ الْقِيٰمَةِ فِيْمَا كَانُوْا فِيْهِ
يَخْتَلِفُوْنَ ﴿١١٤﴾

115. ಅಲ್ಲಾಹನ ಮಸ್‌ಜಿದ್‌ಗಳಲ್ಲಿ ಅವನ ನಾಮವನ್ನು ಸ್ಮರಿಸುವುದರಿಂದ ತಡೆಯಲು ಹಾಗೂ ಅವುಗಳನ್ನು (ಹಾಗೆ) ನಾಶಪಡಿಸಲು ಶ್ರಮಿಸುವವನಿಗಿಂತ ದೊಡ್ಡ ಅತಿಕರ್ಮಿ ಯಾರು? ಭಯಪಟ್ಟು ಕೊಂಡಲ್ಲದೆ ಅದರೊಳಗೆ ಪ್ರವೇಶಿಸುವುದು ಅವರಿಗೆ ಹಿತವಲ್ಲ. ಅವರಿಗೆ ಈ ಲೋಕದಲ್ಲಿ ಅಪಮಾನ ಮತ್ತು ಪರಲೋಕದಲ್ಲಿ ಕಠೋರ ಶಿಕ್ಷೆಯಿದೆ.

وَمَنْ أَظْلَمُ مِمَّنْ مَّنَعَ مَسٰجِدَ اللَّهِ أَنْ
يُّذْكَرَ فِيْهَا اسْمُهٗ وَسَعٰى فِيْ خَرَابِهَا ۗ
أُولٰئِكَ مَا كَانَ لَهُمْ أَنْ يَّدْخُلُوْهَا إِلَّا
خَائِفِيْنَ ۚ لَهُمْ فِي الدُّنْيَا خِزْيٌ وَّ
لَهُمْ فِي الْاٰخِرَةِ عَذَابٌ عَظِيْمٌ ﴿١١٥﴾

116. ಪೂರ್ವ ಮತ್ತು ಪಶ್ಚಿಮ (ಎರಡೂ) ಅಲ್ಲಾಹನದ್ದಾಗಿವೆ. ನೀನು ಯಾವ ದಿಕ್ಕಿಗೆ ತಿರುಗಿದರೂ ಅಲ್ಲಿ ಅಲ್ಲಾಹನ ಮುಖವಿದೆ. ನಿಶ್ಚಯವಾಗಿಯೂ ಅಲ್ಲಾಹನು ಸರ್ವವ್ಯಾಪಿಯೂ ಸರ್ವಜ್ಞನೂ ಆಗಿದ್ದಾನೆ.

وَلِلّٰهِ الْمَشْرِقُ وَالْمَغْرِبُ ۚ فَأَيْنَمَا
تُوَلُّوْا فَثَمَّ وَجْهُ اللَّهِ ۗ إِنَّ اللَّهَ وَاسِعٌ
عَلِيْمٌ ﴿١١٦﴾

117. 'ಅಲ್ಲಾಹನು ಓರ್ವ ಪುತ್ರನನ್ನು ಹೊಂದಿ

وَقَالُوا اتَّخَذَ اللَّهُ وَلَدًا ۙ سُبْحٰنَهٗ ۗ بَلْ

ದ್ದಾನೆ' ಎಂದು ಅವರು ಹೇಳುತ್ತಾರೆ. ಅಲ್ಲಾಹನಾದರೋ ಪರಮ ಪವಿತ್ರನು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನದೇ. ಎಲ್ಲವೂ ಅವನಿಗೆ ವಿಧೇಯ.

لَهٗ مَا فِي السَّمٰوٰتِ وَالْاَرْضِ ؕ كُلٌّ لَّهٗ
قٰنِتُوْنَ ﴿۱۱۷﴾

118. ಆಕಾಶಗಳ ಮತ್ತು ಭೂಮಿಯ ನಿರ್ಮಾತೃ ಅವನೇ. ಯಾವುದಾದರೊಂದು ಕಾರ್ಯ ಆಗಬೇಕೆಂದು ಅವನು ನಿರ್ಣಯಿಸಿದರೆ, 'ಆಗು' ಎಂದು ಮಾತ್ರ ಅವನು ಹೇಳುತ್ತಾನೆ. ಆಗ ಅದು ಆಗುತ್ತದೆ.

بَدِيْعُ السَّمٰوٰتِ وَالْاَرْضِ ؕ وَاِذَا قَضٰۤى
اَمْرًا فَاِنَّمَا يَقُوْلُ لَهٗ كُنْ فَيَكُوْنُ ﴿۱۱۸﴾

119. 'ಅಲ್ಲಾಹನು ನಮ್ಮೊಡನೆ ಏಕೆ ಮಾತನಾಡುವುದಿಲ್ಲ ಅಥವಾ ನಮಗೇಕೆ ಒಂದು ದೃಷ್ಟಾಂತ ತೋರಿಸುವುದಿಲ್ಲ?' ಎಂದು ತಿಳುವಳಿಕೆಯಿಲ್ಲದ ಜನರು ಕೇಳುತ್ತಾರೆ. ಇದೇ ರೀತಿ ಇವರ ಪೂರ್ವಿಕರು ಇವರು ಕೇಳಿದಂತೆಯೇ ಕೇಳಿದ್ದರು. ಅವರ ಹೃದಯಗಳಿಗೆ ಪರಸ್ಪರ ಹೋಲಿಕೆ ಇದೆ. ದೃಢ ವಿಶ್ವಾಸವನ್ನು ಕೈಗೊಳ್ಳುವ ಜನರಿಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಟ್ಟಿದ್ದೇವೆ.

وَقَالَ الَّذِيْنَ لَا يَعْلَمُوْنَ لَوْلَا يُكَلِّمُنَا
اللّٰهُ اَوْ تَاْتِيْنَاۤ اٰيَةٌ ؕ كَذٰلِكَ قَالَ
الَّذِيْنَ مِنْ قَبْلِهِمْ مِّثْلَ قَوْلِهِمْ ؕ
تَشَابَهَتْ قُلُوْبُهُمْ ؕ قَدْ بَيَّنَّا
الْاٰيٰتِ لِقَوْمٍ يُّوْقِنُوْنَ ﴿۱۱۹﴾

120. ನಿಶ್ಚಯವಾಗಿಯೂ ನಾವು ನಿನ್ನನ್ನು ಸತ್ಯಸಂದೇಶದೊಂದಿಗೆ ಶುಭವಾರ್ತೆ ನೀಡುವವನಾಗಿಯೂ ಮುನ್ನೆಚ್ಚರಿಕೆ ಕೊಡುವವನಾಗಿಯೂ ಕಳುಹಿಸಿದ್ದೇವೆ. ನರಕವಾಸಿಗಳ ಬಗ್ಗೆ ನೀನು ಪ್ರಶ್ನಿಸಲ್ಪಡಲಾರೆ.

اِنَّاۤ اَرْسَلْنٰكَ بِالْحَقِّ بَشِيْرًا وَّنَذِيْرًا ۙ
وَّلَا تُسْـَٔلُ عَنْ اَصْحٰبِ الْجَحِيْمِ ﴿۱۲۰﴾

121. ನೀನು ಅವರ ಧರ್ಮವನ್ನು ಅನುಸರಿಸುವುದರ ವಿನಾ ಯಹೂದಿಯರಾಗಲಿ, ಕ್ರೈಸ್ತರಾಗಲಿ ನಿನ್ನ ಬಗ್ಗೆ ತೃಪ್ತರಾಗಲಿಕ್ಕಿಲ್ಲ. ನೀನು ಅವರೊಡನೆ ಹೇಳು: 'ಅಲ್ಲಾಹನ ಮಾರ್ಗದರ್ಶನ ಮಾತ್ರವೇ ಯಥಾರ್ಥ ಮಾರ್ಗದರ್ಶನವಾಗಿದೆ.' ನೀನು ಜ್ಞಾನ ಗಳಿಸಿದ ನಂತರ ಸಹ ಅವರ ಮನೋಭಿಲಾಷೆಗಳನ್ನು ಹಿಂಬಾಲಿಸುವುದಾದರೆ ಅಲ್ಲಾಹನ ಕಡೆಯಿಂದ ನಿನಗೆ ಸ್ನೇಹಿತ ಅಥವಾ ಸಹಾಯಕನಾಗಿ ಯಾರೂ ಇಲ್ಲ.

وَلَنْ تَرْضٰى عَنْكَ الْيَهُوْدُ وَلَا النَّصٰرٰى
حَتّٰى تَتَّبِعَ مِلَّتَهُمْ ؕ قُلْ اِنَّ هُدَى اللّٰهِ
هُوَ الْهُدٰى ؕ وَلَئِنِ اتَّبَعْتَ اَهْوَآءَهُمْ
بَعْدَ الَّذِيْ جَآءَكَ مِنَ الْعِلْمِ ۙ مَا لَكَ
مِنَ اللّٰهِ مِنْ وَّلِيٍّ وَّلَا نَصِيْرٍ ﴿۱۲۱﴾





122. ನಾವು ಯಾರಿಗೆ ಗ್ರಂಥ[33] ನೀಡಿದ್ದೇವೋ ಅವರು ಅದನ್ನು, ಹೇಗೆ ಓದಬೇಕಾಗಿದೆಯೋ ಹಾಗೆಯೇ ಓದುತ್ತಾರೆ. (ಹೇಗೆ ಅನುಸರಿಸಬೇಕಾಗಿದೆಯೋ ಹಾಗೆಯೇ ಅನುಸರಿಸುತ್ತಾರೆ.) ಅವರು ಅದರಲ್ಲಿ ವಿಶ್ವಾಸವಿಡುತ್ತಾರೆ. ಯಾರು ಅದನ್ನು ಅಲ್ಲಗಳೆಯುತ್ತಾರೋ, ಅವರು ನಷ್ಟಹೊಂದಿದವರು.

اَلَّذِيْنَ اٰتَيْنٰهُمُ الْكِتٰبَ يَتْلُوْنَهٗ حَقَّ
تِلَاوَتِهٖ ؕ اُولٰٓئِكَ يُؤْمِنُوْنَ بِهٖ ؕ وَمَنْ
يَّكْفُرْ بِهٖ فَاُولٰٓئِكَ هُمُ الْخٰسِرُوْنَ ﴿۱۲۲﴾

123. ಓ ಇಸ್ರಾಈಲ್ ಸಂತತಿಗಳೇ, ನಾನು ನಿಮಗೆ ನೀಡಿದ ಅನುಗ್ರಹವನ್ನೂ ಸಮಸ್ತ ಜನರೆಡೆಯಲ್ಲಿ[34] ನಿಮಗೆ ನೀಡಿದ ಉನ್ನತ ಸ್ಥಾನವನ್ನೂ ಸ್ಮರಿಸಿರಿ.

يٰبَنِيْۤ اِسْرَآءِيْلَ اذْكُرُوْا نِعْمَتِيَ الَّتِيْۤ
اَنْعَمْتُ عَلَيْكُمْ وَاَنِّيْ فَضَّلْتُكُمْ عَلَى
الْعٰلَمِيْنَ ﴿۱۲۳﴾

124. ಯಾವುದೇ ಆತ್ಮ ಇನ್ನೊಂದು ಆತ್ಮಕ್ಕೆ ಬದಲಿ ನಿಲ್ಲದಂತಹ, ಯಾವುದೇ ಪ್ರಾಯಶ್ಚಿತ್ತ ಸ್ವೀಕರಿಸಲ್ಪಡದಂತಹ, ಯಾವುದೇ ಶಿಫಾರಸು ಪ್ರಯೋಜನಕರವಾಗದಂತಹ, ಯಾವುದೇ ಸಹಾಯ ದೊರಕದಂತಹ ಆ ದಿನದ ಬಗ್ಗೆ ಭಯವಿಟ್ಟುಕೊಳ್ಳಿರಿ.

وَاتَّقُوْا يَوْمًا لَّا تَجْزِيْ نَفْسٌ عَنْ نَّفْسٍ
شَيْـًٔا وَّلَا يُقْبَلُ مِنْهَا عَدْلٌ وَّلَا تَنْفَعُهَا
شَفَاعَةٌ وَّلَا هُمْ يُنْصَرُوْنَ ﴿۱۲۴﴾

125. ಇಬ್‌ರಾಹೀಮರನ್ನು ಅವರ ಪ್ರಭು ಕೆಲವು ಆಜ್ಞೆಗಳ ಮೂಲಕ ಪರೀಕ್ಷಿಸಿದಾಗ, ಅವರು ಅದನ್ನು ಈಡೇರಿಸಿದರು. ಆಗ ಅವನು (ಅಲ್ಲಾಹನು) ಹೇಳಿದನು: 'ನಾನು ನಿನ್ನನ್ನು ಜನರಿಗೆ ನಾಯಕನನ್ನಾಗಿ ನಿಯೋಜಿಸುವೆನು.' ಆಗ ಇಬ್‌ರಾಹೀಂ, 'ನನ್ನ ಸಂತಾನಗಳಿಂದಲೂ (ನಿಯೋಜಿಸಬೇಕು)' ಎಂದು ಹೇಳಿದರು. ಆಗ ಅಲ್ಲಾಹನು, 'ನನ್ನ ವಾಗ್ದಾನ ಅಧರ್ಮಿಗಳಿಗೆ ಅನ್ವಯಿಸುವುದಿಲ್ಲ'[35] ಎಂದು ಹೇಳಿದನು.

وَاِذِ ابْتَلٰۤى اِبْرٰهٖمَ رَبُّهٗ بِكَلِمٰتٍ
فَاَتَمَّهُنَّ ؕ قَالَ اِنِّيْ جَاعِلُكَ لِلنَّاسِ
اِمَامًا ؕ قَالَ وَمِنْ ذُرِّيَّتِيْ ؕ قَالَ لَا يَنَالُ
عَهْدِي الظّٰلِمِيْنَ ﴿۱۲۵﴾

126. ನಾವು ಆ ಗೃಹ (ಕಅ್‌ಬ) ವನ್ನು ಜನರು ಪದೇ ಪದೇ ಸಮ್ಮೇಳಿಸುವ ಒಂದು ಸ್ಥಳವನ್ನಾಗಿಯೂ

وَاِذْ جَعَلْنَا الْبَيْتَ مَثَابَةً لِّلنَّاسِ

33. ಖುರ್‌ಆನ್

34. ವಚನ 2:48ರ ಟಿಪ್ಪಣಿ ನೋಡಿರಿ.

35. ಇಬ್‌ರಾಹೀಮರ ಸಂತತಿಗಳಲ್ಲಿ ಅಧರ್ಮಿಗಳನ್ನು ಆಧ್ಯಾತ್ಮಿಕ ನಾಯಕರನ್ನಾಗಿ ನಿಯೋಜಿಸಲಾಗುವುದಿಲ್ಲವೆಂದು ತಾತ್ಪರ್ಯ.

ಶಾಂತಿಕೇಂದ್ರವನ್ನಾಗಿಯೂ ಮಾಡಿದ ಸಂದರ್ಭ- ಇಬ್‌ರಾಹೀಂ (ಪ್ರಾರ್ಥನೆಗೆ) ನಿಂತ ಸ್ಥಳವನ್ನು ಪ್ರಾರ್ಥನೆಯ ಸ್ಥಳವನ್ನಾಗಿ ಮಾಡಲಿಕ್ಕೆ ನಾವು ಆದೇಶಿಸಿದೆವು. 'ಪ್ರದಕ್ಷಿಣೆ ಮಾಡುವವರಿಗಾಗಿ, (ದೇವ ಧ್ಯಾನಕ್ಕಾಗಿ) ಕುಳಿತುಕೊಳ್ಳುವವರಿಗಾಗಿ, ನಮಿಸುವವರಿಗಾಗಿ, ಸಾಷ್ಟಾಂಗವೆರಗುವವರಿಗಾಗಿ ನನ್ನ ಗೃಹವನ್ನು ಶುಚಿಯಾಗಿಯೂ ಪರಿಶುದ್ಧವಾಗಿಯೂ ಇಡಿರಿ' ಎಂದು ನಾವು ಇಬ್‌ರಾಹೀಂ ಮತ್ತು ಇಸ್ಮಾಈಲ್‌ರಿಗೆ ಆಜ್ಞಾಪಿಸಿದೆವು.

وَاَمْنًا ۗ وَاتَّخِذُوْا مِنْ مَّقَامِ اِبْرٰهٖمَ مُصَلًّى ۗ وَعَهِدْنَآ اِلٰٓى اِبْرٰهٖمَ وَ اِسْمٰعِيْلَ اَنْ طَهِّرَا بَيْتِيَ لِلطَّآئِفِيْنَ وَالْعٰكِفِيْنَ وَالرُّكَّعِ السُّجُوْدِ ﴿١٢٥﴾

127. ಇಬ್‌ರಾಹೀಂ, 'ದೇವಾ, ಈ ಸ್ಥಳವನ್ನು ನೀನು ಶಾಂತಿಯ ನಗರವನ್ನಾಗಿ ಮಾಡು; ಅದರ ನಿವಾಸಿಗಳ ಪೈಕಿ ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರಿಗೆ (ನಾನಾ ತರದ) ಫಲಗಳನ್ನು ಆಹಾರವಾಗಿ ಅನುಗ್ರಹಿಸು' ಎಂದು ಹೇಳಿದ ಸಂದರ್ಭ- ಅವನು (ಅಲ್ಲಾಹನು) ಹೇಳಿದನು: ವಿಶ್ವಾಸವಿಡದವನಿಗೂ ನಾನು ಅಲ್ಪಕಾಲದ ವೈಭವ ಜೀವನವನ್ನು ನೀಡುವೆನು. ಅನಂತರ ಅವನನ್ನು ನರಕಾಗ್ನಿಯ ಶಿಕ್ಷೆಯೆಡೆಗೆ ಕೊಂಡೊಯ್ಯುವೆನು- ಅದೊಂದು ನಿಕೃಷ್ಟ ನೆಲೆಯಾಗಿದೆ.

وَاِذْ قَالَ اِبْرٰهٖمُ رَبِّ اجْعَلْ هٰذَا بَلَدًا اٰمِنًا وَّارْزُقْ اَهْلَهٗ مِنَ الثَّمَرٰتِ مَنْ اٰمَنَ مِنْهُمْ بِاللّٰهِ وَالْيَوْمِ الْاٰخِرِ ۗ قَالَ وَمَنْ كَفَرَ فَاُمَتِّعُهٗ قَلِيْلًا ثُمَّ اَضْطَرُّهٗٓ اِلٰى عَذَابِ النَّارِ ۗ وَبِئْسَ الْمَصِيْرُ ﴿١٢٦﴾

128. ಇಬ್‌ರಾಹೀಂ ಮತ್ತು ಇಸ್ಮಾಈಲ್ ಆ ಗೃಹದ ಅಡಿಪಾಯವನ್ನು ಎತ್ತರಿಸಿದಾಗ ಪ್ರಾರ್ಥಿಸಿದರು: 'ನಮ್ಮ ಒಡೆಯಾ, ನಮ್ಮ ಈ ಸೇವೆಯನ್ನು ನೀನು ಸ್ವೀಕರಿಸು; ನೀನು ಎಲ್ಲವನ್ನು ಕೇಳುವವನೂ ಎಲ್ಲವನ್ನು ಬಲ್ಲವನೂ ಆಗಿರುವೆ.

وَ اِذْ يَرْفَعُ اِبْرٰهٖمُ الْقَوَاعِدَ مِنَ الْبَيْتِ وَ اِسْمٰعِيْلُ ۗ رَبَّنَا تَقَبَّلْ مِنَّا ۗ اِنَّكَ اَنْتَ السَّمِيْعُ الْعَلِيْمُ ﴿١٢٧﴾

129. 'ನಮ್ಮ ಪ್ರಭೂ, ನೀನು ನಮ್ಮನ್ನು ನಿನಗೆ ವಿಧೇಯರನ್ನಾಗಿ ಮಾಡು. ನಮ್ಮ ಸಂತತಿಗಳಲ್ಲಿ ಸಹ ನಿನಗೆ ವಿಧೇಯತೆ ತೋರಿಸುವ ಒಂದು ಜನತೆಯನ್ನು ಉಂಟುಮಾಡು. ನಾವು ಆರಾಧಿಸುವ ಕ್ರಮಗಳನ್ನು ನಮಗೆ ತೋರಿಸಿಕೊಡು. ನಮ್ಮ ಮೇಲೆ ನೀನು ಕರುಣೆದೋರು. ಖಂಡಿತವಾಗಿಯೂ ನೀನು (ನಿನ್ನ ಭಕ್ತದಾಸರ ಬಗ್ಗೆ) ಗಮನ ಹರಿಸುವವನೂ ಕಾರುಣ್ಯ ನಿಧಿಯೂ ಆಗಿರುವೆ.

رَبَّنَا وَ اجْعَلْنَا مُسْلِمَيْنِ لَكَ وَ مِنْ ذُرِّيَّتِنَآ اُمَّةً مُّسْلِمَةً لَّكَ ۪ وَاَرِنَا مَنَاسِكَنَا وَتُبْ عَلَيْنَا ۚ اِنَّكَ اَنْتَ التَّوَّابُ الرَّحِيْمُ ﴿١٢٨﴾





130. 'ನಮ್ಮ ಪ್ರಭೂ, ನಿನ್ನ ವಚನಗಳನ್ನು ಅವರಿಗೆ ಓದಿ ಹೇಳುವ, ನಿನ್ನ ಗ್ರಂಥವನ್ನೂ ಜ್ಞಾನವನ್ನೂ ಕಲಿಸುವ ಹಾಗೂ ಅವರನ್ನು ಪರಿಶುದ್ಧರನ್ನಾಗಿ ಮಾಡುವ ಒಬ್ಬ ಪ್ರವಾದಿಯನ್ನು[36] ಅವರೆಡೆಯಲ್ಲಿ ಅವರಿಂದಲೇ ನೀನು ನಿಯೋಜಿಸು. ನಿಶ್ಚಯವಾಗಿಯೂ ನೀನು ಪ್ರತಾಪವಂತನೂ ಅಗಾಧಜ್ಞಾನಿಯೂ ಆಗಿರುವೆ.

رَبَّنَا وَابْعَثْ فِيْهِمْ رَسُوْلًا مِّنْهُمْ يَتْلُوْا عَلَيْهِمْ اٰيٰتِكَ وَ يُعَلِّمُهُمُ الْكِتٰبَ وَالْحِكْمَةَ وَيُزَكِّيْهِمْ ۗ اِنَّكَ اَنْتَ الْعَزِيْزُ الْحَكِيْمُ ﴿١٢٩﴾

131. ತನ್ನ ಆತ್ಮಕ್ಕೆ ಹಾನಿಯನ್ನುಂಟುಮಾಡುವವನ ಹೊರತು ಇಬ್‌ರಾಹೀಮರ ಧರ್ಮದಿಂದ ಯಾರು ಪರಾಙ್ಮುಖನಾಗುವನು? ದಿಟವಾಗಿಯೂ ನಾವು ಈ ಲೋಕದಲ್ಲಿ ಅವರನ್ನು ಆಯ್ಕೆಮಾಡಿದ್ದೇವೆ. ನಿಶ್ಚಯವಾಗಿಯೂ ಪರಲೋಕದಲ್ಲಿ ಅವರು ಸಾತ್ವಿಕರ ಜೊತೆಯಲ್ಲಿರುವರು.

وَمَنْ يَّرْغَبُ عَنْ مِّلَّةِ اِبْرٰهٖمَ اِلَّا مَنْ سَفِهَ نَفْسَهٗ ۗ وَلَقَدِ اصْطَفَيْنٰهُ فِي الدُّنْيَا ۚ وَاِنَّهٗ فِي الْاٰخِرَةِ لَمِنَ الصّٰلِحِيْنَ ﴿١٣٠﴾

132. 'ವಿಧೇಯನಾಗು (ಶರಣಾಗು)' ಎಂದು ಅವರೊಡನೆ ತನ್ನ ಪ್ರಭು ಹೇಳಿದಾಗ, 'ಸರ್ವಲೋಕ ಪರಿಪಾಲಕನಾದ ಒಡೆಯನಿಗೆ ನಾನು ಶರಣಾಗಿದ್ದೇನೆ' ಎಂದು ಅವರು ಹೇಳಿದರು.

اِذْ قَالَ لَهٗ رَبُّهٗٓ اَسْلِمْ ۙ قَالَ اَسْلَمْتُ لِرَبِّ الْعٰلَمِيْنَ ﴿١٣١﴾

133. ಇಬ್‌ರಾಹೀಂ ತನ್ನ ಮಕ್ಕಳಿಗೂ ಅದನ್ನು ಉಪದೇಶಿಸಿದರು - ಅದೇ ರೀತಿ ಯಅ್‌ಖೂಬ್ ಸಹ: 'ನನ್ನ ಮಕ್ಕಳೇ, ಖಂಡಿತವಾಗಿಯೂ ಅಲ್ಲಾಹನು ಈ ಧರ್ಮವನ್ನು ನಿಮಗಾಗಿ ಆಯ್ಕೆಮಾಡಿರುವನು. ಆದ್ದರಿಂದ ನೀವು (ಅಲ್ಲಾಹನಿಗೆ) ಸಂಪೂರ್ಣ ವಿಧೇಯತೆ ತೋರುವವರಾಗಿ ವಿನಾ ನಿಮಗೆ ಮರಣ ಬಾರದಿರಲಿ'[37] ಎಂದು ಉಪದೇಶಿಸಿದರು.

وَوَصّٰى بِهَآ اِبْرٰهٖمُ بَنِيْهِ وَيَعْقُوْبُ ۗ يٰبَنِيَّ اِنَّ اللّٰهَ اصْطَفٰى لَكُمُ الدِّيْنَ فَلَا تَمُوْتُنَّ اِلَّا وَاَنْتُمْ مُّسْلِمُوْنَ ﴿١٣٢﴾

134. ಏನು, ಯಅ್‌ಖೂಬ್‌ರಿಗೆ ಮರಣ ಸಮೀಪಿಸಿದಾಗ ನೀವು ಅಲ್ಲಿ ಸನ್ನಿಹಿತರಾಗಿದ್ದಿರೋ? 'ನನ್ನ ನಂತರ ನೀವು ಏನನ್ನು ಆರಾಧಿಸುವಿರಿ' ಎಂದು

اَمْ كُنْتُمْ شُهَدَآءَ اِذْ حَضَرَ يَعْقُوْبَ الْمَوْتُ ۙ اِذْ قَالَ لِبَنِيْهِ مَا تَعْبُدُوْنَ مِنْ

36. ಪ್ರವಾದಿಗಳ ಸಾರ್ವಭೌಮರಾದ ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಆವಿರ್ಭಾವ ಮೂಲಕ ಈ ಪ್ರಾರ್ಥನೆ ಈಡೇರಿತು.

37. ಅಂದರೆ, ಜೀವನ ಪರ್ಯಂತ ನೀವು ವಿಧೇಯರಾಗಿರಬೇಕು ಎಂದರ್ಥ

ಅವರು ತನ್ನ ಮಕ್ಕಳೊಡನೆ ಕೇಳಿದಾಗ, 'ನಾವು ನಿಮ್ಮ ದೇವನನ್ನು, ನಿಮ್ಮ ಪಿತರುಗಳಾದ ಇಬ್‌ರಾಹೀಂ, ಇಸ್ಮಾಈಲ್ ಮತ್ತು ಇಸ್‌ಹಾಖ್‌ರವರ ದೇವನಾದ ಏಕದೇವನನ್ನು ಆರಾಧಿಸುವೆವು. ಅವನಿಗೆ ಮಾತ್ರ ನಾವು ಶರಣಾಗುವೆವು' ಎಂದು ಅವರು ಉತ್ತರಿಸಿದರು.

بَعْدِيْ ؕ قَالُوْا نَعْبُدُ اِلٰهَكَ وَ اِلٰهَ اٰبَآئِكَ اِبْرٰهٖمَ وَ اِسْمٰعِيْلَ وَ اِسْحٰقَ اِلٰهًا وَّاحِدًا ۖۚ وَّ نَحْنُ لَهٗ مُسْلِمُوْنَ ﴿۱۳۳﴾

135. ಅದು ಗತಿಸಿಹೋದ ಒಂದು ಸಮುದಾಯವಾಗಿದೆ. ಅವರು ಸಂಪಾದಿಸಿದ್ದು ಅವರಿಗೆ; ನೀವು ಸಂಪಾದಿಸಿದ್ದು ನಿಮಗೆ. ಅವರ ಕೃತ್ಯಗಳ ಬಗ್ಗೆ ನೀವು ಪ್ರಶ್ನಿಸಲ್ಪಡಲಾರಿರಿ.

تِلْكَ اُمَّةٌ قَدْ خَلَتْ ۚ لَهَا مَا كَسَبَتْ وَلَكُمْ مَّا كَسَبْتُمْ ۚ وَلَا تُسْـَٔلُوْنَ عَمَّا كَانُوْا يَعْمَلُوْنَ ﴿۱۳۴﴾

136. 'ನೀವು ಸತ್ಪಥದಲ್ಲಿ ನಡೆಸಲ್ಪಡಲಿಕ್ಕಾಗಿ ಯಹೂದ್ಯ ಅಥವಾ ಕ್ರಿಸ್ತೀಯರಾಗಿರಿ' ಎಂದು ಅವರು ಹೇಳುತ್ತಾರೆ. ನೀನು ಹೇಳು: 'ಹಾಗಲ್ಲ, ಸದಾ ದೇವನಿಷ್ಠರಾದ ಇಬ್‌ರಾಹೀಮರ ಧರ್ಮವನ್ನು ಅನುಸರಿಸಿರಿ. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.'

وَقَالُوْا كُوْنُوْا هُوْدًا اَوْ نَصٰرٰى تَهْتَدُوْا ؕ قُلْ بَلْ مِلَّةَ اِبْرٰهٖمَ حَنِيْفًا ؕ وَمَا كَانَ مِنَ الْمُشْرِكِيْنَ ﴿۱۳۵﴾

137. ಹೇಳಿರಿ : 'ನಾವು ಅಲ್ಲಾಹನನ್ನು ನಂಬುತ್ತೇವೆ. ನಮಗೆ ಅವತೀರ್ಣವಾದುದರಲ್ಲಿಯೂ, ಇಬ್‌ರಾಹೀಂ, ಇಸ್ಮಾಈಲ್, ಇಸ್‌ಹಾಖ್, ಯಅ್‌ಖೂಬ್ ಮತ್ತು ಅವರ ಮಕ್ಕಳಿಗೆ ಅವತೀರ್ಣ ವಾದುವುಗಳಲ್ಲಿಯೂ, ಮೂಸಾ, ಈಸಾ ಮತ್ತು ಇತರ ಎಲ್ಲ ಪ್ರವಾದಿಗಳಿಗೆ ತಮ್ಮ ಒಡೆಯನಿಂದ ನೀಡಲ್ಪಟ್ಟವು ಗಳಲ್ಲಿಯೂ ನಾವು ವಿಶ್ವಾಸವಿಡುತ್ತೇವೆ. ಅವರ ಪೈಕಿ ಯಾರ ಮಧ್ಯೆಯೂ ನಾವು ಭೇದಭಾವ ಮಾಡುವುದಿಲ್ಲ. ನಾವು ಅವನಿಗೆ (ಅಲ್ಲಾಹನಿಗೆ) ಸಂಪೂರ್ಣವಾಗಿ ಶರಣಾಗಿದ್ದೇವೆ.'

قُوْلُوْٓا اٰمَنَّا بِاللّٰهِ وَمَآ اُنْزِلَ اِلَيْنَا وَمَآ اُنْزِلَ اِلٰٓى اِبْرٰهٖمَ وَاِسْمٰعِيْلَ وَاِسْحٰقَ وَيَعْقُوْبَ وَالْاَسْبَاطِ وَمَآ اُوْتِيَ مُوْسٰى وَعِيْسٰى وَمَآ اُوْتِيَ النَّبِيُّوْنَ مِنْ رَّبِّهِمْ ۚ لَا نُفَرِّقُ بَيْنَ اَحَدٍ مِّنْهُمْ ۖ وَنَحْنُ لَهٗ مُسْلِمُوْنَ ﴿۱۳۶﴾

138. ನೀವು ನಂಬಿದ ಹಾಗೆ ಅವರು ಸಹ ನಂಬಿದರೆ ಅವರು ಖಂಡಿತವಾಗಿಯೂ ಸತ್ಪಥದಲ್ಲಾಗುತ್ತಾರೆ. ಅವರು ವಿಮುಖರಾದರೆ ದಿಟವಾಗಿಯೂ ಅವರು ಒಡಕುಂಟುಮಾಡುತ್ತಾರೆ. ಆಗ, ಅವರಿಗೆದುರಾಗಿ ಅಲ್ಲಾಹನು ನಿಮಗೆ ಸಾಕು. ಅವನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

فَاِنْ اٰمَنُوْا بِمِثْلِ مَآ اٰمَنْتُمْ بِهٖ فَقَدِ اهْتَدَوْا ۚ وَاِنْ تَوَلَّوْا فَاِنَّمَا هُمْ فِيْ شِقَاقٍ ۚ فَسَيَكْفِيْكَهُمُ اللّٰهُ ۚ وَهُوَ السَّمِيْعُ الْعَلِيْمُ ﴿۱۳۷﴾





139. (ಹೇಳಿರಿ: 'ನಾವು) ಅಲ್ಲಾಹನ ಧರ್ಮವನ್ನು[37A] ಸ್ವೀಕರಿಸಿದ್ದೇವೆ. ಧರ್ಮವನ್ನು ಬೋಧಿಸುವುದರಲ್ಲಿ ಅಲ್ಲಾಹನಿಗಿಂತ ಮಿಗಿಲಾಗಿ ಯಾರಿದ್ದಾರೆ? ನಾವು ಅವನನ್ನು ಮಾತ್ರ ಆರಾಧಿಸುತ್ತೇವೆ.'

صِبْغَةَ اللّٰهِ ۚ وَمَنْ اَحْسَنُ مِنَ اللّٰهِ صِبْغَةً ۫ وَّنَحْنُ لَهٗ عٰبِدُوْنَ ﴿۱۳۸﴾

140. ಹೇಳು: 'ಅಲ್ಲಾಹನು ನಮ್ಮ ಮತ್ತು ನಿಮ್ಮ ಒಡೆಯನಾಗಿರುವಾಗ ಅವನ ಬಗ್ಗೆ ನೀವು ನಮ್ಮೊಡನೆ ವಾಗ್ವಾದ ಮಾಡುವುದೇಕೆ? (ಜಗಳವಾಡುವುದೇಕೆ?) ನಮಗೆ ನಮ್ಮ ಕರ್ಮ ಫಲಗಳು; ನಿಮಗೆ ನಿಮ್ಮ ಕರ್ಮ ಫಲಗಳು. ಅವನಿಗೆ ಮಾತ್ರ ನಾವು ಪ್ರಾಮಾಣಿಕವಾಗಿ ನಿಷ್ಠರಾಗಿದ್ದೇವೆ.'

قُلْ اَتُحَآجُّوْنَنَا فِى اللّٰهِ وَهُوَ رَبُّنَا وَرَبُّكُمْ ۚ وَلَنَآ اَعْمَالُنَا وَلَكُمْ اَعْمَالُكُمْ ۚ وَنَحْنُ لَهٗ مُخْلِصُوْنَ ﴿۱۳۹﴾

141. (ಓ ಗ್ರಂಥ ನೀಡಲ್ಪಟ್ಟವರೇ), ಇಬ್‌ರಾಹೀಂ, ಇಸ್ಮಾಈಲ್, ಇಸ್‌ಹಾಖ್, ಯಅ್‌ಖೂಬ್ ಮತ್ತು ಅವರ ಮಕ್ಕಳು ಯಹೂದ್ಯರು ಅಥವಾ ಕ್ರಿಸ್ತೀಯರು ಆಗಿದ್ದರೆಂದು ನೀವು ಹೇಳುತ್ತೀರಾ? ಹೇಳು: 'ಹೆಚ್ಚು ತಿಳಿದವರು ನೀವೋ, ಅಲ್ಲಾಹನೋ?'[38] ಅಲ್ಲಾಹನಿಂದ ತನಗೆ ದೊರೆತ ಸಾಕ್ಷ್ಯವನ್ನು ಅಡಗಿಸಿಡುವವನಿಗಿಂತ ಅಧರ್ಮಿ ಯಾರಿದ್ದಾರೆ? ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ನಿರ್ಲಕ್ಷ್ಯನಲ್ಲ.

اَمْ تَقُوْلُوْنَ اِنَّ اِبْرٰهٖمَ وَاِسْمٰعِيْلَ وَاِسْحٰقَ وَيَعْقُوْبَ وَالْاَسْبَاطَ كَانُوْا هُوْدًا اَوْ نَصٰرٰى ؕ قُلْ ءَاَنْتُمْ اَعْلَمُ اَمِ اللّٰهُ ؕ وَمَنْ اَظْلَمُ مِمَّنْ كَتَمَ شَهَادَةً عِنْدَهٗ مِنَ اللّٰهِ ؕ وَمَا اللّٰهُ بِغَافِلٍ عَمَّا تَعْمَلُوْنَ ﴿۱۴۰﴾

142. ಅದು ಗತಿಸಿಹೋದ ಒಂದು ಸಮುದಾಯವಾಗಿದೆ. ಅವರು ಸಂಪಾದಿಸಿದ್ದು ಅವರಿಗೆ; ನೀವು ಸಂಪಾದಿಸಿದ್ದು ನಿಮಗೆ. ಅವರ ಕೃತ್ಯಗಳ ಬಗ್ಗೆ ನಿಮ್ಮೊಡನೆ ಪ್ರಶ್ನಿಸಲಾಗುವುದಿಲ್ಲ.

تِلْكَ اُمَّةٌ قَدْ خَلَتْ ۚ لَهَا مَا كَسَبَتْ وَلَكُمْ مَّا كَسَبْتُمْ ۚ وَلَا تُسْـَٔلُوْنَ عَمَّا كَانُوْا يَعْمَلُوْنَ ﴿۱۴۱﴾

143. 'ಅವರು (ಮುಸ್ಲಿಮರು) ನಮಾಝಿಗಾಗಿ ಇದುವರೆಗೆ ಅಭಿಮುಖವಾಗಿರಿಸುತ್ತಿದ್ದ ತಮ್ಮ ಕಿಬ್ಲದಿಂದ

سَيَقُوْلُ السُّفَهَآءُ مِنَ النَّاسِ مَا

37A صِبْغَةً = ವರ್ಣ, ರೂಪ, ಪ್ರಕೃತಿ. صِبْغَةَ اللّٰهِ = ಅಲ್ಲಾಹನ ಧರ್ಮ. ಅಲ್ಲಾಹನ ಧರ್ಮವೆಂದರೆ ಅಲ್ಲಾಹನಿಂದ ಅವತೀರ್ಣಗೊಳಿಸಲ್ಪಟ್ಟ ಧರ್ಮ ಎಂದರ್ಥ. (ಧರ್ಮವು ಮನುಷ್ಯರಿಗೆ ಉತ್ತಮ ಸ್ವಭಾವವನ್ನು ನೀಡಿ ಸರಿಯಾದ ರೂಪವನ್ನು ಕೊಡುತ್ತದೆ.)

38. ಇಬ್‌ರಾಹೀಂ, ಇಸ್ಮಾಈಲ್, ಇಸ್‌ಹಾಖ್, ಯಅ್‌ಖೂಬ್ (ಅಲೈಹಿಮುಸ್ಸಲಾಂ) ಇವರೆಲ್ಲರೂ ಈಸಾ (ಅ) ಮತ್ತು ಮೂಸಾ (ಅ)ರಿಗೆ ಮುಂಚೆಯೇ ಗತಿಸಿದ್ದಾರೆಂದು ಬೈಬಲ್‌ನಲ್ಲೇ ಇದೆ. ಮತ್ತೆ ಇವರೆಲ್ಲ ಯಹೂದ್ಯರು ಅಥವಾ ಕ್ರಿಸ್ತೀಯರು ಹೇಗಾಗುತ್ತಾರೆ?

ಅವರನ್ನು ತಿರುಗಿಸಿದ್ದು ಯಾವುದು ?' ಎಂದು ಜನರ ಪೈಕಿ ಕೆಲವು ಮೂಢರು ಕೇಳುವರು. ಹೇಳು: 'ಪೂರ್ವ, ಪಶ್ಚಿಮ[39] ಎಲ್ಲವೂ ಅಲ್ಲಾಹನದ್ದು. ತಾನು ಇಚ್ಛಿಸುವವರನ್ನು ಅವನು ಸತ್ಪಥದಲ್ಲಿ ನಡೆಸುತ್ತಾನೆ.'

وَلّٰىهُمْ عَنْ قِبْلَتِهِمُ الَّتِيْ كَانُوْا عَلَيْهَا ؕ قُلْ لِّلّٰهِ الْمَشْرِقُ وَالْمَغْرِبُ ؕ يَهْدِيْ مَنْ يَّشَآءُ اِلٰى صِرَاطٍ مُّسْتَقِيْمٍ ﴿١٤٢﴾

**144.** (ಎಲೈ ಮುಸಲ್ಮಾನರೇ, ಯಾವ ರೀತಿ ನಾವು ನಿಮಗೆ ಸರಿದಾರಿ ತೋರಿಸಿಕೊಟ್ಟೆವೋ) ಅದೇ ರೀತಿ ನಾವು ನಿಮ್ಮನ್ನು ಒಂದು ಉತ್ತಮ ಸಮುದಾಯವನ್ನಾಗಿ ಮಾಡಿರುವೆವು - ನೀವು (ಇತರ) ಜನರ ಮೇಲೆ ಮೇಲ್ನೋಟಗಾರ ರಾಗಲಿಕ್ಕೂ ಈ ಪ್ರವಾದಿ ನಿಮ್ಮ ಮೇಲ್ನೋಟಗಾರನಾಗಲಿಕ್ಕೂ ಬೇಕಾಗಿ. ಈ ಪ್ರವಾದಿಯನ್ನು ಯಾರು ಅನುಸರಿಸುತ್ತಾರೆ ಮತ್ತು ಯಾರು ಬೆನ್ನು ತಿರುಗಿಸಿ ಓಡುತ್ತಾರೆ ಎಂದು ಬೇರ್ಪಡಿಸಿ ತಿಳಿಯುವುದಕ್ಕೋಸ್ಕರ ಹೊರತು ನೀನು ಮೊದಲು ಅಭಿಮುಖವಾಗಿರಿಸುತ್ತಿದ್ದ ಕಿಬ್ಲವನ್ನು ನಾವು ನಿಶ್ಚಯಿಸಿರಲಿಲ್ಲ. ಅಲ್ಲಾಹನು ಯಾರನ್ನು ಸತ್ಪಥದಲ್ಲಿ ನಡೆಸುತ್ತಾನೋ ಅವರಿಗೆ ಹೊರತು ಇತರರಿಗೆ ಇದು ಒಂದು ದೊಡ್ಡ ಪರೀಕ್ಷೆಯಾಗಿದೆ. ನಿಮ್ಮ ನಂಬಿಕೆಯನ್ನು ಅಲ್ಲಾಹನು ನಿಷ್ಫಲಗೊಳಿಸಲಾರ. ಖಂಡಿತವಾಗಿಯೂ ಅಲ್ಲಾಹನು ಜನರಿಗೆ ಅತಿ ಹೆಚ್ಚು ಉದಾರತೆಯನ್ನೂ ಕರುಣೆಯನ್ನೂ ತೋರಿಸುವವನಾಗಿದ್ದಾನೆ.

وَكَذٰلِكَ جَعَلْنٰكُمْ اُمَّةً وَّسَطًا لِّتَكُوْنُوْا شُهَدَآءَ عَلَى النَّاسِ وَيَكُوْنَ الرَّسُوْلُ عَلَيْكُمْ شَهِيْدًا ؕ وَمَا جَعَلْنَا الْقِبْلَةَ الَّتِيْ كُنْتَ عَلَيْهَآ اِلَّا لِنَعْلَمَ مَنْ يَّتَّبِعُ الرَّسُوْلَ مِمَّنْ يَّنْقَلِبُ عَلٰى عَقِبَيْهِ ؕ وَاِنْ كَانَتْ لَكَبِيْرَةً اِلَّا عَلَى الَّذِيْنَ هَدَى اللّٰهُ ؕ وَمَا كَانَ اللّٰهُ لِيُضِيْعَ اِيْمَانَكُمْ ؕ اِنَّ اللّٰهَ بِالنَّاسِ لَرَءُوْفٌ رَّحِيْمٌ ﴿١٤٣﴾

**145.** ನಿನ್ನ ಮುಖ (ಗಮನ) ಆಗಾಗ ಆಕಾಶದೆಡೆಗೆ ತಿರುಗುತ್ತಿರುವುದನ್ನು ನಾವು ಕಾಣುತ್ತೇವೆ. ನಿನಗೆ ತೃಪ್ತಿಕರವಾದ (ಆ) ಕಿಬ್ಲದೆಡೆಗೆ ನಾವು ಖಂಡಿತ

قَدْ نَرٰى تَقَلُّبَ وَجْهِكَ فِى السَّمَآءِ ۚ فَلَنُوَلِّيَنَّكَ قِبْلَةً تَرْضٰىهَا ۪ فَوَلِّ وَجْهَكَ

39. 'ಕಿಬ್ಲ'ವನ್ನು ಬದಲಾಯಿಸುವ ಸಂದರ್ಭ ಉಂಟಾದುದು ಮದೀನದಲ್ಲಾಗಿದೆ. ಕಅ್‌ಬ ಮತ್ತು ಬೈತುಲ್ ಮುಖದ್ದಿಸ್ ಇವೆರಡನ್ನೂ ಒಂದೇ ದಿಕ್ಕಿನಲ್ಲಿ ಅಭಿಮುಖವಾಗಿಟ್ಟುಕೊಂಡು ಮಕ್ಕದಲ್ಲಿ ಪೈಗಂಬರರು ನಮಾಝ್ ಮಾಡುತ್ತಿದ್ದರು. ಆದ ಕಾರಣ ಅದೊಂದು ಸಮಸ್ಯೆಯಾಗಿರಲಿಲ್ಲ. ತಮ್ಮ ಕಿಬ್ಲವನ್ನು ಪೈಗಂಬರರು ಸಹ ಅಭಿಮುಖವಾಗಿರಿಸಿರುವುದರಿಂದ ಯಹೂದಿಯರು ಸಹ ಸಂತೋಷಪಡುತ್ತಿದ್ದರು. ಮದೀನವನ್ನು ತಲುಪಿ ಕೆಲವು ಮಾಸಗಳ ನಂತರ ಬೈತುಲ್ ಮುಖದ್ದಿಸ್‌ಗೆ ಬದಲು ಕಅ್‌ಬವನ್ನು ಅಭಿಮುಖವಾಗಿರಿಸಲು ದೇವಾಜ್ಞೆ ಆಯಿತು. ಪೈಗಂಬರರು ಹಾಗೆಯೇ ಮಾಡಿದರು. ಆಗ ಮೂಢ ಜನರು ಆಕ್ಷೇಪಿಸಲು ತೊಡಗಿದರು. ಅದಕ್ಕುತ್ತರವನ್ನು ಈ ವಚನದಲ್ಲಿ ನೀಡಲಾಗಿದೆ. ಕಅ್‌ಬಕ್ಕೆ ಸ್ವಯಂ ಪ್ರಾಧಾನ್ಯವೇನೂ ಇಲ್ಲ. ಅಲ್ಲಾಹನ ಸತ್ತೆಯೇ ನಿಜವಾದ ಮೂಲ. ಅವನಿಗೆ ಪೂರ್ವ, ಪಶ್ಚಿಮ ಎಲ್ಲವೂ ಸಮಾನ. ಅವನ ಆಜ್ಞೆಯನ್ನು ಸಂಪೂರ್ಣವಾಗಿ ಅನುಸರಿಸ ಬೇಕಾದುದು ಪ್ರತಿಯೊಬ್ಬ ಸತ್ಯ ವಿಶ್ವಾಸಿಯ ಕರ್ತವ್ಯವಾಗಿದೆ.





ವಾಗಿಯೂ ನಿನ್ನನ್ನು ತಿರುಗಿಸುವೆವು. ಆದುದರಿಂದ ನೀನು ನಿನ್ನ ಮುಖವನ್ನು ಮಸ್ಜಿದುಲ್ ಹರಾಂ[39A] ಕಡೆಗೆ ತಿರುಗಿಸು. (ಎಲೈ ಮುಸ್ಲಿಮರೇ,) ನೀವು ಎಲ್ಲಿದ್ದರೂ ನಿಮ್ಮ ಮುಖಗಳನ್ನು ಅದರೆಡೆಗೆ ತಿರುಗಿಸಿರಿ. ಇದು (ಈ ಆಜ್ಞೆ) ತಮ್ಮ ಪ್ರಭುವಿನಿಂದ ಬಂದ ಸತ್ಯವೆಂದು ಗ್ರಂಥ ನೀಡಲ್ಪಟ್ಟವರು ತಿಳಿಯುವರು. ಅವರ ಕೃತ್ಯಗಳ ಬಗ್ಗೆ ಅಲ್ಲಾಹನು ಗಮನಿಸದವನಲ್ಲ.

شَطْرَ الْمَسْجِدِ الْحَرَامِ ؕ وَحَيْثُ مَا كُنْتُمْ فَوَلُّوْا وُجُوْهَكُمْ شَطْرَهٗ ؕ وَاِنَّ الَّذِيْنَ اُوْتُوا الْكِتٰبَ لَيَعْلَمُوْنَ اَنَّهُ الْحَقُّ مِنْ رَّبِّهِمْ ؕ وَمَا اللّٰهُ بِغَافِلٍ عَمَّا يَعْمَلُوْنَ ﴿١٤٤﴾

**146.** ಎಲ್ಲ ದೃಷ್ಟಾಂತಗಳನ್ನು ನೀನು ತಂದರೂ ಗ್ರಂಥ' ನೀಡಲ್ಪಟ್ಟವರು ನಿನ್ನ ಕಿಬ್ಲವನ್ನು ಅಂಗೀಕರಿಸಲಾರರು. ನೀನು ಅವರ ಕಿಬ್ಲವನ್ನೂ ಅಂಗೀಕರಿಸಲಾರೆ. ಅವರ ಪೈಕಿ ಕೆಲವರು ಬೇರೆ ಕೆಲವರ ಕಿಬ್ಲವನ್ನು ಸಹ ಅಂಗೀಕರಿಸುವುದಿಲ್ಲ. ನಿನಗೆ ಜ್ಞಾನ ಸಿದ್ಧಿಸಿದ ನಂತರವೂ ನೀನು ಅವರ ಇಚ್ಛೆಗಳಂತೆ ವರ್ತಿಸುವುದಾದರೆ ನೀನು ದಿಟವಾಗಿಯೂ ಆಜ್ಞೋಲ್ಲಂಘಕರ ಪೈಕಿಯವನಾಗುವಿ.

وَلَئِنْ اَتَيْتَ الَّذِيْنَ اُوْتُوا الْكِتٰبَ بِكُلِّ اٰيَةٍ مَّا تَبِعُوْا قِبْلَتَكَ ۚ وَمَآ اَنْتَ بِتَابِعٍ قِبْلَتَهُمْ ۚ وَمَا بَعْضُهُمْ بِتَابِعٍ قِبْلَةَ بَعْضٍ ؕ وَلَئِنِ اتَّبَعْتَ اَهْوَآءَهُمْ مِّنْ بَعْدِ مَا جَآءَكَ مِنَ الْعِلْمِ ۙ اِنَّكَ اِذًا لَّمِنَ الظّٰلِمِيْنَ ﴿١٤٥﴾

**147.** ಗ್ರಂಥ ನೀಡಲ್ಪಟ್ಟವರು ತಮ್ಮ ಮಕ್ಕಳನ್ನು ತಾವು ಗುರುತಿಸುವ ರೀತಿಯಲ್ಲಿ ಇದನ್ನು (ಈ ಸತ್ಯವನ್ನು) ಗುರುತಿಸುವರು. ಆದರೆ ಅವರ ಪೈಕಿ ಕೆಲವರು ಖಂಡಿತವಾಗಿಯೂ ಸತ್ಯವನ್ನು ಅರಿತುಕೊಂಡೇ ಬಚ್ಚಿಡುತ್ತಾರೆ.

اَلَّذِيْنَ اٰتَيْنٰهُمُ الْكِتٰبَ يَعْرِفُوْنَهٗ كَمَا يَعْرِفُوْنَ اَبْنَآءَهُمْ ؕ وَاِنَّ فَرِيْقًا مِّنْهُمْ لَيَكْتُمُوْنَ الْحَقَّ وَهُمْ يَعْلَمُوْنَ ﴿١٤٦﴾

**148.** ಈ ಸತ್ಯವು ನಿನ್ನ ಪ್ರಭುವಿನ ಕಡೆಯಿಂದಾಗಿದೆ. ಆದ್ದರಿಂದ ನೀನು ಎಂದಿಗೂ ಸಂಶಯಪಡುವವರ ಪೈಕಿಯವನಾಗಬೇಡ.[40]

اَلْحَقُّ مِنْ رَّبِّكَ فَلَا تَكُوْنَنَّ مِنَ الْمُمْتَرِيْنَ ﴿١٤٧﴾

**149.** ಪ್ರತಿಯೊಬ್ಬನಿಗೂ ಒಂದೊಂದು ಗುರಿಯಿರುತ್ತದೆ. ಅದು ಅವನ ಮೇಲೆ ಪ್ರಭಾವ ಬೀರುತ್ತದೆ. ನೀವು ಸತ್ಕರ್ಮದಲ್ಲಿ ಮೇಲುಗೈಯಾಗಲು ಸ್ಪರ್ಧಿಸಿರಿ. ನೀವು ಎಲ್ಲಿದ್ದರೂ ಅಲ್ಲಾಹನು ನಿಮ್ಮನ್ನೆಲ್ಲ

وَلِكُلٍّ وِّجْهَةٌ هُوَ مُوَلِّيْهَا فَاسْتَبِقُوا الْخَيْرٰتِ ؕ اَيْنَ مَا تَكُوْنُوْا يَاْتِ بِكُمُ

39A. ಪರಮ ಪವಿತ್ರವಾದ ಪ್ರಾರ್ಥನಾಲಯ; ಅಂದರೆ ಕಅ್‌ಬ.

40. ಇದು ಖುರ್‌ಆನಿನ ಓದುಗರನ್ನು ಉದ್ದೇಶಿಸಿ ಹೇಳಿದ ಮಾತಾಗಿದೆ.

**ಒಂದುಗೂಡಿಸುವನು. ತಾನಿಚ್ಛಿಸುವುದನ್ನೆಲ್ಲ ಮಾಡಲು ಅಲ್ಲಾಹನು ಶಕ್ತನಾಗಿದ್ದಾನೆ.**

اللّٰهُ جَمِيْعًا ؕ اِنَّ اللّٰهَ عَلٰى كُلِّ شَيْءٍ قَدِيْرٌ ﴿۱۴۹﴾

**150. ನೀನು ಎಲ್ಲಿಂದ ಹೊರಟು ಬರುವುದಾದರೂ ನಿನ್ನ ಮುಖ** (ಲಕ್ಷ್ಯ) **ವನ್ನು ಮಸ್ಜಿದುಲ್ ಹರಾಮಿನ ಕಡೆಗೆ ತಿರುಗಿಸು.**[41] **ಏಕೆಂದರೆ ಖಂಡಿತವಾಗಿಯೂ ಅದು ನಿನ್ನ ಒಡೆಯನಿಂದಿರುವ ಸತ್ಯವಾಗಿದೆ. ನಿನ್ನ ವರ್ತನೆಯ ಬಗ್ಗೆ ಅಲ್ಲಾಹನು ಗಮನಿಸದವನಲ್ಲ.**

وَمِنْ حَيْثُ خَرَجْتَ فَوَلِّ وَجْهَكَ شَطْرَ الْمَسْجِدِ الْحَرَامِ ؕ وَاِنَّهٗ لَلْحَقُّ مِنْ رَّبِّكَ ؕ وَمَا اللّٰهُ بِغَافِلٍ عَمَّا تَعْمَلُوْنَ ﴿۱۵۰﴾

**151. ನೀನು ಎಲ್ಲಿಂದ ಹೊರಟು ಬರುವುದಾದರೂ ನಿನ್ನ ಮುಖವನ್ನು ಮಸ್ಜಿದುಲ್ ಹರಾಮಿನ ಕಡೆಗೆ ತಿರುಗಿಸು. ನೀವು ಎಲ್ಲಿದ್ದರೂ**[42] **ನಿಮ್ಮ ಮುಖಗಳನ್ನೆಲ್ಲ ಅದರೆಡೆಗೆ ತಿರುಗಿಸಿರಿ - ದುಷ್ಕರ್ಮಿಗಳಾದ ಜನರ ಹೊರತು ಇತರರಿಗೆ ನಿಮ್ಮ ವಿರುದ್ಧ ತರ್ಕಮಾಡಲು ಅವಕಾಶ ಲಭಿಸದಿರಲಿಕ್ಕಾಗಿ. ಅವರಿಗೆ ಹೆದರಬೇಡಿರಿ; ನನ್ನ ಭಯವಿರಿಸಿಕೊಳ್ಳಿರಿ - ನಾನು ನನ್ನ ಅನುಗ್ರಹಗಳನ್ನು ನಿಮ್ಮಲ್ಲಿ ಪೂರ್ಣಗೊಳಿಸಲಿಕ್ಕೂ ನಿಮಗೆ ಮಾರ್ಗದರ್ಶನ ದೊರೆಯಲಿಕ್ಕೂಬೇಕಾಗಿ** (ಈ ಆಜ್ಞೆ ನೀಡಲಾಗಿದೆ).

وَمِنْ حَيْثُ خَرَجْتَ فَوَلِّ وَجْهَكَ شَطْرَ الْمَسْجِدِ الْحَرَامِ ؕ وَحَيْثُ مَا كُنْتُمْ فَوَلُّوْا وُجُوْهَكُمْ شَطْرَهٗ ۙ لِئَلَّا يَكُوْنَ لِلنَّاسِ عَلَيْكُمْ حُجَّةٌ ۙ اِلَّا الَّذِيْنَ ظَلَمُوْا مِنْهُمْ ۙ فَلَا تَخْشَوْهُمْ وَاخْشَوْنِيْ ۙ وَلِاُتِمَّ نِعْمَتِيْ عَلَيْكُمْ وَلَعَلَّكُمْ تَهْتَدُوْنَ ﴿۱۵۱﴾

**152. ಅದು - ನಮ್ಮ ದೃಷ್ಟಾಂತಗಳನ್ನು ನಿಮಗೆ ವಿವರಿಸಿ ಕೊಡುವ, ನಿಮ್ಮನ್ನು ಸಂಸ್ಕರಿಸಿ ಶುದ್ಧೀಕರಿಸುವ, ಗ್ರಂಥವನ್ನು ಮತ್ತು ಜ್ಞಾನವನ್ನು ಬೋಧಿಸುವ, ನಿಮಗೆ ತಿಳಿಯದುದನ್ನು ನಿಮಗೆ ಕಲಿಸಿಕೊಡುವ ಒಬ್ಬ ಪ್ರವಾದಿಯನ್ನು ನಿಮ್ಮಿಂದಲೇ ನಾವು ನಿಯೋಜಿಸಿದ ರೀತಿಯಲ್ಲಿ.**

كَمَاۤ اَرْسَلْنَا فِيْكُمْ رَسُوْلًا مِّنْكُمْ يَتْلُوْا عَلَيْكُمْ اٰيٰتِنَا وَيُزَكِّيْكُمْ وَيُعَلِّمُكُمُ الْكِتٰبَ وَالْحِكْمَةَ وَيُعَلِّمُكُمْ مَّا لَمْ تَكُوْنُوْا تَعْلَمُوْنَ ﴿۱۵۲﴾

41. ಈ ವಚನದಲ್ಲಿ ಯುದ್ಧದ ಕುರಿತು ಸೂಚಿಸಲಾಗಿದೆಯೆಂದು ತಿಳಿದುಬರುತ್ತದೆ. 'ಖುರೂಜ್' ಎಂಬ ಪದವು ಯುದ್ಧ ಮಾಡಲು ಹೊರಡುವುದಕ್ಕೆ ಪ್ರಯೋಗಿಸಲ್ಪಡುತ್ತದೆ. ಆಗ, "ಮುಸ್ಲಿಮರೇ, ನೀವು ಯುದ್ಧ ಮಾಡಲು ಅನಿವಾರ್ಯವಾದ ಸಂದರ್ಭ ಬರಲಿದೆ; ನಿಮ್ಮ ಗುರಿ ಕಅ್‌ಬವನ್ನು ವಿಮುಕ್ತ ಗೊಳಿಸುವುದಾಗಿರಬೇಕು" ಎಂದು ಇಲ್ಲಿ ಸೂಚಿಸಲಾಗಿದೆ. ಸಂಕ್ಷಿಪ್ತದಲ್ಲಿ, ಅಲ್ಲಾಹನ ಭವನವನ್ನು ವಿಮುಕ್ತಗೊಳಿಸಬೇಕೆಂಬ ಉದ್ದೇಶ ಇಲ್ಲಿದೆ; ಕಿಬ್ಲದ ಕಡೆಗೆ ಮುಖವನ್ನು ತಿರುಗಿಸಬೇಕೆಂದು ಮಾತ್ರವಲ್ಲ.

42. "ನೀವು ಎಲ್ಲಿದ್ದರೂ" ಎಂದು ಹೇಳಿದ್ದು ಯುದ್ಧದಲ್ಲಿ ಭಾಗವಹಿಸದ ಇತರ ಮುಸ್ಲಿಮರನ್ನು ಉದ್ದೇಶಿಸಿಯಾಗಿದೆ. ಅಂದರೆ ಯುದ್ಧ ಮಾಡಲು ನಿರ್ಬಂಧಿಸಲ್ಪಟ್ಟವರ ಗುರಿ ಕಅ್‌ಬವನ್ನು ವಿಮುಕ್ತಗೊಳಿಸುವುದಾಗಿರಬೇಕು. ಯುದ್ಧದಲ್ಲಿ ಭಾಗವಹಿಸದವರು ಸಹ ನಮಾಝಿನಲ್ಲಿ ಆ ಕಡೆಗೆ ಮುಖ ತಿರುಗಿಸಿ ಆ ಪವಿತ್ರ ಭವನ ತಮಗೆ ಅಧೀನವಾಗಲಿಕ್ಕಾಗಿ ಪ್ರಾರ್ಥಿಸಬೇಕೆಂದು ತಾತ್ಪರ್ಯ.





**153. ಆದುದರಿಂದ ನನ್ನನ್ನು ಸ್ಮರಿಸಿರಿ. ನಾನು ನಿಮ್ಮನ್ನೂ ಸ್ಮರಿಸುವೆನು. ನನಗೆ ಕೃತಜ್ಞತೆಯನ್ನು ತೋರಿಸಿರಿ; ಕೃತಘ್ನರಾಗಬೇಡಿರಿ.**

فَاذْكُرُوْنِيْۤ اَذْكُرْكُمْ وَاشْكُرُوْا لِيْ وَلَا تَكْفُرُوْنِ ﴿۱۵۳﴾

**154. ಓ ಸತ್ಯವಿಶ್ವಾಸಿಗಳೇ, ಸಹನೆ ಮತ್ತು ಪ್ರಾರ್ಥನೆಯಿಂದ ನೀವು** (ಅಲ್ಲಾಹನ) **ಸಹಾಯವನ್ನು ಯಾಚಿಸಿರಿ. ಖಂಡಿತವಾಗಿಯೂ ಅಲ್ಲಾಹನು ಸಹನಶೀಲರೊಂದಿಗಿದ್ದಾನೆ.**

يٰۤاَيُّهَا الَّذِيْنَ اٰمَنُوا اسْتَعِيْنُوْا بِالصَّبْرِ وَالصَّلٰوةِ ؕ اِنَّ اللّٰهَ مَعَ الصّٰبِرِيْنَ ﴿۱۵۴﴾

**155. ದೇವ ಮಾರ್ಗದಲ್ಲಿ ಹತ್ಯೆಗೀಡಾದವರ ಕುರಿತು ಅವರು ಮೃತಪಟ್ಟವರೆಂದು ಹೇಳಬೇಡಿರಿ. ಅವರು ಮೃತರಲ್ಲ; ಜೀವಂತರು.**[42A] **ಆದರೆ ನೀವು ಅದನ್ನು ಗ್ರಹಿಸುವುದಿಲ್ಲ.**

وَلَا تَقُوْلُوْا لِمَنْ يُّقْتَلُ فِيْ سَبِيْلِ اللّٰهِ اَمْوَاتٌ ؕ بَلْ اَحْيَآءٌ وَّلٰكِنْ لَّا تَشْعُرُوْنَ ﴿۱۵۵﴾

**156. ನಿಶ್ಚಯವಾಗಿಯೂ ನಿಮ್ಮನ್ನು ನಾವು ಕೆಲವು ಬಗೆಯ ಭಯಾಶಂಕೆ ಮತ್ತು ಹಸಿವಿನಿಂದಲೂ ಧನನಷ್ಟ, ಪ್ರಾಣಹಾನಿ ಮತ್ತು ಫಲನಷ್ಟಗಳಿಂದಲೂ ಪರೀಕ್ಷಿಸುವೆವು.** (ಓ ಪ್ರವಾದಿ,) **ನೀನು ಸಹನಶೀಲರಿಗೆ ಶುಭ ವಾರ್ತೆಯನ್ನು ತಿಳಿಸು -**

وَلَنَبْلُوَنَّكُمْ بِشَيْءٍ مِّنَ الْخَوْفِ وَالْجُوْعِ وَنَقْصٍ مِّنَ الْاَمْوَالِ وَالْاَنْفُسِ وَالثَّمَرٰتِ ؕ وَبَشِّرِ الصّٰبِرِيْنَ ﴿۱۵۶﴾

**157. ಯಾರು ತಮಗೆ ಏನಾದರೂ ವಿಪತ್ತು ಬಂದೆರಗಿದರೆ, ಅವರು** (ಗಾಬರಿಗೊಳ್ಳುವುದಿಲ್ಲ, ಬದಲು) **ನಾವು ನಿಶ್ಚಯವಾಗಿಯೂ ಅಲ್ಲಾಹನಿಗಾಗಿ ಇರುವವರು ಹಾಗೂ ನಿಶ್ಚಯವಾಗಿಯೂ ಅವನೆಡೆಗೆಯೇ ಮರಳುವವರಾಗಿದ್ದೇವೆ ಎಂದು ಹೇಳುತ್ತಾರೋ -**

الَّذِيْنَ اِذَاۤ اَصَابَتْهُمْ مُّصِيْبَةٌ ۙ قَالُوْۤا اِنَّا لِلّٰهِ وَاِنَّاۤ اِلَيْهِ رٰجِعُوْنَ ﴿۱۵۷﴾

**158. ಅವರ ಮೇಲೆ ತಮ್ಮ ಒಡೆಯನ ಅನುಗ್ರಹಗಳಿವೆ;** (ಹಾಗೆಯೇ) **ಕರುಣೆ ಸಹ. ಅವರೇ ಸತ್ಪಥದಲ್ಲಿ ನಡೆಸಲ್ಪಡುವವರು.**

اُولٰٓئِكَ عَلَيْهِمْ صَلَوٰتٌ مِّنْ رَّبِّهِمْ وَرَحْمَةٌ ۫ وَاُولٰٓئِكَ هُمُ الْمُهْتَدُوْنَ ﴿۱۵۸﴾

**159. ಖಂಡಿತವಾಗಿಯೂ ಸಫಾ ಮತ್ತು ಮರ್ವ**

اِنَّ الصَّفَا وَالْمَرْوَةَ مِنْ شَعَآئِرِ اللّٰهِ ۚ

42A. ಅವರ ಜೀವಮಾನದಲ್ಲಿ ಅವರು ಮಾಡಿದ ಸತ್ಕರ್ಮಗಳು ನಿಷ್ಫಲವಾಗುವುದಿಲ್ಲ. ಅವರ ತ್ಯಾಗಮಯ ಜೀವನದ ಮಾದರಿ ಜೀವಂತವಾಗಿರುತ್ತದೆ ಎಂದು ತಾತ್ಪರ್ಯ.

فَمَنْ حَجَّ الْبَيْتَ اَوِ اعْتَمَرَ فَلَا جُنَاحَ عَلَيْهِ اَنْ يَّطَّوَّفَ بِهِمَا ۚ وَمَنْ تَطَوَّعَ خَيْرًا ۙ فَاِنَّ اللّٰهَ شَاكِرٌ عَلِيْمٌ ﴿١٥٨﴾

ಅಲ್ಲಾಹನ ಚಿಹ್ನೆಗಳಲ್ಲಿ ಸೇರುತ್ತವೆ.[43] ಆದ್ದರಿಂದ ಯಾರಾದರೂ ಆ (ಕಅ್‌ಬ) ಭವನಕ್ಕೆ ಹೋಗಿ "ಹಜ್ಜ್" ಅಥವಾ "ಉಮ್ರ" ಮಾಡುವುದಾದರೆ, ಅವುಗಳ ಮಧ್ಯೆ ಪ್ರದಕ್ಷಿಣೆ ಮಾಡುವುದರಲ್ಲಿ ಪಾಪವಿಲ್ಲ.[44] ಯಾರಾದರೂ ಸ್ವಯಂ ಪ್ರೇರಣೆಯಿಂದ ಸತ್ಕರ್ಮ ಮಾಡುವುದಾದರೆ ಖಂಡಿತವಾಗಿಯೂ ಅಲ್ಲಾಹನು ಅದನ್ನು ಮೆಚ್ಚುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

اِنَّ الَّذِيْنَ يَكْتُمُوْنَ مَآ اَنْزَلْنَا مِنَ الْبَيِّنٰتِ وَالْهُدٰى مِنْۢ بَعْدِ مَا بَيَّنّٰهُ لِلنَّاسِ فِى الْكِتٰبِ ۙ اُولٰٓئِكَ يَلْعَنُهُمُ اللّٰهُ وَيَلْعَنُهُمُ اللّٰعِنُوْنَ ﴿١٥٩﴾

**160.** ನಾವು ಅವತೀರ್ಣಗೊಳಿಸಿದ ಸ್ಪಷ್ಟವಾದ ದೃಷ್ಟಾಂತಗಳನ್ನೂ ಮಾರ್ಗದರ್ಶನವನ್ನೂ ಈ ಗ್ರಂಥದಲ್ಲಿ ಜನರಿಗೆ ನಾವು ವಿಶದೀಕರಿಸಿದ ನಂತರ ಯಾರು ಅದನ್ನು ಬಚ್ಚಿಡುತ್ತಾರೋ, ಖಂಡಿತವಾಗಿಯೂ ಅವರನ್ನು ಅಲ್ಲಾಹನು ಶಪಿಸುತ್ತಾನೆ. (ಇತರ) ಶಪಿಸುವವರು ಸಹ ಅವರನ್ನು ಶಪಿಸುವರು.

اِلَّا الَّذِيْنَ تَابُوْا وَاَصْلَحُوْا وَبَيَّنُوْا فَاُولٰٓئِكَ اَتُوْبُ عَلَيْهِمْ ۚ وَاَنَا التَّوَّابُ الرَّحِيْمُ ﴿١٦٠﴾

**161.** ಆದರೆ ಪಶ್ಚಾತ್ತಾಪಪಟ್ಟು ತಮ್ಮನ್ನು ತಿದ್ದಿಕೊಂಡು (ಬಚ್ಚಿಟ್ಟ ಸತ್ಯವನ್ನು) ಬಹಿರಂಗ ಪಡಿಸುವವರು ಅವರಲ್ಲಿ ಸೇರುವುದಿಲ್ಲ. ಅವರ ಮೇಲೆ ನಾನು ಕರುಣೆ ತೋರಿಸುವೆನು. ನಾನು ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಕಾರುಣ್ಯನಿಧಿಯೂ ಆಗಿದ್ದೇನೆ.

اِنَّ الَّذِيْنَ كَفَرُوْا وَمَاتُوْا وَهُمْ كُفَّارٌ اُولٰٓئِكَ عَلَيْهِمْ لَعْنَةُ اللّٰهِ وَالْمَلٰٓئِكَةِ وَالنَّاسِ اَجْمَعِيْنَ ﴿١٦١﴾

**162.** ಯಾರು ಸತ್ಯವನ್ನು ನಿರಾಕರಿಸುತ್ತಾರೋ ಮತ್ತು ಸತ್ಯವನ್ನು ನಿಷೇಧಿಸುವವರಾಗಿಯೇ ಸಾಯುತ್ತಾರೋ ನಿಶ್ಚಯವಾಗಿಯೂ ಅವರ ಮೇಲೆ ಅಲ್ಲಾಹನ, ದೇವದೂತರ (ಮಲಾಯಿಕ್) ಮತ್ತು ಸರ್ವ ಜನರ ಶಾಪವಿದೆ.

خٰلِدِيْنَ فِيْهَا ۚ لَا يُخَفَّفُ عَنْهُمُ

**163.** ಅವರು ಅದೇ ಅವಸ್ಥೆಯಲ್ಲಿ ಉಳಿಯುವರು. ಅವರ ಶಿಕ್ಷೆ ಲಘೂಕರಿಸಲ್ಪಡಲಾರದು. ಅವರಿಗೆ

43. ಸಫಾ ಮತ್ತು ಮರ್ವ ಮಕ್ಕದ ಎರಡು ಗುಡ್ಡೆಗಳಾಗಿವೆ. ಅವು ಹಝ್ರತ್ ಇಸ್ಮಾಈಲ್ (ಅಲೈಹಿಸ್ಸಲಾಂ)ರ ಮಾತೆ ಹಝ್ರತ್ ಹಾಜಿರರು ದೇವಮಾರ್ಗದಲ್ಲಿ ತೋರಿಸಿದ ಅಸಾಮಾನ್ಯ ಸಹನೆ ಮತ್ತು ಭಕ್ತಿ ಹಾಗೂ ಹಝ್ರತ್ ಇಸ್ಮಾಈಲ್ (ಅ)ರಿಗೆ ಲಭಿಸಿದ ವಿಶೇಷ ದೈವಿಕ ಸಂರಕ್ಷಣೆಯ ಸ್ಮಾರಕಗಳಾಗಿವೆ.

44. ಸಫಾ, ಮರ್ವಗಳ ನಡುವೆ ಓಡುವುದನ್ನು ಇಲ್ಲಿ ಪ್ರದಕ್ಷಿಣೆ ಎಂದು ಉದ್ದೇಶಿಸಲಾಗಿದೆ. ಹೀಗೆ ಪ್ರದಕ್ಷಿಣೆ ಮಾಡುವುದು ಪಾಪಕರವೆಂದು ಆ ಕಾಲದ ಮದೀನ ನಿವಾಸಿಗಳು ಗಣಿಸುತ್ತಿದ್ದರು. ಆದ್ದರಿಂದಲೇ ಅದರಲ್ಲಿ ಪಾಪವಿಲ್ಲವೆಂದು ಇಲ್ಲಿ ಹೇಳಿದ್ದು.





الْعَذَابُ وَلَا هُمْ يُنْظَرُوْنَ ﴿١٦٢﴾

ಕಾಲಾವಕಾಶವನ್ನೂ ಕೊಡಲಾಗುವುದಿಲ್ಲ.

وَاِلٰهُكُمْ اِلٰهٌ وَّاحِدٌ ۚ لَآ اِلٰهَ اِلَّا هُوَ الرَّحْمٰنُ الرَّحِيْمُ ﴿١٦٣﴾

**164.** ನಿನ್ನ ಒಡೆಯನು ಏಕ ದೇವನು. ಅವನ ಹೊರತು ಆರಾಧನೆಗರ್ಹನಿಲ್ಲ. ಅವನು ದಯಾವಂತನೂ ಕಾರುಣ್ಯ ನಿಧಿಯೂ ಆಗಿದ್ದಾನೆ.

اِنَّ فِىْ خَلْقِ السَّمٰوٰتِ وَالْاَرْضِ وَاخْتِلَافِ الَّيْلِ وَالنَّهَارِ وَالْفُلْكِ الَّتِىْ تَجْرِىْ فِى الْبَحْرِ بِمَا يَنْفَعُ النَّاسَ وَمَآ اَنْزَلَ اللّٰهُ مِنَ السَّمَآءِ مِنْ مَّآءٍ فَاَحْيَا بِهِ الْاَرْضَ بَعْدَ مَوْتِهَا وَبَثَّ فِيْهَا مِنْ كُلِّ دَآبَّةٍ ۪ وَّتَصْرِيْفِ الرِّيٰحِ وَالسَّحَابِ الْمُسَخَّرِ بَيْنَ السَّمَآءِ وَالْاَرْضِ لَاٰيٰتٍ لِّقَوْمٍ يَّعْقِلُوْنَ ﴿١٦٤﴾

**165.** ಆಕಾಶಗಳ ಮತ್ತು ಭೂಮಿಯ ಸೃಷ್ಟಿಯಲ್ಲಿಯೂ ರಾತ್ರಿ - ಹಗಲುಗಳ ಪರ್ಯಾಯದಲ್ಲಿಯೂ ಮನುಷ್ಯರಿಗೆ ಪ್ರಯೋಜನಕರವಾದ ವಸ್ತುಗಳ ಸಹಿತ ಸಮುದ್ರದಲ್ಲಿ ಸಂಚರಿಸುವ ಹಡಗುಗಳಲ್ಲಿಯೂ ಆಕಾಶದಿಂದ ಅಲ್ಲಾಹನು ಮಳೆ ಸುರಿಸಿ ನಿರ್ಜೀವ ಭೂಮಿಯನ್ನು ಜೀವಂತ ಗೊಳಿಸಿ ಅದರಲ್ಲಿ ಎಲ್ಲ ತರದ ಜೀವ ಜಾಲಗಳು ಹರಡಿರುವುದರಲ್ಲಿಯೂ ವಾಯುವಿನ ಗತಿ ವ್ಯತ್ಯಾಸಗಳಲ್ಲಿಯೂ ಆಕಾಶ ಮತ್ತು ಭೂಮಿಯ ಮಧ್ಯೆ ನಿಯಂತ್ರಿಸಲ್ಪಟ್ಟಿರುವ ಮೋಡಗಳಲ್ಲಿಯೂ ದಿಟವಾಗಿಯೂ ವಿವೇಚನಾಶಾಲಿಗಳಿಗೆ ದೃಷ್ಟಾಂತಗಳಿವೆ.

وَمِنَ النَّاسِ مَنْ يَّتَّخِذُ مِنْ دُوْنِ اللّٰهِ اَنْدَادًا يُّحِبُّوْنَهُمْ كَحُبِّ اللّٰهِ ۗ وَالَّذِيْنَ اٰمَنُوْٓا اَشَدُّ حُبًّا لِّلّٰهِ ۗ وَلَوْ يَرَى الَّذِيْنَ ظَلَمُوْٓا اِذْ يَرَوْنَ الْعَذَابَ ۙ اَنَّ الْقُوَّةَ لِلّٰهِ جَمِيْعًا ۙ وَّاَنَّ اللّٰهَ شَدِيْدُ الْعَذَابِ ﴿١٦٥﴾

**166.** ಆರಾಧನೆಗಾಗಿ ಅಲ್ಲಾಹನಿಗೆ ಸಮಾನರನ್ನು ಸ್ವೀಕರಿಸುವವರು ಮನುಷ್ಯರಲ್ಲಿ ಕೆಲವರಿದ್ದಾರೆ. ಅಲ್ಲಾಹನನ್ನು ಪ್ರೀತಿಸುವ ರೀತಿಯಲ್ಲಿ ಅವರನ್ನು ಪ್ರೀತಿಸುತ್ತಾರೆ. ಸತ್ಯವಿಶ್ವಾಸಿಗಳಾದರೋ ಅಲ್ಲಾಹನನ್ನು ಅತ್ಯಧಿಕ ಪ್ರೀತಿಸುವವರಾಗಿದ್ದಾರೆ. ದುಷ್ಕರ್ಮಿಗಳು, ಶಿಕ್ಷೆಯ ಉಗ್ರತೆಯನ್ನು (ಯಾವುದೇ ರೀತಿಯಲ್ಲಿ ಈಗ) ಕಣ್ಣಮುಂದೆ ಕಾಣುವಂತಾದರೆ, ಸರ್ವಶಕ್ತಿಗಳು ಅಲ್ಲಾಹನಿಗಿವೆಯೆಂದೂ ಖಂಡಿತವಾಗಿಯೂ ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನೆಂದೂ ತಿಳಿಯುತ್ತಿದ್ದರು.

اِذْ تَبَرَّاَ الَّذِيْنَ اتُّبِعُوْا مِنَ الَّذِيْنَ اتَّبَعُوْا وَرَاَوُا الْعَذَابَ وَتَقَطَّعَتْ بِهِمُ الْاَسْبَابُ ﴿١٦٦﴾

**167.** ಅನುಸರಿಸಲ್ಪಟ್ಟವರು (ನೇತಾರರು) ಅನುಸರಿಸಿದವರನ್ನು (ಅನುಯಾಯಿಗಳನ್ನು) ಕೈ ಬಿಡುವ, ಶಿಕ್ಷೆಯನ್ನು ಕಣ್ಣ ಮುಂದೆ ಕಾಣುವ ಹಾಗೂ ಅವರ (ರಕ್ಷಾ) ಮಾರ್ಗಗಳು ವಿಚ್ಛೇದಿಸಲ್ಪಡುವ ಸಂದರ್ಭವನ್ನು ಅಕಟಾ, *ಅವರು ಈಗಲೇ ಕಾಣುವಂತಾದರೆ!*

**168.** (ಮುಂದಾಳುಗಳನ್ನು) **ಅನುಸರಿಸಿದವರು ಹೇಳುವರು: '**(ಭೂಲೋಕಕ್ಕೆ) **ಹಿಂತಿರುಗಿ ಹೋಗಲಿಕ್ಕೆ ನಮಗೆ ಒಂದು ಅವಕಾಶ ಸಿಕ್ಕಿದ್ದರೆ, ಅವರು ನಮ್ಮನ್ನು ಕೈಬಿಟ್ಟಂತೆ ನಾವು ಸಹ ಅವರನ್ನು ಕೈ ಬಿಡುತ್ತಿದ್ದೆವು. ಹೀಗೆ ಅಲ್ಲಾಹನು ಅವರ ಕರ್ಮಫಲಗಳನ್ನು ಅವರಿಗೆ ಸಂಕಟಮಯವಾಗಿ ತೋರಿಸುವನು. ಅವರಾದರೋ ನರಕಾಗ್ನಿಯಿಂದ ಹೊರ ಹೋಗಲಾರರು.**[45]

وَقَالَ الَّذِينَ اتَّبَعُوا لَوْ أَنَّ لَنَا كَرَّةً فَنَتَبَرَّأَ مِنْهُمْ كَمَا تَبَرَّءُوا مِنَّا ۗ كَذَٰلِكَ يُرِيهِمُ اللَّهُ أَعْمَالَهُمْ حَسَرَاتٍ عَلَيْهِمْ ۖ وَمَا هُمْ بِخَارِجِينَ مِنَ النَّارِ ﴿١٦٧﴾

**169. ಓ ಮನುಷ್ಯರೇ, ನೀವು ಭೂಮಿಯಲ್ಲಿರುವ ಧರ್ಮಬದ್ಧವಾದವು ಮತ್ತು ಹಿತಕರವಾದವುಗಳನ್ನು ಭುಜಿಸಿರಿ. ಶೈತಾನನ ಹೆಜ್ಜೆಗಳನ್ನು ನೀವು ಹಿಂಬಾಲಿಸಬೇಡಿರಿ. ದಿಟವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರು.**

يَا أَيُّهَا النَّاسُ كُلُوا مِمَّا فِي الْأَرْضِ حَلَالًا طَيِّبًا وَلَا تَتَّبِعُوا خُطُوَاتِ الشَّيْطَانِ ۚ إِنَّهُ لَكُمْ عَدُوٌّ مُبِينٌ ﴿١٦٨﴾

**170. ದುಷ್ಕೃತ್ಯಕ್ಕೂ ನೀಚವೃತ್ತಿಗೂ ಅಲ್ಲಾಹನ ಬಗ್ಗೆ ನಿಮಗೆ ಅರಿವಿಲ್ಲದುದನ್ನು ಆರೋಪಿಸಲಿಕ್ಕೂ ಮಾತ್ರವೇ ಅವನು** (ಶೈತಾನ) **ನಿಮಗೆ ಆಜ್ಞಾಪಿಸುತ್ತಾನೆ.**

إِنَّمَا يَأْمُرُكُمْ بِالسُّوءِ وَالْفَحْشَاءِ وَأَنْ تَقُولُوا عَلَى اللَّهِ مَا لَا تَعْلَمُونَ ﴿١٦٩﴾

**171. 'ಅಲ್ಲಾಹನು ಅವತೀರ್ಣಗೊಳಿಸಿದುದನ್ನು ನೀವು ಅನುಸರಿಸಿರಿ' ಎಂದು ಅವರೊಡನೆ ಹೇಳುವಾಗ 'ಇಲ್ಲ, ನಮ್ಮ ಪೂರ್ವಪಿತರು ನಡೆದುದಾಗಿ ಕಂಡ ಮಾರ್ಗವನ್ನೇ ನಾವು ಸಹ ಅನುಸರಿಸುತ್ತೇವೆ' ಎಂದು ಅವರು ಹೇಳುತ್ತಾರೆ. ಏನು, ಅವರ ಪೂರ್ವಜರು ಏನನ್ನೂ ಗ್ರಹಿಸಲು ಶಕ್ತರಲ್ಲವಾದರೂ ಸತ್ಪಥವನ್ನು ಅನುಸರಿಸದವರೂ ಆಗಿದ್ದರೂ** *ಅವರನ್ನೇ ಇವರು ಸಹ ಅನುಸರಿಸುವರೋ?*

وَإِذَا قِيلَ لَهُمُ اتَّبِعُوا مَا أَنْزَلَ اللَّهُ قَالُوا بَلْ نَتَّبِعُ مَا أَلْفَيْنَا عَلَيْهِ آبَاءَنَا ۗ أَوَلَوْ كَانَ آبَاؤُهُمْ لَا يَعْقِلُونَ شَيْئًا وَلَا يَهْتَدُونَ ﴿١٧٠﴾

**172. ಅವಿಶ್ವಾಸಿಗಳ ಉಪಮೆ - ಕರೆ ಮತ್ತು ಕೂಗು ಹೊರತು ಬೇರೇನನ್ನೂ ಕೇಳಿಸದ** *ಪ್ರಾಣಿಗಳಿಗೆ* **ಹುಯಿಲಿಡುವವನ ಸ್ಥಿತಿಯಂತಾಗಿದೆ.**[46] **ಅವರು ಕಿವಿಡರೂ ಮೂಕರೂ ಕುರುಡರೂ**[47] **ಆಗಿದ್ದಾರೆ. ಅವರೇನನ್ನೂ ಗ್ರಹಿಸುವುದಿಲ್ಲ.**

وَمَثَلُ الَّذِينَ كَفَرُوا كَمَثَلِ الَّذِي يَنْعِقُ بِمَا لَا يَسْمَعُ إِلَّا دُعَاءً وَنِدَاءً ۚ صُمٌّ بُكْمٌ عُمْيٌ فَهُمْ لَا يَعْقِلُونَ ﴿١٧١﴾

**173. ಓ ಸತ್ಯವಿಶ್ವಾಸಿಗಳೇ, ನಾವು ನಿಮಗೆ ನೀಡಿರುವ**

يَا أَيُّهَا الَّذِينَ آمَنُوا كُلُوا مِنْ طَيِّبَاتِ

45. ನರಕಾಗ್ನಿಯಿಂದ ಸ್ವಯಂ ತಪ್ಪಿಸಿಕೊಂಡು ಅವರಿಗೆ ಹೊರ ಹೋಗಲಿಕ್ಕೆ ಸಾಧ್ಯವಿಲ್ಲ.





**ಶುದ್ಧವಾದ ವಸ್ತುಗಳಿಂದ ಭುಜಿಸಿರಿ; ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ - ಅವನನ್ನೇ ನೀವು ಆರಾಧಿಸುವವರಾಗಿದ್ದರೆ.**

مَا رَزَقْنَاكُمْ وَاشْكُرُوا لِلَّهِ إِنْ كُنْتُمْ إِيَّاهُ تَعْبُدُونَ ﴿١٧٢﴾

**174. ಸತ್ತ ಪ್ರಾಣಿ, ರಕ್ತ, ಹಂದಿಮಾಂಸ ಮತ್ತು ಅಲ್ಲಾಹೇತರರ ನಾಮದಲ್ಲಿ ಅರ್ಪಿಸಲ್ಪಟ್ಟದ್ದನ್ನು**[47A] **ಮಾತ್ರ ಅವನು ನಿಮಗೆ ನಿಷಿದ್ಧಗೊಳಿಸಿದ್ದಾನೆ. ಆದರೆ ನಿಯಮೋಲ್ಲಂಘನೆ ಮಾಡದೆಯೂ ಮಿತಿ ಮೀರದೆಯೂ ಯಾವನಾದರೂ** (ಅವುಗಳನ್ನು ತಿನ್ನಲು) **ನಿರ್ಬಂಧಿಸಲ್ಪಟ್ಟರೆ ಅವನ ಮೇಲೆ ಪಾಪವಿಲ್ಲ. ಅಲ್ಲಾಹನು ಅತಿ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.**

إِنَّمَا حَرَّمَ عَلَيْكُمُ الْمَيْتَةَ وَالدَّمَ وَلَحْمَ الْخِنْزِيرِ وَمَا أُهِلَّ بِهِ لِغَيْرِ اللَّهِ ۖ فَمَنِ اضْطُرَّ غَيْرَ بَاغٍ وَلَا عَادٍ فَلَا إِثْمَ عَلَيْهِ ۚ إِنَّ اللَّهَ غَفُورٌ رَحِيمٌ ﴿١٧٣﴾

**175. ಅಲ್ಲಾಹನು** (ತನ್ನ) **ಗ್ರಂಥದಲ್ಲಿ ಅವತೀರ್ಣಗೊಳಿಸಿದ ಅಧ್ಯಾಪನಗಳನ್ನು ಬಚ್ಚಿಟ್ಟು ಕೊಂಡು ಅದರ ಬದಲಿಗೆ ಅಲ್ಪ ಬೆಲೆಯನ್ನು ಪಡೆಯುವವರು ತಮ್ಮ ಉದರಗಳಲ್ಲಿ ಕೇವಲ ಬೆಂಕಿಯನ್ನೇ ತುಂಬಿಸುತ್ತಾರೆ. ಪುನರುತ್ಥಾನ ದಿನದಂದು ಅಲ್ಲಾಹನು ಅವರೊಡನೆ ಮಾತನಾಡಲಾರ ಮತ್ತು ಅವರನ್ನು ಶುದ್ಧೀಕರಿಸಲಾರ. ಕಠಿಣವಾದ ಶಿಕ್ಷೆ ಅವರಿಗಿದೆ.**

إِنَّ الَّذِينَ يَكْتُمُونَ مَا أَنْزَلَ اللَّهُ مِنَ الْكِتَابِ وَيَشْتَرُونَ بِهِ ثَمَنًا قَلِيلًا ۙ أُولَٰئِكَ مَا يَأْكُلُونَ فِي بُطُونِهِمْ إِلَّا النَّارَ وَلَا يُكَلِّمُهُمُ اللَّهُ يَوْمَ الْقِيَامَةِ وَلَا يُزَكِّيهِمْ وَلَهُمْ عَذَابٌ أَلِيمٌ ﴿١٧٤﴾

46. ಕೆಲವು ಮೃಗಗಳಿಗೆ ಹುಯಿಲಿಡುವುದಕ್ಕೆ 'ಯನ್‌ಇಕು' ಎಂಬ ಪದ ಪ್ರಯೋಗಿಸಲ್ಪಡುತ್ತದೆ. ಆ ಶಬ್ದವನ್ನು ಕೇಳಿ ಮೃಗಗಳು ಪ್ರತಿಕ್ರಿಯಿಸುತ್ತವೆ. ಹೊರತು ಅದರ ಅರ್ಥವನ್ನು ಅವು ಗ್ರಹಿಸುವುದಿಲ್ಲ. ಅವಿಶ್ವಾಸಿಗಳ ಸ್ಥಿತಿ ಇದೇ ರೀತಿಯಾಗಿದೆ. ಅವರು ಪರಸ್ಪರ ಮೃಗಗಳಂತೆ ಅನುಕರಣೆ ಮಾಡುತ್ತಾರೆ ಹೊರತು ಹೇಳುವವನು ಹೇಳುತ್ತಿರುವುದು ಏನೆಂದಾಗಲಿ, ಕೇಳುವವನು ಕೇಳುತ್ತಿರುವುದು ಏನೆಂದಾಗಲಿ, ವಿವೇಚನೆ ಮಾಡುವುದಿಲ್ಲ.ಆದರೆ ಇಸ್ಲಾಮಿನ ಪ್ರಭೋದಕರು ಸದುಪದೇಶಗಳನ್ನು ಮನವರಿಕೆ ಮಾಡಿಕೊಡುತ್ತಾರೆ. ಅದನ್ನು ಅನುಸರಿಸುವವರು ಅವನ್ನು ಗ್ರಹಿಸಿಕೊಂಡು ಹಾಗೆ ವರ್ತಿಸುತ್ತಾರೆ. ಮೃಗಗಳೋಪಾದಿಯಲ್ಲಿ ಕೇವಲ ಶಬ್ದ ಮಾತ್ರ ಕೇಳಿಸಿಕೊಂಡು ಅರ್ಥ ಗ್ರಹಿಸಿಕೊಳ್ಳದೆಯೂ ಚಿಂತನೆ ಮಾಡದೆಯೂ ಅಂಧಾನುಕರಣೆ ಮಾಡುವುದಿಲ್ಲ.

47. ಹಠಮಾರಿತನ ಮತ್ತು ಅಹಂಕಾರದಿಂದ ಅವರ ಪ್ರಜ್ಞೇಂದ್ರಿಯಗಳು ನಿಷ್ಕ್ರಿಯೆಗೊಂಡಿವೆ. ಆದ್ದರಿಂದ ತಮ್ಮ ನಿಲುವು ತಪ್ಪೆಂದು ಅವರು ತಿಳಿದುಕೊಳ್ಳುವುದಿಲ್ಲ.

47A. 'ಉಹಿಲ್ಲ' ಅಂದರೆ, ಉಚ್ಚಸ್ವರದಲ್ಲಿ ಏನಾದರೂ ಹೇಳುವುದು ಎಂದಾಗಿದೆ. ಸಾಮಾನ್ಯವಾಗಿ, ಯಾವುದಾದರೂ ಪ್ರಾಣಿ ಅಥವಾ ವಸ್ತುವಿನ ಕುರಿತು ಅಲ್ಲಾಹನನ್ನು ಯಾ ಬೇರೆ ಯಾವುದಾದರೂ ದೇವತೆಯನ್ನು ಸಂಬಂಧಿಸಿ ಹೇಳುವುದಕ್ಕೆ ಈ ಪದವನ್ನು ಬಳಸಲಾಗುತ್ತದೆ. ಉದಾಹರಣೆಗೆ, ಒಂದು ವಸ್ತುವನ್ನು ಕುರಿತು, ಅದು ಅಲ್ಲಾಹನಿಗೆ ಅಥವಾ ಯಾವುದಾದರೂ ದೇವತೆಗೆ ಅಥವಾ ಯಾರಾದರೂ ಮಹಾತ್ಮರಿಗೆ ಎಂದು ಹೇಳುವುದು; ಯಾವುದಾದರೂ ಪ್ರಾಣಿಯನ್ನು ಕೊಯ್ಯುವಾಗ ಅಲ್ಲಾಹನದ್ದಾಗಲಿ ಯಾವುದಾದರೂ ದೇವತೆಯದ್ದಾಗಲಿ ಹೆಸರು ಉಚ್ಚರಿಸುವುದು; ಅಲ್ಲಾಹನಿಗಾಗಲಿ ಇತರ ಯಾರಿಗಾಗಲಿ ಹರಕೆ ಮಾಡುವುದು- ಇವೆಲ್ಲ ಈ ಶಬ್ದದ ಅರ್ಥವ್ಯಾಪ್ತಿಯಲ್ಲಿ ಬರುತ್ತದೆ. ಅಲ್ಲಾಹೇತರರಿಗೆ ಅರ್ಪಣೆ (ಹರಕೆ) ಮಾಡುವುದು ಮತ್ತು ಪ್ರಾಣಿಯನ್ನು ಕೊಯ್ಯುವಾಗ ಅಲ್ಲಾಹೇತರರ ನಾಮೋಚ್ಚಾರಣೆ ಮಾಡುವುದು ಇವೆರಡರ ಮಧ್ಯೆ ವ್ಯತ್ಯಾಸವೇನೂ ಇರುವುದಿಲ್ಲ.

أُولَٰئِكَ الَّذِينَ اشْتَرَوُا الضَّلَالَةَ بِالْهُدَىٰ وَالْعَذَابَ بِالْمَغْفِرَةِ ۚ فَمَا أَصْبَرَهُمْ عَلَى النَّارِ ﴿١٧٦﴾

176. ಅವರು ಸನ್ಮಾರ್ಗದ ಬದಲಿಗೆ ದುರ್ಮಾರ್ಗವನ್ನೂ ಪಾಪ ಮುಕ್ತಿಯ ಬದಲಿಗೆ ಶಿಕ್ಷೆಯನ್ನೂ ಕೊಂಡುಕೊಂಡವರಾಗಿದ್ದಾರೆ. ನರಕದಲ್ಲಿ ಅವರ ಸಹನಶಕ್ತಿ ಎಷ್ಟು ಅದ್ಭುತ !

ذَٰلِكَ بِأَنَّ اللَّهَ نَزَّلَ الْكِتَابَ بِالْحَقِّ ۗ وَإِنَّ الَّذِينَ اخْتَلَفُوا فِي الْكِتَابِ لَفِي شِقَاقٍ بَعِيدٍ ﴿١٧٧﴾

177. ಅದಕ್ಕೆ (ಶಿಕ್ಷೆಗೆ) ಕಾರಣ, ಅಲ್ಲಾಹನು ಈ ಗ್ರಂಥವನ್ನು ಸತ್ಯಸಂಪೂರ್ಣವಾಗಿ ಅವತೀರ್ಣಗೊಳಿಸಿರುವನು ಎಂಬುದೇ ಆಗಿದೆ. ಈ ಗ್ರಂಥದ ಬಗ್ಗೆ ಭಿನ್ನಾಭಿಪ್ರಾಯವುಳ್ಳವರು ನಿಶ್ಚಯವಾಗಿಯೂ ಅತ್ಯಂತ ಶತ್ರುತೆಯುಳ್ಳವರಾಗಿದ್ದಾರೆ.

لَيْسَ الْبِرَّ أَنْ تُوَلُّوا وُجُوهَكُمْ قِبَلَ الْمَشْرِقِ وَالْمَغْرِبِ وَلَٰكِنَّ الْبِرَّ مَنْ آمَنَ بِاللَّهِ وَالْيَوْمِ الْآخِرِ وَالْمَلَائِكَةِ وَالْكِتَابِ وَالنَّبِيِّينَ وَآتَى الْمَالَ عَلَىٰ حُبِّهِ ذَوِي الْقُرْبَىٰ وَالْيَتَامَىٰ وَالْمَسَاكِينَ وَابْنَ السَّبِيلِ وَالسَّائِلِينَ وَفِي الرِّقَابِ وَأَقَامَ الصَّلَاةَ وَآتَى الزَّكَاةَ وَالْمُوفُونَ بِعَهْدِهِمْ إِذَا عَاهَدُوا ۖ وَالصَّابِرِينَ فِي الْبَأْسَاءِ وَالضَّرَّاءِ وَحِينَ الْبَأْسِ ۗ أُولَٰئِكَ الَّذِينَ صَدَقُوا ۖ وَأُولَٰئِكَ هُمُ الْمُتَّقُونَ ﴿١٧٨﴾

178. ನಿಮ್ಮ ಮುಖಗಳನ್ನು ಪೂರ್ವಕ್ಕೆ ಮತ್ತು ಪಶ್ಚಿಮಕ್ಕೆ ತಿರುಗಿಸುವುದರಲ್ಲಿ ಪುಣ್ಯವೇನೂ ಇಲ್ಲ. ಆದರೆ ಅಲ್ಲಾಹನಲ್ಲಿ, ಅಂತ್ಯದಿನದಲ್ಲಿ, ದೇವದೂತರಲ್ಲಿ, (ಅಲ್ಲಾಹನ) ಗ್ರಂಥದಲ್ಲಿ ಮತ್ತು ಪ್ರವಾದಿಗಳಲ್ಲಿ ವಿಶ್ವಾಸವಿಡುವವರೂ ಅವನ ಮೇಲಿನ ಪ್ರೀತಿಯಿಂದ ತನ್ನ ಧನವನ್ನು ನಿಕಟ ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ, ಪಥಿಕರಿಗೆ, ಸಹಾಯಾರ್ಥಿಗಳಿಗೆ ಮತ್ತು ದಾಸ್ಯ ವಿಮೋಚನೆಗೆ ವ್ಯಯಿಸುವವರೂ ನಮಾಝನ್ನು ಸ್ಥಿರಗೊಳಿಸುವವರು ಮತ್ತು ಝಕಾತ್ ನೀಡುವವರೂ ಯಾವುದಾದರೂ ಕರಾರು ಮಾಡಿದರೆ ಆ ಕರಾರನ್ನು ಪಾಲಿಸುವವರೂ ದಾರಿದ್ರ್ಯಾವಸ್ಥೆಯಲ್ಲಿ ಮತ್ತು ಸಂಕಟಾವಸ್ಥೆಯಲ್ಲಿ ಸಹನೆ ತೋರ್ಪಡಿಸುವವರೂ ಯುದ್ಧಕಾಲದಲ್ಲಿ ಸ್ಥೈರ್ಯ ತೋರಿಸುವವರೂ ನಿಜವಾದ ಪುಣ್ಯವಂತರಾಗಿದ್ದಾರೆ. ಅವರೇ ಸತ್ಯಪಾಲಕರು; ಅವರೇ ಯಥಾರ್ಥ ದೇವಭಕ್ತರು.

يَا أَيُّهَا الَّذِينَ آمَنُوا كُتِبَ عَلَيْكُمُ الْقِصَاصُ فِي الْقَتْلَى ۖ الْحُرُّ بِالْحُرِّ وَالْعَبْدُ بِالْعَبْدِ وَالْأُنْثَىٰ بِالْأُنْثَىٰ ۚ فَمَنْ عُفِيَ لَهُ مِنْ أَخِيهِ شَيْءٌ فَاتِّبَاعٌ بِالْمَعْرُوفِ وَأَدَاءٌ إِلَيْهِ بِإِحْسَانٍ ۗ ذَٰلِكَ تَخْفِيفٌ مِنْ رَبِّكُمْ وَرَحْمَةٌ ۗ فَمَنِ اعْتَدَىٰ بَعْدَ ذَٰلِكَ فَلَهُ عَذَابٌ أَلِيمٌ ﴿١٧٩﴾

179. ಓ ವಿಶ್ವಾಸಿಗಳೇ, ಹತ್ಯೆಗೀಡಾದವರ ಬಗ್ಗೆ ತತ್ತುಲ್ಯವಾದ ಪ್ರತಿಕ್ರಿಯಾ ದಂಡ ಸಂಹಿತೆಯನ್ನು ನಿಮಗೆ ವಿಧಿಸಲಾಗಿದೆ. ಘಾತಕನು ಸ್ವತಂತ್ರನಾಗಿದ್ದರೆ ಅದೇ ಸ್ವತಂತ್ರನು, ಘಾತಕನು ಗುಲಾಮನಾಗಿದ್ದರೆ ಅದೇ ಗುಲಾಮನು, ಘಾತಕಿ ಸ್ತ್ರೀಯಾಗಿದ್ದರೆ ಅದೇ ಸ್ತ್ರೀ (ಶಿಕ್ಷೆಗೆ ಗುರಿಯಾಗ ಬೇಕಾಗಿದೆ). ಆದರೆ (ಕೊಲ್ಲಲ್ಪಟ್ಟವನ) ಸಹೋದರನಿಂದ (ಕೊಲೆ ಮಾಡಿದ) ಒಬ್ಬನಿಗೆ ಕ್ಷಮೆ ನೀಡಲಾಗುವುದಾದರೆ ನ್ಯಾಯಯುತವಾದ ರೀತಿಯಲ್ಲಿ (ಪರಿಹಾರ ಕ್ರಮವನ್ನು) ಅಂಗೀಕರಿಸಿ ಆತನಿಗೆ (ಕ್ಷಮೆ ನೀಡಿದವನಿಗೆ) ಉತ್ತಮ ರೀತಿಯಲ್ಲಿ ಪರಿಹಾರವನ್ನು ನೀಡಬೇಕಾಗಿದೆ. ಇದು ನಿಮ್ಮ ಪ್ರಭುವಿನಿಂದ ಒಂದು ಲಘೂಕರಣ ಮತ್ತು ಕರುಣೆಯಾಗಿದೆ. ಆದರೆ ಬಳಿಕ ಯಾವಾನಾದರೂ ನಿಯಮೋಲ್ಲಂಘನ ಮಾಡುವುದಾದರೆ ಅವನಿಗೆ ಕಠಿಣ ಶಿಕ್ಷೆಯಿದೆ.





وَلَكُمْ فِي الْقِصَاصِ حَيَاةٌ يَا أُولِي الْأَلْبَابِ لَعَلَّكُمْ تَتَّقُونَ ﴿١٨٠﴾

180. ಓ ಬುದ್ಧಿಶಾಲಿಗಳೇ, (ತುಲ್ಯವಾದ) ಪ್ರತಿಕ್ರಿಯಾ ದಂಡ ನಿಯಮದಲ್ಲಿ ನಿಮಗೆ ಜೀವನವಿದೆ.[48] ಇದು ನೀವು ರಕ್ಷೆ ಹೊಂದಲಿಕ್ಕೋಸ್ಕರವಿದೆ.

كُتِبَ عَلَيْكُمْ إِذَا حَضَرَ أَحَدَكُمُ الْمَوْتُ إِنْ تَرَكَ خَيْرًا الْوَصِيَّةُ لِلْوَالِدَيْنِ وَالْأَقْرَبِينَ بِالْمَعْرُوفِ ۖ حَقًّا عَلَى الْمُتَّقِينَ ﴿١٨١﴾

181. ನಿಮ್ಮಲ್ಲಿ ಯಾರಿಗಾದರೂ ಮರಣ ಸಮೀಪಿಸಿದರೆ, ಆತನು ಧಾರಾಳ ಸಂಪತ್ತನ್ನು ಹಿಂದೆ ಬಿಟ್ಟು ಹೋಗುವವನಾದರೆ, ಮಾತಾಪಿತರಿಗೂ ನಿಕಟ ಬಂಧುಗಳಿಗೂ ಯಥೋಚಿತವಾಗಿ ಪಾಲು ದೊರೆಯುವಂತೆ ಉಯಿಲು ಮಾಡಬೇಕಾದುದು[49] ನಿಮಗೆ ಶಾಸನ ಬದ್ಧಗೊಳಿಸಲಾಗಿದೆ. ಇದು ಭಯ ಭಕ್ತಿಯುಳ್ಳವರ ಮೇಲೆ ಒಂದು ಹೊಣೆಗಾರಿಕೆಯಾಗಿದೆ.

فَمَنْ بَدَّلَهُ بَعْدَمَا سَمِعَهُ فَإِنَّمَا إِثْمُهُ عَلَى الَّذِينَ يُبَدِّلُونَهُ ۚ إِنَّ اللَّهَ سَمِيعٌ عَلِيمٌ ﴿١٨٢﴾

182. ಆದರೆ ಅದನ್ನು (ಉಯಿಲನ್ನು) ಆಲಿಸಿದ ನಂತರ ಯಾರಾದರೂ ಅದರಲ್ಲಿ ವ್ಯತ್ಯಾಸವನ್ನುಂಟು ಮಾಡುವುದಾದರೆ, ಅದರ ಪಾಪ ಹಾಗೆ ವ್ಯತ್ಯಾಸ ಮಾಡಿದವರ ಮೇಲಿದೆ. ಖಂಡಿತವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

48. ಪ್ರತಿಕ್ರಿಯಾ ದಂಡ ನಿಯಮದ ಫಲವಾಗಿ ಅನಗತ್ಯ ಕೊಲೆ, ರಕ್ತಪಾತ ಇತ್ಯಾದಿ ಕಡಿಮೆಯಾಗಿ ಮನುಷ್ಯನು ಸುಧಾರಣೆಗೊಳ್ಳುತ್ತಾನೆ.

49. ಹೆಚ್ಚಿನ ಹೃದಯ ಸಂಬಂಧ ಮಕ್ಕಳೊಂದಿಗಿದ್ದರೂ ಇಲ್ಲಿ ಮಾತಾಪಿತರಿಗೂ ಸಂಬಂಧಿಕರಿಗೂ ಉಯಿಲು ಮಾಡಬೇಕೆಂದು ಹೇಳಲಾಗಿದೆ. ಆದ್ದರಿಂದ ಇದು ಸಾಮಾನ್ಯ ರೀತಿಯಲ್ಲಿರುವ ಸಂಪತ್ತು ವಿತರಣೆಯ ಕುರಿತಾದ ಉಯಿಲಲ್ಲ, ಕೆಲವು ವಿಶೇಷ ಸಂದರ್ಭಗಳಲ್ಲಿ ಮಾಡಬೇಕಾದ ಉಯಿಲಿನ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆಯೆಂದು ಮನಗಾಣಬಹುದು. ತನ್ನ ಉತ್ತರಾಧಿಕಾರಿಗಳಿಗೆ ಹೇಗೆ ಸಂಪತ್ತು ವಿತರಿಸಲ್ಪಡಬೇಕೆಂದು 4:12,13 ವಚನಗಳಲ್ಲಿ ವಿವರಿಸಲಾಗಿದೆ. (ಹೆಚ್ಚಿನ ವಿವರಕ್ಕೆ ತಫ್‌ಸೀರ್ ಕಬೀರ್ ನೋಡಿರಿ)

**183.** ಇನ್ನು, ಉಯಿಲು ಮಾಡುವವನಿಂದ ಏನಾದರೂ ಪಕ್ಷಪಾತ ಅಥವಾ ಅನ್ಯಾಯ ಉಂಟಾಗುವುದೆಂದು ಯಾವನಿಗಾದರೂ ಭಯವಿದ್ದು, ತನ್ನಿಮಿತ್ತ ಅವರೆಡೆಯಲ್ಲಿ ಸಮಜಾಯಿಷಿ ಮಾಡುವುದಾದರೆ, ಅವನ ಮೇಲೆ ಪಾಪವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

فَمَنْ خَافَ مِنْ مُّوْصٍ جَنَفًا اَوْ اِثْمًا
فَاَصْلَحَ بَيْنَهُمْ فَلَآ اِثْمَ عَلَيْهِ ؕ اِنَّ اللّٰهَ
غَفُوْرٌ رَّحِيْمٌ ﴿١٨٢﴾

**184.** ಓ ವಿಶ್ವಾಸಿಗಳೇ, ನಿಮ್ಮ ಪೂರ್ವಜರಿಗೆ ವಿಧಿಸಲಾದಂತೆ ನಿಮಗೆ ಸಹ ಉಪವಾಸ ವ್ರತವನ್ನು ವಿಧಿಸಲಾಗಿದೆ - ನೀವು (ನೈತಿಕ ಮತ್ತು ಆಧ್ಯಾತ್ಮಿಕ ನ್ಯೂನತೆಗಳಿಂದ ಸುರಕ್ಷಿತ ರಾಗುವಂತೆ) ದೋಷಬಾಧೆಯ ಬಗ್ಗೆ ಜಾಗರೂಕರಾಗಲಿಕ್ಕೋಸ್ಕರ.

يٰۤاَيُّهَا الَّذِيْنَ اٰمَنُوْا كُتِبَ عَلَيْكُمُ
الصِّيَامُ كَمَا كُتِبَ عَلَى الَّذِيْنَ مِنْ قَبْلِكُمْ
لَعَلَّكُمْ تَتَّقُوْنَ ﴿١٨٣﴾

**185.** (ಈ ಉಪವಾಸವನ್ನು) ಕೆಲವು ನಿರ್ದಿಷ್ಟ ದಿನಗಳಲ್ಲಿ ಅನುಷ್ಠಿಸಬೇಕಾಗಿದೆ. ಆದರೆ ನಿಮ್ಮಲ್ಲಿ ಯಾರಾದರೂ ರೋಗಿ ಅಥವಾ ಯಾತ್ರಿಕನಾಗಿದ್ದರೆ ಬೇರೆ ದಿನಗಳಲ್ಲಿ ಸಂಖ್ಯೆಯನ್ನು ಪೂರ್ಣಗೊಳಿಸಲಿ. (ಉಪವಾಸ ಮಾಡಲು ದೈಹಿಕ ನಿಶ್ಶಕ್ತಿಯಿದ್ದು ಆರ್ಥಿಕವಾಗಿ) ಸಮರ್ಥರಿದ್ದರೆ[50] ಅವರು ಪ್ರಾಯಶ್ಚಿತ್ತವಾಗಿ ಒಬ್ಬ ನಿರ್ಗತಿಕನಿಗೆ ಆಹಾರವನ್ನು ನೀಡಬೇಕಾಗಿದೆ. ಇನ್ನು ಯಾರಾದರೂ ಪೂರ್ಣವಾದ ಅನುಸರಣೆಯನ್ನು ತೋರಿಸುತ್ತಾ ಏನಾದರೂ ಒಳಿತನ್ನು ಮಾಡುವುದಾದರೆ ಅದು ಆತನಿಗೆ ಉತ್ತಮ. ನೀವು ಗ್ರಹಿಸುವಿರಾದರೆ ವ್ರತಾನುಷ್ಠಾನ ನಿಮಗೆ ಗುಣಕರವಾಗಿದೆ.

اَيَّامًا مَّعْدُوْدٰتٍ ؕ فَمَنْ كَانَ مِنْكُمْ
مَّرِيْضًا اَوْ عَلٰى سَفَرٍ فَعِدَّةٌ مِّنْ اَيَّامٍ اُخَرَ ؕ
وَعَلَى الَّذِيْنَ يُطِيْقُوْنَهٗ فِدْيَةٌ طَعَامُ
مِسْكِيْنٍ ؕ فَمَنْ تَطَوَّعَ خَيْرًا فَهُوَ خَيْرٌ
لَّهٗ ؕ وَاَنْ تَصُوْمُوْا خَيْرٌ لَّكُمْ اِنْ كُنْتُمْ
تَعْلَمُوْنَ ﴿١٨٤﴾

**186.** ಸಕಲ ಮಾನವರಿಗೆ ಸನ್ಮಾರ್ಗ ದರ್ಶಕವಾದ, ಮಾರ್ಗದರ್ಶನ ಮತ್ತು ಸತ್ಯಾಸತ್ಯ ವಿವೇಚನೆಯ ಸ್ಪಷ್ಟವಾದ ಸಾಕ್ಷ್ಯಗಳಿಂದ ಕೂಡಿದ ಖುರ್‌ಆನ್ ಅವತೀರ್ಣವಾದ ಮಾಸವಾಗಿದೆ ರಮಝಾನ್. ಆದ್ದರಿಂದ ನಿಮ್ಮ ಪೈಕಿ ಯಾರಾದರೂ ಈ ಮಾಸವನ್ನು ಪಡೆದರೆ ಆತನು ಅದರಲ್ಲಿ ಉಪವಾಸ ಮಾಡಲಿ. ಆದರೆ

شَهْرُ رَمَضَانَ الَّذِيْۤ اُنْزِلَ فِيْهِ الْقُرْاٰنُ
هُدًى لِّلنَّاسِ وَبَيِّنٰتٍ مِّنَ الْهُدٰى وَ
الْفُرْقَانِ ۚ فَمَنْ شَهِدَ مِنْكُمُ الشَّهْرَ
فَلْيَصُمْهُ ؕ وَمَنْ كَانَ مَرِيْضًا اَوْ عَلٰى سَفَرٍ
فَعِدَّةٌ مِّنْ اَيَّامٍ اُخَرَ ؕ يُرِيْدُ اللّٰهُ بِكُمُ

50. ಈ ವಚನವನ್ನು ಹಲವು ಮಹಾತ್ಮರುಗಳು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ (ಹೆಚ್ಚಿನ ವಿವರಕ್ಕೆ ತಫ್‌ಸೀರ್ ಕಬೀರ್ ನೋಡಿರಿ)





ಯಾರಾದರೂ ರೋಗಿ ಅಥವಾ ಪ್ರಯಾಣಿಕನಾಗಿದ್ದಲ್ಲಿ ಬೇರೆ ದಿನಗಳಲ್ಲಿ ಆ ಸಂಖ್ಯೆಯನ್ನು ಪೂರ್ತಿಗೊಳಿಸಲಿ. ಅಲ್ಲಾಹನು ನಿಮಗೆ ಸೌಲಭ್ಯವನ್ನು ಇಚ್ಛಿಸುತ್ತಾನೆ; ನಿಮಗೆ ಕಷ್ಟ ಕೊಡಲು ಇಚ್ಛಿಸುವುದಿಲ್ಲ. (ಇದು) ನೀವು ಸಂಖ್ಯೆಯನ್ನು ಪೂರ್ಣಗೊಳಿಸಲಿಕ್ಕೂ ನಿಮಗೆ ಮಾರ್ಗದರ್ಶನ ಮಾಡಿದುದಕ್ಕಾಗಿ ಅಲ್ಲಾಹನ ಸ್ತುತಿ ಕೀರ್ತನ ಮಾಡಲಿಕ್ಕೂ ನೀವು ಕೃತಜ್ಞತೆ ಸೂಚಸಲಿಕ್ಕೂ ಆಗಿದೆ.

الْيُسْرَ وَلَا يُرِيْدُ بِكُمُ الْعُسْرَ ۫ وَ
لِتُكْمِلُوا الْعِدَّةَ وَلِتُكَبِّرُوا اللّٰهَ عَلٰى
مَا هَدٰىكُمْ وَلَعَلَّكُمْ تَشْكُرُوْنَ ﴿١٨٥﴾

**187.** (ಓ ಪ್ರವಾದಿ,) ನನ್ನ ಬಗ್ಗೆ ನನ್ನ ದಾಸರು ನಿನ್ನೊಡನೆ ಕೇಳಿದರೆ (ಹೇಳು) - ಖಂಡಿತವಾಗಿಯೂ ನಾನು ಸಮೀಪದಲ್ಲೇ ಇದ್ದೇನೆ. ನನ್ನನ್ನು ಕರೆದು ಪ್ರಾರ್ಥಿಸುವಾಗ ಪ್ರಾರ್ಥಿಸುವವನ ಪ್ರಾರ್ಥನೆಗೆ ನಾನು ಉತ್ತರ ನೀಡುವೆನು. ಆದ್ದರಿಂದ ಅವರು ಸತ್ಪಥವನ್ನು ಪಡೆಯಲಿಕ್ಕಾಗಿ ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ನಂಬಿಕೆ ಇರಿಸಲಿ.

وَاِذَا سَاَلَكَ عِبَادِيْ عَنِّيْ فَاِنِّيْ
قَرِيْبٌ ؕ اُجِيْبُ دَعْوَةَ الدَّاعِ اِذَا
دَعَانِ ۙ فَلْيَسْتَجِيْبُوْا لِيْ وَلْيُؤْمِنُوْا بِيْ
لَعَلَّهُمْ يَرْشُدُوْنَ ﴿١٨٦﴾

**188.** ವ್ರತರಾತ್ರಿಗಳಲ್ಲಿ ನಿಮ್ಮ ಪತ್ನಿಯರ ಬಳಿಗೆ (ಸಂಸರ್ಗಕ್ಕಾಗಿ) ಹೋಗಲು ನಿಮಗೆ ಅನುಮತಿ ಇದೆ. ಅವರು ನಿಮಗೆ ಒಂದು ಉಡಿಗೆ;[51] ನೀವು ಸಹ ಅವರಿಗೆ ಒಂದು ಉಡಿಗೆಯಾಗಿರುವಿರಿ. ನೀವು ನಿಮ್ಮ ಶರೀರದ ಮೇಲೆ ಅನ್ಯಾಯ ಮಾಡುತ್ತಿದ್ದೀರೆಂದು ಅಲ್ಲಾಹನು ಬಲ್ಲನು.[52] ಆದ್ದರಿಂದ ಅವನು ನಿಮ್ಮ ಮೇಲೆ ದಯದೋರಿ ನಿಮ್ಮ ತಿದ್ದುಪಾಟು ಮಾಡಿರುವನು. ಆದುದರಿಂದ ಇನ್ನು ಮೇಲೆ ನೀವು ಅವರೊಂದಿಗೆ ಸಂಸರ್ಗ ಮಾಡುವುದಲ್ಲದೆ ಅಲ್ಲಾಹನು ನಿಮಗೆ ವಿಧಿಸಿದುದನ್ನು ಪಡೆಯಲೂ ಪ್ರಯತ್ನಿಸಿರಿ. ಪ್ರಭಾತದ

اُحِلَّ لَكُمْ لَيْلَةَ الصِّيَامِ الرَّفَثُ اِلٰى
نِسَآئِكُمْ ؕ هُنَّ لِبَاسٌ لَّكُمْ وَاَنْتُمْ
لِبَاسٌ لَّهُنَّ ؕ عَلِمَ اللّٰهُ اَنَّكُمْ كُنْتُمْ
تَخْتَانُوْنَ اَنْفُسَكُمْ فَتَابَ عَلَيْكُمْ وَعَفَا
عَنْكُمْ ۚ فَالْـٰٔنَ بَاشِرُوْهُنَّ وَابْتَغُوْا مَا
كَتَبَ اللّٰهُ لَكُمْ ۪ وَكُلُوْا وَاشْرَبُوْا
حَتّٰى يَتَبَيَّنَ لَكُمُ الْخَيْطُ الْاَبْيَضُ مِنَ
الْخَيْطِ الْاَسْوَدِ مِنَ الْفَجْرِ ۪ ثُمَّ اَتِمُّوا

51. ಉಡಿಗೆ ಮನುಷ್ಯನಿಗೆ, ನಗ್ನತೆಯನ್ನು ಮುಚ್ಚಲಿಕ್ಕೂ ಶೀತೋಷ್ಣತೆಯನ್ನು ತಡೆಯಲಿಕ್ಕೂ ಉಪಯುಕ್ತವಾಗುವಂತೆಯೇ ವೈವಾಹಿಕ ಜೀವನದಲ್ಲಿ ಪ್ರವೇಶಿಸುವುದರಿಂದ ಪತಿ-ಪತ್ನಿಯರು ಪರಸ್ಪರ ನ್ಯೂನತೆಗಳನ್ನು ಮರೆಮಾಚಲಿಕ್ಕೂ ಅಲಂಕಾರಕ್ಕೂ ಸಂರಕ್ಷಣೆಗೂ ಸಹಾಯಕಾರಿಯಾಗಿರುತ್ತಾರೆ.

52. ವ್ರತಾನುಷ್ಠಾನದ ರಾತ್ರಿಗಳಲ್ಲಿ ಪತ್ನಿಯರೊಂದಿಗೆ ಸಂಸರ್ಗ ಮಾಡುವುದು ಸರಿಯಲ್ಲವೆಂದು ಪೈಗಂಬರರ ಅನುಯಾಯಿಗಳು ಭಾವಿಸಿಕೊಂಡಿದ್ದರು. ಖುರ್‌ಆನಿನ ಈ ವಚನದಿಂದ ಅವರ ಕಲ್ಪನೆಯನ್ನು ತಿದ್ದಲಾಗಿದೆ.

ಬಿಳಿ ನೂಲು (ರಾತ್ರಿಯ) ಕಪ್ಪು ನೂಲಿನಿಂದ ಬೇರ್ಪಟ್ಟು ನಿಮಗೆ ಕಾಣುವ ತನಕ ನೀವು ತಿನ್ನಲೂ ಕುಡಿಯಲೂ ಬಹುದು. ಆ ಬಳಿಕ ರಾತ್ರಿಯಾಗುವ ವರೆಗೆ ನೀವು ವ್ರತವನ್ನು ಪೂರ್ಣಗೊಳಿಸಿರಿ. (ಆದರೆ) ನೀವು ಮಸ್ಜಿದ್‌ಗಳಲ್ಲಿ 'ಇಅ್‌ತಿಕಾಫ್' (ದೇವೋಪಾಸನೆ)ಗಾಗಿ ಕುಳಿತಿರುವವರಾಗಿದ್ದರೆ ಅವರೊಡನೆ (ಪತ್ನಿಯರೊಡನೆ) ಸಂಸರ್ಗ ಮಾಡಬಾರದು. ಇವು ಅಲ್ಲಾಹನ ನಿಯಮ ಪರಿಮಿತಿಗಳಾಗಿವೆ. ಆದ್ದರಿಂದ ನೀವು ಅವುಗಳ ಸಮೀಪ (ನಿಯಮ ಪರಿಮಿತಿಗಳ ಅಂಚಿಗೆ) ಹೋಗಬೇಡಿರಿ. ಈ ಪ್ರಕಾರ ಅಲ್ಲಾಹನು ಮನುಷ್ಯರಿಗೆ ಅವನ ಆಜ್ಞೆಗಳನ್ನು ವಿವರಿಸಿಕೊಡುತ್ತಾನೆ - ಅವರು ಕೆಡುಕುಗಳಿಂದ ಸುರಕ್ಷಿತರಾಗಲಿಕ್ಕಾಗಿ.

الصِّيَامَ إِلَى الَّيْلِ وَلَا تُبَاشِرُوهُنَّ وَأَنْتُمْ عَاكِفُونَ فِي الْمَسَاجِدِ تِلْكَ حُدُودُ اللَّهِ فَلَا تَقْرَبُوهَا كَذَٰلِكَ يُبَيِّنُ اللَّهُ آيَاتِهِ لِلنَّاسِ لَعَلَّهُمْ يَتَّقُونَ ﴿١٨٧﴾

189. ನಿಮ್ಮ ಸಂಪತ್ತನ್ನು[52A] ನೀವು ಅನ್ಯಾಯವಾಗಿ ಪರಸ್ಪರ (ಅಪಹರಿಸಿ) ತಿನ್ನಬಾರದು. ತಿಳಿದುಕೊಂಡು ನೀವು ಜನರ ಸಂಪತ್ತಿನಿಂದ ಒಂದಂಶವನ್ನು ಅನ್ಯಾಯವಾಗಿ ತಿನ್ನಲಿಕ್ಕಾಗಿ ಅದನ್ನು ಅಧಿಕಾರಿಗಳ ಬಳಿಗೆ ಕೊಂಡೊಯ್ಯ ಬೇಡಿರಿ.

وَلَا تَأْكُلُوا أَمْوَالَكُمْ بَيْنَكُمْ بِالْبَاطِلِ وَتُدْلُوا بِهَا إِلَى الْحُكَّامِ لِتَأْكُلُوا فَرِيقًا مِنْ أَمْوَالِ النَّاسِ بِالْإِثْمِ وَأَنْتُمْ تَعْلَمُونَ ﴿١٨٨﴾

190. ಚಂದ್ರನ (ಅಮವಾಸ್ಯೆ - ಹುಣ್ಣಿಮೆ) ಕುರಿತು ಅವರು ನಿನ್ನೊಡನೆ ಕೇಳುತ್ತಾರೆ. ಹೇಳು - ಅವು ಜನರಿಗೆ ಸಾಮಾನ್ಯವಾಗಿಯೂ ಹಜ್ಜ್‌ಗೂ ಇರುವ ಕಾಲ ಸೂಚಕಗಳಾಗಿವೆ. ನಿಮ್ಮ ಮನೆಗಳನ್ನು ಹಿಂಭಾಗದಿಂದ ಪ್ರವೇಶಿಸುವುದು[53] ಸತ್ಕರ್ಮವಲ್ಲ. ಅಲ್ಲಾಹನ ಭಯವಿರಿಸಿಕೊಂಡು ಕೆಡುಕುಗಳಿಂದ ದೂರವಿರುವವನೇ (ಯಥಾರ್ಥ) ಸತ್ಕರ್ಮಿ. ನೀವು ಮನೆಗಳನ್ನು ಅವುಗಳ ಬಾಗಿಲುಗಳ ಮೂಲಕ ಪ್ರವೇಶಿಸಿರಿ; ಅಲ್ಲಾಹನ ಭಯವಿರಿಸಿಕೊಳ್ಳಿರಿ - ನೀವು ವಿಜಯಶಾಲಿಗಳಾಗಲಿಕ್ಕೆ.

يَسْأَلُونَكَ عَنِ الْأَهِلَّةِ قُلْ هِيَ مَوَاقِيتُ لِلنَّاسِ وَالْحَجِّ وَلَيْسَ الْبِرُّ بِأَنْ تَأْتُوا الْبُيُوتَ مِنْ ظُهُورِهَا وَلَٰكِنَّ الْبِرَّ مَنِ اتَّقَىٰ وَأْتُوا الْبُيُوتَ مِنْ أَبْوَابِهَا وَاتَّقُوا اللَّهَ لَعَلَّكُمْ تُفْلِحُونَ ﴿١٨٩﴾

52A. ನಿಮ್ಮ ಸಂಪತ್ತು: 'ನಿಮ್ಮ' ಎಂಬ ಪದಪ್ರಯೋಗ ಮನುಷ್ಯನು ಸಾಮೂಹಿಕ ಜೀವಿಯೆಂಬುದನ್ನು ಒತ್ತಿ ಹೇಳುವುದಕ್ಕೋಸ್ಕರ ವಾಗಿದೆ. ಸಾರ್ವಜನಿಕರ, ತನ್ನ ಸಮುದಾಯದವರ, ತನ್ನ ದೇಶದವರ ಸಂಪತ್ತನ್ನು ತನ್ನ ಸಂಪತ್ತೆಂದೇ ಭಾವಿಸಬೇಕೆಂಬ ಪಾಠ 'ನಿಮ್ಮ' ಎಂಬ ಪದಪ್ರಯೋಗ ಕಲಿಸಿ ಕೊಡುತ್ತದೆ. 2 : 85, 86 ವಚನಗಳಲ್ಲಿ ಸಹ ಈ ರೀತಿಯ ಪ್ರಯೋಗಗಳಿವೆ.

53. ಹಜ್ಜ್ ಯಾತ್ರೆಗೆ ಹೊರಟ ಬಳಿಕ ವಾಪಾಸು ಮನೆಗೆ ಬರುವ ಏನಾದರೂ ಅಗತ್ಯಬಿದ್ದರೆ ಹಿಂದಿನಿಂದ ಗೋಡೆ ಹಾರಿ ಮನೆಯನ್ನು ಪ್ರವೇಶಿಸುವುದು ಅರಬರೆಡೆಯಲ್ಲಿ ರೂಢಿಯಲ್ಲಿತ್ತು. ಖುರ್‌ಆನಿನ ಈ ವಚನದಲ್ಲಿ ಅದನ್ನು ಖಂಡಿಸಲಾಗಿದೆ.





191. ನಿಮ್ಮ ವಿರುದ್ಧ ಯುದ್ಧಮಾಡುವವರೊಡನೆ ಅಲ್ಲಾಹನ ಮಾರ್ಗದಲ್ಲಿ ನೀವು ಸಹ ಯುದ್ಧಮಾಡಿರಿ. ಆದರೆ ಅತಿಕ್ರಮಣ ಮಾಡಬೇಡಿರಿ. ಅತಿಕ್ರಮಣ ಮಾಡುವವರನ್ನು ಅಲ್ಲಾಹನು ಪ್ರೀತಿಸುವುದಿಲ್ಲ.

وَقَاتِلُوا فِي سَبِيلِ اللَّهِ الَّذِينَ يُقَاتِلُونَكُمْ وَلَا تَعْتَدُوا إِنَّ اللَّهَ لَا يُحِبُّ الْمُعْتَدِينَ ﴿١٩٠﴾

192. ಅವರನ್ನು (ನಿಮ್ಮೊಡನೆ ಯುದ್ಧ ಮಾಡುವವರನ್ನು) ನೀವು ಕಂಡಲ್ಲಿ ಕೊಲ್ಲಿರಿ. ನಿಮ್ಮನ್ನು ಅವರು ಹೊರ ಅಟ್ಟಿದಲ್ಲಿಂದ ನೀವು ಸಹ ಅವರನ್ನು ಹೊರ ಅಟ್ಟಿರಿ. 'ಫಿತ್ನ' (ಪಿತೂರಿ, ಗಲಭೆ) ಕೊಲೆಗಿಂತ ಕಠಿಣ (ಕೇಡುಂಟುಮಾಡುತ್ತದೆ). ಮಸ್ಜಿದುಲ್ ಹರಾಮಿನ ಸಮೀಪದಲ್ಲಿ ನೀವು ಅವರೊಡನೆ ಯುದ್ಧ ಮಾಡ ಬಾರದು - ಅಲ್ಲಿ ಅವರು ನಿಮ್ಮೊಡನೆ ಯುದ್ಧ ಪ್ರಾರಂಭಿಸಿದರೆ ಹೊರತು. (ಅಲ್ಲಿ ಸಹ) ಅವರು ನಿಮ್ಮೊಡನೆ ಯುದ್ಧ ಮಾಡಿದರೆ ನೀವು ಅವರನ್ನು ವಧಿಸಿರಿ. (ದುಷ್ಕರ್ಮಿಗಳಾದ) ಈ ಅವಿಶ್ವಾಸಿಗಳಿಗೆ ಇದೇ ಶಿಕ್ಷೆ.

وَاقْتُلُوهُمْ حَيْثُ ثَقِفْتُمُوهُمْ وَأَخْرِجُوهُمْ مِنْ حَيْثُ أَخْرَجُوكُمْ وَالْفِتْنَةُ أَشَدُّ مِنَ الْقَتْلِ وَلَا تُقَاتِلُوهُمْ عِنْدَ الْمَسْجِدِ الْحَرَامِ حَتَّىٰ يُقَاتِلُوكُمْ فِيهِ فَإِنْ قَاتَلُوكُمْ فَاقْتُلُوهُمْ كَذَٰلِكَ جَزَاءُ الْكَافِرِينَ ﴿١٩١﴾

193. ಇನ್ನು, ಅವರು (ಯುದ್ಧದಿಂದ) ವಿರಮಿಸಿದರೆ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯ ನಿಧಿಯೂ ಆಗಿದ್ದಾನೆ.

فَإِنِ انْتَهَوْا فَإِنَّ اللَّهَ غَفُورٌ رَحِيمٌ ﴿١٩٢﴾

194. 'ಫಿತ್ನ' ಇಲ್ಲದಂತಾಗಿ ಧರ್ಮ (ಸ್ವೀಕಾರ) ಅಲ್ಲಾಹನಿಗೋಸ್ಕರವಾಗುವ ವರೆಗೆ ನೀವು ಅವರೊಡನೆ ಯುದ್ಧ ಮಾಡಿರಿ. ಆದರೆ ಅವರು ವಿರಮಿಸಿದರೆ, (ಅರಿತು ಕೊಳ್ಳಿರಿ) ದುಷ್ಕರ್ಮಿಗಳಲ್ಲದವರ ಮೇಲೆ ಆಕ್ರಮಣ ಸಲ್ಲದು.[53A]

وَقَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ لِلَّهِ فَإِنِ انْتَهَوْا فَلَا عُدْوَانَ إِلَّا عَلَى الظَّالِمِينَ ﴿١٩٣﴾

195. ಆದರಣೀಯ ಮಾಸಕ್ಕೆ ಬದಲಾಗಿ ಆದರಣೀಯ ಮಾಸದಲ್ಲೇ ಹಾಗೂ ಆದರಣೀಯ ಕಾರ್ಯಗಳಿಗೆ ವಿರುದ್ಧವಾದವುಗಳ ಮೇಲೆ ಪ್ರತೀಕಾರ ಕ್ರಮ ಕೈಗೊಳ್ಳ ಬಹುದಾಗಿದೆ. ಆದ್ದರಿಂದ ಯಾರಾದರೂ ನಿಮ್ಮ ಮೇಲೆ ಆಕ್ರಮಣ ಮಾಡಿದರೆ, ಅವನು ಆಕ್ರಮಣ ಮಾಡಿದ

الشَّهْرُ الْحَرَامُ بِالشَّهْرِ الْحَرَامِ وَالْحُرُمَاتُ قِصَاصٌ فَمَنِ اعْتَدَىٰ عَلَيْكُمْ فَاعْتَدُوا عَلَيْهِ بِمِثْلِ مَا اعْتَدَىٰ عَلَيْكُمْ وَاتَّقُوا اللَّهَ وَاعْلَمُوا

53A. ಈ ಅಧ್ಯಾಪನೆಯ ಪ್ರಕಾರ ಆತ್ಮರಕ್ಷಣೆಗೋಸ್ಕರ ಯುದ್ಧ ಮಾಡಲಿಕ್ಕೆ ಅನುಮತಿ ಇದೆಯೆಂದೂ ಸಂಪೂರ್ಣವಾಗಿ ಧರ್ಮ ಸ್ವಾತಂತ್ರ್ಯ ಸ್ಥಾಪಿಸಲ್ಪಡುವ ವರೆಗೆ ಯುದ್ಧ ಮಾಡಬಹುದೆಂದೂ ಸ್ಪಷ್ಟವಾಗುತ್ತದೆ.

إِنَّ اللَّهَ مَعَ الْمُتَّقِينَ ﴿١٩٤﴾

ರೀತಿಯಲ್ಲೇ ನೀವು ಸಹ ಅವನ ಮೇಲೆ ಆಕ್ರಮಣ ಮಾಡಿರಿ. ಅಲ್ಲಾಹನ ಭಯವನ್ನೂ ಇರಿಸಿಕೊಳ್ಳಿರಿ. ಖಂಡಿತವಾಗಿಯೂ ಅಲ್ಲಾಹನು ತನಗೆ ಭಯಪಡುವವರ ಜೊತೆಯಲ್ಲಿದ್ದಾನೆಂದು ತಿಳಿದುಕೊಳ್ಳಿರಿ.

وَأَنفِقُوا فِي سَبِيلِ اللَّهِ وَلَا تُلْقُوا بِأَيْدِيكُمْ إِلَى التَّهْلُكَةِ ۛ وَأَحْسِنُوا ۛ إِنَّ اللَّهَ يُحِبُّ الْمُحْسِنِينَ ﴿١٩٥﴾

**196.** ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡಿರಿ. ನಿಮ್ಮ ಸ್ವಂತ ಕೈಗಳಿಂದಲೇ ನೀವು ವಿನಾಶದಲ್ಲಿ ಸಿಲುಕಿಕೊಳ್ಳಬೇಡಿರಿ. ನೀವು ಸತ್ಕಾರ್ಯವನ್ನು ಮಾಡಿರಿ. ಖಂಡಿತವಾಗಿಯೂ ಅಲ್ಲಾಹನು ಸತ್ಕಾರ್ಯ ಮಾಡುವವರನ್ನು ಇಷ್ಟಪಡುತ್ತಾನೆ.

وَأَتِمُّوا الْحَجَّ وَالْعُمْرَةَ لِلَّهِ ۚ فَإِنْ أُحْصِرْتُمْ فَمَا اسْتَيْسَرَ مِنَ الْهَدْيِ ۖ وَلَا تَحْلِقُوا رُءُوسَكُمْ حَتَّىٰ يَبْلُغَ الْهَدْيُ مَحِلَّهُ ۚ فَمَن كَانَ مِنكُم مَّرِيضًا أَوْ بِهِ أَذًى مِّن رَّأْسِهِ فَفِدْيَةٌ مِّن صِيَامٍ أَوْ صَدَقَةٍ أَوْ نُسُكٍ ۚ فَإِذَا أَمِنتُمْ فَمَن تَمَتَّعَ بِالْعُمْرَةِ إِلَى الْحَجِّ فَمَا اسْتَيْسَرَ مِنَ الْهَدْيِ ۚ فَمَن لَّمْ يَجِدْ فَصِيَامُ ثَلَاثَةِ أَيَّامٍ فِي الْحَجِّ وَسَبْعَةٍ إِذَا رَجَعْتُمْ ۗ تِلْكَ عَشَرَةٌ كَامِلَةٌ ۗ ذَٰلِكَ لِمَن لَّمْ يَكُنْ أَهْلُهُ حَاضِرِي الْمَسْجِدِ الْحَرَامِ ۚ وَاتَّقُوا اللَّهَ وَاعْلَمُوا أَنَّ اللَّهَ شَدِيدُ الْعِقَابِ ﴿١٩٦﴾

**197.** ಅಲ್ಲಾಹನಿಗೋಸ್ಕರ (ಅವನ ಪ್ರೀತಿಗೋಸ್ಕರ) ಹಜ್ಜ್ ಮತ್ತು ಉಮ್ರವನ್ನು ಪೂರ್ಣಗೊಳಿಸಿರಿ. ಆದರೆ ನೀವು ತಡೆಯಲ್ಪಟ್ಟರೆ ನಿಮಗೆ ಸಾಧ್ಯವಿರುವ ಮೃಗ ಬಲಿಯನ್ನು ಅರ್ಪಿಸಿರಿ. ಬಲಿಮೃಗ ಅದರ ಗುರಿ ಮುಟ್ಟುವ ತನಕ ನೀವು ತಲೆ ಮುಂಡನ ಮಾಡಬಾರದು. ಆದರೆ ನಿಮ್ಮ ಪೈಕಿ ರೋಗಿಯಾದವನು, ಅಥವಾ ತಲೆಯಲ್ಲಿ ಏನಾದರೂ ವ್ಯಾಧಿ ಇದ್ದವನು (ಆ ಕಾರಣದಿಂದ ತಲೆ ಬೋಳಿಸಿದರೆ) ಉಪವಾಸ ಅಥವಾ ದಾನಧರ್ಮ ಯಾ ಬಲಿದಾನ ಮೂಲಕ ಪ್ರಾಯಶ್ಚಿತ್ತ ಮಾಡಬೇಕು. ಆದರೆ ಮತ್ತೆ ನೀವು ಸುರಕ್ಷಿತ ಸ್ಥಿತಿಗೆ ಬಂದಾಗ ಹಜ್ಜ್‌ನೊಂದಿಗೆ ಉಮ್ರವನ್ನೂ ನಿರ್ವಹಿಸಿ ಪ್ರಯೋಜನ ಪಡೆಯುವುದಾದರೆ, ಸಾಧ್ಯವಿರುವ ಮೃಗಬಲಿ ಅರ್ಪಿಸಬೇಕಾಗಿದೆ. ಯಾರಿಗಾದರೂ ಮೃಗ ಬಲಿ ಅರ್ಪಿಸಲು ಸಾಧ್ಯವಾಗದಿದ್ದರೆ, ಹಜ್ಜ್ ವೇಳೆಯಲ್ಲಿ ಮೂರು ದಿನಗಳು ಮತ್ತು ಮನೆಗೆ ತಲಪಿದ ಬಳಿಕ ಏಳು ದಿನಗಳು, ಹಾಗೆ ಒಟ್ಟು ಹತ್ತು ದಿನಗಳ ಉಪವಾಸವನ್ನು ಪೂರ್ಣಗೊಳಿಸಬೇಕು. ಇದು ಮಸ್ಜಿದುಲ್ ಹರಾಮಿನ ಸಮೀಪ ಕುಟುಂಬ ಸಮೇತ ವಾಸಿಸದಿರುವವರಿಗೆ ಮಾತ್ರ ಇರುವ ಆಜ್ಞೆಯಾಗಿದೆ. ನೀವು ಅಲ್ಲಾಹನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನೆಂದು ಅರಿತುಕೊಳ್ಳಿರಿ.





الْحَجُّ أَشْهُرٌ مَّعْلُومَاتٌ ۚ فَمَن فَرَضَ فِيهِنَّ الْحَجَّ فَلَا رَفَثَ وَلَا فُسُوقَ وَلَا جِدَالَ فِي الْحَجِّ ۗ وَمَا تَفْعَلُوا مِنْ خَيْرٍ يَعْلَمْهُ اللَّهُ ۗ وَتَزَوَّدُوا فَإِنَّ خَيْرَ الزَّادِ التَّقْوَىٰ ۚ وَاتَّقُونِ يَا أُولِي الْأَلْبَابِ ﴿١٩٧﴾

**198.** ಹಜ್ಜ್ ತೀರ್ಥಾಟನೆಯ ತಿಂಗಳುಗಳು ಸುವಿದಿತ. ಅವುಗಳಲ್ಲಿ ಯಾರಾದರೂ ಹಜ್ಜ್ ತೀರ್ಥಾಟನೆ ಮಾಡಲು ನಿರ್ಧರಿಸಿದರೆ, ಪ್ರೇಮ ಸಲ್ಲಾಪವಾಗಲಿ, ಆಸಭ್ಯ ಮಾತಾಗಲಿ, ಜಗಳಾಡುವುದಾಗಲಿ ಹಜ್ಜ್ ವೇಳೆಯಲ್ಲಿ ಸಲ್ಲದು. ನೀವು ಮಾಡುವ ಯಾವುದೇ ಒಳಿತನ್ನು ಅಲ್ಲಾಹನು ಅರಿಯುತ್ತಾನೆ (ಗಮನಿಸುತ್ತಾನೆ). ಯಾತ್ರೆಗೆ ಬೇಕಾದ ಏರ್ಪಾಡುಗಳನ್ನು ಮಾಡಿಟ್ಟುಕೊಳ್ಳಿರಿ. ದಿಟವಾಗಿಯೂ ದೇವಭಕ್ತಿಯೇ ಅತ್ಯುತ್ತಮ ಯಾತ್ರೋಪಕರಣವಾಗಿದೆ. ಓ ಬುದ್ಧಿಶಾಲಿಗಳೇ, ನೀವು ನನ್ನ ಭಯ ಭಕ್ತಿ (ಮಾತ್ರ) ಇರಿಸಿಕೊಳ್ಳಿರಿ.

لَيْسَ عَلَيْكُمْ جُنَاحٌ أَن تَبْتَغُوا فَضْلًا مِّن رَّبِّكُمْ ۚ فَإِذَا أَفَضْتُم مِّنْ عَرَفَاتٍ فَاذْكُرُوا اللَّهَ عِندَ الْمَشْعَرِ الْحَرَامِ ۖ وَاذْكُرُوهُ كَمَا هَدَاكُمْ وَإِن كُنتُم مِّن قَبْلِهِ لَمِنَ الضَّالِّينَ ﴿١٩٨﴾

**199.** (ಹಜ್ಜ್ ಸಂದರ್ಭದಲ್ಲಿ) ನಿಮ್ಮ ಪ್ರಭುವಿನಿಂದ ಅನುಗ್ರಹವನ್ನು[54] ಹುಡುಕುವುದರಲ್ಲಿ ತಪ್ಪಿಲ್ಲ. ಹಾಗೆ ನೀವು ಅರಫಾತ್‌ನಿಂದ ಹಿಂತಿರುಗಿದ ನಂತರ 'ಮಶ್ ಅರುಲ್ ಹರಾಮ್'ನ ಸಮೀಪ[55] ಅಲ್ಲಾಹನನ್ನು ಸ್ಮರಿಸಿರಿ. ಅವನು ನಿಮಗೆ ಮಾರ್ಗದರ್ಶನ ಮಾಡಿದ ಪ್ರಕಾರ ಅವನನ್ನು ಸ್ಮರಿಸಿರಿ. ಇದಕ್ಕೆ ಮುಂಚೆ ನೀವು ದಾರಿತಪ್ಪಿದವರಾಗಿದ್ದಿರಷ್ಟೆ.

ثُمَّ أَفِيضُوا مِنْ حَيْثُ أَفَاضَ النَّاسُ وَاسْتَغْفِرُوا اللَّهَ ۚ إِنَّ اللَّهَ غَفُورٌ رَّحِيمٌ ﴿١٩٩﴾

**200.** ಆ ಬಳಿಕ (ಪೂರ್ವಿಕ) ಜನರು ಹಿಂತೆರಳುವ ಸ್ಥಳದಿಂದ ನೀವು ಸಹ ಹಿಂತಿರುಗಿರಿ. ಅಲ್ಲಾಹನೊಡನೆ ಕ್ಷಮೆಯಾಚನೆ ಮಾಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

فَإِذَا قَضَيْتُم مَّنَاسِكَكُمْ فَاذْكُرُوا اللَّهَ كَذِكْرِكُمْ آبَاءَكُمْ أَوْ أَشَدَّ

**201.** ಹಾಗೆ, ನಿಮ್ಮ ಆರಾಧನಾ ಕರ್ಮಗಳನ್ನು ನಿರ್ವಹಿಸಿದ ಬಳಿಕ, (ಮುಂಚೆ) ನಿಮ್ಮ ಪೂರ್ವಪಿತರನ್ನು ನೀವು ಸ್ಮರಿಸಿದಂತೆ, ಅಥವಾ ಅದಕ್ಕಿಂತ ಮಿಗಿಲಾದ

54. "ಫಝ್ಲ್" ಅಂದರೆ ಇಲ್ಲಿ "ವ್ಯಾಪಾರ"ವನ್ನು ಉದ್ದೇಶಿಸಲಾಗಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಒಂದು ರೀತಿಯಲ್ಲಿ ಇದನ್ನು ಸರಿಯೆಂದು ಒಪ್ಪಿದರೂ "ವ್ಯಾಪಾರ" ವೆಂಬ ಅರ್ಥದಲ್ಲಿ ಮಾತ್ರ ಇದನ್ನು ಪರಿಮಿತಗೊಳಿಸಲಾಗದು. ನೀವು ಈ ಮಹಾ ಸಮ್ಮೇಳನವನ್ನು ಇತರ ಕಲ್ಯಾಣ ಕಾರ್ಯಗಳಿಗಾಗಿಯೂ ಉಪಯೋಗಿಸಿರಿ ಎಂದು ಇದರ ತಾತ್ಪರ್ಯವಾಗಿದೆ.

55. ಮಶ್‌ಅರುಲ್ ಹರಾಮ್‌ನ ಸಮೀಪ ಎಂದರೆ ಅರಫಾತ್ ಮತ್ತು ಮಿನಾ ಇವೆರಡರ ಮಧ್ಯದಲ್ಲಿರುವ ಒಂದು ಪ್ರದೇಶವಾಗಿದೆ (ಮುಝ್ದಲಿಫಾ). ಅರಫಾತ್‌ನಿಂದ ಹಿಂತಿರುಗುವಾಗ ಹಾಜಿಗಳು ರಾತ್ರಿ ಅಲ್ಲಿ ತಂಗುತ್ತಾರೆ.

ಸ್ಮರಣೆಯಿಂದ ಅಲ್ಲಾಹನನ್ನು ಸ್ಮರಿಸಿರಿ. 'ನಮ್ಮ ಪ್ರಭೂ, ನಮಗೆ ಇಹಲೋಕದಲ್ಲಿ (ಸುಖ ಜೀವನ) ನೀಡು' ಎಂದು ಪ್ರಾರ್ಥಿಸುವ ಕೆಲವು ಜನರಿದ್ದಾರೆ. ಅಂಥವರಿಗೆ ಪರಲೋಕದಲ್ಲಿ ಏನೂ ಪಾಲಿಲ್ಲ.

ذِكْرًا ۗ فَمِنَ النَّاسِ مَنْ يَّقُوْلُ رَبَّنَآ
اٰتِنَا فِي الدُّنْيَا وَمَا لَهٗ فِي الْاٰخِرَةِ
مِنْ خَلَاقٍ ﴿٢٠١﴾

202. 'ನಮ್ಮ ಪ್ರಭೂ, ನಮಗೆ ಇಹಲೋಕ ಜೀವನದಲ್ಲಿ ಒಳಿತನ್ನು ಅನುಗ್ರಹಿಸು. ಹಾಗೆಯೇ ಪರಲೋಕ ಜೀವನದಲ್ಲಿ ಸಹ ಒಳಿತನ್ನು ದಯಪಾಲಿಸು ಮತ್ತು ನರಕಯಾತನೆಯಿಂದ ನಮ್ಮನ್ನು ರಕ್ಷಿಸು' ಎಂದು ಪ್ರಾರ್ಥಿಸುವವರೂ ಅವರಲ್ಲಿದ್ದಾರೆ.

وَمِنْهُمْ مَّنْ يَّقُوْلُ رَبَّنَآ اٰتِنَا فِي
الدُّنْيَا حَسَنَةً وَّفِي الْاٰخِرَةِ حَسَنَةً
وَّقِنَا عَذَابَ النَّارِ ﴿٢٠٢﴾

203. ತಾವು ಸಂಪಾದಿಸಿರುವುದರಲ್ಲಿ ಒಂದು (ದೊಡ್ಡ) ಪಾಲು ಅವರಿಗೆ ಲಭಿಸುವುದು. ಅಲ್ಲಾಹನು ಕ್ಷಿಪ್ರವಾಗಿ ಲೆಕ್ಕ ಮುಗಿಸುವವನಾಗಿದ್ದಾನೆ.[56]

اُولٰٓئِكَ لَهُمْ نَصِيْبٌ مِّمَّا كَسَبُوْا ۗ وَاللّٰهُ
سَرِيْعُ الْحِسَابِ ﴿٢٠٣﴾

204. ನಿಶ್ಚಿತ ದಿನಗಳಲ್ಲಿ ನೀವು ಅಲ್ಲಾಹನನ್ನು ಸ್ಮರಿಸಿರಿ. ಆದರೆ ಯಾವನಾದರೂ ಎರಡೇ ದಿನಗಳಲ್ಲಿ[57] (ಕರ್ಮಾನುಷ್ಠಾನಗಳನ್ನು ಪೂರ್ತಿಗೊಳಿಸಿ) ತರಾತುರಿಯಲ್ಲಿ ಹಿಂತೆರಳುವುದಾದರೆ ಆತನ ಮೇಲೆ ಪಾಪವೇನೂ ಇಲ್ಲ. ಯಾವನಾದರೂ ತಡಮಾಡಿ ಮರಳುವುದಾದರೆ ಆತನ ಮೇಲೆ ಕೂಡ ಪಾಪವಿಲ್ಲ. (ಈ ಸೌಕರ್ಯ) ಅಲ್ಲಾಹನ ಭಯಭಕ್ತಿ ಇರಿಸಿಕೊಂಡಿರುವವರಿಗೆ ಇರುತ್ತದೆ. ನೀವು ಅಲ್ಲಾಹನ ಭಯಭಕ್ತಿವುಳ್ಳವರಾಗಿರಿ. ನೀವು ಅವನ ಸನ್ನಿಧಿಯಲ್ಲಿ ಒಂದುಗೂಡಿಸಲ್ಪಡುವವರಾಗಿದ್ದೀರೆಂದು ತಿಳಿಯಿರಿ.

وَاذْكُرُوا اللّٰهَ فِيْٓ اَيَّامٍ مَّعْدُوْدٰتٍ ۗ
فَمَنْ تَعَجَّلَ فِيْ يَوْمَيْنِ فَلَآ اِثْمَ عَلَيْهِ ۚ
وَمَنْ تَاَخَّرَ فَلَآ اِثْمَ عَلَيْهِ ۙ لِمَنِ اتَّقٰى ۗ
وَاتَّقُوا اللّٰهَ وَاعْلَمُوْٓا اَنَّكُمْ اِلَيْهِ
تُحْشَرُوْنَ ﴿٢٠٤﴾

205. ಇಹಲೋಕ ಜೀವನದ ಕುರಿತು ನಿನಗೆ (ಬಹಳ) ಕೌತುಕವನ್ನುಂಟುಮಾಡುವ ಮಾತುಗಳನ್ನು ಹೇಳುತ್ತಾ

وَمِنَ النَّاسِ مَنْ يُّعْجِبُكَ قَوْلُهٗ فِي

56. ಸಜ್ಜನರಿಗೆ ಅವರ ಸತ್ಕರ್ಮಗಳ ಪ್ರತಿಫಲ ಈ ಲೋಕದಲ್ಲಿ ಸಹ ಸಿಗುತ್ತದೆ. ಪುನರುತ್ಥಾನ ದಿನದ ವರೆಗೆ ಅದನ್ನು ತಡೆದಿಡಲು ಅಲ್ಲಾಹನು ಇಚ್ಛಿಸುವುದಿಲ್ಲ. ಸ್ವರ್ಗದಲ್ಲೂ ಅಲ್ಲಾಹನು ಅವರಿಗೆ ಪ್ರತಿಫಲ ನೀಡುತ್ತಾನೆ. ಹೀಗೆ ಇಹಲೋಕಕ್ಕೂ ಪರಲೋಕಕ್ಕೂ ಈ ಪ್ರಾರ್ಥನೆ ಸ್ವೀಕಾರಾರ್ಹವಾಗುತ್ತದೆ.

57. ಮುಝ್ದಲಿಫದಿಂದ ಹಿಂತಿರುಗಿದ ನಂತರ 'ಮಿನಾ'ದಲ್ಲಿ ಮೂರು ದಿನ ತಂಗಬೇಕೆಂದು ಆದೇಶವಿದೆ. ಎರಡು ದಿನಗಳ ಬಳಿಕ ಮರಳಲೂ ಬಹುದು ಎಂದು ಇಲ್ಲಿ ಸೂಚಿಸಲಾಗಿದೆ.





(ಮಾತನಾಡುವಾಗ) ತಮ್ಮ ಹೃದಯದಲ್ಲಿರುವ ವಿಚಾರಕ್ಕೆ ಅಲ್ಲಾಹನನ್ನು ಸಾಕ್ಷಿ ಮಾಡುವವರೂ ಜನರೆಡೆಯಲ್ಲಿದ್ದಾರೆ. (ವಾಸ್ತವಿಕವಾಗಿ) ಅಂಥವನು ಬಲುದೊಡ್ಡ ಜಗಳಗಂಟನಾಗಿರುವನು.

الْحَيٰوةِ الدُّنْيَا وَيُشْهِدُ اللّٰهَ عَلٰى مَا
فِيْ قَلْبِهٖ ۙ وَهُوَ اَلَدُّ الْخِصَامِ ﴿٢٠٥﴾

206. ಅಧಿಕಾರ ಪ್ರಾಪ್ತವಾದರೆ ಭೂಮಿಯಲ್ಲಿ ಅಶಾಂತಿ ಹರಡಿಸಲಿಕ್ಕೂ ಉತ್ಪನ್ನಗಳನ್ನು ಮತ್ತು (ಮನುಷ್ಯ) ವಂಶವನ್ನು ನಾಶಪಡಿಸಲಿಕ್ಕೂ ಅವನು ಓಡಾಡುತ್ತಾನೆ. ಅಲ್ಲಾಹನಾದರೋ ಗಲಭೆಯನ್ನು ಇಷ್ಟಪಡುವುದಿಲ್ಲ.

وَاِذَا تَوَلّٰى سَعٰى فِي الْاَرْضِ لِيُفْسِدَ
فِيْهَا وَيُهْلِكَ الْحَرْثَ وَالنَّسْلَ ۗ وَاللّٰهُ
لَا يُحِبُّ الْفَسَادَ ﴿٢٠٦﴾

207. ಅಲ್ಲಾಹನ ಭಯವಿರಿಸಿಕೊಳ್ಳಲಿಕ್ಕೆ ಅವನೊಡನೆ ಹೇಳುವಾಗ ದುರಭಿಮಾನವು ಅವನನ್ನು (ಇನ್ನೂ ಹೆಚ್ಚು) ಪಾಪಕ್ಕೆ ಪ್ರಚೋದಿಸುತ್ತದೆ. ಆದ್ದರಿಂದ ನರಕವೇ ಅವನಿಗೆ ಗತಿ. ಅದು ಅತಿ ಕೆಟ್ಟ ವಾಸಸ್ಥಳವಾಗಿದೆ.

وَاِذَا قِيْلَ لَهُ اتَّقِ اللّٰهَ اَخَذَتْهُ
الْعِزَّةُ بِالْاِثْمِ فَحَسْبُهٗ جَهَنَّمُ ۗ وَ
لَبِئْسَ الْمِهَادُ ﴿٢٠٧﴾

208. ಜನರ ಪೈಕಿ ಅಲ್ಲಾಹನ ಪ್ರೀತಿಯನ್ನು ಗಳಿಸುವ ಕಾಂಕ್ಷೆಯಿಂದ ಆತ್ಮಾರ್ಪಣೆ ಮಾಡುವಂಥವನೂ ಇರುತ್ತಾನೆ. ಅಲ್ಲಾಹನು (ಅಂತಹ ತನ್ನ) ಭಕ್ತ ದಾಸರೊಡನೆ ಹೆಚ್ಚು ಕರುಣೆಯುಳ್ಳವನಾಗಿದ್ದಾನೆ.

وَمِنَ النَّاسِ مَنْ يَّشْرِيْ نَفْسَهُ
ابْتِغَآءَ مَرْضَاتِ اللّٰهِ ۗ وَاللّٰهُ رَءُوْفٌ
بِالْعِبَادِ ﴿٢٠٨﴾

209. ಓ ಸತ್ಯವಿಶ್ವಾಸಿಗಳೇ, ನೀವೆಲ್ಲರೂ ಸಂಪೂರ್ಣವಾದ ಅನುಸರಣ ವೃತ್ತದಲ್ಲಿ ಪ್ರವೇಶಿಸಿರಿ; ಶೈತಾನನ ಕಾಲ ಹೆಜ್ಜೆಗಳನ್ನು ಅನುಸರಿಸಬೇಡಿರಿ; ಖಂಡಿತವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರುವಾಗಿದ್ದಾನೆ.

يٰٓاَيُّهَا الَّذِيْنَ اٰمَنُوا ادْخُلُوْا فِي
السِّلْمِ كَآفَّةً ۖ وَلَا تَتَّبِعُوْا خُطُوٰتِ
الشَّيْطٰنِ ۗ اِنَّهٗ لَكُمْ عَدُوٌّ مُّبِيْنٌ ﴿٢٠٩﴾

210. ಸ್ಪಷ್ಟವಾದ ದೃಷ್ಟಾಂತಗಳು ನಿಮ್ಮ ಬಳಿ ಸೇರಿದ ನಂತರ ಸಹ ನೀವು ನುಣುಚಿಕೊಂಡರೆ, ತಿಳಿದುಕೊಳ್ಳಿರಿ ಅಲ್ಲಾಹನು ಪ್ರತಾಪಶಾಲಿಯೂ ಪ್ರಾಜ್ಞನೂ ಆಗಿದ್ದಾನೆ.

فَاِنْ زَلَلْتُمْ مِّنْ بَعْدِ مَا جَآءَتْكُمُ الْبَيِّنٰتُ
فَاعْلَمُوْٓا اَنَّ اللّٰهَ عَزِيْزٌ حَكِيْمٌ ﴿٢١٠﴾

211. ಮೇಘಛಾಯೆಗಳಿಂದ ಅಲ್ಲಾಹನು ಮತ್ತು ದೇವದೂತರು ಅವರ ಬಳಿಗೆ ಬಂದು ಸಂಗತಿಯನ್ನು ಇತ್ಯರ್ಥ ಮಾಡಬೇಕೆಂದಲ್ಲದೆ ಬೇರೇನನ್ನಾದರೂ ಅವರು (ಅವಿಶ್ವಾಸಿಗಳು) ನಿರೀಕ್ಷಿಸುತ್ತಾರೆಯೇ? ಎಲ್ಲಾ ಸಂಗತಿಗಳೂ ಅಲ್ಲಾಹನೆಡೆಗೆ ಮರಳಿಸಲ್ಪಡುತ್ತವೆ.

هَلْ يَنْظُرُوْنَ اِلَّآ اَنْ يَّاْتِيَهُمُ اللّٰهُ فِيْ
ظُلَلٍ مِّنَ الْغَمَامِ وَالْمَلٰٓئِكَةُ وَقُضِيَ
الْاَمْرُ ۗ وَاِلَى اللّٰهِ تُرْجَعُ الْاُمُوْرُ ﴿٢١١﴾

**212. ಇಸ್ರಾಈಲ್ ಸಂತತಿಗಳಿಗೆ ನಾವು ಎಷ್ಟೆಲ್ಲ ಸುವ್ಯಕ್ತ ದೃಷ್ಟಾಂತಗಳನ್ನು ನೀಡಿದ್ದೆವೆಂದು ಅವರೊಡನೆ ಕೇಳಿರಿ. ಅಲ್ಲಾಹನ ಅನುಗ್ರಹ ತನಗೆ ಲಭಿಸಿದ ನಂತರ** (ಈ ನಿಜಸ್ಥಿತಿಯನ್ನು ತಿಳಿದುಕೊಂಡು) **ಯಾವನಾದರೂ ಅದನ್ನು ಬದಲಾಯಿಸಿದರೆ, ಖಂಡಿತವಾಗಿಯೂ ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ.**[58]

سَلْ بَنِيٓ إِسْرَٰٓءِيلَ كَمْ ءَاتَيْنَٰهُم مِّنْ ءَايَةٍۭ بَيِّنَةٍ ۗ وَمَن يُبَدِّلْ نِعْمَةَ ٱللَّهِ مِنۢ بَعْدِ مَا جَآءَتْهُ فَإِنَّ ٱللَّهَ شَدِيدُ ٱلْعِقَابِ ﴿٢١١﴾

**213.ಅವಿಶ್ವಾಸಿಗಳಿಗೆ ಇಹಲೋಕ ಜೀವನ ಆಕರ್ಷಣೀಯವಾಗಿ ತೋರಿಸಲ್ಪಟ್ಟಿದೆ. ಸತ್ಯವಿಶ್ವಾಸಿಗಳನ್ನು ಅವರು ಅಪಹಾಸ್ಯ ಮಾಡುತ್ತಾರೆ. ಆದರೆ ದೇವಭಯವನ್ನಿರಿಸಿಕೊಂಡವರು ಪುನರುತ್ಥಾನ ದಿನದಂದು ಅವರಿಗಿಂತ ಮೇಲ್ಮಟ್ಟದಲ್ಲಿರುವರು. ಅಲ್ಲಾಹನು ತಾನಿಚ್ಛಿಸುವವರಿಗೆ ಅಗಣಿತವಾಗಿ** *ಅನುಗ್ರಹಗಳನ್ನು* **ದಯಪಾಲಿಸುತ್ತಾನೆ.**

زُيِّنَ لِلَّذِينَ كَفَرُوا۟ ٱلْحَيَوٰةُ ٱلدُّنْيَا وَيَسْخَرُونَ مِنَ ٱلَّذِينَ ءَامَنُوا۟ ۘ وَٱلَّذِينَ ٱتَّقَوْا۟ فَوْقَهُمْ يَوْمَ ٱلْقِيَٰمَةِ ۗ وَٱللَّهُ يَرْزُقُ مَن يَشَآءُ بِغَيْرِ حِسَابٍ ﴿٢١٢﴾

**214. ಮನುಷ್ಯರು ಒಂದೇ ಸಮುದಾಯದವರಾಗಿದ್ದರು.**[59] **ನಂತರ ಶುಭವಾರ್ತೆ ಅರುಹುವ ಹಾಗೂ ಮುನ್ನೆಚ್ಚರಿಕೆ ನೀಡುವ ಪ್ರವಾದಿಗಳನ್ನು ಅಲ್ಲಾಹನು ನಿಯೋಜಿಸಿದನು. ಜನರೆಡೆಯಲ್ಲಿ ಭಿನ್ನಾಭಿಪ್ರಾಯವಿರುವ ಸಂಗತಿಗಳ ಕುರಿತು ತಾನು ತೀರ್ಪು ನೀಡಲಿಕ್ಕಾಗಿ ಸತ್ಯದಿಂದೊಡಗೂಡಿದ ಗ್ರಂಥವನ್ನೂ ಅವರ ಜೊತೆಯಲ್ಲಿ ಅವನು ಅವತೀರ್ಣಗೊಳಿಸಿದನು. ಆದರೆ ಅವರಿಗೆ ಸ್ಪಷ್ಟವಾದ ದೃಷ್ಟಾಂತಗಳು ಬಂದು ಸೇರಿದ ನಂತರ ಅದು ನೀಡಲ್ಪಟ್ಟವರೇ ಅವರ ಪರಸ್ಪರ ಈರ್ಷೆ ನಿಮಿತ್ತ ಅದರಲ್ಲಿ** (ಗ್ರಂಥ'ದ ವಿಚಾರದಲ್ಲಿ) **ಭಿನ್ನಾಭಿಪ್ರಾಯ ಹೊಂದಿದರು.**[60] **ಹಾಗೆ ಯಾವ ಸತ್ಯವಿಚಾರದಲ್ಲಿ ಅವರು** (ಸತ್ಯವನ್ನು ನಿರಾಕರಿಸುವವರು) **ಭಿನ್ನಾಭಿಪ್ರಾಯ ತಾಳಿದರೋ, ಅದರೆಡೆಗೆ ಅಲ್ಲಾಹನು ತನ್ನ ಆಜ್ಞೆ ಪ್ರಕಾರ ಸತ್ಯವಿಶ್ವಾಸಿಗಳನ್ನು ಮುನ್ನಡೆಸಿದನು. ಅಲ್ಲಾಹನು ತಾನು ಇಚ್ಛಿಸುವವರಿಗೆ ಸತ್ಪಥದ ಮಾರ್ಗದರ್ಶನ ಮಾಡುತ್ತಾನೆ.**

كَانَ ٱلنَّاسُ أُمَّةً وَٰحِدَةً فَبَعَثَ ٱللَّهُ ٱلنَّبِيِّـۧنَ مُبَشِّرِينَ وَمُنذِرِينَ وَأَنزَلَ مَعَهُمُ ٱلْكِتَٰبَ بِٱلْحَقِّ لِيَحْكُمَ بَيْنَ ٱلنَّاسِ فِيمَا ٱخْتَلَفُوا۟ فِيهِ ۚ وَمَا ٱخْتَلَفَ فِيهِ إِلَّا ٱلَّذِينَ أُوتُوهُ مِنۢ بَعْدِ مَا جَآءَتْهُمُ ٱلْبَيِّنَٰتُ بَغْيًۢا بَيْنَهُمْ ۖ فَهَدَى ٱللَّهُ ٱلَّذِينَ ءَامَنُوا۟ لِمَا ٱخْتَلَفُوا۟ فِيهِ مِنَ ٱلْحَقِّ بِإِذْنِهِۦ ۗ وَٱللَّهُ يَهْدِى مَن يَشَآءُ إِلَىٰ صِرَٰطٍ مُّسْتَقِيمٍ ﴿٢١٣﴾

**215. ನಿಮ್ಮ ಪೂರ್ವಜರಿಗೆ ಉಂಟಾದ ಸ್ಥಿತಿ** (ಪರೀಕ್ಷೆ) **ನಿಮಗೆ ಸಹ ಉಂಟಾಗದೆ ಸ್ವರ್ಗದಲ್ಲಿ ಪ್ರವೇಶಿಸುವಿರೆಂದು ನೀವು ಭಾವಿಸುತ್ತೀರಾ? ವಿಪತ್ತು ಮತ್ತು ಕಷ್ಟಾನುಭವಗಳಿಗೆ ಅವರು ಈಡಾಗಿದ್ದರು. ಅಲ್ಲಾಹನ ಸಹಾಯ ಯಾವಾಗ** (ಬರುವುದು?)[61] **ಎಂದು ಪ್ರವಾದಿ ಮತ್ತು ಆತನೊಂದಿಗೆ ವಿಶ್ವಾಸ ಹೊಂದಿದವರು ಹೇಳುವಂತೆ ಅವರು ಕಂಪಿಸಲ್ಪಟ್ಟಿದ್ದರು. ತಿಳಿದು ಕೊಳ್ಳಿರಿ, ಖಂಡಿತವಾಗಿಯೂ ಅಲ್ಲಾಹನ ಸಹಾಯ ಹತ್ತಿರದಲ್ಲೇ ಇದೆ.**

أَمْ حَسِبْتُمْ أَن تَدْخُلُوا۟ ٱلْجَنَّةَ وَلَمَّا يَأْتِكُم مَّثَلُ ٱلَّذِينَ خَلَوْا۟ مِن قَبْلِكُم ۖ مَّسَّتْهُمُ ٱلْبَأْسَآءُ وَٱلضَّرَّآءُ وَزُلْزِلُوا۟ حَتَّىٰ يَقُولَ ٱلرَّسُولُ وَٱلَّذِينَ ءَامَنُوا۟ مَعَهُۥ مَتَىٰ نَصْرُ ٱللَّهِ ۗ أَلَآ إِنَّ نَصْرَ ٱللَّهِ قَرِيبٌ ﴿٢١٤﴾

**216. ಏನನ್ನು ಖರ್ಚು ಮಾಡಬೇಕೆಂದು ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಉತ್ತಮವಾದ**

يَسْـَٔلُونَكَ مَاذَا يُنفِقُونَ ۖ قُلْ مَآ

58. ಅಲ್ಲಾಹನು ಶಿಕ್ಷೆ ನೀಡುವುದರಲ್ಲಿ ಕಾಠಿಣ್ಯ ತೋರಿಸುತ್ತಾನೆ ಎಂದಲ್ಲ. ಬದಲಾಗಿ, ಶಿಕ್ಷೆಯು ಮನುಷ್ಯನಿಗೆ ಕಠಿಣವಾಗಿ ಅನುಭವವಾಗುವುದೆಂದಾಗಿದೆ ತಾತ್ಪರ್ಯ.

59. ಪವಿತ್ರ ಖುರ್‌ಆನಿನ ಒಂಭತ್ತು ವಚನಗಳಲ್ಲಿ ಇಂಥ ಪ್ರಯೋಗವಿದೆ. 10:20, 21:93, 23:53 ಈ ಮೂರು ಸ್ಥಳಗಳಲ್ಲಿ ಸಾಮೂಹಿಕ ಮತ್ತು ವರ್ಗೀಯ ಐಕ್ಯವನ್ನು ಸೂಚಿಸಲಾಗಿದೆ. ಬೇರೆ ಆರು ಕಡೆಗಳಲ್ಲಿ (5:49, 11:119, 16:94, 42:9, 43:34, 2:214) ವಿಚಾರಪರವಾದ ಏಕತೆಯನ್ನು ಉದ್ದೇಶಿಸಲಾಗಿದೆ. ಪ್ರವಾದಿ ಆದಂ (ಅ)ರ ಕಾಲ ಮೊದಲ್ಗೊಂಡು ಈಚೆಗೆ ಮನುಷ್ಯ ಕುಲ ಒಂದೇ ಧರ್ಮದವರಾಗಿದ್ದರು. ಪ್ರವಾದಿಗಳ ಆಗಮನವಾದಾಗ ಅವರನ್ನು ವಿರೋಧಿಸಿದ ಕಾರಣದಿಂದ ಜನರು ಭಿನ್ನಾಭಿಪ್ರಾಯವನ್ನು ಹೊಂದಿದರು. ಆದರೆ ವಾಸ್ತವಿಕವಾಗಿ, ಪ್ರವಾದಿಗಳು ವೈಚಾರಿಕ ಏಕತೆಯನ್ನು ಉಂಟುಮಾಡಲು ಬಂದವರಾಗಿದ್ದರು.



ಭಾಗ 2 ಅಲ್‌ಬಖರಃ ಅಧ್ಯಾಯ 2

60. ಇಲ್ಲಿ ವಿಸ್ಮಯಕರವಾದ ಒಂದು ವಿಷಯವನ್ನು ಪ್ರತಿಪಾದಿಸಲಾಗಿದೆ. ಪ್ರವಾದಿಗಳು ಆಗಮಿಸುವುದು ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಲಿಕ್ಕಾಗಿದೆ. ಆದರೆ ಸಂಬೋಧಿತ ಜನರು ತಮ್ಮೆಡೆಯಲ್ಲಿರುವ ಭಿನ್ನಾಭಿಪ್ರಾಯಗಳನ್ನು ಮರೆತು ಪ್ರವಾದಿಯ ವಿರುದ್ಧ ಸಂಘಟಿಸುತ್ತಾರೆ. ದೈವಿಕ ಸಂದೇಶದ ಪ್ರಥಮ ಸಂಬೋಧಿತರೇ ಅತ್ಯಂತ ಹೆಚ್ಚು ವಿರೋಧವನ್ನು ತೋರ್ಪಡಿಸುತ್ತಾರೆ. ತಮಗೆ ಅದರಲ್ಲಿ ಏನೂ ಒಳಿತು ಕಾಣುವುದಿಲ್ಲವೆಂಬಂತೆ ಅದನ್ನು ಕಠಿಣವಾಗಿ ವಿರೋಧಿಸುತ್ತಾರೆ. ಅದೇ ವಿಚಾರವನ್ನು ಅಲ್ಲಾಹನು ಇಲ್ಲಿ ಹೇಳಿದ್ದಾನೆ. ಯಾರ ಒಳಿತಿಗಾಗಿ ಗ್ರಂಥ ಅವತೀರ್ಣವಾಗಿದೆಯೋ ಅವರೇ ಅತಿದೊಡ್ಡ ವಿರೋಧಿಗಳಾಗುತ್ತಾರೆಂಬುದು ಎಷ್ಟು ಖೇದಕರ. ಸಮಾಜದ ಬಹುಪಾಲು ಜನರು ವಿರೋಧಿಗಳಾಗುವಾಗ ವಿಶ್ವಾಸಿಗಳು ಕಠಿಣವಾದ ವಿರೋಧಕ್ಕೆ ತುತ್ತಾಗಿ ಕಷ್ಟಕರವಾದ ಪರೀಕ್ಷೆಗಳನ್ನು ಎದುರಿಸಬೇಕಾಗುತ್ತದೆ. ಆ ಕಾರಣದಿಂದಲೇ ಎಲ್ಲ ಜನರಿಗಾಗಿ ದೈವಿಕ ಗ್ರಂಥದಲ್ಲಿ ವಿವರಿಸಲಾದ ಸರ್ವವಿಧ ಅನುಗ್ರಹಗಳಿಗೂ ಸತ್ಯವಿಶ್ವಾಸಿಗಳು ಹಕ್ಕುದಾರರಾಗುತ್ತಾರೆ.

61. ಇಲ್ಲಿ ಪ್ರವಾದಿಗಳಿಗೆ ಹಾಗೂ ಸತ್ಯವಿಶ್ವಾಸಿಗಳಿಗೆ ಪರೀಕ್ಷೆ ಮತ್ತು ಕಷ್ಟಾನುಭವಗಳನ್ನು ಅಲ್ಲಾಹನು ನೀಡುವುದರ ತತ್ವವನ್ನು ಸೂಚಿಸಲಾಗಿದೆ. ಅಲ್ಲಾಹನು ಉದ್ದೇಶಿಸುವುದಾದರೆ ಸತ್ಯವಿಶ್ವಾಸಿಗಳಿಗೆ ಯಾವುದೇ ಕಷ್ಟವಾಗಲಿ ತೊಂದರೆಯಾಗಲಿ ಇಲ್ಲದಂತೆ ಮಾಡಲು ಸಾಧ್ಯವಿತ್ತು. ಆದರೆ ಹಾಗೆ ಮಾಡಲಿಲ್ಲ. ಕಾರಣವೇನೆಂದರೆ, ಶತ್ರುಗಳಿಂದ ಪೀಡನೆ ಮತ್ತು ಕಷ್ಟಗಳನ್ನು ಅನುಭವಿಸುವಾಗ ಸತ್ಯವಿಶ್ವಾಸಿಗಳ ಹೃದಯಗಳಲ್ಲಿ ಪ್ರಾರ್ಥಿಸಲಿಕ್ಕೆ ಪ್ರಚೋದನೆ ಉಂಟಾಗುತ್ತದೆ. ಅವರು ಹೆಚ್ಚು ಹೆಚ್ಚು ಅಲ್ಲಾಹನ ಕಡೆಗೆ ಬಾಗುತ್ತಾರೆ. ಹಾಗೆ ಅಲ್ಲಾಹನೊಡನೆ ಅವರಿಗೆ ಹೆಚ್ಚು ಸಾಮೀಪ್ಯ ಉಂಟಾಗುತ್ತದೆ. ಮಾತ್ರವಲ್ಲ, ದೈವಿಕ ಸಹಾಯ ಅವರಿಗೆ ಅದ್ಭುತಕರವಾಗಿ ಲಭಿಸುವಾಗ ಅವರ ವಿಶ್ವಾಸ ವೃದ್ಧಿಗೊಳ್ಳುವುದಲ್ಲದೆ, ಅವಿಶ್ವಾಸಿಗಳ ಪೈಕಿ ಚಿಂತನೆ ಮಾಡುವವರಿಗೆ ಸತ್ಪಥ ಲಭಿಸುವರೆ ಅದು ಕಾರಣವೂ ಆಗುತ್ತದೆ. ಈ ಉದ್ದೇಶ ಪೂರೈಸುವಾಗ 'ಇದೋ ನಮ್ಮ ಸಹಾಯ ಬಂದೊದಗಿತು' ಎಂದು ಅಲ್ಲಾಹನು ಹೇಳುತ್ತಾನೆ. ಬಹು ಸಂಖ್ಯಾತ ಜನರು ವಿರೋಧಿಸುವಾಗ ಸತ್ಯವಿಶ್ವಾಸಿಗಳು ಕಠಿಣವಾದ ಪರೀಕ್ಷೆಗಳಿಗೂ ಕಷ್ಟಾನುಭವಗಳಿಗೂ ಈಡಾಗುತ್ತಾರೆಂಬ ಹಿಂದಿನ ವಚನದ ವಿಷಯದೊಂದಿಗೆ ಇದಕ್ಕೆ ಸಂಬಂಧವಿದೆ. ಆ ಮೂಲಕ ಅಲ್ಲಾಹನು ದೈವಿಕ ಗ್ರಂಥದಲ್ಲಿ ವಿವರಿಸಲ್ಪಟ್ಟ ಸರ್ವವಿಧ ಅನುಗ್ರಹಗಳಿಗೂ ಸತ್ಯವಿಶ್ವಾಸಿಗಳನ್ನು ಪಾತ್ರರನ್ನಾಗಿ ಮಾಡುತ್ತಾನೆ.

ಧನದಿಂದ[62] ನೀವು (ಮುಖ್ಯವಾಗಿ) ಮಾತಪಿತರಿಗೂ ನಿಕಟ ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಯಾತ್ರಿಕರಿಗೂ ಖರ್ಚು ಮಾಡಬೇಕಾಗಿದೆ. ನೀವು ಯಾವುದೇ ಸತ್ಕರ್ಮವನ್ನು ಮಾಡಿದರೂ ಖಂಡಿತವಾಗಿಯೂ ಅಲ್ಲಾಹನು ಅದನ್ನು ಚೆನ್ನಾಗಿ ಅರಿಯುತ್ತಾನೆ.

أَنْفَقْتُمْ مِّنْ خَيْرٍ فَلِلْوَالِدَيْنِ وَ
الْأَقْرَبِيْنَ وَالْيَتٰمٰى وَالْمَسٰكِيْنِ وَابْنِ
السَّبِيْلِ ؕ وَمَا تَفْعَلُوْا مِنْ خَيْرٍ فَإِنَّ اللّٰهَ
بِهٖ عَلِيْمٌ ﴿٢١٥﴾

217. ನೀವು ಇಷ್ಟಪಡದಿದ್ದರೂ ಯುದ್ಧವನ್ನು ನಿಮಗೆ ಶಾಸನಬದ್ಧಗೊಳಿಸಲಾಗಿದೆ. ಒಂದು ವಿಷಯ ನಿಮಗೆ ಗುಣಕರವಾಗಿದ್ದು ನೀವು ಅದನ್ನು ಇಷ್ಟಪಡದಿರಬಹುದು. ಒಂದು ವಿಷಯ ನಿಮಗೆ ದೋಷಕರವಾಗಿದ್ದು ಅದನ್ನು ನೀವು ಇಷ್ಟಪಡಲೂ ಬಹುದು. ಅಲ್ಲಾಹನು (ಎಲ್ಲವನ್ನೂ) ಬಲ್ಲವನಾಗಿದ್ದಾನೆ; ನೀವು ತಿಳಿದವರಲ್ಲ.

كُتِبَ عَلَيْكُمُ الْقِتَالُ وَهُوَ كُرْهٌ لَّكُمْ ۚ
وَعَسٰۤى أَنْ تَكْرَهُوْا شَيْـًٔا وَّهُوَ خَيْرٌ لَّكُمْ ۚ
وَعَسٰۤى أَنْ تُحِبُّوْا شَيْـًٔا وَّهُوَ شَرٌّ لَّكُمْ ؕ وَ
اللّٰهُ يَعْلَمُ وَأَنْتُمْ لَا تَعْلَمُوْنَ ﴿٢١٦﴾

218. ಆದರಣೀಯ ಮಾಸದ ಕುರಿತು - ಅದರಲ್ಲಿ ಯುದ್ಧಮಾಡುವ ಬಗ್ಗೆ - ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಅದರಲ್ಲಿ ಯುದ್ಧ ಮಾಡುವುದು ಮಹಾ ಅಪರಾಧವಾಗಿದೆ. ಆದರೆ, ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುವುದೂ ಅವನನ್ನು (ಅಲ್ಲಾಹನನ್ನು) ಹಾಗೂ ಮಸ್ಜಿದುಲ್ ಹರಾಮನ್ನು ನಿರಾಕರಿಸುವುದೂ[63] ಅಲ್ಲಿನ ನಿವಾಸಿಗಳನ್ನು ಅಲ್ಲಿಂದ ಹೊರ ಅಟ್ಟುವುದೂ ಅಲ್ಲಾಹನ ದೃಷ್ಟಿಯಲ್ಲಿ (ಅದಕ್ಕಿಂತಲೂ) ಘೋರ ಅಪರಾಧವಾಗಿದೆ. ಫಿತ್ನ[64] ಕೊಲೆಗಿಂತ ದೊಡ್ಡ ಅಪರಾಧವಾಗಿದೆ.' ಅವರಿಗೆ ಸಾಧ್ಯವೆಂದಾದರೆ ನಿಮ್ಮ ಧರ್ಮದಿಂದ ನಿಮ್ಮನ್ನು ಮರಳಿಸುವ ವರೆಗೆ ಅವರು ನಿಮ್ಮೊಡನೆ ಯುದ್ಧ ಮಾಡುತ್ತಲೇ ಇರುವರು. ನಿಮ್ಮ

يَسْـَٔلُوْنَكَ عَنِ الشَّهْرِ الْحَرَامِ قِتَالٍ فِيْهِ ؕ
قُلْ قِتَالٌ فِيْهِ كَبِيْرٌ ؕ وَ صَدٌّ عَنْ
سَبِيْلِ اللّٰهِ وَكُفْرٌۢ بِهٖ وَالْمَسْجِدِ الْحَرَامِ ۗ
وَإِخْرَاجُ أَهْلِهٖ مِنْهُ أَكْبَرُ عِنْدَ اللّٰهِ ۚ وَ
الْفِتْنَةُ أَكْبَرُ مِنَ الْقَتْلِ ؕ وَلَا
يَزَالُوْنَ يُقَاتِلُوْنَكُمْ حَتّٰى يَرُدُّوْكُمْ
عَنْ دِيْنِكُمْ إِنِ اسْتَطَاعُوْا ؕ وَمَنْ يَّرْتَدِدْ
مِنْكُمْ عَنْ دِيْنِهٖ فَيَمُتْ وَهُوَ كَافِرٌ

62. ದೇವ ಸಂಪ್ರೀತಿಗಾಗಿ ಖರ್ಚುಮಾಡುವ ಧನವು ಋಜು ಮಾರ್ಗದಲ್ಲಿ ಸಂಪಾದಿಸಿದ್ದು ಆಗಿರಬೇಕು. ನಿಷಿದ್ಧ ರೀತಿಯಲ್ಲಿ ಸಂಪಾದಿಸಿ ಅದರಿಂದ ದೇವ ಮಾರ್ಗದಲ್ಲಿ ಖರ್ಚುಮಾಡಿ ಪಾಪಕ್ಕೆ ಪ್ರಾಯಶ್ಚಿತ್ತವಾಯಿತೆಂದು ಭಾವಿಸುವುದು ತಪ್ಪು. ಉತ್ತಮ ಹಾಗೂ ಋಜುವಾದ ಮಾರ್ಗದಲ್ಲಿ ಸಂಪಾದಿಸಿದ ಧನವನ್ನು ಅಲ್ಲಾಹನು ಸ್ವೀಕರಿಸುತ್ತಾನೆ. ಮಾತ್ರವಲ್ಲ, ಪಡೆಯುವವನಿಗೆ ಅದು ಉಪಯುಕ್ತವೂ ಆಗಿರಬೇಕಾಗಿದೆ.

63. ಅಲ್ಲಾಹನ ಮತ್ತು ಮಸ್ಜಿದುಲ್ ಹರಾಮಿನ ಪಾವಿತ್ರ್ಯವನ್ನು ಕೆಡಿಸಲು ಪ್ರಯತ್ನಿಸುವುದು.

64. ಫಿತ್ನ = ಹಿಂಸೆ, ಪೀಡನೆ, ಪಿತೂರಿ, ಗಲಭೆ ಇತ್ಯಾದಿ.





ಪೈಕಿ ಯಾರಾದರೂ ತನ್ನ ಧರ್ಮದಿಂದ ವಿಮುಖವಾಗಿ ಅವಿಶ್ವಾಸಿಯಾಗಿದ್ದುಕೊಂಡು ಮೃತಪಟ್ಟರೆ ಅಂಥವರ ಕರ್ಮಗಳು ಇಹದಲ್ಲೂ ಪರದಲ್ಲೂ ನಿಷ್ಫಲವಾಗುವುವು. ಅವರೇ ನರಕವಾಸಿಗಳು. ಅಲ್ಲಿ ಅವರು ದೀರ್ಘಕಾಲ ನೆಲಸುವರು.

فَأُولٰٓئِكَ حَبِطَتْ أَعْمَالُهُمْ فِي الدُّنْيَا وَ
الْاٰخِرَةِ ۚ وَأُولٰٓئِكَ أَصْحٰبُ النَّارِ ۚ هُمْ
فِيْهَا خٰلِدُوْنَ ﴿٢١٧﴾

219. ವಿಶ್ವಾಸ ಹೊಂದಿದವರೂ (ವಿಶ್ವಾಸ ಸಂರಕ್ಷಣೆಗಾಗಿ) ಸ್ವದೇಶವನ್ನು ತೊರೆಯುವವರೂ ಅಲ್ಲಾಹನ ಮಾರ್ಗದಲ್ಲಿ ತೀವ್ರ ಯತ್ನ ಮಾಡುವವರೂ ಅಲ್ಲಾಹನ ಕಾರುಣ್ಯವನ್ನು ನಿರೀಕ್ಷಿಸುವವರಾಗಿದ್ದಾರೆ. ಅಲ್ಲಾಹನು ಅತ್ಯಂತ ಕ್ಷಮೆ ತೋರುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

إِنَّ الَّذِيْنَ اٰمَنُوْا وَ الَّذِيْنَ
هَاجَرُوْا وَجٰهَدُوْا فِيْ سَبِيْلِ اللّٰهِ ۙ
أُولٰٓئِكَ يَرْجُوْنَ رَحْمَتَ اللّٰهِ ؕ وَاللّٰهُ
غَفُوْرٌ رَّحِيْمٌ ﴿٢١٨﴾

220. ಅವರು ನಿನ್ನೊಡನೆ ಮದ್ಯ ಮತ್ತು ಜೂಜಾಟದ ಬಗ್ಗೆ ಕೇಳುತ್ತಾರೆ. ಹೇಳು: 'ಅವೆರಡರಲ್ಲೂ ದೊಡ್ಡ ಪಾಪ (ದೋಷ)ವೂ ಜನರಿಗೆ (ಕೆಲವು) ಪ್ರಯೋಜನಗಳೂ ಇವೆ. ಆದರೆ ಅವುಗಳ ದೋಷವು ಗುಣಕ್ಕಿಂತ ಬಲು ಹೆಚ್ಚು.' ತಾವು ಏನನ್ನು ವ್ಯಯಿಸಬೇಕೆಂದೂ ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಪ್ರಯಾಸವಿಲ್ಲದೆ ವೆಚ್ಚಮಾಡಲು ಸಾಧ್ಯವಿರುವಷ್ಟು.' ಹೀಗೆ ಅಲ್ಲಾಹನು ತನ್ನ ಆಜ್ಞೆಗಳನ್ನು ನಿಮಗೆ ವಿವರಿಸಿಕೊಡುತ್ತಾನೆ; ನೀವು ಚಿಂತನೆ ಮಾಡಿ ಕಾರ್ಯಶೀಲರಾಗಲಿಕ್ಕಾಗಿ -

يَسْـَٔلُوْنَكَ عَنِ الْخَمْرِ وَالْمَيْسِرِ ؕ
قُلْ فِيْهِمَآ إِثْمٌ كَبِيْرٌ وَّمَنَافِعُ
لِلنَّاسِ ۫ وَإِثْمُهُمَآ أَكْبَرُ مِنْ نَّفْعِهِمَا ؕ
وَيَسْـَٔلُوْنَكَ مَاذَا يُنْفِقُوْنَ ۬ؕ قُلِ الْعَفْوَ ؕ
كَذٰلِكَ يُبَيِّنُ اللّٰهُ لَكُمُ الْاٰيٰتِ
لَعَلَّكُمْ تَتَفَكَّرُوْنَ ﴿٢١٩﴾

221. ಇಹಲೋಕ ಮತ್ತು ಪರಲೋಕದ ಕುರಿತು. ಅನಾಥರ ಬಗ್ಗೆ ಸಹ ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಅವರ ಕ್ಷೇಮಾಭಿವೃದ್ಧಿಗಾಗಿ ಶ್ರಮಿಸುವುದು ಬಹಳ ಉತ್ತಮ. ಅವರೊಡನೆ ನೀವು ಪರಸ್ಪರ ಬೆರೆತು ಜೀವಿಸುವುದಾದರೆ (ತಪ್ಪೇನಿಲ್ಲ), ಅವರು ನಿಮ್ಮ ಸಹೋದರರಾಗಿದ್ದಾರೆ. ಕೇಡು ಬಗೆಯುವವರನ್ನು ಸುಧಾರಕರಿಂದ (ಬೇರ್ಪಡಿಸಿ) ಅಲ್ಲಾಹನು ಗುರುತಿಸುತ್ತಾನೆ. ಅಲ್ಲಾಹನು ಬಯಸಿರುತ್ತಿದ್ದರೆ ನಿಮ್ಮನ್ನು ಕಷ್ಟದಲ್ಲಿ ಸಿಲುಕಿಸುತ್ತಿದ್ದನು. ನಿಶ್ಚಯವಾಗಿಯೂ ಅಲ್ಲಾಹನು ಪ್ರತಾಪಶಾಲಿಯೂ ಬುದ್ಧಿಶಾಲಿಯೂ ಆಗಿದ್ದಾನೆ.'

فِي الدُّنْيَا وَالْاٰخِرَةِ ؕ وَيَسْـَٔلُوْنَكَ عَنِ
الْيَتٰمٰى ؕ قُلْ إِصْلَاحٌ لَّهُمْ خَيْرٌ ؕ وَإِنْ
تُخَالِطُوْهُمْ فَإِخْوَانُكُمْ ؕ وَاللّٰهُ يَعْلَمُ
الْمُفْسِدَ مِنَ الْمُصْلِحِ ؕ وَلَوْ شَآءَ اللّٰهُ
لَأَعْنَتَكُمْ ؕ إِنَّ اللّٰهَ عَزِيْزٌ حَكِيْمٌ ﴿٢٢٠﴾

**222.** ಬಹುದೇವೋಪಾಸಕರಾದ ಸ್ತ್ರೀಯರನ್ನು ಅವರು ಸತ್ಯವಿಶ್ವಾಸ ಕೈಗೊಳ್ಳುವ ವರೆಗೆ ನೀವು ವಿವಾಹವಾಗಬಾರದು. ವಿಶ್ವಾಸಿನಿಯಾದ ಓರ್ವ ದಾಸಿ ಬಹುದೇವಾರಾಧಕಳಾದ (ಸ್ವತಂತ್ರ) ಸ್ತ್ರೀಗಿಂತ ಖಂಡಿತವಾಗಿಯೂ ಉತ್ತಮಳು - ಆಕೆ ನಿಮಗೆ (ಎಷ್ಟೇ) ಇಷ್ಟಪಟ್ಟರೂ ಸರಿ. (ಅದೇ ಪ್ರಕಾರ) ಬಹು ದೇವೋಪಾಸಕರಿಗೆ ಅವರು ಸತ್ಯವಿಶ್ವಾಸವನ್ನು ಕೈಗೊಳ್ಳುವ ತನಕ ಮುಸ್ಲಿಂ ಸ್ತ್ರೀಯರನ್ನು ಮದುವೆ ಮಾಡಿಸಿ ಕೊಡಬಾರದು. ವಿಶ್ವಾಸಿಯಾದ ಒಬ್ಬ ಗುಲಾಮ (ಸ್ವತಂತ್ರನಾದ) ಒಬ್ಬ ಬಹುದೇವಾರಾಧಕನಿಗಿಂತ ಖಂಡಿತವಾಗಿಯೂ ಉತ್ತಮನು - ಆತನು ನಿಮಗೆ (ಎಷ್ಟೇ) ಇಷ್ಟ ಪಟ್ಟರೂ ಸರಿ. ಅವರು ನರಕಾಗ್ನಿಯೆಡೆಗೆ ಕರೆಯುತ್ತಾರೆ. ಅಲ್ಲಾಹನಾದರೋ ತನ್ನ ಆಜ್ಞೆಯ ಮೂಲಕ ಸ್ವರ್ಗದೆಡೆಗೂ ಪಾಪಮುಕ್ತಿಯೆಡೆಗೂ ಕರೆಯುತ್ತಾನೆ. ಜನರು ಪ್ರಜ್ಞಾವಂತರಾಗಲಿಕ್ಕಾಗಿ ಅವನು ತನ್ನ ದೃಷ್ಟಾಂತಗಳನ್ನು ಅವರಿಗೆ ವಿವರಿಸಿ ಕೊಡುತ್ತಾನೆ.

وَلَا تَنكِحُوا الْمُشْرِكَاتِ حَتَّىٰ يُؤْمِنَّ ۚ وَلَأَمَةٌ مُّؤْمِنَةٌ خَيْرٌ مِّن مُّشْرِكَةٍ وَلَوْ أَعْجَبَتْكُمْ ۗ وَلَا تُنكِحُوا الْمُشْرِكِينَ حَتَّىٰ يُؤْمِنُوا ۚ وَلَعَبْدٌ مُّؤْمِنٌ خَيْرٌ مِّن مُّشْرِكٍ وَلَوْ أَعْجَبَكُمْ ۗ أُولَٰئِكَ يَدْعُونَ إِلَى النَّارِ ۖ وَاللَّهُ يَدْعُو إِلَى الْجَنَّةِ وَالْمَغْفِرَةِ بِإِذْنِهِ ۖ وَيُبَيِّنُ آيَاتِهِ لِلنَّاسِ لَعَلَّهُمْ يَتَذَكَّرُونَ ٢٢١

**223.** ಆರ್ತವದ ಕುರಿತು ಸಹ ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಅದೊಂದು ಅಸ್ವಸ್ಥತೆಯ ಸ್ಥಿತಿಯಾಗಿದೆ. ಆದ್ದರಿಂದ ಋತುಸ್ರಾವ ಕಾಲದಲ್ಲಿ ನೀವು ಸ್ತ್ರೀಯರಿಂದ ದೂರವಿರಿ. ಅವರು ಶುದ್ಧಿಯಾಗುವ ವರೆಗೆ ನೀವು ಅವರನ್ನು (ಸಂಸರ್ಗಕ್ಕಾಗಿ) ಸಮೀಪಿಸಬಾರದು. ಅವರು (ಸ್ನಾನಮಾಡಿ) ಶುದ್ಧಿಯಾದ ಬಳಿಕ, ಅಲ್ಲಾಹನು ನಿಮ್ಮೊಡನೆ ಆಜ್ಞಾಪಿಸಿದಂತೆ ಅವರನ್ನು ಸಮೀಪಿಸಿರಿ. ಖಂಡಿತವಾಗಿಯೂ ಅಲ್ಲಾಹನು ಪಶ್ಚಾತ್ತಾಪ ಪಡುವವರನ್ನು ಪ್ರೀತಿಸುತ್ತಾನೆ; (ಬಾಹ್ಯವಾಗಿಯೂ ಆಂತರಿಕವಾಗಿಯೂ) ಪರಿಶುದ್ಧ ರಾಗಿರುವವರನ್ನು ಅವನು ಇಷ್ಟಪಡುತ್ತಾನೆ.

وَيَسْأَلُونَكَ عَنِ الْمَحِيضِ ۖ قُلْ هُوَ أَذًى فَاعْتَزِلُوا النِّسَاءَ فِي الْمَحِيضِ ۖ وَلَا تَقْرَبُوهُنَّ حَتَّىٰ يَطْهُرْنَ ۖ فَإِذَا تَطَهَّرْنَ فَأْتُوهُنَّ مِنْ حَيْثُ أَمَرَكُمُ اللَّهُ ۚ إِنَّ اللَّهَ يُحِبُّ التَّوَّابِينَ وَيُحِبُّ الْمُتَطَهِّرِينَ ٢٢٢

**224.** ನಿಮ್ಮ ಪತ್ನಿಯಂದಿರು ನಿಮಗೆ (ಒಂದು ರೀತಿಯ) ಕೃಷಿಸ್ಥಳವಾಗಿದ್ದಾರೆ. ಆದ್ದರಿಂದ, ನೀವು ಇಚ್ಛಿಸಿದಂತೆ ನಿಮ್ಮ ಕೃಷಿಸ್ಥಳದೆಡೆಗೆ ಹೋಗಿರಿ; ನಿಮ್ಮ ಭವಿಷ್ಯಕ್ಕಾಗಿ ಬೇಕಾದುದನ್ನು ಮಾಡಿಟ್ಟುಕೊಳ್ಳಿರಿ.





ಅಲ್ಲಾಹನ ಭಯವಿರಿಸಿಕೊಳ್ಳಿರಿ; ಅವನನ್ನು ನೀವು ಸಂಧಿಸಲಿರುವಿರೆಂದು ಅರಿತುಕೊಳ್ಳಿರಿ. ಸತ್ಯ ವಿಶ್ವಾಸಿಗಳಿಗೆ ನೀನು ಶುಭವಾರ್ತೆಯನ್ನು ಅರುಹು.

نِسَاؤُكُمْ حَرْثٌ لَّكُمْ فَأْتُوا حَرْثَكُمْ أَنَّىٰ شِئْتُمْ ۖ وَقَدِّمُوا لِأَنفُسِكُمْ ۚ وَاتَّقُوا اللَّهَ وَاعْلَمُوا أَنَّكُم مُّلَاقُوهُ ۗ وَبَشِّرِ الْمُؤْمِنِينَ ٢٢٣

**225.** ಒಳಿತನ್ನುಂಟುಮಾಡುವುದು, ಧರ್ಮಶೀಲತೆ ಕೈಗೊಳ್ಳುವುದು ಮತ್ತು ಜನರೆಡೆಯಲ್ಲಿ ಸಾಮರಸ್ಯವನ್ನುಂಟುಮಾಡುವುದು - ಇವುಗಳಿಂದ *ವಿಮುಖರಾಗಲಿಕ್ಕಾಗಿ* ಅಲ್ಲಾಹನನ್ನು ನೀವು ನಿಮ್ಮ ಶಪಥಕ್ಕೆ ಗುರಿ ಮಾಡಬೇಡಿರಿ. ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

وَلَا تَجْعَلُوا اللَّهَ عُرْضَةً لِّأَيْمَانِكُمْ أَن تَبَرُّوا وَتَتَّقُوا وَتُصْلِحُوا بَيْنَ النَّاسِ ۗ وَاللَّهُ سَمِيعٌ عَلِيمٌ ٢٢٤

**226.** ನಿಮ್ಮ ನಿರರ್ಥಕ ಶಪಥಗಳ[65] ಕುರಿತು ಅಲ್ಲಾಹನು ನಿಮ್ಮನ್ನು ಶಿಕ್ಷಿಸಲಾರ. ಆದರೆ ನಿಮ್ಮ ಹೃದಯಗಳು (ಉದ್ದೇಶಪೂರ್ವಕವಾಗಿ) ಸಂಪಾದಿಸಿದುದರ ಬಗ್ಗೆ ನಿಮ್ಮನ್ನು ಶಿಕ್ಷಿಸುವನು. ಅಲ್ಲಾಹನು ಅತಿಯಾಗಿ ಕ್ಷಮಿಸುವವನೂ ಸಹನಶೀಲನೂ ಆಗಿದ್ದಾನೆ.

لَّا يُؤَاخِذُكُمُ اللَّهُ بِاللَّغْوِ فِي أَيْمَانِكُمْ وَلَٰكِن يُؤَاخِذُكُم بِمَا كَسَبَتْ قُلُوبُكُمْ ۗ وَاللَّهُ غَفُورٌ حَلِيمٌ ٢٢٥

**227.** ತಮ್ಮ ಪತ್ನಿಯರೊಂದಿಗೆ *ಸಂಸರ್ಗ ಮಾಡಲಾರೆವೆಂದು* ಶಪಥ ಮಾಡುವವರಿಗೆ (ಪರಮಾವಧಿ) ನಾಲ್ಕು ತಿಂಗಳ ತನಕ ಕಾಯುವ ಅನುಮತಿಯಿದೆ. ಅವರು (ಈ ಕಾಲಾವಧಿಯಲ್ಲಿ ಸಾಮರಸ್ಯವನ್ನು ಬಯಸಿ) ಮರುಳುವುದಾದರೆ[65A] ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

لِّلَّذِينَ يُؤْلُونَ مِن نِّسَائِهِمْ تَرَبُّصُ أَرْبَعَةِ أَشْهُرٍ ۖ فَإِن فَاءُوا فَإِنَّ اللَّهَ غَفُورٌ رَّحِيمٌ ٢٢٦

**228.** ಇನ್ನು, ಅವರು ವಿವಾಹ ವಿಚ್ಛೇದ ಮಾಡಲು ತೀರ್ಮಾನಿಸುವುದಾದರೆ, (ಅವರು ತಿಳಿದಿರಲಿ) ನಿಶ್ಚಯವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಚೆನ್ನಾಗಿ ಬಲ್ಲವನೂ ಆಗಿದ್ದಾನೆ.

وَإِنْ عَزَمُوا الطَّلَاقَ فَإِنَّ اللَّهَ سَمِيعٌ عَلِيمٌ ٢٢٧

---

65. ಅಭ್ಯಾಸ ಬಲದಿಂದ, ಅಮಿತವಾದ ಆವೇಶದಿಂದ, ಕಠಿಣವಾದ ದ್ವೇಷದಿಂದ ಮಾಡುವ ಶಪಥ. ಇಂಥ ಶಪಥಗಳಿಗೆ ಪ್ರಾಯಶ್ಚಿತ್ತ ಬೇಕಾಗಿಲ್ಲ. 'ಇಸ್ತಿಗ್‌ಫಾರ್' (ಅಲ್ಲಾಹನ ಕ್ಷಮಾಯಾಚನೆ) ಮಾಡಿದರೆ ಸಾಕು.

65A. ಅರಬಿಯರಲ್ಲಿ ಕೆಲವರು ತಮ್ಮ ಪತ್ನಿಯರ ವಿವಾಹ ವಿಚ್ಛೇದನ ಮಾಡದೆಯೇ ಅವರೊಡನೆ ಸಂಸರ್ಗ ಮಾಡಲಾರೆವೆಂದು ಶಪಥ ಹಾಕಿ ಅಗಲಿ ನಿಲ್ಲುತ್ತಿದ್ದರು. ಹೀಗೆ ಶಪಥ ಹಾಕಿದರೆ ಅವರಿಗೆ ನಾಲ್ಕು ತಿಂಗಳ ಕಾಲಾವಧಿ ನೀಡಲಾಗುವುದೆಂದು ಅಲ್ಲಾಹನು ಹೇಳುತ್ತಾನೆ. ಈ ಕಾಲಾವಧಿಯೊಳಗೆ ಅವರು ಸಾಮರಸ್ಯ ಮಾಡಿಕೊಳ್ಳಬಹುದಾಗಿದೆ. ಅಲ್ಲವಾದರೆ 'ಖಾಝಿ' ವಿವಾಹ ವಿಚ್ಛೇದನ ತೀರ್ಮಾನ ಕೈಗೊಳ್ಳಬಹುದು.

**229.** **ವಿವಾಹ ವಿಚ್ಛೇದಿತರಾದ ಸ್ತ್ರೀಯರು ಮೂರು ಬಾರಿ ಮುಟ್ಟಾಗುವ ವರೆಗೆ ತಮ್ಮನ್ನು ತಡೆದು ಕೊಳ್ಳಬೇಕಾಗಿದೆ. ಅವರು ಅಲ್ಲಾಹನಲ್ಲಿ ಮತ್ತು ಅಂತ್ಯ ದಿನದ ಬಗ್ಗೆ ವಿಶ್ವಾಸವುಳ್ಳವರಾದರೆ,** (ಅವರು ತಿಳಿದು ಕೊಳ್ಳಲಿ) **ಅವರ ಗರ್ಭಶಯಗಳಲ್ಲಿ ಅಲ್ಲಾಹನು ಸೃಷ್ಟಿಸಿರುವುದನ್ನು ಬಚ್ಚಿಡುವುದು ಅವರಿಗೆ ಧರ್ಮಸಮ್ಮತವಲ್ಲ. ಅವರ ಪತಿಯಂದಿರು ಹೊಂದಾಣಿಕೆಯನ್ನು ಬಯಸುವವರಾದರೆ, ಆ ಕಾಲಾವಧಿಯಲ್ಲಿ ಅವರನ್ನು ಮರಳಿ ಪಡೆಯುವ ಹೆಚ್ಚಿನ ಹಕ್ಕು ಅವರಿಗಿದೆ. ಅವರ ಮೇಲೆ** ಪುರುಷರಿಗೆ **ಕೆಲವು ಹಕ್ಕುಗಳಿರುವಂತೆಯೇ ಅವರಿಗೂ** (ಸ್ತ್ರೀಯರಿಗೂ) **ನ್ಯಾಯೋಚಿತವಾದ ಕೆಲವು ಹಕ್ಕುಗಳಿವೆ. ಪುರುಷರಿಗೆ ಅವರ ಮೇಲೆ ಒಂದು ದರ್ಜೆ ಹೆಚ್ಚಿಗಿದೆ. ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.**

وَالْمُطَلَّقٰتُ يَتَرَبَّصْنَ بِاَنْفُسِهِنَّ
ثَلٰثَةَ قُرُوْٓءٍ ۚ وَلَا يَحِلُّ لَهُنَّ اَنْ يَّكْتُمْنَ
مَا خَلَقَ اللّٰهُ فِيْٓ اَرْحَامِهِنَّ اِنْ كُنَّ
يُؤْمِنَّ بِاللّٰهِ وَالْيَوْمِ الْاٰخِرِ ۚ وَ
بُعُوْلَتُهُنَّ اَحَقُّ بِرَدِّهِنَّ فِيْ ذٰلِكَ اِنْ
اَرَادُوْٓا اِصْلَاحًا ۚ وَلَهُنَّ مِثْلُ الَّذِيْ عَلَيْهِنَّ
بِالْمَعْرُوْفِ ۠ وَلِلرِّجَالِ عَلَيْهِنَّ دَرَجَةٌ ۚ وَ
اللّٰهُ عَزِيْزٌ حَكِيْمٌ ﴿٢٢٨﴾

**230.** (ರದ್ದುಗೊಳಿಸಲ್ಪಡುವ) **ವಿವಾಹ ವಿಚ್ಛೇದನ ಎರಡು ಬಾರಿಯಾಗಿದೆ.**[66] **ನಂತರ, ನ್ಯಾಯೋಚಿತವಾಗಿ** (ಪತ್ನಿಯನ್ನು) **ತನ್ನೊಂದಿಗೆ ಇರಿಸಿಕೊಳ್ಳಬೇಕು ಅಥವಾ ಔದಾರ್ಯದಿಂದ ಬಿಟ್ಟುಬಿಡಬೇಕು. ನೀವು ಅವರಿಗೆ** (ಪತ್ನಿಯಂದಿರಿಗೆ) **ನೀಡಿದ್ದರ ಪೈಕಿ ಏನನ್ನಾದರೂ** (ವಾಪಾಸು) **ಪಡೆಯುವುದು ಧರ್ಮಸಮ್ಮತವಲ್ಲ - ಅಲ್ಲಾಹನ ನಿಯಮದ ಎಲ್ಲೆಗಳನ್ನು ಪಾಲಿಸಲು ಅಸಾಧ್ಯವಾಗಬಹುದೆಂದು ಈರ್ವರೂ ಭಯ ಪಡುವಾಗ ಹೊರತು. ಅಲ್ಲಾಹನ ನಿಯಮಗಳನ್ನು ಪಾಲಿಸಲು ಅವರಿಗೆ ಸಾಧ್ಯವಿಲ್ಲವೆಂದು ನೀವು ಭಯ ಪಡುವಿರಾದರೆ,**[67] **ಆಗ ಏನನ್ನಾದರೂ ಕೊಟ್ಟು ಅವಳು ವಿಚ್ಛೇದನ ಪಡೆಯುವುದಾದರೆ, ಅದರಲ್ಲಿ ಅವರಿಬ್ಬರಿಗೂ ಪಾಪವಿಲ್ಲ. ಇವು ಅಲ್ಲಾಹನ ನಿಯಮ ಪರಿಧಿಗಳಾಗಿವೆ. ಆದ್ದರಿಂದ ಇವನ್ನು ಉಲ್ಲಂಘಿಸ ಬೇಡಿರಿ. ಯಾರು ಅಲ್ಲಾಹನ ನಿಯಮ ಸೀಮೋಲ್ಲಂಘನೆ ಮಾಡುತ್ತಾರೋ** (ತಿಳಿದು ಕೊಳ್ಳಿರಿ) **ಅವರೇ ಅಧರ್ಮಿಗಳು.**

اَلطَّلَاقُ مَرَّتٰنِ ۠ فَاِمْسَاكٌۢ بِمَعْرُوْفٍ
اَوْ تَسْرِيْحٌۢ بِاِحْسَانٍ ۚ وَلَا يَحِلُّ لَكُمْ اَنْ
تَاْخُذُوْا مِمَّآ اٰتَيْتُمُوْهُنَّ شَيْئًا اِلَّآ اَنْ
يَّخَافَآ اَلَّا يُقِيْمَا حُدُوْدَ اللّٰهِ ۚ فَاِنْ خِفْتُمْ
اَلَّا يُقِيْمَا حُدُوْدَ اللّٰهِ ۙ فَلَا جُنَاحَ عَلَيْهِمَا
فِيْمَا افْتَدَتْ بِهٖ ۚ تِلْكَ حُدُوْدُ اللّٰهِ فَلَا
تَعْتَدُوْهَا ۚ وَمَنْ يَّتَعَدَّ حُدُوْدَ اللّٰهِ
فَاُولٰٓئِكَ هُمُ الظّٰلِمُوْنَ ﴿٢٢٩﴾

**231.** **ಮತ್ತೆ** (ಮೂರನೆಯ ಸಲವೂ) **ಅವನು ಅವಳಿಗೆ ತಲಾಖ್ ಹೇಳಿದರೆ, ಅವಳು ಇನ್ನೊಬ್ಬನನ್ನು ಮದುವೆಯಾಗುವ ವರೆಗೆ**[68] **ಅವಳು ಅವನಿಗೆ ಧರ್ಮಬದ್ಧಳಲ್ಲ. ಆತನು** (ಎರಡನೆಯ ಪತಿ) **ಅವಳ ವಿವಾಹ ವಿಚ್ಛೇದನ ಮಾಡಿದರೆ ಅವರು ಪರಸ್ಪರ** (ಅವಳು ಮತ್ತು ಮೊದಲ ಪತಿ) ಪುನರ್ವಿವಾಹಕ್ಕೆ **ಮರಳುವುದಾದರೆ ಅವರಿಗೆ ಪಾಪವಿಲ್ಲ - ಅಲ್ಲಾಹನ ನಿಯಮದ ಎಲ್ಲೆಗಳನ್ನು ಪಾಲಿಸುವೆವೆಂದು ಅವರೀರ್ವರಿಗೂ ನಂಬಿಕೆಯಿದ್ದರೆ. ಇವು ಅಲ್ಲಾಹನ ನಿಯಮದ ಸೀಮೆಗಳಾಗಿವೆ. ಪ್ರಾಜ್ಞರಿಗೆ ಅವನು ಇವನ್ನೆಲ್ಲ ವಿವರಿಸಿ ಕೊಡುತ್ತಾನೆ.**

فَاِنْ طَلَّقَهَا فَلَا تَحِلُّ لَهٗ مِنْۢ بَعْدُ حَتّٰى
تَنْكِحَ زَوْجًا غَيْرَهٗ ۚ فَاِنْ طَلَّقَهَا فَلَا
جُنَاحَ عَلَيْهِمَآ اَنْ يَّتَرَاجَعَآ اِنْ ظَنَّآ اَنْ
يُّقِيْمَا حُدُوْدَ اللّٰهِ ۚ وَتِلْكَ حُدُوْدُ اللّٰهِ
يُبَيِّنُهَا لِقَوْمٍ يَّعْلَمُوْنَ ﴿٢٣٠﴾

**232.** **ನೀವು ಸ್ತ್ರೀಯರಿಗೆ** (ರದ್ದುಗೊಳಿಸಲ್ಪಡುವ) **ತಲಾಖ್ ನೀಡಿ ಅವರು** ('ಇದ್ದಃ'ದ) **ಅಂತ್ಯಾವಧಿಯವರೆಗೆ**

وَاِذَا طَلَّقْتُمُ النِّسَآءَ فَبَلَغْنَ اَجَلَهُنَّ
فَاَمْسِكُوْهُنَّ بِمَعْرُوْفٍ اَوْ سَرِّحُوْهُنَّ

66. ಒಂದೇ ಬಾರಿಗೆ ಮೂರು ಸಲ 'ತಲಾಖ್' ಹೇಳಿದರೂ ಅದು 'ಬಾಇನ್' (ಹಿಂತೆಗೆಯಲು ಅಸಾಧ್ಯ) ಆಗುವುದೆಂದು ಈ ಕಾಲದ ಹಲವು ಧರ್ಮ ಪಂಡಿತರು ಭಾವಿಸಿಕೊಂಡಿದ್ದಾರೆ. ಎಂದರೆ, ಅವಳು ಇನ್ನೊಬ್ಬ ಪುರುಷನೊಂದಿಗೆ ಮದುವೆಯಾಗಿ ಅವನಿಂದ ವಿಚ್ಛೇದನವನ್ನು ಪಡೆಯದೆ ಮೊದಲ ಪತಿಯನ್ನು ಸ್ವೀಕರಿಸಲು ಆಗದು ಎಂದರ್ಥ. ಇದು ಸರಿಯಲ್ಲ. ಪವಿತ್ರ ಖುರ್‌ಆನಿನಲ್ಲಿ 'ಅತ್ತಲಾಖು ಮರ್‌ರತಾನಿ' (ರದ್ದುಗೊಳಿಸಲ್ಪಡುವ ತಲಾಖ್ ಎರಡು ಸಲವಾಗಿದೆ) ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಒಮ್ಮೆ ವಿವಾಹ ವಿಚ್ಛೇದ ಮಾಡಿದ ಸ್ತ್ರೀಯನ್ನು 'ಇದ್ದಃ' ಕಾಲದಲ್ಲಿ (ಮೂರು ಆರ್ತವ ಕಾಲಾವಧಿಯಲ್ಲಿ) ಮರಳಿ ಪಡೆಯಲಾಯಿತು ಅಥವಾ 'ಇದ್ಧಃ' ಕಳೆದ ಬಳಿಕ ಪುನಃ ವಿಧಿವತ್ತಾಗಿ ವಿವಾಹ ಮಾಡಲಾಯಿತು ಎಂದು ಭಾವಿಸೋಣ. ಮತ್ತೊಮ್ಮೆ ಅವರಲ್ಲಿ ವಿರಸವುಂಟಾಗಿ ಎರಡನೆಯ ಸಲ ತಲಾಖ್ ಹೇಳಲಾಯಿತು. ಆಗ ಸಹ, 'ಇದ್ದಃ' ಕಾಲದಲ್ಲಿ ಮರಳಿ ಪಡೆಯಬಹುದು ಅಥವಾ 'ಇದ್ದಃ' ಕಳೆದ ಬಳಿಕ ಮರು ಮದುವೆ ಮಾಡಬಹುದು ಎಂಬುದು ಖುರ್‌ಆನಿನ ವಿಧಿ. ಒಂದೇ ಸಂದರ್ಭದಲ್ಲಿ ಮೂರು ಅಥವಾ ಅದಕ್ಕಿಂತ ಹೆಚ್ಚುಸಲ ತಲಾಖ್ ಹೇಳುವುದರಿಂದ ತಲಾಖ್ 'ಬಾಇನ್' (ರದ್ದು ಪಡಿಸಲು ಸಾಧ್ಯವಿಲ್ಲದ ತಲಾಖ್) ಆಗುವುದೆಂಬ ಅಭಿಪ್ರಾಯ ಪವಿತ್ರ ಖುರ್‌ಆನಿನ ಅಧ್ಯಾಪನಕ್ಕೆ ವಿರುದ್ಧವಾಗಿದೆ. ಮೇಲೆ ವಿವರಿಸಿದ ರೀತಿಯಲ್ಲಿ ಮೂರನೆಯ ಸಲ ತಲಾಖ್ ಹೇಳಿದರೆ ಮಾತ್ರ ತಲಾಖ್ 'ಬಾಇನ್' ಆಗುತ್ತದೆ. ಹೀಗೆ ಸಂಭವಿಸಿದರೆ, ಆ ಸ್ತ್ರೀ ಇನ್ನೊಬ್ಬನನ್ನು ಮದುವೆಯಾಗಿ ಆತನಿಂದ ಸ್ವಾಭಾವಿಕವಾಗಿ ವಿವಾಹ ವಿಚ್ಛೇದ ಪಡೆದರೆ ಅಥವಾ ಆತನು ಮೃತಪಟ್ಟರೆ ಮಾತ್ರ ಆಕೆಯ ಮೊದಲ ಗಂಡನಿಗೆ ಅವಳನ್ನು ವಿವಾಹವಾಗಲು ಅನುಮತಿ ಇದೆ. ನಮ್ಮ ನಾಡಿನಲ್ಲಿ ವಿವಾಹ ವಿಚ್ಛೇದ ಸಂಪ್ರದಾಯ ಅಪಹಾಸ್ಯಕ್ಕೆ ಗುರಿಯಾಗಿದೆ. ಒಂದೇ ಸಂದರ್ಭದಲ್ಲಿ ಮೂರು ಸಲ ತಲಾಖ್ ಹೇಳಿದರೆ 'ಬಾಇನ್' ಆಯಿತೆಂದು ಹಲವರು ಭಾವಿಸಿಕೊಂಡಿದ್ದಾರೆ. 'ಹಲಾಲಃ' ಎಂಬ ಅಸಭ್ಯ ರೂಢಿ ಅದಕ್ಕೆ ಪರಿಹಾರವಾಗಿ ಅಂಗೀಕರಿಸಲ್ಪಟ್ಟಿರುವುದು ಖೇದಕರವಾಗಿದೆ.

67. ಇಲ್ಲಿ 'ನೀವು' ಎಂದು ಹೇಳಿದುದರ ಉದ್ದೇಶ ಇಸ್ಲಾಮೀ ಸಮಾಜ ಅಥವಾ ಇಸ್ಲಾಮಿನಲ್ಲಿ ವಿಶ್ವಾಸವುಳ್ಳ ಸರಕಾರವಾಗಿದೆ. ಎಂದರೆ ನ್ಯಾಯಾಂಗ. ಸ್ತ್ರೀಯು ಪುರುಷನೊಂದಿಗೆ ವಾಸಿಸಲು ಇಷ್ಟಪಡದ ಪರಿಸ್ಥಿತಿಯಲ್ಲಿ ಪುರುಷನಿಗೆ ನ್ಯಾಯಪಾಲಿಸಲು ಸಾಧ್ಯವಾಗದೆ ಬರಬಹುದು. ಆ ಸ್ಥಿತಿಯಲ್ಲಿ ಸ್ತ್ರೀಯು ಪುರುಷನಿಗೆ ಏನನ್ನಾದರೂ ಕೊಟ್ಟು ವಿಚ್ಛೇದನ ಪಡೆಯಲು ಬಯಸುವಳಾದರೆ, ಅವಳಿಂದ ಅದನ್ನು ಪಡೆದು ವಿವಾಹ ವಿಚ್ಛೇದನ ಮಾಡಬಹುದಾಗಿದೆ. ಆದರೆ ಅವನು ಸ್ತ್ರೀಗೆ ಕೊಟ್ಟುದನ್ನು ಮಾತ್ರವೇ ಹಿಂದಕ್ಕೆ ಪಡೆಯಬಹುದು; ಹೆಚ್ಚು ಸಲ್ಲದು.

68 ಅವಳ ಎರಡನೆಯ ಪತಿ ಅವಳ ವಿವಾಹ ವಿಚ್ಛೇದನ ಮಾಡುವ ವರೆಗೆ ಎಂದು ತಾತ್ಪರ್ಯ.

ತಲಪಿದರೆ, ಒಂದೋ ಅವರನ್ನು ನೀವು ಮರಳಿ ಪಡೆದು ನ್ಯಾಯೋಚಿತವಾದ ರೀತಿಯಲ್ಲಿ ನಿಮ್ಮೊಂದಿಗೆ ಇರಿಸಿಕೊಳ್ಳಿರಿ, ಅಥವಾ ನ್ಯಾಯೋಚಿತವಾಗಿ ಅವರನ್ನು ಬಿಡುಗಡೆ ಮಾಡಿರಿ. ಅತಿಕ್ರಮದಿಂದ ವರ್ತಿಸಲಿಕ್ಕಾಗಿ ತಪ್ಪಾದ ರೀತಿಯಲ್ಲಿ ಅವರನ್ನು ನಿಮ್ಮೊಂದಿಗೆ ಇರಿಸಿ ಕೊಳ್ಳಬೇಡಿರಿ. ಯಾವನಾದರೂ ಹಾಗೆ ಮಾಡಿದರೆ ಅವನು ತನಗೇ ದೋಷವನ್ನುಂಟು ಮಾಡುತ್ತಾನೆ. ನೀವು ಅಲ್ಲಾಹನ ಆಜ್ಞೆಗಳನ್ನು ಅಪಹಾಸ್ಯಕ್ಕೆ ಗುರಿಪಡಿಸಬೇಡಿರಿ. ಅಲ್ಲಾಹನು ನಿಮಗೆ ನೀಡಿದ ಅನುಗ್ರಹವನ್ನೂ ನಿಮಗೆ ಉಪದೇಶಿಸುತ್ತಾ ಅವನು ನಿಮಗೋಸ್ಕರ ಅವತೀರ್ಣಗೊಳಿಸಿದ ಗ್ರಂಥ ಮತ್ತು (ಅದರ) ತತ್ವ ಜ್ಞಾನವನ್ನೂ ನೀವು ಸ್ಮರಿಸಿರಿ. ಅಲ್ಲಾಹನ ಭಯ ವಿಟ್ಟುಕೊಳ್ಳಿರಿ. ಅಲ್ಲಾಹನು ಎಲ್ಲವನ್ನೂ ಚೆನ್ನಾಗಿ ಬಲ್ಲವನೆಂದು ತಿಳಿದು ಕೊಳ್ಳಿರಿ.

بِمَعْرُوفٍ وَلَا تُمْسِكُوهُنَّ ضِرَارًا لِّتَعْتَدُوا
وَمَن يَفْعَلْ ذَٰلِكَ فَقَدْ ظَلَمَ نَفْسَهُ ۚ وَلَا
تَتَّخِذُوا آيَاتِ اللَّهِ هُزُوًا ۚ وَاذْكُرُوا
نِعْمَتَ اللَّهِ عَلَيْكُمْ وَمَا أَنزَلَ عَلَيْكُم
مِّنَ الْكِتَابِ وَالْحِكْمَةِ يَعِظُكُم بِهِ ۚ وَاتَّقُوا
اللَّهَ وَاعْلَمُوا أَنَّ اللَّهَ بِكُلِّ شَيْءٍ عَلِيمٌ ﴿٢٣١﴾

233. ನೀವು ಸ್ತ್ರೀಯರಿಗೆ ತಲಾಖ್ ಹೇಳಿ ಅವರು ತಮ್ಮ 'ಇದ್ದಃ' ಕಾಲವನ್ನು ಪೂರ್ಣಗೊಳಿಸಿದರೆ, ಅವರು ಸಭ್ಯ ರೀತಿಯಲ್ಲಿ ಪರಸ್ಪರ ಒಪ್ಪಿ ಕೊಳ್ಳುವ ಪಕ್ಷದಲ್ಲಿ ಅವರ (ಮೊದಲ) ಗಂಡಂದಿರನ್ನು ಪುನಃ ವಿವಾಹವಾಗುವುದರಿಂದ ನೀವು[69] ಅವರನ್ನು ತಡೆಯ ಬಾರದು. ಇದು ನಿಮ್ಮ ಪೈಕಿ ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ನಂಬಿಕೆಯಿರಿಸುವವರಿಗೆ ನೀಡಲಾಗುವ ಉಪದೇಶವಾಗಿದೆ. ಇದು ನಿಮಗೆ ಅತ್ಯಂತ ಅನುಗ್ರಹದಾಯಕವೂ ಪರಿಶುದ್ಧವೂ ಆಗಿದೆ. ಅಲ್ಲಾಹನು ತಿಳಿದವನಾಗಿದ್ದಾನೆ; ನೀವು ತಿಳಿದವರಲ್ಲ.

وَإِذَا طَلَّقْتُمُ النِّسَاءَ فَبَلَغْنَ أَجَلَهُنَّ فَلَا
تَعْضُلُوهُنَّ أَن يَنكِحْنَ أَزْوَاجَهُنَّ إِذَا
تَرَاضَوْا بَيْنَهُم بِالْمَعْرُوفِ ۗ ذَٰلِكَ
يُوعَظُ بِهِ مَن كَانَ مِنكُمْ يُؤْمِنُ بِاللَّهِ وَ
الْيَوْمِ الْآخِرِ ۗ ذَٰلِكُمْ أَزْكَىٰ لَكُمْ وَأَطْهَرُ ۗ وَ
اللَّهُ يَعْلَمُ وَأَنتُمْ لَا تَعْلَمُونَ ﴿٢٣٢﴾

234. ತಾಯಂದಿರು ತಮ್ಮ ಶಿಶುಗಳಿಗೆ ಪೂರ್ಣ ವಾಗಿ ಎರಡು ವರ್ಷಕಾಲ ಮೊಲೆಯುಣ್ಣಿಸಬೇಕಾಗಿದೆ. ಇದು (ನಿಶ್ಚಿತ ಕಾಲದ ವರೆಗೆ) ಸ್ತನ್ಯಪಾನವನ್ನು ಪೂರ್ಣಗೊಳಿಸಲು ಬಯಸುವವರಿಗೆ ಆದೇಶ. ನ್ಯಾಯೋಚಿತವಾಗಿ ಅವರಿಗೆ (ಮೊಲೆಯುಣ್ಣಿಸುವ

وَالْوَالِدَاتُ يُرْضِعْنَ أَوْلَادَهُنَّ حَوْلَيْنِ
كَامِلَيْنِ ۖ لِمَنْ أَرَادَ أَن يُتِمَّ الرَّضَاعَةَ ۚ وَ
عَلَى الْمَوْلُودِ لَهُ رِزْقُهُنَّ وَكِسْوَتُهُنَّ
بِالْمَعْرُوفِ ۚ لَا تُكَلَّفُ نَفْسٌ إِلَّا وُسْعَهَا ۚ

69. ಸ್ತ್ರೀ ಮತ್ತು ಪುರುಷನ ಬಂಧುಗಳು.





ತಾಯಂದಿರಿಗೆ) ಆಹಾರ ಮತ್ತು ಉಡುಗೆ ತೊಡುಗೆ[70] ನೀಡಬೇಕಾದುದು ಆ ಮಗುವಿನ ತಂದೆಯ ಹೊಣೆಯಾಗಿದೆ. ಯಾವ ಆತ್ಮಕ್ಕೂ ಅದರ ಶಕ್ತಿಗೆ ಮೀರಿ ಹೊಣೆ ಹೊರಿಸಲಾಗುವುದಿಲ್ಲ. ತಾಯಿಯನ್ನು ಅವಳ ಮಗುವಿನ ಕಾರಣದಿಂದ ಪೀಡಿಸಬಾರದು. ತಂದೆಯನ್ನು ಸಹ ಅವನ ಮಗುವಿನ ಕಾರಣದಿಂದ ಪೀಡಿಸಬಾರದು. ವಾರೀಸುದಾರರಿಗೂ ಇದೇ ರೀತಿಯ ಹೊಣೆಗಾರಿಕೆ ಇದೆ. ಇನ್ನು ಈರ್ವರೂ (ತಾಯಿ ಮತ್ತು ತಂದೆ) ಪರಸ್ಪರ ಪರ್ಯಾಲೋಚನೆ ಮಾಡಿ ಒಪ್ಪಿಕೊಂಡು ಮಗುವಿನ ಮೊಲೆ ಹಾಲು ಬಿಡಿಸಲು ಬಯಸುವುದಾದರೆ ಅವರ ಮೇಲೆ ಪಾಪವೇನೂ ಇಲ್ಲ. ನೀವು ನಿಮ್ಮ ಶಿಶುಗಳಿಗೆ (ಬೇರೆ ಸ್ತ್ರೀಯರಿಂದ) ಮೊಲೆಯುಣ್ಣಿಸಲು ಇಚ್ಛಿಸುವುದಾದರೆ, ಅದರಲ್ಲೂ ನಿಮ್ಮ ಮೇಲೆ ಪಾಪವಿಲ್ಲ- ನೀವು (ಪ್ರತಿಫಲವಾಗಿ) ನಿಶ್ಚಯಿಸಿರುವುದನ್ನು ಯಥಾಕ್ರಮ ಕೊಡುವುದಾದರೆ. ಅಲ್ಲಾಹನ ಭಯ ವಿರಿಸಿಕೊಳ್ಳಿರಿ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಕಾಣುತ್ತಾನೆಂದು ತಿಳಿದುಕೊಳ್ಳಿರಿ.

لَا تُضَارَّ وَالِدَةٌ بِوَلَدِهَا وَلَا مَوْلُودٌ لَّهُ
بِوَلَدِهِ ۚ وَعَلَى الْوَارِثِ مِثْلُ ذَٰلِكَ ۗ
فَإِنْ أَرَادَا فِصَالًا عَن تَرَاضٍ مِّنْهُمَا وَ
تَشَاوُرٍ فَلَا جُنَاحَ عَلَيْهِمَا ۗ وَإِنْ أَرَدتُّمْ
أَن تَسْتَرْضِعُوا أَوْلَادَكُمْ فَلَا جُنَاحَ
عَلَيْكُمْ إِذَا سَلَّمْتُم مَّا آتَيْتُم بِالْمَعْرُوفِ ۗ
وَاتَّقُوا اللَّهَ وَاعْلَمُوا أَنَّ اللَّهَ بِمَا تَعْمَلُونَ
بَصِيرٌ ﴿٢٣٣﴾

235. ನಿಮ್ಮ ಪೈಕಿ ಮೃತಪಟ್ಟವರು ಅಗಲಿ ಹೋದ ಪತ್ನಿಯರು ನಾಲ್ಕು ಮಾಸ ಮತ್ತು ಹತ್ತು ದಿನಗಳ ಕಾಲ ತಮ್ಮನ್ನು ತಡೆದಿಟ್ಟುಕೊಳ್ಳಬೇಕಾಗಿದೆ. ಅವರು ಆ ಕಾಲಾವಧಿಯನ್ನು ಪೂರ್ಣಗೊಳಿಸಿದ ಬಳಿಕ ತಮ್ಮ ಬಗ್ಗೆ ಯಥೋಚಿತವಾದ ರೀತಿಯಲ್ಲಿ ನಡೆದು ಕೊಳ್ಳುವರಾದರೆ, ನಿಮ್ಮ ಮೇಲೆ ಪಾಪವೇನೂ ಇಲ್ಲ. ನೀವು ಮಾಡುವುದನ್ನೆಲ್ಲ ಅಲ್ಲಾಹನು ತಿಳಿಯುತ್ತಾನೆ.

وَالَّذِينَ يُتَوَفَّوْنَ مِنكُمْ وَيَذَرُونَ أَزْوَاجًا
يَتَرَبَّصْنَ بِأَنفُسِهِنَّ أَرْبَعَةَ أَشْهُرٍ وَ
عَشْرًا ۖ فَإِذَا بَلَغْنَ أَجَلَهُنَّ فَلَا جُنَاحَ
عَلَيْكُمْ فِيمَا فَعَلْنَ فِي أَنفُسِهِنَّ
بِالْمَعْرُوفِ ۗ وَاللَّهُ بِمَا تَعْمَلُونَ خَبِيرٌ ﴿٢٣٤﴾

236. (ಅಂತಹ) ಸ್ತ್ರೀಯರನ್ನು ವಿವಾಹವಾಗುವುದರ ಬಗ್ಗೆ ನೀವು ಸೂಚನೆ ನೀಡಿದ್ದಲ್ಲಿ ಅಥವಾ (ಆ ವಿಚಾರ ವನ್ನು) ನಿಮ್ಮ ಮನಸ್ಸಿನಲ್ಲಿ ಬಚ್ಚಿಡುವುದರಲ್ಲಿ ನಿಮ್ಮ ಮೇಲೆ ಪಾಪವೇನೂ ಇಲ್ಲ. ನಿಮಗೆ ಅವರ ಬಗ್ಗೆ ನೆನಪಾಗುವುದೆಂದು ಅಲ್ಲಾಹನು ಬಲ್ಲನು. ಆದರೆ ನೀವು

وَلَا جُنَاحَ عَلَيْكُمْ فِيمَا عَرَّضْتُم بِهِ مِنْ
خِطْبَةِ النِّسَاءِ أَوْ أَكْنَنتُمْ فِي أَنفُسِكُمْ ۚ
عَلِمَ اللَّهُ أَنَّكُمْ سَتَذْكُرُونَهُنَّ وَلَٰكِن
لَّا تُوَاعِدُوهُنَّ سِرًّا إِلَّا أَن تَقُولُوا قَوْلًا

70. ಇಲ್ಲಿ ಆಹಾರ ಮತ್ತು ಉಡುಗೆ ತೊಡುಗೆ ಎಂಬುದರ ತಾತ್ಪರ್ಯ ಅಗತ್ಯವಿರುವ ಎಲ್ಲ ಖರ್ಚು ಎಂದಾಗಿದೆ.

ಶಿಷ್ಟತೆಯಿಂದ ಅವರೊಡನೆ ಮಾತನಾಡಬೇಕು ಹೊರತು ರಹಸ್ಯ ಒಪ್ಪಂದ ಮಾಡಬಾರದು. ('ಇದ್ದಃ'ದ) ನಿರ್ದಿಷ್ಟಾವಧಿ ಮುಗಿಯುವ ತನಕ ನೀವು ವಿವಾಹ ಸಂಬಂಧವನ್ನು ದೃಢಪಡಿಸಲೂ ಬಾರದು. ನಿಮ್ಮ ಹೃದಯಗಳಲ್ಲಿರುವುದನ್ನು ಅಲ್ಲಾಹನು ಅರಿಯುತ್ತಾನೆಂದು ನೀವು ತಿಳಿದು ಕೊಳ್ಳಿರಿ; ಆದ್ದರಿಂದ ನೀವು ಅವನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಸಹನಶೀಲನೂ ಆಗಿದ್ದಾನೆಂದು ಸಹ ತಿಳಿದು ಕೊಳ್ಳಿರಿ.

مَّعْرُوْفًا ۖ وَلَا تَعْزِمُوْا عُقْدَةَ النِّكَاحِ
حَتّٰى يَبْلُغَ الْكِتٰبُ اَجَلَهٗ ۖ وَاعْلَمُوْٓا اَنَّ
اللّٰهَ يَعْلَمُ مَا فِيْٓ اَنْفُسِكُمْ فَاحْذَرُوْهُ ۚ
وَاعْلَمُوْٓا اَنَّ اللّٰهَ غَفُوْرٌ حَلِيْمٌ ﴿٢٣٥﴾

237. ನೀವು ಸ್ತ್ರೀಯರನ್ನು (ಮದುವೆಯಾಗಿ) ಸ್ಪರ್ಶಿಸದ ಸ್ಥಿತಿಯಲ್ಲಿ ಅಥವಾ ವಿವಾಹಧನ ('ಮಹರ್') ವಾಗಿ ಏನನ್ನೂ ನಿಶ್ಚಯಿಸದ ಸ್ಥಿತಿಯಲ್ಲಿ ಅವರ ವಿವಾಹ ವಿಚ್ಛೇದ ಮಾಡುವುದಾದರೆ ನಿಮ್ಮ ಮೇಲೆ ಪಾಪವೇನೂ ಇಲ್ಲ. ಆದರೆ (ಈ ಸ್ಥಿತಿಯಲ್ಲಿ) ನೀವು ಅವರಿಗೆ ಏನಾದರೂ ಪರಿಹಾರ ನೀಡಬೇಕಾಗಿದೆ - ಧನಿಕನು ಅವನ ಶಕ್ತ್ಯಾನುಸಾರ ಮತ್ತು ದರಿದ್ರನು ಅವನ ಶಕ್ತ್ಯಾನುಸಾರ - ಯಥೋಚಿತವಾಗಿ. ಇದು ಸದ್ಧರ್ಮಿಗಳ ಹೊಣೆಯಾಗಿದೆ.

لَا جُنَاحَ عَلَيْكُمْ اِنْ طَلَّقْتُمُ النِّسَآءَ
مَا لَمْ تَمَسُّوْهُنَّ اَوْ تَفْرِضُوْا لَهُنَّ
فَرِيْضَةً ۖۚ وَّمَتِّعُوْهُنَّ ۚ عَلَى الْمُوْسِعِ
قَدَرُهٗ وَعَلَى الْمُقْتِرِ قَدَرُهٗ ۚ مَتَاعًا
بِالْمَعْرُوْفِ ۚ حَقًّا عَلَى الْمُحْسِنِيْنَ ﴿٢٣٦﴾

238. ನೀವು ಅವರಿಗೆ ವಿವಾಹಧನ ನಿಶ್ಚಯಿಸಿದ್ದು, ಅವರನ್ನು ಸ್ಪರ್ಶಿಸುವುದಕ್ಕಿಂತ ಮುಂಚೆ ವಿವಾಹ ವಿಚ್ಛೇದ ಮಾಡುವುದಾದರೆ, ನೀವು ನಿಶ್ಚಯಿಸಿದ್ದರ ಅರ್ಧದಷ್ಟನ್ನು ಅವರಿಗೆ ಕೊಡಬೇಕಾಗಿದೆ- ಅವರು ಬಿಟ್ಟು ಬಿಡುವುದಾದರೆ ಅಥವಾ ವಿವಾಹ ಬಂಧದ ಅಧಿಕಾರ ಯಾರ ಕೈಯಲ್ಲಿದೆಯೋ ಆತನು ರಿಯಾಯಿತಿ ಮಾಡುವುದಾದರೆ ಹೊರತು. ನೀವು ರಿಯಾಯಿತಿ ತೋರಿಸುವುದು ದೇವಭಕ್ತಿಗೆ ಅತಿ ಸಮೀಪದ್ದಾಗಿದೆ. ನೀವು ಪರಸ್ಪರ ಔದಾರ್ಯ ತೋರಿಸುವುದನ್ನು ಮರೆಯಬಾರದು. ಖಂಡಿತವಾಗಿಯೂ ನೀವು ಮಾಡುವುದನ್ನೆಲ್ಲ ಅಲ್ಲಾಹನು ಕಾಣುತ್ತಾನೆ.

وَاِنْ طَلَّقْتُمُوْهُنَّ مِنْ قَبْلِ اَنْ
تَمَسُّوْهُنَّ وَقَدْ فَرَضْتُمْ لَهُنَّ فَرِيْضَةً
فَنِصْفُ مَا فَرَضْتُمْ اِلَّآ اَنْ يَّعْفُوْنَ اَوْ
يَعْفُوَا الَّذِيْ بِيَدِهٖ عُقْدَةُ النِّكَاحِ ۚ
وَاَنْ تَعْفُوْٓا اَقْرَبُ لِلتَّقْوٰى ۚ وَلَا
تَنْسَوُا الْفَضْلَ بَيْنَكُمْ ۚ اِنَّ اللّٰهَ بِمَا
تَعْمَلُوْنَ بَصِيْرٌ ﴿٢٣٧﴾





239. (ಎಲ್ಲ) ನಮಾಝ್‌ಗಳನ್ನೂ (ವಿಶೇಷವಾಗಿ) ಮಧ್ಯ ನಮಾಝನ್ನೂ ನೀವು ಜಾಗರೂಕತೆಯಿಂದ ನಿರ್ವಹಿಸಿರಿ. ನೀವು ಅಲ್ಲಾಹನ ಮುಂದೆ ವಿಧೇಯರಾಗಿ ನಿಲ್ಲಿರಿ.

حٰفِظُوْا عَلَى الصَّلَوٰتِ وَالصَّلٰوةِ
الْوُسْطٰى ۚ وَقُوْمُوْا لِلّٰهِ قٰنِتِيْنَ ﴿٢٣٨﴾

240. ನಿಮಗೆ ಭಯವಿದ್ದರೆ ನಡೆದುಕೊಂಡು ಅಥವಾ ಸವಾರಿ ಮಾಡುತ್ತಾ (ನಮಾಝ್ ಮಾಡಿರಿ). ಅನಂತರ ನೀವು ನಿರ್ಭಯರಾದರೆ (ಮುಂಚೆ) ನಿಮಗೆ ತಿಳಿಯದಿದ್ದುದನ್ನು ಅಲ್ಲಾಹನು ನಿಮಗೆ ಕಲಿಸಿದ ಪ್ರಕಾರ ನೀವು ಅವನನ್ನು ಸ್ಮರಿಸಿರಿ.

فَاِنْ خِفْتُمْ فَرِجَالًا اَوْ رُكْبَانًا ۚ فَاِذَآ
اَمِنْتُمْ فَاذْكُرُوا اللّٰهَ كَمَا عَلَّمَكُمْ مَّا
لَمْ تَكُوْنُوْا تَعْلَمُوْنَ ﴿٢٣٩﴾

241. ನಿಮ್ಮ ಪೈಕಿ ಮೃತಪಟ್ಟು ಪತ್ನಿಯರಿಂದ ಅಗಲುವವರು, ತಮ್ಮ ಪತ್ನಿಯಂದಿರನ್ನು ಮನೆಯಿಂದ ಹೊರಹಾಕದೆ ಒಂದು ವರ್ಷಕಾಲ ಜೀವನಾಂಶ ಕೊಡಬೇಕಾಗಿ 'ವಸಿಯ್ಯತ್' (ಮರಣಶಾಸನ) ಮಾಡಬೇಕು. ಆದರೆ ಅವರು (ತಾವಾಗಿಯೇ) ಹೊರಟು ಹೋಗುವುದಾದರೆ, ತಮ್ಮ ಕುರಿತು ಅವರು ನ್ಯಾಯೋಚಿತವಾಗಿ ಏನು ಮಾಡಿದರೂ ಅದರಲ್ಲಿ ನಿಮಗೆ ಪಾಪವಿಲ್ಲ. ಅಲ್ಲಾಹನು ಪ್ರತಾಪಶಾಲಿಯೂ ಬುದ್ಧಿವಂತನೂ ಆಗಿದ್ದಾನೆ.

وَالَّذِيْنَ يُتَوَفَّوْنَ مِنْكُمْ وَيَذَرُوْنَ
اَزْوَاجًا ۖۚ وَّصِيَّةً لِّاَزْوَاجِهِمْ مَّتَاعًا اِلَى
الْحَوْلِ غَيْرَ اِخْرَاجٍ ۚ فَاِنْ خَرَجْنَ فَلَا
جُنَاحَ عَلَيْكُمْ فِيْ مَا فَعَلْنَ فِيْٓ اَنْفُسِهِنَّ
مِنْ مَّعْرُوْفٍ ۗ وَاللّٰهُ عَزِيْزٌ حَكِيْمٌ ﴿٢٤٠﴾

242. ವಿವಾಹ ವಿಚ್ಛೇದಿತ ಸ್ತ್ರೀಯರಿಗೂ ನ್ಯಾಯೋಚಿತವಾಗಿ ಏನಾದರೂ ಪರಿಹಾರ ನೀಡಬೇಕಾಗಿದೆ. (ಇದು) ಭಯಭಕ್ತಿ ತೋರಿಸುವವರ ಮೇಲೆ ಒಂದು ಹೊಣೆಗಾರಿಕೆಯಾಗಿದೆ.

وَلِلْمُطَلَّقٰتِ مَتَاعٌ ۢ بِالْمَعْرُوْفِ ۗ حَقًّا
عَلَى الْمُتَّقِيْنَ ﴿٢٤١﴾

243. ನೀವು ಚಿಂತನೆ ಮಾಡಿ ಗ್ರಹಿಸಿಕೊಳ್ಳಲಿಕ್ಕಾಗಿ, ಈ ಪ್ರಕಾರ ಅಲ್ಲಾಹನು ತನ್ನ ಆಜ್ಞೆಗಳನ್ನು ನಿಮಗೆ ವಿವರಿಸಿ ಕೊಡುತ್ತಾನೆ.

كَذٰلِكَ يُبَيِّنُ اللّٰهُ لَكُمْ اٰيٰتِهٖ لَعَلَّكُمْ
تَعْقِلُوْنَ ﴿٢٤٢﴾

244. ಸಾವಿರಾರು ಸಂಖ್ಯೆಯಲ್ಲಿದ್ದೂ ಮರಣಭಯದಿಂದ ತಮ್ಮ ಮನೆಗಳಿಂದ ಹೊರಟುಹೋದವರ ಕುರಿತು[71] ನೀನು ತಿಳಿದಿಲ್ಲವೇ? ನೀವು ಸಾಯಿರಿ ಎಂದು

اَلَمْ تَرَ اِلَى الَّذِيْنَ خَرَجُوْا مِنْ دِيَارِهِمْ
وَهُمْ اُلُوْفٌ حَذَرَ الْمَوْتِ ۠ فَقَالَ لَهُمُ

اللَّهُ مُوتُوا ثُمَّ أَحْيَاهُمْ ۚ إِنَّ اللَّهَ لَذُو فَضْلٍ عَلَى النَّاسِ وَلَٰكِنَّ أَكْثَرَ النَّاسِ لَا يَشْكُرُونَ ﴿٢٤٣﴾

**ಅಲ್ಲಾಹನು ಅವರೊಡನೆ ಹೇಳಿದನು. ಮತ್ತೆ ಅವರಿಗೆ ಅವನು ಜೀವ ನೀಡಿದನು.**[72] **ದಿಟವಾಗಿಯೂ ಅಲ್ಲಾಹನು ಮನುಷ್ಯರ ಮೇಲೆ ಬಹಳ ಔದಾರ್ಯ ತೋರಿಸುವವನಾಗಿದ್ದಾನೆ. ಆದರೆ ಜನರಲ್ಲಿ ಹೆಚ್ಚಿನವರು ಕೃತಜ್ಞತೆ ತೋರಿಸುವುದಿಲ್ಲ.**

وَقَاتِلُوا فِي سَبِيلِ اللَّهِ وَاعْلَمُوا أَنَّ اللَّهَ سَمِيعٌ عَلِيمٌ ﴿٢٤٤﴾

**245. ಅಲ್ಲಾಹನ ಮಾರ್ಗದಲ್ಲಿ ನೀವು ಹೋರಾಡಿರಿ. ಖಂಡಿತವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಚೆನ್ನಾಗಿ ಬಲ್ಲವನೂ ಆಗಿದ್ದಾನೆ.**

مَنْ ذَا الَّذِي يُقْرِضُ اللَّهَ قَرْضًا حَسَنًا فَيُضَاعِفَهُ لَهُ أَضْعَافًا كَثِيرَةً ۚ وَاللَّهُ يَقْبِضُ وَيَبْسُطُ وَإِلَيْهِ تُرْجَعُونَ ﴿٢٤٥﴾

**246.** (ತನ್ನ ಸಂಪತ್ತಿನಿಂದ) **ಅಲ್ಲಾಹನಿಗಾಗಿ ಉತ್ತಮವಾದ ಒಂದಂಶವನ್ನು ಮುರಿದು ಕೊಡುವವರು**[73] **ಯಾರಿದ್ದಾರೆ? ಹಾಗೆ ಮಾಡುವುದಾದರೆ, ಅವನು** (ಅಲ್ಲಾಹನು) **ಅದನ್ನು ಅವನಿಗೆ ಅನೇಕ ಪಟ್ಟು ಹೆಚ್ಚಿಸಿ ಕೊಡುವನು. ಅಲ್ಲಾಹನು** (ಧನವನ್ನು) **ಪಡೆದು ಅದನ್ನು ವೃದ್ಧಿಗೊಳಿಸಿ ಕೊಡುತ್ತಾನೆ.** (ಇದು ಅವನ ಕ್ರಮವಾಗಿದೆ). (ಕೊನೆಗೆ) **ಅವನೆಡೆಗೆಯೇ ನೀವು ಮರಳಿಸಲ್ಪಡುವಿರಿ.**

أَلَمْ تَرَ إِلَى الْمَلَإِ مِنْ بَنِي إِسْرَائِيلَ مِنْ بَعْدِ مُوسَىٰ إِذْ قَالُوا لِنَبِيٍّ لَهُمُ ابْعَثْ لَنَا مَلِكًا نُقَاتِلْ فِي سَبِيلِ اللَّهِ ۖ قَالَ هَلْ عَسَيْتُمْ إِنْ كُتِبَ عَلَيْكُمُ الْقِتَالُ أَلَّا تُقَاتِلُوا ۖ قَالُوا وَمَا لَنَا أَلَّا نُقَاتِلَ فِي سَبِيلِ اللَّهِ وَقَدْ أُخْرِجْنَا مِنْ دِيَارِنَا وَ

**247. ಮೂಸಾರ ನಂತರ ಇಸ್ರಾಈಲ್ ಸಂತತಿಯ ಆ ಮುಖಂಡರ ಅವಸ್ಥೆಯನ್ನು ನೀನು ತಿಳಿದಿಲ್ಲವೇ?- 'ನಮಗೆ ಒಬ್ಬ ರಾಜನನ್ನು ನೇಮಕ ಮಾಡಿರಿ; ನಾವು** (ಆತನ ಕೈಕೆಳಗೆ ಸನ್ನದ್ಧರಾಗಿ) **ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುವೆವು' ಎಂದು ಅವರು ತಮ್ಮ ಒಬ್ಬ ಪ್ರವಾದಿಯೊಡನೆ ಹೇಳಿದ ಸಂದರ್ಭ - ಆ ಪ್ರವಾದಿ ಕೇಳಿದರು: 'ನಿಮಗೆ ಯುದ್ಧವನ್ನು ಕಡ್ಡಾಯಗೊಳಿಸಿದರೆ ನೀವು ಯುದ್ಧ ಮಾಡದಿರಲಾರಿರಷ್ಟೇ?' ಅವರು**

71. ಫಿರ್‌ಔನನಿಗೆ ಹೆದರಿಕೊಂಡು ಈಜಿಪ್ಟಿನಿಂದ ಫೆಲಸ್ತೀನಕ್ಕೆ ಪಲಾಯನ ಮಾಡಿದ ಇಸ್ರಾಈಲ್ ಜನಾಂಗದ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

72. "ನೀವು ಸಾಯಿರಿ" ಎಂದರೆ ನಿಮ್ಮ ಅವಿಧೇಯತೆ ಕಾರಣದಿಂದ, ಜಯಹೊಂದುವ ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಹಿಂದೆಗೆಯಲಾಗುವುದು ಎಂದು ತಾತ್ಪರ್ಯ. "ಮತ್ತೆ ಅವರಿಗೆ ಜೀವ ನೀಡಿದನು" ಎಂದರೆ ಅಲ್ಲಾಹನು ಅವರನ್ನು ಕ್ಷಮಿಸಿ ಪುನರುದ್ಧಾರಗೊಳಿಸಿದನು ಹಾಗೂ ಸಾಮೂಹಿಕವಾಗಿ ಅವರಿಗೆ ಪ್ರಗತಿ ಮತ್ತು ಯಶಸ್ಸನ್ನು ನೀಡಿದನು ಎಂದು ಅರ್ಥ.

73. "ಯುಖ್‌ರಿಳು" - ಮುರಿದುಕೊಡು, ಸಾಲಕೊಡು ಎಂದೆಲ್ಲ ಅರ್ಥವಿದೆ. ಅಲ್ಲಾಹನ ಮಾರ್ಗದಲ್ಲಿ ಧನವ್ಯಯ ಮಾಡುವುದಾಗಿದೆ ಇಲ್ಲಿ ಉದ್ದೇಶ.





أَبْنَائِنَا ۖ فَلَمَّا كُتِبَ عَلَيْهِمُ الْقِتَالُ تَوَلَّوْا إِلَّا قَلِيلًا مِنْهُمْ ۗ وَاللَّهُ عَلِيمٌ بِالظَّالِمِينَ ﴿٢٤٦﴾

**ಹೇಳಿದರು: 'ನಾವು ನಮ್ಮ ಮನೆಗಳಿಂದ ಮತ್ತು ಮಕ್ಕಳಿಂದ ಹೊರದೂಡಲ್ಪಟ್ಟಿರುವಾಗ ಅಲ್ಲಾಹನ ಮಾರ್ಗದಲ್ಲಿ ಯುದ್ಧಮಾಡದಿರಲಿಕ್ಕೆ ನಮಗೇನು ಅಡ್ಡಿಯಿದೆ?' ಆದರೆ, ಅವರಿಗೆ ಯುದ್ಧ ಮಾಡಲು ಅಪ್ಪಣೆಯಿತ್ತಾಗ, ಅವರ ಪೈಕಿ ಕೆಲವರು ಹೊರತು** ಉಳಿದವರೆಲ್ಲ **ಹಿಮ್ಮೆಟ್ಟಿದರು. ಅಲ್ಲಾಹನು ಅಧರ್ಮಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.**

وَقَالَ لَهُمْ نَبِيُّهُمْ إِنَّ اللَّهَ قَدْ بَعَثَ لَكُمْ طَالُوتَ مَلِكًا ۚ قَالُوا أَنَّىٰ يَكُونُ لَهُ الْمُلْكُ عَلَيْنَا وَنَحْنُ أَحَقُّ بِالْمُلْكِ مِنْهُ وَلَمْ يُؤْتَ سَعَةً مِنَ الْمَالِ ۚ قَالَ إِنَّ اللَّهَ اصْطَفَاهُ عَلَيْكُمْ وَزَادَهُ بَسْطَةً فِي الْعِلْمِ وَالْجِسْمِ ۖ وَاللَّهُ يُؤْتِي مُلْكَهُ مَنْ يَشَاءُ ۚ وَاللَّهُ وَاسِعٌ عَلِيمٌ ﴿٢٤٧﴾

**248. 'ಅಲ್ಲಾಹನು ತಾಲೂತನನ್ನು ನಿಮಗೆ ಅರಸನನ್ನಾಗಿ ನೇಮಿಸಿರುವನು' ಎಂದು ಅವರ ಪ್ರವಾದಿ ಅವರೊಡನೆ ಹೇಳಿದರು. ಆಗ ಅವರು ಕೇಳಿದರು: 'ರಾಜಾಧಿಕಾರಕ್ಕೆ ಅರ್ಹತೆ ಆತನಿಗಿಂತ ನಮಗಿರುವಾಗ ಆತನಿಗೆ ನಮ್ಮ ಮೇಲೆ ಪ್ರಭುತ್ವ ಹೇಗೆ? ಆತನಿಗೆ ಐಶ್ವರ್ಯವೂ ಇಲ್ಲವಷ್ಟೆ?' ಅವರು** (ಪ್ರವಾದಿ) **ಹೇಳಿದರು: 'ಖಂಡಿತವಾಗಿಯೂ ಅಲ್ಲಾಹನು ಆತನನ್ನು ನಿಮಗಿಂತ ಶ್ರೇಷ್ಠನನ್ನಾಗಿ ಮಾಡಿ ಆತನಿಗೆ ಅಪಾರ ಪಾಂಡಿತ್ಯವನ್ನೂ ದೇಹದಾರ್ಢ್ಯವನ್ನೂ ನೀಡಿರುವನು. ಅಲ್ಲಾಹನು ತಾನು ಇಚ್ಛಿಸುವವರಿಗೆ ತನ್ನ ಆಧಿಪತ್ಯವನ್ನು**[74] **ನೀಡುತ್ತಾನೆ. ಅಲ್ಲಾಹನು ಅತಿ ಉದಾರಿಯೂ ಎಲ್ಲ ಬಲ್ಲವನೂ ಆಗಿದ್ದಾನೆ.'**

وَقَالَ لَهُمْ نَبِيُّهُمْ إِنَّ آيَةَ مُلْكِهِ أَنْ يَأْتِيَكُمُ التَّابُوتُ فِيهِ سَكِينَةٌ مِنْ رَبِّكُمْ وَبَقِيَّةٌ مِمَّا تَرَكَ آلُ مُوسَىٰ وَآلُ هَارُونَ تَحْمِلُهُ الْمَلَائِكَةُ ۚ إِنَّ فِي ذَٰلِكَ لَآيَةً لَكُمْ إِنْ كُنْتُمْ مُؤْمِنِينَ ﴿٢٤٨﴾

**249. ಅವರ ಪ್ರವಾದಿ ಅವರೊಡನೆ ಹೇಳಿದರು: "ಆತನ ಆಧಿಪತ್ಯದ ಸಂಕೇತವಾಗಿ ನಿಮಗೆ ಆ 'ತಾಬೂತ್'**[75] **ಲಭಿಸುವುದು. ಅದರಲ್ಲಿ ನಿಮ್ಮ ಪ್ರಭುವಿನಿಂದ ಮನಃ ಶಾಂತಿಯೂ ಮೂಸಾರ ಕುಟುಂಬ ಮತ್ತು ಹಾರೂನರ ಕುಟುಂಬ ಬಿಟ್ಟು ಹೋದವುಗಳ ಅವಶಿಷ್ಟಗಳೂ**[76] **ಇವೆ. ದೇವದೂತರು ಅವನ್ನು ಹೊತ್ತು ತರುವರು. ನೀವು ಸತ್ಯವಿಶ್ವಾಸಿಗಳೆಂದಾದರೆ, ನಿಮಗೆ ಅದರಲ್ಲಿ ಮಹತ್ತಾದೊಂದು ದೃಷ್ಟಾಂತವಿದೆ."**

74. 'ತನ್ನ ಆಧಿಪತ್ಯವನ್ನು'- ಆಧಿಪತ್ಯದ ನಿಜವಾದ ಹಕ್ಕುದಾರ ಅಲ್ಲಾಹ್ ಎಂದು ಇಲ್ಲಿ ಸೂಚಿಸಲಾಗಿದೆ.

75. 'ತಾಬೂತ್' ಎಂದರೆ ಪೆಟ್ಟಿಗೆ ಎಂದು ಅರ್ಥ. ಆಲಂಕಾರಿಕವಾಗಿ 'ಹೃದಯ' ಎಂದು ಅರ್ಥಕೊಡಲಾಗುತ್ತದೆ. ಇಲ್ಲಿ ಅದೇ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ತಾಲೂತ್‌ನ ಅನುಯಾಯಿಗಳಿಗೆ ಅಲ್ಲಾಹನ ಕಡೆಯಿಂದ ಮನಃಶಾಂತಿಯೂ ಅಲ್ಲಾಹನ ಮಾರ್ಗದಲ್ಲಿ ತ್ಯಾಗ ಮಾಡಲು ಪ್ರಚೋದನೆಯೂ ಲಭಿಸುವುದೆಂದು ತಾತ್ಪರ್ಯ.

**250. ನಂತರ, ತಾಲೂತ್ ಸೈನ್ಯದೊಂದಿಗೆ ಹೊರಟಾಗ ಆತ ಹೇಳಿದನು: 'ಖಂಡಿತವಾಗಿಯೂ ನಿಮ್ಮನ್ನು ಅಲ್ಲಾಹನು ಒಂದು ನದಿ ಮೂಲಕ ಪರೀಕ್ಷಿಸುವನು. ಆದ್ದರಿಂದ ಯಾರಾದರೂ ಅದರಿಂದ** (ಹೊಟ್ಟೆತುಂಬ) **ನೀರು ಕುಡಿದರೆ ಅವನು ನನ್ನೊಂದಿಗೆ ಸಂಬಂಧವಿರಿಸಲಾರನು. ಅದರ ರುಚಿ ನೋಡದವನು ನನ್ನ ಸಂಬಂಧವಿರಿಸುವನು. ಆದರೆ ಒಂದು ಬೊಗಸೆಯಷ್ಟು ಮಾತ್ರ ನೀರನ್ನು ಸೇವಿಸಿದರೆ ಆಕ್ಷೇಪವಿಲ್ಲ.' ಆದರೆ ಕೆಲವರು ಹೊರತು** ಬಾಕಿಯವರೆಲ್ಲರೂ **ಅದರಿಂದ ಯಥೇಷ್ಟವಾಗಿ ಕುಡಿದರು. ನಂತರ, ಆತ ಮತ್ತು ಆತನ ಜೊತೆಗಿದ್ದ ಸತ್ಯವಿಶ್ವಾಸಿಗಳು ಅದನ್ನು ದಾಟಿದಾಗ ಅವರು** (ಅವರ ಪೈಕಿ ಬಲಹೀನ ವಿಶ್ವಾಸಿಗಳು) **ಹೇಳಿದರು: 'ಈ ದಿನ ಜಾಲೂತನನ್ನೂ ಅವನ ಸೈನ್ಯವನ್ನೂ ಎದುರಿಸಲು ನಮಗೇನೂ ಶಕ್ತಿಯಿಲ್ಲ.' ಆದರೆ** (ಒಂದು ದಿನ) **ತಾವು ಅಲ್ಲಾಹನನ್ನು ಸಂಧಿಸಲಿದ್ದೇವೆಂದು ದೃಢವಾಗಿ ನಂಬುವವರು ಹೇಳಿದರು: 'ಎಷ್ಟೆಷ್ಟೋ ಸಣ್ಣ ಪಂಗಡಗಳು ಅಲ್ಲಾಹನ ಆಜ್ಞೆಯಂತೆ ದೊಡ್ಡ ಪಂಗಡಗಳನ್ನು ಜಯಿಸಿವೆ. ಅಲ್ಲಾಹನು ಸಹನಶೀಲರ ಜೊತೆಗಿರುತ್ತಾನೆ.'**

فَلَمَّا فَصَلَ طَالُوتُ بِالْجُنُودِ قَالَ إِنَّ
اللَّهَ مُبْتَلِيكُم بِنَهَرٍ فَمَن شَرِبَ مِنْهُ
فَلَيْسَ مِنِّي وَمَن لَّمْ يَطْعَمْهُ فَإِنَّهُ مِنِّي
إِلَّا مَنِ اغْتَرَفَ غُرْفَةً بِيَدِهِ فَشَرِبُوا
مِنْهُ إِلَّا قَلِيلًا مِّنْهُمْ فَلَمَّا جَاوَزَهُ هُوَ
وَالَّذِينَ آمَنُوا مَعَهُ قَالُوا لَا طَاقَةَ لَنَا
الْيَوْمَ بِجَالُوتَ وَجُنُودِهِ قَالَ الَّذِينَ
يَظُنُّونَ أَنَّهُم مُّلَاقُو اللَّهِ كَم مِّن فِئَةٍ
قَلِيلَةٍ غَلَبَتْ فِئَةً كَثِيرَةً بِإِذْنِ اللَّهِ
وَاللَّهُ مَعَ الصَّابِرِينَ ﴿٢٥٠﴾

**251. ಬಳಿಕ, ಅವರು ಜಾಲೂತ್ ಮತ್ತು ಅವನ ಸೈನ್ಯವನ್ನು ಎದುರಿಸಲು ಹೊರಟಾಗ ಹೇಳಿದರು: 'ನಮ್ಮ ಪ್ರಭೂ, ನಮಗೆ ನೀನು ಸ್ಥೈರ್ಯವನ್ನು ಕರುಣಿಸು. ನಮ್ಮ ಪಾದಗಳನ್ನು ಸ್ಥಿರಗೊಳಿಸಿ ಅವಿಶ್ವಾಸಿಗಳಿಗೆ ವಿರುದ್ಧವಾಗಿ ನಮಗೆ ನೆರವು ನೀಡು.'**

وَلَمَّا بَرَزُوا لِجَالُوتَ وَجُنُودِهِ قَالُوا
رَبَّنَا أَفْرِغْ عَلَيْنَا صَبْرًا وَثَبِّتْ
أَقْدَامَنَا وَانصُرْنَا عَلَى الْقَوْمِ الْكَافِرِينَ ﴿٢٥١﴾

**252. ಹಾಗೆ, ಅಲ್ಲಾಹನ ವಿಧಿ ಪ್ರಕಾರ ಅವರು** (ಸತ್ಯವಿಶ್ವಾಸಿಗಳು) **ಅವರನ್ನು** (ಶತ್ರುಗಳನ್ನು) **ಪರಾಭವಗೊಳಿಸಿ ಓಡಿಸಿದರು. ಜಾಲೂತ್‌ನನ್ನು[77] ದಾವೂದ್ ವಧಿಸಿದರು- ಅವರಿಗೆ ಅಲ್ಲಾಹನು ಆಧಿಪತ್ಯವನ್ನೂ ಬುದ್ಧಿವೈಭವವನ್ನೂ ನೀಡಿ, ತಾನು**

فَهَزَمُوهُم بِإِذْنِ اللَّهِ وَقَتَلَ دَاوُودُ
جَالُوتَ وَآتَاهُ اللَّهُ الْمُلْكَ وَالْحِكْمَةَ
وَعَلَّمَهُ مِمَّا يَشَاءُ وَلَوْلَا دَفْعُ اللَّهِ
النَّاسَ بَعْضَهُم بِبَعْضٍ لَّفَسَدَتِ

76. ಮೂಸಾ ಮತ್ತು ಹಾರೂನ್ ಪ್ರವಾದಿಗಳ ನಿಕಟ ಅನುಯಾಯಿಗಳಲ್ಲಿ ಗೋಚರಿಸುತ್ತಿದ್ದ ಉತ್ಕೃಷ್ಟ ಸ್ವಭಾವಗಳು ಎಂದು ಇಲ್ಲಿ ತಾತ್ಪರ್ಯ. 'ನಿಮ್ಮ ಹೃದಯಗಳು ಒಳಿತು ಹಾಗೂ ಸದಾಚಾರಗಳಿಂದ ಕೂಡಿಕೊಳ್ಳುವುವು' ಎಂದು ಅರ್ಥ.





**ಇಚ್ಛಿಸಿದ್ದನ್ನು ಅವರಿಗೆ ಕಲಿಸಿದನು. ಅಲ್ಲಾಹನು ಮನುಷ್ಯರನ್ನು - ಅವರಲ್ಲಿ ಕೆಲವರನ್ನು ಇತರ ಕೆಲವರಿಂದ- ತಡೆಯದಿರುತ್ತಿದ್ದರೆ - ಭೂಮಿಯಲ್ಲೆಲ್ಲ ಅಶಾಂತಿ ವ್ಯಾಪಿಸಿರುತ್ತಿತ್ತು. ಆದರೆ ಅಲ್ಲಾಹನು ಅಖಿಲ ಬ್ರಹ್ಮಾಂಡಕ್ಕೆ ಔದಾರ್ಯವನ್ನು ತೋರಿಸುವವನಾಗಿದ್ದಾನೆ.**

الْأَرْضُ وَلَٰكِنَّ اللَّهَ ذُو فَضْلٍ عَلَى
الْعَالَمِينَ ﴿٢٥٢﴾

**253. ಇವೆಲ್ಲ ಅಲ್ಲಾಹನ ದೃಷ್ಟಾಂತಗಳಾಗಿವೆ. ಸತ್ಯದೊಂದಿಗೆ ನಾವು ಅವನ್ನು ನಿನಗೆ ವಿವರಿಸಿ ಕೊಡುತ್ತೇವೆ. ದಿಟವಾಗಿಯೂ ನೀನು ಸಂದೇಶವಾಹಕರ ಪೈಕಿ ಒಬ್ಬನಾಗಿರುವೆ.**

تِلْكَ آيَاتُ اللَّهِ نَتْلُوهَا عَلَيْكَ بِالْحَقِّ
وَإِنَّكَ لَمِنَ الْمُرْسَلِينَ ﴿٢٥٣﴾

**254.** (ಮೇಲೆ ಹೇಳಿದ) **ಆ ಸಂದೇಶವಾಹಕರಲ್ಲಿ ಕೆಲವರನ್ನು** (ಇತರ) **ಕೆಲವರಿಗಿಂತ ಶ್ರೇಷ್ಠರನ್ನಾಗಿ ಮಾಡಿರುವೆವು. ಅಲ್ಲಾಹನು** (ವಿಶೇಷವಾಗಿ) **ಮಾತನಾಡಿದ ಕೆಲವರೂ[78] ಅವರ ಪೈಕಿಯಲ್ಲಿದ್ದಾರೆ. ಕೆಲವರನ್ನು ಅವನು ಹಲವು ಪದವಿಗಳನ್ನು ನೀಡಿ ಉನ್ನತಗೊಳಿಸಿರುವನು. ಮರ್ಯಮ್ ಪುತ್ರ ಈಸಾರಿಗೆ ನಾವು ಸ್ಪಷ್ಟವಾದ ಪುರಾವೆಗಳನ್ನು ನೀಡಿ ಪವಿತ್ರಾತ್ಮದ ಮೂಲಕ ಅವರಿಗೆ ಶಕ್ತಿ ನೀಡಿದೆವು. ಅಲ್ಲಾಹನು ಇಚ್ಛಿಸಿದ್ದರೆ, ಅವರ ನಂತರದವರು ತಮಗೆ ಸ್ಪಷ್ಟವಾದ ದೃಷ್ಟಾಂತಗಳು ಬಂದು ಸೇರಿದ ಬಳಿಕ ಪರಸ್ಪರ ಜಗಳಾಡುತ್ತಿರಲಿಲ್ಲ. ಆದರೆ ಅವರು ಭಿನ್ನಾಭಿಪ್ರಾಯವುಳ್ಳವರಾದರು. ಸತ್ಯವಿಶ್ವಾಸ ಕೈಗೊಂಡ ಕೆಲವರು ಅವರಲ್ಲಿದ್ದಾರೆ.** (ಸತ್ಯವನ್ನು) **ನಿರಾಕರಿಸುವ ಕೆಲವರೂ ಅವರಲ್ಲಿದ್ದಾರೆ. ಅಲ್ಲಾಹನು ಇಚ್ಛಿಸಿದ್ದರೆ ಅವರು ಅನ್ಯೋನ್ಯ ಜಗಳಾಡುತ್ತಿರಲಿಲ್ಲ. ಆದರೆ ಅಲ್ಲಾಹನು ತಾನು ಇಚ್ಛಿಸಿದಂತೆಯೇ ಮಾಡುತ್ತಾನೆ.**

تِلْكَ الرُّسُلُ فَضَّلْنَا بَعْضَهُمْ
عَلَىٰ بَعْضٍ مِّنْهُم مَّن كَلَّمَ اللَّهُ وَ
رَفَعَ بَعْضَهُمْ دَرَجَاتٍ وَآتَيْنَا
عِيسَى ابْنَ مَرْيَمَ الْبَيِّنَاتِ وَ
أَيَّدْنَاهُ بِرُوحِ الْقُدُسِ وَلَوْ شَاءَ
اللَّهُ مَا اقْتَتَلَ الَّذِينَ مِن بَعْدِهِم
مِّن بَعْدِ مَا جَاءَتْهُمُ الْبَيِّنَاتُ وَلَٰكِنِ
اخْتَلَفُوا فَمِنْهُم مَّنْ آمَنَ وَمِنْهُم
مَّن كَفَرَ وَلَوْ شَاءَ اللَّهُ مَا اقْتَتَلُوا
وَلَٰكِنَّ اللَّهَ يَفْعَلُ مَا يُرِيدُ ﴿٢٥٤﴾

**255. ಓ ವಿಶ್ವಾಸಿಗಳೇ, ಕೊಡು-ಕೊಳ್ಳುವಿಕೆಯಾಗಲಿ, ಮಿತ್ರತ್ವವಾಗಲಿ, ಶಿಫಾರಸಾಗಲಿ ಇಲ್ಲದ ಒಂದು ದಿನ**

يَا أَيُّهَا الَّذِينَ آمَنُوا أَنفِقُوا
مِمَّا رَزَقْنَاكُم مِّن قَبْلِ أَن يَأْتِيَ يَوْمٌ

77. 'ಜಾಲೂತ್' ಇದು ಒಬ್ಬ ವ್ಯಕ್ತಿಯ ಹೆಸರಲ್ಲ; ಗುಣನಾಮವಾಗಿದೆ. ಹೀಬ್ರೂ, ಅರಬಿ ಭಾಷೆಗಳಲ್ಲಿ ಗಲಭೆಕೋರರನ್ನೂ, ಕೊಳ್ಳೆಗಾರರನ್ನೂ ಆಡಳಿತೆಯ ವಿರುದ್ಧ ದಂಗೆಯೇಳುವವರನ್ನೂ 'ಜಾಲೂತ್' ಎಂದು ಹೇಳಲಾಗುತ್ತದೆ.

78. ಧರ್ಮಶಾಸನ ನೀಡಲ್ಪಟ್ಟ ಪ್ರವಾದಿಗಳೆಂದು ತಾತ್ಪರ್ಯ.

ಬರುವುದಕ್ಕೆ ಮುಂಚಿತವಾಗಿ, ನಾವು ನಿಮಗೆ ನೀಡಿದವುಗಳಿಂದ ಖರ್ಚು ಮಾಡಿರಿ. (ಈ ಆಜ್ಞೆಯನ್ನು) ಧಿಕ್ಕರಿಸುವವರು ಅಧರ್ಮಿಗಳಾಗಿದ್ದಾರೆ.

لَّا بَيْعٌ فِيهِ وَلَا خُلَّةٌ وَلَا شَفَاعَةٌ ۗ وَالْكَافِرُونَ هُمُ الظَّالِمُونَ ﴿﴾

**256.** ಅಲ್ಲಾಹ್ - ಅವನ ಹೊರತು ಬೇರೆ ಆರಾಧ್ಯನಿಲ್ಲ. (ಅವನು) ಸದಾ ಜೀವಂತನೂ ಸ್ವತಃ ನೆಲೆನಿಂತಿರುವವನೂ (ಎಲ್ಲವನ್ನು) ನೆಲೆನಿಲ್ಲಿಸುವವನೂ ಆಗಿದ್ದಾನೆ. ತೂಕಡಿಕೆಯಾಗಲಿ ನಿದ್ರೆಯಾಗಲಿ ಅವನಿಗಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನದ್ದಾಗಿವೆ. ಅವನ ಅನುಮತಿಯಿಲ್ಲದೆ ಅವನ ಸನ್ನಿಧಿಯಲ್ಲಿ ಶಿಫಾರಸು ಮಾಡುವವರು ಯಾರಿದ್ದಾರೆ ? ಅವರ ಮುಂದೆ ಮತ್ತು ಹಿಂದೆ ಇರುವ ಎಲ್ಲವನ್ನೂ ಅವನು ಬಲ್ಲನು. ಅವನು ಇಚ್ಛಿಸುವುದರ ಹೊರತು, ಅವನ ಜ್ಞಾನದಿಂದ ಏನನ್ನೂ ಅವರು ಗಳಿಸುವುದಿಲ್ಲ. ಅವನ ಸಿಂಹಾಸನ[79] ಆಕಾಶಗಳಲ್ಲೂ ಭೂಮಿಯಲ್ಲೂ ವ್ಯಾಪಿಸಿಕೊಂಡಿದೆ. ಅವುಗಳ ಸಂರಕ್ಷಣೆ ಅವನನ್ನು ಆಯಾಸಗೊಳಿಸುವುದಿಲ್ಲ. ಅವನು ಅತ್ಯುನ್ನತನೂ ಮಹಾಮಹಿಮನೂ ಆಗಿದ್ದಾನೆ.

اللَّهُ لَا إِلَٰهَ إِلَّا هُوَ الْحَيُّ الْقَيُّومُ ۚ لَا تَأْخُذُهُ سِنَةٌ وَلَا نَوْمٌ ۚ لَّهُ مَا فِي السَّمَاوَاتِ وَمَا فِي الْأَرْضِ ۗ مَن ذَا الَّذِي يَشْفَعُ عِندَهُ إِلَّا بِإِذْنِهِ ۚ يَعْلَمُ مَا بَيْنَ أَيْدِيهِمْ وَمَا خَلْفَهُمْ ۖ وَلَا يُحِيطُونَ بِشَيْءٍ مِّنْ عِلْمِهِ إِلَّا بِمَا شَاءَ ۚ وَسِعَ كُرْسِيُّهُ السَّمَاوَاتِ وَالْأَرْضَ ۖ وَلَا يَئُودُهُ حِفْظُهُمَا ۚ وَهُوَ الْعَلِيُّ الْعَظِيمُ ﴿﴾

**257.** ಧರ್ಮದಲ್ಲಿ ಯಾವುದೇ ರೀತಿಯ ಬಲಾತ್ಕಾರವಿಲ್ಲ.[80] ಖಂಡಿತವಾಗಿಯೂ ಸನ್ಮಾರ್ಗವು ದುರ್ಮಾರ್ಗದಿಂದ ಭಿನ್ನವಾಗಿದೆ. ಯಾವಾತನು ದುಷ್ಟ ಶಕ್ತಿಗಳನ್ನು ತಿರಸ್ಕರಿಸಿ ಅಲ್ಲಾಹನನ್ನು ನಂಬುತ್ತಾನೋ ಖಂಡಿತವಾಗಿಯೂ ಆತನು ಸುದೃಢವಾದೊಂದು ಕೈಯಾಸರೆಯನ್ನು ಹಿಡಿದಿರುವವನು (ಎಂದು ತಿಳಿದು ಕೊಳ್ಳಲಿ). ಅದು ಎಂದಿಗೂ ಮುರಿದು ಹೋಗುವಂಥದ್ದಲ್ಲ. ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

لَا إِكْرَاهَ فِي الدِّينِ ۖ قَد تَّبَيَّنَ الرُّشْدُ مِنَ الْغَيِّ ۚ فَمَن يَكْفُرْ بِالطَّاغُوتِ وَيُؤْمِن بِاللَّهِ فَقَدِ اسْتَمْسَكَ بِالْعُرْوَةِ الْوُثْقَىٰ لَا انفِصَامَ لَهَا ۗ وَاللَّهُ سَمِيعٌ عَلِيمٌ ﴿﴾

**258.** ಅಲ್ಲಾಹನು ಸತ್ಯವಿಶ್ವಾಸಿಗಳ ಮಿತ್ರನಾಗಿದ್ದಾನೆ. ಅವನು ಅವರನ್ನು ಎಲ್ಲ ಅಂಧಕಾರಗಳಿಂದ

اللَّهُ وَلِيُّ الَّذِينَ آمَنُوا يُخْرِجُهُم

79. ಕುರ್‌ಸಿಯ್ಯು = ಸಿಂಹಾಸನ, ಜ್ಞಾನ, ಅಧಿಕಾರ, ಆಧಿಪತ್ಯ.

80. ಧರ್ಮ ಸ್ವೀಕಾರದ ವಿಚಾರದಲ್ಲಿ ಯಾವುದೇ ಬಗೆಯ ಬಲ ಪ್ರಯೋಗ ಸಲ್ಲದು, ಅದರ ಅಗತ್ಯವೂ ಇರುವುದಿಲ್ಲ.





ಹೊರತಂದು ಪ್ರಕಾಶದೆಡೆಗೆ ನಡೆಸುತ್ತಾನೆ. ಅವಿಶ್ವಾಸಿಗಳಾದರೋ, ಅವರ ಮಿತ್ರರು ದುಷ್ಟ ಶಕ್ತಿಗಳಾಗಿವೆ. ಅವು ಅವರನ್ನು ಪ್ರಕಾಶದಿಂದ ಅಂಧಕಾರಗಳೆಡೆಗೆ ಕೊಂಡೊಯ್ಯುತ್ತವೆ. ಅವರೇ ನರಕವಾಸಿಗಳು. ಅವರು ಅಲ್ಲಿ ದೀರ್ಘಕಾಲ ನೆಲೆಸುವರು.

مِّنَ الظُّلُمَاتِ إِلَى النُّورِ ۖ وَالَّذِينَ كَفَرُوا أَوْلِيَاؤُهُمُ الطَّاغُوتُ يُخْرِجُونَهُم مِّنَ النُّورِ إِلَى الظُّلُمَاتِ ۗ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿﴾

**259.** ಅಲ್ಲಾಹನು ಆಧಿಪತ್ಯ ನೀಡಿದ ಕಾರಣದಿಂದ ಇಬ್‌ರಾಹೀಮರೊಡನೆ ಅವರ ಪ್ರಭುವಿನ ಕುರಿತು ವಿವಾದ ಮಾಡಿದವನ ಬಗ್ಗೆ ನೀನು ತಿಳಿದಿಲ್ಲವೇ? 'ನನ್ನ ಪ್ರಭು ಜೀವಂತಗೊಳಿಸುವವನೂ ಮರಣಪಡಿಸುವವನೂ ಆಗಿದ್ದಾನೆ' ಎಂದು ಇಬ್‌ರಾಹೀಂ ಹೇಳಿದಾಗ, 'ನಾನು ಸಹ ಜೀವಂತಗೊಳಿಸುವವನೂ ಮರಣ ಪಡಿಸುವವನೂ ಆಗಿದ್ದೇನೆ' ಎಂದು ಅವನು ಮರುನುಡಿದನು. ಇಬ್‌ರಾಹೀಂ ಹೇಳಿದರು: '(ಸರಿ) ಹಾಗಾದರೆ, ಅಲ್ಲಾಹನು ಸೂರ್ಯನನ್ನು ಪೂರ್ವದಿಂದ ಉದಯಗೊಳಿಸುತ್ತಾನಲ್ಲವೇ? ನೀನು ಅದನ್ನು ಪಶ್ಚಿಮದಿಂದ ಉದಯಗೊಳಿಸು.' ಆಗ ಆ ಅವಿಶ್ವಾಸಿ ನಿರುತ್ತರನಾದನು. ಅಲ್ಲಾಹನು ಅಧರ್ಮಿಗಳಾದ ಜನತೆಗೆ (ವಿಜಯದ) ಮಾರ್ಗ ತೋರಿಸುವುದಿಲ್ಲ.

أَلَمْ تَرَ إِلَى الَّذِي حَاجَّ إِبْرَاهِيمَ فِي رَبِّهِ أَنْ آتَاهُ اللَّهُ الْمُلْكَ إِذْ قَالَ إِبْرَاهِيمُ رَبِّيَ الَّذِي يُحْيِي وَيُمِيتُ قَالَ أَنَا أُحْيِي وَأُمِيتُ ۖ قَالَ إِبْرَاهِيمُ فَإِنَّ اللَّهَ يَأْتِي بِالشَّمْسِ مِنَ الْمَشْرِقِ فَأْتِ بِهَا مِنَ الْمَغْرِبِ فَبُهِتَ الَّذِي كَفَرَ ۗ وَاللَّهُ لَا يَهْدِي الْقَوْمَ الظَّالِمِينَ ﴿﴾

**260.** ಅಥವಾ (ಕಟ್ಟಡಗಳು) ಛಾವಣಿಗಳ ಸಹಿತ ಕುಸಿದು ಬಿದ್ದಿದ್ದ ಒಂದು ಪಟ್ಟಣದ ಮಾರ್ಗವಾಗಿ ಹೋಗುತ್ತಿದ್ದ ವ್ಯಕ್ತಿಯ ಬಗ್ಗೆ (ನೀನು ತಿಳಿದಿಲ್ಲವೇ?). (ಅದನ್ನು ಕಂಡು) ಆತನು, 'ಇದರ ನಾಶದ ನಂತರ ಅಲ್ಲಾಹನು ಯಾವಾಗ ಇದನ್ನು ಪುನರುಜ್ಜೀವನ (ಜನನಿಬಿಡ) ಗೊಳಿಸುವನು? ಎಂದು ಉದ್ಗರಿಸಿದನು.[81] ಆಗ ಅಲ್ಲಾಹನು ಆತನನ್ನು (ಸ್ವಪ್ನದಲ್ಲಿ) ನೂರು ವರ್ಷಕಾಲ ಮೃತಪಟ್ಟಂತೆ ಮಾಡಿದನು. ಅನಂತರ

أَوْ كَالَّذِي مَرَّ عَلَىٰ قَرْيَةٍ وَهِيَ خَاوِيَةٌ عَلَىٰ عُرُوشِهَا قَالَ أَنَّىٰ يُحْيِي هَٰذِهِ اللَّهُ بَعْدَ مَوْتِهَا ۖ فَأَمَاتَهُ اللَّهُ مِائَةَ عَامٍ ثُمَّ بَعَثَهُ ۖ قَالَ كَمْ لَبِثْتَ ۖ قَالَ لَبِثْتُ يَوْمًا أَوْ بَعْضَ يَوْمٍ ۖ قَالَ بَل لَّبِثْتَ مِائَةَ عَامٍ فَانظُرْ إِلَىٰ

81 ಇಲ್ಲಿ 'ಪಟ್ಟಣ' ಎಂದು ಹೇಳಿರುವುದು ಜೆರೂಸಲೇಮ್‌ನ ಕುರಿತಾಗಿದೆ. ನೆಬೂಕದ್ನೆಚ್ಚರ್ (Nebuchadnezzar) ಅರಸ ಅದನ್ನು ನಾಶಪಡಿಸಿದ್ದನು. ಆ ಪಟ್ಟಣದ ಮಾರ್ಗವಾಗಿ ಹೋಗಿದ್ದ ವ್ಯಕ್ತಿ ಪ್ರವಾದಿ ಯಹೆಜ್ಕೇಲ್. ನೂರು ವರ್ಷಗಳೊಳಗೆ ಆ ಪಟ್ಟಣ ಪುನರ್ವಸಿತಗೊಳ್ಳುವುದೆಂದು ಅಲ್ಲಾಹನು ಅವರಿಗೆ ದಿವ್ಯದರ್ಶನ ಮೂಲಕ ತೋರಿಸಿಕೊಟ್ಟನು. (ಬೈಬಲ್ ಹಳೆಯ ಒಡಂಬಡಿಕೆ - ಯೆಹೆಜ್ಕೇಲನು ಅಧ್ಯಾಯ 37 ನೋಡಿರಿ)

ಆತನನ್ನು ಎಬ್ಬಿಸಿ (ಅಲ್ಲಾಹನು) ಕೇಳಿದನು: '(ಈ ಸ್ಥಿತಿಯಲ್ಲಿ) ನೀನು ಎಷ್ಟು ಕಾಲ ಇದ್ದೆ?' ಆತನು ಉತ್ತರಿಸಿದನು: 'ನಾನು (ಈ ಸ್ಥಿತಿಯಲ್ಲಿ) ಒಂದು ದಿನ ಅಥವಾ ಒಂದು ದಿನದ ಒಂದಂಶವನ್ನು ಕಳೆದೆ.' ಅಲ್ಲಾಹನು ಹೇಳಿದನು: '(ಅದು ಸಹ ಸರಿಯೇ) ಆದರೆ ನೀನು (ಸ್ವಪ್ನಾವಸ್ಥೆಯಲ್ಲಿ) ನೂರು ವರ್ಷಗಳನ್ನು ಸಹ ಕಳೆದಿರುವೆ[82] ನಿನ್ನ ಆಹಾರ ಪಾನೀಯಗಳನ್ನು ನೋಡು. ಅವು ಹಾಳಾಗಲಿಲ್ಲ. ನಿನ್ನ ಕತ್ತೆಯನ್ನೂ ನೋಡು.[82A] ಇದು ನಿನ್ನನ್ನು ಜನರಿಗೆ ಒಂದು ದೃಷ್ಟಾಂತವನ್ನಾಗಿ ಮಾಡಲಿಕ್ಕಾಗಿದೆ. ನೀನು ಅಸ್ಥಿಗಳನ್ನು ನೋಡು - ನಾವು ಹೇಗೆ ಅವನ್ನು ಜೋಡಿಸಿ, ನಂತರ ಮಾಂಸದಿಂದ ಹೊದಿಸುತ್ತೇವೆಂದು.' ಇದು ಆತನಿಗೆ ಸುವ್ಯಕ್ತವಾದಾಗ, 'ತಾನಿಚ್ಛಿಸುವುದನ್ನೆಲ್ಲ ಮಾಡಲು ಅಲ್ಲಾಹನಿಗೆ ಸರ್ವ ಸಾಮರ್ಥ್ಯವಿದೆ ಎಂದು ನಾನು ತಿಳಿದಿದ್ದೇನೆ' ಎಂದು ಆತನು ಹೇಳಿದನು.

طَعَامِكَ وَشَرَابِكَ لَمْ يَتَسَنَّهْ ۚ وَانْظُرْ إِلَىٰ حِمَارِكَ وَلِنَجْعَلَكَ آيَةً لِلنَّاسِ ۖ وَانْظُرْ إِلَى الْعِظَامِ كَيْفَ نُنْشِزُهَا ثُمَّ نَكْسُوهَا لَحْمًا ۚ فَلَمَّا تَبَيَّنَ لَهُ قَالَ أَعْلَمُ أَنَّ اللَّهَ عَلَىٰ كُلِّ شَيْءٍ قَدِيرٌ ﴿٢٦٠﴾

261. 'ನನ್ನ ಪ್ರಭೂ, ಮೃತರಾದವರನ್ನು ನೀನು ಹೇಗೆ ಬದುಕಿಸುವೆ ಎಂದು ನನಗೆ ತೋರಿಸಿ ಕೊಡು' ಎಂದು ಇಬ್‌ರಾಹೀಂ ಹೇಳಿದ ಸಂದರ್ಭ - ಅವನು (ಅಲ್ಲಾಹನು) ಕೇಳಿದನು: 'ನೀನು ನಂಬಿಲ್ಲವೇ?' ಅವರು ಹೇಳಿದರು: 'ಯಾಕಿಲ್ಲ, (ನಾನು ನಿಸ್ಸಂದೇಹವಾಗಿಯೂ ನಂಬಿದ್ದೇನೆ) ಆದರೆ ನನ್ನ ಮನಃಸಮಾಧಾನಕ್ಕೋಸ್ಕರ (ನಾನು ಈ ಪ್ರಶ್ನೆ ಕೇಳುತ್ತಿದ್ದೇನೆ).' ಅಲ್ಲಾಹನು ಹೇಳಿದನು: 'ನೀನು ನಾಲ್ಕು ಪಕ್ಷಿಗಳನ್ನು ಹಿಡಿದು ಅವನ್ನು (ಚೆನ್ನಾಗಿ ಪಳಗಿಸಿ) ನಿನಗೆ ಒಲಿಯುವಂತೆ ಮಾಡು.[83] ಅನಂತರ ಪ್ರತಿಯೊಂದನ್ನು ಒಂದೊಂದು ಗುಡ್ಡೆಯ ಮೇಲೆ ಬಿಡು. ಆ ಮೇಲೆ ಅವನ್ನು ಕರೆ. ಆಗ ಅವು ನಿನ್ನೆಡೆಗೆ ವೇಗವಾಗಿ ಓಡಿ ಬರುವುವು.

وَإِذْ قَالَ إِبْرَاهِيمُ رَبِّ أَرِنِي كَيْفَ تُحْيِي الْمَوْتَىٰ ۖ قَالَ أَوَلَمْ تُؤْمِنْ ۖ قَالَ بَلَىٰ وَلَٰكِنْ لِيَطْمَئِنَّ قَلْبِي ۖ قَالَ فَخُذْ أَرْبَعَةً مِنَ الطَّيْرِ فَصُرْهُنَّ إِلَيْكَ ثُمَّ اجْعَلْ عَلَىٰ كُلِّ جَبَلٍ مِنْهُنَّ جُزْءًا ثُمَّ

82. ಅಲ್ಲಾಹನು ಅವರನ್ನು ನಿದ್ರೆಗೊಳಪಡಿಸಿ ಕನಸಿನಲ್ಲಿ ನೂರು ವರ್ಷಕಾಲ ಸರಿದಂತೆ ಅವರಿಗೆ ತೋರಿಸಿಕೊಟ್ಟನು ಎಂದು ತಾತ್ಪರ್ಯ.

82A. ಆಹಾರ ಪಾನೀಯಗಳೂ ಕತ್ತೆಯೂ ಸುಸ್ಥಿತಿಯಲ್ಲೇ ಇವೆ ಎಂಬ ಈ ಮಾತಿನಿಂದ ಆ ಪ್ರವಾದಿಯು ತಾನು ಈ ಸ್ಥಿತಿಯಲ್ಲಿ ಸ್ವಲ್ಪಕಾಲ ಮಾತ್ರ ಕಳೆದೆ ಎಂದು ಹೇಳಿದ್ದು ಸತ್ಯವೆಂದು ಸಾಬೀತಾಗುತ್ತದೆ. ಅಷ್ಟೇ ಅಲ್ಲ ಇದು ಕೇವಲ ಒಂದು ದಿವ್ಯ ದರ್ಶನವಾಗಿತ್ತು ಎಂದು ಸಹ ಸಾಬೀತುಗೊಳ್ಳುತ್ತದೆ. ಯಾಕೆಂದರೆ, ನಿಜವಾಗಿಯೂ ನೂರು ವರ್ಷಗಳು ಕಳೆದಿದ್ದಲ್ಲಿ ಆಹಾರ ಪಾನೀಯಗಳೂ ಕತ್ತೆಯೂ ಯಾವುದೇ ಮಾರ್ಪಾಟಿಗೆ ಗುರಿಯಾಗದೆ ಯಥಾಸ್ಥಿತಿಯಲ್ಲಿರಲು ಸಾಧ್ಯವಿಲ್ಲವಷ್ಟೆ.





ಅಲ್ಲಾಹನು ಪ್ರತಾಪಶಾಲಿಯೂ ಬುದ್ಧಿವಂತನೂ ಆಗಿದ್ದಾನೆಂದು ತಿಳಿದು ಕೋ.'

ادْعُهُنَّ يَأْتِينَكَ سَعْيًا ۚ وَاعْلَمْ أَنَّ اللَّهَ عَزِيزٌ حَكِيمٌ ﴿٢٦١﴾ ٣٥ع٣

262. ಅಲ್ಲಾಹನ ಮಾರ್ಗದಲ್ಲಿ ತಮ್ಮ ಧನವನ್ನು ವ್ಯಯ ಮಾಡುವವರ ಹೋಲಿಕೆ, ಒಂದು ಧಾನ್ಯ ಏಳು ತೆನೆಗಳನ್ನು ಹೊಂದಿ ಪ್ರತಿಯೊಂದು ತೆನೆಯಲ್ಲೂ ನೂರು ಕಾಳುಗಳನ್ನು ಉತ್ಪಾದಿಸುವಂತಾಗಿದೆ. ಅಲ್ಲಾಹನು, ತಾನಿಚ್ಛಿಸುವವರಿಗೆ (ಇದಕ್ಕಿಂತಲೂ) ಅಧಿಕ ಪಟ್ಟು ನೀಡುತ್ತಾನೆ. ಅಲ್ಲಾಹನು ಅತಿ ಉದಾರಿಯೂ ಸರ್ವಜ್ಞನೂ ಆಗಿದ್ದಾನೆ.

مَثَلُ الَّذِينَ يُنْفِقُونَ أَمْوَالَهُمْ فِي سَبِيلِ اللَّهِ كَمَثَلِ حَبَّةٍ أَنْبَتَتْ سَبْعَ سَنَابِلَ فِي كُلِّ سُنْبُلَةٍ مِائَةُ حَبَّةٍ ۗ وَاللَّهُ يُضَاعِفُ لِمَنْ يَشَاءُ ۗ وَاللَّهُ وَاسِعٌ عَلِيمٌ ﴿٢٦٢﴾

263. ಅಲ್ಲಾಹನ ಮಾರ್ಗದಲ್ಲಿ ತಮ್ಮ ಧನವನ್ನು ಖರ್ಚು ಮಾಡಿ, ಆ ಬಳಿಕ ತಾವು ಖರ್ಚುಮಾಡಿದ್ದನ್ನು (ಅದನ್ನು ಪಡೆದವರೊಡನೆ) ಔದಾರ್ಯವಾಗಿ ಬಣ್ಣಿಸದೆಯೂ (ಅವರ ಮನಸ್ಸನ್ನು) ನೋಯಿಸದೆಯೂ ಇರುವವರಿಗೆ ಅವರ ಪ್ರಭುವಿನಿಂದ ಅವರ ಕೃತ್ಯಗಳ ಪ್ರತಿಫಲವಿದೆ. ಅವರಿಗೆ ಯಾವುದೇ ಭಯವಿಲ್ಲ; ಅವರು ದುಃಖಿಸಲಾರರು.

الَّذِينَ يُنْفِقُونَ أَمْوَالَهُمْ فِي سَبِيلِ اللَّهِ ثُمَّ لَا يُتْبِعُونَ مَا أَنْفَقُوا مَنًّا وَلَا أَذًى ۙ لَهُمْ أَجْرُهُمْ عِنْدَ رَبِّهِمْ وَلَا خَوْفٌ عَلَيْهِمْ وَلَا هُمْ يَحْزَنُونَ ﴿٢٦٣﴾

264. ನಲ್ಮೆಯ ಮಾತು ಮತ್ತು ಕ್ಷಮೆ ಮನನೋಯಿಸುವ ದಾನ ಧರ್ಮಕ್ಕಿಂತ ಉತ್ತಮ. ಅಲ್ಲಾಹನು ಸ್ವಯಂಪೂರ್ಣನೂ ಕ್ಷಮಾಶೀಲನೂ ಆಗಿದ್ದಾನೆ.

قَوْلٌ مَعْرُوفٌ وَمَغْفِرَةٌ خَيْرٌ مِنْ صَدَقَةٍ يَتْبَعُهَا أَذًى ۗ وَاللَّهُ غَنِيٌّ حَلِيمٌ ﴿٢٦٤﴾

265. ಓ ವಿಶ್ವಾಸಿಗಳೇ, ಅಲ್ಲಾಹನನ್ನೂ ಅಂತ್ಯದಿನವನ್ನೂ ನಂಬದೆ ಜನರಿಗೆ ತೋರಿಸಲಿಕ್ಕಾಗಿ ತನ್ನ ಧನವನ್ನು ಖರ್ಚುಮಾಡುವವನ ಹಾಗೆ, ನೀವು (ಮಾಡಿದ) ಉಪಕಾರದ ಬಗ್ಗೆ ನೆನಪು ಹುಟ್ಟಿಸಿಯೂ ಮನ ನೋಯಿಸುವ ಮಾತನ್ನಾಡಿಯೂ ನಿಮ್ಮ ದಾನಧರ್ಮವನ್ನು ನಿಷ್ಫಲಗೊಳಿಸಬೇಡಿರಿ. ಅವನ

يَا أَيُّهَا الَّذِينَ آمَنُوا لَا تُبْطِلُوا صَدَقَاتِكُمْ بِالْمَنِّ وَالْأَذَىٰ كَالَّذِي يُنْفِقُ مَالَهُ رِئَاءَ النَّاسِ وَلَا يُؤْمِنُ

83. 'ಸುರ್‌ಹುನ್ನ' ಎಂಬ ಪದಕ್ಕೆ ಕೆಲವು ವ್ಯಾಖ್ಯಾನಗಾರರು ಕೊಯ್ದು ತುಂಡರಿಸು ಎಂದು ಅರ್ಥಕೊಟ್ಟಿದ್ದಾರೆ. ಅದು ಸರಿಯಲ್ಲ. ಏಕೆಂದರೆ ಖುರ್‌ಆನಿನಲ್ಲಿ ಪ್ರಯೋಗಿಸಲ್ಪಟ್ಟಿರುವುದು 'ಸುರ್‌ಹುನ್ನ ಇಲೈಕ' ಎಂದಾಗಿದೆ. ನಿನ್ನೆಡೆಗೆ ಒಲಿಯುವಂತೆ ಮಾಡು ಎಂಬುದು ಇದರ ಅರ್ಥ. 'ನಿನ್ನೆಡೆಗೆ ಕೊಯ್ದು ತುಂಡರಿಸು' ಎಂಬ ಪ್ರಯೋಗ ಅರ್ಥಶೂನ್ಯವಷ್ಟೆ.

بِاللّٰهِ وَالْيَوْمِ الْاٰخِرِ فَمَثَلُهٗ كَمَثَلِ صَفْوَانٍ عَلَيْهِ تُرَابٌ فَاَصَابَهٗ وَابِلٌ فَتَرَكَهٗ صَلْدًا لَا يَقْدِرُوْنَ عَلٰى شَيْءٍ مِّمَّا كَسَبُوْا وَاللّٰهُ لَا يَهْدِي الْقَوْمَ الْكٰفِرِيْنَ ﴿٢٦٤﴾

ಉಪಮೆ, ಮಣ್ಣಿನಿಂದ ಮುಚ್ಚಿದ ಒಂದು ನುಣುಪಾದ ಬಂಡೆಯ ಮೇಲೆ ಭಾರೀ ಮಳೆ ಬಿದ್ದಾಗ ಆ ಮಣ್ಣು ಕರಗಿ ಹೋಗಿ ಬರಿದಾದ ಬಂಡೆ ಬಾಕಿಯುಳಿಯುವ ತರವಾಗಿದೆ. ಅವರ ಸಂಪಾದನೆಯಿಂದ ಅವರಿಗೆ ಏನೂ ಕರಗತವಾಗದು. (ಇಂತಹ) ಅವಿಶ್ವಾಸಿಗಳಿಗೆ ಅಲ್ಲಾಹನು (ವಿಜಯದ) ಮಾರ್ಗದರ್ಶನ ಮಾಡುವುದಿಲ್ಲ.

وَمَثَلُ الَّذِيْنَ يُنْفِقُوْنَ اَمْوَالَهُمُ ابْتِغَآءَ مَرْضَاتِ اللّٰهِ وَتَثْبِيْتًا مِّنْ اَنْفُسِهِمْ كَمَثَلِ جَنَّةٍۭ بِرَبْوَةٍ اَصَابَهَا وَابِلٌ فَاٰتَتْ اُكُلَهَا ضِعْفَيْنِ فَاِنْ لَّمْ يُصِبْهَا وَابِلٌ فَطَلٌّ وَاللّٰهُ بِمَا تَعْمَلُوْنَ بَصِيْرٌ ﴿٢٦٥﴾

266. ಅಲ್ಲಾಹನ ಪ್ರೀತಿಯನ್ನು ಗಳಿಸಲಿಕ್ಕಾಗಿ ಮತ್ತು ತಮ್ಮ ಆತ್ಮಗಳನ್ನು ದೃಢಪಡಿಸಲಿಕ್ಕಾಗಿ ತಮ್ಮ ಧನವನ್ನು ವ್ಯಯಮಾಡುವವರ ಸ್ಥಿತಿ ಪೀಠಭೂಮಿಯ ಮೇಲಿರುವ ತೋಟದಂತೆ. ಅದರ ಮೇಲೆ ಭಾರೀ ಮಳೆ ಸುರಿದಾಗ ಇಮ್ಮಡಿ ಫಲಗಳು ಉತ್ಪಾದಿಸಲ್ಪಡುತ್ತವೆ. ಸಮೃದ್ಧವಾದ ಮಳೆ ಅದರ ಮೇಲೆ ಬೀಳದಿದ್ದರೆ ಲಘುವಾದ ಮಳೆ ಅದಕ್ಕೆ ಸಾಕಾಗುತ್ತದೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಕಾಣುತ್ತಾನೆ.

اَيَوَدُّ اَحَدُكُمْ اَنْ تَكُوْنَ لَهٗ جَنَّةٌ مِّنْ نَّخِيْلٍ وَّاَعْنَابٍ تَجْرِيْ مِنْ تَحْتِهَا الْاَنْهٰرُ لَهٗ فِيْهَا مِنْ كُلِّ الثَّمَرٰتِ وَاَصَابَهُ الْكِبَرُ وَلَهٗ ذُرِّيَّةٌ ضُعَفَآءُ فَاَصَابَهَآ اِعْصَارٌ فِيْهِ نَارٌ فَاحْتَرَقَتْ كَذٰلِكَ يُبَيِّنُ اللّٰهُ لَكُمُ الْاٰيٰتِ لَعَلَّكُمْ تَتَفَكَّرُوْنَ ﴿٢٦٦﴾

267. ನಿಮ್ಮ ಪೈಕಿ ಯಾರಿಗಾದರೂ ಖರ್ಜೂರ ಮತ್ತು ದ್ರಾಕ್ಷೆಯ ತೋಟವಿದ್ದು, ಅದರ ಕೆಳಭಾಗದಲ್ಲಿ ತೊರೆಗಳು ಹರಿಯುತ್ತವೆ ಹಾಗೂ ಆತನಿಗೆ ಅದರಿಂದ ಎಲ್ಲ ಬಗೆಯ ಹಣ್ಣುಗಳು ಸಿಗುತ್ತವೆ; ಆತನು ವೃದ್ಧಾಪ್ಯವನ್ನು ಪಡೆದವನಾಗಿ ಅಸಮರ್ಥರಾದ ಮಕ್ಕಳು ಆತನಿಗಿರುತ್ತವೆ. ಹಾಗಿರುವಾಗ, ಕಾಡ್ಗಿಚ್ಚಿನ ಸುಂಟರಗಾಳಿಯೊಂದು ಬೀಸಿ ಅದು ಬೆಂದು ಹೋಗುವುದನ್ನು ಆತನು ಇಚ್ಛಿಸುವನೋ? ಈ ರೀತಿ ಅಲ್ಲಾಹನು ನೀವು ಚಿಂತನೆ ಮಾಡಲಿಕ್ಕಾಗಿ ದೃಷ್ಟಾಂತಗಳನ್ನು ವಿವರಿಸುತ್ತಾನೆ.

يٰۤاَيُّهَا الَّذِيْنَ اٰمَنُوْۤا اَنْفِقُوْا مِنْ طَيِّبٰتِ مَا كَسَبْتُمْ وَمِمَّاۤ اَخْرَجْنَا لَكُمْ مِّنَ الْاَرْضِ وَلَا تَيَمَّمُوا الْخَبِيْثَ مِنْهُ تُنْفِقُوْنَ وَلَسْتُمْ بِاٰخِذِيْهِ اِلَّاۤ اَنْ

268. ಓ ವಿಶ್ವಾಸಿಗಳೇ, ನೀವು ಸಂಪಾದಿಸಿಟ್ಟಿರುವ ಒಳ್ಳೆಯ ವಸ್ತುಗಳಿಂದ ಮತ್ತು ಭೂಮಿಯಿಂದ ನಾವು ನಿಮಗೆ ಉತ್ಪಾದಿಸಿ ಕೊಟ್ಟಿರುವ ವಸ್ತುಗಳಿಂದ (ಒಂದಂಶವನ್ನು ಅಲ್ಲಾಹನ ಮಾರ್ಗದಲ್ಲಿ) ಖರ್ಚು ಮಾಡಿರಿ. ಅದರಿಂದ ಹಾಳಾದುದನ್ನು ನೀಡಲಿಕ್ಕೆ ನೀವು





تُغْمِضُوْا فِيْهِ وَاعْلَمُوْۤا اَنَّ اللّٰهَ غَنِيٌّ حَمِيْدٌ ﴿٢٦٧﴾

ಬಯಸಬಾರದು. (ನಿಮಗೆ ಅದು ನೀಡಲ್ಪಡುವುದಾದರೆ) ಕಂಡೂ ಕಾಣದಂತಲ್ಲದೆ ನೀವು ಅದನ್ನು ಸ್ವೀಕರಿಸಲಾರಿರಷ್ಟೆ. ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

اَلشَّيْطٰنُ يَعِدُكُمُ الْفَقْرَ وَيَاْمُرُكُمْ بِالْفَحْشَآءِ وَاللّٰهُ يَعِدُكُمْ مَّغْفِرَةً مِّنْهُ وَفَضْلًا وَاللّٰهُ وَاسِعٌ عَلِيْمٌ ﴿٢٦٨﴾

269. ಶೈತಾನನು ನಿಮಗೆ ದಾರಿದ್ರ್ಯದ ಬಗ್ಗೆ ಭಯ ಹುಟ್ಟಿಸಿ ನೀಚ ಕೃತ್ಯಗಳನ್ನು ಮಾಡಲು ನಿಮ್ಮನ್ನು ಪ್ರೇರೇಪಿಸುತ್ತಾನೆ. ಅಲ್ಲಾಹನು ನಿಮಗೆ ತನ್ನಿಂದ ಕ್ಷಮೆ ಮತ್ತು ಅನುಗ್ರಹವನ್ನು ವಾಗ್ದಾನ ಮಾಡುತ್ತಾನೆ. ಅಲ್ಲಾಹನು ಅತಿ ಉದಾರಿಯೂ ಸರ್ವಜ್ಞನೂ ಆಗಿದ್ದಾನೆ.

يُّؤْتِى الْحِكْمَةَ مَنْ يَّشَآءُ وَمَنْ يُّؤْتَ الْحِكْمَةَ فَقَدْ اُوْتِيَ خَيْرًا كَثِيْرًا وَمَا يَذَّكَّرُ اِلَّاۤ اُولُوا الْاَلْبَابِ ﴿٢٦٩﴾

270. ತಾನಿಚ್ಛಿಸುವವರಿಗೆ ಅವನು ಜ್ಞಾನವನ್ನು ನೀಡುತ್ತಾನೆ. ಯಾರಿಗಾದರೂ ಜ್ಞಾನ ನೀಡಲ್ಪಟ್ಟರೆ ಆತನಿಗೆ ಬಹಳಷ್ಟು ಒಳಿತುಗಳನ್ನು ನೀಡಲಾಯಿತು (ಎಂದು ಅರ್ಥ). ಬುದ್ಧಿಶಾಲಿಗಳ ಹೊರತು ಯಾರೂ ಉಪದೇಶಗಳನ್ನು ಗ್ರಹಿಸುವುದಿಲ್ಲ.

وَمَاۤ اَنْفَقْتُمْ مِّنْ نَّفَقَةٍ اَوْ نَذَرْتُمْ مِّنْ نَّذْرٍ فَاِنَّ اللّٰهَ يَعْلَمُهٗ وَمَا لِلظّٰلِمِيْنَ مِنْ اَنْصَارٍ ﴿٢٧٠﴾

271. ನೀವು (ಅಲ್ಲಾಹನಿಗಾಗಿ) ಖರ್ಚುಮಾಡುವುದನ್ನು ಅಥವಾ ಹರಕೆ ಮಾಡುವುದನ್ನು ಖಂಡಿತವಾಗಿಯೂ ಅಲ್ಲಾಹನು ತಿಳಿಯುತ್ತಾನೆ (ಅದಕ್ಕೆ ಪ್ರತಿಫಲ ನೀಡುತ್ತಾನೆ). ಅಧರ್ಮಿಗಳಿಗೆ ಯಾರೂ ಸಹಾಯಕರಿಲ್ಲ.

اِنْ تُبْدُوا الصَّدَقٰتِ فَنِعِمَّا هِيَ وَاِنْ تُخْفُوْهَا وَتُؤْتُوْهَا الْفُقَرَآءَ فَهُوَ خَيْرٌ لَّكُمْ وَيُكَفِّرُ عَنْكُمْ مِّنْ سَيِّاٰتِكُمْ وَاللّٰهُ بِمَا تَعْمَلُوْنَ خَبِيْرٌ ﴿٢٧١﴾

272. ನೀವು ದಾನ ಧರ್ಮಗಳನ್ನು ಬಹಿರಂಗವಾಗಿ ನೀಡುವುದಾದರೆ ಅದು ಉತ್ತಮವೇ ಸರಿ. ಅದನ್ನು ಗೋಪ್ಯವಾಗಿಟ್ಟು ಬಡವರಿಗೆ ನೀಡುವುದಾದರೆ ನಿಮಗೆ ಅದು ಇನ್ನೂ ಉತ್ತಮ. (ಅದರ ಫಲವಾಗಿ) ಅವನು (ಅಲ್ಲಾಹನು) ನಿಮ್ಮ ಅನೇಕ ಕೆಡುಕುಗಳನ್ನು ದೂರ ಮಾಡುವನು. ನೀವು ಮಾಡುವುದನ್ನು ಅಲ್ಲಾಹನು ತಿಳಿಯುತ್ತಾನೆ.

لَيْسَ عَلَيْكَ هُدٰىهُمْ وَلٰكِنَّ اللّٰهَ

273. ಅವರು ಸತ್ಪಥವನ್ನು ಅನುಸರಿಸುವಂತೆ ಮಾಡುವುದು ನಿನ್ನ ಹೊಣೆಗಾರಿಕೆಯಲ್ಲ. ಆದರೆ ಅಲ್ಲಾಹನು ತಾನಿಚ್ಛಿಸುವವರನ್ನು ಸತ್ಪಥದಲ್ಲಿ

ನಡೆಸುತ್ತಾನೆ. (ಅಲ್ಲಾಹನ ಮಾರ್ಗದಲ್ಲಿ) ನೀವು ವೆಚ್ಚ ಮಾಡುವ ಉತ್ತಮ ಸಂಪತ್ತಿನ ಪ್ರತಿಫಲ ನಿಮಗೆಯೇ - ಅಲ್ಲಾಹನ ಸಂತೃಪ್ತಿಗೋಸ್ಕರ ಹೊರತು ನೀವು ವ್ಯಯಿಸುವುದಿಲ್ಲವಷ್ಟೆ. ನೀವು ಖರ್ಚು ಮಾಡಿದ ಉತ್ತಮ ಸಂಪತ್ತನ್ನು ನಿಮಗೆ ಪೂರ್ಣವಾಗಿ ಮರಳಿಸಲಾಗುವುದು; ನಿಮಗೆ ಅನ್ಯಾಯವಾಗಲಾರದು.

يَهْدِيْ مَنْ يَّشَآءُ ؕ وَمَا تُنْفِقُوْا مِنْ خَيْرٍ
فَلِاَنْفُسِكُمْ ؕ وَمَا تُنْفِقُوْنَ اِلَّا ابْتِغَآءَ
وَجْهِ اللّٰهِ ؕ وَمَا تُنْفِقُوْا مِنْ خَيْرٍ
يُّوَفَّ اِلَيْكُمْ وَاَنْتُمْ لَا تُظْلَمُوْنَ ﴿٢٧٢﴾

**274.** (ಈ ಮೇಲೆ ಹೇಳಿದ ದಾನಧರ್ಮಗಳು) ಅಲ್ಲಾಹನ ಮಾರ್ಗದಲ್ಲಿ (ಕರ್ತವ್ಯನಿಷ್ಠರಾದ ಕಾರಣ ಇತರ ಕೆಲಸಗಳಿಂದ) ತಡೆದು ನಿಲ್ಲಿಸಲ್ಪಟ್ಟ ಬಡವರಿಗಾಗಿದೆ. ಅವರಿಗೆ (ಸ್ವತಂತ್ರವಾಗಿ) ಊರಿನಲ್ಲಿ ಸಂಚರಿಸಲು ಸಾಧ್ಯವಿಲ್ಲ. ಇತರರೊಡನೆ ಯಾಚಿಸದೆ ಅವರು ಸ್ವಾಭಿಮಾನವನ್ನು ಕಾಪಾಡುವುದರಿಂದ ನಿಜಸ್ಥಿತಿಯನ್ನು ಅರಿಯದವನು ಅವರನ್ನು ಧನಿಕರೆಂದು ತಿಳಿಯುತ್ತಾನೆ. ಅವರ ಚಹರೆಯಿಂದ ನೀನು ಅವರನ್ನು ತಿಳಕೊಳ್ಳಬಹುದು. ಅವರು ಜನರನ್ನು ಪೀಡಿಸಿ ಕಾಡಿಸಿ ಬೇಡುವುದಿಲ್ಲ. ನೀವು ವ್ಯಯಮಾಡುವ ಉತ್ತಮ ಸಂಪತ್ತಿನ ಕುರಿತು ಅಲ್ಲಾಹನು ಚೆನ್ನಾಗಿ ತಿಳಿದಿರುತ್ತಾನೆ.

لِلْفُقَرَآءِ الَّذِيْنَ اُحْصِرُوْا فِيْ
سَبِيْلِ اللّٰهِ لَا يَسْتَطِيْعُوْنَ ضَرْبًا فِى
الْاَرْضِ ؗ يَحْسَبُهُمُ الْجَاهِلُ اَغْنِيَآءَ
مِنَ التَّعَفُّفِ ۚ تَعْرِفُهُمْ بِسِيْمٰهُمْ ۚ لَا
يَسْـَٔلُوْنَ النَّاسَ اِلْحَافًا ؕ وَمَا تُنْفِقُوْا
مِنْ خَيْرٍ فَاِنَّ اللّٰهَ بِهٖ عَلِيْمٌ ﴿٢٧٣﴾

**275.** (ಅಲ್ಲಾಹನ ಮಾರ್ಗದಲ್ಲಿ) ಗೋಪ್ಯವಾಗಿಯೂ ಬಹಿರಂಗವಾಗಿಯೂ ರಾತ್ರಿಯಲ್ಲೂ ಹಗಲಿನಲ್ಲೂ ತಮ್ಮ ಧನವನ್ನು ವ್ಯಯಮಾಡುವವರಿಗೆ ಅವರ ಪ್ರಭುವಿನಿಂದ ಅವರ ಕೃತ್ಯಗಳ ಪ್ರತಿಫಲವಿದೆ. ಅವರಿಗೆ ಭಯವೇನೂ ಉಂಟಾಗದು; ಅವರು ದುಃಖಿತರೂ ಆಗಲಾರರು.

اَلَّذِيْنَ يُنْفِقُوْنَ اَمْوَالَهُمْ بِالَّيْلِ وَ
النَّهَارِ سِرًّا وَّ عَلَانِيَةً فَلَهُمْ
اَجْرُهُمْ عِنْدَ رَبِّهِمْ ۚ وَلَا خَوْفٌ
عَلَيْهِمْ وَلَا هُمْ يَحْزَنُوْنَ ﴿٢٧٤﴾

**276.** ಬಡ್ಡಿ ತಿನ್ನುವವರು, ಭ್ರಾಂತ ಶೈತಾನನ ಭಾರೀ ಹೊಡೆತಕ್ಕೆ ಗುರಿಯಾದ ಒಬ್ಬನು ಎದ್ದೇಳುವಂತಲ್ಲದೆ ಎದ್ದೇಳಲಾರರು. ಏಕೆಂದರೆ, 'ವ್ಯಾಪಾರವೂ ಬಡ್ಡಿಯ ಹಾಗೆಯೇ' ಎಂದು ಅವರು ಹೇಳುತ್ತಾರೆ. ಆದರೆ ಅಲ್ಲಾಹನು ವ್ಯಾಪಾರವನ್ನು ಧರ್ಮಬದ್ಧವನ್ನಾಗಿಯೂ ಬಡ್ಡಿಯನ್ನು ನಿಷಿದ್ಧವನ್ನಾಗಿಯೂ ಮಾಡಿರುವನು. ಆದ್ದರಿಂದ ಯಾರು ತನ್ನ ಪ್ರಭುವಿನಿಂದ ಉಪದೇಶ ಲಭಿಸಿದ ಬಳಿಕ ಆ ಪ್ರಕಾರ ನಡೆದುಕೊಂಡು ಅದರಿಂದ (ಅಂದರೆ ನಿಷಿದ್ಧ ಕಾರ್ಯಗಳಿಂದ) ದೂರವಾದರೆ,

اَلَّذِيْنَ يَاْكُلُوْنَ الرِّبٰوا لَا يَقُوْمُوْنَ
اِلَّا كَمَا يَقُوْمُ الَّذِيْ يَتَخَبَّطُهُ الشَّيْطٰنُ
مِنَ الْمَسِّ ؕ ذٰلِكَ بِاَنَّهُمْ قَالُوْٓا اِنَّمَا
الْبَيْعُ مِثْلُ الرِّبٰوا ۘ وَاَحَلَّ اللّٰهُ الْبَيْعَ
وَحَرَّمَ الرِّبٰوا ؕ فَمَنْ جَآءَهٗ مَوْعِظَةٌ
مِّنْ رَّبِّهٖ فَانْتَهٰى فَلَهٗ مَا سَلَفَ ؕ وَ
اَمْرُهٗٓ اِلَى اللّٰهِ ؕ وَمَنْ عَادَ فَاُولٰٓئِكَ





ಮುಂಚೆ ಪಡೆದು ಕೊಂಡದ್ದು ಅವನಿಗೆಯೇ (ಎಂದು ತಿಳಿದುಕೊಳ್ಳಲಿ). ಅವನ ವಿಚಾರ ಅಲ್ಲಾಹನಿಗೆ ಸಂಬಂಧಿಸಿದೆ. (ಆದರೆ) ಆ ಬಳಿಕವೂ (ಅದೇ ವೃತ್ತಿಯೆಡೆಗೆ) ಮರಳುವವರು ನರಕವಾಸಿಗಳು. ಅವರು ಅಲ್ಲಿ ನೆಲೆಸುವರು.

اَصْحٰبُ النَّارِ ۚ هُمْ فِيْهَا خٰلِدُوْنَ ﴿٢٧٥﴾

**277.** ಅಲ್ಲಾಹನು ಬಡ್ಡಿಯನ್ನು ನಾಶಪಡಿಸುತ್ತಾನೆ[84] ಮತ್ತು ದಾನ ಧರ್ಮಗಳನ್ನು ವೃದ್ಧಿಗೊಳಿಸುತ್ತಾನೆ. ಕಡು ಅವಿಶ್ವಾಸಿ ಹಾಗೂ ಮಹಾಪಾಪಿಯನ್ನು ಅಲ್ಲಾಹನು ಇಷ್ಟಪಡುವುದಿಲ್ಲ.

يَمْحَقُ اللّٰهُ الرِّبٰوا وَيُرْبِى الصَّدَقٰتِ ؕ وَ
اللّٰهُ لَا يُحِبُّ كُلَّ كَفَّارٍ اَثِيْمٍ ﴿٢٧٦﴾

**278.** ವಿಶ್ವಾಸವಿಡುವ, ಸತ್ಕರ್ಮಗೈಯ್ಯುವ, ನಮಾಝನ್ನು ನಿಷ್ಠೆಯಿಂದ ನಿರ್ವಹಿಸುವ ಮತ್ತು ಝಕಾತ್ ನೀಡುವವರಿಗೆ ಅವರ ಪ್ರಭುವಿನಿಂದ ಅವರ ಪ್ರತಿಫಲವಿದೆ. ಅವರಿಗೇನೂ ಭಯವಿಲ್ಲ. ಅವರು ದುಃಖಿಸಲಿಕ್ಕೂ ಇಲ್ಲ.

اِنَّ الَّذِيْنَ اٰمَنُوْا وَعَمِلُوا الصّٰلِحٰتِ وَ
اَقَامُوا الصَّلٰوةَ وَاٰتَوُا الزَّكٰوةَ لَهُمْ
اَجْرُهُمْ عِنْدَ رَبِّهِمْ ۚ وَلَا خَوْفٌ
عَلَيْهِمْ وَلَا هُمْ يَحْزَنُوْنَ ﴿٢٧٧﴾

**279.** ಓ ವಿಶ್ವಾಸಿಗಳೇ, ಅಲ್ಲಾಹನ ಭಯವಿರಿಸಿಕೊಳ್ಳಿರಿ. ನೀವು ವಿಶ್ವಾಸಿಗಳಾಗಿದ್ದಲ್ಲಿ ಬಡ್ಡಿಯಲ್ಲಿ ನಿಮಗೆ (ಸಿಗಲು) ಬಾಕಿಯಿರುವುದನ್ನು ಬಿಟ್ಟುಬಿಡಿರಿ.

يٰٓاَيُّهَا الَّذِيْنَ اٰمَنُوا اتَّقُوا اللّٰهَ وَذَرُوْا
مَا بَقِيَ مِنَ الرِّبٰوٓا اِنْ كُنْتُمْ
مُّؤْمِنِيْنَ ﴿٢٧٨﴾

**280.** ನೀವು (ಹಾಗೆ) ಮಾಡುವುದಿಲ್ಲವಾದರೆ ಅಲ್ಲಾಹನ ಮತ್ತು ಅವನ ಸಂದೇಶವಾಹಕನ ಕಡೆಯಿಂದ ಯುದ್ಧದ ಕುರಿತು ಎಚ್ಚರಿಕೆಯಿಂದಿರಿ. ಆದರೆ ನೀವು ಪಶ್ಚಾತ್ತಾಪಪಟ್ಟು ಮರಳುವುದಾದರೆ, ನಿಮ್ಮ ಮೂಲಧನ ನಿಮಗೆ ಲಭಿಸುವುದು. (ಹಾಗೆ) ನೀವು (ಯಾರೊಡನೆಯೂ) ಅನ್ಯಾಯವಾಗಿ ವರ್ತಿಸುವುದಿಲ್ಲ. ನಿಮ್ಮೊಡನೆ ಸಹ ಅನ್ಯಾಯವಾಗಿ ವರ್ತಿಸಲಾಗುವುದಿಲ್ಲ.

فَاِنْ لَّمْ تَفْعَلُوْا فَاْذَنُوْا بِحَرْبٍ مِّنَ
اللّٰهِ وَرَسُوْلِهٖ ۚ وَاِنْ تُبْتُمْ فَلَكُمْ رُءُوْسُ
اَمْوَالِكُمْ ۚ لَا تَظْلِمُوْنَ وَلَا تُظْلَمُوْنَ ﴿٢٧٩﴾

84. ಬಡ್ಡಿ ಪಡೆಯುವವರ ವ್ಯಾಪಾರ ಅಭಿವೃದ್ಧಿಗೊಳ್ಳುತ್ತದೆಂದೂ ಬಡ್ಡಿ ಪಡೆಯದವರ ವ್ಯಾಪಾರ ಕ್ಷೀಣಗೊಳ್ಳುತ್ತದೆಂದೂ ಹೇಳಲಾಗುತ್ತದೆ. ಆದರೆ ಬಡ್ಡಿ ಪಡೆಯುವ ಸಮುದಾಯಗಳನ್ನು ಅಲ್ಲಾಹನು ನಾಶಪಡಿಸಿ ದಾನ ಧರ್ಮಕ್ಕೆ ಒತ್ತು ಕೊಡುವವರನ್ನು ರಕ್ಷಿಸುವನೆಂದು ಈ ವಚನದಲ್ಲಿ ಭವಿಷ್ಯನುಡಿಯಿದೆ.

**281.** (ಸಾಲಗ್ರಾಹಕರಲ್ಲಿ) **ಯಾರಾದರೂ ಕಷ್ಟದಲ್ಲಿದ್ದರೆ,** (ಆತನಿಗೆ) **ಅನುಕೂಲವಾಗುವ ವರೆಗೆ ಸಮಯಾವಕಾಶ ನೀಡಬೇಕಾಗಿದೆ. ಅದನ್ನು** (ಆತನಿಗೆ) **ದಾನವಾಗಿ ಬಿಟ್ಟುಬಿಡುವುದಾದರೆ ಅದು ನಿಮಗೆ ಇನ್ನೂ ಗುಣಕರ - ನೀವು ಗ್ರಹಿಸಬಲ್ಲವರಾದರೆ.**

وَإِنْ كَانَ ذُو عُسْرَةٍ فَنَظِرَةٌ إِلَىٰ
مَيْسَرَةٍ ۚ وَأَنْ تَصَدَّقُوا خَيْرٌ لَكُمْ ۖ إِنْ
كُنْتُمْ تَعْلَمُونَ ﴿٢٨٠﴾

**282. ನಿಮ್ಮನ್ನು ಅಲ್ಲಾಹನ ಬಳಿಗೆ ಮರಳಿಸಲಾಗುವ ಆ ದಿನದ ಬಗ್ಗೆ ಭಯವಿರಿಸಿಕೊಳ್ಳಿರಿ. ಅನಂತರ, ಪ್ರತಿಯೊಬ್ಬನೂ ಸಂಪಾದಿಸಿದುದರ ಪ್ರತಿಫಲವನ್ನು ಆತನಿಗೆ ನೀಡಲಾಗುವುದು.** (ಯಾವ ರೀತಿಯಲ್ಲೂ) **ಅವರಿಗೆ ಅನ್ಯಾಯವಾಗದು.**

وَاتَّقُوا يَوْمًا تُرْجَعُونَ فِيهِ إِلَى اللَّهِ ۖ
ثُمَّ تُوَفَّىٰ كُلُّ نَفْسٍ مَا كَسَبَتْ وَهُمْ لَا
يُظْلَمُونَ ﴿٢٨١﴾

**283. ಓ ವಿಶ್ವಾಸಿಗಳೇ, ನೀವು ಒಂದು ನಿರ್ದಿಷ್ಟ ಅವಧಿಗೆ ಪರಸ್ಪರ ಸಾಲದ ವ್ಯವಹಾರ ಮಾಡುವಾಗ ಅದನ್ನು ಬರೆದಿಟ್ಟುಕೊಳ್ಳಿರಿ. ನಿಮ್ಮ ಮಧ್ಯೆ ಒಬ್ಬ ಬರಹಗಾರನು ಅದನ್ನು ನ್ಯಾಯೋಚಿತವಾಗಿ ಬರೆಯಲಿ. ಯಾವ ಬರಹಗಾರನೂ ಅದನ್ನು ಬರೆಯಲು ನಿರಾಕರಿಸಬಾರದು. ಕಾರಣವೇನೆಂದರೆ, ಅಲ್ಲಾಹನು ಆತನಿಗೆ ಬರೆಯಲು ಕಲಿಸಿದ್ದಾನೆ. ಆದ್ದರಿಂದ ಆತನು ಬರೆಯಲೇ ಬೇಕಾಗಿದೆ. ಬರೆಯಬೇಕಾದ ವಾಕ್ಯಗಳನ್ನು** (ಸಾಲಕ್ಕೆ) **ಬಾಧ್ಯನಾದವನು** (ಸಾಲಗ್ರಾಹಿ) **ಹೇಳಿಕೊಡಬೇಕು. ಆತನು ತನ್ನ ಪ್ರಭುವಾದ ಅಲ್ಲಾಹನ ಭಯವಿರಿಸಿಕೊಳ್ಳಲಿ ಹಾಗೂ ಅದರಿಂದ** (ಸಾಲದ ಮೊತ್ತದಿಂದ) **ಏನನ್ನೂ ಕಡಿಮೆಗೊಳಿಸದಿರಲಿ. ಆದರೆ,** (ಸಾಲಕ್ಕೆ) **ಬಾಧ್ಯನಾದವನು ಅವಿವೇಕಿಯೋ ಬಲಹೀನನೋ ಹೇಳಿಕೊಟ್ಟು ಬರೆಯಿಸಲು ಅಸಮರ್ಥನೋ ಆಗಿದ್ದರೆ, ಆತನ ರಕ್ಷಕನು** (ಆತನಿಗೋಸ್ಕರ) **ನ್ಯಾಯಯುತವಾಗಿ ವಾಕ್ಯಗಳನ್ನು ಹೇಳಿ ಬರೆಯಿಸಬೇಕಾಗಿದೆ. ನಿಮ್ಮ ಪೈಕಿ ಇಬ್ಬರು ಪುರುಷರನ್ನು** (ಅದಕ್ಕೆ) **ಸಾಕ್ಷಿ ಮಾಡಿರಿ. ಇಬ್ಬರು ಪುರುಷರಿಲ್ಲವಾದರೆ ನೀವು ಇಷ್ಟಪಡುವ ಒಬ್ಬ ಪುರುಷ ಮತ್ತು ಇಬ್ಬರು**

يَا أَيُّهَا الَّذِينَ آمَنُوا إِذَا تَدَايَنْتُمْ
بِدَيْنٍ إِلَىٰ أَجَلٍ مُسَمًّى فَاكْتُبُوهُ ۚ
وَلْيَكْتُبْ بَيْنَكُمْ كَاتِبٌ بِالْعَدْلِ ۚ
وَلَا يَأْبَ كَاتِبٌ أَنْ يَكْتُبَ كَمَا عَلَّمَهُ
اللَّهُ ۚ فَلْيَكْتُبْ وَلْيُمْلِلِ الَّذِي عَلَيْهِ
الْحَقُّ وَلْيَتَّقِ اللَّهَ رَبَّهُ وَلَا يَبْخَسْ مِنْهُ
شَيْئًا ۚ فَإِنْ كَانَ الَّذِي عَلَيْهِ الْحَقُّ
سَفِيهًا أَوْ ضَعِيفًا أَوْ لَا يَسْتَطِيعُ أَنْ
يُمِلَّ هُوَ فَلْيُمْلِلْ وَلِيُّهُ بِالْعَدْلِ ۚ وَ
اسْتَشْهِدُوا شَهِيدَيْنِ مِنْ رِجَالِكُمْ ۖ
فَإِنْ لَمْ يَكُونَا رَجُلَيْنِ فَرَجُلٌ وَ
امْرَأَتَانِ مِمَّنْ تَرْضَوْنَ مِنَ
الشُّهَدَاءِ أَنْ تَضِلَّ إِحْدَاهُمَا
فَتُذَكِّرَ إِحْدَاهُمَا الْأُخْرَىٰ ۚ وَلَا يَأْبَ
الشُّهَدَاءُ إِذَا مَا دُعُوا ۚ وَلَا تَسْأَمُوا
أَنْ تَكْتُبُوهُ صَغِيرًا أَوْ كَبِيرًا إِلَىٰ





**ಸ್ತ್ರೀಯರು ಸಾಕ್ಷಿಗಳಾಗಲಿ. ಅವರೀರ್ವರಲ್ಲಿ ಒಬ್ಬಳು ಮರೆತರೆ ಇನ್ನೊಬ್ಬಳು ನೆನಪಿಸಿಕೊಡಲಿಕ್ಕಾಗಿದೆ. ಸಾಕ್ಷಿಗಳನ್ನು ಕರೆಯುವಾಗ ಅವರು ನಿರಾಕರಿಸಬಾರದು. ಅದು** (ಸಾಲ ವ್ಯವಹಾರ) **ಸಣ್ಣದಿರಲಿ, ದೊಡ್ಡದಿರಲಿ, ಅದರ ಅವಧಿಯನ್ನು ನಿರ್ಣಯಿಸಿ ಅದನ್ನು ಬರೆದಿಡುವುದರ ಬಗ್ಗೆ ನೀವು ಉದಾಸೀನತೆ ತೋರಿಸಬಾರದು. ಇದು ಅಲ್ಲಾಹನ ಬಳಿ ಅತ್ಯಂತ ನ್ಯಾಯಯುತವೂ ಸಾಕ್ಷ್ಯವನ್ನು ಅತ್ಯಂತ ಋಜುವಾದ ರೀತಿಯಲ್ಲಿ ಸಾದರಪಡಿಸಲು ಸಹಾಯಕವೂ ನೀವು ಸಂದೇಹಪಡದಿರಲು ಅತಿ ಉಪಯುಕ್ತವೂ ಆಗಿದೆ. ಆದರೆ ನೀವು ಪರಸ್ಪರ ಮಾಡುವ ನಗದು ವ್ಯಾಪಾರ ಇದರಿಂದ ಹೊರತಾಗಿದೆ. ಅದನ್ನು ಬರೆದಿಟ್ಟುಕೊಳ್ಳದಿದ್ದರೆ ನಿಮ್ಮ ಮೇಲೆ ತಪ್ಪಿಲ್ಲ.**[85] **ನೀವು ಅನ್ಯೋನ್ಯ ಕ್ರಯ - ವಿಕ್ರಯ ಮಾಡುವಾಗಲೂ ಸಾಕ್ಷಿಗಳನ್ನು ಇಟ್ಟುಕೊಳ್ಳಿರಿ.**[86] **ಬರಹಗಾರನಿಗಾಗಲಿ, ಸಾಕ್ಷಿಗಾಗಲಿ ಯಾವ ಉಪದ್ರವನ್ನೂ ಕೊಡಬಾರದು. ಹಾಗೆ ನೀವು ಮಾಡುವುದಾದರೆ ಅದು ನಿಮ್ಮಿಂದಾಗುವ ಅನ್ಯಾಯದ ವರ್ತನೆಯಾಗುವುದು. ಅಲ್ಲಾಹನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ನಿಮಗೆ ಜ್ಞಾನವನ್ನು ದಯಪಾಲಿಸುತ್ತಾನೆ. ಅಲ್ಲಾಹನು ಎಲ್ಲವನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.**

أَجَلِهِ ۚ ذَٰلِكُمْ أَقْسَطُ عِنْدَ اللَّهِ وَ
أَقْوَمُ لِلشَّهَادَةِ وَأَدْنَىٰ أَلَّا
تَرْتَابُوا ۖ إِلَّا أَنْ تَكُونَ تِجَارَةً
حَاضِرَةً تُدِيرُونَهَا بَيْنَكُمْ فَلَيْسَ
عَلَيْكُمْ جُنَاحٌ أَلَّا تَكْتُبُوهَا ۗ وَ
أَشْهِدُوا إِذَا تَبَايَعْتُمْ ۚ وَلَا يُضَارَّ
كَاتِبٌ وَلَا شَهِيدٌ ۚ وَإِنْ تَفْعَلُوا
فَإِنَّهُ فُسُوقٌ بِكُمْ ۗ وَاتَّقُوا اللَّهَ ۖ وَ
يُعَلِّمُكُمُ اللَّهُ ۗ وَاللَّهُ بِكُلِّ شَيْءٍ
عَلِيمٌ ﴿٢٨٢﴾

**284. ನೀವು ಪ್ರಯಾಣದಲ್ಲಿದ್ದು ನಿಮಗೆ ಒಬ್ಬ ಬರಹಗಾರನು ಸಿಗದಿದ್ದ ಪಕ್ಷದಲ್ಲಿ** (ಏನನ್ನಾದರೂ) **ಒತ್ತೆ ಇಟ್ಟು** (ವ್ಯವಹಾರ ಮಾಡಿ) **ಕೊಳ್ಳಬಹುದಾಗಿದೆ. ಹಾಗೆ ನಿಮ್ಮ ಪೈಕಿ ಯಾರಾದರೂ ಬೇರೆ ಯಾರಿಗಾದರೂ ಏನನ್ನೇ ನಂಬಿ ಒಪ್ಪಿಸಿದರೆ, ಯಾರಿಗೆ ಒಪ್ಪಿಸಲಾಗಿದೆಯೋ ಆತನು ಆ ಅಮಾನತ್ತನ್ನು** (ಸಕಾಲದಲ್ಲಿ) **ಮರಳಿಸಬೇಕಾಗಿದೆ. ಆತನು ತನ್ನ ಪ್ರಭುವಾದ ಅಲ್ಲಾಹನ ಭಯವಿರಿಸಿಕೊಳ್ಳಲಿ.**

وَإِنْ كُنْتُمْ عَلَىٰ سَفَرٍ وَلَمْ تَجِدُوا
كَاتِبًا فَرِهَانٌ مَقْبُوضَةٌ ۖ فَإِنْ أَمِنَ
بَعْضُكُمْ بَعْضًا فَلْيُؤَدِّ الَّذِي اؤْتُمِنَ
أَمَانَتَهُ وَلْيَتَّقِ اللَّهَ رَبَّهُ ۗ وَلَا
تَكْتُمُوا الشَّهَادَةَ ۚ وَمَنْ يَكْتُمْهَا

85. ಬರೆದಿಟ್ಟುಕೊಳ್ಳುವುದು ಉತ್ತಮ ಎಂಬ ಒಂದು ಸೂಚನೆ ಇದರಲ್ಲಿ ಅಡಕವಾಗಿದೆ. ಬಿಲ್ ಅಥವಾ ರಸೀತಿ ಬರೆಯುವ ಕ್ರಮವು ವ್ಯವಹಾರದ ಬಗ್ಗೆ ಉಂಟಾಗುವ ಜಗಳವನ್ನು ತಪ್ಪಿಸುತ್ತದೆ.

86. ದೊಡ್ಡ ದೊಡ್ಡ ವ್ಯವಹಾರಗಳ ಕುರಿತು ಇಲ್ಲಿ ಹೇಳಲಾಗಿದೆ. ಅಂತಹ ವ್ಯವಹಾರಗಳನ್ನು ಬರೆದಿಟ್ಟುಕೊಳ್ಳುವುದು ಮತ್ತು ಸಾಕ್ಷಿಗಳನ್ನು ಇಡುವುದು ಅಗತ್ಯ. ಮುಂದೆ ಕಲಹ ಉಂಟಾಗದಿರಲಿಕ್ಕೆ ಇದು ಉಪಯುಕ್ತ.

**ನೀವು ಸಾಕ್ಷ್ಯವನ್ನು ಮುಚ್ಚಿಡಬೇಡಿರಿ. ಯಾರಾದರೂ ಅದನ್ನು ಮುಚ್ಚಿಟ್ಟರೆ, ಆತನ ಹೃದಯ ಪಾಪಗ್ರಸ್ತವಾಗುತ್ತದೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ತಿಳಿಯುತ್ತಾನೆ.**

فَإِنَّهُۥٓ ءَاثِمٌ قَلْبُهُۥ ۗ وَٱللَّهُ بِمَا تَعْمَلُونَ عَلِيمٌ ﴿٢٨٣﴾

**285. ಆಕಾಶಗಳಲ್ಲೂ ಭೂಮಿಯಲ್ಲೂ ಇರುವುದೆಲ್ಲ ಅಲ್ಲಾಹನದ್ದಾಗಿವೆ. ನಿಮ್ಮ ಮನಸ್ಸಿನಲ್ಲಿರುವಂಥದ್ದು, ನೀವು ಬಹಿರಂಗಪಡಿಸಿದರೂ ಬಚ್ಚಿಟ್ಟರೂ ಅಲ್ಲಾಹನು ನಿಮ್ಮೊಡನೆ ಆ ಬಗ್ಗೆ ವಿವರಣೆ ಕೇಳುವನು. ಆ ಮೇಲೆ ತಾನಿಚ್ಛಿಸುವವರಿಗೆ ಅವನು ಕ್ಷಮೆ ನೀಡುವನು ಮತ್ತು ತಾನಿಚ್ಛಿಸುವವರಿಗೆ ಅವನು ಶಿಕ್ಷೆಕೊಡುವನು. ಅಲ್ಲಾಹನು ತಾನಿಚ್ಛಿಸುವ ಎಲ್ಲವನ್ನೂ ಮಾಡಲು ಶಕ್ತನು.**

لِّلَّهِ مَا فِى ٱلسَّمَٰوَٰتِ وَمَا فِى ٱلْأَرْضِ ۗ وَإِن تُبْدُوا۟ مَا فِىٓ أَنفُسِكُمْ أَوْ تُخْفُوهُ يُحَاسِبْكُم بِهِ ٱللَّهُ ۖ فَيَغْفِرُ لِمَن يَشَآءُ وَيُعَذِّبُ مَن يَشَآءُ ۗ وَٱللَّهُ عَلَىٰ كُلِّ شَىْءٍ قَدِيرٌ ﴿٢٨٤﴾

**286.** (ನಮ್ಮ) **ಈ ಸಂದೇಶವಾಹಕ ತನ್ನ ಪ್ರಭುವಿನಿಂದ ತನಗೆ ಅವತೀರ್ಣಗೊಂಡದ್ದರಲ್ಲಿ ವಿಶ್ವಾಸ ವಿಟ್ಟಿರುತ್ತಾರೆ.** (ಹಾಗೆಯೇ ಇತರ) **ಸತ್ಯವಿಶ್ವಾಸಿಗಳು ಸಹ** ವಿಶ್ವಾಸವಿಟ್ಟಿರುತ್ತಾರೆ. (ಅವರು) **ಎಲ್ಲರೂ ಅಲ್ಲಾಹನಲ್ಲೂ ಅವನ ದೂತರಲ್ಲೂ ಅವನ ಗ್ರಂಥಗಳಲ್ಲೂ ಅವನ ಸಂದೇಶವಾಹಕರಲ್ಲೂ ವಿಶ್ವಾಸವಿಟ್ಟಿರುತ್ತಾರೆ. 'ಅಲ್ಲಾಹನ ಸಂದೇಶವಾಹಕರ ಮಧ್ಯೆ ನಾವು ವ್ಯತ್ಯಾಸ ವನ್ನೇನೂ ಕಲ್ಪಿಸುವುದಿಲ್ಲ.'** (ಎಂದು ಅವರು ಹೇಳುತ್ತಾರೆ). **'ನಾವು** (ಅಲ್ಲಾಹನ ಆಜ್ಞೆಯನ್ನು) **ಕೇಳಿ** (ಹೃತ್ಪೂರ್ವಕವಾಗಿ) **ಅನುಸರಿಸಿದ್ದೇವೆ' ಎಂದು ಸಹ ಅವರು ಹೇಳುತ್ತಾರೆ. 'ನಮ್ಮ ಪ್ರಭೂ, ನಾವು ನಿನ್ನಲ್ಲಿ ಕ್ಷಮಾಯಾಚನೆ ಮಾಡುತ್ತೇವೆ. ನಿನ್ನೆಡೆಗೆಯೇ** (ನಮ್ಮ) **ಮರಳಿಕೆ'** (ಎಂದು ಅವರು ಪ್ರಾರ್ಥಿಸುತ್ತಾರೆ).

ءَامَنَ ٱلرَّسُولُ بِمَآ أُنزِلَ إِلَيْهِ مِن رَّبِّهِۦ وَٱلْمُؤْمِنُونَ ۚ كُلٌّ ءَامَنَ بِٱللَّهِ وَمَلَٰٓئِكَتِهِۦ وَكُتُبِهِۦ وَرُسُلِهِۦ لَا نُفَرِّقُ بَيْنَ أَحَدٍ مِّن رُّسُلِهِۦ ۚ وَقَالُوا۟ سَمِعْنَا وَأَطَعْنَا ۖ غُفْرَانَكَ رَبَّنَا وَإِلَيْكَ ٱلْمَصِيرُ ﴿٢٨٥﴾

**287. ಅಲ್ಲಾಹನು ಯಾರಿಗೂ ಅವನ ಶಕ್ತಿಗೆ ಮೀರಿದ ಹೊಣೆಗಾರಿಕೆಯನ್ನು ಹೊರಿಸುವುದಿಲ್ಲ. ಅವನು ಗೈದ** (ಸತ್) **ಕರ್ಮದ ಪ್ರತಿಫಲ ಅವನಿಗೆ ಲಭಿಸುವುದು. ಅವನು ಗೈದ** (ದುಷ್ಟ) **ಕರ್ಮದ** (ಶಿಕ್ಷೆಯನ್ನೂ) **ಅವನು ಅನುಭವಿಸಬೇಕಾಗುತ್ತದೆ.** (ಅವರು ಹೀಗೆ ಪ್ರಾರ್ಥಿಸುತ್ತಾರೆ:) **'ನಮ್ಮ ಪ್ರಭೂ, ನಾವು ಮರೆತು ಬಿಟ್ಟರೆ**

لَا يُكَلِّفُ ٱللَّهُ نَفْسًا إِلَّا وُسْعَهَا ۚ لَهَا مَا كَسَبَتْ وَعَلَيْهَا مَا ٱكْتَسَبَتْ ۗ رَبَّنَا لَا تُؤَاخِذْنَآ إِن نَّسِينَآ أَوْ أَخْطَأْنَا ۚ رَبَّنَا وَلَا تَحْمِلْ عَلَيْنَآ إِصْرًا كَمَا حَمَلْتَهُۥ عَلَى ٱلَّذِينَ مِن قَبْلِنَا ۚ





**ಅಥವಾ ತಪ್ಪು ಮಾಡಿಬಿಟ್ಟರೆ, ನಮ್ಮನ್ನು ಶಿಕ್ಷಿಸಬೇಡ. ನಮ್ಮ ಪೂರ್ವಜರ ಮೇಲೆ ಹೊರಿಸಿದಂತಹ ಭಾರವನ್ನು ನಮ್ಮ ಮೇಲೆ ನೀನು ಹೊರಿಸದಿರು. ನಮ್ಮ ಒಡೆಯಾ, ನಮಗೆ ಹೊರಲಿಕ್ಕಾಗದುದನ್ನು ನಮ್ಮ ಮೇಲೆ ಹೊರಿಸಬೇಡ.[87] ನಮ್ಮ ಪಾಪವನ್ನು ಅಳಿಸಿ ಬಿಡು; ನಮ್ಮನ್ನು ಕ್ಷಮಿಸು; ನಮ್ಮ ಮೇಲೆ ಕರುಣೆದೋರು. ನೀನೇ ನಮ್ಮ ರಕ್ಷಕನಾಗಿರುವೆ. ಆದ್ದರಿಂದ ಅವಿಶ್ವಾಸಿ ಗಳಾದ ಜನರಿಗೆದುರಾಗಿ ನೀನು ನಮಗೆ ನೆರವು ನೀಡು.'**

رَبَّنَا وَلَا تُحَمِّلْنَا مَا لَا طَاقَةَ لَنَا بِهِۦ ۖ وَٱعْفُ عَنَّا وَٱغْفِرْ لَنَا وَٱرْحَمْنَآ ۚ أَنتَ مَوْلَىٰنَا فَٱنصُرْنَا عَلَى ٱلْقَوْمِ ٱلْكَٰفِرِينَ ﴿٢٨٦﴾

87. ಇಸ್ರನ್ = ಕರಾರು, ಭಾರ, ಪಾಪ (ಅಖ್‌ರಬ್). ಮನುಷ್ಯನನ್ನು ಒಳಿತಿನಿಂದ ತಡೆಯು, ಒಳಿತು ಮತ್ತು ಪುಣ್ಯದಿಂದ ತಡೆಯುವ ಕರಾರು (ಮುಫ್ರದಾತ್).
'ಪೂರ್ವಜರಿಗೆ ಹೆಚ್ಚು ಭಾರವಿತ್ತು; ನಮಗೆ ಭಾರವನ್ನು ಕಡಿಮೆ ಮಾಡಬೇಕು' ಎಂದು ಈ ವಚನದ ಅರ್ಥವಲ್ಲ, ಬದಲು, ದೈವಿಕ ನಿಯಮಗಳನ್ನು ಉಲ್ಲಂಘಿಸಿದ ಕಾರಣದಿಂದ ಅವರ ಮೇಲೆ ಹೊಣೆ ಹೊರಿಸಿ ಪುಣ್ಯಕರ್ಮಗಳಿಂದ ಅವರು ತಡೆಯಲ್ಪಟ್ಟಿದ್ದರು. ಅಂತಹ ಹೊಣೆಗಾರಿಕೆಯನ್ನು ನಮ್ಮ ಮೇಲೆ ಹೊರಿಸಬೇಡ. ನಾವು ಕರಾರನ್ನು ಮುರಿದು ಪುಣ್ಯ ಕರ್ಮಗಳನ್ನು ನಿರ್ವಹಿಸಲು ಸಾಧ್ಯವಾಗದಿರುವಂತೆ ಆಗಬಾರದು ಎಂಬುದಾಗಿ ಪ್ರಾರ್ಥಿಸಲು ಇಲ್ಲಿ ಸೂಚಿಸಲಾಗಿದೆ.

سُوْرَةُ اٰلِ عِمْرَانَ مَدَنِيَّةٌ وَّهِيَ مَعَ الْبَسْمَلَةِ اِحْدٰى وَمِائَتَا اٰيَةٍ وَّعِشْرُوْنَ رُكُوْعًا

# 3. ಆಲಿ ಇಮ್ರಾನ್

ಮದೀನದಲ್ಲಿ ಅವತೀರ್ಣವಾದುದು. ಈ ಅಧ್ಯಾಯನದಲ್ಲಿ ಬಿಸ್ಮಿಲ್ಲಾಹ್ ಸಹಿತ
201 ಆಯತ್‌ಗಳು ಹಾಗೂ 20 ರುಕೂಅ್‌ಗಳು ಇವೆ

1. ಪರಮ ದಯಾವಂತನೂ ಕಾರುಣ್ಯ ನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ۝١

2. ಅಲಿಫ್ ಲಾಂ ಮೀಂ[91]

الٓمّٓ ۝٢

3. ಅಲ್ಲಾಹ್- ಅವನ ಹೊರತು ಬೇರೆ ಆರಾಧ್ಯನಿಲ್ಲ. (ಅವನು) ಸದಾ ಜೀವಂತನೂ ಸ್ವತಃ ನೆಲೆ ನಿಂತಿರುವವನೂ (ಎಲ್ಲವನ್ನೂ) ನೆಲೆನಿಲ್ಲಿಸುವವನೂ ಆಗಿದ್ದಾನೆ.

اللّٰهُ لَآ اِلٰهَ اِلَّا هُوَ ۙ الْحَيُّ الْقَيُّوْمُ ۝٣

4,5. ಅವನು ನಿನಗೆ ಈ ಗ್ರಂಥವನ್ನು, ಇದಕ್ಕೆ ಮುಂಚೆ ಅವತೀರ್ಣವಾದುವುಗಳನ್ನು ದೃಢೀಕರಿಸುವಂತೆ ಸತ್ಯಪೂರ್ಣವಾಗಿ ಅವತೀರ್ಣಗೊಳಿಸಿರುವನು. ಜನರಿಗೆ ಮಾರ್ಗದರ್ಶಕವಾಗಿ (ಇದಕ್ಕೆ) ಮುಂಚೆ ತೌರಾತನ್ನೂ ಇಂಜೀಲನ್ನೂ ಅವನು ಅವತೀರ್ಣಗೊಳಿಸಿದ್ದನು ಮತ್ತು (ಈಗ) ಅವನು ಸತ್ಯಾಸತ್ಯ ವಿವೇಚಕವನ್ನೂ ಅವತೀರ್ಣಗೊಳಿಸಿದ್ದಾನೆ. ಅಲ್ಲಾಹನ ದೃಷ್ಟಾಂತಗಳನ್ನು ನಿರಾಕರಿಸುವವರಿಗೆ ಖಂಡಿತವಾಗಿಯೂ ಕಠಿಣವಾದ ಶಿಕ್ಷೆ ಕಾದಿದೆ. ಅಲ್ಲಾಹನು ಪ್ರತಾಪಶಾಲಿಯೂ ಶಿಕ್ಷಿಸುವವನೂ ಆಗಿದ್ದಾನೆ.

نَزَّلَ عَلَيْكَ الْكِتٰبَ بِالْحَقِّ مُصَدِّقًا لِّمَا بَيْنَ يَدَيْهِ وَاَنْزَلَ التَّوْرٰىةَ وَ الْاِنْجِيْلَ ۝٤

مِنْ قَبْلُ هُدًى لِّلنَّاسِ وَ اَنْزَلَ الْفُرْقَانَ ۬ اِنَّ الَّذِيْنَ كَفَرُوْا بِاٰيٰتِ اللّٰهِ لَهُمْ عَذَابٌ شَدِيْدٌ ۭ وَاللّٰهُ عَزِيْزٌ ذُو انْتِقَامٍ ۝٥

6. ನಿಸ್ಸಂದೇಹವಾಗಿಯೂ ಭೂಮಿಯಲ್ಲಿ ಅಥವಾ ಆಕಾಶದಲ್ಲಿರುವ ಯಾವುದೂ ಅಲ್ಲಾಹನಿಂದ ಗೋಪ್ಯವಲ್ಲ.

اِنَّ اللّٰهَ لَا يَخْفٰى عَلَيْهِ شَيْءٌ فِي الْاَرْضِ وَلَا فِي السَّمَاۗءِ ۝٦

91. ನಾನು ಅಲ್ಲಾಹ್ ಎಲ್ಲವನ್ನೂ ಬಲ್ಲವನು. (ಅಧ್ಯಾಯ 2, ವಚನ 2ರ ಟಿಪ್ಪಣಿ ನೋಡಿರಿ.)





7. ಅವನೇ ಗರ್ಭಾಶಯದಲ್ಲಿ ತಾನಿಚ್ಛಿಸಿದಂತೆ ನಿಮಗೆ ರೂಪಕೊಡುವವನು. ಪ್ರತಾಪವಂತನೂ ಬುದ್ಧಿಶಾಲಿಯೂ ಆದ ಅವನ ಹೊರತು ಬೇರೆ ಆರಾಧ್ಯನಿಲ್ಲ.

هُوَ الَّذِيْ يُصَوِّرُكُمْ فِي الْاَرْحَامِ كَيْفَ يَشَاۗءُ ۭ لَآ اِلٰهَ اِلَّا هُوَ الْعَزِيْزُ الْحَكِيْمُ ۝٧

8. ಅವನೇ ನಿನಗೆ ಈ ಗ್ರಂಥವನ್ನು ಅವತೀರ್ಣಗೊಳಿಸಿದ್ದಾನೆ. ಅದರಲ್ಲಿ ಕೆಲವು ಖಚಿತ ವಚನಗಳಿವೆ.[92] ಅವು ಗ್ರಂಥದ ಮೂಲಾಧಾರವಾಗಿವೆ. ಇನ್ನು ಕೆಲವು ವಚನಗಳು ಆಲಂಕಾರಿಕ. ಹೃದಯದಲ್ಲಿ ವಕ್ರತೆಯಿರುವವರು ಗೊಂದಲವನ್ನುಂಟುಮಾಡುವ ಉದ್ದೇಶದಿಂದ ಮತ್ತು ಅದನ್ನು ದುರ್ವ್ಯಾಖ್ಯಾನ ಮಾಡಲಿಕ್ಕೋಸ್ಕರ ಅದರಲ್ಲಿ ಆಲಂಕಾರಿಕವಾದುದನ್ನು ಅನುಸರಿಸುತ್ತಾರೆ. ಆದರೆ, ಅಲ್ಲಾಹನು ಮತ್ತು ಸುದೃಢ ಜ್ಞಾನವುಳ್ಳವರ ಹೊರತು ಬೇರ್‍ಯಾರೂ ಅದರ (ಯಥಾರ್ಥ) ವ್ಯಾಖ್ಯಾನವನ್ನು ತಿಳಿಯುವುದಿಲ್ಲ. 'ನಾವು ಅದನ್ನು ನಂಬುತ್ತೇವೆ; ಎಲ್ಲವೂ ನಮ್ಮ ಪ್ರಭುವಿನಿಂದ' ಎಂದು ಅವರು (ಸುದೃಢ ಜ್ಞಾನಿಗಳು) ಹೇಳುತ್ತಾರೆ. ವಿವೇಕಶಾಲಿಗಳ ಹೊರತು ಯಾರೂ ಉಪದೇಶವನ್ನು ಗಮನಿಸುವುದಿಲ್ಲ.

هُوَ الَّذِيْٓ اَنْزَلَ عَلَيْكَ الْكِتٰبَ مِنْهُ اٰيٰتٌ مُّحْكَمٰتٌ هُنَّ اُمُّ الْكِتٰبِ وَاُخَرُ مُتَشٰبِهٰتٌ ۭ فَاَمَّا الَّذِيْنَ فِيْ قُلُوْبِهِمْ زَيْغٌ فَيَتَّبِعُوْنَ مَا تَشَابَهَ مِنْهُ ابْتِغَاۗءَ الْفِتْنَةِ وَابْتِغَاۗءَ تَاْوِيْلِهٖ ڤ وَمَا يَعْلَمُ تَاْوِيْلَهٗٓ اِلَّا اللّٰهُ ۘ وَالرّٰسِخُوْنَ فِي الْعِلْمِ يَقُوْلُوْنَ اٰمَنَّا بِهٖ ۙ كُلٌّ مِّنْ عِنْدِ رَبِّنَا ۚ وَمَا يَذَّكَّرُ اِلَّآ اُولُوا الْاَلْبَابِ ۝٨

9. ನಮ್ಮ ಪ್ರಭೂ, ನೀನು ನಮಗೆ ಮಾರ್ಗದರ್ಶನವನ್ನು ಮಾಡಿದ ಬಳಿಕ ನಮ್ಮ ಹೃದಯಗಳಲ್ಲಿ ವಕ್ರಬುದ್ಧಿಯುಂಟಾಗುವಂತೆ ಮಾಡದಿರು. ನೀನು ನಮಗೆ ನಿನ್ನಿಂದ ಕರುಣೆಯನ್ನು ದಯಪಾಲಿಸು. ನಿಸ್ಸಂದೇಹವಾಗಿಯೂ ನೀನೇ ಅತಿ ದೊಡ್ಡ (ಅನುಗ್ರಹ) ದಾತ.

رَبَّنَا لَا تُزِغْ قُلُوْبَنَا بَعْدَ اِذْ هَدَيْتَنَا وَهَبْ لَنَا مِنْ لَّدُنْكَ رَحْمَةً ۚ اِنَّكَ اَنْتَ الْوَهَّابُ ۝٩

10. ನಮ್ಮ ಪ್ರಭೂ, ನೀನು ಖಂಡಿತವಾಗಿಯೂ ಒಂದು ದಿನ ಮನುಷ್ಯರನ್ನೆಲ್ಲ ಒಂದುಗೂಡಿಸುವವನಾಗಿರುವೆ. ಅದರಲ್ಲೇನೂ ಸಂಶಯವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ವಾಗ್ದಾನವನ್ನು ಮುರಿಯುವವನಲ್ಲ.

رَبَّنَآ اِنَّكَ جَامِعُ النَّاسِ لِيَوْمٍ لَّا رَيْبَ فِيْهِ ۭ اِنَّ اللّٰهَ لَا يُخْلِفُ الْمِيْعَادَ ۝١٠

92. "ಆಯಾತುನ್ ಮುಹ್‌ಕಮಾತುನ್" = ಸ್ಪಷ್ಟವಾದ ಅರ್ಥವಿರುವ, ನಿಷ್ಪ್ರಷ್ಟ, ಸಂದೇಹಾಸ್ಪದವಲ್ಲದ ಸುವ್ಯಕ್ತ ವಚನಗಳು.

**11.** **ಖಂಡಿತವಾಗಿಯೂ ಅವಿಶ್ವಾಸಿಗಳಿಗೆ ಅವರ ಸಂಪತ್ತಾಗಲಿ ಸಂತತಿಗಳಾಗಲಿ ಅಲ್ಲಾಹನ ವಿರುದ್ಧ ಯಾವ ಪ್ರಯೋಜನಕ್ಕೂ ಬರಲಾರವು. ನರಕದ ಇಂಧನ ಅವರೇ ಆಗಿದ್ದಾರೆ.**

إِنَّ الَّذِينَ كَفَرُوا لَن تُغْنِيَ عَنْهُمْ أَمْوَالُهُمْ وَلَا أَوْلَادُهُم مِّنَ اللَّهِ شَيْئًا ۖ وَأُولَٰئِكَ هُمْ وَقُودُ النَّارِ ﴿١١﴾

**12.** (ಅವರ ಸ್ಥಿತಿ) **ಫಿರ್‌ಔನನ ಅನುಯಾಯಿಗಳ ಮತ್ತು ಅವರಿಗಿಂತ ಹಿಂದಿನವರ ಸ್ಥಿತಿಯಂತೆ. ಅವರು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದರು. ಆದ್ದರಿಂದ ಅಲ್ಲಾಹನು ಅವರ ಪಾಪಗಳ ಕಾರಣದಿಂದ ಅವರನ್ನು ಶಿಕ್ಷಿಸಿದನು. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ.**

كَدَأْبِ آلِ فِرْعَوْنَ ۙ وَالَّذِينَ مِن قَبْلِهِمْ ۚ كَذَّبُوا بِآيَاتِنَا فَأَخَذَهُمُ اللَّهُ بِذُنُوبِهِمْ ۗ وَاللَّهُ شَدِيدُ الْعِقَابِ ﴿١٢﴾

**13.** **ಅವಿಶ್ವಾಸಿಗಳೊಡನೆ ನೀನು ಹೇಳು: 'ನಿಶ್ಚಯವಾಗಿಯೂ ನೀವು ಪರಾಜಿತರಾಗುವಿರಿ ಮತ್ತು ನರಕದಲ್ಲಿ ನಿಮ್ಮನ್ನು ಒಟ್ಟು ಸೇರಿಸಲಾಗುವುದು; ಅದು ಅತಿ ನಿಕೃಷ್ಟವಾದೊಂದು ವಾಸಸ್ಥಾನವಾಗಿದೆ.'**

قُل لِّلَّذِينَ كَفَرُوا سَتُغْلَبُونَ وَتُحْشَرُونَ إِلَىٰ جَهَنَّمَ ۚ وَبِئْسَ الْمِهَادُ ﴿١٣﴾

**14.** **ಪರಸ್ಪರ ಕಾದಾಡಿದ ಎರಡು ಪಂಗಡಗಳಲ್ಲಿ ನಿಮಗೆ ದಿಟವಾಗಿಯೂ ಒಂದು ದೃಷ್ಟಾಂತವಿದೆ. ಒಂದು ಪಂಗಡ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಿತ್ತು. ಇನ್ನೊಂದು ಪಂಗಡ ಅವಿಶ್ವಾಸವನ್ನು ಹೊಂದಿತ್ತು. ಅವರು** (ಮುಸ್ಲಿಮರು) **ಅವಿಶ್ವಾಸಿಗಳನ್ನು ಬಾಹ್ಯದೃಷ್ಟಿಯಲ್ಲಿ ತಮ್ಮ ಎರಡು ಪಾಲಿನಷ್ಟು ಕಂಡಿದ್ದರು. ಅಲ್ಲಾಹನು ತಾನಿಚ್ಛಿಸುವವರಿಗೆ ತನ್ನ ನೆರವು ಮೂಲಕ ಬಲ ನೀಡುತ್ತಾನೆ. ಕಣ್ಣಿದ್ದವರಿಗೆ ಖಂಡಿತವಾಗಿಯೂ ಅದರಲ್ಲಿ ದೊಡ್ಡ ಪಾಠವಿದೆ.**

قَدْ كَانَ لَكُمْ آيَةٌ فِي فِئَتَيْنِ الْتَقَتَا ۖ فِئَةٌ تُقَاتِلُ فِي سَبِيلِ اللَّهِ وَأُخْرَىٰ كَافِرَةٌ يَرَوْنَهُم مِّثْلَيْهِمْ رَأْيَ الْعَيْنِ ۚ وَاللَّهُ يُؤَيِّدُ بِنَصْرِهِ مَن يَشَاءُ ۗ إِنَّ فِي ذَٰلِكَ لَعِبْرَةً لِّأُولِي الْأَبْصَارِ ﴿١٤﴾

**15.** **ಮನುಷ್ಯರಿಗೆ ಸ್ತ್ರೀಯರು, ಮಕ್ಕಳು, ಚಿನ್ನ - ಬೆಳ್ಳಿಯ ಭವ್ಯ ಭಂಡಾರ, ಉತ್ತಮ ಜಾತಿಯ ಕುದುರೆಗಳು, ಜಾನುವಾರುಗಳು ಮತ್ತು ಕೃಷಿ ಭೂಮಿಗಳ ಮೇಲಿನ ಪ್ರೀತಿ ಆಕರ್ಷಕಗೊಳಿಸಲ್ಪಟ್ಟಿದೆ. ಇವೆಲ್ಲ ಐಹಿಕ ಜೀವನದ ಸುಖ ಸೌಕರ್ಯಗಳಾಗಿವೆ. ಆದರೆ ಅಲ್ಲಾಹನ ಬಳಿ ಅತ್ಯುತ್ತಮವಾದ ನಿವಾಸವಿದೆ.**

زُيِّنَ لِلنَّاسِ حُبُّ الشَّهَوَاتِ مِنَ النِّسَاءِ وَالْبَنِينَ وَالْقَنَاطِيرِ الْمُقَنطَرَةِ مِنَ الذَّهَبِ وَالْفِضَّةِ وَالْخَيْلِ الْمُسَوَّمَةِ وَالْأَنْعَامِ وَالْحَرْثِ ۗ ذَٰلِكَ مَتَاعُ الْحَيَاةِ الدُّنْيَا ۖ وَاللَّهُ عِندَهُ حُسْنُ الْمَآبِ ﴿١٥﴾





**16.** **ಹೇಳು : 'ಅವುಗಳಿಗಿಂತ ಉತ್ತಮವಾದುದನ್ನು ನಾನು ನಿಮಗೆ ಹೇಳಿ ಕೊಡಲೇ?' ಅಲ್ಲಾಹನ ಭಯವಿರಿಸಿಕೊಂಡವರಿಗೆ ಅವರ ಪ್ರಭುವಿನ ಬಳಿಯಲ್ಲಿ ಕೆಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳಿವೆ. ಅಲ್ಲಿ ಅವರು ಸದಾ ವಾಸಿಸುವರು. ಪರಿಶುದ್ಧರಾದ ಸಂಗಾತಿಗಳು**[93] **ಅಲ್ಲಿ ಅವರಿಗಿದ್ದಾರೆ. ಅಲ್ಲಾಹನ ಪ್ರೀತಿಯೂ ಅವರಿಗಿದೆ. ಅಲ್ಲಾಹನು ಅವನ ದಾಸರ ಸ್ಥಿತಿಗತಿಗಳನ್ನು ಚೆನ್ನಾಗಿ ಕಾಣುತ್ತಿದ್ದಾನೆ.**

قُلْ أَؤُنَبِّئُكُم بِخَيْرٍ مِّن ذَٰلِكُمْ ۚ لِلَّذِينَ اتَّقَوْا عِندَ رَبِّهِمْ جَنَّاتٌ تَجْرِي مِن تَحْتِهَا الْأَنْهَارُ خَالِدِينَ فِيهَا وَأَزْوَاجٌ مُّطَهَّرَةٌ وَرِضْوَانٌ مِّنَ اللَّهِ ۗ وَاللَّهُ بَصِيرٌ بِالْعِبَادِ ﴿١٦﴾

**17.** **ಅವರು ಪ್ರಾರ್ಥಿಸುತ್ತಾರೆ: 'ನಮ್ಮ ಪ್ರಭೂ, ನಾವು ನಂಬಿಕೆಯಿಟ್ಟಿದ್ದೇವೆ; ಆದ್ದರಿಂದ ನಮ್ಮ ಪಾಪಗಳನ್ನು ಕ್ಷಮಿಸು ಮತ್ತು ನರಕ ಶಿಕ್ಷೆಯಿಂದ ನಮ್ಮನ್ನು ಕಾಪಾಡು.**

الَّذِينَ يَقُولُونَ رَبَّنَا إِنَّنَا آمَنَّا فَاغْفِرْ لَنَا ذُنُوبَنَا وَقِنَا عَذَابَ النَّارِ ﴿١٧﴾

**18.** **ಅವರು ಸಹನಶೀಲರೂ ಸತ್ಯಸಂಧರೂ ಅನುಸರಣೆಯುಳ್ಳವರೂ** (ಅಲ್ಲಾಹನ ಮಾರ್ಗದಲ್ಲಿ) **ವ್ಯಯಿಸುವವರೂ ರಾತ್ರಿಯ ಅಂತ್ಯಯಾಮದಲ್ಲಿ ಕ್ಷಮೆಗಾಗಿ ಯಾಚಿಸುವವರೂ ಆಗಿದ್ದಾರೆ.**

الصَّابِرِينَ وَالصَّادِقِينَ وَالْقَانِتِينَ وَالْمُنفِقِينَ وَالْمُسْتَغْفِرِينَ بِالْأَسْحَارِ ﴿١٨﴾

**19.** **ತಾನಲ್ಲದೆ ಬೇರೆ ಆರಾಧ್ಯನಿಲ್ಲವೆಂದು ನ್ಯಾಯೋಚಿತವಾಗಿ ಅಲ್ಲಾಹನು ಸಾಕ್ಷ್ಯ ವಹಿಸುತ್ತಾನೆ.** (ಅದೇ ಪ್ರಕಾರ) **ದೇವದೂತರು ಮತ್ತು ಜ್ಞಾನಿಗಳು ಸಹ** (ಸಾಕ್ಷ್ಯ ವಹಿಸುತ್ತಾರೆ). **ಪ್ರತಾಪಶಾಲಿಯೂ ಅಗಾಧ ಜ್ಞಾನಿಯೂ ಆದ ಅವನಲ್ಲದೆ ಬೇರೆ ಆರಾಧ್ಯನಿಲ್ಲ.**

شَهِدَ اللَّهُ أَنَّهُ لَا إِلَٰهَ إِلَّا هُوَ وَالْمَلَائِكَةُ وَأُولُو الْعِلْمِ قَائِمًا بِالْقِسْطِ ۚ لَا إِلَٰهَ إِلَّا هُوَ الْعَزِيزُ الْحَكِيمُ ﴿١٩﴾

**20.** **ಖಂಡಿತವಾಗಿಯೂ ಅಲ್ಲಾಹನ ಬಳಿ ನಿಜವಾದ ಧರ್ಮ ಇಸ್ಲಾಂ**[94] (ಸಂಪೂರ್ಣ ವಿಧೇಯತೆ) **ಆಗಿದೆ.**

إِنَّ الدِّينَ عِندَ اللَّهِ الْإِسْلَامُ ۗ وَمَا اخْتَلَفَ الَّذِينَ أُوتُوا الْكِتَابَ إِلَّا مِن بَعْدِ

93. ಅಲ್‌ಬಖರಃ ವಚನ 26ರ ಟಿಪ್ಪಣಿ ನೋಡಿರಿ.

94. ಇಸ್ಲಾಂ ಎಂಬುದರ ಭಾಷಾರ್ಥ ಸಂಪೂರ್ಣವಾದ ಅನುಸರಣೆಯನ್ನು ಪಾಲಿಸುವುದು ಎಂದಾಗಿದೆ. ಇಸ್ಲಾಮಿಗಿಂತ ಮುಂಚೆ ಅವತೀರ್ಣವಾದ ಎಲ್ಲ ದೈವಿಕ ಧರ್ಮಗಳ ಮೂಲತತ್ವ ಏಕದೇವ ನಂಬಿಕೆ ಮತ್ತು ಪರಿಪೂರ್ಣವಾದ ದೇವಾನುಸರಣೆಯಾಗಿದೆ. ಆದರೆ ಅವ್ಯಾವುದೂ ಎಲ್ಲ ಕಾಲ ಮತ್ತು ದೇಶಕ್ಕೆ ಪರಿಪೂರ್ಣವಾದ ನಿಯಮ ಸಂಹಿತೆಯನ್ನು ಒಳಗೊಂಡಿರಲಿಲ್ಲ. ಅವು ಸಾರ್ವಲೌಕಿಕವೂ ಆಗಿರಲಿಲ್ಲ. ಅವುಗಳಿಗೆ ಇಸ್ಲಾಂ ಎಂಬ ಹೆಸರು ಸಹ ನೀಡಲ್ಪಟ್ಟಿರಲಿಲ್ಲ. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮೂಲಕ ಅವತೀರ್ಣವಾದ ಸಂದೇಶ ಎಲ್ಲ ಕಾಲಕ್ಕೂ ಸಮಸ್ತ ಲೋಕಕ್ಕೂ ಪರಿಪೂರ್ಣವಾದುದು ಹಾಗೂ ದೈವಿಕವಾಗಿ ಇಸ್ಲಾಂ ಎಂದು ನಾಮಕರಣ ಮಾಡಲ್ಪಟ್ಟ ಧರ್ಮವಾಗಿದೆ. ಆದ್ದರಿಂದ ಹಝ್ರತ್ ಮುಹಮ್ಮದ್ ಪೈಗಂಬರರ ಆವಿರ್ಭಾವದೊಂದಿಗೆ ಅಲ್ಲಾಹನ ಬಳಿ ಸ್ವೀಕಾರಾರ್ಹ ಧರ್ಮ ಇಸ್ಲಾಂ ಮಾತ್ರವಾಗಿದೆ.

ಗ್ರಂಥ ನೀಡಲ್ಪಟ್ಟವರು ಅವರಿಗೆ ಜ್ಞಾನ ಲಭಿಸಿದ ಬಳಿಕ ಪರಸ್ಪರ ಪೈಪೋಟಿ ನಿಮಿತ್ತ ಭಿನ್ನಾಭಿಪ್ರಾಯ ಹೊಂದಿದವರಾದರು. ಅಲ್ಲಾಹನ ದೃಷ್ಟಾಂತಗಳನ್ನು ಯಾರು ಅಲ್ಲಗಳೆಯುವರೋ, ಖಂಡಿತವಾಗಿಯೂ ಅಲ್ಲಾಹನು ಅತಿ ಬೇಗನೆ ಲೆಕ್ಕತೆಗೆಯುವವನು *ಎಂದು ಅವರು ತಿಳಿದಿರಲಿ.*

مَا جَآءَهُمُ الْعِلْمُ بَغْيًا بَيْنَهُمْ ۗ وَمَن يَكْفُرْ بِآيَاتِ اللَّهِ فَإِنَّ اللَّهَ سَرِيعُ الْحِسَابِ ﴿٢٠﴾

**21.** ಆದರೆ ಅವರು ನಿನ್ನೊಡನೆ ವಿವಾದ ಮಾಡಿದರೆ, 'ನಾನು ಮತ್ತು ನನ್ನನ್ನು ಅನುಸರಿಸುವವರು ಸಂಪೂರ್ಣವಾಗಿ ಅಲ್ಲಾಹನಿಗೆ ಸ್ವಯಂ ಅರ್ಪಿಸಿ ಕೊಂಡಿದ್ದೇವೆ' ಎಂದು ನೀನು ಅವರೊಡನೆ ಹೇಳು. ಗ್ರಂಥ ನೀಡಲ್ಪಟ್ಟವರೊಡನೆ ಮತ್ತು ಅನಕ್ಷರಸ್ಥರೊಡನೆ 'ನೀವು ಸಹ ಅಲ್ಲಾಹನಿಗೆ ಸ್ವಯಂ ಅರ್ಪಿಸಿ ಕೊಂಡಿರುವಿರೋ?' ಎಂದು ಕೇಳು. ಅವರು ಹಾಗೆ ಅರ್ಪಿಸಿದರೆ ಅವರು ಸತ್ಪಥವನ್ನು ಹೊಂದಿದರು (ಎಂದು ತಿಳಿದುಕೋ). ಆದರೆ ಅವರು ಮುಖ ತಿರುಗಿಸಿದರೆ, ಸಂದೇಶವನ್ನು ತಲಪಿಸುವುದು ಮಾತ್ರ ನಿನ್ನ ಕರ್ತವ್ಯವಾಗಿದೆ. ಅಲ್ಲಾಹನು ತನ್ನ ದಾಸರ ಸ್ಥಿತಿಗತಿಗಳನ್ನು ಚೆನ್ನಾಗಿ ಕಾಣುತ್ತಿದ್ದಾನೆ.

فَإِنْ حَآجُّوكَ فَقُلْ أَسْلَمْتُ وَجْهِيَ لِلَّهِ وَمَنِ اتَّبَعَنِ ۗ وَقُل لِّلَّذِينَ أُوتُوا الْكِتَابَ وَالْأُمِّيِّينَ أَأَسْلَمْتُمْ ۚ فَإِنْ أَسْلَمُوا فَقَدِ اهْتَدَوا ۖ وَّإِن تَوَلَّوْا فَإِنَّمَا عَلَيْكَ الْبَلَاغُ ۗ وَاللَّهُ بَصِيرٌ بِالْعِبَادِ ﴿٢١﴾

**22.** ಅಲ್ಲಾಹನ ದೃಷ್ಟಾಂತಗಳನ್ನು ಅಲ್ಲಗಳೆಯುವ, ಪ್ರವಾದಿಗಳನ್ನು ಅನ್ಯಾಯವಾಗಿ ಹತ್ಯೆ ಮಾಡಲು ಉದ್ದೇಶಿಸುವ ಹಾಗೂ ಮನುಷ್ಯರ ಪೈಕಿ ನ್ಯಾಯ-ನೀತಿ ಪಾಲಿಸಲು ಉಪದೇಶಿಸುವವರನ್ನು ಕೊಲ್ಲಲು ಪ್ರಯತ್ನಿಸುವವರಿಗೆ ಖಂಡಿತವಾಗಿಯೂ ಯಾತನಾಮಯವಾದ ಶಿಕ್ಷೆ ಕಾದಿದೆಯೆಂದು ನೀನು ಸಮಾಚಾರ ತಿಳಿಸು.

إِنَّ الَّذِينَ يَكْفُرُونَ بِآيَاتِ اللَّهِ وَيَقْتُلُونَ النَّبِيِّينَ بِغَيْرِ حَقٍّ وَيَقْتُلُونَ الَّذِينَ يَأْمُرُونَ بِالْقِسْطِ مِنَ النَّاسِ فَبَشِّرْهُم بِعَذَابٍ أَلِيمٍ ﴿٢٢﴾

**23.** ಅವರು ಇಹದಲ್ಲೂ ಪರದಲ್ಲೂ ತಮ್ಮ ಕರ್ಮಗಳು ನಿಷ್ಫಲಗೊಂಡವರಾಗಿದ್ದಾರೆ; ಅವರಿಗೆ ಸಹಾಯಕರಾಗಿ ಯಾರೂ ಇಲ್ಲ.

أُولَٰئِكَ الَّذِينَ حَبِطَتْ أَعْمَالُهُمْ فِي الدُّنْيَا وَالْآخِرَةِ وَمَا لَهُم مِّن نَّاصِرِينَ ﴿٢٣﴾





**24.** (ದೈವಿಕ) ಗ್ರಂಥದಿಂದ ಒಂದಂಶವನ್ನು ನೀಡಲ್ಪಟ್ಟವರ ಬಗ್ಗೆ ನೀನು ತಿಳಿದಿಲ್ಲವೇ? ಅವರ ಮಧ್ಯೆ ತೀರ್ಮಾನಮಾಡಲಿಕ್ಕಾಗಿ ಅಲ್ಲಾಹನ ಗ್ರಂಥದೆಡೆಗೆ ಅವರನ್ನು ಕರೆಯಲಾಗುತ್ತದೆ. ಆದರೆ ಅವರ ಪೈಕಿ ಒಂದು ಪಂಗಡದವರು ಇಷ್ಟವಿಲ್ಲದೆ (ಅವರಿಂದ) ಮುಖ ತಿರುಗಿಸುತ್ತಾರೆ.

أَلَمْ تَرَ إِلَى الَّذِينَ أُوتُوا نَصِيبًا مِّنَ الْكِتَابِ يُدْعَوْنَ إِلَىٰ كِتَابِ اللَّهِ لِيَحْكُمَ بَيْنَهُمْ ثُمَّ يَتَوَلَّىٰ فَرِيقٌ مِّنْهُمْ وَهُم مُّعْرِضُونَ ﴿٢٤﴾

**25.** 'ಕೆಲವೇ ದಿನಗಳ ಹೊರತು ಅಗ್ನಿ ನಮ್ಮನ್ನು ಸ್ಪರ್ಶಿಸಲಾರದು' ಎಂದು ಅವರು ಹೇಳುವುದರಿಂದಾಗಿ *ಹೀಗೆ ಅವರು ವಿಮುಖರಾಗುತ್ತಾರೆ.* ಅವರ ಧರ್ಮದ ಬಗ್ಗೆ ಅವರು ಕೃತಕವಾಗಿ ಉಂಟುಮಾಡುವ ಕೆಲವು ಸಿದ್ಧಾಂತಗಳು ಅವರನ್ನು ವಂಚಿತರನ್ನಾಗಿ ಮಾಡಿವೆ.

ذَٰلِكَ بِأَنَّهُمْ قَالُوا لَن تَمَسَّنَا النَّارُ إِلَّا أَيَّامًا مَّعْدُودَاتٍ ۖ وَغَرَّهُمْ فِي دِينِهِم مَّا كَانُوا يَفْتَرُونَ ﴿٢٥﴾

**26.** ಆದರೆ ಒಂದು ದಿನ ನಾವು ಅವರನ್ನು ಒಂದುಗೂಡಿಸುವಾಗ (ಅವರ) ಸ್ಥಿತಿಯೇನಾಗಿರಬಹುದು? ಆ ಬಗ್ಗೆ ಏನೂ ಸಂಶಯವಿಲ್ಲ. ಪ್ರತಿಯೊಬ್ಬನು ಸಂಪಾದಿಸಿದ್ದನ್ನು (ಅಂದು) ಅವನಿಗೆ ನೀಡಲಾಗುವುದು. ಅವರೊಡನೆ ಯಾವುದೇ ಅನ್ಯಾಯ ತೋರಿಸಲಾಗದು.

فَكَيْفَ إِذَا جَمَعْنَاهُمْ لِيَوْمٍ لَّا رَيْبَ فِيهِ وَوُفِّيَتْ كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿٢٦﴾

**27.** ಹೇಳಿರಿ: 'ಸರ್ವಾಧಿಪತ್ಯದ ಪ್ರಭುವಾದ ಅಲ್ಲಾಹನೇ, ನೀನು ಬಯಸುವವರಿಗೆ, ಆಧಿಪತ್ಯ ನೀಡುತ್ತಿ. ನೀನು ಬಯಸುವವರಿಂದ ಅಧಿಕಾರವನ್ನು ಕಿತ್ತುಕೊಳ್ಳುತ್ತಿ. ನೀನು ಬಯಸುವವರಿಗೆ ಉನ್ನತ ಸ್ಥಾನವನ್ನು ನೀಡುತ್ತಿ. ನೀನು ಬಯಸುವವರನ್ನು ಅಪಮಾನಿತರನ್ನಾಗಿ ಮಾಡುತ್ತಿ. ಎಲ್ಲ ಒಳಿತುಗಳು ನಿನ್ನ ಕೈಯಲ್ಲಿವೆ. ನಿಸ್ಸಂದೇಹವಾಗಿಯೂ ನೀನು ಎಲ್ಲ ಕಾರ್ಯಗಳಲ್ಲೂ ಸರ್ವಸಮರ್ಥನಾಗಿರುವೆ.

قُلِ اللَّهُمَّ مَالِكَ الْمُلْكِ تُؤْتِي الْمُلْكَ مَن تَشَاءُ وَتَنزِعُ الْمُلْكَ مِمَّن تَشَاءُ وَتُعِزُّ مَن تَشَاءُ وَتُذِلُّ مَن تَشَاءُ ۖ بِيَدِكَ الْخَيْرُ ۖ إِنَّكَ عَلَىٰ كُلِّ شَيْءٍ قَدِيرٌ ﴿٢٧﴾

**28.** 'ನೀನು ರಾತ್ರಿಯನ್ನು ಹಗಲಿನಲ್ಲೂ ಹಗಲನ್ನು ರಾತ್ರಿಯಲ್ಲೂ ಲೀನವಾಗುವಂತೆ ಮಾಡುತ್ತಿ. ನಿರ್ಜೀವವಾಗಿರುವುದರಿಂದ ಜೀವಂತವಾದುದನ್ನೂ ಜೀವಂತವಾಗಿರುವುದರಿಂದ ನಿರ್ಜೀವವಾದುದನ್ನೂ ನೀನು ಉದ್ಭವಗೊಳಿಸುತ್ತಿ. ನೀನು ಬಯಸುವವರಿಗೆ ನೀನು ಅಮಿತವಾಗಿ ನೀಡುತ್ತಿ.'

تُولِجُ اللَّيْلَ فِي النَّهَارِ وَتُولِجُ النَّهَارَ فِي اللَّيْلِ ۖ وَتُخْرِجُ الْحَيَّ مِنَ الْمَيِّتِ وَتُخْرِجُ الْمَيِّتَ مِنَ الْحَيِّ ۖ وَتَرْزُقُ مَن تَشَاءُ بِغَيْرِ حِسَابٍ ﴿٢٨﴾

**29. ಸತ್ಯವಿಶ್ವಾಸಿಗಳು ಸತ್ಯವಿಶ್ವಾಸಿಗಳನ್ನು ಬಿಟ್ಟು ಅವಿಶ್ವಾಸಿಗಳನ್ನು ಮಿತ್ರರನ್ನಾಗಿ ಮಾಡಬಾರದು.**[93A] **ಹಾಗೆ ಯಾರಾದರೂ ಮಾಡಿದರೆ, ಅವನಿಗೆ ಅಲ್ಲಾಹನೊಡನೆ ಯಾವುದೇ ವಿಚಾರದಲ್ಲಿ ಏನೇ ಸಂಬಂಧವಿಲ್ಲ. ಅವರಿಂದ ನೀವು ಪೂರ್ಣವಾಗಿ ಸ್ವಯಂ ಸುರಕ್ಷಿತರಾಗುವುದರ ಹೊರತು**[93B] ಅನ್ಯಮಾರ್ಗವಿಲ್ಲ. **ಅಲ್ಲಾಹನು ತನ್ನ** (ಶಿಕ್ಷೆಯ) **ಕುರಿತು ನಿಮ್ಮನ್ನು ಎಚ್ಚರಿಸುತ್ತಾನೆ. ಅಲ್ಲಾಹನೆಡೆಗೇ** (ನಿಮ್ಮ) **ಮರಳಿಕೆಯಾಗಿದೆ.**

لَا يَتَّخِذِ الْمُؤْمِنُوْنَ الْكٰفِرِيْنَ اَوْلِيَآءَ مِنْ
دُوْنِ الْمُؤْمِنِيْنَ ۚ وَمَنْ يَّفْعَلْ ذٰلِكَ
فَلَيْسَ مِنَ اللّٰهِ فِيْ شَيْءٍ اِلَّآ اَنْ تَتَّقُوْا
مِنْهُمْ تُقٰىةً ۗ وَيُحَذِّرُكُمُ اللّٰهُ نَفْسَهٗ ۗ وَ
اِلَى اللّٰهِ الْمَصِيْرُ ﴿٢٩﴾

**30. ಹೇಳು: 'ನೀವು ನಿಮ್ಮ ಹೃದಯಗಳಲ್ಲಿರುವುದನ್ನು ಬಚ್ಚಿಟ್ಟರೂ ಬಹಿರಂಗಪಡಿಸಿದರೂ ಅಲ್ಲಾಹನು ಅದನ್ನು ತಿಳಿಯುತ್ತಾನೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅವನು ತಿಳಿಯುತ್ತಾನೆ. ಅಲ್ಲಾಹನು ಎಲ್ಲ ಕಾರ್ಯಗಳನ್ನೂ ಮಾಡಲು ಸಾಮರ್ಥ್ಯವುಳ್ಳವನಾಗಿದ್ದಾನೆ.'**

قُلْ اِنْ تُخْفُوْا مَا فِيْ صُدُوْرِكُمْ اَوْ
تُبْدُوْهُ يَعْلَمْهُ اللّٰهُ ۗ وَيَعْلَمُ مَا فِي
السَّمٰوٰتِ وَمَا فِي الْاَرْضِ ۗ وَاللّٰهُ عَلٰى كُلِّ
شَيْءٍ قَدِيْرٌ ﴿٣٠﴾

**31. ಪ್ರತಿಯೊಬ್ಬನು ಮಾಡಿದ ಒಳಿತು ಮತ್ತು ಕೆಡುಕುಗಳೆಲ್ಲವೂ ಅವನ ಮುಂದೆ ತರಲ್ಪಡುವುದನ್ನು ಅವನು ಕಾಣುವ ದಿನದ ಕುರಿತು** ಜಾಗರೂಕರಾಗಿರಿ. **ತನ್ನ ಮತ್ತು ಆ ಕೆಡುಕಿನ ಮಧ್ಯದ ದೂರ ಹೆಚ್ಚಾಗಿ ಬಿಟ್ಟಿದ್ದರೆ! ಎಂದು ಅವನು ಆಶಿಸುವನು. ಅಲ್ಲಾಹನು ತನ್ನ** ಶಿಕ್ಷೆಯ **ಬಗ್ಗೆ ನಿಮ್ಮನ್ನು ಎಚ್ಚರಿಸುತ್ತಾನೆ. ಅಲ್ಲಾಹನು ತನ್ನ ದಾಸರ ಮೇಲೆ ಅತ್ಯಂತ ಕರುಣೆದೋರುವವನಾಗಿದ್ದಾನೆ.**

يَوْمَ تَجِدُ كُلُّ نَفْسٍ مَّا عَمِلَتْ مِنْ خَيْرٍ
مُّحْضَرًا ۛ وَّمَا عَمِلَتْ مِنْ سُوْٓءٍ ۛ تَوَدُّ لَوْ
اَنَّ بَيْنَهَا وَبَيْنَهٗٓ اَمَدًا بَعِيْدًا ۗ وَ
يُحَذِّرُكُمُ اللّٰهُ نَفْسَهٗ ۗ وَاللّٰهُ رَءُوْفٌ
بِالْعِبَادِ ﴿٣١﴾

93A. ಮುಸ್ಲಿಮರು ಸತ್ಯವಿಶ್ವಾಸಿಗಳನ್ನು ಸಂಪೂರ್ಣವಾಗಿ ಕಡೆಗಣಿಸಿ ಹಾಗೂ ಅವಿಶ್ವಾಸಿಗಳ ಕಡೆಗೆ ಮಾತ್ರ ಒಲಿದುಕೊಂಡು ಮಾಡುವ ಮಿತ್ರತ್ವವನ್ನು ಇಲ್ಲಿ ತಡೆಯಲಾಗಿದೆ. ಆದಾಗ್ಯೂ, ತಮ್ಮೊಡನೆ ಸೌಹಾರ್ದದಿಂದ ವರ್ತಿಸುವ ಮುಸ್ಲಿಮೇತರರೊಡನೆ ಸ್ನೇಹ ಸೌಹಾರ್ದದಿಂದಲೇ ವರ್ತಿಸಬೇಕೆಂದು ಖುರ್‌ಆನ್ ನಿರ್ದೇಶಿಸುತ್ತದೆ. (60ನೇ ಅಧ್ಯಾಯದ 9 ಮತ್ತು 10ನೇ ವಚನಗಳನ್ನು ನೋಡಿರಿ)

93B. ಈ ಆಜ್ಞೆ ಮುಸ್ಲಿಂ ರಾಷ್ಟ್ರಗಳಿಗೆ ಅನ್ವಯ. ಮುಸ್ಲಿಂ ಆಡಳಿತಾಧಿಕಾರಿಗಳು ಇತರ ಮುಸ್ಲಿಂ ರಾಷ್ಟ್ರಗಳ ಹಿತಾಸಕ್ತಿಗಳನ್ನು ಪೂರ್ಣವಾಗಿ ಕಡೆಗಣಿಸಿಕೊಂಡು ಅಥವಾ ಇತರ ಮುಸ್ಲಿಂ ರಾಜ್ಯಗಳಿಗೆ ಹಾನಿಯುಂಟಾಗುವ ರೀತಿಯಲ್ಲಿ ಮುಸ್ಲಿಮೇತರ ರಾಷ್ಟ್ರಗಳೊಡನೆ ಯಾವುದೇ ರೀತಿಯ ಮೈತ್ರಿ ಅಥವಾ ಒಪ್ಪಂದ ಮಾಡಿಕೊಳ್ಳಬಾರದು ಎಂದು ಇಲ್ಲಿ ಸೂಚಿಸಲಾಗಿದೆ.





**32. ಹೇಳು: 'ನೀವು ಅಲ್ಲಾಹನನ್ನು ಪ್ರೀತಿಸುವಿರಾದರೆ ನನ್ನನ್ನು ಅನುಸರಿಸಿರಿ. ಆಗ ಅಲ್ಲಾಹನು ನಿಮ್ಮನ್ನು ಪ್ರೀತಿಸುವವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯ ನಿಧಿಯೂ ಆಗಿದ್ದಾನೆ.'**

قُلْ اِنْ كُنْتُمْ تُحِبُّوْنَ اللّٰهَ فَاتَّبِعُوْنِيْ
يُحْبِبْكُمُ اللّٰهُ وَيَغْفِرْ لَكُمْ ذُنُوْبَكُمْ ۗ وَ
اللّٰهُ غَفُوْرٌ رَّحِيْمٌ ﴿٣٢﴾

**33. ಹೇಳು: 'ಅಲ್ಲಾಹನನ್ನು ಮತ್ತು ಈ ಪ್ರವಾದಿಯನ್ನು ಅನುಸರಿಸಿರಿ.' ಇದರಿಂದ ಅವರು ವಿಮುಖರಾದರೆ, ಅಲ್ಲಾಹನು ಅವಿಶ್ವಾಸಿಗಳನ್ನು ಪ್ರೀತಿಸುವುದಿಲ್ಲ** (ಎಂದು ಅವರು ತಿಳಿದುಕೊಳ್ಳಲಿ).

قُلْ اَطِيْعُوا اللّٰهَ وَالرَّسُوْلَ ۚ فَاِنْ تَوَلَّوْا
فَاِنَّ اللّٰهَ لَا يُحِبُّ الْكٰفِرِيْنَ ﴿٣٣﴾

**34. ನಿಶ್ಚಯವಾಗಿಯೂ ಅಲ್ಲಾಹನು ಆದಮರನ್ನೂ ನೂಹ್‌ರನ್ನೂ ಇಬ್‌ರಾಹೀಮರ ಕುಟುಂಬವನ್ನೂ ಇಮ್ರಾನರ ಕುಟುಂಬವನ್ನೂ ಲೋಕದ ಎಲ್ಲ ಜನರ ಪೈಕಿ**[95] **ಶ್ರೇಷ್ಠರನ್ನಾಗಿ ಆಯ್ಕೆ ಮಾಡಿದ್ದಾನೆ.**

اِنَّ اللّٰهَ اصْطَفٰٓى اٰدَمَ وَنُوْحًا وَّاٰلَ
اِبْرٰهِيْمَ وَاٰلَ عِمْرٰنَ عَلَى الْعٰلَمِيْنَ ﴿٣٤﴾

**35. ಒಂದು ತಲೆಮಾರು**[96] **ಇತರ ತಲೆಮಾರುಗಳೊಂದಿಗೆ ಪರಸ್ಪರ ಸಂಬಂಧವುಳ್ಳ ಸ್ಥಿತಿಯಲ್ಲಿ** (ಅಲ್ಲಾಹನು ಅವರಿಗೆ ಶ್ರೇಷ್ಠತೆ ನೀಡಿದ್ದಾನೆ). **ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಅರಿಯುವವನೂ ಆಗಿದ್ದಾನೆ.**

ذُرِّيَّةً بَعْضُهَا مِنْ بَعْضٍ ۗ وَاللّٰهُ
سَمِيْعٌ عَلِيْمٌ ﴿٣٥﴾

**36. ಇಮ್ರಾನರ** (ವಂಶದ ಓರ್ವ) **ಸ್ತ್ರೀ ಹೇಳಿದ ಸಂದರ್ಭ- 'ನನ್ನ ಪ್ರಭೂ, ನನ್ನ ಉದರದಲ್ಲಿರುವ ಮಗುವನ್ನು ನಿನ್ನ ಸೇವೆಗಾಗಿ ಮೀಸಲಾಗಿರಿಸಲು ನಾನು ಹರಕೆ ಮಾಡಿದ್ದೇನೆ. ಆದ್ದರಿಂದ ನೀನು ನನ್ನಿಂದ** (ಅದನ್ನು) **ಸ್ವೀಕರಿಸು. ನಿಶ್ಚಯವಾಗಿಯೂ ನೀನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಅರಿಯುವವನೂ ಆಗಿರುವಿ.'**

اِذْ قَالَتِ امْرَاَتُ عِمْرٰنَ رَبِّ اِنِّيْ نَذَرْتُ
لَكَ مَا فِيْ بَطْنِيْ مُحَرَّرًا فَتَقَبَّلْ مِنِّيْ ۚ
اِنَّكَ اَنْتَ السَّمِيْعُ الْعَلِيْمُ ﴿٣٦﴾

95. ಇಲ್ಲಿ ಲೋಕದ ಎಲ್ಲ ಜನರು ಎಂದರೆ ಹಿಂದಿನ ಮತ್ತು ಮುಂದಿನ ಸರ್ವರೂ ಎಂದು ಅರ್ಥವಲ್ಲ. ಆ ಕಾಲದ ಜನರು ಮತ್ತು ಯಾರ ಬಳಿಗೆ ಅವರನ್ನು ಕಳುಹಿಸಲಾಗಿತ್ತೋ ಆ ಜನರು ಎಂದು ಮಾತ್ರ ಅದರ ಉದ್ದೇಶ. ಹಾಗಲ್ಲವಾದರೆ, ಆದಮರಿಗೆ ಸರ್ವರಿಗಿಂತ ಶ್ರೇಷ್ಠತೆಯಿದ್ದರೆ ನೂಹ್‌ರಿಗೂ ಅದೇ ರೀತಿ ಶ್ರೇಷ್ಠತೆ ಲಭಿಸಲು ಸಾಧ್ಯವಿಲ್ಲ. ನೂಹ್‌ರಿಗೆ ಶ್ರೇಷ್ಠತೆಯಿದ್ದರೆ ಇಬ್‌ರಾಹೀಮರಿಗೆ ಇಲ್ಲವಾಗುತ್ತದೆ. ಇಬ್‌ರಾಹೀಮರಿಗೆ ಶ್ರೇಷ್ಠತೆಯಿದ್ದರೆ ಇಮ್ರಾನ್‌ರಿಗೆ ಇಲ್ಲವಾಗುತ್ತದೆ.

96. ಇಲ್ಲಿ ತಲೆಮಾರು ಎಂಬುದರ ತಾತ್ಪರ್ಯ ಭೌತಿಕ ತಲೆಮಾರು ಎಂದಲ್ಲ, ಆಧ್ಯಾತ್ಮಿಕ ತಲೆಮಾರು ಎಂದಾಗಿದೆ.

**37.** ನಂತರ ಆಕೆ ಅದಕ್ಕೆ ಜನ್ಮನೀಡಿದಾಗ ಆಕೆ ಹೇಳಿದಳು: 'ನನ್ನ ಪ್ರಭೂ, ನಾನು ಹೆತ್ತದ್ದು ಹೆಣ್ಣುಮಗುವನ್ನಾಗಿದೆ.' (ವಾಸ್ತವದಲ್ಲಿ) ಆಕೆ ಏನನ್ನು ಹೆತ್ತದ್ದೆಂದು ಅಲ್ಲಾಹನು ಚೆನ್ನಾಗಿ ಬಲ್ಲನು. (ಆಕೆ ಇಚ್ಛಿಸಿದ) ಗಂಡು ಮಗು (ಆಕೆ ಹೆತ್ತ) ಹೆಣ್ಣು ಮಗುವಿನಂತೆಯಲ್ಲವಷ್ಟೆ. (ಆಕೆ ಹೇಳಿದಳು:) 'ನಾನು ಅವಳಿಗೆ ಮರ್ಯಮ್ ಎಂದು ನಾಮಕರಣಮಾಡಿದ್ದೇನೆ. ಅವಳನ್ನೂ ಅವಳ ಸಂತತಿಯನ್ನೂ ಶಪಿಸಲ್ಪಟ್ಟ ಶೈತಾನನ (ಉಪದ್ರವದಿಂದ ಕಾಪಾಡಲಿಕ್ಕಾಗಿ) ನಾನು ನಿನ್ನ ಅಭಯ ಬೇಡುತ್ತೇನೆ.[97]

فَلَمَّا وَضَعَتْهَا قَالَتْ رَبِّ إِنِّي وَضَعْتُهَا أُنْثَىٰ ۖ وَاللَّهُ أَعْلَمُ بِمَا وَضَعَتْ ۖ وَلَيْسَ الذَّكَرُ كَالْأُنْثَىٰ ۖ وَإِنِّي سَمَّيْتُهَا مَرْيَمَ وَإِنِّي أُعِيذُهَا بِكَ وَذُرِّيَّتَهَا مِنَ الشَّيْطَانِ الرَّجِيمِ ﴿٣٦﴾

**38.** ಹಾಗೆ, ಆಕೆಯ ಪ್ರಭು (ಅಲ್ಲಾಹ್) ಅವಳನ್ನು ಉತ್ತಮ ರೀತಿಯಲ್ಲಿ ಸ್ವೀಕರಿಸಿದನು; ಉತ್ತಮವಾದ ರೀತಿಯಲ್ಲಿ ಪಾಲನೆಪೋಷಣೆ ಮಾಡಿದನು ಮತ್ತು ಝಕರಿಯ್ಯರನ್ನು ಅವಳ ರಕ್ಷಕನನ್ನಾಗಿ ಮಾಡಿದನು. 'ಮಿಹ್ರಾಬ್'ನಲ್ಲಿರುವ[97A] ಅವಳ ಸಮೀಪ ಝಕರಿಯ್ಯ ಹೋದಾಗಲೆಲ್ಲ ಏನಾದರೊಂದು ಭಕ್ಷ್ಯವಸ್ತು ಅವಳ ಬಳಿ ಕಾಣುತ್ತಿತ್ತು. 'ಮರ್ಯಮ್, ಇದು ನಿನಗೆ ಹೇಗೆ ಸಿಕ್ಕಿತು?' ಎಂದು ಅವರು ಕೇಳಿದಾಗ, 'ಇದು ಅಲ್ಲಾಹನಿಂದ ದೊರೆತದ್ದು' ಎಂದು ಅವಳು ಹೇಳಿದಳು. ಖಂಡಿತವಾಗಿಯೂ ಅಲ್ಲಾಹನು ತಾನು ಇಚ್ಛಿಸುವವರಿಗೆ ಅಮಿತವಾಗಿ ನೀಡುತ್ತಾನೆ.

فَتَقَبَّلَهَا رَبُّهَا بِقَبُولٍ حَسَنٍ وَأَنْبَتَهَا نَبَاتًا حَسَنًا وَكَفَّلَهَا زَكَرِيَّا ۖ كُلَّمَا دَخَلَ عَلَيْهَا زَكَرِيَّا الْمِحْرَابَ وَجَدَ عِنْدَهَا رِزْقًا ۖ قَالَ يَا مَرْيَمُ أَنَّىٰ لَكِ هَٰذَا ۖ قَالَتْ هُوَ مِنْ عِنْدِ اللَّهِ ۖ إِنَّ اللَّهَ يَرْزُقُ مَنْ يَشَاءُ بِغَيْرِ حِسَابٍ ﴿٣٧﴾

**39.** (ಆಗ) ಅಲ್ಲಿ ಝಕರಿಯ್ಯ ತನ್ನ ಪ್ರಭುವನ್ನು ಕರೆದು ಪ್ರಾರ್ಥಿಸಿದರು: 'ನನ್ನ ಪ್ರಭೂ, ನೀನು ನನಗೆ ನಿನ್ನ ಕಡೆಯಿಂದ ಪರಿಶುದ್ಧರಾದ ಸಂತಾನಗಳನ್ನು ಪ್ರದಾನ ಮಾಡು; ನಿಶ್ಚಯವಾಗಿಯೂ ನೀನು ಪ್ರಾರ್ಥನೆಯನ್ನು ಆಲಿಸುವವನಷ್ಟೆ.'

هُنَالِكَ دَعَا زَكَرِيَّا رَبَّهُ ۖ قَالَ رَبِّ هَبْ لِي مِنْ لَدُنْكَ ذُرِّيَّةً طَيِّبَةً ۖ إِنَّكَ سَمِيعُ الدُّعَاءِ ﴿٣٨﴾

97. ಮರ್ಯಮ್‌ರಿಗೂ ಮರ್ಯಮ್‌ರ ಸಂತತಿಗಳಿಗೂ ಶೈತಾನನ ಉಪದ್ರವ ಉಂಟಾಗಲಿಕ್ಕೆ ಸಾಧ್ಯತೆಯಿದೆಯೆಂದು ಮರ್ಯಮ್‌ರ ಮಾತೆಗೆ ದಿವ್ಯದರ್ಶನ ಮೂಲಕ ತಿಳಿಸಲಾಗಿತ್ತೆಂದು ಈ ಪ್ರಾರ್ಥನೆಯಿಂದ ತಿಳಿದು ಬರುತ್ತದೆ.

97A. ಮಿಹ್ರಾಬ್- ಪ್ರಾರ್ಥನೆ ಮತ್ತು ದೇವಧ್ಯಾನಕ್ಕಾಗಿ ನೆಲಮಟ್ಟದಿಂದ ಎತ್ತರವಾಗಿ ನಿರ್ಮಿಸಲ್ಪಡುವ ಕೊಠಡಿ.





**40.** ಹಾಗೆ ಅವರು 'ಮಿಹ್ರಾಬ್'ನಲ್ಲಿ ಪ್ರಾರ್ಥನೆಗೆ ನಿಂತಿರುವಾಗ ದೇವದೂತರು ಅವರನ್ನು ಕರೆದು ಹೇಳಿದರು: 'ಖಂಡಿತವಾಗಿಯೂ ಅಲ್ಲಾಹನು ನಿನಗೆ ಯಹ್ಯಾ (ಎಂಬ ಪುತ್ರನ) ಕುರಿತು ಶುಭವಾರ್ತೆಯನ್ನು ಅರುಹುತ್ತಾನೆ. ಆತನು ಅಲ್ಲಾಹನ ಒಂದು ವಚನವನ್ನು ಸತ್ಯಪಡಿಸುವವನೂ ನೇತಾರನೂ ಚಾರಿತ್ರ್ಯವಂತನೂ ಸತ್ಯವಂತನಾದ ಪ್ರವಾದಿಯೂ ಆಗುವನು.'

فَنَادَتْهُ الْمَلَائِكَةُ وَهُوَ قَائِمٌ يُصَلِّي فِي الْمِحْرَابِ أَنَّ اللَّهَ يُبَشِّرُكَ بِيَحْيَىٰ مُصَدِّقًا بِكَلِمَةٍ مِنَ اللَّهِ وَسَيِّدًا وَحَصُورًا وَنَبِيًّا مِنَ الصَّالِحِينَ ﴿٣٩﴾

**41.** ಅವರು ಹೇಳಿದರು: 'ನನ್ನ ಪ್ರಭೂ, ನನಗೆ ಪುತ್ರನುಂಟಾಗುವುದು ಹೇಗೆ? ನಾನು ವೃದ್ಧಾಪ್ಯವನ್ನು ಪಡೆದಿರುವೆನು; ನನ್ನ ಪತ್ನಿ ಬಂಜೆಯಷ್ಟೆ?' ಅವನು (ಅಲ್ಲಾಹನು) ಹೇಳಿದನು : 'ಅದು ಹಾಗೆಯೇ ಆಗುವುದು. ಅಲ್ಲಾಹನು ತಾನು ಇಚ್ಛಿಸುವುದನ್ನು ಮಾಡುತ್ತಾನೆ.'

قَالَ رَبِّ أَنَّىٰ يَكُونُ لِي غُلَامٌ وَقَدْ بَلَغَنِيَ الْكِبَرُ وَامْرَأَتِي عَاقِرٌ ۖ قَالَ كَذَٰلِكَ اللَّهُ يَفْعَلُ مَا يَشَاءُ ﴿٤٠﴾

**42.** ಅವರು ಹೇಳಿದರು: 'ನನ್ನ ಪ್ರಭೂ ನನಗೊಂದು ಆಜ್ಞೆಯನ್ನು ನೀಡು.' ಅವನು (ಅಲ್ಲಾಹನು) ಉತ್ತರಿಸಿದನು: 'ನಿನಗೆ ಆಜ್ಞೆಯೇನೆಂದರೆ- ಮೂರು ದಿನಗಳ ಕಾಲ ನೀನು ಸಂಜ್ಞಾರೂಪದಲ್ಲಿ ಹೊರತು ಯಾರೊಡನೆಯೂ ಮಾತನಾಡಬಾರದು. ನಿನ್ನ ಪ್ರಭುವನ್ನು ಅತಿಯಾಗಿ ಸ್ಮರಿಸು; ಸಂಜೆ ಮತ್ತು ಮುಂಜಾನೆ ನೀನು ಅವನ ಸ್ತೋತ್ರ ಮಾಡು.'

قَالَ رَبِّ اجْعَلْ لِي آيَةً ۖ قَالَ آيَتُكَ أَلَّا تُكَلِّمَ النَّاسَ ثَلَاثَةَ أَيَّامٍ إِلَّا رَمْزًا ۗ وَاذْكُرْ رَبَّكَ كَثِيرًا وَسَبِّحْ بِالْعَشِيِّ وَالْإِبْكَارِ ﴿٤١﴾

**43.** ದೇವದೂತರು (ಹೀಗೆ) ಹೇಳಿದ ಸಂದರ್ಭ- 'ಎಲೈ ಮರ್ಯಮ್, ನಿಶ್ಚಯವಾಗಿಯೂ ಅಲ್ಲಾಹನು ನಿನ್ನನ್ನು ಶ್ರೇಷ್ಠ ಹಾಗೂ ಪರಿಶುದ್ಧಗೊಳಿಸಿದ್ದಾನೆ. ಲೋಕದಲ್ಲಿರುವ ಸ್ತ್ರೀಯರೆಲ್ಲರಿಗಿಂತ ನಿನಗೆ ಉನ್ನತ ಸ್ಥಾನವನ್ನು ನೀಡಿ ಆಯ್ಕೆ ಮಾಡಿದ್ದಾನೆ.

وَإِذْ قَالَتِ الْمَلَائِكَةُ يَا مَرْيَمُ إِنَّ اللَّهَ اصْطَفَاكِ وَطَهَّرَكِ وَاصْطَفَاكِ عَلَىٰ نِسَاءِ الْعَالَمِينَ ﴿٤٢﴾

**44.** 'ಎಲೈ ಮರ್ಯಮ್, ನಿನ್ನ ಪ್ರಭುವಿಗೆ ನೀನು ವಿಧೇಯಳಾಗಿರು, (ಅವನಿಗೆ) ಸಾಷ್ಟಾಂಗವೆರಗು ಹಾಗೂ ಏಕದೇವನನ್ನು ಮಾತ್ರ ಆರಾಧಿಸುವವರೊಂದಿಗೆ ನೀನು ಏಕದೇವಾರಾಧನೆ ಮಾಡು.'[97B]

يَا مَرْيَمُ اقْنُتِي لِرَبِّكِ وَاسْجُدِي وَارْكَعِي مَعَ الرَّاكِعِينَ ﴿٤٣﴾

97B. 'ರಕಅ'= ಏಕದೇವ ನಂಬಿಕೆಯನುಸಾರ ಆರಾಧನೆ ಮಾಡುವುದು, ಪ್ರಾರ್ಥಿಸುವುದು.

**45.** (ಓ ಪ್ರವಾದಿ,) **ಇದು ಅಗೋಚರ ವೃತ್ತಾಂತವಾಗಿದ್ದು[98] ಇದನ್ನು ನಾವು ನಿನಗೆ ದಿವ್ಯವಾಣಿ ಮೂಲಕ ತಿಳಿಸುತ್ತಿದ್ದೇವೆ. ಮರ್ಯಮಳ ಪರಿಪಾಲನೆಯ ಹೊಣೆಯನ್ನು ಯಾರು ವಹಿಸಬೇಕೆಂದು ಅವರು ತಮ್ಮ ಬಾಣಗಳನ್ನೆಸೆದು ತೀರ್ಮಾನಿಸುವಾಗ ನೀನು ಅವರ ಬಳಿ ಇರಲಿಲ್ಲ. ಅವರು ವಾಗ್ವಾದ ಮಾಡುತ್ತಿದ್ದಾಗಲೂ ನೀನು ಅವರ ಬಳಿ ಇರಲಿಲ್ಲ.**

ذَٰلِكَ مِنْ أَنبَاءِ الْغَيْبِ نُوحِيهِ إِلَيْكَ ۚ وَمَا كُنتَ لَدَيْهِمْ إِذْ يُلْقُونَ أَقْلَامَهُمْ أَيُّهُمْ يَكْفُلُ مَرْيَمَ وَمَا كُنتَ لَدَيْهِمْ إِذْ يَخْتَصِمُونَ ﴿٤٤﴾

**46. ದೇವದೂತರು ಹೇಳಿದ ಸಂದರ್ಭ - 'ಎಲೈ ಮರ್ಯಮ್, ನಿಶ್ಚಯವಾಗಿಯೂ ಅಲ್ಲಾಹನು ತನ್ನ ಬಳಿಯ ಒಂದು ವಚನ ಮೂಲಕ ನಿನಗೆ** (ಒಬ್ಬ ಪುತ್ರನ ಕುರಿತು) **ಶುಭವಾರ್ತೆಯನ್ನು ಅರುಹುತ್ತಾನೆ. ಅವನ ಹೆಸರು ಮಸೀಹು ಈಸಬ್ನು ಮರ್ಯಮ್ ಎಂದು.** (ಆತನು) **ಇಹದಲ್ಲೂ ಪರದಲ್ಲೂ ಆದರಣೀಯನೂ ದೇವಸಾಮೀಪ್ಯವನ್ನು ಗಳಿಸಿದವರ ಪೈಕಿಯವನೂ ಆಗುವನು.**

إِذْ قَالَتِ الْمَلَائِكَةُ يَا مَرْيَمُ إِنَّ اللَّهَ يُبَشِّرُكِ بِكَلِمَةٍ مِّنْهُ اسْمُهُ الْمَسِيحُ عِيسَى ابْنُ مَرْيَمَ وَجِيهًا فِي الدُّنْيَا وَالْآخِرَةِ وَمِنَ الْمُقَرَّبِينَ ﴿٤٥﴾

**47. 'ಅವನು ತೊಟ್ಟಿಲಿನಲ್ಲಿ[98A] ಮತ್ತು ಮಧ್ಯವಯಸ್ಕನಾಗಿರುವಾಗಲೂ ಜನರೊಡನೆ ಮಾತನಾಡುವನು ಹಾಗೂ ಸಜ್ಜನರಲ್ಲಿ ಸೇರಿದವನಾಗುವನು.'**

وَيُكَلِّمُ النَّاسَ فِي الْمَهْدِ وَكَهْلًا وَمِنَ الصَّالِحِينَ ﴿٤٦﴾

**48. ಆಕೆ** (ಅಲ್ಲಾಹನೊಡನೆ) **ಕೇಳಿದಳು: 'ನನ್ನ ಪ್ರಭೂ, ಯಾವೊಬ್ಬ ಪುರುಷನಾಗಲಿ ನನ್ನನ್ನು ಸ್ಪರ್ಶಿಸದಿರುವಾಗ ನನಗೆ ಒಬ್ಬ ಪುತ್ರನು ಹೇಗೆ ಹುಟ್ಟುವನು?' ಅವನು ಹೇಳಿದನು: "ಅದು ಹಾಗೆಯೇ** ಆಗುವುದು. **ಅಲ್ಲಾಹನು ತಾನಿಚ್ಛಿಸುವುದನ್ನು ಸೃಷ್ಟಿಸುತ್ತಾನೆ. ಅವನು ಏನನ್ನಾದರೂ ತೀರ್ಮಾನಿಸಿದರೆ 'ಆಗು' ಎಂದು ಮಾತ್ರವೇ ಅದಕ್ಕಾಗಿ ಹೇಳುತ್ತಾನೆ. ಆಗ ಅದು ಆಗುತ್ತದೆ."**

قَالَتْ رَبِّ أَنَّىٰ يَكُونُ لِي وَلَدٌ وَلَمْ يَمْسَسْنِي بَشَرٌ ۖ قَالَ كَذَٰلِكِ اللَّهُ يَخْلُقُ مَا يَشَاءُ ۚ إِذَا قَضَىٰ أَمْرًا فَإِنَّمَا يَقُولُ لَهُ كُن فَيَكُونُ ﴿٤٧﴾

98. ಅಂದರೆ, ಈ ವಿಚಾರ ಬೈಬಲಿನ ಐತಿಹ್ಯಗಳಿಗೆ ವಿರುದ್ಧವಾಗಿದ್ದು ಅಗೋಚರ ವಿಚಾರಗಳನ್ನು ಬಲ್ಲ ಅಲ್ಲಾಹನು ಈ ಸಂಗತಿಗಳನ್ನು ದಿವ್ಯವಾಣಿ ಮೂಲಕ ತಿಳಿಸಿದ್ದಾನೆ ಎಂದು ತಾತ್ಪರ್ಯ.

98A. ಅಂದರೆ ಕಿರಿವಯಸ್ಸಿನಲ್ಲಿ.





**49. "ಅವನು** (ಅಲ್ಲಾಹನು) **ಆತನಿಗೆ ಗ್ರಂಥವನ್ನೂ ತತ್ವಜ್ಞಾನವನ್ನೂ ತೌರಾತನ್ನೂ ಇಂಜೀಲನ್ನೂ ಕಲಿಸುವನು"** (ಎಂದು ಸಹ ಸುವಾರ್ತೆ ನೀಡಲಾಯಿತು).

وَيُعَلِّمُهُ الْكِتَابَ وَالْحِكْمَةَ وَالتَّوْرَاةَ وَالْإِنجِيلَ ﴿٤٨﴾

**50. "ಇಸ್ರಾಈಲ್ ಸಂತತಿಗಳೆಡೆಗೆ ಒಬ್ಬ ಸಂದೇಶವಾಹಕನನ್ನಾಗಿ** ಅಲ್ಲಾಹನು ಆತನನ್ನು ನಿಯೋಜಿಸುವನು. (ಆತನ ಸಂದೇಶವೇನೆಂದರೆ:) **ನಾನು ನಿಮ್ಮ ಪ್ರಭುವಿನಿಂದ ಒಂದು ದೃಷ್ಟಾಂತವನ್ನು ತಂದಿರುತ್ತೇನೆ - ಅಂದರೆ, ನಿಮಗೋಸ್ಕರ ನಾನು ಆವೆ ಮಣ್ಣಿನಿಂದ[98B] ಪಕ್ಷಿಗಳಂತೆ** (ಪಕ್ಷಿಗಳು ಮಾಡುವಂತೆ ಕೆಲವು ಸೃಷ್ಟಿಗಳನ್ನು) **ಸೃಷ್ಟಿಸುವೆನು; ನಂತರ ನಾನು ಅವುಗಳಲ್ಲಿ** (ಒಂದು ಹೊಸ ಆತ್ಮವನ್ನು) **ಊದುವೆನು. ಆಗ ಅದು ಅಲ್ಲಾಹನ ಅಪ್ಪಣೆಯಂತೆ ಎತ್ತರಕ್ಕೆ ಹಾರುವ ಪಕ್ಷಿಯಾಗುವುದು.[99] ಅಲ್ಲಾಹನ ಅಪ್ಪಣೆಯಂತೆ ಕುರುಡರನ್ನೂ ಕುಷ್ಠ ರೋಗಿಗಳನ್ನೂ ನಾನು ಗುಣಪಡಿಸುವೆನು[100] ಮತ್ತು ಮೃತಪಟ್ಟವರನ್ನು ಬದುಕಿಸುವೆನು.[101] ನೀವು ಭಕ್ಷಿಸುವುದನ್ನು ಮತ್ತು ನೀವು ನಿಮ್ಮ ಮನೆಗಳಲ್ಲಿ ಶೇಖರಿಸಿಡುವುದನ್ನು ನಾನು ನಿಮಗೆ**

وَرَسُولًا إِلَىٰ بَنِي إِسْرَائِيلَ أَنِّي قَدْ جِئْتُكُم بِآيَةٍ مِّن رَّبِّكُمْ ۖ أَنِّي أَخْلُقُ لَكُم مِّنَ الطِّينِ كَهَيْئَةِ الطَّيْرِ فَأَنفُخُ فِيهِ فَيَكُونُ طَيْرًا بِإِذْنِ اللَّهِ ۖ وَأُبْرِئُ الْأَكْمَهَ وَالْأَبْرَصَ وَأُحْيِي الْمَوْتَىٰ بِإِذْنِ اللَّهِ ۖ وَأُنَبِّئُكُم بِمَا تَأْكُلُونَ وَمَا

98B. ಅನುಸರಣೆಯ ಸ್ವಭಾವವಿರುವವರಿಂದ ಎಂದು ತಾತ್ಪರ್ಯ.

99. ಪಕ್ಷಿಗಳು ಮೊಟ್ಟೆಗಳಿಗೆ ಕಾವುಕೊಟ್ಟು ಮರಿಗಳನ್ನು ಮಾಡುವಂತೆ ಆಧ್ಯಾತ್ಮಿಕ ಪ್ರಗತಿಗೆ ಯೋಗ್ಯರಾದವರನ್ನು ನನ್ನ ಶಿಕ್ಷಣ ಕೊಟ್ಟು ಒಂದು ದಿನ ಅಲ್ಲಾಹನ ಸನ್ನಿಧಿಗೆ ಆಧ್ಯಾತ್ಮಿಕವಾಗಿ ಹಾರಿಹೋಗಲು ಸಮರ್ಥರಾಗುವಂತೆ ಮಾಡುವೆನು ಎಂದು ತಾತ್ಪರ್ಯ. ಹಾಗಲ್ಲದೆ, ನಾನು ದೇವನಾಗುವೆನೆಂದಾಗಲಿ ನಿಜವಾದ ಪಕ್ಷಿಗಳನ್ನು ಸೃಷ್ಟಿಸುವೆನೆಂದಾಗಲಿ ಇದಕ್ಕೆ ಅರ್ಥವಿಲ್ಲ.

100. ಸಹಜ ಕುರುಡರಿಗೆ ದೃಷ್ಟಿ ನೀಡಿದರೆಂದೂ ನಿಜವಾದ ಕುಷ್ಠರೋಗಿಗಳನ್ನು ಗುಣಪಡಿಸಿದರೆಂದೂ ಪ್ರವಾದಿ ಈಸಾರ (ಯೇಸುಕ್ರಿಸ್ತರ) ಕುರಿತು ಸಾಮಾನ್ಯವಾಗಿ ಹೇಳಲಾಗುತ್ತದೆ. ಆದರೆ ಇಲ್ಲಿ ಕುರುಡರು ಮತ್ತು ಕುಷ್ಠರೋಗಿಗಳು ಎಂದರೆ, ಶಾರೀರಿಕವಾಗಿ ಅಂಧತೆಗೆ ಗುರಿಯಾದವರು ಅಥವಾ ಕುಷ್ಠರೋಗಪೀಡಿತರು ಎಂದು ತಾತ್ಪರ್ಯವಲ್ಲ. 'ಅಕ್‌ಮಹ' (ಕುರುಡ, ಮಂದ ದೃಷ್ಟಿಯವನು) ಎಂಬ ಪದವು ಆಧ್ಯಾತ್ಮಿಕ ಅಂಧತೆಗೆ ಈಡಾದವರನ್ನು ಸೂಚಿಸುತ್ತದೆ. ಆಧ್ಯಾತ್ಮಿಕ ಅಂಧತೆಗೆ ಗುರಿಯಾದವರನ್ನು ಕುರುಡರು ಎಂದು ಪವಿತ್ರ ಖುರ್‌ಆನಿನ ಹಲವೆಡೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಉದಾಹರಣೆಗೆ 2:19, 17:73. 'ಅಬ್‌ರಸ' (ಕುಷ್ಠರೋಗ ಪೀಡಿತನು) ಎಂಬ ಪದ ಅಪೂರ್ಣವಾದ ನಂಬಿಕೆ ಅಥವಾ ಚಂಚಲ ವಿಶ್ವಾಸವಿರುವವರನ್ನು ಸೂಚಿಸುತ್ತದೆ.

101. ನಿಜವಾಗಿಯೂ ಮೃತಪಟ್ಟವರನ್ನು ಬದುಕಿಸುವೆನು ಎಂದು ಇದರ ಅರ್ಥವಲ್ಲ. ಮೃತರಾದವರು ಯಾರೂ ಈ ಲೋಕಕ್ಕೆ ಜೀವಂತವಾಗಿ ಮರಳಿ ಬರಲಾರರು. ಮೃತಪಟ್ಟವರು ಮರಳಿ ಬರುವರೆಂಬ ನಂಬಿಕೆ ಪವಿತ್ರ ಖುರ್‌ಆನಿನ ಅಧ್ಯಾಪನೆಗಳಿಗೆ ವಿರುದ್ಧವಾಗಿದೆ. 2:29, 21:96, 23:100-101, 45:27). "ಮೃತಪಟ್ಟವರನ್ನು ಬದುಕಿಸುವೆನು" ಅಂದರೆ "ಆಧ್ಯಾತ್ಮಿಕವಾಗಿ ಮೃತರಾದವರನ್ನು ಬದುಕಿಸುವೆನು" ಎಂದು ಮಾತ್ರ ಅರ್ಥ. ಎಲ್ಲ ಪ್ರವಾದಿಗಳು ಹೀಗೆ ಆಧ್ಯಾತ್ಮಿಕವಾಗಿ ಮೃತಪಟ್ಟವರನ್ನು ಬದುಕಿಸಿದ್ದಾರೆ. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಬಗ್ಗೆ ಪವಿತ್ರ ಖುರ್‌ಆನಿನಲ್ಲಿ ಇದೇ ರೀತಿ ಹೇಳಲಾಗಿದೆ (8:25).

**ತಿಳಿಸಿ ಕೊಡುವೆನು.**[102] **ನೀವು ಸತ್ಯವಿಶ್ವಾಸಿಗಳೆಂದಾದರೆ ಖಂಡಿತವಾಗಿಯೂ ಇದರಲ್ಲಿ ನಿಮಗೊಂದು ದೃಷ್ಟಾಂತವಿದೆ.**

تَدَّخِرُونَ فِي بُيُوتِكُمْ ۚ إِنَّ فِي ذَٰلِكَ لَآيَةً لَّكُمْ إِن كُنتُم مُّؤْمِنِينَ ﴿٥٠﴾

**51. 'ನನಗಿಂತ ಮುಂಚೆ ಅವತೀರ್ಣವಾದ ತೌರಾತನ್ನು ದೃಢೀಕರಿಸಲಿಕ್ಕೂ ನಿಮಗೆ ನಿಷಿದ್ಧ ಗೊಳಿಸಲಾದ ಕೆಲವನ್ನು ಧರ್ಮಬದ್ಧಗೊಳಿಸಲಿಕ್ಕೂ**[103] **ಬೇಕಾಗಿ** (ನಾನು ಬಂದಿದ್ದೇನೆ). **ನಾನು ನಿಮಗೋಸ್ಕರ ನಿಮ್ಮ ಪ್ರಭುವಿನಿಂದ ಒಂದು ದೃಷ್ಟಾಂತವನ್ನು ತಂದಿರುವೆನು. ಆದ್ದರಿಂದ ನೀವು ಅಲ್ಲಾಹನ ಭಯಭಕ್ತಿಯಿರಿಸಿ ಕೊಳ್ಳಿರಿ ಮತ್ತು ನನ್ನನ್ನು ಅನುಸರಿಸಿರಿ.**

وَمُصَدِّقًا لِّمَا بَيْنَ يَدَيَّ مِنَ التَّوْرَاةِ وَلِأُحِلَّ لَكُم بَعْضَ الَّذِي حُرِّمَ عَلَيْكُمْ ۚ وَجِئْتُكُم بِآيَةٍ مِّن رَّبِّكُمْ فَاتَّقُوا اللَّهَ وَأَطِيعُونِ ﴿٥١﴾

**52. 'ದಿಟವಾಗಿಯೂ ಅಲ್ಲಾಹನು ನನ್ನ ಮತ್ತು ನಿಮ್ಮ ಪ್ರಭುವಾಗಿದ್ದಾನೆ. ಆದ್ದರಿಂದ ನೀವು ಅವನ ಆರಾಧನೆ ಮಾಡಿರಿ. ಇದುವೇ ಋಜುಮಾರ್ಗವಾಗಿದೆ.'**

إِنَّ اللَّهَ رَبِّي وَرَبُّكُمْ فَاعْبُدُوهُ ۗ هَٰذَا صِرَاطٌ مُّسْتَقِيمٌ ﴿٥٢﴾

**53. ನಂತರ ಈಸಾ ಅವರ ನಿರಾಕರಣೆಯನ್ನು ಗ್ರಹಿಸಿದಾಗ, 'ಅಲ್ಲಾಹನಿಗೋಸ್ಕರ ನನಗೆ ನೆರವಾಗುವವರು ಯಾರು?' ಎಂದು ಕೇಳಿದರು. ಅವರ ಅನುಯಾಯಿಗಳು ಉತ್ತರಿಸಿದರು: 'ನಾವು ಅಲ್ಲಾಹನ** *ಮಾರ್ಗದಲ್ಲಿ* **ನೆರವಾಗುತ್ತೇವೆ. ನಾವು ಅಲ್ಲಾಹನಲ್ಲಿ ನಂಬಿಕೆಯಿಟ್ಟಿದ್ದೇವೆ. ನಾವು ಸಂಪೂರ್ಣ ವಿಧೇಯರೆಂಬುದಕ್ಕೆ ತಾವು ಸಾಕ್ಷ್ಯನೀಡಿರಿ.**

فَلَمَّا أَحَسَّ عِيسَىٰ مِنْهُمُ الْكُفْرَ قَالَ مَنْ أَنصَارِي إِلَى اللَّهِ ۖ قَالَ الْحَوَارِيُّونَ نَحْنُ أَنصَارُ اللَّهِ آمَنَّا بِاللَّهِ وَاشْهَدْ بِأَنَّا مُسْلِمُونَ ﴿٥٣﴾

**54. 'ನಮ್ಮ ಪ್ರಭೂ, ನೀನು ಅವತೀರ್ಣಗೊಳಿಸಿರುವುದನ್ನು ನಾವು ನಂಬಿದ್ದೇವೆ ಮತ್ತು ನಾವು ಈ ಪ್ರವಾದಿಯನ್ನು ಅನುಸರಿಸುತ್ತಿದ್ದೇವೆ. ಆದುದರಿಂದ ಸಾಕ್ಷ್ಯನೀಡುವವರೊಂದಿಗೆ ನಮ್ಮ ಹೆಸರನ್ನೂ ನೀನು ದಾಖಲಿಸು.'**

رَبَّنَا آمَنَّا بِمَا أَنزَلْتَ وَاتَّبَعْنَا الرَّسُولَ فَاكْتُبْنَا مَعَ الشَّاهِدِينَ ﴿٥٤﴾

102. ಮನುಷ್ಯನಿಗೆ ದೇವ ಸಾಮಿಪ್ಯ ಲಭಿಸುವರೆ ಸಹಾಯಕವಾದ ಸತ್ಕರ್ಮಗಳ ಕುರಿತು ನಾನು ನಿಮಗೆ ಹೇಳಿಕೊಡುವೆನು ಎಂದು ತಾತ್ಪರ್ಯ.

103. ಇದರ ತಾತ್ಪರ್ಯ ಪ್ರವಾದಿ ಮೂಸಾ (ಅಲೈಹಿಸ್ಸಲಾಮ್)ರ ಧರ್ಮಶಾಸ್ತ್ರದಲ್ಲಿ ಏನಾದರೂ ಹೆಚ್ಚು ಕಮ್ಮಿ ಅಥವಾ ಬದಲಾವಣೆ ಮಾಡುವುದೆಂದಲ್ಲ. ಬದಲಾಗಿ, ಯಹೂದ್ಯರು ತಮಗೆ ಸ್ವಯಂ ತಪ್ಪಾಗಿ ನಿಷಿದ್ಧಗೊಳಿಸಿದುದನ್ನು ರದ್ದುಪಡಿಸುವುದು ಎಂದಾಗಿದೆ.





**55. ಅವರು** (ಪ್ರವಾದಿ ಈಸಾರ ವೈರಿಗಳು) **ಕೆಲವು ಗೂಢತಂತ್ರಗಳನ್ನು ಹೂಡಿದರು.** (ಪ್ರತಿಯಾಗಿ) **ಅಲ್ಲಾಹನೂ ತಂತ್ರ ಪ್ರಯೋಗಿಸಿದನು. ತಂತ್ರಗಾರರಲ್ಲಿ ಅಲ್ಲಾಹನು ಅತ್ಯುತ್ತಮನು.**

وَمَكَرُوا وَمَكَرَ اللَّهُ ۖ وَاللَّهُ خَيْرُ الْمَاكِرِينَ ﴿٥٥﴾

**56. ಅಲ್ಲಾಹನು ಹೇಳಿದ ಸಂದರ್ಭ** (ಸ್ಮರಿಸಿರಿ)- **'ಎಲೈ ಈಸಾ, ನಾನು ನಿನ್ನನ್ನು** (ಪ್ರಕೃತಿ ಸಹಜವಾದ ರೀತಿಯಲ್ಲಿ) **ಮೃತಪಡಿಸುವೆನು**[103A] **ಮತ್ತು ನನ್ನೆಡೆಗೆ ಎತ್ತುವೆನು;**[104] **ಅವಿಶ್ವಾಸಿಗಳ ಆರೋಪಗಳಿಂದ ನಿನ್ನನ್ನು ಪರಿಶುದ್ಧಗೊಳಿಸುವೆನು ಮತ್ತು ನಿನ್ನನ್ನು ಅನುಸರಿಸಿದವರಿಗೆ ಪುನರುತ್ಥಾನ ದಿನದ ವರೆಗೆ,** (ನಿನ್ನನ್ನು) **ನಿರಾಕರಿಸಿದವರಿಗಿಂತ ಉನ್ನತ ಸ್ಥಾನವನ್ನು ನೀಡುವೆನು.**[104A] **ನಂತರ ನಿಮ್ಮ ಮರಳಿಕೆ ನನ್ನೆಡೆಗೆಯೇ. ಆಗ ನಿಮಗೆ ಭಿನ್ನಾಭಿಪ್ರಾಯವಿರುವ ಸಂಗತಿಗಳ ಕುರಿತು ನಾನು ನಿಮ್ಮ ಮಧ್ಯೆ ತೀರ್ಪು ನೀಡುವೆನು.'**

إِذْ قَالَ اللَّهُ يَا عِيسَىٰ إِنِّي مُتَوَفِّيكَ وَرَافِعُكَ إِلَيَّ وَمُطَهِّرُكَ مِنَ الَّذِينَ كَفَرُوا وَجَاعِلُ الَّذِينَ اتَّبَعُوكَ فَوْقَ الَّذِينَ كَفَرُوا إِلَىٰ يَوْمِ الْقِيَامَةِ ۖ ثُمَّ إِلَيَّ مَرْجِعُكُمْ فَأَحْكُمُ بَيْنَكُمْ فِيمَا كُنتُمْ فِيهِ تَخْتَلِفُونَ ﴿٥٦﴾

**57. ಅವಿಶ್ವಾಸಿಗಳನ್ನು ಇಹಲೋಕದಲ್ಲೂ ಪರಲೋಕದಲ್ಲೂ ನಾನು ಕಠಿಣವಾಗಿ ಶಿಕ್ಷಿಸುವೆನು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.**

فَأَمَّا الَّذِينَ كَفَرُوا فَأُعَذِّبُهُمْ عَذَابًا شَدِيدًا فِي الدُّنْيَا وَالْآخِرَةِ وَمَا لَهُم مِّن نَّاصِرِينَ ﴿٥٧﴾

103A. تَوَفِّيْ ಎಂಬ ಪದ, ಅಲ್ಲಾಹನು "ಕರ್ತೃ" ಮತ್ತು ಮನುಷ್ಯನು "ಕರ್ಮ" ಆಗಿ ಅದರ ನಿಜವಾದ (ಹಕೀಕೀ) ಅರ್ಥದಲ್ಲಿ ಪ್ರಯೋಗಿಸಿದಲ್ಲೆಲ್ಲ ಅದಕ್ಕೆ ಮೃತಪಡಿಸುವುದು ಎಂದೇ ಅರ್ಥವಾಗಿದೆ. ಖುರ್‌ಆನಿನಲ್ಲಿ ಹಲವೆಡೆ ಇಂತಹ ಪ್ರಯೋಗವಿದೆ. ಉದಾಹರಣೆಗೆ : 2:235, 2:241, 3:194, 7:127, 10:47, 10:105, 12:102, 13:41, 16:71, 40:68, 40:78.

104. "ರಾಫಿಉಕ ಇಲಯ್ಯ" ನನ್ನೆಡೆಗೆ ಎತ್ತಿಕೊಳ್ಳುವೆನು. "ರಫಅ" ಎಂಬ ಪದ, ಅಲ್ಲಾಹನು "ಕರ್ತೃ" ಮತ್ತು ಮನುಷ್ಯನು "ಕರ್ಮ" ಆಗಿ ಪ್ರಯೋಗಿಸಲ್ಪಡುವಾಗ, ಅದರ ಅರ್ಥ ಆಧ್ಯಾತ್ಮಿಕವಾಗಿ ಉನ್ನತ ಸ್ಥಾನ ನೀಡುವುದು, ಉನ್ನತ ಪದವಿ ಕೊಡುವುದು, ಗೌರವ ನೀಡುವುದು ಇತ್ಯಾದಿಯಾಗಿದೆ. ಉದಾಹರಣೆಗೆ ಪವಿತ್ರ ಖುರ್‌ಆನಿನ 19:58, 7:177 ಎಂಬ ವಾಕ್ಯಗಳನ್ನು ನೋಡಿರಿ. ಇಲ್ಲಿ 'ರಾಫಿಉಕ' ಎಂದು ಹೇಳಿದ ನಂತರ 'ಇಲಯ್ಯ' (ನನ್ನೆಡೆಗೆ) ಎಂದು ಹೇಳಿರುವುದರಿಂದ ಇದು ಇನ್ನೂ ಸ್ಪಷ್ಟವಾಗಿದೆ. ಶಾರೀರಿಕವಾದ ಎತ್ತುವಿಕೆಯನ್ನು ಇಲ್ಲಿ ಉದ್ದೇಶಿಸಲಾಗಿಲ್ಲ.

104A. ಈ ವಚನದಲ್ಲಿ ಪ್ರವಾದಿ ಈಸಾ (ಅಲೈಹಿಸ್ಸಲಾಂ)ರಿಗೆ ಅಲ್ಲಾಹನು ನಾಲ್ಕು ವಾಗ್ದಾನಗಳನ್ನು ನೀಡಿದ್ದಾನೆ. ಶತ್ರುಗಳಾದ ಯಹೂದ್ಯರು ಅವರನ್ನು ಶಿಲುಬೆಗೇರಿಸಿ ಕೊಂದು ಶಾಪಗ್ರಸ್ತನೆಂದು ಮತ್ತು ದೇವಸಾಮೀಪ್ಯದಿಂದ ಅಗಲಿರುವವನೆಂದು ಸಾಬೀತು ಪಡಿಸಲು ಯತ್ನಿಸುತ್ತಿದ್ದರು. ಅಲ್ಲಾಹನು ಹೇಳಿದನು: 1. "ನಾನು ನಿನ್ನನ್ನು ಪ್ರಕೃತಿ ಸಹಜವಾದ ರೀತಿಯಲ್ಲಿ ಮೃತಪಡಿಸುವೆನು." ಅಂದರೆ ವೈರಿಗಳ ಕೈಯಲ್ಲಿ ಸಾಯುವುದರಿಂದ ರಕ್ಷಿಸುವೆನು, 2. "ನಿನ್ನನ್ನು ನಾನು ಎತ್ತುವೆನು." ಅಂದರೆ, ನಿನ್ನನ್ನು ಪಾತಾಳಕ್ಕೆ ತಳ್ಳಿ ಬಿಡಲು ಅವರು ಬಯಸುತ್ತಾರೆ. ಆದರೆ ನಿನ್ನನ್ನು ನಾನು ಎತ್ತುವೆನು. ನೀನು ಶಾಪಗ್ರಸ್ತ ಮೃತ್ಯುವಿಗೆ ಈಡಾಗಲಾರೆ; ನಿನಗೆ ದೇವಸಾಮೀಪ್ಯದಲ್ಲಿ ಶ್ರೇಷ್ಠಸ್ಥಾನ ದೊರಕುವುದು. 3. "ಅವಿಶ್ವಾಸಿಗಳಿಂದ ನಿನ್ನನ್ನು ಪರಿಶುದ್ಧಗೊಳಿಸುವೆನು." ಅಂದರೆ ಅವರ ಆರೋಪಣೆಗಳಿಂದ ನಿನ್ನನ್ನು ಮುಕ್ತಗೊಳಿಸುವೆನು. [ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರನ್ನು ನಿಯೋಜಿಸಿ ಆ ವಿಚಾರವನ್ನು ಹೆಚ್ಚು ಸ್ಪಷ್ಟ ಪಡಿಸಲಾಯಿತು.] 4. "ನಿನ್ನನ್ನು ಅನುಸರಿಸಿದವರಿಗೆ ನಿನ್ನನ್ನು ನಿರಾಕರಿಸಿದವರಿಗಿಂತ, ಲೋಕಾವಸಾನದ ವರೆಗೆ ಉನ್ನತ ಸ್ಥಾನವನ್ನು ನೀಡುವೆನು." ಒಟ್ಟಾರೆ, ಈ ನಾಲ್ಕು ವಾಗ್ದಾನಗಳೂ ಈಡೇರಿವೆ.

**58.** ಸತ್ಯವಿಶ್ವಾಸವನ್ನು ಕೈಗೊಂಡು ಸತ್ಕರ್ಮಗಳನ್ನು ಮಾಡುವವರಿಗೆ ಅವನು (ಅಲ್ಲಾಹನು) ಅವರಿಗಿರುವ ಪ್ರತಿಫಲಗಳನ್ನು ಪೂರ್ಣವಾಗಿ ನೀಡುವನು. ಅಲ್ಲಾಹನು ದುಷ್ಕರ್ಮಿಗಳನ್ನು ಇಷ್ಟಪಡುವುದಿಲ್ಲ.

وَاَمَّا الَّذِيْنَ اٰمَنُوْا وَعَمِلُوا الصّٰلِحٰتِ فَيُوَفِّيْهِمْ اُجُوْرَهُمْ ؕ وَاللّٰهُ لَا يُحِبُّ الظّٰلِمِيْنَ ﴿٥٨﴾

**59.** ನಾವು ನಿನಗೆ ಓದಿಹೇಳುವ ಇದು ಅಲ್ಲಾಹನ ದೃಷ್ಟಾಂತಗಳು ಮತ್ತು ಜ್ಞಾನಪೂರ್ಣ ಬೋಧನೆಯಿಂದ ಕೂಡಿದೆ.

ذٰلِكَ نَتْلُوْهُ عَلَيْكَ مِنَ الْاٰيٰتِ وَالذِّكْرِ الْحَكِيْمِ ﴿٥٩﴾

**60.** ನಿಶ್ಚಯವಾಗಿಯೂ ಅಲ್ಲಾಹನ ಬಳಿ ಈಸಾರ ಸ್ಥಿತಿ ಆದಮರ ಸ್ಥಿತಿಯಂತೆಯೇ ಆಗಿದೆ, ಅವರನ್ನು ಅವನು ಮಣ್ಣಿನಿಂದ ಸೃಷ್ಟಿಸಿದನು.[105] ನಂತರ ಅವರೊಡನೆ 'ಆಗು' ಎಂದು ಹೇಳಿದನು. ಆಗ ಅವರು ಆದರು.[105A]

اِنَّ مَثَلَ عِيْسٰى عِنْدَ اللّٰهِ كَمَثَلِ اٰدَمَ ؕ خَلَقَهٗ مِنْ تُرَابٍ ثُمَّ قَالَ لَهٗ كُنْ فَيَكُوْنُ ﴿٦٠﴾

**61.** ಇದು ನಿನ್ನ ಒಡೆಯನ ಕಡೆಯಿಂದಿರುವ ಸತ್ಯವಾಗಿದೆ. ಆದುದರಿಂದ ನೀನು ಸಂಶಯ ಪಡುವವರಲ್ಲಿ ಸೇರಿದವನಾಗಬಾರದು.

اَلْحَقُّ مِنْ رَّبِّكَ فَلَا تَكُنْ مِّنَ الْمُمْتَرِيْنَ ﴿٦١﴾

**62.** ನಿನಗೆ (ದೈವಿಕ) ಜ್ಞಾನ ಲಭಿಸಿದ ನಂತರ ತತ್ಸಂಬಂಧವಾಗಿ ಯಾರಾದರೂ ನಿನ್ನೊಡನೆ ವಿವಾದ ಮಾಡಿದರೆ, (ಅವರೊಡನೆ) ಹೇಳು: 'ಬನ್ನಿರಿ, ನಮ್ಮ ಸಂತಾನಗಳನ್ನೂ ನಿಮ್ಮ ಸಂತಾನಗಳನ್ನೂ ನಮ್ಮ ಸ್ತ್ರೀಯರನ್ನೂ ನಿಮ್ಮ ಸ್ತ್ರೀಯರನ್ನೂ ನಮ್ಮ ಜನರನ್ನೂ ನಿಮ್ಮ ಜನರನ್ನೂ ಕರೆಯೋಣ. ಅನಂತರ, ವಿನಮ್ರವಾಗಿ ಪ್ರಾರ್ಥಿಸೋಣ ಮತ್ತು ಸುಳ್ಳು ಹೇಳುವವರ ಮೇಲೆ ಅಲ್ಲಾಹನ ಶಾಪವನ್ನು ಬೇಡೋಣ.[106]

فَمَنْ حَآجَّكَ فِيْهِ مِنْۢ بَعْدِ مَا جَآءَكَ مِنَ الْعِلْمِ فَقُلْ تَعَالَوْا نَدْعُ اَبْنَآءَنَا وَاَبْنَآءَكُمْ وَنِسَآءَنَا وَنِسَآءَكُمْ وَاَنْفُسَنَا وَاَنْفُسَكُمْ ۚ ثُمَّ نَبْتَهِلْ فَنَجْعَلْ لَّعْنَتَ اللّٰهِ عَلَى الْكٰذِبِيْنَ ﴿٦٢﴾

105. ಇತರ ಮನುಷ್ಯರಂತೆ ಹಝ್ರತ್ ಈಸಾ (ಅಲೈಹಿಸ್ಸಲಾಂ)ರನ್ನೂ ಮಣ್ಣಿನಿಂದ ಸೃಷ್ಟಿಸಲಾಗಿದೆ. ಅವರಿಗೆ ಅಮಾನುಷವಾದ ವೈಶಿಷ್ಟವೇನೂ ಇರಲಿಲ್ಲ.

105A. ಇಲ್ಲಿ ಪ್ರವಾದಿತ್ವದ ಬಗ್ಗೆ ಸೂಚಿಸಲಾಗಿದೆ.

106. ಇಂತಹ ಪ್ರಾರ್ಥನೆಯನ್ನು "ಮುಬಾಹಲ" ಎಂದು ಹೇಳಲಾಗುತ್ತದೆ. ಉಭಯ ಪಕ್ಷದವರೂ ಪ್ರಾರ್ಥನೆ ಮಾಡಬೇಕಾಗಿದೆಯೆಂದು ಇದರಿಂದ ತಿಳಿದುಬರುತ್ತದೆ. ಇದಕ್ಕನುಗುಣವಾಗಿ, ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ನಜ್‌ರಾನದಿಂದ ಬಂದ ಕ್ರೈಸ್ತ ಸಂಘವನ್ನು "ಮುಬಾಹಲ"ಕ್ಕೆ ಆಹ್ವಾನಿಸಿದಾಗ ಅವರು ಅದಕ್ಕೆ ಒಡಂಬಡದೆ ಹಿಮ್ಮೆಟ್ಟಿದ್ದರು.





**63.** ಖಂಡಿತವಾಗಿಯೂ ಇದೇ ವಾಸ್ತವಿಕ ವಿವರಣೆಯಾಗಿದೆ. ಅಲ್ಲಾಹನ ಹೊರತು ಆರಾಧನೆಗರ್ಹನು ಯಾರೂ ಇಲ್ಲ. ನಿಶ್ಚಯವಾಗಿಯೂ ಪ್ರತಾಪವಂತನೂ ಅಗಾಧ ಜ್ಞಾನಿಯೂ ಅಲ್ಲಾಹನೇ ಆಗಿದ್ದಾನೆ.

اِنَّ هٰذَا لَهُوَ الْقَصَصُ الْحَقُّ ۚ وَمَا مِنْ اِلٰهٍ اِلَّا اللّٰهُ ؕ وَاِنَّ اللّٰهَ لَهُوَ الْعَزِيْزُ الْحَكِيْمُ ﴿٦٣﴾

**64.** ಇನ್ನು ಅವರು ವಿಮುಖರಾದರೆ, (ನೆನಪಿರಲಿ) ಖಂಡಿತವಾಗಿಯೂ ಅಲ್ಲಾಹನು ಕಲಹಗಾರರ ಕುರಿತು ಚೆನ್ನಾಗಿ ಬಲ್ಲವನಾಗಿದ್ದಾನೆ.

فَاِنْ تَوَلَّوْا فَاِنَّ اللّٰهَ عَلِيْمٌۢ بِالْمُفْسِدِيْنَ ﴿٦٤﴾

**65.** ಹೇಳು: 'ಎಲೈ ಗ್ರಂಥದವರೇ, (ಕನಿಷ್ಟ ಪಕ್ಷ) ನಮಗೂ ನಿಮಗೂ ಮಧ್ಯೆ ಒಪ್ಪಿಗೆಯಿರುವ ವಿಚಾರದೆಡೆಗೆ- (ಅಂದರೆ) ಅಲ್ಲಾಹನಲ್ಲದೆ ಯಾರನ್ನೂ ನಾವು ಆರಾಧಿಸುವುದಿಲ್ಲ, ಅವನಿಗೆ ಯಾರನ್ನೂ ಸಹಭಾಗಿಯಾಗಿ ಭಾವಿಸಲಿಕ್ಕಿಲ್ಲ, ಅಲ್ಲಾಹನನ್ನು ಹೊರತು ನಮ್ಮಲ್ಲಿ ಕೆಲವರು ಬೇರೆ ಕೆಲವರನ್ನು ಒಡೆಯರನ್ನಾಗಿ ಪರಿಗಣಿಸಲಿಕ್ಕಿಲ್ಲ ಎಂಬ ವಿಚಾರದೆಡೆಗೆ- ಬನ್ನಿರಿ.' ಅವರು ವಿಮುಖರಾದರೆ 'ನಾವು (ಅಲ್ಲಾಹನಿಗೆ) ಸಂಪೂರ್ಣವಾಗಿ ವಿಧೇಯರಾಗಿದ್ದೇವೆ ಎಂಬುದಕ್ಕೆ ನೀವು ಸಾಕ್ಷ್ಯವಹಿಸಿರಿ' ಎಂದು ಹೇಳಿರಿ.

قُلْ يٰۤاَهْلَ الْكِتٰبِ تَعَالَوْا اِلٰى كَلِمَةٍ سَوَآءٍۢ بَيْنَنَا وَبَيْنَكُمْ اَلَّا نَعْبُدَ اِلَّا اللّٰهَ وَلَا نُشْرِكَ بِهٖ شَيْـًٔا وَّلَا يَتَّخِذَ بَعْضُنَا بَعْضًا اَرْبَابًا مِّنْ دُوْنِ اللّٰهِ ؕ فَاِنْ تَوَلَّوْا فَقُوْلُوا اشْهَدُوْا بِاَنَّا مُسْلِمُوْنَ ﴿٦٥﴾

**66.** ಎಲೈ ಗ್ರಂಥದವರೇ, ಇಬ್‌ರಾಹೀಮರ ಕುರಿತು ನೀವು ಯಾಕೆ ವಿವಾದ ಮಾಡುವಿರಿ? ತೌರಾತ್ ಮತ್ತು ಇಂಜೀಲ್ ಅವತೀರ್ಣಗೊಂಡದ್ದು ಅವರ ನಂತರವಲ್ಲವೇ? ಆದರೂ ನೀವು ಯೋಚಿಸಿ ವಿಷಯವನ್ನು ಮನವರಿಕೆ ಮಾಡುವುದಿಲ್ಲವೇ?

يٰۤاَهْلَ الْكِتٰبِ لِمَ تُحَآجُّوْنَ فِىْۤ اِبْرٰهِيْمَ وَمَاۤ اُنْزِلَتِ التَّوْرٰىةُ وَالْاِنْجِيْلُ اِلَّا مِنْۢ بَعْدِهٖ ؕ اَفَلَا تَعْقِلُوْنَ ﴿٦٦﴾

**67.** ನೋಡಿರಿ, ನಿಮಗೆ ತಿಳುವಳಿಕೆಯಿದ್ದ ವಿಷಯದ ಬಗ್ಗೆ ನೀವು ವಾಗ್ವಾದ ಮಾಡಿದಿರಿ. ಆದರೆ (ಈಗ) ನಿಮಗೆ ಏನೂ ತಿಳುವಳಿಕೆಯಲ್ಲದ ವಿಚಾರದ ಬಗ್ಗೆ ನೀವ್ಯಾಕೆ ವಿವಾದ ಮಾಡುತ್ತೀರಿ? ಅಲ್ಲಾಹನು ಅರಿಯುತ್ತಾನೆ; ನೀವು ಅರಿಯುವುದಿಲ್ಲ.

هٰۤاَنْتُمْ هٰۤؤُلَآءِ حَاجَجْتُمْ فِيْمَا لَكُمْ بِهٖ عِلْمٌ فَلِمَ تُحَآجُّوْنَ فِيْمَا لَيْسَ لَكُمْ بِهٖ عِلْمٌ ؕ وَاللّٰهُ يَعْلَمُ وَاَنْتُمْ لَا تَعْلَمُوْنَ ﴿٦٧﴾

**68.** ಇಬ್‌ರಾಹೀಂ ಯಹೂದಿ ಅಥವಾ ಕ್ರಿಸ್ತೀಯ ಆಗಿರಲಿಲ್ಲ. ಅವರು ಸದಾ (ದೇವನೆಡೆಗೆ) ಬಾಗುವವರೂ ಸಂಪೂರ್ಣ ವಿಧೇಯರೂ ಆಗಿದ್ದರು. ಅವರು ಬಹು ದೇವಾರಾಧಕರೂ ಆಗಿರಲಿಲ್ಲ.

مَا كَانَ إِبْرَاهِيمُ يَهُودِيًّا وَلَا نَصْرَانِيًّا وَلَٰكِن كَانَ حَنِيفًا مُّسْلِمًا وَمَا كَانَ مِنَ الْمُشْرِكِينَ ﴿٦٨﴾

**69.** ನಿಶ್ಚಯವಾಗಿಯೂ, ಮನುಷ್ಯರಲ್ಲಿ, ಇಬ್‌ರಾಹೀಮರಿಗೆ ಅತ್ಯಂತ ನಿಕಟವಾಗಿರುವವರು ಅವರ ಅನುಯಾಯಿಗಳೂ ಈ ಪ್ರವಾದಿಯೂ (ಈ ಪ್ರವಾದಿಯನ್ನು) ನಂಬುವವರೂ ಆಗಿದ್ದಾರೆ. ಅಲ್ಲಾಹನು ಸತ್ಯವಿಶ್ವಾಸಿಗಳ ಮಿತ್ರನಾಗಿದ್ದಾನೆ.

إِنَّ أَوْلَى النَّاسِ بِإِبْرَاهِيمَ لَلَّذِينَ اتَّبَعُوهُ وَهَٰذَا النَّبِيُّ وَالَّذِينَ آمَنُوا ۗ وَاللَّهُ وَلِيُّ الْمُؤْمِنِينَ ﴿٦٩﴾

**70.** ಗ್ರಂಥದವರಲ್ಲಿ ಒಂದು ಪಂಗಡದ ಜನರು ನಿಮ್ಮನ್ನು ದಾರಿತಪ್ಪಿಸಲು ಬಯಸುತ್ತಾರೆ. ವಾಸ್ತವದಲ್ಲಿ ಅವರು ತಮ್ಮನ್ನೇ ಹೊರತು (ಬೇರೆ ಯಾರನ್ನೂ) ದಾರಿ ತಪ್ಪಿಸುವುದಿಲ್ಲ. ಆದರೆ ಅವರು ಅದನ್ನು ಗ್ರಹಿಸುವುದಿಲ್ಲ.

وَدَّت طَّائِفَةٌ مِّنْ أَهْلِ الْكِتَابِ لَوْ يُضِلُّونَكُمْ وَمَا يُضِلُّونَ إِلَّا أَنفُسَهُمْ وَمَا يَشْعُرُونَ ﴿٧٠﴾

**71.** ಎಲೈ ಗ್ರಂಥದವರೇ, ನೀವು ಸಾಕ್ಷಿಗಳಾಗಿದ್ದು ಸಹ ಅಲ್ಲಾಹನ ದೃಷ್ಟಾಂತಗಳನ್ನು ಯಾಕೆ ಅಲ್ಲಗಳೆಯುತ್ತೀರಿ?

يَا أَهْلَ الْكِتَابِ لِمَ تَكْفُرُونَ بِآيَاتِ اللَّهِ وَأَنتُمْ تَشْهَدُونَ ﴿٧١﴾

**72.** ಎಲೈ ಗ್ರಂಥದವರೇ, ನೀವು ತಿಳಿದು ಕೊಂಡೇ ಯಾಕೆ ಸತ್ಯವನ್ನು ಅಸತ್ಯದೊಂದಿಗೆ ಕಲಬೆರಕೆ ಮಾಡುತ್ತೀರಿ ಮತ್ತು ಸತ್ಯವನ್ನು ಮುಚ್ಚುಮರೆಮಾಡುತ್ತೀರಿ?

يَا أَهْلَ الْكِتَابِ لِمَ تَلْبِسُونَ الْحَقَّ بِالْبَاطِلِ وَتَكْتُمُونَ الْحَقَّ وَأَنتُمْ تَعْلَمُونَ ﴿٧٢﴾

**73.** ಗ್ರಂಥದವರಲ್ಲಿ ಒಂದು ಪಂಗಡದ ಜನರು ಹೇಳುತ್ತಾರೆ: 'ವಿಶ್ವಾಸಿಗಳಿಗೆ (ಮುಸ್ಲಿಮರಿಗೆ) ಅವತೀರ್ಣಗೊಂಡುದರಲ್ಲಿ ಹಗಲಿನ ಆರಂಭದಲ್ಲಿ ನೀವು ನಂಬಿಕೊಂಡು, ಅದರ ಕೊನೆಯಲ್ಲಿ ನಿರಾಕರಿಸಿರಿ. (ಹೀಗೆ ಮಾಡಿದರೆ) ಪ್ರಾಯಶಃ ಅವರು ಮರಳಿ ಬರುವರು.'

وَقَالَت طَّائِفَةٌ مِّنْ أَهْلِ الْكِتَابِ آمِنُوا بِالَّذِي أُنزِلَ عَلَى الَّذِينَ آمَنُوا وَجْهَ النَّهَارِ وَاكْفُرُوا آخِرَهُ لَعَلَّهُمْ يَرْجِعُونَ ﴿٧٣﴾

**74.** (ಅವರು ಪರಸ್ಪರ ಹೀಗೆ ಹೇಳುತ್ತಾರೆ:) 'ನಿಮ್ಮ ಧರ್ಮಾನುಯಾಯಿಯ ಹೊರತು ಬೇರೆ ಯಾರನ್ನೂ

وَلَا تُؤْمِنُوا إِلَّا لِمَن تَبِعَ دِينَكُمْ





ನೀವು ನಂಬಬೇಡಿರಿ.' (ಪ್ರವಾದಿಯೇ) ನೀನು ಹೇಳು: 'ಖಂಡಿತವಾಗಿಯೂ ನಿಜವಾದ ಮಾರ್ಗದರ್ಶನ - ಅಲ್ಲಾಹನ ಮಾರ್ಗದರ್ಶನ- (ಏನೆಂದರೆ) ನಿಮಗೆ ನೀಡಲಾದಂತೆಯೇ ಅದು ಬೇರೆಯವರಿಗೂ ನೀಡಲ್ಪಡುತ್ತದೆ ಎಂಬುದಾಗಿದೆ.' ಹಾಗಲ್ಲವಾದರೆ ಅವರು ನಿಮ್ಮ ಪ್ರಭುವಿನ ಮುಂದೆ ವಿವಾದ ಮಾಡಲಿ. ಹೇಳು: 'ಖಂಡಿತವಾಗಿಯೂ ಎಲ್ಲ ಅನುಗ್ರಹಗಳು ಅಲ್ಲಾಹನ ಕೈಯಲ್ಲಿವೆ. ತಾನಿಚ್ಛಿಸುವವರಿಗೆ ಅದನ್ನು ಅವನು ನೀಡುತ್ತಾನೆ. ಅಲ್ಲಾಹನು ಅತ್ಯಂತ ಉದಾರಿಯೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

قُلْ إِنَّ الْهُدَىٰ هُدَى اللَّهِ أَن يُؤْتَىٰ أَحَدٌ مِّثْلَ مَا أُوتِيتُمْ أَوْ يُحَاجُّوكُمْ عِندَ رَبِّكُمْ ۗ قُلْ إِنَّ الْفَضْلَ بِيَدِ اللَّهِ يُؤْتِيهِ مَن يَشَاءُ ۗ وَاللَّهُ وَاسِعٌ عَلِيمٌ ﴿٧٤﴾

**75.** 'ತನ್ನ ಕಾರುಣ್ಯವನ್ನು ತಾನಿಚ್ಛಿಸುವವರಿಗೆ ಅವನು ವಿಶೇಷವಾಗಿ ನೀಡುತ್ತಾನೆ. ಅಲ್ಲಾಹನು ಮಹತ್ತಾದ ಅನುಗ್ರಹದ ಒಡೆಯನಾಗಿದ್ದಾನೆ.'

يَخْتَصُّ بِرَحْمَتِهِ مَن يَشَاءُ ۗ وَاللَّهُ ذُو الْفَضْلِ الْعَظِيمِ ﴿٧٥﴾

**76.** ಧನದ ರಾಶಿಯೊಂದನ್ನೇ ನೀನು ನಂಬಿಕೆಯಿಂದ ಒಪ್ಪಿಸಿದರೆ ನಿನಗೆ ಅದನ್ನು (ಹಾಗೆಯೇ) ಹಿಂತಿರುಗಿಸುವ ಕೆಲವರು ಗ್ರಂಥದವರ ಪೈಕಿಯಲ್ಲಿದ್ದಾರೆ. (ಅಂತೆಯೇ) ಒಂದು ದೀನಾರನ್ನು ನೀನು ನಂಬಿಕೆಯಿಂದ ಒಪ್ಪಿಸಿದರೆ, ನೀನು ಅದನ್ನು ಪದೇ ಪದೇ ಕೇಳದಿದ್ದರೆ ಅದನ್ನು ಹಿಂತಿರುಗಿಸದ ಕೆಲವರೂ ಅವರ ಪೈಕಿಯಲ್ಲಿದ್ದಾರೆ. ಇದು, 'ಈ ಅನಕ್ಷರಸ್ಥರ ವಿಷಯದಲ್ಲಿ ನಮ್ಮ ಮೇಲೆ (ಆಕ್ಷೇಪ ಉಂಟಾಗಲು) ಯಾವುದೇ ದಾರಿಯಿಲ್ಲ' ಎಂದು ಅವರು ಹೇಳುವ ಕಾರಣ ದಿಂದಾಗಿದೆ. ಅವರು ಅರಿತುಕೊಂಡೇ ಅಲ್ಲಾಹನ ಮೇಲೆ ಸುಳ್ಳು ಹೇಳುತ್ತಾರೆ.

وَمِنْ أَهْلِ الْكِتَابِ مَنْ إِن تَأْمَنْهُ بِقِنطَارٍ يُؤَدِّهِ إِلَيْكَ وَمِنْهُم مَّنْ إِن تَأْمَنْهُ بِدِينَارٍ لَّا يُؤَدِّهِ إِلَيْكَ إِلَّا مَا دُمْتَ عَلَيْهِ قَائِمًا ۗ ذَٰلِكَ بِأَنَّهُمْ قَالُوا لَيْسَ عَلَيْنَا فِي الْأُمِّيِّينَ سَبِيلٌ وَيَقُولُونَ عَلَى اللَّهِ الْكَذِبَ وَهُمْ يَعْلَمُونَ ﴿٧٦﴾

**77.** ಹಾಗಲ್ಲ,[107] ಯಾವೊಬ್ಬನು ತನ್ನ ಕರಾರನ್ನು ಪಾಲಿಸಿ ಅಲ್ಲಾಹನ ಭಯಭಕ್ತಿಯಿರಿಸಿಕೊಳ್ಳುತ್ತಾನೋ (ಆತನು ಸಾತ್ವಿಕನು); ದಿಟವಾಗಿಯೂ ಅಲ್ಲಾಹನು ಭಯಭಕ್ತಿಯುಳ್ಳವರನ್ನು ಪ್ರೀತಿಸುತ್ತಾನೆ.

بَلَىٰ مَنْ أَوْفَىٰ بِعَهْدِهِ وَاتَّقَىٰ فَإِنَّ اللَّهَ يُحِبُّ الْمُتَّقِينَ ﴿٧٧﴾

107. ಅನಕ್ಷರಸ್ಥರ (ಅರಬಿಯರ) ಜೊತೆಯಲ್ಲಿನ ವ್ಯವಹಾರದಲ್ಲಿ ಯಹೂದಿಯರ ಧೋರಣೆ ಸರಿಯಲ್ಲವೆಂದು ಇಲ್ಲಿ ತಾತ್ಪರ್ಯ.

**78.** ಅಲ್ಲಾಹನ ಜೊತೆ ಮಾಡಿಕೊಂಡ ಕರಾರು ಮತ್ತು ಶಪಥಗಳಿಗೆ ಬದಲಾಗಿ ಯಾರು ತುಚ್ಛವಾದ ಬೆಲೆ[108] ಪಡೆಯುತ್ತಾರೋ ಅವರಿಗೆ ಪರಲೋಕ ಜೀವನದಲ್ಲಿ ಏನೂ ಪ್ರಾಪ್ತವಾಗದು. ಪುನರುತ್ಥಾನ ದಿನದಂದು ಅಲ್ಲಾಹನು ಅವರೊಡನೆ ಮಾತನಾಡಲಿಕ್ಕೂ ಇಲ್ಲ; ಅವರನ್ನು ನೋಡಲಿಕ್ಕೂ ಇಲ್ಲ. ಅವನು ಅವರನ್ನು ಶುದ್ಧೀಕರಿಸಲಿಕ್ಕೂ ಇಲ್ಲ. ಅವರಿಗೆ ಕಠಿಣವಾದ ಶಿಕ್ಷೆ ಇದೆ.

إِنَّ الَّذِينَ يَشْتَرُونَ بِعَهْدِ اللَّهِ وَ
أَيْمَانِهِمْ ثَمَنًا قَلِيلًا أُولَٰئِكَ لَا
خَلَاقَ لَهُمْ فِي الْآخِرَةِ وَلَا يُكَلِّمُهُمُ
اللَّهُ وَلَا يَنظُرُ إِلَيْهِمْ يَوْمَ الْقِيَامَةِ
وَلَا يُزَكِّيهِمْ وَلَهُمْ عَذَابٌ أَلِيمٌ ﴿٧٨﴾

**79.** ನಿಜವಾಗಿಯೂ ಅವರ ಪೈಕಿ ಒಂದು ಗುಂಪು ಜನರು ಗ್ರಂಥ (ಪಾರಾಯಣ)ದಲ್ಲಿ ತಮ್ಮ ನಾಲಗೆಗಳನ್ನು ತಿರುಚುತ್ತಾರೆ.[109] ಅದು ಗ್ರಂಥದ ಒಂದು ಭಾಗವೆಂದು ನೀವು ಭಾವಿಸಲಿಕ್ಕಾಗಿ (ಅವರು ಹಾಗೆ ಮಾಡುತ್ತಾರೆ). ವಾಸ್ತವದಲ್ಲಿ ಅದು ಗ್ರಂಥದ ಭಾಗವಲ್ಲ. 'ಇದು ಅಲ್ಲಾಹನ ಕಡೆಯಿಂದ' ಎಂದು ಅವರು ಹೇಳುತ್ತಾರೆ. ಆದರೆ ಅದು ಅಲ್ಲಾಹನ ಕಡೆಯಿಂದ ಇರುವಂಥದ್ದಲ್ಲ. ಅವರು ತಿಳಿದುಕೊಂಡೇ ಅಲ್ಲಾಹನ ಮೇಲೆ ಸುಳ್ಳು ಹೇಳುತ್ತಾರೆ.

وَإِنَّ مِنْهُمْ لَفَرِيقًا يَلْوُونَ أَلْسِنَتَهُم
بِالْكِتَابِ لِتَحْسَبُوهُ مِنَ الْكِتَابِ وَ
مَا هُوَ مِنَ الْكِتَابِ وَيَقُولُونَ هُوَ
مِنْ عِندِ اللَّهِ وَمَا هُوَ مِنْ عِندِ اللَّهِ
وَيَقُولُونَ عَلَى اللَّهِ الْكَذِبَ وَهُمْ
يَعْلَمُونَ ﴿٧٩﴾

**80.** ಅಲ್ಲಾಹನು ಒಬ್ಬ ಮನುಷ್ಯನಿಗೆ ಗ್ರಂಥವನ್ನೂ ಆದೇಶವನ್ನೂ ಪ್ರವಾದಿತ್ವವನ್ನೂ ನೀಡಿದ ಮೇಲೆ ಆತನು ಜನರೊಡನೆ- 'ನೀವು ಅಲ್ಲಾಹನನ್ನು ಬಿಟ್ಟು ನನ್ನ ದಾಸರಾಗಿರಿ' ಎಂದು ಹೇಳುವುದು ಸಂಭವನೀಯವಲ್ಲ. ಬದಲಾಗಿ, 'ನೀವು ಧರ್ಮ ಗ್ರಂಥವನ್ನು ಕಲಿಸುವವರೂ ಕಲಿಯುವವರೂ ಆಗಿರುವುದರಿಂದ ನೀವು ದೇವಭಕ್ತರಾಗಿರಿ' ಎಂದು ಆತನು ಹೇಳುವನು.

مَا كَانَ لِبَشَرٍ أَن يُؤْتِيَهُ اللَّهُ
الْكِتَابَ وَالْحُكْمَ وَالنُّبُوَّةَ ثُمَّ يَقُولَ
لِلنَّاسِ كُونُوا عِبَادًا لِّي مِن دُونِ اللَّهِ
وَلَٰكِن كُونُوا رَبَّانِيِّينَ بِمَا كُنتُمْ
تُعَلِّمُونَ الْكِتَابَ وَبِمَا كُنتُمْ
تَدْرُسُونَ ﴿٨٠﴾

**81.** 'ನೀವು ದೇವದೂತರನ್ನೂ ಪ್ರವಾದಿಗಳನ್ನೂ ದೇವರುಗಳನ್ನಾಗಿ ಅಂಗೀಕರಿಸಿರಿ' ಎಂದೂ ಆತನು ನಿಮಗೆ ಆದೇಶಿಸಲಾರ. ನೀವು ಪೂರ್ಣವಾಗಿ ಅಲ್ಲಾಹನಿಗೆ ವಿಧೇಯರಾದ ಬಳಿಕ, ಅವಿಶ್ವಾಸಿಗಳಾಗಲಿಕ್ಕೆ ಆತನು ನಿಮಗೆ ಉಪದೇಶಿಸುವನೋ?

وَلَا يَأْمُرَكُمْ أَن تَتَّخِذُوا الْمَلَائِكَةَ
وَالنَّبِيِّينَ أَرْبَابًا أَيَأْمُرُكُم بِالْكُفْرِ
بَعْدَ إِذْ أَنتُم مُّسْلِمُونَ ﴿٨١﴾

108. ಲೌಕಿಕ ಸಂಪತ್ತು ಆಧ್ಯಾತ್ಮಿಕ ಸಂಪತ್ತಿನ ಮುಂದೆ ತುಚ್ಛವಾಗಿದೆ ಎಂದು ಇಲ್ಲಿ ಸೂಚಿಸಲಾಗಿದೆ. ಹೊರತು, ಹೆಚ್ಚು ಬೆಲೆ ಪಡೆಯಬೇಕು ಎಂದು ಇದರ ತಾತ್ಪರ್ಯವಲ್ಲ.

109 ಶ್ರೋತೃಗಳಿಗೆ ತಪ್ಪು ಭಾವನೆ ಉಂಟಾಗಲಿಕ್ಕಾಗಿ, ಮನುಷ್ಯರ ಮಾತುಗಳನ್ನು ತೌರಾತಿನ ವಚನವೆಂಬಂತೆ ಅವರು ಪಠಿಸುತ್ತಾರೆ.





**82.** ಅಲ್ಲಾಹನು ಪ್ರವಾದಿಗಳಿಂದ ಒಪ್ಪಂದ ಪಡೆದ ಸಂದರ್ಭ (ಜ್ಞಾಪಿಸಿರಿ)- 'ನಾನು ನಿಮಗೆ ಯಾವುದೇ ಗ್ರಂಥವನ್ನೂ ಸುಜ್ಞಾನವನ್ನೂ ನೀಡಿದ ಬಳಿಕ ನಿಮ್ಮ ಬಳಿಯಿರುವುದನ್ನು (ಸಂದೇಶವನ್ನು) ದೃಢೀಕರಿಸುವ ಒಬ್ಬ ಪ್ರವಾದಿ ನಿಮ್ಮ ಹತ್ತಿರ ಬಂದರೆ ಕಡ್ಡಾಯವಾಗಿಯೂ ನೀವು ಆತನನ್ನು ನಂಬಿ ಆತನಿಗೆ ನೆರವೀಯಬೇಕು' (ಎಂದು ಹೇಳುತ್ತಾ) ಅವನು ಕೇಳಿದನು: 'ನಿಮಗೆ ಸಮ್ಮತಿಯೇ?; ನಾನು ನಿಮ್ಮ ಮೇಲೆ ಹೊರಿಸಿದ ಹೊಣೆಗಾರಿಕೆಯನ್ನು ನಿಭಾಯಿಸಲು ನೀವು ಒಪ್ಪಿಕೊಂಡಿದ್ದೀರಾ?' ಅವರು ಉತ್ತರಿಸಿದರು: 'ನಾವು ಒಪ್ಪಿಕೊಂಡಿದ್ದೇವೆ.' ಅಲ್ಲಾಹನು ಹೇಳಿದನು: 'ನೀವು ಸಾಕ್ಷ್ಯವಹಿಸಿರಿ, ನಿಮ್ಮ ಜೊತೆ ನಾನು ಸಹ ಸಾಕ್ಷಿಗಳ ಪೈಕಿಯಲ್ಲಿ ಸೇರುತ್ತೇನೆ.'

وَإِذْ أَخَذَ اللَّهُ مِيثَاقَ النَّبِيِّينَ
لَمَا آتَيْتُكُم مِّن كِتَابٍ وَحِكْمَةٍ
ثُمَّ جَاءَكُمْ رَسُولٌ مُّصَدِّقٌ لِّمَا
مَعَكُمْ لَتُؤْمِنُنَّ بِهِ وَلَتَنصُرُنَّهُ قَالَ
أَأَقْرَرْتُمْ وَأَخَذْتُمْ عَلَىٰ ذَٰلِكُمْ إِصْرِي
قَالُوا أَقْرَرْنَا قَالَ فَاشْهَدُوا وَأَنَا
مَعَكُم مِّنَ الشَّاهِدِينَ ﴿٨٢﴾

**83.** ಆ ಬಳಿಕ ಯಾರಾದರೂ ಪರಾಙ್ಮುಖರಾದರೆ, ಅವರು ಧಿಕ್ಕಾರಿಗಳೇ ಆಗಿದ್ದಾರೆ.

فَمَن تَوَلَّىٰ بَعْدَ ذَٰلِكَ فَأُولَٰئِكَ هُمُ
الْفَاسِقُونَ ﴿٨٣﴾

**84.** ಅಲ್ಲಾಹನ ಧರ್ಮವನ್ನಲ್ಲದೆ ಬೇರೇನನ್ನಾದರೂ ಅವರು ಹುಡುಕುತ್ತಿದ್ದಾರೆಯೇ? ವಾಸ್ತವಿಕವಾಗಿ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲರೂ, ಮನಸ್ಸಿದ್ದರೂ ಇಲ್ಲವಾದರೂ, ಅವನಿಗೆ ಶರಣಾಗುತ್ತಾರೆ. (ಕೊನೆಗೆ) ಅವನೆಡೆಗೆಯೇ ಅವರು ಮರಳಿಸಲ್ಪಡುವರು.

أَفَغَيْرَ دِينِ اللَّهِ يَبْغُونَ وَلَهُ أَسْلَمَ
مَن فِي السَّمَاوَاتِ وَالْأَرْضِ طَوْعًا وَ
كَرْهًا وَإِلَيْهِ يُرْجَعُونَ ﴿٨٤﴾

**85.** ಹೇಳು: 'ನಾವು ಅಲ್ಲಾಹನನ್ನೂ ನಮಗೆ ಅವತೀರ್ಣವಾದುದನ್ನೂ ನಂಬುತ್ತೇವೆ. ಇಬ್‌ರಾಹೀಂ, ಇಸ್ಮಾಈಲ್, ಇಸ್‌ಹಾಖ್, ಯಅ್‌ಖೂಬ್ ಮತ್ತು ಅವರ ಸಂತತಿಗಳಿಗೆ ಅವತೀರ್ಣವಾದುದನ್ನೂ ಮೂಸಾ, ಈಸಾ ಮತ್ತು ಇತರ ಪ್ರವಾದಿಗಳಿಗೆ ಅವರ ಒಡೆಯನಿಂದ ನೀಡಲ್ಪಟ್ಟದ್ದನ್ನೂ (ನಾವು ನಂಬುತ್ತೇವೆ). ಅವರೆಡೆಯಲ್ಲಿ ಯಾರ ಬಗ್ಗೆಯೂ ನಾವು ವ್ಯತ್ಯಾಸವನ್ನು ಭಾವಿಸುವುದಿಲ್ಲ. ನಾವು ಅವನಿಗೆಯೇ (ಅಲ್ಲಾಹನಿಗೆ) ಶರಣಾಗಿದ್ದೇವೆ.'

قُلْ آمَنَّا بِاللَّهِ وَمَا أُنزِلَ عَلَيْنَا وَمَا
أُنزِلَ عَلَىٰ إِبْرَاهِيمَ وَإِسْمَاعِيلَ وَ
إِسْحَاقَ وَيَعْقُوبَ وَالْأَسْبَاطِ وَمَا
أُوتِيَ مُوسَىٰ وَعِيسَىٰ وَالنَّبِيُّونَ مِن
رَّبِّهِمْ لَا نُفَرِّقُ بَيْنَ أَحَدٍ مِّنْهُمْ وَ
نَحْنُ لَهُ مُسْلِمُونَ ﴿٨٤﴾

**86.** ಇಸ್ಲಾಂ ಹೊರತು ಬೇರೆ ಯಾವುದೇ ಧರ್ಮವನ್ನು ಅವಲಂಬಿಸಲು ಯಾರಾದರೂ ಬಯಸಿದರೆ (ಅವನು ತಿಳಿದುಕೊಳ್ಳಲಿ) ಅವನಿಂದ ಅದು ಎಂದಿಗೂ ಸ್ವೀಕರಿಸಲ್ಪಡಲಾರದು. ಪರಲೋಕದಲ್ಲಿ ಅವನು ನಷ್ಟ ಹೊಂದಿದವರಲ್ಲಿ ಸೇರುವನು.

وَمَنْ يَبْتَغِ غَيْرَ الْإِسْلَامِ دِينًا فَلَنْ يُقْبَلَ مِنْهُ وَهُوَ فِي الْآخِرَةِ مِنَ الْخَاسِرِينَ ﴿٨٥﴾

**87.** ಸತ್ಯವಿಶ್ವಾಸವನ್ನು ಕೈಗೊಂಡು ಈ ಪ್ರವಾದಿ ಸತ್ಯವಂತನೆಂದು ಸಾಕ್ಷ್ಯವಹಿಸಿ, (ಅದಕ್ಕೆ) ತಮಗೆ ಸ್ಪಷ್ಟವಾದ ಪುರಾವೆಗಳು ಲಭಿಸಿದ ಬಳಿಕ ಅವಿಶ್ವಾಸವನ್ನು ತಾಳಿದ ಒಂದು ಜನಾಂಗಕ್ಕೆ ಅಲ್ಲಾಹನು ಹೇಗೆ ನೇರ ಮಾರ್ಗವನ್ನು ತೋರಿಸುವನು? ಅಧರ್ಮಿಗಳಾದವರಿಗೆ ಅಲ್ಲಾಹನು ಸತ್ಪಥವನ್ನು ತೋರಿಸಲಾರ.

كَيْفَ يَهْدِي اللَّهُ قَوْمًا كَفَرُوا بَعْدَ إِيمَانِهِمْ وَشَهِدُوا أَنَّ الرَّسُولَ حَقٌّ وَجَاءَهُمُ الْبَيِّنَاتُ ۚ وَاللَّهُ لَا يَهْدِي الْقَوْمَ الظَّالِمِينَ ﴿٨٦﴾

**88.** ಅವರ ಮೇಲೆ ಅಲ್ಲಾಹನ, ದೇವದೂತರ ಮತ್ತು ಮನುಷ್ಯರ ಎಲ್ಲರ ಶಾಪವಿರುವುದೇ ಅವರಿಗಿರುವ ಪ್ರತಿಫಲ.

أُولَٰئِكَ جَزَاؤُهُمْ أَنَّ عَلَيْهِمْ لَعْنَةَ اللَّهِ وَالْمَلَائِكَةِ وَالنَّاسِ أَجْمَعِينَ ﴿٨٧﴾

**89.** ಅವರು ಅದರಲ್ಲಿ (ಆ ಶಾಪ ಸ್ಥಿತಿಯಲ್ಲಿ) ಕಾಲಕಳೆಯುವರು. ಅವರ ಶಿಕ್ಷೆ ಹಗುರಗೊಳಿಸಲ್ಪಡದು. ಅವರಿಗೆ ಕಾಲಾವಕಾಶವನ್ನೂ ನೀಡಲಾಗದು-

خَالِدِينَ فِيهَا لَا يُخَفَّفُ عَنْهُمُ الْعَذَابُ وَلَا هُمْ يُنْظَرُونَ ﴿٨٨﴾

**90.** ಆ ಬಳಿಕ ಪಶ್ಚಾತ್ತಾಪಪಟ್ಟು ತಿದ್ದಿಕೊಂಡವರ ಹೊರತು. ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

إِلَّا الَّذِينَ تَابُوا مِنْ بَعْدِ ذَٰلِكَ وَأَصْلَحُوا فَإِنَّ اللَّهَ غَفُورٌ رَحِيمٌ ﴿٨٩﴾

**91.** ಸತ್ಯವಿಶ್ವಾಸವನ್ನು ಹೊಂದಿದ ನಂತರ ಅವಿಶ್ವಾಸವನ್ನು ಹೊಂದಿ ಮತ್ತೆ ಅವಿಶ್ವಾಸದಲ್ಲೇ ಮುನ್ನೇರುವವರ ಪಶ್ಚಾತ್ತಾಪವು ಎಂದಿಗೂ ಸ್ವೀಕರಿಸಲ್ಪಡದು. ಅವರೇ ದಾರಿತಪ್ಪಿದವರು.

إِنَّ الَّذِينَ كَفَرُوا بَعْدَ إِيمَانِهِمْ ثُمَّ ازْدَادُوا كُفْرًا لَنْ تُقْبَلَ تَوْبَتُهُمْ وَأُولَٰئِكَ هُمُ الضَّالُّونَ ﴿٩٠﴾

**92.** ಅವಿಶ್ವಾಸವನ್ನು ಹೊಂದಿ ಅವಿಶ್ವಾಸದಲ್ಲೇ ಮರಣ ಹೊಂದಿದವರ ಪೈಕಿ ಯಾರಾದರೂ ಪ್ರಾಯಶ್ಚಿತ್ತವಾಗಿ ಭೂಮಿಯಷ್ಟು ಬಂಗಾರವನ್ನು ತೆತ್ತರೂ ಅವನಿಂದ ಎಂದಿಗೂ ಅದು ಸ್ವೀಕರಿಸಲ್ಪಡಲಾರದು. ಅವರಿಗೆ ಯಾತನಾಮಯ ಶಿಕ್ಷೆ ಇದೆ. ಅವರಿಗೆ ಸಹಾಯಕರಾಗಿ ಯಾರೂ ಇಲ್ಲ.

إِنَّ الَّذِينَ كَفَرُوا وَمَاتُوا وَهُمْ كُفَّارٌ فَلَنْ يُقْبَلَ مِنْ أَحَدِهِمْ مِلْءُ الْأَرْضِ ذَهَبًا وَلَوِ افْتَدَىٰ بِهِ ۗ أُولَٰئِكَ لَهُمْ عَذَابٌ أَلِيمٌ وَمَا لَهُمْ مِنْ نَاصِرِينَ ﴿٩١﴾





**93.** ನಿಮಗೆ ಪ್ರಿಯವಾದವುಗಳಿಂದ (ದೇವ ಮಾರ್ಗದಲ್ಲಿ) ವ್ಯಯಿಸುವ ವರೆಗೆ ನೀವು (ಪರಿಪೂರ್ಣ) ಒಳಿತನ್ನು ಗಳಿಸಲಾರಿರಿ. ನೀವು ಖರ್ಚು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲನು.

لَنْ تَنَالُوا الْبِرَّ حَتَّىٰ تُنْفِقُوا مِمَّا تُحِبُّونَ ۚ وَمَا تُنْفِقُوا مِنْ شَيْءٍ فَإِنَّ اللَّهَ بِهِ عَلِيمٌ ﴿٩٢﴾

**94.** ಎಲ್ಲ ಭಕ್ಷ್ಯಸಾಧನಗಳು ಇಸ್ರಾಈಲ್ ಸಂತತಿಗಳಿಗೆ ಧರ್ಮಬದ್ಧವಾಗಿದ್ದವು- 'ಇಸ್ರಾಈಲ್'[110] ಸ್ವತಃ ತನಗೆ ನಿಷಿದ್ಧಗೊಳಿಸಿದ್ದು ಹೊರತು[110A] (ಇದು) ತೌರಾತ್ ಅವತೀರ್ಣವಾಗುವ ಮೊದಲು. ಹೇಳು: 'ನೀವು ಸತ್ಯವಂತರೆಂದಾದರೆ ತೌರಾತನ್ನು ತಂದು ಅದನ್ನು ಓದಿರಿ'.

كُلُّ الطَّعَامِ كَانَ حِلًّا لِبَنِي إِسْرَائِيلَ إِلَّا مَا حَرَّمَ إِسْرَائِيلُ عَلَىٰ نَفْسِهِ مِنْ قَبْلِ أَنْ تُنَزَّلَ التَّوْرَاةُ ۗ قُلْ فَأْتُوا بِالتَّوْرَاةِ فَاتْلُوهَا إِنْ كُنْتُمْ صَادِقِينَ ﴿٩٣﴾

**95.** ಇದರ ನಂತರವೂ ಯಾರು ಅಲ್ಲಾಹನ ಮೇಲೆ ಸುಳ್ಳು ಆರೋಪಿಸುತ್ತಾರೋ ಅವರೇ ಅಧರ್ಮಿಗಳು.

فَمَنِ افْتَرَىٰ عَلَى اللَّهِ الْكَذِبَ مِنْ بَعْدِ ذَٰلِكَ فَأُولَٰئِكَ هُمُ الظَّالِمُونَ ﴿٩٤﴾

**96.** ಹೇಳು : 'ಅಲ್ಲಾಹನು ಸತ್ಯ ನುಡಿದಿರುವನು. ಆದ್ದರಿಂದ ದೇವ ಮಾರ್ಗದಲ್ಲಿ ಸ್ಥಿರಚಿತ್ತನಾದ ಇಬ್‌ರಾಹೀಮರ ಮಾರ್ಗವನ್ನು ನೀವು ಅನುಸರಿಸಿರಿ. ಅವರು ಬಹು ದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.'

قُلْ صَدَقَ اللَّهُ ۗ فَاتَّبِعُوا مِلَّةَ إِبْرَاهِيمَ حَنِيفًا وَمَا كَانَ مِنَ الْمُشْرِكِينَ ﴿٩٥﴾

**97.** ಸಕಲ ಮನುಷ್ಯರಿಗಾಗಿ[111] ಸ್ಥಾಪಿಸಲ್ಪಟ್ಟ ಪ್ರಥಮ ಮಂದಿರಬಕ್ಕ[112]ದಲ್ಲಿರುವುದೇ ಆಗಿದೆ. (ಅದು) ಅನುಗ್ರಹೀತವೂ ಸರ್ವಜನರಿಗೆ ಮಾರ್ಗದರ್ಶಕ (ಕೇಂದ್ರ)ವೂ ಆಗಿದೆ.

إِنَّ أَوَّلَ بَيْتٍ وُضِعَ لِلنَّاسِ لَلَّذِي بِبَكَّةَ مُبَارَكًا وَهُدًى لِلْعَالَمِينَ ﴿٩٦﴾

**98.** ಅದರಲ್ಲಿ ಸ್ಪಷ್ಟವಾದ ದೃಷ್ಟಾಂತಗಳಿವೆ. (ಅದು) ಇಬ್‌ರಾಹೀಮರ (ಪ್ರಾರ್ಥನೆಯ) ಸ್ಥಳವಾಗಿದೆ. ಅದರೊಳಗೆ ಯಾರಾದರೂ ಪ್ರವೇಶಿಸಿದರೆ ಅವನು

فِيهِ آيَاتٌ بَيِّنَاتٌ مَقَامُ إِبْرَاهِيمَ ۖ وَمَنْ دَخَلَهُ كَانَ آمِنًا ۗ وَلِلَّهِ عَلَى النَّاسِ

110. ಹರ್ಝ್ರುತ್ ಯಅ್‌ಖೂಬ್ (ಅಲೈಹಿಸ್ಸಲಾಂ)

110A. ರೋಗ ಪೀಡಿತರಾದ ಕಾರಣ ಹರ್ಝ್ರುತ್ ಯಅ್‌ಖೂಬ್ (ಅ) ತನಗೆ ಕೆಲವು ಆಹಾರ ವಸ್ತುಗಳನ್ನು ನಿಷಿದ್ಧಗೊಳಿಸಿದ್ದರು.

111. ಮೊತ್ತಮೊದಲಾಗಿ ಸಮಸ್ತ ಲೋಕವನ್ನು ಸಂಬೋಧಿಸಿದ ಧರ್ಮ ಮಕ್ಕದಿಂದ ಪ್ರಕಟವಾದ "ಇಸ್ಲಾಂ" ಆಗಿದೆಯೆಂದು ಇದರಿಂದ ತಿಳಿದು ಬರುತ್ತದೆ.

112. 'ಬಕ್ಕ' ಎಂಬುದು 'ಮಕ್ಕ'ದ ಇನ್ನೊಂದು ಹೆಸರು.

ನಿರ್ಭೀತನಾದನು. ಅಲ್ಲಿಗೆ ಹೋಗಲು ಅನುಕೂಲವಿರುವ ಎಲ್ಲರೂ ಆ ಮಂದಿರದ ತೀರ್ಥಾಟನೆ (ಹಜ್ಜ್) ಮಾಡಬೇಕಾದುದು ಮನುಷ್ಯರಿಗೆ ಅಲ್ಲಾಹನ ಮೇಲಿರುವ ಬಾಧ್ಯತೆಯಾಗಿದೆ. ಇನ್ನು, ಯಾರಾದರೂ ನಿರಾಕರಿಸುವುದಾದರೆ, ನಿಶ್ಚಯವಾಗಿಯೂ ಅಲ್ಲಾಹನು ಪ್ರಪಂಚದಲ್ಲಿ ಯಾರನ್ನೂ ಯಾವ ರೀತಿಯಲ್ಲೂ ಆಶ್ರಯಿಸಿಲ್ಲ (ಎಂದು ತಿಳಿದು ಕೊಳ್ಳಲಿ).

حِجُّ الْبَيْتِ مَنِ اسْتَطَاعَ إِلَيْهِ سَبِيلًا ۚ
وَمَنْ كَفَرَ فَإِنَّ اللَّهَ غَنِيٌّ عَنِ
الْعَالَمِينَ ﴿٩٧﴾

99. ಹೇಳು: 'ಎಲೈ ಗ್ರಂಥದವರೇ, ನೀವು ಮಾಡುವುದನ್ನೆಲ್ಲ ಅಲ್ಲಾಹನು ವೀಕ್ಷಿಸುತ್ತಿರುವಾಗ ನೀವು ಯಾಕೆ ಅಲ್ಲಾಹನ ದೃಷ್ಟಾಂತಗಳನ್ನು ನಿರಾಕರಿಸುತ್ತಿದ್ದೀರಿ?'

قُلْ يَا أَهْلَ الْكِتَابِ لِمَ تَكْفُرُونَ
بِآيَاتِ اللَّهِ وَاللَّهُ شَهِيدٌ عَلَىٰ مَا
تَعْمَلُونَ ﴿٩٨﴾

100. ಹೇಳು: 'ಎಲೈ ಗ್ರಂಥದವರೇ, ಸತ್ಯವಿಶ್ವಾಸಿಗಳನ್ನು ಅಲ್ಲಾಹನ ಮಾರ್ಗದಿಂದ ನೀವೇಕೆ ತಡೆಯುವಿರಿ? ನೀವು ಸಾಕ್ಷಿಗಳಾಗಿದ್ದು ಸಹ ಏಕೆ ಅದನ್ನು ವಕ್ರವಾಗಿ ತೋರಿಸುತ್ತೀರಿ? ನೀವು ಮಾಡುವುದನ್ನೆಲ್ಲ ಅಲ್ಲಾಹನು ಅರಿಯದವನಲ್ಲ.'

قُلْ يَا أَهْلَ الْكِتَابِ لِمَ تَصُدُّونَ عَنْ
سَبِيلِ اللَّهِ مَنْ آمَنَ تَبْغُونَهَا
عِوَجًا وَأَنْتُمْ شُهَدَاءُ ۗ وَمَا اللَّهُ
بِغَافِلٍ عَمَّا تَعْمَلُونَ ﴿٩٩﴾

101. ಎಲೈ ವಿಶ್ವಾಸಿಗಳೇ, ಗ್ರಂಥ ನೀಡಲ್ಪಟ್ಟವರ ಪೈಕಿ ಯಾವುದಾದರೂ ಒಂದು ಪಂಗಡವನ್ನು ನೀವು ಅನುಸರಿಸಿದರೆ, ನೀವು ಸತ್ಯವಿಶ್ವಾಸವನ್ನು ಹೊಂದಿದ ನಂತರ ಅವರು ನಿಮ್ಮನ್ನು ಅವಿಶ್ವಾಸಿಗಳನ್ನಾಗಿ ಮಾರ್ಪಡಿಸುವರು.

يَا أَيُّهَا الَّذِينَ آمَنُوا إِنْ تُطِيعُوا
فَرِيقًا مِنَ الَّذِينَ أُوتُوا الْكِتَابَ
يَرُدُّوكُمْ بَعْدَ إِيمَانِكُمْ كَافِرِينَ ﴿١٠٠﴾

102. ನಿಮಗೆ ಅಲ್ಲಾಹನ ವಚನಗಳನ್ನು ಓದಿ ಹೇಳಲಾಗುತ್ತದೆ ಹಾಗೂ ಅವನ ಸಂದೇಶವಾಹಕ ನಿಮ್ಮ ಜೊತೆಗಿದ್ದಾರೆ. ಹಾಗಿರುವಾಗ ನೀವು ಹೇಗೆ ಅವಿಶ್ವಾಸವನ್ನು ಹೊಂದುತ್ತೀರಿ? ಯಾವನಾದರೂ ಅಲ್ಲಾಹನನ್ನು ಬಿಗಿಯಾಗಿ ಹಿಡಿದುಕೊಂಡರೆ ಖಂಡಿತವಾಗಿಯೂ ಅವನು ಸತ್ಪಥದಲ್ಲಿ ನಡೆಸಲ್ಪಟ್ಟನು (ಎಂದು ತಿಳಿದು ಕೊಳ್ಳಿರಿ).

وَكَيْفَ تَكْفُرُونَ وَأَنْتُمْ تُتْلَىٰ
عَلَيْكُمْ آيَاتُ اللَّهِ وَفِيكُمْ رَسُولُهُ ۗ وَ
مَنْ يَعْتَصِمْ بِاللَّهِ فَقَدْ هُدِيَ إِلَىٰ
صِرَاطٍ مُسْتَقِيمٍ ﴿١٠١﴾

103. ಎಲೈ ವಿಶ್ವಾಸಿಗಳೇ, ಅಲ್ಲಾಹನ ಭಯವಿರಿಸಿಕೊಳ್ಳಬೇಕಾದ ರೀತಿಯಲ್ಲೇ ಅವನ ಭಯವಿರಿಸಿಕೊಳ್ಳಿರಿ.

يَا أَيُّهَا الَّذِينَ آمَنُوا اتَّقُوا اللَّهَ حَقَّ





(ಅಲ್ಲಾಹನಿಗೆ) ಸಂಪೂರ್ಣ ವಿಧೇಯತೆ ತೋರಿಸುವ ಸ್ಥಿತಿಯಲ್ಲಿ ಹೊರತು ನಿಮಗೆ ಮರಣ ಬಾರದಿರಲಿ.

تُقَاتِهِ وَلَا تَمُوتُنَّ إِلَّا وَأَنْتُمْ
مُسْلِمُونَ ﴿١٠٢﴾

104. ನೀವೆಲ್ಲರೂ ಒಟ್ಟು ಸೇರಿಕೊಂಡು ಅಲ್ಲಾಹನ ಪಾಶವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ; ಭಿನ್ನ ಭಿನ್ನರಾಗದಿರಿ. ನೀವು ಪರಸ್ಪರ ಶತ್ರುಗಳಾಗಿದ್ದಾಗ ಅಲ್ಲಾಹನು ನಿಮಗೆ ನೀಡಿದ ಅನುಗ್ರಹಗಳನ್ನು ಸ್ಮರಿಸಿರಿ. ಅವನು ನಿಮ್ಮ ಹೃದಯಗಳನ್ನು ಅನ್ಯೋನ್ಯ ಒಂದುಗೂಡಿಸಿದ ಫಲವಾಗಿ ಅವನ ಅನುಗ್ರಹದಿಂದ ನೀವು ಪರಸ್ಪರ ಸಹೋದರರಾದಿರಿ. ನೀವು ಒಂದು ಅಗ್ನಿಕುಂಡದ ಅಂಚಿನಲ್ಲಿದ್ದಾಗ ಅವನು ನಿಮ್ಮನ್ನು ಅದರಿಂದ ರಕ್ಷಿಸಿದನು. ಹೀಗೆ ಅಲ್ಲಾಹನು ತನ್ನ ಆಜ್ಞೆಗಳನ್ನು ವಿವರಿಸಿ ಕೊಡುತ್ತಾನೆ - ನೀವು ಸತ್ಪಥವನ್ನು ಪಡೆಯಲಿಕ್ಕಾಗಿ.

وَاعْتَصِمُوا بِحَبْلِ اللَّهِ جَمِيعًا وَلَا
تَفَرَّقُوا ۚ وَاذْكُرُوا نِعْمَتَ اللَّهِ عَلَيْكُمْ
إِذْ كُنْتُمْ أَعْدَاءً فَأَلَّفَ بَيْنَ قُلُوبِكُمْ
فَأَصْبَحْتُمْ بِنِعْمَتِهِ إِخْوَانًا وَكُنْتُمْ
عَلَىٰ شَفَا حُفْرَةٍ مِنَ النَّارِ فَأَنْقَذَكُمْ
مِنْهَا ۗ كَذَٰلِكَ يُبَيِّنُ اللَّهُ لَكُمْ آيَاتِهِ
لَعَلَّكُمْ تَهْتَدُونَ ﴿١٠٣﴾

105. ಒಳಿತಿನ ಕಡೆಗೆ ಕರೆಯುವ, ಒಳಿತನ್ನು ಉಪದೇಶಿಸಿ ಕೆಡುಕನ್ನು ವಿರೋಧಿಸುವ ಒಂದು ಪಂಗಡ ನಿಮ್ಮಲ್ಲಿ ಇರಬೇಕಾಗಿದೆ. ಅವರೇ ವಿಜಯಶಾಲಿಗಳಾಗುವರು.

وَلْتَكُنْ مِنْكُمْ أُمَّةٌ يَدْعُونَ إِلَى الْخَيْرِ
وَيَأْمُرُونَ بِالْمَعْرُوفِ وَيَنْهَوْنَ عَنِ
الْمُنْكَرِ ۚ وَأُولَٰئِكَ هُمُ الْمُفْلِحُونَ ﴿١٠٤﴾

106. ತಮಗೆ ಸ್ಪಷ್ಟವಾದ ದೃಷ್ಟಾಂತಗಳು ಬಂದೊದಗಿದ ನಂತರ ಭಿನ್ನಾಭಿಪ್ರಾಯವನ್ನು ಹೊಂದಿ ಭಿನ್ನ ಭಿನ್ನರಾದವರ ಹಾಗೆ ನೀವು ಆಗಬಾರದು. ಅವರಿಗೆ ಕಠಿಣವಾದ ಶಿಕ್ಷೆ ಕಾದಿದೆ.

وَلَا تَكُونُوا كَالَّذِينَ تَفَرَّقُوا وَ
اخْتَلَفُوا مِنْ بَعْدِ مَا جَاءَهُمُ
الْبَيِّنَاتُ ۚ وَأُولَٰئِكَ لَهُمْ عَذَابٌ عَظِيمٌ ﴿١٠٥﴾

107. ಆ ದಿನದಂದು ಕೆಲವು ಮುಖಗಳು ಪ್ರಕಾಶ ಭರಿತವಾಗುವುವು; ಕೆಲವು ಮುಖಗಳು ಕಪ್ಪಿಡುವುವು. ಕಪ್ಪಿಟ್ಟ ಮುಖದವರೊಡನೆ; 'ನೀವು ಸತ್ಯವಿಶ್ವಾಸವನ್ನು ಹೊಂದಿದ ನಂತರ ಅವಿಶ್ವಾಸವನ್ನು ಹೊಂದಿದಿರಾ? ನೀವು ಅವಿಶ್ವಾಸಿಯಾದ ಕಾರಣ ಈ ಶಿಕ್ಷೆಯನ್ನು ಅನುಭವಿಸಿರಿ' ಎಂದು ಹೇಳಲಾಗುವುದು.

يَوْمَ تَبْيَضُّ وُجُوهٌ وَتَسْوَدُّ وُجُوهٌ ۚ
فَأَمَّا الَّذِينَ اسْوَدَّتْ وُجُوهُهُمْ
أَكَفَرْتُمْ بَعْدَ إِيمَانِكُمْ فَذُوقُوا
الْعَذَابَ بِمَا كُنْتُمْ تَكْفُرُونَ ﴿١٠٦﴾

وَاَمَّا الَّذِيْنَ ابْيَضَّتْ وُجُوْهُهُمْ فَفِيْ رَحْمَةِ اللّٰهِ ؕ هُمْ فِيْهَا خٰلِدُوْنَ ﴿۱۰۷﴾

**108.** ಪ್ರಸನ್ನ ವದನರಾದವರು ಅಲ್ಲಾಹನ ಕರುಣೆಗೆ ಪಾತ್ರರಾಗಿರುತ್ತಾರೆ. ಅವರು ಅಲ್ಲೇ ನೆಲೆಸುವರು.

تِلْكَ اٰيٰتُ اللّٰهِ نَتْلُوْهَا عَلَيْكَ بِالْحَقِّ ؕ وَمَا اللّٰهُ يُرِيْدُ ظُلْمًا لِّلْعٰلَمِيْنَ ﴿۱۰۸﴾

**109.** ನಾವು ನಿನಗೆ ಓದಿ ಹೇಳುತ್ತಿರುವ ಇವು ಸತ್ಯಪೂರ್ಣವಾದ ಅಲ್ಲಾಹನ ವಚನಗಳಾಗಿವೆ. ಅಲ್ಲಾಹನು (ತನ್ನ) ಸೃಷ್ಟಿಗಳೊಡನೆ ಯಾವ ರೀತಿಯಲ್ಲೂ ಅನ್ಯಾಯವಾಗಿ ವರ್ತಿಸಲು ಉದ್ದೇಶಿಸುವುದಿಲ್ಲ.

وَلِلّٰهِ مَا فِي السَّمٰوٰتِ وَمَا فِي الْاَرْضِ ؕ وَاِلَى اللّٰهِ تُرْجَعُ الْاُمُوْرُ ﴿۱۰۹﴾

**110.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದಾಗಿವೆ. ಎಲ್ಲ ಕಾರ್ಯಗಳೂ (ತೀರ್ಮಾನಕ್ಕಾಗಿ) ಅಲ್ಲಾಹನೆಡೆಗೆ ಮರಳಿಸಲ್ಪಡುತ್ತವೆ.

كُنْتُمْ خَيْرَ اُمَّةٍ اُخْرِجَتْ لِلنَّاسِ تَاْمُرُوْنَ بِالْمَعْرُوْفِ وَتَنْهَوْنَ عَنِ الْمُنْكَرِ وَتُؤْمِنُوْنَ بِاللّٰهِ ؕ وَلَوْ اٰمَنَ اَهْلُ الْكِتٰبِ لَكَانَ خَيْرًا لَّهُمْ ؕ مِنْهُمُ الْمُؤْمِنُوْنَ وَاَكْثَرُهُمُ الْفٰسِقُوْنَ ﴿۱۱۰﴾

**111.** ನೀವು ಮನುಷ್ಯ ವರ್ಗದ ಒಳಿತಿಗಾಗಿ ಸೃಷ್ಟಿಸಲ್ಪಟ್ಟ ಅತಿ ಉತ್ಕೃಷ್ಟ ಸಮುದಾಯವಾಗಿದ್ದೀರಿ.[113] ನೀವು ಒಳಿತನ್ನು ಉಪದೇಶಿಸುತ್ತೀರಿ; ಕೆಡುಕನ್ನು ತಡೆಯುತ್ತೀರಿ ಮತ್ತು ಅಲ್ಲಾಹನನ್ನು ನಂಬುತ್ತೀರಿ. ಗ್ರಂಥದವರು ಸಹ ನಂಬಿರುತ್ತಿದ್ದರೆ ಅದು ಅವರಿಗೆ ಗುಣಕರವಾಗಿರುತ್ತಿತ್ತು. ಅವರ ಪೈಕಿ ಕೆಲವು ವಿಶ್ವಾಸಿಗಳಿದ್ದಾರೆ; ಆದರೆ ಅಧಿಕಾಂಶ ಜನರು ಧಿಕ್ಕಾರಿಗಳಾಗಿದ್ದಾರೆ.

لَنْ يَّضُرُّوْكُمْ اِلَّآ اَذًى ؕ وَاِنْ يُّقَاتِلُوْكُمْ يُوَلُّوْكُمُ الْاَدْبَارَ ۟ ثُمَّ لَا يُنْصَرُوْنَ ﴿۱۱۱﴾

**112.** ಅವರು ಸ್ವಲ್ಪ ಮಟ್ಟಿಗೆ ನಿಮ್ಮನ್ನು ಉಪದ್ರವಿಸಬಹುದು ಹೊರತು ಹೆಚ್ಚಿನ ಹಾನಿಯೇನೂ ಮಾಡಲು ಸಾಧ್ಯವಿಲ್ಲ. ಅವರು ನಿಮ್ಮೊಡನೆ ಯುದ್ಧ ಮಾಡಿದರೆ, ಅವರು ಬೆನ್ನು ತೋರಿಸಿ ಓಡಿ ಹೋಗುವರು. ಆ ಬಳಿಕ ಅವರಿಗೆ ನೆರವು ಸಿಗಲಾರದು.

ضُرِبَتْ عَلَيْهِمُ الذِّلَّةُ اَيْنَ مَا ثُقِفُوْٓا اِلَّا بِحَبْلٍ مِّنَ اللّٰهِ وَحَبْلٍ مِّنَ النَّاسِ وَبَآءُوْ بِغَضَبٍ مِّنَ اللّٰهِ وَضُرِبَتْ عَلَيْهِمُ

**113.** ಅವರು ಎಲ್ಲಿ ಕಾಣಲ್ಪಟ್ಟರೂ ಹೀನಸ್ಥಿತಿಗೆ ಗುರಿಯಾಗಿರುತ್ತಾರೆ. ಅಲ್ಲಾಹನಿಂದ ಅಥವಾ ಮನುಷ್ಯರಿಂದ (ಸಂರಕ್ಷಣೆಯ) ಒಡಂಬಡಿಕೆಯ ಮೂಲಕ ವಿನಾ (ಅವರು ಈ ಕೀಳುದೆಸೆಯಿಂದ ಮುಕ್ತರಲ್ಲ).

113. ಮುಸ್ಲಿಂ ಸಮುದಾಯವು ಸರ್ವಲೋಕದ ಒಳಿತಿಗಾಗಿ ಸೃಷ್ಟಿಸಲ್ಪಟ್ಟಿದೆಯೆಂಬುದೇ ಅದು ಉತ್ತಮ ಸಮುದಾಯವಾಗಲು ಕಾರಣ. ಮುಸ್ಲಿಮರು ಈ ತತ್ವವನ್ನು ಅರಿತಿರಬೇಕಾಗಿದೆ.





الْمَسْكَنَةُ ؕ ذٰلِكَ بِاَنَّهُمْ كَانُوْا يَكْفُرُوْنَ بِاٰيٰتِ اللّٰهِ وَيَقْتُلُوْنَ الْاَنْۢبِيَآءَ بِغَيْرِ حَقٍّ ؕ ذٰلِكَ بِمَا عَصَوْا وَّكَانُوْا يَعْتَدُوْنَ ﴿۱۱۲﴾

ಅಲ್ಲಾಹನ ಕೋಪಕ್ಕೆ ಅವರು ಈಡಾಗಿದ್ದಾರೆ. ಪರಾವಲಂಬನೆಗೆ ಅವರು ತುತ್ತಾಗಿದ್ದಾರೆ. ಅಲ್ಲಾಹನ ದೃಷ್ಟಾಂತಗಳನ್ನು ಅವರು ನಿರಾಕರಿಸುತ್ತಿದ್ದರು ಹಾಗೂ ಪ್ರವಾದಿಗಳನ್ನು ಅನ್ಯಾಯವಾಗಿ ಕೊಲ್ಲಲು ಪ್ರಯತ್ನಿಸುತ್ತಿದ್ದರು ಎಂಬುದೇ ಇದಕ್ಕೆ ಕಾರಣವಾಗಿದೆ. ಅವರ ಧಿಕ್ಕಾರ ಮತ್ತು ಆಜ್ಞೋಲ್ಲಂಘನೆಯ ಫಲವಿದು.

لَيْسُوْا سَوَآءً ؕ مِنْ اَهْلِ الْكِتٰبِ اُمَّةٌ قَآئِمَةٌ يَّتْلُوْنَ اٰيٰتِ اللّٰهِ اٰنَآءَ الَّيْلِ وَهُمْ يَسْجُدُوْنَ ﴿۱۱۳﴾

**114.** ಅವರು (ಎಲ್ಲರೂ) ಒಂದೇ ರೀತಿಯವರಲ್ಲ. (ತಮ್ಮ ಒಡಂಬಡಿಕೆಯಲ್ಲಿ) ಸ್ಥಿರತೆಯನ್ನು ತೋರಿಸುವ ಒಂದು ಗುಂಪು ಜನರು ಗ್ರಂಥದವರಲ್ಲಿದ್ದಾರೆ. ಅವರು ರಾತ್ರಿ ಸಮಯಗಳಲ್ಲಿ ಅಲ್ಲಾಹನ ವಚನಗಳನ್ನು ಓದುತ್ತಾರೆ ಮತ್ತು (ಅವನ ಮುಂದೆ) ಸಾಷ್ಟಾಂಗವೆರಗುತ್ತಾರೆ.

يُؤْمِنُوْنَ بِاللّٰهِ وَالْيَوْمِ الْاٰخِرِ وَيَاْمُرُوْنَ بِالْمَعْرُوْفِ وَيَنْهَوْنَ عَنِ الْمُنْكَرِ وَيُسَارِعُوْنَ فِي الْخَيْرٰتِ ؕ وَاُولٰٓئِكَ مِنَ الصّٰلِحِيْنَ ﴿۱۱۴﴾

**115.** ಅವರು ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಡುತಾರೆ; ಒಳಿತನ್ನು ಉಪದೇಶಿಸುತ್ತಾರೆ; ಕೆಡುಕನ್ನು ವಿರೋಧಿಸುತ್ತಾರೆ; ಸತ್ಕಾರ್ಯದಲ್ಲಿ ಸ್ಪರ್ಧಿಸುತ್ತಾರೆ. ಅವರು ಸಜ್ಜನರಲ್ಲಿ ಸೇರಿದವರಾಗಿದ್ದಾರೆ.

وَمَا يَفْعَلُوْا مِنْ خَيْرٍ فَلَنْ يُّكْفَرُوْهُ ؕ وَاللّٰهُ عَلِيْمٌۢ بِالْمُتَّقِيْنَ ﴿۱۱۵﴾

**116.** ಅವರು ಮಾಡುವ ಯಾವುದೇ ಸತ್ಕಾರ್ಯ ಅವಗಣಿಸಲ್ಪಡದು. ಅಲ್ಲಾಹನು ಭಯ ಭಕ್ತಿ ತೋರಿಸುವವರನ್ನು ಚೆನ್ನಾಗಿ ಬಲ್ಲನು.

اِنَّ الَّذِيْنَ كَفَرُوْا لَنْ تُغْنِيَ عَنْهُمْ اَمْوَالُهُمْ وَلَآ اَوْلَادُهُمْ مِّنَ اللّٰهِ شَيْئًا ؕ وَاُولٰٓئِكَ اَصْحٰبُ النَّارِ ۚ هُمْ فِيْهَا خٰلِدُوْنَ ﴿۱۱۶﴾

**117.** ಅವಿಶ್ವಾಸಿಗಳಿಗೆ, ಅವರ ಸಂಪತ್ತು ಮತ್ತು ಸಂತಾನ ಅಲ್ಲಾಹನ ಶಿಕ್ಷೆಯಿಂದ (ಪಾರಾಗಲಿಕ್ಕೆ) ಅವರಿಗೆ ಏನೂ ಉಪಯುಕ್ತವಾಗಲಿಕ್ಕಿಲ್ಲ. ಅವರು ನರಕವಾಸಿಗಳಾಗಿದ್ದಾರೆ. ಅವರು ಅಲ್ಲಿ ಚಿರಕಾಲ ನೆಲೆಸುವರು.

مَثَلُ مَا يُنْفِقُوْنَ فِيْ هٰذِهِ الْحَيٰوةِ الدُّنْيَا كَمَثَلِ رِيْحٍ فِيْهَا صِرٌّ

**118.** ಐಹಿಕ ಜೀವನದಲ್ಲಿ ಅವರು ಖರ್ಚು ಮಾಡುವ (ಧನದ) ಸ್ಥಿತಿಯು ಅತಿಶೈತ್ಯವಾದೊಂದು ಗಾಳಿಯ ಸ್ಥಿತಿಯಂತಾಗಿದೆ.[114] ಅದು ಆತ್ಮವಂಚನೆ

114. ದೇವಮಾರ್ಗದಲ್ಲಿ ಮಾಡುವ ಖರ್ಚನ್ನು ಇಲ್ಲಿ ಉದ್ದೇಶಿಸಲಾಗಿದೆ. ಆದರೆ ಈ ಜನರು ಕಾಪಟ್ಯದಿಂದ ಖರ್ಚುಮಾಡುತ್ತಾರೆ. ಅತಿಶೈತ್ಯದಿಂದ ಕೂಡಿದ ಗಾಳಿ ಕೃಷಿಯನ್ನು ನಾಶಪಡಿಸುವಂತೆ, ಪ್ರಾಮಾಣಿಕವಲ್ಲದ, ಕಾಪಟ್ಯದಿಂದ ಕೂಡಿದ ವ್ಯಯ ಅವರ ಪ್ರವರ್ತನೆಗಳನ್ನು ನಿಷ್ಪ್ರಯೋಜನಗೊಳಿಸುತ್ತದೆ.

أَصَابَتْ حَرْثَ قَوْمٍ ظَلَمُوٓا
أَنفُسَهُمْ فَأَهْلَكَتْهُ ۚ وَمَا ظَلَمَهُمُ
اللَّهُ وَلَٰكِنْ أَنفُسَهُمْ يَظْلِمُونَ ﴿١١٨﴾

ಮಾಡಿದ ಒಂದು ಜನಾಂಗದ ಕೃಷಿಯ ಮೇಲೆ ಬೀಸಿ ಅದನ್ನು ನಾಶಪಡಿಸಿತು. ಅಲ್ಲಾಹನು ಅವರಿಗೆ ಹಾನಿಮಾಡಲಿಲ್ಲ. ಬದಲು, ಅವರೇ ಆತ್ಮದ್ರೋಹ ಮಾಡುತ್ತಾರೆ.

يَٰٓأَيُّهَا الَّذِينَ ءَامَنُوا لَا تَتَّخِذُوا بِطَانَةً
مِّن دُونِكُمْ لَا يَأْلُونَكُمْ خَبَالًا وَدُّوا
مَا عَنِتُّمْ ۚ قَدْ بَدَتِ الْبَغْضَآءُ مِنْ
أَفْوَٰهِهِمْ وَمَا تُخْفِى صُدُورُهُمْ
أَكْبَرُ ۚ قَدْ بَيَّنَّا لَكُمُ الْءَايَٰتِ ۖ إِن كُنتُمْ
تَعْقِلُونَ ﴿١١٩﴾

**119.** ಎಲೈ ಸತ್ಯವಿಶ್ವಾಸಿಗಳೇ, ನಿಮ್ಮ ಸ್ವಂತ ಜನರನ್ನು ಬಿಟ್ಟು (ಬೇರೆಯವರನ್ನು) ನೀವು ಆಪ್ತ ಮಿತ್ರರನ್ನಾಗಿ ಮಾಡಬೇಡಿರಿ.[114A] ನಿಮ್ಮನ್ನು ಕೆಡಿಸುವ ವಿಚಾರದಲ್ಲಿ ಅವರೇನೂ ಕಮ್ಮಿ ಮಾಡಲಿಕ್ಕಿಲ್ಲ. ನೀವು ತೊಂದರೆಗೊಳಪಡುವುದನ್ನು ಅವರು ಇಷ್ಟಪಡುತ್ತಾರೆ. ಅವರ ಬಾಯಿಯಿಂದ ವಿದ್ವೇಷವು ಬಹಿರಂಗಗೊಂಡಿದೆ. ಅವರ ಹೃದಯಗಳಲ್ಲಿ ಗುಪ್ತವಾಗಿರುವ ವಿಚಾರ ಅದಕ್ಕಿಂತ ಹಿರಿದಾದುದು. ನಾವು ನಿಮಗೆ ನಮ್ಮ ಆಜ್ಞೆಗಳನ್ನು ವಿವರಿಸಿಕೊಟ್ಟಿದ್ದೇವೆ- ನೀವು ಚಿಂತಿಸುವವರಾಗಿದ್ದರೆ!

هَٰٓأَنتُمْ أُولَآءِ تُحِبُّونَهُمْ وَلَا يُحِبُّونَكُمْ
وَتُؤْمِنُونَ بِالْكِتَٰبِ كُلِّهِۦ وَإِذَا لَقُوكُمْ
قَالُوٓا ءَامَنَّا وَإِذَا خَلَوْا عَضُّوا عَلَيْكُمُ
الْأَنَامِلَ مِنَ الْغَيْظِ ۚ قُلْ مُوتُوا
بِغَيْظِكُمْ ۗ إِنَّ اللَّهَ عَلِيمٌۢ بِذَاتِ
الصُّدُورِ ﴿١٢٠﴾

**120.** ಗಮನಿಸಿರಿ, ನೀವಾದರೋ ಅವರನ್ನು ಪ್ರೀತಿಸುತ್ತೀರಿ; ಆದರೆ ಅವರು ನಿಮ್ಮನ್ನು ಪ್ರೀತಿಸುವುದಿಲ್ಲ. ನೀವು ಗ್ರಂಥದಲ್ಲಿ ಪೂರ್ಣವಾಗಿ ವಿಶ್ವಾಸವಿಡುತ್ತೀರಿ. ಅವರು ನಿಮ್ಮನ್ನು ಭೇಟಿಯಾದಾಗ, 'ನಾವು (ಸಹ) ವಿಶ್ವಾಸವಿಡುತ್ತೇವೆ' ಎಂದು ಹೇಳುತ್ತಾರೆ. (ಆದರೆ) ಅವರು ಏಕಾಂತದಲ್ಲಿ ಕೋಪದಿಂದ ನಿಮ್ಮ ವಿರುದ್ಧ ತಮ್ಮ ಬೆರಳುಗಳನ್ನು ಕಚ್ಚುತ್ತಾರೆ. ಹೇಳಿರಿ: 'ನಿಮ್ಮ ರೋಷದಿಂದಲೇ ನೀವು ಸಾಯಿರಿ. ನಿಶ್ಚಯವಾಗಿಯೂ ಅಲ್ಲಾಹನು ಹೃದಯದೊಳಗೆ ಗುಪ್ತವಾಗಿರುವುದನ್ನೆಲ್ಲ ತಿಳಿಯುತ್ತಾನೆ.'

إِن تَمْسَسْكُمْ حَسَنَةٌ تَسُؤْهُمْ وَإِن
تُصِبْكُمْ سَيِّئَةٌ يَفْرَحُوا بِهَا ۖ وَإِن

**121.** ನಿಮಗೇನಾದರೂ ಒಳಿತುಂಟಾದರೆ ಅವರಿಗೆ ದುಃಖವಾಗುತ್ತದೆ; ನಿಮಗೇನಾದರೂ ಕೆಡುಕುಂಟಾದರೆ ಅವರಿಗೆ ಸಂತೋಷವಾಗುತ್ತದೆ. ನೀವು ಸಹನಶೀಲರೂ

114A. ಮುಸ್ಲಿಮರೊಡನೆ ಶತ್ರುತ್ವದಿಂದಿರುವ ಮತ್ತು ಮುಸ್ಲಿಮರ ವಿರುದ್ಧ ಸಂಚುಹೂಡುವ ಮುಸ್ಲಿಮೇತರರ ಕುರಿತು ಮಾತ್ರ ಇಲ್ಲಿ ಸೂಚಿಸಲಾಗಿದೆ. ಹಾಗಲ್ಲದೇ 60ನೇ ಅಧ್ಯಾಯದ 9, 10ನೇ ವಚನಗಳಿಗೆ ವಿರುದ್ಧವಾಗಿ ಇಲ್ಲಿ ಅರ್ಥ ಕಲ್ಪಿಸಬಾರದು. ಮೇಲಿನ ವಚನದ ಉತ್ತರ ಭಾಗ ಈ ವಿಚಾರವನ್ನು ಸ್ಪಷ್ಟಪಡಿಸುತ್ತದೆ.





تَصْبِرُوا وَتَتَّقُوا لَا يَضُرُّكُمْ
كَيْدُهُمْ شَيْـًٔا ۗ إِنَّ اللَّهَ بِمَا يَعْمَلُونَ
مُحِيطٌ ﴿١٢١﴾

ಭಕ್ತಿಯುಳ್ಳವರೂ ಆಗಿದ್ದರೆ ಅವರ ಕುತಂತ್ರಗಳೇನೂ ನಿಮಗೆ ಹಾನಿಯುಂಟುಮಾಡಲಿಕ್ಕಿಲ್ಲ. ಖಂಡಿತ ವಾಗಿಯೂ ಅವರ ಚಟುವಟಿಕೆಗಳನ್ನೆಲ್ಲ ಅಲ್ಲಾಹನು ಸುತ್ತುವರಿದಿದ್ದಾನೆ.[115]

وَإِذْ غَدَوْتَ مِنْ أَهْلِكَ تُبَوِّئُ
الْمُؤْمِنِينَ مَقَٰعِدَ لِلْقِتَالِ ۗ وَاللَّهُ
سَمِيعٌ عَلِيمٌ ﴿١٢٢﴾

**122.** ಯುದ್ಧಕ್ಕಾಗಿ ಸತ್ಯವಿಶ್ವಾಸಿಗಳನ್ನು (ಅವರ) ನಿಶ್ಚಿತ ಸ್ಥಳಗಳಲ್ಲಿ ಅಣಿಗೊಳಿಸಲಿಕ್ಕಾಗಿ ನೀನು ಮುಂಜಾವದಲ್ಲಿ ನಿನ್ನ ಕುಟುಂಬದ ಬಳಿಯಿಂದ ಹೊರಟು ಹೋದ ಸಂದರ್ಭ[116] (ಜ್ಞಾಪಿಸು). ಅಲ್ಲಾಹನು (ನಿನ್ನ ಪ್ರಾರ್ಥನೆಗಳನ್ನು) ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

إِذْ هَمَّت طَّآئِفَتَانِ مِنكُمْ أَن تَفْشَلَا
وَاللَّهُ وَلِيُّهُمَا ۗ وَعَلَى اللَّهِ
فَلْيَتَوَكَّلِ الْمُؤْمِنُونَ ﴿١٢٣﴾

**123.** ನಿಮ್ಮಲ್ಲಿ ಎರಡು ಗುಂಪುಗಳು[117] ಹೇಡಿತನವನ್ನು ತೋರಿಸಲು ಯೋಚಿಸಿದ ಸಂದರ್ಭ (ಜ್ಞಾಪಿಸು). ಆದಾಗ್ಯೂ ಅಲ್ಲಾಹನು ಆ ಎರಡು ಗುಂಪುಗಳ ಮಿತ್ರನಾಗಿದ್ದನು. ಸತ್ಯವಿಶ್ವಾಸಿಗಳು (ಎಲ್ಲಾ ಕಾರ್ಯಗಳಲ್ಲೂ) ಅಲ್ಲಾಹನ ಮೇಲೆಯೇ ಭರವಸೆಯನ್ನಿಡಬೇಕಾಗಿದೆ.

وَلَقَدْ نَصَرَكُمُ اللَّهُ بِبَدْرٍ وَأَنتُمْ
أَذِلَّةٌ ۖ فَاتَّقُوا اللَّهَ لَعَلَّكُمْ
تَشْكُرُونَ ﴿١٢٤﴾

**124.** ನೀವು (ಇದಕ್ಕೆ ಮುಂಚೆ) ಬಲಹೀನರಾಗಿದ್ದಾಗ 'ಬದ್ರ್'ನಲ್ಲಿ ಅಲ್ಲಾಹನು ನಿಮಗೆ ಸಹಾಯ ಮಾಡಿದ್ದಾನೆ. ಆದ್ದರಿಂದ ನೀವು ಅಲ್ಲಾಹನ ಭಯಭಕ್ತಿಯಿರಿಸಿಕೊಳ್ಳಿರಿ- ನೀವು ಕೃತಜ್ಞತೆ ತೋರಿಸುವವರಾಗಲಿಕ್ಕಾಗಿ.

إِذْ تَقُولُ لِلْمُؤْمِنِينَ أَلَن يَكْفِيَكُمْ
أَن يُمِدَّكُمْ رَبُّكُم بِثَلَٰثَةِ ءَالَٰفٍ مِّنَ
الْمَلَٰٓئِكَةِ مُنزَلِينَ ﴿١٢٥﴾

**125.** 'ನಿಮ್ಮ ಪ್ರಭು ಮೂರು ಸಾವಿರ ದೇವದೂತರನ್ನು ಇಳಿಸಿ ನಿಮಗೆ ಸಹಾಯ ಮಾಡಿದ್ದು ಸಾಲದೇ?' ಎಂದು ನೀನು ಸತ್ಯವಿಶ್ವಾಸಿಗಳೊಡನೆ ಕೇಳಿದ ಸಂದರ್ಭ (ಜ್ಞಾಪಿಸು).

115. 'ಅಹಾತ' - ಸುತ್ತುವರಿ, ಸುತ್ತಗಟ್ಟು, ನಿರ್ಮೂಲನ ಮಾಡು ಎಂದು ಸಹ ಅರ್ಥವಿದೆ.

116. ಉಹ್‌ದ್ ಯುದ್ಧದ ಬಗ್ಗೆ ಇಲ್ಲಿ ಹೇಳಲಾಗಿದೆ.

117. ಖಜ್‌ರಜ್ ಗೋತ್ರದ ಬನೂ ಸಲಿಮ ಮತ್ತು ಔಸ್ ಗೋತ್ರದ ಬನೂ ಹಾರಿಸ ಎಂಬ ಎರಡು ಗುಂಪುಗಳು.

**126.** ಹೌದು, ನೀವು ಸ್ಥಿರಚಿತ್ತರೂ ಭಯಭಕ್ತಿಯುಳ್ಳವರೂ ಆದರೆ, ಅವರು (ಶತ್ರುಗಳು) ನಿಮ್ಮ ಮೇಲೆ ಹಠಾತ್ ಆಕ್ರಮಿಸಿದರೆ, ಪ್ರಚಂಡ ಪರಾಕ್ರಮಶಾಲಿಗಳಾದ ಐದು ಸಾವಿರ ದೇವದೂತರಿಂದ ನಿಮ್ಮ ಪ್ರಭು ನಿಮಗೆ ಸಹಾಯ ಮಾಡುವನು.

بَلٰٓى ۙ اِنْ تَصْبِرُوْا وَتَتَّقُوْا وَيَاْتُوْكُمْ
مِّنْ فَوْرِهِمْ هٰذَا يُمْدِدْكُمْ رَبُّكُمْ
بِخَمْسَةِ اٰلٰفٍ مِّنَ الْمَلٰٓئِكَةِ
مُسَوِّمِيْنَ ﴿١٢٥﴾

**127.** ನಿಮಗೆ ಶುಭ ಸಂದೇಶವಾಗಿಯೂ ನಿಮ್ಮ ಮನಃಸಮಾಧಾನಕ್ಕಾಗಿಯೂ ಮಾತ್ರವೇ ಅಲ್ಲಾಹನು ಹೀಗೆ ಮಾಡಿದ್ದಾನೆ. ವಾಸ್ತವದಲ್ಲಿ, ಪ್ರತಾಪವಂತನೂ ಬುದ್ಧಿಶಾಲಿಯೂ ಆದ ಅಲ್ಲಾಹನಿಂದ ಹೊರತು ಸಹಾಯ ಸಿಗಲಾರದು.

وَمَا جَعَلَهُ اللّٰهُ اِلَّا بُشْرٰى لَكُمْ وَ
لِتَطْمَئِنَّ قُلُوْبُكُمْ بِهٖ ۗ وَمَا النَّصْرُ
اِلَّا مِنْ عِنْدِ اللّٰهِ الْعَزِيْزِ الْحَكِيْمِ ﴿١٢٦﴾

**128.** (ಇದು) ಅವನು (ಅಲ್ಲಾಹನು) ಅವಿಶ್ವಾಸಿಗಳ ಒಂದು ತಂಡವನ್ನು ಛೇದಿಸಲಿಕ್ಕೆ ಅಥವಾ ಅವರು ಪರಾಜಿತರಾಗಿ ಮರಳಿ ಹೋಗುವ ರೀತಿಯಲ್ಲಿ ಅವರನ್ನು ನಿಂದಿಸಲಿಕ್ಕಾಗಿ.

لِيَقْطَعَ طَرَفًا مِّنَ الَّذِيْنَ كَفَرُوْٓا اَوْ
يَكْبِتَهُمْ فَيَنْقَلِبُوْا خَآئِبِيْنَ ﴿١٢٧﴾

**129.** ಈ ವಿಚಾರ ನಿನಗೇನೂ ಸಂಬಂಧಪಟ್ಟದ್ದಲ್ಲ (ಇದು ಅಲ್ಲಾಹನ ತೀರ್ಮಾನಕ್ಕೆ ಬಿಟ್ಟದ್ದು). ಒಂದು ವೇಳೆ ಅವನು ಅವರ ಮೇಲೆ ಕರುಣೆ ತೋರಿಸುವನು; ಅಥವಾ ಅವರು ಅಧರ್ಮಿಗಳಾದ ಕಾರಣ ಅವರನ್ನು ಶಿಕ್ಷಿಸುವನು.

لَيْسَ لَكَ مِنَ الْاَمْرِ شَيْءٌ اَوْ يَتُوْبَ
عَلَيْهِمْ اَوْ يُعَذِّبَهُمْ فَاِنَّهُمْ ظٰلِمُوْنَ ﴿١٢٨﴾

**130.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲ ಅಲ್ಲಾಹನದ್ದಾಗಿವೆ. ತಾನು ಬಯಸುವವರಿಗೆ ಅವನು ಕ್ಷಮೆ ನೀಡುತ್ತಾನೆ; ತಾನು ಬಯಸುವವರನ್ನು ಅವನು ಶಿಕ್ಷಿಸುತ್ತಾನೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَلِلّٰهِ مَا فِى السَّمٰوٰتِ وَمَا فِى الْاَرْضِ ۗ
يَغْفِرُ لِمَنْ يَّشَآءُ وَيُعَذِّبُ مَنْ يَّشَآءُ ۗ وَ
اللّٰهُ غَفُوْرٌ رَّحِيْمٌ ﴿١٢٩﴾

**131.** ಎಲೈ ವಿಶ್ವಾಸಿಗಳೇ, (ಧನವನ್ನು) ಹಲವು ಪಟ್ಟು ವೃದ್ಧಿಗೊಳಿಸುವ ಬಡ್ಡಿಯನ್ನು ನೀವು ತಿನ್ನಬಾರದು.[118] ನೀವು ವಿಜಯಶಾಲಿಗಳಾಗಲಿಕ್ಕೆ ಅಲ್ಲಾಹನ ಭಯವಿರಿಸಿಕೊಳ್ಳಿರಿ.

يٰٓاَيُّهَا الَّذِيْنَ اٰمَنُوْا لَا تَاْكُلُوا
الرِّبٰوٓا اَضْعَافًا مُّضٰعَفَةً ۖ وَّاتَّقُوا
اللّٰهَ لَعَلَّكُمْ تُفْلِحُوْنَ ﴿١٣٠﴾

118. ಬಡ್ಡಿಯು ಸುಲಭವಾಗಿ ಧನವನ್ನು ವೃದ್ಧಿಗೊಳಿಸುತ್ತದೆ. ಆದ್ದರಿಂದ ದುಡಿಮೆಯಿಲ್ಲದೆ ಸಂಪತ್ತನ್ನು ಹೆಚ್ಚಿಸುವ ಬಡ್ಡಿಯನ್ನು ತಿನ್ನಬಾರದು ಎಂದು ತಾತ್ಪರ್ಯ.





**132.** ಅವಿಶ್ವಾಸಿಗಳಿಗೋಸ್ಕರ ಸಿದ್ಧಗೊಳಿಸಿರುವ ಅಗ್ನಿಯ ಬಗ್ಗೆ ಜಾಗರೂಕರಾಗಿರಿ.

وَاتَّقُوا النَّارَ الَّتِيْٓ اُعِدَّتْ لِلْكٰفِرِيْنَ ﴿١٣١﴾

**133.** ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕಾಗಿ ಅಲ್ಲಾಹನನ್ನೂ ಈ ಪ್ರವಾದಿಯನ್ನೂ ಅನುಸರಿಸಿರಿ.

وَاَطِيْعُوا اللّٰهَ وَالرَّسُوْلَ لَعَلَّكُمْ
تُرْحَمُوْنَ ﴿١٣٢﴾

**134.** ನಿಮ್ಮ ಪ್ರಭುವಿನಿಂದ ಲಭಿಸುವ ಕ್ಷಮಾದಾನದ ಕಡೆಗೂ ಆಕಾಶಗಳೂ ಭೂಮಿಯೂ ಬೆಲೆಬಾಳುವಷ್ಟರ ಸ್ವರ್ಗದ ಕಡೆಗೂ ನೀವು ಧಾವಿಸಿರಿ- ಅಲ್ಲಾಹನ ಭಯವಿರಿಸಿಕೊಂಡವರಿಗೆ ಅದನ್ನು ಸಿದ್ಧಗೊಳಿಸಿಡಲಾಗಿದೆ.

وَسَارِعُوْٓا اِلٰى مَغْفِرَةٍ مِّنْ رَّبِّكُمْ وَ
جَنَّةٍ عَرْضُهَا السَّمٰوٰتُ وَالْاَرْضُ ۙ
اُعِدَّتْ لِلْمُتَّقِيْنَ ﴿١٣٣﴾

**135.** ಅವರು (ಆ ಸಜ್ಜನರು) ಏಳಿಗೆಯ ಕಾಲದಲ್ಲೂ ಕಷ್ಟಕಾಲದಲ್ಲೂ ದೇವಮಾರ್ಗದಲ್ಲಿ ಧನವನ್ನು ಖರ್ಚುಮಾಡುವವರೂ ಕೋಪವನ್ನು ನಿಯಂತ್ರಿಸುವವರೂ ಜನರಿಗೆ ಕ್ಷಮೆ ನೀಡುವವರೂ ಆಗಿದ್ದಾರೆ. ಸಜ್ಜನರನ್ನು ಅಲ್ಲಾಹನು ಇಷ್ಟಪಡುತ್ತಾನೆ.

اَلَّذِيْنَ يُنْفِقُوْنَ فِى السَّرَّآءِ وَالضَّرَّآءِ
وَالْكٰظِمِيْنَ الْغَيْظَ وَالْعَافِيْنَ عَنِ
النَّاسِ ۗ وَاللّٰهُ يُحِبُّ الْمُحْسِنِيْنَ ﴿١٣٤﴾

**136.** ಅವರು ತಾವೇನಾದರೂ ನೀಚ ಕೃತ್ಯ ಎಸಗಿದರೆ ಅಥವಾ ತಮ್ಮ ಆತ್ಮಗಳೊಡನೆ ಅಕ್ರಮವಾಗಿ ವರ್ತಿಸಿದರೆ ಅಲ್ಲಾಹನನ್ನು ಸ್ಮರಿಸಿ ತಮ್ಮ ಪಾಪಕೃತ್ಯಕ್ಕೆ ಕ್ಷಮೆ ಯಾಚಿಸುವವರೂ - ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸುವವರು ಬೇರೆ ಯಾರಿದ್ದಾರೆ? - ಮಾಡಿದ ಕೃತ್ಯಗಳಲ್ಲಿ ಪ್ರಜ್ಞಾಪೂರ್ವಕ ಪಟ್ಟುಹಿಡಿದು ನಡೆಯದವರೂ ಆಗಿದ್ದಾರೆ.

وَالَّذِيْنَ اِذَا فَعَلُوْا فَاحِشَةً اَوْ ظَلَمُوْٓا
اَنْفُسَهُمْ ذَكَرُوا اللّٰهَ فَاسْتَغْفَرُوْا
لِذُنُوْبِهِمْ ۗ وَمَنْ يَّغْفِرُ الذُّنُوْبَ
اِلَّا اللّٰهُ ۗ وَلَمْ يُصِرُّوْا عَلٰى مَا فَعَلُوْا
وَهُمْ يَعْلَمُوْنَ ﴿١٣٥﴾

**137.** ಅವರಿಗಿರುವ ಪ್ರತಿಫಲವೇನೆಂದರೆ ಅವರ ಪ್ರಭುವಿನಿಂದ ಪಾಪವಿಮುಕ್ತಿ ಮತ್ತು ಕೆಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳು. ಅಲ್ಲಿ ಅವರು ನಿತ್ಯ ವಾಸಿಸುವರು. (ಸತ್) ಕಾರ್ಯಶೀಲರಿಗೆ ಪ್ರತಿಫಲ ಎಷ್ಟು ಉತ್ತಮ!

اُولٰٓئِكَ جَزَآؤُهُمْ مَّغْفِرَةٌ مِّنْ رَّبِّهِمْ
وَجَنّٰتٌ تَجْرِيْ مِنْ تَحْتِهَا الْاَنْهٰرُ
خٰلِدِيْنَ فِيْهَا ۗ وَنِعْمَ اَجْرُ الْعٰمِلِيْنَ ﴿١٣٦﴾

**138.** ನಿಮಗಿಂತ ಮೊದಲು ಹಲವು ಧರ್ಮ ಸಂಪ್ರದಾಯಗಳು ಗತಿಸಿವೆ. ನೀವು ಭೂಮಿಯಲ್ಲಿ

قَدْ خَلَتْ مِنْ قَبْلِكُمْ سُنَنٌ ۙ فَسِيْرُوْا

ಸಂಚರಿಸಿರಿ ಮತ್ತು ಸತ್ಯವನ್ನು ಅಲ್ಲಗಳೆದವರ ಅಂತ್ಯ ಹೇಗಾಯಿತೆಂದು ಕಾಣಿರಿ.

فِي الْأَرْضِ فَانْظُرُوا كَيْفَ كَانَ عَاقِبَةُ الْمُكَذِّبِينَ ﴿١٣٧﴾

**139.** ಇದು (ಖುರ್‌ಆನ್) ಜನರಿಗೆ ಸ್ಪಷ್ಟವಾದ ವಿವರಣೆಯೂ ದೇವಭಯವಿರಿಸಿಕೊಂಡವರಿಗೆ ಮಾರ್ಗದರ್ಶನ ಹಾಗೂ ಉಪದೇಶವೂ ಆಗಿದೆ.

هَٰذَا بَيَانٌ لِلنَّاسِ وَهُدًى وَمَوْعِظَةٌ لِلْمُتَّقِينَ ﴿١٣٨﴾

**140.** ನೀವು ಬಲಹೀನತೆಯನ್ನು ತೋರಿಸಬೇಡಿರಿ; ದುಃಖಿಸಬೇಡಿರಿ. ನೀವು ಸತ್ಯವಿಶ್ವಾಸಿಗಳೆಂದಾದರೆ ಖಂಡಿತವಾಗಿಯೂ ನಿಮಗೆ ಮೇಲುಗೈ ಆಗುವುದು.

وَلَا تَهِنُوا وَلَا تَحْزَنُوا وَأَنْتُمُ الْأَعْلَوْنَ إِنْ كُنْتُمْ مُؤْمِنِينَ ﴿١٣٩﴾

**141.** ನಿಮಗೇನಾದರೂ ಘಾಸಿಯಾಗಿದ್ದರೆ (ಶತ್ರು) ಜನರಿಗೂ ಅದೇ ರೀತಿಯ ಘಾಸಿಯಾಗಿದೆ. ಇಂತಹ (ವಿಜಯದ) ದಿನಗಳನ್ನು ನಾವು ಜನರೆಡೆಯಲ್ಲಿ ಬದಲಾಯಿಸುತ್ತಲಿರುತ್ತೇವೆ. ಇದು ವಿಶ್ವಾಸಿಗಳಾದ ಜನರನ್ನು ಅಲ್ಲಾಹನು (ಬೇರ್ಪಡಿಸಿ) ತೋರಿಸಲಿಕ್ಕೆ ಮತ್ತು ನಿಮ್ಮಲ್ಲಿ ಕೆಲವರನ್ನು ಸಾಕ್ಷಿಗಳನ್ನಾಗಿ ಮಾಡಲಿಕ್ಕಾಗಿದೆ. ಅಲ್ಲಾಹನು ಅಧರ್ಮಿಗಳನ್ನು ಇಷ್ಟಪಡುವುದಿಲ್ಲ.

إِنْ يَمْسَسْكُمْ قَرْحٌ فَقَدْ مَسَّ الْقَوْمَ قَرْحٌ مِثْلُهُ ۚ وَتِلْكَ الْأَيَّامُ نُدَاوِلُهَا بَيْنَ النَّاسِ وَلِيَعْلَمَ اللَّهُ الَّذِينَ آمَنُوا وَيَتَّخِذَ مِنْكُمْ شُهَدَاءَ ۗ وَاللَّهُ لَا يُحِبُّ الظَّالِمِينَ ﴿١٤٠﴾

**142.** ಇದು, ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಪರಿಶುದ್ಧಗೊಳಿಸಲಿಕ್ಕೂ ಅವಿಶ್ವಾಸಿಗಳನ್ನು ನಿರ್ಮೂಲನ ಮಾಡಲಿಕ್ಕೂ ಆಗಿದೆ.

وَلِيُمَحِّصَ اللَّهُ الَّذِينَ آمَنُوا وَيَمْحَقَ الْكَافِرِينَ ﴿١٤١﴾

**143.** ಅಲ್ಲಾಹನು ನಿಮ್ಮ ಪೈಕಿ (ಅವನ ಮಾರ್ಗದಲ್ಲಿ) ಅತಿಯಾಗಿ ಪರಿಶ್ರಮಿಸುವವರನ್ನೂ ಸಹನಶೀಲರನ್ನೂ ಗುರುತಿಸದೆಯೇ ನೀವು ಸ್ವರ್ಗದಲ್ಲಿ ಪ್ರವೇಶಿಸುವಿರೆಂದು ಭಾವಿಸುತ್ತೀರಾ?

أَمْ حَسِبْتُمْ أَنْ تَدْخُلُوا الْجَنَّةَ وَلَمَّا يَعْلَمِ اللَّهُ الَّذِينَ جَاهَدُوا مِنْكُمْ وَيَعْلَمَ الصَّابِرِينَ ﴿١٤٢﴾

**144.** ನೀವು ಮರಣವನ್ನು ಎದುರುಗೊಳ್ಳುವುದಕ್ಕೆ ಮುಂಚೆ ಅದನ್ನು ಕಾಣಲು ನೀವು ಬಯಸುತ್ತಿದ್ದಿರಿ.[119] ಈಗ ಅದು ನಿಮ್ಮ ಎದುರು ಬಂದಿರುತ್ತದೆ ಹಾಗೂ ನೀವು ಅದನ್ನು ಕಾಣುತ್ತಿದ್ದೀರಿ.

وَلَقَدْ كُنْتُمْ تَمَنَّوْنَ الْمَوْتَ مِنْ قَبْلِ أَنْ تَلْقَوْهُ فَقَدْ رَأَيْتُمُوهُ وَأَنْتُمْ تَنْظُرُونَ ﴿١٤٣﴾

119. ಜಿಹಾದ್ (ಧರ್ಮಯುದ್ಧ)ನಲ್ಲಿ ಭಾಗವಹಿಸಲಿಕ್ಕೂ ಹುತಾತ್ಮರಾಗಲಿಕ್ಕೂ ನೀವು ಬಯಸುತ್ತಿದ್ದಿರಿ ಎಂದು ತಾತ್ಪರ್ಯ.





**145.** ಮುಹಮ್ಮದ್ ಕೇವಲ ಓರ್ವ ಸಂದೇಶವಾಹಕರಾಗಿದ್ದಾರೆ. ಅವರಿಗಿಂತ ಹಿಂದಿನ ಎಲ್ಲ ಸಂದೇಶವಾಹಕರೂ ಗತಿಸಿದ್ದಾರೆ. ಒಂದು ವೇಳೆ ಅವರು (ಮುಹಮ್ಮದ್) ಮೃತಪಟ್ಟರೆ ಅಥವಾ ಹತ್ಯೆಗೀಡಾದರೆ ನೀವು ಹಿಂತಿರುಗಿ ಹೋಗುವಿರಾ? ಹಿಂತಿರುಗಿ ಹೋಗುವವನು ಅಲ್ಲಾಹನಿಗೆ ಏನೂ ಹಾನಿಯುಂಟು ಮಾಡಲಾರ. ಕೃತಜ್ಞತೆ ಸೂಚಿಸುವವರಿಗೆ ಅಲ್ಲಾಹನು ಖಂಡಿತವಾಗಿಯೂ ಪ್ರತಿಫಲ ನೀಡುತ್ತಾನೆ.

وَمَا مُحَمَّدٌ إِلَّا رَسُولٌ قَدْ خَلَتْ مِنْ قَبْلِهِ الرُّسُلُ ۚ أَفَإِنْ مَاتَ أَوْ قُتِلَ انْقَلَبْتُمْ عَلَىٰ أَعْقَابِكُمْ ۚ وَمَنْ يَنْقَلِبْ عَلَىٰ عَقِبَيْهِ فَلَنْ يَضُرَّ اللَّهَ شَيْئًا ۗ وَسَيَجْزِي اللَّهُ الشَّاكِرِينَ ﴿١٤٤﴾

**146.** ಅಲ್ಲಾಹನ ಅನುಜ್ಞೆ ವಿನಾ ಯಾರಿಗೂ ಮರಣ ಹೊಂದಲಿಕ್ಕಾಗದು. ಅದೊಂದು ನಿರ್ದಿಷ್ಟ ವಿಧಿಯಾಗಿದೆ. ಈ ಲೋಕದಲ್ಲಿ ಪ್ರತಿಫಲವನ್ನು ಬಯಸುವವನಿಗೆ ನಾವು ಅದರಿಂದ ನೀಡುವೆವು ಹಾಗೂ ಪರಲೋಕದ ಪ್ರತಿಫಲವನ್ನು ಬಯಸುವವನಿಗೆ ನಾವು ಅದರಿಂದ ನೀಡುವೆವು. ಕೃತಜ್ಞತೆ ತೋರಿಸುವವರಿಗೆ ನಾವು ಖಂಡಿತವಾಗಿಯೂ ಪ್ರತಿಫಲವನ್ನು ನೀಡುವೆವು.

وَمَا كَانَ لِنَفْسٍ أَنْ تَمُوتَ إِلَّا بِإِذْنِ اللَّهِ كِتَابًا مُؤَجَّلًا ۗ وَمَنْ يُرِدْ ثَوَابَ الدُّنْيَا نُؤْتِهِ مِنْهَا وَمَنْ يُرِدْ ثَوَابَ الْآخِرَةِ نُؤْتِهِ مِنْهَا ۚ وَسَنَجْزِي الشَّاكِرِينَ ﴿١٤٥﴾

**147.** ಎಷ್ಟೊಂದು ಪ್ರವಾದಿಗಳು! ಅವರೊಂದಿಗೆ ಸೇರಿಕೊಂಡು ದೇವಭಕ್ತರಾದ ಅನುಯಾಯಿಗಳು ಯುದ್ಧ ಮಾಡಿದ್ದಾರೆ. ಅಲ್ಲಾಹನ ಮಾರ್ಗದಲ್ಲಿ ಅವರಿಗೆದುರಾದ ಅಡೆತಡೆಗಳ ಕಾರಣದಿಂದ ಅವರಿಗೆ ಅಧೈರ್ಯವುಂಟಾಗಲಿಲ್ಲ; ಅವರು ಶಕ್ತಿಗುಂದಲಿಲ್ಲ; ಹಾಗೂ ಅವರು (ಶತ್ರುಗಳ ಮುಂದೆ) ತಲೆತಗ್ಗಿಸಲಿಲ್ಲ. ಸ್ಥಿರಚಿತ್ತರಾಗಿ ಉಳಿಯುವವರನ್ನು ಅಲ್ಲಾಹನು ಪ್ರೀತಿಸುತ್ತಾನೆ.

وَكَأَيِّنْ مِنْ نَبِيٍّ قَاتَلَ مَعَهُ رِبِّيُّونَ كَثِيرٌ فَمَا وَهَنُوا لِمَا أَصَابَهُمْ فِي سَبِيلِ اللَّهِ وَمَا ضَعُفُوا وَمَا اسْتَكَانُوا ۗ وَاللَّهُ يُحِبُّ الصَّابِرِينَ ﴿١٤٦﴾

**148.** ಅವರ ಮಾತು (ಪ್ರಾರ್ಥನೆ) ಹೀಗೆ ಹೇಳುವುದರ ಹೊರತು ಬೇರೇನೂ ಆಗಿರಲಿಲ್ಲ: 'ನಮ್ಮ ಪ್ರಭೂ, ನಮ್ಮ ಪಾಪಗಳನ್ನೂ ನಮ್ಮ ವರ್ತನೆಯಲ್ಲುಂಟಾದ ಅತಿರೇಕವನ್ನೂ ಕ್ಷಮಿಸು; ನಮ್ಮ ಹೆಜ್ಜೆಗಳನ್ನು ದೃಢಪಡಿಸು ಹಾಗೂ ಅವಿಶ್ವಾಸಿ ಗಳಿಗೆದುರಾಗಿ ನೀನು ನಮಗೆ ಸಹಾಯ ಮಾಡು.'

وَمَا كَانَ قَوْلَهُمْ إِلَّا أَنْ قَالُوا رَبَّنَا اغْفِرْ لَنَا ذُنُوبَنَا وَإِسْرَافَنَا فِي أَمْرِنَا وَثَبِّتْ أَقْدَامَنَا وَانْصُرْنَا عَلَى الْقَوْمِ الْكَافِرِينَ ﴿١٤٧﴾

**149.** ಆಗ ಅಲ್ಲಾಹನು ಅವರಿಗೆ ಐಹಿಕ ಪ್ರತಿಫಲವನ್ನೂ ಪರಲೋಕದ ಅತ್ಯುತ್ತಮವಾದ ಪ್ರತಿಫಲವನ್ನೂ ನೀಡಿದನು. ಅಲ್ಲಾಹನು ಸಜ್ಜನರನ್ನು ಪ್ರೀತಿಸುತ್ತಾನೆ.

فَاٰتٰىهُمُ اللّٰهُ ثَوَابَ الدُّنْيَا وَحُسْنَ ثَوَابِ الْاٰخِرَةِ ؕ وَاللّٰهُ يُحِبُّ الْمُحْسِنِيْنَ ﴿١٤٨﴾

**150.** ಎಲೈ ವಿಶ್ವಾಸಿಗಳೇ, ನೀವು ಅವಿಶ್ವಾಸಿಗಳನ್ನು ಅನುಸರಿಸಿದರೆ, ಅವರು ನಿಮ್ಮನ್ನು ಪೂರ್ವಸ್ಥಿತಿಗೆ ಮರಳಿಸುವರು; ಹಾಗೆ ನೀವು ನಷ್ಟಹೊಂದಿದವರಾಗುವಿರಿ.

يٰۤاَيُّهَا الَّذِيْنَ اٰمَنُوْۤا اِنْ تُطِيْعُوا الَّذِيْنَ كَفَرُوْا يَرُدُّوْكُمْ عَلٰۤى اَعْقَابِكُمْ فَتَنْقَلِبُوْا خٰسِرِيْنَ ﴿١٤٩﴾

**151.** ಆದರೆ ಅಲ್ಲಾಹನು ನಿಮ್ಮ ಸಂರಕ್ಷಕನಾಗಿದ್ದಾನೆ. ಅವನು ಸಹಾಯಕರಲ್ಲಿ ಅತ್ಯುತ್ತಮನೂ ಆಗಿದ್ದಾನೆ.

بَلِ اللّٰهُ مَوْلٰىكُمْ ۚ وَهُوَ خَيْرُ النّٰصِرِيْنَ ﴿١٥٠﴾

**152.** ಯಾವುದರ ಬಗ್ಗೆ ಏನೊಂದು ಆಧಾರ-ಪ್ರಮಾಣವನ್ನೂ ಅವನು (ಅಲ್ಲಾಹನು) ಅವತೀರ್ಣಗೊಳಿಸಿಲ್ಲವೋ ಅಂತಹವುಗಳನ್ನು ಅಲ್ಲಾಹನಿಗೆ ಅವರು ಸಹಭಾಗಿಗಳಾಗಿ ಮಾಡಿರುವುದರಿಂದ ಅವಿಶ್ವಾಸಿಗಳ ಹೃದಯಗಳಲ್ಲಿ ನಾವು ಭಯ ಹುಟ್ಟಿಸುವೆವು. ಅವರ ವಾಸಸ್ಥಳ ನರಕವಾಗಿದೆ. ದುಷ್ಕರ್ಮಿಗಳ ವಾಸ ಸ್ಥಳ ಬಹಳ ಕೆಟ್ಟದ್ದಾಗಿದೆ.

سَنُلْقِيْ فِيْ قُلُوْبِ الَّذِيْنَ كَفَرُوا الرُّعْبَ بِمَاۤ اَشْرَكُوْا بِاللّٰهِ مَا لَمْ يُنَزِّلْ بِهٖ سُلْطٰنًا ۚ وَمَاْوٰىهُمُ النَّارُ ؕ وَبِئْسَ مَثْوَى الظّٰلِمِيْنَ ﴿١٥١﴾

**153.** ಅಲ್ಲಾಹನ ಆಣತಿಯಂತೆ ನೀವು ಅವರನ್ನು ಕೊಂದು ನಿರ್ನಾಮ ಮಾಡುತ್ತಿದ್ದಾಗ, ಅವನು ತನ್ನ ವಾಗ್ದಾನಗಳನ್ನು ನಿಮಗೆ ಪೂರೈಸಿಕೊಟ್ಟನು. ಹಾಗೆ ನೀವು ಇಷ್ಟಪಡುವುದನ್ನು ಅವನು ನಿಮಗೆ ತೋರಿಸಿಕೊಟ್ಟ ಬಳಿಕ ನೀವು ಆಲಸಿಗರಾಗಿ (ಪ್ರವಾದಿ ನಿಮಗೆ ನೀಡಿದ) ಆದೇಶದ ಬಗ್ಗೆ ಪರಸ್ಪರ ಭಿನ್ನಾಭಿಪ್ರಾಯವನ್ನು ಹೊಂದಿ ಅವಿಧೇಯತೆ ತೋರಿಸತೊಡಗಿದಾಗ (ಅವನು ತನ್ನ ಸಹಾಯವನ್ನು ಹಿಂದೆಗೆದನು). ನಿಮ್ಮಲ್ಲಿ ಕೆಲವರು ಈ ಲೋಕವನ್ನು ಬಯಸುವವರಾಗಿದ್ದರು ಹಾಗೂ ನಿಮ್ಮಲ್ಲಿ ಕೆಲವರು ಪರಲೋಕವನ್ನು ಬಯಸುವವರಾಗಿದ್ದರು. ಆ ಬಳಿಕ ಅವನು ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ಅವರಿಂದ ನಿಮ್ಮನ್ನು ದೂರಸರಿಸಿದನು (ಶತ್ರುಗಳ ಆಕ್ರಮಣದಿಂದ ರಕ್ಷಿಸಿದನು). ಖಂಡಿತವಾಗಿಯೂ ಅವನು ನಿಮ್ಮನ್ನು ಕ್ಷಮಿಸಿದ್ದಾನೆ. ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಅತ್ಯಧಿಕ ಔದಾರ್ಯ ತೋರಿಸುವವನಾಗಿದ್ದಾನೆ.

وَلَقَدْ صَدَقَكُمُ اللّٰهُ وَعْدَهٗۤ اِذْ تَحُسُّوْنَهُمْ بِاِذْنِهٖ ۚ حَتّٰۤى اِذَا فَشِلْتُمْ وَتَنَازَعْتُمْ فِى الْاَمْرِ وَعَصَيْتُمْ مِّنْۢ بَعْدِ مَاۤ اَرٰىكُمْ مَّا تُحِبُّوْنَ ؕ مِنْكُمْ مَّنْ يُّرِيْدُ الدُّنْيَا وَمِنْكُمْ مَّنْ يُّرِيْدُ الْاٰخِرَةَ ۚ ثُمَّ صَرَفَكُمْ عَنْهُمْ لِيَبْتَلِيَكُمْ ۚ وَلَقَدْ عَفَا عَنْكُمْ ؕ وَاللّٰهُ ذُوْ فَضْلٍ عَلَى الْمُؤْمِنِيْنَ ﴿١٥٢﴾





**154.** ಪ್ರವಾದಿ ನಿಮ್ಮನ್ನು ಹಿಂದಿನಿಂದ ಕರೆಯುತ್ತಿದ್ದಾಗ ನೀವು ಯಾರನ್ನೂ ತಿರುಗಿ ನೋಡದೆ ದೂರಕ್ಕೆ ಓಡಿಹೋಗುತ್ತಿದ್ದ ಸಂದರ್ಭ. ಆಗ ಅವನು ನಿಮಗೆ ಒಂದು ದುಃಖದ ಬದಲಿಗೆ ಇನ್ನೊಂದು ದುಃಖವನ್ನು ಕೊಟ್ಟನು. ಇದು, ನಿಮ್ಮ ಗಳಿಕೆಗಳು ನಿಮಗೆ ನಷ್ಟವಾದ ಬಗ್ಗೆ ಹಾಗೂ ನಿಮಗೆ ಬಂದ ದುಃಖದ ಕುರಿತು ನೀವು ಮರುಗದಿರಲಿಕ್ಕಾಗಿದೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

اِذْ تُصْعِدُوْنَ وَلَا تَلْوٗنَ عَلٰۤى اَحَدٍ وَّالرَّسُوْلُ يَدْعُوْكُمْ فِيْۤ اُخْرٰىكُمْ فَاَثَابَكُمْ غَمًّاۢ بِغَمٍّ لِّكَيْلَا تَحْزَنُوْا عَلٰى مَا فَاتَكُمْ وَلَا مَاۤ اَصَابَكُمْ ؕ وَاللّٰهُ خَبِيْرٌۢ بِمَا تَعْمَلُوْنَ ﴿١٥٣﴾

**155.** ಆ ಮೇಲೆ, ದುಃಖದ ಬಳಿಕ ಅವನು ನಿಮಗೆ ಮನಃಶಾಂತಿಯನ್ನು ನೀಡಿದನು. ಎಂದರೆ ನಿಮ್ಮ ಪೈಕಿ ಒಂದು ಪಂಗಡವನ್ನು ಒಂದು ರೀತಿಯ ಮಂಪರು ಆಶ್ಲೇಷಿಸಿತು. (ಆ ಸಂದರ್ಭದಲ್ಲಿ) ಇನ್ನೊಂದು ಪಂಗಡದವರು ತಮಗೆ ಸಂಬಂಧಿಸಿದ ವಿಚಾರದಲ್ಲೇ ವ್ಯಾಕುಲರಾಗಿದ್ದರು.[120] ಅವರು ಅಲ್ಲಾಹನ ಕುರಿತು ಅಜ್ಞಾನ ಕಾಲದ ಭಾವನೆಯಂತಹ ಅಸತ್ಯ ಭಾವನೆಗಳನ್ನು ಹೊಂದಿದ್ದರು. 'ಈ ಕಾರ್ಯ ನಿರ್ವಹಣೆಯಲ್ಲಿ ನಮಗೇನಾದರೂ ಪಾಲಿದೆಯೇ?' ಎಂದು ಅವರು ಕೇಳುತ್ತಾರೆ. ಹೇಳು: 'ನಿಶ್ಚಯವಾಗಿಯೂ ಎಲ್ಲ ಅಧಿಕಾರ ಅಲ್ಲಾಹನಿಗಿದೆ.' ಅವರು (ಕಪಟ ವಿಶ್ವಾಸಿಗಳು) ಕೆಲವು ವಿಚಾರಗಳನ್ನು ನಿನಗೆ ಬಹಿರಂಗಪಡಿಸದೆ ತಮ್ಮ ಮನಸ್ಸಿನಲ್ಲಿ ಬಚ್ಚಿಡುತ್ತಾರೆ. 'ಆಡಳಿತೆಯಲ್ಲಿ ನಮಗೆ ಸಹ ಪಾಲಿರುತ್ತಿದ್ದರೆ ನಾವಿಲ್ಲಿ ಕೊಲ್ಲಲ್ಪಡುತ್ತಿರಲಿಲ್ಲ' ಎಂದು ಅವರು ಹೇಳುತ್ತಾರೆ. ಹೇಳು: 'ನೀವು ನಿಮ್ಮ ಮನೆಯಲ್ಲೇ ಇರುತ್ತಿದ್ದರೆ ಕೂಡ ಯುದ್ಧಕ್ಕೆ ಹೋಗಲು ಆಜ್ಞಾಪಿಸಲ್ಪಟ್ಟವರು ತಮ್ಮ ಮೃತ್ಯುಸ್ಥಳಕ್ಕೆ ಹೊರಟು

ثُمَّ اَنْزَلَ عَلَيْكُمْ مِّنْۢ بَعْدِ الْغَمِّ اَمَنَةً نُّعَاسًا يَّغْشٰى طَآئِفَةً مِّنْكُمْ ۙ وَطَآئِفَةٌ قَدْ اَهَمَّتْهُمْ اَنْفُسُهُمْ يَظُنُّوْنَ بِاللّٰهِ غَيْرَ الْحَقِّ ظَنَّ الْجَاهِلِيَّةِ ؕ يَقُوْلُوْنَ هَلْ لَّنَا مِنَ الْاَمْرِ مِنْ شَيْءٍ ؕ قُلْ اِنَّ الْاَمْرَ كُلَّهٗ لِلّٰهِ ؕ يُخْفُوْنَ فِيْۤ اَنْفُسِهِمْ مَّا لَا يُبْدُوْنَ لَكَ ؕ يَقُوْلُوْنَ لَوْ كَانَ لَنَا مِنَ الْاَمْرِ شَيْءٌ مَّا قُتِلْنَا هٰهُنَا ؕ قُلْ لَّوْ كُنْتُمْ فِيْ بُيُوْتِكُمْ لَبَرَزَ الَّذِيْنَ كُتِبَ عَلَيْهِمُ الْقَتْلُ اِلٰى مَضَاجِعِهِمْ ۚ وَلِيَبْتَلِيَ اللّٰهُ مَا فِيْ صُدُوْرِكُمْ وَلِيُمَحِّصَ مَا فِيْ

120. ಇಸ್ಲಾಂ ಧರ್ಮದ ಪ್ರತಿಷ್ಠೆಯ ಬಗ್ಗೆ ಯಾವ ಕಾಳಜಿಯೂ ಅವರಿಗಿರಲಿಲ್ಲ. ತಮ್ಮ ಬಗ್ಗೆ ಮಾತ್ರವೇ ಅವರಿಗೆ ಚಿಂತೆಯಿತ್ತು.

قُلُوبِكُمْ ۗ وَاللَّهُ عَلِيمٌ بِذَاتِ الصُّدُورِ ﴿١٥٤﴾

ಹೋಗುತ್ತಿದ್ದರು. ಇದು ಅಲ್ಲಾಹನು (ತನ್ನ ವಿಧಿಯನ್ನು ಜಾರಿಗೊಳಿಸಲಿಕ್ಕೂ) ನಿಮ್ಮ ಮನಸ್ಸಿನಲ್ಲಿರುವುದನ್ನು ಪರೀಕ್ಷಿಸಲಿಕ್ಕೂ ನಿಮ್ಮ ಹೃದಯಗಳಲ್ಲಿರುವ (ಮಲೀನತೆಯನ್ನು) ಶುಚೀಕರಿಸಲಿಕ್ಕೂ ಆಗಿದೆ. ಮನಸ್ಸಿನಲ್ಲಿರುವ ವಿಚಾರಗಳನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

إِنَّ الَّذِينَ تَوَلَّوْا مِنكُمْ يَوْمَ الْتَقَى الْجَمْعَانِ إِنَّمَا اسْتَزَلَّهُمُ الشَّيْطَانُ بِبَعْضِ مَا كَسَبُوا ۖ وَلَقَدْ عَفَا اللَّهُ عَنْهُمْ ۗ إِنَّ اللَّهَ غَفُورٌ حَلِيمٌ ﴿١٥٥﴾

**156.** ಆ ಎರಡು ಸೈನ್ಯಗಳು ಮುಖಾಮುಖಿ ನಿಂತ[121] ದಿನದಂದು ನಿಮ್ಮ ಪೈಕಿ ಹಿಮ್ಮೆಟ್ಟಿದವರನ್ನು ಅವರು ಮಾಡಿದ ಕೆಲವು ಕೃತ್ಯಗಳ ನಿಮಿತ್ತದಿಂದ ಶೈತಾನನು ವಿಮುಖರಾಗುವಂತೆ ಮಾಡಿದ್ದನು. ಅಲ್ಲಾಹನು ನಿಶ್ಚಯವಾಗಿಯೂ ಅವರಿಗೆ ಕ್ಷಮೆ ನೀಡಿದ್ದಾನೆ. ಅಲ್ಲಾಹನು ಕ್ಷಮೆದೋರುವವನೂ ಸಹನಶೀಲನೂ ಆಗಿದ್ದಾನೆ.

يَا أَيُّهَا الَّذِينَ آمَنُوا لَا تَكُونُوا كَالَّذِينَ كَفَرُوا وَقَالُوا لِإِخْوَانِهِمْ إِذَا ضَرَبُوا فِي الْأَرْضِ أَوْ كَانُوا غُزًّى لَّوْ كَانُوا عِندَنَا مَا مَاتُوا وَمَا قُتِلُوا لِيَجْعَلَ اللَّهُ ذَٰلِكَ حَسْرَةً فِي قُلُوبِهِمْ ۗ وَاللَّهُ يُحْيِي وَيُمِيتُ ۗ وَاللَّهُ بِمَا تَعْمَلُونَ بَصِيرٌ ﴿١٥٦﴾

**157.** ಎಲೈ ವಿಶ್ವಾಸಿಗಳೇ, ತಮ್ಮ ಸಹೋದರರು ಭೂಮಿಯಲ್ಲಿ ಸಂಚರಿಸಿದಾಗ ಅಥವಾ ಯುದ್ಧಕ್ಕೆ ಹೊರಡುವಾಗ 'ಅವರು ತಮ್ಮೊಂದಿಗಿರುತ್ತಿದ್ದರೆ ಮೃತಪಡುತ್ತಿರಲಿಲ್ಲ ಅಥವಾ ಕೊಲ್ಲಲ್ಪಡುತ್ತಿರಲಿಲ್ಲ' ಎಂದು ಹೇಳುವ ಅವಿಶ್ವಾಸಿಗಳಂತೆ ನೀವು ಆಗಬಾರದು. ಅದು (ಅವರು ಹಾಗೆ ಹೇಳುವುದು) ಅಲ್ಲಾಹನು ಅವರ ಹೃದಯಗಳಲ್ಲಿ ಅದನ್ನು ಒಂದು ದುಃಖ ಹೇತುಮಾಡಲಿಕ್ಕೋಸ್ಕರವಾಗಿದೆ.[122] ಬದುಕಿಸುವವನೂ ಮೃತಪಡಿಸುವವನೂ ಅಲ್ಲಾಹನೇ ಆಗಿದ್ದಾನೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ನೋಡುತ್ತಿರುತ್ತಾನೆ.

وَلَئِن قُتِلْتُمْ فِي سَبِيلِ اللَّهِ أَوْ مُتُّمْ لَمَغْفِرَةٌ مِّنَ اللَّهِ وَرَحْمَةٌ خَيْرٌ مِّمَّا

**158.** ನೀವು ಅಲ್ಲಾಹನ ಮಾರ್ಗದಲ್ಲಿ ಕೊಲ್ಲಲ್ಪಟ್ಟರೆ ಅಥವಾ ಮೃತಪಟ್ಟರೆ ಅಲ್ಲಾಹನಿಂದ

121. ಉಹ್‌ದ್ ಯುದ್ಧದ ಕುರಿತು ಇಲ್ಲಿ ಹೇಳಲಾಗಿದೆ.

122. ತಮ್ಮ ಈ ಮಾತನ್ನು ಕೇಳಿ ಮುಸ್ಲಿಮರು ಅಂಜುಬುರುಕರಾಗಲಿ ಎಂಬುದು ಅವಿಶ್ವಾಸಿಗಳ ಉದ್ದೇಶವಾಗಿತ್ತು. ಆದರೆ ಅವರ ಮಾತುಗಳು ಮುಸ್ಲಿಮರ ಮೇಲೆ ಯಾವ ದುಷ್ಪರಿಣಾಮವನ್ನೂ ಉಂಟುಮಾಡಲಿಲ್ಲ, ಆದ್ದರಿಂದ ಅವರು ನಿರಾಶೆಗೊಂಡು ಅವರ ಮಾತುಗಳು ಅವರ ಹೃದಯಗಳಲ್ಲೇ ದುಃಖವನ್ನು ಮೂಡಿಸಲು ಕಾರಣವಾಯಿತು.





يَجْمَعُونَ ﴿١٥٧﴾

ನಿಮಗೆ ಲಭಿಸುವ ಕ್ಷಮೆ ಮತ್ತು ಕರುಣೆ, ಅವರು ಶೇಖರಿಸಿಡುವ ವಸ್ತುಗಳಿಗಿಂತ ಉತ್ತಮವಾಗಿದೆ.

وَلَئِن مُّتُّمْ أَوْ قُتِلْتُمْ لَإِلَى اللَّهِ تُحْشَرُونَ ﴿١٥٨﴾

**159.** ನೀವು ಮರಣಗೊಂಡರೆ ಅಥವಾ ಕೊಲ್ಲಲ್ಪಟ್ಟರೆ, ನಿಮ್ಮನ್ನು ಒಟ್ಟುಗೂಡಿಸಿ ಅಲ್ಲಾಹನೆಡೆಗೆಯೇ ಒಯ್ಯಲಾಗುವುದು.

فَبِمَا رَحْمَةٍ مِّنَ اللَّهِ لِنتَ لَهُمْ ۖ وَلَوْ كُنتَ فَظًّا غَلِيظَ الْقَلْبِ لَانفَضُّوا مِنْ حَوْلِكَ ۖ فَاعْفُ عَنْهُمْ وَاسْتَغْفِرْ لَهُمْ وَشَاوِرْهُمْ فِي الْأَمْرِ ۖ فَإِذَا عَزَمْتَ فَتَوَكَّلْ عَلَى اللَّهِ ۚ إِنَّ اللَّهَ يُحِبُّ الْمُتَوَكِّلِينَ ﴿١٥٩﴾

**160.** ಅಲ್ಲಾಹನ (ಮಹತ್ತಾದ) ಕಾರುಣ್ಯ ದಿಂದಲೇ ನೀನು ಅವರೊಂದಿಗೆ ಸೌಮ್ಯವಾಗಿ ವರ್ತಿಸುತ್ತಿರುವೆ. ನೀನು ಕ್ರೂರ ಸ್ವಭಾವಿಯೂ ಕಠಿಣ ಹೃದಯಿಯೂ ಆಗಿರುತ್ತಿದ್ದರೆ ಅವರು ನಿನ್ನ ಸುತ್ತಮುತ್ತಲಿನಿಂದ ಅಗಲಿಹೋಗುತ್ತಿದ್ದರು. ಆದ್ದರಿಂದ ನೀನು ಅವರಿಗೆ ಕ್ಷಮೆ ನೀಡು; ಅವರ ಪಾಪ ವಿಮುಕ್ತಿಗಾಗಿ ನೀನು ಪ್ರಾರ್ಥಿಸು ಹಾಗೂ ಪ್ರಧಾನ ಕಾರ್ಯಗಳಲ್ಲಿ ನೀನು ಅವರೊಡನೆ ಸಮಾಲೋಚನೆ ನಡೆಸು. ಹಾಗೆ ಯಾವುದೇ ಕಾರ್ಯ ತೀರ್ಮಾನಿಸಲ್ಪಟ್ಟರೆ ನೀನು ಅಲ್ಲಾಹನ ಮೇಲೆ ಭರವಸೆಯನ್ನಿಡು. ಖಂಡಿತವಾಗಿಯೂ ಅಲ್ಲಾಹನು (ತನ್ನಮೇಲೆ) ಭರವಸೆಯನ್ನಿಡುವವರನ್ನು ಪ್ರೀತಿಸುತ್ತಾನೆ.

إِن يَنصُرْكُمُ اللَّهُ فَلَا غَالِبَ لَكُمْ ۖ وَإِن يَخْذُلْكُمْ فَمَن ذَا الَّذِي يَنصُرُكُم مِّن بَعْدِهِ ۗ وَعَلَى اللَّهِ فَلْيَتَوَكَّلِ الْمُؤْمِنُونَ ﴿١٦٠﴾

**161.** ಅಲ್ಲಾಹನು ನಿಮಗೆ ಸಹಾಯ ನೀಡುವ ಪಕ್ಷದಲ್ಲಿ ನಿಮ್ಮನ್ನು ಸೋಲಿಸಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಅವನು ನಿಮ್ಮನ್ನು ಕೈಬಿಟ್ಟರೆ ಅವನ ವಿರುದ್ಧ ನಿಮಗೆ ಸಹಾಯ ಮಾಡುವವನು ಬೇರೆ ಯಾರು? (ಆದುದರಿಂದ) ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆ ಭರವಸೆಯನ್ನಿಡಲಿ.

وَمَا كَانَ لِنَبِيٍّ أَن يَغُلَّ ۚ وَمَن يَغْلُلْ يَأْتِ بِمَا غَلَّ يَوْمَ الْقِيَامَةِ ۚ ثُمَّ تُوَفَّىٰ كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿١٦١﴾

**162.** ವಂಚಿಸುವ ಸ್ವಭಾವ ಒಬ್ಬ ಪ್ರವಾದಿಗೆ ಸೇರಿದ್ದಲ್ಲ. ಯಾರಾದರೂ ವಂಚಿಸುವ ಪಕ್ಷದಲ್ಲಿ, ಪುನರುತ್ಥಾನ ದಿನದಂದು ಅವನು ತಾನು ವಂಚಿಸಿದ್ದನ್ನು (ದೇವ ಸನ್ನಿಧಿಗೆ) ತರುವನು. ಮತ್ತೆ ಪ್ರತಿಯೊಂದು ಆತ್ಮಕ್ಕೆ ಅದು ಸಂಪಾದಿಸಿದ್ದನ್ನು ಪೂರ್ಣವಾಗಿ ನೀಡಲಾಗುವುದು. ಅವರೊಂದಿಗೆ ಯಾವ ಅನ್ಯಾಯವನ್ನೂ ತೋರಿಸಲಾಗದು.

**163.** ಅಲ್ಲಾಹನ ಸಂಪ್ರೀತಿಯನ್ನು (ಗುರಿಯಾಗಿಟ್ಟು) ಅನುಸರಿಸುವವನು ಅಲ್ಲಾಹನ ಕೋಪಕ್ಕೆ ತುತ್ತಾದವನಂತಾಗುವನೋ? ಅವನ ವಾಸಸ್ಥಳ ನರಕವಾಗಿದೆ - ಬಹಳ ಕೆಟ್ಟ ನಿವಾಸ.

أَفَمَنِ اتَّبَعَ رِضْوَانَ اللَّهِ كَمَن بَاءَ بِسَخَطٍ مِّنَ اللَّهِ وَمَأْوَاهُ جَهَنَّمُ ۚ وَبِئْسَ الْمَصِيرُ ﴿١٦٢﴾

**164.** ಅವರಿಗೆ[123] ಅಲ್ಲಾಹನ ಬಳಿ (ವಿವಿಧ) ದರ್ಜೆಗಳಿವೆ. ಅವರು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಕಾಣುತ್ತಾನೆ.

هُمْ دَرَجَاتٌ عِندَ اللَّهِ ۗ وَاللَّهُ بَصِيرٌ بِمَا يَعْمَلُونَ ﴿١٦٣﴾

**165.** ಅಲ್ಲಾಹನು ಸತ್ಯವಿಶ್ವಾಸಿಗಳಲ್ಲಿ ಅವರಿಂದಲೇ ಒಬ್ಬ ಸಂದೇಶವಾಹಕನನ್ನು ನಿಯೋಜಿಸುವ ಮೂಲಕ ದಿಟವಾಗಿಯೂ ಅವರಿಗೆ ಔದಾರ್ಯ ತೋರಿಸಿದ್ದಾನೆ. ಆತ ಅವರಿಗೆ ಅವನ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಾನೆ; ಅವರನ್ನು ಸಂಸ್ಕರಿಸುತ್ತಾನೆ; ಅವರಿಗೆ ಗ್ರಂಥವನ್ನೂ ಜ್ಞಾನವನ್ನೂ ಕಲಿಸುತ್ತಾನೆ. ಇದಕ್ಕೆ ಮುಂಚೆ ಅವರು ಸುಸ್ಪಷ್ಟ ದುರ್ಮಾರ್ಗದಲ್ಲಿದ್ದರು.

لَقَدْ مَنَّ اللَّهُ عَلَى الْمُؤْمِنِينَ إِذْ بَعَثَ فِيهِمْ رَسُولًا مِّنْ أَنفُسِهِمْ يَتْلُو عَلَيْهِمْ آيَاتِهِ وَيُزَكِّيهِمْ وَيُعَلِّمُهُمُ الْكِتَابَ وَالْحِكْمَةَ وَإِن كَانُوا مِن قَبْلُ لَفِي ضَلَالٍ مُّبِينٍ ﴿١٦٤﴾

**166.** ಏನು! ನಿಮಗೆ ಒಂದು ವಿಪತ್ತು ಘಟಿಸಿದಾಗ, **'ಇದೆಲ್ಲಿಂದ?'** (ಹೇಗೆ ಘಟಿಸಿತು) ಎಂದು ನೀವು ಕೇಳುತ್ತೀರಾ? (ಬದ್ರ್‌ನಲ್ಲಿ) ಅದರ ದುಪ್ಪಟ್ಟು (ನಾಶನಷ್ಟಗಳನ್ನು) ನೀವು (ಶತ್ರುಗಳಿಗೆ) ಮಾಡಿದ್ದೀರಷ್ಟೆ. ಹೇಳು: 'ಇದು (ಈ ವಿಪತ್ತು ಘಟಿಸಿದ್ದು) ನಿಮ್ಮಿಂದಲೇ ಆಗಿದೆ.'[124] ಖಂಡಿತವಾಗಿಯೂ ಅಲ್ಲಾಹನು ಸರ್ವ ಸಾಮರ್ಥ್ಯವಂತನಾಗಿದ್ದಾನೆ.

أَوَلَمَّا أَصَابَتْكُم مُّصِيبَةٌ قَدْ أَصَبْتُم مِّثْلَيْهَا قُلْتُمْ أَنَّىٰ هَٰذَا ۖ قُلْ هُوَ مِنْ عِندِ أَنفُسِكُمْ ۗ إِنَّ اللَّهَ عَلَىٰ كُلِّ شَيْءٍ قَدِيرٌ ﴿١٦٥﴾

**167.** ಎರಡೂ ಸೈನ್ಯಗಳೂ ಮುಖಾಮುಖಿಯಾದ[125] ದಿವಸ ನಿಮಗೆ ಬಂದೆರಗಿದ ವಿಪತ್ತು ಅಲ್ಲಾಹನ ವಿಧಿಪ್ರಕಾರವಾಗಿತ್ತು. ಅದು, ಸತ್ಯ ವಿಶ್ವಾಸಿಗಳನ್ನು ಗುರುತಿಸಲಿಕ್ಕೋಸ್ಕರವಾಗಿತ್ತು.

وَمَا أَصَابَكُمْ يَوْمَ الْتَقَى الْجَمْعَانِ فَبِإِذْنِ اللَّهِ وَلِيَعْلَمَ الْمُؤْمِنِينَ ﴿١٦٦﴾

123. ಅಲ್ಲಾಹನ ಸಂಪ್ರೀತಿಗೆ ಪಾತ್ರರಾದವರಿಗೆ.

124. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರ ಆಜ್ಞೆಯನ್ನು ಉಲ್ಲಂಘಿಸಿದುದರ ಪರಿಣಾಮವೆಂದು ತಾತ್ಪರ್ಯ.

125. ಉಹ್‌ದ್ ಯುದ್ಧದ ಕುರಿತು ಇಲ್ಲಿ ಹೇಳಲಾಗಿದೆ.





**168.** (ಅದು) ಕಪಟ ವಿಶ್ವಾಸಿಗಳನ್ನು ಗುರುತಿಸಲಿಕ್ಕೋಸ್ಕರವೂ ಆಗಿತ್ತು. 'ಬನ್ನಿ, ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ ಹಾಗೂ (ಶತ್ರುಗಳ ಆಕ್ರಮಣವನ್ನು) ತಡೆಯಿರಿ' ಎಂದು ಅವರೊಡನೆ (ಕಪಟ ವಿಶ್ವಾಸಿಗಳೊಡನೆ) ಹೇಳಿದಾಗ, 'ನಮಗೆ ಯುದ್ಧ ಮಾಡಲು ತಿಳಿದಿದ್ದರೆ ನಾವು ಖಂಡಿತವಾಗಿಯೂ ನಿಮ್ಮನ್ನು ಹಿಂಬಾಲಿಸುತ್ತಿದ್ದೆವು' ಎಂದು ಅವರು ಹೇಳಿದರು. ಅಂದು ಅವರು ಸತ್ಯವಿಶ್ವಾಸಕ್ಕಿಂತ ಹೆಚ್ಚು ಅವಿಶ್ವಾಸಕ್ಕೆ ಸಮೀಪವಿದ್ದರು. ಅವರ ಹೃದಯಗಳಲ್ಲಿಲ್ಲದ ವಿಚಾರಗಳನ್ನು ಅವರು ಬಾಯಿಯಲ್ಲಿ ಹೇಳುತ್ತಿದ್ದರು. ಅವರು ಮುಚ್ಚಿಡುವ ವಿಚಾರಗಳನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

وَلِيَعْلَمَ الَّذِينَ نَافَقُوا ۚ وَقِيلَ لَهُمْ تَعَالَوْا قَاتِلُوا فِي سَبِيلِ اللَّهِ أَوِ ادْفَعُوا ۖ قَالُوا لَوْ نَعْلَمُ قِتَالًا لَّاتَّبَعْنَاكُمْ ۗ هُمْ لِلْكُفْرِ يَوْمَئِذٍ أَقْرَبُ مِنْهُمْ لِلْإِيمَانِ ۚ يَقُولُونَ بِأَفْوَاهِهِم مَّا لَيْسَ فِي قُلُوبِهِمْ ۗ وَاللَّهُ أَعْلَمُ بِمَا يَكْتُمُونَ ﴿١٦٧﴾

**169.** ಅವರು (ಯುದ್ಧಕ್ಕೆ ಹೋಗದೆ ಹಿಂಜರಿದು) ಕುಳಿತುಕೊಂಡು (ಯುದ್ಧಕ್ಕೆ ಹೋಗಿ ಕೊಲ್ಲಲ್ಪಟ್ಟ) ತಮ್ಮ ಸಹೋದರರ ಕುರಿತು 'ನಮ್ಮನ್ನು ಅನುಸರಿಸಿರುತ್ತಿದ್ದರೆ ಅವರು ಕೊಲ್ಲಲ್ಪಡುತ್ತಿರಲಿಲ್ಲ' ಎಂದು ಹೇಳಿದವರು. ಹೇಳು: 'ನೀವು ಹೇಳುವುದು ಸರಿಯೆಂದಾದರೆ ನೀವು ನಿಮ್ಮಿಂದ ಮರಣವನ್ನು ತಡೆದು ನಿಲ್ಲಿಸಿರಿ.'

الَّذِينَ قَالُوا لِإِخْوَانِهِمْ وَقَعَدُوا لَوْ أَطَاعُونَا مَا قُتِلُوا ۗ قُلْ فَادْرَءُوا عَنْ أَنفُسِكُمُ الْمَوْتَ إِن كُنتُمْ صَادِقِينَ ﴿١٦٨﴾

**170.** ಅಲ್ಲಾಹನ ಮಾರ್ಗದಲ್ಲಿ ಕೊಲ್ಲಲ್ಪಟ್ಟವರು ಮೃತರೆಂದು ನೀವು ಭಾವಿಸಬೇಡಿರಿ. ಅವರು ತಮ್ಮ ಒಡೆಯನ ಬಳಿ ಜೀವಂತರು; ಅವರಿಗೆ ಆಹಾರ ನೀಡಲಾಗುತ್ತದೆ.

وَلَا تَحْسَبَنَّ الَّذِينَ قُتِلُوا فِي سَبِيلِ اللَّهِ أَمْوَاتًا ۚ بَلْ أَحْيَاءٌ عِندَ رَبِّهِمْ يُرْزَقُونَ ﴿١٦٩﴾

**171.** ಅಲ್ಲಾಹನು ತನ್ನ ಅನುಗ್ರಹದಿಂದ ಅವರಿಗೆ ನೀಡಿದುದರಲ್ಲಿ ಅವರು ಸಂತುಷ್ಟರು. ಈಗಾಗಲೇ ತಮ್ಮೊಡನೆ ಸೇರಿಕೊಳ್ಳದೆ ತಮ್ಮ ಹಿಂದಿನಿಂದ ಬರಲಿರುವವರ ಕುರಿತು ಸಹ ಅವರು ಸಂತೋಷಪಡುತ್ತಾರೆ. ಏಕೆಂದರೆ ಅವರಿಗೆ (ಅವರ ಹಿಂದೆ ಬರುವವರಿಗೆ) ಏನೂ ಭಯವಿಲ್ಲ; ಅವರು ವ್ಯಥೆಪಡಲಾರರು (ಎಂದು ಅವರಿಗೆ ಗೊತ್ತು).

فَرِحِينَ بِمَا آتَاهُمُ اللَّهُ مِن فَضْلِهِ وَيَسْتَبْشِرُونَ بِالَّذِينَ لَمْ يَلْحَقُوا بِهِم مِّنْ خَلْفِهِمْ أَلَّا خَوْفٌ عَلَيْهِمْ وَلَا هُمْ يَحْزَنُونَ ﴿١٧٠﴾

172. ಅಲ್ಲಾಹನ ಅನುಗ್ರಹ ಮತ್ತು ಔದಾರ್ಯ ನಿಮಿತ್ತ ಅವರು ಸಂತೋಷಪಡುತ್ತಾರೆ. ಖಂಡಿತವಾಗಿಯೂ ಸತ್ಯವಿಶ್ವಾಸಿಗಳ ಪ್ರತಿಫಲವನ್ನು ಅಲ್ಲಾಹನು ನಿಷ್ಫಲಗೊಳಿಸಲಾರ ಎಂಬುದರಿಂದಲೂ (ಅವರು ಸಂತಸಪಡುತ್ತಾರೆ).

يَسْتَبْشِرُوْنَ بِنِعْمَةٍ مِّنَ اللّٰهِ وَ فَضْلٍ ۙ وَّ اَنَّ اللّٰهَ لَا يُضِيْعُ اَجْرَ الْمُؤْمِنِيْنَ ﴿١٧١﴾

173. ತಮಗೆ ಘಾಸಿಯಾದ ನಂತರ (ಕೂಡ) ಅಲ್ಲಾಹನ ಮತ್ತು ಸಂದೇಶವಾಹಕನ ಕರೆಗೆ ಓಗೊಟ್ಟವರ ಪೈಕಿ ಸತ್ಕರ್ಮ ಮಾಡಿದವರಿಗೂ ದೇವಭಕ್ತರಿಗೂ ಮಹತ್ತಾದ ಪ್ರತಿಫಲವಿದೆ.

اَلَّذِيْنَ اسْتَجَابُوْا لِلّٰهِ وَ الرَّسُوْلِ مِنْۢ بَعْدِ مَاۤ اَصَابَهُمُ الْقَرْحُ ۛؕ لِلَّذِيْنَ اَحْسَنُوْا مِنْهُمْ وَ اتَّقَوْا اَجْرٌ عَظِيْمٌ ﴿١٧٢﴾

174. 'ನಿಜವಾಗಿಯೂ (ಶತ್ರು) ಜನರು ನಿಮಗೆದುರಾಗಿ ಸಂಘಟಿತರಾಗಿದ್ದಾರೆ; ಆದ್ದರಿಂದ ನೀವು ಅವರ ಭಯವಿರಿಸಿಕೊಳ್ಳಿರಿ' ಎಂದು ಜನರು ಅವರೊಡನೆ ಹೇಳಿದರು. ಆದರೆ ಅದು ಅವರ ಸತ್ಯವಿಶ್ವಾಸವನ್ನು ಮತ್ತಷ್ಟು ಹೆಚ್ಚಿಸಿತು. 'ನಮಗೆ ಅಲ್ಲಾಹನು ಸಾಕು; ಅವನು ಅತಿಶ್ರೇಷ್ಠನಾದ ರಕ್ಷಕನು' ಎಂದು ಅವರು ಹೇಳಿದರು.

اَلَّذِيْنَ قَالَ لَهُمُ النَّاسُ اِنَّ النَّاسَ قَدْ جَمَعُوْا لَكُمْ فَاخْشَوْهُمْ فَزَادَهُمْ اِيْمَانًا ۖۗ وَّ قَالُوْا حَسْبُنَا اللّٰهُ وَ نِعْمَ الْوَكِيْلُ ﴿١٧٣﴾

175. ಹಾಗೆ ಅವರು ಅಲ್ಲಾಹನ ಅನುಗ್ರಹ ಮತ್ತು ಔದಾರ್ಯಗಳ ಸಹಿತ ಹಿಂತೆರಳಿದರು. ಯಾವ ಕೆಡುಕೂ ಅವರನ್ನು ಸ್ಪರ್ಶಿಸಲಿಲ್ಲ. ಅವರು ಅಲ್ಲಾಹನ ಸಂತೃಪ್ತಿಯ (ಹಾದಿಯ)ನ್ನು ಅನುಗಮಿಸಿದರು. ಅಲ್ಲಾಹನು ಮಹತ್ತಾದ ಔದಾರ್ಯದ ಪ್ರಭುವಾಗಿದ್ದಾನೆ.

فَانْقَلَبُوْا بِنِعْمَةٍ مِّنَ اللّٰهِ وَ فَضْلٍ لَّمْ يَمْسَسْهُمْ سُوْٓءٌ ۙ وَّ اتَّبَعُوْا رِضْوَانَ اللّٰهِ ؕ وَ اللّٰهُ ذُوْ فَضْلٍ عَظِيْمٍ ﴿١٧٤﴾

176. ಅದು ಶೈತಾನನೇ (ನಿಮ್ಮಲ್ಲಿ ಭೀತಿ ಹುಟ್ಟಿಸಿದವನು). ಅವನು ತನ್ನ ಮಿತ್ರರನ್ನು ಹೆದರಿಸುತ್ತಾನೆ. ಆದ್ದರಿಂದ ನೀವು ಸತ್ಯವಿಶ್ವಾಸಿಗಳೆಂದಾದರೆ ಅವರಿಗೆ ಭಯಪಡಬೇಡಿರಿ; ನನಗೆ ಭಯಪಡಿರಿ.

اِنَّمَا ذٰلِكُمُ الشَّيْطٰنُ يُخَوِّفُ اَوْلِيَآءَهٗ ۪ فَلَا تَخَافُوْهُمْ وَ خَافُوْنِ اِنْ كُنْتُمْ مُّؤْمِنِيْنَ ﴿١٧٥﴾

177. ಅವಿಶ್ವಾಸದಲ್ಲಿ ತ್ವರಿತವಾಗಿ ಸಾಗುವವರು ನಿನ್ನನ್ನು ವ್ಯಾಕುಲಗೊಳಿಸದಿರಲಿ. ಅವರು ಖಂಡಿತವಾಗಿಯೂ ಅಲ್ಲಾಹನಿಗೆ ಯಾವುದೇ ಹಾನಿಯನ್ನುಂಟು

وَ لَا يَحْزُنْكَ الَّذِيْنَ يُسَارِعُوْنَ فِي الْكُفْرِ ۚ اِنَّهُمْ لَنْ يَّضُرُّوا اللّٰهَ شَيْـًٔا ؕ





ಮಾಡುವುದಿಲ್ಲ. ಪರಲೋಕದಲ್ಲಿ ಅವರಿಗೆ ಯಾವುದೇ ಪಾಲನ್ನು ನೀಡದೆ ಇರಲು ಅಲ್ಲಾಹನು ಬಯಸುತ್ತಾನೆ. ಅವರಿಗೆ ಕಠಿಣವಾದ ಶಿಕ್ಷೆ ಕಾದಿದೆ.

يُرِيْدُ اللّٰهُ اَلَّا يَجْعَلَ لَهُمْ حَظًّا فِي الْاٰخِرَةِ ۚ وَ لَهُمْ عَذَابٌ عَظِيْمٌ ﴿١٧٦﴾

178. ಸತ್ಯವಿಶ್ವಾಸವನ್ನು ತ್ಯಜಿಸಿ ಅವಿಶ್ವಾಸವನ್ನು ಹೊಂದಿದವರು ಖಂಡಿತವಾಗಿಯೂ ಅಲ್ಲಾಹನಿಗೆ ಯಾವ ಹಾನಿಯನ್ನೂ ಉಂಟುಮಾಡಲು ಶಕ್ತರಲ್ಲ. ಅವರಿಗೆ ಯಾತನಾಮಯ ಶಿಕ್ಷೆ ಇದೆ.

اِنَّ الَّذِيْنَ اشْتَرَوُا الْكُفْرَ بِالْاِيْمَانِ لَنْ يَّضُرُّوا اللّٰهَ شَيْـًٔا ۚ وَ لَهُمْ عَذَابٌ اَلِيْمٌ ﴿١٧٧﴾

179. ಅವಿಶ್ವಾಸಿಗಳನ್ನು ನಾವು ಸಡಿಲು ಬಿಡುವುದು ಅವರಿಗೆ ಗುಣಕರವೆಂದು ಅವರೆಂದಿಗೂ ಭಾವಿಸುವುದು ಬೇಡ. ನಾವು ಅವರಿಗೆ ಕಾಲಾವಧಿಯನ್ನು ಹೆಚ್ಚಿಸುವುದರ ಫಲವಾಗಿ ಖಂಡಿತವಾಗಿಯೂ ಅವರ ಪಾಪಗಳು ಮಾತ್ರ ಹೆಚ್ಚುತ್ತಲೇ ಹೋಗುತ್ತವೆ. ಅವರಿಗೆ ಅಪಮಾನಕರವಾದ ಶಿಕ್ಷೆ ಕಾದಿದೆ.

وَ لَا يَحْسَبَنَّ الَّذِيْنَ كَفَرُوْۤا اَنَّمَا نُمْلِيْ لَهُمْ خَيْرٌ لِّاَنْفُسِهِمْ ؕ اِنَّمَا نُمْلِيْ لَهُمْ لِيَزْدَادُوْۤا اِثْمًا ۚ وَ لَهُمْ عَذَابٌ مُّهِيْنٌ ﴿١٧٨﴾

180. ಒಳಿತಿನಿಂದ ಕೆಡುಕನ್ನು (ಸಜ್ಜನರಿಂದ ದುರ್ಜನರನ್ನು) ಬೇರ್ಪಡಿಸುವ ವರೆಗೆ, ನೀವು ಈಗಿರುವ ಸ್ಥಿತಿಯಲ್ಲೇ ಅಲ್ಲಾಹನು ವಿಶ್ವಾಸಿಗಳನ್ನು ಬಿಟ್ಟು ಬಿಡಲಾರ. ಹಾಗೂ ಅಗೋಚರ ವಿಚಾರಗಳನ್ನು ಅಲ್ಲಾಹನು ನಿಮಗೆ ಬಹಿರಂಗಪಡಿಸಲಾರ. ಆದರೆ ಅಲ್ಲಾಹನು ತನ್ನ ಸಂದೇಶವಾಹಕರಿಂದ ತಾನಿಚ್ಛಿಸುವವರನ್ನು ಆಯ್ಕೆ ಮಾಡುತ್ತಾನೆ. ಆದ್ದರಿಂದ ನೀವು ಅಲ್ಲಾಹನ ಮೇಲೂ ಅವನ ಸಂದೇಶವಾಹಕರ ಮೇಲೂ ವಿಶ್ವಾಸವಿಡಿರಿ. ನೀವು ವಿಶ್ವಾಸ ಹೊಂದಿ ಭಯ-ಭಕ್ತಿಯುಳ್ಳವರಾದರೆ, ನಿಮಗೆ ಮಹತ್ತಾದ ಪ್ರತಿಫಲವಿದೆ.

مَا كَانَ اللّٰهُ لِيَذَرَ الْمُؤْمِنِيْنَ عَلٰى مَاۤ اَنْتُمْ عَلَيْهِ حَتّٰى يَمِيْزَ الْخَبِيْثَ مِنَ الطَّيِّبِ ؕ وَ مَا كَانَ اللّٰهُ لِيُطْلِعَكُمْ عَلَى الْغَيْبِ وَ لٰكِنَّ اللّٰهَ يَجْتَبِيْ مِنْ رُّسُلِهٖ مَنْ يَّشَآءُ ۪ فَاٰمِنُوْا بِاللّٰهِ وَ رُسُلِهٖ ۚ وَ اِنْ تُؤْمِنُوْا وَ تَتَّقُوْا فَلَكُمْ اَجْرٌ عَظِيْمٌ ﴿١٧٩﴾

181. ಅಲ್ಲಾಹನು ಅವನ ಅನುಗ್ರಹದಿಂದ ತಮಗೆ ನೀಡಿದುದರಲ್ಲಿ ಲೋಭ ತೋರಿಸುವವರು, ಅದು ತಮಗೆ ಗುಣಕರವೆಂದು ಎಂದಿಗೂ ಭಾವಿಸದಿರಲಿ. ತದ್ವಿರುದ್ಧವಾಗಿ, ಅದು ಅವರಿಗೆ ದೋಷಕರ. ಯಾವ ವಿಚಾರದಲ್ಲಿ ಅವರು ಜಿಪುಣತನ ತೋರಿಸುತ್ತಾರೋ, ಅದನ್ನು ಅವರಿಗೆ ಪುನರುತ್ಥಾನ ದಿನದಂದು ಕೊರಳ

وَ لَا يَحْسَبَنَّ الَّذِيْنَ يَبْخَلُوْنَ بِمَاۤ اٰتٰىهُمُ اللّٰهُ مِنْ فَضْلِهٖ هُوَ خَيْرًا لَّهُمْ ؕ بَلْ هُوَ شَرٌّ لَّهُمْ ؕ سَيُطَوَّقُوْنَ مَا بَخِلُوْا بِهٖ يَوْمَ الْقِيٰمَةِ ؕ وَ لِلّٰهِ مِيْرَاثُ

السَّمٰوٰتِ وَالْاَرْضِ ۗ وَاللّٰهُ بِمَا تَعْمَلُوْنَ خَبِيْرٌ ﴿١٨١﴾

ಸುತ್ತಲೂ ಪಟ್ಟಿಯಂತೆ ಹಾಕಲಾಗುವುದು. ಆಕಾಶಗಳ ಮತ್ತು ಭೂಮಿಯ ಹಕ್ಕು ಅಧಿಕಾರವೆಲ್ಲ ಅಲ್ಲಾಹನಿಗಿವೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ತಿಳಿಯುವವನಾಗಿದ್ದಾನೆ.

لَقَدْ سَمِعَ اللّٰهُ قَوْلَ الَّذِيْنَ قَالُوْٓا اِنَّ اللّٰهَ فَقِيْرٌ وَّنَحْنُ اَغْنِيَآءُ ۘ سَنَكْتُبُ مَا قَالُوْا وَقَتْلَهُمُ الْاَنْۢبِيَآءَ بِغَيْرِ حَقٍّ ۙ وَّنَقُوْلُ ذُوْقُوْا عَذَابَ الْحَرِيْقِ ﴿١٨٢﴾

**182.** 'ಅಲ್ಲಾಹನು ಬಡವನು, ನಾವು ಶ್ರೀಮಂತರು' ಎಂದು ಹೇಳಿದವರ ಮಾತನ್ನು ಅಲ್ಲಾಹನು ಖಂಡಿತವಾಗಿಯೂ ಕೇಳಿದ್ದಾನೆ.[125A] ಅವರು ಹೇಳಿದ್ದನ್ನೂ ಪ್ರವಾದಿಗಳನ್ನೂ ಅನ್ಯಾಯವಾಗಿ ಕೊಲ್ಲಲು ಅವರು ಪ್ರಯತ್ನಿಸಿದ್ದನ್ನೂ[126] ನಾವು ದಾಖಲಿಸುವೆವು. 'ಸುಟ್ಟುಹಾಕುವ ಶಿಕ್ಷೆಯ ಸವಿ ನೋಡಿರಿ' ಎಂದು ನಾವು (ಅವರೊಡನೆ) ಹೇಳುವೆವು.

ذٰلِكَ بِمَا قَدَّمَتْ اَيْدِيْكُمْ وَاَنَّ اللّٰهَ لَيْسَ بِظَلَّامٍ لِّلْعَبِيْدِ ﴿١٨٣﴾

**183.** ಇದು (ಈ ಶಿಕ್ಷೆ) ನಿಮ್ಮ ಕೈಗಳು ಮುಂಚೆ ಮಾಡಿದ ಕೃತ್ಯಗಳ ಕಾರಣದಿಂದಾಗಿದೆ (ಎಂದೂ ಅವರೊಡನೆ ಹೇಳಲಾಗುವುದು). ಅಲ್ಲಾಹನು ಎಂದಿಗೂ (ತನ್ನ) ದಾಸರೊಡನೆ ಅನೀತಿಯಿಂದ ವರ್ತಿಸಲಾರ.

اَلَّذِيْنَ قَالُوْٓا اِنَّ اللّٰهَ عَهِدَ اِلَيْنَآ اَلَّا نُؤْمِنَ لِرَسُوْلٍ حَتّٰى يَاْتِيَنَا بِقُرْبَانٍ تَاْكُلُهُ النَّارُ ۗ قُلْ قَدْ جَآءَكُمْ رُسُلٌ مِّنْ قَبْلِيْ بِالْبَيِّنٰتِ وَبِالَّذِيْ قُلْتُمْ فَلِمَ قَتَلْتُمُوْهُمْ اِنْ كُنْتُمْ صٰدِقِيْنَ ﴿١٨٤﴾

**184.** ಅವರು, 'ಬೆಂಕಿಯಲ್ಲಿ ದಹಿಸಲ್ಪಡುವ ಒಂದು ಬಲಿ ಮೃಗವನ್ನು[127] ತರುವ ವರೆಗೆ ನಾವು ಯಾವ ಪ್ರವಾದಿಯ ಮೇಲೂ ವಿಶ್ವಾಸವಿಡಬಾರದೆಂದು ನಿಜವಾಗಿಯೂ ಅಲ್ಲಾಹನು ನಮಗೆ ಆಜ್ಞಾಪಿಸಿದ್ದಾನೆ' ಎಂದು ಹೇಳಿದವರು. ಹೇಳು: 'ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಮತ್ತು ನೀವು ಕೇಳಿದ ಬೇಡಿಕೆಯೊಂದಿಗೆ ನನಗೆ ಮುಂಚೆ ಸಂದೇಶವಾಹಕರು ನಿಮ್ಮ ಬಳಿ ಬಂದಿದ್ದರು. ಆಗ, ನೀವು ಸತ್ಯವಂತರೆಂದಾದರೆ ಅವರನ್ನು ಹತ್ಯೆಗೈಯಲು ಪ್ರಯತ್ನಿಸಿದಿರೇಕೆ?'

125A. ಮುಸ್ಲಿಮರೆಡೆಯಲ್ಲಿ ಚಂದಾ ಎತ್ತುವ ಯೋಜನೆಯನ್ನು ಕೇಳಿ, 'ಅಲ್ಲಾಹನು ಬಡವನು; ನಾವು ಶ್ರೀಮಂತರು' ಎಂದು ಯಹೂದ್ಯರು ಗೇಲಿ ಮಾಡುತ್ತಿದ್ದರು. 'ನಿಮ್ಮ ಸಂಪತ್ತು ಪರಾಧೀನವಾಗುವ ದಿನ ದೂರವಿಲ್ಲ' ಎಂಬ ಸಾಂಕೇತಿಕ ಉತ್ತರ ಈ ವಚನದಲ್ಲಿ ಅಡಕವಾಗಿದೆ. ಚರಿತ್ರೆ ಅದಕ್ಕೆ ಸಾಕ್ಷಿಯಾಯಿತು. ಮದೀನ ಮತ್ತು ಸುತ್ತಮುತ್ತಲಿನ ಸಂಪತ್ತನ್ನೆಲ್ಲ ಬಿಟ್ಟು ಯಹೂದ್ಯರಿಗೆ ಓಡಿಹೋಗಬೇಕಾಗಿ ಬಂತು.

126. قَتْل ಎಂಬುದರ ಶಬ್ದಾರ್ಥ 'ಕೊಲ್ಲು' ಎಂದಾಗಿದೆ. ಕೊಲ್ಲಲು ಪ್ರಯತ್ನಿಸುವುದನ್ನು ಸಹ ಹಾಗೆ ಹೇಳಬಹುದಾಗಿದೆ.





فَاِنْ كَذَّبُوْكَ فَقَدْ كُذِّبَ رُسُلٌ مِّنْ قَبْلِكَ جَآءُوْ بِالْبَيِّنٰتِ وَالزُّبُرِ وَالْكِتٰبِ الْمُنِيْرِ ﴿١٨٥﴾

**185.** ಆದ್ದರಿಂದ ಅವರು ನಿನ್ನನ್ನು ಸುಳ್ಳಾಗಿಸಿದರೆ (ಅದೇನೂ ಹೊಸತಲ್ಲ); ಸುಸ್ಪಷ್ಟ ದೃಷ್ಟಾಂತಗಳನ್ನೂ ಸುಜ್ಞಾನ ಗ್ರಂಥಗಳನ್ನೂ ಪ್ರಕಾಶ ಬೀರುವ (ಪ್ರಮಾಣ) ಗ್ರಂಥಗಳನ್ನೂ ತಂದ ಸಂದೇಶವಾಹಕರು ನಿನಗೆ ಮುಂಚೆ ಸುಳ್ಳಾಗಿಸಲ್ಪಟ್ಟಿದ್ದಾರೆ.

كُلُّ نَفْسٍ ذَآئِقَةُ الْمَوْتِ ۗ وَاِنَّمَا تُوَفَّوْنَ اُجُوْرَكُمْ يَوْمَ الْقِيٰمَةِ ۗ فَمَنْ زُحْزِحَ عَنِ النَّارِ وَاُدْخِلَ الْجَنَّةَ فَقَدْ فَازَ ۗ وَمَا الْحَيٰوةُ الدُّنْيَآ اِلَّا مَتَاعُ الْغُرُوْرِ ﴿١٨٦﴾

**186.** ಪ್ರತಿಯೊಂದು ಜೀವಿಯೂ ಮರಣದ ರುಚಿ ನೋಡಬೇಕಾಗಿದೆ. ಪುನರುತ್ಥಾನ ದಿನದಂದೇ ನಿಮ್ಮ ಪ್ರತಿಫಲ ನಿಮಗೆ ಪೂರ್ಣವಾಗಿ ನೀಡಲ್ಪಡುವುದು.[128] ಆಗ ಯಾವೊಬ್ಬನು ನರಕಾಗ್ನಿಯಿಂದ ದೂರಮಾಡಲ್ಪಟ್ಟು ಸ್ವರ್ಗದಲ್ಲಿ ಪ್ರವೇಶಿಸಲ್ಪಡುತ್ತಾನೋ, ಅವನು ದಿಟವಾಗಿಯೂ ಯಶಸ್ಸನ್ನು ಸಾಧಿಸಿದನು. ಇಹಲೋಕ ಜೀವನ ಕೇವಲ ಭ್ರಮಾತ್ಮಕ ಸಾಧನವಾಗಿದೆ.

لَتُبْلَوُنَّ فِيْٓ اَمْوَالِكُمْ وَاَنْفُسِكُمْ ۗ وَلَتَسْمَعُنَّ مِنَ الَّذِيْنَ اُوْتُوا الْكِتٰبَ مِنْ قَبْلِكُمْ وَمِنَ الَّذِيْنَ اَشْرَكُوْٓا اَذًى كَثِيْرًا ۗ وَاِنْ تَصْبِرُوْا وَتَتَّقُوْا فَاِنَّ ذٰلِكَ مِنْ عَزْمِ الْاُمُوْرِ ﴿١٨٧﴾

**187.** ನಿಮ್ಮ ಸಂಪತ್ತು ಮತ್ತು ನಿಮ್ಮ ಪ್ರಾಣಗಳಿಗೆ ಸಂಬಂಧಿಸಿ ನೀವು ಖಂಡಿತವಾಗಿಯೂ ಪರೀಕ್ಷಿಸಲ್ಪಡುವಿರಿ. ಹಾಗೂ ನಿಮಗೆ ಮುನ್ನ ಗ್ರಂಥ ನೀಡಲ್ಪಟ್ಟವರಿಂದಲೂ ಬಹುದೇವರಾಧಕರಿಂದಲೂ ನೀವು ಮನ ನೋಯುವ ಮಾತುಗಳನ್ನು ಕೇಳುವಿರಿ. ಆದರೆ ನೀವು ಸಹನೆಯನ್ನು ತೋರಿಸಿ, ಸತ್ಕರ್ಮ ನಿರತರಾದರೆ ಅದು ಖಂಡಿತವಾಗಿಯೂ ಧೀರೋದಾತ್ತ ಕಾರ್ಯಗಳಲ್ಲಿ ಸೇರಿದ್ದಾಗಿದೆ.

وَاِذْ اَخَذَ اللّٰهُ مِيْثَاقَ الَّذِيْنَ اُوْتُوا الْكِتٰبَ لَتُبَيِّنُنَّهٗ لِلنَّاسِ وَلَا تَكْتُمُوْنَهٗ فَنَبَذُوْهُ وَرَآءَ ظُهُوْرِهِمْ

**188.** ಗ್ರಂಥ ನೀಡಲ್ಪಟ್ಟವರಿಂದ ಅಲ್ಲಾಹನು ಕರಾರು ಪಡೆದ ಸಂದರ್ಭ (ಜ್ಞಾಪಿಸಿರಿ). 'ಅಗತ್ಯವಾಗಿಯೂ ನೀವು ಅದನ್ನು ಜನರಿಗೆ ಬಹಿರಂಗ ಪಡಿಸಬೇಕು. ನೀವು ಅದನ್ನು ಮುಚ್ಚಿಡಬಾರದು' (ಎಂದಾಗಿತ್ತು ಆ ಕರಾರು). ಆದರೆ ಅವರು ಅದನ್ನು ತಮ್ಮ ಬೆನ್ನಹಿಂದೆ ಬಿಸಾಡಿ

127. ಎಲ್ಲಿಂದಾದರೂ ಬೆಂಕಿ ತನ್ನಷ್ಟಕ್ಕೆ ತಾನೇ ಬಂದು ದಹಿಸುವುದೆಂದಲ್ಲ; ಬೆಂಕಿಯಲ್ಲಿ ದಹಿಸಲ್ಪಡುವ ಬಲಿಮೃಗವೆಂದು ತಾತ್ಪರ್ಯ. ಇದನ್ನು ಸರ್ವಾಂಗ ಹೋಮ ಎನ್ನುತ್ತಾರೆ. ಇಂತಹ ಬಲಿಕ್ರಮ ಹಿಂದೂ, ಇರಾನಿ ಮತ್ತು ಯಹೂದರೆಡೆಯಲ್ಲಿ ರೂಢಿಯಲ್ಲಿತ್ತು.

128. ಪ್ರತಿಫಲ ಇಹಲೋಕದಲ್ಲೂ ಲಭ್ಯ. ಆದರೆ ಅದು ಪರಿಪೂರ್ಣವಲ್ಲ. ಸತ್ಯವಿಶ್ವಾಸಿಗಳಿಗೆ ಯುಕ್ತ ಪ್ರತಿಫಲ ಸಂಪೂರ್ಣವಾಗಿ ಪರಲೋಕದಲ್ಲಿ ಲಭಿಸುತ್ತದೆ. ಅದು ಅಲ್ಲಾಹನ 'ರಹೀಮಿಯ್ಯತ್'ನ ಸ್ಪಷ್ಟ ಪುರಾವೆಯಾಗಿದೆ.

ಬಿಟ್ಟರು ಮತ್ತು ಅದಕ್ಕೆ ಬದಲು ತುಚ್ಛ ಬೆಲೆಯನ್ನು ಪಡಕೊಂಡರು. ಅವರು ಪಡಕೊಂಡ ಬೆಲೆ ಅದೆಷ್ಟು ನಿಕೃಷ್ಟ!

وَاشْتَرَوْا بِهٖ ثَمَنًا قَلِيْلًا ۗ فَبِئْسَ مَا يَشْتَرُوْنَ ﴿١٨٧﴾

**189.** ತಾವು ಮಾಡಿದ ಕೃತ್ಯದ ಬಗ್ಗೆ ಅತ್ಯಾನಂದ ಪಟ್ಟು ತಾವು ಮಾಡದ ಕೃತ್ಯದ ಬಗ್ಗೆ ತಾವು ಪ್ರಶಂಸಿಸಲ್ಪಡಬೇಕೆಂದು ಬಯಸುವವರ ಕುರಿತು, ಅವರು ಶಿಕ್ಷೆಯಿಂದ ಸುರಕ್ಷಿತರೆಂದು ನೀನು ಯಾವತ್ತೂ ಭಾವಿಸಬೇಡ. ಅವರಿಗೆ ದುರ್ಭರ ಶಿಕ್ಷೆಯಿದೆ.

لَا تَحْسَبَنَّ الَّذِيْنَ يَفْرَحُوْنَ بِمَآ اَتَوْا وَّيُحِبُّوْنَ اَنْ يُّحْمَدُوْا بِمَا لَمْ يَفْعَلُوْا فَلَا تَحْسَبَنَّهُمْ بِمَفَازَةٍ مِّنَ الْعَذَابِ ۚ وَلَهُمْ عَذَابٌ اَلِيْمٌ ﴿١٨٨﴾

**190.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನಿಗಿದೆ. ಅಲ್ಲಾಹನು ಎಲ್ಲ ಕಾರ್ಯಗಳಲ್ಲೂ ಸರ್ವಸಮರ್ಥನಾಗಿದ್ದಾನೆ.

وَلِلّٰهِ مُلْكُ السَّمٰوٰتِ وَالْاَرْضِ ۗ وَاللّٰهُ عَلٰى كُلِّ شَيْءٍ قَدِيْرٌ ﴿١٨٩﴾ ع

**191.** ಆಕಾಶಗಳ ಮತ್ತು ಭೂಮಿಯ ಸೃಷ್ಟಿಯಲ್ಲೂ ರಾತ್ರಿ - ಹಗಲುಗಳ ರೂಪಾಂತರದಲ್ಲೂ ದಿಟವಾಗಿಯೂ ಬುದ್ಧಿಶಾಲಿಗಳಿಗೆ (ಹಲವು) ದೃಷ್ಟಾಂತಗಳಿವೆ.

اِنَّ فِيْ خَلْقِ السَّمٰوٰتِ وَالْاَرْضِ وَاخْتِلَافِ الَّيْلِ وَالنَّهَارِ لَاٰيٰتٍ لِّاُولِي الْاَلْبَابِ ﴿١٩٠﴾

**192.** ನಿಂತುಕೊಂಡು, ಕುಳಿತುಕೊಂಡು ಹಾಗೂ ತಮ್ಮ ಪಾರ್ಶ್ವಗಳಲ್ಲಿ ಮಲಗಿಕೊಂಡು ಅಲ್ಲಾಹನನ್ನು ಸ್ಮರಿಸುತ್ತಲೂ ಆಕಾಶಗಳ ಮತ್ತು ಭೂಮಿಯ ಸೃಷ್ಟಿಯ ಕುರಿತು ಚಿಂತನೆಮಾಡುತ್ತಲೂ ಅವರು (ಆ ಬುದ್ಧಿಶಾಲಿಗಳು)- "ನಮ್ಮ ಪ್ರಭೂ, ನೀನು ಇವನ್ನೆಲ್ಲ ವ್ಯರ್ಥವಾಗಿ ಸೃಷ್ಟಿಸಲಿಲ್ಲ. (ಅಂತಹ ನಿಷ್ಪ್ರಯೋಜಕ ಕೃತ್ಯಗಳಿಂದ) ನೀನು ಪರಿಶುದ್ಧನಾಗಿರುವೆ. ನೀನು ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು" (ಎಂದು ಪ್ರಾರ್ಥಿಸುತ್ತಾರೆ).

الَّذِيْنَ يَذْكُرُوْنَ اللّٰهَ قِيٰمًا وَّقُعُوْدًا وَّعَلٰى جُنُوْبِهِمْ وَيَتَفَكَّرُوْنَ فِيْ خَلْقِ السَّمٰوٰتِ وَالْاَرْضِ ۚ رَبَّنَا مَا خَلَقْتَ هٰذَا بَاطِلًا ۚ سُبْحٰنَكَ فَقِنَا عَذَابَ النَّارِ ﴿١٩١﴾

**193.** "ನಮ್ಮ ಪ್ರಭೂ, ನೀನು ಯಾರನ್ನಾದರೂ ನರಕದಲ್ಲಿ ಪ್ರವೇಶಿಸುವಂತೆ ಮಾಡಿದರೆ, ಅವನನ್ನು ನೀನು ಖಂಡಿತವಾಗಿಯೂ ನಿಂದ್ಯಗೊಳಿಸಿದೆ. ದುಷ್ಕರ್ಮಿಗಳಿಗೆ ಯಾರೂ ಸಹಾಯಕನಿಲ್ಲ.

رَبَّنَآ اِنَّكَ مَنْ تُدْخِلِ النَّارَ فَقَدْ اَخْزَيْتَهٗ ۗ وَمَا لِلظّٰلِمِيْنَ مِنْ اَنْصَارٍ ﴿١٩٢﴾





**194.** "ನಮ್ಮ ಪ್ರಭೂ, ಸತ್ಯವಿಶ್ವಾಸದೆಡೆಗೆ ಆಹ್ವಾನಿಸುವ, 'ನೀವು ನಿಮ್ಮ ಪ್ರಭುವಿನ ಮೇಲೆ ವಿಶ್ವಾಸವಿರಿಸಿರಿ' ಎಂದು ಕರೆನೀಡುವ ಓರ್ವ ಉಪದೇಶಕನ ಕರೆಯನ್ನು ನಾವು ಆಲಿಸಿದೆವು. ಹಾಗೆ ನಾವು ಅದರಲ್ಲಿ ವಿಶ್ವಾಸವಿಟ್ಟಿದ್ದೇವೆ. ನಮ್ಮ ಪ್ರಭೂ, ಆದ್ದರಿಂದ ನಮ್ಮ ಪಾಪಗಳನ್ನು ನಮಗೆ ಕ್ಷಮಿಸಿಕೊಡು; ನಮ್ಮ ಕೆಡುಕುಗಳನ್ನು ನಮ್ಮಿಂದ ದೂರಮಾಡು, ಹಾಗೂ ಸಜ್ಜನರ ಜೊತೆಯಲ್ಲಿ (ಸಜ್ಜನರನ್ನಾಗಿ ಮಾಡಿ) ನಮ್ಮನ್ನು ಮರಣಪಡಿಸು.

رَبَّنَآ اِنَّنَا سَمِعْنَا مُنَادِيًا يُّنَادِيْ لِلْاِيْمَانِ اَنْ اٰمِنُوْا بِرَبِّكُمْ فَاٰمَنَّا ۖ رَبَّنَا فَاغْفِرْ لَنَا ذُنُوْبَنَا وَكَفِّرْ عَنَّا سَيِّاٰتِنَا وَتَوَفَّنَا مَعَ الْاَبْرَارِ ﴿١٩٣﴾

**195.** "ನಮ್ಮ ಪ್ರಭೂ, ನಿನ್ನ ಸಂದೇಶವಾಹಕರ ಮೂಲಕ ನೀನು ನಮಗೆ ವಾಗ್ದಾನ ಮಾಡಿದುದನ್ನು ನಮಗೆ ಕರುಣಿಸು; ಪುನರುತ್ಥಾನ ದಿನದಂದು ನೀನು ನಮ್ಮನ್ನು ಅಪಮಾನಿಸದಿರು. ನಿಸ್ಸಂದೇಹವಾಗಿಯೂ ನೀನು ವಾಗ್ದಾನವನ್ನು ಮುರಿಯಲಾರೆ." (ಎಂದೂ ಅವರು ಪ್ರಾರ್ಥಿಸುತ್ತಾರೆ).

رَبَّنَا وَاٰتِنَا مَا وَعَدْتَّنَا عَلٰى رُسُلِكَ وَلَا تُخْزِنَا يَوْمَ الْقِيٰمَةِ ۗ اِنَّكَ لَا تُخْلِفُ الْمِيْعَادَ ﴿١٩٤﴾

**196.** ಹಾಗೆ ಅವರ ಪ್ರಭು ಅವರ ಪ್ರಾರ್ಥನೆಗೆ ಉತ್ತರವಿತ್ತನು: 'ಖಂಡಿತವಾಗಿಯೂ ನಿಮ್ಮ ಪೈಕಿ ಪುರುಷನಾಗಲಿ, ಸ್ತ್ರೀಯಾಗಲಿ, ಯಾರ ಕರ್ಮವನ್ನೂ ನಾನು ನಿಷ್ಫಲಗೊಳಿಸಲಾರೆ. ನಿಮ್ಮಲ್ಲಿ ಕೆಲವರಿಗೆ ಕೆಲವರೊಡನೆ (ಪರಸ್ಪರ) ಸಂಬಂಧವಿದೆ. ಆದ್ದರಿಂದ (ಧರ್ಮ ಸಂರಕ್ಷಣೆಗಾಗಿ) ಸ್ವದೇಶವನ್ನು ತೊರೆದ, ತಮ್ಮ ಗೃಹಗಳಿಂದ ಹೊರಹಾಕಲ್ಪಟ್ಟ, ನನ್ನ ಮಾರ್ಗದಲ್ಲಿ ದೌರ್ಜನ್ಯಕ್ಕೆ ಗುರಿಯಾದ, ಧರ್ಮಯುದ್ಧ ಮಾಡಿದ, ವಧಿಸಲ್ಪಟ್ಟ ಜನರಿಂದೆಲ್ಲ ನಿಶ್ಚಯವಾಗಿಯೂ ಅವರ ಕೆಡುಕುಗಳನ್ನು ನಾನು ತೊಡೆದುಹಾಕುವೆನು. ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಅವರಿಗೆ ಪ್ರವೇಶನೀಡುವೆನು. ಇದು ಅಲ್ಲಾಹನ ಕಡೆಯಿಂದ ಪ್ರತಿಫಲವಾಗಿದೆ. ಅತ್ಯುತ್ತಮವಾದ ಪ್ರತಿಫಲವಿರುವುದು ಅಲ್ಲಾಹನ ಬಳಿಯಲ್ಲಾಗಿದೆ.'

فَاسْتَجَابَ لَهُمْ رَبُّهُمْ اَنِّيْ لَآ اُضِيْعُ عَمَلَ عَامِلٍ مِّنْكُمْ مِّنْ ذَكَرٍ اَوْ اُنْثٰى ۚ بَعْضُكُمْ مِّنْۢ بَعْضٍ ۚ فَالَّذِيْنَ هَاجَرُوْا وَاُخْرِجُوْا مِنْ دِيَارِهِمْ وَاُوْذُوْا فِيْ سَبِيْلِيْ وَقٰتَلُوْا وَقُتِلُوْا لَاُكَفِّرَنَّ عَنْهُمْ سَيِّاٰتِهِمْ وَلَاُدْخِلَنَّهُمْ جَنّٰتٍ تَجْرِيْ مِنْ تَحْتِهَا الْاَنْهٰرُ ۚ ثَوَابًا مِّنْ عِنْدِ اللّٰهِ ۗ وَاللّٰهُ عِنْدَهٗ حُسْنُ الثَّوَابِ ﴿١٩٥﴾

**197.** ನಾಡುಗಳಲ್ಲೆಲ್ಲ ಅವಿಶ್ವಾಸಿಗಳ ಸ್ವೈರ ಅಲೆದಾಟ ನಿನ್ನನ್ನು ಮೋಸಗೊಳಿಸದಿರಲಿ.

لَا يَغُرَّنَّكَ تَقَلُّبُ الَّذِيْنَ كَفَرُوْا فِي
الْبِلَادِ ﴿١٩٦﴾

**198.** ಅದು ಕೇವಲ ಅಲ್ಪಕಾಲದ ಸುಖಾನುಭವ ವಾಗಿದೆ. ಆ ಬಳಿಕ ಅವರ ವಾಸಸ್ಥಾನ ನರಕವಾಗಿದೆ. ಅದೆಷ್ಟು ನಿಕೃಷ್ಟವಾದ ವಾಸಸ್ಥಳ!

مَتَاعٌ قَلِيْلٌ ۟ ثُمَّ مَاْوٰىهُمْ جَهَنَّمُ ؕ وَ
بِئْسَ الْمِهَادُ ﴿١٩٧﴾

**199.** ಆದರೆ ತಮ್ಮ ಪ್ರಭುವಿನ ಭಯವಿಟ್ಟು ಕೊಂಡವರಿಗೆ, ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳಿವೆ. ಅಲ್ಲೇ ಅವರು ವಾಸಿಸುವರು. ಇದು ಅಲ್ಲಾಹನ ಕಡೆಯಿಂದ ಒಂದು ಸತ್ಕಾರವಾಗಿದೆ. ಅಲ್ಲಾಹನ ಬಳಿಯಲ್ಲಿರುವಂಥದ್ದು ಸಜ್ಜನರಿಗೆ ಅತ್ಯುತ್ತಮವಾಗಿದೆ.

لٰكِنِ الَّذِيْنَ اتَّقَوْا رَبَّهُمْ لَهُمْ
جَنّٰتٌ تَجْرِيْ مِنْ تَحْتِهَا الْاَنْهٰرُ
خٰلِدِيْنَ فِيْهَا نُزُلًا مِّنْ عِنْدِ اللّٰهِ ؕ وَمَا
عِنْدَ اللّٰهِ خَيْرٌ لِّلْاَبْرَارِ ﴿١٩٨﴾

**200.** ನಿಸ್ಸಂದೇಹವಾಗಿಯೂ ಗ್ರಂಥದವರ ಪೈಕಿ ಅಲ್ಲಾಹನಿಗೆ ವಿಧೇಯತೆ ತೋರಿಸಿ, ಅಲ್ಲಾಹನ ಮೇಲೆಯೂ ನಿಮಗೆ ಅವತೀರ್ಣವಾದುದರ ಮೇಲೆಯೂ ಅವರಿಗೆ ಅವತೀರ್ಣವಾದುದರ ಮೇಲೆಯೂ ವಿಶ್ವಾಸವಿಡುವ ಕೆಲವರಿದ್ದಾರೆ. ಅವರು ತುಚ್ಛ ಬೆಲೆಗೆ ಅಲ್ಲಾಹನ ವಚನಗಳನ್ನು ಮಾರುವುದಿಲ್ಲ.[129] ತಮ್ಮ ಪ್ರಭುವಿನ ಬಳಿ ಅವರಿಗೆ ಪ್ರತಿಫಲವಿದೆ. ನಿಶ್ಚಯ ವಾಗಿಯೂ ಅಲ್ಲಾಹನು ಶೀಘ್ರವಾಗಿ ಲೆಕ್ಕ ಮಾಡುವವನಾಗಿದ್ದಾನೆ.

وَاِنَّ مِنْ اَهْلِ الْكِتٰبِ لَمَنْ يُّؤْمِنُ
بِاللّٰهِ وَمَاۤ اُنْزِلَ اِلَيْكُمْ وَ مَاۤ اُنْزِلَ
اِلَيْهِمْ خٰشِعِيْنَ لِلّٰهِ ۙ لَا يَشْتَرُوْنَ بِاٰيٰتِ
اللّٰهِ ثَمَنًا قَلِيْلًا ؕ اُولٰٓئِكَ لَهُمْ اَجْرُهُمْ
عِنْدَ رَبِّهِمْ ؕ اِنَّ اللّٰهَ سَرِيْعُ الْحِسَابِ ﴿١٩٩﴾

**201.** ಎಲೈ ಸತ್ಯವಿಶ್ವಾಸಿಗಳೇ, ನೀವು ಸಹನೆಯನ್ನು ಕೈಗೊಳ್ಳಿರಿ; ಸ್ಥೈರ್ಯದಲ್ಲಿ ನೀವು ಮೇಲ್ಮೆಯನ್ನು ಸಾಧಿಸಿರಿ; ಸರಹದ್ದುಗಳ ಕಾವಲುಗಾಯಿರಿ. ಅಲ್ಲಾಹನ ಭಯವಿಟ್ಟುಕೊಳ್ಳಿರಿ. (ಹೀಗೆ ಮಾಡಿದರೆ) ನಿಮಗೆ ವಿಜಯ ಪ್ರಾಪ್ತಿಯಾಗುವುದು.

يٰۤاَيُّهَا الَّذِيْنَ اٰمَنُوا اصْبِرُوْا وَ
صَابِرُوْا وَ رَابِطُوْا ۟ وَ اتَّقُوا اللّٰهَ
لَعَلَّكُمْ تُفْلِحُوْنَ ﴿٢٠٠﴾

129. ಲೌಕಿಕ ಕಾರ್ಯಗಳಿಗೆ ಅವರು ಧರ್ಮಕ್ಕಿಂತ ಹೆಚ್ಚಿನ ಆದ್ಯತೆ ನೀಡುವುದಿಲ್ಲ.

سُوْرَةُ النِّسَاءِ مَدَنِيَّةٌ وَّهِيَ مَعَ الْبَسْمَلَةِ مِائَةٌ وَّسَبْعٌ وَّسَبْعُوْنَ اٰيَةً وَّاَرْبَعَةٌ وَّعِشْرُوْنَ رُكُوْعًا

# 4. ಅನ್ನಿಸಾಅ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 177 ಆಯತ್‌ಗಳು ಹಾಗೂ 24 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಎಲೈ ಮನುಷ್ಯರೇ, ನೀವು ನಿಮ್ಮ ಪ್ರಭುವಿನ ಭಯವಿರಿಸಿಕೊಳ್ಳಿರಿ. ಅವನು ನಿಮ್ಮನ್ನು ಒಂದು ಜೀವಾಳದಿಂದ ಸೃಷ್ಟಿಸಿ, ಅದರಿಂದ** (ಅದರ ವರ್ಗದಿಂದಲೇ) **ಅದರ ಜೋಡಿಯನ್ನೂ ಸೃಷ್ಟಿಸಿ, ಅವೆರಡರಿಂದ ಅನೇಕ ಪುರುಷರನ್ನೂ ಸ್ತ್ರೀಯರನ್ನೂ** (ಲೋಕದಲ್ಲಿ) **ವ್ಯಾಪಿಸುವಂತೆ ಮಾಡಿರುವನು. ಯಾವೊಬ್ಬನ ಹೆಸರಿನಲ್ಲಿ ನೀವು** (ಪರಸ್ಪರ ಹಕ್ಕು ಬಾಧ್ಯತೆಗಳನ್ನು) **ಕೇಳುತ್ತೀರೋ ಆ ಅಲ್ಲಾಹನ ಭಯವಿಟ್ಟುಕೊಳ್ಳಿರಿ -** (ವಿಶೇಷವಾಗಿ) **ಕುಟುಂಬ ಸಂಬಂಧದ ವಿಚಾರದಲ್ಲಿಯೂ. ನಿಸ್ಸಂದೇಹವಾಗಿಯೂ ಅಲ್ಲಾಹನು ನಿಮ್ಮ ಮೇಲೆ ನಿಗಾ ಇರಿಸಿಕೊಂಡಿದ್ದಾನೆ.**

يٰۤاَيُّهَا النَّاسُ اتَّقُوْا رَبَّكُمُ الَّذِيْ خَلَقَكُمْ مِّنْ نَّفْسٍ وَّاحِدَةٍ وَّخَلَقَ مِنْهَا زَوْجَهَا وَبَثَّ مِنْهُمَا رِجَالًا كَثِيْرًا وَّنِسَآءً ۚ وَاتَّقُوا اللّٰهَ الَّذِيْ تَسَآءَلُوْنَ بِهٖ وَالْاَرْحَامَ ۗ اِنَّ اللّٰهَ كَانَ عَلَيْكُمْ رَقِيْبًا ﴿٢﴾

**3. ಅನಾಥರಿಗೆ ಅವರ ಸೊತ್ತನ್ನು ಬಿಟ್ಟು ಕೊಡಿರಿ. ನೀವು ಒಳ್ಳೆಯದಕ್ಕೆ ಕೆಟ್ಟದನ್ನು ಬದಲಾಯಿಸಬೇಡಿರಿ. ಅವರ ಧನವನ್ನು ನಿಮ್ಮ ಧನದೊಂದಿಗೆ ಬೆರೆಸಿ ತಿನ್ನಬೇಡಿರಿ. ನಿಶ್ಚಯವಾಗಿಯೂ ಅದೊಂದು ದೊಡ್ಡ ಪಾಪವಾಗಿದೆ.**

وَاٰتُوا الْيَتٰمٰۤى اَمْوَالَهُمْ وَلَا تَتَبَدَّلُوا الْخَبِيْثَ بِالطَّيِّبِ ۖ وَلَا تَاْكُلُوْۤا اَمْوَالَهُمْ اِلٰۤى اَمْوَالِكُمْ ۚ اِنَّهٗ كَانَ حُوْبًا كَبِيْرًا ﴿٣﴾

**4. ಅನಾಥರ ವಿಚಾರದಲ್ಲಿ ನ್ಯಾಯಪಾಲಿಸಲಾರಿರೆಂದು ನಿಮಗೆ ಭಯವಿದ್ದರೆ**[130] **ನಿಮಗೆ ಉಚಿತವೆನಿಸುವ** (ಬೇರೆ) **ಸ್ತ್ರೀಯರ ಪೈಕಿ ಇಬ್ಬರನ್ನೋ ಮೂವರನ್ನೋ ನಾಲ್ವರನ್ನೋ ನೀವು ವಿವಾಹಮಾಡಿಕೊಳ್ಳಿರಿ. ಆದರೆ ನ್ಯಾಯಪಾಲಿಸಲಾರಿರೆಂದು ನಿಮಗೆ ಭಯವಿದ್ದರೆ ಒಬ್ಬಳನ್ನು** (ಮಾತ್ರ ವಿವಾಹವಾಗಿರಿ); **ಅಥವಾ ನಿಮ್ಮ ಅಧೀನದಲ್ಲಿರುವ ದಾಸಿಯರಿಂದ** (ವಿವಾಹ ಮಾಡಿಕೊಳ್ಳಿರಿ). **ನೀವು ಅನ್ಯಾಯವಾಗಿ ವರ್ತಿಸದಿರಲು ಅತಿ ನಿಕಟವಾದ** ಮಾರ್ಗ **ಇದೇ ಆಗಿದೆ.**[131]

وَاِنْ خِفْتُمْ اَلَّا تُقْسِطُوْا فِى الْيَتٰمٰى فَانْكِحُوْا مَا طَابَ لَكُمْ مِّنَ النِّسَآءِ مَثْنٰى وَثُلٰثَ وَرُبٰعَ ۚ فَاِنْ خِفْتُمْ اَلَّا تَعْدِلُوْا فَوَاحِدَةً اَوْ مَا مَلَكَتْ اَيْمَانُكُمْ ۗ ذٰلِكَ اَدْنٰۤى اَلَّا تَعُوْلُوْا ﴿٤﴾

130. ಒಬ್ಬಳಿಗಿಂತ ಹೆಚ್ಚು ಅನಾಥ ಸ್ತ್ರೀಯರನ್ನು ವಿವಾಹವಾಗುವುದು ಉಚಿತವಲ್ಲ. ಯಾಕೆಂದರೆ ಅವರೊಡನೆ ನ್ಯಾಯಪಾಲನೆಯ ವಿಚಾರದಲ್ಲಿ ಆಶಂಕೆಗೆ ಆಸ್ಪದವಿದೆ. ಅನಾಥರಲ್ಲದ ಬೇರೆ ಸ್ತ್ರೀಯರ ಪೈಕಿ ಈರ್ವರನ್ನೋ ಮೂವರನ್ನೋ ನಾಲ್ವರನ್ನೋ ವಿವಾಹವಾಗಬಹುದು. ಕಾರಣವೇನೆಂದರೆ, ಅವರ ಹಕ್ಕುಗಳ ಬಗ್ಗೆ ಕೇಳಲು ಅವರ ರಕ್ಷಕರಿರುತ್ತಾರೆ; ಆದರೆ ಅನಾಥರಿಗೆ ಅಂತಹ ರಕ್ಷಕರು ಇರುವುದಿಲ್ಲವಷ್ಟೆ.





**5. ಸ್ತ್ರೀಯರಿಗೆ ಅವರ ವಿವಾಹಧನ** (ಮಹರ್)**ವನ್ನು ಆತ್ಮಸಂತೋಷದಿಂದ ನೀಡಿರಿ. ನಂತರ, ಅವರು ಸ್ವಇಚ್ಛೆಯಿಂದ ಅದರಿಂದೇನಾದರೂ ನಿಮಗೆ ಬಿಟ್ಟುಕೊಟ್ಟರೆ, ಅದನ್ನು ನೀವು ಸಂತೋಷದಿಂದ ಅನುಭೋಗಿಸಿರಿ.**

وَاٰتُوا النِّسَآءَ صَدُقٰتِهِنَّ نِحْلَةً ۚ فَاِنْ طِبْنَ لَكُمْ عَنْ شَيْءٍ مِّنْهُ نَفْسًا فَكُلُوْهُ هَنِيْٓـًٔا مَّرِيْٓـًٔا ﴿٥﴾

**6. ನಿಮ್ಮ ಜೀವನದ ಆಸರೆಯಾಗಿ ಅಲ್ಲಾಹನು ನಿಮಗೆ ನಿಶ್ಚಯಿಸಿದ ನಿಮ್ಮ ಧನವನ್ನು ಬುದ್ಧಿ ಪಕ್ವತೆ ಇಲ್ಲದವರಿಗೆ ವಹಿಸಿಕೊಡಬೇಡಿರಿ. ಆದರೆ ಅದರಿಂದ ಅವರಿಗೆ ಉಣ್ಣಲು ಮತ್ತು ಉಡಲು ಕೊಡಿರಿ ಹಾಗೂ ಅವರೊಂದಿಗೆ ಸುದುಪದೇಶದ ಮಾತನ್ನು ಆಡಿರಿ.**

وَلَا تُؤْتُوا السُّفَهَآءَ اَمْوَالَكُمُ الَّتِيْ جَعَلَ اللّٰهُ لَكُمْ قِيٰمًا وَّارْزُقُوْهُمْ فِيْهَا وَاكْسُوْهُمْ وَقُوْلُوْا لَهُمْ قَوْلًا مَّعْرُوْفًا ﴿٦﴾

**7. ಅನಾಥರನ್ನು** (ಅವರ ಕಾರ್ಯನಿರ್ವಹಣ ಸಾಮರ್ಥ್ಯವನ್ನು) **ಅವರು ವಿವಾಹ** ಪ್ರಾಯ **ಪಡೆಯುವ ತನಕ ಪರೀಕ್ಷಿಸುತ್ತಾ ಇರಿ. ಅವರಲ್ಲಿ ನೀವು ಪಕ್ವತೆಯನ್ನು ಕಂಡರೆ, ಅವರ ಸಂಪತ್ತನ್ನು ಅವರಿಗೆ ವಹಿಸಿಕೊಡಿರಿ. ಅವರು ಪ್ರೌಢಾವಸ್ಥೆಗೆ ತಲಪುವುದನ್ನು ನೋಡಿ ಅಮಿತವಾಗಿಯೂ ಆತುರಾತುರದಿಂದಲೂ ನೀವು ಅದನ್ನು ತಿಂದು ಹಾಕಬೇಡಿರಿ.** (ರಕ್ಷಕನು) **ಧನಿಕನಾಗಿದ್ದರೆ** (ಅನಾಥ ಮಕ್ಕಳ ಧನದಿಂದ) **ಏನನ್ನೂ ಬಳಸದಿರಲಿ. ದರಿದ್ರನಾಗಿದ್ದರೆ,** (ಅದರಿಂದ) **ನ್ಯಾಯೋಚಿತವಾಗಿ ಅನುಭೋಗಿಸಲಿ. ಅವರ ಸೊತ್ತನ್ನು ಅವರಿಗೆ ಬಿಟ್ಟುಕೊಡುವಾಗ ಸಾಕ್ಷಿಗಳನ್ನು ಇಟ್ಟುಕೊಳ್ಳಿರಿ. ಲೆಕ್ಕತೆಗೆಯಲು ಅಲ್ಲಾಹನೇ ಸಾಕು.**

وَابْتَلُوا الْيَتٰمٰى حَتّٰۤى اِذَا بَلَغُوا النِّكَاحَ ۚ فَاِنْ اٰنَسْتُمْ مِّنْهُمْ رُشْدًا فَادْفَعُوْۤا اِلَيْهِمْ اَمْوَالَهُمْ ۚ وَلَا تَاْكُلُوْهَاۤ اِسْرَافًا وَّبِدَارًا اَنْ يَّكْبَرُوْا ۗ وَمَنْ كَانَ غَنِيًّا فَلْيَسْتَعْفِفْ ۚ وَمَنْ كَانَ فَقِيْرًا فَلْيَاْكُلْ بِالْمَعْرُوْفِ ۗ فَاِذَا دَفَعْتُمْ اِلَيْهِمْ اَمْوَالَهُمْ فَاَشْهِدُوْا عَلَيْهِمْ ۗ وَكَفٰى بِاللّٰهِ حَسِيْبًا ﴿٧﴾

**8. ಮಾತಾಪಿತರು ಮತ್ತು ನಿಕಟ ಸಂಬಂಧಿಗಳು**

لِلرِّجَالِ نَصِيْبٌ مِّمَّا تَرَكَ الْوَالِدٰنِ وَ

131. ಈ ಬೋಧನೆಯ ಪ್ರಕಾರ ನೀವು ವರ್ತಿಸುವಿರಾದರೆ ಅನ್ಯಾಯ ಮತ್ತು ಪಾಪದ ಆಪತ್ತಿನಿಂದ ಬಹಳವಾಗಿ ನೀವು ಸುರಕ್ಷಿತರಾಗುವಿರಿ.

ಬಿಟ್ಟು ಹೋದ ಸೊತ್ತಿನಲ್ಲಿ ಪುರುಷರಿಗೆ ಒಂದು ಪಾಲಿದೆ. ಹಾಗೆಯೇ ಮಾತಾಪಿತರು ಮತ್ತು ನಿಕಟ ಸಂಬಂಧಿಗಳು ಬಿಟ್ಟುಹೋದ ಸೊತ್ತಿನಲ್ಲಿ ಸ್ತ್ರೀಯರಿಗೂ ಒಂದು ಪಾಲಿದೆ- ಅದು ಹೆಚ್ಚಿರಲಿ ಅಥವಾ ಕಮ್ಮಿಯಿರಲಿ - ನಿರ್ದಿಷ್ಟವಾದೊಂದು ಪಾಲು.

ٱلْأَقْرَبُونَ وَلِلنِّسَآءِ نَصِيبٌ مِّمَّا
تَرَكَ ٱلْوَٰلِدَانِ وَٱلْأَقْرَبُونَ مِمَّا قَلَّ
مِنْهُ أَوْ كَثُرَ ۚ نَصِيبًا مَّفْرُوضًا ٧

9. (ಸೊತ್ತನ್ನು) ಪಾಲು ಮಾಡುವ ಸಂದರ್ಭದಲ್ಲಿ (ಹಕ್ಕುದಾರರಲ್ಲದ ಬೇರೆ) ಹತ್ತಿರದ ಸಂಬಂಧಿಗಳೂ ಅನಾಥರೂ ನಿರ್ಗತಿಕರೂ (ಅಲ್ಲಿ) ಉಪಸ್ಥಿತರಿದ್ದರೆ, ಅವರಿಗೂ ಅದರಿಂದ (ಏನನ್ನಾದರೂ) ಕೊಡಿರಿ ಹಾಗೂ ಅವರೊಡನೆ ಒಳ್ಳೆಯ ಮಾತನ್ನಾಡಿರಿ.

وَإِذَا حَضَرَ ٱلْقِسْمَةَ أُو۟لُوا۟ ٱلْقُرْبَىٰ وَ
ٱلْيَتَٰمَىٰ وَٱلْمَسَٰكِينُ فَٱرْزُقُوهُم مِّنْهُ وَ
قُولُوا۟ لَهُمْ قَوْلًا مَّعْرُوفًا ٨

10. ತಮ್ಮ ಹಿಂದೆ ನಿರ್ಬಲರಾದ ಸಂತಾನಗಳನ್ನು ಬಿಟ್ಟು ಹೋಗುವ ಪಕ್ಷದಲ್ಲಿ (ಅವರಿಗೆ ಏನು ಸಂಭವಿಸುವುದೆಂದು ನೆನೆದು) ಭಯಗ್ರಸ್ತರಾಗುವವರು (ಇತರ ಅನಾಥರ ಬಗ್ಗೆ ಸಹ ಅಲ್ಲಾಹನ) ಭಯವಿಟ್ಟು ಕೊಳ್ಳಲಿ. ಆದ್ದರಿಂದ ಅವರು ಅಲ್ಲಾಹನ ಭಯವಿರಿಸಿಕೊಂಡು ಋಜುವಾದ[132] ಮಾತನ್ನಾಡಲಿ.

وَلْيَخْشَ ٱلَّذِينَ لَوْ تَرَكُوا۟ مِنْ
خَلْفِهِمْ ذُرِّيَّةً ضِعَٰفًا خَافُوا۟
عَلَيْهِمْ فَلْيَتَّقُوا۟ ٱللَّهَ وَلْيَقُولُوا۟ قَوْلًا
سَدِيدًا ٩

11. ಅನಾಥರ ಧನವನ್ನು ಅಕ್ರಮವಾಗಿ(ಅಪಹರಿಸಿ) ತಿನ್ನುವವರು ನಿಶ್ಚಯವಾಗಿಯೂ ತಮ್ಮ ಹೊಟ್ಟೆಗಳಲ್ಲಿ ಬೆಂಕಿಯನ್ನು ತಿಂದು ತುಂಬಿಸುತ್ತಾರೆ. ಖಂಡಿತವಾಗಿಯೂ ಅವರು ಜ್ವಲಿಸುವ ಅಗ್ನಿಯನ್ನು ಪ್ರವೇಶಿಸುವರು.

إِنَّ ٱلَّذِينَ يَأْكُلُونَ أَمْوَٰلَ ٱلْيَتَٰمَىٰ
ظُلْمًا إِنَّمَا يَأْكُلُونَ فِى بُطُونِهِمْ
نَارًا ۖ وَسَيَصْلَوْنَ سَعِيرًا ١٠ ع

12. ನಿಮ್ಮ ಸಂತಾನಗಳ (ಹಕ್ಕಿನ) ಕುರಿತು ಅಲ್ಲಾಹನು ನಿಮಗೆ ಆದೇಶಿಸುತ್ತಾನೆ: ಇಬ್ಬರು ಸ್ತ್ರೀಯರಷ್ಟು ಪಾಲು ಒಬ್ಬ ಪುರುಷನಿಗೆ ಇದೆ. ಸ್ತ್ರೀಯರು ಮಾತ್ರವೇ ಇಬ್ಬರಿಗಿಂತ ಹೆಚ್ಚು ಇದ್ದರೆ, (ಮೃತ ಪಟ್ಟ ವ್ಯಕ್ತಿ) ಬಿಟ್ಟು ಹೋದ ಮೂರರಲ್ಲಿ ಎರಡು ಅಂಶ ಅವರಿಗಿದೆ. ಒಬ್ಬಳು ಮಾತ್ರವೇ ಆಗಿದ್ದರೆ ಅವಳಿಗೆ ಅರ್ಧ ಪಾಲಿದೆ. (ಮೃತ ವ್ಯಕ್ತಿಗೆ) ಸಂತಾನವಿದ್ದರೆ, ಆತನ ಮಾತಾಪಿತರಿಗೆ - ಒಬ್ಬೊಬ್ಬರಿಗೂ - ಆತನು ಬಿಟ್ಟು ಹೋದ ಸೊತ್ತಿನ ಆರರಲ್ಲಿ ಒಂದಂಶ ಲಭಿಸುವುದು.

يُوصِيكُمُ ٱللَّهُ فِىٓ أَوْلَٰدِكُمْ ۖ لِلذَّكَرِ
مِثْلُ حَظِّ ٱلْأُنثَيَيْنِ ۚ فَإِن كُنَّ نِسَآءً
فَوْقَ ٱثْنَتَيْنِ فَلَهُنَّ ثُلُثَا مَا تَرَكَ ۖ وَإِن
كَانَتْ وَٰحِدَةً فَلَهَا ٱلنِّصْفُ ۚ وَلِأَبَوَيْهِ
لِكُلِّ وَٰحِدٍ مِّنْهُمَا ٱلسُّدُسُ مِمَّا تَرَكَ
إِن كَانَ لَهُۥ وَلَدٌ ۚ فَإِن لَّمْ يَكُن لَّهُۥ

132. ದ್ವಂದಾರ್ಥವಿಲ್ಲದ ನೇರನುಡಿ.





ಆತನಿಗೆ ಸಂತಾನವಿಲ್ಲದೆ ಮಾತಾಪಿತರು ಆತನ ವಾರೀಸುದಾರರೆಂದಾದರೆ, ಆತನ ತಾಯಿಗೆ ಮೂರರಲ್ಲಿ ಒಂದಂಶ ಸಿಗುವುದು. ಆತನಿಗೆ ಸಹೋದರ ಸಹೋದರಿಯರಿದ್ದರೆ ತಾಯಿಗೆ ಆರರಲ್ಲಿ ಒಂದು ಪಾಲಿದೆ. ಇದು (ಈ ರೀತಿಯಾಗಿ ಪಾಲು ಮಾಡಬೇಕಾದುದು) ಆತನ ಅಂತಿಮ ಇಷ್ಟ ಪತ್ರ ಮತ್ತು ಸಾಲ ಸಂದಾಯದ ನಂತರವಾಗಿದೆ. ನಿಮ್ಮ ಪಿತರು ಮತ್ತು ನಿಮ್ಮ ಮಕ್ಕಳ ಪೈಕಿ ಹಿತದಲ್ಲಿ ನಿಮಗೆ ಹೆಚ್ಚು ನಿಕಟವಾಗಿರುವವರು ಯಾರೆಂದು ನಿಮಗೆ ತಿಳಿಯದು. ಇದು ಅಲ್ಲಾಹನ ನಿರ್ಣಯವಾಗಿದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲ ಬಲ್ಲವನೂ ಬುದ್ಧಿಶಾಲಿಯೂ ಆಗಿದ್ದಾನೆ.

وَلَدٌ وَوَرِثَهُۥٓ أَبَوَاهُ فَلِأُمِّهِ ٱلثُّلُثُ ۚ
فَإِن كَانَ لَهُۥٓ إِخْوَةٌ فَلِأُمِّهِ ٱلسُّدُسُ ۚ
مِنۢ بَعْدِ وَصِيَّةٍ يُوصِى بِهَآ أَوْ دَيْنٍ ۗ
ءَابَآؤُكُمْ وَأَبْنَآؤُكُمْ لَا تَدْرُونَ
أَيُّهُمْ أَقْرَبُ لَكُمْ نَفْعًا ۚ فَرِيضَةً مِّنَ
ٱللَّهِ ۗ إِنَّ ٱللَّهَ كَانَ عَلِيمًا حَكِيمًا ١١

13. ನಿಮ್ಮ ಪತ್ನಿಯರು ಬಿಟ್ಟುಹೋದುದರ ಅರ್ಧ ನಿಮಗಿದೆ - ಅವರಿಗೆ ಸಂತಾನವಿಲ್ಲದಿದ್ದರೆ. ಅವರಿಗೆ ಸಂತಾನವಿದ್ದರೆ, ಅವರು ಬಿಟ್ಟುಹೋದುದರ ನಾಲ್ಕರಲ್ಲಿ ಒಂದಂಶ ನಿಮಗೆ ಲಭ್ಯ - ಅವರು ಮಾಡಿದ ಉಯಿಲು ಮತ್ತು ಸಾಲ ಸಂದಾಯದ ಬಳಿಕ. ನಿಮಗೆ ಸಂತಾನ ವಿಲ್ಲದಿದ್ದರೆ, ನೀವು ಬಿಟ್ಟುಹೋಗುವ ಸೊತ್ತಿನ ನಾಲ್ಕರಲ್ಲಿ ಒಂದಂಶ ಅವರಿಗೆ (ನಿಮ್ಮ ಪತ್ನಿಯರಿಗೆ) ಲಭಿಸುವುದು. ನಿಮಗೆ ಸಂತಾನವಿದ್ದರೆ ನೀವು ಬಿಟ್ಟು ಹೋಗುವ ಸೊತ್ತಿನ ಎಂಟರಲ್ಲಿ ಒಂದಂಶ ಅವರಿಗೆ ಸಿಗುವುದು - ನೀವು ಮಾಡಿದ ಉಯಿಲು ಮತ್ತು ಸಾಲ ಸಂದಾಯದ ಬಳಿಕ. 'ಕಲಾಲ'[133] ಆಗಿರುವ ಪುರುಷ ಅಥವಾ ಸ್ತ್ರೀಗೆ ಓರ್ವ ಸಹೋದರ ಅಥವಾ ಸಹೋದರಿ ಇದ್ದರೆ ಪ್ರತಿಯೊಬ್ಬರಿಗೂ ಆರರಲ್ಲಿ ಒಂದಂಶ ಸಿಗುವುದು. ಇನ್ನು, ಅವರು ಅದಕ್ಕಿಂತ ಹೆಚ್ಚು ಮಂದಿಯಿದ್ದರೆ ಅವರು ಮೂರರಲ್ಲಿ ಒಂದಂಶವನ್ನು ಹಂಚಿಕೊಳ್ಳುವರು - ಇತರರ ಹಕ್ಕನ್ನು ಹಾನಿಗೊಳಿಸದ

وَلَكُمْ نِصْفُ مَا تَرَكَ أَزْوَٰجُكُمْ إِن
لَّمْ يَكُن لَّهُنَّ وَلَدٌ ۚ فَإِن كَانَ لَهُنَّ وَلَدٌ
فَلَكُمُ ٱلرُّبُعُ مِمَّا تَرَكْنَ ۚ مِنۢ بَعْدِ
وَصِيَّةٍ يُوصِينَ بِهَآ أَوْ دَيْنٍ ۚ وَلَهُنَّ
ٱلرُّبُعُ مِمَّا تَرَكْتُمْ إِن لَّمْ يَكُن لَّكُمْ
وَلَدٌ ۚ فَإِن كَانَ لَكُمْ وَلَدٌ فَلَهُنَّ
ٱلثُّمُنُ مِمَّا تَرَكْتُم ۚ مِّنۢ بَعْدِ وَصِيَّةٍ
تُوصُونَ بِهَآ أَوْ دَيْنٍ ۗ وَإِن كَانَ رَجُلٌ
يُورَثُ كَلَٰلَةً أَوِ ٱمْرَأَةٌ وَلَهُۥٓ أَخٌ أَوْ أُخْتٌ
فَلِكُلِّ وَٰحِدٍ مِّنْهُمَا ٱلسُّدُسُ ۚ فَإِن
كَانُوٓا۟ أَكْثَرَ مِن ذَٰلِكَ فَهُمْ شُرَكَآءُ
فِى ٱلثُّلُثِ ۚ مِنۢ بَعْدِ وَصِيَّةٍ يُوصَىٰ

133. ಮಾತಾಪಿತರಾಗಲಿ, ಮಕ್ಕಳಾಗಲಿ ಇಲ್ಲದೆ ಮೃತಪಡುವವರನ್ನು'ಕಲಾಲ'ಎಂದು ಹೇಳುತ್ತಾರೆ. ಆಗ ಅವರ ವಾರೀಸುದಾರರು ಅವರ ಸಹೋದರ - ಸಹೋದರಿಯರಾಗುತ್ತಾರೆ. ಇಲ್ಲಿ ತಾಯಿಯ ಕಡೆಯಿಂದ ಇರುವ ಸಹೋದರ ಸಹೋದರಿಯರ ಕುರಿತು ಹೇಳಲಾಗಿದೆ. ಇದೇ ಅಧ್ಯಾಯದ 177ನೇ ಸೂಕ್ತದಲ್ಲಿ ಸ್ವಂತ ಸಹೋದರ - ಸಹೋದರಿಯರ ಬಗ್ಗೆ ಮತ್ತು ತಂದೆಯ ಕಡೆಯಿಂದ ಇರುವ ಸಹೋದರ - ಸಹೋದರಿಯರ ಬಗ್ಗೆ ಹೇಳಲಾಗಿದೆ.

ಉಯಿಲು ಮತ್ತು ಸಾಲ ಸಂದಾಯದ ನಂತರ. ಇದು ಅಲ್ಲಾಹನ ನಿರ್ದೇಶವಾಗಿದೆ. ಅಲ್ಲಾಹನು ಎಲ್ಲವನ್ನು ಬಲ್ಲವನೂ ಸಹನಶೀಲನೂ ಆಗಿದ್ದಾನೆ.

بِهَآ اَوْ دَيْنٍ ۙ غَيْرَ مُضَآرٍّ ۚ وَصِيَّةً مِّنَ اللّٰهِ ۗ وَاللّٰهُ عَلِيْمٌ حَلِيْمٌ ﴿١٢﴾

14. ಇವು ಅಲ್ಲಾಹನ (ನಿರ್ಣೀತ) ಎಲ್ಲೆಗಳು. ಅಲ್ಲಾಹನನ್ನು ಮತ್ತು ಅವನ ಸಂದೇಶ ವಾಹಕನನ್ನು ಅನುಸರಿಸುವವರಿಗೆ, ಕೆಳಭಾಗದಲ್ಲಿ ಸರಿತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಅವನು ಪ್ರವೇಶ ನೀಡುವನು. ಅವರು ಅಲ್ಲೇ ನಿತ್ಯ ವಾಸಿಸುವರು. ಅದೇ ಮಹತ್ತರ ವಿಜಯ.

تِلْكَ حُدُوْدُ اللّٰهِ ۗ وَمَنْ يُّطِعِ اللّٰهَ وَرَسُوْلَهٗ يُدْخِلْهُ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ۗ وَذٰلِكَ الْفَوْزُ الْعَظِيْمُ ﴿١٣﴾

15. ಅಲ್ಲಾಹನನ್ನು ಮತ್ತು ಅವನ ಸಂದೇಶ ವಾಹಕನನ್ನು ಧಿಕ್ಕರಿಸಿ ಅವನ (ಅಲ್ಲಾಹನ) ನಿಯಮೋಲ್ಲಂಘನ ಮಾಡುವವನನ್ನು ಅವನು ನರಕದಲ್ಲಿ ಪ್ರವೇಶಗೊಳಿಸುವನು. ಅವನು ಅದರಲ್ಲಿ ದೀರ್ಘಕಾಲ ವಾಸಿಸುವನು.[134] ಅಲ್ಲಿ ಅವನಿಗೆ ಅಪಮಾನಕರವಾದ ಶಿಕ್ಷೆಯಿದೆ.

وَمَنْ يَّعْصِ اللّٰهَ وَرَسُوْلَهٗ وَيَتَعَدَّ حُدُوْدَهٗ يُدْخِلْهُ نَارًا خَالِدًا فِيْهَا ۖ وَلَهٗ عَذَابٌ مُّهِيْنٌ ﴿١٤﴾

16. ನಿಮ್ಮ ಸ್ತ್ರೀಯರಲ್ಲಿ ಅಶ್ಲೀಲವಾಗಿ ವರ್ತಿಸುವವರ ಬಗ್ಗೆ ನಿಮ್ಮ ಪೈಕಿ ನಾಲ್ವರನ್ನು ಸಾಕ್ಷಿಯಾಗಿ ತನ್ನಿರಿ. ಹಾಗೆ ಅವರು ಸಾಕ್ಷಿ ಹೇಳಿದರೆ ಅವರು ಮೃತ್ಯುವಶರಾಗುವ ವರೆಗೆ ಅಥವಾ ಅಲ್ಲಾಹನು ಅವರಿಗೆ ಒಂದು ಮಾರ್ಗವನ್ನು ತೆರೆಯುವ ವರೆಗೆ ಅವರನ್ನು ಮನೆಯೊಳಗೆ ತಡೆದು ನಿಲ್ಲಿಸಿರಿ.[135]

وَالّٰتِيْ يَاْتِيْنَ الْفَاحِشَةَ مِنْ نِّسَآئِكُمْ فَاسْتَشْهِدُوْا عَلَيْهِنَّ اَرْبَعَةً مِّنْكُمْ ۚ فَاِنْ شَهِدُوْا فَاَمْسِكُوْهُنَّ فِى الْبُيُوْتِ حَتّٰى يَتَوَفّٰىهُنَّ الْمَوْتُ اَوْ يَجْعَلَ اللّٰهُ لَهُنَّ سَبِيْلًا ﴿١٥﴾

17. ನಿಮ್ಮ ಪೈಕಿ ಇಬ್ಬರು ಪುರುಷರು ಅಂತಹ ನೀಚ ಕೃತ್ಯಕ್ಕಿಳಿದರೆ, ಅವರಿಬ್ಬರನ್ನೂ ಶಿಕ್ಷಿಸಿರಿ. ಅವರು ಪಶ್ಚಾತ್ತಾಪಪಟ್ಟು ತಮ್ಮನ್ನು ಸುಧಾರಿಸಿಕೊಂಡರೆ ಅವರನ್ನು ಬಿಟ್ಟುಬಿಡಿರಿ. ನಿಸ್ಸಂದೇಹವಾಗಿಯೂ ಅಲ್ಲಾಹನು ಬಹಳ ಹೆಚ್ಚು ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَالَّذٰنِ يَاْتِيٰنِهَا مِنْكُمْ فَاٰذُوْهُمَا ۚ فَاِنْ تَابَا وَاَصْلَحَا فَاَعْرِضُوْا عَنْهُمَا ۗ اِنَّ اللّٰهَ كَانَ تَوَّابًا رَّحِيْمًا ﴿١٦﴾

134. ಟಿಪ್ಪಣಿ 23A ನೋಡಿರಿ.

135. ಇಲ್ಲಿ 'ಅಶ್ಲೀಲ ವರ್ತನೆ' ಎಂದು ಹೇಳಿದ್ದು ವ್ಯಭಿಚಾರದ ಕುರಿತಲ್ಲ; ಬೇರೆ ರೀತಿಯ ಅಶ್ಲೀಲ ವರ್ತನೆಯ ಬಗ್ಗೆಯಾಗಿದೆ. ಖುರ್‌ಆನಿನಲ್ಲಿ ವ್ಯಭಿಚಾರಕ್ಕೆ ಶಿಕ್ಷೆ 24:3ರಲ್ಲಿ ಉಲ್ಲೇಖಿಸಲಾಗಿದೆ.





18. ಅಜ್ಞಾನದಿಂದ ತಪ್ಪುಮಾಡಿ, ಕೂಡಲೇ ಪಶ್ಚಾತ್ತಾಪಪಡುವವರ ಪಶ್ಚಾತ್ತಾಪ ಮಾತ್ರವೇ ಅಲ್ಲಾಹನಿಂದ ಸ್ವೀಕಾರಾರ್ಹ. ಅಲ್ಲಾಹನು ಅವರ ಮೇಲೆ ಕರುಣೆದೋರುತ್ತಾನೆ. ಅಲ್ಲಾಹನು ಎಲ್ಲ ಬಲ್ಲವನೂ ಬುದ್ಧಿಶಾಲಿಯೂ ಆಗಿದ್ದಾನೆ.

اِنَّمَا التَّوْبَةُ عَلَى اللّٰهِ لِلَّذِيْنَ يَعْمَلُوْنَ السُّوْٓءَ بِجَهَالَةٍ ثُمَّ يَتُوْبُوْنَ مِنْ قَرِيْبٍ فَاُولٰٓئِكَ يَتُوْبُ اللّٰهُ عَلَيْهِمْ ۗ وَكَانَ اللّٰهُ عَلِيْمًا حَكِيْمًا ﴿١٧﴾

19. ದುಷ್ಕೃತ್ಯ ಮಾಡುತ್ತಲೇ ಇದ್ದು ಮರಣ ಸಮೀಪಿಸುವಾಗ, 'ನಾನೀಗ ಪಶ್ಚಾತ್ತಾಪಪಡುತ್ತೇನೆ' ಎಂದು ಹೇಳುವವರ ಮತ್ತು ಅವಿಶ್ವಾಸಿಗಳಾಗಿ ಮರಣ ಪಡುವವರ ಪಶ್ಚಾತ್ತಾಪ ಸ್ವೀಕರಿಸಲ್ಪಡದು. ಅವರಿಗೆ ನಾವು ಯಾತನಾಮಯ ಶಿಕ್ಷೆಯನ್ನು ಸಿದ್ಧಪಡಿಸಿ ಇಟ್ಟಿದ್ದೇವೆ.

وَلَيْسَتِ التَّوْبَةُ لِلَّذِيْنَ يَعْمَلُوْنَ السَّيِّاٰتِ ۚ حَتّٰٓى اِذَا حَضَرَ اَحَدَهُمُ الْمَوْتُ قَالَ اِنِّيْ تُبْتُ الْـٰٔنَ وَلَا الَّذِيْنَ يَمُوْتُوْنَ وَهُمْ كُفَّارٌ ۗ اُولٰٓئِكَ اَعْتَدْنَا لَهُمْ عَذَابًا اَلِيْمًا ﴿١٨﴾

20. ಎಲೈ ವಿಶ್ವಾಸಿಗಳೇ, ಅವರ ಇಚ್ಛೆಗೆ ವಿರುದ್ಧವಾಗಿ, ನೀವು ಸ್ತ್ರೀಯರ ಉತ್ತರಾಧಿಕಾರಿಯಾಗುವುದು ಧರ್ಮಸಮ್ಮತವಲ್ಲ. ನೀವು ಅವರಿಗೆ ಕೊಟ್ಟಿರುವ *ಧನದಿಂದ* ಒಂದಂಶವನ್ನು ವಾಪಾಸು ಪಡೆಯುವ ಉದ್ದೇಶದಿಂದ ಅವರನ್ನು ತಡೆದು ನಿಲ್ಲಿಸಲೂ ಬಾರದು - ಎದ್ದು ಕಾಣುವ ದುರ್ವರ್ತನೆಯನ್ನು ಅವರು ತೋರಿಸಿದರೆ ಹೊರತು.[136] ನೀವು ಅವರೊಡನೆ ಉತ್ತಮ ರೀತಿಯಲ್ಲಿ ವರ್ತಿಸಿರಿ. ನೀವು ಅವರನ್ನು ಇಷ್ಟಪಡುವುದಿಲ್ಲವಾದರೆ, (ನೆನಪಿಡಿರಿ) ಅಲ್ಲಾಹನು ಧಾರಾಳ ಒಳಿತನ್ನು ಇಟ್ಟಿರುವ ಒಂದು ವಸ್ತುವನ್ನು ನೀವು ಮೆಚ್ಚುವುದಿಲ್ಲವೆಂದಾಗಲೂ ಬಹುದು.

يٰٓاَيُّهَا الَّذِيْنَ اٰمَنُوْا لَا يَحِلُّ لَكُمْ اَنْ تَرِثُوا النِّسَآءَ كَرْهًا ۗ وَلَا تَعْضُلُوْهُنَّ لِتَذْهَبُوْا بِبَعْضِ مَآ اٰتَيْتُمُوْهُنَّ اِلَّآ اَنْ يَّاْتِيْنَ بِفَاحِشَةٍ مُّبَيِّنَةٍ ۚ وَعَاشِرُوْهُنَّ بِالْمَعْرُوْفِ ۚ فَاِنْ كَرِهْتُمُوْهُنَّ فَعَسٰٓى اَنْ تَكْرَهُوْا شَيْـًٔا وَّيَجْعَلَ اللّٰهُ فِيْهِ خَيْرًا كَثِيْرًا ﴿١٩﴾

21. ಓರ್ವ ಪತ್ನಿಯ ಸ್ಥಾನದಲ್ಲಿ ಮತ್ತೋರ್ವ ಪತ್ನಿಯನ್ನು ವರಿಸಲು ನೀವು ಬಯಸುವಿರಾದರೆ, ಅವರ ಪೈಕಿ ಒಬ್ಬಳಿಗೆ ನೀವು *ಧನದ* ಒಂದು ರಾಶಿಯನ್ನೇ ಕೊಟ್ಟಿದ್ದರೆ ಕೂಡ ಅದರಿಂದ ಏನನ್ನೂ ವಾಪಾಸು

وَاِنْ اَرَدْتُّمُ اسْتِبْدَالَ زَوْجٍ مَّكَانَ زَوْجٍ ۙ وَّاٰتَيْتُمْ اِحْدٰىهُنَّ قِنْطَارًا

136. 16ನೇ ವಚನದಲ್ಲಿ ಹೇಳಿದ ಪ್ರಕಾರದ ದುರ್ವರ್ತನೆ ಕಂಡರೆ ಅವರನ್ನು ಮನೆಯಿಂದ ಹೊರಹೋಗದಂತೆ ತಡೆದು ನಿಲ್ಲಿಸಬಹುದಾಗಿದೆ. ಆದರೆ ಅವರಿಗೆ ನೀಡಿದ ಧನವನ್ನು ವಾಪಾಸು ಪಡೆಯುವ ಉದ್ದೇಶದಿಂದ ಆ ರೀತಿ ಮಾಡಬಾರದು. ಈ ವಚನದಲ್ಲಿ اِلَّآ (ಹೊರತು) ಎಂದು ಪ್ರಯುಕ್ತವಾಗಿದೆ. ಅವರು ದುರ್ವರ್ತನೆ ತೋರಿಸಿದರೆ ಅವರಿಗೆ ನೀಡಿದ ಧನವನ್ನು ವಾಪಾಸು ಪಡೆಯಬಹುದೆಂದು ಇದರ ಅರ್ಥವಲ್ಲ; ಆಗ ಅವರನ್ನು ಮನೆಯಲ್ಲಿ ತಡೆದು ನಿಲ್ಲಿಸಬಹುದೆಂದು ಮಾತ್ರವಾಗಿದೆ.

فَلَا تَأْخُذُوْا مِنْهُ شَيْـًٔا ۚ اَتَأْخُذُوْنَهٗ بُهْتَانًا وَّاِثْمًا مُّبِيْنًا ﴿٢١﴾

ಪಡೆಯಬಾರದು. ಸುಳ್ಳಾರೋಪವನ್ನು ಹೊರಿಸಿ ಮತ್ತು ಸ್ಪಷ್ಟವಾದ ಪಾಪದೊಂದಿಗೆ ನೀವು ಅದನ್ನು ತಿರುಗಿ ಪಡೆಯುವುದೇ?

وَكَيْفَ تَأْخُذُوْنَهٗ وَقَدْ اَفْضٰى بَعْضُكُمْ اِلٰى بَعْضٍ وَّاَخَذْنَ مِنْكُمْ مِّيْثَاقًا غَلِيْظًا ﴿٢٢﴾

22. ನೀವು ಪರಸ್ಪರ ಒಂದುಗೂಡಿ ಜೀವಿಸಿದ್ದು ಅವರು (ಪತ್ನಿಯರು) ನಿಮ್ಮಿಂದ ದೃಢವಾದ ಒಪ್ಪಂದವನ್ನೂ ಪಡೆದಿರುವಾಗ ಅದನ್ನು ನೀವು ಹೇಗೆ ಮರಳಿ ಪಡೆಯುವಿರಿ?

وَلَا تَنْكِحُوْا مَا نَكَحَ اٰبَاۤؤُكُمْ مِّنَ النِّسَاۤءِ اِلَّا مَا قَدْ سَلَفَ ۗ اِنَّهٗ كَانَ فَاحِشَةً وَّمَقْتًا ۗ وَسَاۤءَ سَبِيْلًا ﴿٢٣﴾

23. ನಿಮ್ಮ ಪಿತರು ವಿವಾಹವಾದ ಸ್ತ್ರೀಯರನ್ನು ನೀವು ವಿವಾಹವಾಗಬಾರದು - ಹಿಂದೆ ಕಳೆದುದು ಕಳೆದು ಹೋಯಿತು. ನಿಸ್ಸಂದೇಹವಾಗಿಯೂ ಅದು ನೀಚ ವರ್ತನೆಯೂ ಅಸಹ್ಯವೂ ದುಷ್ಟಸಂಪ್ರದಾಯವೂ ಆಗಿದೆ.

حُرِّمَتْ عَلَيْكُمْ اُمَّهٰتُكُمْ وَبَنٰتُكُمْ وَاَخَوٰتُكُمْ وَعَمّٰتُكُمْ وَخٰلٰتُكُمْ وَبَنٰتُ الْاَخِ وَبَنٰتُ الْاُخْتِ وَاُمَّهٰتُكُمُ الّٰتِيْٓ اَرْضَعْنَكُمْ وَاَخَوٰتُكُمْ مِّنَ الرَّضَاعَةِ وَاُمَّهٰتُ نِسَاۤىِٕكُمْ وَرَبَاۤىِٕبُكُمُ الّٰتِيْ فِيْ حُجُوْرِكُمْ مِّنْ نِّسَاۤىِٕكُمُ الّٰتِيْ دَخَلْتُمْ بِهِنَّ ۖ فَاِنْ لَّمْ تَكُوْنُوْا دَخَلْتُمْ بِهِنَّ فَلَا جُنَاحَ عَلَيْكُمْ ۖ وَحَلَاۤىِٕلُ اَبْنَاۤىِٕكُمُ الَّذِيْنَ مِنْ اَصْلَابِكُمْ ۙ وَاَنْ تَجْمَعُوْا بَيْنَ الْاُخْتَيْنِ اِلَّا مَا قَدْ سَلَفَ ۗ اِنَّ اللّٰهَ كَانَ غَفُوْرًا رَّحِيْمًا ﴿٢٤﴾

24. ನಿಮ್ಮ ಮಾತೆಯರು, ನಿಮ್ಮ ಪುತ್ರಿಯರು, ನಿಮ್ಮ ಸಹೋದರಿಯರು, ನಿಮ್ಮ ತಂದೆಯ ಸಹೋದರಿಯರು, ನಿಮ್ಮ ತಾಯಿಯ ಸಹೋದರಿಯರು, ನಿಮ್ಮ ಸಹೋದರರ ಪುತ್ರಿಯರು, ನಿಮ್ಮ ಸಹೋದರಿಯರ ಪುತ್ರಿಯರು, ನಿಮಗೆ ಮೊಲೆಯುಣ್ಣಿಸಿದ ನಿಮ್ಮ ಸಾಕುತಾಯಂದಿರು, ಮೊಲೆಯುಂಡ ಸಂಬಂಧದ ನಿಮ್ಮ ಸಹೋದರಿಯರು, ನಿಮ್ಮ ಪತ್ನಿಯರ ಮಾತೆಯರು, ನೀವು ಸಮಾಗಮ ಮಾಡಿರುವ ನಿಮ್ಮ ಪತ್ನಿಯರ ಸಂತಾನವಾಗಿದ್ದು, ನಿಮ್ಮ ಸಂರಕ್ಷಣೆಯಲ್ಲಿರುವ ನಿಮ್ಮ ಸಾಕು ಪುತ್ರಿಯರು - ಇವರೆಲ್ಲ ನಿಮಗೆ (ವಿವಾಹ) ನಿಷಿದ್ಧಗೊಳಿಸಲ್ಪಟ್ಟವರಾಗಿದ್ದಾರೆ. ಆದರೆ ನೀವು ಆ ಪತ್ನಿಯರೊಂದಿಗೆ ಸಮಾಗಮ ಮಾಡಿಲ್ಲವಾದರೆ, (ಅವರ ಪುತ್ರಿಯರನ್ನು ವಿವಾಹವಾಗುವುದರಲ್ಲಿ) ನಿಮ್ಮ ತಪ್ಪಿಲ್ಲ. (ಹಾಗೆಯೇ) ನಿಮ್ಮ ಸ್ವಂತ ಪುತ್ರರ ಪತ್ನಿಯರನ್ನೂ ಇಬ್ಬರು ಸಹೋದರಿಯರನ್ನು ಒಟ್ಟಾಗಿಯೂ ವಿವಾಹವಾಗುವುದು ನಿಮಗೆ ನಿಷಿದ್ಧಗೊಳಿಸಲಾಗಿದೆ - ಹಿಂದೆ ಕಳೆದುದು ಕಳೆದು ಹೋಯಿತು. ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.





وَّالْمُحْصَنٰتُ مِنَ النِّسَاۤءِ اِلَّا مَا مَلَكَتْ اَيْمَانُكُمْ ۚ كِتٰبَ اللّٰهِ عَلَيْكُمْ ۚ وَاُحِلَّ لَكُمْ مَّا وَرَاۤءَ ذٰلِكُمْ اَنْ تَبْتَغُوْا بِاَمْوَالِكُمْ مُّحْصِنِيْنَ غَيْرَ مُسٰفِحِيْنَ ۗ فَمَا اسْتَمْتَعْتُمْ بِهٖ مِنْهُنَّ فَاٰتُوْهُنَّ اُجُوْرَهُنَّ فَرِيْضَةً ۗ وَلَا جُنَاحَ عَلَيْكُمْ فِيْمَا تَرٰضَيْتُمْ بِهٖ مِنْۢ بَعْدِ الْفَرِيْضَةِ ۗ اِنَّ اللّٰهَ كَانَ عَلِيْمًا حَكِيْمًا ﴿٢٥﴾

25. (ಅನ್ಯರ) ವಿವಾಹ ಬಂಧದಲ್ಲಿರುವ ಸ್ತ್ರೀಯರೂ (ನಿಮಗೆ ನಿಷಿದ್ಧಗೊಳಿಸಲ್ಪಟ್ಟಿದ್ದಾರೆ) - (ಯುದ್ಧ ಕೈದಿಗಳಾಗಿ) ನಿಮ್ಮ ಅಧೀನಕ್ಕೆ ಬಂದವರು ಹೊರತು.[137] ಇದು ನಿಮ್ಮ ಮೇಲೆ ವಿಧಿಸಲಾದ ಅಲ್ಲಾಹನ ಶಾಸನವಾಗಿದೆ. ಇವರನ್ನು (ಮೇಲೆ ಹೇಳಿದ ಸ್ತ್ರೀಯರನ್ನು) ಹೊರತು ಬೇರೆ ಸ್ತ್ರೀಯರನ್ನು ನಿಮ್ಮ ಧನ (ಮಹರ್) ಮೂಲಕ ಅನ್ವೇಷಿಸುವುದು ನಿಮಗೆ ಧರ್ಮಬದ್ಧಗೊಳಿಸಲಾಗಿದೆ. (ಈ ನಿಮ್ಮ ಸಂಬಂಧ) ವೈವಾಹಿಕವಾಗಿರಬೇಕು; ಅನೈತಿಕ ಸಂಬಂಧವಾಗಿರಬಾರದು. ಅವರಿಂದ ನೀವು ಸುಖಾನುಭೋಗ ಪಡೆದಿದ್ದರೆ ಪ್ರತಿಫಲವಾಗಿ ಅವರಿಗೆ ನಿಶ್ಚಯಿಸಲಾದ ವಿವಾಹ ಧನವನ್ನು ನೀಡಿರಿ. (ವಿವಾಹಧನವನ್ನು) ನಿರ್ಧರಿಸಿದ ನಂತರ ನೀವು ಪರಸ್ಪರ ಒಪ್ಪಿಕೊಂಡರೆ (ರಿಯಾಯಿತಿಯೇನಾದರೂ ಮಾಡಿದರೆ) ತಪ್ಪಾಗುವುದಿಲ್ಲ. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

وَمَنْ لَّمْ يَسْتَطِعْ مِنْكُمْ طَوْلًا اَنْ يَّنْكِحَ الْمُحْصَنٰتِ الْمُؤْمِنٰتِ فَمِنْ مَّا مَلَكَتْ اَيْمَانُكُمْ مِّنْ فَتَيٰتِكُمُ الْمُؤْمِنٰتِ ۗ وَاللّٰهُ اَعْلَمُ بِاِيْمَانِكُمْ ۗ بَعْضُكُمْ مِّنْۢ بَعْضٍ ۚ فَانْكِحُوْهُنَّ بِاِذْنِ اَهْلِهِنَّ وَاٰتُوْهُنَّ اُجُوْرَهُنَّ بِالْمَعْرُوْفِ مُحْصَنٰتٍ غَيْرَ مُسٰفِحٰتٍ وَّلَا مُتَّخِذٰتِ اَخْدَانٍ ۚ فَاِذَآ اُحْصِنَّ فَاِنْ اَتَيْنَ بِفَاحِشَةٍ فَعَلَيْهِنَّ نِصْفُ مَا عَلَى الْمُحْصَنٰتِ مِنَ الْعَذَابِ ۗ ذٰلِكَ لِمَنْ خَشِيَ الْعَنَتَ مِنْكُمْ ۗ وَاَنْ

26. ಸತ್ಯ ವಿಶ್ವಾಸಿನಿಯರಾದ ಸ್ವತಂತ್ರ ಸ್ತ್ರೀಯರನ್ನು ವಿವಾಹವಾಗಲು ನಿಮ್ಮಲ್ಲಿ ಯಾವನಿಗಾದರೂ ಆರ್ಥಿಕವಾಗಿ ಸಾಮರ್ಥ್ಯವಿಲ್ಲದಿದ್ದರೆ, ನಿಮ್ಮ ಅಧೀನದಲ್ಲಿರುವ ಸತ್ಯವಿಶ್ವಾಸಿನಿಯರಾದ ದಾಸಿಯರಿಂದ (ಯಾರನ್ನಾದರೂ) ಅವನು ವಿವಾಹಮಾಡಿಕೊಳ್ಳಲಿ. ನಿಮ್ಮ ನಂಬಿಕೆಯ ಬಗ್ಗೆ ಅಲ್ಲಾಹನು ಚೆನ್ನಾಗಿ ತಿಳಿದವನಾಗಿದ್ದಾನೆ. ನೀವು ಪರಸ್ಪರ ಸಂಬಂಧವುಳ್ಳವರಾಗಿದ್ದೀರಿ. ಆದುದರಿಂದ ಅವರ ರಕ್ಷಾಧಿಕಾರಿಗಳ ಅನುಮತಿಯಿಂದ ನೀವು ಅವರೊಂದಿಗೆ ಮದುವೆ ಮಾಡಿಕೊಳ್ಳಿರಿ. ಯಥೋಚಿತವಾಗಿ ಅವರಿಗೆ ವಧುದಕ್ಷಿಣೆಯನ್ನು (ಮಹರ್) ನೀಡಿರಿ. (ಆದರೆ) ಅವರು ಚಾರಿತ್ರ್ಯವತಿಯರಾಗಿರಬೇಕು; ವ್ಯಭಿಚಾರಿಣಿಗಳಾಗಲಿ, ಗುಪ್ತ ಅನೈತಿಕ ಸಂಬಂಧವಿರಿಕೊಂಡವರಾಗಲಿ ಆಗಿರಬಾರದು.[138] ವಿವಾಹಿತರಾದ ನಂತರ ಅವರು ನೀಚ

137. ಯುದ್ಧಕೈದಿಗಳಾಗಿ ಸೆರೆಹಿಡಿಯಲ್ಪಟ್ಟ ಸ್ತ್ರೀಯರು ಸೆರೆಯಿಂದ ವಿಮುಕ್ತರಾಗದಿದ್ದರೆ ಅವರ ಮುಂಚಿನ ವಿವಾಹ ಸಂಬಂಧ ಅಸಿಂಧುವಾಗುತ್ತದೆ. ಸಮಾಜದ ನೈತಿಕತೆಯನ್ನು ಕಾಪಾಡಲಿಕ್ಕಾಗಿ ಸರಕಾರ ಅವರಿಗೆ ನೇಮಕಮಾಡುವ ವಲಿಯ್ಯ್(ರಕ್ಷಣಾಧಿಕಾರಿ) ಮೂಲಕ ಅವರನ್ನು ಇತರರು ವಿವಾಹವಾಗಲು ಅನುಮತಿ ಇದೆ.

تَصْبِرُوا خَيْرٌ لَّكُمْ ۗ وَاللَّهُ غَفُورٌ رَّحِيمٌ ﴿٢٦﴾

ವೃತ್ತಿಗಿಳಿದರೆ, ಸ್ವತಂತ್ರ ಸ್ತ್ರೀಯರಿಗೆ ನೀಡುವ ಶಿಕ್ಷೆಯ ಅರ್ಧವನ್ನು ಅವರಿಗೆ ಕೊಡಬೇಕಾಗಿದೆ. ಇದು (ಈ ಅನುಮತಿ) ನಿಮ್ಮ ಪೈಕಿ ಪಾಪಕೃತ್ಯವೆಸಗಲ್ಪಡಬಹುದೆಂದು ಭಯಪಡುವವರಿಗಾಗಿದೆ. ನೀವು ಆತ್ಮ ಸಂಯಮನ ಕೈಗೊಳ್ಳುವುದು ನಿಮಗೆ ಗುಣಕರ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

يُرِيدُ اللَّهُ لِيُبَيِّنَ لَكُمْ وَيَهْدِيَكُمْ سُنَنَ الَّذِينَ مِن قَبْلِكُمْ وَيَتُوبَ عَلَيْكُمْ ۗ وَاللَّهُ عَلِيمٌ حَكِيمٌ ﴿٢٧﴾

**27.** ನಿಮ್ಮ ಪೂರ್ವಿಕರ ಮಾರ್ಗಗಳನ್ನು ನಿಮಗೆ ವಿವರಿಸಿಕೊಡಲಿಕ್ಕೂ (ಅದರೆಡೆಗೆ) ನಿಮ್ಮನ್ನು ನಡೆಸಿಕೊಂಡು ಹೋಗಲಿಕ್ಕೂ ನಿಮ್ಮ ಮೇಲೆ ಕರುಣೆ ತೋರಿಸಲಿಕ್ಕೂ ಅಲ್ಲಾಹನು ಬಯಸುತ್ತಾನೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

وَاللَّهُ يُرِيدُ أَن يَتُوبَ عَلَيْكُمْ وَيُرِيدُ الَّذِينَ يَتَّبِعُونَ الشَّهَوَاتِ أَن تَمِيلُوا مَيْلًا عَظِيمًا ﴿٢٨﴾

**28.** ನಿಮ್ಮ ಮೇಲೆ ಕರುಣೆ ತೋರಿಸಬೇಕೆಂದು ಅಲ್ಲಾಹನು ಬಯಸುತ್ತಾನೆ. ಆದರೆ ಸ್ವೇಚ್ಛಾಚಾರಿಗಳು, ನೀವು ಪೂರ್ಣವಾಗಿ ದುರ್ಮಾರ್ಗದೆಡೆಗೆ ಸರಿಯಬೇಕೆಂದು ಬಯಸುತ್ತಾರೆ.

يُرِيدُ اللَّهُ أَن يُخَفِّفَ عَنكُمْ ۚ وَخُلِقَ الْإِنسَانُ ضَعِيفًا ﴿٢٩﴾

**29.** ನಿಮ್ಮ ಭಾರವನ್ನು ಹಗುರಗೊಳಿಸಲು ಅಲ್ಲಾಹನು ಬಯಸುತ್ತಾನೆ; (ಏಕೆಂದರೆ) ಮನುಷ್ಯನು ಬಲಹೀನನಾಗಿ ಸೃಷ್ಟಿಸಲ್ಪಟ್ಟಿದ್ದಾನೆ.

يَا أَيُّهَا الَّذِينَ آمَنُوا لَا تَأْكُلُوا أَمْوَالَكُم بَيْنَكُم بِالْبَاطِلِ إِلَّا أَن تَكُونَ تِجَارَةً عَن تَرَاضٍ مِّنكُمْ ۚ وَلَا تَقْتُلُوا أَنفُسَكُمْ ۚ إِنَّ اللَّهَ كَانَ بِكُمْ رَحِيمًا ﴿٣٠﴾

**30.** ಎಲ್ಲೈ ವಿಶ್ವಾಸಿಗಳೇ, ನಿಮ್ಮ ಧನವನ್ನು ಪರಸ್ಪರ ಅನ್ಯಾಯವಾಗಿ ತಿನ್ನಬೇಡಿರಿ. ಆದರೆ ನೀವು ಉಭಯ ಸಮ್ಮತದಿಂದ ವ್ಯಾಪಾರ ಮೂಲಕ ಧನ ಸಂಪಾದನೆ ಮಾಡಬಹುದು. ನಿಮ್ಮನ್ನೇ ನೀವು ಕೊಲ್ಲಬೇಡಿರಿ. ನಿಸ್ಸಂದೇಹವಾಗಿಯೂ ಅಲ್ಲಾಹನು ನಿಮ್ಮ ಮೇಲೆ ಅತಿ ಹೆಚ್ಚು ಕರುಣೆಯುಳ್ಳವನಾಗಿದ್ದಾನೆ.

وَمَن يَفْعَلْ ذَٰلِكَ عُدْوَانًا وَظُلْمًا

**31.** ಯಾವನಾದರೂ ಅಕ್ರಮ ಮತ್ತು

138. ಚಾರಿತ್ರ್ಯವತಿಯರಲ್ಲದಿದ್ದರೆ ವಧುದಕ್ಷಿಣೆ ಕೊಡಬೇಕಾಗಿಲ್ಲ ಎಂದಲ್ಲ; ಬದಲು, ಚಾರಿತ್ರ್ಯವತಿಯರೆಂದು ನಿಮಗೆ ಮನವರಿಕೆಯಾದವರನ್ನು ಮಾತ್ರವೇ ವಿವಾಹವಾಗಬೇಕು ಎಂದಾಗಿದೆ ತಾತ್ಪರ್ಯ. ಸ್ವತಂತ್ರ ಸ್ತ್ರೀಯರಿಗೆ ಕೊಡುವ ಹಾಗೆಯೇ ಇವರಿಗೆ ಸಹ ವಧುದಕ್ಷಿಣೆ ಕೊಡಬೇಕಾಗಿದೆ.





فَسَوْفَ نُصْلِيهِ نَارًا ۚ وَكَانَ ذَٰلِكَ عَلَى اللَّهِ يَسِيرًا ﴿٣١﴾

ಅನ್ಯಾಯವಾಗಿ ಹಾಗೆ ಮಾಡಿದರೆ[139] ಖಂಡಿತವಾಗಿಯೂ ನಾವು ಅವನನ್ನು ನರಕಾಗ್ನಿಗೆ ತಳ್ಳಿ ಬಿಡುವೆವು. ಅದು ಅಲ್ಲಾಹನಿಗೆ ಸುಲಭವೂ ಆಗಿದೆ.

إِن تَجْتَنِبُوا كَبَائِرَ مَا تُنْهَوْنَ عَنْهُ نُكَفِّرْ عَنكُمْ سَيِّئَاتِكُمْ وَنُدْخِلْكُم مُّدْخَلًا كَرِيمًا ﴿٣٢﴾

**32.** ನಿಮಗೆ ನಿಷಿದ್ಧಗೊಳಿಸಲಾದ ದೊಡ್ಡ ಪಾಪಗಳಿಂದ ನೀವು ಅಗಲಿ ನಿಂತರೆ ನಿಮ್ಮ (ಸಣ್ಣ) ದೋಷಗಳನ್ನು ನಾವು ಹೋಗಲಾಡಿಸಿ ಗೌರವಾರ್ಹ ಸ್ಥಾನಕ್ಕೆ ನಿಮ್ಮನ್ನು ಸೇರಿಸಿಕೊಳ್ಳುವೆವು.

وَلَا تَتَمَنَّوْا مَا فَضَّلَ اللَّهُ بِهِ بَعْضَكُمْ عَلَىٰ بَعْضٍ ۚ لِّلرِّجَالِ نَصِيبٌ مِّمَّا اكْتَسَبُوا ۖ وَلِلنِّسَاءِ نَصِيبٌ مِّمَّا اكْتَسَبْنَ ۚ وَاسْأَلُوا اللَّهَ مِن فَضْلِهِ ۗ إِنَّ اللَّهَ كَانَ بِكُلِّ شَيْءٍ عَلِيمًا ﴿٣٣﴾

**33.** ಅಲ್ಲಾಹನು ನಿಮ್ಮ ಪೈಕಿ ಕೆಲವರನ್ನು ಬೇರೆ ಕೆಲವರಿಗಿಂತ ಶ್ರೇಷ್ಠಗೊಳಿಸಿದುದಕ್ಕೆ ನೀವು ಅತ್ಯಾಶೆ ಪಡಬೇಡಿರಿ. ಪುರುಷರು ಸಂಪಾದಿಸಿದ ಪಾಲು ಅವರಿಗಿದೆ; ಸ್ತ್ರೀಯರು ಸಂಪಾದಿಸಿದ ಪಾಲು ಅವರಿಗೂ ಇದೆ. ನೀವು ಅಲ್ಲಾಹನಿಂದ ಅವನ ಅನುಗ್ರಹಗಳನ್ನು ಬೇಡಿರಿ. ನಿಸ್ಸಂದೇಹವಾಗಿಯೂ ಎಲ್ಲ ವಿಚಾರಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

وَلِكُلٍّ جَعَلْنَا مَوَالِيَ مِمَّا تَرَكَ الْوَالِدَانِ وَالْأَقْرَبُونَ ۚ وَالَّذِينَ عَقَدَتْ أَيْمَانُكُمْ فَآتُوهُمْ نَصِيبَهُمْ ۚ إِنَّ اللَّهَ كَانَ عَلَىٰ كُلِّ شَيْءٍ شَهِيدًا ﴿٣٤﴾

**34.** ಪ್ರತಿಯೊಬ್ಬರಿಗೂ ಅವರು ಬಿಟ್ಟು ಹೋಗುವ ಆಸ್ತಿಗೆ ನಾವು ವಾರೀಸುದಾರರನ್ನು ನಿಶ್ಚಯಿಸಿರುತ್ತೇವೆ. ಅವರು - ಮಾತಾಪಿತರು, ನಿಕಟ ಸಂಬಂಧಿಕರು ಮತ್ತು ನಿಮ್ಮೊಂದಿಗೆ ಒಡಂಬಡಿಕೆ ಮಾಡಿಕೊಂಡವರು.[140] ಆದುದರಿಂದ ನೀವು ಅವರಿಗೆ ಅವರ ಪಾಲನ್ನು ಕೊಡಿರಿ. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲ ಕಾರ್ಯಗಳನ್ನು ನಿರೀಕ್ಷಿಸುತ್ತಿದ್ದಾನೆ.

الرِّجَالُ قَوَّامُونَ عَلَى النِّسَاءِ بِمَا فَضَّلَ اللَّهُ بَعْضَهُمْ عَلَىٰ بَعْضٍ وَبِمَا أَنفَقُوا مِنْ أَمْوَالِهِمْ ۚ فَالصَّالِحَاتُ قَانِتَاتٌ حَافِظَاتٌ لِّلْغَيْبِ بِمَا حَفِظَ اللَّهُ ۚ وَاللَّاتِي تَخَافُونَ نُشُوزَهُنَّ فَعِظُوهُنَّ وَاهْجُرُوهُنَّ

**35.** ಪುರುಷರು ಸ್ತ್ರೀಯರ ರಕ್ಷಾಧಿಕಾರಿಗಳಾಗಿದ್ದಾರೆ- ಅಲ್ಲಾಹನು ಅವರ ಪೈಕಿ ಕೆಲವರಿಗೆ ಬೇರೆ ಕೆಲವರಿಗಿಂತ (ಪುರುಷರಿಗೆ ಸ್ತ್ರೀಯರಿಗಿಂತ) ಕೆಲವು ಮೇಲ್ಮೆಯನ್ನು ಕೊಟ್ಟಿರುವುದರಿಂದಲೂ ಅವರು ತಮ್ಮ ಧನವನ್ನು ಖರ್ಚು ಮಾಡುವುದರಿಂದಲೂ. ಆದ್ದರಿಂದ ವಿಧೇಯತೆ ತೋರಿಸುವವರೂ ಅಲ್ಲಾಹನು ತಾಕೀತು ಮಾಡಿದ ರೀತಿಯಲ್ಲಿ ರಹಸ್ಯಗಳನ್ನು ಕಾಯ್ದುಕೊಳ್ಳುವವರೂ

139. ಅಂದರೆ, ಅನ್ಯರ ಧನ ಅಪಹರಣ ಮಾಡಿದರೆ.

140. ನಿಮ್ಮೊಂದಿಗೆ ಒಡಂಬಡಿಕೆ ಮಾಡಿಕೊಂಡವರು ಅಂದರೆ ಪತಿ-ಪತ್ನಿಯರು ಎಂದು ತಾತ್ಪರ್ಯ.

ಸಚ್ಚರಿತ ಸ್ತ್ರೀಯರಾಗಿದ್ದಾರೆ. ಸ್ತ್ರೀಯರು ಅವಿಧೇಯತೆ ತೋರಿಸುವರೆಂದು ನಿಮಗೆ ಸಂದೇಹವಿದ್ದರೆ (ಮೊದಲಿಗೆ) ಅವರನ್ನು ಉಪದೇಶಿಸಿರಿ. (ಅದು ಫಲಕಾರಿಯಾಗದಿದ್ದರೆ) ಅವರಿಂದ ಬೇರ್ಪಟ್ಟು ಶಯನಮಾಡಿರಿ. (ಆ ಬಳಿಕವೂ ಅನುಸರಿಸದಿದ್ದರೆ) ಅವರನ್ನು ಹೊಡೆಯಿರಿ. ಆ ಮೇಲೆ ಅವರು ನಿಮಗೆ ವಿಧೇಯತೆ ತೋರಿಸಿದರೆ ಅವರ ವಿರುದ್ಧ ಬೇರೆ ಕ್ರಮವನ್ನೇನೂ ಕೈಗೊಳ್ಳಬೇಡಿರಿ. ನಿಸ್ಸಂದೇಹವಾಗಿಯೂ, ಅಲ್ಲಾಹನು ಅತ್ಯುನ್ನತನೂ ಮಹಾಮಹಿಮನೂ ಆಗಿದ್ದಾನೆ.

فِي الْمَضَاجِعِ وَاضْرِبُوهُنَّ ۚ فَإِنْ
أَطَعْنَكُمْ فَلَا تَبْغُوا عَلَيْهِنَّ سَبِيلًا ۗ إِنَّ
اللَّهَ كَانَ عَلِيًّا كَبِيرًا ﴿٣٤﴾

36. ಆದರೆ ಅವರ (ಪತಿ-ಪತ್ನಿ) ಮಧ್ಯೆ ಒಡಕುಂಟಾಗುವುದೆಂದು ನಿಮಗೆ ಭಯವಿದ್ದರೆ, ಅವನ ಬಂಧುಗಳಿಂದ ಒಬ್ಬ ಮಧ್ಯಸ್ಥಗಾರನನ್ನೂ ಅವಳ ಬಂಧುಗಳಿಂದ ಒಬ್ಬ ಮಧ್ಯಸ್ಥಗಾರನನ್ನೂ ನೀವು ನೇಮಿಸಿರಿ. ಅವರಿಬ್ಬರೂ ಸಾಮರಸ್ಯವನ್ನು ಉದ್ದೇಶಿಸಿದರೆ, ಅಲ್ಲಾಹನು ಅವರ (ಪತಿ-ಪತ್ನಿ) ಮಧ್ಯೆ ಒಮ್ಮತವನ್ನುಂಟು ಮಾಡುವನು. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲವನ್ನು ಬಲ್ಲವನೂ ಸರ್ವಜ್ಞನೂ ಆಗಿದ್ದಾನೆ.

وَإِنْ خِفْتُمْ شِقَاقَ بَيْنِهِمَا فَابْعَثُوا
حَكَمًا مِّنْ أَهْلِهِ وَحَكَمًا مِّنْ أَهْلِهَا إِن
يُرِيدَا إِصْلَاحًا يُوَفِّقِ اللَّهُ بَيْنَهُمَا ۗ
إِنَّ اللَّهَ كَانَ عَلِيمًا خَبِيرًا ﴿٣٥﴾

37. ನೀವು ಅಲ್ಲಾಹನನ್ನು ಆರಾಧಿಸಿರಿ; ಬೇರೇನನ್ನೂ ಅವನ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರಿಗೆ ನೀವು ಒಳಿತನ್ನು ಮಾಡಿರಿ - ನಿಕಟ ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ನಿಕಟ ಸಂಬಂಧಿಯಾದ ನೆರೆಹೊರೆಯವನಿಗೂ ಅನ್ಯ ನೆರೆಹೊರೆಯವನಿಗೂ ನಿಕಟ ಸಂಗಡಿಗನಿಗೂ ಯಾತ್ರಿಕನಿಗೂ ನಿಮ್ಮ ಅಧೀನದಲ್ಲಿರುವವರಿಗೂ. ಅಹಂಭಾವಿಗಳನ್ನೂ ಜಂಭ ಕೊಚ್ಚುವವರನ್ನೂ ಅಲ್ಲಾಹನು ಎಂದಿಗೂ ಇಷ್ಟಪಡುವುದಿಲ್ಲ-

وَاعْبُدُوا اللَّهَ وَلَا تُشْرِكُوا بِهِ شَيْئًا ۖ وَ
بِالْوَالِدَيْنِ إِحْسَانًا وَبِذِي الْقُرْبَىٰ وَ
الْيَتَامَىٰ وَالْمَسَاكِينِ وَالْجَارِ ذِي الْقُرْبَىٰ وَ
الْجَارِ الْجُنُبِ وَالصَّاحِبِ بِالْجَنبِ وَابْنِ
السَّبِيلِ وَمَا مَلَكَتْ أَيْمَانُكُمْ ۗ إِنَّ اللَّهَ
لَا يُحِبُّ مَن كَانَ مُخْتَالًا فَخُورًا ﴿٣٦﴾

38. ಅವರು ಲೋಭಿಗಳೂ ಜಿಪುಣತೆಯನ್ನು ತೋರಿಸಲು ಜನರಿಗೆ ಹೇಳಿಕೊಡುವವರೂ ಅಲ್ಲಾಹನು ತನ್ನ ಅನುಗ್ರಹದಿಂದ ಅವರಿಗೆ ನೀಡಿರುವುದನ್ನು ಮುಚ್ಚಿಡುವವರೂ ಆಗಿದ್ದಾರೆ. ನಾವು ಅವಿಶ್ವಾಸಿಗಳಿಗೆ ಅಪಮಾನಕರವಾದ ಶಿಕ್ಷೆಯನ್ನು ಸಿದ್ಧಗೊಳಿಸಿಟ್ಟಿದ್ದೇವೆ.

الَّذِينَ يَبْخَلُونَ وَيَأْمُرُونَ النَّاسَ
بِالْبُخْلِ وَيَكْتُمُونَ مَا آتَاهُمُ اللَّهُ مِن
فَضْلِهِ ۗ وَأَعْتَدْنَا لِلْكَافِرِينَ عَذَابًا
مُّهِينًا ﴿٣٧﴾





39. ಅವರು ಅಲ್ಲಾಹನಲ್ಲಾಗಲಿ ಅಂತ್ಯದಿನದಲ್ಲಾಗಲಿ ವಿಶ್ವಾಸವಿಡದೆ ಜನರಿಗೆ ತೋರಿಸಲಿಕ್ಕಾಗಿ ತಮ್ಮ ಧನವನ್ನು ಖರ್ಚುಮಾಡುವವರಾಗಿದ್ದಾರೆ. ಶೈತಾನನು ಯಾವಾತನ ಸಂಗಡಿಗನಾಗಿದ್ದಾನೋ (ಆತನು ತಿಳಿದಿರಲಿ), ಅವನು ಬಹಳ ನೀಚ ಸಂಗಡಿಗನಾಗಿದ್ದಾನೆ.

وَالَّذِينَ يُنفِقُونَ أَمْوَالَهُمْ رِئَاءَ
النَّاسِ وَلَا يُؤْمِنُونَ بِاللَّهِ وَلَا بِالْيَوْمِ
الْآخِرِ ۗ وَمَن يَكُنِ الشَّيْطَانُ لَهُ قَرِينًا
فَسَاءَ قَرِينًا ﴿٣٨﴾

40. ಅವರು ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿರಿಸಿರುತ್ತಿದ್ದರೆ ಹಾಗೂ ಅಲ್ಲಾಹನು ಅವರಿಗೆ ಏನನ್ನು ನೀಡಿರುವನೋ ಅದರಿಂದ ಖರ್ಚು ಮಾಡಿರುತ್ತಿದ್ದರೆ ಅವರಿಗೇನು ದೋಷವಾಗುತ್ತಿತ್ತು? ಅಲ್ಲಾಹನು ಅವರ ಬಗ್ಗೆ ಚೆನ್ನಾಗಿ ತಿಳಿದವನಾಗಿದ್ದಾನೆ.

وَمَاذَا عَلَيْهِمْ لَوْ آمَنُوا بِاللَّهِ وَالْيَوْمِ
الْآخِرِ وَأَنفَقُوا مِمَّا رَزَقَهُمُ اللَّهُ ۚ وَكَانَ
اللَّهُ بِهِمْ عَلِيمًا ﴿٣٩﴾

41. ಖಂಡಿತವಾಗಿಯೂ ಅಲ್ಲಾಹನು ಎಂದಿಗೂ (ಯಾರಿಗೂ) ಒಂದು ಅಣುಮಾತ್ರವಾದರೂ ಅನ್ಯಾಯ ಮಾಡಲಾರನು. ಏನಾದರೂ ಒಳಿತು ಇದ್ದರೆ ಅವನು ಅದನ್ನು ಇಮ್ಮಡಿಗೊಳಿಸಿ ತನ್ನ ಕಡೆಯಿಂದ ಮಹತ್ತರವಾದ ಪ್ರತಿಫಲವನ್ನು ನೀಡುವನು.

إِنَّ اللَّهَ لَا يَظْلِمُ مِثْقَالَ ذَرَّةٍ ۖ وَإِن تَكُ
حَسَنَةً يُضَاعِفْهَا وَيُؤْتِ مِن لَّدُنْهُ
أَجْرًا عَظِيمًا ﴿٤٠﴾

42. ನಾವು ಪ್ರತಿಯೊಂದು ಸಮುದಾಯದಿಂದ ಒಬ್ಬೊಬ್ಬ ಸಾಕ್ಷಿಯನ್ನು ತಂದು, ಇವರಿಗೆ ಸಾಕ್ಷಿಯಾಗಿ ನಿನ್ನನ್ನೂ ತರುವಾಗ (ಇವರ)ಸ್ಥಿತಿ ಏನಾಗಿರಬಹುದು?

فَكَيْفَ إِذَا جِئْنَا مِن كُلِّ أُمَّةٍ بِشَهِيدٍ
وَجِئْنَا بِكَ عَلَىٰ هَٰؤُلَاءِ شَهِيدًا ﴿٤١﴾

43. ಅವಿಶ್ವಾಸವನ್ನು ಹೊಂದಿ ಪ್ರವಾದಿಯನ್ನು ಧಿಕ್ಕರಿಸಿದವರು ಆ ದಿನದಂದು (ಅಲ್ಲಿ ಹಾಜರಾಗಲು ಸಂದರ್ಭ ಬಾರದೆ) ತಮ್ಮನ್ನು ಭೂಮಿಯಲ್ಲಿ ಹೂಳಿಟ್ಟು ನೆಲಸಮ ಮಾಡಿರುತ್ತಿದ್ದರೆ (ಎಷ್ಟು ಚೆನ್ನಾಗಿರುತಿತ್ತು!) ಎಂದು ಬಯಸುವರು. (ಅಂದು) ಅಲ್ಲಾಹನಿಂದ ಏನನ್ನೂ ಬಚ್ಚಿಡಲು ಅವರಿಗೆ ಸಾಧ್ಯವಿಲ್ಲ.

يَوْمَئِذٍ يَوَدُّ الَّذِينَ كَفَرُوا وَعَصَوُا
الرَّسُولَ لَوْ تُسَوَّىٰ بِهِمُ الْأَرْضُ ۗ وَلَا
يَكْتُمُونَ اللَّهَ حَدِيثًا ﴿٤٢﴾

44. ಎಲೈ ವಿಶ್ವಾಸಿಗಳೇ, ನಿಮ್ಮ ಪ್ರಜ್ಞೆ ಸ್ಥಿಮಿತಿದಲ್ಲಿಲ್ಲದ ಸಂದರ್ಭದಲ್ಲಿ ನೀವು ನಮಾಝನ್ನು ಸಮೀಪಿಸಬೇಡಿರಿ - ನೀವು ಹೇಳುವುದೇನೆಂದು ನಿಮಗೆ ತಿಳಿಯುವ ವರೆಗೆ. ನಿಮಗೆ 'ಜನಾಬತ್'[141] ಉಂಟಾ

يَا أَيُّهَا الَّذِينَ آمَنُوا لَا تَقْرَبُوا
الصَّلَاةَ وَأَنتُمْ سُكَارَىٰ حَتَّىٰ

ತَعْلَمُوْا مَا تَقُوْلُوْنَ وَلَا جُنُبًا اِلَّا عَابِرِيْ سَبِيْلٍ حَتّٰى تَغْتَسِلُوْا ۚ وَاِنْ كُنْتُمْ مَّرْضٰٓى اَوْ عَلٰى سَفَرٍ اَوْ جَآءَ اَحَدٌ مِّنْكُمْ مِّنَ الْغَآئِطِ اَوْ لٰمَسْتُمُ النِّسَآءَ فَلَمْ تَجِدُوْا مَآءً فَتَيَمَّمُوْا صَعِيْدًا طَيِّبًا فَامْسَحُوْا بِوُجُوْهِكُمْ وَاَيْدِيْكُمْ ۗ اِنَّ اللّٰهَ كَانَ عَفُوًّا غَفُوْرًا ﴿٤٣﴾

**ಗಿರುವಾಗಲೂ ಸ್ನಾನ ಮಾಡುವ ವರೆಗೆ** (ನಮಾಝ್ ಮಾಡಬೇಡಿರಿ) **- ನೀವು ಪ್ರಯಾಣದಲ್ಲಿರುವಾಗ ಹೊರತು. ನೀವು ರೋಗ ಪೀಡಿತರಾಗಿದ್ದರೆ ಅಥ'ವಾ ಪ್ರಯಾಣದಲ್ಲಿದ್ದರೆ** (ನಿಮಗೆ ಅಶುದ್ಧಿ ಉಂಟಾದಲ್ಲಿ ನೀವು ತಯಮ್ಮುಮ್ ಮಾಡಿರಿ) **ಅಥವಾ ನಿಮ್ಮಲ್ಲಿ ಯಾರಾದರೂ ಬಹಿರ್ದೆಸೆಗೆ ಹೋಗಿದ್ದು** (ನೀರು ಸಿಗದಿದ್ದರೆ) **ಅಥವಾ ನಿಮ್ಮಲ್ಲಿ ಯಾರಾದರೂ ಸ್ತ್ರೀ ಸಂಸರ್ಗ ಮಾಡಿದ್ದು ನೀರು ಸಿಗದಿದ್ದರೆ ಶುದ್ಧವಾದ ಧೂಳನ್ನು ಹುಡುಕಿ ಅದರಿಂದ ನಿಮ್ಮ ಮುಖವನ್ನೂ ಕೈಗಳನ್ನೂ ಸವರಿರಿ** (ತಯಮ್ಮುಮ್ ಮಾಡಿರಿ). **ನಿಶ್ಚಯವಾಗಿಯೂ ಅಲ್ಲಾಹನು ಅತಿ ಹೆಚ್ಚು ರಿಯಾಯಿತಿ ನೀಡುವವನೂ ಅತ್ಯಂತ ಕ್ಷಮಾಶೀಲನೂ ಆಗಿದ್ದಾನೆ.**

اَلَمْ تَرَ اِلَى الَّذِيْنَ اُوْتُوْا نَصِيْبًا مِّنَ الْكِتٰبِ يَشْتَرُوْنَ الضَّلٰلَةَ وَيُرِيْدُوْنَ اَنْ تَضِلُّوا السَّبِيْلَ ﴿٤٤﴾

**45.** (ದೈವಿಕ) **ಗ್ರಂಥದಿಂದ ಒಂದಂಶ ನೀಡಲ್ಪಟ್ಟವರ ಕುರಿತು ನೀನು ಅರಿತಿಲ್ಲವೇ? ಅವರು ದುರ್ಮಾರ್ಗವನ್ನು ಸ್ವೀಕರಿಸುತ್ತಾರೆ ಹಾಗೂ ನೀವು** (ಸಹ) **ದಾರಿ ತಪ್ಪ ಬೇಕೆಂದು ಬಯಸುತ್ತಾರೆ.**

وَاللّٰهُ اَعْلَمُ بِاَعْدَآئِكُمْ ۚ وَكَفٰى بِاللّٰهِ وَلِيًّا ۙ وَّكَفٰى بِاللّٰهِ نَصِيْرًا ﴿٤٥﴾

**46. ನಿಮ್ಮ ವೈರಿಗಳ ಬಗ್ಗೆ ಅಲ್ಲಾಹನು** (ನಿಮಗಿಂತ) **ಹೆಚ್ಚು ತಿಳಿದವನಾಗಿದ್ದಾನೆ. ಮಿತ್ರನೆಂಬ ನೆಲೆಯಲ್ಲಿ ಅಲ್ಲಾಹನು** (ನಿಮಗೆ) **ಸಾಕು; ಸಹಾಯಕನಾಗಿಯೂ ಅಲ್ಲಾಹನು ಸಾಕು.**

مِنَ الَّذِيْنَ هَادُوْا يُحَرِّفُوْنَ الْكَلِمَ عَنْ مَّوَاضِعِهٖ وَيَقُوْلُوْنَ سَمِعْنَا وَعَصَيْنَا وَاسْمَعْ غَيْرَ مُسْمَعٍ وَّرَاعِنَا لَيًّا ۢ بِاَلْسِنَتِهِمْ وَطَعْنًا فِي الدِّيْنِ ۚ وَلَوْ اَنَّهُمْ قَالُوْا سَمِعْنَا وَاَطَعْنَا وَاسْمَعْ وَانْظُرْنَا لَكَانَ خَيْرًا لَّهُمْ وَ

**47. ಯಹೂದ್ಯರ ಪೈಕಿ ಕೆಲವರು** (ದೈವಿಕ) **ವಚನಗಳನ್ನು ಅವುಗಳ ಸ್ಥಾನಗಳಿಂದ ಪಲ್ಲಟಗೊಳಿಸುತ್ತಾರೆ. ಅವರು ಹೇಳುತ್ತಾರೆ: 'ನಾವು ಆಲಿಸಿದೆವು ಮತ್ತು ಧಿಕ್ಕರಿಸಿದೆವು.** (ದೈವಿಕ ವಚನ ನಿನಗೆ) **ಕೇಳಿಸಲ್ಪಡದ ರೀತಿಯಲ್ಲಿ ನೀನು** (ನಮ್ಮ ಮಾತನ್ನು) **ಆಲಿಸಿ ನಮ್ಮೆಡೆಗೆ ಗಮನ ಹರಿಸು** ('ರಾಇನಾ')**.' ತಮ್ಮ ನಾಲಿಗೆಗಳನ್ನು ತಿರುಚಿಕೊಂಡು ಮತ್ತು ಧಾರ್ಮಿಕ ವಿಶ್ವಾಸಗಳನ್ನು ಟೀಕಿಸಿಕೊಂಡು** (ಅವರು ಹೀಗೆ ಹೇಳುತ್ತಾರೆ).[141A]

141. ಲೈಂಗಿಕ ಸಂಪರ್ಕದಿಂದ ಅಥವಾ ವೀರ್ಯಸ್ಖಲನದಿಂದ ಉಂಟಾಗುವ ಅಶುದ್ಧಿ.





اَقْوَمَ ۙ وَلٰكِنْ لَّعَنَهُمُ اللّٰهُ بِكُفْرِهِمْ فَلَا يُؤْمِنُوْنَ اِلَّا قَلِيْلًا ﴿٤٦﴾

(ಬದಲು) **'ನಾವು ಆಲಿಸಿದೆವು ಮತ್ತು ಅನುಸರಿಸಿದೆವು. ನೀನು ಆಲಿಸು ಮತ್ತು ನಮ್ಮೆಡೆಗೆ ಕರುಣೆಯ ದೃಷ್ಟಿ ಬೀರು** (ಉನ್‌ಝುರ್‌ನಾ)**' ಎಂದು ಅವರು ಹೇಳಿರುತ್ತಿದ್ದರೆ ಅದು ಅವರಿಗೆ ಗುಣಕರವೂ ಯುಕ್ತವೂ ಆಗುತ್ತಿತ್ತು. ಆದರೆ ಅವರ ಅವಿಶ್ವಾಸ ಹೇತುವಾಗಿ ಅಲ್ಲಾಹನು ಅವರನ್ನು ಶಪಿಸಿರುವನು. ಹಾಗೆ ಅವರು ನಂಬುವುದಿಲ್ಲ.**

يٰٓاَيُّهَا الَّذِيْنَ اُوْتُوا الْكِتٰبَ اٰمِنُوْا بِمَا نَزَّلْنَا مُصَدِّقًا لِّمَا مَعَكُمْ مِّنْ قَبْلِ اَنْ نَّطْمِسَ وُجُوْهًا فَنَرُدَّهَا عَلٰٓى اَدْبَارِهَآ اَوْ نَلْعَنَهُمْ كَمَا لَعَنَّآ اَصْحٰبَ السَّبْتِ ۚ وَكَانَ اَمْرُ اللّٰهِ مَفْعُوْلًا ﴿٤٧﴾

**48. ಎಲೈ** (ದೈವಿಕ) **ಗ್ರಂಥ ನೀಡಲ್ಪಟ್ಟವರೇ, ನಿಮ್ಮ ಬಳಿ ಇರುವುದನ್ನು ದೃಢೀಕರಿಸಿಕೊಂಡು ನಾವು ಅವತೀರ್ಣಗೊಳಿಸಿರುವುದನ್ನು ನೀವು ನಂಬಿರಿ -** (ನಿಮ್ಮ ಪೈಕಿಯ ಕೆಲವು) **ನೇತಾರರನ್ನು**[142] **ನಾವು ಅಪಮಾನಿತರನ್ನಾಗಿ ಮಾಡಿ ಅವರನ್ನು ಅವರ ಹಿಂಭಾಗಕ್ಕೆ ತಳ್ಳಿ ಬಿಡುವುದಕ್ಕಿಂತ ಮುಂಚಿತವಾಗಿ ಅಥವಾ ಸಬ್‌ತ್‌ಗಾರರನ್ನು ನಾವು ಶಪಿಸಿದಂತೆ ಅವರನ್ನು ಶಪಿಸುವುದಕ್ಕೆ ಮುಂಚಿತವಾಗಿ.**[143] **ಅಲ್ಲಾಹನ ಆಜ್ಞೆ ಜಾರಿಗೆ ಬಂದೇ ಬರುತ್ತದೆ.**

اِنَّ اللّٰهَ لَا يَغْفِرُ اَنْ يُّشْرَكَ بِهٖ وَيَغْفِرُ مَا دُوْنَ ذٰلِكَ لِمَنْ يَّشَآءُ ۚ وَمَنْ يُّشْرِكْ بِاللّٰهِ فَقَدِ افْتَرٰٓى اِثْمًا عَظِيْمًا ﴿٤٨﴾

**49.** (ಬೇರೆ ಯಾವುದಕ್ಕೂ) **ಅವನೊಂದಿಗೆ ಸಹಭಾಗಿತ್ವ ಕಲ್ಪಿಸುವುದನ್ನು - ಶಿರ್ಕನ್ನು - ಖಂಡಿತವಾಗಿಯೂ ಅಲ್ಲಾಹನು ಕ್ಷಮಿಸಲಾರ. ಅದರ ಹೊರತಿರುವುದನ್ನು ತಾನಿಚ್ಛಿಸುವವರಿಗೆ ಅವನು ಕ್ಷಮಿಸುವನು. ಯಾವನಾದರೂ ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸಿದರೆ ಖಂಡಿತವಾಗಿಯೂ ಅವನು ಘೋರ ಪಾಪಕರವಾದ ಮಿಥ್ಯಾರೋಪವನ್ನು ಮಾಡುತ್ತಾನೆ.**

141A 'ರಾಇನಾ' ಅಂದರೆ 'ನಮ್ಮೆಡೆಗೆ ಗಮನ ಹರಿಸು' ಎಂದು ಅರ್ಥ. ಆದರೆ ನಾಲಗೆಯಿಂದ ಸ್ವರಭೇದ ಮಾಡಿ 'ರಾಈನಾ' ಎಂದು ಹೇಳಿದರೆ 'ನಮ್ಮ ಕುರುಬ' ಎಂಬ ಅರ್ಥಬರುತ್ತದೆ. ಬದಲು 'ಉನ್‌ಝುರ್‌ನಾ' ಅಂದರೆ ನಮ್ಮನ್ನು ಗಮನಿಸು ಎಂದು ಅರ್ಥವಿದ್ದರೂ ಈ ಪದವನ್ನು ತಿರುಚಿ ವ್ಯಂಗಾರ್ಥ ಬರುವಂತೆ ಬೇರೆ ರೀತಿಯಲ್ಲಿ ಪ್ರಯೋಗಿಸಲು ಸಾಧ್ಯವಿಲ್ಲ. (2ನೇ ಅಧ್ಯಾಯ 105ನೇ ವಚನಕ್ಕೆ ನೀಡಿದ ಟಿಪ್ಪಣಿಯನ್ನು ನೋಡಿರಿ)

142. 'ವುಜೂಹ್' ಅಂದರೆ ಸಮುದಾಯದ ನೇತಾರರು ಎಂದು ಸಹ ಅರ್ಥವಿದೆ.

143. ಸಬ್‌ತ್‌ಗಾರರನ್ನು ಶಿಕ್ಷಿಸಿದ ಬಗ್ಗೆ ಸೂರ ಅಲ್‌ಅ್‌ರಾಫ್ ವಚನ 164 ರಿಂದ 167ರ ವರೆಗೆ ವಿವರಿಸಲಾಗಿದೆ.

**50.** ತಾವು ಪರಿಶುದ್ಧರೆಂದು ಭಾವಿಸಿ ಕೊಳ್ಳುವವರನ್ನು ನೀನು ಕಂಡಿಲ್ಲವೇ? (ಅವರಿಗೆ ಅದರ ಅಧಿಕಾರವಿಲ್ಲ.) ಆದರೆ ಅಲ್ಲಾಹನು ತಾನು ಇಚ್ಛಿಸುವವರನ್ನು ಪರಿಶುದ್ಧರನ್ನಾಗಿ ಮಾಡುತ್ತಾನೆ. ಅವರೊಡನೆ ಲವಲೇಶವಾದರೂ ಅನ್ಯಾಯ ತೋರಿಸಲ್ಪಡದು.

أَلَمْ تَرَ إِلَى الَّذِينَ يُزَكُّونَ أَنفُسَهُم ۚ بَلِ اللَّهُ يُزَكِّي مَن يَشَاءُ وَلَا يُظْلَمُونَ فَتِيلًا ﴿٥٠﴾

**51.** ಅವರು ಅಲ್ಲಾಹನ ಮೇಲೆ ಹೇಗೆ ಸುಳ್ಳು ಆರೋಪಿಸುತ್ತಾರೆಂದು ನೋಡು. ಸ್ಪಷ್ಟವಾದ ಪಾಪವೆಂಬುದಕ್ಕೆ ಅದೇ ಸಾಕು.

انظُرْ كَيْفَ يَفْتَرُونَ عَلَى اللَّهِ الْكَذِبَ ۖ وَكَفَىٰ بِهِ إِثْمًا مُّبِينًا ﴿٥١﴾

**52.** (ದೈವಿಕ) ಗ್ರಂಥದಿಂದ ಒಂದಂಶ ನೀಡಲ್ಪಟ್ಟವರನ್ನು ನೀನು ಕಂಡಿಲ್ಲವೇ? ಅವರು ನಿಷ್ಪ್ರಯೋಜಕವಾದವುಗಳಲ್ಲೂ ದುಶ್ಶಕ್ತಿಗಳಲ್ಲೂ ವಿಶ್ವಾಸವಿರಿಸುತ್ತಾರೆ. (ಪೈಗಂಬರರ ಮೇಲೆ) ವಿಶ್ವಾಸ ಹೊಂದಿದವರಿಗಿಂತ ಹೆಚ್ಚಾಗಿ ಇವರು ಸನ್ಮಾರ್ಗವನ್ನು ಪಡೆದವರಾಗಿದ್ದಾರೆ ಎಂದು ಅವಿಶ್ವಾಸಿಗಳ ಬಗ್ಗೆ ಅವರು ಹೇಳುತ್ತಾರೆ.[144]

أَلَمْ تَرَ إِلَى الَّذِينَ أُوتُوا نَصِيبًا مِّنَ الْكِتَابِ يُؤْمِنُونَ بِالْجِبْتِ وَالطَّاغُوتِ وَيَقُولُونَ لِلَّذِينَ كَفَرُوا هَٰؤُلَاءِ أَهْدَىٰ مِنَ الَّذِينَ آمَنُوا سَبِيلًا ﴿٥٢﴾

**53.** ಅವರು ಅಲ್ಲಾಹನಿಂದ ಶಪಿಸಲ್ಪಟ್ಟವರು. ಅಲ್ಲಾಹನು ಯಾರನ್ನು ಶಪಿಸುತ್ತಾನೋ, ಅವನಿಗೆ ಸಹಾಯಕನಾಗಿ ಯಾರನ್ನೂ ನೀನು ಕಾಣಲಾರೆ.

أُولَٰئِكَ الَّذِينَ لَعَنَهُمُ اللَّهُ ۖ وَمَن يَلْعَنِ اللَّهُ فَلَن تَجِدَ لَهُ نَصِيرًا ﴿٥٣﴾

**54.** ಏನು, ಅವರಿಗೆ ಆಡಳಿತದಲ್ಲಿ ಏನಾದರೂ ಪಾಲಿದೆಯೇ? ಹಾಗಿದ್ದರೆ ಅವರು ಇತರ ಜನರಿಗೆ ಲವಲೇಶವಾದರೂ ಕೊಡುತ್ತಿರಲಿಲ್ಲ.

أَمْ لَهُمْ نَصِيبٌ مِّنَ الْمُلْكِ فَإِذًا لَّا يُؤْتُونَ النَّاسَ نَقِيرًا ﴿٥٤﴾

**55.** ಅಥವಾ ಜನರಿಗೆ ಅಲ್ಲಾಹನು ತನ್ನ ಅನುಗ್ರಹದಿಂದ ನೀಡಿದ ಕಾರಣಕ್ಕಾಗಿ ಅವರು ಅವರೊಡನೆ ಅಸೂಯೆಪಡುತ್ತಾರೆಯೇ? (ಹಾಗಿದ್ದರೆ) ಖಂಡಿತವಾಗಿಯೂ ನಾವು ಇಬ್ರಾಹೀಮರ ಸಂತತಿಗಳಿಗೆ (ಸಹ) ಗ್ರಂಥವನ್ನೂ ಸುಜ್ಞಾನವನ್ನೂ ನೀಡಿದ್ದೇವೆ. (ಅಷ್ಟೇ

أَمْ يَحْسُدُونَ النَّاسَ عَلَىٰ مَا آتَاهُمُ اللَّهُ مِن فَضْلِهِ ۖ فَقَدْ آتَيْنَا آلَ إِبْرَاهِيمَ الْكِتَابَ وَالْحِكْمَةَ وَآتَيْنَاهُم مُّلْكًا

144. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರನ್ನು ನಂಬಿದ ಮುಸ್ಲಿಮರಿಗಿಂತ ಬಹುದೇವಾರಾಧಕರೇ ಹೆಚ್ಚು ಸನ್ಮಾರ್ಗವನ್ನು ಪಡೆದವರೆಂದು ಯಹೂದ್ಯರು ಹೇಳುತ್ತಿದ್ದರು.





ಅಲ್ಲ.) ನಾವು ಅವರಿಗೆ ಮಹತ್ತಾದ ಆಧಿಪತ್ಯವನ್ನೂ ಕೊಟ್ಟಿದ್ದೇವೆ.

عَظِيمًا ﴿٥٥﴾

**56.** ಹಾಗೆ ಅವರ ಪೈಕಿ ಕೆಲವರು ಅದರಲ್ಲಿ (ಈ ಗ್ರಂಥದಲ್ಲಿ) ವಿಶ್ವಾಸವಿರಿಸಿದರು; ಕೆಲವರು ಅದರಿಂದ ವಿಮುಖರಾದರು. (ಅವರಿಗೆ ಶಿಕ್ಷೆಯಾಗಿ) ಜ್ವಲಿಸುವ ಅಗ್ನಿಯಿಂದ ಕೂಡಿದ ನರಕವೇ ಸಾಕು.

فَمِنْهُم مَّنْ آمَنَ بِهِ وَمِنْهُم مَّن صَدَّ عَنْهُ ۚ وَكَفَىٰ بِجَهَنَّمَ سَعِيرًا ﴿٥٦﴾

**57.** ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆದವರನ್ನು ನಾವು ಖಂಡಿತವಾಗಿಯೂ ನರಕಾಗ್ನಿಯೊಳಗೆ ಸೇರಿಸುವೆವು. ಅವರ ಚರ್ಮಗಳು ಸುಟ್ಟು ಹೋಗುವಾಗ ಬೇರೆ ಚರ್ಮಗಳನ್ನು ನಾವು ಅವರಿಗೆ ಬದಲಾಯಿಸಿ ಕೊಡುವೆವು - (ಇದು) ಅವರು ಶಿಕ್ಷೆಯ ರುಚಿನೋಡಲಿಕ್ಕಾಗಿದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಪ್ರತಾಪಶಾಲಿಯೂ ವಿವೇಕವಂತನೂ ಆಗಿದ್ದಾನೆ.

إِنَّ الَّذِينَ كَفَرُوا بِآيَاتِنَا سَوْفَ نُصْلِيهِمْ نَارًا كُلَّمَا نَضِجَتْ جُلُودُهُم بَدَّلْنَاهُمْ جُلُودًا غَيْرَهَا لِيَذُوقُوا الْعَذَابَ ۗ إِنَّ اللَّهَ كَانَ عَزِيزًا حَكِيمًا ﴿٥٧﴾

**58.** ಯಾರು ವಿಶ್ವಾಸ ಹೊಂದಿ ಸತ್ಕರ್ಮಗಳನ್ನು ಮಾಡುತ್ತಾರೋ, ಖಂಡಿತವಾಗಿಯೂ ನಾವು ಅವರಿಗೆ ಕೆಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶನೀಡುವೆವು. ಅವರು ಅಲ್ಲಿ ಶಾಶ್ವತವಾಗಿ ವಾಸಮಾಡುವರು. ಅವರಿಗೆ ಅಲ್ಲಿ ಪರಿಶುದ್ಧಗೊಳಿಸಲ್ಪಟ್ಟ ಜೀವನ ಸಂಗಾತಿಗಳಿರುವರು. ನಾವು ಅವರಿಗೆ ಹೇರಳವಾದ ನೆರಳಿರುವ ಜಾಗದಲ್ಲಿ ಪ್ರವೇಶ ನೀಡುವೆವು.

وَالَّذِينَ آمَنُوا وَعَمِلُوا الصَّالِحَاتِ سَنُدْخِلُهُمْ جَنَّاتٍ تَجْرِي مِن تَحْتِهَا الْأَنْهَارُ خَالِدِينَ فِيهَا أَبَدًا ۖ لَّهُمْ فِيهَا أَزْوَاجٌ مُّطَهَّرَةٌ ۖ وَنُدْخِلُهُمْ ظِلًّا ظَلِيلًا ﴿٥٨﴾

**59.** ಖಂಡಿತವಾಗಿಯೂ ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ವಹಿಸಿಕೊಡಬೇಕೆಂದೂ[145] ಜನರೆಡೆಯಲ್ಲಿ ನೀವು ತೀರ್ಪು ನೀಡುವಾಗ ನ್ಯಾಯಯುತವಾಗಿ ತೀರ್ಪು ನೀಡಬೇಕೆಂದೂ[145A] ಅಲ್ಲಾಹನು ನಿಮ್ಮೊಡನೆ ಆಜ್ಞಾಪಿಸುತ್ತಾನೆ. ಅಲ್ಲಾಹನು ನಿಮಗೆ ಉಪದೇಶಿಸುವಂಥದ್ದು ಅತ್ಯುತ್ತಮವಾದುದು. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

إِنَّ اللَّهَ يَأْمُرُكُمْ أَن تُؤَدُّوا الْأَمَانَاتِ إِلَىٰ أَهْلِهَا وَإِذَا حَكَمْتُم بَيْنَ النَّاسِ أَن تَحْكُمُوا بِالْعَدْلِ ۚ إِنَّ اللَّهَ نِعِمَّا يَعِظُكُم بِهِ ۗ إِنَّ اللَّهَ كَانَ سَمِيعًا بَصِيرًا ﴿٥٩﴾

**60.** ಎಲೈ ವಿಶ್ವಾಸಿಗಳೇ, ಅಲ್ಲಾಹನಿಗೆ ನೀವು ವಿಧೇಯರಾಗಿರಿ. (ಅವನ) ಸಂದೇಶವಾಹಕನಿಗೂ ನಿಮ್ಮ ಅಧಿಕಾರಿಗಳಿಗೂ ವಿಧೇಯರಾಗಿರಿ. ಯಾವುದಾದರೂ ವಿಚಾರದಲ್ಲಿ ನಿಮ್ಮೊಳಗೆ ಭಿನ್ನಾಭಿಪ್ರಾಯವಿದ್ದರೆ, ನೀವು ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವುಳ್ಳವರಾದರೆ, (ಇತ್ಯರ್ಥಕ್ಕಾಗಿ) ಅದನ್ನು ಅಲ್ಲಾಹನಿಗೂ (ಅವನ) ಸಂದೇಶವಾಹಕನಿಗೂ ಒಪ್ಪಿಸಿರಿ. ಅದು ಅತ್ಯುತ್ತಮ ಮಾರ್ಗವಾಗಿದೆ. ಅದರ ಅಂತ್ಯಫಲ ಅತಿ ಹೆಚ್ಚು ಗುಣಕರವಾದುದು.

يٰٓاَيُّهَا الَّذِيْنَ اٰمَنُوْٓا اَطِيْعُوا اللّٰهَ وَاَطِيْعُوا
الرَّسُوْلَ وَاُولِي الْاَمْرِ مِنْكُمْ ۚ فَاِنْ
تَنَازَعْتُمْ فِيْ شَيْءٍ فَرُدُّوْهُ اِلَى اللّٰهِ وَ
الرَّسُوْلِ اِنْ كُنْتُمْ تُؤْمِنُوْنَ بِاللّٰهِ وَ
الْيَوْمِ الْاٰخِرِ ۗ ذٰلِكَ خَيْرٌ وَّاَحْسَنُ
تَاْوِيْلًا ﴿٦٠﴾

**61.** ನಿನಗೆ ಅವತೀರ್ಣವಾದುದರಲ್ಲೂ ನಿನಗೆ ಮುಂಚೆ ಅವತೀರ್ಣವಾದುದರಲ್ಲೂ ತಾವು ವಿಶ್ವಾಸವಿಡುತ್ತೇವೆಂದು ವಾದಿಸುವವರನ್ನು ನೀನು ಕಂಡಿಲ್ಲವೇ? ದುಶ್ಶಕ್ತಿಗಳನ್ನು ನಿರಾಕರಿಸಬೇಕೆಂದು ಅವರಿಗೆ ಆಜ್ಞಾಪಿಸಲಾಗಿದ್ದರೂ ದುಶ್ಶಕ್ತಿಗಳಿಂದಲೇ ಅವರು ತೀರ್ಮಾನವನ್ನು ಬಯಸುತ್ತಾರೆ.[146] ಅವರಿಗೆ ಆಪತ್ಕಾರಿಯಾದ ಮಾರ್ಗಭ್ರಂಶ ಉಂಟಾಗಲೆಂದು ಶೈತಾನ ಬಯಸುತ್ತಾನೆ.

اَلَمْ تَرَ اِلَى الَّذِيْنَ يَزْعُمُوْنَ اَنَّهُمْ
اٰمَنُوْا بِمَآ اُنْزِلَ اِلَيْكَ وَمَآ اُنْزِلَ مِنْ
قَبْلِكَ يُرِيْدُوْنَ اَنْ يَّتَحَاكَمُوْٓا اِلَى
الطَّاغُوْتِ وَقَدْ اُمِرُوْٓا اَنْ يَّكْفُرُوْا
بِهٖ ۗ وَيُرِيْدُ الشَّيْطٰنُ اَنْ يُّضِلَّهُمْ
ضَلٰلًا ۢ بَعِيْدًا ﴿٦١﴾

**62.** 'ಅಲ್ಲಾಹನು ಅವತೀರ್ಣಗೊಳಿಸಿದುದರೆಡೆಗೂ (ಅವನ) ಸಂದೇಶವಾಹಕನೆಡೆಗೂ ಬನ್ನಿರಿ' ಎಂದು ಅವರೊಡನೆ ಹೇಳಿದಾಗ ಕಪಟವಿಶ್ವಾಸಿಗಳು ಪರಾಙ್ಮುಖರಾಗಿ ನಿನ್ನಿಂದ ಹಿಂತಿರುಗಿ ಹೋಗುವುದನ್ನು ನೀನು ಕಾಣುವೆ.

وَاِذَا قِيْلَ لَهُمْ تَعَالَوْا اِلٰى مَآ اَنْزَلَ اللّٰهُ
وَاِلَى الرَّسُوْلِ رَاَيْتَ الْمُنٰفِقِيْنَ
يَصُدُّوْنَ عَنْكَ صُدُوْدًا ﴿٦٢﴾

**63.** ಮತ್ತೆ, ಅವರ ಕೈಗಳು ಮಾಡಿದ (ಕೃತ್ಯಗಳ) ನಿಮಿತ್ತ ಅವರಿಗೆ ಒಂದು ವಿಪತ್ತು ಬಂದೆರಗಿದಾಗ, ನಿನ್ನ ಬಳಿಗೆ ಬಂದು ಅಲ್ಲಾಹನ ಮೇಲೆ ಆಣೆ ಹಾಕುತ್ತಾ 'ನಾವು

فَكَيْفَ اِذَآ اَصَابَتْهُمْ مُّصِيْبَةٌ ۢ بِمَا قَدَّمَتْ
اَيْدِيْهِمْ ثُمَّ جَاۤءُوْكَ يَحْلِفُوْنَ ۖ بِاللّٰهِ

145. ಇಲ್ಲಿ ಆಡಳಿತೆಯ ಕುರಿತು ಹೇಳಲಾಗಿದೆ. ಆಡಳಿತಗಾರರನ್ನು ಚುನಾಯಿಸುವಾಗ ಅರ್ಹರಾದವರನ್ನು ಚುನಾಯಿಸಬೇಕೆಂದು ತಾತ್ಪರ್ಯ. ಆ ಬಗ್ಗೆ ರಿಯಾಯಿತಿ ಮತ್ತು ಪಕ್ಷಪಾತ ಸಲ್ಲದು.

145A. ಈ ಆಜ್ಞೆ ಆಡಳಿತಗಾರರಿಗೆ. ಚುನಾಯಿತರಾದ ಬಳಿಕ ಅವರು ಸದಾ ನ್ಯಾಯ-ನಿಷ್ಠೆಯಿಂದ ವರ್ತಿಸಬೇಕೆಂದು ಇಲ್ಲಿ ಆಜ್ಞಾಪಿಸಲಾಗಿದೆ.

146. ಈ ವಚನ ಕೆಲವು ಕಪಟ ವಿಶ್ವಾಸಿಗಳಿಗೆ ಸಂಬಂಧಿಸಿದೆ. ಅವರು ಪೈಗಂಬರ್ (ಸ)ರಿಂದ ತೀರ್ಮಾನವನ್ನು ಪಡೆಯುವ ಬದಲು ಇತರರಿಂದ ತೀರ್ಮಾನವನ್ನು ಪಡೆಯಲು ಬಯಸುತ್ತಿದ್ದರು.





ಔದಾರ್ಯ ಮತ್ತು ಸಾಮರಸ್ಯ ಹೊರತು ಬೇರೇನನ್ನೂ ಉದ್ದೇಶಿಲ್ಲ' ಎಂದು ಅವರು ಹೇಳುವರೇಕೆ?

اِنْ اَرَدْنَآ اِلَّآ اِحْسَانًا وَّتَوْفِيْقًا ﴿٦٣﴾

**64.** ಅವರ ಹೃದಯಗಳಲ್ಲಿ (ಗುಪ್ತವಾಗಿ) ಇರುವುದನ್ನು ಅಲ್ಲಾಹನು ಬಲ್ಲನು. ಆದ್ದರಿಂದ ನೀನು ಅವರಿಂದ ದೂರಸರಿ; ಅವರನ್ನು ಉಪದೇಶಿಸು ಮತ್ತು ಅವರ ಹೃದಯಕ್ಕೆ ತಟ್ಟುವ ಮಾತುಗಳನ್ನಾಡು.

اُولٰۤىِٕكَ الَّذِيْنَ يَعْلَمُ اللّٰهُ مَا فِيْ
قُلُوْبِهِمْ ۗ فَاَعْرِضْ عَنْهُمْ وَعِظْهُمْ وَ
قُلْ لَّهُمْ فِيْٓ اَنْفُسِهِمْ قَوْلًا ۢ بَلِيْغًا ﴿٦٤﴾

**65.** ಅಲ್ಲಾಹನ ಆಜ್ಞೆಯಂತೆ, ಅನುಸರಿಸಲ್ಪಡಲಿಕ್ಕಾಗಿ ಹೊರತು ಯಾವ ಸಂದೇಶವಾಹಕನನ್ನೂ ನಾವು ಕಳುಹಿಸಲಿಲ್ಲ. ತಮ್ಮ ಆತ್ಮಗಳೊಂದಿಗೆ ಅಕ್ರಮವಾಗಿ ವರ್ತಿಸಿದಾಗ ಅವರು ನಿನ್ನ ಬಳಿಗೆ ಬಂದು ಅಲ್ಲಾಹನಲ್ಲಿ ಪಾಪವಿಮುಕ್ತಿಗೆ ಪ್ರಾರ್ಥಿಸಿದ್ದರೆ ಮತ್ತು ಸಂದೇಶವಾಹಕನೂ ಅವರ ಪಾಪವಿಮುಕ್ತಿಗೆ ಪ್ರಾರ್ಥಿಸಿದ್ದರೆ, ಅತಿ ಹೆಚ್ಚು ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿ ಅಲ್ಲಾಹನನ್ನು ಅವರು ಕಾಣುತ್ತಿದ್ದರು.

وَمَآ اَرْسَلْنَا مِنْ رَّسُوْلٍ اِلَّا لِيُطَاعَ
بِاِذْنِ اللّٰهِ ۗ وَلَوْ اَنَّهُمْ اِذْ ظَّلَمُوْٓا
اَنْفُسَهُمْ جَاۤءُوْكَ فَاسْتَغْفَرُوا اللّٰهَ
وَاسْتَغْفَرَ لَهُمُ الرَّسُوْلُ لَوَجَدُوا
اللّٰهَ تَوَّابًا رَّحِيْمًا ﴿٦٥﴾

**66.** ಆದರೆ ಹಾಗಲ್ಲ, ನಿನ್ನ ಪ್ರಭುವಿನಾಣೆ, ಅವರ ಮಧ್ಯೆ ಭಿನ್ನಾಭಿಪ್ರಾಯವುಳ್ಳ ವಿಚಾರದಲ್ಲಿ ಅವರು ನಿನ್ನನ್ನು ತೀರ್ಪುಗಾರನನ್ನಾಗಿ ಸ್ವೀಕರಿಸಿ, ನೀನು ತೀರ್ಪು ನೀಡಿದ ವಿಚಾರದ ಕುರಿತು ಅವರ ಹೃದಯಗಳಲ್ಲಿ ಯಾವ ಅಸಮಾಧಾನವೂ ಉಂಟಾಗದೆ ಅವರು ಪೂರ್ಣವಾಗಿ ವಿಧೇಯತೆ ತೋರಿಸುವ ವರೆಗೆ ಅವರು (ಯಥಾರ್ಥ) ವಿಶ್ವಾಸಿಗಳಾಗಲಿಕ್ಕಿಲ್ಲ.

فَلَا وَرَبِّكَ لَا يُؤْمِنُوْنَ حَتّٰى
يُحَكِّمُوْكَ فِيْمَا شَجَرَ بَيْنَهُمْ ثُمَّ لَا
يَجِدُوْا فِيْٓ اَنْفُسِهِمْ حَرَجًا مِّمَّا
قَضَيْتَ وَيُسَلِّمُوْا تَسْلِيْمًا ﴿٦٦﴾

**67.** 'ನೀವು ನಿಮ್ಮನ್ನೇ ಕೊಲ್ಲಿರಿ'[147] ಎಂದಾಗಲಿ 'ನಿಮ್ಮ ಮನೆಗಳನ್ನು ಬಿಟ್ಟು ಹೋಗಿರಿ' ಎಂದಾಗಲಿ ನಾವು ಅವರಿಗೆ ಆಜ್ಞಾಪಿಸಿದ್ದರೆ ಅವರ ಪೈಕಿ ಕೆಲವೇ ಮಂದಿ ಹೊರತು ಹಾಗೆ ಮಾಡುತ್ತಿರಲಿಲ್ಲ.[148] ಆದಾಗ್ಯೂ ಅವರಿಗೆ ಉಪದೇಶಿಸಿದಂತೆ ಅವರು ಮಾಡಿರುತ್ತಿದ್ದರೆ ಅದು ಅವರಿಗೆ ಹೆಚ್ಚು ಗುಣಕರವೂ (ವಿಶ್ವಾಸವನ್ನು) ಹೆಚ್ಚು ದೃಢಪಡಿಸಲು ಕಾರಣವೂ ಆಗುತ್ತಿತ್ತು.

وَلَوْ اَنَّا كَتَبْنَا عَلَيْهِمْ اَنِ اقْتُلُوْٓا
اَنْفُسَكُمْ اَوِ اخْرُجُوْا مِنْ دِيَارِكُمْ مَّا
فَعَلُوْهُ اِلَّا قَلِيْلٌ مِّنْهُمْ ۗ وَلَوْ اَنَّهُمْ فَعَلُوْا
مَا يُوْعَظُوْنَ بِهٖ لَكَانَ خَيْرًا لَّهُمْ وَ
اَشَدَّ تَثْبِيْتًا ﴿٦٧﴾

147. "ಫಖ್ತುಲೂ ಅನ್‌ಫುಸಕುಂ" - 2 ನೇ ಅಧ್ಯಾಯ 55ನೇ ವಚನದ ಟಿಪ್ಪಣಿ ನೋಡಿರಿ.

وَّاِذًا لَّاٰتَيْنٰهُمْ مِّنْ لَّدُنَّآ اَجْرًا عَظِيْمًا ۙ۝٦٨

**68.** ಹಾಗಿರುತ್ತಿದ್ದರೆ, ಖಂಡಿತವಾಗಿಯೂ ನಾವು ಅವರಿಗೆ ನಮ್ಮ ಕಡೆಯಿಂದ ಮಹತ್ತಾದ ಪ್ರತಿಫಲವನ್ನು ನೀಡುತ್ತಿದ್ದೆವು.

وَّلَهَدَيْنٰهُمْ صِرَاطًا مُّسْتَقِيْمًا ۝٦٩

**69.** ಹಾಗೂ ನಾವು ನಿಶ್ಚಯವಾಗಿಯೂ ಅವರನ್ನು ಸರಿಯಾದ ಮಾರ್ಗದಲ್ಲಿ ನಡೆಸುತ್ತಿದ್ದೆವು.

وَمَنْ يُّطِعِ اللّٰهَ وَالرَّسُوْلَ فَاُولٰٓئِكَ مَعَ الَّذِيْنَ اَنْعَمَ اللّٰهُ عَلَيْهِمْ مِّنَ النَّبِيّٖنَ وَالصِّدِّيْقِيْنَ وَالشُّهَدَاۗءِ وَالصّٰلِحِيْنَ ۚ وَحَسُنَ اُولٰٓئِكَ رَفِيْقًا ۝٧٠

**70.** ಯಾರಾದರೂ ಅಲ್ಲಾಹನಿಗೆ ವಿಧೇಯರಾಗಿ ಈ ಸಂದೇಶವಾಹಕನನ್ನು ಅನುಸರಿಸಿದರೆ, ಅವರು ಅಲ್ಲಾಹನು ಅನುಗ್ರಹಿಸಿದ ಪ್ರವಾದಿಗಳು, ಸತ್ಯಸಂಧರು, ಹುತಾತ್ಮರು ಮತ್ತು ಸಜ್ಜನರಲ್ಲಿ ಸೇರುವರು.[149] ಅವರು ಅತ್ಯುತ್ತಮ ಸಂಗಾತಿಗಳಾಗಿದ್ದಾರೆ.

ذٰلِكَ الْفَضْلُ مِنَ اللّٰهِ ۭ وَكَفٰى بِاللّٰهِ عَلِيْمًا ۝٧١ ع

**71.** ಇದು ಅಲ್ಲಾಹನ ಮಹತ್ವಪೂರ್ಣ ಅನುಗ್ರಹ ವಾಗಿದೆ. ಅಲ್ಲಾಹನು ಎಲ್ಲವನ್ನೂ ಬಲ್ಲವನಾಗಿದ್ದಾನೆ.

يٰٓاَيُّهَا الَّذِيْنَ اٰمَنُوْا خُذُوْا حِذْرَكُمْ فَانْفِرُوْا ثُبَاتٍ اَوِ انْفِرُوْا جَمِيْعًا ۝٧٢

**72.** **ಎಲೈ ವಿಶ್ವಾಸಿಗಳೇ,** (ನಿಮ್ಮ ರಕ್ಷಣೆಗೋಸ್ಕರ ಸದಾ) **ಮುಂಜಾಗ್ರತೆ ವಹಿಸಿಕೊಳ್ಳಿರಿ. ಮತ್ತೆ** (ಸಂದರ್ಭ ಬಂದ ಹಾಗೆ) **ಬೇರೆ ಬೇರೆ ಗುಂಪುಗಳಾಗಿ ಅಥವಾ ಎಲ್ಲರೂ ಒಟ್ಟಿಗೆ** (ಶತ್ರುಗಳ ವಿರುದ್ಧ ಸಮರಕ್ಕೆ) **ಹೊರಡಿರಿ.**

وَاِنَّ مِنْكُمْ لَمَنْ لَّيُبَطِّئَنَّ ۚ فَاِنْ اَصَابَتْكُمْ مُّصِيْبَةٌ قَالَ قَدْ اَنْعَمَ اللّٰهُ عَلَيَّ اِذْ لَمْ اَكُنْ مَّعَهُمْ شَهِيْدًا ۝٧٣

**73.** (ಯಾವುದೇ ಚಟುವಟಿಕೆಯಿಂದ) **ಯಾವಾಗಲೂ ಹಿಂದಕ್ಕೆ ಸರಿದು ನಿಲ್ಲುವ ಕೆಲವರು ಸಹ ನಿಮ್ಮಲ್ಲಿದ್ದಾರೆ. ನಿಮಗೇನಾದರೂ ವಿಪತ್ತು ಸಂಭವಿಸಿದರೆ, 'ನಾನು ಅವರೊಂದಿಗೆ ಇಲ್ಲದೆ ಅಲ್ಲಾಹನು ನನಗೆ ಉಪಕಾರ ಮಾಡಿದನು' ಎಂದು ಅವನು ಹೇಳುವನು.**

148. ಈ ವಚನದಲ್ಲಿ ಮದೀನದ ಕಪಟ ವಿಶ್ವಾಸಿ (ಮುನಾಫಿಕ್)ಗಳ ಕುರಿತು ಪ್ರಸ್ತಾಪಿಸಲಾಗಿದೆ. ಮಕ್ಕದ ನಿವಾಸಿಗಳಿಗೆ ಒದಗಿ ಬಂದಂತೆ, ತಮ್ಮ ವಿಶ್ವಾಸ ಸಂರಕ್ಷಣೆಗಾಗಿ ಮನೆಮಾರುಗಳನ್ನು ಬಿಟ್ಟು ಮದೀನಕ್ಕೆ ವಲಸೆ ಹೋದಂತಹ ಹಾಗೂ ಮದೀನದ ಮೇಲೆ ಆಕ್ರಮಣ ಮಾಡಿದ ಮಕ್ಕದ ಅವಿಶ್ವಾಸಿಗಳಾದ ತಮ್ಮ ಸ್ವಂತ ಬಂಧು ಜನರೊಡನೆ ಹೋರಾಡಿ ಅವರನ್ನು ವಧಿಸಬೇಕಾಗಿ ಬಂದಂತಹ ಪರಿಸ್ಥಿತಿಯು ಮದೀನದ ನಿವಾಸಿಗಳಿಗೆ ಒದಗಿ ಬಂದಿರಲಿಲ್ಲ. ಇದನ್ನೇ ಇಲ್ಲಿ ಸೂಚಿಸಲಾಗಿದೆ.

149. 'ಮಅ' ಎಂಬ ಪದಕ್ಕೆ ಜೊತೆಗೆ ಎಂದೂ ಸೇರಿದ ಎಂದೂ ಅರ್ಥಗಳಿವೆ. ಇಲ್ಲಿ ಎರಡನೆಯ ಅರ್ಥವನ್ನು ಉದ್ದೇಶಿಸಲಾಗಿದೆ. 'ತವಫ್ಫನಾ ಮಅಲ್ ಅಬ್ರಾರ್' (ಸಜ್ಜನರೊಂದಿಗೆ ನಮ್ಮನ್ನು ಮೃತಪಡಿಸು)ಎಂಬ ವಚನದಲ್ಲಿ ಇದ್ದ ಹಾಗೆ. ಅದರ ಅರ್ಥ ಸಜ್ಜನರು ಮೃತಪಡುವಾಗ ನಮ್ಮನ್ನೂ ಮೃತಪಡಿಸು ಎಂದಲ್ಲ; ಸಜ್ಜನರನ್ನಾಗಿ ಮಾಡಿ ನಮ್ಮನ್ನು ಮೃತಪಡಿಸು ಎಂದಷ್ಟೇ.





وَلَىِٕنْ اَصَابَكُمْ فَضْلٌ مِّنَ اللّٰهِ لَيَقُوْلَنَّ كَاَنْ لَّمْ تَكُنْۢ بَيْنَكُمْ وَبَيْنَهٗ مَوَدَّةٌ يّٰلَيْتَنِيْ كُنْتُ مَعَهُمْ فَاَفُوْزَ فَوْزًا عَظِيْمًا ۝٧٤

**74.** ನಿಮಗೆ ಅಲ್ಲಾಹನಿಂದ ಏನಾದರೂ ಸೌಭಾಗ್ಯ ದೊರೆತರೆ, ಅವನಿಗೂ ನಿಮಗೂ ಮಧ್ಯೆ ಯಾವುದೇ ಮಿತ್ರತ್ವ ಇಲ್ಲದಿದ್ದ ರೀತಿಯಲ್ಲಿ ಅವನು ಹೇಳುವನು: 'ನಾನು ಅವರೊಂದಿಗೆ ಇರುತ್ತಿದ್ದರೆ ಮಹತ್ತರ ವಿಜಯ ವನ್ನು ಪಡೆಯುತ್ತಿದ್ದೆ.'

فَلْيُقَاتِلْ فِيْ سَبِيْلِ اللّٰهِ الَّذِيْنَ يَشْرُوْنَ الْحَيٰوةَ الدُّنْيَا بِالْاٰخِرَةِ ۭ وَمَنْ يُّقَاتِلْ فِيْ سَبِيْلِ اللّٰهِ فَيُقْتَلْ اَوْ يَغْلِبْ فَسَوْفَ نُؤْتِيْهِ اَجْرًا عَظِيْمًا ۝٧٥

**75.** ಆದ್ದರಿಂದ, ಪಾರತ್ರಿಕ ಜೀವಿತಕ್ಕಾಗಿ ಐಹಿಕ ಜೀವಿತವನ್ನು ಮಾರುವವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಲಿ. ಯಾರಾದರೂ ಅಲ್ಲಾಹನ ಮಾರ್ಗದಲ್ಲಿ ಯುದ್ಧಮಾಡಿ ಕೊಲ್ಲಲ್ಪಟ್ಟರೆ ಅಥವಾ ಜಯಗಳಿಸಿದರೆ ನಾವು ಅವನಿಗೆ ಮಹತ್ತರ ಪ್ರತಿಫಲ ವನ್ನು ನೀಡುವೆವು.

وَمَا لَكُمْ لَا تُقَاتِلُوْنَ فِيْ سَبِيْلِ اللّٰهِ وَالْمُسْتَضْعَفِيْنَ مِنَ الرِّجَالِ وَالنِّسَاۗءِ وَالْوِلْدَانِ الَّذِيْنَ يَقُوْلُوْنَ رَبَّنَآ اَخْرِجْنَا مِنْ هٰذِهِ الْقَرْيَةِ الظَّالِمِ اَهْلُهَا ۚ وَاجْعَلْ لَّنَا مِنْ لَّدُنْكَ وَلِيًّا ۙ وَّاجْعَلْ لَّنَا مِنْ لَّدُنْكَ نَصِيْرًا ۝٧٦

**76.** ಅಲ್ಲಾಹನ ಮಾರ್ಗದಲ್ಲಿ ಹಾಗೂ ದುರ್ಬಲ ರಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗೋಸ್ಕರ ಯುದ್ಧಮಾಡದಿರಲಿಕ್ಕೆ ನಿಮಗೇನಾಗಿದೆ? ಅವರು ಪ್ರಾರ್ಥಿಸುತ್ತಾರೆ: 'ನಮ್ಮ ಪ್ರಭೂ, ದುಷ್ಕರ್ಮಿ ಗಳಾದ ಜನರು ವಾಸಿಸುವ ಈ ಊರಿನಿಂದ ನಮ್ಮನ್ನು ನೀನು ಪಾರು ಮಾಡು. ನಮಗೆ ನಿನ್ನ ಕಡೆಯಿಂದ ರಕ್ಷಾಧಿಕಾರಿಯಾಗಿ ಯಾರನ್ನಾದರೂ ನಿಯೋಜಿಸು. ನಿನ್ನ ಕಡೆಯಿಂದ ಸಹಾಯಕನಾಗಿಯೂ ಯಾರನ್ನಾದರೂ ನಮಗೆ ನಿಯುಕ್ತಗೊಳಿಸು.'

اَلَّذِيْنَ اٰمَنُوْا يُقَاتِلُوْنَ فِيْ سَبِيْلِ اللّٰهِ ۚ وَالَّذِيْنَ كَفَرُوْا يُقَاتِلُوْنَ فِيْ سَبِيْلِ الطَّاغُوْتِ فَقَاتِلُوْٓا اَوْلِيَاۗءَ الشَّيْطٰنِ ۚ اِنَّ كَيْدَ الشَّيْطٰنِ كَانَ ضَعِيْفًا ۝٧٧ ع

**77.** ಸತ್ಯವಿಶ್ವಾಸಿಗಳು ಅಲ್ಲಾಹನ ಮಾರ್ಗದಲ್ಲಿ ಯುದ್ಧಮಾಡುತ್ತಾರೆ; ಅವಿಶ್ವಾಸಿಗಳು ದುಷ್ಟಶಕ್ತಿಗಳ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ. ಆದ್ದರಿಂದ ನೀವು ಶೈತಾನನ ಮಿತ್ರರೊಡನೆ ಯುದ್ಧ ಮಾಡಿರಿ. ಶೈತಾನನ ಕುತಂತ್ರ ಬಲಹೀನವೇ ಆಗಿದೆ.

اَلَمْ تَرَ اِلَى الَّذِيْنَ قِيْلَ لَهُمْ كُفُّوْٓا اَيْدِيَكُمْ وَاَقِيْمُوا الصَّلٰوةَ وَاٰتُوا الزَّكٰوةَ ۚ فَلَمَّا كُتِبَ عَلَيْهِمُ الْقِتَالُ

**78.** 'ನಿಮ್ಮ ಕೈಗಳನ್ನು ತಡೆಯಿರಿ, ನಮಾಝನ್ನು ನಿರ್ವಹಿಸಿರಿ ಮತ್ತು ಝಕಾತ್ ನೀಡಿರಿ' ಎಂದು ನಿರ್ದೇಶಿಸಲ್ಪಟ್ಟವರನ್ನು ನೀನು ಕಂಡಿಲ್ಲವೇ? ಅವರಿಗೆ ಯುದ್ಧವನ್ನು ಕಡ್ಡಾಯಗೊಳಿಸಿದಾಗ ಅವರ ಪೈಕಿ ಒಂದು

إِذَا فَرِيقٌ مِّنْهُمْ يَخْشَوْنَ النَّاسَ
كَخَشْيَةِ اللّٰهِ أَوْ أَشَدَّ خَشْيَةً ۚ وَقَالُوا
رَبَّنَا لِمَ كَتَبْتَ عَلَيْنَا الْقِتَالَ ۚ لَوْلَا
أَخَّرْتَنَا إِلَىٰ أَجَلٍ قَرِيبٍ ۗ قُلْ مَتَاعُ
الدُّنْيَا قَلِيلٌ وَالْآخِرَةُ خَيْرٌ لِّمَنِ
اتَّقَىٰ وَلَا تُظْلَمُونَ فَتِيلًا ﴿٧٧﴾

**ಗುಂಪು ಜನರು ಅಲ್ಲಾಹನಿಗೆ ಭಯಪಡುವ ರೀತಿಯಲ್ಲಿ, ಅಥವಾ ಅದಕ್ಕಿಂತಲೂ ಮಿಗಿಲಾಗಿ ಮನುಷ್ಯರಿಗೆ ಭಯಪಡುತ್ತಾರೆ. ಅವರು ಹೇಳುತ್ತಾರೆ: 'ನಮ್ಮ ಪ್ರಭೂ, ನೀನೇಕೆ ನಮ್ಮ ಮೇಲೆ ಯುದ್ಧವನ್ನು ಕಡ್ಡಾಯ ಗೊಳಿಸಿರುವೆ? ಸ್ವಲ್ಪ ಕಾಲಾವಕಾಶವನ್ನು ನೀನೇಕೆ ನಮಗೆ ಕೊಡಲಿಲ್ಲ?' ಹೇಳು: 'ಐಹಿಕ ಜೀವನದ ಸುಖ ಸೌಕರ್ಯಗಳು ಬಲು ತುಚ್ಛ. ಅಲ್ಲಾಹನ ಭಯವಿರಿಸಿ ಕೊಂಡವರಿಗೆ ಪರಲೋಕವು ಹೆಚ್ಚು ಗುಣಕರವಾಗಿದೆ. ಎಳ್ಳಷ್ಟಾದರೂ ನಿಮ್ಮೊಡನೆ ಅನ್ಯಾಯ ತೋರಿಸಲ್ಪಡ ಲಾರದು.'**

أَيْنَمَا تَكُونُوا يُدْرِككُّمُ الْمَوْتُ وَلَوْ
كُنتُمْ فِي بُرُوجٍ مُّشَيَّدَةٍ ۗ وَإِن
تُصِبْهُمْ حَسَنَةٌ يَقُولُوا هَٰذِهِ مِنْ
عِندِ اللّٰهِ ۖ وَإِن تُصِبْهُمْ سَيِّئَةٌ يَقُولُوا
هَٰذِهِ مِنْ عِندِكَ ۚ قُلْ كُلٌّ مِّنْ عِندِ
اللّٰهِ ۖ فَمَالِ هَٰؤُلَاءِ الْقَوْمِ لَا يَكَادُونَ
يَفْقَهُونَ حَدِيثًا ﴿٧٨﴾

**79. ನೀವು ಎಲ್ಲಿದ್ದರೂ - ಭದ್ರವಾಗಿ ನಿರ್ಮಿಸಲಾದ ಕೋಟೆಯಲ್ಲಿ ನೀವಿದ್ದರೂ - ಮರಣವು ನಿಮ್ಮನ್ನು ಹಿಡಿಯುವುದು. ಅವರಿಗೆ** (ಮೇಲೆ ಹೇಳಿದವರಿಗೆ) **ಏನಾದರೂ ಸೌಭಾಗ್ಯ ಒದಗಿಬಂದರೆ, 'ಇದು ಅಲ್ಲಾಹನ ಕಡೆಯಿಂದ' ಎಂದು ಅವರು ಹೇಳುವರು. ಅವರಿಗೆ ಏನಾದರೂ ಕೇಡು ಬಂದೆರಗಿದರೆ, 'ಇದು ನಿನ್ನಿಂದಾಯಿತು' ಎಂದು ಅವರು ಹೇಳುವರು. 'ಎಲ್ಲವೂ ಅಲ್ಲಾಹನ ಕಡೆಯಿಂದಲೇ'[150] ಎಂದು ನೀನು ಹೇಳು. ಈ ಜನರಿಗೆ ಏನಾಗಿದೆ? ಅವರು ಏನನ್ನೂ ತಿಳಿದು ಕೊಳ್ಳಲು ಪ್ರಯತ್ನಿಸುವುದಿಲ್ಲ!**

مَّا أَصَابَكَ مِنْ حَسَنَةٍ فَمِنَ اللّٰهِ ۖ وَ
مَا أَصَابَكَ مِن سَيِّئَةٍ فَمِن نَّفْسِكَ ۚ
وَأَرْسَلْنَاكَ لِلنَّاسِ رَسُولًا ۚ وَكَفَىٰ
بِاللّٰهِ شَهِيدًا ﴿٧٩﴾

**80. ಯಾವುದೇ ಒಳಿತು ನಿನಗೆ ಬಂದೊದಗಿದರೆ ಅದು ಅಲ್ಲಾಹನಿಂದ; ಯಾವುದೇ ಕೆಡುಕು ನಿನಗೆ ಬಂದೆರಗಿದರೆ ಅದು ನಿನ್ನಿಂದಲೇ.[150A] ನಾವು ನಿನ್ನನ್ನು ಜನರಿಗೆ ಒಬ್ಬ ಸಂದೇಶವಾಹಕನಾಗಿ ಕಳುಹಿಸಿದ್ದೇವೆ. ಅಲ್ಲಾಹನು** (ಇದಕ್ಕೆ) **ಸಾಕ್ಷಿಯಾಗಿ ಸಾಕು.**

150. ಯಾವುದೇ ರೀತಿಯ ಗೆಲುವು ಸಿದ್ಧಿಸಿದರೆ ಅದು ಅಲ್ಲಾಹನಿಂದ ಎಂದೂ ಸೋಲು ಉಂಟಾದರೆ ಅದು ಪೈಗಂಬರರ ನಿಮಿತ್ತದಿಂದಾಯಿತೆಂದೂ ಕಪಟ ವಿಶ್ವಾಸಿಗಳು ಹೇಳುತ್ತಿದ್ದರು. ಹೀಗೆ ಪೈಗಂಬರರನ್ನು ಕೀಳಾಗಿ ತೋರಿಸಲು ಅವರು ಉದ್ದೇಶಿಸುತ್ತಿದ್ದರು. ಆದರೆ ಮನುಷ್ಯನ ಲೋಪ ದೋಷಗಳ ಕಾರಣದಿಂದ ಅಥವಾ ಮನುಷ್ಯನು ಮನಗಾಣದ ಅಲ್ಲಾಹನ ವಿಧಿಯ ಕಾರಣಗಳಿಂದ ಕೆಲವು ಕೆಡುಕುಗಳು ಸಂಭವಿಸಬಹುದು. ಅಂಥ ಸಂದರ್ಭಗಳಲ್ಲಿ ತನ್ನ ತಪ್ಪನ್ನು ಒಪ್ಪಿಕೊಳ್ಳಬೇಕಾದುದು ಒಬ್ಬ ಮನುಷ್ಯನೆಂಬ ನೆಲೆಯಲ್ಲಿ ಸತ್ಯವಿಶ್ವಾಸಿಯ ಧರ್ಮವಾಗಿದೆ. ಬದಲಿಗೆ, ಪೈಗಂಬರರ ಮೇಲೆ ಅಥವಾ ಖಲೀಫರ ಮೇಲೆ ತಪ್ಪುಹೊರಿಸುವುದಲ್ಲ.





مَّن يُطِعِ الرَّسُولَ فَقَدْ أَطَاعَ اللّٰهَ ۖ وَمَن
تَوَلَّىٰ فَمَا أَرْسَلْنَاكَ عَلَيْهِمْ حَفِيظًا ﴿٨٠﴾

**81. ಯಾರು ಈ ಸಂದೇಶವಾಹಕನನ್ನು ಅನುಸರಿಸುತ್ತಾನೋ, ನಿಶ್ಚಯವಾಗಿಯೂ ಅವನು ಅಲ್ಲಾಹನನ್ನು ಅನುಸರಿಸಿದನು** (ಎಂದು ತಿಳಿದುಕೋ). **ಯಾರು ಹಿಂತಿರುಗಿ ಹೋಗುತ್ತಾರೋ, ಅವರ ಮೇಲೆ ನಾವು ನಿನ್ನನ್ನು ಕಾವಲುಗಾರನಾಗಿ ನಿಯೋಜಿಸಿಲ್ಲ** (ಎಂದು ನೆನಪಿರಲಿ).

وَيَقُولُونَ طَاعَةٌ فَإِذَا بَرَزُوا مِنْ
عِندِكَ بَيَّتَ طَائِفَةٌ مِّنْهُمْ غَيْرَ الَّذِي
تَقُولُ ۖ وَاللّٰهُ يَكْتُبُ مَا يُبَيِّتُونَ ۖ
فَأَعْرِضْ عَنْهُمْ وَتَوَكَّلْ عَلَى اللّٰهِ ۚ وَ
كَفَىٰ بِاللّٰهِ وَكِيلًا ﴿٨١﴾

**82. 'ಆಜ್ಞಾಪಾಲನೆ** ನಮ್ಮ ಧ್ಯೇಯ' **ಎಂದು ಅವರು ಹೇಳುತ್ತಾರೆ. ನಿನ್ನ ಬಳಿಯಿಂದ ಹೋದರೆ ಅವರ ಪೈಕಿ ಒಂದು ತಂಡ ನೀನು ಹೇಳುವುದಕ್ಕೆ ವಿರುದ್ಧವಾಗಿ ರಾತ್ರಿಯಲ್ಲಿ ಗೂಢಾಲೋಚನೆ ನಡೆಸುತ್ತದೆ. ಅವರು ಗೂಢಾಲೋಚನೆ ಮಾಡುವುದನ್ನು ಅಲ್ಲಾಹನು ದಾಖಲುಮಾಡುತ್ತಾನೆ.[151] ಆದ್ದರಿಂದ ನೀನು ಅವರಿಂದ ವಿಮುಖನಾಗು ಹಾಗೂ ಅಲ್ಲಾಹನ ಮೇಲೆ ಭರವಸೆಯನ್ನಿಡು. ಕಾರ್ಯನಿರ್ವಾಹಕನಾಗಿ ಅಲ್ಲಾಹನು ಸಾಕು.**

أَفَلَا يَتَدَبَّرُونَ الْقُرْآنَ ۚ وَلَوْ كَانَ
مِنْ عِندِ غَيْرِ اللّٰهِ لَوَجَدُوا فِيهِ
اخْتِلَافًا كَثِيرًا ﴿٨٢﴾

**83. ಅವರು ಖುರ್‌ಆನಿನ ಕುರಿತು ಚಿಂತನೆ ಮಾಡುವುದಿಲ್ಲವೇ? ಅದು ಅಲ್ಲಾಹೇತರರಿಂದ ಬಂದದ್ದಾಗಿದ್ದರೆ ಖಂಡಿತವಾಗಿಯೂ ಅವರು ಅದರಲ್ಲಿ ಬಹಳ ವೈರುಧ್ಯಗಳನ್ನು ಕಾಣುತ್ತಿದ್ದರು.**

وَإِذَا جَاءَهُمْ أَمْرٌ مِّنَ الْأَمْنِ أَوِ الْخَوْفِ
أَذَاعُوا بِهِ ۖ وَلَوْ رَدُّوهُ إِلَى الرَّسُولِ وَإِلَىٰ
أُولِي الْأَمْرِ مِنْهُمْ لَعَلِمَهُ الَّذِينَ
يَسْتَنبِطُونَهُ مِنْهُمْ ۗ وَلَوْلَا فَضْلُ اللّٰهِ
عَلَيْكُمْ وَرَحْمَتُهُ لَاتَّبَعْتُمُ الشَّيْطَانَ
إِلَّا قَلِيلًا ﴿٨٣﴾

**84. ಶಾಂತಿ ಅಥವಾ ಭೀತಿಯ ಏನಾದರೂ ವಾರ್ತೆ ಅವರಿಗೆ ತಲಪಿದರೆ ಅವರು ಅದನ್ನು ಹಬ್ಬಿಸುತ್ತಾರೆ. ಆದರೆ ಅದನ್ನು ಅವರು ಪ್ರವಾದಿಗೂ ಅವರ ಪೈಕಿಯ ಅಧಿಕಾರಸ್ಥರಿಗೂ ತಲಪಿಸಿರುತ್ತಿದ್ದರೆ, ಅವರಲ್ಲಿ ಕುಶಾಗ್ರಮತಿಗಳು ಅದರ ನಿಜಾಂಶವನ್ನು ತಿಳಿಯುತ್ತಿದ್ದರು. ಅಲ್ಲಾಹನ ಅನುಗ್ರಹ ಮತ್ತು ಕಾರುಣ್ಯ ನಿಮ್ಮ ಮೇಲೆ ಇಲ್ಲದಿರುತ್ತಿದ್ದರೆ ನಿಮ್ಮ ಪೈಕಿ ಕೆಲವರ ಹೊರತು** (ಉಳಿದವರೆಲ್ಲರೂ) **ಶೈತಾನನ್ನು ಹಿಂಬಾಲಿಸುತ್ತಿದ್ದರು.**

150A. ಇಲ್ಲಿ "ಫಮಿನ್‌ನ್ನಫ್‌ಸಿಕ' (ನಿನ್ನಿಂದಲೇ) ಎಂಬ ಸಂಬೋಧನೆ ಪೈಗಂಬರ್ (ಸ)ರೊಡನೆ ಮಾತ್ರವಲ್ಲ; ಸಮಾಜದ ಎಲ್ಲರನ್ನೂ ಇಲ್ಲಿ ಉದ್ದೇಶಿಸಲಾಗಿದೆ.

151. ಅವರ ಗೂಢಾಲೋಚನೆಯನ್ನು ದಾಖಲಿಸಿಟ್ಟು, ನಿರ್ದಿಷ್ಟ ಸಮಯದಲ್ಲಿ ಅವರನ್ನು ಶಿಕ್ಷಿಸುವನು ಎಂದು ತಾತ್ಪರ್ಯ.

فَقَاتِلْ فِي سَبِيلِ اللَّهِ ۚ لَا تُكَلَّفُ إِلَّا نَفْسَكَ ۚ وَحَرِّضِ الْمُؤْمِنِينَ ۖ عَسَى اللَّهُ أَن يَكُفَّ بَأْسَ الَّذِينَ كَفَرُوا ۚ وَاللَّهُ أَشَدُّ بَأْسًا وَأَشَدُّ تَنكِيلًا ﴿٨٥﴾

**85.** ಆದ್ದರಿಂದ ನೀನು ಅಲ್ಲಾಹನ ಮಾರ್ಗದಲ್ಲಿ ಹೋರಾಡು. ನಿನ್ನದಲ್ಲದ (ಬೇರೆ ಯಾರದೇ) ವಿಚಾರದಲ್ಲಿ ನಿನ್ನನ್ನು ಹೊಣೆಗಾರನಾಗಿ ಮಾಡಲಾಗುವುದಿಲ್ಲ. ಸತ್ಯವಿಶ್ವಾಸಿಗಳನ್ನು (ಹೋರಾಟಕ್ಕೆ) ಪ್ರೇರೇಪಿಸುವುದು ನಿನ್ನ ಕರ್ತವ್ಯವಾಗಿದೆ. ಸತ್ಯವಿರೋಧಿಗಳ ಆಕ್ರಮಣವನ್ನು ಅಲ್ಲಾಹನು ತಡೆದು ನಿಲ್ಲಿಸಲೂ ಬಹುದು. ಅಲ್ಲಾಹನ ಯುದ್ಧ ಬಲು ಘೋರ. (ಅವನ) ಶಿಕ್ಷೆ ಸಹ ಬಲು ಕಠಿಣ.

مَّن يَشْفَعْ شَفَاعَةً حَسَنَةً يَكُن لَّهُ نَصِيبٌ مِّنْهَا ۖ وَمَن يَشْفَعْ شَفَاعَةً سَيِّئَةً يَكُن لَّهُ كِفْلٌ مِّنْهَا ۗ وَكَانَ اللَّهُ عَلَىٰ كُلِّ شَيْءٍ مُّقِيتًا ﴿٨٦﴾

**86.** ಯಾವನಾದರೂ ಒಂದು ಒಳ್ಳೆಯ ಶಿಫಾರಸು ಮಾಡಿದರೆ ಅದರಿಂದ ಒಂದು ಪಾಲು ಆತನಿಗಿದೆ. ಯಾವನಾದರೂ ಕೆಟ್ಟ ಶಿಫಾರಸು ಮಾಡಿದರೆ ಅದರಿಂದ ಒಂದು ಪಾಲು ಅವನಿಗೂ ಇದೆ. ಅಲ್ಲಾಹನು ಎಲ್ಲ ಕಾರ್ಯಗಳಲ್ಲೂ ಪೂರ್ಣ ಸಾಮರ್ಥ್ಯವುಳ್ಳವನಾಗಿದ್ದಾನೆ.

وَإِذَا حُيِّيتُم بِتَحِيَّةٍ فَحَيُّوا بِأَحْسَنَ مِنْهَا أَوْ رُدُّوهَا ۗ إِنَّ اللَّهَ كَانَ عَلَىٰ كُلِّ شَيْءٍ حَسِيبًا ﴿٨٧﴾

**87.** ಯಾರಿಂದಾದರೂ ನೀವು ಶುಭ ಹಾರೈಸಲ್ಪಟ್ಟರೆ, ಅದಕ್ಕಿಂತ ಉತ್ತಮವಾದ ರೀತಿಯಲ್ಲಿ ನೀವು ಶುಭ ಹಾರೈಸಿರಿ ಅಥವಾ (ಕಡಿಮೆ ಪಕ್ಷ) ಅದಕ್ಕೆ ಸಮಾನವಾದ ರೀತಿಯಲ್ಲಾದರೂ. ನಿಸ್ಸಂದೇಹವಾಗಿ ಅಲ್ಲಾಹನು ಎಲ್ಲ ವಿಚಾರಗಳ ಬಗ್ಗೆ ಲೆಕ್ಕ ತೆಗೆಯುವವನಾಗಿದ್ದಾನೆ.

اللَّهُ لَا إِلَٰهَ إِلَّا هُوَ ۚ لَيَجْمَعَنَّكُمْ إِلَىٰ يَوْمِ الْقِيَامَةِ لَا رَيْبَ فِيهِ ۗ وَمَنْ أَصْدَقُ مِنَ اللَّهِ حَدِيثًا ﴿٨٨﴾

**88.** ಅಲ್ಲಾಹ್-ಅವನ ಹೊರತು ಯಾರೂ ಆರಾಧ್ಯನಿಲ್ಲ. ಪುನರುತ್ಥಾನ ದಿನದೆಡೆಗೆ ಖಂಡಿತವಾಗಿಯೂ ಅವನು ನಿಮ್ಮನ್ನು ಒಂದುಗೂಡಿಸಿಕೊಂಡೇ ಹೋಗುವನು. ಅದರಲ್ಲೇನೂ ಸಂಶಯವಿಲ್ಲ. ಅಲ್ಲಾಹನಿಗಿಂತ ಮಾತಿನಲ್ಲಿ ಸತ್ಯಸಂಧನಾಗಿ (ಬೇರೆ) ಯಾರಿದ್ದಾರೆ?

فَمَا لَكُمْ فِي الْمُنَافِقِينَ فِئَتَيْنِ وَاللَّهُ أَرْكَسَهُم بِمَا كَسَبُوا ۚ أَتُرِيدُونَ أَن تَهْدُوا مَنْ أَضَلَّ اللَّهُ ۖ وَمَن يُضْلِلِ اللَّهُ فَلَن تَجِدَ لَهُ سَبِيلًا ﴿٨٩﴾

**89.** ಕಪಟವಿಶ್ವಾಸಿಗಳ ವಿಚಾರದಲ್ಲಿ ನೀವು ಎರಡು ಗುಂಪುಗಳಾಗಲು ನಿಮಗೇನಾಯಿತು? ಅವರು ಗೈದ ಕೆಡುಕು ಕಾರಣದಿಂದ ಅಲ್ಲಾಹನು ಅವರನ್ನು ತಲೆಕೆಳಗಾಗಿ ಮಗುಚಿ ಹಾಕಿದ್ದಾನೆ.[152] ಅಲ್ಲಾಹನು ನಾಶಪಡಿಸಲು ಉದ್ದೇಶಿಸುವವರನ್ನು ನೀವು ಸತ್ಪಥದಲ್ಲಿ ಕೊಂಡೊಯ್ಯಲು ಬಯಸುವಿರಾ? ಅಲ್ಲಾಹನು ಯಾರನ್ನು ನಾಶಗೊಳಿಸಲು ಉದ್ದೇಶಿಸುತ್ತಾನೋ, ನೀನು ಅವನಿಗೆ ಯಾವುದೇ (ರಕ್ಷೆಯ) ಮಾರ್ಗವನ್ನು ಕಾಣಲಾರೆ.





وَدُّوا لَوْ تَكْفُرُونَ كَمَا كَفَرُوا فَتَكُونُونَ سَوَاءً ۖ فَلَا تَتَّخِذُوا مِنْهُمْ أَوْلِيَاءَ حَتَّىٰ يُهَاجِرُوا فِي سَبِيلِ اللَّهِ ۚ فَإِن تَوَلَّوْا فَخُذُوهُمْ وَاقْتُلُوهُمْ حَيْثُ وَجَدتُّمُوهُمْ ۖ وَلَا تَتَّخِذُوا مِنْهُمْ وَلِيًّا وَلَا نَصِيرًا ﴿٩٠﴾

**90.** ಅವರು[153] ಅವಿಶ್ವಾಸವನ್ನು ಹೊಂದಿದ ಪ್ರಕಾರ ನೀವು ಸಹ ಅವಿಶ್ವಾಸ ಹೊಂದಬೇಕೆಂದು ಅವರು ಬಯಸುತ್ತಾರೆ - ಹಾಗೆ ನೀವು (ಉಭಯ ಪಕ್ಷದವರೂ) ಸಮಾನರಾಗಬೇಕೆಂದೂ. ಆದ್ದರಿಂದ ಅವರು ಅಲ್ಲಾಹನ ಮಾರ್ಗದಲ್ಲಿ ತಮ್ಮ ರಾಜ್ಯವನ್ನು ತೊರೆಯುವ ವರೆಗೆ ಅವರ ಪೈಕಿ(ಯಾರನ್ನೂ) ನೀವು ಮಿತ್ರರನ್ನಾಗಿ ಮಾಡಬಾರದು. ಇನ್ನು ಅವರು ವಿಮುಖರಾದರೆ[154] ಅವರನ್ನು ನೀವು ಕಂಡಲ್ಲಿ ಕೊಂದುಹಾಕಿರಿ. ಅವರ ಪೈಕಿ (ಯಾರನ್ನೂ) ನೀವು ಮಿತ್ರನಾಗಿ ಅಥವಾ ಸಹಾಯಕನಾಗಿ ಮಾಡಬಾರದು -

إِلَّا الَّذِينَ يَصِلُونَ إِلَىٰ قَوْمٍ بَيْنَكُمْ وَبَيْنَهُم مِّيثَاقٌ أَوْ جَاءُوكُمْ حَصِرَتْ صُدُورُهُمْ أَن يُقَاتِلُوكُمْ أَوْ يُقَاتِلُوا قَوْمَهُمْ ۚ وَلَوْ شَاءَ اللَّهُ لَسَلَّطَهُمْ عَلَيْكُمْ فَلَقَاتَلُوكُمْ ۚ فَإِنِ اعْتَزَلُوكُمْ فَلَمْ يُقَاتِلُوكُمْ وَأَلْقَوْا إِلَيْكُمُ السَّلَمَ فَمَا جَعَلَ اللَّهُ لَكُمْ عَلَيْهِمْ سَبِيلًا ﴿٩١﴾

**91.** ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡಿರುವ ಒಂದು ಕೋಮಿನ ಬಳಿ ಹೋಗಿ ಸೇರಿಕೊಂಡವರು ಅಥವಾ ನಿಮ್ಮೊಡನೆಯಾಗಲಿ ಅವರ ಸ್ವಂತ ಜನರೊಡನೆಯಾಗಲಿ ಯುದ್ಧ ಮಾಡಲು ಮನಸ್ಸಿಲ್ಲದೆ ನಿಮ್ಮ ಬಳಿಗೆ ಬರುವವರನ್ನು ಹೊರತು. ಅಲ್ಲಾಹನು ಇಚ್ಛಿಸಿದ್ದರೆ ನಿಮ್ಮ ವಿರುದ್ಧ ಅವರಿಗೆ ಶಕ್ತಿ ನೀಡಿ ಅವರು ನಿಮ್ಮೊಡನೆ ಯುದ್ಧ ಮಾಡುತ್ತಿದ್ದರು. ಇನ್ನು, ಅವರು ನಿಮ್ಮನ್ನು ಬಿಟ್ಟು ನಿಂತು, ನಿಮ್ಮೊಡನೆ ಯುದ್ಧ ಮಾಡದೆ ನಿಮ್ಮ ಬಳಿಗೆ ಶಾಂತಿಯ ಸಂದೇಶವನ್ನು ಕಳುಹಿಸಿದರೆ (ನೆನಪಿಡಿರಿ) ಅಲ್ಲಾಹನು ಅವರ ವಿರುದ್ಧ ಯಾವುದೇ (ಆಕ್ರಮಣ) ಕ್ರಮವನ್ನು ಕೈಗೊಳ್ಳುವರೆ ನಿಮಗೆ ಅವಕಾಶ ಕೊಟ್ಟಿಲ್ಲ.

سَتَجِدُونَ آخَرِينَ يُرِيدُونَ أَن يَأْمَنُوكُمْ وَيَأْمَنُوا قَوْمَهُمْ كُلَّ مَا رُدُّوا إِلَى الْفِتْنَةِ أُرْكِسُوا فِيهَا ۚ فَإِن لَّمْ يَعْتَزِلُوكُمْ وَيُلْقُوا إِلَيْكُمُ السَّلَمَ وَيَكُفُّوا أَيْدِيَهُمْ فَخُذُوهُمْ وَاقْتُلُوهُمْ

**92.** ಬೇರೆ ಕೆಲವರನ್ನು ನೀವು ಕಾಣುವಿರಿ. ನಿಮ್ಮಿಂದ ಸುರಕ್ಷಿತರಾಗಿರಬೇಕೆಂದೂ ತಮ್ಮ ಸ್ವಂತ ಜನರಿಂದಲೂ ಸುರಕ್ಷಿತರಾಗಿರಬೇಕೆಂದೂ ಅವರು ಬಯಸುತ್ತಾರೆ. ಯುದ್ಧದ ಸಂದರ್ಭ ಬಂದಾಗ ಅವರು ತಿರುಗಿ ಬೀಳುತ್ತಾರೆ. ಆದ್ದರಿಂದ ಅವರು ನಿಮ್ಮಿಂದ ಹಿಮ್ಮೆಟ್ಟಿ, ನಿಮ್ಮ ಬಳಿಗೆ ಶಾಂತಿಯ ಸಂದೇಶ ಕಳುಹಿಸಿ ತಮ್ಮ

---

152. ಅವರ ಬುದ್ಧಿಯನ್ನು ತೊಡೆದುಹಾಕಿದ್ದಾನೆ ಎಂದು ತಾತ್ಪರ್ಯ.

153. ಶತ್ರುಗಳ ರಾಜ್ಯಗಳಲ್ಲಿ ವಾಸಿಸುವ ಕಪಟ ವಿಶ್ವಾಸಿಗಳ ಕುರಿತು ಇಲ್ಲಿ ಉದ್ದೇಶಿಸಲಾಗಿದೆ.

154. ಅವರು ಶತ್ರುಗಳೊಂದಿಗೆ ಸೇರಿ ನಿಮ್ಮ ವಿರುದ್ಧ ಸಮರ ಹೂಡಲು ಗೂಢಾಲೋಚನೆ ನಡೆಸುವುದಾದರೆ ಎಂದು ತಾತ್ಪರ್ಯ. ನಂತರದ ವಚನ ಇದನ್ನು ಸ್ಪಷ್ಟಪಡಿಸುತ್ತದೆ.

حَيْثُ ثَقِفْتُمُوهُمْ ۚ وَأُولَٰئِكُمْ جَعَلْنَا لَكُمْ عَلَيْهِمْ سُلْطَانًا مُبِينًا ﴿٩١﴾

ಕೈಗಳನ್ನು (ಅಕ್ರಮದಿಂದ) ತಡೆಯದಿದ್ದರೆ, ನೀವು ಅವರನ್ನು ಕಂಡಲ್ಲಿ ಹಿಡಿದು ಕೊಲ್ಲಿರಿ. ಅವರ ವಿರುದ್ಧ ನಾವು ನಿಮಗೆ ಸ್ಪಷ್ಟವಾದ ಪುರಾವೆಯನ್ನು ನೀಡಿರುವೆವು.

وَمَا كَانَ لِمُؤْمِنٍ أَنْ يَقْتُلَ مُؤْمِنًا إِلَّا خَطَأً ۚ وَمَنْ قَتَلَ مُؤْمِنًا خَطَأً فَتَحْرِيرُ رَقَبَةٍ مُؤْمِنَةٍ وَدِيَةٌ مُسَلَّمَةٌ إِلَىٰ أَهْلِهِ إِلَّا أَنْ يَصَّدَّقُوا ۚ فَإِنْ كَانَ مِنْ قَوْمٍ عَدُوٍّ لَكُمْ وَهُوَ مُؤْمِنٌ فَتَحْرِيرُ رَقَبَةٍ مُؤْمِنَةٍ ۖ وَإِنْ كَانَ مِنْ قَوْمٍ بَيْنَكُمْ وَبَيْنَهُمْ مِيثَاقٌ فَدِيَةٌ مُسَلَّمَةٌ إِلَىٰ أَهْلِهِ وَتَحْرِيرُ رَقَبَةٍ مُؤْمِنَةٍ ۖ فَمَنْ لَمْ يَجِدْ فَصِيَامُ شَهْرَيْنِ مُتَتَابِعَيْنِ تَوْبَةً مِنَ اللَّهِ ۗ وَكَانَ اللَّهُ عَلِيمًا حَكِيمًا ﴿٩٢﴾

**93.** ಪ್ರಮಾದದಿಂದ ಹೊರತು ಒಬ್ಬ ಸತ್ಯವಿಶ್ವಾಸಿ ಇನ್ನೊಬ್ಬ ಸತ್ಯವಿಶ್ವಾಸಿಯನ್ನು ಹತ್ಯೆಮಾಡಲಾರ. ಹಾಗೆ ಯಾರಾದರೂ ಪ್ರಮಾದರಿಂದ ಒಬ್ಬ ಸತ್ಯವಿಶ್ವಾಸಿಯನ್ನು ಕೊಂದುಬಿಟ್ಟರೆ (ಅದಕ್ಕೆ ಪ್ರಾಯಶ್ಚಿತ್ತ) ಒಬ್ಬ ಸತ್ಯವಿಶ್ವಾಸಿಯಾದ ಗುಲಾಮನನ್ನು ಬಿಡುಗಡೆಗೊಳಿಸುವುದು ಮತ್ತು ಅವನ (ಕೊಲ್ಲಲ್ಪಟ್ಟವನ) ಕುಟುಂಬಕ್ಕೆ ನಷ್ಟಪರಿಹಾರ ನೀಡುವುದಾಗಿದೆ - ಅವರು ಅದನ್ನು ದಾನವಾಗಿ ಬಿಟ್ಟುಬಿಟ್ಟರೆ ಹೊರತು. (ಹತ್ಯೆ ಗೀಡಾದವನು) ನಿಮ್ಮ ಶತ್ರುಜನರಲ್ಲಿ ಸೇರಿದವನೂ ಸತ್ಯವಿಶ್ವಾಸಿಯೂ ಆಗಿದ್ದರೆ, (ಅದಕ್ಕೆ ಪ್ರಾಯಶ್ಚಿತ್ತ) ಸತ್ಯವಿಶ್ವಾಸಿಯಾದ ಗುಲಾಮನನ್ನು ಬಿಡುಗಡೆಗೊಳಿಸುವುದಾಗಿದೆ. ಅವನು ನಿಮ್ಮೊಂದಿಗೆ ಒಪ್ಪಂದ ಮಾಡಿದ ಒಂದು ಸಮುದಾಯಕ್ಕೆ ಸೇರಿದವನಾಗಿದ್ದರೆ (ಅದಕ್ಕೆ ಪ್ರಾಯಶ್ಚಿತವೇನೆಂದರೆ) ಅವನ ಕುಟುಂಬಕ್ಕೆ ನಷ್ಟ ಪರಿಹಾರವನ್ನು ಕೊಡಬೇಕು ಮತ್ತು ಸತ್ಯವಿಶ್ವಾಸಿಯಾದ ಒಬ್ಬ ಗುಲಾಮನನ್ನು ಬಿಡುಗಡೆಗೊಳಿಸಬೇಕು. ಯಾವನಿಗಾದರೂ ಅದಕ್ಕೆ ಅನುಕೂಲ ಇಲ್ಲದಿದ್ದರೆ ಎರಡು ಮಾಸಗಳ ಕಾಲ ನಿರಂತರ ವಾಗಿ ಉಪವಾಸ ಅನುಷ್ಠಿಸಬೇಕು. ಇದು ಅಲ್ಲಾಹನು ವಿಧಿಸುವ ಕ್ಷಮಾಯಾಚನೆಯ ಮಾರ್ಗವಾಗಿದೆ. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

وَمَنْ يَقْتُلْ مُؤْمِنًا مُتَعَمِّدًا فَجَزَاؤُهُ جَهَنَّمُ خَالِدًا فِيهَا وَغَضِبَ اللَّهُ عَلَيْهِ وَلَعَنَهُ وَأَعَدَّ لَهُ عَذَابًا عَظِيمًا ﴿٩٣﴾

**94.** ಯಾವನಾದರೂ ಉದ್ದೇಶಪೂರ್ವಕವಾಗಿ ಒಬ್ಬ ವಿಶ್ವಾಸಿಯನ್ನು ಕೊಂದರೆ, ಅವನಿಗೆ ಅದರ ಶಿಕ್ಷೆ ನರಕವಾಗಿದೆ. ಅಲ್ಲಿ ಅವನು ದೀರ್ಘಕಾಲ ವಾಸಿಸುವನು. ಅಲ್ಲಾಹನು ಅವನ ಮೇಲೆ ಕೋಪಗೊಳ್ಳುವನು ಮತ್ತು ಅವನನ್ನು ಶಪಿಸುವನು ಹಾಗೂ ಒಂದು ಕಠಿಣವಾದ ಶಿಕ್ಷೆಯನ್ನು ಅವನಿಗಾಗಿ ಸಿದ್ಧಗೊಳಿಸಿಟ್ಟಿರುವನು.





يَا أَيُّهَا الَّذِينَ آمَنُوا إِذَا ضَرَبْتُمْ فِي سَبِيلِ اللَّهِ فَتَبَيَّنُوا وَلَا تَقُولُوا لِمَنْ أَلْقَىٰ إِلَيْكُمُ السَّلَامَ لَسْتَ مُؤْمِنًا تَبْتَغُونَ عَرَضَ الْحَيَاةِ الدُّنْيَا فَعِنْدَ اللَّهِ مَغَانِمُ كَثِيرَةٌ ۚ كَذَٰلِكَ كُنْتُمْ مِنْ قَبْلُ فَمَنَّ اللَّهُ عَلَيْكُمْ فَتَبَيَّنُوا ۚ إِنَّ اللَّهَ كَانَ بِمَا تَعْمَلُونَ خَبِيرًا ﴿٩٤﴾

**95.** ಎಲ್ಲೈ ವಿಶ್ವಾಸಿಗಳೇ, ನೀವು ಅಲ್ಲಾಹನ ಮಾರ್ಗದಲ್ಲಿ ಸಂಚರಿಸುವಾಗ ಕೂಲಂಕಷವಾಗಿ ಪರಿಶೀಲನೆ ಮಾಡಿರಿ. ಯಾರಾದರೂ ನಿಮಗೆ ಶಾಂತಿಯ ವಚನವನ್ನು ಹಾರೈಸಿದರೆ, 'ನೀನು ವಿಶ್ವಾಸಿಯಲ್ಲ' ಎಂದು ಹೇಳಬೇಡಿರಿ. ನೀವು ಇಹಲೋಕದ ವಸ್ತುಗಳನ್ನು ಬಯಸುತ್ತೀರಿ. ಆದರೆ ಅಲ್ಲಾಹನ ಬಳಿ ಧಾರಾಳ ಸಂಪತ್ತಿದೆ. ಇದಕ್ಕೆ ಮುಂಚೆ ನೀವು ಸಹ ಅವರಂತೆ ಇದ್ದಿರಿ. ನಂತರ ಅಲ್ಲಾಹನು ನಿಮ್ಮನ್ನು ಅನುಗ್ರಹಿಸಿದನು. ಆದ್ದರಿಂದ ನೀವು ಸೂಕ್ಷ್ಮವಾಗಿ ಪರಿಶೀಲಿಸಿಕೊಳ್ಳಿರಿ. ನಿಶ್ಚಯವಾಗಿಯೂ ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲನು.

لَا يَسْتَوِي الْقَاعِدُونَ مِنَ الْمُؤْمِنِينَ غَيْرُ أُولِي الضَّرَرِ وَالْمُجَاهِدُونَ فِي سَبِيلِ اللَّهِ بِأَمْوَالِهِمْ وَأَنْفُسِهِمْ ۚ فَضَّلَ اللَّهُ الْمُجَاهِدِينَ بِأَمْوَالِهِمْ وَأَنْفُسِهِمْ عَلَى الْقَاعِدِينَ دَرَجَةً ۚ وَكُلًّا وَعَدَ اللَّهُ الْحُسْنَىٰ ۚ وَفَضَّلَ اللَّهُ الْمُجَاهِدِينَ عَلَى الْقَاعِدِينَ أَجْرًا عَظِيمًا ﴿٩٥﴾

**96.** ವಿಶ್ವಾಸಿಗಳ ಪೈಕಿ ನಿಶ್ಶಕ್ತರು ಹೊರತು (ಧರ್ಮ ಯುದ್ಧಕ್ಕೆ ಹೋಗದೆ ತಮ್ಮ ಮನೆಗಳಲ್ಲಿ) ಕುಳಿತುಕೊಳ್ಳುವವರೂ ಅಲ್ಲಾಹನ ಮಾರ್ಗದಲ್ಲಿ ತಮ್ಮ ಧನ ಮತ್ತು ದೇಹದಿಂದ ಜಿಹಾದ್[155] ಮಾಡುವವರೂ ಸಮಾನರಾಗಲಿಕ್ಕಿಲ್ಲ. ತಮ್ಮ ಧನ ಮತ್ತು ದೇಹದಿಂದ (ಅಲ್ಲಾಹನ ಮಾರ್ಗದಲ್ಲಿ) ಜಿಹಾದ್ ಮಾಡುವವರನ್ನು (ಸುಮ್ಮನೆ) ಕುಳಿತುಕೊಳ್ಳುವವರಿಗಿಂತ ಅಲ್ಲಾಹನು ಸ್ಥಾನದಲ್ಲಿ ಉನ್ನತಗೊಳಿಸಿರುವನು. ಅಲ್ಲಾಹನು ಎಲ್ಲರಿಗೂ ಉತ್ತಮವಾದ ಪ್ರತಿಫಲವನ್ನು ವಾಗ್ದಾನ ಮಾಡಿರುವನು. ಜಿಹಾದ್ ಮಾಡುವವರಿಗೆ ಸುಮ್ಮನೆ ಕುಳಿತುಕೊಳ್ಳುವವರಿಗಿಂತ ಮಹತ್ತರ ಪ್ರತಿಫಲವನ್ನು ನೀಡಿ ಅಲ್ಲಾಹನು ಅವರನ್ನು ಉತ್ಕೃಷ್ಟರನ್ನಾಗಿ ಮಾಡಿರುವನು -

دَرَجَاتٍ مِنْهُ وَمَغْفِرَةً وَرَحْمَةً ۚ وَكَانَ اللَّهُ غَفُورًا رَحِيمًا ﴿٩٦﴾

**97.** (ಉತ್ಕೃಷ್ಟತೆಯೆಂದರೆ) ಅವನ ಕಡೆಯಿಂದ ಉನ್ನತ ಸ್ಥಾನಗಳೂ ಪಾಪ ವಿಮೋಚನೆಯೂ ಕಾರುಣ್ಯ ವೂ ಲಭಿಸುವುವು. ಅಲ್ಲಾಹನು ಅತಿ ಹೆಚ್ಚು ಕ್ಷಮಿಸು ವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

155. 'ಜಿಹಾದ್' - ಕಠಿಣವಾಗಿ ಪ್ರಯತ್ನಿಸುವುದು, ಸತ್ಯದ ಪ್ರಚಾರಕ್ಕಾಗಿ ತೀವ್ರವಾಗಿ ಶ್ರಮಿಸುವುದು ಇವನ್ನೆಲ್ಲ ಜಿಹಾದ್ ಎಂದು ಹೇಳಲಾಗುತ್ತದೆ. ಆಕ್ರಮಣ ಮಾಡುವ ಶತ್ರುಗಳನ್ನು ತಡೆಯಲಿಕ್ಕಾಗಿ ಯುದ್ಧ ಮಾಡಬೇಕಾಗಿ ಬಂದರೆ ಅದು ಸಹ ಜಿಹಾದ್ ಆಗುತ್ತದೆ. ಸತ್ಯ ಪ್ರಚಾರಕ್ಕಾಗಿ ಬಹಳವಾಗಿ ಪ್ರಯತ್ನಿಸುವುದನ್ನು ಪವಿತ್ರ ಖುರ್‌ಆನಿನಲ್ಲಿ ಜಿಹಾದ್ ಎಂದು ಹೇಳಲಾಗಿದೆ. (25:53)

**98.** ತಮ್ಮ ಆತ್ಮಗಳೊಡನೆ ದ್ರೋಹ ಮಾಡಿದವರ[156] ಜೀವಹರಣ ಮಾಡುವ ದೇವದೂತರು (ಅವರೊಡನೆ) ಕೇಳುವರು: 'ನಿಮ್ಮ ಸ್ಥಿತಿ ಏನಾಗಿತ್ತು?' ಆಗ ಅವರು, 'ನಾವು ರಾಜ್ಯದಲ್ಲಿ ದುರ್ಬಲರಾಗಿದ್ದೆವು' ಎಂದು ಹೇಳುವರು. ಅವರು (ದೇವದೂತರು) 'ಅಲ್ಲಾಹನ ಭೂಮಿ ವಿಶಾಲವಾಗಿರಲಿಲ್ಲವೇ? ನಿಮ್ಮ ರಾಜ್ಯವನ್ನು ತೊರೆದು ನಿಮಗೆ ಅಲ್ಲಿಗೆ ಹಿಜ್‌ರತ್ (ವಲಸೆ) ಹೋಗಲಿಕ್ಕಾಗಲಿಲ್ಲವೇ?' ಎಂದು ಕೇಳುವರು. ಆ ಜನರ ವಾಸಸ್ಥಾನ ನರಕವಾಗಿದೆ. ಅದು ಬಲು ನಿಕೃಷ್ಟವಾದ ಸ್ಥಳವಾಗಿದೆ -

إِنَّ الَّذِينَ تَوَفَّاهُمُ الْمَلَائِكَةُ ظَالِمِي
أَنفُسِهِمْ قَالُوا فِيمَ كُنتُمْ ۖ قَالُوا كُنَّا
مُسْتَضْعَفِينَ فِي الْأَرْضِ ۚ قَالُوا أَلَمْ
تَكُنْ أَرْضُ اللَّهِ وَاسِعَةً فَتُهَاجِرُوا
فِيهَا ۚ فَأُولَٰئِكَ مَأْوَاهُمْ جَهَنَّمُ ۖ وَ
سَاءَتْ مَصِيرًا ﴿٩٧﴾

**99.** (ತಮ್ಮ ರಾಜ್ಯವನ್ನು ತೊರೆದು ಹೋಗಲು) ಯೋಜನೆಯನ್ನು ರೂಪಿಸಲು ಅಶಕ್ತರಾದ ಹಾಗೂ ಯಾವುದೇ ಮಾರ್ಗೋಪಾಯವನ್ನು ಕಾಣದ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಹೊರತು.

إِلَّا الْمُسْتَضْعَفِينَ مِنَ الرِّجَالِ وَ
النِّسَاءِ وَالْوِلْدَانِ لَا يَسْتَطِيعُونَ
حِيلَةً وَلَا يَهْتَدُونَ سَبِيلًا ﴿٩٨﴾

**100.** ಆ ಜನರಿಗೆ ಅಲ್ಲಾಹನು ಕ್ಷಮೆ ನೀಡಬಹುದು. ಅಲ್ಲಾಹನು ಅತಿ ಹೆಚ್ಚಾಗಿ ಮನ್ನಿಸುವವನೂ ಕ್ಷಮಿಸುವವನೂ ಆಗಿದ್ದಾನೆ.

فَأُولَٰئِكَ عَسَى اللَّهُ أَن يَعْفُوَ عَنْهُمْ ۚ وَ
كَانَ اللَّهُ عَفُوًّا غَفُورًا ﴿٩٩﴾

**101.** ಅಲ್ಲಾಹನ ಮಾರ್ಗದಲ್ಲಿ ಯಾರು ತನ್ನ ರಾಜ್ಯವನ್ನು ತೊರೆದು ವಲಸೆ ಹೋಗುವನೋ ಅವನು ಭೂಮಿಯಲ್ಲಿ ಧಾರಾಳ ಅಭಯ ಸ್ಥಾನವನ್ನೂ ವಿಶಾಲತೆಯನ್ನೂ ಕಾಣುವನು. ಅಲ್ಲಾಹನ ಮತ್ತು ಅವನ ಸಂದೇಶವಾಹಕನ ಮಾರ್ಗದಲ್ಲಿ ತನ್ನ ಮನೆಯನ್ನು ಬಿಟ್ಟು ವಲಸೆ ಹೋಗಿ ಮೃತ್ಯುವಿಗೀಡಾದರೆ ಅವನ ಪ್ರತಿಫಲ ಅಲ್ಲಾಹನ ಬಾಧ್ಯತೆಯಾಗಿದೆ (ಎಂದು ತಿಳಿದುಕೊಳ್ಳಿರಿ). ಅಲ್ಲಾಹನು ಅತಿ ಹೆಚ್ಚು ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَمَن يُهَاجِرْ فِي سَبِيلِ اللَّهِ يَجِدْ
فِي الْأَرْضِ مُرَاغَمًا كَثِيرًا وَسَعَةً ۚ
وَمَن يَخْرُجْ مِن بَيْتِهِ مُهَاجِرًا إِلَى
اللَّهِ وَرَسُولِهِ ثُمَّ يُدْرِكْهُ الْمَوْتُ
فَقَدْ وَقَعَ أَجْرُهُ عَلَى اللَّهِ ۗ وَكَانَ اللَّهُ
غَفُورًا رَّحِيمًا ﴿١٠٠﴾

**102.** ನೀವು ಭೂಮಿಯಲ್ಲಿ ಸಂಚರಿಸುತ್ತಿರುವಾಗ ನಿಮಗೆ ಅವಿಶ್ವಾಸಿಗಳು ತೊಂದರೆ ಕೊಡುವರೆಂಬ ಭಯವಿದ್ದರೆ, ನೀವು ನಮಾಝನ್ನು ಹ್ರಸ್ವಗೊಳಿ

وَإِذَا ضَرَبْتُمْ فِي الْأَرْضِ فَلَيْسَ
عَلَيْكُمْ جُنَاحٌ أَن تَقْصُرُوا مِنَ
الصَّلَاةِ إِنْ خِفْتُمْ أَن يَفْتِنَكُمُ الَّذِينَ

156. ವಿಶ್ವಾಸ ಸಂರಕ್ಷಣೆಗಾಗಿ ವಲಸೆ ಹೋಗದೆ, ಅವಿಶ್ವಾಸಿಗಳ ರಾಜ್ಯದಲ್ಲೇ ವಾಸಿಸುತ್ತಾ ಕಷ್ಟಗಳನ್ನು ಅನುಭವಿಸುವವರು.





ಸುವುದರಲ್ಲಿ ತಪ್ಪಿಲ್ಲ.[157] ಖಂಡಿತವಾಗಿಯೂ ಅವಿಶ್ವಾಸಿಗಳು ನಿಮ್ಮ ಪ್ರತ್ಯಕ್ಷ ಶತ್ರುಗಳು.

كَفَرُوا ۚ إِنَّ الْكَافِرِينَ كَانُوا لَكُمْ
عَدُوًّا مُّبِينًا ﴿١٠١﴾

**103.** ನೀನು ಅವರೊಂದಿಗಿದ್ದು ಅವರ ನಮಾಝಿನ ನೇತೃತ್ವವನ್ನು ವಹಿಸುತ್ತಿರುವಾಗ, ಅವರ ಪೈಕಿ ಒಂದು ಗುಂಪು ನಿನ್ನೊಂದಿಗೆ ಪ್ರಾರ್ಥನೆ ಮಾಡಲಿ; ತಮ್ಮೊಂದಿಗೆ ಆಯುಧಗಳನ್ನೂ ಎತ್ತಿಕೊಳ್ಳಲಿ. ಅವರು ಪ್ರಣಾಮ ಮಾಡಿದ ಬಳಿಕ ಹಿಂದಕ್ಕೆ ಸರಿದು ನಿಲ್ಲಲಿ. ನಮಾಝ್ ಮಾಡಿರದಿದ್ದ ಇನ್ನೊಂದು ಗುಂಪು ಮುಂದಕ್ಕೆ ಬಂದು ನಿನ್ನೊಂದಿಗೆ ಪ್ರಾರ್ಥಿಸಲಿ. ಅವರು ಸಹ ತಮ್ಮ ರಕ್ಷಣೆಗೆ ಆಯುಧಗಳನ್ನು ಎತ್ತಿಕೊಳ್ಳಲಿ. ನಿಮ್ಮ ಆಯುಧಗಳ ಕುರಿತು ಮತ್ತು ಇತರ ಸಾಮಗ್ರಿಗಳ ಬಗ್ಗೆ ನೀವು ನಿರ್ಲಕ್ಷ್ಯರಾಗಿರಬೇಕೆಂದೂ ಆಗ ಹಠಾತ್ತಾಗಿ ನಿಮ್ಮ ಮೇಲೆ ಆಕ್ರಮಣವೆಸಗಬೇಕೆಂದೂ ಅವಿಶ್ವಾಸಿಗಳು ಬಯಸುತ್ತಾರೆ. ಮಳೆಯ ಕಾರಣದಿಂದ ನೀವು ತೊಂದರೆಗೀಡಾಗಿದ್ದರೆ ಅಥವಾ ನೀವು ರೋಗಿಗಳಾಗಿದ್ದರೆ ಆಯುಧಗಳನ್ನು (ಧರಿಸದೆ) ಕೆಳಗಿಡುವುದರಲ್ಲಿ ನಿಮ್ಮ ತಪ್ಪಿಲ್ಲ. ಆದರೆ ನೀವು (ಸದಾ) ಮುಂಜಾಗ್ರತೆ ವಹಿಸಬೇಕಾಗಿದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಅವಿಶ್ವಾಸಿಗಳಿಗೆ ನಿಂದನೀಯವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದಾನೆ.

وَإِذَا كُنتَ فِيهِمْ فَأَقَمْتَ لَهُمُ
الصَّلَاةَ فَلْتَقُمْ طَائِفَةٌ مِّنْهُم مَّعَكَ
وَلْيَأْخُذُوا أَسْلِحَتَهُمْ فَإِذَا سَجَدُوا
فَلْيَكُونُوا مِن وَرَائِكُمْ وَلْتَأْتِ
طَائِفَةٌ أُخْرَىٰ لَمْ يُصَلُّوا فَلْيُصَلُّوا
مَعَكَ وَلْيَأْخُذُوا حِذْرَهُمْ وَ
أَسْلِحَتَهُمْ ۗ وَدَّ الَّذِينَ كَفَرُوا
لَوْ تَغْفُلُونَ عَنْ أَسْلِحَتِكُمْ وَ
أَمْتِعَتِكُمْ فَيَمِيلُونَ عَلَيْكُم مَّيْلَةً
وَاحِدَةً ۚ وَلَا جُنَاحَ عَلَيْكُمْ إِن كَانَ
بِكُمْ أَذًى مِّن مَّطَرٍ أَوْ كُنتُم مَّرْضَىٰ
أَن تَضَعُوا أَسْلِحَتَكُمْ ۖ وَخُذُوا
حِذْرَكُمْ ۗ إِنَّ اللَّهَ أَعَدَّ لِلْكَافِرِينَ
عَذَابًا مُّهِينًا ﴿١٠٢﴾

**104.** ಹಾಗೆ ನೀವು ನಮಾಝ್ ಮಾಡಿ ಮುಗಿಸಿದ ಬಳಿಕ ನಿಂತಿರುವಾಗಲೂ ಕುಳಿತಿರುವಾಗಲೂ ಮಗ್ಗುಲಿಗೆ ಮಲಗಿಕೊಂಡಿರುವಾಗಲೂ ಅಲ್ಲಾಹನನ್ನು ಸ್ಮರಿಸಿರಿ. ನೀವು ಅಪಾಯದಿಂದ ಪಾರಾದ ಬಳಿಕ (ಕ್ರಮ ಪ್ರಕಾರ) ನಮಾಝ್ ನಿರ್ವಹಿಸಿರಿ. ನಿಸ್ಸಂದೇಹವಾಗಿಯೂ ನಮಾಝ್ ನಿರ್ದಿಷ್ಟ ಸಮಯಗಳಲ್ಲಿ ನಿರ್ವಹಿಸಲ್ಪಡಲಿಕ್ಕೆ ವಿಶ್ವಾಸಿಗಳಿಗೆ ಕಡ್ಡಾಯಗೊಳಿಸಲಾಗಿದೆ.

فَإِذَا قَضَيْتُمُ الصَّلَاةَ فَاذْكُرُوا اللَّهَ
قِيَامًا وَقُعُودًا وَعَلَىٰ جُنُوبِكُمْ ۚ
فَإِذَا اطْمَأْنَنتُمْ فَأَقِيمُوا الصَّلَاةَ ۚ إِنَّ
الصَّلَاةَ كَانَتْ عَلَى الْمُؤْمِنِينَ كِتَابًا
مَّوْقُوتًا ﴿١٠٣﴾

157. ಶ್ರದ್ಧೆ ಮತ್ತು ಭಕ್ತಿಯಿಂದ ಸಾವಕಾಶವಾಗಿ ನಮಾಝ್ ಮಾಡಬೇಕಾಗಿದ್ದರೂ ಶತ್ರುಗಳ ಭಯವಿದ್ದರೆ ಶೀಘ್ರವಾಗಿ ನಮಾಝ್ ಮಾಡಬಹುದು ಎಂದು ತಾತ್ಪರ್ಯ.

**105.** ಈ (ಶತ್ರು) ಜನರನ್ನು ಹುಡುಕುವ ಕಾರ್ಯದಲ್ಲಿ ನೀವು ಉದಾಸೀನರಾಗಬಾರದು. ನೀವು ಕಷ್ಟ ಅನುಭವಿಸುವುದಾದರೆ, ನೀವು ಕಷ್ಟ ಅನುಭವಿಸುವ ರೀತಿಯಲ್ಲಿ ಅವರು ಸಹ ಕಷ್ಟ ಅನುಭವಿಸುತ್ತಾರೆ. ನೀವಾದರೋ ಅವರು ನಿರೀಕ್ಷಿಸದ ಅನುಗ್ರಹಗಳನ್ನು ಅಲ್ಲಾಹನಿಂದ ನಿರೀಕ್ಷಿಸುತ್ತೀರಿ. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

وَلَا تَهِنُوا فِي ابْتِغَاءِ الْقَوْمِ ۖ إِن تَكُونُوا
تَأْلَمُونَ فَإِنَّهُمْ يَأْلَمُونَ كَمَا
تَأْلَمُونَ ۖ وَتَرْجُونَ مِنَ اللَّهِ مَا لَا
يَرْجُونَ ۗ وَكَانَ اللَّهُ عَلِيمًا
حَكِيمًا ﴿١٠٥﴾

**106.** ಅಲ್ಲಾಹನು ನಿನಗೆ ಕಾಣಿಸಿ ಕೊಟ್ಟಿರುವ ರೀತಿಯಲ್ಲಿ ನೀನು ಜನರೆಡೆಯಲ್ಲಿ ತೀರ್ಮಾನ ಮಾಡಲಿಕ್ಕೋಸ್ಕರ ನಾವು ನಿನಗೆ ಸತ್ಯದಿಂದ ಕೂಡಿದ ಈ ಗ್ರಂಥವನ್ನು ಅವತೀರ್ಣಗೊಳಿಸಿರುವೆವು. ನೀನು ವಂಚಕರ ಪರವಾಗಿ ವಾದಿಸುವವನಾಗಬಾರದು.

إِنَّا أَنزَلْنَا إِلَيْكَ الْكِتَابَ بِالْحَقِّ
لِتَحْكُمَ بَيْنَ النَّاسِ بِمَا أَرَاكَ
اللَّهُ ۚ وَلَا تَكُن لِّلْخَائِنِينَ خَصِيمًا ﴿١٠٦﴾

**107.** ಅಲ್ಲಾಹನ ಕ್ಷಮೆಯನ್ನು ಯಾಚಿಸು. ನಿಸ್ಸಂಶಯವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَاسْتَغْفِرِ اللَّهَ ۖ إِنَّ اللَّهَ كَانَ غَفُورًا
رَّحِيمًا ﴿١٠٧﴾

**108.** ಆತ್ಮವಂಚನೆ ಮಾಡುವವರ ಪರವಾಗಿಯೂ ನೀನು ವಾದಿಸಬಾರದು. ವಿಶ್ವಾಸ ಘಾತುಕನೂ ಮಹಾಪಾಪಿಯೂ ಆದವನನ್ನು ಅಲ್ಲಾಹನು ಮೆಚ್ಚಲಾರ.

وَلَا تُجَادِلْ عَنِ الَّذِينَ يَخْتَانُونَ
أَنفُسَهُمْ ۚ إِنَّ اللَّهَ لَا يُحِبُّ مَن كَانَ
خَوَّانًا أَثِيمًا ﴿١٠٨﴾

**109.** ಜನರಿಂದ ಅಡಗಿರಲಿಕ್ಕೆ ಅವರು ಬಯಸುತ್ತಾರೆ. ಆದರೆ ಅಲ್ಲಾಹನಿಂದ ಅಡಗಿರಲಿಕ್ಕೆ ಅವರಿಗೆ ಸಾಧ್ಯವಿಲ್ಲ. ಅವನು ಇಷ್ಟಪಡದ ವಿಚಾರಗಳ ಕುರಿತು ಅವರು ರಾತ್ರಿ ವೇಳೆಯಲ್ಲಿ ಗೂಢಾಲೋಚನೆ ಮಾಡುವ ಸಂದರ್ಭದಲ್ಲೂ ಅವರೊಂದಿಗೆ ಅವನಿರುತ್ತಾನೆ. ಅವರು ಮಾಡುವುದನ್ನೆಲ್ಲ ಅಲ್ಲಾಹನು ಸುತ್ತುವರಿಯುತ್ತಾನೆ.

يَسْتَخْفُونَ مِنَ النَّاسِ وَلَا
يَسْتَخْفُونَ مِنَ اللَّهِ وَهُوَ مَعَهُمْ إِذْ
يُبَيِّتُونَ مَا لَا يَرْضَىٰ مِنَ الْقَوْلِ ۚ وَ
كَانَ اللَّهُ بِمَا يَعْمَلُونَ مُحِيطًا ﴿١٠٩﴾

**110.** ನೋಡಿರಿ, ನೀವು ಅವರಿಗೋಸ್ಕರ ಇಹಲೋಕ ಜೀವಿತದಲ್ಲಿ ವಾದಿಸಿದವರಾಗಿದ್ದೀರಿ. ಆದರೆ ಪುನರುತ್ಥಾನದ ದಿನದಂದು ಅವರಿಗೋಸ್ಕರ ಅಲ್ಲಾಹನ ಬಳಿ ವಾದಿಸುವವನು ಯಾರು? ಅಥವಾ (ಅಂದು) ಅವರ ರಕ್ಷಕನಾಗಿ ಯಾರಿರುತ್ತಾನೆ?

هَا أَنتُمْ هَٰؤُلَاءِ جَادَلْتُمْ عَنْهُمْ فِي
الْحَيَاةِ الدُّنْيَا فَمَن يُجَادِلُ اللَّهَ
عَنْهُمْ يَوْمَ الْقِيَامَةِ أَم مَّن يَكُونُ
عَلَيْهِمْ وَكِيلًا ﴿١١٠﴾





**111.** ಯಾವನಾದರೂ ಒಂದು ಕೆಡುಕನ್ನು ಮಾಡಿ ಅಥವಾ ತನ್ನ ಆತ್ಮದೊಡನೆ ದ್ರೋಹವನ್ನೆಸಗಿ ಅಲ್ಲಾಹನೊಡನೆ ಪಾಪ ಮುಕ್ತಿಗಾಗಿ ಪ್ರಾರ್ಥಿಸಿದರೆ, ಅವನು ಅಲ್ಲಾಹನನ್ನು ಅತ್ಯಂತ ಕ್ಷಮಿಸುವವನಾಗಿಯೂ ಕಾರುಣ್ಯನಿಧಿಯಾಗಿಯೂ ಕಾಣುವನು.

وَمَن يَعْمَلْ سُوءًا أَوْ يَظْلِمْ نَفْسَهُ
ثُمَّ يَسْتَغْفِرِ اللَّهَ يَجِدِ اللَّهَ غَفُورًا
رَّحِيمًا ﴿١١١﴾

**112.** ಯಾವನಾದರೂ ಒಂದು ಕೆಡುಕನ್ನು ಮಾಡಿದರೆ, ಅವನು ತನ್ನ ಆತ್ಮಕ್ಕೆ ದೋಷಕರವಾಗಿಯೇ ಅದನ್ನು ಮಾಡುತ್ತಾನೆ. ಅಲ್ಲಾಹನು ಎಲ್ಲ ಬಲ್ಲವನೂ ಬುದ್ಧಿಶಾಲಿಯೂ ಆಗಿದ್ದಾನೆ.

وَمَن يَكْسِبْ إِثْمًا فَإِنَّمَا يَكْسِبُهُ
عَلَىٰ نَفْسِهِ ۚ وَكَانَ اللَّهُ عَلِيمًا
حَكِيمًا ﴿١١٢﴾

**113.** ಯಾವನಾದರೂ ಒಂದು ತಪ್ಪು ಅಥವಾ ಪಾಪ ಮಾಡಿದ ಬಳಿಕ ಅದನ್ನು ಒಬ್ಬ ನಿರಪರಾಧಿಯ ಮೇಲೆ ಆರೋಪಿಸಿದರೆ, ಅವನು ಖಂಡಿತವಾಗಿಯೂ ಅತಿದೊಡ್ಡ ಸುಳ್ಳಾರೋಪದ ಮತ್ತು ಸ್ಪಷ್ಟವಾದ ಪಾಪದ ಭಾರವನ್ನು ಹೊರುತ್ತಾನೆ.

وَمَن يَكْسِبْ خَطِيئَةً أَوْ إِثْمًا ثُمَّ
يَرْمِ بِهِ بَرِيئًا فَقَدِ احْتَمَلَ
بُهْتَانًا وَإِثْمًا مُّبِينًا ﴿١١٣﴾

**114.** ನಿನ್ನ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಕಾರುಣ್ಯ ಇಲ್ಲದಿರುತ್ತಿದ್ದರೆ, (ಶತ್ರುಗಳು ಅವರ ದುರುದ್ದೇಶದಲ್ಲಿ ಜಯಗಳಿಸುತ್ತಿದ್ದರು. ಹೇಗೆಂದರೆ) ಅವರಲ್ಲಿ ಒಂದು ಪಂಗಡ ಜನರು ನಿನ್ನನ್ನು ದಾರಿ ತಪ್ಪಿಸಲು ದೃಢ ಸಂಕಲ್ಪ ಮಾಡಿದ್ದರು. ವಾಸ್ತವದಲ್ಲಿ ತಮ್ಮನ್ನೇ ಹೊರತು ಬೇರೆ ಯಾರನ್ನೂ ಅವರು ದಾರಿ ತಪ್ಪಿಸುವುದಿಲ್ಲ. ನಿನಗೆ ಯಾವುದೇ ದೋಷವನ್ನುಂಟು ಮಾಡಲು ಅವರಿಗೆ ಸಾಧ್ಯವೂ ಇಲ್ಲ. ಅಲ್ಲಾಹನು ನಿನಗೆ ಗ್ರಂಥವನ್ನೂ ಸುಜ್ಞಾನವನ್ನೂ ನೀಡಿದ್ದಾನೆ ಹಾಗೂ ನಿನಗೆ ತಿಳಿಯದಿರುವುದನ್ನು ಅವನು ನಿನಗೆ ಕಲಿಸಿಕೊಟ್ಟಿದ್ದಾನೆ. ನಿನ್ನ ಮೇಲೆ ಅಲ್ಲಾಹನ ಅನುಗ್ರಹ ಮಹತ್ತರವಾದುದು.

وَلَوْلَا فَضْلُ اللَّهِ عَلَيْكَ وَرَحْمَتُهُ
لَهَمَّت طَّائِفَةٌ مِّنْهُمْ أَن يُضِلُّوكَ
وَمَا يُضِلُّونَ إِلَّا أَنفُسَهُمْ ۖ وَمَا
يَضُرُّونَكَ مِن شَيْءٍ ۚ وَأَنزَلَ اللَّهُ
عَلَيْكَ الْكِتَابَ وَالْحِكْمَةَ وَعَلَّمَكَ مَا
لَمْ تَكُن تَعْلَمُ ۚ وَكَانَ فَضْلُ اللَّهِ عَلَيْكَ
عَظِيمًا ﴿١١٤﴾

**115.** ಅವರಲ್ಲಿ ಹೆಚ್ಚಿನವರ ಸಮಾಲೋಚನೆಗಳಲ್ಲಿ ಯಾವ ಒಳಿತೂ ಇಲ್ಲ - ಧಾನಧರ್ಮ ಮಾಡುವುದರ ಬಗ್ಗೆ ಅಥವಾ ಸತ್ಕಾರ್ಯ ಗೈಯ್ಯುವುದರ ಬಗ್ಗೆ ಅಥವಾ ಜನರೆಡೆಯಲ್ಲಿ ಸಾಮರಸ್ಯ ಏರ್ಪಡಿಸುವ ಬಗ್ಗೆ ಮಾಡುವವರ ಸಮಾಲೋಚನೆಗಳ ಹೊರತು. ಅಲ್ಲಾಹನ

لَّا خَيْرَ فِي كَثِيرٍ مِّن نَّجْوَاهُمْ إِلَّا مَنْ أَمَرَ
بِصَدَقَةٍ أَوْ مَعْرُوفٍ أَوْ إِصْلَاحٍ بَيْنَ
النَّاسِ ۚ وَمَن يَفْعَلْ ذَٰلِكَ ابْتِغَاءَ

ಸಂತೃಪ್ತಿಯನ್ನು ಬಯಸಿ ಯಾವನಾದರೂ ಹಾಗೆ ಮಾಡಿದರೆ ನಾವು ಆತನಿಗೆ ಮಹತ್ತರವಾದ ಪ್ರತಿಫಲವನ್ನು ನೀಡುವೆವು.

مَرْضَاتِ اللّٰهِ فَسَوْفَ نُؤْتِيْهِ اَجْرًا
عَظِيْمًا ﴿١١٥﴾

**116.** ಸನ್ಮಾರ್ಗವೇನೆಂದು ತನಗೆ ಸ್ಪಷ್ಟವಾದ ನಂತರ ಯಾವನಾದರೂ ಈ ಸಂದೇಶವಾಹಕನನ್ನು ವಿರೋಧಿಸುತ್ತಾ ಸತ್ಯವಿಶ್ವಾಸಿಗಳಿಗೆ ಸಲ್ಲದ ಮಾರ್ಗವನ್ನು ಕೈಗೊಂಡರೆ, ಅವನು ಹಿಂಬಾಲಿಸಿದ ಮಾರ್ಗದೆಡೆಗೆಯೇ ನಾವು ಅವನನ್ನು ತಿರುಗಿಸಿ ಬಿಡುವೆವು[158] ಮತ್ತು ನಾವು ಅವನನ್ನು ನರಕಕ್ಕೆ ಹಾಕುವೆವು. ಅದು ಅತಿ ನಿಕೃಷ್ಟವಾದ ವಾಸಸ್ಥಾನವಾಗಿದೆ.

وَمَنْ يُّشَاقِقِ الرَّسُوْلَ مِنْۢ بَعْدِ مَا
تَبَيَّنَ لَهُ الْهُدٰى وَيَتَّبِعْ غَيْرَ سَبِيْلِ
الْمُؤْمِنِيْنَ نُوَلِّهٖ مَا تَوَلّٰى وَنُصْلِهٖ
جَهَنَّمَ ؕ وَسَآءَتْ مَصِيْرًا ﴿١١٦﴾

**117.** ತನ್ನೊಂದಿಗೆ ಏನನ್ನಾದರೂ ಸಹಭಾಗಿಯಾಗಿ ಕಲ್ಪಿಸುವುದನ್ನು ಖಂಡಿತವಾಗಿಯೂ ಅಲ್ಲಾಹನು ಕ್ಷಮಿಸಲಾರ. ಅದರ ಹೊರತು ಇತರ ಪಾಪಗಳನ್ನು ತಾನು ಉದ್ದೇಶಿಸುವವರಿಗೆ ಅವನು ಕ್ಷಮಿಸಿಕೊಡುವನು. ಯಾರು ಅಲ್ಲಾಹನಿಗೆ ಸಹಭಾಗಿತ್ವವನ್ನು ಕಲ್ಪಿಸುತ್ತಾನೋ ನಿಸ್ಸಂದೇಹವಾಗಿಯೂ ಅವನು ಮಾರ್ಗಭ್ರಂಶನಾಗಿ ಬಹುದೂರ ಅಗಲಿಹೋಗುತ್ತಾನೆ.

اِنَّ اللّٰهَ لَا يَغْفِرُ اَنْ يُّشْرَكَ بِهٖ وَ
يَغْفِرُ مَا دُوْنَ ذٰلِكَ لِمَنْ يَّشَآءُ ؕ وَمَنْ
يُّشْرِكْ بِاللّٰهِ فَقَدْ ضَلَّ ضَلٰلًاۢ بَعِيْدًا ﴿١١٧﴾

**118.** ಅವರು ಅವನನ್ನು ಬಿಟ್ಟು ನಿರ್ಜೀವ ವಸ್ತುಗಳನ್ನಲ್ಲದೆ (ಸಹಾಯಕ್ಕಾಗಿ) ಕರೆಯುವುದಿಲ್ಲ. ಹಾಗೆಯೇ, ಧಿಕ್ಕಾರಿಯಾದ ಶೈತಾನನನ್ನು ಹೊರತು ಅವರು (ಸಹಾಯಕ್ಕಾಗಿ) ಕರೆಯುವುದಿಲ್ಲ.

اِنْ يَّدْعُوْنَ مِنْ دُوْنِهٖۤ اِلَّاۤ اِنٰثًا ۚ وَاِنْ
يَّدْعُوْنَ اِلَّا شَيْطٰنًا مَّرِيْدًا ﴿١١٨﴾

**119.** ಅಲ್ಲಾಹನು ಅವನನ್ನು (ಶೈತಾನನನ್ನು) ಶಪಿಸಿದ್ದಾನೆ. ಅವನು (ಶೈತಾನನು) ಹೇಳಿದನು: 'ನಿನ್ನ ದಾಸರಿಂದ ಒಂದು ನಿಶ್ಚಿತ ಪಾಲನ್ನು ನಾನು ನನ್ನದಾಗಿ ಸಿಕೊಳ್ಳುವೆನು;

لَّعَنَهُ اللّٰهُ ۘ وَقَالَ لَاَتَّخِذَنَّ مِنْ
عِبَادِكَ نَصِيْبًا مَّفْرُوْضًا ﴿١١٩﴾

**120.** 'ಖಂಡಿತವಾಗಿಯೂ ನಾನು ಅವರನ್ನು ದಾರಿತಪ್ಪಿಸುವೆನು. ಅವರಿಗೆ ವ್ಯಾಮೋಹ ಉಂಟಾಗುವಂತೆ ಮಾಡಿ ಅವರನ್ನು ನಿಯಂತ್ರಿಸಿ ಕೊಳ್ಳುವೆನು. ಆಗ

وَّلَاُضِلَّنَّهُمْ وَلَاُمَنِّيَنَّهُمْ وَلَاٰمُرَنَّهُمْ
فَلَيُبَتِّكُنَّ اٰذَانَ الْاَنْعَامِ وَلَاٰمُرَنَّهُمْ

158. ಪೈಗಂಬರರನ್ನು ಮತ್ತು ಅನುಚರರನ್ನು ನಾಶಪಡಿಸಲು ಅವರು ಬಯಸುತ್ತಾರೆ. ಅದೇ ನಾಶವನ್ನು ಅವರಿಗೆ ನಾವು ವಿಧಿಸುತ್ತೇವೆ ಎಂದು ತಾತ್ಪರ್ಯ.





ಅವರು ಜಾನುವಾರುಗಳ ಕಿವಿಗಳನ್ನು ಸೀಳುವರು. ಮತ್ತೂ ನಾನು ಅವರನ್ನು ಪ್ರಚೋದಿಸುವೆನು. ಆಗ ಅವರು ಅಲ್ಲಾಹನ ಸೃಷ್ಟಿಗಳನ್ನು ವಿರೂಪಗೊಳಿಸುವರು.'[159] ಅಲ್ಲಾಹನನ್ನು ಬಿಟ್ಟು ಯಾವೊಬ್ಬನು ಶೈತಾನನನ್ನು ಮಿತ್ರನನ್ನಾಗಿ ಮಾಡುತ್ತಾನೋ ಅವನು ಸ್ಪಷ್ಟವಾದ ನಷ್ಟದಲ್ಲಿ ಸಿಲುಕಿದನು.

فَلَيُغَيِّرُنَّ خَلْقَ اللّٰهِ ؕ وَمَنْ يَّتَّخِذِ
الشَّيْطٰنَ وَلِيًّا مِّنْ دُوْنِ اللّٰهِ فَقَدْ خَسِرَ
خُسْرَانًا مُّبِيْنًا ﴿١٢٠﴾

**121.** ಅವನು (ಶೈತಾನ್) ಅವರಿಗೆ ಭರವಸೆ ಕೊಡುತ್ತಾನೆ. ಅವರಿಗೆ ಆಮಿಷಗಳನ್ನು ಒಡ್ಡುತ್ತಾನೆ. ಪೊಳ್ಳು ಭರವಸೆಗಳ ಹೊರತು ಶೈತಾನ ಅವರಿಗೆ (ಬೇರೇನನ್ನೂ) ವಾಗ್ದಾನ ಮಾಡುವುದಿಲ್ಲ.

يَعِدُهُمْ وَيُمَنِّيْهِمْ ؕ وَمَا يَعِدُهُمُ
الشَّيْطٰنُ اِلَّا غُرُوْرًا ﴿١٢١﴾

**122.** ಆ ಜನರು, ಅವರ ವಾಸಸ್ಥಾನ ನರಕವಾಗಿದೆ. ಅದರಿಂದ ತಪ್ಪಿಸಿಕೊಳ್ಳಲು ಯಾವ ಮಾರ್ಗವನ್ನೂ ಅವರು ಕಾಣಲಾರರು.

اُولٰٓئِكَ مَاْوٰىهُمْ جَهَنَّمُ ؗ وَلَا يَجِدُوْنَ
عَنْهَا مَحِيْصًا ﴿١٢٢﴾

**123.** (ಆದರೆ) ವಿಶ್ವಾಸವನ್ನು ಹೊಂದಿ, ಸತ್ಕರ್ಮಗಳನ್ನು ಗೈಯುವವರಾರೋ, ಅವರಿಗೆ ನಾವು ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಆರಾಮ ಧಾಮಗಳಲ್ಲಿ ಪ್ರವೇಶ ನೀಡುವೆವು. ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು. (ಇದು)ಅಲ್ಲಾಹನ ನಿಜವಾದ ವಾಗ್ದಾನವಾಗಿದೆ. ಮಾತಿನಲ್ಲಿ ಅಲ್ಲಾಹನಿಗಿಂತ ಸತ್ಯವಂತ ಬೇರೆ ಯಾರು?

وَالَّذِيْنَ اٰمَنُوْا وَعَمِلُوا الصّٰلِحٰتِ
سَنُدْخِلُهُمْ جَنّٰتٍ تَجْرِيْ مِنْ تَحْتِهَا
الْاَنْهٰرُ خٰلِدِيْنَ فِيْهَاۤ اَبَدًا ؕ وَعْدَ اللّٰهِ
حَقًّا ؕ وَمَنْ اَصْدَقُ مِنَ اللّٰهِ قِيْلًا ﴿١٢٣﴾

**124.** ಅದು ನಿಮ್ಮ ಇಚ್ಛೆಯಂತೆಯಲ್ಲ; ಗ್ರಂಥದವರ ಇಚ್ಛೆಯಂತೆಯೂ ಅಲ್ಲ. ಯಾವೊಬ್ಬನು ಕೆಟ್ಟದ್ದನ್ನು ಮಾಡುತ್ತಾನೋ, ಅದಕ್ಕೆ ತಕ್ಕ ಪ್ರತಿಫಲ ಅವನಿಗೆ ಸಿಗುವುದು; ಅಲ್ಲಾಹನ ಹೊರತು ಮಿತ್ರನಾಗಿ ಅಥವಾ ಸಹಾಯಕನಾಗಿ ಯಾರನ್ನೂ ಅವನು ಕಾಣಲಾರ.

لَيْسَ بِاَمَانِيِّكُمْ وَلَاۤ اَمَانِيِّ اَهْلِ
الْكِتٰبِ ؕ مَنْ يَّعْمَلْ سُوْٓءًا يُّجْزَ بِهٖ ۙ وَ
لَا يَجِدْ لَهٗ مِنْ دُوْنِ اللّٰهِ وَلِيًّا وَّلَا
نَصِيْرًا ﴿١٢٤﴾

**125.** ಸತ್ಯವಿಶ್ವಾಸಿಯಾಗಿರುವ ಪುರುಷನಾಗಲಿ ಸ್ತ್ರೀಯಾಗಲಿ, ಅವರು ಸತ್ಕರ್ಮಗಳನ್ನು ಮಾಡಿದರೆ,

وَمَنْ يَّعْمَلْ مِنَ الصّٰلِحٰتِ مِنْ ذَكَرٍ اَوْ
اُنْثٰى وَهُوَ مُؤْمِنٌ فَاُولٰٓئِكَ يَدْخُلُوْنَ

159. ಮನುಷ್ಯನ ಸ್ವಭಾವದಲ್ಲಿರುವ ಏಕದೇವೋಪಾಸನೆಗೆ ಸಂಬಂಧಿಸಿದ ಗಮನವನ್ನು ಬದಲಾಯಿಸಿ ಬಹುದೇವಾರಾಧನೆಯ ಕ್ರಮವನ್ನು ಜಾರಿಗೆ ತರಲು ಶೈತಾನ್ ಪ್ರೇರೇಪಿಸುತ್ತಾನೆಂದು ತಾತ್ಪರ್ಯ.

الْجَنَّةَ وَلَا يُظْلَمُونَ نَقِيرًا ۝١٢٤

ಅವರು ಸ್ವರ್ಗದಲ್ಲಿ ಪ್ರವೇಶಿಸುವರು. ಅವರಿಗೆ ಲವಲೇಶವಾದರೂ ಅನ್ಯಾಯವಾಗದು.

وَمَنْ أَحْسَنُ دِينًا مِمَّنْ أَسْلَمَ وَجْهَهُ لِلَّهِ وَهُوَ مُحْسِنٌ وَاتَّبَعَ مِلَّةَ إِبْرَاهِيمَ حَنِيفًا ۗ وَاتَّخَذَ اللَّهُ إِبْرَاهِيمَ خَلِيلًا ۝١٢٥

126. ಅಲ್ಲಾಹನಿಗೆ ಸಂಪೂರ್ಣವಾಗಿ ಶರಣಾಗಿ, ಸತ್ಕರ್ಮ ಮಾಡುತ್ತಾ, ಋಜು ಮಾನವನಾದ ಇಬ್‌ರಾಹೀಮರ ಧರ್ಮವನ್ನು ಅನುಸರಿಸುವವನಿಗಿಂತ ಉತ್ತಮನಾದ ಧರ್ಮವಿಶ್ವಾಸಿ ಯಾರು? ಇಬ್‌ರಾಹೀಮರನ್ನು ಅಲ್ಲಾಹನು ತನ್ನ ಆಪ್ತಮಿತ್ರನಾಗಿ ಮಾಡಿದ್ದಾನೆ.

وَلِلَّهِ مَا فِي السَّمَاوَاتِ وَمَا فِي الْأَرْضِ ۚ وَكَانَ اللَّهُ بِكُلِّ شَيْءٍ مُحِيطًا ۝١٢٦

127. ಆಕಾಶಗಳಲ್ಲಿರುವ ಎಲ್ಲವೂ ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದಾಗಿವೆ. ಅಲ್ಲಾಹನು ಎಲ್ಲ ವಸ್ತುಗಳನ್ನೂ ಆವರಿಸಿಕೊಂಡಿದ್ದಾನೆ.

وَيَسْتَفْتُونَكَ فِي النِّسَاءِ ۖ قُلِ اللَّهُ يُفْتِيكُمْ فِيهِنَّ وَمَا يُتْلَىٰ عَلَيْكُمْ فِي الْكِتَابِ فِي يَتَامَى النِّسَاءِ اللَّاتِي لَا تُؤْتُونَهُنَّ مَا كُتِبَ لَهُنَّ وَتَرْغَبُونَ أَنْ تَنْكِحُوهُنَّ وَالْمُسْتَضْعَفِينَ مِنَ الْوِلْدَانِ وَأَنْ تَقُومُوا لِلْيَتَامَىٰ بِالْقِسْطِ ۚ وَمَا تَفْعَلُوا مِنْ خَيْرٍ فَإِنَّ اللَّهَ كَانَ بِهِ عَلِيمًا ۝١٢٧

128. ಅವರು ನಿನ್ನೊಡನೆ (ಒಬ್ಬಳಿಗಿಂತ ಹೆಚ್ಚು) ಸ್ತ್ರೀಯರನ್ನು (ವಿವಾಹವಾಗುವ) ಕುರಿತು ವಿಚಾರಿಸುತ್ತಾರೆ. ಹೇಳು, ಅಲ್ಲಾಹನು ಅವರ ಕುರಿತು ನಿಮಗೆ ಈ ಗ್ರಂಥದಲ್ಲಿ ಓದಿ ಹೇಳಲಾದಂತೆ ವಿಧಿ ನೀಡುತ್ತಾನೆ.[160] (ಅಂತೆಯೇ) ನಿರ್ಣಯಿಸಲ್ಪಟ್ಟ ಹಕ್ಕು[161] ನೀಡದೆ ನೀವು ವಿವಾಹವಾಗಲು ಬಯಸುವ ಅನಾಥ ಸ್ತ್ರೀಯರ ಕುರಿತು ಮತ್ತು ದುರ್ಬಲ ಮಕ್ಕಳ[162] ಕುರಿತು ಸಹ. ಅನಾಥರೊಡನೆ ನೀವು ನ್ಯಾಯದಿಂದ ವರ್ತಿಸಬೇಕೆಂದೂ (ಅಲ್ಲಾಹನು ವಿಧಿಸುತ್ತಾನೆ). ನೀವು ಏನಾದರೂ ಒಳಿತುಮಾಡಿದರೆ ನಿಶ್ಚಯವಾಗಿಯೂ ಆ ಬಗ್ಗೆ ಅಲ್ಲಾಹನು ಚೆನ್ನಾಗಿ ತಿಳಿಯುತ್ತಾನೆ.

وَإِنِ امْرَأَةٌ خَافَتْ مِنْ بَعْلِهَا نُشُوزًا أَوْ إِعْرَاضًا فَلَا جُنَاحَ عَلَيْهِمَا أَنْ يُصْلِحَا بَيْنَهُمَا صُلْحًا ۚ وَالصُّلْحُ خَيْرٌ ۗ وَ

129. ಒಬ್ಬಳು ಸ್ತ್ರೀ ತನ್ನ ಗಂಡನಿಂದ ಪೀಡನೆ ಅಥವಾ ಅವಗಣನೆ (ಉಂಟಾಗುವುದೆಂದು) ಭಯಪಡುವುದಾದರೆ, ಅವರು ತಮ್ಮೊಳಗೆ ಒಪ್ಪಂದ ಮಾಡಿ ಶಾಂತಿಯಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದ

160. ಇದೇ ಅಧ್ಯಾಯದ 4ನೇ ವಚನದಲ್ಲಿ ವಿವರಿಸಲಾದಂತೆ.

161. ಮಹರ್ (ವಧು ದಕ್ಷಿಣೆ).

162. ಅಬಲೆಯರಾದ ಹೆಣ್ಣುಮಕ್ಕಳು ಎಂದು ಇಲ್ಲಿ ತಾತ್ಪರ್ಯ.





أُحْضِرَتِ الْأَنْفُسُ الشُّحَّ ۚ وَإِنْ تُحْسِنُوا وَتَتَّقُوا فَإِنَّ اللَّهَ كَانَ بِمَا تَعْمَلُونَ خَبِيرًا ۝١٢٨

ರಲ್ಲಿ ಅವರಿಗೆ ದೋಷವೇನೂ ಇಲ್ಲ.[163] ಒಪ್ಪಂದವೇ ಅತ್ಯುತ್ತಮವಾದುದು. ಮನುಷ್ಯಹೃದಯಗಳಲ್ಲಿ ಜಿಪುಣತೆ ಸೇರಿಕೊಂಡಿದೆ. ನೀವು ಸತ್ಕರ್ಮ ಮಾಡುವುದಾದರೆ ಮತ್ತು ದೇವ ಭಯವುಳ್ಳವರಾದರೆ, ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ (ಎಂದು ತಿಳಿದುಕೊಳ್ಳಿರಿ).

وَلَنْ تَسْتَطِيعُوا أَنْ تَعْدِلُوا بَيْنَ النِّسَاءِ وَلَوْ حَرَصْتُمْ ۖ فَلَا تَمِيلُوا كُلَّ الْمَيْلِ فَتَذَرُوهَا كَالْمُعَلَّقَةِ ۚ وَإِنْ تُصْلِحُوا وَتَتَّقُوا فَإِنَّ اللَّهَ كَانَ غَفُورًا رَحِيمًا ۝١٢٩

130. ನೀವು ಎಷ್ಟೇ ಬಯಸಿದರೂ ಪತ್ನಿಯರ ಮಧ್ಯೆ ನಿಮಗೆ ಸಮತೋಲನೆ ಪಾಲಿಸಲು ಸಾಧ್ಯವಿಲ್ಲ.[164] ಅಂತೂ ನೀವು (ಒಬ್ಬಳ ಕಡೆಗೆ) ಸಂಪೂರ್ಣವಾಗಿ ವಾಲಿಕೊಂಡಿರಬಾರದು. (ಅದರ ಪರಿಣಾಮವಾಗಿ) ಮತ್ತೊಬ್ಬಳನ್ನು ನೀವು ಜೋಲಾಡುವ ಸ್ಥಿತಿಯಲ್ಲಿ ಬಿಟ್ಟುಬಿಟ್ಟಂತಾಗುವುದು. ನೀವು ಪರಸ್ಪರ ಒಪ್ಪಂದ ಮಾಡಿಕೊಂಡು ದೇವಭಯವನ್ನಿರಿಸಿಕೊಂಡರೆ, (ನೆನಪಿಟ್ಟುಕೊಳ್ಳಿರಿ) ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَإِنْ يَتَفَرَّقَا يُغْنِ اللَّهُ كُلًّا مِنْ سَعَتِهِ ۚ وَكَانَ اللَّهُ وَاسِعًا حَكِيمًا ۝١٣٠

131. ಇನ್ನು ಅವರು ಪರಸ್ಪರ ಅಗಲುವುದಾದರೆ, ಅಲ್ಲಾಹನು ತನ್ನ ವಿಶಾಲವಾದ ಅನುಗ್ರಹದಿಂದ ಪ್ರತಿಯೊಬ್ಬ ವ್ಯಕ್ತಿಯನ್ನು ಸ್ವಾವಲಂಬಿಯನ್ನಾಗಿ ಮಾಡುವನು. ಅಲ್ಲಾಹನು ಅತಿ ಉದಾರಿಯೂ ಬುದ್ಧಿಶಾಲಿಯೂ ಆಗಿದ್ದಾನೆ.

وَلِلَّهِ مَا فِي السَّمَاوَاتِ وَمَا فِي الْأَرْضِ ۗ وَلَقَدْ وَصَّيْنَا الَّذِينَ أُوتُوا الْكِتَابَ مِنْ قَبْلِكُمْ وَإِيَّاكُمْ أَنِ اتَّقُوا اللَّهَ ۚ وَإِنْ تَكْفُرُوا فَإِنَّ لِلَّهِ مَا فِي السَّمَاوَاتِ وَمَا

132. ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದಾಗಿವೆ. ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟವರಿಗೆ ಮತ್ತು ನಿಮಗೆ (ಸಹ) 'ಅಲ್ಲಾಹನ ಭಯವಿರಿಸಿ ಕೊಳ್ಳಿರಿ' ಎಂದು ನಾವು ಕಟ್ಟಾಜ್ಞೆ ನೀಡಿದ್ದೆವು. ಇನ್ನು ನೀವು ಧಿಕ್ಕರಿಸುವುದಾದರೆ (ನೆನಪಿಟ್ಟುಕೊಳ್ಳಿರಿ) ಆಕಾಶಗಳಲ್ಲಿರುವ ಮತ್ತು

163. ಈ ಸಂದಿಗ್ಧ ಘಟ್ಟದಲ್ಲಿ ಸಮಸ್ಯೆ ಬೆಳೆಯುವುದೆಂದು ಅವಳು ಮನಗಾಣುತ್ತಾಳೆ. ಅದು ಅವಳಿಗೆ ಮತ್ತೂ ತೊಂದರೆಕೊಡುವುದು. ಆದ ಕಾರಣ ತನ್ನ ಹಕ್ಕಿನಿಂದ ಒಂದಂಶವನ್ನು ಬಿಟ್ಟು ಕೊಡುವುದು ಉತ್ತಮವೆಂದು ಅವಳು ಭಾವಿಸುತ್ತಾಳೆ. ಹೀಗೆ ಮಾಡುವುದರಿಂದ ದೋಷ ಇಲ್ಲವೆಂದು ಖಾಝಿಗೆ ಮನವರಿಕೆಯಾದರೆ ಹಾಗೆ ಮಾಡಬಹುದು.

164. ಪತ್ನಿಯರು ಮಧ್ಯೆ ಬಾಹ್ಯವಾಗಿ ನ್ಯಾಯ-ನೀತಿ ಪಾಲಿಸುವುದು ಸಾಧ್ಯ. ಬಹುಪತ್ನೀತ್ವಕ್ಕೆ ಅದೊಂದು ನಿಬಂಧನೆಯಾಗಿದೆ. ಆದರೆ ಆಂತರಿಕವಾಗಿ ಅವರ ಮಧ್ಯೆ ಸಮತೋಲನೆ ಕಾಪಾಡುವುದು ಅಸಾಧ್ಯ. ಇಲ್ಲಿ ಅದನ್ನೇ ಉದ್ದೇಶಿಸಲಾಗಿದೆ.

ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದೇ ಆಗಿವೆ. ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

فِي الْأَرْضِ ۚ وَكَانَ اللَّهُ غَنِيًّا حَمِيدًا ﴿١٣٢﴾

**133.** ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದೇ ಆಗಿವೆ. ರಕ್ಷಕನಾಗಿ ಅಲ್ಲಾಹನು ಸಾಕು.

وَلِلَّهِ مَا فِي السَّمَاوَاتِ وَمَا فِي الْأَرْضِ ۚ وَكَفَىٰ بِاللَّهِ وَكِيلًا ﴿١٣٣﴾

**134.** ಎಲೈ ಜನರೇ, ಅವನು ಬಯಸುವುದಾದರೆ ನಿಮ್ಮನ್ನು ಅವನು ನಾಶಪಡಿಸಿ (ಬದಲಿಗೆ) ಬೇರೆಯವರನ್ನು ತರುವನು. ಹಾಗೆ ಮಾಡಲು ಅಲ್ಲಾಹನಿಗೆ ಪೂರ್ಣ ಸಾಮರ್ಥ್ಯವಿದೆ.

إِنْ يَشَأْ يُذْهِبْكُمْ أَيُّهَا النَّاسُ وَيَأْتِ بِآخَرِينَ ۚ وَكَانَ اللَّهُ عَلَىٰ ذَٰلِكَ قَدِيرًا ﴿١٣٤﴾

**135.** ಯಾವನು ಇಹಲೋಕದ ಪ್ರತಿಫಲವನ್ನು ಬಯಸುತ್ತಾನೋ (ಅವನು ತಿಳಿದುಕೊಳ್ಳಲಿ) ಅಲ್ಲಾಹನ ಬಳಿ ಇಹಲೋಕದ ಮತ್ತು ಪರಲೋಕದ (ಎರಡು ವಿಧ) ಪ್ರತಿಫಲಗಳಿವೆ. ಅಲ್ಲಾಹನು ಎಲ್ಲವನ್ನು ಕೇಳುವವನೂ ಕಾಣುವವನೂ ಆಗಿದ್ದಾನೆ.

مَنْ كَانَ يُرِيدُ ثَوَابَ الدُّنْيَا فَعِنْدَ اللَّهِ ثَوَابُ الدُّنْيَا وَالْآخِرَةِ ۚ وَكَانَ اللَّهُ سَمِيعًا بَصِيرًا ﴿١٣٥﴾

**136.** ಎಲೈ ವಿಶ್ವಾಸಿಗಳೇ, ನೀವು ಪರಿಪೂರ್ಣವಾದ ನ್ಯಾಯ ನಿಷ್ಠೆಯುಳ್ಳವರೂ ಅಲ್ಲಾಹನಿಗೋಸ್ಕರ ಸಾಕ್ಷ್ಯ ವಹಿಸುವವರೂ ಆಗಿರಿ; ಅದು ನಿಮಗೆ ಅಥವಾ (ನಿಮ್ಮ) ಮಾತಾಪಿತರಿಗೆ ಅಥವಾ ನಿಕಟ ಬಂಧುಗಳಿಗೆ ವಿರುದ್ಧವಾಗಿದ್ದರೂ ಸರಿ. ಅವನು ಧನಿಕನಾಗಿರಲಿ ಯಾ ದರಿದ್ರನಾಗಿರಲಿ, ಅಲ್ಲಾಹನು ನಿಮಗಿಂತ ಹೆಚ್ಚಾಗಿ ಅವರೀರ್ವರ ಒಳಿತನ್ನು ಬಯಸುತ್ತಾನೆ. ಆದುದರಿಂದ ನೀವು ಯಾವುದೇ ನಿಕೃಷ್ಟ ಆಶೆಯನ್ನು ಹೊಂದದೆ ನ್ಯಾಯದಿಂದ ವರ್ತಿಸಿರಿ. ನೀವು (ಸತ್ಯವನ್ನು) ಮರೆಮಾಚಿದರೆ ಅಥವಾ (ಅದನ್ನು ಬಹಿರಂಗಪಡಿಸದೆ) ನುಣುಚಿಕೊಂಡರೆ (ತಿಳಿದು ಕೊಳ್ಳಿರಿ) ನಿಮ್ಮ ವರ್ತನೆಯ ಕುರಿತು ಅಲ್ಲಾಹನು ಚೆನ್ನಾಗಿ ತಿಳಿದವನಾಗಿದ್ದಾನೆ.

يَا أَيُّهَا الَّذِينَ آمَنُوا كُونُوا قَوَّامِينَ بِالْقِسْطِ شُهَدَاءَ لِلَّهِ وَلَوْ عَلَىٰ أَنْفُسِكُمْ أَوِ الْوَالِدَيْنِ وَالْأَقْرَبِينَ ۚ إِنْ يَكُنْ غَنِيًّا أَوْ فَقِيرًا فَاللَّهُ أَوْلَىٰ بِهِمَا ۖ فَلَا تَتَّبِعُوا الْهَوَىٰ أَنْ تَعْدِلُوا ۚ وَإِنْ تَلْوُوا أَوْ تُعْرِضُوا فَإِنَّ اللَّهَ كَانَ بِمَا تَعْمَلُونَ خَبِيرًا ﴿١٣٦﴾

**137.** ಎಲೈ ವಿಶ್ವಾಸಿಗಳೇ, ಅಲ್ಲಾಹನಲ್ಲೂ ಅವನ ಸಂದೇಶವಾಹಕನಲ್ಲೂ ಅವನ ಸಂದೇಶವಾಹಕನಿಗೆ

يَا أَيُّهَا الَّذِينَ آمَنُوا آمِنُوا بِاللَّهِ وَ





ಅವನು ಅವತೀರ್ಣಗೊಳಿಸಿದ ಗ್ರಂಥದಲ್ಲೂ ಅದಕ್ಕೆ ಮುಂಚೆ ಅವನು ಅವತೀರ್ಣಗೊಳಿಸಿದ ಗ್ರಂಥದಲ್ಲೂ ವಿಶ್ವಾಸವಿರಿಸಿರಿ. ಯಾರು ಅಲ್ಲಾಹನಲ್ಲೂ ಅವನ ದೂತರಲ್ಲೂ ಅವನ ಗ್ರಂಥಗಳಲ್ಲೂ ಅವನ ಸಂದೇಶವಾಹಕರಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿರಿಸುವುದಿಲ್ಲವೋ ಅವನು ದಾರಿಗೆಟ್ಟು ಬಹುದೂರ ಹೋಗಿರುವನು (ಎಂದು ತಿಳಿದುಕೊಳ್ಳಿರಿ).

رَسُولِهِ وَالْكِتَابِ الَّذِي نَزَّلَ عَلَىٰ رَسُولِهِ وَالْكِتَابِ الَّذِي أَنْزَلَ مِنْ قَبْلُ ۚ وَمَنْ يَكْفُرْ بِاللَّهِ وَمَلَائِكَتِهِ وَكُتُبِهِ وَرُسُلِهِ وَالْيَوْمِ الْآخِرِ فَقَدْ ضَلَّ ضَلَالًا بَعِيدًا ﴿١٣٧﴾

**138.** ವಿಶ್ವಾಸವನ್ನು ಹೊಂದಿದ ಬಳಿಕ ಅವಿಶ್ವಾಸವನ್ನು ತಾಳಿ, ಪುನಃ ವಿಶ್ವಾಸಹೊಂದಿ, ಪುನಃ ಅವಿಶ್ವಾಸ ತಾಳಿ, ಅವಿಶ್ವಾಸದಲ್ಲೇ ಇನ್ನಷ್ಟು ಮುಂದುವರಿಯುವವರನ್ನು ಅಲ್ಲಾಹನು ಎಂದಿಗೂ ಕ್ಷಮಿಸಲಾರ. ಅವರಿಗೆ ಅವನು (ಮೋಕ್ಷ) ಮಾರ್ಗವನ್ನೂ ತೋರಿಸಿ ಕೊಡಲಾರ.

إِنَّ الَّذِينَ آمَنُوا ثُمَّ كَفَرُوا ثُمَّ آمَنُوا ثُمَّ كَفَرُوا ثُمَّ ازْدَادُوا كُفْرًا لَمْ يَكُنِ اللَّهُ لِيَغْفِرَ لَهُمْ وَلَا لِيَهْدِيَهُمْ سَبِيلًا ﴿١٣٨﴾

**139.** ಕಪಟ ವಿಶ್ವಾಸಿಗಳಿಗೆ ಕಠೋರ ಶಿಕ್ಷೆಯಿದೆ ಎಂಬ ವಾರ್ತೆಯನ್ನು ಅವರಿಗೆ ತಿಳಿಸು -

بَشِّرِ الْمُنَافِقِينَ بِأَنَّ لَهُمْ عَذَابًا أَلِيمًا ﴿١٣٩﴾

**140.** ಅವರು ಸತ್ಯವಿಶ್ವಾಸಿಗಳನ್ನು ಬಿಟ್ಟು ಅವಿಶ್ವಾಸಿಗಳನ್ನು ತಮ್ಮ ಮಿತ್ರರನ್ನಾಗಿ ಮಾಡಿಕೊಳ್ಳುವವರಾಗಿದ್ದಾರೆ. ಅವರೆಡೆಯಲ್ಲಿ ತಮಗೆ ಗೌರವವನ್ನು ಅವರು ಬಯಸುತ್ತಾರೆಯೇ? ಹಾಗಿದ್ದರೆ (ಅವರು ತಿಳಿದುಕೊಳ್ಳಲಿ) ಖಂಡಿತವಾಗಿಯೂ ಎಲ್ಲ ಗೌರವಗಳು ಅಲ್ಲಾಹನಿಗೆ ಸಲ್ಲುತ್ತವೆ.

الَّذِينَ يَتَّخِذُونَ الْكَافِرِينَ أَوْلِيَاءَ مِنْ دُونِ الْمُؤْمِنِينَ ۚ أَيَبْتَغُونَ عِنْدَهُمُ الْعِزَّةَ فَإِنَّ الْعِزَّةَ لِلَّهِ جَمِيعًا ﴿١٤٠﴾

**141.** ಅಲ್ಲಾಹನ ದೃಷ್ಟಾಂತಗಳನ್ನು ಅಲ್ಲಗಳೆಯುತ್ತಲೂ ಅಪಹಾಸ್ಯಮಾಡುತ್ತಲೂ ಇರುವುದನ್ನು ನೀವು ಕೇಳಿದರೆ, ಅವರು ಅದನ್ನು ಬಿಟ್ಟು ಮತ್ತೊಂದು ವಿಷಯವನ್ನು ತೊಡಗುವ ವರೆಗೆ ನೀವು ಅವರೊಂದಿಗೆ ಕುಳಿತುಕೊಳ್ಳಬಾರದೆಂದು ಅವನು (ಅಲ್ಲಾಹನು) ಈ ಗ್ರಂಥದಲ್ಲಿ ನಿಮಗೆ ಆದೇಶಿಸಿದ್ದಾನೆ.[165] (ಅವರೊಂದಿಗೆ ನೀವು ಕುಳಿತುಕೊಂಡರೆ) ಖಂಡಿತವಾಗಿಯೂ ನೀವು ಸಹ ಅವರಂತೆಯೇ (ಎಂದು ಪರಿಗಣಿಸಲಾಗುವುದು).

وَقَدْ نَزَّلَ عَلَيْكُمْ فِي الْكِتَابِ أَنْ إِذَا سَمِعْتُمْ آيَاتِ اللَّهِ يُكْفَرُ بِهَا وَيُسْتَهْزَأُ بِهَا فَلَا تَقْعُدُوا مَعَهُمْ حَتَّىٰ يَخُوضُوا فِي حَدِيثٍ غَيْرِهِ ۚ إِنَّكُمْ إِذًا مِثْلُهُمْ ۗ إِنَّ اللَّهَ جَامِعُ الْمُنَافِقِينَ وَ

165. ಸೂರಃ ಅನ್‌ಆಮ್‌ನ 69ನೇ ವಚನದಲ್ಲಿ ಈ ಬಗ್ಗೆ ಆದೇಶವಿದೆ.

ನಿಸ್ಸಂದೇಹವಾಗಿಯೂ ಅಲ್ಲಾಹನು ಕಪಟ ವಿಶ್ವಾಸಿಗಳನ್ನೂ ಅವಿಶ್ವಾಸಿಗಳನ್ನೂ ನರಕದಲ್ಲಿ ಒಟ್ಟು ಸೇರಿಸುವನು.

الْكَافِرِينَ فِي جَهَنَّمَ جَمِيعًا ﴿١٤٠﴾

**142.** ನಿಮ್ಮ ಬಗ್ಗೆ ಅವರು (ಕಪಟ ವಿಶ್ವಾಸಿಗಳು) ಕಾತರದಿಂದ ವೀಕ್ಷಿಸುತ್ತಿರುತ್ತಾರೆ. ಅಲ್ಲಾಹನಿಂದ ನಿಮಗೇನಾದರೂ ವಿಜಯ ಸಿದ್ಧಿಯಾದರೆ, 'ನಾವು ನಿಮ್ಮೊಂದಿಗೆ ಇದ್ದಿಲ್ಲವೇ?' ಎಂದು ಅವರು ಹೇಳುವರು. ಅವಿಶ್ವಾಸಿಗಳಿಗೆ ಗೆಲುವೇನಾದರೂ ಉಂಟಾದರೆ, ಇವರು (ಅವರೊಡನೆ) ಹೇಳುವರು: 'ನಾವು ನಿಮ್ಮ ಮೇಲೆ ವಿಜಯ ಸಾಧಿಸಿದ್ದಾಗ[166] ವಿಶ್ವಾಸಿಗಳಿಂದ (ಮುಸ್ಲಿಮರಿಂದ) ನಿಮ್ಮನ್ನು ಕಾಪಾಡಲಿಲ್ಲವೇ?' ಅಲ್ಲಾಹನು ನಿಮ್ಮ ಮಧ್ಯೆ ಪುನರುತ್ಥಾನ ದಿನದಂದು ತೀರ್ಮಾನ ಮಾಡುವನು. ಅಲ್ಲಾಹನು ಎಂದಿಗೂ ಅವಿಶ್ವಾಸಿಗಳಿಗೆ ವಿಶ್ವಾಸಿಗಳ ಮೇಲೆ ವಿಜಯದ ಮಾರ್ಗವನ್ನು ತೆರೆಯಲಾರನು.

الَّذِينَ يَتَرَبَّصُونَ بِكُمْ فَإِن كَانَ لَكُمْ فَتْحٌ مِّنَ اللَّهِ قَالُوا أَلَمْ نَكُن مَّعَكُمْ وَإِن كَانَ لِلْكَافِرِينَ نَصِيبٌ قَالُوا أَلَمْ نَسْتَحْوِذْ عَلَيْكُمْ وَنَمْنَعْكُم مِّنَ الْمُؤْمِنِينَ فَاللَّهُ يَحْكُمُ بَيْنَكُمْ يَوْمَ الْقِيَامَةِ وَلَن يَجْعَلَ اللَّهُ لِلْكَافِرِينَ عَلَى الْمُؤْمِنِينَ سَبِيلًا ﴿١٤١﴾

**143.** ಕಪಟ ವಿಶ್ವಾಸಿಗಳು ಅಲ್ಲಾಹನನ್ನು ವಂಚಿಸಲು ಉದ್ದೇಶಿಸುತ್ತಾರೆ. ಆದರೆ ಅವರೇ ವಂಚಿಸಲ್ಪಡುವಂತೆ ಅಲ್ಲಾಹನು ಮಾಡುವನು. ನಮಾಝ್ ಮಾಡಲು ನಿಲ್ಲುವಾಗ ಅವರು ಆಲಸ್ಯದಿಂದಲೂ ಜನರಿಗೆ ತೋರಿಸಲಿಕ್ಕೂ ನಿಲ್ಲುತ್ತಾರೆ. ಕಿಂಚಿತ್ ಮಾತ್ರವಲ್ಲದೆ ಅವರು ಅಲ್ಲಾಹನನ್ನು ಸ್ಮರಿಸುವುದಿಲ್ಲ.

إِنَّ الْمُنَافِقِينَ يُخَادِعُونَ اللَّهَ وَهُوَ خَادِعُهُمْ وَإِذَا قَامُوا إِلَى الصَّلَاةِ قَامُوا كُسَالَىٰ يُرَاءُونَ النَّاسَ وَلَا يَذْكُرُونَ اللَّهَ إِلَّا قَلِيلًا ﴿١٤٢﴾

**144.** ಇವರೊಂದಿಗಾಗಲಿ ಅವರೊಂದಿಗಾಗಲಿ ಇಲ್ಲದೆ ಅತ್ತ ಇತ್ತ ಜೋತಾಡುವ ಅವಸ್ಥೆಯಾಗಿದೆ ಅವರದು. ಅಲ್ಲಾಹನು ಯಾರನ್ನು ನಾಶಪಡಿಸಲು ಉದ್ದೇಶಿಸುತ್ತಾನೋ, ಅವರಿಗೆ ಯಾವುದೇ (ರಕ್ಷಾ) ಮಾರ್ಗವನ್ನು ನೀನು ಕಾಣಲಾರೆ.

مُّذَبْذَبِينَ بَيْنَ ذَٰلِكَ لَا إِلَىٰ هَٰؤُلَاءِ وَلَا إِلَىٰ هَٰؤُلَاءِ وَمَن يُضْلِلِ اللَّهُ فَلَن تَجِدَ لَهُ سَبِيلًا ﴿١٤٣﴾

**145.** ಎಲೈ ವಿಶ್ವಾಸಿಗಳೇ, ನೀವು ಸತ್ಯವಿಶ್ವಾಸಿಗಳನ್ನು ಬಿಟ್ಟು[166A] ಅವಿಶ್ವಾಸಿಗಳನ್ನು ಮಿತ್ರರನ್ನಾಗಿ ಮಾಡಬಾರದು. ನಿಮ್ಮ ವಿರುದ್ಧ ಸ್ಪಷ್ಟವಾದ ಪುರಾವೆ

يَا أَيُّهَا الَّذِينَ آمَنُوا لَا تَتَّخِذُوا الْكَافِرِينَ أَوْلِيَاءَ مِن دُونِ الْمُؤْمِنِينَ

166. ಇದಕ್ಕಿಂತ ಮುಂಚೆ ಒಂದು ಸಂದರ್ಭದಲ್ಲಿ ಮುಸ್ಲಿಮರು ಜಯಗಳಿಸಿದ್ದಾಗ ನಾವು ಶಿಫಾರಸು ಮಾಡಿ ನಿಮ್ಮನ್ನು ರಕ್ಷಿಸಲಿಲ್ಲವೇ? ಎಂದಾಗಿದೆ ಇದರ ತಾತ್ಪರ್ಯ.





ಅಲ್ಲಾಹನಿಗೆ ಸಿಗಲಿ ಎಂದು ನೀವು ಬಯಸುತ್ತೀರಾ?

أَتُرِيدُونَ أَن تَجْعَلُوا لِلَّهِ عَلَيْكُمْ سُلْطَانًا مُّبِينًا ﴿١٤٤﴾

**146.** ಖಂಡಿತವಾಗಿಯೂ ಕಪಟ ವಿಶ್ವಾಸಿಗಳು ನರಕದ ಅತ್ಯಂತ ಕೆಳಮಟ್ಟದಲ್ಲಿ ಹಾಕಲ್ಪಡುವರು. ಅವರಿಗೆ ಸಹಾಯಕನಾಗಿ ಯಾರನ್ನೂ ನೀನು ಕಾಣಲಾರೆ.

إِنَّ الْمُنَافِقِينَ فِي الدَّرْكِ الْأَسْفَلِ مِنَ النَّارِ وَلَن تَجِدَ لَهُمْ نَصِيرًا ﴿١٤٥﴾

**147.** ಪಶ್ಚಾತ್ತಾಪಪಟ್ಟು ತಮ್ಮನ್ನು ತಿದ್ದಿಕೊಂಡು ಅಲ್ಲಾಹನನ್ನು ಬಿಗಿಯಾಗಿ ಹಿಡಿಯುವವರು ಮತ್ತು ಅಲ್ಲಾಹನಿಗೆ ಪ್ರಾಮಾಣಿಕವಾಗಿ ವಿಧೇಯತೆ ತೋರಿಸುವವರು ಅದರಿಂದ ಹೊರತಾಗುವರು. ಅವರು ಸತ್ಯವಿಶ್ವಾಸಿಗಳ ಜತೆಯಲ್ಲಿರುತ್ತಾರೆ. ಸತ್ಯವಿಶ್ವಾಸಿಗಳಿಗೆ ಅಲ್ಲಾಹನು ಶೀಘ್ರದಲ್ಲೇ ಮಹತ್ತರ ಪ್ರತಿಫಲವನ್ನು ನೀಡುವನು.

إِلَّا الَّذِينَ تَابُوا وَأَصْلَحُوا وَاعْتَصَمُوا بِاللَّهِ وَأَخْلَصُوا دِينَهُمْ لِلَّهِ فَأُولَٰئِكَ مَعَ الْمُؤْمِنِينَ وَسَوْفَ يُؤْتِ اللَّهُ الْمُؤْمِنِينَ أَجْرًا عَظِيمًا ﴿١٤٦﴾

**148.** ನೀವು ಕೃತಜ್ಞರೂ ವಿಶ್ವಾಸಿಗಳೂ ಆಗಿದ್ದರೆ ಅಲ್ಲಾಹನು ನಿಮ್ಮನ್ನೇಕೆ ಶಿಕ್ಷಿಸುತ್ತಾನೆ? ಅಲ್ಲಾಹನು ಯೋಗ್ಯತೆ ಗೊತ್ತುಮಾಡುವವನೂ ಸರ್ವಜ್ಞನೂ ಆಗಿದ್ದಾನೆ.

مَّا يَفْعَلُ اللَّهُ بِعَذَابِكُمْ إِن شَكَرْتُمْ وَآمَنتُمْ وَكَانَ اللَّهُ شَاكِرًا عَلِيمًا ﴿١٤٧﴾

**149.** ಕೆಡುಕನ್ನು ಬಹಿರಂಗವಾಗಿ ಹೇಳುವುದನ್ನು ಅಲ್ಲಾಹನು ಮೆಚ್ಚುವುದಿಲ್ಲ- ಅನ್ಯಾಯಕ್ಕೊಳಗಾದವನು ಹೊರತು. (ಆತನು ತನಗುಂಟಾದ ಅನ್ಯಾಯವನ್ನು ಬಹಿರಂಗ ಪಡಿಸಬಹುದು). ಅಲ್ಲಾಹನು ಎಲ್ಲ ಆಲಿಸುವವನೂ ಚೆನ್ನಾಗಿ ತಿಳಿಯುವವನೂ ಆಗಿದ್ದಾನೆ.

لَّا يُحِبُّ اللَّهُ الْجَهْرَ بِالسُّوءِ مِنَ الْقَوْلِ إِلَّا مَن ظُلِمَ وَكَانَ اللَّهُ سَمِيعًا عَلِيمًا ﴿١٤٨﴾

**150.** ನೀವು ಒಂದು ಒಳಿತನ್ನು ಬಹಿರಂಗಪಡಿಸಿದರೆ ಅಥವಾ ಅದನ್ನು ಮುಚ್ಚಿಟ್ಟರೆ ಅಥವಾ ಒಂದು ತಪ್ಪನ್ನು ನೀವು ಕ್ಷಮಿಸಿದರೆ (ತಿಳಿದು ಕೊಳ್ಳಿರಿ) ನಿಸ್ಸಂದೇಹವಾಗಿ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಸರ್ವಶಕ್ತನೂ ಆಗಿದ್ದಾನೆ.

إِن تُبْدُوا خَيْرًا أَوْ تُخْفُوهُ أَوْ تَعْفُوا عَن سُوءٍ فَإِنَّ اللَّهَ كَانَ عَفُوًّا قَدِيرًا ﴿١٤٩﴾

**151.** ಅಲ್ಲಾಹನನ್ನೂ ಅವನ ಸಂದೇಶವಾಹಕರನ್ನೂ

إِنَّ الَّذِينَ يَكْفُرُونَ بِاللَّهِ وَرُسُلِهِ وَ

166A. 3:29 ರ ಟಿಪ್ಪಣಿ ನೋಡಿರಿ.

ಧಿಕ್ಕರಿಸಿ, ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮಧ್ಯೆ ವ್ಯತ್ಯಾಸ ತೋರಿಸಲು ಉದ್ದೇಶಿಸುತ್ತಾ 'ನಾವು ಕೆಲವರನ್ನು ನಂಬುತ್ತೇವೆ; ಕೆಲವರನ್ನು ನಿರಾಕರಿಸುತ್ತೇವೆ' ಎಂದು ಹೇಳಿ ಇದರ ಮಧ್ಯೆ ಬೇರೊಂದು ಮಾರ್ಗವನ್ನು ಅನುಸರಿಸಲು ಬಯಸುವವರಾರೋ ನಿಶ್ಚಯವಾಗಿಯೂ-

يُرِيْدُوْنَ اَنْ يُّفَرِّقُوْا بَيْنَ اللّٰهِ
وَرُسُلِهٖ وَيَقُوْلُوْنَ نُؤْمِنُ بِبَعْضٍ وَّ
نَكْفُرُ بِبَعْضٍ ۙ وَّيُرِيْدُوْنَ اَنْ يَّتَّخِذُوْا
بَيْنَ ذٰلِكَ سَبِيْلًا ۙ ﴿١٥١﴾

152. ಅವರೇ ನಿಜವಾದ ಅವಿಶ್ವಾಸಿಗಳು. ನಾವು ಅವಿಶ್ವಾಸಿಗಳಿಗೆ ನಿಂದನೀಯ ಶಿಕ್ಷೆಯನ್ನು ಕಾದಿರಿಸಿದ್ದೇವೆ.

اُولٰٓئِكَ هُمُ الْكٰفِرُوْنَ حَقًّا ۚ وَاَعْتَدْنَا
لِلْكٰفِرِيْنَ عَذَابًا مُّهِيْنًا ﴿١٥٢﴾

153. ಅಲ್ಲಾಹನನ್ನೂ ಅವನ (ಎಲ್ಲ) ಸಂದೇಶ ವಾಹಕರನ್ನೂ ನಂಬಿ, (ನಂಬಿಕೆಯ ವಿಚಾರದಲ್ಲಿ) ಅವರ ಮಧ್ಯೆ ಯಾರಲ್ಲೂ ವ್ಯತ್ಯಾಸ ಮಾಡದವರಾರೋ, ಅವರಿಗೆ ಅವರ ಪ್ರತಿಫಲವನ್ನು ಅವನು ಶೀಘ್ರದಲ್ಲೇ ನೀಡುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣನಿಧಿಯೂ ಆಗಿದ್ದಾನೆ.

وَالَّذِيْنَ اٰمَنُوْا بِاللّٰهِ وَرُسُلِهٖ وَلَمْ
يُفَرِّقُوْا بَيْنَ اَحَدٍ مِّنْهُمْ اُولٰٓئِكَ
سَوْفَ يُؤْتِيْهِمْ اُجُوْرَهُمْ ۗ وَكَانَ اللّٰهُ
غَفُوْرًا رَّحِيْمًا ﴿١٥٣﴾
ع ٢١

154. ಆಕಾಶದಿಂದ ಅವರಿಗೆ ನೀನೊಂದು ಗ್ರಂಥವನ್ನು ಇಳಿಸಿಕೊಡಬೇಕೆಂದು ಗ್ರಂಥದವರು[167] ನಿನ್ನನ್ನು ಅಗತ್ಯ ಪಡಿಸುತ್ತಾರೆ. ಮೂಸಾರೊಡನೆ ಅವರು ಇದಕ್ಕಿಂತ ಹೆಚ್ಚಿನದು ಕೇಳಿದ್ದರು. 'ಅಲ್ಲಾಹನನ್ನು ಕಣ್ಣೆದುರಿಗೆ ತೋರಿಸಿಕೊಡಬೇಕು' ಎಂದು ಅವರು ಹೇಳಿದ್ದರು. ಆಗ, ಅವರ ದುಷ್ಕರ್ಮ ಕಾರಣದಿಂದ ನಾಶಕರವಾದ ಶಿಕ್ಷೆಗೆ ಅವರು ಈಡಾದರು. ಅನಂತರ, ಅವರಿಗೆ ಸ್ಪಷ್ಟವಾದ ದೃಷ್ಟಾಂತಗಳು ತೋರಿಸಲ್ಪಟ್ಟ ಬಳಿಕವೂ ಅವರು ಕರುವನ್ನು (ತಮ್ಮ ಆರಾಧನೆಗೆ) ಸ್ವೀಕರಿಸಿದರು. ನಾವು ಅದಕ್ಕೆ (ಸಹ) ಕ್ಷಮೆ ನೀಡಿದೆವು. ಮೂಸಾರಿಗೆ ನಾವು ಸ್ಪಷ್ಟವಾದ ವಿಜಯವನ್ನೂ ನೀಡಿದೆವು.

يَسْـَٔلُكَ اَهْلُ الْكِتٰبِ اَنْ تُنَزِّلَ عَلَيْهِمْ
كِتٰبًا مِّنَ السَّمَآءِ فَقَدْ سَاَلُوْا مُوْسٰٓى
اَكْبَرَ مِنْ ذٰلِكَ فَقَالُوْٓا اَرِنَا اللّٰهَ جَهْرَةً
فَاَخَذَتْهُمُ الصّٰعِقَةُ بِظُلْمِهِمْ ۚ ثُمَّ
اتَّخَذُوا الْعِجْلَ مِنْ بَعْدِ مَا جَآءَتْهُمُ
الْبَيِّنٰتُ فَعَفَوْنَا عَنْ ذٰلِكَ ۚ وَاٰتَيْنَا
مُوْسٰى سُلْطٰنًا مُّبِيْنًا ﴿١٥٤﴾

167. ಇಲ್ಲಿ ಹೇಳಲಾದ ಗ್ರಂಥದವರು ಯಹೂದ್ಯರಾಗಿದ್ದಾರೆ. ಏಕೆಂದರೆ ಮುಂದಿನ ವಚನಗಳಲ್ಲಿ ಮರ್ಯಮರ ಮೇಲೆ ಸುಳ್ಳಾರೋಪ ಹೊರಿಸಿದ್ದು, ಯೇಸು ಕ್ರಿಸ್ತರನ್ನು ಶಿಲುಬೆಗೇರಿಸಿ ಕೊಲ್ಲಲು ಪ್ರಯತ್ನಿಸಿದ್ದು ಇತ್ಯಾದಿ ಪ್ರತಿಪಾದನೆಗಳು ಬರುತ್ತವೆ. ಅವು ಯಹೂದ್ಯರ ಕುರಿತಾಗಿದೆಯಷ್ಟೆ.





155. ಅವರೊಂದಿಗೆ ಒಡಂಬಡಿಕೆ ಮಾಡುತ್ತಿರುವಾಗ 'ತೂರ್' ಪರ್ವತ ಅವರ ಮೇಲೆ ಎದ್ದು ಕಾಣುವಂತೆ ನಾವು ಮಾಡಿದೆವು.[168] 'ಸಂಪೂರ್ಣವಾಗಿ ಅನುಸರಣೆ ತೋರ್ಪಡಿಸುತ್ತಾ ನೀವು ಈ ಬಾಗಿಲ ಮೂಲಕ ಪ್ರವೇಶಿಸಿರಿ' ಎಂದು ನಾವು ಅವರೊಡನೆ ಹೇಳಿದೆವು. 'ಸಬ್‌ತ್‌ನ ವಿಚಾರದಲ್ಲಿ ನೀವು ನಿಯಮೋಲ್ಲಂಘನೆ ಮಾಡಬಾರದು' ಎಂದು ಸಹ ನಾವು ಅವರೊಡನೆ ಹೇಳಿದೆವು. ಹಾಗೂ ಅವರಿಂದ ನಾವು ದೃಢವಾದೊಂದು ಕರಾರನ್ನು ಪಡೆದೆವು.

وَرَفَعْنَا فَوْقَهُمُ الطُّوْرَ بِمِيْثَاقِهِمْ
وَقُلْنَا لَهُمُ ادْخُلُوا الْبَابَ سُجَّدًا
وَّقُلْنَا لَهُمْ لَا تَعْدُوْا فِى السَّبْتِ وَ
اَخَذْنَا مِنْهُمْ مِّيْثَاقًا غَلِيْظًا ﴿١٥٥﴾

156. ಆ ಬಳಿಕ, ಅವರು ತಮ್ಮ ಒಪ್ಪಂದವನ್ನು ಮುರಿದ ಕಾರಣದಿಂದಲೂ ಅಲ್ಲಾಹನ ದೃಷ್ಟಾಂತಗಳನ್ನು ಅಲ್ಲಗಳೆದ ಹೇತುವಾಗಿಯೂ ಪ್ರವಾದಿಗಳನ್ನು ಅನ್ಯಾಯವಾಗಿ ಕೊಲ್ಲಲು ಅವರು ಪ್ರಯತ್ನಿಸಿದ[168A] ನಿಮಿತ್ತವಾಗಿಯೂ 'ನಮ್ಮ ಹೃದಯಗಳು ಅಚ್ಛಾದಿಸಲ್ಪಟ್ಟಿವೆ' ಎಂದು ಅವರು ಹೇಳುವುದರಿಂದಲೂ - ಆದರೆ ಹಾಗಲ್ಲ (ಎಲ್ಲಕ್ಕಿಂತಲೂ ಮಿಗಿಲಾಗಿ) ಅವರ ಅವಿಶ್ವಾಸ ಕಾರಣದಿಂದ ಅಲ್ಲಾಹನು ಅವರ (ಹೃದಯಗಳ) ಮೇಲೆ ಮುದ್ರೆ ಹಾಕಿರುವನು. ಆದ್ದರಿಂದ ಸ್ವಲ್ಪಮಾತ್ರವೇ ಹೊರತು ಅವರು ನಂಬುವುದಿಲ್ಲ.

فَبِمَا نَقْضِهِمْ مِّيْثَاقَهُمْ وَكُفْرِهِمْ
بِاٰيٰتِ اللّٰهِ وَقَتْلِهِمُ الْاَنْۢبِيَآءَ بِغَيْرِ
حَقٍّ وَّقَوْلِهِمْ قُلُوْبُنَا غُلْفٌ ۭ بَلْ طَبَعَ
اللّٰهُ عَلَيْهَا بِكُفْرِهِمْ فَلَا يُؤْمِنُوْنَ اِلَّا
قَلِيْلًا ﴿١٥٦﴾

157. (ಅಷ್ಟೇ ಅಲ್ಲ,) ಅವರ ಅವಿಶ್ವಾಸ ಮತ್ತು ಮರ್ಯಮಳ ಹೆಸರಿನಲ್ಲಿ ಗುರುತರವಾದ ಅಪವಾದ ಹೊರಿಸುವ ಕಾರಣದಿಂದಲೂ

وَّبِكُفْرِهِمْ وَقَوْلِهِمْ عَلٰى مَرْيَمَ
بُهْتَانًا عَظِيْمًا ﴿١٥٧﴾

158. 'ಅಲ್ಲಾಹನ ಸಂದೇಶವಾಹಕನಾದ ಮಸೀಹ್ ಈಸಬ್ನು ಮರ್ಯಮ್‌ನನ್ನು ದಿಟವಾಗಿಯೂ ನಾವು ವಧಿಸಿದ್ದೇವೆ' ಎಂದು ಅವರು ಹೇಳುವ ಕಾರಣದಿಂದಲೂ (ಅವರು ಶಿಕ್ಷೆಗೆ ಈಡಾಗಿದ್ದಾರೆ). ವಾಸ್ತವದಲ್ಲಿ ಅವರು ಅವರನ್ನು (ಮಸೀಹ್‌ರನ್ನು) ವಧಿಸಲಿಲ್ಲ. ಶಿಲುಬೆಗೇರಿಸಿ ಕೊಲ್ಲಲೂ ಇಲ್ಲ.[169] ಆದರೆ ಅವರು ಹಾಗೆ (ಶಿಲುಬೆಯ

وَّقَوْلِهِمْ اِنَّا قَتَلْنَا الْمَسِيْحَ عِيْسَى
ابْنَ مَرْيَمَ رَسُوْلَ اللّٰهِ ۚ وَمَا قَتَلُوْهُ وَ
مَا صَلَبُوْهُ وَلٰكِنْ شُبِّهَ لَهُمْ ۭ وَاِنَّ

168. ಪರ್ವತದ ತಳಭಾಗದಲ್ಲಿ ಒಡಂಬಡಿಕೆ ಮಾಡಲಾಯಿತು ಎಂದು ತಾತ್ಪರ್ಯ.

168A. ಮೂಲದಲ್ಲಿ ಕೊಲ್ಲು ಎಂಬ ಶಬ್ದವಿದೆ. ಕೊಲ್ಲಲು ಪ್ರಯತ್ನಿಸು ಎಂದು ತಾತ್ಪರ್ಯ.

ಮೇಲೆ ಮೃತಪಟ್ಟಂತೆ) **ಅವರಿಗೆ ತೋರಿಸಲ್ಪಟ್ಟರು.**[170] **ತತ್ಸಂಬಂಧ ಭಿನ್ನಾಭಿಪ್ರಾಯವಿರುವವರು ಆ ವಿಚಾರದಲ್ಲಿ ಸಂಶಯದಲ್ಲೇ ಇದ್ದಾರೆ. ಅವರು ಉಹಾಪೋಹಗಳನ್ನು ಅವಲಂಬಿಸಿರುವರು**[171] **ಹೊರತು ಅವರಿಗೆ ಆ ಬಗ್ಗೆ** (ಸ್ಪಷ್ಟವಾದ) **ಯಾವ ಅರಿವೂ ಇಲ್ಲ. ಖಂಡಿತವಾಗಿಯೂ ಅವರು ಅವರನ್ನು ವಧಿಸಲಿಲ್ಲ.**[171A]

الَّذِيْنَ اخْتَلَفُوْا فِيْهِ لَفِيْ شَكٍّ مِّنْهُ ؕ مَا لَهُمْ بِهٖ مِنْ عِلْمٍ اِلَّا اتِّبَاعَ الظَّنِّ ۚ وَ مَا قَتَلُوْهُ يَقِيْنًا ﴿۱۵۸﴾

**159. ಬದಲಾಗಿ, ಅಲ್ಲಾಹನು ಅವರನ್ನು ತನ್ನೆಡೆಗೆ ಎತ್ತಿದನು.**[172] **ಅಲ್ಲಾಹನು ಪ್ರತಾಪಶಾಲಿಯೂ ವಿವೇಕ ವಂತನೂ ಆಗಿದ್ದಾನೆ.**

بَلْ رَّفَعَهُ اللّٰهُ اِلَيْهِ ؕ وَ كَانَ اللّٰهُ عَزِيْزًا حَكِيْمًا ﴿۱۵۹﴾

**160. ಗ್ರಂಥದವರಲ್ಲಿ ಯಾವನೂ ತನ್ನ ಮರಣಕ್ಕೆ ಮುಂಚೆ**[173] **ಆ ಬಗ್ಗೆ** (ಯೇಸು ಶಿಲುಬೆಯ ಮೇಲೆ ಗತಿಸಿದರೆಂಬ ಬಗ್ಗೆ) **ವಿಶ್ವಾಸ ಹೊಂದದಿರುವುದಿಲ್ಲ. ಪುನರುತ್ಥಾನ ದಿನದಂದು ಅವರು** (ಯೇಸು) **ಅವರ ವಿರುದ್ಧ ಸಾಕ್ಷಿಯಾಗುವರು.**

وَ اِنْ مِّنْ اَهْلِ الْكِتٰبِ اِلَّا لَيُؤْمِنَنَّ بِهٖ قَبْلَ مَوْتِهٖ ۚ وَ يَوْمَ الْقِيٰمَةِ يَكُوْنُ عَلَيْهِمْ شَهِيْدًا ﴿۱۶۰﴾

**161. ಯಹೂದ್ಯರು ಎಸಗಿದ ಅಕ್ರಮ ವರ್ತನೆಯ ಕಾರಣದಿಂದ, ಮುಂಚೆ ಅವರಿಗೆ ಅನುಮತಿಸಲ್ಪಟ್ಟ**

فَبِظُلْمٍ مِّنَ الَّذِيْنَ هَادُوْا حَرَّمْنَا

169. 'ಸಲಬ' ಎಂಬ ಪದದ ಅರ್ಥ ಶಿಲುಬೆಗೇರಿಸಿ ಸಾಯಿಸು ಎಂದಾಗಿದೆ. ಪ್ರವಾದಿ ಈಸಾ ಅಲೈಹಿಸ್ಸಲಾಮ್‌ರನ್ನು ಶಿಲುಬೆಗೆ ಜಡಿಯಲಾಗಿದ್ದರೂ ಅವರು ಶಿಲುಬೆಯ ಮೇಲೆ ಮರಣ ಹೊಂದಲಿಲ್ಲ. "ಮಾ ಸಲಬೂಹು" ಎಂಬುದರ ಅರ್ಥ ಅವರು ಅವರನ್ನು **ಶಿಲುಬೆಗೇರಿಸಿ ಕೊಲ್ಲಲಿಲ್ಲ** ಎಂದಾಗಿದೆ. "ವಮಾ ಖತಲೂಹು ವಮಾ ಸಲಬೂಹು" = "ಅವರು ಅವರನ್ನು ವಧಿಸಲಿಲ್ಲ. ಶಿಲುಬೆಗೇರಿಸಿ ಕೊಲ್ಲಲೂ ಇಲ್ಲ." ಹಝ್ರತ್ ಈಸಾ ಅಲೈಹಿಸ್ಸಲಾಮ್‌ರನ್ನು ತಾವು ವಧಿಸಿದ್ದೇವೆಂದು ವಾದಿಸುವ ಯಹೂದ್ಯರಲ್ಲಿ ಎರಡು ವಿಧದಲ್ಲಿ ನಂಬುವವರಿದ್ದಾರೆ. ಒಂದು ಪಂಗಡದವರ ನಂಬಿಕೆ - ಮೊದಲು ಅವರನ್ನು ವಧಿಸಿ ನಂತರ ಶಿಲುಬೆಗೆ ಜಡಿಯಲಾಯಿತು ಎಂದಾಗಿದೆ. ಮತ್ತೊಂದು ಪಂಗಡದವರ ನಂಬಿಕೆ ಅವರನ್ನು ಶಿಲುಬೆಗೇರಿಸಿ ಕೊಲ್ಲಲಾಯಿತು ಎಂದು. ಇಲ್ಲಿ ಈ ಎರಡೂ ನಂಬಿಕೆಗಳನ್ನು ಅಲ್ಲಾಹನು ಅಲ್ಲಗಳೆದಿದ್ದಾನೆ. ಅಂದರೆ, ಕೊಂದ ನಂತರ ಶಿಲುಬೆಯ ಮೇಲೆ ತೂಗ ಹಾಕಿಲ್ಲ; ಶಿಲುಬೆಗೇರಿಸಿ ಕೊಂದದ್ದೂ ಇಲ್ಲ. (ಹೆಚ್ಚಿನ ವಿವರಣೆಗೆ ಹಝ್ರತ್ ಮಿರ್ಝಾ ಗುಲಾಂ ಅಹ್ಮದ್ ಅಲೈಹಿಸ್ಸಲಾಮ್‌ರ ಗ್ರಂಥ 'ಬರಾಹೀನೆ ಅಹ್ಮದಿಯಾ' ಸಂಪುಟ 5 ಪುಟ 337, 338 ನೋಡಿರಿ.)

170. ಶಿಲುಬೆಗೆ ಜಡಿಯಲ್ಪಟ್ಟ ಪ್ರವಾದಿ ಈಸಾ (ಅ) ಕೆಲವೇ ನಿಮಿಷಗಳೊಳಗೆ ಪ್ರಜ್ಞಾಹೀನರಾದುದರಿಂದ ಅವರು ಮೃತಪಟ್ಟರೆಂದು ಯಹೂದ್ಯರು ಭಾವಿಸಿದರು.

171. ಸಾಂದರ್ಭಿಕ ಸನ್ನಿವೇಶಗಳೆಲ್ಲ ಯೇಸುಕ್ರಿಸ್ತರು ಶಿಲುಬೆಯ ಮೇಲೆ ಮರಣಪಡುವುದಕ್ಕೆ ವಿರುದ್ಧವಾಗಿದ್ದವು. ಆದರೆ ಅವರು ಶಿಲುಬೆಯ ಮೇಲೆ ಮರಣಪಡಬೇಕೆಂದು ಯಹೂದ್ಯರ ಬಯಕೆಯಾಗಿತ್ತು. ಆದ್ದರಿಂದ ಅವರು ತಮ್ಮ ಊಹೆಗೆ ಅಧೀನರಾಗಿ ಯೇಸುಕ್ರಿಸ್ತರು ಶಿಲುಬೆಯ ಮೇಲೆ ಗತಿಸಿದರೆಂದು ನಂಬುತ್ತಾರೆ.

171A. ಅವರು ತಮ್ಮ ಊಹಾಪೋಹಗಳನ್ನು ನಿಸ್ಸಂದಿಗ್ಧವನ್ನಾಗಿ ಮಾರ್ಪಡಿಸಲೂ ಇಲ್ಲ ಎಂದು ಸಹ ಇದಕ್ಕೆ ಅರ್ಥವಿದೆ.





**ಹಲವು ಒಳಿತುಗಳನ್ನು ನಾವು ಅವರಿಗೆ ನಿಷಿದ್ಧ ಗೊಳಿಸಿದೆವು.**[174] **ಅಲ್ಲಾಹನ ಮಾರ್ಗದಿಂದ ಅನೇಕ ಜನರನ್ನು ಅವರು ತಡೆದ ಕಾರಣದಿಂದಲೂ** (ನಾವು ಅವರನ್ನು ಶಿಕ್ಷೆಗೀಡು ಮಾಡಿದೆವು).

عَلَيْهِمْ طَيِّبٰتٍ اُحِلَّتْ لَهُمْ وَ بِصَدِّهِمْ عَنْ سَبِيْلِ اللّٰهِ كَثِيْرًا ﴿۱۶۱﴾

**162. ಅವರು ಬಡ್ಡಿ ಪಡೆಯುವ ಕಾರಣದಿಂದಲೂ- ವಾಸ್ತವದಲ್ಲಿ ಅದು ಅವರಿಗೆ ನಿಷಿದ್ಧಗೊಳಿಸಲಾಗಿತ್ತು- ಜನರ ಧನವನ್ನು ಅವರು ಅನ್ಯಾಯವಾಗಿ** (ಅಪಹರಿಸಿ) **ತಿನ್ನುವ ಕಾರಣದಿಂದಲೂ** (ಅವರಿಗೆ ಶಿಕ್ಷೆ ಲಭಿಸಿತು).

وَّ اَخْذِهِمُ الرِّبٰوا وَ قَدْ نُهُوْا عَنْهُ وَ اَكْلِهِمْ اَمْوَالَ النَّاسِ بِالْبَاطِلِ ؕ وَ اَعْتَدْنَا لِلْكٰفِرِيْنَ مِنْهُمْ عَذَابًا

172. ಹಝ್ರತ್ ಈಸಾ ಮಸೀಹ್ ಅಲೈಹಿಸ್ಸಲಾಮ್‌ರಿಗೆ ಅಲ್ಲಾಹನು ತನ್ನ ಸನ್ನಿಧಿಯಲ್ಲಿ ಗೌರವವನ್ನೂ ಉನ್ನತ ಪದವಿಯನ್ನೂ ನೀಡಿದನೆಂದು ಅರ್ಥ.

ಹಳೆ ಒಡಂಬಡಿಕೆಯ ಭವಿಷ್ಯ ನುಡಿ ಪ್ರಕಾರ ಸುಳ್ಳು ಪ್ರವಾದಿಗಳು ಕೊಲ್ಲಲ್ಪಡುವರೆಂದೂ ಶಿಲುಬೆಗೆ ಜಡಿಯಲ್ಪಟ್ಟು ಕೊಲ್ಲಲ್ಪಡುವವನು ಶಾಪಗ್ರಸ್ತನೆಂದೂ ಯಹೂದ್ಯರು ನಂಬುತ್ತಾರೆ. (ಧರ್ಮೋಪದೇಶ ಕಾಂಡ 21:23). ಇದಕ್ಕನುಗುಣವಾಗಿ, ಅವರ ನಂಬಿಕೆಯ ಪ್ರಕಾರ 'ಸುಳ್ಳು ಪ್ರವಾದಿ'ಯಾದ ಯೇಸುಕ್ರಿಸ್ತರನ್ನು (ಈಸಾನಬಿಯನ್ನು) ಶಿಲುಬೆಗೇರಿಸಿ ಕೊಂದು ಶಾಪಗ್ರಸ್ತನೆಂದು ಸಾಬೀತುಪಡಿಸಬೇಕೆಂದು ಯಹೂದ್ಯ ಮುಖಂಡರು ಉದ್ದೇಶಿಸಿದ್ದರು. ಆದರೆ ಅವರ ಉದ್ದೇಶ ಸಫಲವಾಗಲಿಲ್ಲ. "ಅವರು ಅವರನ್ನು ವಧಿಸಲೂ ಇಲ್ಲ; ಶಿಲುಬೆಗೇರಿಸಿ ಕೊಲ್ಲಲೂ ಇಲ್ಲ" ಎಂದು ಹಿಂದಿನ ವಾಕ್ಯದಲ್ಲಿ ಹೇಳಿದುದರ ತಾತ್ಪರ್ಯ ಇದೇ ಆಗಿದೆ. "ಬದಲಾಗಿ, ಅಲ್ಲಾಹನು ಅವರನ್ನು ತನ್ನೆಡೆಗೆ ಎತ್ತಿದನು" ಎಂದು ಹೇಳಿದ್ದು ಅದರ ವಿಶದೀಕರಣವಾಗಿದೆ. ಅಂದರೆ, ಅವನು ಅವರನ್ನು ಶಾಪಗ್ರಸ್ತನನ್ನಾಗಿ ಮಾಡಲಿಲ್ಲ; ಬದಲು ತನ್ನ ಇತರ ಎಲ್ಲ ವರಿಷ್ಠದಾಸರನ್ನು ಗೌರವಿಸಿ ತನ್ನ ಸನ್ನಿಧಿಗೆ ಎತ್ತಿದ ಹಾಗೆಯೇ ಈಸಾ (ಅಲೈಹಿಸ್ಸಲಾಮ್)ರನ್ನು ಸಹ ಅಲ್ಲಾಹನು ತನ್ನ ಸಾಮೀಪ್ಯವನ್ನು ನೀಡಿ ಪದವಿಯಲ್ಲಿ ಉನ್ನತಗೊಳಿಸಿದ್ದಾನೆ ಎಂದು ತಾತ್ಪರ್ಯ. ಅಲ್ಲಾಹನು 'ಕರ್ತೃ' ಮತ್ತು ಮನುಷ್ಯ 'ಕರ್ಮ' ಆಗಿ 'ರಫಅ' ಎಂಬ ಅರಬಿ ಪದ ಪ್ರಯೋಗಿಸಲ್ಪಟ್ಟರೆ ಅದರ ಅರ್ಥ ಶಾರೀರಿಕವಾಗಿ ಎತ್ತಿದನು ಎಂದಲ್ಲ; ಬದಲು, ಆಧ್ಯಾತ್ಮಿಕವಾಗಿ ಎತ್ತಿದನು ಎಂದಾಗಿದೆ. ಇಲ್ಲಿ ಅಲ್ಲಾಹನು 'ಇಲೈಹಿ' (ತನ್ನೆಡೆಗೆ) ಎಂದು ಹೇಳಿ ಈ ಅರ್ಥವನ್ನು ಸ್ಪಷ್ಟಪಡಿಸಿರುವನು. ಈಸಾನಬಿಯನ್ನು ಸಶರೀರವಾಗಿ ಆಕಾಶಕ್ಕೆ ಎತ್ತಿದನು ಎಂದು ಹೇಳಲಾಗಿಲ್ಲ ಎಂಬ ವಿಚಾರ ಸಹ ಗಮನಾರ್ಹವಾಗಿದೆ.

'ಈಸಾ ಮಸೀಹ್ ಆಕಾಶಕ್ಕೆ ಶರೀರ ಸಮೇತ ಎತ್ತಲ್ಪಡಲಿಲ್ಲವೇಕೆ?' ಎಂಬುದಾಗಿ ಯಹೂದ್ಯರು ಆಕ್ಷೇಪವೆತ್ತಿರಲೂ ಇಲ್ಲ. ಬದಲಾಗಿ, "ನಾವು ಮಸೀಹನನ್ನು ವಧಿಸಿದ್ದೇವೆ" ಎಂದು ಹೇಳಿ ಅವರಿಗೆ ಆಧ್ಯಾತ್ಮಿಕ ಉನ್ನತಿ ಲಭಿಸಲಿಲ್ಲವೆಂದು ನಿರೂಪಿಸಲು ಅವರು ಪ್ರಯತ್ನಿಸಿದ್ದರು. ಆದರೆ ಈ ವಚನದಲ್ಲಿ ಅಲ್ಲಾಹನು ಅವರ ವಾದವನ್ನು ಖಂಡಿಸಿ ಹಝ್ರತ್ ಈಸಾ ಮಸೀಹರು ತನ್ನ ಸನ್ನಿಧಿಯಲ್ಲಿ ಉನ್ನತ ಸ್ಥಾನಮಾನ ಹೊಂದಿದವರಾಗಿದ್ದಾರೆ ಎಂದು ತೋರಿಸಿರುವನು.

173. ಗ್ರಂಥದವರೆಲ್ಲರೂ (ಅಹ್ಲಿಲ್‌ಕಿತಾಬ್) ಈಸಾನಬಿಯ ಮರಣಕ್ಕೆ ಮುಂಚೆ ಅವರಲ್ಲಿ ವಿಶ್ವಾಸಹೊಂದುವರೆಂದು ಹಲವು ವ್ಯಾಖ್ಯಾನಗಾರರು ಈ ವಚನಕ್ಕೆ ಅರ್ಥ ಹೇಳುತ್ತಾರೆ. ಆದರೆ ಈ ಅರ್ಥ ಸರಿಯಲ್ಲ. ಕಾರಣವೇನೆಂದರೆ, 'ವಇನ್‌ಮಿನ್ ಅಹ್ಲಿಲ್ ಕಿತಾಬಿ' ಎಂದು ಹೇಳಲಾಗಿದೆ. 'ಗ್ರಂಥದವರಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ' ಎಂದು ಇದರ ಅರ್ಥ. ಈಸಾನಬಿಯ ಕಾಲದಿಂದ ಇಂದಿನ ವರೆಗೆ ಕೋಟಿಗಟ್ಟಲೆ ಯಹೂದ್ಯರು ಯಹೂದ್ಯರಾಗಿಯೇ ಗತಿಸಿದ್ದಾರೆ. ಈಗಲೂ ಸಾಯುತ್ತಿದ್ದಾರೆ. ಅವರು ಈಸಾನಬಿಯನ್ನು ನಂಬುವುದಿಲ್ಲವಷ್ಟೇ. ಆದ್ದರಿಂದಲೇ ಈ ವಚನವನ್ನು ಮೇಲಿನಂತೆ ಅನುವಾದ ಮಾಡಲಾಗಿದೆ. ಗ್ರಂಥದವರ ಪೈಕಿ ಕ್ರೈಸ್ತ ಅಥವಾ ಯಹೂದ್ಯನಾದ ಪ್ರತಿಯೊಬ್ಬನು ತನ್ನ ಮರಣಕ್ಕೆ ಮುನ್ನ ಯೇಸು ಶಿಲುಬೆಯ ಮೇಲೆ ಮಡಿದಿದ್ದಾರೆಂದೇ ನಂಬುತ್ತಾರೆ. ಯೇಸು ಶಿಲುಬೆಯ ಮೇಲೆ ಮಡಿದು ಶಾಪಗ್ರಸ್ತನಾದನೆಂದು ಯಹೂದ್ಯರು ನಂಬುತ್ತಾರಾದರೆ, ಮನುಷ್ಯವಂಶದ ಪಾಪ ವಿಮುಕ್ತಿಗಾಗಿ ಯೇಸು ಶಿಲುಬೆಯ ಮೇಲಿನ ಮರಣಕ್ಕೆ ಬಲಿಯಾದರೆಂದು ಕ್ರೈಸ್ತರು ನಂಬುತ್ತಾರೆ.

اَلِيْمًا ۝١٦٢

ಅವರ ಪೈಕಿ ಅವಿಶ್ವಾಸಿಗಳಿಗೆ ನಾವು ಯಾತನಾಮಯ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದೇವೆ.

لٰكِنِ الرّٰسِخُوْنَ فِى الْعِلْمِ مِنْهُمْ وَ الْمُؤْمِنُوْنَ يُؤْمِنُوْنَ بِمَآ اُنْزِلَ اِلَيْكَ وَ مَآ اُنْزِلَ مِنْ قَبْلِكَ وَ الْمُقِيْمِيْنَ الصَّلٰوةَ وَ الْمُؤْتُوْنَ الزَّكٰوةَ وَ الْمُؤْمِنُوْنَ بِاللّٰهِ وَ الْيَوْمِ الْاٰخِرِ ؕ اُولٰٓئِكَ سَنُؤْتِيْهِمْ اَجْرًا عَظِيْمًا ۝١٦٣

**163.** ಆದರೆ, ಅವರ ಪೈಕಿ (ದಿವ್ಯ) ಜ್ಞಾನದಲ್ಲಿ ಪಾರಂಗತರಾದವರು ಮತ್ತು ನಿನಗೆ ಅವತೀರ್ಣವಾದುದರಲ್ಲೂ ನಿನಗಿಂತ ಮುಂಚೆ ಅವತೀರ್ಣಗೊಂಡದ್ದರಲ್ಲೂ ನಂಬಿಕೆಯಿಡುವ ವಿಶ್ವಾಸಿಗಳು - ಅವರು ನಮಾಝುನ್ನು ನಿಷ್ಠೆಯಿಂದ ಅನುಷ್ಠಿಸುವವರೂ ಝಕಾತ್ ಕೊಡುವವರೂ ಅಲ್ಲಾಹನಲ್ಲಿ ಮತ್ತು ಅಂತ್ಯ ದಿನದ ಬಗ್ಗೆ ವಿಶ್ವಾಸ ಹೊಂದಿದವರೂ ಆಗಿದ್ದಾರೆ - ಅವರಿಗೆ ನಾವು ಖಂಡಿತವಾಗಿಯೂ ಮಹತ್ತರ ಪ್ರತಿಫಲ ನೀಡುವೆವು.

اِنَّآ اَوْحَيْنَآ اِلَيْكَ كَمَآ اَوْحَيْنَآ اِلٰى نُوْحٍ وَّ النَّبِيّٖنَ مِنْۢ بَعْدِهٖ ۚ وَ اَوْحَيْنَآ اِلٰٓى اِبْرٰهِيْمَ وَ اِسْمٰعِيْلَ وَ اِسْحٰقَ وَ يَعْقُوْبَ وَ الْاَسْبَاطِ وَ عِيْسٰى وَ اَيُّوْبَ وَ يُوْنُسَ وَ هٰرُوْنَ وَ سُلَيْمٰنَ ۚ وَ اٰتَيْنَا دَاوٗدَ زَبُوْرًا ۝١٦٤

**164.** ನೂಹ್ ಮತ್ತು ಅವರ ನಂತರದ ಪ್ರವಾದಿಗಳಿಗೆ ದಿವ್ಯಸಂದೇಶ ನೀಡಿದಂತೆ ನಾವು ನಿಶ್ಚಯವಾಗಿಯೂ ನಿನಗೂ ದಿವ್ಯ ಸಂದೇಶ ನೀಡಿದ್ದೇವೆ. ಇಬ್‌ರಾಹೀಂ, ಇಸ್ಮಾಈಲ್, ಇಸ್‌ಹಾಖ್, ಯಅ್‌ಖೂಬ್ ಮತ್ತು (ಅವರ) ಸಂತತಿಗಳಿಗೂ ಈಸಾ, ಅಯ್ಯೂಬ್, ಯೂನುಸ್, ಹಾರೂನ್ ಮತ್ತು ಸುಲೈಮಾನ್ ಇವರಿಗೆಲ್ಲ ನಾವು ದಿವ್ಯ ಸಂದೇಶ ನೀಡಿದ್ದೇವೆ. ನಾವು ದಾವೂದ್‌ರಿಗೆ ಸಬೂರನ್ನೂ[174A] ನೀಡಿರುವೆವು.

وَ رُسُلًا قَدْ قَصَصْنٰهُمْ عَلَيْكَ مِنْ قَبْلُ وَ رُسُلًا لَّمْ نَقْصُصْهُمْ عَلَيْكَ ؕ وَ كَلَّمَ اللّٰهُ مُوْسٰى تَكْلِيْمًا ۝١٦٥

**165.** ನಾವು ನಿನಗೆ ಇದಕ್ಕೆ ಮುಂಚೆ (ಕೆಲವು) ಸಂದೇಶವಾಹಕರ ಬಗ್ಗೆ ವಿವರಿಸಿಕೊಟ್ಟಿದ್ದೇವೆ. ನಾವು ನಿನಗೆ ವಿವರ ನೀಡದ (ಕೆಲವು) ಸಂದೇಶವಾಹಕರೂ ಇದ್ದಾರೆ. ಅಲ್ಲಾಹನು ವಿಶೇಷವಾಗಿ (ಆಜ್ಞೆಗಳನ್ನು ತಿಳಿಸಿಕೊಂಡು) ಮೂಸಾರೊಡನೆ ಮಾತನಾಡಿದನು.

174. ಇಲ್ಲಿ ಭೌತಿಕ ಒಳಿತುಗಳಲ್ಲ; ಆಧ್ಯಾತ್ಮಿಕ ಅನುಗ್ರಹಗಳೆಂದು ಅರ್ಥ. ಪ್ರವಾದಿಈಸಾ (ಅ) ರನ್ನು ಧಿಕ್ಕರಿಸಿದ ಕಾರಣದಿಂದ ಯಹೂದ್ಯರಿಗೆ ಆಧ್ಯಾತ್ಮಿಕ ಅನುಗ್ರಹಗಳ ಕವಾಟಗಳು ಮುಚ್ಚಲ್ಪಟ್ಟವು ಎಂದು ತಾತ್ಪರ್ಯ. ಆ ಸಮುದಾಯದಲ್ಲಿ ಪ್ರವಾದಿತ್ವವನ್ನು ಸಹ ಅಲ್ಲಾಹನು ನಿಲ್ಲಿಸಿಬಿಟ್ಟನು.

174A. ಕೀರ್ತನೆಗಳು (Psalms)





رُسُلًا مُّبَشِّرِيْنَ وَ مُنْذِرِيْنَ لِئَلَّا يَكُوْنَ لِلنَّاسِ عَلَى اللّٰهِ حُجَّةٌۢ بَعْدَ الرُّسُلِ ؕ وَ كَانَ اللّٰهُ عَزِيْزًا حَكِيْمًا ۝١٦٦

**166.** ಅವರೆಲ್ಲರೂ ಶುಭವಾರ್ತೆ ನೀಡುವ ಮತ್ತು ಮುನ್ನೆಚ್ಚರಿಕೆ ಕೊಡುವ ಸಂದೇಶವಾಹಕರು. ಇದು, ಸಂದೇಶವಾಹಕರ (ಆಗಮನದ) ಬಳಿಕ ಜನರಿಗೆ ಅಲ್ಲಾಹನ ವಿರುದ್ಧ ಯಾವುದೇ ಪ್ರತಿವಾದ ಇಲ್ಲದಿರಲಿಕ್ಕಾಗಿದೆ. ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

لٰكِنِ اللّٰهُ يَشْهَدُ بِمَآ اَنْزَلَ اِلَيْكَ اَنْزَلَهٗ بِعِلْمِهٖ ۚ وَ الْمَلٰٓئِكَةُ يَشْهَدُوْنَ ؕ وَ كَفٰى بِاللّٰهِ شَهِيْدًا ۝١٦٧

**167.** ಆದರೆ, ಅಲ್ಲಾಹನು ನಿನಗೆ ಅವತೀರ್ಣಗೊಳಿಸಿದ (ಈ ವಚನ) ಮೂಲಕ, ಅವನು ಇದನ್ನು ತನ್ನ (ಪರಿಪೂರ್ಣವಾದ) ಜ್ಞಾನದಿಂದ ಅವತೀರ್ಣಗೊಳಿಸಿರುವನೆಂದು ಸಾಕ್ಷ್ಯವಹಿಸುತ್ತಾನೆ. ದೇವದೂತರು ಸಹ (ಅದಕ್ಕೆ) ಸಾಕ್ಷ್ಯವಹಿಸುತ್ತಾರೆ. ಸಾಕ್ಷಿಯಾಗಿ ಅಲ್ಲಾಹನು ಸಾಕು.

اِنَّ الَّذِيْنَ كَفَرُوْا وَ صَدُّوْا عَنْ سَبِيْلِ اللّٰهِ قَدْ ضَلُّوْا ضَلٰلًۢا بَعِيْدًا ۝١٦٨

**168.** ಅವಿಶ್ವಾಸಿಗಳಾಗಿದ್ದುಕೊಂಡು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯುವವರು ನಿಸ್ಸಂಶಯವಾಗಿಯೂ ದಾರಿತಪ್ಪಿ ಬಹಳ ದೂರ ಹೋಗಿಬಿಟ್ಟಿದ್ದಾರೆ.

اِنَّ الَّذِيْنَ كَفَرُوْا وَ ظَلَمُوْا لَمْ يَكُنِ اللّٰهُ لِيَغْفِرَ لَهُمْ وَ لَا لِيَهْدِيَهُمْ طَرِيْقًا ۝١٦٩

**169.** ಅವಿಶ್ವಾಸಿಗಳಾಗಿದ್ದುಕೊಂಡು ದೌರ್ಜನ್ಯವೆಸಗುವವರನ್ನು ಅಲ್ಲಾಹನು ಎಂದಿಗೂ ಕ್ಷಮಿಸಲಾರ. ಅವರಿಗೆ ಯಾವುದೇ ದಾರಿಯನ್ನು ಅವನು ತೋರಿಸಿಕೊಡಲಾರ -

اِلَّا طَرِيْقَ جَهَنَّمَ خٰلِدِيْنَ فِيْهَآ اَبَدًا ؕ وَ كَانَ ذٰلِكَ عَلَى اللّٰهِ يَسِيْرًا ۝١٧٠

**170.** ನರಕದ ದಾರಿಯನ್ನು ಹೊರತು. ಅಲ್ಲಿ ಅವರು ಅತಿ ದೀರ್ಘಕಾಲ ವಾಸಿಸುವರು. ಆ ಕಾರ್ಯ ಅಲ್ಲಾಹನಿಗೆ ಬಲು ಸುಲಭ.

يٰٓاَيُّهَا النَّاسُ قَدْ جَآءَكُمُ الرَّسُوْلُ بِالْحَقِّ مِنْ رَّبِّكُمْ فَاٰمِنُوْا خَيْرًا لَّكُمْ ؕ وَ اِنْ تَكْفُرُوْا فَاِنَّ لِلّٰهِ مَا فِى السَّمٰوٰتِ وَ الْاَرْضِ ؕ وَ كَانَ اللّٰهُ عَلِيْمًا حَكِيْمًا ۝١٧١

**171.** ಎಲೈ ಜನರೇ, ಈ ಸಂದೇಶವಾಹಕನು ನಿಮ್ಮ ಪ್ರಭುವಿನ ಕಡೆಯಿಂದ ಸತ್ಯದೊಂದಿಗೆ ನಿಮ್ಮ ಬಳಿಗೆ ಬಂದಿರುವನು. ನೀವು ವಿಶ್ವಾಸವನ್ನು ಹೊಂದಿರಿ; ಅದು ನಿಮಗೆ ಗುಣಕರವಾಗುವುದು. ನೀವು ನಂಬದಿದ್ದರೆ (ನೆನಪಿಡಿರಿ), ನಿಸ್ಸಂದೇಹವಾಗಿಯೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದಾಗಿವೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

يَا أَهْلَ الْكِتَابِ لَا تَغْلُوا فِي دِينِكُمْ وَلَا تَقُولُوا عَلَى اللَّهِ إِلَّا الْحَقَّ ۚ إِنَّمَا الْمَسِيحُ عِيسَى ابْنُ مَرْيَمَ رَسُولُ اللَّهِ وَكَلِمَتُهُ أَلْقَاهَا إِلَىٰ مَرْيَمَ وَرُوحٌ مِّنْهُ ۖ فَآمِنُوا بِاللَّهِ وَرُسُلِهِ ۖ وَلَا تَقُولُوا ثَلَاثَةٌ ۚ انتَهُوا خَيْرًا لَّكُمْ ۚ إِنَّمَا اللَّهُ إِلَٰهٌ وَاحِدٌ ۖ سُبْحَانَهُ أَن يَكُونَ لَهُ وَلَدٌ ۘ لَّهُ مَا فِي السَّمَاوَاتِ وَمَا فِي الْأَرْضِ ۗ وَكَفَىٰ بِاللَّهِ وَكِيلًا ﴿١٧١﴾

**172.** ಎಲೈ ಗ್ರಂಥದವರೇ,[175] ನೀವು ನಿಮ್ಮ ಧರ್ಮ ಕಾರ್ಯಗಳಲ್ಲಿ ಮಿತಿಮೀರಬೇಡಿರಿ. ಅಲ್ಲಾಹನ ಬಗ್ಗೆ ಸತ್ಯವನ್ನಲ್ಲದೆ ನೀವು ಹೇಳಬೇಡಿರಿ. ದಿಟವಾಗಿಯೂ ಮರ್ಯಮ್ ಪುತ್ರ ಈಸಾ ಮಸೀಹ್ ಅಲ್ಲಾಹನ ಕೇವಲ ಒಬ್ಬ ಸಂದೇಶವಾಹಕರಾಗಿದ್ದರು. ಅವರು ಮರ್ಯಮ್‌ರಿಗೆ ಅವನು ಅವತೀರ್ಣಗೊಳಿಸಿದ ವಚನದ ಈಡೇರಿಕೆಯೂ ಒಂದು ಅನುಗ್ರಹವೂ ಆಗಿದ್ದರು.[176] ಆದುದರಿಂದ ನೀವು ಅಲ್ಲಾಹನಲ್ಲೂ ಅವನ ಎಲ್ಲ ಸಂದೇಶವಾಹಕರಲ್ಲೂ ವಿಶ್ವಾಸವಿಡಿರಿ. '(ದೇವರು) ಮೂವರು' ಎಂದು ನೀವು ಹೇಳಬೇಡಿರಿ. ನೀವು (ಹಾಗೆ ಹೇಳುವುದನ್ನು) ಬಿಟ್ಟುಬಿಡಿರಿ. (ಅದು) ನಿಮಗೆ ಗುಣಕರ. ನಿಸ್ಸಂದೇಹವಾಗಿಯೂ ಅಲ್ಲಾಹನು ಒಬ್ಬನೇ ದೇವ. ಅವನಿಗೆ ಸಂತಾನವುಂಟಾಗುವುದೆಂಬುದು ಅವನ ಪರಿಶುದ್ಧತೆಗೆ ಎಷ್ಟೋ ದೂರದ ಮಾತು. ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನದ್ದಾಗಿವೆ. ರಕ್ಷಕನಾಗಿ ಅಲ್ಲಾಹನೇ ಸಾಕು.

لَّن يَسْتَنكِفَ الْمَسِيحُ أَن يَكُونَ عَبْدًا لِّلَّهِ وَلَا الْمَلَائِكَةُ الْمُقَرَّبُونَ ۚ وَمَن يَسْتَنكِفْ عَنْ عِبَادَتِهِ وَيَسْتَكْبِرْ فَسَيَحْشُرُهُمْ إِلَيْهِ جَمِيعًا ﴿١٧٢﴾

**173.** ತಾನು ಅಲ್ಲಾಹನ ಒಬ್ಬ ದಾಸನೆಂಬುದನ್ನು ಎಂದಿಗೂ ಮಸೀಹ್ ನಿರ್ಲಕ್ಷ್ಯಮಾಡಲಾರರು. ಹಾಗೆಯೇ (ಅಲ್ಲಾಹನ) ಸಾಮೀಪ್ಯ ಪಡೆದ ದೇವದೂತರು ಸಹ. ಯಾರು ಅವನ ಆರಾಧನೆಯನ್ನು ನಿರ್ಲಕ್ಷಿಸುತ್ತಾರೋ, ಮತ್ತು ಅಹಂಭಾವ ತೋರಿಸುತ್ತಾರೋ ಖಂಡಿತವಾಗಿಯೂ ಅವರನ್ನೆಲ್ಲ ಅವನು ತನ್ನೆಡೆಗೆ ಒಂದುಗೂಡಿಸುವನು.

فَأَمَّا الَّذِينَ آمَنُوا وَعَمِلُوا الصَّالِحَاتِ فَيُوَفِّيهِمْ أُجُورَهُمْ وَيَزِيدُهُم مِّن فَضْلِهِ ۖ وَأَمَّا الَّذِينَ اسْتَنكَفُوا وَاسْتَكْبَرُوا فَيُعَذِّبُهُمْ عَذَابًا أَلِيمًا

**174.** ಯಾರು ವಿಶ್ವಾಸ ಹೊಂದಿ (ಅದಕ್ಕನುಗುಣವಾಗಿ) ಸತ್ಕರ್ಮಗಳನ್ನು ಮಾಡುತ್ತಾರೋ, ಅವರಿಗೆ ಅವನು ಅವರ ಪ್ರತಿಫಲಗಳನ್ನು ಪೂರ್ಣವಾಗಿಯೂ ನೀಡುವವನು ಹಾಗೂ ತನ್ನ ಅನುಗ್ರಹದಿಂದ ಅವರಿಗೆ ಇನ್ನೂ ಹೆಚ್ಚು ನೀಡುವವನು. ಆದರೆ ಯಾರು ನಿರ್ಲಕ್ಷ್ಯ

175. ಇಲ್ಲಿ ಕ್ರೈಸ್ತರನ್ನು ಉದ್ದೇಶಿಸಲಾಗಿದೆ. ಇಲ್ಲಿ ಖಂಡಿಸಲ್ಪಟ್ಟ ನಂಬಿಕೆಗಳು ಯಹೂದ್ಯರದ್ದಲ್ಲ; ಕ್ರೈಸ್ತರದ್ದಾಗಿವೆ.

176. ರೂಹ್ (ಜೀವ, ಅನುಗ್ರಹ, ದೇವವಾಣಿ) ಎಂಬ ಪದ ಹಝ್ರತ್ ಈಸಾನಬಿಗೆ ಮಾತ್ರ ವಿಶಿಷ್ಟವಾಗಿ ಪ್ರಯೋಗಿಸಲ್ಪಟ್ಟಿಲ್ಲ. ಬೇರೆ ಪ್ರವಾದಿಗಳ ಕುರಿತು ಮತ್ತು ಸದ್ಧರ್ಮಿಗಳ ಕುರಿತು ಸಹ ಇದು ಪ್ರಯೋಗಿಸಲ್ಪಟ್ಟಿದೆ. (15:30, 32:10, 58:23)





وَلَا يَجِدُونَ لَهُم مِّن دُونِ اللَّهِ وَلِيًّا وَلَا نَصِيرًا ﴿١٧٣﴾

ವನ್ನೂ ಅಹಂಕಾರವನ್ನೂ ತೋರಿಸುತ್ತಾರೋ, ಅವರನ್ನು ಅವನು ಯಾತನಾಮಯವಾದ ಶಿಕ್ಷೆಯಿಂದ ದಂಡಿಸುವನು. ಅಲ್ಲಾಹನ ಹೊರತು ಅವರು ತಮಗೆ ಯಾವನೇ ಮಿತ್ರನನ್ನಾಗಲಿ ಸಹಾಯಕನನ್ನಾಗಲಿ ಕಾಣಲಾರರು.

يَا أَيُّهَا النَّاسُ قَدْ جَاءَكُم بُرْهَانٌ مِّن رَّبِّكُمْ وَأَنزَلْنَا إِلَيْكُمْ نُورًا مُّبِينًا ﴿١٧٤﴾

**175.** ಎಲೈ ಜನರೇ, ನಿಮಗೆ ನಿಮ್ಮ ಪ್ರಭುವಿನ ಕಡೆಯಿಂದ ಸ್ಪಷ್ಟವಾದೊಂದು ಪುರಾವೆ ಬಂದಿರುತ್ತದೆ. ನಾವು ನಿಮಗೆ ಸ್ಪಷ್ಟವಾದೊಂದು ಪ್ರಕಾಶವನ್ನು ಸಹ ಇಳಿಸಿ ಕೊಟ್ಟಿದ್ದೇವೆ.

فَأَمَّا الَّذِينَ آمَنُوا بِاللَّهِ وَاعْتَصَمُوا بِهِ فَسَيُدْخِلُهُمْ فِي رَحْمَةٍ مِّنْهُ وَفَضْلٍ وَيَهْدِيهِمْ إِلَيْهِ صِرَاطًا مُّسْتَقِيمًا ﴿١٧٥﴾

**176.** ಆದ್ದರಿಂದ, ಯಾರು ಅಲ್ಲಾಹನಲ್ಲಿ ವಿಶ್ವಾಸ ಹೊಂದಿ, ಅವನನ್ನು ಬಿಗಿಯಾಗಿ ಹಿಡಿಯುತ್ತಾರೋ, ನಿಶ್ಚಯವಾಗಿಯೂ ಅವರಿಗೆ ಅವನು ತನ್ನ ಕಾರುಣ್ಯ ಮತ್ತು ಅನುಗ್ರಹದ (ವಲಯದ) ಒಳಗೆ ಪ್ರವೇಶ ನೀಡುವನು, ಹಾಗೂ ತನ್ನೆಡೆಗೆ ಬಂದು ಸೇರುವ ನೇರವಾದ ಮಾರ್ಗದಲ್ಲಿ ಅವರನ್ನು ನಡೆಯಿಸುವನು.

يَسْتَفْتُونَكَ قُلِ اللَّهُ يُفْتِيكُمْ فِي الْكَلَالَةِ ۚ إِنِ امْرُؤٌ هَلَكَ لَيْسَ لَهُ وَلَدٌ وَلَهُ أُخْتٌ فَلَهَا نِصْفُ مَا تَرَكَ ۚ وَهُوَ يَرِثُهَا إِن لَّمْ يَكُن لَّهَا وَلَدٌ ۚ فَإِن كَانَتَا اثْنَتَيْنِ فَلَهُمَا الثُّلُثَانِ مِمَّا تَرَكَ ۚ وَإِن كَانُوا إِخْوَةً رِّجَالًا وَنِسَاءً فَلِلذَّكَرِ مِثْلُ حَظِّ الْأُنثَيَيْنِ ۗ يُبَيِّنُ اللَّهُ لَكُمْ أَن تَضِلُّوا ۗ وَاللَّهُ بِكُلِّ شَيْءٍ عَلِيمٌ ﴿١٧٦﴾

**177.** ಅವರು ನಿನ್ನೊಡನೆ ಮತ್ತೊಂದು (ಬಗೆಯ ಕಲಾಲವನ್ನು ಕುರಿತು)[177] ತೀರ್ಪು ಕೇಳುತ್ತಾರೆ. 'ಅಲ್ಲಾಹನು ನಿಮಗೆ ಅಂತಹ ಕಲಾಲದ, ಬಗ್ಗೆ ವಿಧಿಸುತ್ತಾನೆ' ಎಂದು ಹೇಳು. ಒಬ್ಬನು ಸಂತಾನರಹಿತನಾಗಿ ಮೃತಪಟ್ಟರೆ, ಆತನಿಗೆ ಒಬ್ಬಳು ಸಹೋದರಿಯಿದ್ದರೆ, ಅವನು ಬಿಟ್ಟು ಹೋದ ಸ್ವತ್ತಿನ ಅರ್ಧಾಂಶ ಹಕ್ಕು ಅವಳಿಗಿದೆ. ಸಂತಾನರಹಿತಳಾಗಿ ಮೃತಪಟ್ಟ ಕಲಾಲ ಸಹೋದರಿಯ (ಎಲ್ಲ ಸ್ವತ್ತಿಗೂ) ಆಕೆಯ ಸಹೋದರನು ಹಕ್ಕುದಾರನಾಗುತ್ತಾನೆ. (ಮೃತ ಸಹೋದರನಿಗೆ) ಇಬ್ಬರು ಸಹೋದರಿಯರಿದ್ದರೆ, ಆತನು ಬಿಟ್ಟು ಹೋದ ಸ್ವತ್ತಿನ ಮೂರನೇ ಎರಡು ಅಂಶ ಹಕ್ಕು ಅವರಿಗೆ (ಇಬ್ಬರಿಗೂ) ಇದೆ. ಇನ್ನು ಹಕ್ಕುದಾರರು ಒಡಹುಟ್ಟಿದ ಗಂಡು ಮತ್ತು ಹೆಣ್ಣು ಆಗಿದ್ದರೆ, ಪುರುಷನಿಗೆ ಇಬ್ಬರು ಸ್ತ್ರೀಯರ ಪಾಲಿನಷ್ಟು ಹಕ್ಕಿದೆ. ನೀವು ದಾರಿತಪ್ಪದಿರಲಿಕ್ಕಾಗಿ ಅಲ್ಲಾಹನು ನಿಮಗೆ ಈ ವಿಚಾರಗಳನ್ನು ವಿವರಿಸಿ ಕೊಡುತ್ತಾನೆ. ಅಲ್ಲಾಹನು ಎಲ್ಲ ವಿಷಯಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.

177. 4:13 - ಟಿಪ್ಪಣಿ 133 ನೋಡಿರಿ.

سُوْرَةُ الْمَآئِدَةِ مَدَنِيَّةٌ وَّهِيَ مَعَ الْبَسْمَلَةِ مِائَةٌ وَّاِحْدٰى وَعِشْرُوْنَ اٰيَةً وَّسِتَّةَ عَشَرَ رُكُوْعًا

# 5. ಅಲ್‌ಮಾಇದಃ

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 121 ಆಯತ್‌ಗಳು ಹಾಗೂ 16 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

يٰۤاَيُّهَا الَّذِيْنَ اٰمَنُوْۤا اَوْفُوْا بِالْعُقُوْدِ ؕ اُحِلَّتْ لَكُمْ بَهِيْمَةُ الْاَنْعَامِ اِلَّا مَا يُتْلٰى عَلَيْكُمْ غَيْرَ مُحِلِّى الصَّيْدِ وَاَنْتُمْ حُرُمٌ ؕ اِنَّ اللّٰهَ يَحْكُمُ مَا يُرِيْدُ ②

**2.** ಎಲ್ಲೈ ವಿಶ್ವಾಸಿಗಳೇ, (ನೀವು) ಕರಾರುಗಳನ್ನು ಪಾಲಿಸಿರಿ. ನಿಮಗೆ (ಮುಂದೆ) ತಿಳಿಸಿಕೊಡಲಾಗುವವುಗಳನ್ನು ಹೊರತುಪಡಿಸಿದ ಚತುಷ್ಪಾದಿ ಪ್ರಾಣಿಗಳನ್ನು ನಿಮಗೆ ಧರ್ಮಬದ್ಧಗೊಳಿಸಲಾಗಿದೆ. (ಆದರೆ ಹಜ್ಜ್ ಯಾತ್ರೆಯಲ್ಲಿ) ಇಹ್ರಾಮ್ ಕಟ್ಟಿರುವಾಗ ಬೇಟೆಯಾಡುವುದು ನ್ಯಾಯಬದ್ಧವೆಂದು ಬಗೆಯಬಾರದು. ನಿಶ್ಚಯವಾಗಿಯೂ ಅಲ್ಲಾಹನು ತಾನು ಇಚ್ಛಿಸುವ ಆದೇಶಗಳನ್ನು ನೀಡುತ್ತಾನೆ.

يٰۤاَيُّهَا الَّذِيْنَ اٰمَنُوْا لَا تُحِلُّوْا شَعَآئِرَ اللّٰهِ وَلَا الشَّهْرَ الْحَرَامَ وَلَا الْهَدْيَ وَلَا الْقَلَآئِدَ وَلَاۤ اٰمِّيْنَ الْبَيْتَ الْحَرَامَ يَبْتَغُوْنَ فَضْلًا مِّنْ رَّبِّهِمْ وَرِضْوَانًا ؕ وَاِذَا حَلَلْتُمْ فَاصْطَادُوْا ؕ وَلَا يَجْرِمَنَّكُمْ شَنَاٰنُ قَوْمٍ اَنْ صَدُّوْكُمْ عَنِ الْمَسْجِدِ الْحَرَامِ اَنْ تَعْتَدُوْا ۘ وَتَعَاوَنُوْا عَلَى الْبِرِّ وَالتَّقْوٰى ۪ وَلَا تَعَاوَنُوْا عَلَى الْاِثْمِ وَالْعُدْوَانِ ۪ وَاتَّقُوا اللّٰهَ ؕ اِنَّ اللّٰهَ شَدِيْدُ الْعِقَابِ ③

**3.** ಎಲ್ಲೈ ವಿಶ್ವಾಸಿಗಳೇ, ಅಲ್ಲಾಹನು ಪವಿತ್ರೀಕರಿಸಿದ ಕುರುಹುಗಳನ್ನು ನೀವು ಅಗೌರವದಿಂದ ಕಾಣಬೇಡಿರಿ. ಪವಿತ್ರ ಮಾಸವನ್ನೂ (ಬಲಿಕೊಡಲು) ಕೊಂಡೊಯ್ಯುವ ಮೃಗಗಳನ್ನೂ ಬಲಿಯರ್ಪಿಸಲ್ಪಡುವ ಸೂಚಕವಾಗಿ ಕೊರಳಿಗೆ ಪಟ್ಟಿ ಕಟ್ಟಿದ ಮೃಗಗಳನ್ನೂ ತಮ್ಮ ಪ್ರಭುವಿನ ಅನುಗ್ರಹ ಮತ್ತು ಸಂತೃಪ್ತಿಯನ್ನು ಅಪೇಕ್ಷಿಸುತ್ತಾ ಪವಿತ್ರ ಗೃಹ (ಕಅ್‌ಬ)ಕ್ಕೆ ಹೋಗುವವರನ್ನೂ ನೀವು ಅಗೌರವದಿಂದ ಕಾಣಬಾರದು. ನೀವು ಹಜ್ಜ್ ಕರ್ಮವನ್ನು ಪೂರ್ಣಗೊಳಿಸಿದ ನಂತರ ಬೇಟೆಯಾಡಬಹುದು. ಒಂದು ಜನತೆ ನಿಮ್ಮನ್ನು ಪವಿತ್ರ ಮಸೀದಿಯಿಂದ ತಡೆಗಟ್ಟಿ (ನಿಮ್ಮೊಡನೆ) ತೋರಿಸಿದ ವಿರೋಧವು ಅವರೊಡನೆ ಅನ್ಯಾಯದಿಂದ ವರ್ತಿಸುವರೆ ನಿಮ್ಮನ್ನು ಪ್ರೇರೇಪಿಸದಿರಲಿ. ಸತ್ಕರ್ಮಗಳಲ್ಲಿ ಮತ್ತು ಅಲ್ಲಾಹನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರಲ್ಲಿ ನೀವು





ಪರಸ್ಪರ ಸಹಕರಿಸಿರಿ. (ಆದರೆ) ಪಾಪಕರ್ಮ ಮತ್ತು ಅನ್ಯಾಯವೆಸಗುವುದರಲ್ಲಿ ನೀವು ಅನ್ಯೋನ್ಯ ಸಹಕರಿಸಬಾರದು. ಅಲ್ಲಾಹನ ಭಯಭಕ್ತಿಯಿರಿಸಿಕೊಳ್ಳಿರಿ. ಖಂಡಿತವಾಗಿಯೂ ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ.

حُرِّمَتْ عَلَيْكُمُ الْمَيْتَةُ وَالدَّمُ وَلَحْمُ الْخِنْزِيْرِ وَمَاۤ اُهِلَّ لِغَيْرِ اللّٰهِ بِهٖ وَالْمُنْخَنِقَةُ وَالْمَوْقُوْذَةُ وَالْمُتَرَدِّيَةُ وَالنَّطِيْحَةُ وَمَاۤ اَكَلَ السَّبُعُ اِلَّا مَا ذَكَّيْتُمْ ۫ وَمَا ذُبِحَ عَلَى النُّصُبِ وَاَنْ تَسْتَقْسِمُوْا بِالْاَزْلَامِ ؕ ذٰلِكُمْ فِسْقٌ ؕ اَلْيَوْمَ يَئِسَ الَّذِيْنَ كَفَرُوْا مِنْ دِيْنِكُمْ فَلَا تَخْشَوْهُمْ وَاخْشَوْنِ ؕ اَلْيَوْمَ اَكْمَلْتُ لَكُمْ دِيْنَكُمْ وَاَتْمَمْتُ عَلَيْكُمْ نِعْمَتِيْ وَرَضِيْتُ لَكُمُ الْاِسْلَامَ دِيْنًا ؕ فَمَنِ اضْطُرَّ فِيْ مَخْمَصَةٍ غَيْرَ مُتَجَانِفٍ لِّاِثْمٍ ۙ فَاِنَّ اللّٰهَ غَفُوْرٌ رَّحِيْمٌ ④

**4.** ಸತ್ತ ಪ್ರಾಣಿ, ರಕ್ತ, ಹಂದಿ ಮಾಂಸ, ಅಲ್ಲಾಹೇತರರ ನಾಮದಲ್ಲಿ ಅರ್ಪಿಸಲ್ಪಟ್ಟದ್ದು,[177A] ಉಸಿರು ಕಟ್ಟಿ ಸತ್ತದ್ದು, ಹೊಡೆದು ಸಾಯಿಸಿದ್ದು, ಬಿದ್ದು ಸತ್ತದ್ದು, ಕೊಂಬಿನಿಂದ ತಿವಿಯಲ್ಪಟ್ಟು ಸತ್ತದ್ದು, ಕ್ರೂರ ಪ್ರಾಣಿಗಳು ತಿಂದು ಬಾಕಿಯಾದದ್ದು (ಅವು ಪ್ರಾಣ ಬಿಡುವ ಮೊದಲು) ನೀವು ವಿಧಿ ಪ್ರಕಾರ ಕೊಯ್ದರೆ ಹೊರತು, ವಿಗ್ರಹಗಳಿಗೋಸ್ಕರ ಬಲಿಪೀಠದಲ್ಲಿ ವಧಿಸಲ್ಪಟ್ಟದ್ದು ಇತ್ಯಾದಿಗಳು ನಿಮಗೆ ನಿಷಿದ್ಧಗೊಳಿಸಲ್ಪಟ್ಟಿವೆ. (ಅದೇ ಪ್ರಕಾರ) ಬಾಣಗಳ ಮೂಲಕ ಅದೃಷ್ಟದ ಆಯ್ಕೆ ಮಾಡುವುದು ಸಹ (ನಿಮಗೆ ನಿಷಿದ್ಧಗೊಳಿಸಲಾಗಿದೆ). ಇದು ಅಧರ್ಮವಾಗಿದೆ. ಇಂದು ಅವಿಶ್ವಾಸಿಗಳು ನಿಮ್ಮ ಧರ್ಮಕ್ಕೆ ಹಾನಿಯುಂಟು ಮಾಡುವ ವಿಚಾರದಲ್ಲಿ ನಿರಾಶೆ ಹೊಂದಿದ್ದಾರೆ. ಆದ್ದರಿಂದ ನೀವು ಅವರಿಗೆ ಭಯಪಡಬೇಡಿರಿ; ನನಗೆ ಭಯಪಡಿರಿ. ಈ ದಿನ ನಿಮ್ಮ ಧರ್ಮವನ್ನು ನಿಮಗೆ ನಾನು ಪರಿಪೂರ್ಣಗೊಳಿಸಿರುವೆನು; ನನ್ನ ಅನುಗ್ರಹವನ್ನು ನಿಮಗೆ ಸಂಪೂರ್ಣವಾಗಿ ದಯಪಾಲಿಸಿರುವೆನು ಹಾಗೂ ಇಸ್ಲಾಮನ್ನು ನಿಮಗೆ ಧರ್ಮವಾಗಿ ತೃಪ್ತಿಪಟ್ಟಿರುವೆನು. ಆದರೆ ಯಾರಾದರೂ ಮನಃಪೂರ್ವಕ ಪಾಪದೆಡೆಗೆ ವಾಲದೆ, ಹಸಿವೆಯಿಂದ ಕಂಗೆಟ್ಟು (ಮೇಲೆ ಹೇಳಿದ ವಸ್ತುಗಳಿಂದ ಏನನ್ನಾದರೂ ತಿನ್ನಲು) ನಿರ್ಬಂಧಿತನಾದರೆ, ಆಗ ನಿಸ್ಸಂದೇಹವಾಗಿಯೂ ಅಲ್ಲಾಹನು ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

177A. 2:174 ರ ಟಿಪ್ಪಣಿ ನೋಡಿರಿ.

**5. ತಮಗೆ** (ಭಕ್ಷಿಸಲು) **ಧರ್ಮಬದ್ಧಗೊಳಿಸಿದ್ದು ಯಾವುವೆಂದು ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಪರಿಶುದ್ಧವಾದವು**[178] **ಎಲ್ಲವೂ ನಿಮಗೆ ಧರ್ಮಬದ್ಧಗೊಳಿಸಲ್ಪಟ್ಟಿವೆ. ಅಲ್ಲಾಹನು ನಿಮಗೆ ಕಲಿಸಿ ಕೊಟ್ಟಂತೆ, ನೀವು ಬೇಟೆಯಾಡಲು ತರಬೇತಿಗೊಳಿಸಿದ ಪ್ರಾಣಿಗಳು ನಿಮಗೋಸ್ಕರ ಹಿಡಿದು ತಂದವುಗಳನ್ನು ಸಹ ತಿನ್ನಿರಿ. ನೀವು ಅದರ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸಿರಿ. ಅಲ್ಲಾಹನ ಭಯವನ್ನೂ ಇರಿಸಿಕೊಳ್ಳಿರಿ. ಖಂಡಿತವಾಗಿಯೂ ಅಲ್ಲಾಹನು ಶೀಘ್ರವಾಗಿ ಲೆಕ್ಕತೆಗೆಯುವವನಾಗಿದ್ದಾನೆ.'**

يَسْـَٔلُونَكَ مَاذَآ أُحِلَّ لَهُمْ ۖ قُلْ أُحِلَّ
لَكُمُ ٱلطَّيِّبَٰتُ ۙ وَمَا عَلَّمْتُم مِّنَ
ٱلْجَوَارِحِ مُكَلِّبِينَ تُعَلِّمُونَهُنَّ مِمَّا
عَلَّمَكُمُ ٱللَّهُ ۖ فَكُلُوا۟ مِمَّآ أَمْسَكْنَ
عَلَيْكُمْ وَٱذْكُرُوا۟ ٱسْمَ ٱللَّهِ عَلَيْهِ ۖ وَٱتَّقُوا۟
ٱللَّهَ ۚ إِنَّ ٱللَّهَ سَرِيعُ ٱلْحِسَابِ ﴿٤﴾

**6. ಈ ದಿನ ನಿಮಗೆ ಎಲ್ಲ ಪರಿಶುದ್ಧ ವಸ್ತುಗಳನ್ನೂ ಧರ್ಮಬದ್ಧಗೊಳಿಸಲಾಗಿದೆ. ಗ್ರಂಥ ನೀಡಲ್ಪಟ್ಟವರ ಆಹಾರ ಸಹ ನಿಮಗೆ ಧರ್ಮಬದ್ಧ; ನಿಮ್ಮ ಆಹಾರ ಅವರಿಗೂ ಧರ್ಮಬದ್ಧ. ಸತ್ಯವಿಶ್ವಾಸಿಗಳಾದ ಚಾರಿತ್ರ್ಯವತಿಯರೂ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟವರ ಪೈಕಿ ಚಾರಿತ್ರ್ಯವತಿಯರೂ ಅವರ ವಿವಾಹ ಧನವನ್ನು ನೀವು ಅವರಿಗೆ ನೀಡುವಿರಾದರೆ** ವಿವಾಹ ಮಾಡಿ ಕೊಳ್ಳುವುದು ನಿಮಗೆ ಅನುಮತಿಸಲ್ಪಟ್ಟಿದೆ **- ಚಾರಿತ್ರ್ಯವಂತ ರಾಗಿದ್ದುಕೊಂಡು; ವ್ಯಭಿಚಾರ ಅಥವಾ ಗುಪ್ತ ಅನೈತಿಕ ಸಂಬಂಧವಿರಿಸಿಕೊಂಡವರಾಗದೆ. ಯಾರು ಸತ್ಯವಿಶ್ವಾಸ ವನ್ನು ನಿರಾಕರಿಸುತ್ತಾನೋ, ನಿಶ್ಚಯ ವಾಗಿಯೂ ಅವನ ಕರ್ಮ ನಿಷ್ಫಲವಾಗುತ್ತದೆ. ಪರಲೋಕದಲ್ಲಿ ಅವನು ನಷ್ಟ ಹೊಂದಿದವರೊಂದಿಗೆ ಸೇರುವನು.**

ٱلْيَوْمَ أُحِلَّ لَكُمُ ٱلطَّيِّبَٰتُ ۖ وَطَعَامُ
ٱلَّذِينَ أُوتُوا۟ ٱلْكِتَٰبَ حِلٌّ لَّكُمْ وَ
طَعَامُكُمْ حِلٌّ لَّهُمْ ۖ وَٱلْمُحْصَنَٰتُ مِنَ
ٱلْمُؤْمِنَٰتِ وَٱلْمُحْصَنَٰتُ مِنَ ٱلَّذِينَ
أُوتُوا۟ ٱلْكِتَٰبَ مِن قَبْلِكُمْ إِذَآ
ءَاتَيْتُمُوهُنَّ أُجُورَهُنَّ مُحْصِنِينَ غَيْرَ
مُسَٰفِحِينَ وَلَا مُتَّخِذِىٓ أَخْدَانٍ ۗ وَمَن
يَكْفُرْ بِٱلْإِيمَٰنِ فَقَدْ حَبِطَ عَمَلُهُۥ وَ
هُوَ فِى ٱلْءَاخِرَةِ مِنَ ٱلْخَٰسِرِينَ ﴿٥﴾

**7. ಎಲ್ಲೈ ವಿಶ್ವಾಸಿಗಳೇ, ನೀವು ನಮಾಝಿಗೆ ಸಿದ್ಧರಾದರೆ, ನಿಮ್ಮ ಮುಖಗಳನ್ನು ಮತ್ತು ಮೊಣಕೈ ಗಂಟಿನ ವರೆಗೆ ಕೈಗಳನ್ನು ತೊಳೆಯಿರಿ;** (ಒದ್ದೆಕೈಗಳಿಂದ) **ನಿಮ್ಮ ತಲೆಗಳನ್ನು ಸವರಿರಿ; ಪಾದಗಂಟುಗಳ ತನಕ ಕಾಲು**

يَٰٓأَيُّهَا ٱلَّذِينَ ءَامَنُوٓا۟ إِذَا قُمْتُمْ إِلَى
ٱلصَّلَوٰةِ فَٱغْسِلُوا۟ وُجُوهَكُمْ وَأَيْدِيَكُمْ
إِلَى ٱلْمَرَافِقِ وَٱمْسَحُوا۟ بِرُءُوسِكُمْ وَ

178. ಇಸ್ಲಾಮಿನ ಅಧ್ಯಾಪನೆ ಪ್ರಕಾರ ಆರೋಗ್ಯ ಮತ್ತು ಸ್ವಭಾವಕ್ಕೆ ಹಾನಿಕರವಲ್ಲದ ಎಲ್ಲ ಆಹಾರ ವಸ್ತುಗಳೂ ಪರಿಶುದ್ಧ ಮತ್ತು ಧರ್ಮಬದ್ಧವಾಗಿವೆ.





**ಗಳನ್ನೂ** ತೊಳೆಯಿರಿ. **ನೀವು 'ಜನಾಬತ್'**[179] **ಉಳ್ಳವರಾಗಿದ್ದರೆ** (ಸ್ನಾನ ಮಾಡಿ) **ಶುದ್ಧಿಯಾಗಿರಿ. ನೀವು ರೋಗ ಪೀಡಿತರಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ** (ನಿಮಗೆ ಅಶುದ್ಧಿ ಉಂಟಾದಲ್ಲಿ ತಯಮ್ಮುಮ್ ಮಾಡಿರಿ) **ಅಥವಾ ನಿಮ್ಮಲ್ಲಿ ಯಾರಾದರೂ ಬಹಿರ್ದೆಸೆಗೆ ಹೋಗಿದ್ದು** (ನೀರು ಸಿಗದಿದ್ದರೆ) **ಅಥವಾ ನಿಮ್ಮಲ್ಲಿ ಯಾರಾದರೂ ಸ್ತ್ರೀ ಸಂಸರ್ಗ ಮಾಡಿದ್ದು ನೀರು ಸಿಗದಿದ್ದರೆ ಶುದ್ಧವಾದ ಧೂಳನ್ನು ಹುಡುಕಿ ಅದರಿಂದ ನಿಮ್ಮ ಮುಖವನ್ನೂ ಕೈಗಳನ್ನೂ ಸವರಿರಿ** (ತಯಮ್ಮುಮ್ ಮಾಡಿರಿ). **ನಿಮಗೆ ಯಾವ ರೀತಿಯ ತೊಂದರೆಯನ್ನುಂಟು ಮಾಡಲಿಕ್ಕೂ ಅಲ್ಲಾಹನು ಬಯಸುವುದಿಲ್ಲ. ಆದರೆ ನಿಮ್ಮನ್ನು ಶುದ್ಧಗೊಳಿಸಲಿಕ್ಕೂ ನಿಮಗೆ ಅವನ ಅನುಗ್ರಹಗಳನ್ನು ಪೂರ್ಣವಾಗಿ ನೀಡಲಿಕ್ಕೂ ಅವನು ಇಚ್ಛಿಸುತ್ತಾನೆ; ಆ ಕಾರಣದಿಂದ ನೀವು ಕೃತಜ್ಞರಾಗಲಿಕ್ಕೆ.**

أَرْجُلَكُمْ إِلَى ٱلْكَعْبَيْنِ ۚ وَإِن كُنتُمْ
جُنُبًا فَٱطَّهَّرُوا۟ ۚ وَإِن كُنتُم مَّرْضَىٰٓ أَوْ
عَلَىٰ سَفَرٍ أَوْ جَآءَ أَحَدٌ مِّنكُم مِّنَ
ٱلْغَآئِطِ أَوْ لَٰمَسْتُمُ ٱلنِّسَآءَ فَلَمْ
تَجِدُوا۟ مَآءً فَتَيَمَّمُوا۟ صَعِيدًا طَيِّبًا
فَٱمْسَحُوا۟ بِوُجُوهِكُمْ وَأَيْدِيكُم
مِّنْهُ ۚ مَا يُرِيدُ ٱللَّهُ لِيَجْعَلَ عَلَيْكُم
مِّنْ حَرَجٍ وَلَٰكِن يُرِيدُ لِيُطَهِّرَكُمْ
وَلِيُتِمَّ نِعْمَتَهُۥ عَلَيْكُمْ لَعَلَّكُمْ
تَشْكُرُونَ ﴿٦﴾

**8. ನಿಮ್ಮ ಮೇಲಿರುವ ಅಲ್ಲಾಹನ ಅನುಗ್ರಹವನ್ನೂ ಅವನು ನಿಮ್ಮೊಡನೆ ಮಾಡಿದ ಕರಾರನ್ನೂ ಸ್ಮರಿಸಿರಿ. ಆಗ, 'ನಾವು ಆಲಿಸಿದೆವು ಮತ್ತು ನಾವು ಅನುಸರಿಸಿದೆವು' ಎಂದು ನೀವು ಹೇಳಿದ್ದೀರಿ. ನೀವು ಅಲ್ಲಾಹನ ಭಯಭಕ್ತಿಯಿರಿಸಿಕೊಳ್ಳಿರಿ. ನಿಮ್ಮ ಮನಸ್ಸಿನಲ್ಲಿರುವುದೇನೆಂದು ಅಲ್ಲಾಹನು ನಿಸ್ಸಂದೇಹವಾಗಿಯೂ ತಿಳಿಯುತ್ತಾನೆ.**

وَٱذْكُرُوا۟ نِعْمَةَ ٱللَّهِ عَلَيْكُمْ وَمِيثَٰقَهُ
ٱلَّذِى وَاثَقَكُم بِهِۦٓ إِذْ قُلْتُمْ سَمِعْنَا وَ
أَطَعْنَا ۖ وَٱتَّقُوا۟ ٱللَّهَ ۚ إِنَّ ٱللَّهَ عَلِيمٌۢ
بِذَاتِ ٱلصُّدُورِ ﴿٧﴾

**9. ಎಲ್ಲೈ ಸತ್ಯವಿಶ್ವಾಸಿಗಳೇ, ನೀವು ನ್ಯಾಯೋಚಿತವಾಗಿ ಸಾಕ್ಷ್ಯವಹಿಸುವವರಾಗಿದ್ದುಕೊಂಡು, ಅಲ್ಲಾಹನ ಮಾರ್ಗದಲ್ಲಿ ಸ್ಥಿರ ಚಿತ್ತರಾಗಿರಿ. ಒಂದು ಜನಾಂಗದವರ ಶತ್ರುತ್ವ ಅವರೊಡನೆ ಅನ್ಯಾಯವಾಗಿ ವರ್ತಿಸಲು ನಿಮ್ಮನ್ನು ಪ್ರೇರೇಪಿಸದಿರಲಿ.** (ಸದಾ) **ನೀವು ನ್ಯಾಯಯುತವಾಗಿ ವರ್ತಿಸಿರಿ. ಅದು ದೇವಭಕ್ತಿಗೆ ಅತಿ ಸಮೀಪವಾದುದು. ನೀವು ಅಲ್ಲಾಹನ ಭಯಭಕ್ತಿಯಿರಿಸಿಕೊಳ್ಳಿರಿ. ನಿಸ್ಸಂಶಯವಾಗಿಯೂ ಅಲ್ಲಾಹನು ನೀವು ಮಾಡುವುದನ್ನೆಲ್ಲ ಬಲ್ಲವನಾಗಿದ್ದಾನೆ.**

يَٰٓأَيُّهَا ٱلَّذِينَ ءَامَنُوا۟ كُونُوا۟ قَوَّٰمِينَ
لِلَّهِ شُهَدَآءَ بِٱلْقِسْطِ ۖ وَلَا يَجْرِمَنَّكُمْ
شَنَـَٔانُ قَوْمٍ عَلَىٰٓ أَلَّا تَعْدِلُوا۟ ۚ ٱعْدِلُوا۟
هُوَ أَقْرَبُ لِلتَّقْوَىٰ ۖ وَٱتَّقُوا۟ ٱللَّهَ ۚ إِنَّ
ٱللَّهَ خَبِيرٌۢ بِمَا تَعْمَلُونَ ﴿٨﴾

179. ಲೈಂಗಿಕ ಸಂಪರ್ಕದಿಂದ ಅಥವಾ ವೀರ್ಯ ಸ್ಖಲನದಿಂದ ಉಂಟಾಗುವ ಅಶುದ್ಧಿ.

**10.** ಸತ್ಯವಿಶ್ವಾಸ ಹೊಂದಿ ಸತ್ಕರ್ಮ ಮಾಡುವವರೊಡನೆ, ಅವರಿಗೆ ಕ್ಷಮೆ ಮತ್ತು ಹಿರಿದಾದ ಪ್ರತಿಫಲವಿದೆಯೆಂದು ಅಲ್ಲಾಹನು ವಾಗ್ದಾನ ಮಾಡಿರುವನು.

وَعَدَ اللَّهُ الَّذِينَ آمَنُوا وَعَمِلُوا الصَّالِحَاتِ ۙ لَهُم مَّغْفِرَةٌ وَأَجْرٌ عَظِيمٌ ﴿١٠﴾

**11.** ಅವಿಶ್ವಾಸಿಗಳೂ ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುವವರೂ ನರಕವಾಸಿಗಳಾಗಿದ್ದಾರೆ.

وَالَّذِينَ كَفَرُوا وَكَذَّبُوا بِآيَاتِنَا أُولَٰئِكَ أَصْحَابُ الْجَحِيمِ ﴿١١﴾

**12.** ವಿಶ್ವಾಸಿಗಳೇ, ಒಂದು ಕೋಮಿನವರು ನಿಮ್ಮ ಮೇಲೆ ಕೈಯೆತ್ತಲು ಉದ್ದೇಶಿಸಿದಾಗ ನಿಮ್ಮ ಮೇಲೆ ಉಂಟಾದ ಅಲ್ಲಾಹನ ಅನುಗ್ರಹವನ್ನು ಸ್ಮರಿಸಿರಿ. ಅವನು ಅವರ ಕೈಗಳನ್ನು ನಿಮ್ಮಿಂದ ತಡೆದನು. ನೀವು ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ. ಸತ್ಯವಿಶ್ವಾಸಿಗಳು (ತಮ್ಮ ಎಲ್ಲ ಕಾರ್ಯಗಳಲ್ಲೂ) ಅಲ್ಲಾಹನಲ್ಲಿ ಭರವಸೆ ಇಡಬೇಕಾಗಿದೆ.

يَا أَيُّهَا الَّذِينَ آمَنُوا اذْكُرُوا نِعْمَتَ اللَّهِ عَلَيْكُمْ إِذْ هَمَّ قَوْمٌ أَن يَبْسُطُوا إِلَيْكُمْ أَيْدِيَهُمْ فَكَفَّ أَيْدِيَهُمْ عَنكُمْ ۖ وَاتَّقُوا اللَّهَ ۚ وَعَلَى اللَّهِ فَلْيَتَوَكَّلِ الْمُؤْمِنُونَ ﴿١٢﴾

**13.** ದಿಟವಾಗಿಯೂ ಅಲ್ಲಾಹನು ಇಸ್ರಾಈಲ್ ಸಂತತಿಗಳಿಂದ ಕರಾರನ್ನು ಪಡೆದುಕೊಂಡಿದ್ದಾನೆ. ನಾವು ಅವರಿಂದ ಹನ್ನೆರಡು ಮೇಲ್ನೋಟಗಾರರನ್ನು ನಿಯೋಜಿಸಿದೆವು. ಅಲ್ಲಾಹನು ಅವರೊಡನೆ ಹೇಳಿದನು: 'ಖಂಡಿತವಾಗಿಯೂ ನಾನು ನಿಮ್ಮೊಂದಿಗಿದ್ದೇನೆ. ನೀವು ಪ್ರಾರ್ಥನೆಯನ್ನು ನಿಷ್ಠೆಯಿಂದ ನಿರ್ವಹಿಸಿ, ಝಕಾತ್ ಕೊಟ್ಟು, ನನ್ನ ಸಂದೇಶವಾಹಕರನ್ನು ನಂಬಿ, ಅವರಿಗೆ ನೆರವನ್ನಿತ್ತು, ಅಲ್ಲಾಹನಿಗೆ (ನಿಮ್ಮ ಧನದಿಂದ ಒಂದಂಶವನ್ನು) ಉತ್ತಮ ರೀತಿಯಲ್ಲಿ ಸಾಲಕೊಟ್ಟರೆ ಖಂಡಿತವಾಗಿಯೂ ನಾನು ನಿಮ್ಮ ಲೋಪದೋಷಗಳನ್ನು ನಿವಾರಿಸಿ, ಕೆಳಭಾಗದಲ್ಲಿ ಸರಿತುಗಳು ಹರಿಯುವ ಸ್ವರ್ಗೀಯ ತೋಟಗಳೊಳಗೆ ನಿಮಗೆ ಪ್ರವೇಶ ನೀಡುವೆನು. ಆದರೆ, ಆ ಬಳಿಕ ನಿಮ್ಮ ಪೈಕಿ ಯಾರಾದರೂ ನಿರಾಕರಿಸಿದರೆ, ನಿಶ್ಚಯವಾಗಿಯೂ ಅವನು ಸತ್ಪಥದಿಂದ ಅಗಲಿ ಹೋಗಿರುವನು (ಎಂದು ತಿಳಿದುಕೊಳ್ಳಲಿ).

وَلَقَدْ أَخَذَ اللَّهُ مِيثَاقَ بَنِي إِسْرَائِيلَ وَبَعَثْنَا مِنْهُمُ اثْنَيْ عَشَرَ نَقِيبًا ۖ وَقَالَ اللَّهُ إِنِّي مَعَكُمْ ۖ لَئِنْ أَقَمْتُمُ الصَّلَاةَ وَآتَيْتُمُ الزَّكَاةَ وَآمَنتُم بِرُسُلِي وَعَزَّرْتُمُوهُمْ وَأَقْرَضْتُمُ اللَّهَ قَرْضًا حَسَنًا لَّأُكَفِّرَنَّ عَنكُمْ سَيِّئَاتِكُمْ وَلَأُدْخِلَنَّكُمْ جَنَّاتٍ تَجْرِي مِن تَحْتِهَا الْأَنْهَارُ ۚ فَمَن كَفَرَ بَعْدَ ذَٰلِكَ مِنكُمْ فَقَدْ ضَلَّ سَوَاءَ السَّبِيلِ ﴿١٣﴾

**14.** ಹಾಗೆ ಅವರು ತಮ್ಮ ಕರಾರನ್ನು ಉಲ್ಲಂಘಿಸಿದ ಕಾರಣದಿಂದ ನಾವು ಅವರನ್ನು ಶಪಿಸಿದೆವು ಮತ್ತು ಅವರ

فَبِمَا نَقْضِهِم مِّيثَاقَهُمْ لَعَنَّاهُمْ وَ





ಹೃದಯಗಳನ್ನು ಕಠಿಣಗೊಳಿಸಿದೆವು. ಅವರು (ದೈವಿಕ) ವಚನಗಳನ್ನು ಸ್ಥಾನಪಲ್ಲಟಗೊಳಿಸುತ್ತಾರೆ ಹಾಗೂ ಅವರಿಗೆ ಉಪದೇಶಿಸಲಾದ ವಿಚಾರಗಳಲ್ಲಿ ಒಂದಂಶವನ್ನು ಅವರು ಮರೆತುಬಿಟ್ಟಿದ್ದಾರೆ. ಅವರಲ್ಲಿ ಕೆಲವರನ್ನು ಬಿಟ್ಟು ಉಳಿದವರ ಏನಾದರೂ ವಂಚನೆಯ ಬಗ್ಗೆ ಸದಾ ನಿನಗೆ ಸಮಾಚಾರ ಲಭಿಸುವುದು. ಆದ್ದರಿಂದ ನೀನು ಅವರಿಗೆ ಕ್ಷಮೆ ನೀಡು ಮತ್ತು ಸಹನೆಯಿಂದ ವರ್ತಿಸು. ನಿಸ್ಸಂದೇಹವಾಗಿಯೂ ಅಲ್ಲಾಹನು ಸಜ್ಜನರನ್ನು ಪ್ರೀತಿಸುತ್ತಾನೆ.

جَعَلْنَا قُلُوبَهُمْ قَاسِيَةً ۖ يُحَرِّفُونَ الْكَلِمَ عَن مَّوَاضِعِهِ ۙ وَنَسُوا حَظًّا مِّمَّا ذُكِّرُوا بِهِ ۚ وَلَا تَزَالُ تَطَّلِعُ عَلَىٰ خَائِنَةٍ مِّنْهُمْ إِلَّا قَلِيلًا مِّنْهُمْ ۖ فَاعْفُ عَنْهُمْ وَاصْفَحْ ۚ إِنَّ اللَّهَ يُحِبُّ الْمُحْسِنِينَ ﴿١٤﴾

**15.** 'ನಾವು ಕ್ರಿಸ್ತೀಯರು' ಎಂದು ಹೇಳುವವರಿಂದ ಸಹ ನಾವು ಕರಾರು ಪಡೆದಿದ್ದೆವು. ಆದರೆ ಅವರಿಗೆ ನೀಡಲಾದ ಉಪದೇಶಗಳಿಂದ ಒಂದಂಶವನ್ನು ಅವರು (ಸಹ) ಮರೆತು ಬಿಟ್ಟರು. ಆದ್ದರಿಂದ ನಾವು ಅವರ ಮಧ್ಯೆ ಅಂತ್ಯದಿನದ ವರೆಗೆ ಶತ್ರುತ್ವ ಮತ್ತು ದ್ವೇಷ ಭಾವನೆ ಉಂಟಾಗುವಂತೆ ಮಾಡಿದೆವು.[179A] ಅವರ ವರ್ತನೆಗಳ ಕುರಿತು ಅಲ್ಲಾಹನು ಅವರಿಗೆ ಬೇಗನೆ ತಿಳಿಸಿಕೊಡುವನು.

وَمِنَ الَّذِينَ قَالُوا إِنَّا نَصَارَىٰ أَخَذْنَا مِيثَاقَهُمْ فَنَسُوا حَظًّا مِّمَّا ذُكِّرُوا بِهِ فَأَغْرَيْنَا بَيْنَهُمُ الْعَدَاوَةَ وَالْبَغْضَاءَ إِلَىٰ يَوْمِ الْقِيَامَةِ ۚ وَسَوْفَ يُنَبِّئُهُمُ اللَّهُ بِمَا كَانُوا يَصْنَعُونَ ﴿١٥﴾

**16.** ಎಲೈ ಗ್ರಂಥದವರೇ, ಗ್ರಂಥದಲ್ಲಿ ನೀವು ಮರೆಮಾಚಿಟ್ಟಿದ್ದ ಅನೇಕ ವಿಚಾರಗಳನ್ನು ನಿಮಗೆ ಬಹಿರಂಗಪಡಿಸುವ ಮತ್ತು ಹಲವು ಸಂಗತಿಗಳನ್ನು (ನಿಮಗೆ) ಕ್ಷಮಿಸಿಕೊಡುವ ನಮ್ಮ ಸಂದೇಶವಾಹಕ ನಿಮ್ಮೆಡೆಗೆ ಬಂದಿದ್ದಾರೆ. ನಿಶ್ಚಯವಾಗಿಯೂ ಅಲ್ಲಾಹನಿಂದ ಒಂದು ಪ್ರಕಾಶ ಮತ್ತು ಸ್ಪಷ್ಟವಾದೊಂದು ಗ್ರಂಥ ನಿಮಗೆ ಬಂದಿರುತ್ತದೆ.

يَا أَهْلَ الْكِتَابِ قَدْ جَاءَكُمْ رَسُولُنَا يُبَيِّنُ لَكُمْ كَثِيرًا مِّمَّا كُنتُمْ تُخْفُونَ مِنَ الْكِتَابِ وَيَعْفُوا عَن كَثِيرٍ ۚ قَدْ جَاءَكُم مِّنَ اللَّهِ نُورٌ وَكِتَابٌ مُّبِينٌ ﴿١٦﴾

**17.** ಅದರ ಮೂಲಕ ಅಲ್ಲಾಹನು ತನ್ನ ಸಂತೃಪ್ತಿಯನ್ನು ಬಯಸುವವರಿಗೆ ರಕ್ಷಾ ಮಾರ್ಗದೆಡೆಗೆ ದಾರಿ ತೋರಿಸುತ್ತಾನೆ; ತನ್ನ ಇಚ್ಛಾನುಸಾರ ಅವನು ಅವರನ್ನು ಅಂಧಕಾರಗಳಿಂದೆಲ್ಲ ಹೊರಗೆ ತಂದು ಪ್ರಕಾಶದೆಡೆಗೆ ಕೊಂಡೊಯ್ಯುತ್ತಾನೆ ಹಾಗೂ ಅವರಿಗೆ ಸತ್ಪಥದೆಡೆಗೆ ದಾರಿ ತೋರಿಸುತ್ತಾನೆ.

يَهْدِي بِهِ اللَّهُ مَنِ اتَّبَعَ رِضْوَانَهُ سُبُلَ السَّلَامِ وَيُخْرِجُهُم مِّنَ الظُّلُمَاتِ إِلَى النُّورِ بِإِذْنِهِ وَيَهْدِيهِمْ إِلَىٰ صِرَاطٍ مُّسْتَقِيمٍ ﴿١٧﴾

179A. ಇದೊಂದು ಮಹತ್ತರ ಭವಿಷ್ಯವಾಣಿಯಾಗಿದೆ. ಕ್ರೈಸ್ತ ಸಮುದಾಯದ ಆಂತರಿಕ ಬಿಕ್ಕಟಿನ ಬಗ್ಗೆ ಇಲ್ಲಿ ಹೇಳಲಾಗಿದೆ.

**18.** 'ಖಂಡಿತವಾಗಿಯೂ ಅಲ್ಲಾಹನು ಮರ್ಯಮ್ ಪುತ್ರ ಮಸೀಹ್" ಎಂದು ಹೇಳುವವರು[180] ನಿಸ್ಸಂಶಯವಾಗಿಯೂ ಅವಿಶ್ವಾಸಿಗಳಾಗಿದ್ದಾರೆ. ಹೇಳು: 'ಅಲ್ಲಾಹನು ಮರ್ಯಮ್ ಪುತ್ರ ಮಸೀಹನನ್ನೂ ಅವರ ಮಾತೆಯನನ್ನೂ ಭೂಮಿಯಲ್ಲಿರುವ ಎಲ್ಲರನ್ನೂ ನಾಶಪಡಿಸಲು ಬಯಸಿದರೆ ಅಲ್ಲಾಹನ ವಿರುದ್ಧವಾಗಿ ಯಾರಿಗೆ ಏನು ಶಕ್ತಿಯಿದೆ?' ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಆಧಿಪತ್ಯ ಅಲ್ಲಾಹನಿಗೆಯೇ ಇದೆ. ತಾನು ಬಯಸುವುದನ್ನು ಅವನು ಸೃಷ್ಟಿಸುತ್ತಾನೆ. ಅಲ್ಲಾಹನು ಸರ್ವ ಕಾರ್ಯಗಳನ್ನೂ ಮಾಡಲು ಸಮರ್ಥನು.

لَقَدْ كَفَرَ الَّذِينَ قَالُوا إِنَّ اللَّهَ هُوَ الْمَسِيحُ ابْنُ مَرْيَمَ ۚ قُلْ فَمَن يَمْلِكُ مِنَ اللَّهِ شَيْئًا إِنْ أَرَادَ أَن يُهْلِكَ الْمَسِيحَ ابْنَ مَرْيَمَ وَأُمَّهُ وَمَن فِي الْأَرْضِ جَمِيعًا ۗ وَلِلَّهِ مُلْكُ السَّمَاوَاتِ وَالْأَرْضِ وَمَا بَيْنَهُمَا ۚ يَخْلُقُ مَا يَشَاءُ ۚ وَاللَّهُ عَلَىٰ كُلِّ شَيْءٍ قَدِيرٌ ﴿١٨﴾

**19.** 'ನಾವು ಅಲ್ಲಾಹನ ಸಂತತಿಗಳು ಮತ್ತು ಅವನ ಇಷ್ಟ ಜನರು' ಎಂದು ಯಹೂದ್ಯರೂ ಕ್ರೈಸ್ತರೂ ಹೇಳುತ್ತಾರೆ. ನೀನು ಹೇಳು: 'ಹಾಗಾದರೆ ನಿಮ್ಮ ಅಪರಾಧಕ್ಕೆ ಅವನು ನಿಮ್ಮನ್ನು ಶಿಕ್ಷಿಸುವುದೇತಕ್ಕೆ? (ಹಾಗಲ್ಲ) ಬದಲು, ನೀವು ಅವನು ಸೃಷ್ಟಿಸಿದ ಮನುಷ್ಯರು ಮಾತ್ರ.' ತಾನು ಇಚ್ಛಿಸುವವರನ್ನು ಅವನು ಕ್ಷಮಿಸುತ್ತಾನೆ; ತಾನು ಇಚ್ಛಿಸುವವರನ್ನು ಅವನು ಶಿಕ್ಷಿಸುತ್ತಾನೆ. ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಆಧಿ ಪತ್ಯ ಅಲ್ಲಾಹನಿಗೆಯೇ ಇದೆ. ಅವನೆಡೆಗೆಯೇ (ಎಲ್ಲರ) ಮರಳುವಿಕೆ.

وَقَالَتِ الْيَهُودُ وَالنَّصَارَىٰ نَحْنُ أَبْنَاءُ اللَّهِ وَأَحِبَّاؤُهُ ۚ قُلْ فَلِمَ يُعَذِّبُكُم بِذُنُوبِكُم ۖ بَلْ أَنتُم بَشَرٌ مِّمَّنْ خَلَقَ ۚ يَغْفِرُ لِمَن يَشَاءُ وَيُعَذِّبُ مَن يَشَاءُ ۚ وَلِلَّهِ مُلْكُ السَّمَاوَاتِ وَالْأَرْضِ وَمَا بَيْنَهُمَا ۖ وَإِلَيْهِ الْمَصِيرُ ﴿١٩﴾

**20.** ಎಲೈ ಗ್ರಂಥದವರೇ, ಸಂದೇಶವಾಹಕರ ಆಗಮನ ಸ್ಥಗಿತಗೊಂಡಿದ್ದ ಒಂದು ಕಾಲದಲ್ಲಿ (ನಮ್ಮ ಬಗ್ಗೆ) ನಿಮಗೆ ವಿವರಿಸಿಕೊಡುವ ನಮ್ಮ ಸಂದೇಶವಾಹಕ ನಿಮ್ಮೆಡೆಗೆ ಬಂದಿದ್ದಾರೆ - 'ಶುಭವಾರ್ತೆ ನೀಡುವವನಾಗಲಿ ಎಚ್ಚರಿಕೆ ಕೊಡುವವನಾಗಲಿ ಯಾರೂ ನಮ್ಮ ಬಳಿಗೆ ಬರಲಿಲ್ಲ' ಎಂದು ನೀವು ಹೇಳದಿರಲಿಕ್ಕಾಗಿ. ಇದೋ ನಿಮ್ಮ ಬಳಿಗೆ ಶುಭವಾರ್ತೆ ನೀಡುವ ಹಾಗೂ ಮುನ್ನೆಚ್ಚರಿಕೆ ಕೊಡುವ ಈ ಪ್ರವಾದಿ ಬಂದಿರುವರು. ಎಲ್ಲ ಕಾರ್ಯಗಳನ್ನೂ ಮಾಡಲು ಅಲ್ಲಾಹನು ಸಮರ್ಥನು.

يَا أَهْلَ الْكِتَابِ قَدْ جَاءَكُمْ رَسُولُنَا يُبَيِّنُ لَكُمْ عَلَىٰ فَتْرَةٍ مِّنَ الرُّسُلِ أَن تَقُولُوا مَا جَاءَنَا مِن بَشِيرٍ وَلَا نَذِيرٍ ۖ فَقَدْ جَاءَكُم بَشِيرٌ وَنَذِيرٌ ۗ وَاللَّهُ عَلَىٰ كُلِّ شَيْءٍ قَدِيرٌ ﴿٢٠﴾ ع

180. ಯೇಸುಕ್ರಿಸ್ತರನ್ನು ದೇವರೆಂದು ಹೇಳುವವರು ಎಂದು ತಾತ್ಪರ್ಯ.





**21.** ಮೂಸಾ ತನ್ನ ಜನತೆಯೊಡನೆ ಹೇಳಿದ ಸಂದರ್ಭ: 'ಓ ನನ್ನ ಜನರೇ, ನಿಮ್ಮ ಪೈಕಿ (ಅಲ್ಲಾಹನು) ಪ್ರವಾದಿ ಗಳನ್ನು ನಿಯುಕ್ತಗೊಳಿಸಿ, ನಿಮ್ಮನ್ನು ರಾಜರನ್ನಾಗಿ ಮಾಡಿ, ಲೋಕದ ಯಾವುದೇ ಜನತೆಗೆ ನೀಡದಿದ್ದ ಅನುಗ್ರಹಗಳನ್ನು ನಿಮಗೆ ನೀಡಿರುವಾಗ, ಅಲ್ಲಾಹನು ನಿಮಗೆ ನೀಡಿದ ಅನುಗ್ರಹವನ್ನು ನೀವು ಸ್ಮರಿಸಿರಿ.

وَإِذْ قَالَ مُوسَىٰ لِقَوْمِهِ يَا قَوْمِ اذْكُرُوا نِعْمَةَ اللَّهِ عَلَيْكُمْ إِذْ جَعَلَ فِيكُمْ أَنبِيَاءَ وَجَعَلَكُم مُّلُوكًا وَآتَاكُم مَّا لَمْ يُؤْتِ أَحَدًا مِّنَ الْعَالَمِينَ ﴿٢١﴾

**22.** 'ಓ ನನ್ನ ಜನರೇ, ಅಲ್ಲಾಹನು ನಿಮಗೋಸ್ಕರ ಗೊತ್ತುಮಾಡಿದ ಪವಿತ್ರ ಭೂಮಿಯನ್ನು ಪ್ರವೇಶಿಸಿರಿ. ನೀವು ಬೆನ್ನು ತಿರುಗಿಸಿ ಹೋಗಬೇಡಿರಿ. ಹಾಗೆ ಮಾಡಿದರೆ ನೀವು ಸೋಲನುಭವಿಸಿ ಮರಳಬೇಕಾದೀತು.'

يَا قَوْمِ ادْخُلُوا الْأَرْضَ الْمُقَدَّسَةَ الَّتِي كَتَبَ اللَّهُ لَكُمْ وَلَا تَرْتَدُّوا عَلَىٰ أَدْبَارِكُمْ فَتَنقَلِبُوا خَاسِرِينَ ﴿٢٢﴾

**23.** ಅವರು (ಉತ್ತರವಾಗಿ) ಹೇಳಿದರು: 'ಎಲೈ ಮೂಸಾ, ಆ ಪ್ರದೇಶದಲ್ಲಿ ನಿಷ್ಠುರರೂ ಶಕ್ತಿಶಾಲಿಗಳೂ ಆದ ಜನರಿದ್ದಾರೆ.[181] ಅವರು ಅಲ್ಲಿಂದ ನಿರ್ಗಮಿಸುವ ವರೆಗೆ ನಾವು ಖಂಡಿತವಾಗಿಯೂ ಅಲ್ಲಿ ಪ್ರವೇಶಿಸಲಾರೆವು. ಅವರು ಅಲ್ಲಿಂದ ಹೊರಟು ಹೋದರೆ ನಾವು ಅದನ್ನು ಪ್ರವೇಶಿಸುವೆವು.'

قَالُوا يَا مُوسَىٰ إِنَّ فِيهَا قَوْمًا جَبَّارِينَ وَإِنَّا لَن نَّدْخُلَهَا حَتَّىٰ يَخْرُجُوا مِنْهَا فَإِن يَخْرُجُوا مِنْهَا فَإِنَّا دَاخِلُونَ ﴿٢٣﴾

**24.** (ಅಲ್ಲಾಹನ) ಭಯವಿರಿಸಿಕೊಂಡವರ ಪೈಕಿ ಈರ್ವರು[182] - ಅವರೀರ್ವರನ್ನೂ ಅಲ್ಲಾಹನು ಅನುಗ್ರಹಿಸಿದ್ದನು. - (ಅವರೊಡನೆ) ಹೇಳಿದರು: 'ನೀವು ಅವರಿಗೆದುರಾಗಿ ಬಾಗಿಲ ಮೂಲಕ ಮುನ್ನುಗ್ಗಿರಿ. ನೀವು ಒಮ್ಮೆ ಪ್ರವೇಶಿಸಿ ಬಿಟ್ಟರೆ ಖಂಡಿತವಾಗಿಯೂ ನೀವು ವಿಜಯಶಾಲಿಗಳಾಗುವಿರಿ. ನೀವು ಸತ್ಯವಿಶ್ವಾಸಿಗಳೆಂದಾದರೆ ಅಲ್ಲಾಹನಲ್ಲಿ ಭರವಸೆಯನ್ನಿಡಿರಿ.'

قَالَ رَجُلَانِ مِنَ الَّذِينَ يَخَافُونَ أَنْعَمَ اللَّهُ عَلَيْهِمَا ادْخُلُوا عَلَيْهِمُ الْبَابَ فَإِذَا دَخَلْتُمُوهُ فَإِنَّكُمْ غَالِبُونَ ۚ وَعَلَى اللَّهِ فَتَوَكَّلُوا إِن كُنتُم مُّؤْمِنِينَ ﴿٢٤﴾

**25.** (ಪ್ರತ್ಯುತ್ತರವಾಗಿ) ಅವರು ಹೇಳಿದರು: 'ಎಲೈ ಮೂಸಾ, ಅವರು ಅಲ್ಲಿರುವ ಕಾಲದ ವರೆಗೆ ನಾವು

قَالُوا يَا مُوسَىٰ إِنَّا لَن نَّدْخُلَهَا أَبَدًا مَّا

181. ಆ ಕಾಲದಲ್ಲಿ ಅಲ್ಲಿ 'ಅಮಾಲಿಖ' ಜನಾಂಗದವರು ಮತ್ತು ಇತರ ಅರಬಿ ಗೋತ್ರದವರು ವಾಸಿಸುತ್ತಿದ್ದರು. ಯಹೂದಿಯರು ಅವರಿಗೆ ಹೆದರುತ್ತಿದ್ದರು.

182. ಇವರು ಹಝ್ರತ್ ಮೂಸಾ (ಅ) ಮತ್ತು ಹಝ್ರತ್ ಹಾರೂನ್ (ಅ) ಎಂದು ಖುರ್‌ಆನಿನಿಂದ ತಿಳಿದುಬರುತ್ತದೆ.

ಖಂಡಿತವಾಗಿಯೂ ಅಲ್ಲಿ ಪ್ರವೇಶಿಸಲಾರೆವು. ಆದ್ದರಿಂದ ನೀನು ಮತ್ತು ನಿನ್ನ ಪ್ರಭು ಹೋಗಿ ಅವರೊಡನೆ ಯುದ್ಧ ಮಾಡಿರಿ. ನಾವಿಲ್ಲಿ ಕುಳಿತುಕೊಳ್ಳುತ್ತೇವೆ.'

دَامُوا فِيهَا فَاذْهَبْ أَنتَ وَرَبُّكَ فَقَاتِلَا إِنَّا هَاهُنَا قَاعِدُونَ ﴿٢٤﴾

**26.** ಅವರು (ಮೂಸಾ) ಹೇಳಿದರು: 'ನನ್ನ ಒಡೆಯಾ, ನನ್ನ ಮೇಲೆ ಮತ್ತು ನನ್ನ ಸಹೋದರನ ಮೇಲೆ ಹೊರತು ಬೇರೆ ಯಾರ ಮೇಲೂ ನನಗೆ ನಿಯಂತ್ರಣಾಧಿಕಾರವಿಲ್ಲ. ಆದ್ದರಿಂದ ನಮ್ಮನ್ನೂ ಧಿಕ್ಕಾರಿಗಳಾದ ಜನರನ್ನೂ ನೀನು ಪ್ರತ್ಯೇಕಿಸು.'

قَالَ رَبِّ إِنِّي لَا أَمْلِكُ إِلَّا نَفْسِي وَأَخِي فَافْرُقْ بَيْنَنَا وَبَيْنَ الْقَوْمِ الْفَاسِقِينَ ﴿٢٥﴾

**27.** ಅವನು (ಅಲ್ಲಾಹನು) ಹೇಳಿದನು: 'ಖಂಡಿತವಾಗಿಯೂ ಅದು (ಆ ರಾಜ್ಯ) ನಲ್ವತ್ತು ವರ್ಷಕಾಲ ಅವರಿಗೆ ನಿಷಿದ್ಧಗೊಳಿಸಲ್ಪಟ್ಟಿದೆ. ಭೂಮಿಯಲ್ಲೆಲ್ಲ ಅವರು ಅಲೆದಾಡುವರು. ಆದ್ದರಿಂದ ಧಿಕ್ಕಾರಿಗಳಾದ ಜನರ ಬಗ್ಗೆ ನೀನು ದುಃಖಿಸಬೇಡ.'

قَالَ فَإِنَّهَا مُحَرَّمَةٌ عَلَيْهِمْ أَرْبَعِينَ سَنَةً يَتِيهُونَ فِي الْأَرْضِ فَلَا تَأْسَ عَلَى الْقَوْمِ الْفَاسِقِينَ ﴿٢٦﴾

**28.** (ಎಲೈ ಮುಹಮ್ಮದ್,) ಆದಮನ ಇಬ್ಬರು ಪುತ್ರರ ಕುರಿತು ನೀನು ಅವರಿಗೆ ಸರಿಯಾಗಿ ವಿವರಿಸಿ ಕೊಡು. ಅವರೀರ್ವರೂ ಒಂದೊಂದು ಬಲಿಯನ್ನು ಅರ್ಪಿಸಿದಾಗ, ಒಬ್ಬನ ಬಲಿ ಸ್ವೀಕರಿಸಲ್ಪಟ್ಟಿತು. ಮತ್ತೊಬ್ಬನ ಬಲಿ ಸ್ವೀಕರಿಸಲ್ಪಡಲಿಲ್ಲ. ಆಗ 'ಖಂಡಿತವಾಗಿಯೂ ನಾನು ನಿನ್ನನ್ನು ಕೊಂದು ಬಿಡುವೆನು' ಎಂದು ಬಲಿ ಸ್ವೀಕರಿಸಲ್ಪಡದವನು ಹೇಳಿದನು.[183] ಆಗ ಬಲಿ ಸ್ವೀಕರಿಸಲ್ಪಟ್ಟವನು ಹೇಳಿದನು : 'ಸಜ್ಜನರಿಂದ ಮಾತ್ರವೇ ಅಲ್ಲಾಹನು (ಬಲಿದಾನ) ಸ್ವೀಕರಿಸುತ್ತಾನೆ.

وَاتْلُ عَلَيْهِمْ نَبَأَ ابْنَيْ آدَمَ بِالْحَقِّ إِذْ قَرَّبَا قُرْبَانًا فَتُقُبِّلَ مِنْ أَحَدِهِمَا وَلَمْ يُتَقَبَّلْ مِنَ الْآخَرِ قَالَ لَأَقْتُلَنَّكَ قَالَ إِنَّمَا يَتَقَبَّلُ اللَّهُ مِنَ الْمُتَّقِينَ ﴿٢٧﴾

**29.** 'ನನ್ನನ್ನು ಕೊಲ್ಲಲಿಕ್ಕಾಗಿ ನನ್ನ ಮೇಲೆ ಕೈಯೆತ್ತಿದರೂ ನಿನ್ನನ್ನು ಕೊಲ್ಲಲಿಕ್ಕೆ ನಾನು ನಿನ್ನ ಮೇಲೆ ಕೈಯೆತ್ತಲಾರೆ.[184] ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹ ನಿಗೆ ನಾನು ಭಯಪಡುತ್ತೇನೆ.

لَئِن بَسَطتَ إِلَيَّ يَدَكَ لِتَقْتُلَنِي مَا أَنَا بِبَاسِطٍ يَدِيَ إِلَيْكَ لِأَقْتُلَكَ إِنِّي أَخَافُ اللَّهَ رَبَّ الْعَالَمِينَ ﴿٢٨﴾

183. ಈ ಘಟನೆಯನ್ನು ಉದಾಹರಣೆಯಾಗಿ ವಿವರಿಸುತ್ತಾ ಬನೂ ಇಸ್ರಾಈಲ್ ಮತ್ತು ಬನೂ ಇಸ್ಮಾಈಲ್ ಮಧ್ಯೆ ತುಲನೆ ಮಾಡಿ ತೋರಿಸಲಾಗಿದೆ. ಬನೂ ಇಸ್ರಾಈಲ್ ಮುಹಮ್ಮದೀ ಪ್ರವಾದಿತ್ವ ಕಾರಣದಿಂದ 'ಖಾಬಿಲ್'ನಂತೆ ಮುಸ್ಲಿಮರೊಡನೆ (ಬನೂ ಇಸ್ಮಾಈಲರೊಡನೆ) ವಿರೋಧ ತೋರಿಸುತ್ತದೆ.





**30.** 'ನನ್ನ ಪಾಪ ಮತ್ತು ನಿನ್ನ ಪಾಪಕ್ಕೆ ನೀನೇ ಹೊಣೆಗಾರನಾಗಿ ನೀನು ನರಕವಾಸಿಯಾಗಬೇಕೆಂದು ನಾನು ಬಯಸುತ್ತೇನೆ.[185] ಅದು ದುಷ್ಕರ್ಮಿಗಳಿಗೆ ಪ್ರತಿಫಲವಾಗಿದೆ.'

إِنِّي أُرِيدُ أَن تَبُوءَ بِإِثْمِي وَإِثْمِكَ فَتَكُونَ مِنْ أَصْحَابِ النَّارِ وَذَٰلِكَ جَزَاءُ الظَّالِمِينَ ﴿٢٩﴾

**31.** ಆದರೂ ತನ್ನ ಸಹೋದರನನ್ನು ಕೊಲ್ಲಲು ಅವನ (ಎರಡನೆಯವನ) ಮನಸ್ಸು ಅವನನ್ನು ಪ್ರೇರೇಪಿಸಿತು. ಹಾಗೆ ಅವನು ಆತನನ್ನು ಕೊಂದು ನಷ್ಟಹೊಂದಿದವರಲ್ಲಿ ಸೇರಿದನು.

فَطَوَّعَتْ لَهُ نَفْسُهُ قَتْلَ أَخِيهِ فَقَتَلَهُ فَأَصْبَحَ مِنَ الْخَاسِرِينَ ﴿٣٠﴾

**32.** ಆಗ, ತನ್ನ ಸಹೋದರನ ಮೃತದೇಹವನ್ನು ಹೇಗೆ ದಫನ ಮಾಡಬೇಕೆಂದು ಅವನಿಗೆ ತೋರಿಸಿಕೊಡಲಿಕ್ಕಾಗಿ, ಮಣ್ಣನ್ನು ಕೊರೆಯುತ್ತಿರುವ ಒಂದು ಕಾಗೆಯನ್ನು ಅಲ್ಲಾಹನು ಕಳುಹಿಸಿದನು. ಅವನು ಹೇಳಿದನು: 'ಅಕಟಾ, ಈ ಕಾಗೆಯಂತಾಗಿ ನನ್ನ ಸಹೋದರನ ಮೃತ ದೇಹವನ್ನು ದಫನ ಮಾಡಲು ನನಗೆ ಸಾಧ್ಯವಾಗಲಿಲ್ಲವಲ್ಲಾ![186] ಹಾಗೆ ಅವನು ದುಃಖಿತನಾದನು.

فَبَعَثَ اللَّهُ غُرَابًا يَبْحَثُ فِي الْأَرْضِ لِيُرِيَهُ كَيْفَ يُوَارِي سَوْءَةَ أَخِيهِ قَالَ يَا وَيْلَتَىٰ أَعَجَزْتُ أَنْ أَكُونَ مِثْلَ هَٰذَا الْغُرَابِ فَأُوَارِيَ سَوْءَةَ أَخِي فَأَصْبَحَ مِنَ النَّادِمِينَ ﴿٣١﴾

**33.** ಈ ಕಾರಣದಿಂದ ಇಸ್ರಾಈಲ್ ಸಂತತಿಗಳಿಗೆ ನಾವು ಹೀಗೆ ಆಜ್ಞೆ ನೀಡಿದೆವು: ಯಾರಾದರೂ ಒಬ್ಬ ವ್ಯಕ್ತಿಯನ್ನು ಕೊಲೆಗೈದುದಕ್ಕಾಗಿ ಅಥವಾ ರಾಜ್ಯದಲ್ಲಿ ಕಲಹವನ್ನುಂಟುಮಾಡಿದುದಕ್ಕಾಗಿ ಹೊರತು, (ನಿರಪರಾಧಿಯಾದ) ಒಬ್ಬನನ್ನು ಯಾರಾದರೂ ಕೊಂದರೆ ಅವನು ಮನುಷ್ಯರೆಲ್ಲರನ್ನೂ ಕೊಂದಂತಾಗುತ್ತದೆ. ಯಾರಾದರೂ ಒಬ್ಬನ ಜೀವವನ್ನು ರಕ್ಷಿಸಿದರೆ ಆತನು

مِنْ أَجْلِ ذَٰلِكَ كَتَبْنَا عَلَىٰ بَنِي إِسْرَائِيلَ أَنَّهُ مَن قَتَلَ نَفْسًا بِغَيْرِ نَفْسٍ أَوْ فَسَادٍ فِي الْأَرْضِ فَكَأَنَّمَا قَتَلَ النَّاسَ جَمِيعًا وَمَنْ أَحْيَاهَا فَكَأَنَّمَا

184. ಇದರ ತಾತ್ಪರ್ಯ ಆತ್ಮಸಂರಕ್ಷಣೆಗಾಗಿ ಏನೂ ಮಾಡಲಾರೆ ಎಂದಲ್ಲ; 'ನಾನು ನಿನ್ನನ್ನು ಕೊಲ್ಲಲು ಉದ್ದೇಶಿಸುವುದಿಲ್ಲ' ಎಂದಾಗಿದೆ.

185. ವಿನಾ ಕಾರಣ ಹಾಗೆ ಬಯಸುತ್ತೇನೆಂದಲ್ಲ. ಪಾಪದ ಹೊಣೆಯೆಲ್ಲ ನಿನ್ನ ಮೇಲೆ ಎಂದು ತಾತ್ಪರ್ಯ. ಯಹೂದಿಯರ ಸ್ಥಿತಿಯೂ ಇದೇ ಪ್ರಕಾರವಾಗಿದೆ. ಮುಸ್ಲಿಮರು ಸಂಧಾನಕ್ಕೆ ಒಪ್ಪಿದರು. ಆದರೂ ಯಹೂದಿಯರು ಯುದ್ಧಕ್ಕೆ ಧುಮುಕಿ ಮುಸ್ಲಿಮರ ವಿರುದ್ಧ ಇತರ ಶತ್ರುಗಳನ್ನೂ ಛೂ ಬಿಟ್ಟರು. ಆ ಕಾರಣದಿಂದ ಅವರು ಪಾಪಿಗಳಾಗಿ ಶಿಕ್ಷೆಗೀಡಾದರು.

186. ಆ ಸಂದರ್ಭದಲ್ಲಿ ಅಲ್ಲಿಗೆ ಒಂದು ಕಾಗೆ ಬಂತು. ಅದು ಮತ್ತೊಂದು ಕಾಗೆಯ ಶವವನ್ನು ಕಂಡಿತು. ಅದು ಕೊಕ್ಕು ಮತ್ತು ಕಾಲಿನಿಂದ ಮಣ್ಣನ್ನು ಕೊರೆದು ಸತ್ತ ಕಾಗೆಯ ಮೇಲೆ ಹಾಕಿತು. ಅದನ್ನು ನೋಡಿದ ಘಾತಕನಾದ ಸಹೋದರನಿಗೆ ಕೊಲ್ಲಲ್ಪಟ್ಟ ಸಹೋದರನ ಮೇಲೆ ಪ್ರೀತಿಯುಕ್ಕಿಬಂದು ತನ್ನ ದುಃಖವನ್ನು ತೋಡಿಕೊಂಡನು.

ಮನುಷ್ಯರೆಲ್ಲರನ್ನೂ ರಕ್ಷಿಸಿದಂತಾಗುತ್ತದೆ. ಖಂಡಿತವಾಗಿಯೂ ನಮ್ಮ ಸಂದೇಶವಾಹಕರು ಅವರ ಬಳಿಗೆ ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಆಗಮಿಸಿದ್ದಾರೆ. ಅದರ ಬಳಿಕ ಸಹ, ಅವರ ಪೈಕಿ ಹೆಚ್ಚಿನವರು ಭೂಮಿಯಲ್ಲಿ ಅತಿರೇಕವಾಗಿ ವರ್ತಿಸುತ್ತಾರೆ.

أَحْيَا النَّاسَ جَمِيعًا ۚ وَلَقَدْ جَاءَتْهُمْ رُسُلُنَا بِالْبَيِّنَاتِ ثُمَّ إِنَّ كَثِيرًا مِنْهُمْ بَعْدَ ذَٰلِكَ فِي الْأَرْضِ لَمُسْرِفُونَ ﴿٣٢﴾

**34.** ಅಲ್ಲಾಹನೊಡನೆ ಮತ್ತು ಅವನ ಸಂದೇಶವಾಹಕನೊಡನೆ ಯುದ್ಧ ಮಾಡುವವರಿಗೆ ಹಾಗೂ ರಾಜ್ಯದಲ್ಲೆಲ್ಲ ಗಲಭೆ ಗೊಂದಲಗಳನ್ನು ಹಬ್ಬಿಸಲು ಪ್ರಯತ್ನಿಸುವವರಿಗೆ ಶಿಕ್ಷೆಯೇನೆಂದರೆ, ಅವರನ್ನು ವಧಿಸುವುದು, ಶಿಲುಬೆಗೇರಿಸಿ ಕೊಲ್ಲುವುದು ಅಥವಾ ಅವರ ಕೈಕಾಲು ಗಳನ್ನು ವಿರುದ್ಧ ದಿಕ್ಕುಗಳಿಂದ[188] ಕಡಿಯುವುದು ಅಥವಾ ಗಡಿಪಾರು ಮಾಡುವುದು ಮಾತ್ರವಾಗಿದೆ.[189] (ಈ ಶಿಕ್ಷೆಗೆ ಗುರಿಯಾದರೆ) ಅದು ಅವರಿಗೆ ಇಹಲೋಕ ದಲ್ಲಿ ಅಪ ಮಾನಕರವಾಗಿದೆ; ಪರಲೋಕದಲ್ಲೂ ಅವರಿಗೆ ಕಠಿಣ ಶಿಕ್ಷೆ ಕಾದಿದೆ.

إِنَّمَا جَزَاءُ الَّذِينَ يُحَارِبُونَ اللَّهَ وَرَسُولَهُ وَيَسْعَوْنَ فِي الْأَرْضِ فَسَادًا أَنْ يُقَتَّلُوا أَوْ يُصَلَّبُوا أَوْ تُقَطَّعَ أَيْدِيهِمْ وَأَرْجُلُهُمْ مِنْ خِلَافٍ أَوْ يُنْفَوْا مِنَ الْأَرْضِ ۚ ذَٰلِكَ لَهُمْ خِزْيٌ فِي الدُّنْيَا ۖ وَلَهُمْ فِي الْآخِرَةِ عَذَابٌ عَظِيمٌ ﴿٣٣﴾

**35.** ನಿಮ್ಮ ಹಿಡಿತಕ್ಕೊಳಗಾಗುವುದಕ್ಕೆ ಮುಂಚೆ[189A] ಪಶ್ಚಾತ್ತಾಪಪಡುವವರು ಇದಕ್ಕೆ ಹೊರತಾಗಿದ್ದಾರೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆಂದು ತಿಳಿದುಕೊಳ್ಳಿರಿ.

إِلَّا الَّذِينَ تَابُوا مِنْ قَبْلِ أَنْ تَقْدِرُوا عَلَيْهِمْ ۖ فَاعْلَمُوا أَنَّ اللَّهَ غَفُورٌ رَحِيمٌ ﴿٣٤﴾

**36.** ಎಲೈ ವಿಶ್ವಾಸಿಗಳೇ, ನೀವು ಅಲ್ಲಾಹನ ಭಯ ಭಕ್ತಿಯುಳ್ಳವರಾಗಿರಿ; ಅವನ ಸಾಮೀಪ್ಯವನ್ನು ಪಡೆಯುವ ಮಾರ್ಗವನ್ನು ಹುಡುಕಿರಿ; ಅವನ ಮಾರ್ಗ ದಲ್ಲಿ ಅತ್ಯಧಿಕ ಪರಿಶ್ರಮಿಸಿರಿ - ನೀವು ವಿಜಯಶಾಲಿಗಳಾಗಲಿಕ್ಕಾಗಿ.

يَا أَيُّهَا الَّذِينَ آمَنُوا اتَّقُوا اللَّهَ وَابْتَغُوا إِلَيْهِ الْوَسِيلَةَ وَجَاهِدُوا فِي سَبِيلِهِ لَعَلَّكُمْ تُفْلِحُونَ ﴿٣٥﴾

**37.** ಅವಿಶ್ವಾಸಿಗಳಿಗೆ ಪುನರುತ್ಥಾನ ದಿನದ ಶಿಕ್ಷೆಯಿಂದ ಪಾರಾಗಲಿಕ್ಕಾಗಿ ಭೂಮಿಯಲ್ಲಿರುವ ಎಲ್ಲ

إِنَّ الَّذِينَ كَفَرُوا لَوْ أَنَّ لَهُمْ مَا فِي

188. ಬಲಗೈ ಮತ್ತು ಎಡಗಾಲು ಅಥವಾ ಬಲಗಾಲು ಮತ್ತು ಎಡಗೈ.

189. ಈ ಆಜ್ಞೆಯನ್ನು ಕಾರ್ಯಗತಗೊಳಿಸಬೇಕಾದುದು ಆಯಾ ರಾಜ್ಯದಲ್ಲಿ ಆಡಳಿತ ನಡೆಸುವ ಸರಕಾರದ ಹೊಣೆಯಾಗಿದೆ. ಹಾಗಲ್ಲದೆ, ಪ್ರಜೆಗಳೇ ಒಬ್ಬರು ಇನ್ನೊಬ್ಬರ ಮೇಲೆ ವಿಧಿ ಘೋಷಣೆ ಮಾಡಿ ಸ್ವೇಚ್ಛಾಚಾರ ಮಾಡಬೇಕಂದಲ್ಲ.

189A. ಇದು ಸಹ ಮೇಲಿನ ಟಿಪ್ಪಣಿಯನ್ನುಸಮರ್ಥಿಸುತ್ತದೆ. ಅಪರಾಧಿಗಳನ್ನು ಹಿಡಿಯಬೇಕಾದ ಪೊಲೀಸ್ ಮತ್ತು ಭದ್ರತಾ ಸಿಬ್ಬಂದಿಗಳು ಸರಕಾರದ ಅಧೀನವಿರುತ್ತದೆ ವಿನಾ ವ್ಯಕ್ತಿಗಳ ಬಳಿಯಲ್ಲಲ್ಲ.





ವನ್ನೂ ಅದರೊಂದಿಗೆ ಅಷ್ಟೇ ಬೇರೆಯನ್ನೂ ಪ್ರಾಯಶ್ಚಿತ್ತವಾಗಿ ನೀಡಲಿಕ್ಕೆ ಇದ್ದರೆ ಕೂಡ ಅವರಿಂದ ಅದು ಸ್ವೀಕೃತವಾಗದು. ಅವರಿಗೆ ಯಾತನಾಮಯವಾದ ಶಿಕ್ಷೆ ಯಿದೆ.

الْأَرْضِ جَمِيعًا وَمِثْلَهُ مَعَهُ لِيَفْتَدُوا بِهِ مِنْ عَذَابِ يَوْمِ الْقِيَامَةِ مَا تُقُبِّلَ مِنْهُمْ ۖ وَلَهُمْ عَذَابٌ أَلِيمٌ ﴿٣٦﴾

**38.** ನರಕಾಗ್ನಿಯಿಂದ ಹೊರಗೆ ಹೋಗಲಿಕ್ಕೆ ಅವರು ಬಯಸುತ್ತಾರೆ ಆದರೆ ಅದರಿಂದ ಹೊರಗೆ ಹೋಗಲಿಕ್ಕೆ ಅವರಿಗೆಂದಿಗೂ ಸಾಧ್ಯವಿಲ್ಲ.[190] ಅವರಿಗೆ (ದೀರ್ಘ ಕಾಲ) ಸ್ಥಿರವಾದ ಶಿಕ್ಷೆ ಇದೆ.

يُرِيدُونَ أَنْ يَخْرُجُوا مِنَ النَّارِ وَمَا هُمْ بِخَارِجِينَ مِنْهَا ۖ وَلَهُمْ عَذَابٌ مُقِيمٌ ﴿٣٧﴾

**39.** ಕಳ್ಳತನ ಮಾಡುವ ಪುರುಷ ಮತ್ತು ಕಳ್ಳತನ ಮಾಡುವ ಸ್ತ್ರೀ - ಅವರ ಕೃತ್ಯಕ್ಕೆ ಪ್ರತೀಕಾರವಾಗಿ ಮತ್ತು ಅಲ್ಲಾಹನ ಕಡೆಯಿಂದ ಶಿಕ್ಷೆಯಾಗಿ ಅವರ ಕೈಗಳನ್ನು ಕಡಿಯಿರಿ. ಅಲ್ಲಾಹನು ಪ್ರತಾಪಶಾಲಿಯೂ ಬುದ್ಧಿಶಾಲಿಯೂ ಆಗಿದ್ದಾನೆ.

وَالسَّارِقُ وَالسَّارِقَةُ فَاقْطَعُوا أَيْدِيَهُمَا جَزَاءً بِمَا كَسَبَا نَكَالًا مِنَ اللَّهِ ۗ وَاللَّهُ عَزِيزٌ حَكِيمٌ ﴿٣٨﴾

**40.** ಆದರೆ ತನ್ನ ದುಷ್ಕೃತ್ಯದ ನಂತರ ಯಾರಾದರೂ ಪಶ್ಚಾತ್ತಾಪಪಟ್ಟು ತಿದ್ದಿಕೊಂಡರೆ, ಖಂಡಿತವಾಗಿಯೂ ಅಲ್ಲಾಹನು ಅವನ ಮೇಲೆ ಕರುಣೆದೋರುವನು. ನಿಸ್ಸಂದೇಹವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

فَمَنْ تَابَ مِنْ بَعْدِ ظُلْمِهِ وَأَصْلَحَ فَإِنَّ اللَّهَ يَتُوبُ عَلَيْهِ ۗ إِنَّ اللَّهَ غَفُورٌ رَحِيمٌ ﴿٣٩﴾

**41.** ನಿಸ್ಸಂದೇಹವಾಗಿಯೂ ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನಿಗಿದೆಯೆಂದು ನಿನಗೆ ತಿಳಿದಿಲ್ಲವೇ? ತಾನು ಉದ್ದೇಶಿಸುವವರನ್ನು ಅವನು ಶಿಕ್ಷಿಸುತ್ತಾನೆ. ತಾನು ಉದ್ದೇಶಿಸುವವರನ್ನು ಅವನು ಕ್ಷಮಿಸುತ್ತಾನೆ. ಅಲ್ಲಾಹನು ಎಲ್ಲ ಕಾರ್ಯಗಳ ಮೇಲೆ ಸಂಪೂರ್ಣ ಸಾಮರ್ಥ್ಯ ಹೊಂದಿದ್ದಾನೆ.

أَلَمْ تَعْلَمْ أَنَّ اللَّهَ لَهُ مُلْكُ السَّمَاوَاتِ وَالْأَرْضِ يُعَذِّبُ مَنْ يَشَاءُ وَيَغْفِرُ لِمَنْ يَشَاءُ ۗ وَاللَّهُ عَلَىٰ كُلِّ شَيْءٍ قَدِيرٌ ﴿٤٠﴾

**42.** ಎಲೈ ಪ್ರವಾದಿಯೇ, ಹೃತ್ಪೂರ್ವಕವಾಗಿ ನಂಬದೆ, ಬಾಯಿ ಮಾತಿನಿಂದ 'ನಾವು ನಂಬುತ್ತೇವೆ'

يَا أَيُّهَا الرَّسُولُ لَا يَحْزُنْكَ الَّذِينَ

190. ಯಾರಿಗೂ ತನ್ನ ಸ್ವಂತ ಸಾಮರ್ಥ್ಯದಿಂದ ನರಕದಿಂದ ಪಾರಾಗಲಿಕ್ಕೆ ಸಾಧ್ಯವಿಲ್ಲವೆಂದು ತಾತ್ಪರ್ಯ. ಆದರೆ ಅಲ್ಲಾಹನು ದಯೆದೋರಿ ಮನುಷ್ಯರನ್ನು ನರಕದಿಂದ ವಿಮುಕ್ತಗೊಳಿಸುವನೆಂದು ಖುರ್‌ಆನಿನಿಂದ ತಿಳಿದುಬರುತ್ತದೆ. ಅವನ ಮಾತೆ ನರಕವಾಗಿರುವುದು ಎಂದು ಅಲ್ಲಾಹನು ಹೇಳುತ್ತಾನೆ (101:10). ಅಂದರೆ ನರಕವು ಅವಿಶ್ವಾಸಿಗೆ ಮಾತೆಯ ಗರ್ಭಾಶಯದಂತೆ. ಕೊನೆಗೆ ಗರ್ಭದಿಂದ ಶಿಶು ಹೊರಗೆ ಬರುತ್ತದೆ.

يسارعون في الكفر من الذين
قالوا آمنا بأفواههم ولم تؤمن
قلوبهم ۛ ومن الذين هادوا ۛ
سماعون للكذب سماعون لقوم
آخرين لم يأتوك ۖ يحرفون
الكلم من بعد مواضعه ۖ يقولون
إن أوتيتم هذا فخذوه وإن لم
تؤتوه فاحذروا ۚ ومن يرد الله
فتنته فلن تملك له من الله شيئا ۚ
أولئك الذين لم يرد الله أن يطهر
قلوبهم ۚ لهم في الدنيا خزي ۖ و
لهم في الآخرة عذاب عظيم ﴿٤١﴾

ಎಂದು ಹೇಳುವವರ ಪೈಕಿ ಅವಿಶ್ವಾಸದೆಡೆಗೆ ತ್ವರಿತ ಗತಿಯಲ್ಲಿ ಹೋಗುವವರು ನಿನಗೆ ದುಃಖವನ್ನುಂಟು ಮಾಡದಿರಲಿ. ಯಹೂದಿಯರಲ್ಲಿ ಕೆಲವರು ಸುಳ್ಳುವದಂತಿಗಳನ್ನು ಆಸಕ್ತಿಯಿಂದ ಆಲಿಸುವವರಾಗಿದ್ದಾರೆ. ನಿನ್ನ ಬಳಿಗೆ ಬಂದಿಲ್ಲದ ಬೇರೆ ಜನರಿಗೆ ತಿಳಿಸಲಿಕ್ಕಾಗಿ ಅವರು ಅದನ್ನು ಆಲಿಸುತ್ತಾರೆ. ಅವರು ವಚನಗಳನ್ನು ಅವುಗಳ ಸರಿಯಾದ ಸ್ಥಾನಗಳಿಂದ ಪಲ್ಲಟಗೊಳಿಸುತ್ತಾರೆ. 'ಇದು ನಿಮಗೆ ನೀಡಲ್ಪಟ್ಟರೆ ಅದನ್ನು ಸ್ವೀಕರಿಸಿರಿ; ಇದು ನಿಮಗೆ ನೀಡಲ್ಪಡದಿದ್ದರೆ ನೀವು ಜಾಗರೂಕರಾಗಿರಿ' ಎಂದು ಅವರು ಹೇಳುತ್ತಾರೆ. ಯಾರನ್ನಾದರೂ ಅಲ್ಲಾಹನು ಪರೀಕ್ಷೆಗೊಳಪಡಿಸಲು ಬಯಸಿದರೆ ಅಲ್ಲಾಹನ ವಿರುದ್ಧ ಆತನಿಗೋಸ್ಕರ ಏನೂ ಮಾಡಲಿಕ್ಕೆ ನಿನ್ನಿಂದ ಸಾಧ್ಯವಿಲ್ಲ. ಅವರ ಹೃದಯಗಳನ್ನು ಶುದ್ಧೀಕರಿಸಲು ಅಲ್ಲಾಹನು ಬಯಸದ ಜನರು ಅವರಾಗಿದ್ದಾರೆ. ಅವರಿಗೆ ಇಹಲೋಕದಲ್ಲಿ ಅಪಕೀರ್ತಿ ಇದೆ. ಪರಲೋಕದಲ್ಲಿ ಅವರಿಗೆ ಕಠಿಣ ಶಿಕ್ಷೆಯೂ ಕಾದಿದೆ.

سماعون للكذب أكالون للسحت ۚ
فإن جاءوك فاحكم بينهم أو
أعرض عنهم ۖ وإن تعرض عنهم
فلن يضروك شيئا ۖ وإن حكمت
فاحكم بينهم بالقسط ۚ إن الله يحب
المقسطين ﴿٤٢﴾

**43.** ಅವರು ಸುಳ್ಳು ವಾರ್ತೆಗಳನ್ನು ಬಹಳ ಹೆಚ್ಚಾಗಿ ಕೇಳುವವರಾಗಿದ್ದಾರೆ; ಅಕ್ರಮ ಸಂಪಾದನೆಯಿಂದ ತುಂಬಾ ಹೆಚ್ಚಾಗಿ ತಿನ್ನುವವರಾಗಿದ್ದಾರೆ. ಅವರು ನಿನ್ನ ಬಳಿ ಬಂದರೆ ನೀನು ಅವರ ಮಧ್ಯೆ ತೀರ್ಮಾನ ಮಾಡು ಅಥವಾ ಅವರಿಂದ ದೂರವಿರು. ನೀನು ಅವರಿಂದ ಅಗಲಿ ನಿಂತರೆ ನಿನಗೇನೂ ಹಾನಿಮಾಡಲು ಅವರಿಗೆ ಸಾಧ್ಯವಿಲ್ಲ. ನೀನು ತೀರ್ಮಾನ ಮಾಡುವುದಾದರೆ ನ್ಯಾಯಯುತವಾಗಿ ಅವರೆಡೆಯಲ್ಲಿ ತೀರ್ಮಾನ ಮಾಡಬೇಕು. ನ್ಯಾಯಯುತವಾಗಿ ತೀರ್ಮಾನಮಾಡುವವರನ್ನು ಅಲ್ಲಾಹನು ಪ್ರೀತಿಸುತ್ತಾನೆ.

وكيف يحكمونك وعندهم التوراة
فيها حكم الله ثم يتولون من بعد
ذلك ۚ وما أولئك بالمؤمنين ﴿٤٣﴾

**44.** ಅವರ ಬಳಿ ಅಲ್ಲಾಹನ ಆಜ್ಞೆಗಳು ಒಳಗೊಂಡಿರುವ ತೌರಾತ್ ಇದ್ದು ಸಹ ಅವರು ಅದರಿಂದ ಬೆನ್ನು ತಿರುಗಿಸುತ್ತಿರುವಾಗ, ನಿನ್ನನ್ನು ನ್ಯಾಯಾಧೀಶ ನನ್ನಾಗಿ ಹೇಗೆ ಮಾಡುವರು? ಅವರು ಖಂಡಿತವಾಗಿಯೂ ನಂಬುವವರಲ್ಲ.





إنا أنزلنا التوراة فيها هدى و
نور ۚ يحكم بها النبيون الذين
أسلموا للذين هادوا والربانيون و
الأحبار بما استحفظوا من كتاب الله
وكانوا عليه شهداء ۚ فلا تخشوا
الناس واخشون ولا تشتروا بآياتي
ثمنا قليلا ۚ ومن لم يحكم بما أنزل الله
فأولئك هم الكافرون ﴿٤٤﴾

**45.** ಮಾರ್ಗದರ್ಶನ ಮತ್ತು ಪ್ರಕಾಶದಿಂದ ಕೂಡಿದ್ದ ತೌರಾತನ್ನು ನಾವು ದಿಟವಾಗಿಯೂ ಅವತೀರ್ಣ ಗೊಳಿಸಿದ್ದೆವು. ಅದನ್ನನುಸರಿಸಿ (ಅಲ್ಲಾಹನಿಗೆ) ವಿಧೇಯರಾದ ಪ್ರವಾದಿಗಳು ಯಹೂದಿಯರಿಗೋಸ್ಕರ ತೀರ್ಪು ನೀಡುತ್ತಿದ್ದರು. (ಅದೇ ಪ್ರಕಾರ) ದಿವ್ಯಜ್ಞಾನಿಗಳೂ ಧರ್ಮ ಪಂಡಿತರೂ (ತೀರ್ಪು ನೀಡುತ್ತಿದ್ದರು). ಕಾರಣವೇನೆಂದರೆ, ಅಲ್ಲಾಹನ ಗ್ರಂಥದ ಸಂರಕ್ಷಣೆಯ ಹೊಣೆ ಅವರಿಗಿತ್ತು. ಅವರು ಅದರ ಮೇಲ್ನೋಟಗಾರರಾಗಿದ್ದರು. ನೀವು ಜನರಿಗೆ ಹೆದರಬೇಡಿರಿ. ನನ್ನ ಭಯವಿಟ್ಟುಕೊಳ್ಳಿರಿ. ತುಚ್ಛವಾದ ಬೆಲೆಗೆ ನನ್ನ ವಚನಗಳನ್ನು ಬದಲಾಯಿಸಿಕೊಳ್ಳಬೇಡಿರಿ. ಅಲ್ಲಾಹನು ಅವತೀರ್ಣ ಗೊಳಿಸಿದುದರ ಮೂಲಕ ಯಾರು ತೀರ್ಮಾನ ಕೈಗೊಳ್ಳುವುದಿಲ್ಲವೋ ಅವರೇ ಅವಿಶ್ವಾಸಿಗಳು.

وكتبنا عليهم فيها أن النفس
بالنفس والعين بالعين والأنف
بالأنف والأذن بالأذن والسن
بالسن والجروح قصاص ۚ فمن
تصدق به فهو كفارة له ۚ ومن لم
يحكم بما أنزل الله فأولئك هم
الظالمون ﴿٤٥﴾

**46.** ಜೀವಕ್ಕೆ ಪ್ರತಿಯಾಗಿ ಜೀವ, ಕಣ್ಣಿಗೆ ಪ್ರತಿಯಾಗಿ ಕಣ್ಣು, ಮೂಗಿಗೆ ಪ್ರತಿಯಾಗಿ ಮೂಗು, ಕಿವಿಗೆ ಪ್ರತಿಯಾಗಿ ಕಿವಿ, ಹಲ್ಲಿಗೆ ಪ್ರತಿಯಾಗಿ ಹಲ್ಲು, (ಹಾಗೆಯೇ) ಗಾಯಕ್ಕೆ ಪ್ರತಿಯಾಗಿ ಗಾಯ[191] - ಹೀಗೆ ನಾವು ಪ್ರತೀಕಾರವನ್ನು ಅವರಿಗೆ ಅದರಲ್ಲಿ ವಿಧಿಸಿದ್ದೆವು. ಯಾರಾದರೂ ಪ್ರತೀಕಾರಮಾಡದೆ ಕ್ಷಮಿಸಿದರೆ, ಅದು ಅವನಿಗೆ (ತನ್ನ ತಪ್ಪುಗಳ) ಪ್ರಾಯಶ್ಚಿತ್ತವಾಗುವುದು. ಅಲ್ಲಾಹನು ಅವತೀರ್ಣಗೊಳಿಸಿದುದರ ಮೂಲಕ ಯಾರು ತೀರ್ಮಾನ ಕೈಗೊಳ್ಳುವುದಿಲ್ಲವೋ ಅವರೇ ದುಷ್ಕರ್ಮಿಗಳು.

وقفينا على آثارهم بعيسى ابن
مريم مصدقا لما بين يديه
من التوراة ۖ وآتيناه الإنجيل فيه
هدى ونور ومصدقا لما بين
يديه من التوراة وهدى و

**47.** ಅವರನ್ನು (ಮೇಲೆ ಹೇಳಿದ ಪ್ರವಾದಿಗಳನ್ನು) ಅನುಗಮಿಸಿಕೊಂಡು, ತನಗೆ ಮುಂಚೆ ಅವತೀರ್ಣವಾದ ತೌರಾತನ್ನು ಸತ್ಯಪಡಿಸುವ ವ್ಯಕ್ತಿಯನ್ನಾಗಿ ಮರ್ಯಮ್ ಪುತ್ರ ಈಸಾರನ್ನು ನಾವು ನಿಯುಕ್ತ ಮಾಡಿದೆವು. ನಾವು ಅವರಿಗೆ ಮಾರ್ಗದರ್ಶನ ಮತ್ತು ಪ್ರಕಾಶದಿಂದ ಕೂಡಿದ ಇಂಜೀಲನ್ನು ನೀಡಿದ್ದೆವು. (ಅದು) ಅದಕ್ಕೆ ಮುಂಚೆ ಅವತೀರ್ಣವಾದ ತೌರಾತನ್ನು ದೃಢೀಕರಿಸುವಂಥದ್ದು

191. ಬೈಬಲ್ ವಿಮೋಚನಕಾಂಡ 21:23-25 ಮತ್ತು ಯಾಜಕಕಾಂಡ 24:17-21 ನೋಡಿರಿ.

مَوْعِظَةً لِّلْمُتَّقِيْنَ ﴿٤٦﴾

ಹಾಗೂ ಭಯಭಕ್ತಿಯುಳ್ಳವರಿಗೆ ಮಾರ್ಗದರ್ಶಕವೂ ಉಪದೇಶವೂ ಆಗಿತ್ತು.

وَلْيَحْكُمْ اَهْلُ الْاِنْجِيْلِ بِمَاۤ اَنْزَلَ اللّٰهُ فِيْهِ ؕ وَمَنْ لَّمْ يَحْكُمْ بِمَاۤ اَنْزَلَ اللّٰهُ فَاُولٰٓئِكَ هُمُ الْفٰسِقُوْنَ ﴿٤٧﴾

**48.** ಇಂಜೀಲ್‌ನ ಜನರು ಅದರಲ್ಲಿ ಅಲ್ಲಾಹನು ಅವತೀರ್ಣಗೊಳಿಸಿದುದರ ಪ್ರಕಾರ ತೀರ್ಮಾನಿಸಲಿ. ಅಲ್ಲಾಹನು ಅವತೀರ್ಣಗೊಳಿಸಿದುದರ ಮೂಲಕ ಯಾರು ತೀರ್ಮಾನ ಮಾಡುವುದಿಲ್ಲವೋ ಅವರೇ ಆಜ್ಞಾಲಂಘಕರು.

وَاَنْزَلْنَاۤ اِلَيْكَ الْكِتٰبَ بِالْحَقِّ مُصَدِّقًا لِّمَا بَيْنَ يَدَيْهِ مِنَ الْكِتٰبِ وَمُهَيْمِنًا عَلَيْهِ فَاحْكُمْ بَيْنَهُمْ بِمَاۤ اَنْزَلَ اللّٰهُ وَلَا تَتَّبِعْ اَهْوَآءَهُمْ عَمَّا جَآءَكَ مِنَ الْحَقِّ ؕ لِكُلٍّ جَعَلْنَا مِنْكُمْ شِرْعَةً وَّمِنْهَاجًا ؕ وَلَوْ شَآءَ اللّٰهُ لَجَعَلَكُمْ اُمَّةً وَّاحِدَةً وَّلٰكِنْ لِّيَبْلُوَكُمْ فِيْ مَاۤ اٰتٰىكُمْ فَاسْتَبِقُوا الْخَيْرٰتِ ؕ اِلَى اللّٰهِ مَرْجِعُكُمْ جَمِيْعًا فَيُنَبِّئُكُمْ بِمَا كُنْتُمْ فِيْهِ تَخْتَلِفُوْنَ ﴿٤٨﴾

**49.** ನಾವು ನಿನಗೆ ಸತ್ಯದಿಂದ ಕೂಡಿದ ಈ ಗ್ರಂಥ ವನ್ನು, ಇದಕ್ಕಿಂತ ಹಿಂದಿನ ಗ್ರಂಥದಲ್ಲಿರುವುದನ್ನು ದೃಢೀಕರಿಸುವ ಮತ್ತು ಅದನ್ನು ಸಂರಕ್ಷಿಸುವಂಥದ್ದನ್ನಾಗಿ ಅವತೀರ್ಣ ಗೊಳಿಸಿರುವೆವು. ಆದ್ದರಿಂದ, ಅಲ್ಲಾಹನು ಅವತೀರ್ಣ ಗೊಳಿಸಿದುದರ ಪ್ರಕಾರ ನೀನು ಅವರ ಮಧ್ಯೆ ತೀರ್ಮಾ ನಿಸು. ನಿನಗೆ ಲಭ್ಯವಾಗಿರುವ ಸತ್ಯವನ್ನು ಬಿಟ್ಟು ಅವರ ಸ್ವೇಚ್ಛಾಚಾರಗಳನ್ನು ಅನುಸರಿಸಬೇಡ. ನಿಮ್ಮಲ್ಲಿ ಪ್ರತಿ ಯೊಬ್ಬರಿಗೂ ನಾವು ಸೂಕ್ಷ್ಮವಾದ ಆಧ್ಯಾತ್ಮಿಕ ನಿಯಮ ವನ್ನೂ ಸ್ಪಷ್ಟವಾದ ಮಾರ್ಗವನ್ನೂ ನಿಶ್ಚಯಿಸಿದ್ದೇವೆ.[192] ಅಲ್ಲಾಹನು ಬಯಸಿದ್ದರೆ ಅವನು ನಿಮ್ಮನ್ನು (ಎಲ್ಲರನ್ನೂ) ಒಂದೇ ಸಮುದಾಯವನ್ನಾಗಿ ಮಾಡುತ್ತಿ ದ್ದನು. ಆದರೆ ನಿಮಗೆ ನೀಡಿದುದರ ಮೂಲಕ ನಿಮ್ಮನ್ನು ಪರೀಕ್ಷೆ ಗೊಳಪಡಿಸಲಿಕ್ಕೆ (ಅಲ್ಲಾಹನು ಬಯಸುತ್ತಾನೆ). ಆದ್ದರಿಂದ ಸತ್ಕಾರ್ಯಗಳಲ್ಲಿ ಪೈಪೋಟಿ ನಡೆಸಿರಿ. ನಿಮ್ಮೆಲ್ಲರ ಮರಳುವಿಕೆ ಅಲ್ಲಾಹನ ಬಳಿಗೇ ಆಗಿದೆ. ನಿಮಗೆ ಭಿನ್ನಾಭಿಪ್ರಾಯವುಳ್ಳ ಎಲ್ಲ ವಿಚಾರಗಳ ನಿಜಸ್ಥಿತಿಯನ್ನು ಆಗ ಅವನು ನಿಮಗೆ ಮನಗಾಣಿಸುವನು.

وَاَنِ احْكُمْ بَيْنَهُمْ بِمَاۤ اَنْزَلَ اللّٰهُ وَلَا تَتَّبِعْ اَهْوَآءَهُمْ وَاحْذَرْهُمْ

**50.** ಅಲ್ಲಾಹನು ಅವತೀರ್ಣಗೊಳಿಸಿದುದರ ಪ್ರಕಾರ ಅವರ ಮಧ್ಯೆ ತೀರ್ಮಾನ ಮಾಡು; ಅವರ ಸ್ವೇಚ್ಛೆಗಳನ್ನು ನೀನು ಅನುಸರಿಸಬೇಡ. ಅಲ್ಲಾಹನು ನಿನಗೆ ಅವತೀರ್ಣ

192. ಮೂಲದಲ್ಲಿ 'ಶಿರ್‌ಅತ್' ಮತ್ತು 'ಮಿನ್‌ಹಾಜ್' ಎಂಬ ಪದಗಳಿವೆ. 'ಶಿರ್‌ಅತ್' ಅಂದರೆ ಆಧ್ಯಾತ್ಮಿಕ ಜಲವನ್ನು ತಲಪುವರೆಗೆ ಸೂಕ್ಷ್ಮವಾದ ಮಾರ್ಗ ಮತ್ತು 'ಮಿನ್‌ಹಾಜ್' ಅಂದರೆ ಸ್ಥೂಲವಾದ ಅಥವಾ ಸ್ಪಷ್ಟವಾದ ಮಾರ್ಗ ಎಂದು ಅರ್ಥ. ಪ್ರತಿಯೊಬ್ಬರಿಗೂ ಅವರವರ ಸಾಮರ್ಥ್ಯಾನುಸಾರ ಪ್ರಕಾಶವನ್ನು ಪಡೆಯಲು ಸಾಧ್ಯವಾಗುವಂಥ ಜ್ಞಾನಭಂಡಾರ ಇದರಲ್ಲಿದೆ ಎಂಬುದು ಖುರ್‌ಆನಿನ ಒಂದು ವೈಶಿಷ್ಟ್ಯವಾಗಿದೆ. ಪವಿತ್ರ ಖುರ್‌ಆನ್ ಒಂದು ಪರಿಪೂರ್ಣ ಗ್ರಂಥವಾಗಿದೆ.





اَنْ يَّفْتِنُوْكَ عَنْۢ بَعْضِ مَاۤ اَنْزَلَ اللّٰهُ اِلَيْكَ ؕ فَاِنْ تَوَلَّوْا فَاعْلَمْ اَنَّمَا يُرِيْدُ اللّٰهُ اَنْ يُّصِيْبَهُمْ بِبَعْضِ ذُنُوْبِهِمْ ؕ وَاِنَّ كَثِيْرًا مِّنَ النَّاسِ لَفٰسِقُوْنَ ﴿٤٩﴾

ಗೊಳಿಸಿದ ಕೆಲವು ನಿರ್ದೇಶನಗಳಿಂದ ನಿನ್ನನ್ನು ವ್ಯತಿಚಲನ ಗೊಳಿಸಿ ನಿನ್ನನ್ನು ಸಂಕಷ್ಟಕ್ಕೀಡು ಮಾಡದಂತೆ ನೀನು ಅವರ ಬಗ್ಗೆ ಜಾಗರೂಕನಾಗಿರು. ಅವರು ಹಿಂತೆರಳಿದರೆ, ಅವರ ಕೆಲವು ಪಾಪಗಳ ಕಾರಣದಿಂದ ಖಂಡಿತ ವಾಗಿಯೂ ಅಲ್ಲಾಹನು ಅವರಿಗೆ ಆಪತ್ತುಂಟಾಗು ವಂತೆ ಮಾಡುತ್ತಾನೆಂದು ತಿಳಿದುಕೋ. ವಾಸ್ತವವಾಗಿ, ಜನರಲ್ಲಿ ಹೆಚ್ಚಿನವರು ಆಜ್ಞಾಲಂಘಕರಾಗಿದ್ದಾರೆ.

اَفَحُكْمَ الْجَاهِلِيَّةِ يَبْغُوْنَ ؕ وَمَنْ اَحْسَنُ مِنَ اللّٰهِ حُكْمًا لِّقَوْمٍ يُّوْقِنُوْنَ ﴿٥٠﴾ ع

**51.** ಏನು, ಅಜ್ಞಾನ ಕಾಲದ ವಿಧಿಯನ್ನು ಅವರು ಬಯಸುತ್ತಾರೆಯೇ? ದೃಢ ವಿಶ್ವಾಸವಿರುವ ಜನರಿಗೆ ಅಲ್ಲಾಹನಿಗಿಂತ ಉತ್ತಮವಾಗಿ ತೀರ್ಪು ನೀಡುವವನು ಯಾರಿದ್ದಾನೆ?

يٰۤاَيُّهَا الَّذِيْنَ اٰمَنُوْا لَا تَتَّخِذُوا الْيَهُوْدَ وَالنَّصٰرٰۤى اَوْلِيَآءَ ؕ بَعْضُهُمْ اَوْلِيَآءُ بَعْضٍ ؕ وَمَنْ يَّتَوَلَّهُمْ مِّنْكُمْ فَاِنَّهٗ مِنْهُمْ ؕ اِنَّ اللّٰهَ لَا يَهْدِى الْقَوْمَ الظّٰلِمِيْنَ ﴿٥١﴾

**52.** ಎಲೈ ವಿಶ್ವಾಸಿಗಳೇ, ಯಹೂದಿಯರನ್ನೂ ಕ್ರೈಸ್ತರನ್ನೂ ನಿಮ್ಮ ಮಿತ್ರರನ್ನಾಗಿ ಮಾಡಬೇಡಿರಿ.[193] ಅವರು ಪರಸ್ಪರ ಮಿತ್ರರಾಗಿದ್ದಾರೆ. ನಿಮ್ಮ ಪೈಕಿ ಅವರನ್ನು ಮಿತ್ರರನ್ನಾಗಿ ಮಾಡುವವನು ಅವರಲ್ಲಿ ಸೇರಿದವನಾಗು ತ್ತಾನೆ. ಖಂಡಿತವಾಗಿಯೂ ಅಲ್ಲಾಹನು ಅಧರ್ಮಿಗಳಿಗೆ (ವಿಜಯದ) ದಾರಿಯನ್ನು ತೋರಿಸಿಕೊಡಲಾರ.

فَتَرَى الَّذِيْنَ فِيْ قُلُوْبِهِمْ مَّرَضٌ يُّسَارِعُوْنَ فِيْهِمْ يَقُوْلُوْنَ نَخْشٰۤى اَنْ تُصِيْبَنَا دَآئِرَةٌ ؕ فَعَسَى اللّٰهُ اَنْ يَّاْتِيَ بِالْفَتْحِ اَوْ اَمْرٍ مِّنْ عِنْدِهٖ فَيُصْبِحُوْا عَلٰى مَاۤ اَسَرُّوْا فِيْۤ اَنْفُسِهِمْ نٰدِمِيْنَ ﴿٥٢﴾

**53.** ಆದರೆ, ತಮ್ಮ ಹೃದಯಗಳಲ್ಲಿ ರೋಗವಿರು ವವರು ಅವರ (ಯಹೂದಿಯರ ಮತ್ತು ಕ್ರೈಸ್ತರ) ಬಳಿಗೆ ಓಡಿ ಹೋಗುವುದನ್ನು ನೀನು ಕಾಣುವಿ. 'ನಮಗೇನಾ ದರೂ ವಿಪತ್ತು ಬಂದೆರಗುವುದೆಂದು ನಾವು ಭಯಪಡು ತ್ತೇವೆ' ಎಂದು ಅವರು ಹೇಳುತ್ತಾರೆ. ಆದರೆ ಅಲ್ಲಾ ಹನು (ನಿಮಗೆ) ವಿಜಯವನ್ನು ನೀಡಬಹುದು ಅಥವಾ ತನ್ನ ಕಡೆಯಿಂದ ಬೇರೇನಾದರೂ ಪ್ರಕಟವಾಗುವಂತೆ ಮಾಡಬಹುದು. ಆಗ ಅವರು ತಮ್ಮ ಮನಸ್ಸಿನಲ್ಲಿ ಹುದು ಗಿರಿಸಿದ್ದ ವಿಚಾರಗಳ ಬಗ್ಗೆ ಲಜ್ಜಿತರಾಗುವರು.

وَيَقُوْلُ الَّذِيْنَ اٰمَنُوْۤا اَهٰٓؤُلَآءِ

**54.** 'ಖಂಡಿತವಾಗಿಯೂ ನಾವು ನಿಮ್ಮೊಂದಿ

193. ಮುಸ್ಲಿಮರೊಡನೆ ಶತ್ರುತ್ವದಿಂದಿರುವ ಮತ್ತು ಮುಸ್ಲಿಮರ ವಿರುದ್ಧ ಸಂಚು ಹೂಡುವ ಯಹೂದಿ ಮತ್ತು ಕ್ರೈಸ್ತರ ಕುರಿತು ಮಾತ್ರ ಇಲ್ಲಿ ಸೂಚಿಸಲಾಗಿದೆ. ಮುಸ್ಲಿಮರೊಂದಿಗೆ ಸೌಹಾರ್ದದಿಂದ ವರ್ತಿಸುವವರೊಡನೆ ಸ್ನೇಹ ಸೌಹಾರ್ದದಿಂದಲೇ ವರ್ತಿಸಬೇಕೆಂದು ಖುರ್‌ಆನಿನಲ್ಲಿ ಮುಸ್ಲಿಮರಿಗೆ ಆಜ್ಞೆ ಇದೆ. (60ನೇ ಅಧ್ಯಾಯ 9,10 ನೇ ವಚನಗಳನ್ನು ನೋಡಿರಿ.)

ಗಿದ್ದೇವೆಂದು ಅಲ್ಲಾಹನ ಹೆಸರಿನಲ್ಲಿ ಆಣೆಹಾಕಿ ದೃಢ ಪತ್ರಿಜ್ಞೆ ಮಾಡಿದವರು ಇವರೇ ಏನು?' ಎಂದು ವಿಶ್ವಾಸಿಗಳು ಕೇಳುವರು. ಅವರ ಕರ್ಮಗಳು ನಿಷ್ಫಲವಾದವು. ಹಾಗೆ ಅವರು ನಷ್ಟಹೊಂದಿದವರಾದರು.

الَّذِيْنَ اَقْسَمُوْا بِاللّٰهِ جَهْدَ اَيْمَانِهِمْ ۙ اِنَّهُمْ لَمَعَكُمْ ؕ حَبِطَتْ اَعْمَالُهُمْ فَاَصْبَحُوْا خٰسِرِيْنَ ﴿٥٣﴾

**55.** ಎಲೈ ವಿಶ್ವಾಸಿಗಳೇ, ನಿಮ್ಮಿಂದ ಯಾರಾದರೂ ತನ್ನ ಧರ್ಮವನ್ನು ತೊರೆದು ಹೊರಗೆ ಹೋದರೆ, ಅಲ್ಲಾಹನು ತಾನು ಪ್ರೀತಿಸುವ ಜನರ ಒಂದು ಕೋಮನ್ನು ಬದಲಿಗೆ ತರುವನು. ಅವರು ಅವನನ್ನೂ ಪ್ರೀತಿಸುವರು. ಅವರು ಸತ್ಯವಿಶ್ವಾಸಿಗಳೊಂದಿಗೆ ವಿನಯಾನ್ವಿತರೂ ಅವಿಶ್ವಾಸಿಗಳ ವಿರುದ್ಧ ದೃಢಚಿತ್ತರೂ ಆಗಿರುವರು. ಅವರು ಅಲ್ಲಾಹನ ಮಾರ್ಗದಲ್ಲಿ ತೀವ್ರ ಪ್ರಯತ್ನ ಮಾಡುವರು. ಯಾವನೇ ಆಕ್ಷೇಪಕನ ಆಕ್ಷೇಪಕ್ಕೂ ಅವರು ಭಯಪಡಲಾರರು. ಇದು ಅಲ್ಲಾಹನ ಅನುಗ್ರಹವಾಗಿದೆ. ತಾನಿಚ್ಛಿಸುವವರಿಗೆ ಅವನು ಅದನ್ನು ನೀಡುತ್ತಾನೆ. ಅಲ್ಲಾಹನು ಅತಿ ಉದಾರಿಯೂ ಎಲ್ಲವನ್ನು ಚೆನ್ನಾಗಿ ತಿಳಿಯುವವನೂ ಆಗಿದ್ದಾನೆ.

يٰۤاَيُّهَا الَّذِيْنَ اٰمَنُوْا مَنْ يَّرْتَدَّ مِنْكُمْ عَنْ دِيْنِهٖ فَسَوْفَ يَاْتِى اللّٰهُ بِقَوْمٍ يُّحِبُّهُمْ وَ يُحِبُّوْنَهٗۤ ۙ اَذِلَّةٍ عَلَى الْمُؤْمِنِيْنَ اَعِزَّةٍ عَلَى الْكٰفِرِيْنَ ۙ يُجَاهِدُوْنَ فِىْ سَبِيْلِ اللّٰهِ وَلَا يَخَافُوْنَ لَوْمَةَ لَاۤئِمٍ ؕ ذٰلِكَ فَضْلُ اللّٰهِ يُؤْتِيْهِ مَنْ يَّشَاۤءُ ؕ وَاللّٰهُ وَاسِعٌ عَلِيْمٌ ﴿٥٤﴾

**56.** ನಿಶ್ಚಯವಾಗಿಯೂ ನಿಮ್ಮ ಮಿತ್ರರು ಅಲ್ಲಾಹನೂ ಅವನ ಸಂದೇಶವಾಹಕನೂ ನಮಾಝ್ ಮಾಡುವ, ಝಕಾತ್ ನೀಡುವ ಮತ್ತು ಅಲ್ಲಾಹನಿಗೆ ನಿಷ್ಠೆಯಿಂದ ಶಿರಬಾಗುವ ಸತ್ಯವಿಶ್ವಾಸಿಗಳು ಮಾತ್ರವೇ ಆಗಿದ್ದಾರೆ.

اِنَّمَا وَلِيُّكُمُ اللّٰهُ وَرَسُوْلُهٗ وَالَّذِيْنَ اٰمَنُوا الَّذِيْنَ يُقِيْمُوْنَ الصَّلٰوةَ وَ يُؤْتُوْنَ الزَّكٰوةَ وَهُمْ رَاكِعُوْنَ ﴿٥٥﴾

**57.** ಅಲ್ಲಾಹನನ್ನೂ ಅವನ ಸಂದೇಶವಾಕಹನನ್ನೂ ಸತ್ಯವಿಶ್ವಾಸಿಗಳನ್ನೂ ಯಾರು ಮಿತ್ರರನ್ನಾಗಿ ಮಾಡುತ್ತಾರೋ (ಅವರು ತಿಳಿದುಕೊಳ್ಳಲಿ) ಖಂಡಿತ ವಾಗಿಯೂ ಅಲ್ಲಾಹನ ಪಕ್ಷದವರೇ ವಿಜಯಿಗಳಾಗುತ್ತಾರೆ.

وَمَنْ يَّتَوَلَّ اللّٰهَ وَرَسُوْلَهٗ وَالَّذِيْنَ اٰمَنُوْا فَاِنَّ حِزْبَ اللّٰهِ هُمُ الْغٰلِبُوْنَ ﴿٥٦﴾

**58.** ಎಲೈ ವಿಶ್ವಾಸಿಗಳೇ, ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟವರ ಮತ್ತು ಅವಿಶ್ವಾಸಿಗಳ ಪೈಕಿ ನಿಮ್ಮ ಧರ್ಮವನ್ನು ಅಪಹಾಸ್ಯಮಾಡುವ ಮತ್ತು ವಿನೋದಕ್ಕೆ ಗುರಿಪಡಿಸುವವರನ್ನು ನೀವು ಮಿತ್ರರನ್ನಾಗಿ ಮಾಡಬೇಡಿರಿ.

يٰۤاَيُّهَا الَّذِيْنَ اٰمَنُوْا لَا تَتَّخِذُوا الَّذِيْنَ اتَّخَذُوْا دِيْنَكُمْ هُزُوًا وَّلَعِبًا مِّنَ الَّذِيْنَ اُوْتُوا الْكِتٰبَ مِنْ قَبْلِكُمْ وَ الْكُفَّارَ





ನೀವು ಸತ್ಯವಿಶ್ವಾಸಿಗಳೆಂದಾದರೆ, ಅಲ್ಲಾಹನ ಭಯಭಕ್ತಿ ಇರಿಸಿಕೊಳ್ಳಿರಿ.

اَوْلِيَاۤءَ ۚ وَاتَّقُوا اللّٰهَ اِنْ كُنْتُمْ مُّؤْمِنِيْنَ ﴿٥٧﴾

**59.** ನೀವು ಜನರನ್ನು ನಮಾಝ್ ಮಾಡಲು ಕರೆಯುವಾಗ ಅವರು ಅದನ್ನು ಅಪಹಾಸ್ಯಮಾಡುತ್ತಾರೆ ಮತ್ತು ವಿನೋದಕ್ಕೆ ಗುರಿಪಡಿಸುತ್ತಾರೆ. ಅದು ಅವರು ವಿವೇಕದಿಂದ ವರ್ತಿಸದ ಕಾರಣದಿಂದಾಗಿದೆ.

وَ اِذَا نَادَيْتُمْ اِلَى الصَّلٰوةِ اتَّخَذُوْهَا هُزُوًا وَّلَعِبًا ؕ ذٰلِكَ بِاَنَّهُمْ قَوْمٌ لَّا يَعْقِلُوْنَ ﴿٥٨﴾

**60.** ನೀನು ಹೇಳು: 'ಎಲೈ ಗ್ರಂಥದವರೇ, ಅಲ್ಲಾಹನಲ್ಲೂ ನಮಗೆ ಅವತೀರ್ಣಗೊಂಡುದರಲ್ಲೂ ಅದಕ್ಕೆ ಮುಂಚೆ ಅವತೀರ್ಣವಾದುದರಲ್ಲೂ ನಾವು ನಂಬಿಕೆಯಿರಿಸಿದ್ದೇವೆ ಎಂಬುದರ ಹೊರತು ನೀವು ನಮ್ಮ ಮೇಲೆ ಬೇರೇನಾದರೂ ತಪ್ಪು ಹೊರಿಸುತ್ತೀರೋ? ನಿಮ್ಮ ಪೈಕಿ ಹೆಚ್ಚಿನವರು ಆಜ್ಞಾಲಂಘಕರೇ ಆಗಿದ್ದಾರೆ.'

قُلْ يٰۤاَهْلَ الْكِتٰبِ هَلْ تَنْقِمُوْنَ مِنَّاۤ اِلَّاۤ اَنْ اٰمَنَّا بِاللّٰهِ وَمَاۤ اُنْزِلَ اِلَيْنَا وَمَاۤ اُنْزِلَ مِنْ قَبْلُ ۙ وَاَنَّ اَكْثَرَكُمْ فٰسِقُوْنَ ﴿٥٩﴾

**61.** ಹೇಳು: '(ನೀವು ಅತಿ ಹೆಚ್ಚು ದ್ವೇಷಿಸುವ) ಆ ವ್ಯಕ್ತಿಗಿಂತಲೂ ಅಲ್ಲಾಹನ ಬಳಿಯಲ್ಲಿ ಹೆಚ್ಚು ಕೆಟ್ಟವರ ಬಗ್ಗೆ ನಾನು ನಿಮಗೆ ಹೇಳಿಕೊಡಲೇ? ಅವರೆಂದರೆ, ಅಲ್ಲಾಹನ ಶಾಪಕ್ಕೆ ಗುರಿಯಾದವರೂ ಅವನ ಕೋಪಕ್ಕೆ ಈಡಾದವರೂ, ಅವನು ಮಂಗಗಳನ್ನಾಗಿಯೂ ಹಂದಿಗಳನ್ನಾಗಿಯೂ ಮಾಡಿದವರೂ ದುಷ್ಟ ಶಕ್ತಿಯ ಆರಾಧಕರೂ ಆಗಿದ್ದಾರೆ.[194] ಅವರ ಸ್ಥಾನ ಬಹಳ ನಿಕೃಷ್ಟವಾಗಿದೆ. ಸತ್ಪಥದಿಂದ ತುಂಬಾ ದೂರ ಸರಿದವರೂ ಅವರಾಗಿದ್ದಾರೆ.'

قُلْ هَلْ اُنَبِّئُكُمْ بِشَرٍّ مِّنْ ذٰلِكَ مَثُوْبَةً عِنْدَ اللّٰهِ ؕ مَنْ لَّعَنَهُ اللّٰهُ وَغَضِبَ عَلَيْهِ وَجَعَلَ مِنْهُمُ الْقِرَدَةَ وَالْخَنَازِيْرَ وَعَبَدَ الطَّاغُوْتَ ؕ اُولٰۤئِكَ شَرٌّ مَّكَانًا وَّاَضَلُّ عَنْ سَوَاۤءِ السَّبِيْلِ ﴿٦٠﴾

**62.** ಅವರು ನಿಮ್ಮ ಬಳಿಗೆ ಬಂದಾಗ, 'ನಾವು ನಂಬುತ್ತೇವೆ' ಎಂದು ಹೇಳುತ್ತಾರೆ. ವಾಸ್ತವದಲ್ಲಿ ಅವರು ಅವಿಶ್ವಾಸದಿಂದಲೇ ಪ್ರವೇಶಿಸಿದ್ದಾರೆ; ಹಾಗೆಯೇ ಅವರು ಹೊರಗೆ ಹೋಗಿದ್ದಾರೆ. ಅವರು ಬಚ್ಚಿಟ್ಟದ್ದನ್ನು ಅಲ್ಲಾಹನು ಚೆನ್ನಾಗಿ ತಿಳಿಯುತ್ತಾನೆ.

وَاِذَا جَاۤءُوْكُمْ قَالُوْۤا اٰمَنَّا وَقَدْ دَّخَلُوْا بِالْكُفْرِ وَهُمْ قَدْ خَرَجُوْا بِهٖ ؕ وَاللّٰهُ اَعْلَمُ بِمَا كَانُوْا يَكْتُمُوْنَ ﴿٦١﴾

194. `ನೀವು ಬೇರೆಯವರನ್ನು ಕೀಳಾಗಿ ಕಾಣುತ್ತೀರಿ. ಆದರೆ ವಾಸ್ತವದಲ್ಲಿ, ಕೀಳಾಗಿರುವವರು ಅಲ್ಲಾಹನ ಈ ಎಲ್ಲ ಶಿಕ್ಷೆಗಳಿಗೆ ಗುರಿಯಾದ ನೀವೇ ಆಗಿದ್ದೀರಿ' ಎಂದು ತಾತ್ಪರ್ಯ.

**63.** ಅವರಲ್ಲಿ ಹೆಚ್ಚಿನವರು ಪಾಪಕೃತ್ಯಗಳಲ್ಲೂ ಅತಿಕ್ರಮಗಳಲ್ಲೂ ನಿಷಿದ್ಧ ವಸ್ತುಗಳನ್ನು ತಿನ್ನುವುದರಲ್ಲೂ ತ್ವರಿತಗತಿಯಲ್ಲಿ ಸಾಗುವುದನ್ನು ನೀನು ಕಾಣುವಿ. ದಿಟವಾಗಿಯೂ ಅವರ ವರ್ತನೆ ಬಹಳ ಕೆಟ್ಟದ್ದಾಗಿದೆ.

وَتَرَىٰ كَثِيرًا مِّنْهُمْ يُسَارِعُونَ فِي الْإِثْمِ وَالْعُدْوَانِ وَأَكْلِهِمُ السُّحْتَ ۚ لَبِئْسَ مَا كَانُوا يَعْمَلُونَ ﴿٦٣﴾

**64.** ಕೆಟ್ಟಮಾತು ಆಡುವುದರಿಂದಲೂ ನಿಷಿದ್ಧ ವಸ್ತುಗಳನ್ನು ತಿನ್ನುವುದರಿಂದಲೂ ಅವರನ್ನು ಜ್ಞಾನಿಗಳೂ ಧರ್ಮಪಂಡಿತರೂ ಏಕೆ ತಡೆಯುವುದಿಲ್ಲ? ದಿಟವಾಗಿಯೂ ಅವರ ವರ್ತನೆ ಬಹಳ ಕೆಟ್ಟದ್ದಾಗಿದೆ.

لَوْلَا يَنْهَاهُمُ الرَّبَّانِيُّونَ وَالْأَحْبَارُ عَن قَوْلِهِمُ الْإِثْمَ وَأَكْلِهِمُ السُّحْتَ ۚ لَبِئْسَ مَا كَانُوا يَصْنَعُونَ ﴿٦٤﴾

**65.** 'ಅಲ್ಲಾಹನ ಕೈಗಳು ಬಂಧಿಸಲ್ಪಟ್ಟಿವೆ.'[195] ಎಂದು ಯಹೂದಿಯರು ಹೇಳುತ್ತಾರೆ. ಅವರು ಹೀಗೆ ಹೇಳುವ ಕಾರಣದಿಂದ ಅವರ ಕೈಗಳೇ ಬಂಧಿಸಲ್ಪಡುವುವು ಮತ್ತು ಅವರು ಶಾಪಗ್ರಸ್ತರಾಗುವರು. ಆದರೆ, ಅಲ್ಲಾಹನ ಎರಡೂ ಕೈಗಳು ವಿಶಾಲವಾಗಿ ತೆರೆದುಕೊಂಡಿವೆ. ತನ್ನ ಇಚ್ಛೆಯಂತೆ ಅವನು ವ್ಯಯಿಸುತ್ತಾನೆ. ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣವಾದುದು ಖಂಡಿತವಾಗಿಯೂ ಅವರಲ್ಲಿ ಹೆಚ್ಚಿನವರನ್ನು ಅತಿಕ್ರಮ ಮತ್ತು ಅವಿಶ್ವಾಸದಲ್ಲಿ ಇನ್ನೂ ಹೆಚ್ಚು ಮುಂದುವರಿಯುವಂತೆ ಮಾಡುವುದು. ನಾವು ಅವರೆಡೆಯಲ್ಲಿ ಪುನರುತ್ಥಾನ ದಿನದವರೆಗೆ ವೈರತ್ವ ಮತ್ತು ವಿದ್ವೇಷ ಹುಟ್ಟುವಂತೆ ಮಾಡಿರುವೆವು. ಅವರು ಯುದ್ಧಕ್ಕಾಗಿ ಬೆಂಕಿಯನ್ನು ಹೊತ್ತಿಸಿದಾಗೆಲ್ಲ ಅಲ್ಲಾಹನು ಅದನ್ನು ನಂದಿಸಿದ್ದಾನೆ. ಭೂಮಿಯಲ್ಲಿ ಗಲಭೆಗೊಂದಲಗಳನ್ನು ಹಬ್ಬಿಸಲು ಅವರು ಓಡಾಡುತ್ತಾರೆ. ಆದರೆ ಅಲ್ಲಾಹನು ಗಲಭೆಕೋರರನ್ನು ಇಷ್ಟಪಡುವುದಿಲ್ಲ.

وَقَالَتِ الْيَهُودُ يَدُ اللَّهِ مَغْلُولَةٌ ۚ غُلَّتْ أَيْدِيهِمْ وَلُعِنُوا بِمَا قَالُوا ۘ بَلْ يَدَاهُ مَبْسُوطَتَانِ يُنفِقُ كَيْفَ يَشَاءُ ۚ وَلَيَزِيدَنَّ كَثِيرًا مِّنْهُم مَّا أُنزِلَ إِلَيْكَ مِن رَّبِّكَ طُغْيَانًا وَكُفْرًا ۚ وَأَلْقَيْنَا بَيْنَهُمُ الْعَدَاوَةَ وَالْبَغْضَاءَ إِلَىٰ يَوْمِ الْقِيَامَةِ ۚ كُلَّمَا أَوْقَدُوا نَارًا لِّلْحَرْبِ أَطْفَأَهَا اللَّهُ ۚ وَيَسْعَوْنَ فِي الْأَرْضِ فَسَادًا ۚ وَاللَّهُ لَا يُحِبُّ الْمُفْسِدِينَ ﴿٦٥﴾

**66.** ಗ್ರಂಥದವರು ವಿಶ್ವಾಸ ಹೊಂದಿ ಭಯ ಭಕ್ತಿಯನ್ನು ತೋರಿಸಿದ್ದರೆ, ಖಂಡಿತವಾಗಿಯೂ ನಾವು ಅವರ ಕೆಡುಕುಗಳನ್ನು ಅವರಿಂದ ದೂರಮಾಡಿ ಅವರಿಗೆ ಸುಖಾನುಭೂತಿಯ ಸ್ವರ್ಗೀಯ ತೋಟಗಳಲ್ಲಿ ಪ್ರವೇಶ ನೀಡುತ್ತಿದ್ದೆವು.

وَلَوْ أَنَّ أَهْلَ الْكِتَابِ آمَنُوا وَاتَّقَوْا لَكَفَّرْنَا عَنْهُمْ سَيِّئَاتِهِمْ وَلَأَدْخَلْنَاهُمْ جَنَّاتِ النَّعِيمِ ﴿٦٦﴾

195. ಕೈಗಳು ಬಂಧಿಸಲ್ಪಟ್ಟಿವೆ ಎಂದರೆ ಜಿಪುಣನಾಗಿದ್ದಾನೆ ಎಂದು ತಾತ್ಪರ್ಯ.





**67.** ತೌರಾತನ್ನೂ ಇಂಜೀಲನ್ನೂ ಅವರ ಪ್ರಭುವಿನಿಂದ (ಈಗ) ಅವತೀರ್ಣವಾದುದನ್ನೂ ಅವರು ಯುಕ್ತ ರೀತಿಯಲ್ಲಿ ಅನುಸರಿಸಿರುತ್ತಿದ್ದರೆ, ಖಂಡಿತವಾಗಿಯೂ ಅವರು ತಮ್ಮ ಮೇಲ್ಭಾಗದಿಂದಲೂ ಅವರ ಪಾದಗಳ ಕೆಳಗಿನಿಂದಲೂ (ಉತ್ತಮ ವಸ್ತುಗಳನ್ನು) ತಿನ್ನುತ್ತಿದ್ದರು. ಮಿತವಾದಿಗಳಾದ ಜನರ ಒಂದು ಸಮೂಹ (ಸಹ) ಅವರೆಡೆಯಲ್ಲಿದೆ. ಆದರೆ ಅವರಲ್ಲಿ ಹೆಚ್ಚಿನವರು ಕೆಟ್ಟದ್ದಾಗಿ ವರ್ತಿಸುವವರು.

وَلَوْ أَنَّهُمْ أَقَامُوا التَّوْرَاةَ وَالْإِنجِيلَ وَمَا أُنزِلَ إِلَيْهِم مِّن رَّبِّهِمْ لَأَكَلُوا مِن فَوْقِهِمْ وَمِن تَحْتِ أَرْجُلِهِم ۚ مِّنْهُمْ أُمَّةٌ مُّقْتَصِدَةٌ ۖ وَكَثِيرٌ مِّنْهُمْ سَاءَ مَا يَعْمَلُونَ ﴿٦٧﴾

**68.** ಎಲೈ ಸಂದೇಶವಾಹಕನೇ, ನಿನಗೆ ನಿನ್ನ ಪ್ರಭುವಿನಿಂದ ಅವತೀರ್ಣವಾದುದನ್ನು ನೀನು (ಜನರಿಗೆ) ತಲಪಿಸು. ನೀನು ಹಾಗೆ ಮಾಡದಿದ್ದರೆ, ನೀನು ಅವನ ಸಂದೇಶವನ್ನು ತಲಪಿಸಲೇ ಇಲ್ಲ (ಎಂದಾಗುತ್ತದೆ). ಅಲ್ಲಾಹನು ನಿನ್ನನ್ನು ಮನುಷ್ಯರಿಂದ ರಕ್ಷಿಸುವನು. ಅವಿಶ್ವಾಸಿಗಳಿಗೆ ಅಲ್ಲಾಹನು ಖಂಡಿತವಾಗಿಯೂ (ವಿಜಯದ) ಮಾರ್ಗವನ್ನು ತೋರಿಸಲಾರ.

يَا أَيُّهَا الرَّسُولُ بَلِّغْ مَا أُنزِلَ إِلَيْكَ مِن رَّبِّكَ ۖ وَإِن لَّمْ تَفْعَلْ فَمَا بَلَّغْتَ رِسَالَتَهُ ۚ وَاللَّهُ يَعْصِمُكَ مِنَ النَّاسِ ۗ إِنَّ اللَّهَ لَا يَهْدِي الْقَوْمَ الْكَافِرِينَ ﴿٦٨﴾

**69.** ಹೇಳು: 'ಎಲೈ ಗ್ರಂಥದವರೇ, ನೀವು ತೌರಾತನ್ನೂ ಇಂಜೀಲನ್ನೂ ನಿಮ್ಮ ಪ್ರಭುವಿನಿಂದ (ಈಗ) ಅವತೀರ್ಣವಾದುದನ್ನೂ ಯುಕ್ತ ರೀತಿಯಲ್ಲಿ ಅನುಸರಿಸದಿದ್ದರೆ ನಿಮ್ಮ ನಿಲುವು ಯಾವುದನ್ನೂ ಆಧರಿಸಿಕೊಂಡಿರುವುದಿಲ್ಲ.' ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣವಾದುದು ಖಂಡಿತವಾಗಿಯೂ ಅವರಲ್ಲಿ ಹೆಚ್ಚಿನವರನ್ನು ಅತಿಕ್ರಮ ಮತ್ತು ಅವಿಶ್ವಾಸದಲ್ಲಿ ಇನ್ನೂ ಹೆಚ್ಚು ಮುಂದುವರಿಯುವಂತೆ ಮಾಡುವುದು. ಆದ್ದರಿಂದ ಅವಿಶ್ವಾಸಿಗಳಾದ ಜನರಿಗಾಗಿ ನೀವು ಕೊರಗಬೇಕಾಗಿಲ್ಲ.

قُلْ يَا أَهْلَ الْكِتَابِ لَسْتُمْ عَلَىٰ شَيْءٍ حَتَّىٰ تُقِيمُوا التَّوْرَاةَ وَالْإِنجِيلَ وَمَا أُنزِلَ إِلَيْكُم مِّن رَّبِّكُمْ ۗ وَلَيَزِيدَنَّ كَثِيرًا مِّنْهُم مَّا أُنزِلَ إِلَيْكَ مِن رَّبِّكَ طُغْيَانًا وَكُفْرًا ۖ فَلَا تَأْسَ عَلَى الْقَوْمِ الْكَافِرِينَ ﴿٦٩﴾

**70.** ಖಂಡಿತವಾಗಿಯೂ ವಿಶ್ವಾಸಿಗಳಿಗೂ ಹಾಗೂ ಯಹೂದ್ಯರು, ಸಾಬಿಗಳು,[196] ಕ್ರೈಸ್ತರು - (ಇವರ ಪೈಕಿ)

إِنَّ الَّذِينَ آمَنُوا وَالَّذِينَ هَادُوا

196. ಯಹೂದ್ಯರೂ ಕ್ರೈಸ್ತರೂ ಅಲ್ಲದ, ತಾವು ಗ್ರಂಥದವರು (ಅಹ್ಲ್‌ಕಿತಾಬ್) ಎಂದು ಹೇಳುವವರನ್ನು ಅರಬಿಯರು `ಸಾಬಿ' ಎಂದು ಹೇಳುತ್ತಿದ್ದರು. ಆ ಕಾಲದಲ್ಲಿ ಅಂತಹ ಒಂದು ಪಂಗಡದ ಜನರು ಅರಬ್ ರಾಜ್ಯಗಳಲ್ಲಿದ್ದರು. ಅವರು ಪೂರ್ವಿಕ ಪ್ರವಾದಿಗಳನ್ನು ಮತ್ತು ದೈವಿಕ ಗ್ರಂಥಗಳನ್ನು ಅಸ್ಪಷ್ಟವಾದ ರೀತಿಯಲ್ಲಿ ಗೌರವಿಸುತ್ತಿದ್ದರು. ಅದಲ್ಲದೆ, ಒಬ್ಬನು ಮುಸ್ಲಿಂ ಆದರೆ ಮಕ್ಕದವರು ಆತನನ್ನು `ಸಾಬಿ' ಆದನು ಎಂದು ಹೇಳುತ್ತಿದ್ದರು - ಮತಪರಿವರ್ತನೆ ಮಾಡಿದವನು ಎಂಬರ್ಥದಲ್ಲಿ.

ಯಾರೇ ಆಗಲಿ, ಪ್ರಾಮಾಣಿಕವಾಗಿ ಅಲ್ಲಾಹನಲ್ಲೂ ಅಂತ್ಯ ದಿನದ ಬಗ್ಗೆಯೂ ವಿಶ್ವಾಸವಿಟ್ಟು, ಸತ್ಕಾರ್ಯಗಳನ್ನು ಮಾಡಿದರೆ ಅವರಿಗೂ ಯಾವ ಭಯವೂ ಉಂಟಾಗಲಾರದು. ಅವರಿಗೆ ಯಾವ ಶೋಕವೂ ಇರಲಾರದು.[196A]

وَالصَّابِئُونَ وَالنَّصَارَىٰ مَنْ آمَنَ بِاللَّهِ وَالْيَوْمِ الْآخِرِ وَعَمِلَ صَالِحًا فَلَا خَوْفٌ عَلَيْهِمْ وَلَا هُمْ يَحْزَنُونَ ﴿٦٩﴾

71. ನಿಶ್ಚಯವಾಗಿಯೂ ನಾವು ಇಸ್ರಾಈಲ್ ಸಂತತಿಗಳಿಂದ ಕರಾರು ಪಡೆದುಕೊಂಡಿದ್ದೆವು ಹಾಗೂ ಅವರ ಬಳಿಗೆ ಅನೇಕ ಸಂದೇಶವಾಹಕರನ್ನು ಕಳುಹಿಸಿದ್ದೆವು. ಅವರ ಮನಸ್ಸಿಗೆ ಹಿಡಿಸದ ಉಪದೇಶಗಳ ಸಹಿತ ಅವರ ಬಳಿಗೆ ಪ್ರತಿಯೊಬ್ಬ ಸಂದೇಶವಾಹಕನೂ ಬಂದಾಗಲೆಲ್ಲ, ಕೆಲವರನ್ನು ಅವರು ಅಸತ್ಯವಾದಿಯೆಂದು ಹೇಳಿದರು; ಕೆಲವರನ್ನು ಅವರು ಕೊಲ್ಲಲು ಪ್ರಯತ್ನಿಸಿದರು.

لَقَدْ أَخَذْنَا مِيثَاقَ بَنِي إِسْرَائِيلَ وَأَرْسَلْنَا إِلَيْهِمْ رُسُلًا ۖ كُلَّمَا جَاءَهُمْ رَسُولٌ بِمَا لَا تَهْوَىٰ أَنْفُسُهُمْ فَرِيقًا كَذَّبُوا وَفَرِيقًا يَقْتُلُونَ ﴿٧٠﴾

72. ಆದರಿಂದೇನೂ ಹಾನಿ ಇಲ್ಲವೆಂದು ಅವರು ಭಾವಿಸಿದರು. ಹಾಗೆ ಅವರು ಕುರುಡರೂ ಕಿವುಡರೂ ಆದರು. ಆದಾಗ್ಯೂ ಅಲ್ಲಾಹನು ಅವರ ಮೇಲೆ ಕರುಣೆ ತೋರಿಸಿದನು. (ಆದರೆ) ಆ ಮೇಲೆ ಸಹ ಅವರಲ್ಲಿ ಹೆಚ್ಚಿನವರು ಕುರುಡರೂ ಕಿವುಡರೂ ಆಗಿಯೇ ಉಳಿದರು. ಅವರು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಕಾಣುತ್ತಿದ್ದಾನೆ.

وَحَسِبُوا أَلَّا تَكُونَ فِتْنَةٌ فَعَمُوا وَصَمُّوا ثُمَّ تَابَ اللَّهُ عَلَيْهِمْ ثُمَّ عَمُوا وَصَمُّوا كَثِيرٌ مِنْهُمْ ۚ وَاللَّهُ بَصِيرٌ بِمَا يَعْمَلُونَ ﴿٧١﴾

73. 'ಖಂಡಿತವಾಗಿಯೂ ಮರ್ಯಮ್ ಸುತ ಮಸೀಹನೇ ಅಲ್ಲಾಹನು' ಎಂದು ಹೇಳುವವರು ನಿಸ್ಸಂಶಯವಾಗಿಯೂ ಅವಿಶ್ವಾಸಿಗಳಾಗಿದ್ದಾರೆ. ಆದರೆ ಮಸೀಹ್ (ಸ್ವತಃ) 'ಇಸ್ರಾಈಲ್ ಸಂತತಿಗಳೇ, ನೀವು ನನ್ನ ಪ್ರಭು ಹಾಗೂ ನಿಮ್ಮ ಪ್ರಭುವಾದ ಅಲ್ಲಾಹನನ್ನು ಆರಾಧಿಸಿರಿ' ಎಂದು ಹೇಳಿದ್ದರು. ಯಾವನಾದರೂ ಅಲ್ಲಾಹನಿಗೆ ಸಹಭಾಗಿತ್ವವನ್ನು ಕಲ್ಪಿಸಿದರೆ, (ಅವನು ತಿಳಿದುಕೊಳ್ಳಲಿ) ಅಲ್ಲಾಹನು ಅವನಿಗೆ ಸ್ವರ್ಗವನ್ನು ನಿಷಿದ್ಧಗೊಳಿಸಿದ್ದಾನೆ. ಅವನ ವಾಸಸ್ಥಳ ನರಕವಾಗಿದೆ. ಅಧರ್ಮಿಗಳ ಸಹಾಯಕ್ಕೆ ಯಾರೂ ಇರುವುದಿಲ್ಲ.

لَقَدْ كَفَرَ الَّذِينَ قَالُوا إِنَّ اللَّهَ هُوَ الْمَسِيحُ ابْنُ مَرْيَمَ ۖ وَقَالَ الْمَسِيحُ يَا بَنِي إِسْرَائِيلَ اعْبُدُوا اللَّهَ رَبِّي وَرَبَّكُمْ ۖ إِنَّهُ مَنْ يُشْرِكْ بِاللَّهِ فَقَدْ حَرَّمَ اللَّهُ عَلَيْهِ الْجَنَّةَ وَمَأْوَاهُ النَّارُ ۖ وَمَا لِلظَّالِمِينَ مِنْ أَنْصَارٍ ﴿٧٢﴾

196A. ಅಧ್ಯಾಯ 2 ವಚನ 63 ರ ಟಿಪ್ಪಣಿ ನೋಡಿರಿ.





74. 'ಖಂಡಿತವಾಗಿಯೂ ಅಲ್ಲಾಹನು ಮೂವರಲ್ಲಿ ಒಬ್ಬನು' ಎಂದು ಹೇಳುವವರು ನಿಸ್ಸಂದೇಹವಾಗಿಯೂ ಅವಿಶ್ವಾಸಿಗಳಾಗಿದ್ದಾರೆ. ವಾಸ್ತವದಲ್ಲಿ, ಒಬ್ಬನೇ ಒಬ್ಬ ದೇವನ ಹೊರತು ಬೇರೆ ದೇವನಿಲ್ಲ. ತಾವು ಹೇಳುವುದನ್ನು ಅವರು ನಿಲ್ಲಿಸದಿದ್ದರೆ ಖಂಡಿತವಾಗಿಯೂ ಅವರಲ್ಲಿ ಅವಿಶ್ವಾಸಿಗಳಿಗೆ ಯಾತನಾಮಯವಾದ ಶಿಕ್ಷೆ ಬಂದೆರಗುವುದು.

لَقَدْ كَفَرَ الَّذِينَ قَالُوا إِنَّ اللَّهَ ثَالِثُ ثَلَاثَةٍ ۘ وَمَا مِنْ إِلَٰهٍ إِلَّا إِلَٰهٌ وَاحِدٌ ۚ وَإِنْ لَمْ يَنْتَهُوا عَمَّا يَقُولُونَ لَيَمَسَّنَّ الَّذِينَ كَفَرُوا مِنْهُمْ عَذَابٌ أَلِيمٌ ﴿٧٣﴾

75. ಅವರು ಇನ್ನು ಕೂಡ ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳಿ ಅವನೊಡನೆ ಪಾಪವಿಮುಕ್ತಿಗಾಗಿ ಯಾಚಿಸುವುದಿಲ್ಲವೇ? ಅಲ್ಲಾಹನು ಬಹಳವಾಗಿ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

أَفَلَا يَتُوبُونَ إِلَى اللَّهِ وَيَسْتَغْفِرُونَهُ ۚ وَاللَّهُ غَفُورٌ رَحِيمٌ ﴿٧٤﴾

76. ಮರ್ಯಮ್ ಪುತ್ರ ಮಸೀಹ್ ಕೇವಲ ಒಬ್ಬ ಸಂದೇಶವಾಹಕರಾಗಿದ್ದರು. ಅವರಿಗಿಂತ ಹಿಂದಿನ ಎಲ್ಲ ಸಂದೇಶವಾಹಕರು ಗತಿಸಿದ್ದಾರೆ.[197] ಅವರ ಮಾತೆ ಸತ್ಯವಂತೆಯಾಗಿದ್ದರು. ಅವರಿಬ್ಬರೂ ಆಹಾರ ಸೇವಿಸುತ್ತಿದ್ದರು.[198] ನೋಡು, ಅವರ ಒಳಿತಿಗಾಗಿ ನಾವು ಹೇಗೆ ದೃಷ್ಟಾಂತಗಳನ್ನು ವಿವರಿಸಿ ಕೊಡುತ್ತೇವೆಂದು. ಆದರೂ ಅವರು ಹೇಗೆ ವ್ಯತಿಚಲಿಸುತ್ತಾರೆಂದು ಸಹ ನೋಡು.

مَا الْمَسِيحُ ابْنُ مَرْيَمَ إِلَّا رَسُولٌ قَدْ خَلَتْ مِنْ قَبْلِهِ الرُّسُلُ وَأُمُّهُ صِدِّيقَةٌ ۖ كَانَا يَأْكُلَانِ الطَّعَامَ ۗ انْظُرْ كَيْفَ نُبَيِّنُ لَهُمُ الْآيَاتِ ثُمَّ انْظُرْ أَنَّىٰ يُؤْفَكُونَ ﴿٧٥﴾

77. ಹೇಳು: 'ಅಲ್ಲಾಹನ ಹೊರತು, ನಿಮಗೇನಾದರೂ ಕೆಡುಕು ಅಥವಾ ಒಳಿತು ಮಾಡಲು ಅಶಕ್ತವಾಗಿರುವಂಥದ್ದನ್ನು ನೀವು ಆರಾಧಿಸುತ್ತೀರೇನು?' ಎಲ್ಲ ಕೇಳುವವನೂ ಎಲ್ಲ ಬಲ್ಲವನೂ ಅಲ್ಲಾಹನೇ ಆಗಿದ್ದಾನೆ.

قُلْ أَتَعْبُدُونَ مِنْ دُونِ اللَّهِ مَا لَا يَمْلِكُ لَكُمْ ضَرًّا وَلَا نَفْعًا ۚ وَاللَّهُ هُوَ السَّمِيعُ الْعَلِيمُ ﴿٧٦﴾

78. ಹೇಳು: 'ಎಲೈ ಗ್ರಂಥದವರೇ, ನೀವು ನಿಮ್ಮ ಧರ್ಮದ ವಿಚಾರದಲ್ಲಿ ಅನ್ಯಾಯವಾಗಿ ಮಿತಿಮೀರ

قُلْ يَا أَهْلَ الْكِتَابِ لَا تَغْلُوا فِي دِينِكُمْ

197. ಖಲಾ = ಗತಿಸು, ನಿಧನಹೊಂದು. ಹಝ್ರತ್ ಈಸಾ ಅಲೈಹಿಸ್ಸಲಾಮ್‌ರಿಗೆ ಮುಂಚೆ ಬಂದ ಎಲ್ಲ ಪ್ರವಾದಿಗಳೂ ನಿಧನ ಹೊಂದಿದ್ದಾರೆಂದು ಈ ಖುರ್‌ಆನ್ ವಾಕ್ಯ ರುಜುಪಡಿಸುತ್ತದೆ. ಅದೇ ರೀತಿ, ಸೂರಃ ಆಲಿ ಇಮ್ರಾನ್‌ನಲ್ಲಿ `ವಮಾ ಮುಹಮ್ಮದುನ್ ಇಲ್ಲಾ ರಸೂಲುನ್ ಖದ್‌ಖಲತ್ ಮಿನ್ ಖಬ್ಲಿಹಿರ್ರುಸುಲು' ಎಂದು ಉಲ್ಲೇಖಿಸಲ್ಪಟ್ಟಿದೆ (3:145). ಅಂದರೆ ಮುಹಮ್ಮದ್ ಪೈಗಂಬರ್ ಸಲ್ಲಲ್ಲಾಹು ಅಲೈಹಿವಸಲ್ಲರಿಗೆ ಮುಂಚೆ ಬಂದ ಎಲ್ಲ ಪ್ರವಾದಿಗಳೂ ನಿಧನರಾಗಿದ್ದರೆಂದು ತಾತ್ಪರ್ಯ. ಅವರಲ್ಲಿ ಪ್ರವಾದಿ ಈಸಾ ಅಲೈಹಿಸ್ಸಲಾಂ ಸಹ ಸೇರುತ್ತಾರೆ.

198. ಮಸೀಹ್ ದೇವರಲ್ಲ ಎಂಬುದಕ್ಕೆ ಇದೊಂದು ಪುರಾವೆಯಾಗಿದೆ.

ಬೇಡಿರಿ. ಮುಂಚೆ ದಾರಿ ತಪ್ಪಿದ ಒಂದು ಜನತೆಯ ಸ್ವೇಚ್ಛಾಚಾರಗಳನ್ನು ನೀವು ಅನುಸರಿಸಬೇಡಿರಿ. ಅವರು ಅನೇಕರನ್ನು ದಾರಿ ತಪ್ಪಿಸಿದ್ದಾರೆ ಹಾಗೂ ಅವರು (ಸ್ವತಃ) ಸತ್ಪಥದಿಂದ ವ್ಯತಿಕ್ರಮಿಸಿದ್ದಾರೆ.'

غَيْرَ الْحَقِّ وَلَا تَتَّبِعُوْٓا اَهْوَآءَ قَوْمٍ قَدْ ضَلُّوْا مِنْ قَبْلُ وَاَضَلُّوْا كَثِيْرًا وَّضَلُّوْا عَنْ سَوَآءِ السَّبِيْلِ ﴿٧٧﴾

79. ಇಸ್ರಾಈಲ್ ಸಂತತಿಗಳಲ್ಲಿ ಅವಿಶ್ವಾಸಿಗಳಾದವರು ದಾವೂದ್ ಮತ್ತು ಮರ್ಯಮ್ ಪುತ್ರ ಈಸಾ ಇವರ ನಾಲಗೆಗಳಿಂದ ಶಪಿಸಲ್ಪಟ್ಟಿರುವರು. ಅದು, ಅವರು ಆಜ್ಞೋಲಂಘನ ಮಾಡಿರುವುದರಿಂದ ಮತ್ತು ಎಲ್ಲೆ ಮೀರಿ ವರ್ತಿಸಿರುವುದರಿಂದ ಆಗಿದೆ.

لُعِنَ الَّذِيْنَ كَفَرُوْا مِنْۢ بَنِيْٓ اِسْرَآءِيْلَ عَلٰى لِسَانِ دَاوٗدَ وَعِيْسَى ابْنِ مَرْيَمَ ؕ ذٰلِكَ بِمَا عَصَوْا وَّكَانُوْا يَعْتَدُوْنَ ﴿٧٨﴾

80. ಅವರು ತಾವು ಮಾಡುತ್ತಿರುವ ದುಷ್ಕೃತ್ಯಗಳಿಂದ ಪರಸ್ಪರ ತಡೆಯುತ್ತಿರಲಿಲ್ಲ. ಅವರು ಮಾಡುತ್ತಿದ್ದುದು ಬಹಳ ದುಷ್ಟ ಕೆಲಸವೇ ಆಗಿತ್ತು.

كَانُوْا لَا يَتَنَاهَوْنَ عَنْ مُّنْكَرٍ فَعَلُوْهُ ؕ لَبِئْسَ مَا كَانُوْا يَفْعَلُوْنَ ﴿٧٩﴾

81. ಅವರಲ್ಲಿ ಹೆಚ್ಚಿನವರು ಅವಿಶ್ವಾಸಿಗಳನ್ನು (ತಮ್ಮ) ಮಿತ್ರರನ್ನಾಗಿ ಮಾಡುವುದನ್ನು ನೀನು ಕಾಣುವೆ. ಅವರ ಆತ್ಮಗಳು ಅವರಿಗೋಸ್ಕರ ಮುಂಚಿತವಾಗಿಯೇ ಅತ್ಯಂತ ಕೆಟ್ಟದ್ದನ್ನು ಸಿದ್ಧಪಡಿಸಿಟ್ಟಿವೆ. (ಅದರ) ಫಲವಾಗಿ ಅಲ್ಲಾಹನು ಅವರ ಮೇಲೆ ಕೋಪಗೊಂಡಿದ್ದಾನೆ. (ಈ) ಶಿಕ್ಷೆಯಲ್ಲಿ ಅವರು ದೀರ್ಘಕಾಲ ಕಳೆಯುವರು.

تَرٰى كَثِيْرًا مِّنْهُمْ يَتَوَلَّوْنَ الَّذِيْنَ كَفَرُوْا ؕ لَبِئْسَ مَا قَدَّمَتْ لَهُمْ اَنْفُسُهُمْ اَنْ سَخِطَ اللّٰهُ عَلَيْهِمْ وَفِي الْعَذَابِ هُمْ خٰلِدُوْنَ ﴿٨٠﴾

82. ಇವರು ಅಲ್ಲಾಹನಲ್ಲೂ ಈ ಪ್ರವಾದಿಯಲ್ಲೂ ಅವರಿಗೆ ಅವತೀರ್ಣವಾದುದರಲ್ಲೂ ವಿಶ್ವಾಸ ಹೊಂದಿರುತ್ತಿದ್ದರೆ, ಅವರನ್ನು (ಅವಿಶ್ವಾಸಿಗಳನ್ನು) ಸಹಾಯಕ ಮಿತ್ರರನ್ನಾಗಿ ಮಾಡುತ್ತಿರಲಿಲ್ಲ. ಆದರೆ ಇವರಲ್ಲಿ ಹೆಚ್ಚಿನವರು ಅವಿಧೇಯತೆ ತೋರಿಸುವವರಾಗಿದ್ದಾರೆ.

وَلَوْ كَانُوْا يُؤْمِنُوْنَ بِاللّٰهِ وَالنَّبِيِّ وَمَآ اُنْزِلَ اِلَيْهِ مَا اتَّخَذُوْهُمْ اَوْلِيَآءَ وَلٰكِنَّ كَثِيْرًا مِّنْهُمْ فٰسِقُوْنَ ﴿٨١﴾

83. ಖಂಡಿತವಾಗಿಯೂ ಜನರ ಪೈಕಿ ಯಹೂದ್ಯರೂ ಬಹು ದೇವಾರಾಧಕರೂ ಸತ್ಯವಿಶ್ವಾಸಿಗಳೊಡನೆ ಕಟು ವಿರೋಧವಿರುವವರಾಗಿದ್ದಾರೆಂದು ನೀನು ಕಾಣುವೆ. 'ನಾವು ಕ್ರೈಸ್ತರು' ಎಂದು ಹೇಳುವವರು ಸತ್ಯವಿಶ್ವಾಸಿ ಗಳೊಡನೆ ಪ್ರೀತಿಯಿಂದ ಇರುವವ

لَتَجِدَنَّ اَشَدَّ النَّاسِ عَدَاوَةً لِّلَّذِيْنَ اٰمَنُوا الْيَهُوْدَ وَالَّذِيْنَ اَشْرَكُوْا ۚ وَلَتَجِدَنَّ اَقْرَبَهُمْ مَّوَدَّةً لِّلَّذِيْنَ اٰمَنُوا الَّذِيْنَ قَالُوْٓا اِنَّا نَصٰرٰى ؕ ذٰلِكَ





ರಾಗಿಯೂ ನೀನು ಕಾಣುವೆ. ಅವರಲ್ಲಿ ಪಂಡಿತರೂ ಪುರೋಹಿತರೂ ಇದ್ದಾರೆ ಮತ್ತು ಅವರು ಅಹಂಕಾರ ತೋರಿಸುವುದಿಲ್ಲವೆಂಬುದೇ ಅದಕ್ಕೆ ಕಾರಣ.

بِاَنَّ مِنْهُمْ قِسِّيْسِيْنَ وَرُهْبَانًا وَّاَنَّهُمْ لَا يَسْتَكْبِرُوْنَ ﴿٨٢﴾

84. ಈ ಸಂದೇಶವಾಹಕನಿಗೆ ಅವತೀರ್ಣವಾದುದನ್ನು (ಖುರ್‌ಆನನ್ನು) ಅವರು ಆಲಿಸುವಾಗ ಅವರಿಗೆ ಸತ್ಯವನ್ನು ಮನಗಾಣಲು ಸಾಧ್ಯವಾದುದರಿಂದ ಅವರ ಕಣ್ಣುಗಳಿಂದ ಭಾಷ್ಪ ಸುರಿಯುವುದನ್ನು ನೀನು ಕಾಣುವೆ. 'ನಮ್ಮ ಪ್ರಭೂ, ನಾವು ನಂಬಿರುವೆವು. ಆದ್ದರಿಂದ ನಮ್ಮನ್ನು (ಸತ್ಯಕ್ಕೆ) ಸಾಕ್ಷ್ಯವಹಿಸಿದವರೊಂದಿಗೆ ದಾಖಲಿಸು' ಎಂದು ಅವರು ಹೇಳುವರು.

وَاِذَا سَمِعُوْا مَآ اُنْزِلَ اِلَى الرَّسُوْلِ تَرٰٓى اَعْيُنَهُمْ تَفِيْضُ مِنَ الدَّمْعِ مِمَّا عَرَفُوْا مِنَ الْحَقِّ ۚ يَقُوْلُوْنَ رَبَّنَآ اٰمَنَّا فَاكْتُبْنَا مَعَ الشّٰهِدِيْنَ ﴿٨٣﴾

85. 'ನಮ್ಮ ಪ್ರಭೂ, ಸಜ್ಜನರೊಂದಿಗೆ ನಮ್ಮನ್ನು ಸೇರಿಸಬೇಕೆಂದು ನಾವು ಬಯಸುತ್ತಿರುವಾಗ, ನಾವು ಅಲ್ಲಾಹನಲ್ಲೂ ನಮಗೆ ದೊರೆತ ಸತ್ಯದಲ್ಲೂ ವಿಶ್ವಾಸ ಹೊಂದದಿರಲಿಕ್ಕೆ ನಮಗೇನಾಗಿದೆ?' (ಎಂದು ಸಹ ಅವರು ಹೇಳುವರು.)

وَمَا لَنَا لَا نُؤْمِنُ بِاللّٰهِ وَمَا جَآءَنَا مِنَ الْحَقِّ ۙ وَنَطْمَعُ اَنْ يُّدْخِلَنَا رَبُّنَا مَعَ الْقَوْمِ الصّٰلِحِيْنَ ﴿٨٤﴾

86. ಅವರು (ಹೀಗೆ) ಹೇಳಿದ ಕಾರಣದಿಂದ ಅಲ್ಲಾಹನು ಅವರಿಗೆ ಕೆಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳನ್ನು ಪ್ರತಿಫಲವಾಗಿ ನೀಡುವನು. ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು. ಸತ್ಕರ್ಮಿಗಳಿಗಿರುವ ಪ್ರತಿಫಲ ಇದೇ ಆಗಿದೆ.

فَاَثَابَهُمُ اللّٰهُ بِمَا قَالُوْا جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ؕ وَذٰلِكَ جَزَآءُ الْمُحْسِنِيْنَ ﴿٨٥﴾

87. ಆದರೆ, ಅವಿಶ್ವಾಸ ಹೊಂದಿ ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುವವರು ನರಕ ವಾಸಿಗಳಾಗಿದ್ದಾರೆ.

وَالَّذِيْنَ كَفَرُوْا وَكَذَّبُوْا بِاٰيٰتِنَآ اُولٰٓئِكَ اَصْحٰبُ الْجَحِيْمِ ﴿٨٦﴾

88. ಎಲೈ ವಿಶ್ವಾಸಿಗಳೇ, ಅಲ್ಲಾಹನು ನಿಮಗೆ ಧರ್ಮಬದ್ಧಗೊಳಿಸಿರುವ ಉತ್ತಮ ವಸ್ತುಗಳನ್ನು ನೀವು ನಿಷಿದ್ಧಗೊಳಿಸಬೇಡಿರಿ. ನೀವು ಮಿತಿಮೀರಲೂ ಬಾರದು. ಎಲ್ಲೆ ಮೀರುವವರನ್ನು ಅಲ್ಲಾಹನು ಖಂಡಿತವಾಗಿಯೂ ಇಷ್ಟಪಡುವುದಿಲ್ಲ.

يٰٓاَيُّهَا الَّذِيْنَ اٰمَنُوْا لَا تُحَرِّمُوْا طَيِّبٰتِ مَآ اَحَلَّ اللّٰهُ لَكُمْ وَلَا تَعْتَدُوْا ؕ اِنَّ اللّٰهَ لَا يُحِبُّ الْمُعْتَدِيْنَ ﴿٨٧﴾

**89.** ಅಲ್ಲಾಹನು ನಿಮಗೆ ಒದಗಿಸಿ ಕೊಟ್ಟವುಗಳಿಂದ ಧರ್ಮಬದ್ಧವೂ ಪರಿಶುದ್ಧವೂ ಆದ ವಸ್ತುಗಳನ್ನು ನೀವು ಭುಜಿಸಿರಿ. ನೀವು ನಂಬಿ ಕೊಂಡಿರುವ ಅಲ್ಲಾಹನಿಗೆ ಭಯಭಕ್ತಿಯುಳ್ಳವರಾಗಿರಿ.

وَكُلُوا مِمَّا رَزَقَكُمُ اللَّهُ حَلَالًا طَيِّبًا ۚ وَاتَّقُوا اللَّهَ الَّذِي أَنْتُمْ بِهِ مُؤْمِنُونَ ﴿٨٨﴾

**90.** ನಿಮ್ಮ ನಿರರ್ಥಕ ಶಪಥಗಳ ಕುರಿತು ಅಲ್ಲಾಹನು ನಿಮ್ಮನ್ನು ಶಿಕ್ಷಿಸಲಾರ.[199] ಆದರೆ ನೀವು ಹೃತ್ಪೂರ್ವಕವಾಗಿ ಮಾಡಿದ ಶಪಥಗಳ ಬಗ್ಗೆ (ಅವುಗಳನ್ನು ಉಲ್ಲಂಘಿಸಿದರೆ) ಅವನು ನಿಮ್ಮನ್ನು ಶಿಕ್ಷಿಸುವನು. ಅದಕ್ಕೆ ಪ್ರಾಯಶ್ಚಿತ್ತವೇನೆಂದರೆ, ಹತ್ತು ನಿರ್ಗತಿಕರಿಗೆ, ನೀವು ನಿಮ್ಮ ಕುಟುಂಬಕ್ಕೆ ಉಣಬಡಿಸುವಂತಹ ಆಹಾರವನ್ನು ಕೊಡಬೇಕು; ಅಥವಾ ಅವರಿಗೆ ಬಟ್ಟೆ ಬರೆಗಳನ್ನು ನೀಡಬೇಕು; ಅಥವಾ ಒಬ್ಬ ಗುಲಾಮನನ್ನು ಬಂಧಮುಕ್ತಗೊಳಿಸಬೇಕು; ಹೀಗೆ ಮಾಡಲು ಸಾಧ್ಯವಿಲ್ಲದವರು ಮೂರು ದಿವಸ ಉಪವಾಸ ಅನುಷ್ಠಿಸಬೇಕು. ಇದು ನಿಮ್ಮ ಶಪಥಕ್ಕೆ (ಅದನ್ನು ಉಲ್ಲಂಘಿಸಿದುದಕ್ಕೆ) ಪ್ರಾಯಶ್ಚಿತ್ತವಾಗಿದೆ. ನೀವು ನಿಮ್ಮ ಪ್ರತಿಜ್ಞೆಗಳನ್ನು ಪಾಲಿಸಿರಿ. ನೀವು ಕೃತಜ್ಞತೆ ತೋರಿಸುವವರಾಗಲಿಕ್ಕೋಸ್ಕರ ಹೀಗೆ ಅಲ್ಲಾಹನು ತನ್ನ ವಿಧಿಗಳನ್ನು ನಿಮಗೆ ವಿವರಿಸಿಕೊಡುತ್ತಾನೆ.

لَا يُؤَاخِذُكُمُ اللَّهُ بِاللَّغْوِ فِي أَيْمَانِكُمْ وَلَٰكِنْ يُؤَاخِذُكُمْ بِمَا عَقَّدْتُمُ الْأَيْمَانَ ۖ فَكَفَّارَتُهُ إِطْعَامُ عَشَرَةِ مَسَاكِينَ مِنْ أَوْسَطِ مَا تُطْعِمُونَ أَهْلِيكُمْ أَوْ كِسْوَتُهُمْ أَوْ تَحْرِيرُ رَقَبَةٍ ۖ فَمَنْ لَمْ يَجِدْ فَصِيَامُ ثَلَاثَةِ أَيَّامٍ ۚ ذَٰلِكَ كَفَّارَةُ أَيْمَانِكُمْ إِذَا حَلَفْتُمْ ۚ وَاحْفَظُوا أَيْمَانَكُمْ ۚ كَذَٰلِكَ يُبَيِّنُ اللَّهُ لَكُمْ آيَاتِهِ لَعَلَّكُمْ تَشْكُرُونَ ﴿٨٩﴾

**91.** ಎಲೈ ವಿಶ್ವಾಸಿಗಳೇ, ನಿಸ್ಸಂಶಯವಾಗಿಯೂ, ಮದ್ಯಪಾನ,[199A] ಜೂಜಾಟ, ಮೂರ್ತಿಪೂಜೆ, ಬಾಣ ವೆಸೆದು ಶಕುನ ನೋಡುವುದು ಇವೆಲ್ಲ ಹೇಯವಾದ ಪೈಶಾಚಿಕ ಕೃತ್ಯಗಳಾಗಿವೆ. ಆದ್ದರಿಂದ ನೀವು ಏಳಿಗೆ ಹೊಂದಲಿಕ್ಕಾಗಿ ಅವುಗಳಿಂದೆಲ್ಲ ದೂರವಿರಿ.

يَا أَيُّهَا الَّذِينَ آمَنُوا إِنَّمَا الْخَمْرُ وَالْمَيْسِرُ وَالْأَنْصَابُ وَالْأَزْلَامُ رِجْسٌ مِنْ عَمَلِ الشَّيْطَانِ فَاجْتَنِبُوهُ لَعَلَّكُمْ تُفْلِحُونَ ﴿٩٠﴾

**92.** ಮದ್ಯಪಾನ ಮತ್ತು ಜೂಜು ಮೂಲಕ ನಿಮ್ಮೊಳಗೆ ವೈರತ್ವವೂ ದ್ವೇಷ ಭಾವನೆಯೂ ಉಂಟಾಗಬೇಕೆಂದೂ ಅಲ್ಲಾಹನ ಸ್ಮರಣೆ ಮತ್ತು ನಮಾಝ್‌ನಿಂದ ನಿಮ್ಮನ್ನು ತಡೆಯಬೇಕೆಂದೂ ಶೈತಾನನು ಖಂಡಿತವಾಗಿಯೂ ಬಯಸುತ್ತಾನೆ. ಹಾಗಿರುವಾಗ ನೀವು ಪರಾಙ್ಮುಖರಾಗುವುದಿಲ್ಲವೇನು?

إِنَّمَا يُرِيدُ الشَّيْطَانُ أَنْ يُوقِعَ بَيْنَكُمُ الْعَدَاوَةَ وَالْبَغْضَاءَ فِي الْخَمْرِ وَالْمَيْسِرِ وَيَصُدَّكُمْ عَنْ ذِكْرِ اللَّهِ وَعَنِ الصَّلَاةِ ۖ فَهَلْ أَنْتُمْ مُنْتَهُونَ ﴿٩١﴾

199. ಅಧ್ಯಾಯ 2 : 226 ರ ಟಿಪ್ಪಣಿ ನೋಡಿರಿ.

199A. ಎಲ್ಲ ವಿಧ ಮಾದಕ ಪದಾರ್ಥಗಳ ಸೇವನೆ.





**93.** ನೀವು ಅಲ್ಲಾಹನಿಗೆ ವಿಧೇಯರಾಗಿರಿ ಮತ್ತು ಈ ಸಂದೇಶವಾಹಕನಿಗೂ ವಿಧೇಯರಾಗಿರಿ ಹಾಗೂ ಜಾಗರೂಕರಾಗಿದ್ದುಕೊಳ್ಳಿರಿ. ಆದರೆ ನೀವು ವಿಮುಖರಾದರೆ, ನಮ್ಮ ಸಂದೇಶವನ್ನು ಸ್ಪಷ್ಟವಾದ ರೀತಿಯಲ್ಲಿ ನಿಮಗೆ ತಲಪಿಸುವುದು ಮಾತ್ರವೇ ನಮ್ಮ ಸಂದೇಶವಾಹಕನ ಕರ್ತವ್ಯವೆಂದು ತಿಳಿದುಕೊಳ್ಳಿರಿ.

وَأَطِيعُوا اللَّهَ وَأَطِيعُوا الرَّسُولَ وَاحْذَرُوا ۚ فَإِنْ تَوَلَّيْتُمْ فَاعْلَمُوا أَنَّمَا عَلَىٰ رَسُولِنَا الْبَلَاغُ الْمُبِينُ ﴿٩٢﴾

**94.** ವಿಶ್ವಾಸವನ್ನು ಹೊಂದಿ ಸತ್ಕರ್ಮಗಳನ್ನು ಮಾಡುವವರು - ಅವರು ಭಯಭಕ್ತಿಯುಳ್ಳ ವಿಶ್ವಾಸಿಗಳಾಗಿ ಸತ್ಕಾರ್ಯ ಮಾಡುವವರಾದರೆ, ಭಯಭಕ್ತಿ ಹಾಗೂ ನಂಬಿಕೆಯಲ್ಲಿ ಮುನ್ನೇರುವವರಾದರೆ, ಭಯಭಕ್ತಿ ಮತ್ತು ಸತ್ಕೃತ್ಯಗಳಲ್ಲಿ ಇನ್ನೂ ಪುರೋಗಮಿಸಿದರೆ, ಅವರು ತಿನ್ನುವುದರಲ್ಲೇನೂ ಅವರಿಗೆ ಪಾಪವಿರಲಾರದು. ಸತ್ಕರ್ಮಿಗಳನ್ನು ಅಲ್ಲಾಹನು ಪ್ರೀತಿಸುತ್ತಾನೆ.

لَيْسَ عَلَى الَّذِينَ آمَنُوا وَعَمِلُوا الصَّالِحَاتِ جُنَاحٌ فِيمَا طَعِمُوا إِذَا مَا اتَّقَوْا وَآمَنُوا وَعَمِلُوا الصَّالِحَاتِ ثُمَّ اتَّقَوْا وَآمَنُوا ثُمَّ اتَّقَوْا وَأَحْسَنُوا ۗ وَاللَّهُ يُحِبُّ الْمُحْسِنِينَ ﴿٩٣﴾

**95.** ಎಲೈ ವಿಶ್ವಾಸಿಗಳೇ, ನಿಮ್ಮ ಕೈಗಳಿಂದ ಮತ್ತು ಈಟಿಗಳಿಂದ ಬೇಟೆಯಾಡಲ್ಪಡುವ ಪ್ರಾಣಿಗಳ ಮೂಲಕ ಅಲ್ಲಾಹನು ಖಂಡಿತವಾಗಿಯೂ ನಿಮ್ಮನ್ನು ಪರೀಕ್ಷಿಸುವನು - ರಹಸ್ಯವಾಗಿ ಅಲ್ಲಾಹನಿಗೆ ಯಾರು ಭಯಪಡುತ್ತಾರೆಂದು ಗುರುತಿಸಲಿಕ್ಕಾಗಿ. ಇದರ (ಈ ಆಜ್ಞೆಯ) ನಂತರ ಯಾರಾದರೂ ಅತಿರೇಕವಾಗಿ ವರ್ತಿಸಿದರೆ ಅವನಿಗೆ ಯಾತನಾಮಯವಾದ ಶಿಕ್ಷೆ ಕಾದಿದೆ.

يَا أَيُّهَا الَّذِينَ آمَنُوا لَيَبْلُوَنَّكُمُ اللَّهُ بِشَيْءٍ مِنَ الصَّيْدِ تَنَالُهُ أَيْدِيكُمْ وَرِمَاحُكُمْ لِيَعْلَمَ اللَّهُ مَنْ يَخَافُهُ بِالْغَيْبِ ۚ فَمَنِ اعْتَدَىٰ بَعْدَ ذَٰلِكَ فَلَهُ عَذَابٌ أَلِيمٌ ﴿٩٤﴾

**96.** ಎಲೈ ವಿಶ್ವಾಸಿಗಳೇ, ನೀವು (ಹಜ್ಜ್ ಯಾತ್ರೆಯಲ್ಲಿ) ಇಹ್ರಾಮ್‌ನ ಸ್ಥಿತಿಯಲ್ಲಿರುವಾಗ ಬೇಟೆಯಾಡಿ ಮೃಗಗಳನ್ನು ಕೊಲ್ಲಬೇಡಿರಿ. ನಿಮ್ಮ ಪೈಕಿ ಯಾರಾದರೂ ಉದ್ದೇಶಪೂರ್ವಕವಾಗಿ ಹಾಗೆ ಕೊಂದರೆ, ಅವನು ಕೊಂದಂತಹ ಒಂದು ಮೃಗವು ಅದಕ್ಕೆ ಪರಿಹಾರವಾಗಿದೆ. ನಿಮ್ಮ ಪೈಕಿ ಇಬ್ಬರು ನ್ಯಾಯನಿಷ್ಠರು ಅದರ ತೀರ್ಮಾನ ಮಾಡಲಿ. ಬಲಿಯರ್ಪಿಸಲಿಕ್ಕಾಗಿ ಅದನ್ನು ಕಅ್‌ಬದ ಬಳಿಗೆ ತರಬೇಕು. ಅಥವಾ ಅದಕ್ಕೆ ಪ್ರಾಯಶ್ಚಿತ್ತವು - ಕೆಲವು ನಿರ್ಗತಿಕರಿಗೆ ಆಹಾರ ನೀಡುವುದು ಅಥವಾ ಅದಕ್ಕೆ

يَا أَيُّهَا الَّذِينَ آمَنُوا لَا تَقْتُلُوا الصَّيْدَ وَأَنْتُمْ حُرُمٌ ۚ وَمَنْ قَتَلَهُ مِنْكُمْ مُتَعَمِّدًا فَجَزَاءٌ مِثْلُ مَا قَتَلَ مِنَ النَّعَمِ يَحْكُمُ بِهِ ذَوَا عَدْلٍ مِنْكُمْ هَدْيًا بَالِغَ الْكَعْبَةِ أَوْ كَفَّارَةٌ طَعَامُ مَسَاكِينَ أَوْ عَدْلُ ذَٰلِكَ صِيَامًا لِيَذُوقَ وَبَالَ أَمْرِهِ ۗ عَفَا اللَّهُ عَمَّا سَلَفَ ۚ وَمَنْ عَادَ فَيَنْتَقِمُ

اللّٰهُ مِنْهُ ؕ وَاللّٰهُ عَزِيْزٌ ذُو انْتِقَامٍ ۝٩٦

ಸಮಾನವಾಗಿ ಉಪವಾಸ ಅನುಷ್ಠಿಸುವುದಾಗಿದೆ. ಇದು ಅವನ ಕೃತ್ಯಕ್ಕೆ ಅವನು ಅನುಭವಿಸಬೇಕಾದ ದಂಡನೆಯಾಗಿದೆ. ಮುಂಚೆ ನಡೆದುದನ್ನು ಅಲ್ಲಾಹನು ಕ್ಷಮಿಸಿರುವನು. ಆದರೆ ಯಾರಾದರೂ ಅದನ್ನು ಪುನರಾವರ್ತಿಸಿದರೆ ಅಲ್ಲಾಹನು ಅವನನ್ನು ಶಿಕ್ಷಿಸುವನು. ಅಲ್ಲಾಹನು ಪ್ರತಾಪಶಾಲಿಯೂ (ದುಷ್ಕೃತ್ಯಗಳಿಗೆ) ಶಿಕ್ಷೆ ನೀಡುವವನೂ ಆಗಿದ್ದಾನೆ.

اُحِلَّ لَكُمْ صَيْدُ الْبَحْرِ وَطَعَامُهٗ مَتَاعًا
لَّكُمْ وَلِلسَّيَّارَةِ ۚ وَحُرِّمَ عَلَيْكُمْ صَيْدُ
الْبَرِّ مَا دُمْتُمْ حُرُمًا ؕ وَاتَّقُوا اللّٰهَ الَّذِيْٓ
اِلَيْهِ تُحْشَرُوْنَ ۝٩٧

97. ಸಮುದ್ರದಲ್ಲಿ ಬೇಟೆಯಾಡುವುದನ್ನು ಮತ್ತು ಅದನ್ನು ತಿನ್ನುವುದನ್ನು ನಿಮಗೂ ಯಾತ್ರಿಕರಿಗೂ ಧರ್ಮಬದ್ಧಗೊಳಿಸಲಾಗಿದೆ. ಆದರೆ ನೀವು ಇಹ್ರಾಮ್‌ನ ಸ್ಥಿತಿಯಲ್ಲಿರುವಾಗ ನೆಲದಲ್ಲಿ ಬೇಟೆಯಾಡುವುದನ್ನು ನಿಮಗೆ ನಿಷಿದ್ಧಗೊಳಿಸಲಾಗಿದೆ. ನೀವು ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ - ಅವನ ಸನ್ನಿಧಿಯಲ್ಲಿ ನೀವು ಒಂದುಗೂಡಿಸಲ್ಪಡುವಿರಿ.

جَعَلَ اللّٰهُ الْكَعْبَةَ الْبَيْتَ الْحَرَامَ
قِيٰمًا لِّلنَّاسِ وَالشَّهْرَ الْحَرَامَ وَالْهَدْيَ وَ
الْقَلَآئِدَ ؕ ذٰلِكَ لِتَعْلَمُوْٓا اَنَّ اللّٰهَ يَعْلَمُ
مَا فِي السَّمٰوٰتِ وَمَا فِي الْاَرْضِ وَاَنَّ
اللّٰهَ بِكُلِّ شَيْءٍ عَلِيْمٌ ۝٩٨

98. ಅಲ್ಲಾಹನು ಆದರಣೀಯ ಗೃಹವಾದ ಕಅ್‌ಬವನ್ನು ಮನುಷ್ಯನ ಶಾಶ್ವತ ಪುರೋಗತಿಯ ಸಾಧನವನ್ನಾಗಿ ಮಾಡಿರುವನು - ಆದರಣೀಯ ಮಾಸವನ್ನೂ ಬಲಿ ಮೃಗಗಳನ್ನೂ ಕೊರಳಪಟ್ಟಿ *ಧರಿಸಿದ ಮೃಗ* ಗಳನ್ನೂ. ಇದು, ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಸರ್ವವನ್ನೂ ಅಲ್ಲಾಹನು ಅರಿಯುತ್ತಾನೆಂದೂ ಅಲ್ಲಾಹನು ಎಲ್ಲವನ್ನು ಚೆನ್ನಾಗಿ ಬಲ್ಲವನೆಂದೂ ನೀವು ಮನಗಾಣಲಿಕ್ಕಾ ಗಿದೆ.

اِعْلَمُوْٓا اَنَّ اللّٰهَ شَدِيْدُ الْعِقَابِ وَاَنَّ
اللّٰهَ غَفُوْرٌ رَّحِيْمٌ ۝٩٩

99. ತಿಳಿದು ಕೊಳ್ಳಿರಿ - ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ. ಹಾಗೆಯೇ ಅವನು ಅತ್ಯಂತ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

مَا عَلَى الرَّسُوْلِ اِلَّا الْبَلٰغُ ؕ وَاللّٰهُ
يَعْلَمُ مَا تُبْدُوْنَ وَمَا تَكْتُمُوْنَ ۝١٠٠

100. ಸಂದೇಶವನ್ನು ತಲಪಿಸುವ ಜವಾಬ್ದಾರಿ ಮಾತ್ರವೇ ಈ ಸಂದೇಶವಾಹಕನಿಗಿದೆ. ನೀವು ಬಹಿರಂಗಪಡಿಸುವುದನ್ನೂ ಬಚ್ಚಿಡುವುದನ್ನೂ ಅಲ್ಲಾಹನು ಬಲ್ಲನು.





قُلْ لَّا يَسْتَوِي الْخَبِيْثُ وَالطَّيِّبُ وَلَوْ
اَعْجَبَكَ كَثْرَةُ الْخَبِيْثِ ۚ فَاتَّقُوا اللّٰهَ
يٰٓاُولِي الْاَلْبَابِ لَعَلَّكُمْ تُفْلِحُوْنَ ۝١٠١

101. ಹೇಳು: 'ಕೆಡುಕಿನ ಆಧಿಕ್ಯ ನಿನ್ನನ್ನು ವಿಸ್ಮಯಚಕಿತನನ್ನಾಗಿ ಮಾಡುವುದಾದರೂ ಕೆಡುಕು ಮತ್ತು ಒಳಿತು ತುಲ್ಯವಲ್ಲ. ಆದ್ದರಿಂದ, ಎಲೈ ತಿಳುವಳಿಕೆಯುಳ್ಳವರೇ, ನೀವು ಏಳಿಗೆ ಹೊಂದಲಿಕ್ಕಾಗಿ ಅಲ್ಲಾಹನ ಭಯಭಕ್ತಿಯಿರಿಸಿ ಕೊಳ್ಳಿರಿ.'

يٰٓاَيُّهَا الَّذِيْنَ اٰمَنُوْا لَا تَسْئَلُوْا عَنْ
اَشْيَآءَ اِنْ تُبْدَ لَكُمْ تَسُؤْكُمْ ۚ وَاِنْ
تَسْئَلُوْا عَنْهَا حِيْنَ يُنَزَّلُ الْقُرْاٰنُ
تُبْدَ لَكُمْ ؕ عَفَا اللّٰهُ عَنْهَا ؕ وَاللّٰهُ غَفُوْرٌ
حَلِيْمٌ ۝١٠٢

102. ಎಲೈ ವಿಶ್ವಾಸಿಗಳೇ, ನಿಮಗೆ ಬಹಿರಂಗಗೊಳಿಸಲ್ಪಟ್ಟರೆ ತೊಂದರೆಯಾಗಬಹುದಾದಂತಹ ವಿಚಾರಗಳ ಬಗ್ಗೆ ನೀವು ಪ್ರಶ್ನಿಸಬೇಡಿರಿ. ಖುರ್‌ಆನ್ ಅವತೀರ್ಣವಾಗುವ ಸಂದರ್ಭದಲ್ಲಿ ಅವುಗಳ ಕುರಿತು ನೀವು ಕೇಳಿದರೆ, ನಿಮಗೆ ಅದನ್ನು ಸ್ಪಷ್ಟಪಡಿಸಲಾಗುವುದು. ಅಲ್ಲಾಹನು (ಉದ್ದೇಶಪೂರ್ವಕವಾಗಿಯೇ) ಅದನ್ನು ಬಿಟ್ಟಿದ್ದಾನೆ. ಅಲ್ಲಾಹನು ಅತಿಯಾಗಿ ಕ್ಷಮಿಸುವವನೂ ಸಹನಶೀಲನೂ ಆಗಿದ್ದಾನೆ.

قَدْ سَاَلَهَا قَوْمٌ مِّنْ قَبْلِكُمْ ثُمَّ
اَصْبَحُوْا بِهَا كٰفِرِيْنَ ۝١٠٣

103. ನಿಮಗಿಂತ ಮುಂಚೆ ಒಂದು ಜನಾಂಗದವರು ಅಂತಹ ವಿಚಾರಗಳ ಬಗ್ಗೆ ಪ್ರಶ್ನಿಸಿದ್ದರು. ಆದರೆ ನಂತರ ಅವರು (ತಮಗೆ ಉತ್ತರ ದೊರಕಿದಾಗ) ಅದನ್ನು ನಿರಾಕರಿಸುವವರಾದರು.

مَا جَعَلَ اللّٰهُ مِنْ بَحِيْرَةٍ وَّلَا سَآئِبَةٍ
وَّلَا وَصِيْلَةٍ وَّلَا حَامٍ ۙ وَّلٰكِنَّ الَّذِيْنَ
كَفَرُوْا يَفْتَرُوْنَ عَلَى اللّٰهِ الْكَذِبَ ؕ وَ
اَكْثَرُهُمْ لَا يَعْقِلُوْنَ ۝١٠٤

104. 'ಬಹೀರತ್',[200] 'ಸಾಇಬತ್',[201] 'ವಸೀಲತ್',[202] 'ಹಾಂ'[203]- ಈ ಬಗ್ಗೆ ಅಲ್ಲಾಹನು ಆದೇಶವನ್ನೇನೂ ನೀಡಿಲ್ಲ. ಆದರೆ ಅವಿಶ್ವಾಸಿಗಳು ಅಲ್ಲಾಹನ ಮೇಲೆ ಸುಳ್ಳನ್ನು ಆರೋಪಿಸುತ್ತಾರೆ. ಅವರಲ್ಲಿ ಹೆಚ್ಚಿನವರು ಬುದ್ಧಿಯನ್ನು ಉಪಯೋಗಿಸುವುದಿಲ್ಲ.

200. ಅಜ್ಞಾನ ಕಾಲದಲ್ಲಿಅರಬಿ ಸಂಪ್ರದಾಯದಂತೆ ಸಾಕು ಮೃಗಗಳು ವಿವಿಧ ವರ್ಗಗಳಾಗಿ ವಿಂಗಡಿಸಲ್ಪಡುತ್ತಿದ್ದವು. ಅವುಗಳ ಬಗ್ಗೆ ಅವರು ಬೇರೆ ಬೇರೆ ಮೂಢನಂಬಿಕೆಗಳನ್ನು ಹೊಂದಿದ್ದರು. ಒಂದು ಹೆಣ್ಣು ಒಂಟೆ ಹತ್ತು ಮರಿಗಳನ್ನು ಹೆತ್ತರೆ ಅದರ ಕಿವಿಯನ್ನು ಕತ್ತರಿಸಿ ಅದನ್ನು ಸ್ವತಂತ್ರವಾಗಿ ಬಿಡುತ್ತಿದ್ದರು. ಆ ಬಳಿಕ ಅದನ್ನು ಸವಾರಿಗೆ ಅಥವಾ ಭಾರ ಹೊರಲಿಕ್ಕೆ ಬಳಸುತ್ತಿರಲಿಲ್ಲ. ಅಂತಹ ಒಂಟೆಯನ್ನು 'ಬಹೀರತ್' ಎಂದು ಹೇಳುತ್ತಾರೆ.

201. ಐದು ಮರಿಗಳನ್ನು ಹೆತ್ತ ಒಂಟೆಯನ್ನು ಮೇಯಲು ಮತ್ತು ನೀರು ಕುಡಿಯಲು ಸ್ವತಂತ್ರವಾಗಿ ಅರಬಿಯರು ಬಿಡುತ್ತಿದ್ದರು. ಅಂತಹ ಒಂಟೆಯನ್ನು `ಸಾಇಬತ್' ಎಂದು ಹೇಳುತ್ತಾರೆ.

202. ಅವಳಿಯಾಗಿ ಒಂದು ಗಂಡು, ಒಂದು ಹೆಣ್ಣು ಆಡಿನ ಮರಿಗಳು ಹುಟ್ಟಿದರೆ, ಒಂದನ್ನು ಕೊಯ್ದರೆ ಮತ್ತೊಂದಕ್ಕೆ ತೊಂದರೆಯಾದೀತೆಂದು ಭಾವಿಸಿ ಕೊಯ್ಯುತ್ತಿರಲಿಲ್ಲ. ಅದನ್ನು 'ವಸೀಲತ್' ಎನ್ನುತ್ತಿದ್ದರು.

203 `ಹಾಂ' = ಬೀಜದ ಒಂಟೆಗೆ ಹತ್ತು ಮರಿಗಳು ಹುಟ್ಟಿದರೆ, ಅರಬಿಯರು ಅದನ್ನು ಹಾಗೆಯೇ ಬಿಟ್ಟುಬಿಡುತ್ತಿದ್ದರು. ಅದನ್ನು ಸವಾರಿಗೆ ಅಥವಾ ಇತರ ಕೆಲಸಗಳಿಗೆ ಬಳಸುತ್ತಿರಲಿಲ್ಲ. ಹುಲ್ಲು ತಿನ್ನುವುದಕ್ಕೆ ಮತ್ತು ನೀರು ಕುಡಿಯುವುದಕ್ಕೆ ಅದನ್ನು ತಡೆಯುತ್ತಿರಲಿಲ್ಲ.

**105.** 'ಅಲ್ಲಾಹನು ಅವತೀರ್ಣಗೊಳಿಸಿದುದರ ಬಳಿಗೆ ಮತ್ತು ಈ ಸಂದೇಶವಾಹಕನ ಬಳಿಗೆ ಬನ್ನಿರಿ' ಎಂದು ಅವರೊಡನೆ ಹೇಳುವಾಗ 'ನಮ್ಮ ಪೂರ್ವಜರನ್ನು ಯಾವ ಸಂಪ್ರದಾಯದಲ್ಲಿ ನಾವು ಕಂಡೆವೋ, ಅದು ನಮಗೆ ಸಾಕು' ಎಂದು ಅವರು ಹೇಳುತ್ತಾರೆ. ಏನು, ಅವರ ಪೂರ್ವಜರು ಏನೂ ತಿಳಿಯದವರೂ ಸತ್ಪಥವನ್ನು ಗಳಿಸದವರೂ ಆಗಿದ್ದರೆ ಸಹ (ಅವರು ಹೀಗೆ ಮಾಡುವರೇ)?

وَإِذَا قِيلَ لَهُمْ تَعَالَوْا إِلَىٰ مَا أَنزَلَ اللَّهُ
وَإِلَى الرَّسُولِ قَالُوا حَسْبُنَا مَا وَجَدْنَا
عَلَيْهِ آبَاءَنَا ۚ أَوَلَوْ كَانَ آبَاؤُهُمْ لَا
يَعْلَمُونَ شَيْئًا وَلَا يَهْتَدُونَ ﴿١٠٤﴾

**106.** ಎಲೈ ವಿಶ್ವಾಸಿಗಳೇ, ನಿಮ್ಮ ಬಗ್ಗೆ ನೀವು ಜಾಗ್ರತೆವಹಿಸಿಕೊಳ್ಳಿರಿ. ನೀವು ಸತ್ಪಥವನ್ನು ಗಳಿಸಿದ್ದರೆ, ದಾರಿತಪ್ಪಿದವರು ನಿಮಗೇನೂ ಹಾನಿಯುಂಟು ಮಾಡಲಾರರು. ಅಲ್ಲಾಹನ ಬಳಿಗೇ ನಿಮ್ಮೆಲ್ಲರ ಮರಳಿಕೆ. ಆಗ ನೀವೇನು ಮಾಡಿದ್ದೀರೆಂದು ನಿಮಗೆ ತಿಳಿಸಿಕೊಡಲಾಗುವುದು.

يَا أَيُّهَا الَّذِينَ آمَنُوا عَلَيْكُمْ أَنفُسَكُمْ ۖ
لَا يَضُرُّكُم مَّن ضَلَّ إِذَا اهْتَدَيْتُمْ ۚ إِلَى
اللَّهِ مَرْجِعُكُمْ جَمِيعًا فَيُنَبِّئُكُم بِمَا
كُنتُمْ تَعْمَلُونَ ﴿١٠٥﴾

**107.** ಎಲೈ ವಿಶ್ವಾಸಿಗಳೇ, ನಿಮ್ಮಲ್ಲಿ ಯಾರಿಗಾದರೂ ಮರಣ ಸಮೀಪವಾದರೆ, ಆತನು ಮರಣಶಾಸನ ಮಾಡುವುದಾದರೆ, ನಿಮ್ಮ ಪೈಕಿ ನ್ಯಾಯನಿಷ್ಠರಾದ ಇಬ್ಬರು ಅದಕ್ಕೆ ಸಾಕ್ಷಿಗಳಾಗಬೇಕು. ಅಥವಾ ನೀವು ಯಾತ್ರೆಯಲ್ಲಿರುವಾಗ ನಿಮಗೆ ಮರಣದ ವಿಪತ್ತು ಬಂದೆರಗುವುದಾದರೆ, ನಿಮ್ಮ ಪೈಕಿಯವರಲ್ಲದ ಇಬ್ಬರು ಸಾಕ್ಷಿಗಳಾಗಬಹುದು. ನೀವು ನಮಾಝ್‌ನ ನಂತರ ಅವರಿಬ್ಬರನ್ನೂ (ಸಾಕ್ಷಿ ಹೇಳಲು) ತಡೆದು ನಿಲ್ಲಿಸಿರಿ. ನೀವು ಸಂಶಯಪಡುವುದಾದರೆ, ಅವರಿಬ್ಬರೂ ಅಲ್ಲಾಹನ ನಾಮದಲ್ಲಿ ಹೀಗೆ ಪ್ರಮಾಣ ಮಾಡಬೇಕಾಗಿದೆ: 'ಆತನು ನಿಕಟ ಬಂಧುವಾಗಿದ್ದರೆ ಕೂಡ ಅದಕ್ಕೆ ಪ್ರತಿಯಾಗಿ ನಾವೇನೂ ಪಡೆದುಕೊಳ್ಳುವುದಿಲ್ಲ. ಅಲ್ಲಾಹನ (ಆದೇಶಾನುಸಾರ) ಸಾಕ್ಷ್ಯವನ್ನು ನಾವು ಮರೆಮಾಚುವುದಿಲ್ಲ. ಹಾಗೇನಾದರೂ ಮಾಡಿದರೆ ನಾವು ಖಂಡಿತವಾಗಿಯೂ ಪಾಪಿಗಳಲ್ಲಿ ಸೇರಿದವರಾಗುತ್ತೇವೆ.'

يَا أَيُّهَا الَّذِينَ آمَنُوا شَهَادَةُ بَيْنِكُمْ
إِذَا حَضَرَ أَحَدَكُمُ الْمَوْتُ حِينَ
الْوَصِيَّةِ اثْنَانِ ذَوَا عَدْلٍ مِّنكُمْ أَوْ
آخَرَانِ مِنْ غَيْرِكُمْ إِنْ أَنتُمْ
ضَرَبْتُمْ فِي الْأَرْضِ فَأَصَابَتْكُم
مُّصِيبَةُ الْمَوْتِ ۚ تَحْبِسُونَهُمَا مِن بَعْدِ
الصَّلَاةِ فَيُقْسِمَانِ بِاللَّهِ إِنِ ارْتَبْتُمْ لَا
نَشْتَرِي بِهِ ثَمَنًا وَلَوْ كَانَ ذَا قُرْبَىٰ ۙ وَ
لَا نَكْتُمُ شَهَادَةَ اللَّهِ إِنَّا إِذًا لَّمِنَ
الْآثِمِينَ ﴿١٠٦﴾





**108.** ಆದರೆ ಅವರಿಬ್ಬರೂ (ಅನ್ಯರ ಹಕ್ಕನ್ನು ಅಪಹರಿಸಿದ) ತಪ್ಪಿತಸ್ಥರೆಂದು ಸ್ಪಷ್ಟವಾದರೆ, ಯಾರ ವಿರುದ್ಧ ಸಾಕ್ಷ್ಯಹೇಳಲಾಗಿತ್ತೋ, ಅವರ ಪೈಕಿ (ಮೃತಪಟ್ಟ ವ್ಯಕ್ತಿಗೆ ನಿಕಟ ಸಂಬಂಧವಿರುವ) ಇಬ್ಬರು (ಮೇಲೆ ಹೇಳಲಾದ) ಇಬ್ಬರ ಸ್ಥಾನದಲ್ಲಿ ನಿಂತು, 'ಖಂಡಿತವಾಗಿಯೂ ನಮ್ಮ ಸಾಕ್ಷ್ಯ ಅವರ ಸಾಕ್ಷ್ಯಕ್ಕಿಂತ ಹೆಚ್ಚು ಸತ್ಯವಾದುದು; ನಾವು ಅತಿರೇಕ ವರ್ತಿಸಿಲ್ಲ; ಹಾಗೇನಾದರೂ ಮಾಡಿದರೆ ನಾವು ಅಧರ್ಮಿಗಳಲ್ಲಿ ಸೇರಿದವರಾಗುತ್ತೇವೆ' ಎಂದು ಅಲ್ಲಾಹನ ಪ್ರಮಾಣ ಮಾಡಿ ಸಾಕ್ಷ್ಯಹೇಳಬೇಕು.

فَإِنْ عُثِرَ عَلَىٰ أَنَّهُمَا اسْتَحَقَّا إِثْمًا
فَآخَرَانِ يَقُومَانِ مَقَامَهُمَا مِنَ الَّذِينَ
اسْتَحَقَّ عَلَيْهِمُ الْأَوْلَيَانِ فَيُقْسِمَانِ
بِاللَّهِ لَشَهَادَتُنَا أَحَقُّ مِن
شَهَادَتِهِمَا وَمَا اعْتَدَيْنَا إِنَّا إِذًا
لَّمِنَ الظَّالِمِينَ ﴿١٠٧﴾

**109.** ಅವರು (ಸಾಕ್ಷಿಗಳು) ಸರಿಯಾದ ರೀತಿಯಲ್ಲಿ ಸಾಕ್ಷ್ಯಹೇಳಲಿಕ್ಕೆ ಅಥವಾ ತಮ್ಮ ಸಾಕ್ಷ್ಯಗಳ ನಂತರ ಬೇರೆ ಸಾಕ್ಷ್ಯಗಳನ್ನು ತರಲಾಗುವುದೆಂದು ಅವರು ಭಯವಿರಿಸಿಕೊಳ್ಳಲಿಕ್ಕೆ ಹೆಚ್ಚು ಉಪಯುಕ್ತವಾದ ಮಾರ್ಗವು ಇದಾಗಿದೆ. ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ ಹಾಗೂ (ಅವನ ಆಜ್ಞೆಗಳನ್ನು) ಆಲಿಸಿರಿ. ಅವಿಧೇಯರಿಗೆ ಅಲ್ಲಾಹನು ಮಾರ್ಗದರ್ಶನ ನೀಡುವುದಿಲ್ಲ.

ذَٰلِكَ أَدْنَىٰ أَن يَأْتُوا بِالشَّهَادَةِ عَلَىٰ
وَجْهِهَا أَوْ يَخَافُوا أَن تُرَدَّ أَيْمَانٌ بَعْدَ
أَيْمَانِهِمْ ۗ وَاتَّقُوا اللَّهَ وَاسْمَعُوا ۗ وَاللَّهُ
لَا يَهْدِي الْقَوْمَ الْفَاسِقِينَ ﴿١٠٨﴾

**110.** ಅಲ್ಲಾಹನ ಸಂದೇಶವಾಹಕರನ್ನು ಒಂದುಗೂಡಿಸಿ 'ನಿಮಗೆ (ಜನರಿಂದ) ಏನು ಉತ್ತರ ನೀಡಲ್ಪಟ್ಟಿತ್ತು?' ಎಂದು ಅವನು ಕೇಳುವ ದಿನದ ಬಗ್ಗೆ ಚಿಂತಿಸಿರಿ. ಅವರು 'ನಾವೇನೂ ಬಲ್ಲವರಲ್ಲ. ಅಜ್ಞಾತ ಸಂಗತಿಗಳನ್ನು ಚೆನ್ನಾಗಿ ಬಲ್ಲವನು ನೀನೇ ಆಗಿರುವೆ' ಎಂದು ಉತ್ತರಿಸುವರು.

يَوْمَ يَجْمَعُ اللَّهُ الرُّسُلَ فَيَقُولُ مَاذَا
أُجِبْتُمْ ۖ قَالُوا لَا عِلْمَ لَنَا ۖ إِنَّكَ أَنتَ
عَلَّامُ الْغُيُوبِ ﴿١٠٩﴾

**111.** ಅಲ್ಲಾಹನು ಹೇಳುವ ಸಂದರ್ಭ - 'ಎಲೈ ಮರ್ಯಮ್ ಪುತ್ರ ಈಸಾ, ನಿನಗೂ ನಿನ್ನ ತಾಯಿಗೂ ನಾನು ದಯಪಾಲಿಸಿದ ನನ್ನ ಅನುಗ್ರಹಗಳನ್ನು ಜ್ಞಾಪಿಸು. ಪವಿತ್ರಾತ್ಮದ ಮೂಲಕ ನಾನು ನಿನಗೆ ಶಕ್ತಿನೀಡಿದೆನು. ನೀನು ಬಾಲ್ಯಕಾಲದಲ್ಲೂ ಮಧ್ಯವಯಸ್ಸಿನಲ್ಲೂ (ಆಧ್ಯಾತ್ಮಿಕ ವಿಚಾರದಲ್ಲಿ) ಜನರೊಡನೆ ಮಾತನಾಡು

إِذْ قَالَ اللَّهُ يَا عِيسَى ابْنَ مَرْيَمَ اذْكُرْ
نِعْمَتِي عَلَيْكَ وَعَلَىٰ وَالِدَتِكَ إِذْ
أَيَّدتُّكَ بِرُوحِ الْقُدُسِ تُكَلِّمُ النَّاسَ
فِي الْمَهْدِ وَكَهْلًا ۖ وَإِذْ عَلَّمْتُكَ الْكِتَابَ
وَالْحِكْمَةَ وَالتَّوْرَاةَ وَالْإِنجِيلَ ۖ وَإِذْ

**ತ್ತಿದ್ದೆ. ನಿನಗೆ ಗ್ರಂಥವನ್ನೂ ಜ್ಞಾನವನ್ನೂ ತೌರಾತನ್ನೂ ಇಂಜೀಲನ್ನೂ ನಾನು ಕಲಿಸಿಕೊಟ್ಟ ಸಂದರ್ಭವನ್ನೂ** ಜ್ಞಾಪಿಸು. **ನೀನು ನನ್ನ ಆಜ್ಞೆ ಪ್ರಕಾರ ಆವೆಮಣ್ಣಿನಿಂದ ಪಕ್ಷಿಗಳ ರೀತಿಯಲ್ಲಿ** (ಕೆಲವು ಸೃಷ್ಟಿಗಳನ್ನು) **ಸೃಷ್ಟಿಸಿ** [204] **ಅದರ ಮೇಲೆ ಊದಿದಾಗ, ನನ್ನ ಆಜ್ಞೆಯಂತೆ ಅದು ಹಾರುವಂತಾದ ಸಂದರ್ಭ;**[205] **ನೀನು ಕುರುಡರನ್ನೂ ಕುಷ್ಟರೋಗಿಗಳನ್ನೂ ನನ್ನ ಆಜ್ಞೆಯಂತೆ ಗುಣಪಡಿಸಿದ ಸಂದರ್ಭ;**[206] **ನನ್ನ ಆಜ್ಞೆಯಂತೆ ನೀನು ಮೃತಪಟ್ಟವರನ್ನು ಎಬ್ಬಿಸಿದ ಸಂದರ್ಭ;**[207] **ಸ್ಪಷ್ಟವಾದ ಪುರಾವೆಗಳ ಸಹಿತ ನೀನು ಇಸ್ರಾಈಲ್ ಸಂತತಿಗಳ ಬಳಿಗೆ ಹೋದಾಗ, ನಿನ್ನಿಂದ** (ನಿನ್ನನ್ನು ಕೊಲ್ಲುವುದರಿಂದ) **ನಾನು ಅವರನ್ನು ತಡೆದ ಸಂದರ್ಭ** (ಜ್ಞಾಪಿಸು).[208] **'ಇದು ಸ್ಪಷ್ಟವಾದ ಜಾಲ ವಿದ್ಯೆ ಹೊರತು ಬೇರೇನೂ ಅಲ್ಲ' ಎಂದು ಅವರ ಪೈಕಿ ಅವಿಶ್ವಾಸಿಗಳು ಹೇಳಿದರು.**

تَخْلُقُ مِنَ الطِّيْنِ كَهَيْـَٔةِ الطَّيْرِ بِاِذْنِيْ
فَتَنْفُخُ فِيْهَا فَتَكُوْنُ طَيْرًا بِاِذْنِيْ
وَتُبْرِئُ الْاَكْمَهَ وَالْاَبْرَصَ بِاِذْنِيْ وَ
اِذْ تُخْرِجُ الْمَوْتٰى بِاِذْنِيْ وَاِذْ كَفَفْتُ
بَنِيْٓ اِسْرَآءِيْلَ عَنْكَ اِذْ جِئْتَهُمْ
بِالْبَيِّنٰتِ فَقَالَ الَّذِيْنَ كَفَرُوْا مِنْهُمْ
اِنْ هٰذَآ اِلَّا سِحْرٌ مُّبِيْنٌ ﴿١١١﴾

**112. "ನೀವು ನನ್ನನ್ನೂ ನನ್ನ ಪ್ರವಾದಿಯನ್ನೂ ನಂಬಿರಿ" ಎಂದು 'ಹವಾರಿ'ಗಳಿಗೆ**[209] **ನಾನು ದಿವ್ಯ ಬೋಧನೆ ನೀಡಿದಾಗ ಅವರು: 'ನಾವು ನಂಬಿದ್ದೇವೆ. ನಾವು** (ನಿನಗೆ ಸಂಪೂರ್ಣವಾಗಿ) **ವಿಧೇಯರಾಗಿದ್ದೇವೆಂಬುದಕ್ಕೆ ನೀನು ಸಾಕ್ಷಿಯಾಗು' ಎಂದು ಹೇಳಿದರು.**

وَاِذْ اَوْحَيْتُ اِلَى الْحَوَارِيّٖنَ اَنْ اٰمِنُوْا بِيْ
وَبِرَسُوْلِيْ قَالُوْٓا اٰمَنَّا وَاشْهَدْ بِاَنَّنَا
مُسْلِمُوْنَ ﴿١١٢﴾

204. ಅಲ್ಲಾಹನಂತೆ ಪ್ರವಾದಿ ಈಸಾ (ಅಲೈಹಿಸ್ಸಲಾಂ) - ಯೇಸುಕ್ರಿಸ್ತರು - ಆವೆ ಮಣ್ಣಿನಿಂದ ಪಕ್ಷಿಗಳನ್ನು ಸೃಷ್ಟಿಸುತ್ತಿದ್ದರೆಂದು ಈ ವಚನದಿಂದ ತಿಳಿದುಬರುವುದಾಗಿ ಕೆಲವು ವ್ಯಾಖ್ಯಾನಗಾರರು ಹೇಳುತ್ತಾರೆ. ಇದು ಸರಿಯಲ್ಲ. ವಾಸ್ತವದಲ್ಲಿ 'ಪಕ್ಷಿಗಳ ರೀತಿಯಲ್ಲಿ' ಎಂದೇ ಇಲ್ಲಿ ಹೇಳಲಾಗಿದೆ. ಪಕ್ಷಿಗಳು, ಮಣ್ಣಿನಿಂದ ಪಕ್ಷಿಗಳ ರೂಪಮಾಡಿ ಅದರ ಮೇಲೆ ಊದಿ ಪಕ್ಷಿಗಳನ್ನು ಉಂಟುಮಾಡುವುದಿಲ್ಲವಷ್ಟೆ. ಬದಲು, ಅವುಗಳು ಮೊಟ್ಟೆಯ ಮೇಲೆ ಕುಳಿತು ಕಾವುಕೊಟ್ಟು ಮರಿಗಳನ್ನು ಮಾಡುತ್ತವೆ. ಈಸಾ(ಅ) ಸಹ ಮಾಡಿದ್ದು ಇದೇ ಪ್ರಕಾರ. ಅಂದರೆ ಆವೆಮಣ್ಣಿನಂತಹ ಗುಣವುಳ್ಳ (ವಿಧೇಯತೆ ತೋರಿಸುವ) ಜನರನ್ನು ಆಯ್ಕೆ ಮಾಡಿ ಅವರಿಗೆ ಶಿಕ್ಷಣ ಕೊಟ್ಟು, ಅವರನ್ನು ಆಧ್ಯಾತ್ಮಿಕ ಚೈತನ್ಯದಿಂದ ಕೂಡಿದವರನ್ನಾಗಿ ಮಾಡಿದರು. 'ಆವೆಮಣ್ಣು' ಎಂಬ ಪದ ಇಲ್ಲಿ ಉತ್ತಮ ಗುಣ ಸ್ವಭಾವವಿರುವ ಸಾಮಾನ್ಯ ಮನುಷ್ಯರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈಸಾ(ಅ)ರ ಅದ್ಭುತ ನೀತಿ ಬೋಧನೆಯ ಪ್ರಭಾವದಿಂದ ಅವರು ಸಾತ್ವಿಕರಾಗಿ ಮಾರ್ಪಟ್ಟು ಆಧ್ಯಾತ್ಮಿಕ ನಭೋ ಮಂಡಲದಲ್ಲಿ ಹಾರಾಡುವ ಪಕ್ಷಿಗಳಂತಾದರು. ಎಲ್ಲ ಪ್ರವಾದಿಗಳೂ ಹೀಗೆಯೇ ಮಾಡಿದ್ದರು.

205. ಪಕ್ಷಿಗಳು ಮೊಟ್ಟೆಯ ಮೇಲೆ ಕಾವು ಕುಳಿತು ಮರಿಗಳನ್ನು ಮಾಡುವಂತೆ, ಈಸಾ(ಅ) ಮನುಷ್ಯರಲ್ಲಿ ಆಧ್ಯಾತ್ಮಿಕವಾಗಿ ಯೋಗ್ಯತೆ ಇರುವವರನ್ನು ತನ್ನ ಶಿಕ್ಷಣ ಮತ್ತು ತರಬೇತಿ ಮೂಲಕ ಅಲ್ಲಾಹನೆಡೆಗೆ ಆಧ್ಯಾತ್ಮಿಕವಾಗಿ ಹಾರುವಂತೆ ಮಾಡಿದರೆಂದು ತಾತ್ಪರ್ಯ.

206. ಅಧ್ಯಾಯ 3ರಲ್ಲಿ 100ನೇ ಟಿಪ್ಪಣಿ ನೋಡಿರಿ.





**113. 'ಓ ಮರ್ಯಮ್ ಪುತ್ರ ಈಸಾ, ನಮಗೋಸ್ಕರ ಆಕಾಶದಿಂದ ಆಹಾರ ತುಂಬಿದ ಒಂದು ಹರಿವಾಣವನ್ನು ಇಳಿಸಿಕೊಡಲು ನಿಮ್ಮ ಪ್ರಭುವಿಗೆ ಸಾಧ್ಯವೇ?' ಎಂದು ಹವಾರಿಗಳು ಕೇಳಿದಾಗ, 'ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ' ಎಂದು ಅವರು** (ಈಸಾ) **ಹೇಳಿದರು.**

اِذْ قَالَ الْحَوَارِيُّوْنَ يٰعِيْسَى ابْنَ مَرْيَمَ
هَلْ يَسْتَطِيْعُ رَبُّكَ اَنْ يُّنَزِّلَ عَلَيْنَا
مَآئِدَةً مِّنَ السَّمَآءِ قَالَ اتَّقُوا اللّٰهَ
اِنْ كُنْتُمْ مُّؤْمِنِيْنَ ﴿١١٣﴾

**114. 'ಅದರಿಂದ ನಾವು ತಿನ್ನಬೇಕೆಂದೂ ನಮ್ಮ ಮನಸ್ಸಿಗೆ ಸಮಾಧಾನ ಉಂಟಾಗಬೇಕೆಂದೂ ನೀವು ನಮ್ಮೊಡನೆ ಹೇಳಿದ್ದು ಸತ್ಯವೆಂದು ನಮಗೆ ಮನವರಿಕೆಯಾಗಬೇಕೆಂದೂ ನಾವು ಅದಕ್ಕೆ ಸಾಕ್ಷಿಗಳಾಗಬೇಕೆಂದೂ ನಾವು ಬಯಸುತ್ತೇವೆ' ಎಂದು ಅವರು ಹೇಳಿದರು.**

قَالُوْا نُرِيْدُ اَنْ نَّاْكُلَ مِنْهَا وَتَطْمَئِنَّ
قُلُوْبُنَا وَنَعْلَمَ اَنْ قَدْ صَدَقْتَنَا وَ
نَكُوْنَ عَلَيْهَا مِنَ الشّٰهِدِيْنَ ﴿١١٤﴾

**115. ಮರ್ಯಮ್ ಪುತ್ರ ಈಸಾ ಹೇಳಿದರು: 'ಓ ಅಲ್ಲಾಹ್, ನಮ್ಮ ಪ್ರಭೂ, ನಮಗೋಸ್ಕರ ಆಕಾಶದಿಂದ ಆಹಾರ ತುಂಬಿದ ಒಂದು ಹರಿವಾಣವನ್ನು ಇಳಿಸಿಕೊಡು. ಅದು ನಮ್ಮ ಮೊದಲ ಪೀಳಿಗೆಯವರಿಗೂ ನಂತರದ**

قَالَ عِيْسَى ابْنُ مَرْيَمَ اللّٰهُمَّ رَبَّنَآ اَنْزِلْ
عَلَيْنَا مَآئِدَةً مِّنَ السَّمَآءِ تَكُوْنُ لَنَا

207. ಪ್ರವಾದಿ ಈಸಾ(ಅ) ಮೃತಪಟ್ಟವರನ್ನು ಬದುಕಿಸಿದರೆಂದು ಈ ವಚನದಿಂದ ತಿಳಿದುಬರುತ್ತದೆಂದು ಕೆಲವು ವ್ಯಾಖ್ಯಾನಗಾರರು ಹೇಳಿದ್ದಾರೆ. ಆದರೆ ನಿಜವಾಗಿಯೂ ಮೃತಪಟ್ಟವರನ್ನು ಅಲ್ಲಾಹನ ಹೊರತು ಬೇರೆ ಯಾರೂ ಬದುಕಿಸಲಾರರೆಂದು ಪವಿತ್ರ ಖುರ್‌ಆನಿನಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಉದಾಹರಣೆಗೆ ಖುರ್‌ಆನ್ ವಚನ 44:9, 42:10 ನೋಡಿರಿ. ಆದರೆ "ಮೃತಪಟ್ಟವರನ್ನು ಬದುಕಿಸು" ಎಂಬ ಪದ ಪ್ರಯೋಗ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ರ ಕುರಿತು ಪವಿತ್ರ ಖುರ್‌ಆನಿನನಲ್ಲಿ ಉಲ್ಲೇಖಿತವಿದೆ. ಅಲ್ಲಾಹನು ಹೀಗೆ ಹೇಳುತ್ತಾನೆ: 'ಎಲೈ ಸತ್ಯವಿಶ್ವಾಸಿಗಳೇ, ನಿಮ್ಮನ್ನು ಬದುಕಿಸುವುದಕ್ಕಾಗಿ ಅವರು (ಪೈಗಂಬರ್) ಕರೆದರೆ ಅಲ್ಲಾಹನಿಗೂ ಪ್ರವಾದಿಗೂ ನೀವು ಓಗೊಡಿರಿ.' (8:25). ಇಲ್ಲಿ 'ಬದುಕಿಸು' ಅಂದರೆ ಆಧ್ಯಾತ್ಮಿಕವಾಗಿ ಬದುಕಿಸುವ ಅರ್ಥವೆಂದು ಆ ವ್ಯಾಖ್ಯಾನಗಾರರೇ ಹೇಳುತ್ತಾರೆ. ಆದರೆ ಈಸಾ(ಅ)ರ ಕುರಿತು ಹೇಳುವಾಗ, 'ಇಹ್‌ಯಾಅ್' (ಬದುಕಿಸು) ಎಂಬ ಇದೇ ಪದ ಪ್ರಯೋಗಿಸಿದ ಕಡೆ, ಅವರು ನಿಜವಾಗಿಯೂ ಮೃತಪಟ್ಟವರನ್ನು ಬದುಕಿಸಿದ್ದರೆಂದು ಅವರು ಅರ್ಥಕೊಡುತ್ತಾರೆ. ಹೀಗೆ ಈಸಾ(ಅ)ರಿಗೆ ದಿವ್ಯತ್ವವನ್ನು ಕೊಟ್ಟು ಈ ವ್ಯಾಖ್ಯಾನಗಾರರು ಕ್ರೈಸ್ತರಿಗೆ ನೆರವಾಗುತ್ತಾರೆ. ಈಸಾ(ಅ)ರ ಕುರಿತು ಇಂತಹ ಪ್ರಯೋಗಗಳು ಬರಲು ಕಾರಣವೇನೆಂದು ಪ್ರಶ್ನೆ ಉದ್ಭವಿಸಬಹುದು. ಈಸಾ(ಅ)ರ ಬಗ್ಗೆ, ಅವರು ಸಾಮ್ಯರೂಪದಲ್ಲಿ ಮಾತನಾಡುವವರು ಎಂದು ಉಲ್ಲೇಖಿತವಾಗಿದೆ. (ಮತ್ತಾಯ 13:1-18). ಆದ್ದರಿಂದ ಅವರ ಬಗ್ಗೆ ಪವಿತ್ರ ಖುರ್‌ಆನಿನನಲ್ಲಿ ಪ್ರಸ್ತಾಪಿಸಲಾದ ಸಂಗತಿಗಳು ಅವರ ಶೈಲಿಯಲ್ಲೇ ಸಾಮ್ಯರೂಪದಲ್ಲಿ ಪ್ರಯೋಗಿಸಲ್ಪಟ್ಟಿವೆ.

208. ಪ್ರವಾದಿ ಈಸಾರನ್ನು ಶಿಲುಬೆಗೇರಿಸಿ ಕೊಲ್ಲಲು ಯಹೂದ್ಯರಿಗೆ ಸಾಧ್ಯವಾಗಲಿಲ್ಲವೆಂದು ಇದರಿಂದ ಸ್ಪಷ್ಟವಾಗುತ್ತದೆ. ಹಝ್ರತ್ ಈಸಾ ಅಲೈಹಿಸ್ಸಲಾಮರ ರೂಪವನ್ನು ಮತ್ತೊಬ್ಬ ವ್ಯಕ್ತಿಗೆ ಕೊಟ್ಟು ಆ ವ್ಯಕ್ತಿಯನ್ನು ಶಿಲುಬೆಗೇರಿಸಿ ಕೊಲ್ಲಲಾಗಿದೆ ಎಂದು ಈ ವಚನಕ್ಕೆ ಕೆಲವು ವ್ಯಾಖ್ಯಾನಗಾರರು ವ್ಯಾಖ್ಯಾನ ನೀಡಿರುವುದು ಅಪಹಾಸ್ಯಕರವಾಗಿದೆ. ಈ ರೀತಿ ಸಂಭವಿಸಿದ್ದರೆ ಯಹೂದ್ಯರ ವಾದ ಸರಿಯೆಂದು ಸಮ್ಮತಿಸಬೇಕಾದೀತು. ಏಕೆಂದರೆ ಯೇಸುವನ್ನು ಶಿಲುಬೆಗೇರಿಸಿದ್ದೇವೆಂದೂ ಆತ ಶಿಲುಬೆಯ ಮೇಲೆ ಮೃತಪಟ್ಟಿದ್ದಾನೆಂದೂ ಅವರು ನಂಬುತ್ತಾರೆ.

209. ಪ್ರವಾದಿ ಈಸಾರ ಶಿಷ್ಯರು.

ಪೀಳಿಗೆಯವರಿಗೂ ಹಬ್ಬವೂ ನಿನ್ನಿಂದ ಒಂದು ದೃಷ್ಟಾಂತವೂ ಆಗಲಿ. ನೀನು ನಮಗೆ ಆಹಾರವನ್ನು ದಯಪಾಲಿಸು. ಅನ್ನದಾತರಲ್ಲಿ ನೀನು ಅತ್ಯುತ್ತಮನಷ್ಟೆ.' [210]

عِيدًا لِّأَوَّلِنَا وَآخِرِنَا وَآيَةً مِّنكَ ۖ وَارْزُقْنَا وَأَنتَ خَيْرُ الرَّازِقِينَ ﴿١١٥﴾

**116.** ಅಲ್ಲಾಹನು ಹೇಳಿದನು: 'ಖಂಡಿತವಾಗಿಯೂ ನಾನು ಅದನ್ನು ನಿಮಗೆ ಇಳಿಸಿಕೊಡುವೆನು. ಆದರೆ, ಆ ಬಳಿಕ ನಿಮ್ಮ ಪೈಕಿ ಯಾವನಾದರೂ ಅವಿಶ್ವಾಸಿಯಾದರೆ, ಜಗತ್ತಿನಲ್ಲಿ ಯಾರನ್ನೂ ಶಿಕ್ಷಿಸದ ರೀತಿಯಲ್ಲಿರುವ ಶಿಕ್ಷೆಯನ್ನು ಅವನಿಗೆ ನಾನು ನೀಡುವೆನು.'

قَالَ اللَّهُ إِنِّي مُنَزِّلُهَا عَلَيْكُمْ ۖ فَمَن يَكْفُرْ بَعْدُ مِنكُمْ فَإِنِّي أُعَذِّبُهُ عَذَابًا لَّا أُعَذِّبُهُ أَحَدًا مِّنَ الْعَالَمِينَ ﴿١١٦﴾

**117.** (ಪುನರುತ್ಥಾನದ ದಿನದಂದು) ಅಲ್ಲಾಹನು: "ಓ ಮರ್ಯಮ್ ಪುತ್ರ ಈಸಾ, 'ನನ್ನನ್ನೂ ನನ್ನ ತಾಯಿಯನ್ನೂ ಅಲ್ಲಾಹನ ಹೊರತಾಗಿ ಇಬ್ಬರು ದೇವರುಗಳನ್ನಾಗಿ ಅಂಗೀಕರಿಸಿರಿ' ಎಂದು ನೀನು ಜನರೊಡನೆ ಹೇಳಿರುವಿಯಾ?" ಎಂದು ಕೇಳುವನು. ಆಗ ಅವರು (ಈಸಾ) ಹೇಳುವರು: "ನೀನು ಪರಿಶುದ್ಧನು. ನನಗೆ ಅಧಿಕಾರವಿಲ್ಲದುದನ್ನು ಹೇಳುವುದು ನನಗೆ ಉಚಿತವಲ್ಲ. ನಾನು ಹಾಗೇನಾದರೂ ಹೇಳಿದ್ದರೆ ನೀನು ಅದನ್ನು ಖಂಡಿತವಾಗಿಯೂ ತಿಳಿಯುತ್ತಿದ್ದೆ. ನನ್ನ ಮನಸ್ಸಿನಲ್ಲಿರುವುದನ್ನು ನೀನು ತಿಳಿಯಬಲ್ಲೆ. ಆದರೆ ನಿನ್ನ ಮನಸ್ಸಿನಲ್ಲಿರುವುದನ್ನು ನಾನು ತಿಳಿಯಲಾರೆ. ನಿಶ್ಚಯವಾಗಿಯೂ ನೀನು ಅಗೋಚರ ಸಂಗತಿಗಳನ್ನು ತಿಳಿಯುವವನಾಗಿರುವೆ.

وَإِذْ قَالَ اللَّهُ يَا عِيسَى ابْنَ مَرْيَمَ أَأَنتَ قُلْتَ لِلنَّاسِ اتَّخِذُونِي وَأُمِّيَ إِلَٰهَيْنِ مِن دُونِ اللَّهِ ۖ قَالَ سُبْحَانَكَ مَا يَكُونُ لِي أَنْ أَقُولَ مَا لَيْسَ لِي بِحَقٍّ ۚ إِن كُنتُ قُلْتُهُ فَقَدْ عَلِمْتَهُ ۚ تَعْلَمُ مَا فِي نَفْسِي وَلَا أَعْلَمُ مَا فِي نَفْسِكَ ۚ إِنَّكَ أَنتَ عَلَّامُ الْغُيُوبِ ﴿١١٧﴾

**118.** "ನೀನು ನನಗೆ ಆಜ್ಞಾಪಿಸಿದ ಪ್ರಕಾರವಲ್ಲದೆ, ಅಂದರೆ, 'ನನ್ನ ಪ್ರಭುವೂ ನಿಮ್ಮ ಪ್ರಭುವೂ ಆದ ಅಲ್ಲಾಹನನ್ನು ಮಾತ್ರ ಆರಾಧಿಸಿರಿ' ಎಂದು ಹೊರತು ಬೇರೇನೂ ನಾನು ಅವರೊಡನೆ ಹೇಳಿಲ್ಲ. ನಾನು ಅವರೊಂದಿಗೆ ಇದ್ದ ಕಾಲದ ವರೆಗೆ ನಾನು ಅವರಿಗೆ ಸಾಕ್ಷಿಯಾಗಿದ್ದೆ. ಆದರೆ ನೀನು ನನ್ನನ್ನು ಮೃತಪಡಿಸಿದಾಗ ಅವರ

مَا قُلْتُ لَهُمْ إِلَّا مَا أَمَرْتَنِي بِهِ أَنِ اعْبُدُوا اللَّهَ رَبِّي وَرَبَّكُمْ ۚ وَكُنتُ عَلَيْهِمْ شَهِيدًا مَّا دُمْتُ فِيهِمْ ۖ فَلَمَّا تَوَفَّيْتَنِي كُنتَ أَنتَ الرَّقِيبَ

210. ಈ ಪ್ರಾರ್ಥನೆಯ ಫಲವಾಗಿ ಕ್ರೈಸ್ತ ಸಮುದಾಯದ ಮೊದಲ ಪೀಳಿಗೆಗೂ ನಂತರದ ಪೀಳಿಗೆಗಳಿಗೂ ಜಗತ್ತಿನ ಆಧಿಪತ್ಯ ದೊರೆಯಿತು. ಹಾಗೆ ಅಲ್ಲಾಹನು ತನ್ನ ವಾಗ್ದಾನವನ್ನು ಈಡೇರಿಸಿದನು. ಮುಂದಿನ ವಚನದಲ್ಲಿ ಸೂಚಿಸಲಾದ ಶಿಕ್ಷೆ ಬಂದೆರಗಲಿಕ್ಕೆ ಮಾತ್ರ ಬಾಕಿಯಿದೆ.





ಮೇಲ್ನೋಟಗಾರನು ನೀನೇ ಆದೆ. ನೀನು ಸರ್ವ ಸಂಗತಿಗಳಿಗೂ ಸಾಕ್ಷಿಯಾಗಿರುವೆ." [211]

عَلَيْهِمْ ۚ وَأَنتَ عَلَىٰ كُلِّ شَيْءٍ شَهِيدٌ ﴿١١٨﴾

**119.** "ನೀನು ಅವರನ್ನು ಶಿಕ್ಷಿಸುವುದಾದರೆ, ಖಂಡಿತವಾಗಿಯೂ ಅವರು ನಿನ್ನ ದಾಸರಾಗಿದ್ದಾರೆ ಮತ್ತು ನೀನು ಅವರನ್ನು ಕ್ಷಮಿಸುವುದಾದರೆ, ನಿಶ್ಚಯವಾಗಿಯೂ ನೀನು ಪ್ರತಾಪಶಾಲಿಯೂ ಬುದ್ಧಿಶಾಲಿಯೂ ಆಗಿರುವೆ."

إِن تُعَذِّبْهُمْ فَإِنَّهُمْ عِبَادُكَ ۖ وَإِن تَغْفِرْ لَهُمْ فَإِنَّكَ أَنتَ الْعَزِيزُ الْحَكِيمُ ﴿١١٩﴾

**120.** ಅಲ್ಲಾಹನು ಹೇಳುವನು: "ಇದು ಸತ್ಯವಂತರಿಗೆ ತಮ್ಮ ಸತ್ಯಸಂಧತೆ ಪ್ರಯೋಜನ ನೀಡುವ ದಿನವಾಗಿದೆ. ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳು ಅವರಿಗೆ ಇವೆ. ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು. ಅಲ್ಲಾಹನು ಅವರ ಬಗ್ಗೆ ಸಂತೃಪ್ತನಾಗಿರುವನು; ಅವರು ಅಲ್ಲಾಹನ ಬಗ್ಗೆಯೂ ಸಂತೃಪ್ತರಾಗಿರುವರು. ಅದೇ ಮಹತ್ತರ ವಿಜಯವಾಗಿದೆ."

قَالَ اللَّهُ هَٰذَا يَوْمُ يَنفَعُ الصَّادِقِينَ صِدْقُهُمْ ۚ لَهُمْ جَنَّاتٌ تَجْرِي مِن تَحْتِهَا الْأَنْهَارُ خَالِدِينَ فِيهَا أَبَدًا ۚ رَّضِيَ اللَّهُ عَنْهُمْ وَرَضُوا عَنْهُ ۚ ذَٰلِكَ الْفَوْزُ الْعَظِيمُ ﴿١٢٠﴾

**121.** ಆಕಾಶಗಳ ಭೂಮಿಯ ಮತ್ತು ಅವುಗಳಲ್ಲಿರುವ ಎಲ್ಲದರ ಆಧಿಪತ್ಯ ಅಲ್ಲಾಹನದ್ದಾಗಿದೆ. ಅವನು ಎಲ್ಲ ಕಾರ್ಯಗಳ ಮೇಲೂ ಶಕ್ತಿಯುಳ್ಳವನಾಗಿದ್ದಾನೆ.

لِلَّهِ مُلْكُ السَّمَاوَاتِ وَالْأَرْضِ وَمَا فِيهِنَّ ۚ وَهُوَ عَلَىٰ كُلِّ شَيْءٍ قَدِيرٌ ﴿١٢١﴾

211. ಪ್ರವಾದಿ ಈಸಾ ಅಲೈಹಿಸ್ಸಲಾಮರ ಜೀವನ ಕಾಲದಲ್ಲಿ ಕ್ರೈಸ್ತರು ಏಕದೇವೋಪಾಸಕರಾಗಿದ್ದರೆಂದೂ ಅವರು ಬಹುದೇವಾರಾಧನೆಯನ್ನು ಆರಂಭಿಸಿದ್ದು ಈಸಾ(ಅ)ರ ಮರಣದ ಬಳಿಕವೆಂದೂ ಇದರಿಂದ ಸ್ಪಷ್ಟವಾಗುತ್ತದೆ.

سُوْرَةُ الْاَنْعَامِ مَكِّيَّةٌ وَّهِيَ مَعَ الْبَسْمَلَةِ مِائَةٌ وَّسِتٌّ وَّسِتُّوْنَ اٰيَةً وَّعِشْرُوْنَ رُكُوْعًا

# 6. ಅಲ್‌ಅನ್‌ಆಂ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 166 ಆಯತ್‌ಗಳು ಹಾಗೂ 20 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿರುವ ಹಾಗೂ** (ಎಲ್ಲತರ) **ಅಂಧಕಾರಗಳನ್ನೂ ಪ್ರಕಾಶವನ್ನೂ ಉಂಟುಮಾಡಿರುವ ಅಲ್ಲಾಹನಿಗೆ ಸರ್ವಸ್ತುತಿಗಳು. ಆದರೂ ಅವಿಶ್ವಾಸಿಗಳು ತಮ್ಮ ಪ್ರಭುವಿಗೆ ಸಮಾನರನ್ನು ಕಲ್ಪಿಸುತ್ತಾರೆ.**

اَلْحَمْدُ لِلّٰهِ الَّذِيْ خَلَقَ السَّمٰوٰتِ وَ الْاَرْضَ وَ جَعَلَ الظُّلُمٰتِ وَ النُّوْرَ ۬ؕ ثُمَّ الَّذِيْنَ كَفَرُوْا بِرَبِّهِمْ يَعْدِلُوْنَ ②

**3. ಅವನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿ,** (ಜೀವಿತ ಕಾಲಕ್ಕೆ) **ಒಂದು ಅವಧಿಯನ್ನು ನಿರ್ಣಯಿಸಿದನು.** (ಇನ್ನೊಂದು) **ನಿಶ್ಚಿತ ಕಾಲಾವಧಿ ಸಹ ಅವನ ಬಳಿಯಲ್ಲಿದೆ.**[212] (ಆ ಬಗ್ಗೆ ಅವನಿಗೆ ಮಾತ್ರ ಅರಿವಿದೆ.) **ಆದಾಗ್ಯೂ ನೀವು ಸಂಶಯಪಡುತ್ತೀರಿ.**

هُوَ الَّذِيْ خَلَقَكُمْ مِّنْ طِيْنٍ ثُمَّ قَضٰۤى اَجَلًا ؕ وَ اَجَلٌ مُّسَمًّى عِنْدَهٗ ثُمَّ اَنْتُمْ تَمْتَرُوْنَ ③

**4. ಅವನೇ ಅಲ್ಲಾಹನು; ಆಕಾಶಗಳಲ್ಲೂ ಭೂಮಿಯಲ್ಲೂ ಇರುವ** *ದೇವನು.* **ಅವನು ನೀವು ಬಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೂ ತಿಳಿಯುತ್ತಾನೆ. ನೀವು ಏನನ್ನು ಸಂಪಾದಿಸುತ್ತೀರೆಂಬುದನ್ನೂ ಅವನು ತಿಳಿಯುತ್ತಾನೆ.**

وَ هُوَ اللّٰهُ فِي السَّمٰوٰتِ وَ فِي الْاَرْضِ ؕ يَعْلَمُ سِرَّكُمْ وَ جَهْرَكُمْ وَ يَعْلَمُ مَا تَكْسِبُوْنَ ④

**5. ತಮ್ಮ ಪ್ರಭುವಿನ ದೃಷ್ಟಾಂತಗಳಲ್ಲಿ ಯಾವುದೇ ದೃಷ್ಟಾಂತವಾಗಲಿ ಅವರ ಬಳಿಗೆ ಬರುವುದಿಲ್ಲ- ಅದರಿಂದ ಅವರು ಮುಖ ತಿರುಗಿಸುವವರಾಗಿ ಹೊರತು.**

وَمَا تَاْتِيْهِمْ مِّنْ اٰيَةٍ مِّنْ اٰيٰتِ رَبِّهِمْ اِلَّا كَانُوْا عَنْهَا مُعْرِضِيْنَ ⑤

**6. ಹಾಗೆ, ಸತ್ಯ ಅವರೆಡೆಗೆ ಬಂದಾಗ ಅವರು ಅದನ್ನು ತಿರಸ್ಕರಿಸಿದರು. ಆದರೆ ಅವರು ಏನನ್ನು ಅಪಹಾಸ್ಯ ಮಾಡುತ್ತಿದ್ದರೋ ಅದರ ವೃತ್ತಾಂತಗಳನ್ನು ಅವರು ಬೇಗನೆ ತಿಳಿಯುವರು.**

فَقَدْ كَذَّبُوْا بِالْحَقِّ لَمَّا جَآءَهُمْ ؕ فَسَوْفَ يَاْتِيْهِمْ اَنْۢبٰٓؤُا مَا كَانُوْا بِهٖ يَسْتَهْزِءُوْنَ ⑥

212. ಅಂದರೆ ಈ ಲೋಕದ ಪೂರ್ಣ ಆಯುಷ್ಕಾಲ. ಅದು ಅಲ್ಲಾಹನ ಹೊರತು ಬೇರೆ ಯಾರಿಗೂ ತಿಳಿಯದು.





**7. ಇವರಿಗೆ ಮುಂಚೆ ಬೇರೆ ಬೇರೆ ಯುಗಗಳಲ್ಲಿ ಅದೆಷ್ಟು** *ತಲೆಮಾರುಗಳನ್ನು* **ನಾವು ನಾಶಪಡಿಸಿರುವೆವೆಂಬುದನ್ನು ಇವರು ಕಾಣುವುದಿಲ್ಲವೇ? ನಾವು ನಿಮಗೆ ನೀಡದಿರುವ ಶಕ್ತಿಗಳನ್ನು ಅವರಿಗೆ ಭೂಮಿಯಲ್ಲಿ ನೀಡಿದ್ದೆವು. ಅವರ ಮೇಲೆ ಧಾರಾಕಾರವಾಗಿ ಮಳೆ ಸುರಿಸುವ ಮೋಡಗಳನ್ನು ನಾವು ಕಳುಹಿಸಿದೆವು. ಅವರ ಕೆಳಭಾಗದಲ್ಲಿ ನದಿಗಳು ಹರಿಯುವಂತೆ ಮಾಡಿದೆವು. ಆ ಮೇಲೆ ನಾವು ಅವರನ್ನು ಅವರ ಪಾಪಗಳ ಕಾರಣದಿಂದ ನಾಶಪಡಿಸಿ ಅವರ ನಂತರ ಇನ್ನೊಂದು ಜನತೆಯನ್ನು ಎಬ್ಬಿಸಿದೆವು.**

اَلَمْ يَرَوْا كَمْ اَهْلَكْنَا مِنْ قَبْلِهِمْ مِّنْ قَرْنٍ مَّكَّنّٰهُمْ فِي الْاَرْضِ مَا لَمْ نُمَكِّنْ لَّكُمْ وَ اَرْسَلْنَا السَّمَآءَ عَلَيْهِمْ مِّدْرَارًا ۪ وَّ جَعَلْنَا الْاَنْهٰرَ تَجْرِيْ مِنْ تَحْتِهِمْ فَاَهْلَكْنٰهُمْ بِذُنُوْبِهِمْ وَ اَنْشَاْنَا مِنْۢ بَعْدِهِمْ قَرْنًا اٰخَرِيْنَ ⑦

**8. ನಾವು ನಿನಗೆ ಕಾಗದದಲ್ಲಿ ಬರೆದ ಒಂದು ಗ್ರಂಥವನ್ನು ಅವತೀರ್ಣಗೊಳಿಸಿ ಅವರು ಅದನ್ನು ತಮ್ಮ ಕೈಗಳಿಂದ ಮುಟ್ಟಿನೋಡಿದರೆ ಕೂಡ, 'ಇದು ಸ್ಪಷ್ಟವಾದ ಜಾಲವಿದ್ಯೆ ಹೊರತು ಬೇರೇನೂ ಅಲ್ಲ' ಎಂದು ಅವಿಶ್ವಾಸಿಗಳು ಖಂಡಿತವಾಗಿಯೂ ಹೇಳುತ್ತಿದ್ದರು.**

وَلَوْ نَزَّلْنَا عَلَيْكَ كِتٰبًا فِيْ قِرْطَاسٍ فَلَمَسُوْهُ بِاَيْدِيْهِمْ لَقَالَ الَّذِيْنَ كَفَرُوْۤا اِنْ هٰذَاۤ اِلَّا سِحْرٌ مُّبِيْنٌ ⑧

**9. 'ಅವನ ಬಳಿಗೆ ಓರ್ವ ದೇವದೂತ** (ಮಲಕ್) **ಏಕೆ ಇಳಿಸಲ್ಪಡುವುದಿಲ್ಲ?' ಎಂದು ಅವರು ಹೇಳುತ್ತಾರೆ. ಆದರೆ ನಾವು ಒಬ್ಬ ದೇವದೂತನನ್ನು ಕಳುಹಿಸಿದ್ದರೆ**[213] **ಸಂಗತಿ ಇತ್ಯರ್ಥವಾಗುತ್ತಿತ್ತು. ಆ ಮೇಲೆ ಅವರಿಗೆ ಕಾಲಾವಕಾಶ ನೀಡಲಾಗುತ್ತಿರಲಿಲ್ಲ.**

وَ قَالُوْا لَوْ لَاۤ اُنْزِلَ عَلَيْهِ مَلَكٌ ؕ وَ لَوْ اَنْزَلْنَا مَلَكًا لَّقُضِيَ الْاَمْرُ ثُمَّ لَا يُنْظَرُوْنَ ⑨

**10. ನಾವು ಒಬ್ಬ ದೇವದೂತನನ್ನು** (ಪ್ರವಾದಿಯಾಗಿ) **ನೇಮಿಸುತ್ತಿದ್ದರೆ ನಾವು ಆತನನ್ನು** (ರೂಪದಲ್ಲಿ) **ಒಬ್ಬ ಪುರುಷನನ್ನಾಗಿ ಮಾಡುತ್ತಿದ್ದೆವು.** (ಹಾಗೆ ಇಂದು) **ಅವರು ಸಂಶಯಿಸುತ್ತಿರುವ** *ಸಂಗತಿಗಳಲ್ಲಿ* **ನಾವು ಅವರನ್ನು** (ಅಂದು ಸಹ) **ಸಂಶಯಗ್ರಸ್ತರನ್ನಾಗಿ ಮಾಡುತ್ತಿದ್ದೆವು.**

وَ لَوْ جَعَلْنٰهُ مَلَكًا لَّجَعَلْنٰهُ رَجُلًا وَّ لَلَبَسْنَا عَلَيْهِمْ مَّا يَلْبِسُوْنَ ⑩

**11.** (ಎಲೈ ಪ್ರವಾದಿಯೇ,) **ನಿನಗೆ ಮುಂಚೆ ಸಹ ಪ್ರವಾದಿಗಳು ಅಪಹಾಸ್ಯಕ್ಕೆ ಗುರಿಯಾಗಿದ್ದಾರೆ. ಅದರ ಫಲವಾಗಿ, ಅವರು ಏನನ್ನು ಅಪಹಾಸ್ಯ ಮಾಡುತ್ತಿದ್ದರೋ ಅದು** (ಆ ಶಿಕ್ಷೆ)[214] **ಅವರಲ್ಲಿ ಅಪಹಾಸ್ಯ ಮಾಡಿದವರನ್ನೇ ಸುತ್ತುವರಿಯಿತು.**

وَلَقَدِ اسْتُهْزِئَ بِرُسُلٍ مِّنْ قَبْلِكَ فَحَاقَ بِالَّذِيْنَ سَخِرُوْا مِنْهُمْ مَّا كَانُوْا بِهٖ يَسْتَهْزِءُوْنَ ⑪ ع

213. ಅವಿಶ್ವಾಸಿಗಳಿಗೋಸ್ಕರ ಒಬ್ಬ ದೇವದೂತನನ್ನು ಕಳುಹಿಸುವುದಾದರೆ ಶಿಕ್ಷೆಯ ಮುನ್ನೆಚ್ಚರಿಕೆಯ ಸಹಿತ ಆ ದೇವದೂತನ ಆಗಮನವಾಗುವುದು. ಆ ಬಳಿಕ ಶಿಕ್ಷೆ ಬಂದೆರಗಲಿಕ್ಕೆ ತಡವಾಗಲಿಕ್ಕಿಲ್ಲ ಎಂದು ತಾತ್ಪರ್ಯ.

214. ಮುನ್ನೆಚ್ಚರಿಕೆ ನೀಡಲಾದ ಶಿಕ್ಷೆಯ ಕುರಿತು ಶತ್ರುಗಳು ಅಪಹಾಸ್ಯಮಾಡುತ್ತಿದ್ದರು. ಆ ಶಿಕ್ಷೆ ಬಂದೆರಗಿ ಅವರು ನಾಶವಾದರು.

قُلْ سِيرُوا فِي الْأَرْضِ ثُمَّ انْظُرُوا كَيْفَ كَانَ عَاقِبَةُ الْمُكَذِّبِينَ ﴿١١﴾

**12.** **ಹೇಳು: 'ನೀವು ಭೂಮಿಯಲ್ಲಿ ಸಂಚರಿಸಿ** (ಪ್ರವಾದಿಗಳನ್ನು) **ಸುಳ್ಳಾಗಿಸಿದವರ ಅಂತ್ಯಾವಸ್ಥೆ ಹೇಗಾಯಿತೆಂದು ಕಾಣಿರಿ.'**

قُلْ لِمَنْ مَا فِي السَّمَاوَاتِ وَالْأَرْضِ ۖ قُلْ لِلَّهِ ۚ كَتَبَ عَلَىٰ نَفْسِهِ الرَّحْمَةَ ۚ لَيَجْمَعَنَّكُمْ إِلَىٰ يَوْمِ الْقِيَامَةِ لَا رَيْبَ فِيهِ ۚ الَّذِينَ خَسِرُوا أَنْفُسَهُمْ فَهُمْ لَا يُؤْمِنُونَ ﴿١٢﴾

**13.** **ಕೇಳು: 'ಆಕಾಶಗಳಲ್ಲಿ ಮತ್ತು ಭೂಮಿ ಯಲ್ಲಿರುವವೆಲ್ಲ ಯಾರಿಗೆ ಸೇರಿವೆ?' 'ಅಲ್ಲಾಹನಿಗೆ' ಎಂದು ಹೇಳು. ಅವನು ಕಾರುಣ್ಯವನ್ನು ತನ್ನ ಬಾಧ್ಯತೆಯನ್ನಾಗಿ ನಿಶ್ಚಯಿಸಿಕೊಂಡಿರುವವನು. ನಿಶ್ಚಯವಾಗಿಯೂ ಅವನು ನಿಮ್ಮನ್ನು ಪುನರುತ್ಥಾನ ದಿನದ ವರೆಗೆ ಒಟ್ಟುಗೂಡಿಸುತ್ತಲಿರುತ್ತಾನೆ. ಅದರಲ್ಲೇನೂ ಸಂಶಯವಿಲ್ಲ. ತಮ್ಮ ಆತ್ಮಗಳನ್ನು ನಾಶಕ್ಕೀಡು ಮಾಡುವವರಾರೋ ಅವರು ವಿಶ್ವಾಸ ಹೊಂದಲಾರರು.**[215]

وَلَهُ مَا سَكَنَ فِي اللَّيْلِ وَالنَّهَارِ ۚ وَهُوَ السَّمِيعُ الْعَلِيمُ ﴿١٣﴾

**14.** **ರಾತ್ರಿಯಲ್ಲೂ** (ಅಂಧಕಾರದಲ್ಲೂ) **ಹಗಲಿನಲ್ಲೂ** (ಪ್ರಕಾಶದಲ್ಲೂ) **ಇರುವ ಎಲ್ಲವೂ ಅವನಿಗೆ** (ಅಲ್ಲಾಹನಿಗೆ) **ಸೇರಿವೆ. ಅವನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.**

قُلْ أَغَيْرَ اللَّهِ أَتَّخِذُ وَلِيًّا فَاطِرِ السَّمَاوَاتِ وَالْأَرْضِ وَهُوَ يُطْعِمُ وَلَا يُطْعَمُ ۗ قُلْ إِنِّي أُمِرْتُ أَنْ أَكُونَ أَوَّلَ مَنْ أَسْلَمَ ۖ وَلَا تَكُونَنَّ مِنَ الْمُشْرِكِينَ ﴿١٤﴾

**15.** **ಹೇಳು: 'ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾದ ಅಲ್ಲಾಹನ ಹೊರತು ಬೇರೆ ಯಾರನ್ನಾದರೂ ನಾನು ರಕ್ಷಕನಾಗಿ ಸ್ವೀಕರಿಸಬೇಕೇ? ಅವನು** (ಎಲ್ಲರಿಗೂ) **ಆಹಾರ ಕೊಡುತ್ತಾನೆ; ಅವನಿಗೆ ಆಹಾರ ನೀಡಲಾಗುವುದಿಲ್ಲ.' ಹೇಳು: 'ವಿಧೇಯತೆ ತೋರಿಸುವವರಲ್ಲಿ ಮೊದಲಿಗನು ನಾನಾಗಬೇಕೆಂದು ನನಗೆ ಆಜ್ಞಾಪಿಸಲಾಗಿದೆ.' ನೀನು ಎಂದಿಗೂ ಬಹುದೇವಾರಾಧಕರಲ್ಲಿ ಸೇರಿದನಾಗಬಾರದು' ಎಂದು ಸಹ** (ನನಗೆ ಆದೇಶ ನೀಡಲಾಗಿದೆ).

قُلْ إِنِّي أَخَافُ إِنْ عَصَيْتُ رَبِّي عَذَابَ يَوْمٍ عَظِيمٍ ﴿١٥﴾

**16.** **ಹೇಳು: 'ನಾನು ನನ್ನ ಪ್ರಭುವಿಗೆ ಅವಿಧೇಯನಾದರೆ ಒಂದು ದೊಡ್ಡ ಶಿಕ್ಷೆಯ ದಿನದ ಬಗ್ಗೆ ನಾನು ಭಯಪಡುತ್ತೇನೆ.'**

215. ಮನುಷ್ಯನ ದುಷ್ಕೃತ್ಯದಿಂದಾಗಿ ಸತ್ಯವಿಶ್ವಾಸವನ್ನು ಕೈಗೊಳ್ಳುವ ಸೌಭಾಗ್ಯ ಅವನಿಗೆ ಲಭಿಸದಾಗುತ್ತದೆ.





مَنْ يُصْرَفْ عَنْهُ يَوْمَئِذٍ فَقَدْ رَحِمَهُ ۚ وَذَٰلِكَ الْفَوْزُ الْمُبِينُ ﴿١٦﴾

**17.** **ಅಂದು ಯಾವೊಬ್ಬನಿಂದ ಅದು** (ಶಿಕ್ಷೆ) **ದೂರಗೊಳಿಸಲ್ಪಡುವುದೋ ಖಂಡಿತವಾಗಿಯೂ** ಅಲ್ಲಾಹನು **ಅವನ ಮೇಲೆ ಕರುಣೆದೋರಿದನು** (ಎಂದು ತಿಳಿದುಕೊಳ್ಳಲಿ). **ಅದೇ ಸ್ಪಷ್ಟವಾದ ವಿಜಯವಾಗಿದೆ.**

وَإِنْ يَمْسَسْكَ اللَّهُ بِضُرٍّ فَلَا كَاشِفَ لَهُ إِلَّا هُوَ ۖ وَإِنْ يَمْسَسْكَ بِخَيْرٍ فَهُوَ عَلَىٰ كُلِّ شَيْءٍ قَدِيرٌ ﴿١٧﴾

**18.** **ಅಲ್ಲಾಹನು ನಿನಗೆ ಏನಾದರೂ ಕೇಡನ್ನುಂಟು ಮಾಡಿದರೆ ಅವನ ಹೊರತು ಅದನ್ನು ನಿವಾರಿಸುವ ಬೇರಾರೂ ಇಲ್ಲ. ಅವನು ನಿನಗೆ ಸೌಭಾಗ್ಯವನ್ನು ದಯಪಾಲಿಸಿದರೆ ತಾನು ಬಯಸಿದ ಎಲ್ಲವನ್ನೂ ಮಾಡಲು ಅವನು ಸಮರ್ಥನು** (ಎಂದು ತಿಳಿದುಕೋ).

وَهُوَ الْقَاهِرُ فَوْقَ عِبَادِهِ ۚ وَهُوَ الْحَكِيمُ الْخَبِيرُ ﴿١٨﴾

**19.** **ಅವನು ತನ್ನ ದಾಸರ ಮೇಲೆ ಸರ್ವೋನ್ನತ ಅಧಿಕಾರವನ್ನು ಹೊಂದಿದವನಾಗಿದ್ದಾನೆ.**[216] **ಅವನು ವಿವೇಕಶಾಲಿಯೂ ಎಲ್ಲ ಬಲ್ಲವನೂ ಆಗಿದ್ದಾನೆ.**

قُلْ أَيُّ شَيْءٍ أَكْبَرُ شَهَادَةً ۖ قُلِ اللَّهُ ۖ شَهِيدٌ بَيْنِي وَبَيْنَكُمْ ۚ وَأُوحِيَ إِلَيَّ هَٰذَا الْقُرْآنُ لِأُنْذِرَكُمْ بِهِ وَمَنْ بَلَغَ ۚ أَئِنَّكُمْ لَتَشْهَدُونَ أَنَّ مَعَ اللَّهِ آلِهَةً أُخْرَىٰ ۚ قُلْ لَا أَشْهَدُ ۚ قُلْ إِنَّمَا هُوَ إِلَٰهٌ وَاحِدٌ وَإِنَّنِي بَرِيءٌ مِمَّا تُشْرِكُونَ ﴿١٩﴾

**20.** (ಎಲೈ ಪ್ರವಾದಿ, ಅವರೊಡನೆ) **ಕೇಳು: 'ಅತಿ ಮಹತ್ತರ ಸಾಕ್ಷ್ಯ ಯಾವುದು?' ಹೇಳು: 'ಅಲ್ಲಾಹ್.** ಅವನು **ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿದ್ದಾನೆ. ಈ ಖುರ್‌ಆನ್ ನನಗೆ ಅವತೀರ್ಣಗೊಳಿಸಲ್ಪಟ್ಟದ್ದು ನಿಮಗೂ ಈ ಸಂದೇಶ ತಲಪುವವರಿಗೂ ನಾನು ಮುನ್ನೆಚ್ಚರಿಕೆ ನೀಡಲಿಕ್ಕಾಗಿದೆ. ಏನು, ಅಲ್ಲಾಹನ ಜೊತೆಗೆ ಬೇರೆ ದೇವರುಗಳಿದ್ದಾರೆಂದು ಸಾಕ್ಷ್ಯ ನೀಡುವವರು ನೀವೇನು?' ಹೇಳು: 'ನಾನು** (ಹಾಗೆ) **ಸಾಕ್ಷ್ಯನೀಡುವುದಿಲ್ಲ.' ಹೇಳು: 'ನಿಶ್ಚಯವಾಗಿಯೂ ಅವನೇ ಏಕ ದೇವನು. ನೀವು** (ಅವನಿಗೆ) **ಸಹಭಾಗಿಗಳನ್ನು ಕಲ್ಪಿಸುವುದರ ಕುರಿತು ನಾನು ಬೇಸರಗೊಂಡಿರುವೆನು.'**

الَّذِينَ آتَيْنَاهُمُ الْكِتَابَ يَعْرِفُونَهُ كَمَا يَعْرِفُونَ أَبْنَاءَهُمُ ۘ الَّذِينَ

**21.** **ಯಾರಿಗೆ ನಾವು ಗ್ರಂಥ ನೀಡಿದ್ದೇವೋ ಅವರು ತಮ್ಮ ಮಕ್ಕಳನ್ನು ಗುರುತಿಸುವಂತೆ ಅವರನ್ನು**[216A]

216. ಅಲ್ಲಾಹನು ಸರ್ವೋನ್ನತ ಅಧಿಕಾರ ಹೊಂದಿದವನೂ ಎಲ್ಲರನ್ನು ಗೆಲ್ಲುವವನೂ ಆಗಿದ್ದರೆ ಸತ್ಯಧರ್ಮದ ವಿರೋಧಿಗಳನ್ನು ಏಕೆ ಶಿಕ್ಷಿಸುವುದಿಲ್ಲವೆಂದು ಪ್ರಶ್ನೆ ಏಳುತ್ತದೆ. ಅದಕ್ಕೆ ಉತ್ತರವಾಗಿ ಅವನು ವಿವೇಕಶಾಲಿಯೂ ಎಲ್ಲ ಬಲ್ಲವನೂ ಆಗಿದ್ದಾನೆಂದು ಹೇಳಲಾಗಿದೆ. ವಿರೋಧಿಗಳಲ್ಲಿ ಕೆಲವರು, ಮುಂದೆ ವಿಶ್ವಾಸ ಹೊಂದುವವರು ಇರಬಹುದು. ಶೀಘ್ರದಲ್ಲೇ ಶಿಕ್ಷಿಸಿದರೆ ಅವರು ಸಹ ನಾಶ ಹೊಂದುವ ಸಂಭವವಿದೆ. ಆ ವಿಚಾರ ಸರಿಯಾದ ರೀತಿಯಲ್ಲಿ ಅಲ್ಲಾಹನಿಗೆ ಮಾತ್ರ ಗೊತ್ತು. ಆದ್ದರಿಂದ ಅವನು ವಿವೇಕಪೂರ್ಣವಾಗಿ ವರ್ತಿಸುತ್ತಾನೆ.

216A. "ಅವರು ತಂದ ಈ ಸತ್ಯವನ್ನು" ಎಂದು ಸಹ ಅರ್ಥವಿದೆ.

خَسِرُوْٓا اَنْفُسَهُمْ فَهُمْ لَا يُؤْمِنُوْنَ ﴿٢١﴾

(ಮುಹಮ್ಮದ್ ಪೈಗಂಬರರನ್ನು) **ಗುರುತಿಸುವರು. ಆದರೆ ತಮ್ಮ ಆತ್ಮಗಳನ್ನು ನಾಶಕ್ಕೀಡುಮಾಡಿದವರು ವಿಶ್ವಾಸ ಹೊಂದಲಾರರು.**

وَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِاٰيٰتِهٖ ۭ اِنَّهٗ لَا يُفْلِحُ الظّٰلِمُوْنَ ﴿٢٢﴾

**22. ಅಲ್ಲಾಹನ ಬಗ್ಗೆ ಸುಳ್ಳನ್ನು ಸೃಷ್ಟಿಸಿ ಹೇಳುವವನಿಗಿಂತ ಅಥವಾ ಅವನ ದೃಷ್ಟಾಂತಗಳನ್ನು ಸುಳ್ಳೆಂದು ಬಗೆಯುವವನಿಗಿಂತ ದೊಡ್ಡ ಅಧರ್ಮಿ ಯಾರು? ಖಂಡಿತವಾಗಿಯೂ ಅಧರ್ಮಿಗಳು ವಿಜಯ ಹೊಂದಲಾರರು.**

وَيَوْمَ نَحْشُرُهُمْ جَمِيْعًا ثُمَّ نَقُوْلُ لِلَّذِيْنَ اَشْرَكُوْٓا اَيْنَ شُرَكَاۗؤُكُمُ الَّذِيْنَ كُنْتُمْ تَزْعُمُوْنَ ﴿٢٣﴾

**23. ಅವರನ್ನೆಲ್ಲ ನಾವು ಒಂದುಗೂಡಿಸಿದ ಬಳಿಕ, ಬಹುದೇವಾರಾಧಕರೊಡನೆ, 'ನೀವು ಪ್ರತಿಪಾದಿಸುತ್ತಿದ್ದ, ನಿಮ್ಮ** (ಕಲ್ಪನೆಯಲ್ಲಿದ್ದ ದೇವ) **ಸಹಭಾಗಿಗಳೆಲ್ಲಿ?' ಎಂದು ನಾವು ಕೇಳುವ ದಿನ** (ದ ಬಗ್ಗೆ ಯೋಚಿಸಿರಿ).

ثُمَّ لَمْ تَكُنْ فِتْنَتُهُمْ اِلَّآ اَنْ قَالُوْا وَاللّٰهِ رَبِّنَا مَا كُنَّا مُشْرِكِيْنَ ﴿٢٤﴾

**24. ಅನಂತರ 'ನಮ್ಮ ಪ್ರಭುವಾದ ಅಲ್ಲಾಹನಾಣೆ, ನಾವು ಬಹುದೇವಾರಾಧಕರಾಗಿರಲಿಲ್ಲ' ಎಂದು ಅವರು** (ಸುಳ್ಳು) **ಹೇಳುವುದರ ಹೊರತು ಅವರಿಗೆ ಬೇರೆ ಯಾವುದೇ ನೆಪವಿರಲಾರದು.**

اُنْظُرْ كَيْفَ كَذَبُوْا عَلٰٓي اَنْفُسِهِمْ وَضَلَّ عَنْهُمْ مَّا كَانُوْا يَفْتَرُوْنَ ﴿٢٥﴾

**25. ಅವರು ತಮ್ಮ ಬಗ್ಗೆ ಹೇಗೆ ಸುಳ್ಳು ಹೇಳುತ್ತಾರೆಂದು ನೋಡು. ಅವರ ಸುಳ್ಳು ಕಲ್ಪನೆಗಳೆಲ್ಲ ಅವರಿಗೆ ನಿರುಪಯುಕ್ತವಾಗುತ್ತವೆ.**

وَمِنْهُمْ مَّنْ يَّسْتَمِعُ اِلَيْكَ ۚ وَجَعَلْنَا عَلٰي قُلُوْبِهِمْ اَكِنَّةً اَنْ يَّفْقَهُوْهُ وَفِيْٓ اٰذَانِهِمْ وَقْرًا ۭ وَاِنْ يَّرَوْا كُلَّ اٰيَةٍ لَّا يُؤْمِنُوْا بِهَا ۭ حَتّٰٓي اِذَا جَاۗءُوْكَ يُجَادِلُوْنَكَ يَقُوْلُ الَّذِيْنَ كَفَرُوْٓا اِنْ

**26. ನಿನ್ನ ಮಾತಿಗೆ ಕಿವಿಗೊಡುವ ಕೆಲವರೂ ಅವರ ಪೈಕಿಯಲ್ಲಿದ್ದಾರೆ. ಆದರೆ ಅದು ಅವರಿಗೆ ಮನವರಿಕೆಯಾಗದಂತೆ, ಅವರ ಹೃದಯಗಳ ಮೇಲೆ ಪರದೆ ಗಳನ್ನು**[217] **ಮತ್ತು ಅವರ ಕಿವಿಗಳಲ್ಲಿ ತಡೆಯನ್ನು ನಾವು ಹಾಕಿರುವೆವು. ಎಲ್ಲ ದೃಷ್ಟಾಂತಗಳನ್ನು ಕಂಡರೂ ಅವರು ವಿಶ್ವಾಸ ಹೊಂದಲಾರರು. ಎಷ್ಟರ ಮಟ್ಟಿಗೆಂದರೆ ಅವರು ನಿನ್ನ**

217. ಅಲ್ಲಾಹನು ಕಾರಣವಿಲ್ಲದೆ ಹಾಗೆ ಮಾಡಿದನೆಂದು ಇದರ ಅರ್ಥವಲ್ಲ. ಬದಲು, ಮನುಷ್ಯರ ದುಷ್ಕೃತ್ಯಗಳ ಹೇತುವಾಗಿ ಒಂದು ಶಿಕ್ಷೆಯೆಂಬಂತೆ, ಅವರಿಗೆ ಸತ್ಯವಿಶ್ವಾಸವನ್ನು ಕೈಗೊಳ್ಳಲು ಸಾಧ್ಯವಾಗದಂತೆ ಅಡ್ಡಿಯುಂಟಾಗುವುದು ಎಂದು ತಾತ್ಪರ್ಯ. ಖುರ್‌ಆನಿನ ಬೇರೆ ವಚನಗಳಿಂದಲೂ ಈ ಸಂಗತಿ ವೇದ್ಯವಾಗುತ್ತದೆ. ಉದಾಹರಣೆಗೆ, "ಅವರ ಅವಿಶ್ವಾಸ ಕಾರಣದಿಂದ ಅಲ್ಲಾಹನು ಅವರ ಹೃದಯಗಳ ಮೇಲೆ ಮುದ್ರೆ ಹಾಕಿರುವನು" (4:156) ಎಂದು ಹೇಳಲಾಗಿದೆ.





هٰذَآ اِلَّآ اَسَاطِيْرُ الْاَوَّلِيْنَ ﴿٢٦﴾

**ಬಳಿಗೆ ಬರುವಾಗ ನಿನ್ನೊಡನೆ ತರ್ಕಿಸುವರು. 'ಇವೆಲ್ಲ ಪೂರ್ವಿಕರ ಕಟ್ಟುಕಥೆಗಳು ಮಾತ್ರ'**[218] **ಎಂದು ಅವಿಶ್ವಾಸಿಗಳು ಹೇಳುವರು.**

وَهُمْ يَنْهَوْنَ عَنْهُ وَيَنْــــَٔــوْنَ عَنْهُ ۚ وَاِنْ يُّهْلِكُوْنَ اِلَّآ اَنْفُسَهُمْ وَمَا يَشْعُرُوْنَ ﴿٢٧﴾

**27. ಅವರು** (ಇತರರನ್ನು) **ಅದರಿಂದ ತಡೆಯುತ್ತಾರೆ ಮತ್ತು ಅವರು ಸಹ ಅದರಿಂದ ದೂರವಿರುತ್ತಾರೆ.** (ಈ ಕೃತ್ಯಗಳಿಂದ) **ಅವರು ತಮ್ಮನ್ನೇ ಹೊರತು ಬೇರೆ ಯಾರನ್ನೂ ನಾಶಪಡಿಸುವುದಿಲ್ಲ. ಆದರೆ ಅವರು ಅದನ್ನು ಗ್ರಹಿಸುವುದಿಲ್ಲ.**

وَلَوْ تَرٰٓي اِذْ وُقِفُوْا عَلَي النَّارِ فَقَالُوْا يٰلَيْتَنَا نُرَدُّ وَلَا نُكَذِّبَ بِاٰيٰتِ رَبِّنَا وَنَكُوْنَ مِنَ الْمُؤْمِنِيْنَ ﴿٢٨﴾

**28. ಅವರು ನರಕದ ಮುಂದೆ ನಿಲ್ಲಿಸಲ್ಪಡುವ ಸಂದರ್ಭವನ್ನು ನೀನು ಕಾಣುವಿಯಾದರೆ! ಆಗ ಅವರು, 'ಅಕಟಾ, ನಮ್ಮನ್ನು** (ಭೂಲೋಕಕ್ಕೆ) **ಹಿಂತಿರುಗಿಸಲಾಗಿ, ನಮ್ಮ ಪ್ರಭುವಿನ ದೃಷ್ಟಾಂತಗಳನ್ನು ನಾವು ಅಲ್ಲಗಳೆಯದಂತೆಯೂ ನಾವು ವಿಶ್ವಾಸ ಹೊಂದುವಂತೆಯೂ ಆಗಿದ್ದರೆ ಎಷ್ಟು ಚೆನ್ನಾಗಿತ್ತು!' ಎಂದು ಹೇಳುವರು.**

بَلْ بَدَا لَهُمْ مَّا كَانُوْا يُخْفُوْنَ مِنْ قَبْلُ ۭ وَلَوْ رُدُّوْا لَعَادُوْا لِمَا نُهُوْا عَنْهُ وَاِنَّهُمْ لَكٰذِبُوْنَ ﴿٢٩﴾

**29. ಇಲ್ಲ,** (ವಾಸ್ತವದಲ್ಲಿ) **ಅವರು ಮುಂಚೆ ಮರೆಮಾಚಿದ್ದೆಲ್ಲ** (ಆಗ) **ಅವರಿಗೆ ಪ್ರತ್ಯಕ್ಷವಾಗಿರುತ್ತವೆ.** (ಆದುದರಿಂದ ಅವರು ಹಾಗೆ ಹೇಳುವರು.) **ಅವರನ್ನು ಹಿಂದಕ್ಕೆ ಕಳುಹಿಸಿದರೂ ತಮಗೆ ನಿಷಿದ್ಧಗೊಳಿಸಿದುದರ ಕಡೆಗೆಯೇ ಅವರು ಮರಳುವರು. ಖಂಡಿತವಾಗಿಯೂ ಅವರು ಸುಳ್ಳು ಹೇಳುವವರಾಗಿದ್ದಾರೆ.**

وَقَالُوْٓا اِنْ هِىَ اِلَّا حَيَاتُنَا الدُّنْيَا وَمَا نَحْنُ بِمَبْعُوْثِيْنَ ﴿٣٠﴾

**30. 'ನಮ್ಮ ಈ ಐಹಿಕ ಜೀವನ ಹೊರತು ಬೇರೆ** (ಜೀವನ) **ಇಲ್ಲ. ನಾವು ಪುನಃ ಎಬ್ಬಿಸಲ್ಪಡಲಾರೆವು' ಎಂದು ಅವರು ಹೇಳುತ್ತಾರೆ.**

وَلَوْ تَرٰٓي اِذْ وُقِفُوْا عَلٰي رَبِّهِمْ ۭ قَالَ اَلَيْسَ هٰذَا بِالْحَقِّ ۭ قَالُوْا بَلٰى وَرَبِّنَا ۭ

**31. ಅವರ ಪ್ರಭುವಿನ ಮುಂದೆ ಅವರು ನಿಲ್ಲಿಸಲ್ಪಡುವ ಸಂದರ್ಭವನ್ನು ನೀನು ಕಾಣುವಿಯಾದರೆ! ಅವನು**

218. ಅವಿಶ್ವಾಸಿಗಳ ಈ ಆಕ್ಷೇಪ ಸರಿಯಲ್ಲ. ವಾಸ್ತವದಲ್ಲಿ ಭವಿಷ್ಯ ನುಡಿಯೆಂಬ ರೀತಿಯಲ್ಲಿಯೂ ಪೂರ್ವಿಕರ ಘಟನೆಗಳನ್ನು ವಿವರಿಸಲಾಗುತ್ತದೆ. ಅಂತಹ ಘಟನೆಗಳು ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮತ್ತು ಅವರ ಅನುಯಾಯಿಗಳ ಕಾಲಗಳಲ್ಲಿ ಸಂಭವಿಸುವುವೆಂದು ತಾತ್ಪರ್ಯ. ಅವುಗಳ ಪೈಕಿ ಹಲವು ಸಂಭವಿಸಿವೆ. ಹಲವು ಸಂಭವಿಸಲಿವೆ. ಮಾತ್ರವಲ್ಲ, ಪೂರ್ವಿಕರ ಈ ಸಂಭವ ವಿವರಣೆಗಳಿಂದ ಹಲವು ನೀತಿಪಾಠಗಳು ಸಹ ಲಭಿಸುತ್ತವೆ.

ಕೇಳುವನು: 'ಇದು ಸತ್ಯವಲ್ಲವೇ?' ಅವರು, 'ಹೌದು, ನಮ್ಮ ಪ್ರಭುವಿನಾಣೆ (ಇದು ಸತ್ಯವೇ ಆಗಿದೆ)' ಎಂದು ಹೇಳುವರು. ಅವನು, 'ಹಾಗಾದರೆ ನೀವು ಅವಿಶ್ವಾಸಿಗಳಾಗಿದ್ದ ಕಾರಣದಿಂದ (ಈಗ) ಶಿಕ್ಷೆ ಅನುಭವಿಸಿರಿ' ಎಂದು ಹೇಳುವನು.

قَالَ فَذُوقُوا الْعَذَابَ بِمَا كُنْتُمْ
تَكْفُرُوْنَ ٣٠

32. ಅಲ್ಲಾಹನ ಭೇಟಿಯಾಗಲಿರುವುದನ್ನು ಅಲ್ಲಗಳೆಯುವವರು ಖಂಡಿತವಾಗಿಯೂ ನಷ್ಟಕ್ಕೊಳಗಾಗಿದ್ದಾರೆ. ಹಠಾತ್ತಾಗಿ ಅವರಿಗೆ ಆ ಘಳಿಗೆ ಬಂದರೆ, 'ಅಕಟಾ ಈ ಸಂದರ್ಭದ ಬಗ್ಗೆ ನಾವು ನಿರ್ಲಕ್ಷಿಸಿದೆವಲ್ಲಾ!' ಎಂದು ಅವರು ಗೋಗರೆಯುವರು. ಅವರು ತಮ್ಮ ಭಾರಗಳನ್ನು ತಮ್ಮ ಬೆನ್ನುಗಳ ಮೇಲೆ ಹೊತ್ತುಕೊಳ್ಳುವರು. ನೋಡು, ಅವರ ಹೊರೆ ಎಷ್ಟು ನಿಕೃಷ್ಟ!

قَدْ خَسِرَ الَّذِيْنَ كَذَّبُوْا بِلِقَآءِ اللّٰهِ ؕ
حَتّٰۤى اِذَا جَآءَتْهُمُ السَّاعَةُ بَغْتَةً قَالُوْا
يٰحَسْرَتَنَا عَلٰى مَا فَرَّطْنَا فِيْهَا ۙ وَهُمْ
يَحْمِلُوْنَ اَوْزَارَهُمْ عَلٰى ظُهُوْرِهِمْ ؕ اَلَا
سَآءَ مَا يَزِرُوْنَ ٣١

33. ಐಹಿಕ ಜೀವನ ಆಟ ಮತ್ತು ವಿನೋದ ಹೊರತು ಬೇರೇನೂ ಅಲ್ಲ. ದೇವನ ಭಯಭಕ್ತಿಯುಳ್ಳವರಿಗೆ ಖಂಡಿತವಾಗಿಯೂ ಪಾರತ್ರಿಕ ಭವನವೇ ಅತ್ಯುತ್ತಮವಾದುದು. ಹಾಗಿರುವಾಗ ನೀವು ಯೋಚಿಸುವು ದಿಲ್ಲವೇ?

وَمَا الْحَيٰوةُ الدُّنْيَاۤ اِلَّا لَعِبٌ وَّلَهْوٌ ؕ
وَلَلدَّارُ الْاٰخِرَةُ خَيْرٌ لِّلَّذِيْنَ يَتَّقُوْنَ ؕ
اَفَلَا تَعْقِلُوْنَ ٣٢

34. ಅವರು ಹೇಳುವ ವಿಚಾರಗಳು ಖಂಡಿತವಾಗಿಯೂ ನಿನ್ನನ್ನು ವ್ಯಥೆಗೀಡುಮಾಡುತ್ತವೆಂದು ನಾವು ಬಲ್ಲೆವು. ಯಾಕೆಂದರೆ, ಅವರು ತಿರಸ್ಕರಿಸುವುದು ನಿನ್ನನ್ನಲ್ಲ; ಬದಲು ಆ ದುಷ್ಕರ್ಮಿಗಳು ಅಲ್ಲಾಹನ ದೃಷ್ಟಾಂತಗಳನ್ನು ಧಿಕ್ಕರಿಸುತ್ತಾರೆ.

قَدْ نَعْلَمُ اِنَّهٗ لَيَحْزُنُكَ الَّذِيْ يَقُوْلُوْنَ
فَاِنَّهُمْ لَا يُكَذِّبُوْنَكَ وَلٰكِنَّ الظّٰلِمِيْنَ
بِاٰيٰتِ اللّٰهِ يَجْحَدُوْنَ ٣٣

35. ದಿಟವಾಗಿಯೂ ನಿನಗೆ ಮುಂಚೆಯೂ ಪ್ರವಾದಿಗಳು ತಿರಸ್ಕೃತರಾಗಿದ್ದಾರೆ. ತಿರಸ್ಕಾರಕ್ಕೂ ಪೀಡನೆಗಳಿಗೂ ಗುರಿಯಾದರೂ ನಮ್ಮ ಸಹಾಯ ಅವರಿಗೆ ಬಂದೊದಗುವ ತನಕ ಅವರು ಸೈರಿಸಿಕೊಂಡರು. ಅಲ್ಲಾಹನ ವಚನಗಳನ್ನು ಬದಲಾಯಿಸುವವರು ಯಾರೂ ಇಲ್ಲ. ನಿಜವಾಗಿಯೂ (ಪೂರ್ವಕಾಲದ) ಕೆಲವು ಪ್ರವಾದಿಗಳ ವೃತ್ತಾಂತಗಳು ನಿನಗೆ ತಲಪಿರುತ್ತವೆ.

وَلَقَدْ كُذِّبَتْ رُسُلٌ مِّنْ قَبْلِكَ فَصَبَرُوْا
عَلٰى مَا كُذِّبُوْا وَاُوْذُوْا حَتّٰۤى اَتٰىهُمْ
نَصْرُنَا ۚ وَلَا مُبَدِّلَ لِكَلِمٰتِ اللّٰهِ ۚ وَ
لَقَدْ جَآءَكَ مِنْ نَّبَاِى الْمُرْسَلِيْنَ ٣٤





36. ಅವರ ನಿರ್ಲಕ್ಷ್ಯ ನಿನ್ನನ್ನು ಚಿಂತೆಗೀಡು ಮಾಡುವುದಾದರೆ, ಭೂಮಿಯೊಳಗೆ ಒಂದು ಸುರಂಗವನ್ನಾಗಲಿ ಅಥವಾ ಆಕಾಶಕ್ಕೊಂದು ಏಣಿಯನ್ನಾಗಲಿ ಹುಡುಕಿ, ಹಾಗೆ ಅವರಿಗೊಂದು ದೃಷ್ಟಾಂತವನ್ನು ತೋರಿಸಲು ನಿನಗೆ ಸಾಧ್ಯವೆಂದಾದರೆ ನೀನು ಹಾಗೆ ಮಾಡು. ಅಲ್ಲಾಹನು ಇಚ್ಛಿಸಿದ್ದರೆ ಅವರನ್ನು ಅವನು ಸತ್ಪಥದಲ್ಲಿ ಒಂದುಗೂಡಿಸುತ್ತಿದ್ದನು. ಆದ್ದರಿಂದ ನೀನು ಅಜ್ಞಾನಿಗಳೊಂದಿಗೆ ಸೇರಿದವನಾಗಬೇಡ.[219]

وَاِنْ كَانَ كَبُرَ عَلَيْكَ اِعْرَاضُهُمْ فَاِنِ
اسْتَطَعْتَ اَنْ تَبْتَغِيَ نَفَقًا فِى الْاَرْضِ اَوْ
سُلَّمًا فِى السَّمَآءِ فَتَاْتِيَهُمْ بِاٰيَةٍ ؕ وَلَوْ
شَآءَ اللّٰهُ لَجَمَعَهُمْ عَلَى الْهُدٰى فَلَا
تَكُوْنَنَّ مِنَ الْجٰهِلِيْنَ ٣٥

37. ಆಲಿಸುವವರು ಮಾತ್ರವೇ ಉತ್ತರ ಕೊಡಬಲ್ಲರು. ಮೃತಪಟ್ಟವರಾದರೋ, ಅಲ್ಲಾಹನು ಅವರನ್ನು ಎಬ್ಬಿಸುವನು. ಆ ಮೇಲೆ ಅವನೆಡೆಗೆಯೇ ಅವರು ಮರಳಿಸಲ್ಪಡುವರು.

اِنَّمَا يَسْتَجِيْبُ الَّذِيْنَ يَسْمَعُوْنَ ؕ وَ
الْمَوْتٰى يَبْعَثُهُمُ اللّٰهُ ثُمَّ اِلَيْهِ
يُرْجَعُوْنَ ٣٦

38. 'ಅವನ ಪ್ರಭುವಿನಿಂದ ಒಂದು ದೃಷ್ಟಾಂತವಾದರೂ ಅವನಿಗೇಕೆ ಇಳಿಸಲ್ಪಡಲಿಲ್ಲ?' ಎಂದು ಅವರು ಕೇಳುವರು. 'ಖಂಡಿತವಾಗಿಯೂ ಅಲ್ಲಾಹನು ದೃಷ್ಟಾಂತವನ್ನು ಇಳಿಸಲು ಶಕ್ತನು. ಆದರೆ ಹೆಚ್ಚಿನವರಿಗೆ ಅದು ತಿಳಿದಿಲ್ಲ' ಎಂದು ಹೇಳು.

وَقَالُوْا لَوْلَا نُزِّلَ عَلَيْهِ اٰيَةٌ مِّنْ رَّبِّهٖ ؕ
قُلْ اِنَّ اللّٰهَ قَادِرٌ عَلٰۤى اَنْ يُّنَزِّلَ اٰيَةً وَّ
لٰكِنَّ اَكْثَرَهُمْ لَا يَعْلَمُوْنَ ٣٧

39. ಭೂಮಿಯಲ್ಲಿ ಚಲಿಸುವ ಯಾವುದೇ ಪ್ರಾಣಿಯಾಗಲಿ, ಎರಡು ರೆಕ್ಕೆಗಳಿಂದ ಹಾರಾಡುವ ಯಾವುದೇ ಪಕ್ಷಿಯಾಗಲಿ, ಅವು ನಿಮ್ಮಂತಹ ವರ್ಗಗಳಿಗೆ ಸೇರಿದವುಗಳೇ ಆಗಿವೆ.[220] ಈ ಗ್ರಂಥದಲ್ಲಿ ನಾವು ಯಾವ ಲೋಪವನ್ನೂ ಮಾಡಿಲ್ಲ.[221] ನಂತರ ಅವರ ಪ್ರಭುವಿನ ಸನ್ನಿಧಿಯಲ್ಲಿ ಅವರೆಲ್ಲ ಒಂದುಗೂಡಿಸಲ್ಪಡುವರು.

وَمَا مِنْ دَآبَّةٍ فِى الْاَرْضِ وَلَا طٰٓئِرٍ
يَّطِيْرُ بِجَنَاحَيْهِ اِلَّاۤ اُمَمٌ اَمْثَالُكُمْ ؕ
مَا فَرَّطْنَا فِى الْكِتٰبِ مِنْ شَيْءٍ ثُمَّ اِلٰى
رَبِّهِمْ يُحْشَرُوْنَ ٣٨

40. ನಮ್ಮ ದೃಷ್ಟಾಂತಗಳನ್ನು ತಿರಸ್ಕರಿಸಿದವರು ಗಾಢಾಂಧಕಾರದಲ್ಲಿ ಸಿಲುಕಿದ ಕಿವುಡರೂ ಮೂಗರೂ ಆಗಿದ್ದಾರೆ. ಅಲ್ಲಾಹನು ತನಗಿಷ್ಟಬಂದವರನ್ನು ದಾರಿ

وَالَّذِيْنَ كَذَّبُوْا بِاٰيٰتِنَا صُمٌّ وَّبُكْمٌ فِى
الظُّلُمٰتِ ؕ مَنْ يَّشَاِ اللّٰهُ يُضْلِلْهُ ؕ وَمَنْ

219. ವ್ಯಥೆಪಡಬೇಡ, ಸಮಾಧಾನದಿಂದಿರು ಎಂದು ತಾತ್ಪರ್ಯ.

220. ಅಲ್ಲಾಹನ ನಿಯಮಗಳಿಗೆ ಅಧೀನ ಎಂದು ತಾತ್ಪರ್ಯ.

221. ಅಂದರೆ ಎಲ್ಲ ರೀತಿಯ ಅಧ್ಯಾಪನೆಗಳನ್ನು ನೀಡಲಾಗಿದೆ ಎಂದರ್ಥ.

ತಪ್ಪಿಹೋಗಲು ಬಿಡುತ್ತಾನೆ; ತನಗಿಷ್ಟ ಬಂದವರನ್ನು ಸತ್ಪಥದಲ್ಲಿ ನಡೆಸುತ್ತಾನೆ.

يَّشَاْ يَجْعَلْهُ عَلٰى صِرَاطٍ مُّسْتَقِيْمٍ ﴿٣٩﴾

**41.** ಹೇಳು: 'ನೋಡಿರಿ, ನೀವು ಸತ್ಯವಂತರಾದರೆ, ಅಲ್ಲಾಹನ ಶಿಕ್ಷೆ ನಿಮಗೆ ಬಂದೆರಗುವಾಗ ಅಥವಾ ಆ (ನಿಶ್ಚಿತ) ಘಳಿಗೆ ಬಂದರೆ ಅಲ್ಲಾಹನನ್ನು ಬಿಟ್ಟು ಬೇರೆ ಯಾರನ್ನಾದರೂ (ಸಹಾಯಕ್ಕೆ) ನೀವು ಕರೆಯುವಿರಾ?'

قُلْ اَرَءَيْتَكُمْ اِنْ اَتٰىكُمْ عَذَابُ اللّٰهِ اَوْ اَتَتْكُمُ السَّاعَةُ اَغَيْرَ اللّٰهِ تَدْعُوْنَ ۚ اِنْ كُنْتُمْ صٰدِقِيْنَ ﴿٤٠﴾

**42.** ಇಲ್ಲ. ಅವನನ್ನೇ ನೀವು ಕರೆದು ಪ್ರಾರ್ಥಿಸುವಿರಿ. ಆಗ, ಯಾವ ಕಷ್ಟದ ನಿವಾರಣೆಗಾಗಿ ನೀವು ಅವನನ್ನು ಕರೆದು ಪ್ರಾರ್ಥಿಸುತ್ತೀರೋ, ಅವನು ಬಯಸಿದರೆ ಅದನ್ನು ಅವನು ದೂರಮಾಡುವವನು. ನೀವು ಕಲ್ಪಿಸುತ್ತಿದ್ದ (ದೇವ) ಸಹಭಾಗಿಯನ್ನು ನೀವು ಮರೆತು ಬಿಡುವಿರಿ.

بَلْ اِيَّاهُ تَدْعُوْنَ فَيَكْشِفُ مَا تَدْعُوْنَ اِلَيْهِ اِنْ شَآءَ وَتَنْسَوْنَ مَا تُشْرِكُوْنَ ﴿٤١﴾

**43.** ನಿನಗೆ ಮುಂಚೆ ಇದ್ದ ಜನಾಂಗಗಳಿಗೂ ನಾವು *ಸಂದೇಶವಾಹಕರನ್ನು* ಕಳುಹಿಸಿದ್ದೆವು. ಅವರು ವಿನಯಾನ್ವಿತರಾಗಲೆಂದು ಕಷ್ಟಕಾರ್ಪಣ್ಯಗಳಿಗೆ ಅವರನ್ನು ನಾವು ಗುರಿಪಡಿಸಿದೆವು.[222]

وَلَقَدْ اَرْسَلْنَآ اِلٰٓى اُمَمٍ مِّنْ قَبْلِكَ فَاَخَذْنٰهُمْ بِالْبَاْسَآءِ وَالضَّرَّآءِ لَعَلَّهُمْ يَتَضَرَّعُوْنَ ﴿٤٢﴾

**44.** ಹಾಗೆ ನಮ್ಮ ಶಿಕ್ಷೆ ಅವರಿಗೆ ಎರಗಿದಾಗ ಅವರೇಕೆ ವಿನಯವನ್ನು ತೋರಿಸಲಿಲ್ಲ? ಬದಲು, ಅವರ ಹೃದಯಗಳು (ಹೆಚ್ಚು) ಕಠಿಣವಾದುವು. ಅವರ ಕೃತ್ಯಗಳೆಲ್ಲ ಅವರಿಗೆ ಸುಂದರವಾಗಿ ತೋರುವಂತೆ ಶೈತಾನನು ಮಾಡಿದನು.

فَلَوْلَآ اِذْ جَآءَهُمْ بَاْسُنَا تَضَرَّعُوْا وَلٰكِنْ قَسَتْ قُلُوْبُهُمْ وَزَيَّنَ لَهُمُ الشَّيْطٰنُ مَا كَانُوْا يَعْمَلُوْنَ ﴿٤٣﴾

**45.** ಅವರಿಗೆ ನಾವು ಉಪದೇಶಿಸಿದ ಸಂಗತಿಗಳನ್ನು ಅವರು ಮರೆತಾಗ, ನಾವು ಅವರಿಗೆ ಸಕಲ ವಸ್ತುಗಳ ಕವಾಟಗಳನ್ನು ತೆರೆದುಕೊಟ್ಟೆವು. ಎಷ್ಟರ ವರೆಗೆಂದರೆ, ನಾವು ಅವರಿಗೆ ನೀಡಲ್ಪಟ್ಟವುಗಳಿಂದ ಅವರು ಸಂತೋಷದಲ್ಲಿ ಮೈಮರೆತರು. ಆಗ, ಹಠಾತ್ತಾಗಿ ನಾವು ಅವರನ್ನು ಶಿಕ್ಷಿಸಿದೆವು. ಆಗ ಅವರು ನಿರಾಶಾಭರಿತರಾದರು.

فَلَمَّا نَسُوْا مَا ذُكِّرُوْا بِهٖ فَتَحْنَا عَلَيْهِمْ اَبْوَابَ كُلِّ شَيْءٍ ۚ حَتّٰٓى اِذَا فَرِحُوْا بِمَآ اُوْتُوْٓا اَخَذْنٰهُمْ بَغْتَةً فَاِذَا هُمْ مُّبْلِسُوْنَ ﴿٤٤﴾

222. ಅಲ್ಲಾಹನು ಜನರನ್ನು ಶಿಕ್ಷಿಸುವುದು ಅವರಿಗೆ ಪಾಠ ಕಲಿಸುವುದಕ್ಕೋಸ್ಕರ ಎಂದು ಇದರಿಂದ ವ್ಯಕ್ತವಾಗುತ್ತದೆ.





**46.** ಹಾಗೆ ಅಕ್ರಮವಾಗಿ ವರ್ತಿಸಿದ ಆ ಜನತೆ ನಿರ್ಮೂಲಗೊಳಿಸಲ್ಪಟ್ಟಿತು. ಸರ್ವಲೋಕಾಧಿನಾಥನಾದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು.

فَقُطِعَ دَابِرُ الْقَوْمِ الَّذِيْنَ ظَلَمُوْا ۚ وَالْحَمْدُ لِلّٰهِ رَبِّ الْعٰلَمِيْنَ ﴿٤٥﴾

**47.** ಹೇಳು: 'ನೀವು ಆಲೋಚಿಸಿದ್ದೀರಾ? ಅಲ್ಲಾಹನು ನಿಮ್ಮ ಶ್ರವಣವನ್ನೂ ದೃಷ್ಟಿಯನ್ನೂ ತೆಗೆದು ಬಿಟ್ಟು ನಿಮ್ಮ ಹೃದಯಗಳಿಗೆ ಮುದ್ರೆ ಹಾಕಿದರೆ ಅಲ್ಲಾಹನ ಹೊರತು ಬೇರೆ ಯಾವ ದೇವನು ಅದನ್ನು ನಿಮಗೆ ಮರಳಿಸುವನು?' ನೋಡು, ನಾವು ಹೇಗೆ ಅವರಿಗೆ ನಿದರ್ಶನಗಳನ್ನು ವಿವರಿಸಿಕೊಡುತ್ತೇವೆ! ಆದರೂ ಅವರು ವಿಮುಖರಾಗುತ್ತಾರೆ.

قُلْ اَرَءَيْتُمْ اِنْ اَخَذَ اللّٰهُ سَمْعَكُمْ وَاَبْصَارَكُمْ وَخَتَمَ عَلٰى قُلُوْبِكُمْ مَّنْ اِلٰهٌ غَيْرُ اللّٰهِ يَاْتِيْكُمْ بِهٖ ۚ اُنْظُرْ كَيْفَ نُصَرِّفُ الْاٰيٰتِ ثُمَّ هُمْ يَصْدِفُوْنَ ﴿٤٦﴾

**48.** ಹೇಳು: 'ನೀವು ಯೋಚಿಸಿದ್ದೀರಾ? ಅಲ್ಲಾಹನ ಶಿಕ್ಷೆ ನಿಮಗೆ ಹಠಾತ್ತಾಗಿ ಅಥವಾ ಪ್ರತ್ಯಕ್ಷವಾಗಿ ಬಂದೆರಗಿದರೆ ಅಧರ್ಮಿಗಳಾದ ಜನರ ಹೊರತು (ಬೇರೆ ಯಾರಾದರೂ) ನಾಶ ಹೊಂದುವರೇ?'

قُلْ اَرَءَيْتَكُمْ اِنْ اَتٰىكُمْ عَذَابُ اللّٰهِ بَغْتَةً اَوْ جَهْرَةً هَلْ يُهْلَكُ اِلَّا الْقَوْمُ الظّٰلِمُوْنَ ﴿٤٧﴾

**49.** ಶುಭವಾರ್ತೆ ನೀಡುವ ಮತ್ತು ಮುನ್ನೆಚ್ಚರಿಕೆ ಕೊಡುವವರಾಗಿ ಹೊರತು ನಾವು ಪ್ರವಾದಿಗಳನ್ನು ಕಳುಹಿಸುವುದಿಲ್ಲ. ಯಾರು ವಿಶ್ವಾಸಹೊಂದಿ ಸ್ವಯಂ ತಿದ್ದಿಕೊಳ್ಳುತ್ತಾರೋ ಅವರಿಗೆ ಏನೂ ಭಯವಿಲ್ಲ; ಅವರಿಗೆ ಯಾವ ವ್ಯಥೆಯೂ ಇಲ್ಲ.

وَمَا نُرْسِلُ الْمُرْسَلِيْنَ اِلَّا مُبَشِّرِيْنَ وَمُنْذِرِيْنَ ۚ فَمَنْ اٰمَنَ وَاَصْلَحَ فَلَا خَوْفٌ عَلَيْهِمْ وَلَا هُمْ يَحْزَنُوْنَ ﴿٤٨﴾

**50.** ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆದವರು, ಅವರ ಧಿಕ್ಕಾರ ಕಾರಣದಿಂದ ಶಿಕ್ಷೆಗೀಡಾಗುವರು.

وَالَّذِيْنَ كَذَّبُوْا بِاٰيٰتِنَا يَمَسُّهُمُ الْعَذَابُ بِمَا كَانُوْا يَفْسُقُوْنَ ﴿٤٩﴾

**51.** ಹೇಳು: 'ನನ್ನ ಬಳಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ಅಗೋಚರ ಸಂಗತಿಗಳನ್ನು ನಾನು ತಿಳಿಯುವುದಿಲ್ಲ. ನಾನೊಬ್ಬ ಮಲಕ್ (ದೇವದೂತ) ಆಗಿರುವೆನೆಂದೂ ನಾನು ನಿಮ್ಮೊಡನೆ ಹೇಳುವುದಿಲ್ಲ. ನಾನು ಅನುಸರಿಸುವುದು ನನಗೆ ಅವತೀರ್ಣವಾಗುವ ದಿವ್ಯವಾಣಿಯನ್ನು ಹೊರತು ಬೇರೇನನ್ನೂ ಅಲ್ಲ.' ಹೇಳು: 'ಕುರುಡನೂ ದೃಷ್ಟಿಯುಳ್ಳವನೂ ಸಮಾನರಾಗುವರೇ? ನೀವು ಯೋಚಿಸುವುದಿಲ್ಲವೇಕೆ?'

قُلْ لَّآ اَقُوْلُ لَكُمْ عِنْدِيْ خَزَآئِنُ اللّٰهِ وَلَآ اَعْلَمُ الْغَيْبَ وَلَآ اَقُوْلُ لَكُمْ اِنِّيْ مَلَكٌ ۚ اِنْ اَتَّبِعُ اِلَّا مَا يُوْحٰٓى اِلَيَّ ۚ قُلْ هَلْ يَسْتَوِى الْاَعْمٰى وَالْبَصِيْرُ ۚ اَفَلَا تَتَفَكَّرُوْنَ ﴿٥٠﴾

**52.** ತಮ್ಮ ಪ್ರಭುವಿನ ಸನ್ನಿಧಿಯಲ್ಲಿ ಒಂದುಗೂಡಿಸಲ್ಪಡಲಿದ್ದೇವೆಂದೂ ತಮಗೆ ಅವನ ಹೊರತು ರಕ್ಷಕನಾಗಿ ಅಥವಾ ಶಿಫಾರಸು ಸ್ವೀಕರಿಸುವವನಾಗಿ ಯಾರೂ ಇಲ್ಲವೆಂದೂ ಭಯಪಡುವವರಿಗೆ, ಇದರ (ಈ ಖುರ್‌ಆನ್) ಮೂಲಕ ಮುನ್ನೆಚ್ಚರಿಕೆ ನೀಡು - ಅವರು ಭಯಭಕ್ತಿಯುಳ್ಳವರಾಗಲಿಕ್ಕೋಸ್ಕರ.

وَأَنذِرْ بِهِ الَّذِينَ يَخَافُونَ أَن يُحْشَرُوا إِلَىٰ رَبِّهِمْ لَيْسَ لَهُم مِّن دُونِهِ وَلِيٌّ وَلَا شَفِيعٌ لَّعَلَّهُمْ يَتَّقُونَ ٥١

**53.** ತಮ್ಮ ಪ್ರಭುವಿನ ಪ್ರೀತಿಯನ್ನು ಬಯಸುತ್ತಾ ಮುಂಜಾವದಲ್ಲೂ ಮುಸ್ಸಂಜೆಯಲ್ಲೂ ಅವನನ್ನು ಕರೆದು ಪ್ರಾರ್ಥಿಸುವವರನ್ನು ನೀನು ದೂರಕ್ಕಟ್ಟಬಾರದು. ಅವರ ಲೆಕ್ಕಾಚಾರದ ಯಾವ ಹೊಣೆಯೂ ನಿನಗಿಲ್ಲ. ನಿನ್ನ ಲೆಕ್ಕಾಚಾರದ ಯಾವ ಹೊಣೆಯೂ ಅವರಿಗೂ ಇರುವುದಿಲ್ಲ. ಆದ್ದರಿಂದ ನೀನು ಅವರನ್ನು ದೂರಕ್ಕಟ್ಟಿದರೆ ದುಷ್ಕರ್ಮಿಗಳಲ್ಲಿ ಸೇರಿದವನಾಗುವೆ.

وَلَا تَطْرُدِ الَّذِينَ يَدْعُونَ رَبَّهُم بِالْغَدَاةِ وَالْعَشِيِّ يُرِيدُونَ وَجْهَهُ ۖ مَا عَلَيْكَ مِنْ حِسَابِهِم مِّن شَيْءٍ وَمَا مِنْ حِسَابِكَ عَلَيْهِم مِّن شَيْءٍ فَتَطْرُدَهُمْ فَتَكُونَ مِنَ الظَّالِمِينَ ٥٢

**54.** ಇದೇ ಪ್ರಕಾರ, 'ನಮ್ಮ ಪೈಕಿ ಅಲ್ಲಾಹನು ಔದಾರ್ಯ ತೋರಿಸಿದ್ದು ಇವರಿಗೋ?' ಎಂದು ಕೇಳುವಂತೆ ಅವರ ಪೈಕಿ ಕೆಲವರನ್ನು ಬೇರೆ ಕೆಲವರ ಮೂಲಕ ನಾವು ಪರೀಕ್ಷೆಗೊಳಪಡಿಸಿದೆವು. ಏನು, ಕೃತಜ್ಞತೆ ತೋರಿಸುವವರನ್ನು ಅಲ್ಲಾಹನು ಗುರುತಿಸಲಾರನೇ?

وَكَذَٰلِكَ فَتَنَّا بَعْضَهُم بِبَعْضٍ لِّيَقُولُوا أَهَٰؤُلَاءِ مَنَّ اللَّهُ عَلَيْهِم مِّن بَيْنِنَا ۗ أَلَيْسَ اللَّهُ بِأَعْلَمَ بِالشَّاكِرِينَ ٥٣

**55.** ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸ ವಿಡುವವರು ನಿನ್ನ ಬಳಿಗೆ ಬಂದರೆ ಹೇಳು: 'ನಿಮ್ಮ ಮೇಲೆ ಶಾಂತಿಯಿರಲಿ; ನಿಮ್ಮ ಪ್ರಭು ಕರುಣೆಯನ್ನು ತನ್ನ ಹೊಣೆಯಾಗಿ ಮಾಡಿಕೊಂಡಿರುವನು.' ಅಂದರೆ, ನಿಮ್ಮಲ್ಲಿ ಯಾರಾದರೂ ಅಜ್ಞಾನದಿಂದ ಕೆಡುಕು ಮಾಡಿದ ನಂತರ ಪಶ್ಚಾತ್ತಾಪಪಟ್ಟು ಸ್ವಯಂ ತಿದ್ದಿಕೊಂಡರೆ ಅವನು ಕ್ಷಮಿಸುವನು. ನಿಶ್ಚಯವಾಗಿಯೂ ಅವನು ಅತಿಹೆಚ್ಚು ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَإِذَا جَاءَكَ الَّذِينَ يُؤْمِنُونَ بِآيَاتِنَا فَقُلْ سَلَامٌ عَلَيْكُمْ ۖ كَتَبَ رَبُّكُمْ عَلَىٰ نَفْسِهِ الرَّحْمَةَ ۖ أَنَّهُ مَنْ عَمِلَ مِنكُمْ سُوءًا بِجَهَالَةٍ ثُمَّ تَابَ مِن بَعْدِهِ وَأَصْلَحَ فَأَنَّهُ غَفُورٌ رَّحِيمٌ ٥٤

**56.** ಹೀಗೆ ನಾವು ದೃಷ್ಟಾಂತಗಳನ್ನು ವಿಶದಪಡಿಸುತ್ತೇವೆ - (ಸತ್ಯವನ್ನು ವ್ಯಕ್ತಪಡಿಸಲಿಕ್ಕೆ) ಮತ್ತು ಪಾಪಿಗಳ ಮಾರ್ಗವನ್ನು ಬೇರ್ಪಡಿಸಿ ತೋರಿಸಲಿಕ್ಕೆ.

وَكَذَٰلِكَ نُفَصِّلُ الْآيَاتِ وَلِتَسْتَبِينَ سَبِيلُ الْمُجْرِمِينَ ٥٥





**57.** ಹೇಳು: 'ಅಲ್ಲಾಹನ ಹೊರತಾಗಿ ನೀವು ಕರೆದು ಪ್ರಾರ್ಥಿಸುವವರನ್ನು ಆರಾಧಿಸುವುದು ನನಗೆ ನಿಷಿದ್ಧಗೊಳಿಸಲಾಗಿದೆ.' ಹೇಳು: 'ನಿಮ್ಮ ದುರಾಶೆಗಳನ್ನು ನಾನು ಹಿಂಬಾಲಿಸಲಾರೆ. ನಾನೇನಾದರೂ ಹಾಗೆ ಮಾಡಿದರೆ ದಾರಿತಪ್ಪಿದಂತೆಯೇ ಸರಿ; ಅಲ್ಲದೆ, ನಾನು ಸತ್ಪಥವನ್ನು ಗಳಿಸದವನೂ ಆಗಲಾರೆ.'

قُلْ إِنِّي نُهِيتُ أَنْ أَعْبُدَ الَّذِينَ تَدْعُونَ مِن دُونِ اللَّهِ ۚ قُل لَّا أَتَّبِعُ أَهْوَاءَكُمْ ۙ قَدْ ضَلَلْتُ إِذًا وَمَا أَنَا مِنَ الْمُهْتَدِينَ ٥٦

**58.** ಹೇಳು: 'ದಿಟವಾಗಿಯೂ ನಾನು ನನ್ನ ಪ್ರಭುವಿನ ಕಡೆಯಿಂದ ಸ್ಪಷ್ಟವಾದ ಪುರಾವೆಯ ಮೇಲೆ ನೆಲೆನಿಂತಿರುವೆನು. ನೀವು ಅದನ್ನು ತಿರಸ್ಕರಿಸುತ್ತೀರಿ. ತ್ವರಿತವಾಗಿ ಈಡೇರಬೇಕೆಂದು ನೀವು ಬಯಸುವ ವಿಚಾರ ನನ್ನ ಅಧಿಕಾರದಲ್ಲಿಲ್ಲ. ತೀರ್ಮಾನ ಮಾಡುವ ಅಧಿಕಾರ ಅಲ್ಲಾಹನಿಗೆ ಹೊರತು ಬೇರೆ ಯಾರಿಗೂ ಇಲ್ಲ. ಅವನು ಸತ್ಯವನ್ನು ವಿಶದಪಡಿಸುತ್ತಾನೆ. ತೀರ್ಮಾನ ಮಾಡುವವರಲ್ಲಿ ಅವನೇ ಅತಿಶ್ರೇಷ್ಠನು.'

قُلْ إِنِّي عَلَىٰ بَيِّنَةٍ مِّن رَّبِّي وَكَذَّبْتُم بِهِ ۚ مَا عِندِي مَا تَسْتَعْجِلُونَ بِهِ ۚ إِنِ الْحُكْمُ إِلَّا لِلَّهِ ۖ يَقُصُّ الْحَقَّ ۖ وَهُوَ خَيْرُ الْفَاصِلِينَ ٥٧

**59.** ಹೇಳು: 'ತ್ವರಿತವಾಗಿ ಈಡೇರಬೇಕೆಂದು ನೀವು ಬಯಸುವ ವಿಚಾರ ನನ್ನ ಅಧಿಕಾರಕ್ಕೊಳಪಟ್ಟಿದ್ದರೆ ನನಗೂ ನಿಮಗೂ ಮಧ್ಯೆ (ಇದಕ್ಕೆ ಮುಂಚೆಯೇ) ತೀರ್ಮಾನವಾಗುತ್ತಿತ್ತು.' ಅಲ್ಲಾಹನು ದುಷ್ಕರ್ಮಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.

قُل لَّوْ أَنَّ عِندِي مَا تَسْتَعْجِلُونَ بِهِ لَقُضِيَ الْأَمْرُ بَيْنِي وَبَيْنَكُمْ ۗ وَاللَّهُ أَعْلَمُ بِالظَّالِمِينَ ٥٨

**60.** ಅಗೋಚರ ವಿಚಾರಗಳ ಕೀಲಿಗೈಗಳು ಅವನ ಬಳಿಯಲ್ಲಿವೆ. ಅವನ ಹೊರತು ಬೇರಾರಿಗೂ ಅವುಗಳ ಬಗ್ಗೆ ಅರಿವಿಲ್ಲ. ನೆಲದಲ್ಲಿಯೂ ಜಲದಲ್ಲಿಯೂ ಇರುವುದನ್ನೆಲ್ಲ ಅವನು ಬಲ್ಲನು. ಅವನು ತಿಳಿಯದೆ ಒಂದು ಎಲೆಯಾಗಲಿ ಉದುರಿ ಬೀಳುವುದಿಲ್ಲ. ಭೂಮಿಯ ಅಂಧಕಾರಗಳಲ್ಲಿ ಹುದುಗಿರುವ ಧಾನ್ಯವಾಗಲಿ, ಹಸಿ ಅಥವಾ ಒಣ ವಸ್ತುವಾಗಲಿ ಸ್ಪಷ್ಟವಾದ ಗ್ರಂಥದಲ್ಲಿ ಉಲ್ಲೇಖಿಸಲ್ಪಡುವುದರಿಂದ ಹೊರತಾಗಿಲ್ಲ.

وَعِندَهُ مَفَاتِحُ الْغَيْبِ لَا يَعْلَمُهَا إِلَّا هُوَ ۚ وَيَعْلَمُ مَا فِي الْبَرِّ وَالْبَحْرِ ۚ وَمَا تَسْقُطُ مِن وَرَقَةٍ إِلَّا يَعْلَمُهَا وَلَا حَبَّةٍ فِي ظُلُمَاتِ الْأَرْضِ وَلَا رَطْبٍ وَلَا يَابِسٍ إِلَّا فِي كِتَابٍ مُّبِينٍ ٥٩

**61.** ಅವನೇ ರಾತ್ರಿಯಲ್ಲಿ ನಿಮ್ಮನ್ನು (ನಿದ್ರೆಯ ರೂಪದಲ್ಲಿ) ಮರಣಪಡಿಸುತ್ತಾನೆ. ಮತ್ತು ಹಗಲಿನಲ್ಲಿ ನೀವು ಮಾಡುವುದನ್ನೆಲ್ಲ ತಿಳಿಯುತ್ತಾನೆ. ಅನಂತರ,

وَهُوَ الَّذِي يَتَوَفَّاكُم بِاللَّيْلِ وَيَعْلَمُ مَا جَرَحْتُم بِالنَّهَارِ ثُمَّ يَبْعَثُكُمْ فِيهِ

لِيُقْضٰۤى اَجَلٌ مُّسَمًّى ۚ ثُمَّ اِلَيْهِ مَرْجِعُكُمْ ثُمَّ يُنَبِّئُكُمْ بِمَا كُنْتُمْ تَعْمَلُوْنَ ﴿٦١﴾

ನಿಗದಿತ ಕಾಲಾವಧಿ ಪೂರ್ತಿಗೊಳಿಸಲ್ಪಡಲಿಕ್ಕಾಗಿ ಅದರಲ್ಲಿ ನಿಮ್ಮನ್ನು ಅವನು ಎಬ್ಬಿಸುತ್ತಾನೆ. ಆ ಮೇಲೆ ಅವನ ಬಳಿಗೆಯೇ ನಿಮ್ಮ ಮರಳಿಕೆ. ಆ ಬಳಿಕ ನೀವು ಗೈದ ಕೃತ್ಯಗಳ ಬಗ್ಗೆ ಅವನು ನಿಮಗೆ ವಿವರ ನೀಡುವನು.

وَهُوَ الْقَاهِرُ فَوْقَ عِبَادِهٖ وَيُرْسِلُ عَلَيْكُمْ حَفَظَةً ۗ حَتّٰۤى اِذَا جَآءَ اَحَدَكُمُ الْمَوْتُ تَوَفَّتْهُ رُسُلُنَا وَهُمْ لَا يُفَرِّطُوْنَ ﴿٦٢﴾

**62.** ಅವನು ತನ್ನ ದಾಸರ ಮೇಲೆ ಪರಮಾಧಿಕಾರವುಳ್ಳವನಾಗಿದ್ದಾನೆ. ನಿಮಗೋಸ್ಕರ ಸಂರಕ್ಷಕರನ್ನು ಅವನು ಕಳುಹಿಸುತ್ತಾನೆ. ನಿಮ್ಮ ಪೈಕಿ ಯಾರಿಗಾದರೂ ಮರಣ ಸಮೀಪಿಸಿದರೆ ನಮ್ಮ ದೂತರು (ಮಲಾಯಿಕ್) ಅವನ ಪ್ರಾಣ ಹರಣ ಮಾಡುತ್ತಾರೆ. ಅವರು (ಆಜ್ಞೆಯನ್ನು ಜಾರಿಗೊಳಿಸುವುದರಲ್ಲಿ) ವಿಫಲರಾಗುವುದಿಲ್ಲ.

ثُمَّ رُدُّوْۤا اِلَى اللّٰهِ مَوْلٰىهُمُ الْحَقِّ ۗ اَلَا لَهُ الْحُكْمُ ۗ وَهُوَ اَسْرَعُ الْحٰسِبِيْنَ ﴿٦٣﴾

**63.** ಅನಂತರ ಅವರ ನಿಜವಾದ ರಕ್ಷಕನಾದ ಅಲ್ಲಾಹನೆಡೆಗೆ ಅವರು ಮರಳಿಸಲ್ಪಡುವರು. ತಿಳಿದುಕೊಳ್ಳಿರಿ - ತೀರ್ಮಾನ ಮಾಡುವ ಅಧಿಕಾರ ಅವನಿಗೆಯೇ ಇದೆ. ಅವನು ಲೆಕ್ಕತೆಗೆಯುವವರಲ್ಲಿ ಅತಿ ಶೀಘ್ರನಾಗಿದ್ದಾನೆ.

قُلْ مَنْ يُّنَجِّيْكُمْ مِّنْ ظُلُمٰتِ الْبَرِّ وَالْبَحْرِ تَدْعُوْنَهٗ تَضَرُّعًا وَّخُفْيَةً ۚ لَئِنْ اَنْجٰىنَا مِنْ هٰذِهٖ لَنَكُوْنَنَّ مِنَ الشّٰكِرِيْنَ ﴿٦٤﴾

**64.** ಹೇಳು: "ನೆಲ-ಜಲಗಳ ವಿಪತ್ತುಗಳಿಂದ ನಿಮ್ಮನ್ನು ರಕ್ಷಿಸುವವನು ಯಾರು?- 'ಅವನು ಇದರಿಂದ (ಈ ವಿಪತ್ತಿನಿಂದ) ನಮ್ಮನ್ನು ರಕ್ಷಿಸಿದರೆ ಖಂಡಿತವಾಗಿಯೂ ನಾವು ಕೃತಜ್ಞರಾಗುವೆವು' ಎಂದು ಹೇಳುತ್ತಾ ನೀವು ಅವನನ್ನು ವಿನಮ್ರವಾಗಿಯೂ ರಹಸ್ಯವಾಗಿಯೂ ಕರೆದು ಪ್ರಾರ್ಥಿಸುವ ಸಂದರ್ಭದಲ್ಲಿ?"

قُلِ اللّٰهُ يُنَجِّيْكُمْ مِّنْهَا وَمِنْ كُلِّ كَرْبٍ ثُمَّ اَنْتُمْ تُشْرِكُوْنَ ﴿٦٥﴾

**65.** ಹೇಳು: 'ಅಲ್ಲಾಹನೇ ಅದರಿಂದಲೂ (ಇತರ) ಎಲ್ಲ ವಿಧ ವ್ಯಥೆಗಳಿಂದಲೂ ನಿಮ್ಮನ್ನು ರಕ್ಷಿಸುತ್ತಾನೆ. ಆದರೂ ನೀವು (ಅಲ್ಲಾಹನಿಗೆ) ಸಹಭಾಗಿಗಳನ್ನು ಕಲ್ಪಿಸುತ್ತೀರಿ.'

قُلْ هُوَ الْقَادِرُ عَلٰۤى اَنْ يَّبْعَثَ عَلَيْكُمْ عَذَابًا مِّنْ فَوْقِكُمْ اَوْ مِنْ تَحْتِ اَرْجُلِكُمْ اَوْ يَلْبِسَكُمْ شِيَعًا وَّيُذِيْقَ

**66.** ಹೇಳು: 'ನಿಮ್ಮ ಮೇಲ್ಭಾಗದಿಂದಾಗಲಿ ನಿಮ್ಮ ಕಾಲಡಿಯಿಂದಾಗಲಿ ನಿಮ್ಮ ಮೇಲೆ ಒಂದು ಶಿಕ್ಷೆಯನ್ನು ಇಳಿಸಲಿಕ್ಕೆ ಅಥವಾ ನಿಮ್ಮನ್ನು ವಿವಿಧ ಪಂಗಡಗಳಾಗಿ ಬೇರ್ಪಡಿಸಿ ನಿಮ್ಮ ಪೈಕಿ ಕೆಲವರ ದುಷ್ಕೃತ್ಯಗಳನ್ನು ಬೇರೆ





بَعْضَكُمْ بَاْسَ بَعْضٍ ۗ اُنْظُرْ كَيْفَ نُصَرِّفُ الْاٰيٰتِ لَعَلَّهُمْ يَفْقَهُوْنَ ﴿٦٦﴾

ಕೆಲವರು ಅನುಭವಿಸುವಂತೆ ಮಾಡಲಿಕ್ಕೆ ಅವನಿಗೆ ಶಕ್ತಿ ಇದೆ.' ನೋಡು, ಅವರು ಗ್ರಹಿಸಿ ಕೊಳ್ಳಲಿಕ್ಕಾಗಿ ನಾವು ದೃಷ್ಟಾಂತಗಳನ್ನು ವಿವಿಧ ತರದಲ್ಲಿ ಹೇಗೆಲ್ಲ ನಿರೂಪಿಸುತ್ತೇವೆ!

وَكَذَّبَ بِهٖ قَوْمُكَ وَهُوَ الْحَقُّ ۗ قُلْ لَّسْتُ عَلَيْكُمْ بِوَكِيْلٍ ﴿٦٧﴾

**67.** ಇದು ಸತ್ಯವಾದರೂ ನಿನ್ನ ಜನರು ಇದನ್ನು ತಿರಸ್ಕರಿಸಿದರು. ಹೇಳು: 'ನಾನು ನಿಮ್ಮ ಮೇಲೆ ಹೊಣೆಗಾರನಲ್ಲ.'

لِكُلِّ نَبَاٍ مُّسْتَقَرٌّ ۫ وَّسَوْفَ تَعْلَمُوْنَ ﴿٦٨﴾

**68.** ಪ್ರತಿಯೊಂದು ಪ್ರವಾದನೆಗೂ ಒಂದು ನಿರ್ದಿಷ್ಟ ಕಾಲಾವಧಿ ಇದೆ. ಅನಂತರ ನೀವು (ನಿಜಾಂಶವನ್ನು) ತಿಳಿದುಕೊಳ್ಳುವಿರಿ.

وَاِذَا رَاَيْتَ الَّذِيْنَ يَخُوْضُوْنَ فِيْۤ اٰيٰتِنَا فَاَعْرِضْ عَنْهُمْ حَتّٰى يَخُوْضُوْا فِيْ حَدِيْثٍ غَيْرِهٖ ۗ وَاِمَّا يُنْسِيَنَّكَ الشَّيْطٰنُ فَلَا تَقْعُدْ بَعْدَ الذِّكْرٰى مَعَ الْقَوْمِ الظّٰلِمِيْنَ ﴿٦٩﴾

**69.** ನಮ್ಮ ದೃಷ್ಟಾಂತಗಳ ಕುರಿತು (ವಿಮರ್ಶೆ ಮಾಡುತ್ತಾ) ನಿರರ್ಥಕವಾಗಿ ಮಾತನಾಡುವವರನ್ನು ನೀನು ಕಂಡರೆ ಅವರು ಬೇರೊಂದು ಮಾತುಕತೆಯಲ್ಲಿ ತೊಡಗುವವರೆಗೆ ನೀನು ಅವರಿಂದ ಅಗಲಿ ನಿಲ್ಲು. ಶೈತಾನನು ಯಾವಾಗಲಾದರೂ ನಿನಗೆ ಮರೆವು ಉಂಟಾಗುವಂತೆ ಮಾಡಿದರೆ ನೆನಪುಂಟಾದ ನಂತರ ನೀನು ಅಧರ್ಮಿಗಳೊಂದಿಗೆ ಕುಳಿತುಕೊಳ್ಳಬಾರದು.

وَمَا عَلَى الَّذِيْنَ يَتَّقُوْنَ مِنْ حِسَابِهِمْ مِّنْ شَيْءٍ وَّلٰكِنْ ذِكْرٰى لَعَلَّهُمْ يَتَّقُوْنَ ﴿٧٠﴾

**70.** ದೇವ ಭಕ್ತರಿಗೆ ಅವರ (ಅಧರ್ಮಿಗಳ) ಲೆಕ್ಕಾಚಾರದ ಬಗ್ಗೆ ಯಾವ ಹೊಣೆಗಾರಿಕೆಯಾಗಲಿ ಇಲ್ಲ. ಆದರೆ ಉಪದೇಶಿಸುವುದು ಮಾತ್ರ (ಅವರ ಹೊಣೆಗಾರಿಕೆಯಾಗಿದೆ) - ಅವರು ಭಯಭಕ್ತಿಯುಳ್ಳವರಾಗಲಿಕ್ಕಾಗಿ.

وَذَرِ الَّذِيْنَ اتَّخَذُوْا دِيْنَهُمْ لَعِبًا وَّلَهْوًا وَّغَرَّتْهُمُ الْحَيٰوةُ الدُّنْيَا وَذَكِّرْ بِهٖۤ اَنْ تُبْسَلَ نَفْسٌ ۢ بِمَا كَسَبَتْ ۖ لَيْسَ لَهَا مِنْ دُوْنِ اللّٰهِ وَلِيٌّ وَّلَا شَفِيْعٌ ۚ وَاِنْ تَعْدِلْ كُلَّ عَدْلٍ لَّا يُؤْخَذْ مِنْهَا ۗ اُولٰٓئِكَ الَّذِيْنَ اُبْسِلُوْا بِمَا كَسَبُوْا ۚ لَهُمْ شَرَابٌ

**71.** ತಮ್ಮ ಧರ್ಮವನ್ನು ಆಟ ಮತ್ತು ವಿನೋದವನ್ನಾಗಿ ಮಾಡಿದವರನ್ನೂ ಐಹಿಕ ಜೀವನಕ್ಕೆ ಮೋಸಹೋದವರನ್ನೂ ನೀನು ಬಿಟ್ಟು ಬಿಡು. ಯಾವುದೇ ಆತ್ಮ ಅದು ಸಂಪಾದಿಸಿದ ಹೇತುವಾಗಿ ನಾಶದೆಡೆಗೆ ನೂಕಲ್ಪಡದಿರಲಿಕ್ಕಾಗಿ ನೀನು ಅದರ (ದೇವ ವಚನ) ಮೂಲಕ ಉಪದೇಶಿಸು. ಅಲ್ಲಾಹನ ಹೊರತು ಅದಕ್ಕೆ (ಆ ಆತ್ಮಕ್ಕೆ) ಯಾವ ರಕ್ಷಕನೂ ಶಿಫಾರಸು ಸ್ವೀಕರಿಸುವವನೂ ಇಲ್ಲ. ಅದು ಸರ್ವವಿಧ ಪ್ರಾಯಶ್ಚಿತ್ತಗಳನ್ನು

ಸಮರ್ಪಿಸಿದರೆ ಕೂಡ ಅವು ಸ್ವೀಕೃತವಾಗಲಾರವು. ಅವರು ತಾವು ಸಂಪಾದಿಸಿದ (ಕರ್ಮಫಲ) ಕಾರಣದಿಂದ ನಾಶದೆಡೆಗೆ ಒಯ್ಯಲ್ಪಟ್ಟವರಾಗಿದ್ದಾರೆ. ಅವರು ಧಿಕ್ಕರಿಸಿದ ಕಾರಣ ದಿಂದ ಕುದಿಯುವ ನೀರಿನ ಪಾನಕ ಮತ್ತು ಯಾತನಾಮಯ ಶಿಕ್ಷೆ ಅವರಿಗೆ ಸಿಗಲಿವೆ.

مِّنْ حَمِيمٍ وَعَذَابٌ أَلِيمٌ بِمَا كَانُوا يَكْفُرُونَ ﴿٧٠﴾

**72.** ಹೇಳು: "ಅಲ್ಲಾಹನ ಬದಲು ನಮಗೆ ಉಪಕಾರವಾಗಲಿ, ಉಪದ್ರವಾಗಲಿ ಮಾಡದ ಯಾವುದನ್ನಾದರೂ ನಾವು ಕರೆದು ಪ್ರಾರ್ಥಿಸಬೇಕೇ? ಅಲ್ಲಾಹನು ನಮಗೆ ಮಾರ್ಗದರ್ಶನ ಮಾಡಿದ ನಂತರ ಶೈತಾನ್ ಭೂಮಿಯಲ್ಲಿ ದಾರಿತಪ್ಪಿಸಿ ಗಾಬರಿಗೊಳಪಡಿಸಿ ಅಲೆದಾಡುವ ವ್ಯಕ್ತಿಯಂತೆ ನಾವು ಹಿಂದಿರುಗಿಸಲ್ಪಡಬೇಕೇ? ಅವನಿಗೆ ಕೆಲವು ಸಂಗಡಿಗರಿದ್ದಾರೆ. 'ಸನ್ಮಾರ್ಗದೆಡೆಗೆ ನಮ್ಮ ಬಳಿಗೆ ಬಾ' ಎಂದು ಅವರು ಅವನನ್ನು (ದಾರಿತಪ್ಪಿ ಅಲೆದಾಡುವ ವ್ಯಕ್ತಿಯನ್ನು) ಕರೆಯುತ್ತಾರೆ." ಹೇಳು: "ಅಲ್ಲಾಹನ ಮಾರ್ಗದರ್ಶನವೇ ನಿಜವಾದ ಮಾರ್ಗದರ್ಶನ. ಸರ್ವಲೋಕ ಪಾಲಕ ಪೋಷಕನಾದ ಅಲ್ಲಾಹನಿಗೆ ವಿಧೇಯರಾಗಬೇಕೆಂದು ನಮಗೆ ಆದೇಶಿಸಲಾಗಿದೆ."

قُلْ أَنَدْعُوا مِن دُونِ اللَّهِ مَا لَا يَنفَعُنَا وَلَا يَضُرُّنَا وَنُرَدُّ عَلَىٰ أَعْقَابِنَا بَعْدَ إِذْ هَدَانَا اللَّهُ كَالَّذِي اسْتَهْوَتْهُ الشَّيَاطِينُ فِي الْأَرْضِ حَيْرَانَ لَهُ أَصْحَابٌ يَدْعُونَهُ إِلَى الْهُدَى ائْتِنَا ۗ قُلْ إِنَّ هُدَى اللَّهِ هُوَ الْهُدَىٰ ۖ وَأُمِرْنَا لِنُسْلِمَ لِرَبِّ الْعَالَمِينَ ﴿٧١﴾

**73.** "ನೀವು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಬೇಕೆಂದೂ ದೇವನ ಭಯಭಕ್ತಿಯಿರಿಸಿಕೊಳ್ಳಬೇಕೆಂದೂ ನಮಗೆ ಆಜ್ಞಾಪಿಸಲಾಗಿದೆ." ಅವನ ಸಮಕ್ಷಮದಲ್ಲೇ ನೀವು ಒಂದುಗೂಡಿಸಲ್ಪಡುವಿರಿ.

وَأَنْ أَقِيمُوا الصَّلَاةَ وَاتَّقُوهُ ۚ وَهُوَ الَّذِي إِلَيْهِ تُحْشَرُونَ ﴿٧٢﴾

**74.** ಆಕಾಶಗಳನ್ನೂ ಭೂಮಿಯನ್ನೂ ಯಥೋಚಿತವಾಗಿ ಅವನು ಸೃಷ್ಟಿಸಿರುವನು. (ಯಾವುದೇ ವಸ್ತುವಾಗಲಿ) 'ಆಗು' ಎಂದು ಅವನು ಹೇಳುವ ದಿನ ಅದು ಆಗುತ್ತದೆ. ಅವನ ಮಾತು ಪರಮ ಸತ್ಯ. ಕಹಳೆ ಊದಲ್ಪಡುವ ದಿನದ ಆಧಿಪತ್ಯ ಅವನದೇ ಆಗಿದೆ. ಪರೋಕ್ಷ ಮತ್ತು ಪ್ರತ್ಯಕ್ಷ ವಿಚಾರಗಳನ್ನೆಲ್ಲ ಅವನು ತಿಳಿಯುವವನಾಗಿದ್ದಾನೆ. ಅವನು ವಿವೇಕಶಾಲಿ ಯೂ ಎಲ್ಲ ಬಲ್ಲವನೂ ಆಗಿದ್ದಾನೆ.

وَهُوَ الَّذِي خَلَقَ السَّمَاوَاتِ وَالْأَرْضَ بِالْحَقِّ ۖ وَيَوْمَ يَقُولُ كُن فَيَكُونُ ۚ قَوْلُهُ الْحَقُّ ۚ وَلَهُ الْمُلْكُ يَوْمَ يُنفَخُ فِي الصُّورِ ۚ عَالِمُ الْغَيْبِ وَالشَّهَادَةِ ۚ وَهُوَ الْحَكِيمُ الْخَبِيرُ ﴿٧٣﴾





**75.** ಇಬ್‌ರಾಹೀಂ ತನ್ನ ಪಿತ ಆಝರ್‌ನೊಡನೆ (ಹೀಗೆ) ಹೇಳಿದ ಸಂದರ್ಭ - 'ವಿಗ್ರಹಗಳನ್ನು ನೀವು ದೇವರುಗಳನ್ನಾಗಿ ಮಾಡಿದ್ದೀರಾ? ನಿಮ್ಮನ್ನೂ ನಿಮ್ಮ ಜನತೆಯನ್ನೂ ನಾನು ಸ್ಪಷ್ಟವಾದ ದುರ್ಮಾರ್ಗದಲ್ಲಿ ಕಾಣುತ್ತಿದ್ದೇನೆ.'

وَإِذْ قَالَ إِبْرَاهِيمُ لِأَبِيهِ آزَرَ أَتَتَّخِذُ أَصْنَامًا آلِهَةً ۖ إِنِّي أَرَاكَ وَقَوْمَكَ فِي ضَلَالٍ مُّبِينٍ ﴿٧٤﴾

**76.** ಹೀಗೆ ನಾವು ಇಬ್‌ರಾಹೀಮರಿಗೆ, ಅವರು ದೃಢ ವಿಶ್ವಾಸಿಯಾಗಲಿಕ್ಕೋಸ್ಕರ, ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ (ನಮ್ಮ) ಆಧಿಪತ್ಯವನ್ನು ತೋರಿಸಿ ಕೊಟ್ಟೆವು.

وَكَذَٰلِكَ نُرِي إِبْرَاهِيمَ مَلَكُوتَ السَّمَاوَاتِ وَالْأَرْضِ وَلِيَكُونَ مِنَ الْمُوقِنِينَ ﴿٧٥﴾

**77.** ಹಾಗೆ, ಅವರ ಮೇಲೆ ಕತ್ತಲೆ ಆವರಿಸಿದಾಗ ಅವರು ಒಂದು ನಕ್ಷತ್ರವನ್ನು ಕಂಡರು. 'ಇದು ನನ್ನ ಪ್ರಭು' ಎಂದು ಅವರು ಹೇಳಿದರು.[223] ನಂತರ ಅದು ಅಸ್ತಮಿಸಿದಾಗ, 'ಅಸ್ತಮಿಸುವವರನ್ನು ನಾನು ಪ್ರೀತಿಸುವುದಿಲ್ಲ' ಎಂದು ಅವರು ಹೇಳಿದರು.

فَلَمَّا جَنَّ عَلَيْهِ اللَّيْلُ رَأَىٰ كَوْكَبًا ۖ قَالَ هَٰذَا رَبِّي ۖ فَلَمَّا أَفَلَ قَالَ لَا أُحِبُّ الْآفِلِينَ ﴿٧٦﴾

**78.** (ನಂತರ) ಪ್ರಭೆಯಿಂದ ಕೂಡಿದ ಚಂದ್ರನು ಉದಿಸುವುದನ್ನು ಕಂಡಾಗ, 'ಇದು ನನ್ನ ಪ್ರಭು' ಎಂದು ಅವರು ಹೇಳಿದರು. ಅದು ಅಸ್ತಮಿಸಿದಾಗ ಅವರು 'ನನ್ನ ಪ್ರಭು (ಅಲ್ಲಾಹನು) ನನಗೆ ಸರಿಯಾದ ಮಾರ್ಗವನ್ನು ತೋರಿಸಿಕೊಡದಿದ್ದರೆ ಖಂಡಿತವಾಗಿಯೂ ನಾನು ದಾರಿ ತಪ್ಪಿದ ಜನರಲ್ಲಿ ಸೇರಿದವನಾಗುವೆನು' ಎಂದು ಹೇಳಿದರು.

فَلَمَّا رَأَى الْقَمَرَ بَازِغًا قَالَ هَٰذَا رَبِّي ۖ فَلَمَّا أَفَلَ قَالَ لَئِن لَّمْ يَهْدِنِي رَبِّي لَأَكُونَنَّ مِنَ الْقَوْمِ الضَّالِّينَ ﴿٧٧﴾

**79.** (ಇನ್ನೊಂದು ಸಂದರ್ಭದಲ್ಲಿ) ಸೂರ್ಯನು ಜಾಜ್ವಲ್ಯಮಾನವಾಗಿ ಉದಿಸಿ ಬರುವುದನ್ನು ಕಂಡಾಗ, 'ಇದೇ ನನ್ನ ಪ್ರಭು, ಇದು ಎಲ್ಲಕ್ಕಿಂತಲೂ ದೊಡ್ಡದಷ್ಟೆ' ಎಂದು ಅವರು ಹೇಳಿದರು. ಅದು ಅಸ್ತಮಿಸಿದಾಗ ಅವರು ಹೇಳಿದರು: 'ನನ್ನ, ಜನರೇ ನೀವು ಯಾವುದನ್ನು (ಅಲ್ಲಾಹ

فَلَمَّا رَأَى الشَّمْسَ بَازِغَةً قَالَ هَٰذَا رَبِّي هَٰذَا أَكْبَرُ ۖ فَلَمَّا أَفَلَتْ قَالَ يَا قَوْمِ إِنِّي

223. ಪ್ರವಾದಿ ಇಬ್‌ರಾಹೀಂ (ಅಲೈಹಿಸ್ಸಲಾಂ) ತನ್ನ ಜನತೆಯ ವಿಶ್ವಾಸವನ್ನು ತಾತ್ಕಾಲಿಕವಾಗಿ ತನ್ನದೆಂದು ಕಲ್ಪಿಸಿಕೊಂಡು, ಬಹುದೇವ ವಿಶ್ವಾಸ ಮತ್ತು ನಿಸರ್ಗ ಶಕ್ತಿಗಳನ್ನು ದೇವರುಗಳನ್ನಾಗಿ ಮಾಡಿ ಆರಾಧಿಸುವುದರ ಪೊಳ್ಳುತನವನ್ನು ಅವರಿಗೆ ಮನಗಾಣಿಸಿ ಕೊಡಲಿಕ್ಕೋಸ್ಕರ ಹೀಗೆ ಮಾಡಿದರು. ಮುಂದಿನ ವಚನಗಳಲ್ಲಿ ಸಹ ಇದೇ ಉದ್ದೇಶದಿಂದ ಅವರು ಹೀಗೆಯೇ ಹೇಳಿರುವುದನ್ನು ಕಾಣಬಹುದು.

ನಿಗೆ) ಸರಿಸಾಟಿಯಾಗಿ ಕಲ್ಪಿಸುತ್ತಿದ್ದೀರೋ ಅದರಿಂದ ನಾನು ಬೇಸರಗೊಂಡಿದ್ದೇನೆ.'

بَرِيْٓءٌ مِّمَّا تُشْرِكُوْنَ ﴿٧٨﴾

80. 'ಖಂಡಿತವಾಗಿಯೂ ನಾನು ಸದಾ (ಅಲ್ಲಾಹನೆಡೆಗೆ) ಬಾಗುವವನಾಗಿ ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನ (ಅಲ್ಲಾಹನ) ಕಡೆಗೆ ನನ್ನ ಮುಖವನ್ನು ತಿರುಗಿಸುತ್ತೇನೆ. ನಾನು ಬಹುದೇವೋಪಾಸಕರಲ್ಲಿ ಸೇರಿದವನಲ್ಲ'.

اِنِّيْ وَجَّهْتُ وَجْهِيَ لِلَّذِيْ فَطَرَ السَّمٰوٰتِ وَالْاَرْضَ حَنِيْفًا وَّمَآ اَنَا مِنَ الْمُشْرِكِيْنَ ﴿٧٩﴾

81. ಅವರ ಜನರು ಅವರೊಡನೆ ವಿವಾದಕ್ಕಿಳಿದರು. ಅವರು ಹೇಳಿದರು: 'ಅಲ್ಲಾಹನು ನನಗೆ ನೇರವಾದ ಮಾರ್ಗವನ್ನು ತೋರಿಸಿಕೊಟ್ಟಿರುವಾಗ ಅವನ ಬಗ್ಗೆ ನನ್ನೊಡನೆ ನೀವು ವಾಗ್ವಾದ ಮಾಡುತ್ತಿದ್ದೀರಾ? ಯಾವುದನ್ನು ನೀವು ಅವನಿಗೆ ಸಹಭಾಗಿಯಾಗಿ ಕಲ್ಪಿಸುತ್ತಿದ್ದೀರೋ ಅದಕ್ಕೆ ನಾನು ಭಯಪಡುವುದಿಲ್ಲ. ಅಲ್ಲಾಹನು ಏನನ್ನಾದರೂ ಇಚ್ಛಿಸಿದರೆ ಹೊರತು (ನನಗೇನೂ ಸಂಭವಿಸಲಾರದು). ನನ್ನ ಪ್ರಭು ತನ್ನ ಜ್ಞಾನದಿಂದ ಎಲ್ಲ ವಸ್ತುಗಳನ್ನೂ ಆವರಿಸಿರುವನು. ಆದರೂ ನೀವು ಉಪದೇಶವನ್ನು ಕೇಳುವುದಿಲ್ಲವೇ?

وَحَآجَّهٗ قَوْمُهٗ ۭ قَالَ اَتُحَآجُّوْٓنِّيْ فِي اللّٰهِ وَقَدْ هَدٰىنِ ۭ وَلَآ اَخَافُ مَا تُشْرِكُوْنَ بِهٖٓ اِلَّآ اَنْ يَّشَاۗءَ رَبِّيْ شَيْـًٔا ۭ وَسِعَ رَبِّيْ كُلَّ شَيْءٍ عِلْمًا ۭ اَفَلَا تَتَذَكَّرُوْنَ ﴿٨٠﴾

82. 'ನೀವು (ಅಲ್ಲಾಹನಿಗೆ) ಸಹಭಾಗಿ ಮಾಡುವವುಗಳಿಗೆ ನಾನು ಹೇಗೆ ಭಯಪಡುವೆ? ನೀವಾದರೋ, ಅವನು ನಿಮಗೆ ಯಾವುದೇ ಅಧಿಕಾರವನ್ನು ನೀಡದಿದ್ದರೂ ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುವುದರ ಬಗ್ಗೆ ಭಯಪಡುವುದಿಲ್ಲವಷ್ಟೇ. ಉಭಯ ಪಕ್ಷದವರಲ್ಲಿ ಹೆಚ್ಚು ಸುರಕ್ಷತೆ ಯಾರಿಗಿದೆ ಎಂದು ನೀವು ಬಲ್ಲಿರಾ?'

وَكَيْفَ اَخَافُ مَآ اَشْرَكْتُمْ وَلَا تَخَافُوْنَ اَنَّكُمْ اَشْرَكْتُمْ بِاللّٰهِ مَا لَمْ يُنَزِّلْ بِهٖ عَلَيْكُمْ سُلْطٰنًا ۭ فَاَيُّ الْفَرِيْقَيْنِ اَحَقُّ بِالْاَمْنِ ۚ اِنْ كُنْتُمْ تَعْلَمُوْنَ ﴿٨١﴾

83. ಯಾರು ವಿಶ್ವಾಸ ಹೊಂದಿ ತಮ್ಮ ನಂಬಿಕೆಯನ್ನು ಅನ್ಯಾಯದೊಂದಿಗೆ ಮಿಶ್ರ ಮಾಡುವುದಿಲ್ಲವೋ ಅವರಿಗೆ ಸಮಾಧಾನವಿದೆ. ಅವರು ಸರಿಯಾದ ಮಾರ್ಗದರ್ಶನವನ್ನು ಹೊಂದಿದವರಾಗಿದ್ದಾರೆ.

اَلَّذِيْنَ اٰمَنُوْا وَلَمْ يَلْبِسُوْٓا اِيْمَانَهُمْ بِظُلْمٍ اُولٰۗىِٕكَ لَهُمُ الْاَمْنُ وَهُمْ مُّهْتَدُوْنَ ﴿٨٢﴾

84. ಇದು, ಇಬ್‌ರಾಹೀಮರಿಗೆ ಅವರ ಜನತೆಗೆ ವಿರುದ್ಧವಾಗಿ ನಾವು ನೀಡಿದ ನಮ್ಮ ಪುರಾವೆಯಾಗಿದೆ.

وَتِلْكَ حُجَّتُنَآ اٰتَيْنٰهَآ اِبْرٰهِيْمَ عَلٰي





ನಾವು ಇಷ್ಟಪಡುವವರ ಪದವಿಗಳನ್ನು ಉನ್ನತಿಗೇರಿಸುತ್ತೇವೆ. ಖಂಡಿತವಾಗಿಯೂ ನಿನ್ನ ಪ್ರಭು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.

قَوْمِهٖ ۭ نَرْفَعُ دَرَجٰتٍ مَّنْ نَّشَاۗءُ ۭ اِنَّ رَبَّكَ حَكِيْمٌ عَلِيْمٌ ﴿٨٣﴾

85. ನಾವು ಅವರಿಗೆ (ಇಬ್‌ರಾಹೀಮರಿಗೆ) ಇಸ್‌ಹಾಕ್ ಮತ್ತು ಯಅ್‌ಖೂಬ್‌ರನ್ನು ದಯಪಾಲಿಸಿದೆವು; ಪ್ರತಿಯೊಬ್ಬರಿಗೂ ಮಾರ್ಗದರ್ಶನ ನೀಡಿದೆವು. ಇದಕ್ಕೆ ಮುಂಚೆ ನೂಹ್‌ರಿಗೆ ಸಹ ನಾವು ಮಾರ್ಗದರ್ಶನ ಇತ್ತೆವು. ಅವರ (ಇಬ್‌ರಾಹೀಮರ) ಸಂತತಿಗಳ ಪೈಕಿ ದಾವೂದ್, ಸುಲೈಮಾನ್, ಅಯ್ಯೂಬ್, ಯೂಸುಫ್, ಮೂಸಾ, ಹಾರೂನ್ ಎಂಬಿವರಿಗೂ (ನಾವು ಸತ್ಪಥವನ್ನು ತೋರಿಸಿಕೊಟ್ಟೆವು). ಸಜ್ಜನರಿಗೆ ಹೀಗೆ ನಾವು ಪ್ರತಿಫಲ ನೀಡುತ್ತೇವೆ.

وَوَهَبْنَا لَهٗٓ اِسْحٰقَ وَيَعْقُوْبَ ۭ كُلًّا هَدَيْنَا ۚ وَنُوْحًا هَدَيْنَا مِنْ قَبْلُ وَمِنْ ذُرِّيَّتِهٖ دَاوٗدَ وَسُلَيْمٰنَ وَاَيُّوْبَ وَيُوْسُفَ وَمُوْسٰي وَهٰرُوْنَ ۭ وَكَذٰلِكَ نَجْزِي الْمُحْسِنِيْنَ ﴿٨٤﴾

86. ಝಕರಿಯ್ಯಾ, ಯಹ್ಯಾ, ಈಸಾ, ಇಲ್ಯಾಸ್, ಎಂಬಿವರಿಗೂ (ನಾವು ನೇರಮಾರ್ಗ ತೋರಿಸಿಕೊಟ್ಟಿದ್ದೇವೆ). ಅವರೆಲ್ಲರೂ ಧರ್ಮನಿಷ್ಠರಲ್ಲಿ ಸೇರಿದವರಾಗಿದ್ದರು.

وَزَكَرِيَّا وَيَحْيٰى وَعِيْسٰى وَاِلْيَاسَ ۭ كُلٌّ مِّنَ الصّٰلِحِيْنَ ﴿٨٥﴾

87. ಇಸ್ಮಾಈಲ್, ಅಲ್‌ಯಸಅ್, ಯೂನುಸ್, ಲೂತ್ ಎಂಬಿವರಿಗೂ (ನಾವು ಮಾರ್ಗದರ್ಶನ ನೀಡಿದ್ದೇವೆ). ಪ್ರತಿಯೊಬ್ಬರಿಗೂ ನಾವು ಜನರ ಮೇಲೆ ಶ್ರೇಷ್ಠತೆಯನ್ನು ದಯಪಾಲಿಸಿದ್ದೆವು.

وَاِسْمٰعِيْلَ وَالْيَسَعَ وَيُوْنُسَ وَلُوْطًا ۭ وَكُلًّا فَضَّلْنَا عَلَي الْعٰلَمِيْنَ ﴿٨٦﴾

88. ಅವರ ಪಿತರಿಂದಲೂ ಅವರ ಸಂತತಿಗಳಿಂದಲೂ ಅವರ ಸಹೋದರರಿಂದಲೂ ಕೆಲವರಿಗೆ (ನಾವು ಮಾರ್ಗದರ್ಶನ ನೀಡಿದೆವು). ನಾವು ಅವರನ್ನು ಆಯ್ಕೆ ಮಾಡಿ ಋಜು ಮಾರ್ಗದಲ್ಲಿ ಅವರನ್ನು ನಡೆಸಿದೆವು.

وَمِنْ اٰبَاۗىِٕهِمْ وَذُرِّيّٰتِهِمْ وَاِخْوَانِهِمْ ۚ وَاجْتَبَيْنٰهُمْ وَهَدَيْنٰهُمْ اِلٰى صِرَاطٍ مُّسْتَقِيْمٍ ﴿٨٧﴾

89. ಇದು ಅಲ್ಲಾಹನ ಮಾರ್ಗದರ್ಶನ ರೀತಿಯಾಗಿದೆ. ತನ್ನ ದಾಸರ ಪೈಕಿ ಅವನು ಇಷ್ಟಪಡುವವರಿಗೆ ಆ ಮೂಲಕ ಅವನು ಮಾರ್ಗದರ್ಶನ ನೀಡುತ್ತಾನೆ. ಅವರು ಅವನನ್ನು ಬಿಟ್ಟು ಬೇರೇನನ್ನಾದರೂ ಆರಾಧಿಸಿರುತ್ತಿದ್ದರೆ ಅವರ ಕರ್ಮಗಳೆಲ್ಲ ಅವರಿಗೆ ನಿಷ್ಪ್ರಯೋಜಕವಾಗುತ್ತಿದ್ದವು.

ذٰلِكَ هُدَى اللّٰهِ يَهْدِيْ بِهٖ مَنْ يَّشَاۗءُ مِنْ عِبَادِهٖ ۭ وَلَوْ اَشْرَكُوْا لَحَبِطَ عَنْهُمْ مَّا كَانُوْا يَعْمَلُوْنَ ﴿٨٨﴾

**90.** ನಾವು ಗ್ರಂಥವನ್ನೂ ಆಜ್ಞಾಧಿಕಾರವನ್ನೂ ಪ್ರವಾದಿತ್ವವನ್ನೂ ನೀಡಿದ್ದು ಅವರಿಗೆಯೇ. ಆದರೆ ಈ ಜನರು ಅವುಗಳಿಗೆ ಕೃತಜ್ಞರಲ್ಲವಾದರೆ (ಚಿಂತಿಲ್ಲ), ಕೃತಘ್ನತೆ ತೋರಿಸದ ಬೇರೊಂದು ಜನತೆಗೆ ನಾವು ಅವುಗಳನ್ನು ಒಪ್ಪಿಸಿಕೊಟ್ಟಿದ್ದೇವೆ.

أُولَٰئِكَ الَّذِينَ آتَيْنَاهُمُ الْكِتَابَ وَالْحُكْمَ وَالنُّبُوَّةَ ۚ فَإِن يَكْفُرْ بِهَا هَٰؤُلَاءِ فَقَدْ وَكَّلْنَا بِهَا قَوْمًا لَّيْسُوا بِهَا بِكَافِرِينَ ﴿٩٠﴾

**91.** ಅವರಿಗೆಯೇ ಅಲ್ಲಾಹನು ಸರಿಯಾದ ಮಾರ್ಗದರ್ಶನ ನೀಡಿರುವುದು. ಆದ್ದರಿಂದ ಅವರ ಮಾರ್ಗದರ್ಶನವನ್ನು ನೀನು ಅನುಸರಿಸು. ಹೇಳು: 'ಇದಕ್ಕೋಸ್ಕರ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಕೇಳುವುದಿಲ್ಲ. ಇದು ಸಮಸ್ತ ಲೋಕಕ್ಕೆ ಇರುವ ಉಪದೇಶವಾಗಿದೆ.'

أُولَٰئِكَ الَّذِينَ هَدَى اللَّهُ ۖ فَبِهُدَاهُمُ اقْتَدِهْ ۗ قُل لَّا أَسْأَلُكُمْ عَلَيْهِ أَجْرًا ۖ إِنْ هُوَ إِلَّا ذِكْرَىٰ لِلْعَالَمِينَ ﴿٩١﴾

**92.** 'ಅಲ್ಲಾಹನು ಯಾವ ಮನುಷ್ಯರಿಗೂ ಏನನ್ನೂ ಅವತೀರ್ಣಗೊಳಿಸಲಿಲ್ಲ' ಎಂದು ಅವರು ಹೇಳಿದಾಗ, ಅವರು ಅಲ್ಲಾಹನ ಮಹತ್ವವನ್ನು ಸರಿಯಾದ ರೀತಿಯಲ್ಲಿ ಗ್ರಹಿಸಲಿಲ್ಲ. ಹೇಳು: 'ಮನುಷ್ಯರಿಗೆ ಪ್ರಕಾಶ ಮತ್ತು ಮಾರ್ಗದರ್ಶನವಾಗಿ ಮೂಸಾ ತಂದ ಗ್ರಂಥವನ್ನು ಅವತೀರ್ಣಗೊಳಿಸಿದ್ದು ಯಾರು? ನೀವು ಅದನ್ನು ಹಾಳೆಗಳನ್ನಾಗಿ ಮಾಡಿ ಕೆಲವು ಭಾಗಗಳನ್ನು ಬಹಿರಂಗಪಡಿಸಿ ಹೆಚ್ಚಿನವುಗಳನ್ನು ಮುಚ್ಚಿಡುತ್ತೀರಿ. ವಾಸ್ತವದಲ್ಲಿ, ನೀವಾಗಲೀ ನಿಮ್ಮ ತಂದೆ ತಾತಂದಿರಾಗಲಿ ತಿಳಿದಿಲ್ಲದ ವಿಚಾರಗಳನ್ನು ನಿಮಗೆ ಕಲಿಸಲಾಗಿದೆ.' ಹೇಳು: 'ಅಲ್ಲಾಹನೇ (ಅದನ್ನು ಅವತೀರ್ಣಗೊಳಿಸಿದ್ದು).' ನಂತರ ಅವರ ವ್ಯರ್ಥ ಸಂಭಾಷಣೆಗಳಲ್ಲಿ ವಿನೋದಗೊಳ್ಳುವವರಾಗಿ ನೀನು ಅವರನ್ನು ಬಿಟ್ಟುಬಿಡು.

وَمَا قَدَرُوا اللَّهَ حَقَّ قَدْرِهِ إِذْ قَالُوا مَا أَنزَلَ اللَّهُ عَلَىٰ بَشَرٍ مِّن شَيْءٍ ۗ قُلْ مَنْ أَنزَلَ الْكِتَابَ الَّذِي جَاءَ بِهِ مُوسَىٰ نُورًا وَهُدًى لِّلنَّاسِ ۖ تَجْعَلُونَهُ قَرَاطِيسَ تُبْدُونَهَا وَتُخْفُونَ كَثِيرًا ۖ وَعُلِّمْتُم مَّا لَمْ تَعْلَمُوا أَنتُمْ وَلَا آبَاؤُكُمْ ۖ قُلِ اللَّهُ ۖ ثُمَّ ذَرْهُمْ فِي خَوْضِهِمْ يَلْعَبُونَ ﴿٩٢﴾

**93.** ಇದು ನಾವು ಅವತೀರ್ಣಗೊಳಿಸಿದ ಒಂದು ಅನುಗ್ರಹೀತ ಗ್ರಂಥವಾಗಿದೆ. ಇದಕ್ಕೆ ಮುಂಚೆ ಅವತೀರ್ಣವಾದುದನ್ನು ಇದು ದೃಢೀಕರಿಸುತ್ತದೆ. (ನೀನು ಈ ಮೂಲಕ ಜನರಿಗೆ ಮಾರ್ಗದರ್ಶನ ನೀಡುವುದ

وَهَٰذَا كِتَابٌ أَنزَلْنَاهُ مُبَارَكٌ مُّصَدِّقُ الَّذِي بَيْنَ يَدَيْهِ وَلِتُنذِرَ أُمَّ





ಕ್ಕಾಗಿಯೂ) ಉಮ್ಮುಲ್‌ಖುರಾ (ಮಕ್ಕ) ನಿವಾಸಿಗಳಿಗೂ ಅದರ ಸುತ್ತುಮುತ್ತಲಿರುವವರಿಗೂ ನೀನು ಮುನ್ನೆಚ್ಚರಿಕೆ ನೀಡಲಿಕ್ಕಾಗಿಯೂ ಇದನ್ನು ನಾವು ಅವತೀರ್ಣಗೊಳಿಸಿದ್ದೇವೆ. ಪರಲೋಕದ ಬಗ್ಗೆ ನಂಬಿಕೆ ಇರುವವರು ಇದನ್ನು ನಂಬುತ್ತಾರೆ. ಅವರು ತಮ್ಮ ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ.

الْقُرَىٰ وَمَنْ حَوْلَهَا ۚ وَالَّذِينَ يُؤْمِنُونَ بِالْآخِرَةِ يُؤْمِنُونَ بِهِ ۖ وَهُمْ عَلَىٰ صَلَاتِهِمْ يُحَافِظُونَ ﴿٩٣﴾

**94.** ಅಲ್ಲಾಹನ ಮೇಲೆ ಸುಳ್ಳು ಹೇಳುವವನಿಗಿಂತ ಅಥವಾ ತನಗೇನೂ ದಿವ್ಯ ಸಂದೇಶವಾಗಿ ಅವತೀರ್ಣಗೊಂಡಿಲ್ಲವಾದರೂ 'ತನಗೆ ದಿವ್ಯ ಸಂದೇಶ ಅವತೀರ್ಣವಾಗಿದೆ' ಎಂದು ಹೇಳುವವನಿಗಿಂತ, ಹಾಗೆಯೇ 'ಅಲ್ಲಾಹನು ಅವತೀರ್ಣಗೊಳಿಸಿರುವುದಕ್ಕೆ ಸಮಾನವಾದುದನ್ನು ನಾನೂ ಅವತೀರ್ಣಗೊಳಿಸುವೆನು' ಎಂದು ಹೇಳುವವನಿಗಿಂತ ದೊಡ್ಡ ಅಧರ್ಮಿ ಯಾರಿದ್ದಾರೆ? ಆ ಅಧರ್ಮಿಗಳು ಮರಣದ ಸಂಕಟದಲ್ಲಿರುವಾಗ ದೇವದೂತರು ತಮ್ಮ ಕೈಗಳನ್ನು ಚಾಚಿಕೊಂಡು 'ನಿಮ್ಮ ಪ್ರಾಣಗಳನ್ನು ಹೊರಬಿಡಿರಿ. ನೀವು ಅಲ್ಲಾಹನ ನಾಮದಲ್ಲಿ ಸುಳ್ಳು ಹೇಳುತ್ತಾ ಅಹಂಭಾವದಿಂದ ಅವನ ದೃಷ್ಟಾಂತಗಳನ್ನು ಅಲ್ಲಗಳೆದ ಕಾರಣದಿಂದ ಇಂದು ಅಪಮಾನದ ಶಿಕ್ಷೆಯನ್ನು ನಿಮಗೆ ನೀಡಲಾಗುವುದು' ಎಂದು ಹೇಳುವ ಸನ್ನಿವೇಶವನ್ನು ನೀನು ಕಾಣುವುದಾದರೆ! (ಅದು ಭಯಾನಕವಾದೊಂದು ದೃಶ್ಯವಾಗಿರುವುದು.)

وَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا أَوْ قَالَ أُوحِيَ إِلَيَّ وَلَمْ يُوحَ إِلَيْهِ شَيْءٌ وَمَن قَالَ سَأُنزِلُ مِثْلَ مَا أَنزَلَ اللَّهُ ۗ وَلَوْ تَرَىٰ إِذِ الظَّالِمُونَ فِي غَمَرَاتِ الْمَوْتِ وَالْمَلَائِكَةُ بَاسِطُو أَيْدِيهِمْ أَخْرِجُوا أَنفُسَكُمُ ۖ الْيَوْمَ تُجْزَوْنَ عَذَابَ الْهُونِ بِمَا كُنتُمْ تَقُولُونَ عَلَى اللَّهِ غَيْرَ الْحَقِّ وَكُنتُمْ عَنْ آيَاتِهِ تَسْتَكْبِرُونَ ﴿٩٤﴾

**95.** (ಅಲ್ಲಾಹನು ಹೇಳುವನು:) ನಾವು ನಿಮ್ಮನ್ನು ಮೊದಲು ಸೃಷ್ಟಿಸಿದ ಹಾಗೆಯೇ (ಈಗ) ನೀವು ಏಕಾಂಗಿಗಳಾಗಿ ನಮ್ಮ ಬಳಿಗೆ ಬಂದಿದ್ದೀರಿ. ನಾವು ನಿಮಗೆ ಅನುಗ್ರಹವಾಗಿ ನೀಡಿದುದನ್ನೆಲ್ಲ ನೀವು ನಿಮ್ಮ ಹಿಂದೆ ಬಿಟ್ಟು ಬಂದಿದ್ದೀರಿ. ನಿಮ್ಮ ವಿಚಾರದಲ್ಲಿ ಅಲ್ಲಾಹನ ಸಹಭಾಗಿಗಳೆಂದು ನೀವು ಹೇಳುತ್ತಿದ್ದ ನಿಮ್ಮ ಶಿಫಾರಸುಗಾರರನ್ನು (ಈಗ) ನಾವು ನಿಮ್ಮೊಂದಿಗೆ ಕಾಣುವುದಿಲ್ಲವಲ್ಲಾ! ನಿಮ್ಮ ಪರಸ್ಪರ ಸಂಬಂಧ (ಈಗ)

وَلَقَدْ جِئْتُمُونَا فُرَادَىٰ كَمَا خَلَقْنَاكُمْ أَوَّلَ مَرَّةٍ وَتَرَكْتُم مَّا خَوَّلْنَاكُمْ وَرَاءَ ظُهُورِكُمْ ۖ وَمَا نَرَىٰ مَعَكُمْ شُفَعَاءَكُمُ الَّذِينَ زَعَمْتُمْ أَنَّهُمْ فِيكُمْ شُرَكَاءُ ۚ لَقَد تَّقَطَّعَ بَيْنَكُمْ وَضَلَّ عَنكُم مَّا

كُنْتُمْ تَزْعُمُونَ ﴿٩٤﴾

ವಿಚ್ಛೇದಿಸಲ್ಪಟ್ಟಿದೆ. ನೀವು ಹೇಳುತ್ತಿದ್ದುದೆಲ್ಲ ನಿಮ್ಮಿಂದ ಅಗಲಿ ಹೋಗಿವೆ.

إِنَّ اللَّهَ فَالِقُ الْحَبِّ وَالنَّوَىٰ ۖ يُخْرِجُ الْحَيَّ مِنَ الْمَيِّتِ وَمُخْرِجُ الْمَيِّتِ مِنَ الْحَيِّ ۚ ذَٰلِكُمُ اللَّهُ ۖ فَأَنَّىٰ تُؤْفَكُونَ ﴿٩٥﴾

**96.** ಖಂಡಿತವಾಗಿಯೂ ಅಲ್ಲಾಹನು ಧಾನ್ಯಗಳನ್ನೂ ಗೊರಟೆಗಳನ್ನೂ (ಮೊಳಕೆಯೊಡೆಯಲಿಕ್ಕಾಗಿ) ಸೀಳುತ್ತಾನೆ. ನಿರ್ಜೀವಿಗಳಿಂದ ಅವನು ಸಜೀವಿಗಳನ್ನು ಹೊರಡಿಸುತ್ತಾನೆ. ಸಜೀವಿಗಳಿಂದ ನಿರ್ಜೀವಿಗಳನ್ನೂ ಅವನು ಹೊರತರುತ್ತಾನೆ. ಅವನೇ ಅಲ್ಲಾಹನು. ಮತ್ತೆ ನೀವು ಎಲ್ಲಿಗೆ ಹಿಂತಿರುಗಿಸಲ್ಪಡುವಿರಿ?

فَالِقُ الْإِصْبَاحِ وَجَعَلَ اللَّيْلَ سَكَنًا وَالشَّمْسَ وَالْقَمَرَ حُسْبَانًا ۚ ذَٰلِكَ تَقْدِيرُ الْعَزِيزِ الْعَلِيمِ ﴿٩٦﴾

**97.** (ರಾತ್ರಿಯ ಅಂಧಕಾರದಿಂದ) ಬೆಳಕು ಹರಿದು ಬರುವಂತೆ ಅವನು ಮಾಡುತ್ತಾನೆ. ವಿಶ್ರಾಂತಿಗಾಗಿ ರಾತ್ರಿಯನ್ನೂ ಕಾಲಗಣನೆಗಾಗಿ ಸೂರ್ಯ-ಚಂದ್ರರನ್ನೂ ಅವನು ಮಾಡಿರುವನು. ಅದು ಪ್ರತಾಪಶಾಲಿಯೂ ಸರ್ವಜ್ಞನೂ ಆದ ಅಲ್ಲಾಹನ ಯೋಜನೆಯಾಗಿದೆ.

وَهُوَ الَّذِي جَعَلَ لَكُمُ النُّجُومَ لِتَهْتَدُوا بِهَا فِي ظُلُمَاتِ الْبَرِّ وَالْبَحْرِ ۗ قَدْ فَصَّلْنَا الْآيَاتِ لِقَوْمٍ يَعْلَمُونَ ﴿٩٧﴾

**98.** ನೆಲ ಮತ್ತು ಸಮುದ್ರದ ಅಂಧಕಾರದಲ್ಲಿ ನಿಮಗೆ ದಿಕ್ಕು ತಿಳಿಯಲಿಕ್ಕಾಗಿ ನಕ್ಷತ್ರಗಳನ್ನು ಅವನು ನಿಮಗಾಗಿ ಉಂಟುಮಾಡಿರುವನು. ಸಂಗತಿಗಳನ್ನು ತಿಳಿದುಕೊಳ್ಳುವ ಜನರಿಗಾಗಿ ನಾವು ದೃಷ್ಟಾಂತಗಳನ್ನು ವಿವರಿಸಿಕೊಟ್ಟಿದ್ದೇವೆ.

وَهُوَ الَّذِي أَنْشَأَكُمْ مِنْ نَفْسٍ وَاحِدَةٍ فَمُسْتَقَرٌّ وَمُسْتَوْدَعٌ ۗ قَدْ فَصَّلْنَا الْآيَاتِ لِقَوْمٍ يَفْقَهُونَ ﴿٩٨﴾

**99.** ನಿಮ್ಮನ್ನು ಒಂದೇ ಜೀವಾಳದಿಂದ ಸೃಷ್ಟಿಸಿದವನೂ ಅವನೇ ಆಗಿದ್ದಾನೆ. ಒಂದು ತಾತ್ಕಾಲಿಕ ವಾಸಸ್ಥಳವೂ ಒಂದು ದೀರ್ಘಕಾಲಿಕ ವಾಸಸ್ಥಳವೂ ನಿಮಗಿದೆ.[224] ಮನವರಿಕೆ ಮಾಡುವ ಜನರಿಗೆ ನಾವು ದೃಷ್ಟಾಂತಗಳನ್ನು ವಿವರಿಸಿ ಕೊಟ್ಟಿದ್ದೇವೆ.

وَهُوَ الَّذِي أَنْزَلَ مِنَ السَّمَاءِ مَاءً فَأَخْرَجْنَا بِهِ نَبَاتَ كُلِّ شَيْءٍ فَأَخْرَجْنَا مِنْهُ خَضِرًا نُخْرِجُ مِنْهُ حَبًّا مُتَرَاكِبًا

**100.** ಅವನೇ ಆಕಾಶದಿಂದ ಮಳೆ ಸುರಿಸುತ್ತಾನೆ. ಹಾಗೆ, ಆ ಮೂಲಕ ಎಲ್ಲ ಸಸ್ಯಗಳು ಮೊಳಕೆಯೊಡೆಯುವಂತೆ ಮಾಡುತ್ತೇವೆ. ಆ ಬಳಿಕ ಅದರಿಂದ ಹಸಿರು ಹಸಿರಾದ ಹೊಲಗಳನ್ನು ಉಂಟುಮಾಡುತ್ತೇವೆ.

224. 'ಖಬರ್' ತಾತ್ಕಾಲಿಕ ವಾಸಸ್ಥಳವೂ ಪುನರುತ್ಥಾನದ ಬಳಿಕದ ಜೀವನ ದೀರ್ಘಕಾಲಿಕ ವಾಸಸ್ಥಳವೂ ಆಗಿದೆ. ಅಥವಾ ಇಹಲೋಕ ಜೀವನ ತಾತ್ಕಾಲಿಕವೂ ಮರಣಾನಂತರ ಜೀವನ ದೀರ್ಘಕಾಲಿಕವೂ ಆಗಿದೆ. ಈ ಎರಡು ಅರ್ಥಗಳೂ ಸರಿ.





وَمِنَ النَّخْلِ مِنْ طَلْعِهَا قِنْوَانٌ دَانِيَةٌ وَجَنَّاتٍ مِنْ أَعْنَابٍ وَالزَّيْتُونَ وَالرُّمَّانَ مُشْتَبِهًا وَغَيْرَ مُتَشَابِهٍ ۗ انْظُرُوا إِلَىٰ ثَمَرِهِ إِذَا أَثْمَرَ وَيَنْعِهِ ۚ إِنَّ فِي ذَٰلِكُمْ لَآيَاتٍ لِقَوْمٍ يُؤْمِنُونَ ﴿٩٩﴾

ಅದರಿಂದ ನಾವು ಹುಲುಸಾದ ಧಾನ್ಯದ ತೆನೆಗಳನ್ನು ಹೊರಡಿಸುತ್ತೇವೆ. ಖರ್ಜೂರದ ಮರದಿಂದ - ಅದರ ಕೋಶದಿಂದ ಕೆಳಭಾಗಕ್ಕೆ - ತೂಗಾಡುತ್ತಿರುವ ಗೊಂಚಲುಗಳನ್ನು ನಾವು ಉಂಟುಮಾಡುತ್ತೇವೆ. (ಅದೇ ಪ್ರಕಾರ) ದ್ರಾಕ್ಷೆ, ಓಲಿವ್ ಮತ್ತು ದಾಳಿಂಬೆ ತೋಟಗಳನ್ನು - ಹೋಲಿಕೆ ಇರುವವುಗಳನ್ನೂ ಹೋಲಿಕೆ ಇಲ್ಲದವುಗಳನ್ನೂ- ನಾವು ಉಂಟುಮಾಡುತ್ತೇವೆ. ನೀವು ಅವುಗಳ ಫಲಗಳನ್ನು ಅವು ಫಲಭರಿತವಾಗುವಾಗ ಮತ್ತು ಅವು ಪಕ್ವವಾಗುವಾಗ ನೋಡಿರಿ. ವಿಶ್ವಾಸಿಗಳಾದ ಜನರಿಗೆ ಖಂಡಿತವಾಗಿಯೂ ಇದರಲ್ಲಿ ಹಲವು ದೃಷ್ಟಾಂತಗಳಿವೆ.

وَجَعَلُوا لِلَّهِ شُرَكَاءَ الْجِنَّ وَخَلَقَهُمْ ۖ وَخَرَقُوا لَهُ بَنِينَ وَبَنَاتٍ بِغَيْرِ عِلْمٍ ۚ سُبْحَانَهُ وَتَعَالَىٰ عَمَّا يَصِفُونَ ﴿١٠٠﴾

**101.** ಅವರು ಅಲ್ಲಾಹನಿಗೆ ಜಿನ್ನ್‌ಗಳನ್ನು ಸಹಭಾಗಿಗಳನ್ನಾಗಿಸಿದರು. ಆದರೆ ಅವನೇ ಅವರನ್ನು ಸೃಷ್ಟಿಸಿದ್ದಾನೆ. ಅವರು ಏನೂ ತಿಳುವಳಿಕೆಯಿಲ್ಲದೆ ಅವನಿಗೆ ಪುತ್ರರೂ ಪುತ್ರಿಯರೂ ಇದ್ದಾರೆಂದು ಹೇಳುತ್ತಾರೆ. ಅವನು ಪರಿಶುದ್ಧನು ಹಾಗೂ ಅವರು ವರ್ಣಿಸುವುದಕ್ಕಿಂತೆಲ್ಲ ಅವನು ಉನ್ನತನಾಗಿದ್ದಾನೆ.

بَدِيعُ السَّمَاوَاتِ وَالْأَرْضِ ۖ أَنَّىٰ يَكُونُ لَهُ وَلَدٌ وَلَمْ تَكُنْ لَهُ صَاحِبَةٌ ۖ وَخَلَقَ كُلَّ شَيْءٍ ۖ وَهُوَ بِكُلِّ شَيْءٍ عَلِيمٌ ﴿١٠١﴾

**102.** (ಅವನು) ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನಾಗಿದ್ದಾನೆ. ಅವನಿಗೆ ಸಹಧರ್ಮಿಣಿ ಇಲ್ಲದಿರುವಾಗ ಸಂತಾನವುಂಟಾಗುವುದಾದರೂ ಹೇಗೆ? ಎಲ್ಲವನ್ನೂ ಸೃಷ್ಟಿಸಿದವನು ಅವನೇ ಆಗಿದ್ದಾನೆ. ಪ್ರತಿಯೊಂದರ ಬಗ್ಗೆ ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.

ذَٰلِكُمُ اللَّهُ رَبُّكُمْ ۖ لَا إِلَٰهَ إِلَّا هُوَ ۖ خَالِقُ كُلِّ شَيْءٍ فَاعْبُدُوهُ ۚ وَهُوَ عَلَىٰ كُلِّ شَيْءٍ وَكِيلٌ ﴿١٠٢﴾

**103.** ಅವನೇ ನಿಮ್ಮ ಪ್ರಭುವಾದ ಅಲ್ಲಾಹನು. ಅವನ ಹೊರತು ಬೇರೆ ಆರಾಧ್ಯನಿಲ್ಲ. ಅವನೇ ಎಲ್ಲ ವಸ್ತುಗಳ ಸೃಷ್ಟಿಕರ್ತ. ಆದ್ದರಿಂದ ಅವನನ್ನು ನೀವು ಆರಾಧಿಸಿರಿ. ಅವನು ಸಕಲ ವಸ್ತುಗಳ ರಕ್ಷಕನಾಗಿದ್ದಾನೆ.

لَا تُدْرِكُهُ الْأَبْصَارُ وَهُوَ يُدْرِكُ الْأَبْصَارَ ۖ وَهُوَ اللَّطِيفُ الْخَبِيرُ ﴿١٠٣﴾

**104.** ದೃಷ್ಟಿಗಳು ಅವನನ್ನು ತಲಪಲಾರವು. ಆದರೆ ಅವನು ದೃಷ್ಟಿಗಳನ್ನು ತಲಪುತ್ತಾನೆ.[225] ಅವನು ಅತಿಸೂಕ್ಷ್ಮನೂ ಎಲ್ಲ ಬಲ್ಲವನೂ ಆಗಿರುತ್ತಾನೆ.

225. ಮನುಷ್ಯನಿಗೆ ತನ್ನ ತಿಳುವಳಿಕೆಯ ಶಕ್ತಿಯಿಂದ ಅವನನ್ನು ಕಾಣಲು ಸಾಧ್ಯವಿಲ್ಲ. ಆದರೆ ಅಲ್ಲಾಹನು ತನ್ನ ಅನುಗ್ರಹದಿಂದ ಮನುಷ್ಯನ ಬಳಿಗೆ ಬಂದು ಪ್ರಕಟಗೊಳ್ಳುತ್ತಾನೆ. ಹಾಗೆ ಮನುಷ್ಯನಿಗೆ ಅಲ್ಲಾಹನನ್ನು ಕಾಣಲು ಸಾಧ್ಯವಾಗುತ್ತದೆ.

**105.** ನಿಮ್ಮ ಪ್ರಭುವಿನಿಂದ ನಿಮಗೆ ಸಾಕ್ಷ್ಯಗಳು ಬಂದಿರುತ್ತವೆ. ಆದ್ದರಿಂದ ಯಾರಾದರೂ ಅದನ್ನು ಕಂಡು ಮನವರಿಕೆ ಮಾಡುವುದಾದರೆ ಅದರ ಗುಣ ಅವನಿಗಿದೆ. ಯಾರಾದರೂ ಅದನ್ನು ಕಾಣದಂತೆ ಕುರುಡು ನಟಿಸಿದರೆ ಅದರ ದೋಷ ಅವನಿಗಿದೆ. 'ನಾನು ನಿಮ್ಮ ಕಾವಲುಗಾರನಲ್ಲ' [226] (ಎಂದು ನೀನು ಹೇಳು.)

قَدْ جَآءَكُمْ بَصَآئِرُ مِنْ رَّبِّكُمْ ۚ فَمَنْ اَبْصَرَ فَلِنَفْسِهٖ ۚ وَمَنْ عَمِيَ فَعَلَيْهَا ۚ وَمَآ اَنَا عَلَيْكُمْ بِحَفِيْظٍ ﴿١٠٥﴾

**106.** ಇದೇ ಪ್ರಕಾರ (ಸತ್ಯ ಅವರಿಗೆ ಗ್ರಾಹ್ಯವಾಗಲಿಕ್ಕೆ) ನಾವು ದೃಷ್ಟಾಂತಗಳನ್ನು ವಿವಿಧ ರೂಪಗಳಲ್ಲಿ ಪ್ರಕಟಪಡಿಸುತ್ತೇವೆ. ಆದರೆ 'ನೀನು ಚೆನ್ನಾಗಿ ಕಲಿತಿದ್ದೀ' ಎಂದು ಅವರು ಉದ್ಗರಿಸುತ್ತಾರೆ. ಮನವರಿಕೆ ಮಾಡುವವರಿಗೆ ಅದನ್ನು ವಿವರಿಸಲಿಕ್ಕಾಗಿ ಸಹ (ನಾವು ದೃಷ್ಟಾಂತಗಳನ್ನು ಪ್ರಕಟಪಡಿಸುತ್ತೇವೆ).

وَكَذٰلِكَ نُصَرِّفُ الْاٰيٰتِ وَلِيَقُوْلُوْا دَرَسْتَ وَلِنُبَيِّنَهٗ لِقَوْمٍ يَّعْلَمُوْنَ ﴿١٠٦﴾

**107.** ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣಗೊಂಡುದನ್ನು ಅನುಸರಿಸು. ಅವನ ಹೊರತು ಬೇರೆ ಆರಾಧ್ಯನಿಲ್ಲ. ಬಹುದೇವಾರಾಧಕರಿಂದ ನೀನು ಮುಖ ತಿರುಗಿಸು.

اِتَّبِعْ مَآ اُوْحِيَ اِلَيْكَ مِنْ رَّبِّكَ ۚ لَآ اِلٰهَ اِلَّا هُوَ ۚ وَاَعْرِضْ عَنِ الْمُشْرِكِيْنَ ﴿١٠٧﴾

**108.** ಅಲ್ಲಾಹನು ಇಚ್ಛಿಸುತ್ತಿದ್ದರೆ (ತನ್ನ ಇಚ್ಛೆಯನ್ನು ಬಲವಂತವಾಗಿ ಹೇರುತ್ತಿದ್ದರೆ) ಅವರು ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುತ್ತಿರಲಿಲ್ಲ. ನಾವು ನಿನ್ನನ್ನು ಅವರ ಸಂರಕ್ಷಕನನ್ನಾಗಿ ಮಾಡಲಿಲ್ಲ. ನೀನು ಅವರ ಕಾರ್ಯನಿರ್ವಾಹಕನೂ ಅಲ್ಲ.

وَلَوْ شَآءَ اللّٰهُ مَآ اَشْرَكُوْا ۗ وَمَا جَعَلْنٰكَ عَلَيْهِمْ حَفِيْظًا ۚ وَمَآ اَنْتَ عَلَيْهِمْ بِوَكِيْلٍ ﴿١٠٨﴾

**109.** ಅಲ್ಲಾಹನ ಹೊರತು ಅವರು ಕರೆದು ಪ್ರಾರ್ಥಿಸುವವರನ್ನು ನೀವು ಹೀಯಾಳಿಸಬೇಡಿರಿ. ಆಗ ವಿರೋಧದಿಂದ ಅವರು ಸಹ ತಿಳುವಳಿಕೆಯಿಲ್ಲದೆ ಅಲ್ಲಾಹನನ್ನು ನಿಂದಿಸುವರು. ಹೀಗೆ ನಾವು ಪ್ರತಿಯೊಂದು ಸಮುದಾಯದವರಿಗೂ ಅವರ

وَلَا تَسُبُّوا الَّذِيْنَ يَدْعُوْنَ مِنْ دُوْنِ اللّٰهِ فَيَسُبُّوا اللّٰهَ عَدْوًاۢ بِغَيْرِ عِلْمٍ ۗ كَذٰلِكَ زَيَّنَّا لِكُلِّ اُمَّةٍ عَمَلَهُمْ ۪ ثُمَّ اِلٰى

226. ನಿಮಗೆ ಬಂದೆರಗುವ ಶಿಕ್ಷೆಯಿಂದ ನಿಮ್ಮನ್ನು ರಕ್ಷಿಸಲಿಕ್ಕೆ ನನಗೆ ಸಾಧ್ಯವಿಲ್ಲ; ಅಥವಾ ನಿಮ್ಮ ದುಷ್ಕೃತ್ಯಗಳಿಂದ ನಿಮ್ಮನ್ನು ಬಲಪ್ರಯೋಗಿಸಿ ರಕ್ಷಿಸಲಿಕ್ಕೆ ಸಾಧ್ಯವಿಲ್ಲ ಎಂದು ತಾತ್ಪರ್ಯ.





ಕೃತ್ಯವನ್ನು ಚಲೋದಾಗಿ ತೋರಿಸಿಕೊಟ್ಟಿದ್ದೇವೆ.[227] ಆ ಮೇಲೆ ಅವರ ಪ್ರಭುವಿನ ಬಳಿಗೆಯೇ ಅವರ ಮರಳಿಕೆಯಾಗಿದೆ. ಆಗ ಅವರ ಕೃತ್ಯಗಳ ಬಗ್ಗೆ ಅವರಿಗೆ ಅವನು ವಿವರಿಸಿ ಕೊಡುವನು.

رَبِّهِمْ مَّرْجِعُهُمْ فَيُنَبِّئُهُمْ بِمَا كَانُوْا يَعْمَلُوْنَ ﴿١٠٩﴾

**110.** ತಮಗೆ ಒಂದು ದೃಷ್ಟಾಂತ ಕಂಡು ಬಂದರೆ ಖಂಡಿತವಾಗಿಯೂ ತಾವು ಅದರಲ್ಲಿ ವಿಶ್ವಾಸವಿಡುವೆವೆಂದು ಅಲ್ಲಾಹನ ಹೆಸರಿನಲ್ಲಿ ಅವರು ದೃಢ ಪ್ರತಿಜ್ಞೆ ಮಾಡುತ್ತಾರೆ. ಹೇಳು: 'ದೃಷ್ಟಾಂತಗಳು ಅಲ್ಲಾಹನ ಅಧೀನದಲ್ಲಿ ಮಾತ್ರ ಇವೆ.' (ವಿಶ್ವಾಸಿಗಳೇ,) ಅವು ಕಂಡು ಬಂದರೆ (ಕೂಡ) ಅವರು ನಂಬಲಾರರೆಂಬ ವಿಚಾರ ನಿಮಗೆ ಏನನ್ನು ಮನಗಾಣಿಸಿಕೊಡುತ್ತದೆ?

وَاَقْسَمُوْا بِاللّٰهِ جَهْدَ اَيْمَانِهِمْ لَئِنْ جَآءَتْهُمْ اٰيَةٌ لَّيُؤْمِنُنَّ بِهَا ۚ قُلْ اِنَّمَا الْاٰيٰتُ عِنْدَ اللّٰهِ وَمَا يُشْعِرُكُمْ ۙ اَنَّهَآ اِذَا جَآءَتْ لَا يُؤْمِنُوْنَ ﴿١١٠﴾

**111.** (ದೃಷ್ಟಾಂತಗಳು ಕಂಡು ಬರುವುದಕ್ಕೆ ಪೂರ್ವದ) ಮೊದಲ ಘಟ್ಟದಲ್ಲಿ ಅವರು ತಿರಸ್ಕರಿಸುತ್ತಿದ್ದಾಗ ಇದ್ದ ಹಾಗೆ ಅವರ ಹೃದಯಗಳನ್ನೂ ಕಣ್ಣುಗಳನ್ನೂ ನಾವು ತಿರುಗಿಸಿಬಿಡುವೆವು. ಅವರು ತಮ್ಮ ದುಷ್ಕೃತ್ಯದಲ್ಲಿ ಅಂಧರಾಗಿ ಅಲೆದಾಡುವಂತೆ ನಾವು ಅವರನ್ನು ಬಿಟ್ಟುಬಿಡುವೆವು.

وَنُقَلِّبُ اَفْـِٕدَتَهُمْ وَاَبْصَارَهُمْ كَمَا لَمْ يُؤْمِنُوْا بِهٖٓ اَوَّلَ مَرَّةٍ وَّنَذَرُهُمْ فِيْ طُغْيَانِهِمْ يَعْمَهُوْنَ ﴿١١١﴾

**112.** ನಾವು ಅವರ ಬಳಿಗೆ ದೇವದೂತರನ್ನು ಕಳುಹಿಸಿದ್ದರೂ ಮೃತಪಟ್ಟವರು (ಎದ್ದು ಬಂದು) ಅವರೊಡನೆ ಮಾತನಾಡಿದ್ದರೂ ನಾವು ಎಲ್ಲ ವಸ್ತುಗಳನ್ನು ಅವರ ಮುಂದೆ ಒಟ್ಟುಗೂಡಿಸಿದ್ದರೂ ಕೂಡ ಅಲ್ಲಾಹನು ಇಚ್ಛಿಸಿದರೆ ಹೊರತು ಅವರು ನಂಬುತ್ತಿರಲಿಲ್ಲ. ಆದರೆ ಅವರಲ್ಲಿ ಹೆಚ್ಚಿನವರು ಅವಿವೇಕದಿಂದ ವರ್ತಿಸುತ್ತಾರೆ.

وَلَوْ اَنَّنَا نَزَّلْنَآ اِلَيْهِمُ الْمَلٰٓئِكَةَ وَكَلَّمَهُمُ الْمَوْتٰى وَحَشَرْنَا عَلَيْهِمْ كُلَّ شَيْءٍ قُبُلًا مَّا كَانُوْا لِيُؤْمِنُوْٓا اِلَّآ اَنْ يَّشَآءَ اللّٰهُ وَلٰكِنَّ اَكْثَرَهُمْ يَجْهَلُوْنَ ﴿١١٢﴾

**113.** ಇದೇ ಪ್ರಕಾರ ನಾವು ಪ್ರತಿಯೊಬ್ಬ ಪ್ರವಾದಿಗೆ 'ಇನ್ಸ್' ಮತ್ತು[227A] 'ಜಿನ್ನ್' ಗಳಿಂದ ದುರ್ಜನರರನ್ನು

وَكَذٰلِكَ جَعَلْنَا لِكُلِّ نَبِيٍّ عَدُوًّا

227. ಒಂದು ಕೃತ್ಯವನ್ನು ಸದಾ ಮಾಡುತ್ತಿರುವವರಿಗೆ ಆ ಕೃತ್ಯ ಚೆನ್ನಾಗಿ ತೋರುತ್ತದೆ. ಇದೊಂದು ನಿಸರ್ಗ ನಿಯಮವಾಗಿದೆ. ಬಹುದೇವಾರಾಧನೆ ಮಾಡುವವರಿಗೆ ಅದರ ಮೇಲೆ ಮಮತೆ ಹೆಚ್ಚುತ್ತಾ ಹೋಗುತ್ತದೆ. ಬಹು ದೇವಾರಾಧನೆಗೆ ವಿರುದ್ಧವಾದ ಏಕದೇವಾರಾಧನೆಯ ಬೋಧನೆಗಳನ್ನು ಅವರು ಸಹಿಸಲಾರರು. ಕೋಪವನ್ನು ತೋರ್ಪಡಿಸಿಕೊಂಡು ಮತ್ತು ಅಲ್ಲಾಹನನ್ನು ನಿಂದಿಸುತ್ತಾ ಅವರು ಅದಕ್ಕೆದುರಾಗಿ ಪ್ರತಿಕ್ರಿಯಿಸುತ್ತಾರೆ.

ಶತ್ರುಗಳನ್ನಾಗಿ ಮಾಡಿದ್ದೇವೆ. ವಂಚಿಸಲಿಕ್ಕಾಗಿ ಅವರು ಪರಸ್ಪರ ಮಧುರ ಮಾತುಗಳನ್ನಾಡುತ್ತಾರೆ. ನಿನ್ನ ಪ್ರಭು ಇಚ್ಛಿಸಿರುತ್ತಿದ್ದರೆ ಅವರು ಹಾಗೆ ಮಾಡುತ್ತಿರಲಿಲ್ಲ. ಆದ್ದರಿಂದ ನೀನು ಅವರನ್ನೂ ಅವರ ಸುಳ್ಳಾರೋಪಗಳನ್ನೂ ನಿರ್ಲಕ್ಷಿಸು.

شَيٰطِيْنَ الْاِنْسِ وَ الْجِنِّ يُوْحِيْ بَعْضُهُمْ اِلٰى بَعْضٍ زُخْرُفَ الْقَوْلِ غُرُوْرًا ؕ وَلَوْ شَآءَ رَبُّكَ مَا فَعَلُوْهُ فَذَرْهُمْ وَمَا يَفْتَرُوْنَ ﴿١١٣﴾

**114.** **ಪರಲೋಕ ಜೀವನದಲ್ಲಿ ನಂಬಿಕೆ ಇಲ್ಲದವರ ಹೃದಯಗಳು ಅದರೆಡೆಗೆ ಸೆಳೆಯಲ್ಪಡಲಿಕ್ಕಾಗಿಯೂ ಅವರು ಅದರಲ್ಲಿ ತೃಪ್ತರಾಗಲಿಕ್ಕಾಗಿಯೂ ಅವರು ಸಂಪಾದಿಸುತ್ತಿರುವ** (ಕೆಡುಕುಗಳನ್ನು ಮುಂದೆಯೂ) **ಸಂಪಾದಿಸಲಿಕ್ಕಾಗಿಯೂ** (ಆ ದುಶ್ಶಕ್ತಿಗಳು ದುರ್ಬೋಧನೆ ಮಾಡುತ್ತಿರುತ್ತವೆ.)

وَلِتَصْغٰۤى اِلَيْهِ اَفْـِٕدَةُ الَّذِيْنَ لَا يُؤْمِنُوْنَ بِالْاٰخِرَةِ وَلِيَرْضَوْهُ وَلِيَقْتَرِفُوْا مَا هُمْ مُّقْتَرِفُوْنَ ﴿١١٤﴾

**115.** (ಹೇಳು:) **'ಅಲ್ಲಾಹನ ಹೊರತು ಬೇರೆ ಯಾರನ್ನಾದರೂ ನ್ಯಾಯತೀರ್ಮಾನಕ್ಕಾಗಿ ನಾನು ಮೊರೆಹೊಗಬೇಕೆ? ಅವನಾದರೋ, ಸುಸ್ಪಷ್ಟವಾಗಿ ವಿವರಿಸಲಾದ ರೀತಿಯಲ್ಲಿ** (ಈ) **ಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿದ್ದಾನೆ.' ಅದು ನಿನ್ನ ಪ್ರಭುವಿನಿಂದ ಸತ್ಯದಿಂದೊಡಗೂಡಿ ಅವತೀರ್ಣಗೊಂಡಿದೆ ಎಂದು ನಾವು ಯಾರಿಗೆ** (ಮೊದಲು) **ಗ್ರಂಥ ನೀಡಿದ್ದೇವೋ ಅವರು ತಿಳಿಯುತ್ತಾರೆ. ಆದ್ದರಿಂದ ನೀನು ಸಂಶಯಪಡುವವರ ಪೈಕಿಯವನಾಗಬೇಡ.**

اَفَغَيْرَ اللّٰهِ اَبْتَغِيْ حَكَمًا وَّ هُوَ الَّذِيْۤ اَنْزَلَ اِلَيْكُمُ الْكِتٰبَ مُفَصَّلًا ؕ وَالَّذِيْنَ اٰتَيْنٰهُمُ الْكِتٰبَ يَعْلَمُوْنَ اَنَّهٗ مُنَزَّلٌ مِّنْ رَّبِّكَ بِالْحَقِّ فَلَا تَكُوْنَنَّ مِنَ الْمُمْتَرِيْنَ ﴿١١٥﴾

**116.** **ನಿನ್ನ ಪ್ರಭುವಿನ ವಚನ ಸತ್ಯ ಮತ್ತು ನ್ಯಾಯದಿಂದ ಪರಿಪೂರ್ಣಗೊಳಿಸಲ್ಪಟ್ಟಿದೆ. ಅವನ ಮಾತನ್ನು ಬದಲಾಯಿಸುವವರು ಯಾರೂ ಇಲ್ಲ. ಅವನು ಎಲ್ಲವನ್ನು ಕೇಳುವವನೂ ಎಲ್ಲವನ್ನು ತಿಳಿಯುವವನೂ ಆಗಿದ್ದಾನೆ.**

وَتَمَّتْ كَلِمَتُ رَبِّكَ صِدْقًا وَّعَدْلًا ؕ لَا مُبَدِّلَ لِكَلِمٰتِهٖ ۚ وَهُوَ السَّمِيْعُ الْعَلِيْمُ ﴿١١٦﴾

227A. 'ಜಿನ್ನ್' ಎಂಬುದಕ್ಕೆ ವಿಶಾಲವಾದ ಅರ್ಥವ್ಯಾಪ್ತಿ ಇದೆ. 'ಜಿನ್ನ್' ಎಂಬುದರ ಶಬ್ದಾರ್ಥ ಮರೆಯಲ್ಲಿರುವವರು ಎಂದಾಗಿದೆ. 'ಜಿನ್ನ್' ಸಮೂಹ ಅಂದರೆ 'ದೊಡ್ಡ ದೊಡ್ಡ ಜನರು' ಎಂದು ತಾತ್ಪರ್ಯ. ಅವರು ಪ್ರವೇಶದ್ವಾರಗಳ ಮತ್ತು ಕಾವಲು ಭಟರ ಮರೆಯಲ್ಲಿದ್ದುಕೊಂಡು ಕಾರ್ಯ ಸಾಧಿಸುತ್ತಾರೆ.
'ಇನ್ಸ್' ಎಂಬ ಶಬ್ದಕ್ಕೆ ಇಲ್ಲಿಸಾಮಾನ್ಯ ಜನರು ಎಂದು ಅರ್ಥ.





**117.** **ಭೂಮಿಯಲ್ಲಿರುವ ಬಹುಸಂಖ್ಯಾತರನ್ನು ನೀನು ಅನುಸರಿಸಿದರೆ ಅಲ್ಲಾಹನ ಮಾರ್ಗದಿಂದ ಅವರು ನಿನ್ನನ್ನು ವಿಮುಖಗೊಳಿಸುವರು. ಅವರು ಊಹಾಪೋಹ ಹೊರತು ಬೇರೇನನ್ನೂ ಅನುಸರಿಸುವುದಿಲ್ಲ. ಕಪೋಲ ಕಲ್ಪಿತ ಮಾತುಗಳನ್ನು ಮಾತ್ರವೇ ಅವರು ಆಡುತ್ತಾರೆ.**

وَاِنْ تُطِعْ اَكْثَرَ مَنْ فِي الْاَرْضِ يُضِلُّوْكَ عَنْ سَبِيْلِ اللّٰهِ ؕ اِنْ يَّتَّبِعُوْنَ اِلَّا الظَّنَّ وَاِنْ هُمْ اِلَّا يَخْرُصُوْنَ ﴿١١٧﴾

**118.** **ತನ್ನ ಮಾರ್ಗದಿಂದ ವ್ಯತಿಕ್ರಮಿಸಿದವರನ್ನು ನಿಶ್ಚಯವಾಗಿಯೂ ನಿನ್ನ ಪ್ರಭು ಚೆನ್ನಾಗಿ ಬಲ್ಲವನಾಗಿದ್ದಾನೆ. ಸತ್ಪಥವನ್ನು ಪಡೆದವರನ್ನೂ ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.**

اِنَّ رَبَّكَ هُوَ اَعْلَمُ مَنْ يَّضِلُّ عَنْ سَبِيْلِهٖ ۚ وَهُوَ اَعْلَمُ بِالْمُهْتَدِيْنَ ﴿١١٨﴾

**119.** **ಆದ್ದರಿಂದ ನೀವು ಅಲ್ಲಾಹನ ವಚನಗಳಲ್ಲಿ ವಿಶ್ವಾಸವುಳ್ಳವರಾದರೆ, ಯಾವುದರ ಮೇಲೆ ಅಲ್ಲಾಹನ ನಾಮ ಉಚ್ಚರಿಸಲಾಗಿದೆಯೋ, ಅದರಿಂದ ಭಕ್ಷಿಸಿರಿ.**

فَكُلُوْا مِمَّا ذُكِرَ اسْمُ اللّٰهِ عَلَيْهِ اِنْ كُنْتُمْ بِاٰيٰتِهٖ مُؤْمِنِيْنَ ﴿١١٩﴾

**120.** **ಅಲ್ಲಾಹನ ನಾಮ ಯಾವುದರ ಮೇಲೆ ಉಚ್ಚರಿಸಲಾಗಿದೆಯೋ ಅದನ್ನು ತಿನ್ನದಿರಲಿಕ್ಕೆ ನಿಮಗೇನಾಗಿದೆ? ನೀವು ನಿರ್ಬಂಧಕ್ಕೊಳಗಾಗುವ ಪರಿಸ್ಥಿತಿಯನ್ನು ಹೊರತುಪಡಿಸಿ ನಿಮಗೆ ನಿಷಿದ್ಧಗೊಳಿಸಲಾದುದನ್ನೆಲ್ಲ ಅವನು ನಿಮಗೆ ವಿವರಿಸಿ ಕೊಟ್ಟಿದ್ದಾನೆ. ಹೆಚ್ಚಿನ ಜನರು ತಿಳುವಳಿಕೆಯಿಲ್ಲದೆ ತಮ್ಮ ಇಷ್ಟಾನುಸಾರ** (ಜನರನ್ನು) **ದಾರಿತಪ್ಪಿಸುತ್ತಾರೆ. ನಿಶ್ಚಯವಾಗಿಯೂ ನಿನ್ನ ಪ್ರಭು ಆಜ್ಞಾಲಂಘಕರ ಬಗ್ಗೆ ಚೆನ್ನಾಗಿ ಬಲ್ಲವನಾಗಿದ್ದಾನೆ.**

وَمَا لَكُمْ اَلَّا تَاْكُلُوْا مِمَّا ذُكِرَ اسْمُ اللّٰهِ عَلَيْهِ وَقَدْ فَصَّلَ لَكُمْ مَّا حَرَّمَ عَلَيْكُمْ اِلَّا مَا اضْطُرِرْتُمْ اِلَيْهِ ؕ وَاِنَّ كَثِيْرًا لَّيُضِلُّوْنَ بِاَهْوَآئِهِمْ بِغَيْرِ عِلْمٍ ؕ اِنَّ رَبَّكَ هُوَ اَعْلَمُ بِالْمُعْتَدِيْنَ ﴿١٢٠﴾

**121.** **ನೀವು ಬಹಿರಂಗ ಮತ್ತು ರಹಸ್ಯ ಪಾಪಗಳನ್ನು ವರ್ಜಿಸಿರಿ. ಖಂಡಿತವಾಗಿಯೂ ಪಾಪಿಗಳಿಗೆ ಅವರ ಕೃತ್ಯಗಳಿಗನುಸಾರವಾದ ಪ್ರತಿಫಲ ನೀಡಲಾಗುವುದು.**

وَذَرُوْا ظَاهِرَ الْاِثْمِ وَبَاطِنَهٗ ؕ اِنَّ الَّذِيْنَ يَكْسِبُوْنَ الْاِثْمَ سَيُجْزَوْنَ بِمَا كَانُوْا يَقْتَرِفُوْنَ ﴿١٢١﴾

**122.** **ಯಾವುದರ ಮೇಲೆ ಅಲ್ಲಾಹನ ನಾಮ ಉಚ್ಚರಿಸಲ್ಪಡುವುದಿಲ್ಲವೋ ಅದನ್ನು ನೀವು ತಿನ್ನಬಾರದು. ಖಂಡಿತವಾಗಿಯೂ ಅದು ಅವಿಧೇಯತೆಯಾಗುತ್ತದೆ. ನಿಶ್ಚಯವಾಗಿಯೂ ದುರ್ಜನರು ತಮ್ಮ ಮಿತ್ರರಿಗೆ, ಅವರು ನಿಮ್ಮೊಡನೆ ವಿವಾದಕ್ಕಿಳಿಯಲಿಕ್ಕಾಗಿ ಗುಪ್ತವಾಗಿ ಪ್ರೇರೇಪಿಸುತ್ತಾರೆ. ನೀವು ಅವರನ್ನು ಅನುಸರಿಸಿದರೆ ಖಂಡಿತವಾಗಿಯೂ ನೀವು ಬಹುದೇವಾರಾಧಕರಾಗುತ್ತೀರಿ.**

وَلَا تَاْكُلُوْا مِمَّا لَمْ يُذْكَرِ اسْمُ اللّٰهِ عَلَيْهِ وَاِنَّهٗ لَفِسْقٌ ؕ وَاِنَّ الشَّيٰطِيْنَ لَيُوْحُوْنَ اِلٰۤى اَوْلِيٰٓـِٕهِمْ لِيُجَادِلُوْكُمْ ۚ وَاِنْ اَطَعْتُمُوْهُمْ اِنَّكُمْ لَمُشْرِكُوْنَ ﴿١٢٢﴾

أَوَمَن كَانَ مَيْتًا فَأَحْيَيْنَٰهُ وَجَعَلْنَا لَهُۥ
نُورًا يَمْشِى بِهِۦ فِى ٱلنَّاسِ كَمَن مَّثَلُهُۥ
فِى ٱلظُّلُمَٰتِ لَيْسَ بِخَارِجٍ مِّنْهَا ۚ
كَذَٰلِكَ زُيِّنَ لِلْكَٰفِرِينَ مَا كَانُوا۟
يَعْمَلُونَ ﴿١٢٢﴾

**123.** (ಯೋಚಿಸಿರಿ) **ಮೃತನಾದೊಬ್ಬನನ್ನು ನಾವು ಜೀವಂತಗೊಳಿಸಿ ಅವನಿಗೆ ಒಂದು ಪ್ರಕಾಶವನ್ನು ನೀಡಿದಾಗ ಅವನು ಜನರ ಮಧ್ಯೆ ಓಡಾಡಲು ತೊಡಗುತ್ತಾನೆ.** (ಅಂತಹವನು) **ಅಂಧಕಾರದಲ್ಲಿ ಸಿಲುಕಿ ಅದರಿಂದ ಹೊರಗೆ ಬರಲು ಸಾಧ್ಯವಾಗದೆ** (ಕಷ್ಟಪಡುವ) **ವ್ಯಕ್ತಿಯಂತಾಗುವನೇ? ಈ ರೀತಿಯಲ್ಲಿ ಅವಿಶ್ವಾಸಿಗಳಿಗೆ ಅವರ ಕೃತ್ಯಗಳು ಚಲೋದಾಗಿ ತೋರಿಸಲ್ಪಡುತ್ತವೆ.**

وَكَذَٰلِكَ جَعَلْنَا فِى كُلِّ قَرْيَةٍ
أَكَٰبِرَ مُجْرِمِيهَا لِيَمْكُرُوا۟ فِيهَا ۖ وَمَا
يَمْكُرُونَ إِلَّا بِأَنفُسِهِمْ وَمَا
يَشْعُرُونَ ﴿١٢٣﴾

**124. ನಾವು ಪ್ರತಿಯೊಂದು ನಾಡಿನಲ್ಲಿ ಅಲ್ಲಿಯ ದೊಡ್ಡ ದೊಡ್ಡ ಪಾಪಿಗಳನ್ನು ಇದೇ ಪ್ರಕಾರ ಮಾಡಿರುವೆವು. ಅದರ ಫಲವಾಗಿ ಅವರು ಅಲ್ಲಿ ಸಂಚುಹೂಡುತ್ತಾರೆ. ವಾಸ್ತವದಲ್ಲಿ ತಮ್ಮ ಆತ್ಮಗಳಿಗೆ ವಿರುದ್ಧವಾಗಿಯೇ ಅವರು ತಂತ್ರಹೂಡುತ್ತಾರೆ. ಆದರೆ ಅವರು ಅದನ್ನು ಗ್ರಹಿಸುವುದಿಲ್ಲ.**

وَإِذَا جَآءَتْهُمْ ءَايَةٌ قَالُوا۟ لَن
نُّؤْمِنَ حَتَّىٰ نُؤْتَىٰ مِثْلَ مَآ أُوتِىَ
رُسُلُ ٱللَّهِ ۘ ٱللَّهُ أَعْلَمُ حَيْثُ يَجْعَلُ
رِسَٰلَتَهُۥ ۗ سَيُصِيبُ ٱلَّذِينَ أَجْرَمُوا۟
صَغَارٌ عِندَ ٱللَّهِ وَعَذَابٌ شَدِيدٌۢ بِمَا
كَانُوا۟ يَمْكُرُونَ ﴿١٢٤﴾

**125. ಅವರಿಗೆ ದೃಷ್ಟಾಂತವಾಗಿ ಏನಾದರೂ ಕಂಡು ಬಂದರೆ, 'ಅಲ್ಲಾಹನ ಸಂದೇಶವಾಹಕರಿಗೆ ನೀಡಲ್ಪಟ್ಟಂತಹವು ನಮಗೆ ಸಹ ನೀಡಲ್ಪಡುವ ವರೆಗೆ ನಾವು ನಂಬಲಾರೆವು' ಎಂದು ಅವರು ಹೇಳುತ್ತಾರೆ. ತನ್ನ ಸಂದೇಶವಾಹಕತ್ವವನ್ನು ಎಲ್ಲಿ** (ಯಾರಿಗೆ) **ಒಪ್ಪಿಸಬೇಕೆಂದು ಅಲ್ಲಾಹನು ಚೆನ್ನಾಗಿ ಬಲ್ಲನು.**[228] **ತಪ್ಪು ಮಾಡಿದ ಜನರು ಅವರ ಕುತಂತ್ರ ಕಾರಣವಾಗಿ ಖಂಡಿತವಾಗಿಯೂ ಅಲ್ಲಾಹನಿಂದ ಅಪಮಾನ ಮತ್ತು ಕಠಿಣ ಶಿಕ್ಷೆಗೆ ಗುರಿಯಾಗುವರು.**

فَمَن يُرِدِ ٱللَّهُ أَن يَهْدِيَهُۥ يَشْرَحْ
صَدْرَهُۥ لِلْإِسْلَٰمِ ۖ وَمَن يُرِدْ أَن يُضِلَّهُۥ
يَجْعَلْ صَدْرَهُۥ ضَيِّقًا حَرَجًا كَأَنَّمَا
يَصَّعَّدُ فِى ٱلسَّمَآءِ ۚ كَذَٰلِكَ يَجْعَلُ ٱللَّهُ

**126. ಆದ್ದರಿಂದ ಯಾರನ್ನಾದರೂ ಸತ್ಪಥದಲ್ಲಿ ನಡೆಸಲು ಅಲ್ಲಾಹನು ಇಚ್ಛಿಸಿದರೆ ಅವನ ಹೃದಯವನ್ನು ಇಸ್ಲಾಮಿಗಾಗಿ ಅವನು ವಿಶಾಲಗೊಳಿಸುತ್ತಾನೆ. ಯಾರನ್ನಾದರೂ ದಾರಿತಪ್ಪಿಸಲು** (ಅಲ್ಲಾಹನು) **ಇಚ್ಛಿಸಿದರೆ, ಅವನ ಹೃದಯವನ್ನು ಕಿರಿದು ಹಾಗೂ ಸಂಕುಚಿತಗೊಳಿಸುತ್ತಾನೆ - ಅವನು ಶ್ರಮಪಟ್ಟು ಆಕಾಶಕ್ಕೇರಿ**

228. ಯಾರನ್ನು ಸಂದೇಶವಾಹಕನಾಗಿ ನೇಮಿಸಬೇಕೆಂದೂ ದೌತ್ಯ ಯಾವಾಗ ಎಲ್ಲಿ ಬೇಕೆಂದೂ ಅತಿ ಹೆಚ್ಚು ತಿಳಿದವನು ಅಲ್ಲಾಹನೆಂದು ತಾತ್ಪರ್ಯ.





ٱلرِّجْسَ عَلَى ٱلَّذِينَ لَا يُؤْمِنُونَ ﴿١٢٥﴾

**ಹೋಗುವಂತೆ. ಅವಿಶ್ವಾಸಿಗಳಿಗೆ ಅಲ್ಲಾಹನು ಈ ರೀತಿ ಶಿಕ್ಷೆನೀಡುತ್ತಾನೆ.**

وَهَٰذَا صِرَٰطُ رَبِّكَ مُسْتَقِيمًا ۗ قَدْ
فَصَّلْنَا ٱلْءَايَٰتِ لِقَوْمٍ يَذَّكَّرُونَ ﴿١٢٦﴾

**127. ಇದು ನಿನ್ನ ಪ್ರಭುವಿನೆಡೆಗೆ** (ಕೊಂಡೊಯ್ಯುವ) **ಸರಿಯಾದ ಮಾರ್ಗವಾಗಿದೆ. ಉಪದೇಶ ಸ್ವೀಕರಿಸುವ ಜನರಿಗೆ ನಾವು ದೃಷ್ಟಾಂತವನ್ನು ವಿವರಿಸಿಕೊಟ್ಟಿದ್ದೇವೆ.**

لَهُمْ دَارُ ٱلسَّلَٰمِ عِندَ رَبِّهِمْ ۖ وَهُوَ
وَلِيُّهُم بِمَا كَانُوا۟ يَعْمَلُونَ ﴿١٢٧﴾

**128. ಅವರಿಗೆ ತಮ್ಮ ಪ್ರಭುವಿನ ಸನ್ನಿಧಿಯಲ್ಲಿ ಶಾಂತಿಯ ನೆಲೆ ಇದೆ. ಅವರ ಕೃತ್ಯಗಳ ಕಾರಣದಿಂದ ಅವನು ಅವರ ಮಿತ್ರನಾಗಿರುವನು.**

وَيَوْمَ يَحْشُرُهُمْ جَمِيعًا يَٰمَعْشَرَ
ٱلْجِنِّ قَدِ ٱسْتَكْثَرْتُم مِّنَ ٱلْإِنسِ ۖ
وَقَالَ أَوْلِيَآؤُهُم مِّنَ ٱلْإِنسِ رَبَّنَا
ٱسْتَمْتَعَ بَعْضُنَا بِبَعْضٍ وَبَلَغْنَآ
أَجَلَنَا ٱلَّذِىٓ أَجَّلْتَ لَنَا ۚ قَالَ ٱلنَّارُ
مَثْوَىٰكُمْ خَٰلِدِينَ فِيهَآ إِلَّا مَا
شَآءَ ٱللَّهُ ۗ إِنَّ رَبَّكَ حَكِيمٌ عَلِيمٌ ﴿١٢٨﴾

**129. ಅವರನ್ನೆಲ್ಲ ಒಂದುಗೂಡಿಸುವ ದಿನದಂದು** (ಅಲ್ಲಾಹನು ಹೇಳುವನು:) **"ಎಲೈ, 'ಜಿನ್ನ್' ಸಮೂಹವೇ, ನೀವು 'ಇನ್ಸ್' ಸಮೂಹದಿಂದ**[229] **ಹೆಚ್ಚಿನವರನ್ನು ನಿಮ್ಮ ಅಧೀನಕ್ಕೊಳಪಡಿಸಲು ಪ್ರಯತ್ನಿಸಿದ್ದೀರಿ." ಆಗ 'ಇನ್ಸ್' ಪೈಕಿ ಅವರ ಮಿತ್ರರು**[230] **ಹೇಳುವರು: 'ನಮ್ಮ ಪ್ರಭೂ, ನಮ್ಮ ಪೈಕಿ ಕೆಲವರು ಬೇರೆ ಕೆಲವರಿಂದ ಪ್ರಯೋಜನ ಪಡೆದಿರುವರು. ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು** (ಈಗ) **ನಾವು ತಲಪಿರುವೆವು.' ಅಲ್ಲಾಹನು ಹೇಳುವನು: 'ನರಕವು ನಿಮ್ಮ ವಾಸಸ್ಥಳವಾಗಿದೆ. ನೀವು ಅಲ್ಲಿ ದೀರ್ಘಕಾಲ ವಾಸಿಸುವಿರಿ - ಅಲ್ಲಾಹನು** *ಬೇರೊಂದು* **ಬಯಸಿದರೆ ಹೊರತು.' ನಿಶ್ಚಯವಾಗಿಯೂ ನಿನ್ನ ಪ್ರಭು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.**

وَكَذَٰلِكَ نُوَلِّى بَعْضَ ٱلظَّٰلِمِينَ
بَعْضًۢا بِمَا كَانُوا۟ يَكْسِبُونَ ﴿١٢٩﴾

**130. ಈ ರೀತಿಯಲ್ಲಿ ದುಷ್ಕರ್ಮಿಗಳ ಕೃತ್ಯಗಳ ಫಲವಾಗಿ ನಾವು ಅವರ ಪೈಕಿ ಕೆಲವರನ್ನು ಬೇರೆ ಕೆಲವರ ಸಹಾಯಕರನ್ನಾಗಿ ಮಾಡಿರುವೆವು.**

يَٰمَعْشَرَ ٱلْجِنِّ وَٱلْإِنسِ أَلَمْ يَأْتِكُمْ

**131. 'ಎಲೈ ಜಿನ್ನ್ ಮತ್ತು ಇನ್ಸ್ ಸಮೂಹವೇ, ನನ್ನ ದೃಷ್ಟಾಂತಗಳನ್ನು ನಿಮಗೆ ವಿವರಿಸಿಕೊಡುವ ಮತ್ತು ನೀವು ಭೇಟಿಯಾಗಲಿರುವ ಈ ದಿನದ ಬಗ್ಗೆ ನಿಮಗೆ**

229. ವಚನ 113 ರ ಟಿಪ್ಪಣಿ ನೋಡಿರಿ.

230. ಜಿನ್ನ್‌ಗಳ ಅನುಯಾಯಿಗಳಾದ ಸಾಮಾನ್ಯ ಜನರು.

ಮುನ್ನೆಚ್ಚರಿಕೆಯನ್ನೀಯುವ ನಿಮ್ಮ ಪೈಕಿಯ ಸಂದೇಶ ವಾಹಕರು ನಿಮ್ಮ ಬಳಿಗೆ ಬಂದಿರಲಿಲ್ಲವೇ?' (ಎಂದು ಪುನರುತ್ಥಾನ ದಿನದಂದು ಅಲ್ಲಾಹನು ಕೇಳುವನು). ಅವರು ಹೇಳುವರು: 'ಇದೋ ನಮ್ಮ ವಿರುದ್ಧ ನಾವೇ ಸಾಕ್ಷ್ಯಕೊಡುತ್ತೇವೆ.' (ವಾಸ್ತವದಲ್ಲಿ) ಐಹಿಕ ಜೀವನ ಅವರನ್ನು ಮೋಸಗೊಳಿಸಿದೆ. ತಾವು ಅವಿಶ್ವಾಸಿಗಳಾಗಿದ್ದವೆಂದು ಅವರ ವಿರುದ್ಧ ಅವರೇ ಸಾಕ್ಷ್ಯವಹಿಸುವರು.

رُسُلٌ مِّنكُمْ يَقُصُّونَ عَلَيْكُمْ آيَاتِي وَيُنذِرُونَكُمْ لِقَاءَ يَوْمِكُمْ هَٰذَا ۚ قَالُوا شَهِدْنَا عَلَىٰ أَنفُسِنَا ۖ وَغَرَّتْهُمُ الْحَيَاةُ الدُّنْيَا وَشَهِدُوا عَلَىٰ أَنفُسِهِمْ أَنَّهُمْ كَانُوا كَافِرِينَ ﴿١٣٠﴾

**132.** ಅದು (ಪ್ರವಾದಿಗಳನ್ನು ನಿಯೋಜಿಸುವುದು)- ನಿನ್ನ ಪ್ರಭು ಜನವಾಸವಿರುವ ಸ್ಥಳಗಳನ್ನು, ಅಲ್ಲಿಯ ನಿವಾಸಿಗಳಿಗೆ ಸಂದೇಶ ಲಭಿಸದ ಸ್ಥಿತಿಯಲ್ಲಿ ಅವರನ್ನು ಅನ್ಯಾಯವಾಗಿ ನಾಶಪಡಿಸುವವನಲ್ಲ ಎಂಬುದಕ್ಕೋಸ್ಕರ ವಾಗಿದೆ.

ذَٰلِكَ أَن لَّمْ يَكُن رَّبُّكَ مُهْلِكَ الْقُرَىٰ بِظُلْمٍ وَأَهْلُهَا غَافِلُونَ ﴿١٣١﴾

**133.** ಪ್ರತಿಯೊಬ್ಬರಿಗೂ ತಂತಮ್ಮ ಕೃತ್ಯಕ್ಕನುಗುಣ ವಾದ ಪದವಿಗಳಿವೆ. ಅವರ ಕೃತ್ಯಗಳ ಬಗ್ಗೆ ನಿನ್ನ ಪ್ರಭು ತಿಳಿಯದವನಲ್ಲ.

وَلِكُلٍّ دَرَجَاتٌ مِّمَّا عَمِلُوا ۚ وَمَا رَبُّكَ بِغَافِلٍ عَمَّا يَعْمَلُونَ ﴿١٣٢﴾

**134.** ನಿನ್ನ ಪ್ರಭು ಸ್ವಯಂಪೂರ್ಣನೂ ಕಾರುಣ್ಯ ವಂತನೂ ಆಗಿದ್ದಾನೆ. ಅವನು ಇಚ್ಛಿಸಿದರೆ ನಿಮ್ಮನ್ನು ಅವನು ನಾಶಪಡಿಸಿ ನಿಮ್ಮ ನಂತರ ಅವನು ಇಚ್ಛಿಸುವ ವರನ್ನು (ನಿಮ್ಮ) ಉತ್ತರಾಧಿಕಾರಿಗಳಾಗಿ ನಿಶ್ಚಯಿಸು ವನು - ಬೇರೊಂದು ಜನಾಂಗದ ಸಂತತಿಯಿಂದ ನಿಮ್ಮನ್ನು ಅವನು ಸೃಷ್ಟಿಸಿದಂತೆ.

وَرَبُّكَ الْغَنِيُّ ذُو الرَّحْمَةِ ۚ إِن يَشَأْ يُذْهِبْكُمْ وَيَسْتَخْلِفْ مِن بَعْدِكُم مَّا يَشَاءُ كَمَا أَنشَأَكُم مِّن ذُرِّيَّةِ قَوْمٍ آخَرِينَ ﴿١٣٣﴾

**135.** ನಿಮಗೆ ಮುನ್ನೆಚ್ಚರಿಕೆ ನೀಡಿದ್ದು ಬಂದೇ ಬರುವುದು. ನಿಮಗೆ (ಅಲ್ಲಾಹನನ್ನು) ಸೋಲಿಸಲು ಎಂದಿಗೂ ಸಾಧ್ಯವಿಲ್ಲ.

إِنَّ مَا تُوعَدُونَ لَآتٍ ۖ وَمَا أَنتُم بِمُعْجِزِينَ ﴿١٣٤﴾

**136.** ಹೇಳು: 'ಓ ನನ್ನ ಜನರೇ, ನೀವು ನಿಮ್ಮ ಸ್ಥಾನದಲ್ಲಿ ಕಾರ್ಯನಿರತರಾಗಿರಿ; ನಾನು (ನನ್ನ ಸ್ಥಾನದಲ್ಲಿ) ಕಾರ್ಯನಿರತನಾಗುತ್ತೇನೆ. ಈ ಗೃಹದ (ಇಹಲೋಕದ) ಅಂತಿಮ ಫಲ ಯಾರಿಗೆ ಪ್ರಯೋಜನಕರ ವಾಗಿರುವುದೆಂದು ನೀವು ಬೇಗನೆ ತಿಳಿಯುವಿರಿ.

قُلْ يَا قَوْمِ اعْمَلُوا عَلَىٰ مَكَانَتِكُمْ إِنِّي عَامِلٌ ۖ فَسَوْفَ تَعْلَمُونَ مَن تَكُونُ لَهُ





ದುಷ್ಕರ್ಮಿಗಳು ಎಂದಿಗೂ ಜಯಹೊಂದಲಾರರು.'

عَاقِبَةُ الدَّارِ ۗ إِنَّهُ لَا يُفْلِحُ الظَّالِمُونَ ﴿١٣٥﴾

**137.** ಅಲ್ಲಾಹನು ಸೃಷ್ಟಿಸಿದ ಬೆಳೆಗಳಿಂದಲೂ ಜಾನುವಾರುಗಳಿಂದಲೂ ಒಂದು ಪಾಲನ್ನು ಅವರು ಅವನಿಗಾಗಿ ಮೀಸಲಿಟ್ಟು, ತಮ್ಮ ಭ್ರಮೆಯಿಂದ 'ಇದು ಅಲ್ಲಾಹನಿಗೆ ಮತ್ತು ಇದು ನಮ್ಮ ದೇವ ಸಹಭಾಗಿಗಳಿಗೆ' (ವಿಗ್ರಹಗಳಿಗೆ) ಎಂದು ಹೇಳುತ್ತಾರೆ. ಅವರ ದೇವ ಸಹಭಾಗಿಗಳಿಗೆ ಇಟ್ಟದ್ದು ಅಲ್ಲಾಹನಿಗೆ ತಲಪುವುದಿಲ್ಲ; (ಬದಲು) ಅಲ್ಲಾಹನಿಗಾಗಿ ಇಟ್ಟದ್ದು ಅವರ ವಿಗ್ರಹಗಳಿಗೆ ತಲಪುತ್ತದೆ ಎಂದು ಅವರು ವಾದಿಸುತ್ತಾರೆ. ಅವರ ತೀರ್ಮಾನ ಅದೆಷ್ಟು ಕೆಟ್ಟದ್ದು!

وَجَعَلُوا لِلَّهِ مِمَّا ذَرَأَ مِنَ الْحَرْثِ وَالْأَنْعَامِ نَصِيبًا فَقَالُوا هَٰذَا لِلَّهِ بِزَعْمِهِمْ وَهَٰذَا لِشُرَكَائِنَا ۖ فَمَا كَانَ لِشُرَكَائِهِمْ فَلَا يَصِلُ إِلَى اللَّهِ ۖ وَمَا كَانَ لِلَّهِ فَهُوَ يَصِلُ إِلَىٰ شُرَكَائِهِمْ ۗ سَاءَ مَا يَحْكُمُونَ ﴿١٣٦﴾

**138.** ಇದೇ ಪ್ರಕಾರ (ಈ) ಬಹುದೇವಾರಾಧಕರಲ್ಲಿ ಹೆಚ್ಚಿನವರಿಗೆ ತಮ್ಮ ಸಂತತಿಗಳನ್ನು ಹತ್ಯೆಮಾಡುವುದನ್ನು ಅವರ ದೇವ ಸಹಭಾಗಿಗಳು ಚಲೋದಾಗಿ ತೋರಿಸಿಕೊಟ್ಟಿದ್ದಾರೆ. ಇದು ಅವರನ್ನು ನಾಶಪಡಿಸಲು ಮತ್ತು ಅವರ ಧರ್ಮದ ಬಗ್ಗೆ ಅವರಿಗೆ ಗಲಿಬಿಲಿಯನ್ನುಂಟುಮಾಡಲಿಕ್ಕಾಗಿದೆ. ಅಲ್ಲಾಹನು ಇಚ್ಛಿಸಿದ್ದರೆ ಅವರು ಹಾಗೆ ಮಾಡುತ್ತಿರಲಿಲ್ಲ. ಆದ್ದರಿಂದ ನೀನು ಅವರನ್ನೂ ಅವರ ಸುಳ್ಳಾರೋಪಗಳನ್ನೂ ಅವಗಣಿಸು.

وَكَذَٰلِكَ زَيَّنَ لِكَثِيرٍ مِّنَ الْمُشْرِكِينَ قَتْلَ أَوْلَادِهِمْ شُرَكَاؤُهُمْ لِيُرْدُوهُمْ وَلِيَلْبِسُوا عَلَيْهِمْ دِينَهُمْ ۖ وَلَوْ شَاءَ اللَّهُ مَا فَعَلُوهُ ۖ فَذَرْهُمْ وَمَا يَفْتَرُونَ ﴿١٣٧﴾

**139.** 'ಇಂತಿಂತಹ ಜಾನುವಾರುಗಳು ಮತ್ತು ಕೃಷಿಗಳು ನಿಷಿದ್ಧ; ನಾವು ಇಷ್ಟಪಡುವವರ ಹೊರತು ಬೇರಾರೂ ಅದನ್ನು ತಿನ್ನಲಾರರು' ಎಂದು ಅವರು ತಮ್ಮ ಊಹಾಪೋಹಗಳ ಪ್ರಕಾರ ಹೇಳುತ್ತಾರೆ. ಬೆನ್ನುಗಳು (ಸವಾರಿ ಮಾಡುವುದಕ್ಕೆ ಮತ್ತು ಭಾರಹೊರಿಸುವುದಕ್ಕೆ) ನಿಷಿದ್ಧಗೊಳಿಸಲ್ಪಟ್ಟ ಕೆಲವು ಜಾನುವಾರುಗಳೂ ಇವೆ. ಅವರು ಅಲ್ಲಾಹನ ನಾಮ ಉಚ್ಚರಿಸದ ಬೇರೆ ಕೆಲವು ಜಾನುವಾರುಗಳು ಸಹ ಇವೆ. ಇವೆಲ್ಲ (ದೇವ ನಿಯಮಗಳೆಂದು) ಅವರು ಅವನ ಮೇಲೆ ಊಹಿಸಿ ಹೇಳಿದ್ದು. ಅವರು ಸುಳ್ಳಾರೋಪ ಸೃಷ್ಟಿಸಿದ ಕಾರಣದಿಂದ ಅವನು ಅವರಿಗೆ ಶೀಘ್ರದಲ್ಲೇ ಶಿಕ್ಷೆ ನೀಡುವನು.

وَقَالُوا هَٰذِهِ أَنْعَامٌ وَحَرْثٌ حِجْرٌ لَّا يَطْعَمُهَا إِلَّا مَن نَّشَاءُ بِزَعْمِهِمْ وَأَنْعَامٌ حُرِّمَتْ ظُهُورُهَا وَأَنْعَامٌ لَّا يَذْكُرُونَ اسْمَ اللَّهِ عَلَيْهَا افْتِرَاءً عَلَيْهِ ۚ سَيَجْزِيهِم بِمَا كَانُوا يَفْتَرُونَ ﴿١٣٨﴾

**140.** 'ಇಂತಿಂತಹ ಜಾನುವಾರುಗಳ ಗರ್ಭಾಶಯಗಳಲ್ಲಿರುವುದು ನಮ್ಮ ಪುರುಷರಿಗೆ ಮೀಸಲಾಗಿರಿಸಲಾಗಿದ್ದು ನಮ್ಮ ಪತ್ನಿಯರಿಗೆ ಅವು ನಿಷಿದ್ಧ; ಆದರೆ ಅದು ನಿರ್ಜೀವವಾಗಿದ್ದರೆ ಅದಕ್ಕೆ ಎಲ್ಲರೂ ಪಾಲುಗಾರರಾಗುತ್ತಾರೆ' ಎಂದೂ ಅವರು ಹೇಳುತ್ತಾರೆ. ಅವರ ಈ (ನಿರಾಧಾರ) ಹೇಳಿಕೆಗೆ ಅವನು ಶಿಕ್ಷೆ ನೀಡುವನು. ನಿಶ್ಚಯವಾಗಿಯೂ ಅವನು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.

وَقَالُوا مَا فِي بُطُونِ هَٰذِهِ الْأَنْعَامِ خَالِصَةٌ لِّذُكُورِنَا وَمُحَرَّمٌ عَلَىٰ أَزْوَاجِنَا ۖ وَإِن يَكُن مَّيْتَةً فَهُمْ فِيهِ شُرَكَاءُ ۚ سَيَجْزِيهِمْ وَصْفَهُمْ ۚ إِنَّهُ حَكِيمٌ عَلِيمٌ ﴿١٤٠﴾

**141.** ತಮ್ಮ ಸಂತತಿಗಳನ್ನು ಮೂಢತನದಿಂದಲೂ ಅಜ್ಞಾನದಿಂದಲೂ ಕೊಲ್ಲುವವರು ಹಾಗೂ ಅಲ್ಲಾಹನ ಮೇಲೆ ಸುಳ್ಳಾರೋಪವನ್ನು ಸೃಷ್ಟಿಸಿ ಅಲ್ಲಾಹನು ತಮಗೆ ನೀಡಿದುದನ್ನು ಸ್ವಯಂ ನಿಷಿದ್ಧಗೊಳಿಸಿದವರು ಖಂಡಿತವಾಗಿಯೂ ಹಾನಿಗೀಡಾದವರಾಗಿದ್ದಾರೆ. ನಿಶ್ಚಯವಾಗಿಯೂ ಅವರು ದಾರಿತಪ್ಪಿದವರು; ಸತ್ಪಥವನ್ನುಗಳಿಸಿದವರಲ್ಲ.

قَدْ خَسِرَ الَّذِينَ قَتَلُوا أَوْلَادَهُمْ سَفَهًا بِغَيْرِ عِلْمٍ وَحَرَّمُوا مَا رَزَقَهُمُ اللَّهُ افْتِرَاءً عَلَى اللَّهِ ۚ قَدْ ضَلُّوا وَمَا كَانُوا مُهْتَدِينَ ﴿١٤١﴾

**142.** ತಡಕೆಯ ಮೇಲೆ ಹಬ್ಬಿಸಲ್ಪಟ್ಟ ಮತ್ತು ಹಬ್ಬಿಸಲ್ಪಡದ ವಿವಿಧ ತೋಟಗಳನ್ನೂ ಖರ್ಜೂರ ಮರಗಳನ್ನೂ ನಾನಾ ತರದ ಫಲೋತ್ಪನ್ನ ಬೆಳೆಗಳನ್ನೂ ಪರಸ್ಪರ ಹೋಲಿಕೆ ಇರುವ ಹಾಗೂ ಇಲ್ಲದ ಓಲಿವ್ ಮತ್ತು ದಾಳಿಂಬೆ ಮರಗಳನ್ನೂ ಸೃಷ್ಟಿಸಿದವನು ಅವನಾಗಿದ್ದಾನೆ. ಅವು ಫಲಬಿಟ್ಟಾಗ ಅವುಗಳ ಫಲಗಳನ್ನು ನೀವು ತಿನ್ನಿರಿ. ಕೊಯ್ಲಿನ ದಿವಸ ಅವನ (ಅಲ್ಲಾಹನ) ಪಾಲು ನೀಡಿರಿ.[231] ನೀವು ಎಲ್ಲೆ ಮೀರಬೇಡಿರಿ. ಮಿತಿ ಮೀರುವವರನ್ನು ಅವನು ಇಷ್ಟಪಡುವುದೇ ಇಲ್ಲ.

وَهُوَ الَّذِي أَنشَأَ جَنَّاتٍ مَّعْرُوشَاتٍ وَغَيْرَ مَعْرُوشَاتٍ وَالنَّخْلَ وَالزَّرْعَ مُخْتَلِفًا أُكُلُهُ وَالزَّيْتُونَ وَالرُّمَّانَ مُتَشَابِهًا وَغَيْرَ مُتَشَابِهٍ ۚ كُلُوا مِن ثَمَرِهِ إِذَا أَثْمَرَ وَآتُوا حَقَّهُ يَوْمَ حَصَادِهِ ۖ وَلَا تُسْرِفُوا ۚ إِنَّهُ لَا يُحِبُّ الْمُسْرِفِينَ ﴿١٤٢﴾

**143.** ಜಾನುವಾರುಗಳಲ್ಲಿ ಭಾರಹೊರುವವುಗಳೂ ಆಹಾರಕ್ಕಾಗಿ ಕೊಯ್ಯಲ್ಪಡುವವುಗಳೂ ಇವೆ. ಅಲ್ಲಾಹನು ನಿಮಗೆ ದಯಪಾಲಿಸಿದವುಗಳಿಂದ ನೀವು ತಿನ್ನಿರಿ. ಶೈತಾನನ ಕಾಲಹೆಜ್ಜೆಗಳನ್ನು ನೀವು ಹಿಂಬಾಲಿಸಬೇಡಿರಿ. ನಿಸ್ಸಂದೇಹವಾಗಿಯೂ ಅವನು ನಿಮ್ಮ ಬಹಿರಂಗ ಶತ್ರು.

وَمِنَ الْأَنْعَامِ حَمُولَةً وَفَرْشًا ۚ كُلُوا مِمَّا رَزَقَكُمُ اللَّهُ وَلَا تَتَّبِعُوا خُطُوَاتِ الشَّيْطَانِ ۚ إِنَّهُ لَكُمْ عَدُوٌّ مُّبِينٌ ﴿١٤٣﴾

231. ದೈವಿಕ ನಿಯಮ ಪ್ರಕಾರ ನೀವು ನೀಡಬೇಕಾದ ನಿಮ್ಮ ಋಣ ಸಲ್ಲಿಸಿರಿ.





**144.** (ಜಾನುವಾರುಗಳ ಪೈಕಿ) ಎಂಟು ಜೋಡಿಗಳನ್ನು (ಅವನು ಸೃಷ್ಟಿಸಿರುವನು) - ಕುರಿಗಳಲ್ಲಿ ಎರಡು; ಆಡುಗಳಲ್ಲಿ ಎರಡು. ನೀನು ಅವರೊಡನೆ ಹೇಳು: 'ಅವನು ನಿಷಿದ್ಧಗೊಳಿಸಿದ್ದು[232] ಎರಡು ಗಂಡುಗಳನ್ನೋ ಅಥವಾ ಎರಡು ಹೆಣ್ಣುಗಳನ್ನೋ? ಅಥವಾ ಎರಡು ಹೆಣ್ಣುಗಳ ಗರ್ಭಾಶಯಗಳಲ್ಲಿರುವವುಗಳನ್ನೋ? ನೀವು ಸತ್ಯಸಂಧರೆಂದಾದರೆ ತಿಳುವಳಿಕೆಯ ಆಧಾರದಲ್ಲಿ ನನಗೆ ತಿಳಿಸಿಕೊಡಿರಿ.'

ثَمَانِيَةَ أَزْوَاجٍ ۖ مِّنَ الضَّأْنِ اثْنَيْنِ وَمِنَ الْمَعْزِ اثْنَيْنِ ۗ قُلْ آلذَّكَرَيْنِ حَرَّمَ أَمِ الْأُنثَيَيْنِ أَمَّا اشْتَمَلَتْ عَلَيْهِ أَرْحَامُ الْأُنثَيَيْنِ ۖ نَبِّئُونِي بِعِلْمٍ إِن كُنتُمْ صَادِقِينَ ﴿١٤٤﴾

**145.** ಹಾಗೆಯೇ, ಒಂಟೆಗಳ ಪೈಕಿ ಎರಡು, ಗೋವುಗಳ ಪೈಕಿ ಎರಡು ಜೋಡಿಗಳನ್ನೂ (ಅವನು ಸೃಷ್ಟಿಸಿದ್ದಾನೆ). ಹೇಳು: 'ಎರಡು ಗಂಡುಗಳನ್ನೋ ಅವನು ನಿಷಿದ್ಧಗೊಳಿಸಿದ್ದು ಅಥವಾ ಎರಡು ಹೆಣ್ಣುಗಳನ್ನೋ? ಅಥ್ವಾ ಎರಡು ಹೆಣ್ಣುಗಳ ಗರ್ಭಾಶಯಗಳಲ್ಲಿರುವವುಗಳನ್ನೋ? ಅಲ್ಲಾಹನು ಈ ಬಗ್ಗೆ ನಿಮಗೆ ಆದೇಶಿಸಿದಾಗ ನೀವು ಹಾಜರಿದ್ದಿರೋ?' ಯಾವ ಜ್ಞಾನವೂ ಇಲ್ಲದೆ ಜನರನ್ನು ದಾರಿತಪ್ಪಿಸಲಿಕ್ಕಾಗಿ ಅಲ್ಲಾಹನ ನಾಮದಲ್ಲಿ ಸುಳ್ಳು ಸೃಷ್ಟಿಸುವವನಿಗಿಂತ ದುಷ್ಟ ಬೇರೆ ಯಾರು? ಖಂಡಿತವಾಗಿಯೂ ಅಲ್ಲಾಹನು ದುಷ್ಟ ಜನರನ್ನು ಸತ್ಪಥದಲ್ಲಿ ನಡೆಸಲಾರ.

وَمِنَ الْإِبِلِ اثْنَيْنِ وَمِنَ الْبَقَرِ اثْنَيْنِ ۗ قُلْ آلذَّكَرَيْنِ حَرَّمَ أَمِ الْأُنثَيَيْنِ أَمَّا اشْتَمَلَتْ عَلَيْهِ أَرْحَامُ الْأُنثَيَيْنِ ۖ أَمْ كُنتُمْ شُهَدَاءَ إِذْ وَصَّاكُمُ اللَّهُ بِهَٰذَا ۚ فَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا لِّيُضِلَّ النَّاسَ بِغَيْرِ عِلْمٍ ۗ إِنَّ اللَّهَ لَا يَهْدِي الْقَوْمَ الظَّالِمِينَ ﴿١٤٥﴾

**146.** ಹೇಳು: 'ನನಗೆ ಅವತೀರ್ಣವಾದುದರಲ್ಲಿ ತಿನ್ನಲು ಬಯಸುವವನಿಗೆ ಸತ್ತ ಪ್ರಾಣಿ ಅಥವಾ ಹರಿದ ರಕ್ತ ಅಥವಾ ಹಂದಿಮಾಂಸ - ಅದು ಮಲಿನವಾದುದು- ಅಥ್ವಾ ಅಲ್ಲಾಹೇತರರಿಗೆ ಅರ್ಪಿಸಲ್ಪಟ್ಟು[232A] ಅಪವಿತ್ರವಾದುದು. ಇವು ಹೊರತು ಬೇರೇನನ್ನೂ ನಿಷಿದ್ಧಗೊಳಿಸಿದುದಾಗಿ ನಾನು ಕಾಣುವುದಿಲ್ಲ. ಆದರೆ ಬೇಕೆಂದೇ ನಿಯಮೋಲ್ಲಂಘನೆ ಮಾಡುವವನೂ ಎಲ್ಲೆ ಮೀರುವವನೂ ಆಗಿರದೆ ಯಾರಾದರೂ (ಅದನ್ನು ತಿನ್ನಲು) ನಿರ್ಬಂಧಿತರಾದರೆ[233] ಪಾಪವಿಲ್ಲ. ನಿಸ್ಸಂದೇಹ

قُل لَّا أَجِدُ فِي مَا أُوحِيَ إِلَيَّ مُحَرَّمًا عَلَىٰ طَاعِمٍ يَطْعَمُهُ إِلَّا أَن يَكُونَ مَيْتَةً أَوْ دَمًا مَّسْفُوحًا أَوْ لَحْمَ خِنزِيرٍ فَإِنَّهُ رِجْسٌ أَوْ فِسْقًا أُهِلَّ لِغَيْرِ اللَّهِ بِهِ ۚ فَمَنِ اضْطُرَّ غَيْرَ بَاغٍ وَلَا عَادٍ فَإِنَّ

232. ಇದೇ ಅಧ್ಯಾಯದ 139, 140 ವಚನಗಳ ಕಡೆಗೆ ಸೂಚನೆ.
232A. ಅಧ್ಯಾಯ 2 ವಚನ 174ರ ಟಿಪ್ಪಣಿ ನೋಡಿರಿ.
233. ಜೀವವುಳಿಸಲಿಕ್ಕಾಗಿ ಎಂದು ತಾತ್ಪರ್ಯ.

ವಾಗಿಯೂ ನಿನ್ನ ಪ್ರಭು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

رَبَّكَ غَفُورٌ رَّحِيمٌ ﴿١٤٦﴾

**147.** ಯಹೂದಿಯರಿಗೆ ಚೂಪಾದ ನಖಿಗಳಿರುವ ಎಲ್ಲ ಮೃಗಗಳನ್ನೂ[234] ನಾವು ನಿಷಿದ್ಧಗೊಳಿಸಿದ್ದೇವೆ. ಬೆನ್ನಿನ ಮೇಲಿರುವ, ಕರುಳಿನಲ್ಲಿರುವ ಮತ್ತು ಎಲುಬಿಗೆ ಅಂಟಿಕೊಂಡಿರುವ ಕೊಬ್ಬನ್ನು ಹೊರತುಪಡಿಸಿ ಗೋವು ಮತ್ತು ಆಡಿನ ಎಲ್ಲ ಕೊಬ್ಬನ್ನು ಸಹ ನಾವು ಅವರಿಗೆ ನಿಷಿದ್ಧಗೊಳಿಸಿದ್ದೇವೆ[234A] ಅದು ಅವರ ಧಿಕ್ಕಾರಕ್ಕಾಗಿ ನಾವು ಅವರಿಗೆ ನೀಡಿದ ಶಿಕ್ಷೆಯಾಗಿದೆ. ನಾವು ನಿಶ್ಚಯವಾಗಿಯೂ ಸತ್ಯಪಾಲಕರಾಗಿದ್ದೇವೆ.

وَعَلَى الَّذِينَ هَادُوا حَرَّمْنَا كُلَّ ذِي ظُفُرٍ ۖ وَمِنَ الْبَقَرِ وَالْغَنَمِ حَرَّمْنَا عَلَيْهِمْ شُحُومَهُمَا إِلَّا مَا حَمَلَتْ ظُهُورُهُمَا أَوِ الْحَوَايَا أَوْ مَا اخْتَلَطَ بِعَظْمٍ ۚ ذَٰلِكَ جَزَيْنَاهُم بِبَغْيِهِمْ ۖ وَإِنَّا لَصَادِقُونَ ﴿١٤٧﴾

**148.** ಇನ್ನು, ಅವರು ನಿನ್ನನ್ನು ಸುಳ್ಳುಗಾರನೆಂದು ಆರೋಪಿಸಿದರೆ ಹೇಳು: 'ನಿಮ್ಮ ಪ್ರಭುವಿನ ಕರುಣೆ ಸರ್ವವ್ಯಾಪಕವಾಗಿದೆ. ಅಪರಾಧಿಗಳಾದ ಜನರಿಂದ ಅವನ ಶಿಕ್ಷೆ ನಿವಾರಿಸಲ್ಪಡಲಾರದು.'

فَإِن كَذَّبُوكَ فَقُل رَّبُّكُمْ ذُو رَحْمَةٍ وَاسِعَةٍ ۖ وَلَا يُرَدُّ بَأْسُهُ عَنِ الْقَوْمِ الْمُجْرِمِينَ ﴿١٤٨﴾

**149.** (ಅಲ್ಲಾಹನಿಗೆ) ಸಹಭಾಗಿಗಳನ್ನು ಕಲ್ಪಿಸುವವರು, 'ಅಲ್ಲಾಹನು ಬಯಸಿದ್ದರೆ ನಾವಾಗಲಿ ನಮ್ಮ ಪೂರ್ವಜರಾಗಲಿ ಸಹಭಾಗಿತ್ವವನ್ನು ಕಲ್ಪಿಸುತ್ತಿರಲಿಲ್ಲ ಮತ್ತು ಏನನ್ನೂ ನಿಷಿದ್ಧಗೊಳಿಸುತ್ತಿರಲಿಲ್ಲ' ಎಂದು ಹೇಳುವರು. ಇದೇ ಪ್ರಕಾರ ಇವರಿಗೆ ಮುಂಚೆಯಿದ್ದವರು ಸಹ ನಮ್ಮ ಶಿಕ್ಷೆಯನ್ನು ಅನುಭವಿಸುವ ವರೆಗೆ (ನಮ್ಮ ಸಂದೇಶವನ್ನು) ಸುಳ್ಳಾಗಿಸಿದ್ದರು. ನೀನು ಹೇಳು: 'ನಮ್ಮ ಮುಂದಿರಿಸತಕ್ಕ ಜ್ಞಾನವೇನಾದರೂ ನಿಮ್ಮ ಬಳಿ ಇದೆಯೇ? ನೀವು ಊಹಾಪೋಹಗಳನ್ನು ಮಾತ್ರ ಅನುಸರಿಸುತ್ತೀರಿ ಮತ್ತು ಅನುಮಾನದಿಂದಲೇ ವರ್ತಿಸುತ್ತೀರಿ.'

سَيَقُولُ الَّذِينَ أَشْرَكُوا لَوْ شَاءَ اللَّهُ مَا أَشْرَكْنَا وَلَا آبَاؤُنَا وَلَا حَرَّمْنَا مِن شَيْءٍ ۚ كَذَٰلِكَ كَذَّبَ الَّذِينَ مِن قَبْلِهِمْ حَتَّىٰ ذَاقُوا بَأْسَنَا ۗ قُلْ هَلْ عِندَكُم مِّنْ عِلْمٍ فَتُخْرِجُوهُ لَنَا ۖ إِن تَتَّبِعُونَ إِلَّا الظَّنَّ وَإِنْ أَنتُمْ إِلَّا تَخْرُصُونَ ﴿١٤٩﴾

**150.** ಹೇಳು: 'ಪ್ರಭಾವಶಾಲಿ ಸಾಕ್ಷ್ಯಗಳು ಅಲ್ಲಾಹನ ಬಳಿಯಲ್ಲಿವೆ. ಅವನು ಇಚ್ಛಿಸಿದರೆ ನಿಮಗೆಲ್ಲರಿಗೂ ಮಾರ್ಗದರ್ಶನ ನೀಡುತ್ತಿದ್ದನು.'

قُلْ فَلِلَّهِ الْحُجَّةُ الْبَالِغَةُ ۖ فَلَوْ شَاءَ لَهَدَاكُمْ أَجْمَعِينَ ﴿١٥٠﴾

234. ಬೇರೆ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವ ಮೃಗಗಳು.
234A. ಬೈಬಲ್ - ಯಾಜಕ ಕಾಂಡ 3:17, 7:23 ನೋಡಿರಿ.





**151.** ಹೇಳು: 'ಅಲ್ಲಾಹನು ಇದನ್ನು (ಇಂತಿಂತಹ ವಸ್ತುಗಳನ್ನು) ನಿಷಿದ್ಧಗೊಳಿಸಿರುವನೆಂದು ಸಾಕ್ಷ್ಯನೀಡುವ ನಿಮ್ಮ ಸಾಕ್ಷಿಗಳನ್ನು ಹಾಜರುಪಡಿಸಿರಿ.' ಅವರು (ಹಾಗೆ) ಸಾಕ್ಷ್ಯನೀಡಿದರೆ (ಕೂಡ) ನೀನು ಅವರೊಂದಿಗೆ ಸಾಕ್ಷ್ಯ ನೀಡಬಾರದು. ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವ, ಪರಲೋಕದಲ್ಲಿ ನಂಬಿಕೆಯಿಲ್ಲದ, ತಮ್ಮ ಪ್ರಭುವಿಗೆ ಸರಿಸಾಟಿಗಳನ್ನು ಕಲ್ಪಿಸುವವರ ದುರಾಶೆಗಳನ್ನು ನೀನು ಅನುಸರಿಸಬಾರದು.

قُلْ هَلُمَّ شُهَدَاءَكُمُ الَّذِينَ يَشْهَدُونَ أَنَّ اللَّهَ حَرَّمَ هَٰذَا ۖ فَإِن شَهِدُوا فَلَا تَشْهَدْ مَعَهُمْ ۚ وَلَا تَتَّبِعْ أَهْوَاءَ الَّذِينَ كَذَّبُوا بِآيَاتِنَا وَالَّذِينَ لَا يُؤْمِنُونَ بِالْآخِرَةِ وَهُم بِرَبِّهِمْ يَعْدِلُونَ ﴿١٥١﴾

**152.** ಹೇಳು: 'ಬನ್ನಿರಿ, ನಿಮ್ಮ ಪ್ರಭು ನಿಮಗೆ ಅಲಂಘ್ಯಗೊಳಿಸಿದುದನ್ನು ನಾನು ನಿಮಗೆ ಹೇಳಿಕೊಡುವೆನು. (ಅವನು ಹೀಗೆ ಆದೇಶಿಸುತ್ತಾನೆ:) ಅವನೊಂದಿಗೆ ಏನನ್ನೂ ನೀವು ಸಹಭಾಗಿಯಾಗಿ ಕಲ್ಪಿಸಬಾರದು. ಮಾತಾಪಿತರಿಗೆ ನೀವು ಒಳಿತನ್ನು ಮಾಡಿರಿ. ಬಡತನಕ್ಕೆ ಹೆದರಿಕೊಂಡು ನೀವು ನಿಮ್ಮ ಸಂತಾನಗಳನ್ನು ಕೊಲ್ಲಬಾರದು - ನಿಮಗೂ ಅವರಿಗೂ ಆಹಾರ ಒದಗಿಸುವವರು ನಾವಾಗಿದ್ದೇವೆ. ಬಹಿರಂಗವಾಗಿರುವ ಅಥವಾ ಗುಪ್ತವಾಗಿರುವ ಅಶ್ಲೀಲ ಕೃತ್ಯಗಳನ್ನು ನೀವು ಸಮೀಪಿಸಬಾರದು. ವಧಿಸಲು ಅಲ್ಲಾಹನು ನಿಷಿದ್ಧಗೊಳಿಸಿದ ಜೀವವನ್ನು ನಿಯಮಬದ್ಧವಾಗಿ ಹೊರತು ನೀವು ವಧಿಸಬಾರದು. ಹೀಗೆ ನೀವು ಮನವರಿಕೆ ಮಾಡಲಿಕ್ಕಾಗಿ ಅಲ್ಲಾಹನು ಈ ಬಗ್ಗೆ ನಿಮಗೆ ತಾಕೀತು ನೀಡಿ ಆದೇಶಿಸುತ್ತಾನೆ.

قُلْ تَعَالَوْا أَتْلُ مَا حَرَّمَ رَبُّكُمْ عَلَيْكُمْ ۖ أَلَّا تُشْرِكُوا بِهِ شَيْئًا ۖ وَبِالْوَالِدَيْنِ إِحْسَانًا ۖ وَلَا تَقْتُلُوا أَوْلَادَكُم مِّنْ إِمْلَاقٍ ۖ نَّحْنُ نَرْزُقُكُمْ وَإِيَّاهُمْ ۖ وَلَا تَقْرَبُوا الْفَوَاحِشَ مَا ظَهَرَ مِنْهَا وَمَا بَطَنَ ۖ وَلَا تَقْتُلُوا النَّفْسَ الَّتِي حَرَّمَ اللَّهُ إِلَّا بِالْحَقِّ ۚ ذَٰلِكُمْ وَصَّاكُم بِهِ لَعَلَّكُمْ تَعْقِلُونَ ﴿١٥٢﴾

**153.** '(ಅಲ್ಲಾಹನು ಹೀಗೂ ಆದೇಶಿಸುತ್ತಾನೆ:) ಅನಾಥನು ಪ್ರಾಪ್ತವಯಸ್ಕನಾಗುವ ತನಕ ಉತ್ತಮ ರೀತಿಯಲ್ಲಿ ಹೊರತು (ಅಪ್ರಾಮಾಣಿಕ ಉದ್ದೇಶದಿಂದ) ಅವನ ಸಂಪತ್ತನ್ನು ನೀವು ಸಮೀಪಿಸಬಾರದು. ಅಳತೆ ಮತ್ತು ತೂಕವನ್ನು ನ್ಯಾಯಬದ್ಧವಾಗಿ ಮಾಡಿರಿ. ಯಾವುದೇ ಆತ್ಮಕ್ಕೂ ಅದರ ಸಾಮರ್ಥ್ಯಕ್ಕೆ ಮೀರಿದ ಹೊಣೆಗಾರಿಕೆಯನ್ನು ನಾವು ಹೇರುವುದಿಲ್ಲ. ನೀವು ಮಾತನಾಡುವಾಗ (ಆ ಮಾತಿಗೆ ಸಂಬಂಧಿಸಿದವರು) ನಿಮ್ಮ ನಿಕಟ ಬಂಧುಗಳಾದರೆ ಕೂಡ ನ್ಯಾಯವನ್ನು

وَلَا تَقْرَبُوا مَالَ الْيَتِيمِ إِلَّا بِالَّتِي هِيَ أَحْسَنُ حَتَّىٰ يَبْلُغَ أَشُدَّهُ ۖ وَأَوْفُوا الْكَيْلَ وَالْمِيزَانَ بِالْقِسْطِ ۖ لَا نُكَلِّفُ نَفْسًا إِلَّا وُسْعَهَا ۖ وَإِذَا قُلْتُمْ فَاعْدِلُوا وَلَوْ كَانَ ذَا قُرْبَىٰ ۖ وَبِعَهْدِ اللَّهِ أَوْفُوا ۚ ذَٰلِكُمْ وَصَّاكُم بِهِ لَعَلَّكُمْ

تَذَكَّرُونَ ﴿١٥٢﴾

ಪಾಲಿಸಿರಿ. ಅಲ್ಲಾಹನ ಕರಾರನ್ನು ಈಡೇರಿಸಿರಿ. ನೀವು ನೆನಪಿಟ್ಟುಕೊಳ್ಳಲಿಕ್ಕಾಗಿ ಅವನು ಹೀಗೆ ನಿಮಗೆ ತಾಕೀತು ನೀಡುತ್ತಾನೆ.'

وَأَنَّ هَٰذَا صِرَاطِي مُسْتَقِيمًا فَاتَّبِعُوهُ ۖ وَلَا تَتَّبِعُوا السُّبُلَ فَتَفَرَّقَ بِكُمْ عَن سَبِيلِهِ ۚ ذَٰلِكُمْ وَصَّاكُم بِهِ لَعَلَّكُمْ تَتَّقُونَ ﴿١٥٣﴾

**154.** (ಹೇಳು:) 'ಇದೇ ನನ್ನ ಸತ್ಪಥ. ಆದುದರಿಂದ ಇದನ್ನು ಅನುಸರಿಸಿರಿ. (ಬೇರೆ) ಮಾರ್ಗಗಳನ್ನು ನೀವು ಅನುಸರಿಸಬೇಡಿರಿ. ಅವು ನಿಮ್ಮನ್ನು ಅವನ ಮಾರ್ಗದಿಂದ ದೂರಕ್ಕೆ ಕೊಂಡೊಯ್ಯುವುವು. ನೀವು ದುಷ್ಕೃತ್ಯಗಳಿಂದ ಸುರಕ್ಷಿತರಾಗಲಿಕ್ಕಾಗಿ ಅವನು ಹೀಗೆ ನಿಮಗೆ ಉಪದೇಶಿಸುತ್ತಾನೆ.'

ثُمَّ آتَيْنَا مُوسَى الْكِتَابَ تَمَامًا عَلَى الَّذِي أَحْسَنَ وَتَفْصِيلًا لِّكُلِّ شَيْءٍ وَهُدًى وَرَحْمَةً لَّعَلَّهُم بِلِقَاءِ رَبِّهِمْ يُؤْمِنُونَ ﴿١٥٤﴾

**155.** ಮತ್ತೆ, ಮೂಸಾರಿಗೆ ನಾವು ಎಲ್ಲ ವಿಚಾರಗಳ ವಿವರಣೆಯಾಗಿಯೂ ಮಾರ್ಗದರ್ಶಕವಾಗಿಯೂ ಕಾರುಣ್ಯವಾಗಿಯೂ ಉತ್ತಮವಾದ ಎಲ್ಲ ಸಂಗತಿಗಳನ್ನೊಳಗೊಂಡ ಗ್ರಂಥವನ್ನು ನೀಡಿರುವೆವು - ತಮ್ಮ ಪ್ರಭುವನ್ನು ಸಂಧಿಸುವ ಬಗ್ಗೆ ಅವರು ನಂಬಲಿಕ್ಕೋಸ್ಕರ.

وَهَٰذَا كِتَابٌ أَنزَلْنَاهُ مُبَارَكٌ فَاتَّبِعُوهُ وَاتَّقُوا لَعَلَّكُمْ تُرْحَمُونَ ﴿١٥٥﴾

**156.** ನಂತರ ನಾವು ಅವತೀರ್ಣಗೊಳಿಸಿದ ಅನುಗ್ರಹದಾಯಕವಾದ ಗ್ರಂಥ ಇದಾಗಿದೆ. ಆದ್ದರಿಂದ ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕಾಗಿ ನೀವು ಇದನ್ನು ಅನುಸರಿಸಿರಿ ಹಾಗೂ ದುಷ್ಕೃತ್ಯಗಳಿಂದೆಲ್ಲ ಜಾಗರೂಕರಾಗಿದ್ದುಕೊಳ್ಳಿರಿ.

أَن تَقُولُوا إِنَّمَا أُنزِلَ الْكِتَابُ عَلَىٰ طَائِفَتَيْنِ مِن قَبْلِنَا وَإِن كُنَّا عَن دِرَاسَتِهِمْ لَغَافِلِينَ ﴿١٥٦﴾

**157.** 'ನಮಗಿಂತ ಮುಂಚೆ ಎರಡು ಜನಾಂಗಗಳಿಗೆ[235] ಮಾತ್ರ ಗ್ರಂಥ ನೀಡಲ್ಪಟ್ಟಿತ್ತು; ನಾವಾದರೋ ಅವರ (ಗ್ರಂಥಗಳನ್ನು) ಕಲಿಯುವ ಬಗ್ಗೆ ಅಲಕ್ಷ್ಯರಾಗಿ ದ್ದೆವು' ಎಂದು ನೀವು ಹೇಳದಿರಲಿಕ್ಕಾಗಿ.

أَوْ تَقُولُوا لَوْ أَنَّا أُنزِلَ عَلَيْنَا الْكِتَابُ لَكُنَّا أَهْدَىٰ مِنْهُمْ ۚ فَقَدْ جَاءَكُم بَيِّنَةٌ مِّن رَّبِّكُمْ وَهُدًى وَرَحْمَةٌ ۚ فَمَنْ

**158.** ಅಥವಾ 'ನಮಗೆ ಗ್ರಂಥ ನೀಡಲ್ಪಟ್ಟಿದ್ದರೆ ನಾವು ಅವರಿಗಿಂತ ಹೆಚ್ಚು ಸತ್ಪಥವನ್ನು ಗಳಿಸುತ್ತಿದ್ದೆವು' ಎಂದು ನೀವು ಹೇಳದಿರಲಿಕ್ಕಾಗಿಯೂ. ಈಗ ನಿಮ್ಮ ಪ್ರಭುವಿನಿಂದ ಸ್ಪಷ್ಟವಾದ ಪುರಾವೆಯೂ ಮಾರ್ಗದರ್ಶ

235. ಯಹೂದಿಯರು ಮತ್ತು ಕ್ರೈಸ್ತರು.





أَظْلَمُ مِمَّن كَذَّبَ بِآيَاتِ اللَّهِ وَصَدَفَ عَنْهَا ۗ سَنَجْزِي الَّذِينَ يَصْدِفُونَ عَنْ آيَاتِنَا سُوءَ الْعَذَابِ بِمَا كَانُوا يَصْدِفُونَ ﴿١٥٧﴾

ನವೂ ಕಾರುಣ್ಯವೂ ನಿಮ್ಮೆಡೆಗೆ ಬಂದಿದೆ. ಹಾಗಿರುವಾಗ, ಅಲ್ಲಾಹನ ವಚನಗಳನ್ನು ಧಿಕ್ಕರಿಸಿ ಅವುಗಳಿಂದ ಮುಖತಿರುಗಿಸುವವನಿಗಿಂತ ಅಧರ್ಮಿ ಬೇರೆ ಯಾರು? ನಮ್ಮ ದೃಷ್ಟಾಂತಗಳಿಂದ ಮುಖತಿರುಗಿಸಿದವರಿಗೆ, ಅವರು ಮುಖ ತಿರುಗಿಸಿದ್ದಕ್ಕೆ ಪ್ರತೀಕಾರವಾಗಿ ನಾವು ಕಠಿಣವಾದ ಶಿಕ್ಷೆ ನೀಡುವೆವು.

هَلْ يَنظُرُونَ إِلَّا أَن تَأْتِيَهُمُ الْمَلَائِكَةُ أَوْ يَأْتِيَ رَبُّكَ أَوْ يَأْتِيَ بَعْضُ آيَاتِ رَبِّكَ ۗ يَوْمَ يَأْتِي بَعْضُ آيَاتِ رَبِّكَ لَا يَنفَعُ نَفْسًا إِيمَانُهَا لَمْ تَكُنْ آمَنَتْ مِن قَبْلُ أَوْ كَسَبَتْ فِي إِيمَانِهَا خَيْرًا ۗ قُلِ انتَظِرُوا إِنَّا مُنتَظِرُونَ ﴿١٥٨﴾

**159.** ಅವರ ಬಳಿಗೆ ದೇವದೂತರ ಆಗಮನ ಅಥವಾ ನಿನ್ನ ಪ್ರಭುವಿನ ಕೆಲವು ದೃಷ್ಟಾಂತಗಳ ಆಗಮನದ ಹೊರತು (ಬೇರೇನನ್ನಾದರೂ) ಅವರು ನಿರೀಕ್ಷಿಸುತ್ತಾರೆಯೇ? ನಿನ್ನ ಪ್ರಭುವಿನ ಕೆಲವು ದೃಷ್ಟಾಂತಗಳು ಪ್ರತ್ಯಕ್ಷಗೊಳ್ಳುವ ದಿನ, ಯಾವುದೇ ಆತ್ಮಕ್ಕೂ-ಅದು ಮೊದಲು ನಂಬಿರದಿದ್ದರೆ ಅಥವಾ ನಂಬಿಕೆಯ ಮೂಲಕ ಒಳಿತನ್ನು ಸಂಪಾದಿಸಿರದಿದ್ದರೆ - ಅದರ ನಂಬಿಕೆ ಉಪಯುಕ್ತವಾಗಲಿಕ್ಕಿಲ್ಲ. ಹೇಳು: 'ನೀವು ನಿರೀಕ್ಷಿಸಿರಿ; ನಾವೂ ನಿರೀಕ್ಷಿಸುತ್ತೇವೆ.'

إِنَّ الَّذِينَ فَرَّقُوا دِينَهُمْ وَكَانُوا شِيَعًا لَّسْتَ مِنْهُمْ فِي شَيْءٍ ۚ إِنَّمَا أَمْرُهُمْ إِلَى اللَّهِ ثُمَّ يُنَبِّئُهُم بِمَا كَانُوا يَفْعَلُونَ ﴿١٥٩﴾

**160.** ತಮ್ಮ ಧರ್ಮವನ್ನು ಛಿನ್ನ ಭಿನ್ನ ಮಾಡಿ, ವಿವಿಧ ಪಂಗಡಗಳಾಗಿ ಬೇರ್ಪಡುವವರೊಡನೆ ನಿನಗೆ ಯಾವ ಸಂಬಂಧವೂ ಇಲ್ಲ. ಅವರ ಪ್ರಕರಣ ಅಲ್ಲಾಹನ ಬಳಿ ಇದೆ. ಅವರ ಕೃತ್ಯಗಳ ಬಗ್ಗೆ ಆಮೇಲೆ ಅಲ್ಲಾಹನು ಅವರಿಗೆ ತಿಳಿಸಿಕೊಡುವನು.

مَن جَاءَ بِالْحَسَنَةِ فَلَهُ عَشْرُ أَمْثَالِهَا ۖ وَمَن جَاءَ بِالسَّيِّئَةِ فَلَا يُجْزَىٰ إِلَّا مِثْلَهَا وَهُمْ لَا يُظْلَمُونَ ﴿١٦٠﴾

**161.** ಯಾರಾದರೂ ಒಳಿತು ಮಾಡಿದರೆ ಅದರ ಹತ್ತು ಪಟ್ಟು ಪ್ರತಿಫಲ ಅವನಿಗಿದೆ. ಯಾರಾದರೂ ಕೆಡುಕು ಮಾಡಿದರೆ ತತ್ತುಲ್ಯವಾದ ಪ್ರತಿಫಲ ಮಾತ್ರ ಅವನಿಗಿದೆ. ಅವನೊಡನೆ ಅನ್ಯಾಯವೆಸಗಲ್ಪಡದು.

قُلْ إِنَّنِي هَدَانِي رَبِّي إِلَىٰ صِرَاطٍ مُّسْتَقِيمٍ دِينًا قِيَمًا مِّلَّةَ إِبْرَاهِيمَ حَنِيفًا ۚ وَمَا كَانَ مِنَ الْمُشْرِكِينَ ﴿١٦١﴾

**162.** ಹೇಳು: 'ನನ್ನ ಪ್ರಭು ದಿಟವಾಗಿಯೂ ನನ್ನನ್ನು ಸತ್ಪಥದೆಡೆಗೆ ಕೊಂಡೊಯ್ದಿದ್ದಾನೆ. ಸತ್ಯ ಧರ್ಮದೆಡೆಗೆ, ಅಂದರೆ ಧರ್ಮನಿಷ್ಠರಾದ ಇಬ್‌ರಾಹೀಮರ ಧರ್ಮದೆಡೆಗೆ. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.'

**163.** **ಹೇಳು: 'ನನ್ನ ನಮಾಝ್, ನನ್ನ ತ್ಯಾಗ, ನನ್ನ ಜೀವನ, ನನ್ನ ಮರಣ ಎಲ್ಲವೂ ಸರ್ವಲೋಕ ಪರಿಪಾಲಕನಾದ ಅಲ್ಲಾಹನಿಗಾಗಿವೆ.**

قُلْ اِنَّ صَلَاتِيْ وَ نُسُكِيْ وَ مَحْيَايَ وَ
مَمَاتِيْ لِلّٰهِ رَبِّ الْعٰلَمِيْنَ ﴿١٦٣﴾

**164.** **'ಅವನಿಗೆ ಯಾರೂ ಸಹಭಾಗಿ ಇಲ್ಲ. ನಾನು ಹಾಗೆ ಆಜ್ಞಾಪಿಸಲ್ಪಟ್ಟಿರುವೆನು. ಆಜ್ಞಾನುಸಾರಿಗಳಲ್ಲಿ ನಾನು ಮೊದಲಿಗನು.'**

لَا شَرِيْكَ لَهٗ ۚ وَبِذٰلِكَ اُمِرْتُ وَاَنَا اَوَّلُ
الْمُسْلِمِيْنَ ﴿١٦٤﴾

**165.** **ಹೇಳು: 'ಅಲ್ಲಾಹನ ಹೊರತು ಬೇರೆ ಯಾರನ್ನಾದರೂ ಪ್ರಭುವಾಗಿ ನಾನು ಹುಡುಕಬೇಕೇ? ಅವನಾದರೋ, ಸರ್ವವಸ್ತುಗಳ ಪರಿಪಾಲಕನಾಗಿದ್ದಾನೆ.' ಪ್ರತಿಯೊಂದು ಆತ್ಮ ಅದರ ಕೃತ್ಯಕ್ಕೆ ಹೊಣೆಯಾಗಿದೆ. ಯಾವನೇ ಭಾರ ಹೊರುವವನು ಇನ್ನೊಬ್ಬನ ಭಾರವನ್ನು ಹೊರಲಾರ. ಆ ಬಳಿಕ ನಿಮ್ಮ ಪ್ರಭುವಿನ ಬಳಿಗೇ ನಿಮ್ಮ ಮರಳಿಕೆಯಾಗಿದೆ. ನಿಮ್ಮ ಭಿನ್ನಾಭಿಪ್ರಾಯದ ಕುರಿತು ಆಗ ಅವನು ನಿಮಗೆ ತಿಳಿಸಿಕೊಡುವನು.**

قُلْ اَغَيْرَ اللّٰهِ اَبْغِيْ رَبًّا وَّهُوَ رَبُّ كُلِّ
شَيْءٍ ۚ وَلَا تَكْسِبُ كُلُّ نَفْسٍ اِلَّا عَلَيْهَا ۚ
وَلَا تَزِرُ وَازِرَةٌ وِّزْرَ اُخْرٰى ۚ ثُمَّ اِلٰى
رَبِّكُمْ مَّرْجِعُكُمْ فَيُنَبِّئُكُمْ
بِمَا كُنْتُمْ فِيْهِ تَخْتَلِفُوْنَ ﴿١٦٥﴾

**166.** **ಅವನೇ ನಿಮ್ಮನ್ನು ಭೂಮಿಯಲ್ಲಿ** (ಪೂರ್ವಿಕರ) **ಉತ್ತರಾಧಿಕಾರಿಗಳನ್ನಾಗಿ ಮಾಡಿದವನು. ಅವನು ನಿಮಗೆ ನೀಡಿದುದರ ಮೂಲಕ ನಿಮ್ಮನ್ನು ಪರೀಕ್ಷೆಗೊಳಪಡಿಸಲಿಕ್ಕೆ ನಿಮ್ಮಲ್ಲಿ ಕೆಲವರಿಗೆ ಬೇರೆ ಕೆಲವರಿಗಿಂತ ಉನ್ನತ ಸ್ಥಾನವನ್ನು ನೀಡಿರುವನು. ನಿಶ್ಚಯವಾಗಿಯೂ ನಿನ್ನ ಪ್ರಭು ಬೇಗನೆ ಶಿಕ್ಷಿಸುವವನಾಗಿದ್ದಾನೆ. ನಿಸ್ಸಂದೇಹವಾಗಿಯೂ ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

وَهُوَ الَّذِيْ جَعَلَكُمْ خَلٰٓئِفَ الْاَرْضِ
وَرَفَعَ بَعْضَكُمْ فَوْقَ بَعْضٍ دَرَجٰتٍ
لِّيَبْلُوَكُمْ فِيْ مَآ اٰتٰىكُمْ ۚ اِنَّ رَبَّكَ
سَرِيْعُ الْعِقَابِ ۖ وَاِنَّهٗ لَغَفُوْرٌ رَّحِيْمٌ ﴿١٦٦﴾

سُوْرَةُ الْاَعْرَافِ مَكِّيَّةٌ وَّهِيَ مَعَ الْبَسْمَلَةِ مِائَتَانِ وَّسَبْعُ اٰيٰتٍ وَّاَرْبَعَةٌ وَّعِشْرُوْنَ رُكُوْعًا

# 7. ಅಲ್‌ಅಲ್‌ರಾಫ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 207 ಆಯತ್‌ಗಳು ಹಾಗೂ 24 ರುಕೂಉ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ﴿١﴾

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

الٓمّٓصٓ ﴿٢﴾

**2.** ಅಲಿಫ್ ಲಾಂ ಮೀಂ ಸ್ವಾದ್[236]

كِتٰبٌ اُنْزِلَ اِلَيْكَ فَلَا يَكُنْ فِيْ صَدْرِكَ حَرَجٌ مِّنْهُ لِتُنْذِرَ بِهٖ وَذِكْرٰى لِلْمُؤْمِنِيْنَ ﴿٣﴾

**3.** (ಇದು) ನಿನಗೆ ಅವತೀರ್ಣಗೊಳಿಸಲಾದ ಒಂದು ಶ್ರೇಷ್ಠ ಗ್ರಂಥವಾಗಿದೆ- ಆದ್ದರಿಂದ ನಿನ್ನ ಹೃದಯದಲ್ಲಿ ಅದರ ಕುರಿತು ಯಾವ ಪ್ರಯಾಸವೂ ಉಂಟಾಗದಿರಲಿ - ಇದರ ಮೂಲಕ ನೀನು ಮುನ್ನೆಚ್ಚರಿಕೆ ನೀಡಲಿಕ್ಕಾಗಿ. ಇದು ಸತ್ಯವಿಶ್ವಾಸಿಗಳಿಗೆ ಪ್ರಬೋಧನೆಯೂ ಆಗಿದೆ.

اِتَّبِعُوْا مَآ اُنْزِلَ اِلَيْكُمْ مِّنْ رَّبِّكُمْ وَلَا تَتَّبِعُوْا مِنْ دُوْنِهٖٓ اَوْلِيَآءَ ۭ قَلِيْلًا مَّا تَذَكَّرُوْنَ ﴿٤﴾

**4.** ನಿಮ್ಮ ಪ್ರಭುವಿನಿಂದ ಅವತೀರ್ಣವಾದುದನ್ನು ಅನುಸರಿಸಿರಿ. ಅವನನ್ನು ಹೊರತು (ನಿಮ್ಮ ಭಾವನೆಯ) ಬೇರೆ ಸಂರಕ್ಷಕರನ್ನು ನೀವು ಅನುಗಮಿಸಬೇಡಿರಿ. (ಆದರೆ) ನೀವು ಉಪದೇಶ ಗ್ರಹಿಸುವುದು ಬಹಳ ವಿರಳ.

وَكَمْ مِّنْ قَرْيَةٍ اَهْلَكْنٰهَا فَجَآءَهَا بَاْسُنَا بَيَاتًا اَوْ هُمْ قَآئِلُوْنَ ﴿٥﴾

**5.** ಅದೆಷ್ಟು ನಾಡುಗಳನ್ನು ನಾವು ನಾಶಪಡಿಸಿದೆವು. ನಮ್ಮ ಶಿಕ್ಷೆ ರಾತ್ರಿ ಹೊತ್ತು ಅಥವಾ ಮಧ್ಯಾಹ್ನ ಅವರು ವಿಶ್ರಾಂತಿ ಪಡೆಯುತ್ತಿರುವಾಗ ಬಂದೆರಗಿತು.

فَمَا كَانَ دَعْوٰىهُمْ اِذْ جَآءَهُمْ بَاْسُنَآ اِلَّآ اَنْ قَالُوْٓا اِنَّا كُنَّا ظٰلِمِيْنَ ﴿٦﴾

**6.** ಹಾಗೆ ನಮ್ಮ ಶಿಕ್ಷೆ ಅವರಿಗೆ ಬಂದೆರಗಿದಾಗ ಅವರ ಪ್ರಲಾಪ, 'ದಿಟವಾಗಿಯೂ ನಾವು ದುಷ್ಕರ್ಮಿಗಳಾಗಿದ್ದೆವು' ಎಂದು ವಿನಾ ಬೇರೇನೂ ಆಗಿರಲಿಲ್ಲ.

فَلَنَسْــَٔلَنَّ الَّذِيْنَ اُرْسِلَ اِلَيْهِمْ وَ

**7.** ಆದ್ದರಿಂದ ಯಾರ ಬಳಿಗೆ ಸಂದೇಶವಾಹಕರು ಕಳುಹಿಸಲ್ಪಟ್ಟಿದ್ದರೋ, ಅವರನ್ನು ನಾವು ಖಂಡಿತ

236. "ಅನ ಅಲ್ಲಾಹು ಅಲ್‌ಲಮುಸ್ಸಾದಿಖ್" - ನಾನು ಅಲ್ಲಾಹ್ ಅತ್ಯಂತ ತಿಳಿದವನೂ ಸತ್ಯಸಂಧನೂ ಆಗಿದ್ದೇನೆ. ಅಂದರೆ, ನಾನು ಅವತೀರ್ಣಗೊಳಿಸುವ ಅಧ್ಯಾಪನೆ ಸತ್ಯದಿಂದ ಕೂಡಿದುದಾಗಿದೆ. (ಅಧ್ಯಾಯ 2, ವಚನ 2ರ ಟಿಪ್ಪಣಿ ನೋಡಿರಿ)





لَنَسْــَٔلَنَّ الْمُرْسَلِيْنَ ﴿٧﴾

ವಾಗಿಯೂ ಪ್ರಶ್ನಿಸುವೆವು. ಸಂದೇಶವಾಹಕರನ್ನೂ ನಾವು ನಿಶ್ಚಯವಾಗಿಯೂ ಪ್ರಶ್ನಿಸುವೆವು.

فَلَنَقُصَّنَّ عَلَيْهِمْ بِعِلْمٍ وَّمَا كُنَّا غَآئِبِيْنَ ﴿٨﴾

**8.** ಅನಂತರ ನಾವು ಖಂಡಿತವಾಗಿಯೂ (ಅವರ ಕೃತ್ಯಗಳ ಬಗ್ಗೆ) ಸರಿಯಾದ ಜ್ಞಾನದೊಂದಿಗೆ ಅವರಿಗೆ ವಿವರಿಸಿಕೊಡುವೆವು. ನಾವೆಂದಿಗೂ (ಅವರಿಂದ) ಮರೆಯಾಗಿರಲಿಲ್ಲ.

وَالْوَزْنُ يَوْمَئِذِ ِۨالْحَقُّ ۚ فَمَنْ ثَقُلَتْ مَوَازِيْنُهٗ فَاُولٰٓئِكَ هُمُ الْمُفْلِحُوْنَ ﴿٩﴾

**9.** ಅಂದು (ಎಲ್ಲ ಕೃತ್ಯಗಳನ್ನೂ) ತೂಕ ಮಾಡಲಾಗುವುದು ಪರಮ ಸತ್ಯವಾಗಿದೆ. ಆಗ ಯಾರ (ಸತ್ಕರ್ಮಗಳ) ತೂಗು ತಟ್ಟೆ ಭಾರವಾಗಿರುವುದೋ ಅವರು ಯಶಸ್ಸು ಹೊಂದುವರು.

وَمَنْ خَفَّتْ مَوَازِيْنُهٗ فَاُولٰٓئِكَ الَّذِيْنَ خَسِرُوْٓا اَنْفُسَهُمْ بِمَا كَانُوْا بِاٰيٰتِنَا يَظْلِمُوْنَ ﴿١٠﴾

**10.** ಯಾರ (ಒಳಿತಿನ) ತೂಗು ತಟ್ಟೆ ಹಗುರ ವಾಗಿರುತ್ತದೋ ಅವರು ತಮ್ಮ ಆತ್ಮಗಳನ್ನು ನಾಶಪಡಿಸಿದವರಾಗಿದ್ದಾರೆ. ಏಕೆಂದರೆ ಅವರು ನಮ್ಮ ದೃಷ್ಟಾಂತಗಳ ವಿಚಾರದಲ್ಲಿ, ಅನ್ಯಾಯವೆಸಗಿದ ವರಾಗಿದ್ದರು.

وَلَقَدْ مَكَّنّٰكُمْ فِي الْاَرْضِ وَجَعَلْنَا لَكُمْ فِيْهَا مَعَايِشَ ۭ قَلِيْلًا مَّا تَشْكُرُوْنَ ﴿١١﴾ ع

**11.** ನಿಶ್ಚಯವಾಗಿಯೂ ನಾವು ನಿಮಗೆ ಭೂಮಿಯಲ್ಲಿ ವಾಸಸ್ಥಳವನ್ನು ಒದಗಿಸಿಕೊಟ್ಟು ಅಲ್ಲಿ ಜೀವನೋಪಾಯಗಳನ್ನು ದಯಪಾಲಿಸಿದೆವು. (ಆದರೆ) ನೀವು ಕೃತಜ್ಞತೆ ತೋರಿಸುವುದು ಬಹಳ ವಿರಳ.

وَلَقَدْ خَلَقْنٰكُمْ ثُمَّ صَوَّرْنٰكُمْ ثُمَّ قُلْنَا لِلْمَلٰٓئِكَةِ اسْجُدُوْا لِاٰدَمَ ڰ فَسَجَدُوْٓا اِلَّآ اِبْلِيْسَ ۭ لَمْ يَكُنْ مِّنَ السّٰجِدِيْنَ ﴿١٢﴾

**12.** ನಾವು ನಿಮ್ಮನ್ನು ಸೃಷ್ಟಿಸಿ ನಿಮಗೆ ರೂಪ ಕೊಟ್ಟೆವು. ಅನಂತರ ನಾವು 'ಆದಮರ ಆಜ್ಞಾನುಸರಣೆ ಮಾಡಿರಿ'[236A] ಎಂದು ದೇವದೂತರೊಡನೆ ಹೇಳಿದೆವು. ಅವರು (ಎಲ್ಲರೂ) ಆಜ್ಞಾನುಸರಣೆ ಮಾಡಿದರು. ಆದರೆ ಇಬ್‌ಲೀಸ್ ವಿಧೇಯನಾಗಲಿಲ್ಲ. ಅವನು ಆಜ್ಞಾನುಸರಣೆ ಮಾಡುವವರೊಂದಿಗೆ ಸೇರಲಿಲ್ಲ.

قَالَ مَا مَنَعَكَ اَلَّا تَسْجُدَ اِذْ اَمَرْتُكَ ۭ

**13.** (ಆಗ ಅಲ್ಲಾಹನು ಅವನೊಡನೆ) ಹೇಳಿದನು: 'ನಾನು ನಿನಗೆ ಆಜ್ಞಾಪಿಸಿದಾಗ [237] ಅನುಸರಿಸುವುದರಿಂದ

236A. ಅಧ್ಯಾಯ 2, ವಚನ 35ರ ಟಿಪ್ಪಣಿ ನೋಡಿರಿ.

237. ಉನ್ನತಾಧಿಕಾರಿಗಳಿಗೆ ನೀಡಿದ ಆಜ್ಞೆ ಕೆಳವರ್ಗದವರಿಗೂ ಅನ್ವಯಿಸುವಂತೆ ದೇವದೂತರಿಗೆ ಕೊಟ್ಟ ಅನುಜ್ಞೆ ಇಬ್ಲೀಸನಿಗೆ ಸಹ ಅನ್ವಯವಾಗುತ್ತದೆ.

ನಿನ್ನನ್ನು ತಡೆದುದೇನು?' ಅವನು ಉತ್ತರಿಸಿದನು: 'ನಾನು ಅವನಿಗಿಂತ ಉತ್ತಮನಾಗಿದ್ದೇನೆ. ನೀನು ನನ್ನನ್ನು ಅಗ್ನಿಯಿಂದ ಸೃಷ್ಟಿಸಿರುವೆ; ಮತ್ತು ಅವನನ್ನು ಆವೆಮಣ್ಣಿನಿಂದ ಸೃಷ್ಟಿಸಿರುವೆ.'[238]

قَالَ أَنَا خَيْرٌ مِّنْهُ خَلَقْتَنِي مِن نَّارٍ وَخَلَقْتَهُ مِن طِينٍ ﴿١٢﴾

**14.** ಅಲ್ಲಾಹನು **ಹೇಳಿದನು: 'ಹಾಗಾದರೆ, ನೀನು ಇಲ್ಲಿಂದ ಹೊರಗೆ ನಡಿ. ಇಲ್ಲಿದ್ದುಕೊಂಡು ನೀನು ಅಹಂಕಾರದಿಂದ ವರ್ತಿಸಲು ಸಾಧ್ಯವಿಲ್ಲ. ಆದ್ದರಿಂದ ಹೊರಗೆ ಹೋಗು. ಖಂಡಿತವಾಗಿಯೂ ನೀನು ನೀಚರೊಂದಿಗೆ ಸೇರಿರುವೆ.'**

قَالَ فَاهْبِطْ مِنْهَا فَمَا يَكُونُ لَكَ أَن تَتَكَبَّرَ فِيهَا فَاخْرُجْ إِنَّكَ مِنَ الصَّاغِرِينَ ﴿١٣﴾

**15. ಅವನು ಹೇಳಿದನು: 'ಅವರು** (ಮನುಷ್ಯರು) **ಎಬ್ಬಿಸಲ್ಪಡುವ ದಿನದ ವರೆಗೆ**[239] **ನನಗೆ ಕಾಲಾವಕಾಶ ಕೊಡು.'**

قَالَ أَنظِرْنِي إِلَىٰ يَوْمِ يُبْعَثُونَ ﴿١٤﴾

**16.** ಅಲ್ಲಾಹನು **ಹೇಳಿದನು: 'ನೀನು ಕಾಲಾವಕಾಶ ನೀಡಲ್ಪಟ್ಟವರಲ್ಲಿ ಸೇರುತ್ತೀ.'**

قَالَ إِنَّكَ مِنَ الْمُنظَرِينَ ﴿١٥﴾

**17. ಅವನು ಹೇಳಿದನು: 'ನೀನು ನನ್ನನ್ನು ಮಾರ್ಗ ಭ್ರಷ್ಟನೆಂದು ತೀರ್ಮಾನಿಸಿರುವುದರಿಂದ, ಅವರನ್ನು ದಾರಿ ತಪ್ಪಿಸಲು ಖಂಡಿತವಾಗಿಯೂ ನಾನು ನಿನ್ನ ಸತ್ಪಥದಲ್ಲಿ ಅಡ್ಡ ಬರುವೆನು.**

قَالَ فَبِمَا أَغْوَيْتَنِي لَأَقْعُدَنَّ لَهُمْ صِرَاطَكَ الْمُسْتَقِيمَ ﴿١٦﴾

**18. 'ಅನಂತರ ಖಂಡಿತವಾಗಿಯೂ ನಾನು ಅವರ ಮುಂದಿನಿಂದಲೂ ಅವರ ಹಿಂದಿನಿಂದಲೂ ಅವರ ಬಲಗಡೆಯಿಂದಲೂ ಅವರ ಎಡಗಡೆಯಿಂದಲೂ ಅವರ ಸಮೀಪಕ್ಕೆ ಹೋಗುವೆನು.** (ಆಗ) **ಅವರಲ್ಲಿ ಹೆಚ್ಚಿನವರನ್ನು ನೀನು ಕೃತಜ್ಞರನ್ನಾಗಿ ಕಾಣಲಾರೆ.'**

ثُمَّ لَآتِيَنَّهُم مِّن بَيْنِ أَيْدِيهِمْ وَمِنْ خَلْفِهِمْ وَعَنْ أَيْمَانِهِمْ وَعَن شَمَائِلِهِمْ ۖ وَلَا تَجِدُ أَكْثَرَهُمْ شَاكِرِينَ ﴿١٧﴾

238. ಮನುಷ್ಯ ಸ್ವಭಾವ ಆವೆಮಣ್ಣಿನಂತೆ ಹಲವು ರೂಪದಲ್ಲೂ ಭಾವದಲ್ಲೂ ಬದಲಾಯಿಸಲ್ಪಡುತ್ತದೆ. ಅಗ್ನಿಯ ಸ್ವಭಾವ ಇದರಿಂದ ಭಿನ್ನವಾದುದು. ಖುರ್‌ಆನಿನಲ್ಲಿ ಇನ್ನೊಂದೆಡೆ خُلِقَ الْإِنسَانُ مِنْ عَجَلٍ "ಮನುಷ್ಯನು ಶೀಘ್ರತೆಯಿಂದ ಸೃಷ್ಟಿಸಲ್ಪಟ್ಟಿದ್ದಾನೆ" (21:38) ಎಂದು ಹೇಳಿರುವಂತೆಯೇ ಇದು ಸಹ ಆಗಿದೆ. ಇದು ಮನುಷ್ಯನ ಪ್ರಕೃತಿ ಮತ್ತು ಸ್ವಭಾವವನ್ನು ಸೂಚಿಸುತ್ತದೆ. ಮನುಷ್ಯನು ಆವೆಮಣ್ಣಿನಿಂದಾಗಲಿ ಶೀಘ್ರತೆಯಿಂದಾಗಲಿ ತಯಾರು ಮಾಡಲ್ಪಟ್ಟಿರುತ್ತಾನೆಂದು ಇದರ ಅರ್ಥವಲ್ಲ. ಮನುಷ್ಯನ ಸ್ವಭಾವ ಗುಣದಲ್ಲಿ ಈ ಲಕ್ಷಣಗಳು ಇವೆ ಎಂದು ತಾತ್ಪರ್ಯ.

239. ಇದರ ಅರ್ಥ ಪುನರುತ್ಥಾನ ದಿನದ ವರೆಗೆ ಎಂದಲ್ಲ; ಮನುಷ್ಯನು ಆಧ್ಯಾತ್ಮಿಕ ಪ್ರಬುದ್ಧತೆಯನ್ನು ಗಳಿಸುವ ವರೆಗೆ ಎಂದು ತಾತ್ಪರ್ಯ.





**19.** ಅಲ್ಲಾಹನು **ಹೇಳಿದನು: '**(ಆದ್ದರಿಂದ) **ನಿಂದಿಸಲ್ಪಟ್ಟವನೂ ಬಹಿಷ್ಕೃತನೂ ಆಗಿ ಇಲ್ಲಿಂದ ನೀನು ತೊಲಗು. ಅವರ ಪೈಕಿ ಯಾರೆಲ್ಲ ನಿನ್ನನ್ನು ಹಿಂಬಾಲಿಸುವರೋ,** (ನಾನು ಅವರೊಡನೆ ಹೇಳುತ್ತೇನೆ:) **ಖಂಡಿತ ವಾಗಿಯೂ ನಿಮ್ಮಿಂದೆಲ್ಲ ನಾನು ನರಕವನ್ನು ತುಂಬಿಸುವೆನು.'**

قَالَ اخْرُجْ مِنْهَا مَذْءُومًا مَّدْحُورًا ۖ لَّمَن تَبِعَكَ مِنْهُمْ لَأَمْلَأَنَّ جَهَنَّمَ مِنكُمْ أَجْمَعِينَ ﴿١٨﴾

**20.** (ಅಲ್ಲಾಹನು ಹೇಳಿದನು:) **'ಎಲೈ ಆದಂ, ನೀನು ಮತ್ತು ನಿನ್ನ ಪತ್ನಿ ಈ ತೋಟದಲ್ಲಿ ವಾಸಮಾಡಿರಿ. ಅಲ್ಲಿ ನಿಮಗೆ ಇಷ್ಟಕರವಾದ ಸ್ಥಳಗಳಿಂದ ತಿನ್ನಿರಿ. ಆದರೆ ಈ** (ನಿಷಿದ್ಧಗೊಳಿಸಲಾದ) **ವೃಕ್ಷದ ಸಮೀಪಕ್ಕೆ ಹೋಗಬೇಡಿರಿ.**[240] **ಹಾಗೆ ಮಾಡಿದರೆ ನೀವಿಬ್ಬರೂ ದುಷ್ಕರ್ಮಿಗಳಾಗುವಿರಿ.'**

وَيَا آدَمُ اسْكُنْ أَنتَ وَزَوْجُكَ الْجَنَّةَ فَكُلَا مِنْ حَيْثُ شِئْتُمَا وَلَا تَقْرَبَا هَٰذِهِ الشَّجَرَةَ فَتَكُونَا مِنَ الظَّالِمِينَ ﴿١٩﴾

**21. ಆಗ ಮರೆಯಲ್ಲಿದ್ದ ಅವರ ನಗ್ನತೆಯನ್ನು ಅವರಿಗೆ ಕಾಣುವಂತೆ ಮಾಡಲಿಕ್ಕಾಗಿ**[241] **ಶೈತಾನನು ಅವರಿಬ್ಬರಿಗೂ ಕೆಟ್ಟ ವಿಚಾರವನ್ನು ದುರ್ಬೋಧಿಸಿದನು. 'ನೀವು ದೇವದೂತರಾಗಲಿ ಅಮರರಾಗಲಿ ಆಗಬಾರದೆಂಬ ಉದ್ದೇಶದಿಂದ ಮಾತ್ರ ನಿಮ್ಮ ಪ್ರಭು ಈ ವೃಕ್ಷದಿಂದ ನಿಮ್ಮನ್ನು ತಡೆದುದು' ಎಂದು ಅವನು ಹೇಳಿದನು.**[241A]

فَوَسْوَسَ لَهُمَا الشَّيْطَانُ لِيُبْدِيَ لَهُمَا مَا وُورِيَ عَنْهُمَا مِن سَوْآتِهِمَا وَقَالَ مَا نَهَاكُمَا رَبُّكُمَا عَنْ هَٰذِهِ الشَّجَرَةِ إِلَّا أَن تَكُونَا مَلَكَيْنِ أَوْ تَكُونَا مِنَ الْخَالِدِينَ ﴿٢٠﴾

**22. 'ನಿಜವಾಗಿಯೂ ನಾನು ನಿಮ್ಮ ಹಿತೈಷಿಯಾಗಿದ್ದೇನೆ' ಎಂದು ಅವನು ಪ್ರಮಾಣ ಮಾಡಿ ಅವರೊಡನೆ ಹೇಳಿದನು.**

وَقَاسَمَهُمَا إِنِّي لَكُمَا لَمِنَ النَّاصِحِينَ ﴿٢١﴾

240. ಅಂದರೆ ಆದಮರಿಗೆ ನಿಷಿದ್ಧಗೊಳಿಸಲಾದ ಕೆಲವು ಸಂಗತಿಗಳು ಎಂದರ್ಥ. ಖುರ್‌ಆನಿನಲ್ಲಿ ಒಳ್ಳೆಯ ಕಾರ್ಯಗಳನ್ನು ಒಳ್ಳೆಯ ವೃಕ್ಷಕ್ಕೂ ಕೆಟ್ಟ ಕಾರ್ಯಗಳನ್ನು ಕೆಟ್ಟ ವೃಕ್ಷಕ್ಕೂ ಹೋಲಿಸಲಾಗಿದೆ (14:25 - 27). ಇಲ್ಲಿ ಕೆಡುಕಿನೆಡೆಗೆ ವಾಲಬೇಡಿರಿ ಎಂದು ಆದೇಶಿಸಲಾಗಿದೆ.

241. ದುರ್ವಿಚಾರಗಳು ಮನುಷ್ಯನನ್ನು ನಾಶದೆಡೆಗೆ ಕೊಂಡೊಯ್ಯುವುದರ ಜೊತೆಗೆ ಅವುಗಳ ಮೂಲಕ ಅವನ ನ್ಯೂನತೆಗಳು ಬಹಿರಂಗಗೊಳ್ಳುವುವು.

241A. ನಿಷೇಧಿಸಲ್ಪಟ್ಟ ಸಂಗತಿಗಳನ್ನು ವರ್ಜಿಸುವುದು ತನ್ನ ಪ್ರಗತಿಗೆ ತಡೆಯಾಗುತ್ತದೆಂದು ಕೆಲವೊಮ್ಮೆ ಮನುಷ್ಯನು ತಪ್ಪು ಭಾವಿಸುತ್ತಾನೆ. ಉದಾಹರಣೆಗೆ, ಕಳ್ಳನು ಕದಿಯುವುದು ಅನ್ಯರ ಧನವನ್ನು ಅಪಹರಿಸದಿದ್ದರೆ ತನಗೆ ಸುಖವೂ ಅಭಿವೃದ್ಧಿಯೂ ಉಂಟಾಗಲಿಕ್ಕಿಲ್ಲವೆಂದು ಭಾವಿಸುವುದರಿಂದಾಗಿದೆ. ಲಂಚಕೋರನು ಭಾವಿಸುವುದು ಸಹ ಹಾಗೆಯೇ. ಅನ್ಯರ ಧನಾಪಹಾರ ಮಾಡುವುದು ತನ್ನ ಪುರೋಗತಿಗೂ ಭದ್ರತೆಗೂ ಆವಶ್ಯಕವೆಂದು ಮನುಷ್ಯನು ತಪ್ಪು ಗ್ರಹಿಸುತ್ತಾನೆ.

**23.** **ಹಾಗೆ ಅವನು ಅವರನ್ನು ಮೋಸಗೊಳಿಸಿ** (ಅವರ ಸ್ಥಾನದಿಂದ) **ಕೆಳಗಿಳಿಸಿದನು. ಅವರಿಬ್ಬರೂ ಆ ವೃಕ್ಷದಿಂದ ರುಚಿನೋಡಿದಾಗ ಅವರ ನಗ್ನತೆ ಅವರಿಗೆ ಗೋಚರವಾಗಿ, ಅವರು ಆ ತೋಟದ ಎಲೆಗಳಿಂದ ತಮ್ಮ ದೇಹವನ್ನು ಮುಚ್ಚಿಕೊಳ್ಳಲು ತೊಡಗಿದರು.**[242] **ಆಗ, ಅವರ ಪ್ರಭು ಅವರನ್ನು ಕರೆದು ಕೇಳಿದನು:**[242A] **'ನಾನು ನಿಮ್ಮಿಬ್ಬರನ್ನೂ ಆ ವೃಕ್ಷದಿಂದ ತಡೆದಿರಲಿಲ್ಲವೇ? ನಿಶ್ಚಯವಾಗಿಯೂ ಶೈತಾನನು ನಿಮ್ಮ ಬಹಿರಂಗ ಶತ್ರುವೆಂದು ಸಹ ನಾನು ನಿಮ್ಮೊಡನೆ ಹೇಳಿರಲಿಲ್ಲವೇ?'**

فَدَلَّاهُمَا بِغُرُورٍ ۚ فَلَمَّا ذَاقَا الشَّجَرَةَ
بَدَتْ لَهُمَا سَوْآتُهُمَا وَطَفِقَا يَخْصِفَانِ
عَلَيْهِمَا مِن وَرَقِ الْجَنَّةِ ۖ وَنَادَاهُمَا
رَبُّهُمَا أَلَمْ أَنْهَكُمَا عَن تِلْكُمَا الشَّجَرَةِ
وَأَقُل لَّكُمَا إِنَّ الشَّيْطَانَ لَكُمَا عَدُوٌّ
مُّبِينٌ ﴿٢٢﴾

**24.** **ಅವರು ಹೇಳಿದರು: 'ನಮ್ಮ ಪ್ರಭೂ, ನಾವೇ ನಮ್ಮ ಮೇಲೆ ಅಕ್ರಮವಾಗಿ ವರ್ತಿಸಿದೆವು. ನೀನು ನಮ್ಮನ್ನು ಕ್ಷಮಿಸಿಬಿಟ್ಟು ನಮ್ಮ ಮೇಲೆ ಕರುಣೆ ತೋರಿಸದಿದ್ದರೆ ಖಂಡಿತವಾಗಿಯೂ ನಾವು ನಷ್ಟಹೊಂದಿದವರಾಗುವೆವು.'**

قَالَا رَبَّنَا ظَلَمْنَا أَنفُسَنَا وَإِن لَّمْ تَغْفِرْ
لَنَا وَتَرْحَمْنَا لَنَكُونَنَّ مِنَ الْخَاسِرِينَ ﴿٢٣﴾

**25.** *ಆಗ ಅಲ್ಲಾಹನು* **ಹೇಳಿದನು : 'ನೀವು** (ಎಲ್ಲರೂ) **ಇಲ್ಲಿಂದ ಹೊರಟು ಹೋಗಿರಿ. ನಿಮ್ಮ ಪೈಕಿ ಕೆಲವರು ಬೇರೆ ಕೆಲವರ ವೈರಿಗಳಾಗಿದ್ದೀರಿ. ನಿಮಗೆ ಭೂಮಿಯಲ್ಲಿ ಒಂದು ವಾಸಸ್ಥಳವಿದೆ. ಒಂದು ಕಾಲಾವಧಿಯ ವರೆಗೆ ಜೀವನ ಸೌಕರ್ಯಗಳೂ ಇವೆ.'**

قَالَ اهْبِطُوا بَعْضُكُمْ لِبَعْضٍ عَدُوٌّ ۖ وَ
لَكُمْ فِي الْأَرْضِ مُسْتَقَرٌّ وَمَتَاعٌ إِلَىٰ
حِينٍ ﴿٢٤﴾

**26.** **ಅವನು ಹೇಳಿದನು: 'ಅದರಲ್ಲೇ** (ಭೂಮಿಯಲ್ಲೇ) **ನೀವು ಬದುಕುವಿರಿ;**[242B] **ಅದರಲ್ಲೇ ಮಡಿಯುವಿರಿ; ಅದರಿಂದಲೇ ನೀವು ಎಬ್ಬಿಸಲ್ಪಡುವಿರಿ.'**

قَالَ فِيهَا تَحْيَوْنَ وَفِيهَا تَمُوتُونَ وَ
مِنْهَا تُخْرَجُونَ ﴿٢٥﴾

242. ಮನುಷ್ಯನು ದುಷ್ಕೃತ್ಯ ಮಾಡಿದರೆ ಅವನ ಮನಸ್ಸಾಕ್ಷಿ ಅವನ ಕೃತ್ಯಗಳನ್ನು ಹಳಿಯುತ್ತದೆ. ಆಗ ಅವನು ಸತ್ಕರ್ಮಗಳಿಂದ ತನ್ನ ಕೆಡುಕುಗಳನ್ನು ಮರೆಮಾಚಲು ಪ್ರಯತ್ನಿಸುತ್ತಾನೆ. ಇಲ್ಲಿ "ತೋಟದ ಎಲೆಗಳು" ಅಂದರೆ ಮನುಷ್ಯನ ಸತ್ಕರ್ಮಗಳೆಂದು ತಾತ್ಪರ್ಯ. (ಖುರ್‌ಆನಿನಲ್ಲಿ ಪ್ರಯೋಗಿಸಲಾದ 'ವರಖಿಲ್ ಜನ್ನತಿ' ಎಂಬ ಪದಗಳಿಗೆ ಶೋಭೆಯ ಸಾಮಗ್ರಿಗಳು ಎಂದು ಸಹ ಅರ್ಥವಿದೆ.) ಅಂಥ ಸತ್ಕರ್ಮಗಳು ಅವನನ್ನು ಪುನಃ ಸ್ವರ್ಗಕ್ಕೆ ಅರ್ಹನನ್ನಾಗಿ ಮಾಡುತ್ತದೆ. ಅಂದರೆ, ಪಶ್ಚಾತ್ತಾಪ ಮತ್ತು ಸತ್ಕರ್ಮಗಳಿಂದ ಅವನು ತನ್ನ ನ್ಯೂನತೆಗಳನ್ನು ಬಚ್ಚಿಡಲು ಶ್ರಮಿಸುತ್ತಾನೆ. ಆದಂ ಮತ್ತು ಹವ್ವಾ ಹಾಗೆ ಮಾಡಿದರೆಂದು ತಾತ್ಪರ್ಯ.

242A. ವಚನ ರೂಪದಲ್ಲೇ ಎಲ್ಲರಿಗೂ ದೈವಿಕ ಬೋಧನೆ ಸಿದ್ಧಿಸುವುದೆಂದು ಇಲ್ಲಿ ಉದ್ದೇಶವಲ್ಲ. ತಪ್ಪು ಮಾಡಿದರೆ ಮನುಷ್ಯನ ಅಂತಃಕರಣ ಅವನ ಕೃತ್ಯಗಳ ಬಗ್ಗೆ ಸ್ವಯಂ ದೂಷಿಸುತ್ತದೆ. ಆಗ ಅವನಿಗೆ ಖೇದವೂ ಲಜ್ಜೆಯೂ ಉಂಟಾಗುತ್ತದೆ. ಅಲ್ಲಾಹನು ಹೇಳಿದ್ದು ಸತ್ಯವೆಂದೂ ತಾನು ಮಾಡಿದ್ದು ತಪ್ಪೆಂದೂ ಅವನ ಸಾತ್ವಿಕ ಗುಣ ಅವನಿಗೆ ತಿಳಿಸಿಕೊಡುತ್ತದೆ. ಹಾಗೆ ಅವನು ಪ್ರಾರ್ಥಿಸುತ್ತಾ ಕ್ಷಮಾಯಾಚನೆ ಮಾಡುತ್ತಾ ಅಲ್ಲಾಹನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ.





**27.** **ಓ ಆದಂ ಸಂತತಿಗಳೇ, ನಾವು ನಿಮಗೆ ನಿಮ್ಮ ನಗ್ನತೆಯನ್ನು ಮುಚ್ಚಲಿಕ್ಕೆ ಮತ್ತು ವೇಷಭೂಷಣಕ್ಕಾಗಿ ಉಡುಪನ್ನು ಇಳಿಸಿಕೊಟ್ಟಿದ್ದೇವೆ.**[242C] **ಆದರೆ ಭಯ ಭಕ್ತಿಯ ಉಡುಪೇ ಉತ್ತಮವಾದುದು. ಅದು ಅಲ್ಲಾಹನ ದೃಷ್ಟಾಂತಗಳಲ್ಲಿ ಒಂದಾಗಿದೆ; ಅವರು ಜ್ಞಾಪಿಸಲಿಕ್ಕಾಗಿ.**

يَا بَنِي آدَمَ قَدْ أَنزَلْنَا عَلَيْكُمْ
لِبَاسًا يُوَارِي سَوْآتِكُمْ وَرِيشًا ۖ وَ
لِبَاسُ التَّقْوَىٰ ذَٰلِكَ خَيْرٌ ۚ ذَٰلِكَ
مِنْ آيَاتِ اللَّهِ لَعَلَّهُمْ يَذَّكَّرُونَ ﴿٢٦﴾

**28.** **ಓ ಆದಂ ಸಂತತಿಗಳೇ, ನಿಮ್ಮ ಮಾತಾಪಿತರನ್ನು, ಅವರ ನಗ್ನತೆ ಅವರಿಗೆ ತೋರಿಸಿ ಕೊಡಲಿಕ್ಕಾಗಿ ಅವರ ವಸ್ತ್ರಗಳನ್ನು ಬಿಚ್ಚಿ ಅವರನ್ನು ತೋಟದಿಂದ ಹೊರಹಾಕಿಸಿದಂತೆ ಶೈತಾನನು ನಿಮ್ಮನ್ನು ದಾರಿತಪ್ಪಿಸದಿರಲಿ. ನಿಶ್ಚಯವಾಗಿಯೂ ಅವನು ಮತ್ತು ಅವನ ಸಹಚರರು ನೀವು ಅವರನ್ನು ಕಾಣದ ಕಡೆಯಿಂದ ನಿಮ್ಮನ್ನು ವೀಕ್ಷಿಸುತ್ತಾರೆ.**[243] **ದಿಟವಾಗಿಯೂ ಅವಿಶ್ವಾಸಿಗಳಿಗೆ ನಾವು ಶೈತಾನ್‌ಗಳನ್ನು ಮಿತ್ರರನ್ನಾಗಿ ಮಾಡಿದ್ದೇವೆ.**

يَا بَنِي آدَمَ لَا يَفْتِنَنَّكُمُ الشَّيْطَانُ كَمَا
أَخْرَجَ أَبَوَيْكُم مِّنَ الْجَنَّةِ يَنزِعُ
عَنْهُمَا لِبَاسَهُمَا لِيُرِيَهُمَا سَوْآتِهِمَا ۗ
إِنَّهُ يَرَاكُمْ هُوَ وَقَبِيلُهُ مِنْ حَيْثُ
لَا تَرَوْنَهُمْ ۗ إِنَّا جَعَلْنَا الشَّيَاطِينَ
أَوْلِيَاءَ لِلَّذِينَ لَا يُؤْمِنُونَ ﴿٢٧﴾

**29.** **ಅವರೇನಾದರೂ ದುಷ್ಕೃತ್ಯ ಮಾಡಿದರೆ, 'ನಮ್ಮ ತಂದೆ ತಾತಂದಿರು ಹೀಗೆ ಮಾಡುತ್ತಿರುವುದಾಗಿ ನಾವು ಕಂಡಿದ್ದೇವೆ;**[244] **ಅಲ್ಲಾಹನು ಅದನ್ನು ನಮಗೆ ಆದೇಶಿಸಿದ್ದಾನೆ' ಎಂದು ಅವರು ಹೇಳುತ್ತಾರೆ. ಹೇಳು: 'ಅಲ್ಲಾಹನು ಎಂದಿಗೂ ದುಷ್ಕೃತ್ಯವನ್ನು ಮಾಡಲು**

وَإِذَا فَعَلُوا فَاحِشَةً قَالُوا وَجَدْنَا
عَلَيْهَا آبَاءَنَا وَاللَّهُ أَمَرَنَا بِهَا ۗ قُلْ إِنَّ
اللَّهَ لَا يَأْمُرُ بِالْفَحْشَاءِ ۖ أَتَقُولُونَ عَلَى

242B. ಯಾವ ಮನುಷ್ಯನಿಗೂ ಈ ಭೂಮಿಯನ್ನು ಬಿಟ್ಟು ಆಕಾಶಕ್ಕೇರಿ ಬದುಕಲು ಸಾಧ್ಯವಿಲ್ಲ ಎಂದು ಈ ವಚನದಿಂದ ತಿಳಿದು ಬರುತ್ತದೆ. ಹಝ್ರತ್ ಈಸಾ (ಅ), ಹಝ್ರತ್ ಇದ್ರೀಸ್ (ಅ) ಎಂಬೀ ಪ್ರವಾದಿಗಳು ಆಕಾಶಾರೋಹಣ ಮಾಡಿ ಅಲ್ಲಿ ವಾಸ ಮಾಡುತ್ತಿದ್ದಾರೆಂದು ಕೆಲವರು ತಪ್ಪಾಗಿ ನಂಬುತ್ತಾರೆ. ಅವರಿಬ್ಬರೂ ಆಕಾಶದಲ್ಲಿ ಜೀವನ ಸಾಗಿಸುತ್ತಿದ್ದರೆ 'ನೀವು ಈ ಭೂಮಿಯಲ್ಲೇ ಬದುಕುವಿರಿ' ಎಂಬ ಖುರ್‌ಆನ್ ವಚನ ತಪ್ಪೆಂದು ಹೇಳಬೇಕಾದೀತು. ಅಥವಾ ಹಝ್ರತ್ ಈಸಾ (ಅ) ಮತ್ತು ಹಝ್ರತ್ ಇದ್ರೀಸ್ (ಅ) ಮನುಷ್ಯರಲ್ಲವೆಂದು ಹೇಳಬೇಕಾದೀತು. ಕಾರಣವೇನೆಂದರೆ, ಇವರ ಸಹಿತ ಮನುಷ್ಯರೆಲ್ಲರೂ ಈ ಭೂಮಿಯಲ್ಲೇ ಬದುಕಿ, ಇಲ್ಲೇ ಮರಣ ಹೊಂದಿ ಇಲ್ಲಿಂದಲೇ ಪುನರುತ್ಥಾನಗೊಳಿಸಲ್ಪಡುವರೆಂದು ಈ ವಚನದಿಂದ ಸ್ಪಷ್ಟವಾಗುತ್ತದೆ.

242C. ಇಲ್ಲಿ انزل ಇಳಿಸಿಕೊಂಡು ಎಂಬ ಪದ ಪ್ರಯೋಗಿಸಲ್ಪಟ್ಟಿದೆ. ಪವಿತ್ರ ಖುರ್‌ಆನಿನಲ್ಲಿ ಈ ಪದವನ್ನು ಸೃಷ್ಟಿಸು, ಉಂಟುಮಾಡು, ನಿಯೋಜಿಸು, ವರದಾನವಾಗಿ ನೀಡು ಎಂಬಿತ್ಯಾದಿ ಅರ್ಥಗಳಲ್ಲಿ ಬಳಸಲಾಗಿದೆ.

243. ಶೈತಾನನ ಸಂತತಿಗಳು ಈ ಲೋಕದಲ್ಲಿ ಬಹಳ ಚಾಕಚಕ್ಯತೆಯಿಂದ ವರ್ತಿಸುತ್ತಾರೆ. ಸತ್ಯವಿಶ್ವಾಸಿಗಳ ವರ್ತನೆಗಳನ್ನು ವೀಕ್ಷಿಸುತ್ತಾ ಅವುಗಳನ್ನು ತಪ್ಪಾಗಿ ಚಿತ್ರೀಕರಿಸಿ ಜನರನ್ನು ಅವರ ಶತ್ರುಗಳಾಗಿ ಪರಿವರ್ತಿಸಲು ಶೈತಾನ ವರ್ಗ ಸತತವಾಗಿ ಪ್ರಯತ್ನಿಸುತ್ತಾ ಇರುತ್ತದೆ.

اللَّهِ مَا لَا تَعْلَمُونَ ﴿٢٨﴾

**ಆದೇಶಿಸಲಾರ. ನಿಮಗೆ ತಿಳಿಯದಿರುವುದನ್ನು ಅಲ್ಲಾಹನ ಮೇಲೆ ಆರೋಪಿಸುತ್ತೀರೋ?'**

قُلْ أَمَرَ رَبِّي بِالْقِسْطِ ۖ وَأَقِيمُوا
وُجُوهَكُمْ عِندَ كُلِّ مَسْجِدٍ وَادْعُوهُ
مُخْلِصِينَ لَهُ الدِّينَ ۚ كَمَا بَدَأَكُمْ
تَعُودُونَ ﴿٢٩﴾

**30. ಹೇಳು: 'ನ್ಯಾಯಪಾಲನೆಯನ್ನು ನನ್ನ ಪ್ರಭು ಆದೇಶಿಸಿದ್ದಾನೆ. ಪ್ರತಿಯೊಂದು ಆರಾಧನೆಯ** (ಸಂದರ್ಭದಲ್ಲೂ) **ಸ್ಥಳದಲ್ಲೂ ನಿಮ್ಮ ಮುಖಗಳನ್ನು** (ಅಲ್ಲಾಹನೆಡೆಗೆ) **ತಿರುಗಿಸಿರಿ. ಧರ್ಮದ ವಿಚಾರದಲ್ಲಿ ಅವನಿಗೆ ಪೂರ್ಣ ವಿಧೇಯರಾಗಿದ್ದುಕೊಂಡು ಅವನನ್ನು ಕರೆದು ಪ್ರಾರ್ಥಿಸಿರಿ. ನಿಮ್ಮನ್ನು ಅವನು ಮುಂಚೆ ಸೃಷ್ಟಿಸಿದಂತೆಯೇ ಅವನೆಡೆಗೆ ನೀವು ಮರಳುವಿರಿ.'**

فَرِيقًا هَدَىٰ وَفَرِيقًا حَقَّ عَلَيْهِمُ
الضَّلَالَةُ ۗ إِنَّهُمُ اتَّخَذُوا الشَّيَاطِينَ
أَوْلِيَاءَ مِن دُونِ اللَّهِ وَيَحْسَبُونَ
أَنَّهُم مُّهْتَدُونَ ﴿٣٠﴾

**31. ಕೆಲವರನ್ನು ಅವನು ಸತ್ಪಥದಲ್ಲಿ ನಡೆಸಿದನು. ಬೇರೆ ಕೆಲವರು ದುರ್ಮಾರ್ಗಕ್ಕೆ ಅರ್ಹರಾದರು. ಖಂಡಿತವಾಗಿಯೂ ಅವರು ಅಲ್ಲಾಹನನ್ನು ಬಿಟ್ಟು ಶೈತಾನ್‌ಗಳನ್ನು ಮಿತ್ರರನ್ನಾಗಿ ಮಾಡಿರುವರು. ಆದರೂ ತಾವೇ ಸನ್ಮಾರ್ಗದಲ್ಲಿ ಚಲಿಸುವವರೆಂದು ಅವರು ಭಾವಿಸುತ್ತಾರೆ.**

يَا بَنِي آدَمَ خُذُوا زِينَتَكُمْ عِندَ كُلِّ
مَسْجِدٍ وَكُلُوا وَاشْرَبُوا وَلَا تُسْرِفُوا ۚ
إِنَّهُ لَا يُحِبُّ الْمُسْرِفِينَ ﴿٣١﴾

**32. ಓ ಆದಂ ಸಂತತಿಗಳೇ, ನಿಮ್ಮ ಆರಾಧನೆಯ ಪ್ರತಿಯೊಂದು** (ಸಮಯದಲ್ಲೂ) **ಸ್ಥಳದಲ್ಲೂ ನಿಮ್ಮ ಅಲಂಕಾರದ ಬಗ್ಗೆ ಗಮನವಿಡಿರಿ.[245] ನೀವು ತಿನ್ನಿರಿ, ಕುಡಿಯಿರಿ; ಆದರೆ ಮಿತಿಮೀರ ಬೇಡಿರಿ. ಮಿತಿಮೀರುವವರನ್ನು ಅವನು** (ಅಲ್ಲಾಹನು) **ಖಂಡಿತವಾಗಿಯೂ ಇಷ್ಟಪಡುವುದಿಲ್ಲ.**

قُلْ مَنْ حَرَّمَ زِينَةَ اللَّهِ الَّتِي أَخْرَجَ
لِعِبَادِهِ وَالطَّيِّبَاتِ مِنَ الرِّزْقِ ۚ قُلْ هِيَ
لِلَّذِينَ آمَنُوا فِي الْحَيَاةِ الدُّنْيَا خَالِصَةً
يَوْمَ الْقِيَامَةِ ۗ كَذَٰلِكَ نُفَصِّلُ الْآيَاتِ

**33. ಹೇಳು: 'ಅಲ್ಲಾಹನು ತನ್ನ ದಾಸರಿಗಾಗಿ ಒದಗಿಸಿಕೊಟ್ಟ ಅಲಂಕಾರ ಸಾಮಗ್ರಿಗಳನ್ನೂ ಶುದ್ಧ** (ಉತ್ತಮ) **ವಾದ ಆಹಾರಗಳನ್ನೂ ನಿಷಿದ್ಧಗೊಳಿಸಿದವರು ಯಾರು?'[246] ಹೇಳು :** '(ವಾಸ್ತವದಲ್ಲಿ) **ಐಹಿಕ ಜೀವನದಲ್ಲಿ ಅವು ಸತ್ಯವಿಶ್ವಾಸಿಗೊಳಿಗೋಸ್ಕರ ಇವೆ. ಹಾಗೂ ಪುನರುತ್ಥಾನದಂದು ಅವರಿಗಾಗಿಯೇ ಅವು ಮೀಸಲು.'**

244. ಪೂರ್ವಜರ ಆಚಾರ-ಸಂಪ್ರದಾಯಗಳನ್ನು ಬಿಗಿಯಾಗಿ ಹಿಡಿಯಬೇಕೆಂದೂ ವಿವೇಕಯುತವಾಗಿ ವರ್ತಿಸಬಾರದೆಂದೂ ಅವರು ಮೊಂಡು ಹಿಡಿಯುತ್ತಾರೆ.

245. ಅರ್ಥಾತ್ ಮಸೀದಿಗೆ ಹೋಗುವುದಕ್ಕೆ ಮುಂಚೆಯೇ ತಮ್ಮಲ್ಲಿ ಹೃದಯ ಶುದ್ಧಿಯನ್ನು ಮಾಡಿಕೊಳ್ಳಿರಿ. ಬಾಹ್ಯವಾದ ಶುದ್ಧಿಯನ್ನೂ ಮಾಡಿಕೊಳ್ಳಿರಿ. ಶರೀರ ಮತ್ತು ವಸ್ತ್ರವನ್ನೂ ಶುಚಿಯಾಗಿಡಿರಿ.





لِقَوْمٍ يَعْلَمُونَ ﴿٣٢﴾

**ತಿಳುವಳಿಕೆಯುಳ್ಳ ಜನರಿಗಾಗಿ ನಾವು ಹೀಗೆ ನಿದರ್ಶನಗಳನ್ನು ವಿವರಿಸಿಕೊಡುತ್ತೇವೆ.**

قُلْ إِنَّمَا حَرَّمَ رَبِّيَ الْفَوَاحِشَ مَا ظَهَرَ
مِنْهَا وَمَا بَطَنَ وَالْإِثْمَ وَالْبَغْيَ بِغَيْرِ
الْحَقِّ وَأَن تُشْرِكُوا بِاللَّهِ مَا لَمْ يُنَزِّلْ بِهِ
سُلْطَانًا وَأَن تَقُولُوا عَلَى اللَّهِ مَا لَا
تَعْلَمُونَ ﴿٣٣﴾

**34. ಹೇಳು: 'ಅಶ್ಲೀಲ ಕೃತ್ಯಗಳು-ಬಹಿರಂಗವಾಗಿರಲಿ ಅಥವಾ ಗುಪ್ತವಾಗಿರಲಿ, ಪಾಪ ಕೃತ್ಯಗಳು, ಅನ್ಯಾಯವಾಗಿ ಬಂಡಾಯವೇಳುವುದು, ಅಲ್ಲಾಹನು ಯಾವುದೇ ಸಾಕ್ಷ್ಯಾಧಾರ ನೀಡದಿರುವವುಗಳನ್ನು ಅವನಿಗೆ ಸಹಭಾಗಿ ಮಾಡುವುದು ಮತ್ತು ನಿಮಗೆ ತಿಳಿಯದಿದ್ದ ವಿಚಾರವನ್ನು ಅಲ್ಲಾಹನ ಮೇಲೆ ನೀವು ಆರೋಪಿಸುವುದು**(ಇವುಗಳನ್ನು) **ನನ್ನ ಪ್ರಭು ನಿಷಿದ್ಧಗೊಳಿಸಿದ್ದಾನೆ.'**

وَلِكُلِّ أُمَّةٍ أَجَلٌ ۖ فَإِذَا جَاءَ أَجَلُهُمْ لَا
يَسْتَأْخِرُونَ سَاعَةً ۖ وَلَا يَسْتَقْدِمُونَ ﴿٣٤﴾

**35. ಪ್ರತಿಯೊಂದು ಸಮುದಾಯಕ್ಕೆ** (ಅದರ ಅಂತ್ಯಕ್ಕೆ) **ಒಂದು ನಿಶ್ಚಿತ ಕಾಲಾವಧಿ ಇದೆ. ಹಾಗೆ ಅವರ ಕಾಲಾವಧಿ ಸಮೀಪಿಸಿದರೆ ಅದರಿಂದ ಒಂದು ಘಳಿಗೆಯಾದರೂ ಹಿಂದೆ ಅಥವಾ ಮುಂದೆ ಆಗಲು ಅವರಿಗೆ ಸಾಧ್ಯವಿಲ್ಲ.**

يَا بَنِي آدَمَ إِمَّا يَأْتِيَنَّكُمْ رُسُلٌ مِّنكُمْ
يَقُصُّونَ عَلَيْكُمْ آيَاتِي ۙ فَمَنِ اتَّقَىٰ وَ
أَصْلَحَ فَلَا خَوْفٌ عَلَيْهِمْ وَلَا هُمْ
يَحْزَنُونَ ﴿٣٥﴾

**36. ಓ ಆದಂ ಸಂತತಿಗಳೇ, ನನ್ನ ದೃಷ್ಟಾಂತ ಗಳನ್ನು ನಿಮಗೆ ವಿವರಿಸಿಕೊಡುವ ನಿಮ್ಮ ಪೈಕಿಯ ಸಂದೇಶವಾಹಕರು ನಿಮ್ಮ ಬಳಿಗೆ ಬಂದರೆ,[247] ಯಾರು ಭಯ ಭಕ್ತಿ ಹೊಂದಿ, ಸ್ವಯಂ ಸುಧಾರಣೆ ಮಾಡಿಕೊಳ್ಳುತ್ತಾರೋ ಅವರಿಗೆ** (ಭವಿಷ್ಯತ್ಕಾಲದ ಕುರಿತು) **ಯಾವುದೇ ಭಯವಿಲ್ಲ;** (ಗತಕಾಲದ ಕುರಿತು) **ಅವರು ವ್ಯಥೆಪಡಲಾರರು.**

246. ಶುದ್ಧವಾದ ಮತ್ತು ಉತ್ತಮವಾದ ಆಹಾರ ಪಾನೀಯಗಳನ್ನೂ ಉಡುಪನ್ನೂ ಉಪಯೋಗಿಸುವುದು ಆಧ್ಯಾತ್ಮಿಕ ಪ್ರಗತಿಗೂ ದೇವಸಾಮೀಪ್ಯವನ್ನು ಗಳಿಸುವುದಕ್ಕೂ ಅನುಯೋಜ್ಯವಲ್ಲವೆಂಬುದು ಕೆಲವು ಪುರೋಹಿತರ ಮತ್ತು ಸನ್ಯಾಸಿಗಳ ಸಿದ್ಧಾಂತವಾಗಿದೆ. ಆದರೆ ಇದು ಇಸ್ಲಾಮಿನ ಅಧ್ಯಾಪನಗಳಿಗೆ ವಿರುದ್ಧವಾಗಿದೆ. ಒಳ್ಳೆಯ ಆಹಾರ ಮತ್ತು ಒಳ್ಳೆಯ ಉಡುಪುಗಳನ್ನು ನ್ಯಾಯಯುತವಾದ ಮಾರ್ಗದಲ್ಲಿ ಸಂಪಾದಿಸಿ ಮಿತವಾಗಿ ಉಪಯೋಗಿಸುವುದನ್ನು ಖುರ್‌ಆನ್ ಸಮ್ಮತಿಸುತ್ತದೆ ಮತ್ತು ಪ್ರೋತ್ಸಾಹಿಸುತ್ತದೆ.

247. ಪ್ರವಾದಿ ನಿಯೋಜನೆಯ ಬಗ್ಗೆ ಅಲ್ಲಾಹನ ನಿಯಮ ಸ್ಥಗಿತಗೊಂಡಿಲ್ಲವೆಂದೂ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ನಂತರ ಸಹ ಅದು ಜಾರಿಯಲ್ಲಿದೆಯೆಂದೂ ಈ ವಚನದಿಂದ ಸ್ಪಷ್ಟವಾಗುತ್ತದೆ. ಇದೇ ಅಧ್ಯಾಯದ 27,28,32 ಎಂಬೀ ವಚನಗಳಲ್ಲಿ 'ಓ ಆದಂ ಸಂತತಿಗಳೇ' ಎಂಬ ಅಭಿಸಂಬೋಧನೆ ಪವಿತ್ರ ಖುರ್‌ಆನಿನ ಪ್ರಬೋಧನೆಗೆ ಪಾತ್ರರಾದವರಿಗೆಯೇ ಆಗಿದೆ. ಆ ವಚನಗಳಲ್ಲಿ ಹೇಳಲಾದ ವಿಚಾರಗಳು ಅದಕ್ಕೆ ಸಾಕ್ಷ್ಯ. ಅದೇ ಪ್ರಕಾರ ಈ ವಚನದಲ್ಲಿ ಸಹ 'ಓ ಆದಂ ಸಂತತಿಗಳೇ' ಎಂಬ ಸಂಬೋಧನೆಯಲ್ಲಿ ಪೈಗಂಬರರ ಪ್ರಬೋಧನೆಗೆ ಪಾತ್ರರಾದವರನ್ನೇ ಉದ್ದೇಶಿಸಲಾಗಿದೆ. 'ಓ ಆದಂ ಸಂತತಿಗಳೇ' ಎಂದು ಖುರ್‌ಆನ್ ಸಂಬೋಧಿಸುವೆಡೆಯಲ್ಲೆಲ್ಲ, ಸಂಬೋಧಿತರು ಖುರ್‌ಆನಿನ ಅನುಸಾರಿಗಳೆಂದು ಇಮಾಂ ಸುಯೂತಿ (ರಹ್ಮತುಲ್ಲಾಹಿ ಅಲೈಹಿ) ಹೇಳಿದ್ದು ಇಲ್ಲಿ ಉದ್ಧರಣಾರ್ಹ: "ಇದು ಆ ಕಾಲದವರೊಡನೆ ಮತ್ತು ಅದರ ನಂತರದ ಕಾಲದ ಎಲ್ಲರೊಡನೆ ಇರುವ ಸಂಬೋಧನೆಯಾಗಿದೆ." (ಅಲ್‌ಇತ್‌ಖಾನ್, ಸಂಪುಟ 9, ಪರಿಚ್ಛೇದ 51, ಪುಟ 34)

وَالَّذِينَ كَذَّبُوا بِآيَاتِنَا وَاسْتَكْبَرُوا عَنْهَا أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿٣٦﴾

**37.** ಯಾರು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿ ಅಹಂಭಾವಿಗಳಾಗಿ ಅದರಿಂದ ಮುಖ ತಿರುಗಿಸುತ್ತಾರೋ ಅವರು ನರಕವಾಸಿಗಳಾಗಿದ್ದಾರೆ. ಅಲ್ಲಿ ಅವರು ದೀರ್ಘಕಾಲ ನೆಲೆಸುವರು.

فَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا أَوْ كَذَّبَ بِآيَاتِهِ ۚ أُولَٰئِكَ يَنَالُهُمْ نَصِيبُهُم مِّنَ الْكِتَابِ ۖ حَتَّىٰ إِذَا جَاءَتْهُمْ رُسُلُنَا يَتَوَفَّوْنَهُمْ قَالُوا أَيْنَ مَا كُنتُمْ تَدْعُونَ مِن دُونِ اللَّهِ ۖ قَالُوا ضَلُّوا عَنَّا وَشَهِدُوا عَلَىٰ أَنفُسِهِمْ أَنَّهُمْ كَانُوا كَافِرِينَ ﴿٣٧﴾

**38.** ಅಲ್ಲಾಹನ ಮೇಲೆ ಸುಳ್ಳು ಹೊರಿಸುವವನಿಗಿಂತ ಅಥವಾ ಅವನ ವಚನಗಳನ್ನು ಸುಳ್ಳಾಗಿಸುವವನಿಗಿಂತ ದೊಡ್ಡ ಅಧರ್ಮಿ ಬೇರೆ ಯಾರು? ಅವರಿಗೆ ನಿರ್ದಿಷ್ಟ ಶಿಕ್ಷೆಯಿಂದ ಅವರ ಪಾಲು ಲಭಿಸುವುದು. ಅವರ ಪ್ರಾಣ ತೆಗೆಯಲು ನಮ್ಮ ದೂತರು ಅವರ ಬಳಿಗೆ ಬಂದರೆ, 'ಅಲ್ಲಾಹನನ್ನು ಬಿಟ್ಟು ನೀವು ಯಾರನ್ನು ಕರೆದು ಪ್ರಾರ್ಥಿಸುತ್ತಿದ್ದಿರೋ ಅವರೆಲ್ಲಿ?' ಎಂದು ಅವರು (ದೂತರು) ಕೇಳುವರು. 'ಅವರು ನಮ್ಮಿಂದ ಮರೆಯಾಗಿದ್ದಾರೆ' ಎಂದು ಆಗ ಅವರು (ಆ ಜನರು) ಹೇಳುವರು. ತಾವು ಅವಿಶ್ವಾಸಿಗಳಾಗಿದ್ದೆವೆಂದು ತಮಗೆದುರಾಗಿ ಅವರೇ ಸ್ವಯಂ ಸಾಕ್ಷಿಗಳಾಗುವರು.

قَالَ ادْخُلُوا فِي أُمَمٍ قَدْ خَلَتْ مِن قَبْلِكُم مِّنَ الْجِنِّ وَالْإِنسِ فِي النَّارِ ۖ كُلَّمَا دَخَلَتْ أُمَّةٌ لَّعَنَتْ أُخْتَهَا ۖ حَتَّىٰ إِذَا ادَّارَكُوا فِيهَا جَمِيعًا قَالَتْ أُخْرَاهُمْ لِأُولَاهُمْ رَبَّنَا هَٰؤُلَاءِ أَضَلُّونَا فَآتِهِمْ عَذَابًا ضِعْفًا مِّنَ النَّارِ ۖ قَالَ لِكُلٍّ ضِعْفٌ وَلَٰكِن لَّا تَعْلَمُونَ ﴿٣٨﴾

**39.** ಅವನು (ಅಲ್ಲಾಹನು) ಹೇಳುವನು: 'ನಿಮಗಿಂತ ಮುಂಚೆ ಗತಿಸಿದ ಜಿನ್ನ್ ಮತ್ತು ಇನ್ಸ್ ಸಮುದಾಯಗಳಲ್ಲಿ ಸೇರಿಕೊಂಡು ನೀವು ಸಹ ನರಕದಲ್ಲಿ ಪ್ರವೇಶಿಸಿರಿ.' ಪ್ರತಿಯೊಂದು ಸಮುದಾಯ (ನರಕದಲ್ಲಿ) ಪ್ರವೇಶಿಸುವಾಗ, ಅದಕ್ಕಿಂತ ಮುಂಚೆ ಬಂದ ತನ್ನ ಸಹೋದರ ಸಮುದಾಯವನ್ನು ಶಪಿಸುವುದು. ಹಾಗೆ ಅವರೆಲ್ಲರೂ ಅದರಲ್ಲಿ ಒಟ್ಟುಸೇರಿದರೆ ಅವರಲ್ಲಿ ನಂತರ ಬಂದವರು ಮೊದಲು ಬಂದವರನ್ನು ಕುರಿತು ಹೇಳುವರು: 'ನಮ್ಮ ಪ್ರಭೂ, ಇವರೇ ನಮ್ಮನ್ನು ಮಾರ್ಗಭ್ರಂಶಗೊಳಿಸಿದವರು. ಆದ್ದರಿಂದ ನೀನು ಅವರಿಗೆ (ನಮಗಿರುವ) ನರಕ ಶಿಕ್ಷೆಯ ಇಮ್ಮಡಿ ಶಿಕ್ಷೆಯನ್ನು ನೀಡು.' ಅವನು (ಅಲ್ಲಾಹನು) ಹೇಳುವನು: 'ಎಲ್ಲರಿಗೂ ಇಮ್ಮಡಿ ಶಿಕ್ಷೆ ಇದೆ. ಆದರೆ ನೀವು ಅರಿತುಕೊಳ್ಳುವುದಿಲ್ಲ.'





وَقَالَتْ أُولَاهُمْ لِأُخْرَاهُمْ فَمَا كَانَ لَكُمْ عَلَيْنَا مِن فَضْلٍ فَذُوقُوا الْعَذَابَ بِمَا كُنتُمْ تَكْسِبُونَ ﴿٣٩﴾

**40.** ಅವರ ಪೈಕಿ ಮೊದಲಿನವರು ನಂತರದವರೊಡನೆ 'ನಿಮಗೆ ನಮಗಿಂತ ಯಾವ ಶ್ರೇಷ್ಠತೆಯೂ ಇಲ್ಲ. ಆದ್ದರಿಂದ ನಿಮ್ಮ ಕೃತ್ಯಕ್ಕನುಗುಣವಾದ ಶಿಕ್ಷೆಯನ್ನು ನೀವು ಅನುಭವಿಸಿರಿ' ಎಂದು ಹೇಳುವರು.

إِنَّ الَّذِينَ كَذَّبُوا بِآيَاتِنَا وَاسْتَكْبَرُوا عَنْهَا لَا تُفَتَّحُ لَهُمْ أَبْوَابُ السَّمَاءِ وَلَا يَدْخُلُونَ الْجَنَّةَ حَتَّىٰ يَلِجَ الْجَمَلُ فِي سَمِّ الْخِيَاطِ ۚ وَكَذَٰلِكَ نَجْزِي الْمُجْرِمِينَ ﴿٤٠﴾

**41.** ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿ, ಅಹಂಕಾರದಿಂದ ಅದರಿಂದ ಮುಖ ತಿರುಗಿಸುವವರಿಗೆ ಖಂಡಿತವಾಗಿಯೂ ಆಕಾಶದ ಬಾಗಿಲುಗಳು ತೆರೆಯಲ್ಪಡಲಾರವು. ಅವರು ಸ್ವರ್ಗದಲ್ಲಿ ಪ್ರವೇಶಿಲಾರರು - ಸೂಜಿಯ ದ್ವಾರದೊಳಗೆ ಒಂಟೆ ಪ್ರವೇಶಿಸುವ ತನಕ. ಅಪರಾಧಿಗಳಿಗೆ ಈ ರೀತಿ ನಾವು ಪ್ರತಿಫಲ ನೀಡುತ್ತೇವೆ.

لَهُم مِّن جَهَنَّمَ مِهَادٌ وَمِن فَوْقِهِمْ غَوَاشٍ ۚ وَكَذَٰلِكَ نَجْزِي الظَّالِمِينَ ﴿٤١﴾

**42.** ಅವರಿಗೆ ನರಕಾಗ್ನಿಯ ಹಾಸಿಗೆ ಇದೆ. ಅವರ ಮೇಲೆ (ಅದೇ ರೀತಿಯ) ಹೊದಿಕೆಗಳು ಸಹ ಇರುವುವು. ದುಷ್ಕರ್ಮಿಗಳಿಗೆ ಈ ರೀತಿ ನಾವು ಪ್ರತಿಫಲ ನೀಡುತ್ತೇವೆ.

وَالَّذِينَ آمَنُوا وَعَمِلُوا الصَّالِحَاتِ لَا نُكَلِّفُ نَفْسًا إِلَّا وُسْعَهَا أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ﴿٤٢﴾

**43.** ಆದರೆ ಯಾರು ವಿಶ್ವಾಸಹೊಂದಿ ಸತ್ಕರ್ಮಗೈಯ್ಯುತ್ತಾರೋ - ಯಾವುದೇ ಆತ್ಮಕ್ಕೂ ಅದರ ಶಕ್ತಿಗೆ ಮೀರಿ ನಾವು ಹೊರೆ ಹೊರಿಸುವುದಿಲ್ಲ- ಅವರು ಸ್ವರ್ಗದವರು; ಅಲ್ಲಿ ಅವರು ಶಾಶ್ವತವಾಗಿ ವಾಸಿಸುವರು.

وَنَزَعْنَا مَا فِي صُدُورِهِم مِّنْ غِلٍّ تَجْرِي مِن تَحْتِهِمُ الْأَنْهَارُ ۖ وَقَالُوا الْحَمْدُ لِلَّهِ الَّذِي هَدَانَا لِهَٰذَا وَمَا كُنَّا لِنَهْتَدِيَ لَوْلَا أَنْ هَدَانَا اللَّهُ ۖ لَقَدْ جَاءَتْ رُسُلُ رَبِّنَا بِالْحَقِّ ۖ وَنُودُوا أَن تِلْكُمُ الْجَنَّةُ أُورِثْتُمُوهَا بِمَا كُنتُمْ تَعْمَلُونَ ﴿٤٣﴾

**44.** ಅವರ ಹೃದಯಗಳಲ್ಲಿರುವ ದ್ವೇಷವನ್ನು ನಾವು ನೀಗಿಸುವೆವು. ಅವರ ಕೆಳಭಾಗದಲ್ಲಿ ಸರಿತ್ತುಗಳು ಹರಿಯುತ್ತಿರುವುವು. ಅವರು ಹೇಳುವರು: 'ಇದಕ್ಕೆ ನಮಗೆ ಮಾರ್ಗದರ್ಶನ ಮಾಡಿದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು. ಅಲ್ಲಾಹನು ನಮಗೆ ಮಾರ್ಗದರ್ಶನ ಮಾಡದಿರುತ್ತಿದ್ದರೆ ನಾವು ಎಂದಿಗೂ ಸತ್ಪಥವನ್ನು ಗಳಿಸುತ್ತಿರಲಿಲ್ಲ. ನಮ್ಮ ಪ್ರಭುವಿನ ಸಂದೇಶವಾಹಕರು ಸತ್ಯವನ್ನೇ ತಂದಿದ್ದಾರೆ.' ಅವರನ್ನು ಕರೆದು ಹೀಗೆ ತಿಳಿಸಲಾಗುವುದು: 'ಇದು ನಿಮ್ಮ ಸತ್ಕೃತ್ಯಗಳ ಫಲವಾಗಿ ನಿಮಗೆ ವಾರೀಸು ಹಕ್ಕಾಗಿ ನೀಡಲ್ಪಟ್ಟ ಸ್ವರ್ಗವಾಗಿದೆ.'

وَنَادَىٰ أَصْحَابُ الْجَنَّةِ أَصْحَابَ النَّارِ

**45.** ಸ್ವರ್ಗದವರು ನರಕದವರನ್ನು ಕರೆದು ಹೇಳುವರು: 'ನಮ್ಮ ಪ್ರಭು ನಮಗೆ ವಾಗ್ದಾನವಿತ್ತದ್ದು

ಸತ್ಯವೆಂದು ನಾವು ಕಂಡುಕೊಂಡಿದ್ದೇವೆ. ನಿಮ್ಮ ಪ್ರಭು ನಿಮಗೆ ವಾಗ್ದಾನವಿತ್ತದ್ದು ಸತ್ಯವೆಂದು ನೀವು ಸಹ ಕಂಡುಕೊಂಡಿದ್ದೀರಾ?' ಆಗ ಅವರು 'ಹೌದು' ಎಂದುತ್ತರಿಸುವರು. ಆಗ ಅವರ ಮಧ್ಯೆ ಒಬ್ಬ ಕರೆನೀಡುವವ ಘೋಷಿಸುವನು: 'ಅಧರ್ಮಿಗಳ ಮೇಲೆ ಅಲ್ಲಾಹನ ಶಾಪವಿರಲಿ.

أَنْ قَدْ وَجَدْنَا مَا وَعَدَنَا رَبُّنَا حَقًّا فَهَلْ وَجَدْتُمْ مَا وَعَدَ رَبُّكُمْ حَقًّا ۖ قَالُوا نَعَمْ ۚ فَأَذَّنَ مُؤَذِّنٌ بَيْنَهُمْ أَنْ لَعْنَةُ اللَّهِ عَلَى الظَّالِمِينَ ﴿٤٤﴾

**46.** 'ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುವವರೂ ಅದರಲ್ಲಿ ವಕ್ರತೆಯನ್ನು ಅರಸುವವರೂ ಅವರಾಗಿದ್ದಾರೆ. ಅವರು ಪರಲೋಕ ಜೀವನವನ್ನು ಅಲ್ಲಗಳೆಯುವವರು ಸಹ ಆಗಿದ್ದಾರೆ.'

الَّذِينَ يَصُدُّونَ عَنْ سَبِيلِ اللَّهِ وَيَبْغُونَهَا عِوَجًا وَهُمْ بِالْآخِرَةِ كَافِرُونَ ﴿٤٥﴾

**47.** ಅವರ (ಸ್ವರ್ಗಕ್ಕೆ ಹೋಗುವವರ ಮತ್ತು ನರಕಕ್ಕೆ ಹೋಗುವವರ) ಮಧ್ಯೆ ಒಂದು ಪರದೆ ಇದೆ. ಉನ್ನತ ಸ್ಥಾನಗಳಲ್ಲಿರುವ ಕೆಲವು ಪುರುಷರು[247A] ಎಲ್ಲರನ್ನೂ ಅವರ ಲಕ್ಷಣಗಳಿಂದ ಗುರುತಿಸುವರು. ಅವರು ಸ್ವರ್ಗಕ್ಕೆ ಹೋಗಲಿರುವವರೊಡನೆ 'ನಿಮ್ಮ ಮೇಲೆ ಶಾಂತಿ ಇರಲಿ' ಎಂದು ಕರೆದು ಹೇಳುವರು. ಆಗ ಅವರು (ಆ ಸ್ವರ್ಗಾರ್ಹರು) ಅದರಲ್ಲಿ (ಸ್ವರ್ಗದಲ್ಲಿ) ಪ್ರವೇಶಿಸಿರಲಾರರು. ಆದರೆ ಅವರು (ಅದರ) ಭರವಸೆ ಹೊಂದಿರುತ್ತಾರೆ.

وَبَيْنَهُمَا حِجَابٌ ۚ وَعَلَى الْأَعْرَافِ رِجَالٌ يَعْرِفُونَ كُلًّا بِسِيمَاهُمْ ۚ وَنَادَوْا أَصْحَابَ الْجَنَّةِ أَنْ سَلَامٌ عَلَيْكُمْ ۚ لَمْ يَدْخُلُوهَا وَهُمْ يَطْمَعُونَ ﴿٤٦﴾

**48.** ಅವರ (ಸ್ವರ್ಗಾರ್ಹರ) ಕಣ್ಣುಗಳು ನರಕವಾಸಿಗಳ ಮೇಲೆ ಬೀಳುವಾಗ, 'ನಮ್ಮ ಪ್ರಭೂ, ನೀನು ನಮ್ಮನ್ನು ಅಧರ್ಮಿಗಳಾದ ಜನರೊಂದಿಗೆ ಸೇರಿಸಬೇಡ' ಎಂದು ಅವರು ಹೇಳುವರು.

وَإِذَا صُرِفَتْ أَبْصَارُهُمْ تِلْقَاءَ أَصْحَابِ النَّارِ قَالُوا رَبَّنَا لَا تَجْعَلْنَا مَعَ الْقَوْمِ الظَّالِمِينَ ﴿٤٧﴾

**49.** ಆ ಉನ್ನತ ಸ್ಥಾನಗಳಲ್ಲಿರುವವರು ನರಕಾರ್ಹರಾದ ಜನರನ್ನು ಅವರ ಚರ್ಯೆಗಳಿಂದ ಗುರುತಿಸಿ, 'ನಿಮ್ಮ ಸಂಖ್ಯಾಬಲವಾಗಲಿ ನಿಮ್ಮ ಅಹಂಕಾರವಾಗಲಿ

وَنَادَىٰ أَصْحَابُ الْأَعْرَافِ رِجَالًا يَعْرِفُونَهُمْ بِسِيمَاهُمْ قَالُوا مَا أَغْنَىٰ

247A. "ಅಅ್‌ರಾಫ್" - "ಉನ್ನತ ಸ್ಥಾನ" ಎಂಬುದಕ್ಕೆ ಪೂರ್ವಿಕ ವ್ಯಾಖ್ಯಾನಗಾರರು, "ಪಾಪ-ಪುಣ್ಯಗಳು ಸಮವಾಗಿರುವ ಕಾರಣ ನರಕಕ್ಕೂ ಸ್ವರ್ಗಕ್ಕೂ ಮಧ್ಯದಲ್ಲಿ ಅನಿಶ್ಚಿತಾವಸ್ಥೆಯಲ್ಲಿರುವ ವಿಶ್ವಾಸಿಗಳು ನೆಲೆಸುವ ಸ್ಥಾನ" ಎಂದು ಬರೆದಿದ್ದಾರೆ. ಆದರೆ ಪವಿತ್ರ ಖುರ್‌ಆನಿನ ಹಿಂದಿನ ಮತ್ತು ಮುಂದಿನ ವಚನಗಳಿಂದ ಇದು ಸರಿಯಲ್ಲವೆಂದು ತಿಳಿದುಬರುತ್ತದೆ. ವಾಸ್ತವದಲ್ಲಿ, ಉನ್ನತ ಸ್ಥಾನದಲ್ಲಿರುವವರು ಪೂರ್ಣ ವಿಶ್ವಾಸಿಗಳಾದ ಹುತಾತ್ಮರೂ ಪ್ರವಾದಿಗಳೂ ಆಗಿರುವರು. ಅವರ ಮಾತುಗಳಿಂದ ಅದು ಸ್ಪಷ್ಟವಾಗುತ್ತದೆ.





ನಿಮಗೇನೂ ಪ್ರಯೋಜನಕ್ಕೆ ಬರಲಿಲ್ಲವಷ್ಟೇ' ಎಂದು ಕರೆದು ಹೇಳುವರು.

عَنْكُمْ جَمْعُكُمْ وَمَا كُنْتُمْ تَسْتَكْبِرُونَ ﴿٤٨﴾

**50.** (ಸ್ವರ್ಗಾರ್ಹರನ್ನು ತೋರಿಸುತ್ತಾ ಉನ್ನತ ಸ್ಥಾನದಲ್ಲಿರುವವರು ನರಕಾರ್ಹರೊಡನೆ ಹೇಳುವರು) - 'ಅಲ್ಲಾಹನು ಅವರಿಗೆ ಯಾವತ್ತೂ ತನ್ನ ಕರುಣೆಯನ್ನು ತೋರಿಸಲಾರನೆಂದು ನೀವು ಆಣೆ ಹಾಕಿ ಹೇಳಿದ್ದು ಈ ಜನರ ಕುರಿತೋ?' (ನಂತರ ಸ್ವರ್ಗಾರ್ಹರೊಡನೆ ಅಲ್ಲಾಹನು ಹೇಳುವನು:) 'ನೀವು ಸ್ವರ್ಗದಲ್ಲಿ ಪ್ರವೇಶಿಸಿರಿ. ನಿಮಗೆ ಭಯವೇನೂ ಇರದು; ನೀವು ವ್ಯಥೆಪಡಲಾರಿರಿ.'

أَهَٰؤُلَاءِ الَّذِينَ أَقْسَمْتُمْ لَا يَنَالُهُمُ اللَّهُ بِرَحْمَةٍ ۚ ادْخُلُوا الْجَنَّةَ لَا خَوْفٌ عَلَيْكُمْ وَلَا أَنْتُمْ تَحْزَنُونَ ﴿٤٩﴾

**51.** 'ನಮಗೆ ಸ್ವಲ್ಪ ನೀರು ಸುರಿದು ಕೊಡಿರಿ ಅಥವಾ ಅಲ್ಲಾಹನು ನಿಮಗೆ ಒದಗಿಸಿಕೊಟ್ಟುದರಿಂದ ಏನನ್ನಾದರೂ ಕೊಡಿರಿ' ಎಂದು ನರಕದವರು ಸ್ವರ್ಗದವರನ್ನು ಕರೆದು ಹೇಳುವರು. (ಆಗ) ಅವರು (ಸ್ವರ್ಗದವರು) 'ಇವೆರಡನ್ನೂ ಅಲ್ಲಾಹನು ಅವಿಶ್ವಾಸಿಗಳಿಗೆ ನಿಷಿದ್ಧಗೊಳಿಸಿದ್ದಾನೆ' ಎಂದು ಹೇಳುವರು.

وَنَادَىٰ أَصْحَابُ النَّارِ أَصْحَابَ الْجَنَّةِ أَنْ أَفِيضُوا عَلَيْنَا مِنَ الْمَاءِ أَوْ مِمَّا رَزَقَكُمُ اللَّهُ ۚ قَالُوا إِنَّ اللَّهَ حَرَّمَهُمَا عَلَى الْكَافِرِينَ ﴿٥٠﴾

**52.** ಅವರು ತಮ್ಮ ಧರ್ಮವನ್ನು ವಿನೋದ ಮತ್ತು ಆಟವನ್ನಾಗಿ ಮಾಡಿದವರಾಗಿದ್ದಾರೆ. ಐಹಿಕ ಜೀವನ ಅವರನ್ನು ಮೋಸಗೊಳಿಸಿದೆ. (ಅಲ್ಲಾಹನು ಹೇಳುವನು:) 'ಆದ್ದರಿಂದ ಇಂದಿನ ಈ ದಿನವನ್ನು ಅವರು ಮರೆತುಬಿಟ್ಟ ಹಾಗೆಯೇ ಇಂದು ನಾವು ಸಹ ಅವರನ್ನು ಮರೆತುಬಿಟ್ಟಿದ್ದೇವೆ. ನಮ್ಮ ದೃಷ್ಟಾಂತಗಳನ್ನು ಅವರು ನಿರಾಕರಿಸಿದುದರಿಂದಲೂ (ಅವರನ್ನು ನಾವು ಮರೆತಿದ್ದೇವೆ).'

الَّذِينَ اتَّخَذُوا دِينَهُمْ لَهْوًا وَلَعِبًا وَغَرَّتْهُمُ الْحَيَاةُ الدُّنْيَا ۚ فَالْيَوْمَ نَنْسَاهُمْ كَمَا نَسُوا لِقَاءَ يَوْمِهِمْ هَٰذَا وَمَا كَانُوا بِآيَاتِنَا يَجْحَدُونَ ﴿٥١﴾

**53.** ವಿಶ್ವಾಸಹೊಂದುವ ಒಂದು ಜನಾಂಗಕ್ಕೆ ಮಾರ್ಗದರ್ಶನ ಮತ್ತು ಕಾರುಣ್ಯವಾಗಿ ಜ್ಞಾನದ ಆಧಾರದಲ್ಲಿ ವಿವರಿಸಿಕೊಟ್ಟಿರುವ ಒಂದು ಗ್ರಂಥವನ್ನು ನಾವು ಅವರ ಬಳಿಗೆ ತಂದಿದ್ದೇವೆ.

وَلَقَدْ جِئْنَاهُمْ بِكِتَابٍ فَصَّلْنَاهُ عَلَىٰ عِلْمٍ هُدًى وَرَحْمَةً لِقَوْمٍ يُؤْمِنُونَ ﴿٥٢﴾

**54.** ಆ ಗ್ರಂಥದ (ಮುನ್ನೆಚ್ಚರಿಕೆಗಳ) **ಈಡೇರುವಿಕೆಯ ಹೊರತು ಅವರು ಬೇರೆ ಏನನ್ನಾದರೂ ನಿರೀಕ್ಷಿಸುತ್ತಾರೋ? ಅದು ಈಡೇರುವ ದಿನದಂದು, ಮುಂಚೆ ಅದನ್ನು ಮರೆತು ಬಿಟ್ಟವರು ಹೇಳುವರು: 'ನಮ್ಮ ಪ್ರಭುವಿನ ದೂತರು ನಮ್ಮ ಬಳಿಗೆ ಸತ್ಯವನ್ನೇ ತಂದಿದ್ದರು.** (ಆದರೆ ನಾವು ಅದನ್ನು ಅಲ್ಲಗಳೆದೆವು). **ಈಗ ನಮಗೋಸ್ಕರ ಶಿಫಾರಸು ಮಾಡಲು ಯಾರಾದರೂ ಶಿಫಾರಸುಗಾರರಿದ್ದಾರೆಯೇ? ಅಥವಾ ನಾವು ಮುಂಚೆ ಮಾಡದೆ ಇದ್ದ ಕೃತ್ಯಗಳನ್ನು ಮಾಡಲಿಕ್ಕಾಗಿ ನಮ್ಮನ್ನು ಮರಳಿ ಕಳುಹಿಸಲಾಗುವುದೇ?' ಅವರು ತಮ್ಮ ಆತ್ಮಗಳನ್ನು ನಾಶಕ್ಕೆ ಗುರಿಪಡಿಸಿದ್ದಾರೆ. ಅವರು ಸೃಷ್ಟಿಸುತ್ತಿದ್ದ ಸುಳ್ಳುಗಳೇನೂ ಅವರ ಪ್ರಯೋಜನಕ್ಕೆ ಬರಲಿಲ್ಲ.**

هَلْ يَنْظُرُوْنَ اِلَّا تَاْوِيْلَهٗ ۭ يَوْمَ يَاْتِيْ تَاْوِيْلُهٗ يَقُوْلُ الَّذِيْنَ نَسُوْهُ مِنْ قَبْلُ قَدْ جَاۗءَتْ رُسُلُ رَبِّنَا بِالْحَقِّ ۚ فَهَلْ لَّنَا مِنْ شُفَعَاۗءَ فَيَشْفَعُوْا لَنَآ اَوْ نُرَدُّ فَنَعْمَلَ غَيْرَ الَّذِيْ كُنَّا نَعْمَلُ ۭ قَدْ خَسِرُوْٓا اَنْفُسَهُمْ وَضَلَّ عَنْهُمْ مَّا كَانُوْا يَفْتَرُوْنَ ۝

**55. ಆಕಾಶಗಳನ್ನೂ ಭೂಮಿಯನ್ನೂ ಆರು ಹಂತಗಳಲ್ಲಿ ಸೃಷ್ಟಿಸಿದ ಅಲ್ಲಾಹನೇ ನಿಮ್ಮ ಪ್ರಭು.**[247B] **ಅನಂತರ ಅವನು** (ಆಧಿಪತ್ಯದ) **ಸಿಂಹಾಸನದಲ್ಲಿ ಆಸೀನನಾದನು. ರಾತ್ರಿಯಿಂದ ಅವನು ಹಗಲನ್ನು ಮುಚ್ಚುತ್ತಾನೆ; ಅದು ಹಗಲನ್ನು ಬೇಗಬೇಗನೆ ಬೆನ್ನಟ್ಟುತ್ತದೆ. ಸೂರ್ಯನನ್ನೂ ಚಂದ್ರನನ್ನೂ ನಕ್ಷತ್ರಗಳನ್ನೂ ಅವನ ಆಜ್ಞೆಗೆ ವಿಧೇಯವಾದ ನೆಲೆಯಲ್ಲಿ** (ಅವನು ಸೃಷ್ಟಿಸಿದ್ದಾನೆ). **ಸೃಷ್ಟಿಸುವ ಮತ್ತು ಆಜ್ಞಾಪಿಸುವ ಅಧಿಕಾರ ಅವನಿಗೆ ಸೇರಿದೆ. ಸರ್ವಲೋಕ ಪರಿಪಾಲಕನಾದ ಅಲ್ಲಾಹನು ಅತ್ಯಂತ ಅನುಗ್ರಹಪೂರ್ಣನಾಗಿದ್ದಾನೆ.**

اِنَّ رَبَّكُمُ اللّٰهُ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ اسْتَوٰى عَلَي الْعَرْشِ ۣ يُغْشِي الَّيْلَ النَّهَارَ يَطْلُبُهٗ حَثِيْثًا ۙ وَّالشَّمْسَ وَالْقَمَرَ وَالنُّجُوْمَ مُسَخَّرٰتٍۢ بِاَمْرِهٖ ۭ اَلَا لَهُ الْخَلْقُ وَالْاَمْرُ ۭ تَبٰرَكَ اللّٰهُ رَبُّ الْعٰلَمِيْنَ ۝

**56. ನೀವು ವಿನಮ್ರವಾಗಿಯೂ ರಹಸ್ಯವಾಗಿಯೂ ನಿಮ್ಮ ಪ್ರಭುವನ್ನು ಕರೆದು ಪ್ರಾರ್ಥಿಸಿರಿ. ನಿಶ್ಚಯವಾಗಿಯೂ ಹದ್ದುಮೀರುವವರನ್ನು ಅವನು ಇಷ್ಟಪಡುವುದಿಲ್ಲ.**

اُدْعُوْا رَبَّكُمْ تَضَرُّعًا وَّخُفْيَةً ۭ اِنَّهٗ لَا يُحِبُّ الْمُعْتَدِيْنَ ۝

**57. ಭೂಮಿಯಲ್ಲಿ ಶಾಂತಿ ನೆಲೆಸಿದ ಬಳಿಕ ಶಾಂತಿ ಭಂಗ ಮಾಡಬೇಡಿರಿ. ಭಯಭೀತಿಯಿಂದಲೂ ಭರವಸೆಯಿಂದಲೂ ಅವನನ್ನು ಕರೆದು ಪ್ರಾರ್ಥಿಸಿರಿ. ಖಂಡಿತ**

وَلَا تُفْسِدُوْا فِي الْاَرْضِ بَعْدَ اِصْلَاحِهَا وَادْعُوْهُ خَوْفًا وَّطَمَعًا ۭ اِنَّ رَحْمَتَ

247B. "ಸಿತ್ತತಿ ಅಯ್ಯಾಮ್" ಆರು ದಿನಗಳು. ಯೌಮ್ ಎಂದ ಪದಕ್ಕೆ ದಿನ, ಹಂತ, ಕಾಲಘಟ್ಟ ಎಂದೆಲ್ಲ ಅರ್ಥಗಳಿವೆ. ಆರು ಪರಿವರ್ತನ ಘಟ್ಟಗಳಲ್ಲಿ ಪ್ರಪಂಚದ ಸೃಷ್ಟಿಯಾಗಿದೆಯೆಂದು ತಾತ್ಪರ್ಯ. ಆದರೆ ಆ ಕಾಲಘಟ್ಟದ ದೈರ್ಘ್ಯ ಎಷ್ಟೆಂದು ಇಲ್ಲಿ ಸೂಚಿಸಲಾಗಿಲ್ಲ.





**ವಾಗಿಯೂ ಅಲ್ಲಾಹನ ಕರುಣೆ ಸುಕೃತರಿಗೆ ಸಮೀಪದಲ್ಲಿದೆ.**

اللّٰهِ قَرِيْبٌ مِّنَ الْمُحْسِنِيْنَ ۝

**58.** ಅವನ ಕಾರುಣ್ಯಕ್ಕೆ ಮುಂಚೆ ಶುಭ ವಾರ್ತೆಯನ್ನು ನೀಡಲಿಕ್ಕಾಗಿ ವಾಯುವನ್ನು **ಕಳುಹಿಸುವವನು ಅವನೇ. ಹಾಗೆ ಅದು ದಟ್ಟವಾದ** ಮೋಡವನ್ನು ಹೊತ್ತಿರುವಾಗ ನಿರ್ಜೀವವಾದ **ಪ್ರದೇಶಕ್ಕೆ**[247C] **ನಾವು ಅದನ್ನು ಕೊಂಡೊಯ್ಯುತ್ತೇವೆ. ಆ ಬಳಿಕ ನಾವು ಅದರಿಂದ ಜಲವನ್ನು ಸುರಿಸಿ ಆ ಮೂಲಕ ಎಲ್ಲ ವಿಧ ಫಲಗಳನ್ನು ಉತ್ಪಾದಿಸುತ್ತೇವೆ. ಇದೇ ಪ್ರಕಾರ ನಾವು ಮೃತರಾದವರನ್ನು ಪುನರುಜ್ಜೀವನಗೊಳಿಸಿ ಹೊರತರುತ್ತೇವೆ.**[248] **- ನೀವು ಉಪದೇಶವನ್ನು ಜ್ಞಾಪಿಸಲಿಕ್ಕಾಗಿ.**

وَهُوَ الَّذِيْ يُرْسِلُ الرِّيٰحَ بُشْرًۢا بَيْنَ يَدَيْ رَحْمَتِهٖ ۭ حَتّٰٓي اِذَآ اَقَلَّتْ سَحَابًا ثِقَالًا سُقْنٰهُ لِبَلَدٍ مَّيِّتٍ فَاَنْزَلْنَا بِهِ الْمَاۗءَ فَاَخْرَجْنَا بِهٖ مِنْ كُلِّ الثَّمَرٰتِ ۭ كَذٰلِكَ نُخْرِجُ الْمَوْتٰى لَعَلَّكُمْ تَذَكَّرُوْنَ ۝

**59. ಒಳ್ಳೆಯ** (ಮಣ್ಣು ಇರುವ) **ಪ್ರದೇಶಗಳ ಸಸ್ಯಗಳು ಅವುಗಳ ಪ್ರಭುವಿನ ಆಜ್ಞೆಯಂತೆ** (ಸಮೃದ್ಧವಾಗಿ) **ಮೊಳಕೆಯೊಡೆಯುತ್ತವೆ. ಹಾಳು** (ಮಣ್ಣು ಇರುವ) **ಪ್ರದೇಶಗಳಲ್ಲಿ ನಿಷ್ಪ್ರಯೋಜಕ ಸಸ್ಯಗಳ ವಿನಾ ಮೊಳಕೆಯೊಡೆಯುವುದಿಲ್ಲ. ಈ ಪ್ರಕಾರದಲ್ಲಿ ಕೃತಜ್ಞತೆಯುಳ್ಳ ಜನರಿಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಡುತ್ತೇವೆ.**

وَالْبَلَدُ الطَّيِّبُ يَخْرُجُ نَبَاتُهٗ بِاِذْنِ رَبِّهٖ ۚ وَالَّذِيْ خَبُثَ لَا يَخْرُجُ اِلَّا نَكِدًا ۭ كَذٰلِكَ نُصَرِّفُ الْاٰيٰتِ لِقَوْمٍ يَّشْكُرُوْنَ ۝

**60. ನಾವು ನೂಹ್‌ರನ್ನು ಅವರ ಜನಾಂಗಕ್ಕೆ ನಿಯೋಜಿಸಿ ಕಳುಹಿಸಿದೆವು. 'ನನ್ನ ಜನರೇ, ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. ಖಂಡಿತವಾಗಿಯೂ ಭಯಂಕರವಾದೊಂದು ದಿನದ ಶಿಕ್ಷೆ ನಿಮಗೆ ಬಂದೆರಗುವುದರ ಬಗ್ಗೆ ನಾನು ಭೀತನಾಗಿದ್ದೇನೆ' ಎಂದು ಅವರು ಹೇಳಿದರು.**

لَقَدْ اَرْسَلْنَا نُوْحًا اِلٰى قَوْمِهٖ فَقَالَ يٰقَوْمِ اعْبُدُوا اللّٰهَ مَا لَكُمْ مِّنْ اِلٰهٍ غَيْرُهٗ ۭ اِنِّىْٓ اَخَافُ عَلَيْكُمْ عَذَابَ يَوْمٍ عَظِيْمٍ ۝

**61. ಅವರ ಜನಾಂಗದ ಮುಖ್ಯಸ್ಥರು, 'ಖಂಡಿತವಾಗಿಯೂ ನಿನ್ನನ್ನು ನಾವು ಸ್ಪಷ್ಟವಾದ ತಪ್ಪುದಾರಿಯಲ್ಲಿ ಕಾಣುತ್ತಿದ್ದೇವೆ' ಎಂದು ಹೇಳಿದರು.**

قَالَ الْمَلَاُ مِنْ قَوْمِهٖٓ اِنَّا لَنَرٰىكَ فِيْ ضَلٰلٍ مُّبِيْنٍ ۝

247C. ಮಳೆ ಇಲ್ಲದ ಕಾರಣದಿಂದ ಬರಡಾದ ಪ್ರದೇಶವೆಂದು ತಾತ್ಪರ್ಯ.
248. ಅಧಃಪತನಗೊಂಡು ಮೃತತುಲ್ಯವಾದ ಸಮುದಾಯಗಳ ಪ್ರಗತಿ ಮತ್ತು ಅಭಿವೃದ್ಧಿ ಇಲ್ಲಿ ಉದ್ದೇಶ.

**62.** ಅವರು (ನೂಹ್) ಹೇಳಿದರು: 'ನನ್ನ ಜನರೇ, ನಾನು ತಪ್ಪುದಾರಿಯಲ್ಲಿಲ್ಲ. ಆದರೆ ನಾನು ಸರ್ವಲೋಕ ಪ್ರಭುವಿನಿಂದ ನಿಯೋಜಿಸಲ್ಪಟ್ಟ ಒಬ್ಬ ಸಂದೇಶ ವಾಹಕನಾಗಿದ್ದೇನೆ.

قَالَ يٰقَوْمِ لَيْسَ بِيْ ضَلٰلَةٌ وَّلٰكِنِّيْ رَسُوْلٌ مِّنْ رَّبِّ الْعٰلَمِيْنَ ﴿٦٢﴾

**63.** 'ನನ್ನ ಪ್ರಭುವಿನ ಸಂದೇಶಗಳನ್ನು ನಾನು ನಿಮಗೆ ತಲಪಿಸುತ್ತೇನೆ. ನಾನು ನಿಮಗೆ ಸದುಪದೇಶ ನೀಡುತ್ತೇನೆ ಹಾಗೂ ನಿಮಗೆ ತಿಳಿಯದೆ ಇರುವುದನ್ನು ಅಲ್ಲಾಹನು ನೀಡಿದ ಜ್ಞಾನದಿಂದ ನಿಮಗೆ ತಿಳಿಸಿಕೊಡುತ್ತೇನೆ.

اُبَلِّغُكُمْ رِسٰلٰتِ رَبِّيْ وَاَنْصَحُ لَكُمْ وَاَعْلَمُ مِنَ اللّٰهِ مَا لَا تَعْلَمُوْنَ ﴿٦٣﴾

**64.** 'ನಿಮಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿಯೂ ನೀವು ಭಯಭಕ್ತಿಯುಳ್ಳವರಾಗಲಿಕ್ಕಾಗಿಯೂ ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕಾಗಿಯೂ ನಿಮ್ಮ ಪೈಕಿ ಒಬ್ಬ ವ್ಯಕ್ತಿಯ ಮೂಲಕ ನಿಮ್ಮ ಪ್ರಭುವಿನಿಂದ ನಿಮಗೆ ಉಪದೇಶ ಬಂದಿದೆಯೆಂಬುದರಲ್ಲಿ ನಿಮಗೆ ಆಶ್ಚರ್ಯವಾಗುತ್ತದೆಯೇ?'

اَوَعَجِبْتُمْ اَنْ جَآءَكُمْ ذِكْرٌ مِّنْ رَّبِّكُمْ عَلٰى رَجُلٍ مِّنْكُمْ لِيُنْذِرَكُمْ وَلِتَتَّقُوْا وَلَعَلَّكُمْ تُرْحَمُوْنَ ﴿٦٤﴾

**65.** ಆದರೆ ಅವರು ಅವರನ್ನು (ನೂಹ್‌ರನ್ನು) ಸುಳ್ಳುಗಾರನೆಂದು ಆಪಾದಿಸಿದರು. ಹಾಗೆ, ನಾವು ಅವರನ್ನೂ (ನೂಹ್) ಅವರ ಜೊತೆಗಿರುವವರನ್ನೂ ಹಡಗಿನಲ್ಲಿ ರಕ್ಷಿಸಿದೆವು ಮತ್ತು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರನ್ನು ನಾವು ಮುಳುಗಿಸಿ ಬಿಟ್ಟೆವು. ಖಂಡಿತವಾಗಿಯೂ ಅವರೊಂದು ಕುರುಡು ಜನಾಂಗವಾಗಿದ್ದರು.

فَكَذَّبُوْهُ فَاَنْجَيْنٰهُ وَالَّذِيْنَ مَعَهٗ فِى الْفُلْكِ وَاَغْرَقْنَا الَّذِيْنَ كَذَّبُوْا بِاٰيٰتِنَا ؕ اِنَّهُمْ كَانُوْا قَوْمًا عَمِيْنَ ﴿٦٥﴾

**66.** 'ಆದ್' ಜನಾಂಗಕ್ಕೆ ಅವರ ಸಹೋದರ 'ಹೂದ್'ರನ್ನೂ (ನಾವು ನಿಯೋಜಿಸಿದೆವು). ಅವರು ಹೇಳಿದರು: 'ನನ್ನ ಜನರೇ, ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಯಾರೂ ಆರಾಧ್ಯನಿಲ್ಲ. ನೀವೇನು ಭಯಭಕ್ತಿಯನ್ನು ತೋರಿಸುವುದಿಲ್ಲವೇ?'

وَاِلٰى عَادٍ اَخَاهُمْ هُوْدًا ؕ قَالَ يٰقَوْمِ اعْبُدُوا اللّٰهَ مَا لَكُمْ مِّنْ اِلٰهٍ غَيْرُهٗ ؕ اَفَلَا تَتَّقُوْنَ ﴿٦٦﴾

**67.** ಅವರ ಜನಾಂಗದ ಅವಿಶ್ವಾಸಿಗಳಾದ ಮುಖಂಡರು ಹೇಳಿದರು: 'ನಿಶ್ಚಯವಾಗಿಯೂ ನೀನು

قَالَ الْمَلَاُ الَّذِيْنَ كَفَرُوْا مِنْ قَوْمِهٖٓ





ಮೂರ್ಖತನದಲ್ಲಿರುವುದಾಗಿ ನಾವು ನಿನ್ನನ್ನು ಕಾಣುತ್ತೇವೆ. ನೀನು ಸುಳ್ಳುಗಾರನೆಂದು ನಾವು ಖಂಡಿತವಾಗಿಯೂ ಮನಗಂಡಿದ್ದೇವೆ.'

اِنَّا لَنَرٰىكَ فِيْ سَفَاهَةٍ وَّاِنَّا لَنَظُنُّكَ مِنَ الْكٰذِبِيْنَ ﴿٦٧﴾

**68.** ಅವರು ಮರುನುಡಿದರು: 'ನನ್ನ ಜನರೇ, ನನ್ನಲ್ಲಿ ಮೂರ್ಖತನವೇನೂ ಇಲ್ಲ. ಆದರೆ ನಾನು ಸರ್ವ ಲೋಕಗಳ ಪ್ರಭುವಿನಿಂದ ನಿಯೋಜಿತನಾದ ಒಬ್ಬ ಸಂದೇಶವಾಹಕನಾಗಿದ್ದೇನೆ.

قَالَ يٰقَوْمِ لَيْسَ بِيْ سَفَاهَةٌ وَّلٰكِنِّيْ رَسُوْلٌ مِّنْ رَّبِّ الْعٰلَمِيْنَ ﴿٦٨﴾

**69.** 'ನಾನು ನಿಮಗೆ ನನ್ನ ಪ್ರಭುವಿನ ಸಂದೇಶವನ್ನು ತಲಪಿಸುತ್ತೇನೆ. ನಾನು ನಿಮಗೆ ಪ್ರಾಮಾಣಿಕವಾದ ಒಬ್ಬ ಉಪದೇಶಕನಾಗಿದ್ದೇನೆ.

اُبَلِّغُكُمْ رِسٰلٰتِ رَبِّيْ وَاَنَا لَكُمْ نَاصِحٌ اَمِيْنٌ ﴿٦٩﴾

**70.** 'ನಿಮಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿ ನಿಮ್ಮ ಪೈಕಿಯ ಒಬ್ಬ ವ್ಯಕ್ತಿಯ ಮೂಲಕ ನಿಮ್ಮ ಪ್ರಭುವಿನಿಂದ ನಿಮಗೊಂದು ಉಪದೇಶ ಬಂದುದರಲ್ಲಿ ನೀವು ಆಶ್ಚರ್ಯಪಡುತ್ತೀರಾ? ನೂಹ್‌ರ ಜನಾಂಗದ ನಂತರ ನಿಮ್ಮನ್ನು ಅವನು (ಅವರ) ಪ್ರತಿನಿಧಿಗಳನ್ನಾಗಿ ಮಾಡಿದುದನ್ನೂ ನಿಮಗೆ ಸೃಷ್ಟಿಯಲ್ಲಿ ಸಮೃದ್ಧಿ[249] ದಯಪಾಲಿಸಿದ್ದನ್ನೂ ನೀವು ಸ್ಮರಿಸಿರಿ. ಅಲ್ಲಾಹನ ಅನುಗ್ರಹಗಳನ್ನು ನೆನೆಯಿರಿ - ನೀವು ಜಯಶಾಲಿಗಳಾಗಲಿಕ್ಕಾಗಿ.'

اَوَعَجِبْتُمْ اَنْ جَآءَكُمْ ذِكْرٌ مِّنْ رَّبِّكُمْ عَلٰى رَجُلٍ مِّنْكُمْ لِيُنْذِرَكُمْ ؕ وَاذْكُرُوْۤا اِذْ جَعَلَكُمْ خُلَفَآءَ مِنْۢ بَعْدِ قَوْمِ نُوْحٍ وَّزَادَكُمْ فِى الْخَلْقِ بَصْۜطَةً ۚ فَاذْكُرُوْۤا اٰلَآءَ اللّٰهِ لَعَلَّكُمْ تُفْلِحُوْنَ ﴿٧٠﴾

**71.** ಅವರು ಹೇಳಿದರು: 'ಅಲ್ಲಾಹನನ್ನು ಮಾತ್ರ ನಾವು ಆರಾಧಿಸಬೇಕೆಂದೂ ನಮ್ಮ ತಂದೆ ತಾತಂದಿರು ಆರಾಧಿಸುತ್ತಿದ್ದುದನ್ನು ನಾವು ಬಿಟ್ಟು ಬಿಡಬೇಕೆಂದೂ ಉಪದೇಶಿಸಲಿಕ್ಕಾಗಿ ನೀನು ನಮ್ಮ ಬಳಿಗೆ ಬಂದಿದ್ದೀಯಾ? ಹಾಗಾದರೆ, ನೀನು ಸತ್ಯವಂತನೆಂದಾದರೆ, ನೀನು ನಮಗೆ ಮುನ್ನೆಚ್ಚರಿಕೆಯನ್ನೀಯುವುದನ್ನು (ಆ ಶಿಕ್ಷೆಯನ್ನು) ನಮ್ಮ ಬಳಿಗೆ ತಾ.'

قَالُوْۤا اَجِئْتَنَا لِنَعْبُدَ اللّٰهَ وَحْدَهٗ وَنَذَرَ مَا كَانَ يَعْبُدُ اٰبَآؤُنَا ۚ فَاْتِنَا بِمَا تَعِدُنَاۤ اِنْ كُنْتَ مِنَ الصّٰدِقِيْنَ ﴿٧١﴾

**72.** ಅವರು ಉತ್ತರಿಸಿದರು: 'ಖಂಡಿತವಾಗಿಯೂ ನಿಮ್ಮ ಪ್ರಭುವಿನಿಂದ ಶಿಕ್ಷೆ ಮತ್ತು ಕೋಪ ನಿಮ್ಮ ಮೇಲೆ ಎರಗಿದೆ. ನೀವು ಮತ್ತು ನಿಮ್ಮ ತಂದೆ ತಾತಂದಿರು

قَالَ قَدْ وَقَعَ عَلَيْكُمْ مِّنْ رَّبِّكُمْ رِجْسٌ وَّغَضَبٌ ؕ اَتُجَادِلُوْنَنِيْ فِيْۤ اَسْمَآءٍ

249. ನಿಮ್ಮ ಸಂತಾನದಲ್ಲಿ ವೃದ್ಧಿಯುಂಟಾಗಿದೆಯೆಂದು ತಾತ್ಪರ್ಯ.

ನಾಮಕರಣ ಮಾಡಿದ ಹೆಸರುಗಳ ಕುರಿತು ನೀವು ನನ್ನೊಡನೆ ವಿವಾದ ಮಾಡುತ್ತೀರಾ? ಆ ಬಗ್ಗೆ ಅಲ್ಲಾಹನು ಸಾಕ್ಷ್ಯಾಧಾರವನ್ನೇನೂ ನೀಡಿಲ್ಲ. ನೀವು ಕಾಯುತ್ತಾ ಇರಿ. ನಾನು ಸಹ ನಿಮ್ಮೊಂದಿಗೆ ಕಾಯುತ್ತಿದ್ದೇನೆ.'

سَمَّيْتُمُوهَآ أَنتُمْ وَءَابَآؤُكُم مَّا نَزَّلَ
ٱللَّهُ بِهَا مِن سُلْطَٰنٍ ۚ فَٱنتَظِرُوٓا۟ إِنِّى
مَعَكُم مِّنَ ٱلْمُنتَظِرِينَ ﴿٧١﴾

**73.** ನಾವು ಅವರನ್ನೂ (ಹೂದ್) ಅವರ ಸಂಗಡಿಗರನ್ನೂ ನಮ್ಮ ಕಾರುಣ್ಯದ ಮೂಲಕ ರಕ್ಷಿಸಿದೆವು. ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರನ್ನು ಮತ್ತು ಸತ್ಯ ವಿಶ್ವಾಸಿಗಳಾಗದವರನ್ನು ನಾವು ನಿರ್ಮೂಲನ ಮಾಡಿದೆವು.

فَأَنجَيْنَٰهُ وَٱلَّذِينَ مَعَهُۥ بِرَحْمَةٍ مِّنَّا
وَقَطَعْنَا دَابِرَ ٱلَّذِينَ كَذَّبُوا۟ بِـَٔايَٰتِنَا
وَمَا كَانُوا۟ مُؤْمِنِينَ ﴿٧٢﴾

**74.** 'ಸಮೂದ್' (ಜನಾಂಗದ) ಬಳಿಗೆ ಅವರ ಸಹೋದರ ಸಾಲಿಹ್‌ರನ್ನು ನಾವು ನಿಯೋಜಿಸಿದೆವು. ಅವರು ಹೇಳಿದರು: 'ನನ್ನ ಜನರೇ, ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. ನಿಮ್ಮ ಪ್ರಭುವಿನಿಂದ ನಿಮ್ಮ ಬಳಿಗೆ ಸ್ಪಷ್ಟವಾದ ದೃಷ್ಟಾಂತಗಳು ಬಂದಿವೆ. ಅಲ್ಲಾಹನ ಈ ಹೆಣ್ಣು ಒಂಟೆ ನಿಮಗೊಂದು ದೃಷ್ಟಾಂತವಾಗಿದೆ. ಆದ್ದರಿಂದ ಅಲ್ಲಾಹನ ಭೂಮಿಯಲ್ಲಿ ಅದನ್ನು ಮೇದು ತಿನ್ನಲು ಬಿಡಿರಿ. ಅದಕ್ಕೆ ನೀವೇನೂ ಉಪದ್ರಮಾಡಬೇಡಿರಿ. ಇಲ್ಲವಾದರೆ, ವೇದನಾಯುತವಾದ ಶಿಕ್ಷೆಗೆ ನೀವು ಗುರಿಯಾಗುವಿರಿ.'

وَإِلَىٰ ثَمُودَ أَخَاهُمْ صَٰلِحًا ۗ قَالَ يَٰقَوْمِ
ٱعْبُدُوا۟ ٱللَّهَ مَا لَكُم مِّنْ إِلَٰهٍ غَيْرُهُۥ ۖ
قَدْ جَآءَتْكُم بَيِّنَةٌ مِّن رَّبِّكُمْ ۖ هَٰذِهِۦ
نَاقَةُ ٱللَّهِ لَكُمْ ءَايَةً ۖ فَذَرُوهَا تَأْكُلْ
فِىٓ أَرْضِ ٱللَّهِ ۖ وَلَا تَمَسُّوهَا بِسُوٓءٍ
فَيَأْخُذَكُمْ عَذَابٌ أَلِيمٌ ﴿٧٣﴾

**75.** 'ಆದ್' (ಜನಾಂಗದ) ಬಳಿಕ ಅವನು ನಿಮ್ಮನ್ನು (ಅವರ) ಪ್ರತಿನಿಧಿಗಳನ್ನಾಗಿ ಮಾಡಿದುದನ್ನೂ ಭೂಮಿಯಲ್ಲಿ ನಿಮಗೆ ವಾಸಕ್ಕಾಗಿ ಸೌಕರ್ಯ ಒದಗಿಸಿ ಕೊಟ್ಟದ್ದನ್ನೂ ಸ್ಮರಿಸಿರಿ. ಅದರ ಸಮತಟ್ಟಾದ ಸ್ಥಳಗಳಲ್ಲಿ ನೀವು ಅರಮನೆಗಳನ್ನು ನಿರ್ಮಿಸಿದಿರಿ. ಬೆಟ್ಟಗಳನ್ನು ಕೊರೆದು ಮನೆಗಳನ್ನು ಕಟ್ಟಿದಿರಿ. ಆದ್ದರಿಂದ ನೀವು ಅಲ್ಲಾಹನ ಅನುಗ್ರಹಗಳನ್ನು ಸ್ಮರಿಸಿರಿ. ನೀವು ಭೂಮಿಯಲ್ಲಿ ಗಲಭೆ ಗೊಂದಲಗಳನ್ನು ಹಬ್ಬಿಸಬೇಡಿರಿ.

وَٱذْكُرُوٓا۟ إِذْ جَعَلَكُمْ خُلَفَآءَ مِنۢ بَعْدِ
عَادٍ وَبَوَّأَكُمْ فِى ٱلْأَرْضِ تَتَّخِذُونَ
مِن سُهُولِهَا قُصُورًا وَتَنْحِتُونَ ٱلْجِبَالَ
بُيُوتًا ۖ فَٱذْكُرُوٓا۟ ءَالَآءَ ٱللَّهِ وَلَا
تَعْثَوْا۟ فِى ٱلْأَرْضِ مُفْسِدِينَ ﴿٧٤﴾





**76.** ಅವರ ಜನರ ಪೈಕಿ ಅಹಂಕಾರಿಗಳಾದ ಮುಖಂಡರು ವಿಶ್ವಾಸ ಹೊಂದಿದವರ ಪೈಕಿ ಬಲಹೀನರೆಂದು ಎಣಿಸಲ್ಪಟ್ಟವರೊಡನೆ ಕೇಳಿದರು: 'ಸಾಲಿಹ್ ತನ್ನ ಪ್ರಭುವಿನಿಂದ ನಿಯುಕ್ತನಾದವನೆಂದು ನೀವು (ನಿಜವಾಗಿಯೂ) ತಿಳಿದಿದ್ದೀರಾ?' ಅವರು ಉತ್ತರಿಸಿದರು: 'ಅವರು ಯಾವ ಸಂದೇಶದೊಂದಿಗೆ ನಿಯೋಜಿಸಲ್ಪಟ್ಟಿರುವವರೋ, ಅದರಲ್ಲಿ ನಾವು ಖಂಡಿತವಾಗಿಯೂ ವಿಶ್ವಾಸವಿಟ್ಟಿದ್ದೇವೆ.'

قَالَ ٱلْمَلَأُ ٱلَّذِينَ ٱسْتَكْبَرُوا۟ مِن
قَوْمِهِۦ لِلَّذِينَ ٱسْتُضْعِفُوا۟ لِمَنْ ءَامَنَ
مِنْهُمْ أَتَعْلَمُونَ أَنَّ صَٰلِحًا مُّرْسَلٌ
مِّن رَّبِّهِۦ ۚ قَالُوٓا۟ إِنَّا بِمَآ أُرْسِلَ بِهِۦ
مُؤْمِنُونَ ﴿٧٥﴾

**77.** ಅಹಂಕಾರಿಗಳು ಹೇಳಿದರು: 'ಖಂಡಿತವಾಗಿಯೂ ನೀವು ನಂಬುವುದನ್ನು ನಾವು ತಿರಸ್ಕರಿಸುವವರಾಗಿದ್ದೇವೆ.'

قَالَ ٱلَّذِينَ ٱسْتَكْبَرُوٓا۟ إِنَّا بِٱلَّذِىٓ
ءَامَنتُم بِهِۦ كَٰفِرُونَ ﴿٧٦﴾

**78.** ಅನಂತರ ಅವರು ಆ ಹೆಣ್ಣು ಒಂಟೆಯ ಸ್ನಾಯು ರಜ್ಜುಗಳನ್ನು ಕತ್ತರಿಸಿ ಬಿಟ್ಟರು ಹಾಗೂ ತಮ್ಮ ಪ್ರಭುವಿನ ಆಜ್ಞೆಯನ್ನು ಧಿಕ್ಕರಿಸಿದರು. ಅವರು ಹೇಳಿದರು: 'ಎಲೈ ಸಾಲಿಹ್, ನೀನು ದೇವ ಸಂದೇಶ ವಾಹಕನೆಂದಾದರೆ ನೀನು ನಮ್ಮನ್ನು ಹೆದರಿಸುತ್ತಿರುವ ಶಿಕ್ಷೆಯನ್ನು ತಾ.'

فَعَقَرُوا۟ ٱلنَّاقَةَ وَعَتَوْا۟ عَنْ أَمْرِ
رَبِّهِمْ وَقَالُوا۟ يَٰصَٰلِحُ ٱئْتِنَا بِمَا تَعِدُنَآ
إِن كُنتَ مِنَ ٱلْمُرْسَلِينَ ﴿٧٧﴾

**79.** ಆಗ ಭೂಕಂಪಕ್ಕೆ ಅವರು ತುತ್ತಾದರು ಹಾಗೆ ಪ್ರಭಾತವಾದಾಗ ಅವರು ತಮ್ಮ ಮನೆಗಳಲ್ಲಿ ಅಧೋಮುಖರಾಗಿ ಬಿದ್ದುಬಿಟ್ಟರು.[249A]

فَأَخَذَتْهُمُ ٱلرَّجْفَةُ فَأَصْبَحُوا۟ فِى
دَارِهِمْ جَٰثِمِينَ ﴿٧٨﴾

**80.** ಆಗ ಸಾಲಿಹ್, ಅವರಿಂದ ದೂರ ಸರಿದು ಹೇಳಿದರು: 'ನನ್ನ ಜನರೇ, ನನ್ನ ಪ್ರಭುವಿನ ಸಂದೇಶವನ್ನು ನಾನು ನಿಮಗೆ ತಲಪಿಸಿದೆನು. ನಾನು ನಿಮಗೆ ಪ್ರಾಮಾಣಿಕವಾಗಿ ಉಪದೇಶ ನೀಡಿದೆನು. ಆದರೆ ನೀವು ಪ್ರಾಮಾಣಿಕವಾಗಿ ಉಪದೇಶಿಸುವವರನ್ನು ಮೆಚ್ಚುವುದಿಲ್ಲ.'

فَتَوَلَّىٰ عَنْهُمْ وَقَالَ يَٰقَوْمِ لَقَدْ
أَبْلَغْتُكُمْ رِسَالَةَ رَبِّى وَنَصَحْتُ
لَكُمْ وَلَٰكِن لَّا تُحِبُّونَ ٱلنَّٰصِحِينَ ﴿٧٩﴾

**81.** ಲೂತ್‌ರನ್ನೂ (ನಾವು ಸಂದೇಶವಾಹಕನಾಗಿ ನಿಯೋಜಿಸಿದೆವು). ಅವರು ತನ್ನ ಜನರೊಡನೆ ಹೀಗೆ

وَلُوطًا إِذْ قَالَ لِقَوْمِهِۦٓ أَتَأْتُونَ

249A. "ಪ್ರಾರ್ಥನೆಗಾಗಿ ಸಾಷ್ಟಾಂಗವೆರಗಿದರು" ಎಂದು ಸಹ ಅರ್ಥವಿದೆ. ಆದರೆ ದೇವಶಿಕ್ಷೆ ಬಂದೆರಗಿದ ಮೇಲೆ ಪಶ್ಚಾತ್ತಾಪ ಸ್ವೀಕರಿಸಲ್ಪಡುವುದಿಲ್ಲ. ಆದ್ದರಿಂದ ಅವರ ಮೇಲೆ ಶಿಕ್ಷೆ ಎರಗಿತು.

**ಹೇಳಿದ ಸಂದರ್ಭ- 'ನಿಮಗಿಂತ ಮುಂಚೆ ಲೋಕದಲ್ಲಿ ಯಾರೂ ಮಾಡಿರದ ಅಶ್ಲೀಲ ಕೃತ್ಯವನ್ನು ನೀವು ಮಾಡುತ್ತಿದ್ದೀರಾ?'**

الْفَاحِشَةَ مَا سَبَقَكُم بِهَا مِنْ أَحَدٍ مِّنَ الْعَالَمِينَ ﴿٨٠﴾

**82. 'ಸ್ತ್ರೀಯರನ್ನು ಬಿಟ್ಟು ನೀವು ಪುರುಷರನ್ನು ಕಾಮಾತುರರಾಗಿ ಸಮೀಪಿಸುತ್ತೀರಿ. ಅಷ್ಟೇ ಅಲ್ಲ, ನೀವು ಎಲ್ಲೆ ಮೀರಿದ ಜನಾಂಗವಾಗಿದ್ದೀರಿ.'**

إِنَّكُمْ لَتَأْتُونَ الرِّجَالَ شَهْوَةً مِّن دُونِ النِّسَاءِ ۚ بَلْ أَنتُمْ قَوْمٌ مُّسْرِفُونَ ﴿٨١﴾

**83. ಆಗ ಅವರ ಜನಾಂಗದ ಮರುತ್ತರ ಇದೇ ಆಗಿತ್ತು: 'ನಿಮ್ಮ ಊರಿನಿಂದ ಅವರನ್ನು** (ಲೂತ್ ಮತ್ತು ಅವರ ಅನುಯಾಯಿಗಳನ್ನು) **ಹೊರಗಟ್ಟಿರಿ. ಇವರು ಭಾರೀ ಪರಿಶುದ್ಧ ಜನರಂತೆ!'**

وَمَا كَانَ جَوَابَ قَوْمِهِ إِلَّا أَن قَالُوا أَخْرِجُوهُم مِّن قَرْيَتِكُمْ ۖ إِنَّهُمْ أُنَاسٌ يَتَطَهَّرُونَ ﴿٨٢﴾

**84. ಕೊನೆಗೆ ಅವರನ್ನೂ** (ಲೂತ್‌ರನ್ನು) **ಅವರ ಕುಟುಂಬವನ್ನೂ ನಾವು ರಕ್ಷಿಸಿದೆವು - ಅವರ ಪತ್ನಿಯನ್ನು ಹೊರತು. ಅವಳು ಹಿಂದಕ್ಕೆ ಸರಿದು ನಿಂತವರೊಡನೆ ಸೇರಿದವಳಾಗಿದ್ದಳು.**

فَأَنجَيْنَاهُ وَأَهْلَهُ إِلَّا امْرَأَتَهُ كَانَتْ مِنَ الْغَابِرِينَ ﴿٨٣﴾

**85. ಮತ್ತೆ ನಾವು ಅವರ ಮೇಲೆ ಒಂದು ಮಳೆಯನ್ನು ಸುರಿಸಿದೆವು. ಪಾಪಿಷ್ಠರ ಅಂತ್ಯ ಹೇಗೆ ಆಗುತ್ತದೆಂದು ನೋಡು.**

وَأَمْطَرْنَا عَلَيْهِم مَّطَرًا ۖ فَانظُرْ كَيْفَ كَانَ عَاقِبَةُ الْمُجْرِمِينَ ﴿٨٤﴾

**86. 'ಮದ್‌ಯನ್' ಜನಾಂಗದವರಿಗೆ ನಾವು ಅವರ ಸಹೋದರ ಶುಐಬ್‌ರನ್ನು** ನಿಯೋಜಿಸಿದೆವು. **ಅವರು ಹೇಳಿದರು: 'ಎಲೈ ನನ್ನ ಜನರೇ, ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. ನಿಮ್ಮ ಪ್ರಭುವಿನಿಂದ ನಿಮ್ಮ ಬಳಿಗೆ ಸುವ್ಯಕ್ತವಾದೊಂದು ದೃಷ್ಟಾಂತ ಬಂದಿದೆ.** (ಕೊಡು-ಕೊಳ್ಳುವಿಕೆಯಲ್ಲಿ) **ನೀವು ಅಳತೆ ಮತ್ತು ತೂಕವನ್ನು ಸರಿಯಾಗಿ ಮಾಡಿರಿ. ಜನರಿಗೆ ಅವರ ಸಾಮಗ್ರಿಗಳನ್ನು ಕಡಿಮೆ ಪ್ರಮಾಣದಲ್ಲಿ ನೀಡಬೇಡಿರಿ. ಭೂಮಿಯಲ್ಲಿ ಶಾಂತಿ ಸ್ಥಾಪಿತವಾದ ನಂತರ ನೀವು ಗಲಭೆ ಗೊಂದಲಗಳನ್ನು ಹಬ್ಬಿಸಬೇಡಿರಿ. ನೀವು ಸತ್ಯವಿಶ್ವಾಸಿಗಳೆಂದಾದರೆ ಅದೇ ನಿಮಗೆ ಉತ್ತಮವಾದುದು.**

وَإِلَىٰ مَدْيَنَ أَخَاهُمْ شُعَيْبًا ۗ قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۖ قَدْ جَاءَتْكُم بَيِّنَةٌ مِّن رَّبِّكُمْ ۖ فَأَوْفُوا الْكَيْلَ وَالْمِيزَانَ وَلَا تَبْخَسُوا النَّاسَ أَشْيَاءَهُمْ وَلَا تُفْسِدُوا فِي الْأَرْضِ بَعْدَ إِصْلَاحِهَا ۚ ذَٰلِكُمْ خَيْرٌ لَّكُمْ إِن كُنتُم مُّؤْمِنِينَ ﴿٨٥﴾





**87. 'ಅಲ್ಲಾಹನಲ್ಲಿ ನಂಬಿಕೆಯಿಟ್ಟವರನ್ನು ಬೆದರಿಸುತ್ತಾ ಅವನ ಮಾರ್ಗದಿಂದ ಜನರನ್ನು ತಡೆಯುತ್ತಾ ಅದನ್ನು ವಕ್ರಗೊಳಿಸಲು ಪ್ರಯತ್ನಿಸುತ್ತಾ ನೀವು ಪ್ರತಿಯೊಂದು ಮಾರ್ಗದಲ್ಲಿ ಕುಳ್ಳಿರಬಾರದು. ನೀವು ಅಲ್ಪಸಂಖ್ಯಾತರಾಗಿದ್ದಾಗ ಅವನು ನಿಮ್ಮನ್ನು ಬಹುಸಂಖ್ಯಾತರನ್ನಾಗಿ ಮಾಡಿದುದನ್ನು ಸ್ಮರಿಸಿರಿ. ಗೊಂದಲಗಾರರ ಅಂತ್ಯ ಹೇಗಾಯಿತೆಂದೂ ನೋಡಿರಿ.**

وَلَا تَقْعُدُوا بِكُلِّ صِرَاطٍ تُوعِدُونَ وَتَصُدُّونَ عَن سَبِيلِ اللَّهِ مَنْ آمَنَ بِهِ وَتَبْغُونَهَا عِوَجًا ۚ وَاذْكُرُوا إِذْ كُنتُمْ قَلِيلًا فَكَثَّرَكُمْ ۖ وَانظُرُوا كَيْفَ كَانَ عَاقِبَةُ الْمُفْسِدِينَ ﴿٨٦﴾

**88. 'ನಾನು ಯಾವ ಸಂದೇಶದೊಂದಿಗೆ ನಿಯೋಜಿಸಲ್ಪಟ್ಟಿರುವನೋ, ಅದರಲ್ಲಿ ವಿಶ್ವಾಸವಿರಿಸುವ ಒಂದು ಪಂಗಡವೂ ವಿಶ್ವಾಸವಿಡದ ಮತ್ತೊಂದು ಪಂಗಡವೂ ನಿಮ್ಮಲ್ಲಿದ್ದರೆ, ಅಲ್ಲಾಹನು ನಮ್ಮ ಮಧ್ಯೆ** (ವಿಶ್ವಾಸಿಗಳು ಮತ್ತು ಅವಿಶ್ವಾಸಿಗಳ ಮಧ್ಯೆ) **ತೀರ್ಮಾನ ಮಾಡುವ ವರೆಗೆ ನೀವು ಸೈರಣೆಯಿಂದಿರಿ. ತೀರ್ಮಾನ ಮಾಡುವವರಲ್ಲಿ ಅತ್ಯುತ್ತಮನು ಅವನೇ ಆಗಿದ್ದಾನೆ.'**

وَإِن كَانَ طَائِفَةٌ مِّنكُمْ آمَنُوا بِالَّذِي أُرْسِلْتُ بِهِ وَطَائِفَةٌ لَّمْ يُؤْمِنُوا فَاصْبِرُوا حَتَّىٰ يَحْكُمَ اللَّهُ بَيْنَنَا ۚ وَهُوَ خَيْرُ الْحَاكِمِينَ ﴿٨٧﴾

**89. ಅವರ ಜನಾಂಗದ ದುರಂಹಕಾರಿಗಳಾದ ಮುಖಂಡರು ಹೇಳಿದರು: 'ಎಲೈ ಶುಐಬ್, ನಿನ್ನನ್ನೂ ನಿನ್ನೊಂದಿಗಿರುವ ವಿಶ್ವಾಸಿಗಳನ್ನೂ ನಾವು ನಮ್ಮ ಊರಿನಿಂದ ಖಂಡಿತವಾಗಿಯೂ ಹೊರಕ್ಕಟ್ಟುವೆವು. ಅಥವಾ ನೀವು ನಮ್ಮ ಧರ್ಮಕ್ಕೆ ಮರಳಲೇ ಬೇಕು' ಅವರು** (ಶುಐಬ್) **ಹೇಳಿದರು: 'ಏನು, ನಾವು ಅದನ್ನು ಇಷ್ಟಪಡುವುದಿಲ್ಲವಾದರೂ** (ನಿಮ್ಮ ಧರ್ಮಕ್ಕೆ ನಾವು ಮರಳಬೇಕೇ?)

قَالَ الْمَلَأُ الَّذِينَ اسْتَكْبَرُوا مِن قَوْمِهِ لَنُخْرِجَنَّكَ يَا شُعَيْبُ وَالَّذِينَ آمَنُوا مَعَكَ مِن قَرْيَتِنَا أَوْ لَتَعُودُنَّ فِي مِلَّتِنَا ۚ قَالَ أَوَلَوْ كُنَّا كَارِهِينَ ﴿٨٨﴾

**90. 'ನಿಮ್ಮ ಧರ್ಮದಿಂದ ಅಲ್ಲಾಹನು ನಮ್ಮನ್ನು ರಕ್ಷಿಸಿದ ಬಳಿಕ ಅದರೆಡೆಗೆ ನಾವು ಮರಳಿದರೆ ಖಂಡಿತವಾಗಿಯೂ ಅಲ್ಲಾಹನ ಹೆಸರಿನಲ್ಲಿ ನಾವು ಸುಳ್ಳು ಸೃಜಿಸಿದವರಾಗುವೆವು. ನಮ್ಮ ಪ್ರಭುವಾದ ಅಲ್ಲಾಹನು ಇಚ್ಛಿಸಿದರೆ ಹೊರತು ಅದರೆಡೆಗೆ ಮರಳಲಿಕ್ಕೆ ನಮಗೆ ಸಾಧ್ಯವಿಲ್ಲ. ನಮ್ಮ ಪ್ರಭು ಎಲ್ಲ ವಿಚಾರಗಳಿಗೆ ಸಂಬಂಧಿಸಿ ಅಗಾಧ ಜ್ಞಾನವುಳ್ಳವನಾಗಿದ್ದಾನೆ. ಅಲ್ಲಾಹನ ಮೇಲೆಯೇ ನಾವು ಭರವಸೆ ಇಟ್ಟಿದ್ದೇವೆ.'**(ಅವರು

قَدِ افْتَرَيْنَا عَلَى اللَّهِ كَذِبًا إِنْ عُدْنَا فِي مِلَّتِكُم بَعْدَ إِذْ نَجَّانَا اللَّهُ مِنْهَا ۚ وَمَا يَكُونُ لَنَا أَن نَّعُودَ فِيهَا إِلَّا أَن يَشَاءَ اللَّهُ رَبُّنَا ۚ وَسِعَ رَبُّنَا كُلَّ شَيْءٍ عِلْمًا ۚ عَلَى اللَّهِ تَوَكَّلْنَا ۚ رَبَّنَا افْتَحْ

ಪ್ರಾರ್ಥಿಸಿದರು:)' ನಮ್ಮ ಪ್ರಭೂ, ನಮ್ಮ ಮತ್ತು ನಮ್ಮ ಜನಾಂಗದ ಮಧ್ಯೆ ಸತ್ಯಾಧಾರದಲ್ಲಿ ನೀನು ತೀರ್ಮಾನ ಮಾಡು. ತೀರ್ಮಾನ ಮಾಡುವವರಲ್ಲಿ ನೀನು ಅತ್ಯುತ್ತಮನಷ್ಟೆ.'

بَيْنَنَا وَبَيْنَ قَوْمِنَا بِالْحَقِّ وَأَنتَ خَيْرُ الْفَاتِحِينَ ﴿٩٠﴾

**91.** ಅವರ ಜನಾಂಗದ ಅವಿಶ್ವಾಸಿಗಳಾದ ಮುಖಂಡರು ಹೇಳಿದರು: 'ನೀವು ಶುಐಬನ್ನು ಅನುಸರಿಸಿದರೆ ಖಂಡಿತವಾಗಿಯೂ ನೀವು ನಷ್ಟಹೊಂದಿದವರಾಗುವಿರಿ.'

وَقَالَ الْمَلَأُ الَّذِينَ كَفَرُوا مِن قَوْمِهِ لَئِنِ اتَّبَعْتُمْ شُعَيْبًا إِنَّكُمْ إِذًا لَّخَاسِرُونَ ﴿٩١﴾

**92.** ಆಗ ಅವರು ಭೂಕಂಪಕ್ಕೆ ತುತ್ತಾದರು. ಹಾಗೆ ಪ್ರಭಾತವಾದಾಗ ಮನೆಗಳಲ್ಲಿ ಅವರು ಅಧೋಮುಖರಾಗಿ ಬಿದ್ದುಬಿಟ್ಟರು.

فَأَخَذَتْهُمُ الرَّجْفَةُ فَأَصْبَحُوا فِي دَارِهِمْ جَاثِمِينَ ﴿٩٢﴾

**93.** ಶುಐಬ್‌ರನ್ನು ಸುಳ್ಳಾಗಿಸಿದವರು, ಅವರು ಅಲ್ಲೆಂದೂ ನೆಲೆಸಿರಲಿಲ್ಲವೆಂಬಂತಾದರು. ಶುಐಬ್‌ರನ್ನು ಸುಳ್ಳಾಗಿಸಿದವರೇ ಹಾನಿಗೊಳಗಾದವರು.

الَّذِينَ كَذَّبُوا شُعَيْبًا كَأَن لَّمْ يَغْنَوْا فِيهَا ۚ الَّذِينَ كَذَّبُوا شُعَيْبًا كَانُوا هُمُ الْخَاسِرِينَ ﴿٩٣﴾

**94.** ಆ ಬಳಿಕ ಅವರು (ಶುಐಬ್) ಅವರಿಂದ ತಿರುಗಿ ದೂರ ಹೋದರು. ಅವರು ಹೇಳಿದರು: 'ಎಲೈ ನನ್ನ ಜನರೇ, ನಾನು ನನ್ನ ಪ್ರಭುವಿನ ಸಂದೇಶವನ್ನು ನಿಮಗೆ ತಲಪಿಸಿದ್ದೇನೆ; ಸದುಪದೇಶವನ್ನು ಸಹ ನೀಡಿದ್ದೇನೆ. ಹಾಗಿರುವಾಗ, ಅವಿಶ್ವಾಸಿಗಳಾದ ಜನರ ಬಗ್ಗೆ ನಾನೇಕೆ ವ್ಯಾಕುಲಗೊಳ್ಳಬೇಕು?'

فَتَوَلَّىٰ عَنْهُمْ وَقَالَ يَا قَوْمِ لَقَدْ أَبْلَغْتُكُمْ رِسَالَاتِ رَبِّي وَنَصَحْتُ لَكُمْ ۖ فَكَيْفَ آسَىٰ عَلَىٰ قَوْمٍ كَافِرِينَ ﴿٩٤﴾

**95.** ಯಾವುದೇ ನಾಡಿಗೆ ಅದರ ನಿವಾಸಿಗಳನ್ನು ಕಷ್ಟ ಮತ್ತು ಯಾತನೆಗಳಿಗೆ ಗುರಿಪಡಿಸಿದ ಹೊರತು ಒಬ್ಬ ಪ್ರವಾದಿಯನ್ನು ನಾವು ಕಳುಹಿಸಲಿಲ್ಲ- ಅವರು ವಿನಯಾನ್ವಿತರಾಗಲಿಕ್ಕಾಗಿ.[249B]

وَمَا أَرْسَلْنَا فِي قَرْيَةٍ مِّن نَّبِيٍّ إِلَّا أَخَذْنَا أَهْلَهَا بِالْبَأْسَاءِ وَالضَّرَّاءِ لَعَلَّهُمْ يَضَّرَّعُونَ ﴿٩٥﴾

**96.** ಅನಂತರ ನಾವು ಆ ದುರವಸ್ಥೆಯನ್ನು ಉತ್ತಮ ಸ್ಥಿತಿಗೆ ಬದಲಾಯಿಸಿದೆವು. ಹಾಗೆ ಅವರು ಪ್ರಗತಿ

ثُمَّ بَدَّلْنَا مَكَانَ السَّيِّئَةِ الْحَسَنَةَ

249B. 6.43ರ ಟಿಪ್ಪಣಿ ನೋಡಿರಿ.





ಹೊಂದಿ, ಹೀಗೆ ಹೇಳಿದರು: 'ನಮ್ಮ ತಂದೆ ತಾತಂದಿರು ಸಹ ದುಃಖ ಮತ್ತು ಸುಖವನ್ನು ಅನುಭವಿಸಿದ್ದಾರೆ (ಅದು ಸಹಜ)'. ಆಗ ನಾವು ಅವರನ್ನು, ಅವರು ನಿರೀಕ್ಷಿಸದೆ ಇರುವಾಗ ಪಕ್ಕನೆ ಹಿಡಿದು ಶಿಕ್ಷಿಸಿದೆವು.

حَتَّىٰ عَفَوا وَّقَالُوا قَدْ مَسَّ آبَاءَنَا الضَّرَّاءُ وَالسَّرَّاءُ فَأَخَذْنَاهُم بَغْتَةً وَهُمْ لَا يَشْعُرُونَ ﴿٩٦﴾

**97.** ಆ ನಾಡಿನ ನಿವಾಸಿಗಳು ವಿಶ್ವಾಸಹೊಂದಿ ಭಯಭಕ್ತಿಯುಳ್ಳವರಾಗಿರುತ್ತಿದ್ದರೆ, ನಾವು ಅವರಿಗೆ ಆಕಾಶದಿಂದಲೂ ಭೂಮಿಯಿಂದಲೂ ಅನುಗ್ರಹಗಳ ಬಾಗಿಲುಗಳನ್ನು ತೆರೆದುಕೊಡುತ್ತಿದ್ದೆವು. ಆದರೆ ಅವರು (ಪ್ರವಾದಿಗಳನ್ನು) ಸುಳ್ಳಾಗಿಸಿದರು. ಆಗ ಅವರ ಕೃತ್ಯಗಳ ಫಲವಾಗಿ ನಾವು ಅವರನ್ನು ಶಿಕ್ಷಿಸಿದೆವು.

وَلَوْ أَنَّ أَهْلَ الْقُرَىٰ آمَنُوا وَاتَّقَوْا لَفَتَحْنَا عَلَيْهِم بَرَكَاتٍ مِّنَ السَّمَاءِ وَالْأَرْضِ وَلَٰكِن كَذَّبُوا فَأَخَذْنَاهُم بِمَا كَانُوا يَكْسِبُونَ ﴿٩٧﴾

**98.** ಹಾಗಿರುವಾಗ ಈ ನಾಡುಗಳ (ಮಕ್ಕ ಮತ್ತು ಸುತ್ತುಮುತ್ತಲಿನ ಪ್ರದೇಶಗಳ) ನಿವಾಸಿಗಳು ನಿದ್ರಿಸುತ್ತಿರುವಾಗ ರಾತ್ರಿ ಸಮಯ ನಮ್ಮ ಶಿಕ್ಷೆ ಅವರಿಗೆ ಬಂದೆರಗುವುದೆಂಬ ವಿಚಾರದಲ್ಲಿ ಅವರು ನಿರ್ಭೀತರಾಗಿರುವರೇ?

أَفَأَمِنَ أَهْلُ الْقُرَىٰ أَن يَأْتِيَهُم بَأْسُنَا بَيَاتًا وَهُمْ نَائِمُونَ ﴿٩٨﴾

**99.** ಅಥವಾ ಈ ನಾಡುಗಳ ನಿವಾಸಿಗಳು ಕ್ರೀಡೆ - ವಿನೋದಗಳಲ್ಲಿರುವಾಗ ಪೂರ್ವಾಹ್ನ ಸಮಯದಲ್ಲಿ ನಮ್ಮ ಶಿಕ್ಷೆ ಅವರಿಗೆ ಬಂದೆರಗುವುದರ ಬಗ್ಗೆ ಅವರು ನಿರ್ಭೀತರಾಗಿದ್ದಾರೆಯೇ?

أَوَأَمِنَ أَهْلُ الْقُرَىٰ أَن يَأْتِيَهُم بَأْسُنَا ضُحًى وَهُمْ يَلْعَبُونَ ﴿٩٩﴾

**100.** ಏನು, ಅವರು ಅಲ್ಲಾಹನ ಯೋಜನೆಯ ಕುರಿತು ನಿರ್ಭೀತರಾಗಿರುವರೇ? (ಹಾಗಾದರೆ ಅವರು ತಿಳಿದುಕೊಳ್ಳಲಿ) ಹಾನಿಗೊಳಗಾದ ಜನರು ಹೊರತು ಅಲ್ಲಾಹನ ಯೋಜನೆಯ ಬಗ್ಗೆ ನಿರ್ಭೀತರಾಗುವುದಿಲ್ಲ.

أَفَأَمِنُوا مَكْرَ اللَّهِ ۚ فَلَا يَأْمَنُ مَكْرَ اللَّهِ إِلَّا الْقَوْمُ الْخَاسِرُونَ ﴿١٠٠﴾

**101.** ಭೂಮಿಯನ್ನು ಅದರ (ಪೂರ್ವ) ನಿವಾಸಿಗಳ ಬಳಿಕ ಉತ್ತರಾಧಿಕಾರವಾಗಿ ಪಡೆಯುವವರಿಗೆ ಇದು ಮಾರ್ಗದರ್ಶಕವಾಗುವುದಿಲ್ಲವೇ- ನಾವು ಇಚ್ಛಿಸುವುದಾದರೆ, ಅವರ ಅಪರಾಧಗಳ ಹೇತುವಾಗಿ ಅವರಿಗೆ (ಸಹ) ವಿಪತ್ತು ಬಂದೆರಗುವಂತೆ ಮಾಡುವೆವು ಹಾಗೂ ಅವರು ಏನನ್ನೂ ಆಲಿಸದಂತೆ ಅವರ ಹೃದಯಗಳಿಗೆ ಮುದ್ರೆ ಹಾಕುವೆವು ಎಂಬ ವಿಚಾರ?

أَوَلَمْ يَهْدِ لِلَّذِينَ يَرِثُونَ الْأَرْضَ مِن بَعْدِ أَهْلِهَا أَن لَّوْ نَشَاءُ أَصَبْنَاهُم بِذُنُوبِهِمْ ۚ وَنَطْبَعُ عَلَىٰ قُلُوبِهِمْ فَهُمْ لَا يَسْمَعُونَ ﴿١٠١﴾

**102.** ಅಂತಹ ರಾಜ್ಯಗಳಿದ್ದವು. ಅವುಗಳ ಪೈಕಿ ಕೆಲವು ರಾಜ್ಯಗಳ ವೃತ್ತಾಂತಗಳನ್ನು ನಾವು ನಿನಗೆ ವಿವರಿಸಿಕೊಡುತ್ತೇವೆ. ನಿಜವಾಗಿಯೂ ಅವರ ಪ್ರವಾದಿಗಳು ಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಅವರ ಬಳಿಗೆ ಬಂದಿದ್ದರು. ಆದರೆ ಮುಂಚೆಯೇ ಅವರು ಸುಳ್ಳಾಗಿಸಿದ ವಿಚಾರಗಳನ್ನು ಅವರು ನಂಬಲಿಲ್ಲ. ಹೀಗೆ ಅಲ್ಲಾಹನು ಅವಿಶ್ವಾಸಿಗಳ ಹೃದಯಗಳಿಗೆ ಮುದ್ರೆ ಹಾಕುತ್ತಾನೆ.

تِلْكَ الْقُرَىٰ نَقُصُّ عَلَيْكَ مِنْ أَنبَائِهَا ۚ وَلَقَدْ جَاءَتْهُمْ رُسُلُهُم بِالْبَيِّنَاتِ فَمَا كَانُوا لِيُؤْمِنُوا بِمَا كَذَّبُوا مِن قَبْلُ ۚ كَذَٰلِكَ يَطْبَعُ اللَّهُ عَلَىٰ قُلُوبِ الْكَافِرِينَ ﴿١٠٢﴾

**103.** ಅವರಲ್ಲಿ ಹೆಚ್ಚಿನವರನ್ನು (ತಮ್ಮ) ಕರಾರಿನಲ್ಲಿ[249C] ನಾವು ಕಾಣಲಿಲ್ಲ. ಬದಲು, ಅವರಲ್ಲಿ ಹೆಚ್ಚಿನವರನ್ನು ಕರಾರು ಉಲ್ಲಂಘನೆ ಮಾಡುವವರಾಗಿ ನಾವು ಕಂಡೆವು.

وَمَا وَجَدْنَا لِأَكْثَرِهِم مِّنْ عَهْدٍ ۖ وَإِن وَجَدْنَا أَكْثَرَهُمْ لَفَاسِقِينَ ﴿١٠٣﴾

**104.** ಆ ನಂತರ, ಅವರ (ಆ ಪ್ರವಾದಿಗಳ) ಬಳಿಕ ಮೂಸಾರನ್ನು ನಮ್ಮ ದೃಷ್ಟಾಂತಗಳ ಸಹಿತ ಫಿರ್‌ಔನ್ ಮತ್ತು ಅವನ ಸಮುದಾಯದ ಮುಖಂಡರ ಬಳಿಗೆ ನಾವು ಕಳುಹಿಸಿದೆವು. ಆಗ ಅವುಗಳನ್ನು (ದೃಷ್ಟಾಂತಗಳನ್ನು) ಅವರು ಅನ್ಯಾಯವಾಗಿ ತಿರಸ್ಕರಿಸಿದರು. ಅಶಾಂತಿ ಹರಡುವವರ ಅಂತ್ಯ ಹೇಗಾಯಿತೆಂದು ನೋಡು.

ثُمَّ بَعَثْنَا مِن بَعْدِهِم مُّوسَىٰ بِآيَاتِنَا إِلَىٰ فِرْعَوْنَ وَمَلَئِهِ فَظَلَمُوا بِهَا ۖ فَانظُرْ كَيْفَ كَانَ عَاقِبَةُ الْمُفْسِدِينَ ﴿١٠٤﴾

**105.** ಮೂಸಾ ಹೇಳಿದರು: 'ಎಲೈ ಫಿರ್‌ಔನ್, ನಿಜವಾಗಿಯೂ ನಾನು ಜಗನ್ನಿಯಾಮಕನಿಂದ ಬಂದ ಒಬ್ಬ ಸಂದೇಶವಾಹಕನಾಗಿದ್ದೇನೆ.'

وَقَالَ مُوسَىٰ يَا فِرْعَوْنُ إِنِّي رَسُولٌ مِّن رَّبِّ الْعَالَمِينَ ﴿١٠٥﴾

**106.** 'ಅಲ್ಲಾಹನ ಕುರಿತು ಸತ್ಯ ಹೊರತು ಬೇರೇನನ್ನೂ ಹೇಳದಿರಲು ನಾನು ಬದ್ಧನಾಗಿದ್ದೇನೆ. ನಿಮ್ಮ ಪ್ರಭುವಿನಿಂದ ಸ್ಪಷ್ಟವಾದೊಂದು ದೃಷ್ಟಾಂತ ಸಹಿತ ನಾನು ನಿಮ್ಮ ಬಳಿಗೆ ಆಗಮಿಸಿರುವೆನು. ಆದ್ದರಿಂದ ಇಸ್ರಾಈಲ್ ಸಂತತಿಗಳನ್ನು ನನ್ನ ಜೊತೆ ಕಳುಹಿಸಿಕೊಡು.'

حَقِيقٌ عَلَىٰ أَن لَّا أَقُولَ عَلَى اللَّهِ إِلَّا الْحَقَّ ۚ قَدْ جِئْتُكُم بِبَيِّنَةٍ مِّن رَّبِّكُمْ فَأَرْسِلْ مَعِيَ بَنِي إِسْرَائِيلَ ﴿١٠٦﴾

249C. ಕರಾರು ಪಾಲಿಸುವವರಾಗಿ





**107.** ಅವನು (ಫಿರ್‌ಔನ್) ಹೇಳಿದನು: 'ನೀನು ನಿಜವಾಗಿಯೂ ದೃಷ್ಟಾಂತದೊಂದಿಗೆ ಬಂದಿದ್ದರೆ ಅದನ್ನು ತೋರಿಸು - ನೀನು ಸತ್ಯವಂತನೆಂದಾದರೆ'.

قَالَ إِن كُنتَ جِئْتَ بِآيَةٍ فَأْتِ بِهَا إِن كُنتَ مِنَ الصَّادِقِينَ ﴿١٠٧﴾

**108.** ಆಗ ಅವರು (ಮೂಸಾ) ತನ್ನ ಬೆತ್ತವನ್ನು ನೆಲಕ್ಕೆಸೆದರು. ಆಗ ಪಕ್ಕನೆ ಅದೊಂದು ಸ್ಪಷ್ಟವಾಗಿ ಕಾಣುವ ಹಾವಾಯಿತು.

فَأَلْقَىٰ عَصَاهُ فَإِذَا هِيَ ثُعْبَانٌ مُّبِينٌ ﴿١٠٨﴾

**109.** ಅವರು ತನ್ನ ಕೈಯನ್ನು ಹೊರತಂದಾಗ ಅದು ಪ್ರೇಕ್ಷಕರಿಗೆ ಅತ್ಯಂತ ಬಿಳಿಯಾಗಿ ಕಂಡಿತು.

وَنَزَعَ يَدَهُ فَإِذَا هِيَ بَيْضَاءُ لِلنَّاظِرِينَ ﴿١٠٩﴾

**110.** ಆಗ ಫಿರ್‌ಔನನ ಜನತೆಯ ಮುಖಂಡರು ಹೇಳಿದರು: 'ಖಂಡಿತವಾಗಿಯೂ ಇವನು ನಿಪುಣನಾದ ಒಬ್ಬ ಮಾಂತ್ರಿಕನೇ ಆಗಿದ್ದಾನೆ.

قَالَ الْمَلَأُ مِن قَوْمِ فِرْعَوْنَ إِنَّ هَٰذَا لَسَاحِرٌ عَلِيمٌ ﴿١١٠﴾

**111.** 'ನಿಮ್ಮ ಊರಿನಿಂದ ನಿಮ್ಮನ್ನು ಹೊರಕ್ಕಟ್ಟಲು ಇವನು ಬಯಸುತ್ತಾನೆ. ಈಗ ನಿಮ್ಮ ಸಲಹೆ ಏನು?'

يُرِيدُ أَن يُخْرِجَكُم مِّنْ أَرْضِكُمْ ۖ فَمَاذَا تَأْمُرُونَ ﴿١١١﴾

**112.** ಅವರು ಹೇಳಿದರು: 'ಅವನಿಗೆ ಮತ್ತು ಅವನ ಸಹೋದರನಿಗೆ ಸಮಯಾವಕಾಶ ನೀಡಿರಿ; ಡಂಗುರ ಸಾರುವವರನ್ನು ಎಲ್ಲ ನಗರಗಳಿಗೂ ಕಳುಹಿಸಿರಿ.

قَالُوا أَرْجِهْ وَأَخَاهُ وَأَرْسِلْ فِي الْمَدَائِنِ حَاشِرِينَ ﴿١١٢﴾

**113.** 'ಎಲ್ಲ ನಿಷ್ಣಾತ ಇಂದ್ರಜಾಲಿಕರನ್ನು ಅವರು ನಿನ್ನ ಬಳಿಗೆ ತರಲಿ.'

يَأْتُوكَ بِكُلِّ سَاحِرٍ عَلِيمٍ ﴿١١٣﴾

**114.** ಇಂದ್ರಜಾಲಿಕರು ಫಿರ್‌ಔನನ ಬಳಿಗೆ ಬಂದರು. ಅವರು ಹೇಳಿದರು: 'ನಾವು ಗೆದ್ದರೆ ನಮಗೆ ಖಂಡಿತವಾಗಿಯೂ ಬಹುಮಾನ ಲಭಿಸುವುದಲ್ಲವೇ?'

وَجَاءَ السَّحَرَةُ فِرْعَوْنَ قَالُوا إِنَّ لَنَا لَأَجْرًا إِن كُنَّا نَحْنُ الْغَالِبِينَ ﴿١١٤﴾

**115.** ಅವನು ಹೇಳಿದನು: 'ಹೌದು. (ಅಷ್ಟೇ ಅಲ್ಲ) ನೀವು ಖಂಡಿತವಾಗಿಯೂ (ನಮ್ಮ) ಸಾಮೀಪ್ಯವನ್ನು ಗಳಿಸಿದವರಲ್ಲಿ ಸೇರುವಿರಿ.'

قَالَ نَعَمْ وَإِنَّكُمْ لَمِنَ الْمُقَرَّبِينَ ﴿١١٥﴾

**116.** ಅವರು (ಇಂದ್ರಜಾಲಿಕರು) ಹೇಳಿದರು: 'ಎಲ್ಲೆ ಮೂಸಾ, ಒಂದೋ (ಮೊದಲು) ನೀನು (ಬೆತ್ತವನ್ನು) ಎಸೆ; ಇಲ್ಲವಾದರೆ (ಮೊದಲು) ಎಸೆಯುವವರು ನಾವಾಗುವೆವು.'

قَالُوا يَا مُوسَىٰ إِمَّا أَن تُلْقِيَ وَإِمَّا أَن نَّكُونَ نَحْنُ الْمُلْقِينَ ﴿١١٦﴾

**117.** ಅವರು (ಮೂಸಾ) ಹೇಳಿದರು: 'ನೀವು ಎಸೆಯಿರಿ.' ಹಾಗೆ ಅವರು ಎಸೆದಾಗ ಜನರ ಕಣ್ಣುಗಳನ್ನು (ಇಂದ್ರಜಾಲ ವಿದ್ಯೆಯಿಂದ) ಮರುಳುಗೊಳಿಸಿ ಅವರನ್ನು ಭಯಚಕಿತಗೊಳಿಸಿದರು. ಅವರು ಬಹುದೊಡ್ಡ ಜಾದು ವಿದ್ಯೆ ಪ್ರದರ್ಶಿಸಿದರು.

قَالَ أَلْقُوا ۖ فَلَمَّا أَلْقَوْا سَحَرُوا أَعْيُنَ النَّاسِ وَاسْتَرْهَبُوهُمْ وَجَاءُوا بِسِحْرٍ عَظِيمٍ ﴿١١٧﴾

**118.** 'ನಿನ್ನ ಬೆತ್ತವನ್ನು ಎಸೆ' ಎಂದು ನಾವು ಮೂಸಾರಿಗೆ ಅರುಹಿದೆವು. ಆಗ, ಅದೋ ಅವರು ಕೃತಕವಾಗಿ ಸೃಷ್ಟಿಸಿದುದನ್ನು ಅದು ನುಂಗಿಬಿಟ್ಟಿತು.[250]

وَأَوْحَيْنَا إِلَىٰ مُوسَىٰ أَنْ أَلْقِ عَصَاكَ ۖ فَإِذَا هِيَ تَلْقَفُ مَا يَأْفِكُونَ ﴿١١٨﴾

**119.** ಹಾಗೆ ಸತ್ಯ ಜಯಗಳಿಸಿತು ಹಾಗೂ ಅವರ ಶ್ರಮಗಳು ವ್ಯರ್ಥಗೊಂಡವು.

فَوَقَعَ الْحَقُّ وَبَطَلَ مَا كَانُوا يَعْمَلُونَ ﴿١١٩﴾

**120.** ಹಾಗೆ ಅವರು ಅಲ್ಲಿ ಪರಾಜಿತರಾದರು ಹಾಗೂ ಅವಮಾನಿತರಾಗಿ ಹಿಮ್ಮೆಟ್ಟಿದರು.

فَغُلِبُوا هُنَالِكَ وَانقَلَبُوا صَاغِرِينَ ﴿١٢٠﴾

**121.** ಆ ಐಂದ್ರಜಾಲಿಕರು ಸಾಷ್ಟಾಂಗವೆರಗಲು ಪ್ರಚೋದಿತರಾದರು.

وَأُلْقِيَ السَّحَرَةُ سَاجِدِينَ ﴿١٢١﴾

**122.** ಅವರು ಹೇಳಿದರು: 'ನಾವು ಸರ್ವಲೋಕಗಳ ಪ್ರಭುವನ್ನು ನಂಬುತ್ತೇವೆ -

قَالُوا آمَنَّا بِرَبِّ الْعَالَمِينَ ﴿١٢٢﴾

**123.** 'ಮೂಸಾ ಮತ್ತು ಹಾರೂನರ ಪ್ರಭುವನ್ನು.'

رَبِّ مُوسَىٰ وَهَارُونَ ﴿١٢٣﴾

**124.** ಫಿರ್‌ಔನ್ ಹೇಳಿದನು: 'ನಿಮಗೆ ನಾನು ಅನುಮತಿ ನೀಡುವುದಕ್ಕೆ ಮುಂಚೆಯೇ ನೀವು ಅವನನ್ನು ನಂಬಿದ್ದೀರಾ? ಖಂಡಿತವಾಗಿಯೂ ಇದು ಈ ಪಟ್ಟಣದಿಂದ ಅದರ ನಿವಾಸಿಗಳನ್ನು ಹೊರದೂಡಲಿಕ್ಕಾಗಿ ನೀವು ಮಾಡಿದ ಒಂದು ಷಡ್ಯಂತ್ರವಾಗಿದೆ. ಆದ್ದರಿಂದ ನೀವು (ಅದರ ಪರಿಣಾಮವನ್ನು) ತಿಳಿಯುವಿರಿ.

قَالَ فِرْعَوْنُ آمَنتُم بِهِ قَبْلَ أَنْ آذَنَ لَكُمْ ۖ إِنَّ هَٰذَا لَمَكْرٌ مَّكَرْتُمُوهُ فِي الْمَدِينَةِ لِتُخْرِجُوا مِنْهَا أَهْلَهَا ۖ فَسَوْفَ تَعْلَمُونَ ﴿١٢٤﴾

250. ಅವರ ಎಲ್ಲಾ ರೀತಿಯ ಕುತಂತ್ರಗಳು ವಿಫಲಗೊಂಡವೆಂದು ತಾತ್ಪರ್ಯ.





**125.** 'ನಿಶ್ಚಯವಾಗಿಯೂ ನಾನು ನಿಮ್ಮ ಕೈಗಳನ್ನೂ ನಿಮ್ಮ ಕಾಲುಗಳನ್ನೂ ವಿಭಿನ್ನ ಪಾರ್ಶ್ವಗಳಿಂದ[250A] (ಒಂದೊಂದನ್ನು) ಕಡಿದು ಹಾಕುವೆನು. ಆ ಬಳಿಕ ನಿಮ್ಮೆಲ್ಲರನ್ನೂ ನಾನು ಶಿಲುಬೆಗೇರಿಸಿ ಕೊಲ್ಲುವೆನು.

لَأُقَطِّعَنَّ أَيْدِيَكُمْ وَأَرْجُلَكُم مِّنْ خِلَافٍ ثُمَّ لَأُصَلِّبَنَّكُمْ أَجْمَعِينَ ﴿١٢٥﴾

**126.** ಆಗ ಅವರು ಹೇಳಿದರು: 'ದಿಟವಾಗಿಯೂ ನಾವು ನಮ್ಮ ಪ್ರಭುವಿನ ಬಳಿಗೆ ಮರಳುವವರಾಗಿದ್ದೇವೆ.

قَالُوا إِنَّا إِلَىٰ رَبِّنَا مُنقَلِبُونَ ﴿١٢٦﴾

**127.** 'ನಮ್ಮ ಪ್ರಭುವಿನಿಂದ ದೃಷ್ಟಾಂತಗಳು ನಮ್ಮ ಬಳಿ ಬಂದಾಗ ನಾವು ಅವುಗಳನ್ನು ನಂಬಿದೆವು ಹೊರತು ಬೇರೆ ಯಾವ ಅಪರಾಧವನ್ನಾಗಲಿ ನೀನು ನಮ್ಮಲ್ಲಿ ಕಾಣಲಾರೆ.' (ಅವರು ಪ್ರಾರ್ಥಿಸಿದರು:) 'ನಮ್ಮ ಪ್ರಭೂ, ನೀನು ನಮಗೆ ಸ್ಥಿರಚಿತ್ತವನ್ನು ದಯಪಾಲಿಸು. ನಿನಗೆ ನಾವು ವಿಧೇಯರಾಗಿದ್ದುಕೊಂಡಿರುವ ಸ್ಥಿತಿಯಲ್ಲೇ ನೀನು ನಮಗೆ ಮರಣವನ್ನು ಕೊಡು.'

وَمَا تَنقِمُ مِنَّا إِلَّا أَنْ آمَنَّا بِآيَاتِ رَبِّنَا لَمَّا جَاءَتْنَا ۚ رَبَّنَا أَفْرِغْ عَلَيْنَا صَبْرًا وَتَوَفَّنَا مُسْلِمِينَ ﴿١٢٧﴾

**128.** ಫಿರ್‌ಔನನ ಜನತೆಯ ಮುಖಂಡರು ಹೇಳಿದರು: 'ಭೂಮಿಯಲ್ಲಿ ಅಶಾಂತಿಯನ್ನು ಹಬ್ಬಿಸಲಿಕ್ಕೂ ನಿನ್ನನ್ನು ಮತ್ತು ನಿನ್ನ ದೇವರುಗಳನ್ನು ತೊರೆಯಲಿಕ್ಕೂ ಮೂಸಾ ಮತ್ತು ಅವನ ಜನರನ್ನು ನೀನು (ಸ್ವತಂತ್ರವಾಗಿ) ಬಿಡುವೆಯಾ?' ಅವನು ಹೇಳಿದನು: 'ಖಂಡಿತವಾಗಿಯೂ ನಾವು ಅವರ ಗಂಡುಮಕ್ಕಳನ್ನು ಕೊಂದುಹಾಕಿ ಅವರ ಸ್ತ್ರೀಯರನ್ನು ಬದುಕಲು ಬಿಟ್ಟುಬಿಡುವೆವು. ನಾವು ಅವರ ಮೇಲೆ ಸರ್ವಾಧಿಕಾರ ಹೊಂದಿದ್ದೇವೆ.'

وَقَالَ الْمَلَأُ مِن قَوْمِ فِرْعَوْنَ أَتَذَرُ مُوسَىٰ وَقَوْمَهُ لِيُفْسِدُوا فِي الْأَرْضِ وَيَذَرَكَ وَآلِهَتَكَ ۚ قَالَ سَنُقَتِّلُ أَبْنَاءَهُمْ وَنَسْتَحْيِي نِسَاءَهُمْ وَإِنَّا فَوْقَهُمْ قَاهِرُونَ ﴿١٢٨﴾

**129.** ಮೂಸಾ ತನ್ನ ಜನರೊಡನೆ ಹೇಳಿದರು: 'ನೀವು ಅಲ್ಲಾಹನ ಸಹಾಯವನ್ನು ಯಾಚಿಸಿರಿ ಮತ್ತು ಸಹನೆ ಯನ್ನು ಕೈಗೊಳ್ಳಿರಿ. ಖಂಡಿತವಾಗಿಯೂ ಭೂಮಿ ಅಲ್ಲಾಹನದ್ದಾಗಿದೆ. ಅವನ ದಾಸರ ಪೈಕಿ ತಾನು

قَالَ مُوسَىٰ لِقَوْمِهِ اسْتَعِينُوا بِاللَّهِ وَاصْبِرُوا ۖ إِنَّ الْأَرْضَ لِلَّهِ يُورِثُهَا مَن

250A. "ಮಿನ್ ಖಿಲಾಫಿನ್" ಎಂಬುದಕ್ಕೆ ವಿರೋಧ ತೋರಿಸಿದ್ದಕ್ಕಾಗಿ ಎಂದು ಸಹ ಅರ್ಥವಿದೆ.

يَشَآءُ مِنْ عِبَادِهٖ ؕ وَ الْعَاقِبَةُ
لِلْمُتَّقِيْنَ ﴿١٢٨﴾

ಇಷ್ಟಪಡುವವರಿಗೆ ಅವನು ಅದನ್ನು ವಾರಿಸು ಹಕ್ಕಾಗಿ ನೀಡುತ್ತಾನೆ. ಅಂತಿಮ ವಿಜಯ ಭಯಭಕ್ತಿಯನ್ನು ತೋರ್ಪಡಿಸುವವರಿಗೆ.'

قَالُوْۤا اُوْذِيْنَا مِنْ قَبْلِ اَنْ تَاْتِيَنَا وَ
مِنْۢ بَعْدِ مَا جِئْتَنَا ؕ قَالَ عَسٰى رَبُّكُمْ
اَنْ يُّهْلِكَ عَدُوَّكُمْ وَ يَسْتَخْلِفَكُمْ
فِى الْاَرْضِ فَيَنْظُرَ كَيْفَ تَعْمَلُوْنَ ﴿١٢٩﴾

**130.** ಅವರು ಹೇಳಿದರು: 'ನೀವು ಬರುವುದಕ್ಕೆ ಮುಂಚೆ ನಾವು ದೌರ್ಜನ್ಯಕ್ಕೊಳಗಾಗಿದ್ದೆವು. ನೀವು ನಮ್ಮ ಬಳಿಗೆ ಬಂದ ನಂತರವೂ (ನಾವು ಪೀಡಿಸಲ್ಪಡುತ್ತಿದ್ದೇವೆ).' ಅವರು (ಮೂಸಾ) ಹೇಳಿದರು: 'ನಿಮ್ಮ ಪ್ರಭು ನಿಮ್ಮ ಶತ್ರುವನ್ನು ನಾಶಪಡಿಸಿ ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳನ್ನಾಗಿ ಮಾಡುವ ಕಾಲ ಸನ್ನಿಹಿತವಾಗಿದೆ. ಆಗ ನೀವು ಹೇಗೆ ವರ್ತಿಸುವಿರೆಂದು ಅವನು ವೀಕ್ಷಿಸುವನು.'

وَ لَقَدْ اَخَذْنَاۤ اٰلَ فِرْعَوْنَ بِالسِّنِيْنَ وَ
نَقْصٍ مِّنَ الثَّمَرٰتِ لَعَلَّهُمْ يَذَّكَّرُوْنَ ﴿١٣٠﴾

**131.** ಫಿರ್‌ಔನನ ಜನರನ್ನು ಬರಗಾಲದಿಂದಲೂ ಫಲೋತ್ಪನ್ನಗಳ ಅಭಾವದಿಂದಲೂ ನಾವು ಶಿಕ್ಷಿಸಿದೆವು - ಅವರು ಉಪದೇಶ ಸ್ವೀಕರಿಸುವಂತಾಗಲು.

فَاِذَا جَآءَتْهُمُ الْحَسَنَةُ قَالُوْا لَنَا
هٰذِهٖ ۚ وَ اِنْ تُصِبْهُمْ سَيِّئَةٌ يَّطَّيَّرُوْا
بِمُوْسٰى وَ مَنْ مَّعَهٗ ؕ اَلَاۤ اِنَّمَا طٰٓئِرُهُمْ
عِنْدَ اللّٰهِ وَ لٰكِنَّ اَكْثَرَهُمْ لَا
يَعْلَمُوْنَ ﴿١٣١﴾

**132.** ಅವರಿಗೆ ಏನಾದರೂ ಒಳಿತುಂಟಾದರೆ, 'ಇದು ನಮಗೆ ಸಲ್ಲತಕ್ಕದ್ದು' ಎಂದು ಅವರು ಹೇಳುತ್ತಾರೆ. ಆದರೆ ಅವರಿಗೆ ಏನಾದರೂ ಆಪತ್ತು ಬಂದೆರಗಿದರೆ, ಅದು ಮೂಸಾ ಮತ್ತು ಅವರ ಜನರ ನಿಮಿತ್ತ ಸಂಭವಿಸಿತೆಂದು ಅವರು ಆರೋಪಿಸುತ್ತಾರೆ. ತಿಳಿದುಕೊಳ್ಳಿರಿ, ಅವರಿಗೆ ದುರ್ದೆಸೆ ತಂದೊಡ್ಡುವ ನಿಮಿತ್ತಗಳು ಅಲ್ಲಾಹನ ಬಳಿ ಇವೆ. ಆದರೆ ಅವರಲ್ಲಿ ಹೆಚ್ಚಿನವರು (ಆ ಬಗ್ಗೆ) ತಿಳಿಯದವರಾಗಿದ್ದಾರೆ.

وَ قَالُوْا مَهْمَا تَاْتِنَا بِهٖ مِنْ اٰيَةٍ
لِّتَسْحَرَنَا بِهَا ۙ فَمَا نَحْنُ لَكَ
بِمُؤْمِنِيْنَ ﴿١٣٢﴾

**133.** ಅವರು ಹೇಳಿದರು: 'ನಮ್ಮನ್ನು ಮಂಕುಗೊಳಿಸಿ ವಶೀಕರಿಸಲಿಕ್ಕಾಗಿ ನೀನು ಯಾವ ದೃಷ್ಟಾಂತವನ್ನು ತಂದರೂ ನಾವು ನಿನ್ನನ್ನು ನಂಬಲಿಕ್ಕಿಲ್ಲ.'

فَاَرْسَلْنَا عَلَيْهِمُ الطُّوْفَانَ وَ الْجَرَادَ وَ
الْقُمَّلَ وَ الضَّفَادِعَ وَ الدَّمَ اٰيٰتٍ
مُّفَصَّلٰتٍ ۫ فَاسْتَكْبَرُوْا وَ كَانُوْا

**134.** ಆಗ ನಾವು ಅವರ ಮೇಲೆ ತೂಫಾನನ್ನೂ ಮಿಡಿತೆ, ಕ್ರಿಮಿಕೀಟ, ಕಪ್ಪೆ ಇವುಗಳ ಹಾವಳಿಯನ್ನೂ ರಕ್ತ (ದೋಷ)ವನ್ನೂ ಸ್ಪಷ್ಟವಾದ ದೃಷ್ಟಾಂತವಾಗಿ ಕಳುಹಿಸಿದೆವು. ಆದರೆ ಅವರು ದುರಹಂಕಾರದಿಂದ





قَوْمًا مُّجْرِمِيْنَ ﴿١٣٣﴾

ವರ್ತಿಸಿದರು. ಅವರು ಅಪರಾಧಿಗಳಾದ ಜನರಾಗಿದ್ದರು.

وَ لَمَّا وَقَعَ عَلَيْهِمُ الرِّجْزُ قَالُوْا
يٰمُوْسَى ادْعُ لَنَا رَبَّكَ بِمَا عَهِدَ
عِنْدَكَ ۚ لَئِنْ كَشَفْتَ عَنَّا الرِّجْزَ
لَنُؤْمِنَنَّ لَكَ وَ لَنُرْسِلَنَّ مَعَكَ
بَنِيْۤ اِسْرَآءِيْلَ ﴿١٣٤﴾

**135.** ಹಾಗೆ ಅವರ ಮೇಲೆ ಶಿಕ್ಷೆ ಬಂದೆರಗಿದಾಗ ಅವರು ಹೇಳಿದರು: 'ಎಲೈ ಮೂಸಾ, ನಿನ್ನ ಪ್ರಭು ನಿನಗೆ ವಾಗ್ದಾನ ಮಾಡಿದುದನ್ನು ಮುಂದಿಟ್ಟು ನಮ್ಮ ಪರವಾಗಿ ನೀನು ಅವನೊಡನೆ ಪ್ರಾರ್ಥಿಸು. ನೀನು ನಮ್ಮಿಂದ ಶಿಕ್ಷೆಯನ್ನು ಹೋಗಲಾಡಿಸಿದರೆ ನಿಶ್ಚಯವಾಗಿಯೂ ನಾವು ನಿನ್ನನ್ನು ನಂಬುವೆವು ಹಾಗೂ ಖಂಡಿತವಾಗಿಯೂ ಇಸ್ರಾಈಲ್ ಸಂತತಿಗಳನ್ನು ನಿನ್ನ ಜೊತೆಗೆ ಕಳುಹಿಸುವೆವು.'

فَلَمَّا كَشَفْنَا عَنْهُمُ الرِّجْزَ اِلٰۤى اَجَلٍ
هُمْ بٰلِغُوْهُ اِذَا هُمْ يَنْكُثُوْنَ ﴿١٣٥﴾

**136.** ಆದರೆ, ಅವರು ತಲಪಬೇಕಾದ ಕಾಲಾವಧಿಯ ವರೆಗೆ ನಾವು ಶಿಕ್ಷೆಯನ್ನು ದೂರಮಾಡಿದಾಗ, ಅದೋ ಅವರು ಒಪ್ಪಂದವನ್ನು ಉಲ್ಲಂಘಿಸಿಬಿಟ್ಟರು.

فَانْتَقَمْنَا مِنْهُمْ فَاَغْرَقْنٰهُمْ فِى
الْيَمِّ بِاَنَّهُمْ كَذَّبُوْا بِاٰيٰتِنَا وَ
كَانُوْا عَنْهَا غٰفِلِيْنَ ﴿١٣٦﴾

**137.** ಆದ್ದರಿಂದ ನಾವು ಅವರ ಮೇಲೆ ಪ್ರತೀಕಾರ ಕ್ರಮ ಕೈಗೊಂಡೆವು. ಅವರು ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆದುದಕ್ಕಾಗಿ ಮತ್ತು ಆ ಬಗ್ಗೆ ನಿರ್ಲಕ್ಷ್ಯರಾದುದಕ್ಕಾಗಿ ಅವರನ್ನು ನಾವು ಸಮುದ್ರದಲ್ಲಿ ಮುಳುಗಿಸಿಬಿಟ್ಟೆವು.

وَ اَوْرَثْنَا الْقَوْمَ الَّذِيْنَ كَانُوْا
يُسْتَضْعَفُوْنَ مَشَارِقَ الْاَرْضِ وَ مَغَارِبَهَا
الَّتِيْ بٰرَكْنَا فِيْهَا ؕ وَ تَمَّتْ كَلِمَتُ
رَبِّكَ الْحُسْنٰى عَلٰى بَنِيْۤ اِسْرَآءِيْلَ ۙ۬ بِمَا
صَبَرُوْا ؕ وَ دَمَّرْنَا مَا كَانَ يَصْنَعُ
فِرْعَوْنُ وَ قَوْمُهٗ وَ مَا كَانُوْا
يَعْرِشُوْنَ ﴿١٣٧﴾

**138.** ಅನಂತರ, ಬಲಹೀನರೆಂದು ಗಣಿಸಲ್ಪಟ್ಟ ಜನರನ್ನು ನಾವು ಅನುಗ್ರಹಿಸಿದ ರಾಜ್ಯದ[251] ಪೂರ್ವ ಪ್ರದೇಶಗಳಿಗೂ ಪಶ್ಚಿಮ ಪ್ರದೇಶಗಳಿಗೂ ವಾರೀಸುದಾರರನ್ನಾಗಿ ಮಾಡಿದೆವು. ಹಾಗೆ ಇಸ್ರಾಈಲ್ ಸಂತತಿಗಳು ಸ್ಥಿರ ಚಿತ್ತತೆಯನ್ನು ತೋರ್ಪಡಿಸಿದ ಕಾರಣ ನಿನ್ನ ಪ್ರಭುವಿನ ಅತ್ಯುತ್ತಮ ವಚನ (ವಾಗ್ದಾನ) ಅವರಿಗೋಸ್ಕರ ಈಡೇರಿತು. ಫಿರ್‌ಔನ್ ಮತ್ತು ಅವನ ಜನರು ರಚಿಸುತ್ತಿದ್ದ ಎಲ್ಲವನ್ನೂ ಹಾಗೂ ಅವರು ನಿರ್ಮಿಸುತ್ತಿದ್ದ ಸಕಲವನ್ನೂ ನಾವು ಮಣ್ಣುಗೂಡಿಸಿದೆವು.

251. ಫೆಲಸ್ತೀನ್ ರಾಜ್ಯದ.

**139.** ಇಸ್ರಾಈಲ್ ಸಂತತಿಗಳನ್ನು ನಾವು ಸಮುದ್ರದಾಚೆ ತಲುಪಿಸಿದೆವು. ಆಗ ತಮ್ಮ ವಿಗ್ರಹಗಳನ್ನು ಭಜಿಸುತ್ತಿದ್ದ ಒಂದು ಸಮುದಾಯದ ಬಳಿಗೆ ಅವರು ಬಂದು ಸೇರಿದರು. ಅವರು (ಇಸ್ರಾಈಲ್ ಸಂತತಿಗಳು) ಹೇಳಿದರು: 'ಓ ಮೂಸಾ, ಅವರಿಗೆ ದೇವರುಗಳಿರುವಂತೆ ನೀವು ನಮಗೆ ಸಹ ಒಬ್ಬ ದೇವರನ್ನು ಮಾಡಿಕೊಡಿರಿ.' ಅವರು (ಮೂಸಾ) ಹೇಳಿದರು: 'ಖಂಡಿತವಾಗಿಯೂ ನೀವು ಮೂಢ ಜನರಾಗಿದ್ದೀರಿ.

وَجَاوَزْنَا بِبَنِيٓ إِسْرَآءِيلَ الْبَحْرَ فَأَتَوْا عَلَىٰ قَوْمٍ يَعْكُفُونَ عَلَىٰٓ أَصْنَامٍ لَّهُمْ ۚ قَالُوا يَٰمُوسَى اجْعَل لَّنَآ إِلَٰهًا كَمَا لَهُمْ ءَالِهَةٌ ۚ قَالَ إِنَّكُمْ قَوْمٌ تَجْهَلُونَ ﴿١٣٨﴾

**140.** 'ಈ ಜನರು ಯಾವ ಕೃತ್ಯದಲ್ಲಿ ನಿರತರಾಗಿದ್ದಾರೋ ಅದು ನಿಶ್ಚಯವಾಗಿಯೂ ನಾಶವಾಗುವುದು. ಅವರ ಕೃತ್ಯಗಳೆಲ್ಲ ನಿಷ್ಫಲವಾಗುವುವು.'

إِنَّ هَٰٓؤُلَآءِ مُتَبَّرٌ مَّا هُمْ فِيهِ وَبَٰطِلٌ مَّا كَانُوا يَعْمَلُونَ ﴿١٣٩﴾

**141.** ಅವರು (ಮೂಸಾ) ಹೇಳಿದರು: 'ನಿಮ್ಮನ್ನು ಸಮಸ್ತ ಜನರ ಪೈಕಿ[251A] ಉತ್ಕೃಷ್ಟರನ್ನಾಗಿ ಮಾಡಿದ ಅಲ್ಲಾಹನನ್ನು ಬಿಟ್ಟು ಬೇರೊಬ್ಬ ದೇವರನ್ನು ನಾನು ನಿಮಗಾಗಿ ಹುಡುಕಬೇಕೇ?'

قَالَ أَغَيْرَ اللَّهِ أَبْغِيكُمْ إِلَٰهًا وَهُوَ فَضَّلَكُمْ عَلَى الْعَٰلَمِينَ ﴿١٤٠﴾

**142.** ಫಿರ್‌ಔನನ ಜನರಿಂದ ನಾವು ನಿಮ್ಮನ್ನು ಕಾಪಾಡಿದ ಸಂದರ್ಭ (ಸ್ಮರಿಸಿರಿ). ಅವರು ನಿಮ್ಮ ಗಂಡು ಮಕ್ಕಳನ್ನು ಕೊಲೆಮಾಡಿ ನಿಮ್ಮ ಸ್ತ್ರೀಯರನ್ನು ಬದುಕಲು ಬಿಡುತ್ತಿದ್ದು ನಿಮ್ಮನ್ನು ಕಠಿಣವಾದ ಶಿಕ್ಷೆಗೆ ಗುರಿಪಡಿಸುತ್ತಿದ್ದರು. ಅದರಲ್ಲಿ ನಿಮ್ಮ ಪ್ರಭುವಿನಿಂದ ನಿಮಗೆ ಹಿರಿದಾದೊಂದು ಪರೀಕ್ಷೆಯಿತ್ತು.

وَإِذْ أَنجَيْنَٰكُم مِّنْ ءَالِ فِرْعَوْنَ يَسُومُونَكُمْ سُوٓءَ الْعَذَابِ ۖ يُقَتِّلُونَ أَبْنَآءَكُمْ وَيَسْتَحْيُونَ نِسَآءَكُمْ ۚ وَفِي ذَٰلِكُم بَلَآءٌ مِّن رَّبِّكُمْ عَظِيمٌ ﴿١٤١﴾

**143.** ನಾವು ಮೂಸಾರಿಗೆ ಮೂವತ್ತು ರಾತ್ರಿಗಳನ್ನು ವಾಗ್ದಾನ ಮಾಡಿದೆವು. ಮತ್ತೆ ಹತ್ತು ಸೇರಿಸಿ ಅದನ್ನು ಪೂರ್ಣಗೊಳಿಸಿದೆವು. ಹಾಗೆ ಅವರ ಪ್ರಭುವಿನ ನಿಶ್ಚಿತ ಅವಧಿ ನಲ್ವತ್ತು ರಾತ್ರಿಗಳಾಗಿ ಪೂರ್ಣಗೊಂಡಿತು. ಮೂಸಾ ತನ್ನ ಸಹೋದರ ಹಾರೂನರೊಡನೆ ಹೇಳಿದರು: 'ನೀನು (ನನ್ನ

وَوَٰعَدْنَا مُوسَىٰ ثَلَٰثِينَ لَيْلَةً وَأَتْمَمْنَٰهَا بِعَشْرٍ فَتَمَّ مِيقَٰتُ رَبِّهِۦٓ أَرْبَعِينَ لَيْلَةً ۚ وَقَالَ مُوسَىٰ لِأَخِيهِ هَٰرُونَ اخْلُفْنِي فِي قَوْمِي وَأَصْلِحْ وَلَا

251A. "ಸಮಸ್ತ ಜನರ ಪೈಕಿ" - 2 : 48, 3 : 34 ವಚನಗಳ ಟಿಪ್ಪಣಿ ನೋಡಿರಿ.





ಅನುಪಸ್ಥಿತಿಯಲ್ಲಿ) ನನ್ನ ಪರವಾಗಿ ನನ್ನ ಜನರೆಡೆಯಲ್ಲಿ ಕಾರ್ಯನಿರ್ವಹಿಸಬೇಕು. ಅವರಲ್ಲಿ ಸುಧಾರಣೆಯನ್ನುಂಟುಮಾಡಬೇಕು. ಗಲಭೆಕೋರರ ಮಾರ್ಗವನ್ನು ನೀನು ಅನುಸರಿಸಬಾರದು.

تَتَّبِعْ سَبِيلَ الْمُفْسِدِينَ ﴿١٤٢﴾

**144.** ಮೂಸಾ ನಾವು ನಿಶ್ಚಯಿಸಿದ ಸಮಯಾನುಸಾರ ನಿರ್ದಿಷ್ಟ ಸ್ಥಳಕ್ಕೆ ತಲಪಿ ತನ್ನ ಪ್ರಭು ಅವರೊಡನೆ ಮಾತನಾಡಿದಾಗ ಅವರು ಹೇಳಿದರು: 'ನನ್ನ ಪ್ರಭೂ, ನೀನು ನನಗೆ ನಿನ್ನನ್ನು ತೋರಿಸಿಕೊಡು. ನಾನು ನಿನ್ನನ್ನು ನೋಡುವಂತಾಗಲಿ.' ಅಲ್ಲಾಹನು ಹೇಳಿದನು: 'ನೀನು ನನ್ನನ್ನು ಕಾಣಲಾರೆ. ಆದರೆ ನೀನು ಪರ್ವತದೆಡೆಗೆ ನೋಡು. ಅದು ಅದರ ಸ್ಥಾನದಲ್ಲಿ ಸ್ಥಿರವಾಗಿದ್ದರೆ ನೀನು ನನ್ನನ್ನು ಕಾಣುವೆ.' ಹಾಗೆ ಅವರ ಪ್ರಭು ಪರ್ವತದ ಮೇಲೆ ತನ್ನ ತೇಜಸ್ಸನ್ನು ಪ್ರಕಟಪಡಿಸಿ ಅದನ್ನು ನುಚ್ಚು ನೂರು ಮಾಡಿದನು ಮತ್ತು ಮೂಸಾ ಪ್ರಜ್ಞಾಹೀನರಾಗಿ ಬಿದ್ದುಬಿಟ್ಟರು. ನಂತರ ಅವರಿಗೆ ಸ್ಮೃತಿ ಬಂದಾಗ, ಅವರು ಹೇಳಿದರು: 'ನೀನು ಪರಿಶುದ್ಧನು. ನಾನು ನಿನ್ನೆಡೆಗೆ ಮರಳುತ್ತೇನೆ. ನಾನು (ಈ ಕಾಲದ) ವಿಶ್ವಾಸಿಗಳಲ್ಲಿ ಮೊದಲಿಗನಾಗಿದ್ದೇನೆ.'

وَلَمَّا جَآءَ مُوسَىٰ لِمِيقَٰتِنَا وَكَلَّمَهُۥ رَبُّهُۥ قَالَ رَبِّ أَرِنِيٓ أَنظُرْ إِلَيْكَ ۚ قَالَ لَن تَرَىٰنِي وَلَٰكِنِ انظُرْ إِلَى الْجَبَلِ فَإِنِ اسْتَقَرَّ مَكَانَهُۥ فَسَوْفَ تَرَىٰنِي ۚ فَلَمَّا تَجَلَّىٰ رَبُّهُۥ لِلْجَبَلِ جَعَلَهُۥ دَكًّا وَخَرَّ مُوسَىٰ صَعِقًا ۚ فَلَمَّآ أَفَاقَ قَالَ سُبْحَٰنَكَ تُبْتُ إِلَيْكَ وَأَنَا۠ أَوَّلُ الْمُؤْمِنِينَ ﴿١٤٣﴾

**145.** (ಅಲ್ಲಾಹನು) ಹೇಳಿದನು : 'ಎಲೈ ಮೂಸಾ, ನನ್ನ ಸಂದೇಶ ಮತ್ತು ವಚನ ಮೂಲಕ (ಈ ಕಾಲದ) ಎಲ್ಲ ಜನರಿಗಿಂತ ನಾನು ನಿನ್ನನ್ನು ಶ್ರೇಷ್ಠನನ್ನಾಗಿ ಆಯ್ಕೆಮಾಡಿದ್ದೇನೆ. ಆದ್ದರಿಂದ ನಾನು ನೀಡಿದುದನ್ನು ನೀನು ಭದ್ರವಾಗಿ ಹಿಡಿದುಕೋ ಹಾಗೂ ಕೃತಜ್ಞರಲ್ಲಿ ಸೇರಿಕೋ.'

قَالَ يَٰمُوسَىٰٓ إِنِّي اصْطَفَيْتُكَ عَلَى النَّاسِ بِرِسَٰلَٰتِي وَبِكَلَٰمِي فَخُذْ مَآ ءَاتَيْتُكَ وَكُن مِّنَ الشَّٰكِرِينَ ﴿١٤٤﴾

**146.** ಎಲ್ಲ ಸಂಗತಿಗಳಿಗೆ ಸಂಬಂಧಿಸಿದ ಉಪದೇಶವನ್ನೂ (ಆ ಕಾಲಕ್ಕೆ ಬೇಕಾದ) ಎಲ್ಲ ವಿಚಾರಗಳಿಗೆ ಸಂಬಂಧಿಸಿದ ವಿವರಣೆಯನ್ನೂ ನಾವು ಅವರಿಗೆ ಆ ಫಲಕಗಳಲ್ಲಿ ಬರೆದು ಕೊಟ್ಟೆವು. (ಆ ಮೇಲೆ ನಾವು ಹೇಳಿದೆವು:) 'ಅವುಗಳನ್ನು ಬಿಗಿಯಾಗಿ ಹಿಡಿದುಕೋ. (ಅದರ ಪ್ರಕಾರ ನಡೆಯಲು) ನೀನು ನಿನ್ನ

وَكَتَبْنَا لَهُۥ فِي الْأَلْوَاحِ مِن كُلِّ شَيْءٍ مَّوْعِظَةً وَتَفْصِيلًا لِّكُلِّ شَيْءٍ فَخُذْهَا بِقُوَّةٍ وَأْمُرْ قَوْمَكَ يَأْخُذُوا

بِأَحْسَنِهَا ۚ سَأُورِيكُمْ دَارَ الْفَاسِقِينَ ﴿١٤٥﴾

ಜನರಿಗೆ ಆದೇಶಿಸು. ಅದು (ಅವರಿಗೆ) ಉತ್ತಮವಾಗಿರುವುದರಿಂದ ಅದನ್ನು ಅವರು ಅನುಸರಿಸಲಿ. ಧಿಕ್ಕಾರಿಗಳ ವಾಸಸ್ಥಾನವನ್ನು ಶೀಘ್ರುವೇ ನಾನು ನಿನಗೆ ತೋರಿಸಿ ಕೊಡುವೆನು.'

سَأَصْرِفُ عَنْ آيَاتِيَ الَّذِينَ يَتَكَبَّرُونَ فِي الْأَرْضِ بِغَيْرِ الْحَقِّ وَإِنْ يَرَوْا كُلَّ آيَةٍ لَا يُؤْمِنُوا بِهَا وَإِنْ يَرَوْا سَبِيلَ الرُّشْدِ لَا يَتَّخِذُوهُ سَبِيلًا وَإِنْ يَرَوْا سَبِيلَ الْغَيِّ يَتَّخِذُوهُ سَبِيلًا ۚ ذَٰلِكَ بِأَنَّهُمْ كَذَّبُوا بِآيَاتِنَا وَكَانُوا عَنْهَا غَافِلِينَ ﴿١٤٦﴾

**147.** ರಾಜ್ಯದಲ್ಲಿ ಅನ್ಯಾಯವಾಗಿ ಅಹಂಭಾವದಿಂದ ವರ್ತಿಸುವವರನ್ನು ನನ್ನ ದೃಷ್ಟಾಂತದಿಂದ ನಾನು ದೂರಮಾಡುವೆನು. ದೃಷಾಂತಗಳನ್ನೆಲ್ಲ ಕಂಡರೂ ಅವರು ನಂಬಲಾರರು. ಸತ್ಪಥವನ್ನು ಕಂಡರೆ ಸಹ ಅವರು ಅದನ್ನು (ತಮ್ಮ) ಮಾರ್ಗವನ್ನಾಗಿ ಅಂಗೀಕರಿಸಲಾರರು. ಆದರೆ ಅವರು ತಪ್ಪು ದಾರಿಯನ್ನು ಕಂಡರೆ ತಮ್ಮ ದಾರಿಯಾಗಿ ಅದನ್ನು ಕೈಗೊಳ್ಳುವರು. ಇದು ಅವರು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿ ಅವುಗಳ ಬಗ್ಗೆ ನಿರ್ಲಕ್ಷ್ಯವನ್ನು ತೋರಿಸಿದ ಕಾರಣದಿಂದಾಗಿದೆ.

وَالَّذِينَ كَذَّبُوا بِآيَاتِنَا وَلِقَاءِ الْآخِرَةِ حَبِطَتْ أَعْمَالُهُمْ ۚ هَلْ يُجْزَوْنَ إِلَّا مَا كَانُوا يَعْمَلُونَ ﴿١٤٧﴾ ع

**148.** ಯಾರು ನಮ್ಮ ದೃಷ್ಟಾಂತಗಳನ್ನು ಮತ್ತು ಪಾರತ್ರಿಕ ಭೇಟಿಯನ್ನು ಸುಳ್ಳೆಂದು ತಿರಸ್ಕರಿಸುವರೋ ಅವರ ಕರ್ಮಗಳೆಲ್ಲ ವ್ಯರ್ಥ. ಅವರಿಗೆ ತಮ್ಮ ಕೃತ್ಯಕ್ಕೆ ತಕ್ಕ ಪ್ರತಿಫಲ ವಿನಾ ಬೇರೇನಾದರೂ ದಕ್ಕುವುದೇ?

وَاتَّخَذَ قَوْمُ مُوسَىٰ مِنْ بَعْدِهِ مِنْ حُلِيِّهِمْ عِجْلًا جَسَدًا لَهُ خُوَارٌ ۚ أَلَمْ يَرَوْا أَنَّهُ لَا يُكَلِّمُهُمْ وَلَا يَهْدِيهِمْ سَبِيلًا ۘ اتَّخَذُوهُ وَكَانُوا ظَالِمِينَ ﴿١٤٨﴾

**149.** ಮೂಸಾರ (ಯಾತ್ರೆಯ) ಬಳಿಕ ಅವರ ಜನತೆ ತಮ್ಮ ಆಭರಣಗಳಿಂದ ಭಾಂಕರಿಸುವ ಒಂದು ಕರುವನ್ನು (ಕರುವಿನ ವಿಗ್ರಹವನ್ನು) ತಯಾರಿಸಿದರು. ಅದು ಅವರೊಡನೆ ಮಾತನಾಡುವುದಿಲ್ಲವೆಂದೂ ಅವರಿಗೆ ಮಾರ್ಗದರ್ಶನ ನೀಡುವುದಿಲ್ಲವೆಂದೂ ಅವರು ಕಾಣಲಿಲ್ಲವೇ? ಅದನ್ನು ಅವರು (ಆರಾಧಿಸಲಿಕ್ಕೆ) ಬಳಸಿದರು. ಅವರು ಎಲ್ಲೆಮೀರಿ ವರ್ತಿಸಿದರು.

وَلَمَّا سُقِطَ فِي أَيْدِيهِمْ وَرَأَوْا أَنَّهُمْ قَدْ ضَلُّوا قَالُوا لَئِنْ لَمْ يَرْحَمْنَا رَبُّنَا وَيَغْفِرْ لَنَا لَنَكُونَنَّ مِنَ الْخَاسِرِينَ ﴿١٤٩﴾

**150.** ಮತ್ತೆ ಅವರು ಲಜ್ಜಿತರಾಗಿ ಪಶ್ಚಾತ್ತಾಪಪಟ್ಟು, ತಾವು ದಾರಿಗೆಟ್ಟವರಾಗಿದ್ದೇವೆಂದು ಮನಗಂಡಾಗ ಅವರು ಹೇಳಿದರು: 'ನಮ್ಮ ಪ್ರಭು ನಮ್ಮ ಮೇಲೆ ಕರುಣೆ ತೋರಿಸಿ ನಮ್ಮನ್ನು ಕ್ಷಮಿಸದಿದ್ದರೆ ನಾವು ಖಂಡಿತವಾಗಿಯೂ ನಷ್ಟ ಹೊಂದಿದವರಾಗುವೆವು.'





وَلَمَّا رَجَعَ مُوسَىٰ إِلَىٰ قَوْمِهِ غَضْبَانَ أَسِفًا قَالَ بِئْسَمَا خَلَفْتُمُونِي مِنْ بَعْدِي ۖ أَعَجِلْتُمْ أَمْرَ رَبِّكُمْ ۖ وَأَلْقَى الْأَلْوَاحَ وَأَخَذَ بِرَأْسِ أَخِيهِ يَجُرُّهُ إِلَيْهِ ۚ قَالَ ابْنَ أُمَّ إِنَّ الْقَوْمَ اسْتَضْعَفُونِي وَكَادُوا يَقْتُلُونَنِي فَلَا تُشْمِتْ بِيَ الْأَعْدَاءَ وَلَا تَجْعَلْنِي مَعَ الْقَوْمِ الظَّالِمِينَ ﴿١٥٠﴾

**151.** ಮೂಸಾ ತನ್ನ ಜನರ ಬಳಿಗೆ ಕುಪಿತಗೊಂಡು ದುಃಖಾಕ್ರಾಂತರಾಗಿ ಹಿಂದಿರುಗಿದಾಗ (ಹಾರೂನ್ ರೊಡನೆ) ಹೀಗೆ ಹೇಳಿದರು: 'ನನ್ನ (ಯಾತ್ರೆಯ) ಬಳಿಕ ನೀನು ನನ್ನ ಸ್ಥಾನದಲ್ಲಿದ್ದುಕೊಂಡು ಮಾಡಿದ ಕೃತ್ಯ ಬಹಳ ಕೆಟ್ಟದ್ದಾಗಿದೆ. ನೀವು ನಿಮ್ಮ ಪ್ರಭುವಿನ ಆಜ್ಞೆಗೆ ಕಾಯದೆ ದುಡುಕಿದಿರಲ್ಲವೇ?' ನಂತರ ಅವರು ಫಲಕಗಳನ್ನು ಕೆಳಗಿಟ್ಟು ತನ್ನ ಸಹೋದರನ ತಲೆಗೂದಲನ್ನು ಹಿಡಿದು ತನ್ನೆಡೆಗೆ ಎಳೆದರು. ಅವರು (ಹಾರೂನ್) ಹೇಳಿದರು: 'ನನ್ನ ತಾಯಿಯ ಪುತ್ರನೇ, ಈ ಜನರು ನನ್ನನ್ನು ಬಲಹೀನನೆಂದು ಭಾವಿಸಿದರು ಹಾಗೂ ನನ್ನನ್ನು ಕೊಂದುಬಿಡುವರೆಂಬ ಸ್ಥಿತಿಯುಂಟಾಯಿತು. ಆದ್ದರಿಂದ ನನ್ನ ಕಾರಣದಿಂದ ಶತ್ರುಗಳಿಗೆ ಸಂತಸವಾಗುವಂತೆ ನೀನು ಮಾಡಬೇಡ. ಅಧರ್ಮಿಗಳಾದ ಜನರೊಂದಿಗೆ ನೀನು ನನ್ನನ್ನು ಸೇರಿಸಬೇಡ.'

قَالَ رَبِّ اغْفِرْ لِي وَلِأَخِي وَأَدْخِلْنَا فِي رَحْمَتِكَ ۖ وَأَنْتَ أَرْحَمُ الرَّاحِمِينَ ﴿١٥١﴾ ع

**152.** ಅವರು (ಮೂಸಾ) ಹೇಳಿದರು (ಪ್ರಾರ್ಥಿಸಿದರು): 'ನನ್ನ ಪ್ರಭೂ, ನೀನು ನನ್ನನ್ನೂ ನನ್ನ ಸಹೋದರನನ್ನೂ ಕ್ಷಮಿಸು. ನಿನ್ನ ಕರುಣೆಯೊಳಗೆ ನಮಗೆ ಪ್ರವೇಶ ನೀಡು. ನೀನು ಕರುಣೆ ತೋರಿಸುವವರಲ್ಲಿ ಅತ್ಯಂತ ಕಾರುಣ್ಯವಂತನಾಗಿರುವೆ.'

إِنَّ الَّذِينَ اتَّخَذُوا الْعِجْلَ سَيَنَالُهُمْ غَضَبٌ مِنْ رَبِّهِمْ وَذِلَّةٌ فِي الْحَيَاةِ الدُّنْيَا ۚ وَكَذَٰلِكَ نَجْزِي الْمُفْتَرِينَ ﴿١٥٢﴾

**153.** ಕರುವನ್ನು (ಆರಾಧನೆಗೆ) ಸ್ವೀಕರಿಸಿದವರಿಗೆ ಖಂಡಿತವಾಗಿಯೂ ಅವರ ಪ್ರಭುವಿನ ಕ್ರೋಧ ಬಂದೆರಗುವುದು ಮತ್ತು ಐಹಿಕ ಜೀವನದಲ್ಲಿ ಅಪಮಾನ ಉಂಟಾಗುವುದು. ಸುಳ್ಳು ಆರೋಪಿಸುವವರಿಗೆ ಹೀಗೆ ನಾವು ಪ್ರತಿಫಲ ನೀಡುವೆವು.

وَالَّذِينَ عَمِلُوا السَّيِّئَاتِ ثُمَّ تَابُوا مِنْ بَعْدِهَا وَآمَنُوا إِنَّ رَبَّكَ مِنْ بَعْدِهَا لَغَفُورٌ رَحِيمٌ ﴿١٥٣﴾

**154.** ಆದರೆ ಯಾರು ದುಷ್ಕೃತ್ಯಗಳನ್ನು ಗೈದ ನಂತರ ಪಶ್ಚಾತ್ತಾಪಪಟ್ಟು ವಿಶ್ವಾಸಹೊಂದುತ್ತಾರೋ, ಖಂಡಿತವಾಗಿಯೂ ನಿನ್ನ ಪ್ರಭು ಆ ಬಳಿಕ (ಪಶ್ಚಾತ್ತಾಪದ ಬಳಿಕ) ಅತಿಯಾಗಿ ಕ್ಷಮಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

**155.** ಮೂಸಾರಿಗೆ ಕೋಪ ಶಮನಗೊಂಡಾಗ ಅವರು ಫಲಕಗಳನ್ನು ಎತ್ತಿಕೊಂಡರು. ಅವುಗಳ ಲಿಖಿತದಲ್ಲಿ ತಮ್ಮ ಪ್ರಭುವಿನ ಭಯವಿರಿಸಿಕೊಂಡವರಿಗೆ ಮಾರ್ಗದರ್ಶನ ಮತ್ತು ಕಾರುಣ್ಯ (ದ ಸಂದೇಶ)ವಿತ್ತು.

وَلَمَّا سَكَتَ عَنْ مُّوسَى الْغَضَبُ أَخَذَ الْأَلْوَاحَ ۖ وَفِي نُسْخَتِهَا هُدًى وَرَحْمَةٌ لِّلَّذِينَ هُمْ لِرَبِّهِمْ يَرْهَبُونَ ﴿١٥٥﴾

**156.** ನಾವು ನಿಶ್ಚಯಿಸಿದ ಸ್ಥಳಕ್ಕೆ ಕೊಂಡೊಯ್ಯಲಿಕ್ಕಾಗಿ ಮೂಸಾ ತನ್ನ ಜನರಿಂದ ಎಪ್ಪತ್ತು ಮಂದಿಯನ್ನು ಆಯ್ಕೆ ಮಾಡಿದರು. ನಂತರ ಅವರನ್ನು ಭೂಕಂಪ ಬಾಧಿಸಿದಾಗ ಅವರು (ಮೂಸಾ) ಹೇಳಿದರು: 'ನನ್ನ ಪ್ರಭೂ, ನೀನು ಬಯಸಿದ್ದರೆ ಇದಕ್ಕೆ ಮುಂಚೆಯೇ ಅವರನ್ನೂ ನನ್ನನ್ನೂ ನೀನು ನಾಶಪಡಿಸಬಹುದಿತ್ತು. ನಮ್ಮಲ್ಲಿರುವ ಮೂರ್ಖರು ಮಾಡಿದ ದುಷ್ಕೃತ್ಯಗಳ ಹೇತುವಾಗಿ ನೀನು ನಮ್ಮನ್ನು ನಾಶ ಪಡಿಸುತ್ತೀಯಾ?[251C] ಇದು ನಿನ್ನ ಪರೀಕ್ಷೆಯಲ್ಲದೆ ಮತ್ತೇನೂ ಅಲ್ಲ. ಇದರ ಮೂಲಕ ನೀನು ಇಚ್ಛಿಸುವವರನ್ನು ನಾಶಪಡಿಸುತ್ತೀ. ನೀನು ಬಯಸುವವರಿಗೆ ಮಾರ್ಗದರ್ಶನ ಮಾಡುತ್ತೀ. ನೀನೇ ನಮ್ಮ ಸಂರಕ್ಷಕ. ಆದ್ದರಿಂದ ನೀನು ನಮಗೆ ಕ್ಷಮೆ ನೀಡಿ ನಮ್ಮ ಮೇಲೆ ದಯೆದೋರು. ಕ್ಷಮಿಸುವವರಲ್ಲಿ ನೀನೇ ಅತ್ಯುತ್ತಮನು.

وَاخْتَارَ مُوسَىٰ قَوْمَهُ سَبْعِينَ رَجُلًا لِّمِيقَاتِنَا ۖ فَلَمَّا أَخَذَتْهُمُ الرَّجْفَةُ قَالَ رَبِّ لَوْ شِئْتَ أَهْلَكْتَهُم مِّن قَبْلُ وَإِيَّايَ ۖ أَتُهْلِكُنَا بِمَا فَعَلَ السُّفَهَاءُ مِنَّا ۖ إِنْ هِيَ إِلَّا فِتْنَتُكَ تُضِلُّ بِهَا مَن تَشَاءُ وَتَهْدِي مَن تَشَاءُ ۖ أَنتَ وَلِيُّنَا فَاغْفِرْ لَنَا وَارْحَمْنَا ۖ وَأَنتَ خَيْرُ الْغَافِرِينَ ﴿١٥٦﴾

**157.** 'ನಮಗೆ ಈ ಲೋಕದಲ್ಲೂ ಪರಲೋಕದಲ್ಲೂ ಒಳಿತನ್ನು ವಿಧಿಸು. ನಾವು ನಿನ್ನೆಡೆಗೆ (ಪಶ್ಚಾತ್ತಾಪಗೊಂಡು) ಮರಳಿದ್ದೇವೆ.' ಅಲ್ಲಾಹನು ಹೇಳಿದನು: 'ನಾನು ಇಚ್ಛಿಸುವವರಿಗೆ (ಅದಕ್ಕೆ ಅರ್ಹರಾದವರಿಗೆ) ನಾನು ಶಿಕ್ಷೆ ವಿಧಿಸುವೆನು. ನನ್ನ ಕರುಣೆಯು ಸರ್ವವನ್ನೂ ಆವರಿಸಿಕೊಂಡಿದೆ. ಆದ್ದರಿಂದ ಭಯಭಕ್ತಿ ಹೊಂದಿದವರಿಗೂ ಝಕಾತ್ ನೀಡುವವರಿಗೂ ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿರಿಸುವವರಿಗೂ ಅದನ್ನು (ಕರುಣೆಯನ್ನು) ನಾನು ವಿಧಿಸಿದ್ದೇನೆ.'

وَاكْتُبْ لَنَا فِي هَٰذِهِ الدُّنْيَا حَسَنَةً وَفِي الْآخِرَةِ إِنَّا هُدْنَا إِلَيْكَ ۚ قَالَ عَذَابِي أُصِيبُ بِهِ مَنْ أَشَاءُ ۖ وَرَحْمَتِي وَسِعَتْ كُلَّ شَيْءٍ ۚ فَسَأَكْتُبُهَا لِلَّذِينَ يَتَّقُونَ وَيُؤْتُونَ الزَّكَاةَ وَالَّذِينَ هُم بِآيَاتِنَا يُؤْمِنُونَ ﴿١٥٧﴾

251C. ಪ್ರಕೃತಿ ಸಹಜವಾಗಿ ಈ ಭೂಕಂಪವಾಗಿದ್ದರೂ ಅದು ಬಹುಶಃ ತನ್ನ ಜನರ ತಪ್ಪಿಗೆ ಅಲ್ಲಾಹನಿಂದ ಎರಗಿದ ಶಿಕ್ಷೆಯಾಗಿರಬಹುದೆಂದು ಹಝ್ರತ್ ಮೂಸಾ (ಅಲೈಹಿಸ್ಸಲಾಂ) ಭಾವಿಸಿದರು. ಆದ್ದರಿಂದ ಅವರು ಹೀಗೆ ಪ್ರಾರ್ಥಿಸಿದ್ದು.





**158.** ಅನಕ್ಷರಸ್ಥನಾದ ಈ ಸಂದೇಶವಾಹಕನನ್ನು ಅವರು ಅನುಸರಿಸುತ್ತಾರೆ. ಅವರ ಬಗ್ಗೆ (ಸಂದೇಶವಾಹಕನ ಬಗ್ಗೆ) ಅವರ ಬಳಿಯಲ್ಲಿರುವ ತೌರಾತ್ ಮತ್ತು ಇಂಜೀಲ್‌ನಲ್ಲಿ ಉಲ್ಲೇಖಿತವಾಗಿರವುದನ್ನು ಅವರು ಕಾಣುತ್ತಾರೆ. ಅವರು ಒಳಿತನ್ನು ಆಜ್ಞಾಪಿಸಿ ಅವರನ್ನು ಕೆಡುಕಿನಿಂದ ತಡೆಯುತ್ತಾರೆ. ಒಳ್ಳೆಯ ವಸ್ತುಗಳನ್ನು ಅವರಿಗೆ ಧರ್ಮಬದ್ಧಗೊಳಿಸಿ ಕೆಟ್ಟವಸ್ತುಗಳನ್ನು ಅವರಿಗೆ ನಿಷಿದ್ಧಗೊಳಿಸುತ್ತಾರೆ. ಅವರಿಂದ ಅವರ ಹೊರೆಯನ್ನೂ ಅವರನ್ನು ಬಂಧಿಸಿದ್ದ ಸಂಕೋಲೆಗಳನ್ನೂ ನೀಗಿಸುವರು. ಆದ್ದರಿಂದ ಅವರನ್ನು ನಂಬಿ, ಅವರನ್ನುಗೌರವಿಸಿ, ಅವರಿಗೆ ನೆರವು ನೀಡಿ, ಅವರೊಂದಿಗೆ ಅವತೀರ್ಣವಾದ ಪ್ರಕಾಶವನ್ನು ಅನುಸರಿಸುವವರೇ ಯಶಸ್ಸುಗಳಿಸುವವರು.

الَّذِينَ يَتَّبِعُونَ الرَّسُولَ النَّبِيَّ الْأُمِّيَّ الَّذِي يَجِدُونَهُ مَكْتُوبًا عِندَهُمْ فِي التَّوْرَاةِ وَالْإِنجِيلِ يَأْمُرُهُم بِالْمَعْرُوفِ وَيَنْهَاهُمْ عَنِ الْمُنكَرِ وَيُحِلُّ لَهُمُ الطَّيِّبَاتِ وَيُحَرِّمُ عَلَيْهِمُ الْخَبَائِثَ وَيَضَعُ عَنْهُمْ إِصْرَهُمْ وَالْأَغْلَالَ الَّتِي كَانَتْ عَلَيْهِمْ ۚ فَالَّذِينَ آمَنُوا بِهِ وَعَزَّرُوهُ وَنَصَرُوهُ وَاتَّبَعُوا النُّورَ الَّذِي أُنزِلَ مَعَهُ ۙ أُولَٰئِكَ هُمُ الْمُفْلِحُونَ ﴿١٥٨﴾

**159.** ಹೇಳು: 'ಎಲೈ ಮನುಷ್ಯರೇ, ದಿಟವಾಗಿಯೂ ನಾನು ನಿಮ್ಮೆಲ್ಲರೆಡೆಗೆ ಅಲ್ಲಾಹನ ಸಂದೇಶವಾಹಕನಾಗಿ ನಿಯೋಜಿತನಾಗಿದ್ದೇನೆ. ಆಕಾಶಗಳ ಮತ್ತು ಭೂಮಿಯ ಒಡೆತನ ಅವನದ್ದಾಗಿದೆ. ಅವನ ಹೊರತು ಬೇರೆ ದೇವನಿಲ್ಲ. ಅವನೇ ಜೀವಂತಗೊಳಿಸುತ್ತಾನೆ ಹಾಗೂ ಮೃತಪಡಿಸುತ್ತಾನೆ. ಆದ್ದರಿಂದ ನೀವು ಅಲ್ಲಾಹನಲ್ಲಿ ವಿಶ್ವಾಸವಿಡಿರಿ. ಹಾಗೆಯೇ, ಅಲ್ಲಾಹನಲ್ಲೂ ಅವನ ವಚನಗಳನ್ನು ನಂಬುವ ಆ ಅನಕ್ಷರಸ್ಥ ಪ್ರವಾದಿಯಾದ ಅವನ ಸಂದೇಶವಾಹಕನಲ್ಲೂ ವಿಶ್ವಾಸವಿಡಿರಿ. ನೀವು ಸರಿಯಾದ ಮಾರ್ಗವನ್ನು ಪಡೆಯಲಿಕ್ಕಾಗಿ ಅವರನ್ನು ಅನುಸರಿಸಿ.'

قُلْ يَا أَيُّهَا النَّاسُ إِنِّي رَسُولُ اللَّهِ إِلَيْكُمْ جَمِيعًا الَّذِي لَهُ مُلْكُ السَّمَاوَاتِ وَالْأَرْضِ ۖ لَا إِلَٰهَ إِلَّا هُوَ يُحْيِي وَيُمِيتُ ۖ فَآمِنُوا بِاللَّهِ وَرَسُولِهِ النَّبِيِّ الْأُمِّيِّ الَّذِي يُؤْمِنُ بِاللَّهِ وَكَلِمَاتِهِ وَاتَّبِعُوهُ لَعَلَّكُمْ تَهْتَدُونَ ﴿١٥٩﴾

**160.** ಸತ್ಯವನ್ನನುಸರಿಸಿ ದಾರಿತೋರಿಸುವ ಮತ್ತು ತನ್ಮೂಲಕ ನ್ಯಾಯಪಾಲಿಸುವ ಒಂದು ಪಂಗಡ ಮೂಸಾರ ಜನರಲ್ಲಿದ್ದಾರೆ.

وَمِن قَوْمِ مُوسَىٰ أُمَّةٌ يَهْدُونَ بِالْحَقِّ وَبِهِ يَعْدِلُونَ ﴿١٦٠﴾

**161.** ನಾವು ಅವರನ್ನು ಹನ್ನೆರಡು ಗೋತ್ರಗಳಿಗೆ ಸೇರಿದ ವಿಭಿನ್ನ ಜನಾಂಗಗಳಾಗಿ ವಿಂಗಡಿಸಿದೆವು. ಮೂಸಾರ ಜನರು ಅವರೊಡನೆ ನೀರು ಕೇಳಿದಾಗ, 'ನಿನ್ನ ಬಡಿಗೆಯಿಂದ ಆ ಬಂಡೆಗೆ ಬಡಿ'[251D] ಎಂದು ನಾವು

وَقَطَّعْنَاهُمُ اثْنَتَيْ عَشْرَةَ أَسْبَاطًا أُمَمًا ۚ وَأَوْحَيْنَا إِلَىٰ مُوسَىٰ إِذِ اسْتَسْقَاهُ قَوْمُهُ أَنِ اضْرِب بِّعَصَاكَ

ಅವರಿಗೆ ಸೂಚನೆ ನೀಡಿದೆವು. (ಹಾಗೆ ಅವರು ಬಡಿದರು.) ಆಗ ಅದರಿಂದ ಹನ್ನೆರಡು ಬುಗ್ಗೆಗಳು ಹೊರಚಿಮ್ಮಿದವು. ಎಲ್ಲ ಜನರು ತಮ್ಮ ತಮ್ಮ ನೀರಿನ ತಾಣವನ್ನು ತಿಳಿದುಕೊಂಡರು. ಮೋಡಗಳಿಂದ ನಾವು ಅವರಿಗೆ ನೆರಳನ್ನು ಒದಗಿಸಿದೆವು. 'ಮನ್ನ' ಮತ್ತು 'ಸಲ್ವಾ' ವನ್ನು[251E] (ಆಹಾರವಾಗಿ) ನಾವು ಅವರಿಗೆ ಇಳಿಸಿಕೊಟ್ಟೆವು. (ನಾವು ಹೇಳಿದೆವು:) 'ನಾವು ನಿಮಗೆ ಒದಗಿಸಿದ ಒಳ್ಳೆಯ ಆಹಾರವನ್ನು ತಿನ್ನಿರಿ.' ಅವರು ನಮಗೇನೂ ಹಾನಿ ಮಾಡಲಿಲ್ಲ. ಬದಲು ತಮ್ಮನ್ನೇ ಅವರು ಹಾನಿಗೀಡು ಮಾಡಿದರು.

ٱلْحَجَرَ ۖ فَٱنۢبَجَسَتْ مِنْهُ ٱثْنَتَا عَشْرَةَ
عَيْنًا ۖ قَدْ عَلِمَ كُلُّ أُنَاسٍ مَّشْرَبَهُمْ ۚ
وَظَلَّلْنَا عَلَيْهِمُ ٱلْغَمَٰمَ وَأَنزَلْنَا عَلَيْهِمُ
ٱلْمَنَّ وَٱلسَّلْوَىٰ ۖ كُلُوا۟ مِن طَيِّبَٰتِ مَا
رَزَقْنَٰكُمْ ۚ وَمَا ظَلَمُونَا وَلَٰكِن كَانُوٓا۟
أَنفُسَهُمْ يَظْلِمُونَ ﴿١٦١﴾

162. ಅವರೊಡನೆ ಹೇಳಲಾದ ಸಂದರ್ಭ (ಜ್ಞಾಪಿಸಿರಿ): "ನೀವು ಈ ಊರಿನಲ್ಲಿ ವಾಸಿಸಿರಿ. ಅಲ್ಲಿ ನಿಮಗೆ ಇಷ್ಟಬಂದ ಕಡೆಯಿಂದ (ಯಥೇಷ್ಟ) ತಿನ್ನಿರಿ. '(ದೇವಾ) ನಮ್ಮ ಭಾರವನ್ನು ಹಗುರಗೊಳಿಸು' ಎಂದು ಹೇಳಿರಿ. ವಿಧೇಯತೆ ತೋರಿಸುತ್ತಾ ನೀವು (ಊರಿನ) ದ್ವಾರವನ್ನು ಪ್ರವೇಶಿಸಿರಿ. ಆಗ ನಿಮ್ಮೆಲ್ಲ ಲೋಪದೋಷಗಳನ್ನು ನಾವು ನಿಮಗೆ ಕ್ಷಮಿಸಿಬಿಡುವೆವು. ಸತ್ಕರ್ಮ ಮಾಡುವವರಿಗೆ ನಾವು ಹೆಚ್ಚು (ಅನುಗ್ರಹಗಳನ್ನು) ನೀಡುವೆವು."

وَإِذْ قِيلَ لَهُمُ ٱسْكُنُوا۟ هَٰذِهِ ٱلْقَرْيَةَ
وَكُلُوا۟ مِنْهَا حَيْثُ شِئْتُمْ وَقُولُوا۟
حِطَّةٌ وَٱدْخُلُوا۟ ٱلْبَابَ سُجَّدًا نَّغْفِرْ
لَكُمْ خَطِيٓـَٰٔتِكُمْ ۚ سَنَزِيدُ ٱلْمُحْسِنِينَ ﴿١٦٢﴾

163. ಆದರೆ ಅವರ ಪೈಕಿ ದುಷ್ಕರ್ಮಿಗಳು ಅವರೊಡನೆ ಹೇಳಲ್ಪಟ್ಟ ಮಾತನ್ನು ಬೇರೊಂದು ಮಾತಿಗೆ ಬದಲಾಯಿಸಿದರು. ಹಾಗೆ ಅವರು ಅಕ್ರಮವಾಗಿ ವರ್ತಿಸಿದ್ದ ಕಾರಣ ಆಕಾಶದಿಂದ ನಾವು ಅವರ ಮೇಲೆ ಶಿಕ್ಷೆ ಇಳಿಸಿದೆವು.

فَبَدَّلَ ٱلَّذِينَ ظَلَمُوا۟ مِنْهُمْ قَوْلًا
غَيْرَ ٱلَّذِى قِيلَ لَهُمْ فَأَرْسَلْنَا
عَلَيْهِمْ رِجْزًا مِّنَ ٱلسَّمَآءِ بِمَا كَانُوا۟
يَظْلِمُونَ ﴿١٦٣﴾

164. ಸಮುದ್ರ ತೀರದಲ್ಲಿದ್ದ ಆ ಊರಿನ (ಜನರ) ಬಗ್ಗೆ ನೀನು ಅವರೊಡನೆ ವಿಚಾರಿಸು. ಸಬ್‌ತ್ ದಿನದಂದು ಅವರು ಆಜ್ಞಾಲಂಘನೆ ಮಾಡಿದಾಗ ಅವರ ಮೀನುಗಳು ಸಬ್‌ತ್ ದಿನದಂದು ಗುಂಪು ಗುಂಪಾಗಿ

وَسْـَٔلْهُمْ عَنِ ٱلْقَرْيَةِ ٱلَّتِى كَانَتْ
حَاضِرَةَ ٱلْبَحْرِ إِذْ يَعْدُونَ فِى ٱلسَّبْتِ
إِذْ تَأْتِيهِمْ حِيتَانُهُمْ يَوْمَ سَبْتِهِمْ

251D. 2 : 61ರ ಟಿಪ್ಪಣಿ ನೋಡಿರಿ.

251E. 2:58 ರ ಟಿಪ್ಪಣಿ ನೋಡಿರಿ





ನೀರಿನ ಮೇಲ್ಭಾಗಕ್ಕೆ ಬರುತ್ತಿದ್ದವು. ಸಬ್‌ತ್ ಅಲ್ಲದ ದಿನದಂದು ಮೀನುಗಳು ಅವರ ಬಳಿಗೆ ಬರುತ್ತಿರಲಿಲ್ಲ. ಅವರು ಧಿಕ್ಕಾರಿಗಳಾಗಿದ್ದ ಕಾರಣದಿಂದ ನಾವು ಹೀಗೆ ಅವರನ್ನು ಪರೀಕ್ಷೆಗೊಳಪಡಿಸುತ್ತಿದ್ದೆವು.

شُرَّعًا وَيَوْمَ لَا يَسْبِتُونَ ۙ لَا تَأْتِيهِمْ ۚ
كَذَٰلِكَ نَبْلُوهُم بِمَا كَانُوا۟
يَفْسُقُونَ ﴿١٦٤﴾

165. ಅವರ ಪೈಕಿ ಒಂದು ಪಂಗಡದವರು (ಇನ್ನೊಂದು ಪಂಗಡದವರೊಡನೆ) ಹೇಳಿದ ಸಂದರ್ಭ (ಜ್ಞಾಪಿಸಿರಿ): 'ಅಲ್ಲಾಹನು ನಾಶಪಡಿಸಲಿರುವ ಅಥವಾ ಕಠೋರವಾಗಿ ಶಿಕ್ಷಿಸಲಿರುವ ಒಂದು ಜನಾಂಗಕ್ಕೆ ನೀವೇಕೆ ಉಪದೇಶಿಸುತ್ತೀರಿ?' ಅವರು (ಉಪದೇಶಕರು) ಹೇಳಿದರು: 'ನಿಮ್ಮ ಪ್ರಭುವಿನ ಬಳಿ (ನಾವು ಅವರಿಗೆ ಉಪದೇಶಿಸಿದ್ದೇವೆಂದು ಹೇಳಿ) ದೋಷಮುಕ್ತರಾಗಲಿಕ್ಕೆ ಹಾಗೂ ಅವರು (ಅಲ್ಲಾಹನ) ಭಯಭಕ್ತಿಯುಳ್ಳವರಾಗಬಹುದೆಂದು (ನಾವು ಹೀಗೆ ಉಪದೇಶಿಸುತ್ತೇವೆ).'

وَإِذْ قَالَتْ أُمَّةٌ مِّنْهُمْ لِمَ تَعِظُونَ
قَوْمًا ۙ ٱللَّهُ مُهْلِكُهُمْ أَوْ مُعَذِّبُهُمْ
عَذَابًا شَدِيدًا ۖ قَالُوا۟ مَعْذِرَةً إِلَىٰ
رَبِّكُمْ وَلَعَلَّهُمْ يَتَّقُونَ ﴿١٦٥﴾

166. ಹಾಗೆ ಅವರೊಡನೆ ಉಪದೇಶಿಸಿದ ವಿಚಾರಗಳನ್ನು ಅವರು ಮರೆತುಬಿಟ್ಟಾಗ, ಕೆಡುಕಿನಿಂದ ತಡೆಯುತ್ತಿದ್ದವರನ್ನು ನಾವು ರಕ್ಷಿಸಿದೆವು. ದುಷ್ಕರ್ಮಿಗಳನ್ನು ಅವರು ಆಜ್ಞಾಲಂಘಕರಾದ ಕಾರಣದಿಂದ ನಾವು ಅವರನ್ನು ಕಠಿಣವಾದ ಶಿಕ್ಷೆಗೆ ಗುರಿಪಡಿಸಿದೆವು.

فَلَمَّا نَسُوا۟ مَا ذُكِّرُوا۟ بِهِۦٓ أَنجَيْنَا
ٱلَّذِينَ يَنْهَوْنَ عَنِ ٱلسُّوٓءِ وَأَخَذْنَا
ٱلَّذِينَ ظَلَمُوا۟ بِعَذَابٍۭ بَـِٔيسٍۭ بِمَا
كَانُوا۟ يَفْسُقُونَ ﴿١٦٦﴾

167. ಹಾಗೆ ಅವರಿಗೆ ನಿಷಿದ್ಧಗೊಳಿಸಲಾದುದನ್ನು ಅವರು ಧಿಕ್ಕರಿಸಿದಾಗ 'ನೀವು ನಿಕೃಷ್ಟ ಕಪಿಗಳಾಗಿರಿ'[251F]ಎಂದು ನಾವು ಅವರೊಡನೆ ಹೇಳಿದೆವು.

فَلَمَّا عَتَوْا۟ عَن مَّا نُهُوا۟ عَنْهُ قُلْنَا
لَهُمْ كُونُوا۟ قِرَدَةً خَٰسِـِٔينَ ﴿١٦٧﴾

168. ಖಂಡಿತವಾಗಿಯೂ ಪುನರುತ್ಥಾನ ದಿನದ ತನಕ ಅವರ ಮೇಲೆ ಕಠಿಣ ದೌರ್ಜನ್ಯವೆಸಗುವವರನ್ನು ತಾನು ಎಬ್ಬಿಸುವೆನೆಂದು ನಿನ್ನ ಪ್ರಭು ಘೋಷಿಸಿದ ಸಂದರ್ಭ (ಜ್ಞಾಪಿಸು). ನಿಶ್ಚಯವಾಗಿಯೂ ನಿನ್ನ ಪ್ರಭು ಶೀಘ್ರವಾಗಿ ಶಿಕ್ಷಿಸುವವನಾಗಿದ್ದಾನೆ. ಅವನು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَإِذْ تَأَذَّنَ رَبُّكَ لَيَبْعَثَنَّ عَلَيْهِمْ
إِلَىٰ يَوْمِ ٱلْقِيَٰمَةِ مَن يَسُومُهُمْ
سُوٓءَ ٱلْعَذَابِ ۗ إِنَّ رَبَّكَ لَسَرِيعُ
ٱلْعِقَابِ ۖ وَإِنَّهُۥ لَغَفُورٌ رَّحِيمٌ ﴿١٦٨﴾

251F. 2:66ರ ಟಿಪ್ಪಣಿ ನೋಡಿರಿ.

**169.** ನಾವು ಅವರನ್ನು ಭೂಮಿಯಲ್ಲಿ ವಿವಿಧ ಜನಾಂಗಗಳನ್ನಾಗಿ ವಿಂಗಡಿಸಿ ಹರಡಿಸಿದ್ದೇವೆ. ಅವರ ಪೈಕಿ ಸುಕೃತರಿದ್ದಾರೆ; ಅಲ್ಲದವರೂ ಇದ್ದಾರೆ.[251G] ಒಳಿತಿನಿಂದಲೂ ಕೆಡುಕಿನಿಂದಲೂ ನಾವು ಅವರನ್ನು ಪರೀಕ್ಷೆಗೊಳಪಡಿಸಿದೆವು - ಅವರು ಮರಳು ವಂತಾಗಲಿಕ್ಕಾಗಿ.

وَقَطَّعْنَٰهُمْ فِى ٱلْأَرْضِ أُمَمًا ۖ مِّنْهُمُ ٱلصَّٰلِحُونَ وَمِنْهُمْ دُونَ ذَٰلِكَ ۖ وَبَلَوْنَٰهُم بِٱلْحَسَنَٰتِ وَٱلسَّيِّـَٔاتِ لَعَلَّهُمْ يَرْجِعُونَ ﴿١٦٩﴾

**170.** ಆ ನಂತರ ಗ್ರಂಥಕ್ಕೆ (ಬಾಹ್ಯವಾಗಿ) ವಾರೀಸುದಾರರಾದ ಒಂದು (ಕೆಟ್ಟ) ಪೀಳಿಗೆ ಅವರ ಬಳಿಕ ಬಂತು. ಅವರು ಈ ಕೀಳು (ಲೌಕಿಕ ಜೀವನದ) ಸಾಮಗ್ರಿಗಳನ್ನು ಪಡೆದುಕೊಂಡು, 'ನಮಗೆ ಕ್ಷಮೆ ನೀಡಲ್ಪಡುವುದು' ಎಂದು ಹೇಳುತ್ತಾರೆ. ಮತ್ತೂ ಅವರಿಗೆ ಅಂತಹ ಭೌತಿಕ ವಸ್ತುಗಳು ಲಭಿಸುವುದಾದರೆ ಅದನ್ನೂ ಅವರು ಪಡೆಯುವರು. ಅಲ್ಲಾಹನ ಬಗ್ಗೆ ಸತ್ಯವಲ್ಲದೆ ಅವರು ನುಡಿಯಲಿಕ್ಕಿಲ್ಲವೆಂಬ ಗ್ರಂಥದ ಒಪ್ಪಂದ ಅವರಿಂದ ಪಡಕೊಂಡಿಲ್ಲವೇ? ಅದರಲ್ಲಿರುವುದನ್ನು ಅವರು ಕಲಿಯಲಿಲ್ಲವೇ? ಭಯಭಕ್ತಿ ತೋರಿಸುವವರಿಗೆ ಪಾರತ್ರಿಕ ಗೃಹವೇ ಅತ್ಯುತ್ತಮವಾದುದು. ನೀವೇನು ಮನವರಿಕೆ ಮಾಡಿಕೊಳ್ಳುವುದಿಲ್ಲವೇ?

فَخَلَفَ مِنۢ بَعْدِهِمْ خَلْفٌ وَرِثُوا۟ ٱلْكِتَٰبَ يَأْخُذُونَ عَرَضَ هَٰذَا ٱلْأَدْنَىٰ وَيَقُولُونَ سَيُغْفَرُ لَنَا وَإِن يَأْتِهِمْ عَرَضٌ مِّثْلُهُۥ يَأْخُذُوهُ ۚ أَلَمْ يُؤْخَذْ عَلَيْهِم مِّيثَٰقُ ٱلْكِتَٰبِ أَن لَّا يَقُولُوا۟ عَلَى ٱللَّهِ إِلَّا ٱلْحَقَّ وَدَرَسُوا۟ مَا فِيهِ ۗ وَٱلدَّارُ ٱلْءَاخِرَةُ خَيْرٌ لِّلَّذِينَ يَتَّقُونَ ۗ أَفَلَا تَعْقِلُونَ ﴿١٧٠﴾

**171.** ಗ್ರಂಥವನ್ನು ಬಿಗಿಯಾಗಿ ಹಿಡಿದುಕೊಂಡು ಪ್ರಾರ್ಥನೆಯನ್ನು ನಿಷ್ಠೆಯಿಂದ ನಿರ್ವಹಿಸುವ ಸುಕೃತರ ಪ್ರತಿಫಲವನ್ನು ನಾವು ನಿಷ್ಫಲಗೊಳಿಸಲಾರೆವು.

وَٱلَّذِينَ يُمَسِّكُونَ بِٱلْكِتَٰبِ وَأَقَامُوا۟ ٱلصَّلَوٰةَ إِنَّا لَا نُضِيعُ أَجْرَ ٱلْمُصْلِحِينَ ﴿١٧١﴾

**172.** ನಾವು ಪರ್ವತವನ್ನು ಕಂಪನಗೊಳಿಸಿ ಅದನ್ನು ಅವರ ಮೇಲೆ ಒಂದು ಚಪ್ಪರದಂತೆ ಮೇಲೆತ್ತಿದಾಗ[251H] ಅದು ಅವರ ಮೇಲೆ ಬೀಳುವುದೆಂದು ಅವರು ಭಾವಿಸಿದರು[251I] (ನಾವು ಅವರೊಡನೆ ಹೇಳಿದೆವು:) 'ನೀವು ಭಯಭಕ್ತಿಯುಳ್ಳವರಾಗಲಿಕ್ಕಾಗಿ ನಾವು ನಿಮಗೆ ನೀಡಿದುದನ್ನು ಬಿಗಿಯಾಗಿ ಹಿಡಿದುಕೊಂಡು ಅದರಲ್ಲಿರುವುದನ್ನು ನೀವು ಜ್ಞಾಪಿಸಿಕೊಳ್ಳಿರಿ.'

وَإِذْ نَتَقْنَا ٱلْجَبَلَ فَوْقَهُمْ كَأَنَّهُۥ ظُلَّةٌ وَظَنُّوٓا۟ أَنَّهُۥ وَاقِعٌۢ بِهِمْ خُذُوا۟ مَآ ءَاتَيْنَٰكُم بِقُوَّةٍ وَٱذْكُرُوا۟ مَا فِيهِ لَعَلَّكُمْ تَتَّقُونَ ﴿١٧٢﴾

251G. 167ನೇ ಸೂಕ್ತದಲ್ಲಿ ಹೇಳಿರುವುದು ಸಾಕ್ಷಾತ್ ಕಪಿಗಳಾಗಿರಿ ಎಂದಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ.





**173.** ಆದಂ ಸಂತತಿಗಳಿಂದ- ಅವರ ಬೆನ್ನುಗಳಿಂದ- ಅವರ ಪೀಳಿಗೆಗಳನ್ನು ನಿನ್ನ ಪ್ರಭು ಹೊರಗೆ ತಂದು, 'ನಾನು ನಿಮ್ಮ ಪ್ರಭುವಲ್ಲವೇ?' ಎಂದು ಕೇಳಿ ಅವರ ಮೇಲೆ ಅವರನ್ನೇ ಸಾಕ್ಷಿ ನಿಲ್ಲಿಸಿದ ಸಂದರ್ಭ - ಅವರು ಹೇಳಿದರು: 'ಹೌದು ನಾವು ಅದಕ್ಕೆ ಸಾಕ್ಷಿಗಳಾಗಿದ್ದೇವೆ.' ಪುನರುತ್ಥಾನ ದಿನದಂದು, 'ಆ ಬಗ್ಗೆ ನಮಗೇನೂ ತಿಳಿದಿರಲಿಲ್ಲ' ಎಂದು ನೀವು ಹೇಳದಿರಲಿಕ್ಕೆ ನಾವು ಈ ರೀತಿ ಮಾಡಿದ್ದೇವೆ.

وَإِذْ أَخَذَ رَبُّكَ مِنۢ بَنِىٓ ءَادَمَ مِن ظُهُورِهِمْ ذُرِّيَّتَهُمْ وَأَشْهَدَهُمْ عَلَىٰٓ أَنفُسِهِمْ أَلَسْتُ بِرَبِّكُمْ ۖ قَالُوا۟ بَلَىٰ ۛ شَهِدْنَآ ۛ أَن تَقُولُوا۟ يَوْمَ ٱلْقِيَٰمَةِ إِنَّا كُنَّا عَنْ هَٰذَا غَٰفِلِينَ ﴿١٧٣﴾

**174.** ಅಥವಾ 'ನಮ್ಮ ಪೂರ್ವಜರಾದರೋ ಇದಕ್ಕೆ ಮುಂಚೆ ಬಹುದೇವಾರಾಧನೆಯನ್ನು ಕೈಗೊಂಡಿದ್ದರು; ಅವರ ಬಳಿಕ ನಾವು (ಅವರ) ಸಂತಾನಗಳು ಮಾತ್ರ. ಆದುದರಿಂದ ಅಸತ್ಯಮಾರ್ಗವನ್ನು ಕೈಗೊಂಡವರು ಮಾಡಿದ ಕೃತ್ಯದ ಬದಲಿಗೆ ನೀನು ನಮ್ಮನ್ನು ನಾಶಪಡಿಸುವೆಯಾ?' ಎಂದು ನೀವು ಹೇಳದಿರಲಿಕ್ಕಾಗಿ.

أَوْ تَقُولُوٓا۟ إِنَّمَآ أَشْرَكَ ءَابَآؤُنَا مِن قَبْلُ وَكُنَّا ذُرِّيَّةً مِّنۢ بَعْدِهِمْ ۖ أَفَتُهْلِكُنَا بِمَا فَعَلَ ٱلْمُبْطِلُونَ ﴿١٧٤﴾

**175.** (ಅವರು ಪಾಠಕಲಿಯಲಿಕ್ಕಾಗಿಯೂ) ಅವರು ನಮ್ಮೆಡೆಗೆ ಮರಳಲಿಕ್ಕಾಗಿಯೂ ಈ ಪ್ರಕಾರ ನಾವು ನಮ್ಮ ದೃಷ್ಟಾಂತಗಳನ್ನು ವಿವರಿಸಿಕೊಡುತ್ತೇವೆ.

وَكَذَٰلِكَ نُفَصِّلُ ٱلْءَايَٰتِ وَلَعَلَّهُمْ يَرْجِعُونَ ﴿١٧٥﴾

**176.** ನಾವು ನಮ್ಮ ದೃಷ್ಟಾಂತಗಳನ್ನು ನೀಡಿದ್ದ ಒಬ್ಬನ ವೃತ್ತಾಂತವನ್ನು ಅವರಿಗೆ ವಿವರಿಸಿಕೊಡು. ಆದರೆ ಅವನು ಆದರಿಂದ ವಿಮುಖನಾದನು.[251J] ಹಾಗೆ ಶೈತಾನ ಅವನನ್ನು ಬೆನ್ನಟ್ಟಿ ಹಿಡಿದನು. ಆದ್ದರಿಂದ ಅವನು ದಾರಿತಪ್ಪಿದವರಲ್ಲಿ ಸೇರಿದನು.

وَٱتْلُ عَلَيْهِمْ نَبَأَ ٱلَّذِىٓ ءَاتَيْنَٰهُ ءَايَٰتِنَا فَٱنسَلَخَ مِنْهَا فَأَتْبَعَهُ ٱلشَّيْطَٰنُ فَكَانَ مِنَ ٱلْغَاوِينَ ﴿١٧٦﴾

251H. "ದೇವದರ್ಶನಕ್ಕಾಗಿ ಮೋಶೆ ಜನರನ್ನು ಪಾಳೆಯದ ಹೊರಕ್ಕೆ ಬರಮಾಡಲು ಅವರು ಬೆಟ್ಟದ ಬುಡದಲ್ಲಿ ನಿಂತುಕೊಂಡರು" (ವಿಮೋಚನಾನಕಾಂಡ 19:17). ಪರ್ವತದ ಬುಡದಲ್ಲಿ ಮನುಷ್ಯನು ನಿಂತರೆ ಪರ್ವತವನ್ನು ಅವನ ಮೇಲೆ ಎತ್ತಿ ಹಿಡಿದಂತೆ ತೋರುತ್ತದೆ. ಹಾಗೂ ಪರ್ವತವು ಅವನ ತಲೆಯ ಮೇಲ್ಭಾಗದಲ್ಲಿ ಒಂದು ಚಪ್ಪರದಂತೆ ಭಾಸವಾಗುತ್ತದೆ. ಇದು ತೀರಾ ಸ್ವಾಭಾವಿಕ. ಇದಕ್ಕೆ ವಿರುದ್ಧವಾಗಿ ಕೆಲವು ಖುರ್‌ಆನ್ ವ್ಯಾಖ್ಯಾನಗಾರರು, ಪರ್ವತವನ್ನು ಕಿತ್ತು ಅವರ ಮೇಲೆ ಚಪ್ಪರದಂತೆ ಎತ್ತಿ ಹಿಡಿಯಲಾಯಿತು ಎಂದು ಅತಿಶಯೋಕ್ತಿಕರವಾಗಿ ಬರೆದಿದ್ದಾರೆ. ಅದು ಸರಿಯಲ್ಲ.

251I. ಆ ವೇಳೆಯಲ್ಲಿ ಪರ್ವತಕ್ಕೆ ಬಲವಾದ ಕಂಪನವುಂಟಾದಾಗ ಅದು ತಮ್ಮ ಮೇಲೆ ಬೀಳುವುದೋ ಎಂದು ಇಸ್ರಾಈಲ್ಯರು ಭಯಪಟ್ಟರು.

251J. ಬೈಬಲ್ ಮತ್ತು ಕೆಲವು ಖುರ್‌ಆನ್ ವ್ಯಾಖ್ಯಾನಗಾರರು 'ಬಲ್‌ಆಂ ಬಾಊರ' ಎಂಬೋರ್ವ ವ್ಯಕ್ತಿಗೆ ಸಂಬಂಧಿಸಿದ ಘಟನೆಯನ್ನು ವಿವರಿಸಿದ್ದಾರೆ. ಅವನ ಚರಿತ್ರೆ ಈ ವಿವರಣೆಗೆ ಸರಿಹೊಂದುತ್ತದೆಂಬುದು ನಿಜ. ಆದರೆ, ಯಥಾರ್ಥದಲ್ಲಿ ಇದೊಂದು ಉಪಮೆಯಾಗಿದೆ. ಯಾರ ಸ್ಥಿತಿ ಇದಕ್ಕೆ ಸಮಾನವಾಗಿರುತ್ತದೋ ಅವರಿಗೆ ಈ ಉಪಮೆ ಸರಿಹೊಂದುತ್ತದೆ. ಸಾದೃಶ್ಯವಾಗಿ ಅವರು 'ಬಲ್‌ಆಂ' ಆಗುತ್ತಾರೆ.

**177.** ನಾವು ಇಚ್ಛಿಸಿದ್ದರೆ ಆ (ದೃಷ್ಟಾಂತಗಳ) ಮೂಲಕ ಅವನನ್ನು ನಾವು ಉನ್ನತಿಗೇರಿಸುತ್ತಿದ್ದೆವು. ಆದರೆ ಅವನು ಭೂಮಿಯೆಡೆಗೆ ವಾಲಿ ಸ್ವೇಚ್ಛಾಚಾರದ ಹಿಂದೆ ಬಿದ್ದನು. ಹಾಗೆ ಅವನ ಸ್ಥಿತಿ ಒಂದು ನಾಯಿಯ ಸ್ಥಿತಿಯಂತಿದೆ. ನೀವು ಅದರ ಮೇಲೆ ಹಲ್ಲೆ ಮಾಡಿದರೆ ಅದು ನಾಲಗೆಯನ್ನು ಹೊರಚಾಚುವುದು. ಅಥವಾ ಅದರಷ್ಟಕ್ಕೆ ಬಿಟ್ಟುಬಿಟ್ಟರೂ ಅದು ನಾಲಗೆಯನ್ನು ಹೊರಚಾಚುವುದು. ಇದು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವ ಜನತೆಯ ಉಪಮೆಯಾಗಿದೆ. ಆದ್ದರಿಂದ ಅವರು ಯೋಚಿಸಲಿಕ್ಕಾಗಿ ನೀನು ಅವರಿಗೆ ಚರಿತ್ರೆಯನ್ನು ವಿವರಿಸಿಕೊಡು.

وَلَوْ شِئْنَا لَرَفَعْنٰهُ بِهَا وَلٰكِنَّهٗٓ اَخْلَدَ اِلَى الْاَرْضِ وَاتَّبَعَ هَوٰىهُ ۚ فَمَثَلُهٗ كَمَثَلِ الْكَلْبِ ۚ اِنْ تَحْمِلْ عَلَيْهِ يَلْهَثْ اَوْ تَتْرُكْهُ يَلْهَثْ ۚ ذٰلِكَ مَثَلُ الْقَوْمِ الَّذِيْنَ كَذَّبُوْا بِاٰيٰتِنَا ۚ فَاقْصُصِ الْقَصَصَ لَعَلَّهُمْ يَتَفَكَّرُوْنَ ﴿١٧٦﴾

**178.** ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವವರ ಸ್ಥಿತಿ ಅತಿ ಕೆಟ್ಟದ್ದಾಗಿದೆ. ಅವರು ಸ್ವಯಂ ತಮಗೆಯೇ ದ್ರೋಹವೆಸಗಿದ್ದಾರೆ.

سَآءَ مَثَلَا ِۨالْقَوْمُ الَّذِيْنَ كَذَّبُوْا بِاٰيٰتِنَا وَاَنْفُسَهُمْ كَانُوْا يَظْلِمُوْنَ ﴿١٧٧﴾

**179.** ಅಲ್ಲಾಹನು ಯಾರನ್ನು ಸತ್ಪಥದಲ್ಲಿ ನಡೆಸುತ್ತಾನೋ ಅವನೇ ಸರಿಯಾದ ಮಾರ್ಗವನ್ನು ಪಡೆದವನು. ಅವನು ಯಾರನ್ನು ದಾರಿತಪ್ಪಿದವರೆಂದು ತೀರ್ಮಾನಿಸುತ್ತಾನೋ ಅವರೇ ನಷ್ಟಹೊಂದಿದವರು.

مَنْ يَّهْدِ اللّٰهُ فَهُوَ الْمُهْتَدِيْ ۚ وَمَنْ يُّضْلِلْ فَاُولٰٓئِكَ هُمُ الْخٰسِرُوْنَ ﴿١٧٨﴾

**180.** ಖಂಡಿತವಾಗಿಯೂ ಜಿನ್ನ್ ಮತ್ತು ಇನ್ಸ್ ವರ್ಗಗಳಿಗೆ ಸೇರಿದ ಅನೇಕರನ್ನು ಅವರ ಅಂತ್ಯ ನರಕವಾಗುವಂತೆ ನಾವು ಸೃಷ್ಟಿಸಿದ್ದೇವೆ. ಅವರಿಗೆ ಹೃದಯಗಳಿವೆ; (ಆದರೆ) ಅವರು ಅವುಗಳಿಂದ ಗ್ರಹಿಸುವುದಿಲ್ಲ. ಅವರಿಗೆ ಕಣ್ಣುಗಳಿವೆ; (ಆದರೆ) ಆ ಮೂಲಕ ಅವರು ಕಾಣುವುದಿಲ್ಲ. ಅವರಿಗೆ ಕಿವಿಗಳಿವೆ; (ಆದರೆ) ಆ ಮೂಲಕ ಅವರು ಕೇಳುವುದಿಲ್ಲ. ಅವರು ಜಾನುವಾರುಗಳಿಗೆ ಸಮಾನರು. ಅಲ್ಲ, ಅವರು ಅವುಗಳಿಗಿಂತ ದಾರಿಗೆಟ್ಟವರು. ಅವರೇ ಮತಿಹೀನರು.

وَلَقَدْ ذَرَاْنَا لِجَهَنَّمَ كَثِيْرًا مِّنَ الْجِنِّ وَالْاِنْسِ ۖ لَهُمْ قُلُوْبٌ لَّا يَفْقَهُوْنَ بِهَا ۖ وَلَهُمْ اَعْيُنٌ لَّا يُبْصِرُوْنَ بِهَا ۖ وَلَهُمْ اٰذَانٌ لَّا يَسْمَعُوْنَ بِهَا ۗ اُولٰٓئِكَ كَالْاَنْعَامِ بَلْ هُمْ اَضَلُّ ۗ اُولٰٓئِكَ هُمُ الْغٰفِلُوْنَ ﴿١٧٩﴾

**181.** ಅತ್ಯುತ್ಕೃಷ್ಟವಾದ ಗುಣ ನಾಮಗಳು ಅಲ್ಲಾಹನಿಗೆ ಮಾತ್ರ ಇವೆ. ಆದುದರಿಂದ ಅವುಗಳ ಮೂಲಕ ನೀವು ಅವನನ್ನು ಕರೆದು ಪ್ರಾರ್ಥಿಸಿರಿ. ಅವನ

وَلِلّٰهِ الْاَسْمَآءُ الْحُسْنٰى فَادْعُوْهُ بِهَا ۖ وَذَرُوا الَّذِيْنَ يُلْحِدُوْنَ فِيْٓ اَسْمَآئِهٖ ۗ





ಗುಣನಾಮಗಳ ಬಗ್ಗೆ ತಪ್ಪು ತಿಳಿದುಕೊಳ್ಳುವವರನ್ನು ಬಿಟ್ಟುಬಿಡಿರಿ. ಅವರ ಕೃತ್ಯಕ್ಕೆ ಅವರಿಗೆ ಪ್ರತಿಫಲ ನೀಡಲಾಗುವುದು.

سَيُجْزَوْنَ مَا كَانُوْا يَعْمَلُوْنَ ﴿١٨٠﴾

**182.** ನಾವು ಸೃಷ್ಟಿಸಿದವರ ಪೈಕಿಯಲ್ಲಿ ಸತ್ಯದ ಮೂಲಕ ಮಾರ್ಗದರ್ಶನ ಮಾಡುವ, ಅದರಿಂದಲೇ ನ್ಯಾಯವನ್ನು ಪಾಲಿಸುವ ಜನರ ಗುಂಪು ಸಹ ಇದೆ.

وَمِمَّنْ خَلَقْنَآ اُمَّةٌ يَّهْدُوْنَ بِالْحَقِّ وَبِهٖ يَعْدِلُوْنَ ﴿١٨١﴾

**183.** ನಮ್ಮ ದೃಷ್ಟಾಂತಗಳನ್ನು ಯಾರು ಸುಳ್ಳಾಗಿಸುವರೋ, ಅವರು ತಿಳಿಯದಂತೆಯೇ ನಾವು ಅವರನ್ನು (ನಾಶದೆಡೆಗೆ) ಹಂತಹಂತವಾಗಿ ಎಳೆದು ಕೊಂಡು ಹೋಗುತ್ತೇವೆ.

وَالَّذِيْنَ كَذَّبُوْا بِاٰيٰتِنَا سَنَسْتَدْرِجُهُمْ مِّنْ حَيْثُ لَا يَعْلَمُوْنَ ﴿١٨٢﴾

**184.** ನಾನು ಅವರಿಗೆ ಕಾಲಾವಕಾಶ ನೀಡುತ್ತೇನೆ. ನಿಸ್ಸಂಶಯವಾಗಿಯೂ ನನ್ನ ಯೋಜನೆ ಸುಶಕ್ತ ವಾದುದು.

وَاُمْلِيْ لَهُمْ ۗ اِنَّ كَيْدِيْ مَتِيْنٌ ﴿١٨٣﴾

**185.** ತಮ್ಮ ಸಂಗಾತಿಗೆ[252] ಯಾವ ಹುಚ್ಚೂ ಇಲ್ಲವೆಂದು ಅವರು ಯೋಚಿಸಿ ಮನವರಿಕೆ ಮಾಡಿಕೊಳ್ಳಲಿಲ್ಲವೇ? ಅವರು ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿದ್ದಾರೆ.

اَوَلَمْ يَتَفَكَّرُوْا ۗ مَا بِصَاحِبِهِمْ مِّنْ جِنَّةٍ ۗ اِنْ هُوَ اِلَّا نَذِيْرٌ مُّبِيْنٌ ﴿١٨٤﴾

**186.** ಆಕಾಶಗಳ ಮತ್ತು ಭೂಮಿಯ ಸುವ್ಯವಸ್ಥೆಯ ಬಗ್ಗೆಯೂ ಅಲ್ಲಾಹನು ಸೃಷ್ಟಿಸಿದ ಪ್ರತಿಯೊಂದು ವಸ್ತುವಿನ ಬಗ್ಗೆಯೂ ಅವರು ಯೋಚಿಸಿ ನೋಡುವುದಿಲ್ಲವೇ? ಅವರ (ನಾಶದ) ನಿಶ್ಚಿತ ಅವಧಿ ಸಮೀಪಿಸಿರುವುದಾಗಿಯೂ ಅವರು ಕಾಣುವುದಿಲ್ಲವೇ? ಇನ್ನು ಇದರ ನಂತರ ಬೇರೆ ಯಾವ ವೃತ್ತಾಂತದಲ್ಲಿ ಅವರು ವಿಶ್ವಾಸವಿಡುವರು?

اَوَلَمْ يَنْظُرُوْا فِيْ مَلَكُوْتِ السَّمٰوٰتِ وَالْاَرْضِ وَمَا خَلَقَ اللّٰهُ مِنْ شَيْءٍ ۙ وَّاَنْ عَسٰٓى اَنْ يَّكُوْنَ قَدِ اقْتَرَبَ اَجَلُهُمْ ۚ فَبِاَيِّ حَدِيْثٍ بَعْدَهٗ يُؤْمِنُوْنَ ﴿١٨٥﴾

**187.** ಅಲ್ಲಾಹನು ಯಾರನ್ನು ದಾರಿಗೆಟ್ಟವನೆಂದು ತೀರ್ಮಾನಿಸುತ್ತಾನೋ ಅವನಿಗೆ ಯಾವ ಮಾರ್ಗ ದರ್ಶಕನೂ ಇರುವುದಿಲ್ಲ. ತಮ್ಮ ಅತಿಕ್ರಮದಲ್ಲಿ ಅಲೆದಾಡಲು ಅವನು ಅವರನ್ನು ಬಿಟ್ಟುಬಿಡುವನು.[252A]

مَنْ يُّضْلِلِ اللّٰهُ فَلَا هَادِيَ لَهٗ ۚ وَيَذَرُهُمْ فِيْ طُغْيَانِهِمْ يَعْمَهُوْنَ ﴿١٨٦﴾

252. ಮುಹಮ್ಮದ್ ಪೈಗಂಬರ್ (ಸ) ರಿಗೆ.

**188.** ಆ (ನಿಶ್ಚಿತ) ಸಮಯದ ಬಗ್ಗೆ, 'ಅದು ಯಾವಾಗ ಬರುವುದು?' ಎಂದು ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಆ ಬಗ್ಗೆ ಅರಿವು ನನ್ನ ಪ್ರಭುವಿಗೆ ಮಾತ್ರ ಇದೆ. ಅದರ ಸಮಯದಲ್ಲಿ ಅವನೇ ಅದನ್ನು ಬಹಿರಂಗಪಡಿಸುವವನು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅದು ಭಾರವಾಗಿ ತೂಗುತ್ತಿದೆ. ಅದು ನಿಮ್ಮೆಡೆಗೆ ಹಠಾತ್ತಾಗಿಯೇ ಬರುವುದು.' ನೀನು ಆ ಕುರಿತು ಚೆನ್ನಾಗಿ ತಿಳಿದಿರುವಿಯೆಂದು ಭಾವಿಸಿ ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಆ ಬಗ್ಗೆ ತಿಳುವಳಿಕೆ ಅಲ್ಲಾಹನಿಗೆ ಮಾತ್ರವಿದೆ. ಆದರೆ ಮನುಷ್ಯರಲ್ಲಿ ಹೆಚ್ಚಿನವರಿಗೆ ತಿಳುವಳಿಕೆಯಿಲ್ಲ.'

يَسْـَٔلُونَكَ عَنِ ٱلسَّاعَةِ أَيَّانَ مُرْسَىٰهَا ۖ قُلْ إِنَّمَا عِلْمُهَا عِندَ رَبِّى ۖ لَا يُجَلِّيهَا لِوَقْتِهَآ إِلَّا هُوَ ۚ ثَقُلَتْ فِى ٱلسَّمَٰوَٰتِ وَٱلْأَرْضِ ۚ لَا تَأْتِيكُمْ إِلَّا بَغْتَةً ۗ يَسْـَٔلُونَكَ كَأَنَّكَ حَفِىٌّ عَنْهَا ۖ قُلْ إِنَّمَا عِلْمُهَا عِندَ ٱللَّهِ وَلَٰكِنَّ أَكْثَرَ ٱلنَّاسِ لَا يَعْلَمُونَ ١٨٨

**189.** ಹೇಳು: 'ಅಲ್ಲಾಹನು ಇಚ್ಛಿಸಿದ ಹೊರತು ನನಗೆ ಸ್ವಂತಕ್ಕೆ ಕೂಡ ಉಪಕಾರ ಅಥವಾ ಉಪದ್ರ ಮಾಡಲು ಶಕ್ತಿಯಿಲ್ಲ. ನನಗೆ ಅಗೋಚರ ಸಂಗತಿಗಳ ಕುರಿತು ಜ್ಞಾನವಿರುತ್ತಿದ್ದರೆ ನಾನು ಬಹಳ ಹೆಚ್ಚು ಒಳಿತುಗಳನ್ನು ಸಂಪಾದಿಸುತ್ತಿದ್ದೆ ಹಾಗೂ ಕೆಡುಕು ನನ್ನನ್ನು ಸ್ಪರ್ಶಿಸುತ್ತಿರಲೇ ಇಲ್ಲ. ನಾನು ವಿಶ್ವಾಸಿಗಳಾದ ಜನರಿಗೆ ಕೇವಲ ಒಬ್ಬ ಮುನ್ನೆಚ್ಚರಿಕೆಗಾರ ಹಾಗೂ ಶುಭವಾರ್ತೆ ಅರುಹುವವನಾಗಿದ್ದೇನೆ.'

قُل لَّآ أَمْلِكُ لِنَفْسِى نَفْعًا وَلَا ضَرًّا إِلَّا مَا شَآءَ ٱللَّهُ ۚ وَلَوْ كُنتُ أَعْلَمُ ٱلْغَيْبَ لَٱسْتَكْثَرْتُ مِنَ ٱلْخَيْرِ وَمَا مَسَّنِىَ ٱلسُّوٓءُ ۚ إِنْ أَنَا۠ إِلَّا نَذِيرٌ وَبَشِيرٌ لِّقَوْمٍ يُؤْمِنُونَ ١٨٩

**190.** ಅವನು (ಅಲ್ಲಾಹನು) ನಿಮ್ಮನ್ನು ಒಂದೇ ಜೀವಾಳದಿಂದ ಸೃಷ್ಟಿಸಿರುವನು. ಆದರಿಂದಲೇ ಅವನು ಅದರ ಇಣೆಯನ್ನೂ ಉಂಟುಮಾಡಿದನು - ಅವನು (ಪುರುಷನು) ಅವಳೊಂದಿಗೆ ತೃಪ್ತಿಪಡೆಯಲಿಕ್ಕಾಗಿ. ಹಾಗೆ ಅವನು ಅವಳನ್ನು ಆವರಿಸಿಕೊಂಡಾಗ ಅವಳು ಲಘುವಾದ ಒಂದು ಭಾರವನ್ನು ವಹಿಸಿಕೊಂಡಳು. ಹಾಗೆ ಅದನ್ನು ಹೊತ್ತುಕೊಂಡು ಅವಳು ನಡೆದಾಡಿದಳು. ಅನಂತರ ಅವಳ ಭಾರ ಹೆಚ್ಚಿದಾಗ ಆವರೀರ್ವರೂ ತಮ್ಮ ಪ್ರಭುವಾದ ಅಲ್ಲಾಹನಿಗೆ ಮೊರೆಯಿಟ್ಟರು: 'ನೀನು ನಮಗೆ ಒಂದು ಉತ್ತಮ ಸಂತಾನವನ್ನು ನೀಡಿದರೆ ಖಂಡಿತವಾಗಿಯೂ ನಾವು ಕೃತಜ್ಞರಾಗುವೆವು.'

هُوَ ٱلَّذِى خَلَقَكُم مِّن نَّفْسٍ وَٰحِدَةٍ وَجَعَلَ مِنْهَا زَوْجَهَا لِيَسْكُنَ إِلَيْهَا ۖ فَلَمَّا تَغَشَّىٰهَا حَمَلَتْ حَمْلًا خَفِيفًا فَمَرَّتْ بِهِۦ ۖ فَلَمَّآ أَثْقَلَت دَّعَوَا ٱللَّهَ رَبَّهُمَا لَئِنْ ءَاتَيْتَنَا صَٰلِحًا لَّنَكُونَنَّ مِنَ ٱلشَّٰكِرِينَ ١٩٠

252A. ಅತಿಕರ್ಮಿಗಳಿಗೆ ಅಲ್ಲಾಹನು ಮಾರ್ಗದರ್ಶನ ನೀಡುವುದಿಲ್ಲ. ಪಶ್ಚಾತ್ತಾಪಪಡುವವರಿಗೆ ಮಾರ್ಗದರ್ಶನ ನೀಡುತ್ತಾನೆ.





**191.** ಆದರೆ, ಅಲ್ಲಾಹನು ಅವರಿಗೆ ಒಂದು ಉತ್ತಮ ಮಗುವನ್ನು ನೀಡಿದಾಗ, ಅವರಿಬ್ಬರಿಗೂ ಅವನು ನೀಡಿದ ಕೊಡುಗೆಯಲ್ಲಿ ಅವರು ಅವನಿಗೆ ಸಹಭಾಗಿಗಳನ್ನು ಕಲ್ಪಿಸಿದರು. ಅಲ್ಲಾಹನಾದರೋ ಅವರು ಕಲ್ಪಿಸುವ ಸಹಭಾಗಿಗಳಿಗಿಂತೆಲ್ಲ ಮಹೋನ್ನತನು.

فَلَمَّآ ءَاتَىٰهُمَا صَٰلِحًا جَعَلَا لَهُۥ شُرَكَآءَ فِيمَآ ءَاتَىٰهُمَا ۚ فَتَعَٰلَى ٱللَّهُ عَمَّا يُشْرِكُونَ ١٩١

**192.** ಏನನ್ನೂ ಸೃಷ್ಟಿಸದೆ ಸ್ವತಃ ಸೃಷ್ಟಿಸಲ್ಪಟ್ಟವರನ್ನು ಅವರು (ಅಲ್ಲಾಹನಿಗೆ) ಸಹಭಾಗಿ ಮಾಡುತ್ತಾರೇನು?

أَيُشْرِكُونَ مَا لَا يَخْلُقُ شَيْـًٔا وَهُمْ يُخْلَقُونَ ١٩٢

**193.** ಅವರು ಅವರಿಗೆ (ಆರಾಧಕರಿಗೆ) ಏನೂ ಸಹಾಯ ಮಾಡಲು ಶಕ್ತರಲ್ಲ. ಅವರು ಸ್ವಯಂ ಸಹಾಯ ಮಾಡಲೂ ಸಮರ್ಥರಲ್ಲ.

وَلَا يَسْتَطِيعُونَ لَهُمْ نَصْرًا وَلَآ أَنفُسَهُمْ يَنصُرُونَ ١٩٣

**194.** ನೀವು ಅವರನ್ನು ಸತ್ಪಥದೆಡೆಗೆ ಕರೆದರೆ ಅವರು ನಿಮ್ಮನ್ನು ಅನುಸರಿಸಲಾರರು. ನೀವು ಅವರನ್ನು ಕರೆಯುವುದು ಅಥವಾ ಮೌನವಾಗಿರುವುದು ಎರಡೂ ನಿಮ್ಮ ಮಟ್ಟಿಗೆ ಸಮಾನ.

وَإِن تَدْعُوهُمْ إِلَى ٱلْهُدَىٰ لَا يَتَّبِعُوكُمْ ۚ سَوَآءٌ عَلَيْكُمْ أَدَعَوْتُمُوهُمْ أَمْ أَنتُمْ صَٰمِتُونَ ١٩٤

**195.** ಅಲ್ಲಾಹನನ್ನು ಬಿಟ್ಟು ನೀವು ಯಾರನ್ನು ಕರೆದು ಪ್ರಾರ್ಥಿಸುತ್ತೀರೋ ದಿಟವಾಗಿಯೂ ಅವರು ನಿಮ್ಮ ಹಾಗಿರುವ ದಾಸರು ಮಾತ್ರ. ಆದ್ದರಿಂದ ನೀವು ಅವರನ್ನು ಕರೆಯಿರಿ - ನೀವು ಸತ್ಯವಂತರೆಂದಾದರೆ ಅವರು ನಿಮಗೆ ಉತ್ತರ ನೀಡಲಿ.

إِنَّ ٱلَّذِينَ تَدْعُونَ مِن دُونِ ٱللَّهِ عِبَادٌ أَمْثَالُكُمْ ۖ فَٱدْعُوهُمْ فَلْيَسْتَجِيبُوا۟ لَكُمْ إِن كُنتُمْ صَٰدِقِينَ ١٩٥

**196.** ನಡೆಯಲಿಕ್ಕೆ ಅವರಿಗೆ ಕಾಲುಗಳಿವೆಯೇ? ಅಥವಾ ಹಿಡಿದುಕೊಳ್ಳಲಿಕ್ಕೆ ಅವರಿಗೆ ಕೈಗಳಿವೆಯೇ? ಅಥವಾ ನೋಡಲಿಕ್ಕೆ ಅವರಿಗೆ ಕಣ್ಣುಗಳಿವೆಯೇ? ಅಥವಾ ಆಲಿಸಲಿಕ್ಕೆ ಅವರಿಗೆ ಕಿವಿಗಳಿವೆಯೇ? ಹೇಳು: 'ನೀವು ನಿಮ್ಮ ಸಹಭಾಗಿಗಳನ್ನು ಕರೆಯಿರಿ. ಅನಂತರ ನೀವು ನನ್ನ ವಿರುದ್ಧ ತಂತ್ರ ಹೂಡಿರಿ. ನೀವು ನನಗೆ ಕಾಲಾವಧಿ ನೀಡುವುದೂ ಬೇಕಾಗಿಲ್ಲ.

أَلَهُمْ أَرْجُلٌ يَمْشُونَ بِهَآ ۖ أَمْ لَهُمْ أَيْدٍ يَبْطِشُونَ بِهَآ ۖ أَمْ لَهُمْ أَعْيُنٌ يُبْصِرُونَ بِهَآ ۖ أَمْ لَهُمْ ءَاذَانٌ يَسْمَعُونَ بِهَا ۗ قُلِ ٱدْعُوا۟ شُرَكَآءَكُمْ ثُمَّ كِيدُونِ فَلَا تُنظِرُونِ ١٩٦

**197.** 'ಖಂಡಿತವಾಗಿಯೂ ನನ್ನ ಸಂರಕ್ಷಕ ಈ ಗ್ರಂಥವನ್ನು ಅವತೀರ್ಣಗೊಳಿಸಿದ ಅಲ್ಲಾಹ ನಾಗಿದ್ದಾನೆ. ಸಜ್ಜನರಿಗೆ ಅವನು ಸಂರಕ್ಷಣೆ ನೀಡುತ್ತಾನೆ.

إِنَّ وَلِيِّـۧيَ ٱللَّهُ ٱلَّذِي نَزَّلَ ٱلْكِتَٰبَ ۖ
وَهُوَ يَتَوَلَّى ٱلصَّٰلِحِينَ ﴿١٩٦﴾

**198.** 'ಅವನನ್ನು ಬಿಟ್ಟು ನೀವು ಯಾರನ್ನು ಕರೆದು ಪ್ರಾರ್ಥಿಸುತ್ತೀರೋ, ಅವರು ನಿಮಗೆ ಸಹಾಯಮಾಡಲು ಶಕ್ತರಲ್ಲ. ಅವರು ಸ್ವಯಂ ಸಹಾಯ ಮಾಡಲೂ ಸಮರ್ಥರಲ್ಲ.'

وَٱلَّذِينَ تَدْعُونَ مِن دُونِهِۦ لَا
يَسْتَطِيعُونَ نَصْرَكُمْ وَلَآ أَنفُسَهُمْ
يَنصُرُونَ ﴿١٩٧﴾

**199.** ನೀವು ಅವರನ್ನು ಸತ್ಪಥದೆಡೆಗೆ ಕರೆದರೆ ಅವರು ಆಲಿಸಲಾರರು. ಅವರು ನಿನ್ನೆಡೆಗೆ ನೋಡುವಂತೆ ನೀನು ಅವರನ್ನು ಕಾಣುವಿ. ಆದರೆ ಅವರು (ನಿನ್ನನ್ನು) ಕಾಣುವುದಿಲ್ಲ.

وَإِن تَدْعُوهُمْ إِلَى ٱلْهُدَىٰ لَا يَسْمَعُوا۟ ۖ
وَتَرَىٰهُمْ يَنظُرُونَ إِلَيْكَ وَهُمْ لَا
يُبْصِرُونَ ﴿١٩٨﴾

**200.** ನೀನು ಕ್ಷಮಾಶೀಲನಾಗು. ಒಳಿತನ್ನು ಉಪದೇಶಿಸು ಮತ್ತು ಅವಿವೇಕಿಗಳಿಂದ ದೂರ ಸರಿ.

خُذِ ٱلْعَفْوَ وَأْمُرْ بِٱلْعُرْفِ وَأَعْرِضْ
عَنِ ٱلْجَٰهِلِينَ ﴿١٩٩﴾

**201.** ಶೈತಾನನಿಂದ ನಿನಗೇನಾದರೂ ಪ್ರಚೋದನೆಯುಂಟಾದರೆ ನೀನು ಅಲ್ಲಾಹನ ಅಭಯಯಾಚನೆ ಮಾಡು. ಖಂಡಿತವಾಗಿಯೂ ಅವನು ಎಲ್ಲವನ್ನು ಕೇಳುವವನೂ ತಿಳಿಯುವವನೂ ಆಗಿದ್ದಾನೆ.

وَإِمَّا يَنزَغَنَّكَ مِنَ ٱلشَّيْطَٰنِ نَزْغٌ
فَٱسْتَعِذْ بِٱللَّهِ ۚ إِنَّهُۥ سَمِيعٌ عَلِيمٌ ﴿٢٠٠﴾

**202.** ಭಯಭಕ್ತಿಯುಳ್ಳವರನ್ನು ಶೈತಾನನ ಪ್ರಚೋದನೆ ಸ್ಪರ್ಶಿಸಿದರೆ ಅವರು (ಅಲ್ಲಾಹನನ್ನು) ಸ್ಮರಿಸುತ್ತಾರೆ. ಆಗ ಅವರು ಸಂಗತಿಗಳನ್ನು ಸರಿಯಾಗಿ ನೋಡುವಂತಾಗುತ್ತಾರೆ.

إِنَّ ٱلَّذِينَ ٱتَّقَوْا۟ إِذَا مَسَّهُمْ
طَيْفٌ مِّنَ ٱلشَّيْطَٰنِ تَذَكَّرُوا۟ فَإِذَا
هُم مُّبْصِرُونَ ﴿٢٠١﴾

**203.** ಅವರ (ಅವಿಶ್ವಾಸಿಗಳ) ಸಹೋದರರು ಅವರನ್ನು ದುರ್ಮಾರ್ಗದೆಡೆಗೆ ಕೊಂಡೊಯ್ಯುತ್ತಾರೆ. ಅದರಲ್ಲಿ ಅವರೇನೂ ಲೋಪಮಾಡುವುದಿಲ್ಲ.

وَإِخْوَٰنُهُمْ يَمُدُّونَهُمْ فِى ٱلْغَىِّ ثُمَّ
لَا يُقْصِرُونَ ﴿٢٠٢﴾

**204.** ನೀನು ಅವರ ಬಳಿಗೆ ಏನಾದರೊಂದು ದೃಷ್ಟಾಂತವನ್ನು ತರದಿದ್ದರೆ, 'ನೀನೇಕೆ ಅದನ್ನು

وَإِذَا لَمْ تَأْتِهِم بِـَٔايَةٍ قَالُوا۟ لَوْ





ರೂಪಗೊಳಿಸಲಿಲ್ಲ?' ಎಂದು ಅವರು ಕೇಳುವವರು[253] ಹೇಳು: 'ನನ್ನ ಪ್ರಭುವಿನಿಂದ ನನಗೆ ಅವತೀರ್ಣವಾದುದನ್ನು ಮಾತ್ರ ನಾನು ಅನುಸರಿಸುತ್ತೇನೆ. ಇದು ನಿಮ್ಮ ಪ್ರಭುವಿನಿಂದಿರುವ ಸ್ಪಷ್ಟವಾದ ಪ್ರಕಾಶವೂ ನಂಬುವ ಜನರಿಗೆ ಮಾರ್ಗದರ್ಶನವೂ ಕಾರುಣ್ಯವೂ ಆಗಿದೆ.'

لَا ٱجْتَبَيْتَهَا ۚ قُلْ إِنَّمَآ أَتَّبِعُ مَا يُوحَىٰٓ
إِلَىَّ مِن رَّبِّى ۚ هَٰذَا بَصَآئِرُ مِن رَّبِّكُمْ
وَهُدًى وَرَحْمَةٌ لِّقَوْمٍ يُؤْمِنُونَ ﴿٢٠٣﴾

**205.** ಖುರ್‌ಆನ್ ಪಠಿಸಲ್ಪಡುವಾಗ, ಅದನ್ನು ಲಕ್ಷ್ಯವಿಟ್ಟು ಆಲಿಸಿರಿ ಮತ್ತು ಮೌನವಾಗಿರಿ- ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕಾಗಿ.

وَإِذَا قُرِئَ ٱلْقُرْءَانُ فَٱسْتَمِعُوا۟ لَهُۥ وَ
أَنصِتُوا۟ لَعَلَّكُمْ تُرْحَمُونَ ﴿٢٠٤﴾

**206.** ನಿನ್ನ ಪ್ರಭುವನ್ನು ನಿನ್ನ ಮನಸ್ಸಿನಲ್ಲಿ ವಿನಮ್ರವಾಗಿಯೂ ಭಯಭರಿತವಾಗಿಯೂ ಮೆಲು ಧ್ವನಿಯಲ್ಲಿಯೂ ಮುಂಜಾವ ಮತ್ತು ಮುಸ್ಸಂಜೆ ಗಳಲ್ಲಿ ಸ್ಮರಿಸು. ನೀನು ಅಸಡ್ಡೆ ಮಾಡುವವರ ಪೈಕಿಯವನಾಗಬೇಡ.

وَٱذْكُر رَّبَّكَ فِى نَفْسِكَ تَضَرُّعًا وَ
خِيفَةً وَدُونَ ٱلْجَهْرِ مِنَ ٱلْقَوْلِ بِٱلْغُدُوِّ
وَٱلْءَاصَالِ وَلَا تَكُن مِّنَ ٱلْغَٰفِلِينَ ﴿٢٠٥﴾

**207.** ದಿಟವಾಗಿಯೂ ನಿನ್ನ ಪ್ರಭುವಿಗೆ ಸಮೀಪವಾಗಿರುವವರು ದುರಂಹಕಾರದಲ್ಲಿ ಅವನ ಆರಾಧನೆಯಿಂದ ದೂರ ಸರಿಯುವುದಿಲ್ಲ. ಅವರು ಅವನ ಸ್ತುತಿಗಾನ ಮಾಡುತ್ತಾರೆ ಹಾಗೂ ಅವನಿಗೆ ಸಾಷ್ಟಾಂಗ ವೆರಗುತ್ತಾರೆ.

إِنَّ ٱلَّذِينَ عِندَ رَبِّكَ لَا يَسْتَكْبِرُونَ
عَنْ عِبَادَتِهِۦ وَيُسَبِّحُونَهُۥ وَلَهُۥ
يَسْجُدُونَ ۩ ﴿٢٠٦﴾ السجدة

253. ದೃಷ್ಟಾಂತ ಕಾಣಲು ತಡವಾದರೆ ವಿರೋಧಿಗಳು ಗುಲ್ಲೆಬ್ಬಿಸುವರು ಎಂದು ತಾತ್ಪರ್ಯ.

سُوْرَةُ الْاَنْفَالِ مَدَنِيَّةٌ وَّهِيَ مَعَ الْبَسْمَلَةِ سِتٌّ وَّسَبْعُوْنَ اٰيَةً وَّعَشْرُ رُكُوْعَاتٍ

# 8. ಅಲ್‌ಅನ್‌ಫಾಲ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 76 ಆಯತ್‌ಗಳು ಹಾಗೂ 10 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. 'ಅನ್ ಫಾಲ್' ನ [254] ಬಗ್ಗೆ ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಅನ್‌ಫಾಲ್ ಅಲ್ಲಾಹನಿಗೆ ಮತ್ತು ಅವನ ಸಂದೇಶವಾಹಕನಿಗೆ ಸೇರಿದ್ದು. ಆದ್ದರಿಂದ ನೀವು ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ ಹಾಗೂ ನಿಮ್ಮ ಮಧ್ಯೆ ಪರಸ್ಪರ ಸಂಬಂಧವನ್ನು ಉತ್ತಮಗೊಳಿಸಿರಿ. ನೀವು ಸತ್ಯವಿಶ್ವಾಸಿಗಳೆಂದಾದರೆ ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಅನುಸರಿಸಿರಿ.'**

يَسْـَٔلُوْنَكَ عَنِ الْاَنْفَالِ ؕ قُلِ الْاَنْفَالُ لِلّٰهِ وَ الرَّسُوْلِ ۚ فَاتَّقُوا اللّٰهَ وَ اَصْلِحُوْا ذَاتَ بَيْنِكُمْ ۪ وَاَطِيْعُوا اللّٰهَ وَرَسُوْلَهٗۤ اِنْ كُنْتُمْ مُّؤْمِنِيْنَ ②

**3. ನಿಜವಾದ ಸತ್ಯವಿಶ್ವಾಸಿಗಳು ಯಾರೆಂದರೆ, ಅಲ್ಲಾಹನ ಕುರಿತು ಹೇಳಲ್ಪಡುವಾಗ ಅವರ ಹೃದಯಗಳು ಭಯ ಕಂಪಿತವಾಗುತ್ತವೆ. ಅವನ ವಚನಗಳನ್ನು ಅವರಿಗೆ ಓದಿ ಹೇಳುವಾಗ ಅದು ಅವರ ವಿಶ್ವಾಸವನ್ನು ವೃದ್ಧಿಗೊಳಿಸುತ್ತದೆ. ಅವರು ತಮ್ಮ ಪ್ರಭುವಿನ ಮೇಲೆ ಪೂರ್ಣ ಭರವಸೆಯನ್ನಿಟ್ಟಿರುತ್ತಾರೆ.**

اِنَّمَا الْمُؤْمِنُوْنَ الَّذِيْنَ اِذَا ذُكِرَ اللّٰهُ وَجِلَتْ قُلُوْبُهُمْ وَاِذَا تُلِيَتْ عَلَيْهِمْ اٰيٰتُهٗ زَادَتْهُمْ اِيْمَانًا وَّ عَلٰى رَبِّهِمْ يَتَوَكَّلُوْنَ ③

**4. ಅವರು ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ ಹಾಗೂ ಅವರಿಗೆ ನಾವು ಏನನ್ನೂ ನೀಡಿರುವೆವೋ ಅದರಿಂದ ಅವರು ಖರ್ಚುಮಾಡುತ್ತಾರೆ.**

الَّذِيْنَ يُقِيْمُوْنَ الصَّلٰوةَ وَ مِمَّا رَزَقْنٰهُمْ يُنْفِقُوْنَ ④

**5. ಅವರೇ ನಿಜವಾದ ಸತ್ಯ ವಿಶ್ವಾಸಿಗಳು. ಅವರಿಗೆ ತಮ್ಮ ಪ್ರಭುವಿನ ಬಳಿ ಸ್ಥಾನಮಾನ, ಕ್ಷಮಾದಾನ ಮತ್ತು ಗೌರವಾರ್ಹ ಆಹಾರವಿದೆ.**

اُولٰٓئِكَ هُمُ الْمُؤْمِنُوْنَ حَقًّا ؕ لَهُمْ دَرَجٰتٌ عِنْدَ رَبِّهِمْ وَ مَغْفِرَةٌ وَّ رِزْقٌ كَرِيْمٌ ⑤

254. ಯುದ್ಧದಲ್ಲಿ ಶತ್ರುಗಳಿಂದ ಸ್ವಾಧೀನಪಡಿಸಿದ ಸಂಪತ್ತು.





**6. ಸತ್ಯವಿಶ್ವಾಸಿಗಳಲ್ಲಿ ಒಂದು ಗುಂಪು ಇಷ್ಟಪಡುತ್ತಿರಲಿಲ್ಲವಾದರೂ ನಿನ್ನ ಪ್ರಭು ನಿನ್ನನ್ನು ಒಂದು ಮಹತ್ತರ ಉದ್ದೇಶಕ್ಕೋಸ್ಕರ ನಿನ್ನ ಮನೆಯಿಂದ ಹೊರಗೆ ತಂದ ಕಾರಣವಾಗಿ** (ಅವನು ತನ್ನ ಭಕ್ತ ದಾಸರಿಗೆ ಸ್ಥಾನಮಾನವನ್ನೂ ಗೌರವಾರ್ಹ ಜೀವನಾಧಾರವನ್ನೂ ನೀಡುವನು).

كَمَاۤ اَخْرَجَكَ رَبُّكَ مِنْۢ بَيْتِكَ بِالْحَقِّ ۪ وَاِنَّ فَرِيْقًا مِّنَ الْمُؤْمِنِيْنَ لَكٰرِهُوْنَ ⑥

**7. ಸತ್ಯ ಬಹಿರಂಗಗೊಂಡ ನಂತರ ಆ ಬಗ್ಗೆ ಅವರು ನಿನ್ನೊಡನೆ ವಿವಾದ ಮಾಡುತ್ತಾರೆ- ಅವರು ಕಾಣುತ್ತಿರುವಂತೆಯೇ ಮರಣದೆಡೆಗೆ ಅವರನ್ನು ಕೊಂಡೊಯ್ಯುತ್ತಿರುವ ಹಾಗೆ.**

يُجَادِلُوْنَكَ فِي الْحَقِّ بَعْدَ مَا تَبَيَّنَ كَاَنَّمَا يُسَاقُوْنَ اِلَى الْمَوْتِ وَ هُمْ يَنْظُرُوْنَ ⑦

**8. ಎರಡು ಪಂಗಡಗಳಲ್ಲಿ[255] ಒಂದನ್ನು ಅಲ್ಲಾಹನು ನಿಮಗೆ** (ಅಧೀನಗೊಳಿಸುವನೆಂದು) **ವಚನವಿತ್ತ ಸಂದರ್ಭ** (ಜ್ಞಾಪಿಸಿರಿ). **ನಿರಾಯುಧರಾದ ವ್ಯಾಪಾರಿ ತಂಡ ನಿಮಗೆ** (ಎದುರಿಸಲು) **ಸಿಗಲಿ ಎಂದು ನೀವು ಬಯಸಿದಿರಿ. ಆದರೆ ತನ್ನ ವಿಧಿಗಳ ಮೂಲಕ ಸತ್ಯವನ್ನು ಸ್ಥಾಪಿಸಲಿಕ್ಕೂ ಅವಿಶ್ವಾಸಿಗಳನ್ನು ನಿರ್ಮೂಲನ ಮಾಡಲಿಕ್ಕೂ ಅಲ್ಲಾಹನು ಬಯಸಿದ್ದನು.**

وَاِذْ يَعِدُكُمُ اللّٰهُ اِحْدَى الطَّآئِفَتَيْنِ اَنَّهَا لَكُمْ وَ تَوَدُّوْنَ اَنَّ غَيْرَ ذَاتِ الشَّوْكَةِ تَكُوْنُ لَكُمْ وَ يُرِيْدُ اللّٰهُ اَنْ يُّحِقَّ الْحَقَّ بِكَلِمٰتِهٖ وَ يَقْطَعَ دَابِرَ الْكٰفِرِيْنَ ⑧

**9. ಇದು ಸತ್ಯವನ್ನು ನೆಲೆಗೊಳಿಸಲಿಕ್ಕೂ ಅಸತ್ಯದ ಮೂಲೋತ್ಪಾಟನೆ ಮಾಡಲಿಕ್ಕೂ ಆಗಿದೆ. ಅಪರಾಧಿಗಳು ಅದನ್ನು ಇಷ್ಟಪಡದಿದ್ದರೂ ಸರಿ.**

لِيُحِقَّ الْحَقَّ وَ يُبْطِلَ الْبَاطِلَ وَلَوْ كَرِهَ الْمُجْرِمُوْنَ ⑨

**10. ನಿಮ್ಮ ಪ್ರಭುವಿನೊಡನೆ ನೀವು ಸಹಾಯವನ್ನು ಬೇಡುತ್ತಿದ್ದ ಸಂದರ್ಭ** (ಜ್ಞಾಪಿಸಿರಿ). **ಆಗ ಅವನು, 'ಖಂಡಿತವಾಗಿಯೂ ಒಬ್ಬರ ನಂತರ ಇನ್ನೊಬ್ಬರಂತೆ ಬರುವ ಸಾವಿರ ದೇವದೂತರ** (ಮಲಾಇಕ್) **ಮೂಲಕ ನಾನು ನಿಮಗೆ ಸಹಾಯ ಮಾಡುವೆನು' ಎಂದು ಉತ್ತರ ನೀಡಿದನು.**

اِذْ تَسْتَغِيْثُوْنَ رَبَّكُمْ فَاسْتَجَابَ لَكُمْ اَنِّيْ مُمِدُّكُمْ بِاَلْفٍ مِّنَ الْمَلٰٓئِكَةِ مُرْدِفِيْنَ ⑩

**11. ಒಂದು ಶುಭವಾರ್ತೆಯೆಂಬಂತೆ ಹಾಗೂ ಆ ಮೂಲಕ ನಿಮ್ಮ ಹೃದಯಗಳಿಗೆ ನೆಮ್ಮದಿಯುಂಟಾಗಲಿಕ್ಕಾಗಿ ಮಾತ್ರ ಅಲ್ಲಾಹನು ಅದನ್ನು ನಿಮಗೆ**

وَمَا جَعَلَهُ اللّٰهُ اِلَّا بُشْرٰى وَلِتَطْمَئِنَّ بِهٖ قُلُوْبُكُمْ ۚ وَمَا النَّصْرُ اِلَّا مِنْ عِنْدِ

255. ಶಸ್ತ್ರಸಜ್ಜಿತರಾದ ಮಕ್ಕದ ಸೈನ್ಯ ಮತ್ತು ಉತ್ತರ ಭಾಗದಿಂದ ಮಕ್ಕದ ಕಡೆಗೆ ಹಿಂದಿರುಗುತ್ತಿರುವ, ಲಘು ಶಸ್ತ್ರಗಳನ್ನು ಹೊಂದಿದ ವ್ಯಾಪಾರಿ ಸಂಘ.

ಒದಗಿಸಿದನು. ಅಲ್ಲಾಹನಿಂದ ಮಾತ್ರ ನೆರವು ಸಿಗುತ್ತದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

اللّٰهِ ۚ اِنَّ اللّٰهَ عَزِيْزٌ حَكِيْمٌ ﴿١١﴾

**12.** ತನ್ನಿಂದ ರಕ್ಷಣೆಯ ರೂಪದಲ್ಲಿ ನಿಮ್ಮನ್ನು ನಿದ್ರೆ ಆವರಿಸುವಂತೆ ಅವನು ಮಾಡಿದಾಗಲೂ ಹಾಗೂ ನಿಮ್ಮನ್ನು ಶುದ್ಧೀಕರಿಸಲಿಕ್ಕೆ, ಶೈತಾನನ ಮಾಲಿನ್ಯವನ್ನು[256] ನಿಮ್ಮಿಂದ ದೂರ ಮಾಡಲಿಕ್ಕೆ, ನಿಮ್ಮ ಹೃದಯಗಳನ್ನು ಬಲಪಡಿಸಲಿಕ್ಕೆ ಮತ್ತು (ನಿಮ್ಮ) ಪಾದಗಳನ್ನು ಭದ್ರಪಡಿಸಲಿಕ್ಕೆ ಅವನು ನಿಮಗೆ ಮೋಡಗಳಿಂದ ಮಳೆಸುರಿಯುವಂತೆ[257] ಮಾಡಿದಾಗಲೂ (ಈ ದೃಷ್ಟಾಂತ ಗೋಚರವಾಯಿತು).

اِذْ يُغَشِّيْكُمُ النُّعَاسَ اَمَنَةً مِّنْهُ وَيُنَزِّلُ عَلَيْكُمْ مِّنَ السَّمَآءِ مَآءً لِّيُطَهِّرَكُمْ بِهٖ وَيُذْهِبَ عَنْكُمْ رِجْزَ الشَّيْطٰنِ وَلِيَرْبِطَ عَلٰى قُلُوْبِكُمْ وَيُثَبِّتَ بِهِ الْاَقْدَامَ ﴿١٢﴾

**13.** ಆಗ ನಿನ್ನ ಪ್ರಭು ದೇವದೂತರಿಗೆ ಸಂದೇಶವನ್ನು ಅರುಹಿದನು : 'ಖಂಡಿತವಾಗಿಯೂ ನಾನು ನಿಮ್ಮೊಂದಿಗಿದ್ದೇನೆ; ಆದ್ದರಿಂದ ನೀವು ಸತ್ಯವಿಶ್ವಾಸಿಗಳಿಗೆ ಸ್ಥೈರ್ಯ ನೀಡಿರಿ. ಅವಿಶ್ವಾಸಿಗಳ ಹೃದಯಗಳಲ್ಲಿ ನಾನು ಭಯ ಹುಟ್ಟಿಸುತ್ತೇನೆ. ನೀವು ಅವರ ಕಂಠಗಳ ಮೇಲೆ ಹೊಡೆಯಿರಿ ಮತ್ತು ಎಲ್ಲ ಬೆರಳ ತುದಿಗಳನ್ನೂ ಕತ್ತರಿಸಿರಿ.'

اِذْ يُوْحِيْ رَبُّكَ اِلَى الْمَلٰٓئِكَةِ اَنِّيْ مَعَكُمْ فَثَبِّتُوا الَّذِيْنَ اٰمَنُوْا ۚ سَاُلْقِيْ فِيْ قُلُوْبِ الَّذِيْنَ كَفَرُوا الرُّعْبَ فَاضْرِبُوْا فَوْقَ الْاَعْنَاقِ وَاضْرِبُوْا مِنْهُمْ كُلَّ بَنَانٍ ﴿١٣﴾

**14.** ಅದು ಅವರು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ವಿರೋಧಿಸಿದ ಕಾರಣದಿಂದಾಗಿದೆ. ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಯಾರು ವಿರೋಧಿಸುತ್ತಾರೋ, ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನು (ಎಂದು ಅವರು ತಿಳಿದುಕೊಳ್ಳಲಿ).

ذٰلِكَ بِاَنَّهُمْ شَآقُّوا اللّٰهَ وَرَسُوْلَهٗ ۚ وَمَنْ يُّشَاقِقِ اللّٰهَ وَرَسُوْلَهٗ فَاِنَّ اللّٰهَ شَدِيْدُ الْعِقَابِ ﴿١٤﴾

**15.** ಅದಾಗಿದೆ (ನಿಮ್ಮ ಶಿಕ್ಷೆ). ಆದ್ದರಿಂದ ಅದನ್ನು ಅನುಭವಿಸಿರಿ. ಖಂಡಿತವಾಗಿಯೂ ಅವಿಶ್ವಾಸಿಗಳಿಗೆ ನರಕ ಶಿಕ್ಷೆಯಿದೆಯೆಂದೂ ತಿಳಿದುಕೊಳ್ಳಿರಿ.

ذٰلِكُمْ فَذُوْقُوْهُ وَاَنَّ لِلْكٰفِرِيْنَ عَذَابَ النَّارِ ﴿١٥﴾

256. ಶೈತಾನನ ಮಾಲಿನ್ಯ ಮನಸ್ಸಿನಲ್ಲುಂಟಾಗುವ ಭಯ.

257. ಬದ್ರ್ ಯುದ್ಧ ಕಾಲದಲ್ಲಿ ಅನಿರೀಕ್ಷಿತವಾಗಿ ಮಳೆ ಸುರಿದಾಗ ಮುಸ್ಲಿಮರ ಕಡೆಯಲ್ಲಿದ್ದ ಮರಳು ಭೂಮಿ ಅವರಿಗೆ ಅನುಕೂಲವಾಗುವಂತೆ ಗಟ್ಟಿಯಾಯಿತು. ಅದೇ ಸಂದರ್ಭದಲ್ಲಿ ಅವಿಶ್ವಾಸಿಗಳ ಕಡೆಯಲ್ಲಿದ್ದ ತಗ್ಗು ನೆಲ ಮಳೆಯ ಕಾರಣದಿಂದ ಕೆಸರಾಗಿ ಮಾರ್ಪಟ್ಟು ಅವಿಶ್ವಾಸಿಗಳ ಕಾಲುಗಳು ಕೆಸರಿನಲ್ಲಿ ಜಾರುತ್ತಿದ್ದ ನಿಮಿತ್ತ ಅವರಿಗೆ ಅದು ಪ್ರತಿಕೂಲವಾಯಿತು.





**16.** ಎಲ್ಲೈ ಸತ್ಯವಿಶ್ವಾಸಿಗಳೇ, ನೀವು ಅವಿಶ್ವಾಸಿಗಳನ್ನು, ಅವರು ಯುದ್ಧಸನ್ನದ್ಧರಾಗಿ ಮುನ್ನುಗ್ಗುತ್ತಿರುವುದಾಗಿ ಕಂಡಾಗ ಅವರಿಗೆ ಬೆನ್ನು ತೋರಿಸಬೇಡಿರಿ.

يٰٓاَيُّهَا الَّذِيْنَ اٰمَنُوْٓا اِذَا لَقِيْتُمُ الَّذِيْنَ كَفَرُوْا زَحْفًا فَلَا تُوَلُّوْهُمُ الْاَدْبَارَ ﴿١٦﴾

**17.** ಸೇನಾ ಚಾಲನೆಗೋಸ್ಕರ ಅಥವಾ ಸೈನ್ಯದ ಬೇರೊಂದು ಗುಂಪನ್ನು ಸೇರಲಿಕ್ಕಾಗಿ ಹೊರತು ಯಾರಾದರೂ ಅವರಿಗೆ ಬೆನ್ನು ತೋರಿಸುವುದಾದರೆ ಖಂಡಿತವಾಗಿಯೂ ಅವನು ಅಲ್ಲಾಹನ ಕೋಪವನ್ನು ತನ್ನ ಮೇಲೆ ಸೆಳೆದುಕೊಳ್ಳುತ್ತಾನೆ. ಅವನ ವಾಸಸ್ಥಳ ನರಕವಾಗುವುದು-ಅತಿ ನಿಕೃಷ್ಟವಾದ ಸ್ಥಳ.

وَمَنْ يُّوَلِّهِمْ يَوْمَئِذٍ دُبُرَهٗٓ اِلَّا مُتَحَرِّفًا لِّقِتَالٍ اَوْ مُتَحَيِّزًا اِلٰى فِئَةٍ فَقَدْ بَآءَ بِغَضَبٍ مِّنَ اللّٰهِ وَمَاْوٰىهُ جَهَنَّمُ ۗ وَبِئْسَ الْمَصِيْرُ ﴿١٧﴾

**18.** (ವಾಸ್ತವವೇನೆಂದರೆ) ನೀವು ಅವರನ್ನು ಕೊಲ್ಲಲಿಲ್ಲ. ಬದಲು, ಅಲ್ಲಾಹನು ಅವರನ್ನು ಕೊಂದಿದ್ದಾನೆ. ನೀನು ಎಸೆದಾಗ ನೀನಲ್ಲ ಎಸೆದದ್ದು, ಬದಲು ಅಲ್ಲಾಹನು ಎಸೆದದ್ದು-[258] ಆ ಮೂಲಕ ಅವನು (ಶತ್ರುಗಳನ್ನು ಪರಾಭಯಗೊಳಿಸಿ) ಸತ್ಯವಿಶ್ವಾಸಿಗಳನ್ನು ತನ್ನ ಕಡೆಯಿಂದ ಒಂದು ಉತ್ತಮ ಪರೀಕ್ಷೆಗೊಳಪಡಿಸಲಿಕ್ಕಾಗಿ. ನಿಸ್ಸಂದೇಹವಾಗಿಯೂ ಅಲ್ಲಾಹನು ಎಲ್ಲವನ್ನು ಕೇಳುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

فَلَمْ تَقْتُلُوْهُمْ وَلٰكِنَّ اللّٰهَ قَتَلَهُمْ ۪ وَمَا رَمَيْتَ اِذْ رَمَيْتَ وَلٰكِنَّ اللّٰهَ رَمٰى ۚ وَلِيُبْلِيَ الْمُؤْمِنِيْنَ مِنْهُ بَلَآءً حَسَنًا ۗ اِنَّ اللّٰهَ سَمِيْعٌ عَلِيْمٌ ﴿١٨﴾

**19.** ಅದಾಗಿತ್ತು (ಘಟನೆ). ಖಂಡಿತವಾಗಿಯೂ ಅಲ್ಲಾಹನು ಅವಿಶ್ವಾಸಿಗಳ ಕುತಂತ್ರವನ್ನು ನಿಷ್ಫಲಗೊಳಿಸುವವನಾಗಿದ್ದಾನೆ (ಎಂದು ಅರಿತುಕೊಳ್ಳಿರಿ).

ذٰلِكُمْ وَاَنَّ اللّٰهَ مُوْهِنُ كَيْدِ الْكٰفِرِيْنَ ﴿١٩﴾

**20.** ನೀವು ವಿಜಯ (ದೃಷ್ಟಾಂತ)ವನ್ನು ಬಯಸುವುದಾದರೆ ಖಂಡಿತವಾಗಿಯೂ ನಿಮ್ಮಲ್ಲಿ ಅರ್ಹರಾದವರಿಗೆ ವಿಜಯ (ದೃಷ್ಟಾಂತ) ಬಂದೊದಗಿದೆ. ನೀವು (ಅಕ್ರಮವೆಸಗದೆ) ನಿಮ್ಮನ್ನು ತಡೆದಿಟ್ಟುಕೊಂಡರೆ ಅದು ನಿಮಗೆ ಉತ್ತಮ. ನೀವು (ಯುದ್ಧಕ್ಕೆ) ಮರಳುವಿರಾದರೆ ನಾವು ಸಹ (ಅದಕ್ಕೆ) ಮರಳುವೆವು.

اِنْ تَسْتَفْتِحُوْا فَقَدْ جَآءَكُمُ الْفَتْحُ ۚ وَاِنْ تَنْتَهُوْا فَهُوَ خَيْرٌ لَّكُمْ ۚ وَاِنْ تَعُوْدُوْا نَعُدْ ۚ وَلَنْ تُغْنِيَ عَنْكُمْ

258. ಬದ್ರ್ ಯುದ್ಧ ಸಂದರ್ಭದಲ್ಲಿ ಪೈಗಂಬರ್(ಸ) ಒಂದು ಹಿಡಿ ಮರಳನ್ನು ಶತ್ರುಗಳಿಗೆ ಎರಚಿದ್ದರು. ಆಗ ಶತ್ರುಗಳಿಗೆ ಅಭಿಮುಖವಾಗಿ ಬಲವಾದ ಗಾಳಿ ಬೀಸಿತು. ಅದರ ಕಾರಣದಿಂದ ಶತ್ರುಗಳ ಕಣ್ಣುಗಳಿಗೆ ಮರಳು ಬಂದು ಬಿದ್ದು ಅವರ ಎದುರಿಗಿರುವುದನ್ನು ಕಾಣಲು ಅವರಿಗೆ ಅಸಾಧ್ಯವಾಯಿತು. ಇಲ್ಲಿ ಅದನ್ನೇ ಸೂಚಿಸಲಾಗಿದೆ.

ನಿಮ್ಮ ಸಂಖ್ಯೆ ಎಷ್ಟು ಹೆಚ್ಚಾದರೂ ಅದು ನಿಮಗೆ ಪ್ರಯೋಜನವಾಗಲಾರದು. ನಿಶ್ಚಯವಾಗಿಯೂ ಅಲ್ಲಾಹನು ಸದಾ ಸತ್ಯವಿಶ್ವಾಸಿಗಳ ಜೊತೆಗಿದ್ದಾನೆ (ಎಂದು ತಿಳಿದುಕೊಳ್ಳಿರಿ).

فِئَتُكُمْ شَيْئًا وَلَوْ كَثُرَتْ ۙ وَأَنَّ اللّٰهَ مَعَ الْمُؤْمِنِيْنَ ﴿٢٠﴾

**21.** ಎಲ್ಲೈ ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಅನುಸರಿಸಿರಿ. (ಅವರು ಆದೇಶಿಸುವುದನ್ನು) ನೀವು ಕೇಳುತ್ತಿದ್ದೂ ಅವರಿಂದ ಮುಖ ತಿರುಗಿಸಬೇಡಿರಿ.

يَا أَيُّهَا الَّذِيْنَ آمَنُوْا أَطِيْعُوا اللّٰهَ وَرَسُوْلَهُ وَلَا تَوَلَّوْا عَنْهُ وَأَنْتُمْ تَسْمَعُوْنَ ﴿٢١﴾

**22.** ಆಲಿಸಲಿಲ್ಲವಾದರೂ 'ನಾವು ಆಲಿಸಿದೆವು' ಎಂದು ಹೇಳಿದವರಂತೆ ನೀವು ಆಗಬೇಡಿರಿ.

وَلَا تَكُوْنُوْا كَالَّذِيْنَ قَالُوْا سَمِعْنَا وَهُمْ لَا يَسْمَعُوْنَ ﴿٢٢﴾

**23.** ನಿಶ್ಚಯವಾಗಿಯೂ ಚಿಂತನ ಮಾಡದ ಕಿವುಡರು ಮತ್ತು ಮೂಕರೇ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ನಿಕೃಷ್ಟ ಜೀವಿಗಳು.

إِنَّ شَرَّ الدَّوَابِّ عِنْدَ اللّٰهِ الصُّمُّ الْبُكْمُ الَّذِيْنَ لَا يَعْقِلُوْنَ ﴿٢٣﴾

**24.** ಅಲ್ಲಾಹನು ಅವರಲ್ಲಿ ಏನಾದರೂ ಒಳಿತನ್ನು ಕಂಡಿದ್ದರೆ ಖಂಡಿತವಾಗಿಯೂ ಅವನು ಅವರನ್ನು ಆಲಿಸುವಂತೆ ಮಾಡುತ್ತಿದ್ದನು. (ಈಗಿನ ಸ್ಥಿತಿಯಲ್ಲಿ) ಅವರನ್ನು ಆಲಿಸುವಂತೆ ಮಾಡಿದರೂ ಅವರು ಮುಖ ತಿರುಗಿಸಿ ಹೋಗುವರು.

وَلَوْ عَلِمَ اللّٰهُ فِيْهِمْ خَيْرًا لَّأَسْمَعَهُمْ ۖ وَلَوْ أَسْمَعَهُمْ لَتَوَلَّوْا وَّهُمْ مُّعْرِضُوْنَ ﴿٢٤﴾

**25.** ಎಲ್ಲೈ ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ಮತ್ತು ಸಂದೇಶವಾಹಕನಿಗೆ - ಅವರು ನಿಮ್ಮನ್ನು ಬದುಕಿಸಲಿಕ್ಕಾಗಿ[259] ಕರೆಯುವಾಗ ಓಗೊಡಿರಿ. ಖಂಡಿತವಾಗಿಯೂ ಅಲ್ಲಾಹನು ಮನುಷ್ಯನಿಗೂ ಅವನ ಹೃದಯಕ್ಕೂ ಮಧ್ಯೆ ಇದ್ದಾನೆಂದೂ ಅವನೆಡೆಗೆಯೇ ನೀವೆಲ್ಲರೂ ಒಂದುಗೂಡಿಸಲ್ಪಡುವಿರೆಂದೂ ಅರಿತು ಕೊಳ್ಳಿರಿ.

يَا أَيُّهَا الَّذِيْنَ آمَنُوا اسْتَجِيْبُوْا لِلّٰهِ وَلِلرَّسُوْلِ إِذَا دَعَاكُمْ لِمَا يُحْيِيْكُمْ ۚ وَاعْلَمُوْا أَنَّ اللّٰهَ يَحُوْلُ بَيْنَ الْمَرْءِ وَقَلْبِهِ وَأَنَّهُ إِلَيْهِ تُحْشَرُوْنَ ﴿٢٥﴾

259. ಮೃತಪಟ್ಟು ದಫನ ಮಾಡಲ್ಪಟ್ಟ ಮನುಷ್ಯರನ್ನು ಬದುಕಿಸುವುದೆಂದಲ್ಲ, ಆಧ್ಯಾತ್ಮಿಕ ಚೈತನ್ಯ ಕುಂದಿದ ಮನುಷ್ಯರಿಗೆ ಸದುಪದೇಶ ನೀಡುವ ಮೂಲಕ, ಹೊಸಜೀವವನ್ನು ಕೊಟ್ಟು ಚೈತನ್ಯಶಾಲಿಗಳನ್ನಾಗಿ ಮಾಡುವುದೆಂದಾಗಿದೆ ಮೃತರನ್ನು ಬದುಕಿಸುವುದು ಎಂಬುದರ ತಾತ್ಪರ್ಯ. ಹಝ್ರತ್ ಈಸಾ (ಅಲೈಹಿಸ್ಸಲಾಂ) ಮೃತರನ್ನು ಬದುಕಿಸಿದರೆಂದು ಖುರ್‌ಆನಿನಲ್ಲಿ ಹೇಳಿರುವುದರ ತಾತ್ಪರ್ಯ ಸಹ ಇದೇ ಆಗಿದೆ.





**26.** ನಿಮ್ಮ ಪೈಕಿ ದುಷ್ಕೃತ್ಯ ಮಾಡಿದವರನ್ನು ಮಾತ್ರವೇ ಬಾಧಿಸದೆ ನಿಮ್ಮನ್ನೂ ಬಾಧಿಸುವಂತಹ ವಿಪತ್ತಿನ ಬಗ್ಗೆ ಜಾಗರೂಕರಾಗಿರಿ. ಖಂಡಿತವಾಗಿಯೂ ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನೆಂದು ಅರಿತು ಕೊಳ್ಳಿರಿ.

وَاتَّقُوْا فِتْنَةً لَّا تُصِيْبَنَّ الَّذِيْنَ ظَلَمُوْا مِنْكُمْ خَاصَّةً ۚ وَاعْلَمُوْا أَنَّ اللّٰهَ شَدِيْدُ الْعِقَابِ ﴿٢٦﴾

**27.** ನೀವು ಅಲ್ಪಸಂಖ್ಯಾತರಾಗಿದ್ದು ರಾಜ್ಯದಲ್ಲಿ ದುರ್ಬಲರಾಗಿ ಪರಿಗಣಿಸಲ್ಪಟ್ಟಿದ್ದ ಸಂದರ್ಭ (ಜ್ಞಾಪಿಸಿರಿ). ಜನರು ನಿಮ್ಮನ್ನು ಎಗರಿಸಿಕೊಂಡು ಹೋಗುವರೋ ಎಂದು ನೀವು ಭಯಾಶಂಕಿತರಾಗಿದ್ದಿರಿ. ಆಗ ಅಲ್ಲಾಹನು ನಿಮಗೆ ಅಭಯನೀಡಿ ತನ್ನ ನೆರವಿನಿಂದ ನಿಮ್ಮನ್ನು ಶಕ್ತರನ್ನಾಗಿ ಮಾಡಿ ಉತ್ತಮ ವಸ್ತುಗಳನ್ನು ನಿಮಗೆ ಆಹಾರವಾಗಿ ಒದಗಿಸಿದನು - ನೀವು ಕೃತಜ್ಞತೆಯುಳ್ಳವರಾಗಲಿಕ್ಕೆ.

وَاذْكُرُوْا إِذْ أَنْتُمْ قَلِيْلٌ مُّسْتَضْعَفُوْنَ فِي الْأَرْضِ تَخَافُوْنَ أَنْ يَّتَخَطَّفَكُمُ النَّاسُ فَآوَاكُمْ وَأَيَّدَكُمْ بِنَصْرِهِ وَرَزَقَكُمْ مِّنَ الطَّيِّبَاتِ لَعَلَّكُمْ تَشْكُرُوْنَ ﴿٢٧﴾

**28.** ಎಲ್ಲೈ ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನಿಗೂ ಪ್ರವಾದಿಗೂ ವಿಶ್ವಾಸಘಾತ ಮಾಡಬಾರದು. ನೀವು ತಿಳಿದುಕೊಂಡೂ ನಿಮ್ಮ ವಿಶ್ವಸ್ತನಿಧಿಗಳಲ್ಲಿ ವಂಚನೆ ಮಾಡಬೇಡಿರಿ.

يَا أَيُّهَا الَّذِيْنَ آمَنُوْا لَا تَخُوْنُوا اللّٰهَ وَالرَّسُوْلَ وَتَخُوْنُوْا أَمَانَاتِكُمْ وَأَنْتُمْ تَعْلَمُوْنَ ﴿٢٨﴾

**29.** ಖಂಡಿತವಾಗಿಯೂ ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತಾನ ನಿಮಗೊಂದು ಪರೀಕ್ಷೆಯೆಂದೂ ಅಲ್ಲಾಹನ ಬಳಿಯಲ್ಲೇ ಅತಿ ದೊಡ್ಡ ಪ್ರತಿಫಲವಿದೆಯೆಂದೂ ತಿಳಿದುಕೊಳ್ಳಿರಿ.

وَاعْلَمُوْا أَنَّمَا أَمْوَالُكُمْ وَأَوْلَادُكُمْ فِتْنَةٌ ۙ وَّأَنَّ اللّٰهَ عِنْدَهُ أَجْرٌ عَظِيْمٌ ﴿٢٩﴾

**30.** ಎಲ್ಲೈ ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನಲ್ಲಿ ಭಯಭಕ್ತಿ ಇರಿಸಿಕೊಂಡರೆ, ಅವನು ನಿಮಗೆ ವೈಶಿಷ್ಟ್ಯಪೂರ್ಣ ವಿವೇಚನೆಯನ್ನು ನೀಡಿ ನಿಮ್ಮ ದೌರ್ಬಲ್ಯಗಳನ್ನು ಹೋಗಲಾಡಿಸಿ ನಿಮಗೆ ಕ್ಷಮೆನೀಡುವನು. ಅಲ್ಲಾಹನು ಮಹತ್ವಪೂರ್ಣ ಅನುಗ್ರಹಗಳ ಒಡೆಯನಾಗಿದ್ದಾನೆ.

يَا أَيُّهَا الَّذِيْنَ آمَنُوْا إِنْ تَتَّقُوا اللّٰهَ يَجْعَلْ لَّكُمْ فُرْقَانًا وَّيُكَفِّرْ عَنْكُمْ سَيِّئَاتِكُمْ وَيَغْفِرْ لَكُمْ ۗ وَاللّٰهُ ذُو الْفَضْلِ الْعَظِيْمِ ﴿٣٠﴾

**31.** ನಿನ್ನನ್ನು ಬಂಧಿಸಲು ಅಥವಾ ಕೊಲ್ಲಲು ಅಥವಾ (ಊರಿನಿಂದ) ಹೊರ ಅಟ್ಟಲು ಅವಿಶ್ವಾಸಿಗಳು ನಿನ್ನ ವಿರುದ್ಧ ಷಡ್ಯಂತ್ರ ಹೂಡಿದ ಸಂದರ್ಭ (ಜ್ಞಾಪಿಸು).

وَإِذْ يَمْكُرُ بِكَ الَّذِيْنَ كَفَرُوْا لِيُثْبِتُوْكَ أَوْ يَقْتُلُوْكَ أَوْ

ಅವರು ತಂತ್ರ ಹೂಡಿದರು. ಅಲ್ಲಾಹನೂ (ಅವರ ವಿರುದ್ಧ) ಮರುತಂತ್ರ ಹೂಡಿದನು. ಅಲ್ಲಾಹನು ತಂತ್ರಗಾರರಲ್ಲಿ ಅತ್ಯುತ್ತಮನು.

يُخْرِجُوكَ ۚ وَيَمْكُرُونَ وَيَمْكُرُ اللَّهُ ۖ وَاللَّهُ خَيْرُ الْمَاكِرِينَ

**32.** ನಮ್ಮ ಸೂಕ್ತಗಳನ್ನು ಅವರ ಮುಂದೆ ವಾಚಿಸಿದಾಗ ಅವರು, 'ನಾವು ಆಲಿಸಿದೆವು; ನಾವು ಬಯಸಿದ್ದರೆ ಇದೇ ತರದ್ದು ನಾವು ಸಹ ಹೇಳುತ್ತಿದ್ದೆವು. ಇವು ಪೂರ್ವಿಕರ ಹಳೆಯ ಕಥೆಗಳೇ ಆಗಿವೆ.' ಎಂದು ಹೇಳುತ್ತಾರೆ.

وَإِذَا تُتْلَىٰ عَلَيْهِمْ آيَاتُنَا قَالُوا قَدْ سَمِعْنَا لَوْ نَشَاءُ لَقُلْنَا مِثْلَ هَٰذَا ۙ إِنْ هَٰذَا إِلَّا أَسَاطِيرُ الْأَوَّلِينَ

**33.** ಅವರು ಹೀಗೆ ಹೇಳಿದ ಸಂದರ್ಭ (ಜ್ಞಾಪಿಸು): 'ಓ ಅಲ್ಲಾಹ್, ಇದು ನಿನ್ನ ಕಡೆಯಿಂದಿರುವ ಸತ್ಯವೆಂದಾದರೆ, ನೀನು ನಮ್ಮ ಮೇಲೆ ಆಕಾಶದಿಂದ ಶಿಲಾವೃಷ್ಟಿಯಾಗುವಂತೆ ಮಾಡು ಅಥವಾ ಯಾತನಾಮಯ ಶಿಕ್ಷೆ ನಮಗೆರಗುವಂತೆ ಮಾಡು.'[260]

وَإِذْ قَالُوا اللَّهُمَّ إِنْ كَانَ هَٰذَا هُوَ الْحَقَّ مِنْ عِنْدِكَ فَأَمْطِرْ عَلَيْنَا حِجَارَةً مِنَ السَّمَاءِ أَوِ ائْتِنَا بِعَذَابٍ أَلِيمٍ

**34.** ಆದರೆ, ನೀನು ಅವರೊಂದಿಗೆ ಇರುವಾಗ ಅಲ್ಲಾಹನು ಅವರನ್ನು ಶಿಕ್ಷಿಸುವಂತಿರಲಿಲ್ಲ. ಅವರು ಪಾಪವಿಮುಕ್ತಿಗಾಗಿ ಪ್ರಾರ್ಥಿಸುವ ಸಂದರ್ಭದಲ್ಲೂ ಅಲ್ಲಾಹನು ಅವರನ್ನು ಶಿಕ್ಷಿಸುವವನಾಗಿರಲಿಲ್ಲ.

وَمَا كَانَ اللَّهُ لِيُعَذِّبَهُمْ وَأَنْتَ فِيهِمْ ۚ وَمَا كَانَ اللَّهُ مُعَذِّبَهُمْ وَهُمْ يَسْتَغْفِرُونَ

**35.** ಆದರೆ, ಆದರಣೀಯ ಮಸ್ಜಿದ್‌ನಿಂದ (ಜನರನ್ನು) ತಡೆಯುತ್ತಿರುವಾಗ ಅಲ್ಲಾಹನು ಅವರನ್ನು ಶಿಕ್ಷಿಸದಿರಲಿಕ್ಕೆ ಅವರಲ್ಲಿ (ಒಳಿತು) ಏನಿದೆ? ಭಯಭಕ್ತಿಯನ್ನು ತೋರಿಸುವವರೇ ಅದರ (ನಿಜವಾದ) ಸಂರಕ್ಷಣಾಧಿಕಾರಿಗಳು. ಆದರೆ ಅವರಲ್ಲಿ ಹೆಚ್ಚಿನವರು (ಈ ವಿಚಾರ) ಬಲ್ಲವರಲ್ಲ.

وَمَا لَهُمْ أَلَّا يُعَذِّبَهُمُ اللَّهُ وَهُمْ يَصُدُّونَ عَنِ الْمَسْجِدِ الْحَرَامِ وَمَا كَانُوا أَوْلِيَاءَهُ ۚ إِنْ أَوْلِيَاؤُهُ إِلَّا الْمُتَّقُونَ وَلَٰكِنَّ أَكْثَرَهُمْ لَا يَعْلَمُونَ

**36.** ಆ ಗೃಹದಲ್ಲಿ ಅವರ ಪ್ರಾರ್ಥನೆ ಸಿಳ್ಳು ಹಾಕುವುದು, ಚಪ್ಪಾಳೆ ತಟ್ಟುವುದು ಹೊರತು ಬೇರೇನೂ ಅಲ್ಲ. 'ನೀವು ನಂಬದಿದ್ದ ಕಾರಣದಿಂದ ಶಿಕ್ಷೆಯನ್ನು ಅನುಭವಿಸಿರಿ' (ಎಂದು ಅವರೊಡನೆ ಹೇಳಲಾಗುವುದು).

وَمَا كَانَ صَلَاتُهُمْ عِنْدَ الْبَيْتِ إِلَّا مُكَاءً وَتَصْدِيَةً ۚ فَذُوقُوا الْعَذَابَ بِمَا كُنْتُمْ تَكْفُرُونَ

260. ಇದು ಬದ್‌ರ್ ಯುದ್ಧಕ್ಕೆ ಮುನ್ನ ಅಬೂಜಹಲ್ ಮಾಡಿದ ಪ್ರಾರ್ಥನೆಯಾಗಿತ್ತು. ಪ್ರಾರ್ಥನೆಯ ಈಡೇರಿಕೆಯಂತೆ ಯಾತನಾಮಯವಾದ ಶಿಕ್ಷೆಯಾಗಿ ಬದ್‌ರ್ ಯುದ್ಧದಲ್ಲಿ ಅಬೂಜಹಲ್ ಮತ್ತು ಅವನ ಹಲವು ಅನುಚರರು ಕೊಲ್ಲಲ್ಪಟ್ಟರು.





**37.** ಖಂಡಿತವಾಗಿಯೂ ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯಲಿಕ್ಕಾಗಿ ಅವಿಶ್ವಾಸಿಗಳು ತಮ್ಮ ಸಂಪತ್ತನ್ನು ವ್ಯಯಿಸುತ್ತಾರೆ. ಹಾಗೆ ಅವರು ವೆಚ್ಚ ಮಾಡುತ್ತಲೇ ಹೋಗುವರು. (ಆದರೆ) ನಂತರ ಅದು ಅವರ ಯಾತನೆಗೆ ಕಾರಣವಾಗುವುದು. ಆಮೇಲೆ ಅವರು ಪರಾಜಿತರಾಗುವರು. ಅವಿಶ್ವಾಸಿಗಳು ನರಕದೆಡೆಗೆ ಕೊಂಡೊಯ್ಯಲ್ಪಡುವರು.

إِنَّ الَّذِينَ كَفَرُوا يُنْفِقُونَ أَمْوَالَهُمْ لِيَصُدُّوا عَنْ سَبِيلِ اللَّهِ ۚ فَسَيُنْفِقُونَهَا ثُمَّ تَكُونُ عَلَيْهِمْ حَسْرَةً ثُمَّ يُغْلَبُونَ ۗ وَالَّذِينَ كَفَرُوا إِلَىٰ جَهَنَّمَ يُحْشَرُونَ

**38.** ಇದು ಅಲ್ಲಾಹನು ಕೆಟ್ಟದ್ದನ್ನು ಒಳ್ಳೆಯದ್ದರಿಂದ ಬೇರ್ಪಡಿಸಲಿಕ್ಕೂ ಹಾಗೆ ಕೆಟ್ಟದ್ದನ್ನು ಒಂದರ ಮೇಲೆ ಮತ್ತೊಂದನ್ನಿಟ್ಟು ಒಟ್ಟುಗೂಡಿಸಿ ರಾಶಿಮಾಡಿ ಅವನ್ನೆಲ್ಲ ನರಕಕ್ಕೆ ದೂಡಿಬಿಡಲಿಕ್ಕೂ ಆಗಿದೆ. ಇವರೇ ಹಾನಿಗೀಡಾದವರು.

لِيَمِيزَ اللَّهُ الْخَبِيثَ مِنَ الطَّيِّبِ وَيَجْعَلَ الْخَبِيثَ بَعْضَهُ عَلَىٰ بَعْضٍ فَيَرْكُمَهُ جَمِيعًا فَيَجْعَلَهُ فِي جَهَنَّمَ ۚ أُولَٰئِكَ هُمُ الْخَاسِرُونَ

**39.** ಅವಿಶ್ವಾಸಿಗಳೊಡನೆ ಹೇಳು: ಅವರು (ದುಷ್ಕೃತ್ಯಗಳನ್ನು) ತೊರೆದರೆ, ಮುಂಚೆ ಗೈದುದೆಲ್ಲ ಅವರಿಗೆ ಕ್ಷಮಿಸಲಾಗುವುದು. ಇನ್ನು ಅವರು (ಅಕ್ರಮದೆಡೆಗೇ) ಮರಳಿದರೆ, ಪೂರ್ವ ಜನಾಂಗಕ್ಕೆ ಬಂದಿದ್ದ ಸ್ಥಿತಿಯ ಉದಾಹರಣೆ ಖಂಡಿತವಾಗಿಯೂ (ಅವರ ಮುಂದೆ) ಇದೆ.

قُلْ لِلَّذِينَ كَفَرُوا إِنْ يَنْتَهُوا يُغْفَرْ لَهُمْ مَا قَدْ سَلَفَ وَإِنْ يَعُودُوا فَقَدْ مَضَتْ سُنَّتُ الْأَوَّلِينَ

**40.** 'ಫಿತ್ನ' (ಹಿಂಸಾಚಾರ)[261] ಕೊನೆಗೊಳ್ಳುವ ತನಕ ಮತ್ತು ಧರ್ಮ (ಸ್ವೀಕಾರವು) ಸಂಪೂರ್ಣವಾಗಿ ಅಲ್ಲಾಹನಿಗೋಸ್ಕರ ಆಗುವ ವರೆಗೆ ನೀವು ಅವರೊಡನೆ ಹೋರಾಡಿರಿ. ಆದರೆ ಅವರು *ಹಿಂಸೆ* ತೊರೆದರೆ, ಅವರ ವರ್ತನೆಯನ್ನು ಅಲ್ಲಾಹನು ಖಂಡಿತವಾಗಿಯೂ ಸೂಕ್ಷ್ಮಾವಲೋಕನ ಮಾಡುವವನಾಗಿದ್ದಾನೆ.

وَقَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ كُلُّهُ لِلَّهِ ۚ فَإِنِ انْتَهَوْا فَإِنَّ اللَّهَ بِمَا يَعْمَلُونَ بَصِيرٌ

**41.** ಇನ್ನು, ಅವರು ಹಿಮ್ಮೆಟ್ಟಿದರೆ, ನಿಶ್ಚಯವಾಗಿಯೂ ಅಲ್ಲಾಹನು ನಿಮ್ಮ ಸಂರಕ್ಷಕನೆಂದು ಅರಿತುಕೊಳ್ಳಿರಿ. ಅವನೇ ಅತ್ಯುತ್ತಮನಾದ ಸಂರಕ್ಷಕನು ಹಾಗೂ ಅವನೇ ಅತ್ಯುತ್ತಮನಾದ ಸಹಾಯಕನು.

وَإِنْ تَوَلَّوْا فَاعْلَمُوا أَنَّ اللَّهَ مَوْلَاكُمْ ۚ نِعْمَ الْمَوْلَىٰ وَنِعْمَ النَّصِيرُ

261. ಧಾರ್ಮಿಕ ನಂಬಿಕೆ - ಆಚಾರಗಳ ಕಾರಣದಿಂದ ಶತ್ರುಗಳು ಕೊಡುವ ಹಿಂಸೆ.

**42.** ತಿಳಿದುಕೊಳ್ಳಿರಿ, ನೀವು ಯುದ್ಧದಲ್ಲಿ ಸ್ವಾಧೀನಪಡಿಸಿದ ಸಂಪತ್ತಿನ ಐದನೇ ಒಂದು ಪಾಲು ಅಲ್ಲಾಹನಿಗೆ, ಪ್ರವಾದಿಗೆ, (ಅವರ) ನಿಕಟ ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ ಮತ್ತು ಸಂಚಾರಿಗಳಿಗಾಗಿದೆ. ಅಲ್ಲಾಹನಲ್ಲೂ ಎರಡು ಸೈನ್ಯಗಳು ಎದುರು ಬದುರಾದ (ಸತ್ಯಾಸತ್ಯ) ನಿರ್ಣಾಯಕ ದಿನದಂದು[262] ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿದುದರಲ್ಲೂ[263] ನೀವು ನಂಬಿಕೆಯಿರಿಸುವವರಾದರೆ (ಈ ಆಜ್ಞೆಯನ್ನು ಪಾಲಿಸಿರಿ). ಅಲ್ಲಾಹನು ಸರ್ವಸಾಮರ್ಥ್ಯವುಳ್ಳವನಾಗಿದ್ದಾನೆ.

وَاعْلَمُوْٓا اَنَّمَا غَنِمْتُمْ مِّنْ شَيْءٍ فَاَنَّ لِلّٰهِ خُمُسَهٗ وَلِلرَّسُوْلِ وَلِذِي الْقُرْبٰى وَالْيَتٰمٰى وَالْمَسٰكِيْنِ وَابْنِ السَّبِيْلِ ۙ اِنْ كُنْتُمْ اٰمَنْتُمْ بِاللّٰهِ وَمَآ اَنْزَلْنَا عَلٰى عَبْدِنَا يَوْمَ الْفُرْقَانِ يَوْمَ الْتَقَى الْجَمْعٰنِ ۭ وَاللّٰهُ عَلٰى كُلِّ شَيْءٍ قَدِيْرٌ ﴿٤٢﴾

**43.** ನೀವು (ಯುದ್ಧ ರಂಗದ ಕಣಿವೆಯ) ಸಮೀಪದ ಬದಿಯಲ್ಲೂ ಅವರು (ಶತ್ರುಗಳು) ದೂರದ ಬದಿಯಲ್ಲೂ ವರ್ತಕ ತಂಡ ನಿಮಗಿಂತ ಕೆಳ ಭಾಗದಲ್ಲೂ ಇದ್ದ ಸಂದರ್ಭ (ಜ್ಞಾಪಿಸಿರಿ). ನೀವು ಉಭಯ ಪಕ್ಷದವರೂ ಒಪ್ಪಿಕೊಂಡು ನಿರ್ಧರಿಸಿದ್ದರೆ ನೀವು (ಸಂಘರ್ಷದ) ನಿರ್ದಿಷ್ಟ ಸಮಯದ ಬಗ್ಗೆ ಭಿನ್ನಾಭಿಪ್ರಾಯ ತಾಳುತಿದ್ದಿರಿ. ಆದರೆ, ಅಲ್ಲಾಹನು ತಾನು ನಿರ್ಧರಿಸಿದ್ದು ನೆರವೇರುವಂತಾಗಲು ಹೀಗೆ ಸಂಭವಿಸಿತು - ದೃಷ್ಟಾಂತ ಮೂಲಕ ನಾಶಹೊಂದಬೇಕಾದವನು ನಾಶ ಹೊಂದಲಿಕ್ಕೂ ದೃಷ್ಟಾಂತ ಮೂಲಕ ಬದುಕಬೇಕಾದವನು ಬದುಕಲಿಕ್ಕೂ. ನಿಶ್ಚವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

اِذْ اَنْتُمْ بِالْعُدْوَةِ الدُّنْيَا وَهُمْ بِالْعُدْوَةِ الْقُصْوٰى وَالرَّكْبُ اَسْفَلَ مِنْكُمْ ۭ وَلَوْ تَوَاعَدْتُّمْ لَاخْتَلَفْتُمْ فِي الْمِيْعٰدِ ۙ وَلٰكِنْ لِّيَقْضِيَ اللّٰهُ اَمْرًا كَانَ مَفْعُوْلًا ڏ لِّيَهْلِكَ مَنْ هَلَكَ عَنْۢ بَيِّنَةٍ وَّيَحْيٰى مَنْ حَيَّ عَنْۢ بَيِّنَةٍ ۭ وَاِنَّ اللّٰهَ لَسَمِيْعٌ عَلِيْمٌ ﴿٤٣﴾

**44.** ನಿನ್ನ ಸ್ವಪ್ನದಲ್ಲಿ ಅಲ್ಲಾಹನು ಅವರನ್ನು ನಿನಗೆ ಕಡಿಮೆಗೊಳಿಸಿ[264] ತೋರಿಸಿದ ಸಂದರ್ಭ (ಜ್ಞಾಪಿಸು). ಅವನು ನಿನಗೆ ಅವರನ್ನು ಅಧಿಕಗೊಳಿಸಿ ತೋರಿಸಿದ್ದರೆ ನೀವು ಧೈರ್ಯಗುಂದುತ್ತಿದ್ದಿರಿ ಹಾಗೂ ಆ ವಿಚಾರದಲ್ಲಿ ಭಿನ್ನಾಭಿಪ್ರಾಯವನ್ನು ಹೊಂದುತ್ತಿದ್ದಿರಿ. ಆದರೆ ಅಲ್ಲಾಹನು ನಿಮ್ಮನ್ನು ರಕ್ಷಿಸಿದನು. ನಿಸ್ಸಂದೇಹವಾಗಿಯೂ ಅವನು ಹೃದಯಗಳಲ್ಲಿರುವ ವಿಚಾರಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.

اِذْ يُرِيْكَهُمُ اللّٰهُ فِيْ مَنَامِكَ قَلِيْلًا ۭ وَلَوْ اَرٰىكَهُمْ كَثِيْرًا لَّفَشِلْتُمْ وَلَتَنَازَعْتُمْ فِي الْاَمْرِ وَلٰكِنَّ اللّٰهَ سَلَّمَ ۭ اِنَّهٗ عَلِيْمٌۢ بِذَاتِ الصُّدُوْرِ ﴿٤٤﴾

262. ಬದ್‌ರ್ ಯುದ್ಧ ನಡೆದ ದಿನ.

263. ದೇವ ಸಹಾಯ ಮತ್ತು ಬೆಂಬಲದ ಕುರಿತು ಶುಭವಾರ್ತೆ.

264. ಸ್ವಪ್ನದಲ್ಲಿ ಶತ್ರು ಸೈನ್ಯ ಕಡಿಮೆಯಾಗಿ ಕಂಡರೆ ಯುದ್ಧದಲ್ಲಿ ವಿಜಯ ಲಭಿಸುವುದರ ಸೂಚನೆಯಾಗಿದೆ.





**45.** ನೀವು ಪರಸ್ಪರ ಎದುರುಬದುರಾದಾಗ ನಿಮ್ಮ ಕಣ್ಣುಗಳಿಗೆ ಅವರನ್ನು ಅಲ್ಪಸಂಖ್ಯೆಯಲ್ಲಿ[265] ಮತ್ತು ಅವರ ಕಣ್ಣುಗಳಿಗೆ ನಿಮ್ಮನ್ನು ಅಲ್ಪ ಸಂಖ್ಯೆಯಲ್ಲಿ[265A] ಅವನು ತೋರಿಸಿ ಕೊಟ್ಟ ಸಂದರ್ಭ (ಜ್ಞಾಪಿಸಿರಿ). ಅಲ್ಲಾಹನು ತಾನು ನಿರ್ಧರಿಸಿದ್ದು ನೆರವೇರುವಂತಾಗಲು ಹೀಗೆ ಸಂಭವಿಸಿತು. ಎಲ್ಲ ವಿಚಾರಗಳೂ (ತೀರ್ಮಾನಕ್ಕಾಗಿ) ಅಲ್ಲಾಹನೆಡೆಗೆ ಮರಳಿಸಲ್ಪಡುತ್ತವೆ.

وَاِذْ يُرِيْكُمُوْهُمْ اِذِ الْتَقَيْتُمْ فِيْٓ اَعْيُنِكُمْ قَلِيْلًا وَّيُقَلِّلُكُمْ فِيْٓ اَعْيُنِهِمْ لِيَقْضِيَ اللّٰهُ اَمْرًا كَانَ مَفْعُوْلًا ۭ وَاِلَى اللّٰهِ تُرْجَعُ الْاُمُوْرُ ﴿٤٥﴾

**46.** ಎಲೈ ವಿಶ್ವಾಸಿಗಳೇ, ನೀವು ವಿಜಯಶಾಲಿಗಳಾಗಲಿಕ್ಕೋಸ್ಕರ, ನೀವು ಒಂದು ಸೈನ್ಯವನ್ನು ಎದುರಿಸುವಾಗ ಸ್ಥೈರ್ಯವಾಗಿರಿ ಹಾಗೂ ಅಲ್ಲಾಹನನ್ನು ಅಧಿಕವಾಗಿ ಸ್ಮರಿಸುತ್ತಿರಿ.

يٰٓاَيُّهَا الَّذِيْنَ اٰمَنُوْٓا اِذَا لَقِيْتُمْ فِئَةً فَاثْبُتُوْا وَاذْكُرُوا اللّٰهَ كَثِيْرًا لَّعَلَّكُمْ تُفْلِحُوْنَ ﴿٤٦﴾

**47.** ನೀವು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಅನುಸರಿಸಿರಿ. ಅನ್ಯೋನ್ಯ ಜಗಳಾಡಬೇಡಿರಿ. ಇಲ್ಲವಾದರೆ ನೀವು ಧೈರ್ಯಗುಂದುವಿರಿ ಹಾಗೂ ನಿಮ್ಮ ಶಕ್ತಿ ಕ್ಷಯಿಸುವುದು. ನೀವು ಸ್ಥಿರಚಿತ್ತರಾಗಿರಿ. ಸ್ಥಿರಚಿತ್ತರಾಗುವವರೊಂದಿಗೆ ಅಲ್ಲಾಹನಿದ್ದಾನೆ.

وَاَطِيْعُوا اللّٰهَ وَرَسُوْلَهٗ وَلَا تَنَازَعُوْا فَتَفْشَلُوْا وَتَذْهَبَ رِيْحُكُمْ وَاصْبِرُوْا ۭ اِنَّ اللّٰهَ مَعَ الصّٰبِرِيْنَ ﴿٤٧﴾

**48.** ಬಡಾಯಿಕೊಚ್ಚುತ್ತಾ ಜನರಿಗೆ ತೋರಿಸಲಿಕ್ಕಾಗಿ ತಮ್ಮ ಮನೆಗಳಿಂದ ಹೊರಡುವವರಂತೆ ನೀವು ಆಗಬೇಡಿರಿ. ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುವವರಂತೆಯೂ ( ನೀವು ಆಗದಿರಿ). ಅವರ ಕೃತ್ಯಗಳನ್ನೆಲ್ಲ ಅಲ್ಲಾಹನು ಸುತ್ತುವರಿಯುತ್ತಾನೆ.

وَلَا تَكُوْنُوْا كَالَّذِيْنَ خَرَجُوْا مِنْ دِيَارِهِمْ بَطَرًا وَّرِئَاۗءَ النَّاسِ وَيَصُدُّوْنَ عَنْ سَبِيْلِ اللّٰهِ ۭ وَاللّٰهُ بِمَا يَعْمَلُوْنَ مُحِيْطٌ ﴿٤٨﴾

**49.** ಶೈತಾನನು ಅವರಿಗೆ ತಮ್ಮ ಕೃತ್ಯಗಳನ್ನು ಚಲೋದಾಗಿ ತೋರಿಸಿಕೊಟ್ಟ ಸಂದರ್ಭ - 'ಇಂದು ಜನರಲ್ಲಿ ನಿಮ್ಮನ್ನು ಜಯಿಸುವವರು ಯಾರೂ ಇಲ್ಲ; ನಾನು ನಿಮ್ಮ ರಕ್ಷಕನಾಗಿದ್ದೇನೆ' ಎಂದು ಅವನು

وَاِذْ زَيَّنَ لَهُمُ الشَّيْطٰنُ اَعْمَالَهُمْ وَقَالَ لَا غَالِبَ لَكُمُ الْيَوْمَ مِنَ النَّاسِ وَاِنِّيْ جَارٌ لَّكُمْ ۚ فَلَمَّا تَرَاۗءَتِ الْفِئَتٰنِ نَكَصَ

265. ಇಲ್ಲಿ ಕನಸಿನಲ್ಲಿ ಅಲ್ಲ, ಪ್ರತ್ಯಕ್ಷವಾಗಿ ತೋರಿಸಲಾಯಿತು. ಅರಬಿ ಭಾಷೆಯಲ್ಲಿ ಖಲೀಲ್ ಎಂಬ ಪದ ನಿರ್ಬಲವಾದುದು ಎಂಬ ಅರ್ಥದಲ್ಲೂ ಪ್ರಯೋಗಿಸಲ್ಪಡುತ್ತದೆ. ಅಂದರೆ, ಶತ್ರುಸೈನ್ಯ ಅಧಿಕ ಸಂಖ್ಯೆಯಲ್ಲಿದ್ದರೂ ಅವರನ್ನು ನೀವು ಅಲ್ಪ ಸಂಖ್ಯೆಯಲ್ಲಿ ಕಾಣುವುದರಿಂದ ನಿಮ್ಮ ಮನೋದಾರ್ಢ್ಯ ಹೆಚ್ಚಿತು. ಅವರು ಶಕ್ತಿಹೀನರೆಂದು ನಿಮಗೆ ತೋರಿತು.

265A. ಸತ್ಯವಿಶ್ವಾಸಿಗಳು ಬಹಳ ಕಡಿಮೆ ಸಂಖ್ಯೆಯಲ್ಲಿರುವುದರಿಂದ ಅವರು ತೀರಾ ದುರ್ಬಲರೆಂದು ಶತ್ರುಗಳಿಗೆ ತೋಚಿತು. ಆದ್ದರಿಂದ ಸತ್ಯ ವಿಶ್ವಾಸಿಗಳಲ್ಲಿದ್ದ ಮನೋದಾರ್ಢ್ಯವನ್ನು ಗ್ರಹಿಸಲು ಅವರು ವಿಫಲರಾದರೆಂದು ತಾತ್ಪರ್ಯ.

عَلٰى عَقِبَيْهِ وَقَالَ اِنِّيْ بَرِيْٓءٌ مِّنْكُمْ اِنِّيْٓ اَرٰى مَا لَا تَرَوْنَ اِنِّيْٓ اَخَافُ اللّٰهَ ۗ وَاللّٰهُ شَدِيْدُ الْعِقَابِ ﴿٤٩﴾

ಹೇಳಿದನು. ಆದರೆ ಉಭಯ ಸೈನ್ಯಗಳು ಎದುರು ಬದುರಾದಾಗ ಅವನು ನುಣುಚಿಕೊಂಡನು. ಅವನು ಹೇಳಿದನು: 'ಖಂಡಿತವಾಗಿಯೂ ನನಗೆ ನಿಮ್ಮೊಂದಿಗೇನೂ ಸಂಬಂಧವಿಲ್ಲ. ನೀವು ಕಾಣದಿರುವುದನ್ನು ನಾನು ಕಾಣುತ್ತೇನೆ. ನನಗೆ ಅಲ್ಲಾಹನ ಭಯವಿದೆ. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ.'

اِذْ يَقُوْلُ الْمُنٰفِقُوْنَ وَالَّذِيْنَ فِيْ قُلُوْبِهِمْ مَّرَضٌ غَرَّ هٰٓؤُلَآءِ دِيْنُهُمْ ۗ وَمَنْ يَّتَوَكَّلْ عَلَى اللّٰهِ فَاِنَّ اللّٰهَ عَزِيْزٌ حَكِيْمٌ ﴿٥٠﴾

**50.** ಈ ಜನರನ್ನು (ಮುಸ್ಲಿಮರನ್ನು) ಅವರ ಧರ್ಮ ಮೋಸಗೊಳಿಸಿದೆ ಎಂದು ಕಪಟ ವಿಶ್ವಾಸಿಗಳು ಮತ್ತು ಹೃದಯಗಳಲ್ಲಿ ರೋಗವಿರುವವರು ಹೇಳುತ್ತಿದ್ದ ಸಂದರ್ಭ (ಜ್ಞಾಪಿಸಿರಿ). ಯಾರಾದರೂ ಅಲ್ಲಾಹನಲ್ಲಿ ಭರವಸೆ ಇಟ್ಟರೆ ಅವನು ಎಂದಿಗೂ ಪರಾಭವಗೊಳ್ಳಲಾರ. ಕಾರಣವೇನೆಂದರೆ ಖಂಡಿತವಾಗಿಯೂ ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

وَلَوْ تَرٰٓى اِذْ يَتَوَفَّى الَّذِيْنَ كَفَرُوا ۙ الْمَلٰٓئِكَةُ يَضْرِبُوْنَ وُجُوْهَهُمْ وَاَدْبَارَهُمْ ۚ وَذُوْقُوْا عَذَابَ الْحَرِيْقِ ﴿٥١﴾

**51.** ದೇವದೂತರು ಅವಿಶ್ವಾಸಿಗಳ ಪ್ರಾಣ ಹರಣ ಮಾಡುವುದನ್ನು ನೀನು ಕಾಣುತ್ತಿದ್ದರೆ! ಅವರ ಮುಖಗಳ ಮೇಲೂ ಬೆನ್ನುಗಳ ಮೇಲೂ ಪ್ರಹಾರ ಮಾಡುತ್ತಾ 'ಸುಟ್ಟು ಬಿಡುವ ಅಗ್ನಿಯ ಶಿಕ್ಷೆಯನ್ನು ಅನುಭವಿಸಿರಿ' ಎಂದು ಅವರು ಹೇಳುವರು.

ذٰلِكَ بِمَا قَدَّمَتْ اَيْدِيْكُمْ وَاَنَّ اللّٰهَ لَيْسَ بِظَلَّامٍ لِّلْعَبِيْدِ ﴿٥٢﴾

**52.** ಇದು ನಿಮ್ಮ ಕೈಗಳು ಮುಂಚೆ ಗೈದ ದುಷ್ಕೃತ್ಯಗಳ ಫಲವಾಗಿದೆ. ಅಲ್ಲಾಹನು ತನ್ನ ದಾಸರಿಗೆ ಏನೂ ಅನ್ಯಾಯಮಾಡಲಾರ (ಎಂದು ತಿಳಿದುಕೊಳ್ಳಿರಿ).

كَدَاْبِ اٰلِ فِرْعَوْنَ ۙ وَالَّذِيْنَ مِنْ قَبْلِهِمْ ۗ كَفَرُوْا بِاٰيٰتِ اللّٰهِ فَاَخَذَهُمُ اللّٰهُ بِذُنُوْبِهِمْ ۗ اِنَّ اللّٰهَ قَوِيٌّ شَدِيْدُ الْعِقَابِ ﴿٥٣﴾

**53.** (ಅವರ ಸ್ಥಿತಿ) ಫಿರ್‌ಔನಿನ ಜನರ ಮತ್ತು ಅವರಿಗೆ ಮುಂಚೆ ಇದ್ದ ಜನರ ಸ್ಥಿತಿಯಂತೆ ಇದೆ. ಅಲ್ಲಾಹನ ದೃಷ್ಟಾಂತಗಳನ್ನು ಅವರು ಅಲ್ಲಗಳೆದರು. ಆಗ ಅವರ ಅಪರಾಧಕ್ಕಾಗಿ ಅಲ್ಲಾಹನು ಅವರನ್ನು ಶಿಕ್ಷಿಸಿದನು. ಖಂಡಿತವಾಗಿಯೂ ಅಲ್ಲಾಹನು ಶಕ್ತಿಶಾಲಿಯೂ ಕಠಿಣವಾಗಿ ಶಿಕ್ಷಿಸುವವನೂ ಆಗಿದ್ದಾನೆ.

ذٰلِكَ بِاَنَّ اللّٰهَ لَمْ يَكُ مُغَيِّرًا نِّعْمَةً

**54.** ಇದು ಏಕೆಂದರೆ ಒಂದು ಜನಾಂಗದ ಸ್ಥಿತಿಯಲ್ಲಿ ಸ್ವಯಂ ಅವರೇ ಒಂದು ಬದಲಾವಣೆ





اَنْعَمَهَا عَلٰى قَوْمٍ حَتّٰى يُغَيِّرُوْا مَا بِاَنْفُسِهِمْ ۙ وَاَنَّ اللّٰهَ سَمِيْعٌ عَلِيْمٌ ﴿٥٤﴾

ಮಾಡುವ ವರೆಗೆ ಅವರಿಗೆ ತಾನು ನೀಡಿರುವ ಅನುಗ್ರಹದಲ್ಲಿ ಅಲ್ಲಾಹನು ಮಾರ್ಪಾಡು ಮಾಡುವುದಿಲ್ಲ.[266] ನಿಶ್ಚಯವಾಗಿಯೂ ಅಲ್ಲಾಹನು ಚೆನ್ನಾಗಿ ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

كَدَاْبِ اٰلِ فِرْعَوْنَ ۙ وَالَّذِيْنَ مِنْ قَبْلِهِمْ ۗ كَذَّبُوْا بِاٰيٰتِ رَبِّهِمْ فَاَهْلَكْنٰهُمْ بِذُنُوْبِهِمْ وَاَغْرَقْنَآ اٰلَ فِرْعَوْنَ ۚ وَكُلٌّ كَانُوْا ظٰلِمِيْنَ ﴿٥٥﴾

**55.** ಫಿರ್‌ಔನಿನ ಜನರಂತೆ ಮತ್ತು ಅವರಿಗೆ ಮುಂಚೆ ಇದ್ದ ಜನರ ಸ್ಥಿತಿಯಂತೆ - ಅವರು ತಮ್ಮ ಪ್ರಭುವಿನ ದೃಷ್ಟಾಂತಗಳನ್ನು ಸುಳ್ಳಾಗಿಸಿದರು. ಆಗ ಅವರ ಅಪರಾಧಕ್ಕಾಗಿ ನಾವು ಅವರನ್ನು ನಾಶಪಡಿಸಿದೆವು. ಫಿರ್‌ಔನಿನ ಜನರನ್ನು ನಾವು ಮುಳುಗಿಸಿದೆವು. ಅವರೆಲ್ಲರೂ ದುಷ್ಕರ್ಮಿಗಳಾಗಿದ್ದರು.

اِنَّ شَرَّ الدَّوَآبِّ عِنْدَ اللّٰهِ الَّذِيْنَ كَفَرُوْا فَهُمْ لَا يُؤْمِنُوْنَ ﴿٥٦﴾

**56.** ನಿಶ್ಚಯವಾಗಿಯೂ ಅಲ್ಲಾಹನ ದೃಷ್ಟಿಯಲ್ಲಿ ಅತಿ ನಿಕೃಷ್ಟ ಜೀವಿಗಳು (ಅಲ್ಲಾಹನ ದೃಷ್ಟಾಂತಗಳನ್ನು) ಅಲ್ಲಗಳೆಯುವವರೇ ಆಗಿದ್ದಾರೆ. ಅವರು ನಂಬುವುದಿಲ್ಲ.

اَلَّذِيْنَ عٰهَدْتَّ مِنْهُمْ ثُمَّ يَنْقُضُوْنَ عَهْدَهُمْ فِيْ كُلِّ مَرَّةٍ وَّهُمْ لَا يَتَّقُوْنَ ﴿٥٧﴾

**57.** ನೀನು ಅವರೊಂದಿಗೆ ಒಪ್ಪಂದ ಮಾಡಿದ್ದಿ. ಆದರೆ ಪ್ರತಿ ಸಲ ಅವರು ತಮ್ಮ ಒಪಂದವನ್ನು ಉಲ್ಲಂಘಿಸುವರು. ಅವರು (ಅಲ್ಲಾಹನಿಗೆ) ಭಯಪಡುವುದಿಲ್ಲ.

فَاِمَّا تَثْقَفَنَّهُمْ فِى الْحَرْبِ فَشَرِّدْ بِهِمْ مَّنْ خَلْفَهُمْ لَعَلَّهُمْ يَذَّكَّرُوْنَ ﴿٥٨﴾

**58.** ಆದ್ದರಿಂದ ನೀನು ಅವರನ್ನು ಯುದ್ಧದಲ್ಲಿ ಸೆರೆಹಿಡಿದರೆ, ಅವರ ಮೂಲಕ ಅವರ ಹಿಂದೆ ಇರುವವರನ್ನು ಓಡಿಸು[267]- ಅವರು ಪಾಠ ಕಲಿಯಲಿಕ್ಕೋಸ್ಕರ.

وَاِمَّا تَخَافَنَّ مِنْ قَوْمٍ خِيَانَةً فَانْۢبِذْ اِلَيْهِمْ عَلٰى سَوَآءٍ ۗ اِنَّ اللّٰهَ لَا يُحِبُّ الْخَآئِنِيْنَ ﴿٥٩﴾

**59.** ಯಾವುದಾದರೂ ಜನಾಂಗದಿಂದ ವಿಶ್ವಾಸ ಘಾತದ ಭಯ ನಿನಗುಂಟಾದರೆ, ಸಮಾನ ರೀತಿಯಲ್ಲಿ ಅವರ ಒಪ್ಪಂದವನ್ನು ನೀನು ಅವರಿಗೆ ಹಿಂದಕ್ಕೆ ಎಸೆ. ನಿಶ್ಚಯವಾಗಿಯೂ ಅಲ್ಲಾಹನು ವಿಶ್ವಾಸಘಾತಕರನ್ನು ಇಷ್ಟಪಡುವುದಿಲ್ಲ.

266. ಅಲ್ಲಾಹನು ಒಂದು ಸಮುದಾಯಕ್ಕೆ ಏನಾದರೂ ಅನುಗ್ರಹ ನೀಡಿದರೆ ತಮ್ಮ ಸ್ಥಿತಿಯನ್ನು ಅವರೇ ಹಾಳು ಮಾಡುವ ವರೆಗೆ ಆ ಅನುಗ್ರಹವನ್ನು ಅಲ್ಲಾಹನು ಅವರಿಂದ ತೆಗೆದು ಬಿಡಲಾರ ಎಂದು ಇದರ ತಾತ್ಪರ್ಯವಾಗಿದೆ.

267. ಹಿಂದೆ ಇರುವ ಸೈನಿಕರು ಹೆದರಿ ಓಡಿಹೋಗುವಂತೆ ಚತುರತೆಯಿಂದಲೂ ಧೀರತೆಯಿಂದಲೂ ಯುದ್ಧ ಮಾಡಬೇಕೆಂದು ತಾತ್ಪರ್ಯ.

**60.** ಅವಿಶ್ವಾಸಿಗಳು (ತಮ್ಮ ವಂಚನೆ ಮೂಲಕ) ಜಯಗಳಿಸಿದ್ದೇವೆಂದು ಭಾವಿಸದಿರಲಿ. ಖಂಡಿತ ವಾಗಿಯೂ ಅವರಿಗೆ (ಅಲ್ಲಾಹನ ಯೋಜನೆಯನ್ನು) ನಿಷ್ಫಲಗೊಳಿಸಲು ಸಾಧ್ಯವಿಲ್ಲ.

وَلَا يَحْسَبَنَّ الَّذِينَ كَفَرُوا سَبَقُوا ۚ إِنَّهُمْ لَا يُعْجِزُونَ ﴿٦٠﴾

**61.** ಅವರನ್ನು ಎದುರಿಸಲಿಕ್ಕಾಗಿ ನಿಮ್ಮಿಂದಾಗುವ ಶಕ್ತಿಯನ್ನು ಒಟ್ಟುಗೂಡಿಸಿರಿ ಹಾಗೂ ಗಡಿಪ್ರದೇಶಗಳಲ್ಲಿ ಕುದುರೆ ಪಡೆಯನ್ನು ಸಜ್ಜುಗೊಳಿಸಿರಿ. ತನ್ಮೂಲಕ ಅಲ್ಲಾಹನ ಶತ್ರುಗಳೂ ನಿಮ್ಮ ಶತ್ರುಗಳೂ ಅವರ ಹೊರತಾದ ನಿಮಗೆ ತಿಳಿದಿಲ್ಲದ, (ಆದರೆ) ಅಲ್ಲಾಹನು ತಿಳಿದಿರುವ ಬೇರೆ ಶತ್ರುಗಳೂ ಭಯಭೀತರಾಗುವಂತಾಗಲಿ. ಅಲ್ಲಾಹನ ಮಾರ್ಗದಲ್ಲಿ ಏನಾದರೂ ವ್ಯಯಿಸಲ್ಪಟ್ಟರೆ, ಅದರ ಸಂಪೂರ್ಣವಾದ ಪ್ರತಿಫಲ ನಿಮಗೆ ನೀಡಲ್ಪಡುವುದು. ನಿಮ್ಮೊಡನೆ ಅನ್ಯಾಯವೆಸಗಲ್ಪಡದು.

وَأَعِدُّوا لَهُم مَّا اسْتَطَعْتُم مِّن قُوَّةٍ وَمِن رِّبَاطِ الْخَيْلِ تُرْهِبُونَ بِهِ عَدُوَّ اللَّهِ وَعَدُوَّكُمْ وَآخَرِينَ مِن دُونِهِمْ لَا تَعْلَمُونَهُمُ اللَّهُ يَعْلَمُهُمْ ۚ وَمَا تُنفِقُوا مِن شَيْءٍ فِي سَبِيلِ اللَّهِ يُوَفَّ إِلَيْكُمْ وَأَنتُمْ لَا تُظْلَمُونَ ﴿٦١﴾

**62.** ಅವರು ಶಾಂತಿಯೆಡೆಗೆ ವಾಲಿದರೆ ನೀನು ಸಹ ಅದಕ್ಕೆ ಒಪ್ಪು. ಅಲ್ಲಾಹನ ಮೇಲೆ ಭರವಸೆಯನ್ನಿಡು. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

وَإِن جَنَحُوا لِلسَّلْمِ فَاجْنَحْ لَهَا وَتَوَكَّلْ عَلَى اللَّهِ ۚ إِنَّهُ هُوَ السَّمِيعُ الْعَلِيمُ ﴿٦٢﴾

**63.** ಅವರು ನಿನ್ನನ್ನು ವಂಚಿಸಲು ಉದ್ದೇಶಿಸಿದರೆ ಖಂಡಿತವಾಗಿಯೂ ಅಲ್ಲಾಹನು ನಿನಗೆ ಸಾಕು. ತನ್ನ ನೆರವಿನಿಂದಲೂ ಸತ್ಯವಿಶ್ವಾಸಿಗಳಿಂದಲೂ ಅವನೇ ನಿನಗೆ ಶಕ್ತಿ ನೀಡಿದನು.

وَإِن يُرِيدُوا أَن يَخْدَعُوكَ فَإِنَّ حَسْبَكَ اللَّهُ ۚ هُوَ الَّذِي أَيَّدَكَ بِنَصْرِهِ وَبِالْمُؤْمِنِينَ ﴿٦٣﴾

**64.** ಅವನು ಅವರ (ವಿಶ್ವಾಸಿಗಳ) ಹೃದಯಗಳ ಮಧ್ಯೆ ಮಮತೆಯುಂಟಾಗುವಂತೆ ಮಾಡಿದನು. ಭೂಮಿಯಲ್ಲಿರುವುದನ್ನೆಲ್ಲ ನೀನು ಖರ್ಚು ಮಾಡುತ್ತಿದ್ದರೂ ಅವರ ಹೃದಯಗಳ ಮಧ್ಯೆ ಪ್ರೀತಿ ಹುಟ್ಟುವಂತೆ ಮಾಡಲು ನಿನಗೆ ಸಾಧ್ಯವಿರಲಿಲ್ಲ. ಆದರೆ ಅಲ್ಲಾಹನು ಅವರ ಮಧ್ಯೆ ಪ್ರೀತಿ ಹುಟ್ಟಿಸಿದನು. ಖಂಡಿತವಾಗಿಯೂ ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

وَأَلَّفَ بَيْنَ قُلُوبِهِمْ ۚ لَوْ أَنفَقْتَ مَا فِي الْأَرْضِ جَمِيعًا مَّا أَلَّفْتَ بَيْنَ قُلُوبِهِمْ وَلَٰكِنَّ اللَّهَ أَلَّفَ بَيْنَهُمْ ۚ إِنَّهُ عَزِيزٌ حَكِيمٌ ﴿٦٤﴾





**65.** ಎಲೈ ಪ್ರವಾದಿಯೇ, ನಿನಗೆ ಅಲ್ಲಾಹನೂ ನಿನ್ನನ್ನು ಅನುಸರಿಸುವ ಸತ್ಯವಿಶ್ವಾಸಿಗಳೂ ಸಾಕು.

يَا أَيُّهَا النَّبِيُّ حَسْبُكَ اللَّهُ وَمَنِ اتَّبَعَكَ مِنَ الْمُؤْمِنِينَ ﴿٦٥﴾

**66.** ಎಲೈ ಪ್ರವಾದಿಯೇ, (ಅಧರ್ಮಿಗಳಿಗೆದುರಾಗಿ) ಸತ್ಯವಿಶ್ವಾಸಿಗಳನ್ನು ಯುದ್ಧಕ್ಕೋಸ್ಕರ ಪದೇ ಪದೇ ತೀವ್ರವಾಗಿ ಪ್ರೇರೇಪಿಸು. ನಿಮ್ಮ ಪೈಕಿ ಸ್ಥೈರ್ಯವಂತರಾದ ಇಪ್ಪತ್ತು ಮಂದಿ ಇದ್ದರೆ ಅವರು ಇನ್ನೂರು ಮಂದಿಯನ್ನು ಜಯಿಸುವರು. ನಿಮ್ಮ ಪೈಕಿ ನೂರು ಮಂದಿ ಇದ್ದರೆ ಅವಿಶ್ವಾಸಿಗಳ ಸಾವಿರ ಮಂದಿಯನ್ನು ಅವರು ಜಯಿಸುವರು. ಕಾರಣವೇನೆಂದರೆ ಅವರು (ಅಧರ್ಮಿಗಳು) ತಿಳುವಳಿಕೆಯಿಲ್ಲದ ಜನರಾಗಿದ್ದಾರೆ.

يَا أَيُّهَا النَّبِيُّ حَرِّضِ الْمُؤْمِنِينَ عَلَى الْقِتَالِ ۚ إِن يَكُن مِّنكُمْ عِشْرُونَ صَابِرُونَ يَغْلِبُوا مِائَتَيْنِ ۚ وَإِن يَكُن مِّنكُم مِّائَةٌ يَغْلِبُوا أَلْفًا مِّنَ الَّذِينَ كَفَرُوا بِأَنَّهُمْ قَوْمٌ لَّا يَفْقَهُونَ ﴿٦٦﴾

**67.** ಈಗ ಅಲ್ಲಾಹನು ನಿಮಗೆ ಭಾರವನ್ನು ಲಘೂಕರಿಸಿದ್ದಾನೆ. ನಿಮ್ಮಲ್ಲಿ ಬಲಹೀನತೆ ಇದೆಯೆಂದು ಅವನಿಗೆ ಗೊತ್ತು. ಆದ್ದರಿಂದ ಸ್ಥೈರ್ಯವುಳ್ಳ ನೂರು ಮಂದಿ ನಿಮ್ಮ ಪೈಕಿ ಇದ್ದರೆ ಅವರು ಇನ್ನೂರು ಮಂದಿಯನ್ನು ಗೆಲ್ಲುವರು. ನಿಮ್ಮ ಪೈಕಿ ಸಾವಿರ ಮಂದಿ ಇದ್ದರೆ ಅಲ್ಲಾಹನ ವಿಧಿ ಪ್ರಕಾರ ಅವರು ಎರಡು ಸಾವಿರ ಮಂದಿಯನ್ನು ಪರಾಭವಗೊಳಿಸುವರು. ಅಲ್ಲಾಹನು ಸ್ಥಿರಚಿತ್ತರಾಗಿರುವವರ ಜೊತೆಗಿರುತ್ತಾರೆ.

الْآنَ خَفَّفَ اللَّهُ عَنكُمْ وَعَلِمَ أَنَّ فِيكُمْ ضَعْفًا ۚ فَإِن يَكُن مِّنكُم مِّائَةٌ صَابِرَةٌ يَغْلِبُوا مِائَتَيْنِ ۚ وَإِن يَكُن مِّنكُمْ أَلْفٌ يَغْلِبُوا أَلْفَيْنِ بِإِذْنِ اللَّهِ ۗ وَاللَّهُ مَعَ الصَّابِرِينَ ﴿٦٧﴾

**68.** (ಯುದ್ಧ ಮಾಡಿ) ದೇಶದಲ್ಲಿ ಶತ್ರುಗಳನ್ನು ಸೋಲಿಸುವ ಮೂಲಕ ಹೊರತು ಯುದ್ಧಕೈದಿಗಳನ್ನು ಹೊಂದುವುದು ಒಬ್ಬ ಪ್ರವಾದಿಗೆ ಸಲ್ಲದು. ನೀವು ಇಹಲೋಕದ ಸಾಮಗ್ರಿಗಳನ್ನು ಬಯಸುತ್ತೀರಿ. ಅಲ್ಲಾಹನು (ನಿಮಗೆ) ಪರಲೋಕವನ್ನು ಬಯಸುತ್ತಾನೆ. ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

مَا كَانَ لِنَبِيٍّ أَن يَكُونَ لَهُ أَسْرَىٰ حَتَّىٰ يُثْخِنَ فِي الْأَرْضِ ۚ تُرِيدُونَ عَرَضَ الدُّنْيَا وَاللَّهُ يُرِيدُ الْآخِرَةَ ۗ وَاللَّهُ عَزِيزٌ حَكِيمٌ ﴿٦٨﴾

**69.** ಅಲ್ಲಾಹನಿಂದ ನಿಮಗೆ ಈ ಮೊದಲೇ ಒಂದು ಆಜ್ಞೆ ಬರದಿರುತ್ತಿದ್ದರೆ, ನೀವು (ಅವರಿಂದ) ಪಡೆದದು ಕ್ಕೋಸ್ಕರ ಭಯಂಕರವಾದ ಶಿಕ್ಷೆಗೆ ನೀವು ಗುರಿಯಾಗುತ್ತಿದ್ದಿರಿ.

لَّوْلَا كِتَابٌ مِّنَ اللَّهِ سَبَقَ لَمَسَّكُمْ فِيمَا أَخَذْتُمْ عَذَابٌ عَظِيمٌ ﴿٦٩﴾

**70.** ಆದುದರಿಂದ, ಯುದ್ಧದಲ್ಲಿ ಸ್ವಾಧೀನ ಪಡಿಸಿದ ಸಂಪತ್ತಿನಿಂದ ಧರ್ಮಬದ್ಧವೂ ಪರಿಶುದ್ಧವೂ ಆದುದನ್ನು ನೀವು ಭಕ್ಷಿಸಿರಿ. ನೀವು ಅಲ್ಲಾಹನಿಗೆ ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲ ನೂ ಕಾರುಣ್ಯನಿಧಿಯೂ ಆಗಿದ್ದಾನೆ.

فَكُلُوا مِمَّا غَنِمْتُمْ حَلَالًا طَيِّبًا ۚ وَاتَّقُوا اللَّهَ ۚ إِنَّ اللَّهَ غَفُورٌ رَحِيمٌ ﴿٦٩﴾

**71.** ಎಲೈ ಪ್ರವಾದಿ, ನಿನ್ನ ಅಧೀನದಲ್ಲಿರುವ (ಯುದ್ಧ) ಕೈದಿಗಳೊಡನೆ ಹೇಳು: 'ನಿಮ್ಮ ಹೃದಯಗಳಲ್ಲಿ ಏನಾದರೂ ಒಳಿತಿದೆಯೆಂದು ಅಲ್ಲಾಹನು ತಿಳಿದ ಪಕ್ಷದಲ್ಲಿ, ನಿಮ್ಮಿಂದ ಸ್ವಾಧೀನಪಡಿಸಿದುದಕ್ಕಿಂತ ಉತ್ತಮವಾದುದನ್ನು ಅವನು ನಿಮಗೆ ನೀಡುವನು ಹಾಗೂ ಅವನು ನಿಮ್ಮನ್ನು ಕ್ಷಮಿಸುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.'

يَا أَيُّهَا النَّبِيُّ قُلْ لِمَنْ فِي أَيْدِيكُمْ مِنَ الْأَسْرَىٰ إِنْ يَعْلَمِ اللَّهُ فِي قُلُوبِكُمْ خَيْرًا يُؤْتِكُمْ خَيْرًا مِمَّا أُخِذَ مِنْكُمْ وَيَغْفِرْ لَكُمْ ۗ وَاللَّهُ غَفُورٌ رَحِيمٌ ﴿٧٠﴾

**72.** ಇನ್ನು, ಅವರು ನಿನ್ನನ್ನು ವಂಚಿಸಲು ಬಯಸಿದರೆ (ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಕಾರಣವೇನೆಂದರೆ) ಇದಕ್ಕಿಂತ ಮುಂಚೆ ಅವರು ಅಲ್ಲಾಹನೊಡನೆ ಸಹ ವಿಶ್ವಾಸಘಾತ ಮಾಡಿದ್ದಾರೆ. ಆದರೆ ಅವನು ಅವರನ್ನು (ನಿನಗೆ) ಅಧೀನಪಡಿಸಿದನು. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

وَإِنْ يُرِيدُوا خِيَانَتَكَ فَقَدْ خَانُوا اللَّهَ مِنْ قَبْلُ فَأَمْكَنَ مِنْهُمْ ۗ وَاللَّهُ عَلِيمٌ حَكِيمٌ ﴿٧١﴾

**73.** ಖಂಡಿತವಾಗಿಯೂ ಯಾರು ವಿಶ್ವಾಸಹೊಂದಿ, ವಲಸೆ ಹೋಗಿ, ತಮ್ಮ ಧನ ಮತ್ತು ಜೀವದಿಂದ ಅಲ್ಲಾಹನ ಮಾರ್ಗದಲ್ಲಿ ಅತಿಯಾಗಿ ಶ್ರಮಿಸುತ್ತಾರೋ ಹಾಗೂ ಯಾರು (ಆಶ್ರಯಾರ್ಥಿಗಳಿಗೆ) ಆಶ್ರಯ ನೀಡಿ ಅವರಿಗೆ ಸಹಾಯ ಮಾಡುತ್ತಾರೋ ಅವರು ಪರಸ್ಪರ ಮಿತ್ರರಾಗಿದ್ದಾರೆ. ಆದರೆ ಯಾರು ವಿಶ್ವಾಸಹೊಂದಿದರೂ ವಲಸೆ ಹೋಗುವುದಿಲ್ಲವೋ, ಅವರು ವಲಸೆ ಹೋಗುವ ವರೆಗೆ ಅವರನ್ನು ರಕ್ಷಿಸುವ ಯಾವ ಹೊಣೆಯೂ ನಿಮಗಿಲ್ಲ. ಆದರೆ ಧರ್ಮ ಕಾರ್ಯದಲ್ಲಿ ಅವರು ನಿಮ್ಮ ಸಹಾಯವನ್ನು ಯಾಚಿಸಿದರೆ ಅವರಿಗೆ ನೆರವು ನೀಡುವುದು





ನಿಮ್ಮ ಕರ್ತವ್ಯವಾಗಿದೆ. ಆದರೆ ಅದು ನಿಮ್ಮೊಂದಿಗೆ ಒಪ್ಪಂದಮಾಡಿಕೊಂಡ ಒಂದು ಜನತೆಗೆ ವಿರುದ್ಧವಾಗಿರಬಾರದು. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಕಾಣುತ್ತಾನೆ.

إِنَّ الَّذِينَ آمَنُوا وَهَاجَرُوا وَجَاهَدُوا بِأَمْوَالِهِمْ وَأَنْفُسِهِمْ فِي سَبِيلِ اللَّهِ وَالَّذِينَ آوَوْا وَنَصَرُوا أُولَٰئِكَ بَعْضُهُمْ أَوْلِيَاءُ بَعْضٍ ۚ وَالَّذِينَ آمَنُوا وَلَمْ يُهَاجِرُوا مَا لَكُمْ مِنْ وَلَايَتِهِمْ مِنْ شَيْءٍ حَتَّىٰ يُهَاجِرُوا ۚ وَإِنِ اسْتَنْصَرُوكُمْ فِي الدِّينِ فَعَلَيْكُمُ النَّصْرُ إِلَّا عَلَىٰ قَوْمٍ بَيْنَكُمْ وَبَيْنَهُمْ مِيثَاقٌ ۗ وَاللَّهُ بِمَا تَعْمَلُونَ بَصِيرٌ ﴿٧٢﴾

**74.** ಅವಿಶ್ವಾಸಿಗಳು ಪರಸ್ಪರ ಮಿತ್ರರಾಗಿದ್ದಾರೆ. ನೀವು ಹಾಗೆ (ಮೇಲೆ ಹೇಳಿದಂತೆ) ವರ್ತಿಸದಿದ್ದರೆ ದೇಶದಲ್ಲಿ ಗಲಭೆಯೂ ಮಹಾ ವಿಪತ್ತೂ ಉಂಟಾಗುವುದು.

وَالَّذِينَ كَفَرُوا بَعْضُهُمْ أَوْلِيَاءُ بَعْضٍ ۚ إِلَّا تَفْعَلُوهُ تَكُنْ فِتْنَةٌ فِي الْأَرْضِ وَفَسَادٌ كَبِيرٌ ﴿٧٣﴾

**75.** ವಿಶ್ವಾಸಹೊಂದಿ (ಸತ್ಯ ವಿಶ್ವಾಸದ ಸಂರಕ್ಷಣೆಗಾಗಿ) ವಲಸೆ ಹೋಗಿ ಅಲ್ಲಾಹನ ಮಾರ್ಗದಲ್ಲಿ ತೀವ್ರವಾಗಿ ಶ್ರಮಿಸುವವರೂ (ಆಶ್ರಯಾರ್ಥಿಗಳಿಗೆ) ಆಶ್ರಯ ನೀಡಿ ಸಹಾಯ ಮಾಡುವವರೂ ನಿಜವಾದ ಸತ್ಯವಿಶ್ವಾಸಿಗಳಾಗಿದ್ದಾರೆ. ಅವರಿಗೆ ಪಾಪ ವಿಮುಕ್ತಿ ಮತ್ತು ಗೌರವಾರ್ಹ ಜೀವನಾಧಾರವಿದೆ.

وَالَّذِينَ آمَنُوا وَهَاجَرُوا وَجَاهَدُوا فِي سَبِيلِ اللَّهِ وَالَّذِينَ آوَوْا وَنَصَرُوا أُولَٰئِكَ هُمُ الْمُؤْمِنُونَ حَقًّا ۚ لَهُمْ مَغْفِرَةٌ وَرِزْقٌ كَرِيمٌ ﴿٧٤﴾

**76.** ಯಾರು ನಂತರ ಕಾಲದಲ್ಲಿ ವಿಶ್ವಾಸ ಹೊಂದಿ ವಲಸೆಹೋಗಿ ನಿಮ್ಮೊಟ್ಟಿಗೆ (ಅಲ್ಲಾಹನ ಮಾರ್ಗದಲ್ಲಿ) ಅತ್ಯಂತ ಪರಿಶ್ರಮಪಡುವರೋ ಅವರು ಸಹ ನಿಮ್ಮೊಂದಿಗೆ ಸೇರಿದವರಾಗಿದ್ದಾರೆ. ಕೆಲವು ರಕ್ತ ಸಂಬಂಧಿಗಳು, ಅಲ್ಲಾಹನ ಗ್ರಂಥದ ಪ್ರಕಾರ ಇನ್ನು ಕೆಲವರಿಗಿಂತ ಹೆಚ್ಚು ಹತ್ತಿರದವರಾಗಿದ್ದಾರೆ. ನಿಶ್ಚಯವಾಗಿಯೂ ಅಲ್ಲಾಹನು ಎಲ್ಲವನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

وَالَّذِينَ آمَنُوا مِنْ بَعْدُ وَهَاجَرُوا وَجَاهَدُوا مَعَكُمْ فَأُولَٰئِكَ مِنْكُمْ ۚ وَأُولُو الْأَرْحَامِ بَعْضُهُمْ أَوْلَىٰ بِبَعْضٍ فِي كِتَابِ اللَّهِ ۗ إِنَّ اللَّهَ بِكُلِّ شَيْءٍ عَلِيمٌ ﴿٧٥﴾

سُوْرَةُ التَّوْبَةِ مَدَنِيَّةٌ وَّهِىَ مِائَةٌ وَّتِسْعٌ وَّعِشْرُوْنَ اٰيَةً وَّسِتَّةَ عَشَرَ رُكُوْعًا

# 9. ಅತ್ತೌಬಃ

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ 129 ಆಯತ್‌ಗಳು ಮತ್ತು 16 ರುಕೂಅ್‌ಗಳು ಇವೆ.

**1. ನೀವು ಒಪ್ಪಂದ ಮಾಡಿಕೊಂಡಿರುವ ಬಹುದೇವಾರಾಧಕರಿಗೆ, ಅಲ್ಲಾಹ್ ಮತ್ತು ಅವನ ಸಂದೇಶವಾಹಕನ ಕಡೆಯಿಂದ ಇದೊಂದು ನಿಷ್ಪತ್ತಿಯ ಘೋಷಣೆಯಾಗಿದೆ.**

بَرَآءَةٌ مِّنَ اللّٰهِ وَرَسُوْلِهٖۤ اِلَى الَّذِيْنَ عٰهَدْتُّمْ مِّنَ الْمُشْرِكِيْنَ ①

**2. ನೀವು ರಾಜ್ಯದಲ್ಲಿ ನಾಲ್ಕು ತಿಂಗಳ ಕಾಲ ಸಂಚರಿಸಿರಿ.**[268] **ನಿಮಗೆ ಅಲ್ಲಾಹನ ಯೋಜನೆಗಳನ್ನು ನಿಷ್ಫಲಗೊಳಿಸಲು ಸಾಧ್ಯವಿಲ್ಲವೆಂದೂ ಅವಿಶ್ವಾಸಿಗಳನ್ನು ಅಲ್ಲಾಹನು ಅಪಮಾನಿತರನ್ನಾಗಿ ಮಾಡುತ್ತಾನೆಂದೂ ನೀವು ತಿಳಿದುಕೊಳ್ಳಿರಿ.**

فَسِيْحُوْا فِى الْاَرْضِ اَرْبَعَةَ اَشْهُرٍ وَّاعْلَمُوْۤا اَنَّكُمْ غَيْرُ مُعْجِزِى اللّٰهِ ۙ وَاَنَّ اللّٰهَ مُخْزِى الْكٰفِرِيْنَ ②

**3. ಮಹತ್ತರ ಹಜ್ಜ್ ದಿನದಂದು**[268A] **ಅಲ್ಲಾಹ್ ಮತ್ತು ಅವನ ಸಂದೇಶವಾಹಕನ ಕಡೆಯಿಂದ ಸಕಲ ಜನರಿಗೋಸ್ಕರ ಇದೊಂದು ಘೋಷಣೆಯಾಗಿದೆ. 'ಖಂಡಿತವಾಗಿಯೂ ಅಲ್ಲಾಹ್ ಮತ್ತು ಅವನ ಸಂದೇಶವಾಹಕ ಬಹುದೇವಾರಾಧಕರಿಂದ** (ಅವರೊಡನೆ ಮಾಡಿಕೊಂಡಿರುವ ಕರಾರು ಶರ್ತಗಳಿಂದ) **ವಿಮುಕ್ತರು'.**

وَاَذَانٌ مِّنَ اللّٰهِ وَرَسُوْلِهٖۤ اِلَى النَّاسِ يَوْمَ الْحَجِّ الْاَكْبَرِ اَنَّ اللّٰهَ بَرِىْۤءٌ مِّنَ الْمُشْرِكِيْنَ ۙ وَرَسُوْلُهٗ ؕ فَاِنْ تُبْتُمْ فَهُوَ خَيْرٌ لَّكُمْ ۚ وَاِنْ تَوَلَّيْتُمْ فَاعْلَمُوْۤا اَنَّكُمْ غَيْرُ مُعْجِزِى اللّٰهِ ؕ وَبَشِّرِ

268. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರವರ ಭವಿಷ್ಯವಾಣಿಗಳನ್ನು ಸುಳ್ಳಾಗಿಸುತ್ತಿದ್ದ ಹಾಗೂ ಅವರ ಮೇಲೆ ಅಪವಾದ ಹೊರಿಸುತ್ತಿದ್ದ ಬಹುದೇವಾರಾಧಕರೊಡನೆ, ನಾಲ್ಕು ತಿಂಗಳ ಕಾಲ ಅರಬ್ ದೇಶದ ಉದ್ದಗಲಕ್ಕೂ ಸಂಚರಿಸಿ ಮುಹಮ್ಮದ್ ಪೈಗಂಬರರ(ಸ) ಭವಿಷ್ಯವಾಣಿಗಳು ಯಾವ ರೀತಿ ಸತ್ಯವಾಗುತ್ತಿವೆಯೆಂದೂ ಬಹುದೇವಾರಾಧಕರ ಶಕ್ತಿಸಾಮರ್ಥ್ಯಗಳು ಯಾವ ರೀತಿ ಕುಂದುತ್ತಿವೆಯೆಂದೂ ಕಂಡು ತಿಳಿದುಕೊಳ್ಳಲು ಇಲ್ಲಿ ಸೂಚಿಸಲಾಗಿದೆ.

268A. ಹಜ್ಜ್ ದಿವಸ ಶುಕ್ರವಾರವಾದರೆ ಅದನ್ನು 'ಹಜ್ಜುಲ್ ಅಕ್‌ಬರ್' ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಆದರೆ ಇಲ್ಲಿ 'ಹಜ್ಜುಲ್ ಅಕ್‌ಬರ್' ಎಂಬುದರ ಉದ್ದೇಶ ಮಕ್ಕಾ ವಿಜಯದ ಮರು ವರ್ಷದ ಹಜ್ಜ್ ಆಗಿದೆ. ಇಸ್ಲಾಮಿಕ ಆಡಳಿತೆಯ ಪ್ರಥಮ ಹಜ್ಜ್ ಆಗಿದ್ದುದರಿಂದ ಅದನ್ನು ದೊಡ್ಡ ಹಜ್ಜ್ ಎಂದು ಹೇಳಲಾಗಿದೆ. ಅದಕ್ಕೆ ಮುಂಚೆ ಹಜ್ಜ್ ಅನುಷ್ಠಾನ ಮುಸ್ಲಿಮೇತರರ ಆಧಿಪತ್ಯದಲ್ಲಿತ್ತು.

ಮಕ್ಕಾ ವಿಜಯದ ಮೂಲಕ ಮುಹಮ್ಮದ್ ಪೈಗಂಬರ್ (ಸ)ರವರ ಭವಿಷ್ಯವಾಣಿ ಸ್ಪಷ್ಟವಾಗಿ ಈಡೇರಿತು ಹಾಗೂ ಅವರ ಮೇಲೆ ಅಪವಾದ ಹೊರಿಸುತ್ತಿದ್ದ ಬಹುದೇವಾರಾಧಕರ ಯೋಜನೆಗಳೆಲ್ಲ ವಿಫಲಗೊಂಡವು. ಹಜ್ಜುಲ್ ಅಕ್‌ಬರ್ ದಿನದಂದು ಈ ರೀತಿ ಘೋಷಣೆ ಮಾಡಲು ಕಾರಣ ಇದೇ ಆಗಿದೆ.





**ಆದ್ದರಿಂದ ನೀವು ಪಶ್ಚಾತ್ತಾಪಪಟ್ಟು ಮರಳಿದರೆ ನಿಮಗೆ ಅದು ಗುಣಕರವಾಗುವುದು. ನೀವು ವಿಮುಖರಾದರೆ, ಖಂಡಿತವಾಗಿಯೂ ನಿಮಗೆ ಅಲ್ಲಾಹನ ಯೋಜನೆಗಳನ್ನು ಪರಾಜಿತಗೊಳಿಸಲು ಸಾಧ್ಯವಾಗದೆಂದು ತಿಳಿದುಕೊಳ್ಳಿರಿ ಹಾಗೂ ನೀನು ಅವಿಶ್ವಾಸಿಗಳಿಗೆ ಮುನ್ನೆಚ್ಚರಿಕೆ ನೀಡು - ಯಾತನಾಮಯವಾದ ಶಿಕ್ಷೆ ಅವರಿಗಿದೆ.**

الَّذِيْنَ كَفَرُوْا بِعَذَابٍ اَلِيْمٍ ③

**4. ಬಹುದೇವಾರಾಧಕರ ಪೈಕಿ ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡು** ಅನಂತರ ಅದರಲ್ಲಿ **ನಿಮಗೆ ಲೋಪವನ್ನೇನೂ ಮಾಡದೆಯೂ ನಿಮಗೆದುರಾಗಿ ಯಾರಿಗೂ ನೆರವಾಗದೆಯೂ ಇರುವವರನ್ನು ಹೊರತು. ಅವರೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು** ಅದರ **ಕಾಲಾವಧಿ ವರೆಗೆ ನೀವು ಸಂಪೂರ್ಣವಾಗಿ ಪೂರ್ತಿಗೊಳಿಸಿರಿ. ಖಂಡಿತವಾಗಿಯೂ ಅಲ್ಲಾಹನು ಭಯಭಕ್ತಿ ತೋರಿಸುವವರನ್ನು ಪ್ರೀತಿಸುತ್ತಾನೆ.**

اِلَّا الَّذِيْنَ عٰهَدْتُّمْ مِّنَ الْمُشْرِكِيْنَ ثُمَّ لَمْ يَنْقُصُوْكُمْ شَيْـًٔا وَّلَمْ يُظَاهِرُوْا عَلَيْكُمْ اَحَدًا فَاَتِمُّوْۤا اِلَيْهِمْ عَهْدَهُمْ اِلٰى مُدَّتِهِمْ ؕ اِنَّ اللّٰهَ يُحِبُّ الْمُتَّقِيْنَ ④

**5. ಹಾಗೆ** (ಆ ನಾಲ್ಕು) **ಆದರಣೀಯ ಮಾಸಗಳು ಕಳೆದರೆ** (ಒಪ್ಪಂದ ಉಲ್ಲಂಘಿಸಿದ) **ಆ ಬಹುದೇವಾರಾಧಕರನ್ನು ನೀವು ಕಂಡರೆ**[268B] **ಅವರೊಡನೆ ಹೋರಾಡಿರಿ; ಅವರನ್ನು ಹಿಡಿದು ಬಂಧನದಲ್ಲಿಡಿರಿ; ಅವರಿಗೆ ಮುತ್ತಿಗೆ ಹಾಕಿರಿ; ಆಯಕಟ್ಟಿನ ಸ್ಥಳಗಳಲ್ಲೆಲ್ಲ ಅವರಿಗಾಗಿ ಹೊಂಚುಹಾಕಿರಿ. ಆದರೆ, ಅವರು ಪಶ್ಚಾತ್ತಾಪಪಟ್ಟು ನಮಾಝನ್ನು ಕ್ರಮಬದ್ಧವಾಗಿ ಅನುಷ್ಠಿಸಿದರೆ ಹಾಗೂ ಝಕಾತ್ ನೀಡಿದರೆ ಅವರನ್ನು ಅವರ ದಾರಿಯಲ್ಲಿ ಬಿಟ್ಟುಬಿಡಿರಿ.**[268C] **ಖಂಡಿತವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.**

فَاِذَا انْسَلَخَ الْاَشْهُرُ الْحُرُمُ فَاقْتُلُوا الْمُشْرِكِيْنَ حَيْثُ وَجَدْتُّمُوْهُمْ وَخُذُوْهُمْ وَاحْصُرُوْهُمْ وَاقْعُدُوْا لَهُمْ كُلَّ مَرْصَدٍ ۚ فَاِنْ تَابُوْا وَاَقَامُوا الصَّلٰوةَ وَاٰتَوُا الزَّكٰوةَ فَخَلُّوْا سَبِيْلَهُمْ ؕ اِنَّ اللّٰهَ غَفُوْرٌ رَّحِيْمٌ ⑤

268B. ಇಲ್ಲಿ "ಆ ಬಹುದೇವಾರಾಧಕರನ್ನು" (ಅಲ್ ಮುಶ್ರಿಕೀನ್) ಎಂದು ಹೇಳಿರುವುದು ಬಹುದೇವಾರಾಧಕರಲ್ಲಿ ಒಂದು ನಿರ್ದಿಷ್ಟ ವರ್ಗದವರನ್ನು ಸೂಚಿಸುತ್ತದೆ. ವಿವರಕ್ಕೆ ಮುಂದಿನ ಟಿಪ್ಪಣಿ ನೋಡಿರಿ.

268C. ಮುಸ್ಲಿಮೇತರರೆಲ್ಲ ಮುಸ್ಲಿಮರಾಗುವ ವರೆಗೆ ಅವರೊಡನೆ ಯುದ್ಧ ಮಾಡಬೇಕೆಂದು ಇದರ ಅರ್ಥವಲ್ಲ. ಇಲ್ಲಿ ಅವಿಶ್ವಾಸಿಗಳ ಕುರಿತು ಸರ್ವ ಸಾಮಾನ್ಯವಾಗಿ ಹೇಳಿದ್ದಲ್ಲ. ಬದಲು 8 ವರ್ಷಗಳ ಕಾಲ ಪೈಗಂಬರರೊಡನೆ ಯುದ್ಧ ಮಾಡುತ್ತಿದ್ದ ಮಕ್ಕಾ ನಿವಾಸಿಗಳಾದ ಅವಿಶ್ವಾಸಿಗಳ ಕುರಿತು ಮಾತ್ರ ಹೇಳಿದ್ದಾಗಿದೆ. ಕರಾರು ಉಲ್ಲಂಘನೆ ಮಾಡದೆ ಇರುವವರೊಡನೆ ಕರಾರು ಶರ್ತಗಳಂತೆಯೇ ನಡೆದುಕೊಳ್ಳಬೇಕೆಂದು ಹಿಂದಿನ ವಚನದಲ್ಲಿ ಹೇಳಲಾಗಿದೆಯಷ್ಟೆ.

**6. ಬಹುದೇವಾರಾದಕರಲ್ಲಿ ಯಾರಾದರೂ ನಿನ್ನೊಡನೆ ಅಭಯಯಾಚಿಸಿದರೆ, ಅವನಿಗೆ ಆಶ್ರಯ ನೀಡು. ಹಾಗೆ ಅವನು ಅಲ್ಲಾಹನ ವಚನ ಆಲಿಸುವಂತಾಗಲಿ. ಅನಂತರ ಅವನನ್ನು ಅವನ ಸುರಕ್ಷಿತ ಸ್ಥಳಕ್ಕೆ ತಲುಪಿಸು.**[269] **ಇದು** (ಈ ರಿಯಾಯತಿ) **ಅವರು ತಿಳುವಳಿಕೆಯಿಲ್ಲದ ಜನರಾದುದರಿಂದಾಗಿದೆ.**

وَاِنۡ اَحَدٌ مِّنَ الۡمُشۡرِكِيۡنَ اسۡتَجَارَكَ
فَاَجِرۡهُ حَتّٰى يَسۡمَعَ كَلٰمَ اللّٰهِ ثُمَّ
اَبۡلِغۡهُ مَاۡمَنَهٗ ؕ ذٰلِكَ بِاَنَّهُمۡ قَوۡمٌ
لَّا يَعۡلَمُوۡنَ ۝٦

**7. ಮಸ್ಜಿದುಲ್ ಹರಾಮಿನ ಸಮೀಪ ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡವರನ್ನು ಹೊರತು ಇತರ ಬಹುದೇವಾರಾಧಕರಿಗೆ ಅಲ್ಲಾಹನ ಮತ್ತು ಅವನ ಸಂದೇಶವಾಹಕನ ಜೊತೆ ಒಂದು ಒಪ್ಪಂದವಾಗಿರುವುದಾದರೂ ಹೇಗೆ?**[269A] **ಅವರು ಎಷ್ಟರ ತನಕ ನಿಮ್ಮೊಡನೆ ನೇರವಾಗಿರುತ್ತಾರೋ ನೀವು ಸಹ ಅವರೊಡನೆ ನೇರವಾಗಿರಿ. ಖಂಡಿತವಾಗಿಯೂ ಅಲ್ಲಾಹನು ಭಯಭಕ್ತಿ ತೋರಿಸುವವರನ್ನು ಪ್ರೀತಿಸುತ್ತಾನೆ.**

كَيۡفَ يَكُوۡنُ لِلۡمُشۡرِكِيۡنَ عَهۡدٌ
عِنۡدَ اللّٰهِ وَعِنۡدَ رَسُوۡلِهٖۤ اِلَّا الَّذِيۡنَ
عٰهَدۡتُّمۡ عِنۡدَ الۡمَسۡجِدِ الۡحَرَامِ ۚ فَمَا
اسۡتَقَامُوۡا لَكُمۡ فَاسۡتَقِيۡمُوۡا لَهُمۡ ؕ
اِنَّ اللّٰهَ يُحِبُّ الۡمُتَّقِيۡنَ ۝٧

**8.** (ಆ ಬಹುದೇವಾರಾಧಕರಿಗೆ ರಿಯಾಯಿತಿ ನೀಡುವುದಾದರೂ) **ಹೇಗೆ? ಅವರು ನಿಮ್ಮ ಮೇಲೆ ವಿಜಯ ಸಾಧಿಸಿದರೆ ನಿಮ್ಮೊಂದಿಗಿನ ಕುಟುಂಬ ಸಂಬಂಧವನ್ನಾಗಲಿ ಒಪ್ಪಂದವನ್ನಾಗಲಿ ಪರಿಗಣಿಸಲಾರರು. ಅವರು ಬಾಯಿಮಾತಿನಿಂದ ನಿಮ್ಮನ್ನು ಸಂತೋಷಪಡಿಸಲು ಪ್ರಯತ್ನಿಸುತ್ತಾರೆ. ಅವರ ಹೃದಯಗಳು ಅದನ್ನು ಒಪ್ಪುವುದಿಲ್ಲ. ಅವರಲ್ಲಿ ಹೆಚ್ಚಿನವರು ವಿಶ್ವಾಸ ಘಾತಕರಾಗಿದ್ದಾರೆ.**

كَيۡفَ وَاِنۡ يَّظۡهَرُوۡا عَلَيۡكُمۡ لَا يَرۡقُبُوۡا
فِيۡكُمۡ اِلًّا وَّلَا ذِمَّةً ؕ يُرۡضُوۡنَكُمۡ
بِاَفۡوَاهِهِمۡ وَتَاۡبٰى قُلُوۡبُهُمۡ ۚ وَ
اَكۡثَرُهُمۡ فٰسِقُوۡنَ ۝٨

**9. ಅಲ್ಲಾಹನ ವಚನಗಳಿಗೆ ಪ್ರತಿಯಾಗಿ ಅವರು ಅಲ್ಪಬೆಲೆ ಪಡಕೊಂಡಿದ್ದಾರೆ ಹಾಗೂ ಅವನ ಮಾರ್ಗದಿಂದ ಅವರು** (ಜನರನ್ನು) **ತಡೆದಿದ್ದಾರೆ. ಅವರು ಗೈದ ಕೃತ್ಯಗಳು ಬಹಳ ಕೆಟ್ಟದ್ದಾಗಿವೆ.**

اِشۡتَرَوۡا بِاٰيٰتِ اللّٰهِ ثَمَنًا قَلِيۡلًا
فَصَدُّوۡا عَنۡ سَبِيۡلِهٖ ؕ اِنَّهُمۡ سَآءَ مَا
كَانُوۡا يَعۡمَلُوۡنَ ۝٩

269. ಇಸ್ಲಾಂ ಧರ್ಮವನ್ನು ಸ್ವೀಕರಿಸಲಿಕ್ಕೆ ಏನೂ ಒತ್ತಾಯವಿಲ್ಲವೆಂಬುದಕ್ಕೆ ಇದೊಂದು ಸಾಕ್ಷ್ಯವಾಗಿದೆ.

269A. ಮಕ್ಕಾ ವಿಜಯದ ಸಂದರ್ಭದಲ್ಲಿ ಎಲ್ಲ ಅಮುಸ್ಲಿಮರಿಗೆ ಕ್ಷಮೆ ನೀಡಲಾಗಿದೆಯೆಂದೂ ಅವರೊಂದಿಗೆ ಒಪ್ಪಂದವಾಗಿದೆಯೆಂದೂ ಮಕ್ಕದ ನಿವಾಸಿಗಳು ಪ್ರಚಾರ ಮಾಡಿದ್ದರು. ಅದು ಸರಿಯಲ್ಲವೆಂದು ಪವಿತ್ರ ಖುರ್‌ಆನ್ ಹೇಳುತ್ತದೆ. ಅವರು ಶರಣಾಗತರಾಗಿ ಒಪ್ಪಂದಕ್ಕೆ ಕೋರುವ ತನಕ ಅವರೊಂದಿಗೆ ಹೇಗೆ ಒಡಂಬಡಿಕೆ ಮಾಡುವುದೆಂದು ಇಲ್ಲಿ ಕೇಳಲಾಗಿದೆ.





**10. ಯಾವ ವಿಶ್ವಾಸಿಯ ವಿಚಾರದಲ್ಲೂ ಕುಟುಂಬ ಸಂಬಂಧವನ್ನಾಗಲಿ, ಒಪ್ಪಂದವನ್ನಾಗಲಿ ಅವರು ಗಮನಿಸುವುದಿಲ್ಲ. ಅವರೇ ಹದ್ದು ಮೀರಿದವರಾಗಿದ್ದಾರೆ.**

لَا يَرۡقُبُوۡنَ فِىۡ مُؤۡمِنٍ اِلًّا وَّلَا ذِمَّةً ؕ وَ
اُولٰٓئِكَ هُمُ الۡمُعۡتَدُوۡنَ ۝١٠

**11. ಆದರೆ, ಅವರು ಪಶ್ಚಾತ್ತಾಪಪಟ್ಟು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿ ಝಕಾತ್ ನೀಡಿದರೆ ಅವರು ನಿಮ್ಮ ಧಾರ್ಮಿಕ ಸಹೋದರರಾಗುತ್ತಾರೆ. ನಾವು ನಮ್ಮ ದೃಷ್ಟಾಂತಗಳನ್ನು ತಿಳುವಳಿಕೆಯುಳ್ಳ ಜನರಿಗೋಸ್ಕರ ವಿವರಿಸಿಕೊಡುತ್ತೇವೆ.**

فَاِنۡ تَابُوۡا وَاَقَامُوا الصَّلٰوةَ وَ
اٰتَوُا الزَّكٰوةَ فَاِخۡوَانُكُمۡ فِى الدِّيۡنِ ؕ وَ
نُفَصِّلُ الۡاٰيٰتِ لِقَوۡمٍ يَّعۡلَمُوۡنَ ۝١١

**12. ಇನ್ನು, ಅವರು ಒಡಂಬಡಿಕೆಯ ಬಳಿಕ ತಮ್ಮ ವಚನಪಾಲಿಸದಿದ್ದರೆ ಮತ್ತು ನಿಮ್ಮ ಧರ್ಮವನ್ನು ಅವಹೇಳಿಸಿದರೆ ಅವಿಶ್ವಾಸಿಗಳ ಮುಖಂಡರೊಡನೆ ನೀವು ಸಮರ ಹೂಡಿರಿ - ಅವರು** (ದ್ರೋಹವೆಸಗುವುದನ್ನು) **ನಿಲ್ಲಿಸಲಿಕ್ಕಾಗಿ. ಖಂಡಿತವಾಗಿಯೂ ಅವರ ಪ್ರತಿಜ್ಞೆಗಳಿಗೆ ಏನೂ ಬೆಲೆಯಿಲ್ಲ.**

وَاِنۡ نَّكَثُوۡۤا اَيۡمَانَهُمۡ مِّنۡۢ بَعۡدِ
عَهۡدِهِمۡ وَطَعَنُوۡا فِىۡ دِيۡنِكُمۡ
فَقَاتِلُوۡۤا اَئِمَّةَ الۡكُفۡرِ ۙ اِنَّهُمۡ لَاۤ اَيۡمَانَ
لَهُمۡ لَعَلَّهُمۡ يَنۡتَهُوۡنَ ۝١٢

**13.** (ಸತ್ಯ ವಿಶ್ವಾಸಿಗಳೇ,) **ತಮ್ಮ ಪ್ರತಿಜ್ಞೆಗಳನ್ನು ಉಲ್ಲಂಘಿಸಿದ ಮತ್ತು ಪ್ರವಾದಿಯನ್ನು ಹೊರ ಅಟ್ಟಲು ತೀರ್ಮಾನಿಸಿದ ಒಂದು ಜನತೆಯೊಡನೆ ನೀವು ಯುದ್ಧ ಮಾಡಲಾರಿರಾ? ನಿಮ್ಮೊಡನೆ ಮೊದಲು ಯುದ್ಧ ಆರಂಭಿಸಿದ್ದು ಅವರು ತಾನೆ? ನೀವು ಅವರಿಗೆ ಭಯಪಡುತ್ತೀರಾ? ನೀವು ಸತ್ಯವಿಶ್ವಾಸಿಗಳೆಂದಾದರೆ, ಭಯಪಡಲು ಅತ್ಯಂತ ಅರ್ಹನು ಅಲ್ಲಾಹನಾಗಿದ್ದಾನೆ.**

اَلَا تُقَاتِلُوۡنَ قَوۡمًا نَّكَثُوۡۤا اَيۡمَانَهُمۡ
وَهَمُّوۡا بِاِخۡرَاجِ الرَّسُوۡلِ وَهُمۡ
بَدَءُوۡكُمۡ اَوَّلَ مَرَّةٍ ؕ اَتَخۡشَوۡنَهُمۡ ۚ
فَاللّٰهُ اَحَقُّ اَنۡ تَخۡشَوۡهُ اِنۡ كُنۡتُمۡ
مُّؤۡمِنِيۡنَ ۝١٣

**14. ನೀವು ಅವರೊಡನೆ ಯುದ್ಧಮಾಡಿರಿ. ನಿಮ್ಮ ಕೈಗಳಿಂದ ಅಲ್ಲಾಹನು ಅವರನ್ನು ಶಿಕ್ಷಿಸುವನು ಹಾಗೂ ಅವರನ್ನು ಅಪಮಾನಿಸುವನು. ಅವರ ಮೇಲೆ** (ವಿಜಯ ಸಾಧಿಸಲಿಕ್ಕೆ) **ಅವನು ನಿಮಗೆ ನೆರವಾಗುವನು. ಹಾಗೆ ವಿಶ್ವಾಸಿಗಳಾದ ಜನರ ಹೃದಯಗಳಿಗೆ ಅವನು ನೆಮ್ಮದಿ ನೀಡುವನು.**

قَاتِلُوۡهُمۡ يُعَذِّبۡهُمُ اللّٰهُ
بِاَيۡدِيۡكُمۡ وَيُخۡزِهِمۡ وَيَنۡصُرۡكُمۡ
عَلَيۡهِمۡ وَيَشۡفِ صُدُوۡرَ قَوۡمٍ مُّؤۡمِنِيۡنَ ۝١٤

**15. ಹಾಗೂ ಅವರ ಹೃದಯಗಳಲ್ಲಿರುವ ಕೋಪವನ್ನು ಅವನು ನೀಗಿಸುವನು. ತಾನು ಇಷ್ಟ**

وَيُذۡهِبۡ غَيۡظَ قُلُوۡبِهِمۡ ؕ وَيَتُوۡبُ

اللّٰهُ عَلٰى مَنْ يَّشَآءُ ؕ وَ اللّٰهُ عَلِيْمٌ حَكِيْمٌ ﴿۱۵﴾

ಪಡುವವರ ಮೇಲೆ ಅಲ್ಲಾಹನು ಕರುಣೆ ತೋರಿಸುವನು. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

اَمْ حَسِبْتُمْ اَنْ تُتْرَكُوْا وَلَمَّا يَعْلَمِ اللّٰهُ الَّذِيْنَ جٰهَدُوْا مِنْكُمْ وَ لَمْ يَتَّخِذُوْا مِنْ دُوْنِ اللّٰهِ وَلَا رَسُوْلِهٖ وَ لَا الْمُؤْمِنِيْنَ وَلِيْجَةً ؕ وَ اللّٰهُ خَبِيْرٌۢ بِمَا تَعْمَلُوْنَ ﴿۱۶﴾

**16.** ನಿಮ್ಮ ಪೈಕಿ (ಅಲ್ಲಾಹನ ಮಾರ್ಗದಲ್ಲಿ) ತೀವ್ರಯತ್ನ ಮಾಡುವವರನ್ನು ಹಾಗೂ ಅಲ್ಲಾಹನನ್ನೂ ಅವನ ಪ್ರವಾದಿಯನ್ನೂ ಸತ್ಯವಿಶ್ವಾಸಿಗಳನ್ನೂ ಬಿಟ್ಟು (ಇತರರನ್ನು) ಆಪ್ತ ಮಿತ್ರರನ್ನಾಗಿ ಮಾಡದಿರುವವರನ್ನೂ ಅಲ್ಲಾಹನು ಗುರುತಿಸದೆ ನಿಮ್ಮನ್ನು ಬಿಟ್ಟು ಬಿಡುವನೆಂದು ನೀವು ಭಾವಿಸುತ್ತೀರಾ? ನಿಮ್ಮ ಕೃತ್ಯಗಳ ಕುರಿತು ಅಲ್ಲಾಹನು ಬಲ್ಲವನಾಗಿದ್ದಾನೆ.

مَا كَانَ لِلْمُشْرِكِيْنَ اَنْ يَّعْمُرُوْا مَسٰجِدَ اللّٰهِ شٰهِدِيْنَ عَلٰۤى اَنْفُسِهِمْ بِالْكُفْرِ ؕ اُولٰٓئِكَ حَبِطَتْ اَعْمَالُهُمْ ۚۖ وَ فِى النَّارِ هُمْ خٰلِدُوْنَ ﴿۱۷﴾

**17.** ಬಹುದೇವಾರಾಧಕರು ತಮ್ಮ ಅವಿಶ್ವಾಸದ ಬಗ್ಗೆ ತಾವೇ ಸಾಕ್ಷಿಗಳಾಗಿರುವಾಗ ಅಲ್ಲಾಹನ ಮಸ್ಜಿದ್‌ಗಳ ಪರಿಪಾಲನೆ ಮಾಡಲು ಅವರಿಗೆ ಹಕ್ಕಿರುವುದಿಲ್ಲ. ಅವರ ಕೃತ್ಯಗಳು ನಿಷ್ಫಲವಾಗಿವೆ. ಅವರು ನರಕದಲ್ಲಿ ದೀರ್ಘ ಕಾಲ ವಾಸಿಸುವವರಾಗಿದ್ದಾರೆ.

اِنَّمَا يَعْمُرُ مَسٰجِدَ اللّٰهِ مَنْ اٰمَنَ بِاللّٰهِ وَ الْيَوْمِ الْاٰخِرِ وَ اَقَامَ الصَّلٰوةَ وَ اٰتَى الزَّكٰوةَ وَ لَمْ يَخْشَ اِلَّا اللّٰهَ فَعَسٰۤى اُولٰٓئِكَ اَنْ يَّكُوْنُوْا مِنَ الْمُهْتَدِيْنَ ﴿۱۸﴾

**18.** ಯಾರು ಅಲ್ಲಾಹನಲ್ಲೂ ಅಂತ್ಯದಿನದ ಬಗ್ಗೆಯೂ ವಿಶ್ವಾಸವಿಡುತ್ತಾರೋ, ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೋ, ಝಕಾತ್ ನೀಡುತ್ತಾರೋ, ಅಲ್ಲಾಹನಿಗೆ ಹೊರತು (ಬೇರೆ ಯಾರಿಗೂ) ಭಯ ಪಡುವುದಿಲ್ಲವೋ ಅವರು ಮಾತ್ರ ಅಲ್ಲಾಹನ ಮಸ್ಜಿದ್ ಗಳನ್ನು ಪರಿಪಾಲಿಸುವ ಹಕ್ಕುದಾರರು. ಅಂಥವರೇ ಮಾರ್ಗದರ್ಶನ ಹೊಂದಬಲ್ಲರು.

اَجَعَلْتُمْ سِقَايَةَ الْحَآجِّ وَ عِمَارَةَ الْمَسْجِدِ الْحَرَامِ كَمَنْ اٰمَنَ بِاللّٰهِ وَ الْيَوْمِ الْاٰخِرِ وَ جٰهَدَ فِىْ سَبِيْلِ اللّٰهِ ؕ لَا يَسْتَوٗنَ عِنْدَ اللّٰهِ ؕ وَ اللّٰهُ لَا

**19.** (ಹಜ್ಜ್) ತೀರ್ಥಾಟಕರಿಗೆ ಕುಡಿಯುವ ನೀರು ಕೊಡುವುದು ಮತ್ತು ಮಸ್ಜಿದುಲ್ ಹರಾಮಿನ ಪರಿಪಾಲನೆ ಮಾಡುವುದು, ಅಲ್ಲಾಹನಲ್ಲೂ ಅಂತ್ಯದಿನದ ಬಗ್ಗೆಯೂ ವಿಶ್ವಾಸವಿಡುವವನ ಮತ್ತು ಅಲ್ಲಾಹನ ಮಾರ್ಗದಲ್ಲಿ ಅತಿಯಾಗಿ ಶ್ರಮಿಸುವವನ ಕೃತ್ಯಗಳಿಗೆ ಸಮವೆಂದು ನೀವು ಭಾವಿಸುತ್ತೀರಾ? ಅಲ್ಲಾಹನ ದೃಷ್ಟಿಯಲ್ಲಿ ಅವರೆಂದಿಗೂ





يَهْدِى الْقَوْمَ الظّٰلِمِيْنَ ﴿۱۹﴾

ಸಮಾನರಲ್ಲ.[270] ದುಷ್ಕರ್ಮಿಗಳಾದ ಜನರಿಗೆ ಅಲ್ಲಾಹನು ಸರಿಯಾದ ಮಾರ್ಗದರ್ಶನ ಮಾಡಲಾರನು.

اَلَّذِيْنَ اٰمَنُوْا وَ هَاجَرُوْا وَ جٰهَدُوْا فِىْ سَبِيْلِ اللّٰهِ بِاَمْوَالِهِمْ وَاَنْفُسِهِمْ ۙ اَعْظَمُ دَرَجَةً عِنْدَ اللّٰهِ ؕ وَ اُولٰٓئِكَ هُمُ الْفَآئِزُوْنَ ﴿۲۰﴾

**20.** ಯಾರು ವಿಶ್ವಾಸಹೊಂದಿ (ಅಲ್ಲಾಹನ ಸಲುವಾಗಿ) ವಲಸೆ ಹೋಗುತ್ತಾರೋ ಹಾಗೂ ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತಿನಿಂದಲೂ ಶರೀರದಿಂದಲೂ ಅತಿಯಾಗಿ ಶ್ರಮಿಸುತ್ತಾರೋ (ಅವರಿಗೆ) ಅಲ್ಲಾಹನ ಬಳಿಯಲ್ಲಿ ಮಹತ್ತರ ಪದವಿಗಳಿವೆ. ಅವರೇ ವಿಜಯಶಾಲಿಗಳು.

يُبَشِّرُهُمْ رَبُّهُمْ بِرَحْمَةٍ مِّنْهُ وَ رِضْوَانٍ وَّ جَنّٰتٍ لَّهُمْ فِيْهَا نَعِيْمٌ مُّقِيْمٌ ﴿۲۱﴾

**21.** ಅವರ ಪ್ರಭು ತನ್ನ ಕಾರುಣ್ಯ ಮತ್ತು ತೃಪ್ತಿ ಮೂಲಕ ಅವರಿಗೆ ಸ್ವರ್ಗೀಯ ತೋಟಗಳ ಬಗ್ಗೆ ಶುಭವಾರ್ತೆ ಅರುಹುತ್ತಾನೆ. ಅಲ್ಲಿ ಅವರಿಗೆ ಶಾಶ್ವತವಾದ ಸುಖಾನುಭೂತಿ ಲಭಿಸುವುದು.

خٰلِدِيْنَ فِيْهَاۤ اَبَدًا ؕ اِنَّ اللّٰهَ عِنْدَهٗۤ اَجْرٌ عَظِيْمٌ ﴿۲۲﴾

**22.** ಅಲ್ಲಿ ಅವರು ಶಾಶ್ವತವಾಗಿ ನೆಲೆಸುವವರು. ಖಂಡಿತವಾಗಿಯೂ ಅಲ್ಲಾಹನ ಬಳಿ ಮಹತ್ತರ ಪ್ರತಿಫಲವಿದೆ.

يٰۤاَيُّهَا الَّذِيْنَ اٰمَنُوْا لَا تَتَّخِذُوْۤا اٰبَآءَكُمْ وَ اِخْوَانَكُمْ اَوْلِيَآءَ اِنِ اسْتَحَبُّوا الْكُفْرَ عَلَى الْاِيْمَانِ ؕ وَ مَنْ يَّتَوَلَّهُمْ مِّنْكُمْ فَاُولٰٓئِكَ هُمُ الظّٰلِمُوْنَ ﴿۲۳﴾

**23.** ಎಲೈ ವಿಶ್ವಾಸಿಗಳೇ, ನಿಮ್ಮ ಪಿತರರೂ ನಿಮ್ಮ ಸಹೋದರರೂ ಸತ್ಯವಿಶ್ವಾಸಕ್ಕಿಂತ ಅವಿಶ್ವಾಸವನ್ನು ಹೆಚ್ಚು ಮೆಚ್ಚುವವರಾಗಿದ್ದರೆ, ನೀವು ಅವರನ್ನು ಆಪ್ತರನ್ನಾಗಿ ಮಾಡಬೇಡಿರಿ. ಇನ್ನು ನಿಮ್ಮ ಪೈಕಿ ಯಾರಾದರೂ ಅವರನ್ನು (ಅಂಥ) ಸ್ನೇಹಿತರನ್ನಾಗಿ ಮಾಡಿದರೆ ಅವರು ತಪ್ಪಿತಸ್ಥರಾಗುತ್ತಾರೆ.

قُلْ اِنْ كَانَ اٰبَآؤُكُمْ وَ اَبْنَآؤُكُمْ وَ اِخْوَانُكُمْ وَ اَزْوَاجُكُمْ وَ عَشِيْرَتُكُمْ وَ اَمْوَالُ ۨاقْتَرَفْتُمُوْهَا وَ تِجَارَةٌ

**24.** ಹೇಳು: 'ನಿಮ್ಮ ತಂದೆ ತಾತಂದಿರು, ನಿಮ್ಮ ಸಂತಾನ, ನಿಮ್ಮ ಸಹೋದರರು, ನಿಮ್ಮ ಬಾಳಸಂಗಾತಿಗಳು, ನಿಮ್ಮ (ಇತರ) ಬಂಧುಬಾಂಧವರು, ನೀವು ಸಂಪಾದಿಸಿದ ಸಂಪತ್ತು, ನಷ್ಟ ಹೊಂದಬಹುದೆಂದು

270. ದುರ್ಬಲರಾದ ಕೆಲವರು ಹಿಜ್‌ರತ್ ಮಾಡಲು ಭಯಪಟ್ಟು ಹಾಜಿಗಳಿಗೆ ಸೇವೆಮಾಡುತ್ತಲೂ ಮಸ್ಜಿದುಲ್ ಹರಾಮಿನ ಪರಿಪಾಲನೆ ಮಾಡುತ್ತಲೂ ಮಕ್ಕದಲ್ಲೇ ಬಾಕಿಯುಳಿದಿದ್ದರು. ಅವರು ಮಕ್ಕ ವಿಜಯದ ಬಳಿಕ ಮುಹಾಜಿರುಗಳಿಗಿಂತ ತಾವು ಶ್ರೇಷ್ಠರೆಂದು ಸ್ವಯಂ ಹೇಳಿಕೊಳ್ಳುತ್ತಿದ್ದರು. ಈ ವಚನದಲ್ಲಿ ಅಲ್ಲಾಹನು ಅವರ ವಾದವನ್ನು ಖಂಡಿಸಿ ಮುಹಾಜಿರ್ ಮತ್ತು ಮುಜಾಹಿದ್‌ರ ಸ್ಥಾನ ಉನ್ನತಮಟ್ಟದ್ದೆಂದೂ ಇತರರು ಅವರ ಸ್ಥಾನಕ್ಕೆ ತಲಪಲಾರರೆಂದೂ ಮನಗಾಣಿಸಿದ್ದಾನೆ.

ನೀವು ಭಯಪಡುವ ವ್ಯಾಪಾರ, ನೀವು ಪ್ರೀತಿಸುವ ನಿಮ್ಮ ಮನೆಗಳು ಅಲ್ಲಾಹನಿಗಿಂತಲೂ ಅವನ ಪ್ರವಾದಿಗಿಂತಲೂ ಅವನ ಮಾರ್ಗದಲ್ಲಿ ಅತಿ ಶ್ರಮಪಡುವುದಕ್ಕಿಂತಲೂ ನಿಮಗೆ ಹೆಚ್ಚು ಪ್ರಿಯವಾಗಿದ್ದರೆ, ಅಲ್ಲಾಹನು ತನ್ನ ತೀರ್ಮಾನವನ್ನು ಜಾರಿಗೆ ತರುವ ತನಕ ನೀವು ನಿರೀಕ್ಷಿಸಿರಿ. ಅವಿಧೇಯ ಜನರಿಗೆ ಅಲ್ಲಾಹನು ಸರಿಯಾದ ಮಾರ್ಗದರ್ಶನ ಮಾಡಲಾರ.

تَخْشَوْنَ كَسَادَهَا وَمَسٰكِنُ تَرْضَوْنَهَآ
اَحَبَّ اِلَيْكُمْ مِّنَ اللّٰهِ وَرَسُوْلِهٖ وَجِهَادٍ
فِيْ سَبِيْلِهٖ فَتَرَبَّصُوْا حَتّٰى يَاْتِيَ اللّٰهُ
بِاَمْرِهٖ ۭ وَاللّٰهُ لَا يَهْدِي الْقَوْمَ
الْفٰسِقِيْنَ ﴿٢٤﴾

**25.** ನಿಶ್ಚಯವಾಗಿಯೂ ಅಲ್ಲಾಹನು ನಿಮಗೆ ಹಲವು ಯುದ್ಧರಂಗಗಳಲ್ಲಿ ನೆರವಾಗಿದ್ದಾನೆ - (ಮುಖ್ಯವಾಗಿ) ಹುನೈನ್ (ಯುದ್ಧ) ದಿನದಂದು. ಆಗ ನೀವು ಅಧಿಕ ಸಂಖ್ಯೆಯಲ್ಲಿದ್ದುದು ನಿಮ್ಮನ್ನು ಅಹಂಭಾವಿಗಳನ್ನಾಗಿ ಮಾಡಿತ್ತು. ಆದರೆ ಅದು (ನಿಮ್ಮ ಆಧಿಕ್ಯ) ನಿಮಗೆ ಪ್ರಯೋಜನವನ್ನೇನೂ ಮಾಡಲಿಲ್ಲ. ಭೂಮಿ ವಿಶಾಲವಾಗಿದ್ದು ಕೂಡ ಅದು ನಿಮಗೆ ಸಂಕುಚಿತಗೊಳಿಸಲ್ಪಟ್ಟಿತು. ನೀವು ಹಿಮ್ಮೆಟ್ಟಿ ಬೆನ್ನು ತೋರಿಸಿದಿರಿ.

لَقَدْ نَصَرَكُمُ اللّٰهُ فِيْ مَوَاطِنَ كَثِيْرَةٍ ۙ
وَّيَوْمَ حُنَيْنٍ ۙ اِذْ اَعْجَبَتْكُمْ كَثْرَتُكُمْ
فَلَمْ تُغْنِ عَنْكُمْ شَيْـًٔا وَّضَاقَتْ
عَلَيْكُمُ الْاَرْضُ بِمَا رَحُبَتْ ثُمَّ
وَلَّيْتُمْ مُّدْبِرِيْنَ ﴿٢٥﴾

**26.** ಅನಂತರ ಅಲ್ಲಾಹನು ತನ್ನ ಸಂದೇಶವಾಹಕನಿಗೂ ಸತ್ಯವಿಶ್ವಾಸಿಗಳಿಗೂ ತನ್ನ ಕಡೆಯಿಂದ ಮನಶ್ಶಾಂತಿಯನ್ನು ದಯಪಾಲಿಸಿದನು. ನೀವು ಕಂಡಿಲ್ಲದ ಕೆಲವು ಸೈನ್ಯಗಳನ್ನೂ ಅವನು ಇಳಿಸಿದನು. ಹಾಗೆ ಅವಿಶ್ವಾಸಿಗಳನ್ನು ಅವನು ಶಿಕ್ಷಿಸಿದನು. ಅವಿಶ್ವಾಸಿಗಳಿಗಿರುವ ಪ್ರತಿಫಲ ಅದೇ ಆಗಿದೆ.

ثُمَّ اَنْزَلَ اللّٰهُ سَكِيْنَتَهٗ عَلٰى
رَسُوْلِهٖ وَعَلَى الْمُؤْمِنِيْنَ وَاَنْزَلَ
جُنُوْدًا لَّمْ تَرَوْهَا وَعَذَّبَ الَّذِيْنَ
كَفَرُوْا ۭ وَذٰلِكَ جَزَاۗءُ الْكٰفِرِيْنَ ﴿٢٦﴾

**27.** ಆ ಬಳಿಕ ಅಲ್ಲಾಹನು, ತಾನಿಚ್ಛಿಸುವವರ ಕಡೆಗೆ ಮತ್ತೂ ಕರುಣೆಯಿಂದ ತಿರುಗುತ್ತಾನೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

ثُمَّ يَتُوْبُ اللّٰهُ مِنْۢ بَعْدِ ذٰلِكَ عَلٰى
مَنْ يَّشَاۗءُ ۭ وَاللّٰهُ غَفُوْرٌ رَّحِيْمٌ ﴿٢٧﴾

**28.** ಎಲೈ ವಿಶ್ವಾಸಿಗಳೇ, ಖಂಡಿತವಾಗಿಯೂ ಬಹುದೇವಾರಾಧಕರು ಅಶುದ್ಧರು.[271] ಆದ್ದರಿಂದ ಅವರು ಈ ವರ್ಷದ ಬಳಿಕ ಮಸ್ಜಿದುಲ್ ಹರಾಮನ್ನು

يٰٓاَيُّهَا الَّذِيْنَ اٰمَنُوْٓا اِنَّمَا الْمُشْرِكُوْنَ
نَجَسٌ فَلَا يَقْرَبُوا الْمَسْجِدَ الْحَرَامَ

271. ಮನಃಪರಿಶುದ್ಧತೆ ಇಲ್ಲದವರು ಎಂದು ತಾತ್ಪರ್ಯ.





ಸಮೀಪಿಸಬಾರದು. ನೀವು ದಾರಿದ್ರ್ಯವನ್ನು ಭಯಪಡುವುದಾದರೆ,[272] ಅಲ್ಲಾಹನು ಇಚ್ಛಿಸಿದರೆ, ತನ್ನ ಅನುಗ್ರಹದಿಂದ ಅವನು ನಿಮ್ಮನ್ನು ಸಂಪನ್ನಗೊಳಿಸುವನು. ಖಂಡಿತವಾಗಿಯೂ ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

بَعْدَ عَامِهِمْ هٰذَا ۚ وَاِنْ خِفْتُمْ عَيْلَةً
فَسَوْفَ يُغْنِيْكُمُ اللّٰهُ مِنْ فَضْلِهٖٓ اِنْ
شَاۗءَ ۭ اِنَّ اللّٰهَ عَلِيْمٌ حَكِيْمٌ ﴿٢٨﴾

**29.** ಗ್ರಂಥ ನೀಡಲ್ಪಟ್ಟವರ ಪೈಕಿ ಅಲ್ಲಾಹನನ್ನೂ ಅಂತ್ಯ ದಿನದ ಬಗ್ಗೆಯೂ ನಂಬದೆ, ಅಲ್ಲಾಹ್ ಮತ್ತು ಅವನ ಸಂದೇಶವಾಹಕ ನಿಷಿದ್ಧಗೊಳಿಸಿದುದನ್ನು ನಿಷಿದ್ಧಗೊಳಿಸದೆ, ಸತ್ಯಧರ್ಮವನ್ನು ಅನುಸರಿಸದೆ ಇರುವವರೊಡನೆ, ಅವರು ಶರಣಾಗತರಾಗಿ ತಮ್ಮ ಕೈಗಳಿಂದ 'ಜಿಝಿಯಾ' (ತೆರಿಗೆ) ನೀಡುವ ತನಕ ನೀವು ಯುದ್ಧ ಮಾಡಿರಿ.[273]

قَاتِلُوا الَّذِيْنَ لَا يُؤْمِنُوْنَ بِاللّٰهِ
وَلَا بِالْيَوْمِ الْاٰخِرِ وَلَا يُحَرِّمُوْنَ
مَا حَرَّمَ اللّٰهُ وَرَسُوْلُهٗ وَلَا يَدِيْنُوْنَ
دِيْنَ الْحَقِّ مِنَ الَّذِيْنَ اُوْتُوا
الْكِتٰبَ حَتّٰى يُعْطُوا الْجِزْيَةَ عَنْ
يَّدٍ وَّهُمْ صٰغِرُوْنَ ﴿٢٩﴾

**30.** ಉಝೈರ್ (ಎಜ್ರ) ದೇವಸುತನೆಂದು ಯಹೂದ್ಯರು ಹೇಳುತ್ತಾರೆ. ಮಸೀಹ್ (ಯೇಸು) ದೇವಸುತನೆಂದು ಕ್ರೈಸ್ತರೂ ಹೇಳುತ್ತಾರೆ. ಅದು ಅವರ ಬಾಯಿಮಾತು ಮಾತ್ರವಾಗಿದೆ. ಅವರು ತಮಗಿಂತ ಹಿಂದಿನ ಕೆಲವು ಅವಿಶ್ವಾಸಿಗಳ ವಾದಗಳನ್ನು ಅನುಕರಿಸುತ್ತಾರೆ. ಅಲ್ಲಾಹನು ಅವರನ್ನು ನಾಶಪಡಿಸಲಿ. ಅವರು ಹೇಗೆ ವಾಸ್ತವಿಕತೆಯಿಂದ ದೂರ ಸರಿಯುತ್ತಿದ್ದಾರೆ!

وَقَالَتِ الْيَهُوْدُ عُزَيْرُۨ ابْنُ اللّٰهِ وَ
قَالَتِ النَّصٰرَى الْمَسِيْحُ ابْنُ اللّٰهِ ۭ
ذٰلِكَ قَوْلُهُمْ بِاَفْوَاهِهِمْ ۚ يُضَاهِـُٔوْنَ
قَوْلَ الَّذِيْنَ كَفَرُوْا مِنْ قَبْلُ ۭ
قٰتَلَهُمُ اللّٰهُ ڙ اَنّٰى يُؤْفَكُوْنَ ﴿٣٠﴾

**31.** ಅವರು ತಮ್ಮ ಧರ್ಮ ಪಂಡಿತರನ್ನೂ ಸಂತರನ್ನೂ ಮರ್ಯಮ್‌ಸುತ ಮಸೀಹನನ್ನೂ ಅಲ್ಲಾಹನ ಹೊರತಾಗಿ ಪ್ರಭುಗಳನ್ನಾಗಿ ಮಾಡಿಕೊಂಡಿರುವರು. ಆದರೆ ವಾಸ್ತವದಲ್ಲಿ ಏಕದೇವಾರಾಧನೆಯನ್ನು ಮಾತ್ರ ಅವರಿಗೆ ಆಜ್ಞಾಪಿಸಲಾಗಿತ್ತು. ಅವನ ಹೊರತು ಬೇರೆ

اِتَّخَذُوْٓا اَحْبَارَهُمْ وَرُهْبَانَهُمْ اَرْبَابًا
مِّنْ دُوْنِ اللّٰهِ وَالْمَسِيْحَ ابْنَ مَرْيَمَ ۚ
وَمَآ اُمِرُوْٓا اِلَّا لِيَعْبُدُوْٓا اِلٰهًا
وَّاحِدًا ۚ لَآ اِلٰهَ اِلَّا هُوَ ۭ سُبْحٰنَهٗ

272. ಅವರಿಲ್ಲವಾದರೆ ವ್ಯಾಪಾರ ಕುಂದುವುದೆಂದೂ ಅದರ ಪರಿಣಾಮವಾಗಿ ಆರ್ಥಿಕ ಕುಸಿತ ಉಂಟಾಗುವುದೆಂದೂ ಭಯಪಡುವುದಾದರೆ.

273. ಏನೂ ಕಾರಣವಿಲ್ಲದೆ ಅವರೊಡನೆ ಯುದ್ಧಮಾಡಬೇಕೆಂದು ಇದರ ಅರ್ಥವಲ್ಲ. ಶತ್ರು ಅನ್ಯಾಯವಾಗಿ ಆಕ್ರಮಣ ಮಾಡಿದರೆ ಪ್ರತ್ಯಾಕ್ರಮಣಕ್ಕೆ ಇಸ್ಲಾಂ ಅನುಮತಿ ನೀಡುತ್ತದೆ. ಈ ಬಗ್ಗೆ ಬೇರೆ ವಚನಗಳಲ್ಲಿ ವಿವರಣೆ ಇದೆ (2:191 ನೋಡಿರಿ). ಗ್ರಂಥ ನೀಡಲ್ಪಟ್ಟವರು ಆಕ್ರಮಣ ಮಾಡಿದರೆ ಅವರು ಸೋಲಿಸಲ್ಪಟ್ಟು 'ಜಿಝಿಯಾ' ಕೊಡಲು ಒಪ್ಪುವ ವರೆಗೆ ಅವರೊಡನೆ ಯುದ್ಧಮಾಡಿರಿ ಎಂದು ಇದರ ತಾತ್ಪರ್ಯವಾಗಿದೆ.

عَمَّا يُشْرِكُونَ ﴿٣١﴾

ದೇವನಿಲ್ಲ. ಅವರು ಕಲ್ಪಿಸುವ (ದೇವ) ಸಹಭಾಗಿತ್ವ ದಿಂದೆಲ್ಲ ಅವನು ಪರಿಶುದ್ಧನು.

يُرِيدُونَ أَن يُطْفِـُٔوا۟ نُورَ ٱللَّهِ بِأَفْوَٰهِهِمْ وَيَأْبَى ٱللَّهُ إِلَّآ أَن يُتِمَّ نُورَهُۥ وَلَوْ كَرِهَ ٱلْكَـٰفِرُونَ ﴿٣٢﴾

**32.** ಅಲ್ಲಾಹನ ಪ್ರಕಾಶವನ್ನು ತಮ್ಮ ಬಾಯಿಯಿಂದ (ಊದಿ) ನಂದಿಸಲು ಅವರು ಬಯಸುತ್ತಾರೆ. ಆದರೆ ಅಲ್ಲಾಹನು ತನ್ನ ಪ್ರಕಾಶವನ್ನು ಪೂರ್ಣಗೊಳಿಸದೆ ಬಿಡಲಾರ - ಅವಿಶ್ವಾಸಿಗಳು ಅದನ್ನು ಇಷ್ಟಪಡದಿದ್ದರೂ ಸರಿ.

هُوَ ٱلَّذِىٓ أَرْسَلَ رَسُولَهُۥ بِٱلْهُدَىٰ وَدِينِ ٱلْحَقِّ لِيُظْهِرَهُۥ عَلَى ٱلدِّينِ كُلِّهِۦ وَلَوْ كَرِهَ ٱلْمُشْرِكُونَ ﴿٣٣﴾

**33.** ಸತ್ಪಥ ಮತ್ತು ಸತ್ಯ ಧರ್ಮ ಸಹಿತ ತನ್ನ ಸಂದೇಶವಾಹಕನನ್ನು ಕಳುಹಿಸಿದವನು ಅವನೇ - ಆ ಧರ್ಮವು ಇತರ ಎಲ್ಲ ಧರ್ಮಗಳ ಮೇಲೆ ವಿಜಯ ಸಾಧಿಸಲಿಕ್ಕಾಗಿ - ಬಹುದೇವಾರಾಧಕರು ಅದನ್ನು ಇಷ್ಟ ಪಡದಿದ್ದರೂ ಸರಿ.

يَـٰٓأَيُّهَا ٱلَّذِينَ ءَامَنُوٓا۟ إِنَّ كَثِيرًا مِّنَ ٱلْأَحْبَارِ وَٱلرُّهْبَانِ لَيَأْكُلُونَ أَمْوَٰلَ ٱلنَّاسِ بِٱلْبَـٰطِلِ وَيَصُدُّونَ عَن سَبِيلِ ٱللَّهِ ۗ وَٱلَّذِينَ يَكْنِزُونَ ٱلذَّهَبَ وَٱلْفِضَّةَ وَلَا يُنفِقُونَهَا فِى سَبِيلِ ٱللَّهِ فَبَشِّرْهُم بِعَذَابٍ أَلِيمٍ ﴿٣٤﴾

**34.** ಎಲೈ ವಿಶ್ವಾಸಿಗಳೇ, ಹೆಚ್ಚಿನ ಧರ್ಮಪಂಡಿತರೂ ಸನ್ಯಾಸಿಗಳೂ ಜನರ ಸಂಪತ್ತನ್ನು ಅನ್ಯಾಯವಾಗಿ ಕೈವಶಪಡಿಸಿ ತಿನ್ನುತ್ತಾರೆ ಹಾಗೂ ಅಲ್ಲಾಹನ ಮಾರ್ಗದಿಂದ ಜನರನ್ನು ತಡೆಯುತ್ತಾರೆ. ಯಾರು ಚಿನ್ನ ಮತ್ತು ಬೆಳ್ಳಿಯನ್ನು ಕೂಡಿಟ್ಟು ಅಲ್ಲಾಹನ ಮಾರ್ಗದಲ್ಲಿ ಅದನ್ನು ಖರ್ಚುಮಾಡುವುದಿಲ್ಲವೋ, ಅವರಿಗೆ ಯಾತನಾಮಯವಾದ ಶಿಕ್ಷೆ ಇದೆಯೆಂದು ಮುನ್ನೆಚ್ಚರಿಕೆ ನೀಡು.

يَوْمَ يُحْمَىٰ عَلَيْهَا فِى نَارِ جَهَنَّمَ فَتُكْوَىٰ بِهَا جِبَاهُهُمْ وَجُنُوبُهُمْ وَظُهُورُهُمْ ۖ هَـٰذَا مَا كَنَزْتُمْ لِأَنفُسِكُمْ فَذُوقُوا۟ مَا كُنتُمْ تَكْنِزُونَ ﴿٣٥﴾

**35.** ನರಕಾಗ್ನಿಯಲ್ಲಿ ಅದು[273A] ಕಾಯಿಸಲ್ಪಟ್ಟು ಅದರಿಂದ ಅವರ ಹಣೆಯ ಮೇಲೂ ಪಾರ್ಶ್ವಗಳ ಮೇಲೂ ಬೆನ್ನುಗಳ ಮೇಲೂ ಬರೆಹಾಕಲಾಗುವ ದಿನದಂದು, 'ನೀವು ನಿಮಗೋಸ್ಕರ ಸಂಗ್ರಹಿಸಿದ್ದು ಇದೇ ಆಗಿದೆ. ಆದುದರಿಂದ ನೀವು ಸಂಗ್ರಹಿಸಿಟ್ಟಿದ್ದನ್ನು ನೀವೇ ಅನುಭವಿಸಿರಿ' ಎಂದು ಅವರೊಡನೆ ಹೇಳಲಾಗುವುದು.

273A. ಚಿನ್ನ-ಬೆಳ್ಳಿ.





إِنَّ عِدَّةَ ٱلشُّهُورِ عِندَ ٱللَّهِ ٱثْنَا عَشَرَ شَهْرًا فِى كِتَـٰبِ ٱللَّهِ يَوْمَ خَلَقَ ٱلسَّمَـٰوَٰتِ وَٱلْأَرْضَ مِنْهَآ أَرْبَعَةٌ حُرُمٌ ۚ ذَٰلِكَ ٱلدِّينُ ٱلْقَيِّمُ ۚ فَلَا تَظْلِمُوا۟ فِيهِنَّ أَنفُسَكُمْ ۚ وَقَـٰتِلُوا۟ ٱلْمُشْرِكِينَ كَآفَّةً كَمَا يُقَـٰتِلُونَكُمْ كَآفَّةً ۚ وَٱعْلَمُوٓا۟ أَنَّ ٱللَّهَ مَعَ ٱلْمُتَّقِينَ ﴿٣٦﴾

**36.** ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದ ದಿನ (ಮೊದಲ್ಗೊಂಡು) ಅಲ್ಲಾಹನ ನಿಯಮಾನುಸಾರ ಮಾಸಗಳ ಎಣಿಕೆ ಹನ್ನೆರಡಾಗಿದೆ. ಅವುಗಳ ಪೈಕಿ ನಾಲ್ಕು ಆದರಣೀಯವಾಗಿವೆ.[274] ಇದೇ ಶಾಶ್ವತವಾದ ಧರ್ಮ ನಿಯಮ ವಾಗಿದೆ. ಆದ್ದರಿಂದ ಆ ಮಾಸಗಳಲ್ಲಿ ನೀವು ನಿಮಗೆಯೇ ಅನ್ಯಾಯವೆಸಗಬೇಡಿರಿ. ಬಹುದೇವಾರಾಧಕರು ಒಟ್ಟು ಸೇರಿ ನಿಮ್ಮೊಡನೆ ಯುದ್ಧ ಮಾಡುವ ಪ್ರಕಾರವೇ ನೀವೆಲ್ಲರೂ ಒಟ್ಟುಗೂಡಿ ಅವರೊಡನೆ ಯುದ್ಧಮಾಡಿರಿ. ಅಲ್ಲಾಹನು ಖಂಡಿತವಾಗಿಯೂ ಸದ್ಧರ್ಮಿಗಳ ಜತೆಯಲ್ಲಿದ್ದಾನೆಂದು ತಿಳಿದುಕೊಳ್ಳಿರಿ.

إِنَّمَا ٱلنَّسِىٓءُ زِيَادَةٌ فِى ٱلْكُفْرِ ۖ يُضَلُّ بِهِ ٱلَّذِينَ كَفَرُوا۟ يُحِلُّونَهُۥ عَامًا وَيُحَرِّمُونَهُۥ عَامًا لِّيُوَاطِـُٔوا۟ عِدَّةَ مَا حَرَّمَ ٱللَّهُ فَيُحِلُّوا۟ مَا حَرَّمَ ٱللَّهُ ۚ زُيِّنَ لَهُمْ سُوٓءُ أَعْمَـٰلِهِمْ ۗ وَٱللَّهُ لَا يَهْدِى ٱلْقَوْمَ ٱلْكَـٰفِرِينَ ﴿٣٧﴾

**37.** ಅವುಗಳನ್ನು (ಆದರಣೀಯ ಮಾಸಗಳನ್ನು) ಬದಲಾಯಿಸುವುದು ಅವಿಶ್ವಾಸದಲ್ಲಿ ಹೆಚ್ಚಳವೇ ಆಗಿದೆ. ಆ ಮೂಲಕ ಅವಿಶ್ವಾಸಿಗಳು ದಾರಿತಪ್ಪಿಸಲ್ಪಡುತ್ತಾರೆ. ಅವರು ಅದನ್ನು[274A] ಒಂದು ವರ್ಷ ಧರ್ಮಬದ್ಧವೆಂದೂ ಇನ್ನೊಂದು ವರ್ಷ ನಿಷಿದ್ಧವೆಂದೂ ಬಗೆಯುತ್ತಾರೆ. ಹಾಗೆ ಅಲ್ಲಾಹನು ಪವಿತ್ರಗೊಳಿಸಿದ ಮಾಸಗಳ ಸಂಖ್ಯೆಯನ್ನು ಹೊಂದಿಸಲಿಕ್ಕೂ ಅಲ್ಲಾಹನು ನಿಷಿದ್ಧಗೊಳಿಸಿದುದನ್ನು ಧರ್ಮಬದ್ಧಗೊಳಿಸಲಿಕ್ಕೂ ಅವರು ಆ ರೀತಿ ಮಾಡುತ್ತಾರೆ. ತಮ್ಮ ದುಷ್ಕೃತ್ಯಗಳ ಕೆಡುಕುಗಳು ಅವರಿಗೆ ಚಲೋದಾಗಿ ತೋರಿಸಲ್ಪಡುತ್ತವೆ. ಅಲ್ಲಾಹನು ಅವಿಶ್ವಾಸಿಗಳಾದ ಜನರಿಗೆ ಸತ್ಪಥ ದರ್ಶನ ಮಾಡಲಾರ.

يَـٰٓأَيُّهَا ٱلَّذِينَ ءَامَنُوا۟ مَا لَكُمْ إِذَا قِيلَ لَكُمُ ٱنفِرُوا۟ فِى سَبِيلِ ٱللَّهِ ٱثَّاقَلْتُمْ إِلَى ٱلْأَرْضِ ۚ أَرَضِيتُم بِٱلْحَيَوٰةِ ٱلدُّنْيَا مِنَ ٱلْـَٔاخِرَةِ ۚ فَمَا مَتَـٰعُ ٱلْحَيَوٰةِ ٱلدُّنْيَا فِى ٱلْـَٔاخِرَةِ إِلَّا قَلِيلٌ ﴿٣٨﴾

**38.** ಎಲೈ ವಿಶ್ವಾಸಿಗಳೇ, ನಿಮಗೇನಾಗಿದೆ? ಅಲ್ಲಾಹನ ಮಾರ್ಗದಲ್ಲಿ (ಹೋರಾಡಲಿಕ್ಕೆ) ಸನ್ನದ್ಧರಾಗಿ ಹೊರಡಿರಿ ಎಂದು ನಿಮ್ಮೊಡನೆ ಹೇಳುವಾಗ ನೀವು ಭೂಮಿಗೆ ಅಂಟಿಕೊಳ್ಳುತ್ತೀರಿ. ಪರಲೋಕ ಜೀವಿತಕ್ಕೆ ಬದಲು ನೀನು ಇಹಲೋಕ ಜೀವನವನ್ನು ಇಷ್ಟಪಡುತ್ತೀರಾ? ಆದರೆ ಐಹಿಕ ಜೀವನದ ಗಳಿಕೆಗಳು ಪಾರತ್ರಿಕ ಜೀವನಕ್ಕೆ ಹೋಲಿಸಿದರೆ ಬರೇ ಕ್ಷುಲ್ಲಕ.

274. ರಜಬ್, ದುಲ್‌ಖಅದ್, ದುಲ್‌ಹಜ್ಜ್ ಮತ್ತು ಮುಹರ್ರಂ-ಇವು ಆದರಣೀಯ ಮಾಸಗಳು.

274A. ಆದರಣೀಯ ಮಾಸಗಳ ಪೈಕಿ ಯಾವುದೇ ಒಂದನ್ನು.

**39.** ನೀವು (ಯುದ್ಧಕ್ಕೆ) ಸನ್ನದ್ಧರಾಗಿ ಹೊರಡದಿದ್ದರೆ ಅವನು ನಿಮಗೆ ಯಾತನಾಮಯ ಶಿಕ್ಷೆ ನೀಡುವನು ಮತ್ತು ನಿಮ್ಮ ಬದಲಿಗೆ ಬೇರೊಂದು ಜನಾಂಗವನ್ನು ಅವನು ಆಯ್ಕೆಮಾಡುವನು. ನೀವು ಅವನಿಗೇನೂ ಹಾನಿಯನ್ನುಂಟುಮಾಡಲಾರಿರಿ. ಎಲ್ಲ ವಿಚಾರಗಳಲ್ಲೂ ಅಲ್ಲಾಹನು ಸರ್ವಶಕ್ತನು.

إِلَّا تَنفِرُوا يُعَذِّبْكُمْ عَذَابًا أَلِيمًا وَيَسْتَبْدِلْ قَوْمًا غَيْرَكُمْ وَلَا تَضُرُّوهُ شَيْئًا ۗ وَاللَّهُ عَلَىٰ كُلِّ شَيْءٍ قَدِيرٌ ﴿٣٩﴾

**40.** ನೀವು ಅವರಿಗೆ (ಪ್ರವಾದಿಗೆ) ನೆರವು ನೀಡದಿದ್ದರೆ (ತಿಳಿದುಕೊಳ್ಳಿರಿ), ಅವಿಶ್ವಾಸಿಗಳು ಅವರನ್ನು (ತನ್ನ ಊರಿನಿಂದ) ಬಹಿಷ್ಕರಿಸಿದಾಗ[275] ದಿಟವಾಗಿಯೂ ಅಲ್ಲಾಹನು ಅವರಿಗೆ ನೆರವಿತ್ತಿದ್ದನು - ಅವರು ಇಬ್ಬರಲ್ಲಿ ಒಬ್ಬರಾಗಿದ್ದರು - ಅವರೀರ್ವರೂ ಆ ಗುಹೆಯಲ್ಲಿದ್ದಾಗ;[276] 'ನೀನು ವ್ಯಥೆ ಪಡಬೇಡ, ಖಂಡಿತವಾಗಿಯೂ ಅಲ್ಲಾಹನು ನಮ್ಮೊಂದಿಗಿದ್ದಾನೆ' ಎಂದು ಅವರು ತನ್ನ ಸಂಗಡಿಗನೊಡನೆ ಹೇಳಿದ್ದಾಗ. ಆ ಸಂದರ್ಭದಲ್ಲಿ ಅಲ್ಲಾಹನು ತನ್ನ ಕಡೆಯಿಂದಿರುವ ಸಾಂತ್ವನವನ್ನು ಅವರಿಗೆ ಇಳಿಸಿಕೊಟ್ಟನು. ನಿಮಗೆ ಅಗೋಚರವಾದ ಸೈನ್ಯಗಳಿಂದ ಅವನು ಅವರಿಗೆ ಬೆಂಬಲವಿತ್ತನು ಹಾಗೂ ಅವಿಶ್ವಾಸಿಗಳ ಮಾತನ್ನು ನಿಷ್ಫಲಗೊಳಿಸಿದನು. ಅಲ್ಲಾಹನ ವಚನ ಮಾತ್ರವೇ ಸರ್ವೋನ್ನತವಾದುದು. ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

إِلَّا تَنصُرُوهُ فَقَدْ نَصَرَهُ اللَّهُ إِذْ أَخْرَجَهُ الَّذِينَ كَفَرُوا ثَانِيَ اثْنَيْنِ إِذْ هُمَا فِي الْغَارِ إِذْ يَقُولُ لِصَاحِبِهِ لَا تَحْزَنْ إِنَّ اللَّهَ مَعَنَا ۖ فَأَنزَلَ اللَّهُ سَكِينَتَهُ عَلَيْهِ وَأَيَّدَهُ بِجُنُودٍ لَّمْ تَرَوْهَا وَجَعَلَ كَلِمَةَ الَّذِينَ كَفَرُوا السُّفْلَىٰ ۗ وَكَلِمَةُ اللَّهِ هِيَ الْعُلْيَا ۗ وَاللَّهُ عَزِيزٌ حَكِيمٌ ﴿٤٠﴾

**41.** ಭಾರ ರಹಿತವಾಗಿಯೂ ಭಾರಸಹಿತವಾಗಿಯೂ[277] ನೀವು (ಯುದ್ಧಕ್ಕೆ) ಹೊರಡಿರಿ. ಅಲ್ಲಾಹನ ಮಾರ್ಗದಲ್ಲಿ ನಿಮ್ಮ ಸಂಪತ್ತಿನಿಂದಲೂ ದೇಹದಿಂದಲೂ ಹೋರಾಡಿರಿ. ನೀವು ತಿಳಿಯಬಲ್ಲವರಾದರೆ ಅದೇ ನಿಮಗೆ ಉತ್ತಮವಾದುದು.

انفِرُوا خِفَافًا وَثِقَالًا وَجَاهِدُوا بِأَمْوَالِكُمْ وَأَنفُسِكُمْ فِي سَبِيلِ اللَّهِ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿٤١﴾

275. ಹಿಜ್‌ರತ್ ಘಟನೆಯನ್ನು ಇಲ್ಲಿ ಸೂಚಿಸಲಾಗಿದೆ.
276. ಸೌರ್ ಗುಹೆ.
277. ಯುದ್ಧ ಸಾಮಗ್ರಿ ಸಹಿತವಾಗಿಯೂ ಅಲ್ಲದೆಯೂ ಎಂದು ತಾತ್ಪರ್ಯ.





**42.** ಅದು ಶೀಘ್ರುವೇ ದೊರಕುವ ಲಾಭವಾಗಿರುತ್ತಿದ್ದರೆ ಹಾಗೂ ಸುಗಮ ಪ್ರಯಾಣವಾಗಿರುತ್ತಿದ್ದರೆ ಅವರು (ಕಪಟ ವಿಶ್ವಾಸಿಗಳು) ನಿನ್ನನ್ನು ಹಿಂಬಾಲಿಸುತ್ತಿದ್ದರು. ಆದರೆ ಕ್ಲೇಶಕರವಾದ ಯಾತ್ರೆ ಅವರಿಗೆ ದೀರ್ಘವಾಗಿ ತೋಚಿತು. ಹಾಗಿದ್ದರೂ ಅವರು ಅಲ್ಲಾಹನ ಮೇಲೆ ಆಣೆಹಾಕಿ 'ನಮಗೆ ಸಾಧ್ಯವಿರುತ್ತಿದ್ದರೆ ನಿಮ್ಮೊಂದಿಗೆ ನಾವು ಸಹ ಹೊರಡುತ್ತಿದ್ದೆವು' ಎಂದು ಹೇಳುವರು. ಅವರು ತಮ್ಮನ್ನೇ ನಾಶಪಡಿಸುತ್ತಾರೆ. ಖಂಡಿತವಾಗಿಯೂ ಅವರು ಸುಳ್ಳು ಹೇಳುತ್ತಿದ್ದಾರೆಂದು ಅಲ್ಲಾಹನು ಚೆನ್ನಾಗಿ ಬಲ್ಲನು.

لَوْ كَانَ عَرَضًا قَرِيبًا وَسَفَرًا قَاصِدًا لَّاتَّبَعُوكَ وَلَٰكِن بَعُدَتْ عَلَيْهِمُ الشُّقَّةُ ۚ وَسَيَحْلِفُونَ بِاللَّهِ لَوِ اسْتَطَعْنَا لَخَرَجْنَا مَعَكُمْ يُهْلِكُونَ أَنفُسَهُمْ وَاللَّهُ يَعْلَمُ إِنَّهُمْ لَكَاذِبُونَ ﴿٤٢﴾

**43.** ಅಲ್ಲಾಹನು ನಿನ್ನ ಕೊರತೆಗಳನ್ನು ಹೋಗಲಾಡಿಸಿರುವನು. ಸತ್ಯ ಹೇಳುವವರು ಯಾರೆಂದು ನಿನಗೆ ಸ್ಪಷ್ಟವಾಗುವ ತನಕ ಹಾಗೂ ಸುಳ್ಳು ಹೇಳುವವರು ಯಾರೆಂದು ನೀನು ತಿಳಿಯುವ ತನಕ (ನಿನ್ನೊಟ್ಟಿಗೆ ಸೇರಿ ಯುದ್ಧ ಮಾಡುವುದರಿಂದ ಬಿಟ್ಟು ನಿಲ್ಲಲು) ನೀನೇಕೆ ಅವರಿಗೆ ಅನುಮತಿ ನೀಡಿದೆ?

عَفَا اللَّهُ عَنكَ لِمَ أَذِنتَ لَهُمْ حَتَّىٰ يَتَبَيَّنَ لَكَ الَّذِينَ صَدَقُوا وَتَعْلَمَ الْكَاذِبِينَ ﴿٤٣﴾

**44.** ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವುಳ್ಳವರು ತಮ್ಮ ಸಂಪತ್ತು ಮತ್ತು ಶರೀರ ಮೂಲಕ ಹೋರಾಡುವುದರಿಂದ ಬಿಟ್ಟು ನಿಲ್ಲಲು ನಿನ್ನೊಡನೆ ಅನುಮತಿ ಕೇಳಲಾರರು. ಭಯ ಭಕ್ತಿಯುಳ್ಳವರ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

لَا يَسْتَأْذِنُكَ الَّذِينَ يُؤْمِنُونَ بِاللَّهِ وَالْيَوْمِ الْآخِرِ أَن يُجَاهِدُوا بِأَمْوَالِهِمْ وَأَنفُسِهِمْ ۗ وَاللَّهُ عَلِيمٌ بِالْمُتَّقِينَ ﴿٤٤﴾

**45.** ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಲ್ಲದವರೂ ಹೃದಯಗಳಲ್ಲಿ ಸಂಶಯವುಳ್ಳವರೂ ಮಾತ್ರ (ಹಿಂದೆ ಉಳಿಯಲು) ನಿನ್ನೊಡನೆ ಅನುಮತಿ ಕೇಳುವರು. ಹಾಗೆ ಅವರು ತಮ್ಮ ಸಂಶಯದಲ್ಲಿ ಚಂಚಲಚಿತ್ತರಾಗಿರುತ್ತಾರೆ.

إِنَّمَا يَسْتَأْذِنُكَ الَّذِينَ لَا يُؤْمِنُونَ بِاللَّهِ وَالْيَوْمِ الْآخِرِ وَارْتَابَتْ قُلُوبُهُمْ فَهُمْ فِي رَيْبِهِمْ يَتَرَدَّدُونَ ﴿٤٥﴾

**46.** ಅವರು (ನಿಜವಾಗಿಯೂ ಯುದ್ಧಕ್ಕೆ) ಹೊರಡಲು ಉದ್ದೇಶಿಸಿರುತ್ತಿದ್ದರೆ, ಅದಕ್ಕೆ ಬೇಕಾದ ಸಿದ್ಧತೆಗಳನ್ನು ಅವರು ಮಾಡುತ್ತಿದ್ದರು. ಆದರೆ ಅವರು

وَلَوْ أَرَادُوا الْخُرُوجَ لَأَعَدُّوا لَهُ عُدَّةً وَلَٰكِن كَرِهَ اللَّهُ انبِعَاثَهُمْ

(ಯುದ್ಧಕ್ಕೆ) ಹೊರಡುವುದನ್ನು ಅಲ್ಲಾಹನು ಇಷ್ಟಪಡಲಿಲ್ಲ. ಆದ್ದರಿಂದ ಅವನು, ಅವರು ಹಿಂದೆ ಉಳಿಯುವಂತೆ ಮಾಡಿದನು. (ಅವರೊಡನೆ) ಹೇಳಲಾಯಿತು: '(ಮನೆಯಲ್ಲಿ) ಕುಳಿತವರೊಂದಿಗೆ ನೀವು ಸಹ ಕುಳಿತುಕೊಳ್ಳಿರಿ.'

فَثَبَّطَهُمْ وَقِيلَ اقْعُدُوا مَعَ الْقَاعِدِينَ ﴿٤٦﴾

**47.** ನಿಮ್ಮೊಂದಿಗೆ ಅವರು ಸಹ ಹೊರಟಿರುತ್ತಿದ್ದರೆ, ಉಪದ್ರವವನ್ನಲ್ಲದೆ ಬೇರೇನನ್ನೂ ಅವರು ನಿಮಗೆ ಕೊಡುತ್ತಿರಲಿಲ್ಲ. ನಿಮ್ಮ ಮಧ್ಯೆ ಅತ್ತಿತ್ತ ಓಡಾಡಿ ಅವರು ಗಲಭೆ-ಗೊಂದಲಗಳನ್ನು ಸೃಷ್ಟಿಸುತ್ತಿದ್ದರು. ನಿಮ್ಮ ಪೈಕಿ ಕೆಲವರು ಅವರ ಮಾತನ್ನು ಕೇಳಲು ಬಯಸುತ್ತಾರೆ. ಅಲ್ಲಾಹನು ದುಷ್ಕರ್ಮಿಗಳ ಬಗ್ಗೆ ಚೆನ್ನಾಗಿ ಬಲ್ಲವನಾಗಿದ್ದಾನೆ.

لَوْ خَرَجُوا فِيكُم مَّا زَادُوكُمْ إِلَّا خَبَالًا وَلَأَوْضَعُوا خِلَالَكُمْ يَبْغُونَكُمُ الْفِتْنَةَ وَفِيكُمْ سَمَّاعُونَ لَهُمْ ۗ وَاللَّهُ عَلِيمٌ بِالظَّالِمِينَ ﴿٤٧﴾

**48.** ಇದಕ್ಕಿಂತ ಮೊದಲು ಸಹ ಗೊಂದಲವನ್ನುಂಟು ಮಾಡಲು ಅವರು ಬಯಸಿದ್ದರು. ನಿನ್ನ ವಿರುದ್ಧ ಅವರು ಪಿತೂರಿ ಹೂಡಿದ್ದರು. ಕೊನೆಗೆ ಅವರು ದ್ವೇಷಿಸುತ್ತಿರುವಂತೆಯೇ ಸತ್ಯ ಪ್ರಕಟವಾಗಿ ಅಲ್ಲಾಹನ ಉದ್ದೇಶ ಸಫಲವಾಯಿತು.

لَقَدِ ابْتَغَوُا الْفِتْنَةَ مِن قَبْلُ وَقَلَّبُوا لَكَ الْأُمُورَ حَتَّىٰ جَاءَ الْحَقُّ وَظَهَرَ أَمْرُ اللَّهِ وَهُمْ كَارِهُونَ ﴿٤٨﴾

**49.** (ಯುದ್ಧಕ್ಕೆ ಹೋಗದಿರಲು) 'ನನಗೆ ಅನುಮತಿ ನೀಡಬೇಕು; ನನ್ನನ್ನು ಪರೀಕ್ಷೆಗೊಳಪಡಿಸಬಾರದು' ಎಂದು ನಿನ್ನೊಡನೆ ಹೇಳುವ ಕೆಲವರು ಸಹ ಅವರ ಪೈಕಿ ಇದ್ದಾರೆ. ತಿಳಿದುಕೊಳ್ಳಿರಿ, ಅವರು ಪರೀಕ್ಷೆಗೆ ತುತ್ತಾಗಿ ಬಿಟ್ಟಿದ್ದಾರೆ. ಖಂಡಿತವಾಗಿಯೂ ಅವಿಶ್ವಾಸಿಗಳನ್ನು ನರಕವು ಸುತ್ತುವರಿಯುವುದು.

وَمِنْهُم مَّن يَقُولُ ائْذَن لِّي وَلَا تَفْتِنِّي ۚ أَلَا فِي الْفِتْنَةِ سَقَطُوا ۗ وَإِنَّ جَهَنَّمَ لَمُحِيطَةٌ بِالْكَافِرِينَ ﴿٤٩﴾

**50.** ನಿನಗೇನಾದರೂ ಒಳಿತುಂಟಾದರೆ ಅದು ಅವರಿಗೆ ದುಃಖವನ್ನುಂಟುಮಾಡುತ್ತದೆ. ನಿನಗೇನಾದರೂ ಕೆಡುಕಾದರೆ, 'ನಮ್ಮ ವಿಚಾರದಲ್ಲಿ ನಾವು ಮೊದಲೇ ಮುಂಜಾಗ್ರತೆ ವಹಿಸಿದ್ದೇವೆ' ಎಂದು ಅವರು ಹೇಳುತ್ತಾರೆ. ಅವರು ಸಂತೋಷಭರಿತವಾಗಿ ಹಿಂತಿರುಗಿ ಹೋಗುತ್ತಾರೆ.[278]

إِن تُصِبْكَ حَسَنَةٌ تَسُؤْهُمْ ۖ وَإِن تُصِبْكَ مُصِيبَةٌ يَقُولُوا قَدْ أَخَذْنَا أَمْرَنَا مِن قَبْلُ وَيَتَوَلَّوا وَّهُمْ فَرِحُونَ ﴿٥٠﴾

278. ತಮ್ಮ ತಂತ್ರ ತಮ್ಮನ್ನು ರಕ್ಷಿಸಿತೆಂಬ ಭಾವನೆಯಲ್ಲಿ ಅವರು ಸಂತೋಷಪಡುತ್ತಾರೆ.





**51.** ಹೇಳು: 'ಅಲ್ಲಾಹನು ನಮಗೆ ವಿಧಿಸಿದ್ದು ಹೊರತು ಬೇರೇನೂ ನಮ್ಮನ್ನು ಬಾಧಿಸಲಿಕ್ಕಿಲ್ಲ. ಅವನು ನಮ್ಮ ರಕ್ಷಕನಾಗಿದ್ದಾನೆ. ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ತಮ್ಮ ಭರವಸೆಯನ್ನಿಡಬೇಕಾಗಿದೆ.'

قُل لَّن يُصِيبَنَا إِلَّا مَا كَتَبَ اللَّهُ لَنَا هُوَ مَوْلَانَا ۚ وَعَلَى اللَّهِ فَلْيَتَوَكَّلِ الْمُؤْمِنُونَ ﴿٥١﴾

**52.** ಹೇಳು: 'ಎರಡು ಸತ್ಕಾರ್ಯಗಳಲ್ಲಿ[279] ಒಂದರ ಹೊರತು ನೀವು ನಮ್ಮ ವಿಚಾರದಲ್ಲಿ ನಿರೀಕ್ಷಿಸುತ್ತೀರಾ? ನಾವಾದರೋ ನಿಮ್ಮ ಬಗ್ಗೆ, ಅಲ್ಲಾಹನು ತನ್ನ ಕಡೆಯಿಂದಾಗಲಿ, ನಮ್ಮ ಕೈಗಳಿಂದಾಗಲಿ ನಿಮಗೆ ಶಿಕ್ಷೆ ಬಂದೆರಗುವಂತೆ ಮಾಡುವನೆಂದು ನಿರೀಕ್ಷಿಸುತ್ತೇವೆ. ಆದ್ದರಿಂದ ನೀವು ನಿರೀಕ್ಷಿಸುತ್ತಿರಿ. ನಾವು ಸಹ ನಿಮ್ಮೊಂದಿಗೆ ನಿರೀಕ್ಷಿಸುತ್ತೇವೆ.'

قُلْ هَلْ تَرَبَّصُونَ بِنَا إِلَّا إِحْدَى الْحُسْنَيَيْنِ ۖ وَنَحْنُ نَتَرَبَّصُ بِكُمْ أَن يُصِيبَكُمُ اللَّهُ بِعَذَابٍ مِّنْ عِندِهِ أَوْ بِأَيْدِينَا ۖ فَتَرَبَّصُوا إِنَّا مَعَكُم مُّتَرَبِّصُونَ ﴿٥٢﴾

**53.** ಹೇಳು: 'ನೀವು ಸಂತೋಷದಿಂದಾಗಲಿ ಅಸಂತೋಷದಿಂದಾಗಲಿ (ಅಲ್ಲಾಹನ ಮಾರ್ಗದಲ್ಲಿ) ಖರ್ಚು ಮಾಡಿದರೂ ಅದು ಸ್ವೀಕೃತವಾಗಲಾರದು. ಖಂಡಿತವಾಗಿಯೂ ನೀವು ಅವಿಧೇಯ ಜನರಾಗಿದ್ದೀರಿ.

قُلْ أَنفِقُوا طَوْعًا أَوْ كَرْهًا لَّن يُتَقَبَّلَ مِنكُمْ ۖ إِنَّكُمْ كُنتُمْ قَوْمًا فَاسِقِينَ ﴿٥٣﴾

**54.** ಅಲ್ಲಾಹನಲ್ಲೂ ಅವನ ಸಂದೇಶವಾಹಕನಲ್ಲೂ ಅವರು ವಿಶ್ವಾಸವಿಡುವುದಿಲ್ಲ; ಆಲಸಿಗರಾಗಿ ಹೊರತು ಅವರು ನಮಾಝಿಗೆ ಬರುವುದಿಲ್ಲ; ಅಸಂತೋಷದಿಂದ ಹೊರತು ಅವರು (ಅಲ್ಲಾಹನ ಮಾರ್ಗದಲ್ಲಿ) ಖರ್ಚುಮಾಡುವುದಿಲ್ಲ - ಎಂಬೀ ವಿಚಾರಗಳಲ್ಲದೆ ಬೇರೇನೂ ಅವರಿಂದ ಅವರ ದೇಣಿಗೆ ಸ್ವೀಕೃತವಾಗಲು ತಡೆಯಾಗಿರುವುದಿಲ್ಲ.

وَمَا مَنَعَهُمْ أَن تُقْبَلَ مِنْهُمْ نَفَقَاتُهُمْ إِلَّا أَنَّهُمْ كَفَرُوا بِاللَّهِ وَبِرَسُولِهِ وَلَا يَأْتُونَ الصَّلَاةَ إِلَّا وَهُمْ كُسَالَىٰ وَلَا يُنفِقُونَ إِلَّا وَهُمْ كَارِهُونَ ﴿٥٤﴾

**55.** ಆದ್ದರಿಂದ ಅವರ ಸಂಪತ್ತಾಗಲಿ ಅವರ ಸಂತಾನವಾಗಲಿ ನಿನ್ನನ್ನು ಚಕಿತಗೊಳಿಸದಿರಲಿ. ಆ ಮೂಲಕ ಅವರನ್ನು ಐಹಿಕ ಜೀವನದಲ್ಲಿ ಶಿಕ್ಷಿಸಬೇಕೆಂದೂ ಅವರು ಅವಿಶ್ವಾಸಿಗಳಾಗಿದ್ದುಕೊಂಡೇ ಅವರ ಪ್ರಾಣಹರಣ ವಾಗಬೇಕೆಂದೂ ಮಾತ್ರ ಅಲ್ಲಾಹನು ಬಯಸುತ್ತಾನೆ.

فَلَا تُعْجِبْكَ أَمْوَالُهُمْ وَلَا أَوْلَادُهُمْ ۚ إِنَّمَا يُرِيدُ اللَّهُ لِيُعَذِّبَهُم بِهَا فِي الْحَيَاةِ الدُّنْيَا وَتَزْهَقَ أَنفُسُهُمْ وَهُمْ كَافِرُونَ ﴿٥٥﴾

279. ವಿಜಯ ಅಥವಾ ವೀರ ಮರಣ.

**56.** ಖಂಡಿತವಾಗಿಯೂ ಅವರು ನಿಮ್ಮ ಪೈಕಿಯವರೆಂದು ಅಲ್ಲಾಹನ ಆಣೆಹಾಕಿ ಹೇಳುತ್ತಾರೆ. ಆದರೆ ಅವರು ನಿಮ್ಮೊಂದಿಗೆ ಸೇರಿದವರಲ್ಲ. ಅವರಾದರೋ ಅಂಜುಬುರುಕರಾಗಿದ್ದಾರೆ.

وَيَحْلِفُونَ بِاللَّهِ إِنَّهُمْ لَمِنكُمْ وَمَا هُم مِّنكُمْ وَلَٰكِنَّهُمْ قَوْمٌ يَفْرَقُونَ ﴿٥٦﴾

**57.** ಯಾವುದಾದರೂ ಅಭಯ ಸ್ಥಾನವಾಗಲಿ, ಗುಹೆಯಾಗಲಿ, ಅವಿತುಕೊಳ್ಳಲಿಕ್ಕೆ ಒಂದು ತಾಣವಾಗಲಿ ಕಂಡರೆ ಖಂಡಿತವಾಗಿಯೂ ಅದರೆಡೆಗೆ ಅವರು ಅನಿಯಂತ್ರಿತವಾಗಿ ತೀವ್ರಗತಿಯಲ್ಲಿ ಧಾವಿಸುತ್ತಾರೆ.

لَوْ يَجِدُونَ مَلْجَأً أَوْ مَغَارَاتٍ أَوْ مُدَّخَلًا لَّوَلَّوْا إِلَيْهِ وَهُمْ يَجْمَحُونَ ﴿٥٧﴾

**58.** ದಾನಧರ್ಮಗಳ ಬಗ್ಗೆ ನಿನ್ನನ್ನು ಆಕ್ಷೇಪಿಸುವ ಕೆಲವರು ಸಹ ಅವರಲ್ಲಿದ್ದಾರೆ. ಅದರಿಂದ ಏನಾದರೂ ಅವರಿಗೆ ನೀಡಿದರೆ ಅವರು ಸಂತುಷ್ಟರಾಗುತ್ತಾರೆ. ಆದರಿಂದ ಅವರಿಗೇನೂ ನೀಡದಿದ್ದರೆ ಅವರು ಕೋಪಿಷ್ಠರಾಗುತ್ತಾರೆ.

وَمِنْهُم مَّن يَلْمِزُكَ فِي الصَّدَقَاتِ فَإِنْ أُعْطُوا مِنْهَا رَضُوا وَإِن لَّمْ يُعْطَوْا مِنْهَا إِذَا هُمْ يَسْخَطُونَ ﴿٥٨﴾

**59.** ಅಲ್ಲಾಹನು ಮತ್ತು ಅವನ ಸಂದೇಶವಾಹಕ ಅವರಿಗೆ ನೀಡಿದುದರ ಬಗ್ಗೆ ಅವರು ಸಂತೃಪ್ತರಾಗಿ, 'ನಮಗೆ ಅಲ್ಲಾಹನು ಸಾಕು; ಅಲ್ಲಾಹನು ತನ್ನ ಅನುಗ್ರಹದಿಂದ ಇನ್ನೂ ನಮಗೆ ನೀಡುವನು; (ಹಾಗೆಯೇ) ಅಲ್ಲಾಹನ ಸಂದೇಶವಾಹಕ ಸಹ. ನಾವು ಅಲ್ಲಾಹನ ಕಡೆಗೆಯೇ ದೈನ್ಯದಿಂದ ಬಾಗುತ್ತೇವೆ' ಎಂದು ಅವರು ಹೇಳಿದ್ದರೆ (ಅವರಿಗೆ ಅದೆಷ್ಟು ಚೆನ್ನಾಗಿತ್ತು)!

وَلَوْ أَنَّهُمْ رَضُوا مَا آتَاهُمُ اللَّهُ وَرَسُولُهُ وَقَالُوا حَسْبُنَا اللَّهُ سَيُؤْتِينَا اللَّهُ مِن فَضْلِهِ وَرَسُولُهُ إِنَّا إِلَى اللَّهِ رَاغِبُونَ ﴿٥٩﴾

**60.** ದಾನಧರ್ಮಗಳು ಬಡವರಿಗೂ ನಿರ್ಗತಿಕರಿಗೂ ಅದರ (ಸಂಗ್ರಹ ಮತ್ತು ವಿತರಣೆಯ) ಕಾರ್ಯನಿರತರಿಗೂ ತಮ್ಮ ಹೃದಯಗಳನ್ನು ಸಂಯೋಜಿಸಬೇಕಾದವರಿಗೂ[280] ದಾಸ್ಯ ವಿಮೋಚನೆಗೂ ಸಾಲದಲ್ಲಿ ಮುಳುಗಿದವರಿಗೂ ಅಲ್ಲಾಹನ ಮಾರ್ಗದಲ್ಲಿ ವಿನಿಯೋಗಿಸಲಿಕ್ಕೂ ಪಥಿಕರಿಗೂ ಮಾತ್ರ ಉಳ್ಳದ್ದಾಗಿದೆ. ಇದು ಅಲ್ಲಾಹನ ಆಜ್ಞೆಯಾಗಿದೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

إِنَّمَا الصَّدَقَاتُ لِلْفُقَرَاءِ وَالْمَسَاكِينِ وَالْعَامِلِينَ عَلَيْهَا وَالْمُؤَلَّفَةِ قُلُوبُهُمْ وَفِي الرِّقَابِ وَالْغَارِمِينَ وَفِي سَبِيلِ اللَّهِ وَابْنِ السَّبِيلِ فَرِيضَةً مِّنَ اللَّهِ وَاللَّهُ عَلِيمٌ حَكِيمٌ ﴿٦٠﴾

280. ಹೊಸತಾಗಿ ಇಸ್ಲಾಂ ಧರ್ಮವನ್ನು ಸ್ವೀಕರಿಸಿದವರು.





**61.** ಪ್ರವಾದಿಯನ್ನು ಪೀಡಿಸುವ ಕೆಲವರು ಸಹ ಅವರಲ್ಲಿದ್ದಾರೆ. 'ಅವರು (ಪ್ರವಾದಿ) ಎಲ್ಲರ ಮಾತಿಗೂ ಕಿವಿಗೊಡುತ್ತಾರೆ' ಎಂದು ಅವರು ಹೇಳುತ್ತಾರೆ. ಹೇಳು: 'ನಿಮಗೆ ಗುಣಕರವಾದುದಕ್ಕೆ ಆತನು ಕಿವಿಗೊಡುತ್ತಾನೆ. ಆತನು ಅಲ್ಲಾಹನಲ್ಲಿ ವಿಶ್ವಾಸವಿರಿಸುತ್ತಾನೆ. ಸತ್ಯವಿಶ್ವಾಸಿಗಳ ವಿಚಾರದಲ್ಲೂ ಆತನು ನಂಬಿಕೆಯಿರಿಸಿದ್ದಾನೆ. ನಿಮ್ಮಲ್ಲಿ ವಿಶ್ವಾಸಿಗಳಿಗೆ ಆತನು ಒಂದು ಅನುಗ್ರಹವೂ ಆಗಿದ್ದಾನೆ.' ಅಲ್ಲಾಹನ ಸಂದೇಶವಾಹಕನನ್ನು ಪೀಡಿಸುವವರಿಗೆ[280A] ಯಾತನಾಮಯವಾದ ಶಿಕ್ಷೆಯಿದೆ.

وَمِنْهُمُ الَّذِينَ يُؤْذُونَ النَّبِيَّ وَيَقُولُونَ هُوَ أُذُنٌ قُلْ أُذُنُ خَيْرٍ لَّكُمْ يُؤْمِنُ بِاللَّهِ وَيُؤْمِنُ لِلْمُؤْمِنِينَ وَرَحْمَةٌ لِّلَّذِينَ آمَنُوا مِنكُمْ وَالَّذِينَ يُؤْذُونَ رَسُولَ اللَّهِ لَهُمْ عَذَابٌ أَلِيمٌ ﴿٦١﴾

**62.** ನಿಮ್ಮನ್ನು ಸಂತೋಷಪಡಿಸಲಿಕ್ಕಾಗಿ ಅವರು ಅಲ್ಲಾಹನ ನಾಮದಲ್ಲಿ ನಿಮ್ಮ ಮುಂದೆ ಪ್ರಮಾಣ ಮಾಡುತ್ತಾರೆ. ಅವರು ಸತ್ಯವಿಶ್ವಾಸಿಗಳಾಗಿದ್ದರೆ, ಅಲ್ಲಾಹನು ಮತ್ತುಅವನ ಸಂದೇಶವಾಹಕ ಸಂತೋಷಗೊಳಿಸಲ್ಪಡಲು ಹೆಚ್ಚು ಅರ್ಹರಾಗಿದ್ದಾರೆ.

يَحْلِفُونَ بِاللَّهِ لَكُمْ لِيُرْضُوكُمْ وَاللَّهُ وَرَسُولُهُ أَحَقُّ أَن يُرْضُوهُ إِن كَانُوا مُؤْمِنِينَ ﴿٦٢﴾

**63.** ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಯಾರಾದರೂ ವಿರೋಧಿಸಿದರೆ ಅವನಿಗೆ ನರಕಾಗ್ನಿ ಕಾದಿದೆಯೆಂದೂ ಅದರಲ್ಲಿ ಅವನು ದೀರ್ಘಕಾಲ ವಾಸಿಸುವವನೆಂದೂ ಅವರಿಗೆ ತಿಳಿದಿಲ್ಲವೇ? ಅದು ಬಹಳ ದೊಡ್ಡ ಅಪಮಾನವಾಗಿದೆ.

أَلَمْ يَعْلَمُوا أَنَّهُ مَن يُحَادِدِ اللَّهَ وَرَسُولَهُ فَأَنَّ لَهُ نَارَ جَهَنَّمَ خَالِدًا فِيهَا ذَٰلِكَ الْخِزْيُ الْعَظِيمُ ﴿٦٣﴾

**64.** ತಮ್ಮ ಹೃದಯಗಳಲ್ಲಿರುವುದರ ಕುರಿತು ಅವರಿಗೆ ತಿಳಿಸಿಕೊಡುವ ಒಂದು ಅಧ್ಯಾಯ ಅವರ ವಿರುದ್ಧ ಅವತೀರ್ಣಗೊಳ್ಳುವುದರ ಬಗ್ಗೆ ಕಪಟ ವಿಶ್ವಾಸಿಗಳು (ಪರಿಹಾಸ್ಯವಾಗಿ) ಭಯಗೊಂಡವರಂತೆ ನಟಿಸುತ್ತಾರೆ. ಹೇಳು: 'ನೀವು ಪರಿಹಾಸ್ಯಮಾಡಿ ಕೊಳ್ಳಿರಿ. ಖಂಡಿತವಾಗಿಯೂ ನೀವು ಭಯ ನಟಿಸುವುದನ್ನು ಅಲ್ಲಾಹನು ಬೆಳಕಿಗೆ ತರುವನು.'

يَحْذَرُ الْمُنَافِقُونَ أَن تُنَزَّلَ عَلَيْهِمْ سُورَةٌ تُنَبِّئُهُم بِمَا فِي قُلُوبِهِمْ قُلِ اسْتَهْزِئُوا إِنَّ اللَّهَ مُخْرِجٌ مَّا تَحْذَرُونَ ﴿٦٤﴾

**65.** ನೀನು (ಅವರ ಅಪಹಾಸ್ಯದ ಕುರಿತು) ಅವರೊಡನೆ ಕೇಳಿದರೆ, 'ನಾವು ಕೇವಲ ಹರಟೆ ಹೊಡೆದು

وَلَئِن سَأَلْتَهُمْ لَيَقُولُنَّ إِنَّمَا كُنَّا

280A. ಕಪಟ ವಿಶ್ವಾಸಿಗಳಿಗೆ.

نَخُوضُ وَنَلْعَبُ ۚ قُلْ أَبِاللَّهِ وَآيَاتِهِ وَرَسُولِهِ كُنتُمْ تَسْتَهْزِئُونَ ﴿٦٥﴾

ವಿನೋದಿಸುತ್ತಿದ್ದೆವು' ಎಂದು ಖಂಡಿತವಾಗಿಯೂ ಅವರು ಹೇಳುವರು. ಹೇಳು: 'ನೀವು ಅಲ್ಲಾಹನನ್ನೂ ಅವನ ದೃಷ್ಟಾಂತಗಳನ್ನೂ ಅವನ ಸಂದೇಶವಾಹಕನನ್ನೂ ಅಲ್ಲವೇ ಅಪಹಾಸ್ಯಮಾಡುತ್ತಿದ್ದುದು?'

لَا تَعْتَذِرُوا قَدْ كَفَرْتُم بَعْدَ إِيمَانِكُمْ ۚ إِن نَّعْفُ عَن طَائِفَةٍ مِّنكُمْ نُعَذِّبْ طَائِفَةً بِأَنَّهُمْ كَانُوا مُجْرِمِينَ ﴿٦٦﴾

**66.** ನೀವು ನೆಪವನ್ನೇನೂ ಹೇಳಬೇಡಿರಿ. ನಿಜವಾಗಿಯೂ ನೀವು ವಿಶ್ವಾಸಗೊಂಡ ನಂತರ ಅವಿಶ್ವಾಸಿಗಳಾಗಿರುತ್ತೀರಿ. ನಿಮ್ಮ ಪೈಕಿ ಒಂದು ಪಂಗಡಕ್ಕೆ ನಾವು ಕ್ಷಮೆ ನೀಡಿದರೂ ಇನ್ನೊಂದು ಪಂಗಡಕ್ಕೆ ಅವರ ಅಪರಾಧದ ಹೇತುವಾಗಿ ಶಿಕ್ಷೆಕೊಡುವೆವು.

الْمُنَافِقُونَ وَالْمُنَافِقَاتُ بَعْضُهُم مِّن بَعْضٍ ۚ يَأْمُرُونَ بِالْمُنكَرِ وَيَنْهَوْنَ عَنِ الْمَعْرُوفِ وَيَقْبِضُونَ أَيْدِيَهُمْ ۚ نَسُوا اللَّهَ فَنَسِيَهُمْ ۗ إِنَّ الْمُنَافِقِينَ هُمُ الْفَاسِقُونَ ﴿٦٧﴾

**67.** ಕಪಟವಿಶ್ವಾಸಿಗಳೂ ಕಪಟವಿಶ್ವಾಸಿನಿಯರೂ ಪರಸ್ಪರ ಸಂಬಂಧವುಳ್ಳವರಾಗಿದ್ದಾರೆ. ಅವರು ನಿಷಿದ್ಧ ಕಾರ್ಯಗಳನ್ನು ಉಪದೇಶಿಸಿ ಒಳಿತನ್ನು ತಡೆಯುತ್ತಾರೆ. ಅವರು ತಮ್ಮ ಕೈಗಳನ್ನು (ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡದೆ) ಮುಚ್ಚಿಡುತ್ತಾರೆ. ಅವರು ಅಲ್ಲಾಹನನ್ನು ನಿರ್ಲಕ್ಷಿಸುತ್ತಾರೆ. ಆದ್ದರಿಂದ ಅವನು ಸಹ ಅವರನ್ನು ನಿರ್ಲಕ್ಷಿಸಿದನು. ಖಂಡಿತವಾಗಿಯೂ ಕಪಟ ವಿಶ್ವಾಸಿಗಳು ಧಿಕ್ಕಾರಿಗಳೇ ಆಗಿದ್ದಾರೆ.

وَعَدَ اللَّهُ الْمُنَافِقِينَ وَالْمُنَافِقَاتِ وَالْكُفَّارَ نَارَ جَهَنَّمَ خَالِدِينَ فِيهَا ۚ هِيَ حَسْبُهُمْ ۚ وَلَعَنَهُمُ اللَّهُ ۖ وَلَهُمْ عَذَابٌ مُّقِيمٌ ﴿٦٨﴾

**68.** ಕಪಟವಿಶ್ವಾಸಿಗಳಿಗೂ ಕಪಟವಿಶ್ವಾಸಿನಿಯರಿಗೂ ಅವಿಶ್ವಾಸಿಗಳಿಗೂ ಅಲ್ಲಾಹನು ನರಕಾಗ್ನಿಯನ್ನು ವಾಗ್ದಾನ ಮಾಡಿರುವನು. ಅವರು ಅದರಲ್ಲಿ ದೀರ್ಘಕಾಲ ವಾಸಿಸುವರು. ಅದು ಅವರಿಗೆ ಸಾಕು. ಅಲ್ಲಾಹನು ಅವರನ್ನು ಶಪಿಸಿರುವನು. ಅವರಿಗೆ ದೀರ್ಘಕಾಲದ ಶಿಕ್ಷೆ ಇದೆ.

كَالَّذِينَ مِن قَبْلِكُمْ كَانُوا أَشَدَّ مِنكُمْ قُوَّةً وَأَكْثَرَ أَمْوَالًا وَأَوْلَادًا فَاسْتَمْتَعُوا بِخَلَاقِهِمْ فَاسْتَمْتَعْتُم بِخَلَاقِكُمْ كَمَا اسْتَمْتَعَ

**69.** (ಎಲೈ ಕಪಟ ವಿಶ್ವಾಸಿಗಳೇ,) ನಿಮಗಿಂತ ಮುಂಚೆ ಇದ್ದವರ ಹಾಗೆಯೇ ನೀವು ಸಹ. ಅವರು ನಿಮಗಿಂತ ಬಲಿಷ್ಠರೂ ನಿಮಗಿಂತ ಹೆಚ್ಚು ಸಂಪತ್ತನ್ನು ಮತ್ತು ಸಂತಾನವನ್ನು ಹೊಂದಿದವರೂ ಆಗಿದ್ದರು. ಅವರು ತಮ್ಮ ಪಾಲಿನ ಸುಖವನ್ನು ಅನುಭವಿಸಿದರು. ನಿಮಗಿಂತ ಮುಂಚೆ ಇದ್ದವರು ತಮ್ಮ ಪಾಲಿನ ಸುಖ





الَّذِينَ مِن قَبْلِكُم بِخَلَاقِهِمْ وَخُضْتُمْ كَالَّذِي خَاضُوا ۚ أُولَٰئِكَ حَبِطَتْ أَعْمَالُهُمْ فِي الدُّنْيَا وَالْآخِرَةِ ۖ وَأُولَٰئِكَ هُمُ الْخَاسِرُونَ ﴿٦٩﴾

ಅನುಭವಿಸಿದಂತೆಯೇ ನೀವು ಸಹ ನಿಮ್ಮ ಪಾಲಿನ ಸುಖವನ್ನು ಅನುಭವಿಸಿದಿರಿ. ಅವರು ವ್ಯರ್ಥ ಹರಟೆಯಲ್ಲಿ ಮಗ್ನರಾಗಿದ್ದ ಹಾಗೆಯೇ ನೀವು ಸಹ ವ್ಯರ್ಥ ಹರಟೆಯಲ್ಲಿ ಮಗ್ನರಾದಿರಿ. ಅವರೇ - ಇಹದಲ್ಲೂ ಪರದಲ್ಲೂ ಅವರ ಕೃತ್ಯಗಳು ನಿಷ್ಫಲವಾದವು. ಅವರು ನಷ್ಟಹೊಂದಿದವರಾಗಿದ್ದಾರೆ.

أَلَمْ يَأْتِهِمْ نَبَأُ الَّذِينَ مِن قَبْلِهِمْ قَوْمِ نُوحٍ وَعَادٍ وَثَمُودَ وَقَوْمِ إِبْرَاهِيمَ وَأَصْحَابِ مَدْيَنَ وَالْمُؤْتَفِكَاتِ ۚ أَتَتْهُمْ رُسُلُهُم بِالْبَيِّنَاتِ ۖ فَمَا كَانَ اللَّهُ لِيَظْلِمَهُمْ وَلَٰكِن كَانُوا أَنفُسَهُمْ يَظْلِمُونَ ﴿٧٠﴾

**70.** ತಮಗಿಂತ ಮುಂಚೆ ಇದ್ದ ನೂಹ್, ಆದ್, ಮತ್ತುಸಮೂದ್ ಜನಾಂಗಗಳ, ಇಬ್‌ರಾಹೀಂ ಜನತೆಯ, ಮದ್‌ಯನ್ ನಿವಾಸಿಗಳ, ಅಡಿಮೇಲಾದ ಪಟ್ಟಣಗಳ ವೃತ್ತಾಂತ ಅವರಿಗೆ ತಲಪಿಲ್ಲವೇ? ಅವರ ಪ್ರವಾದಿಗಳು ಸ್ಪಷ್ಟವಾದ ದೃಷ್ಟಾಂತಗಳ ಸಹಿತ ಅವರ ಬಳಿಗೆ ಬಂದರು. (ಆದರೆ, ಅವರು ಧಿಕ್ಕರಿಸಿದ ಕಾರಣದಿಂದ ಶಿಕ್ಷೆಗೆ ಗುರಿಯಾದರು.) ಅಲ್ಲಾಹನಾದರೋ ಅವರಿಗೆ ಅನ್ಯಾಯ ಮಾಡಲಿಲ್ಲ. ಅವರೇ ಸ್ವಯಂ ಅನ್ಯಾಯ ಮಾಡಿದರು.

وَالْمُؤْمِنُونَ وَالْمُؤْمِنَاتُ بَعْضُهُمْ أَوْلِيَاءُ بَعْضٍ ۚ يَأْمُرُونَ بِالْمَعْرُوفِ وَيَنْهَوْنَ عَنِ الْمُنكَرِ وَيُقِيمُونَ الصَّلَاةَ وَيُؤْتُونَ الزَّكَاةَ وَيُطِيعُونَ اللَّهَ وَرَسُولَهُ ۚ أُولَٰئِكَ سَيَرْحَمُهُمُ اللَّهُ ۗ إِنَّ اللَّهَ عَزِيزٌ حَكِيمٌ ﴿٧١﴾

**71.** ಸತ್ಯವಿಶ್ವಾಸಿಗಳಾದ ಪುರುಷರು (ಪರಸ್ಪರ) ಮತ್ತು ಸತ್ಯವಿಶ್ವಾಸಿಗಳಾದ ಸ್ತ್ರೀಯರು ಪರಸ್ಪರ ಮಿತ್ರರಾಗಿದ್ದಾರೆ. ಅವರು ಒಳಿತನ್ನು ಉಪದೇಶಿಸುತ್ತಾರೆ; ಕೆಡುಕನ್ನು ತಡೆಯುತ್ತಾರೆ; ನಮಾಝುನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ; ಝಕಾತ್ ನೀಡುತ್ತಾರೆ; ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಅನುಸರಿಸುತ್ತಾರೆ. ಅಂತಹ ಜನರ ಮೇಲೆ ಅಲ್ಲಾಹನು ಖಂಡಿತವಾಗಿಯೂ ಕರುಣೆ ತೋರಿಸುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

وَعَدَ اللَّهُ الْمُؤْمِنِينَ وَالْمُؤْمِنَاتِ جَنَّاتٍ تَجْرِي مِن تَحْتِهَا الْأَنْهَارُ خَالِدِينَ فِيهَا وَمَسَاكِنَ طَيِّبَةً فِي

**72.** ಸತ್ಯವಿಶ್ವಾಸಿಗಳಿಗೂ ಸತ್ಯವಿಶ್ವಾಸಿನಿಯರಿಗೂ ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳನ್ನು ಅಲ್ಲಾಹನು ವಾಗ್ದಾನ ಮಾಡಿದ್ದಾನೆ. ಅವರು ಅಲ್ಲಿ ಸದಾ ಕಾಲ ನೆಲೆಸುವರು. ಶಾಶ್ವತವಾದ ವಾಸಕ್ಕಿರುವ ಸ್ವರ್ಗೀಯ ತೋಟಗಳಲ್ಲಿ ಪರಿಶುದ್ಧವಾದ ವಾಸಸ್ಥಳಗಳನ್ನೂ ಅಲ್ಲಾಹನು ಅವರಿಗೆ ವಾಗ್ದಾನ

ಮಾಡಿರುವನು. ಅಲ್ಲಾಹನ ಸಂತುಷ್ಟಿಯೇ ಎಲ್ಲಕ್ಕಿಂತ ಮಿಗಿಲಾದುದು. ಅದೇ ಮಹಾ ವಿಜಯವಾಗಿದೆ.

جَنّٰتِ عَدْنٍ ۚ وَرِضْوَانٌ مِّنَ اللّٰهِ اَكْبَرُ ۚ ذٰلِكَ هُوَ الْفَوْزُ الْعَظِيْمُ ﴿٧٢﴾

**73.** ಎಲೈ ಪ್ರವಾದಿ, ಅವಿಶ್ವಾಸಿಗಳೊಡನೆ ಮತ್ತು ಕಪಟ ವಿಶ್ವಾಸಿಗಳೊಡನೆ ಹೋರಾಡು. ಅವರ ವಿರುದ್ಧ[281] ಕಠಿಣವಾದ ಕ್ರಮ ಕೈಗೊಳ್ಳು. ಅವರ ವಾಸಸ್ಥಳ ನರಕವಾಗಿದೆ. ಅದು ಬಹಳ ಕೆಟ್ಟ ನೆಲೆಯಾಗಿದೆ.

يٰٓاَيُّهَا النَّبِيُّ جَاهِدِ الْكُفَّارَ وَالْمُنٰفِقِيْنَ وَاغْلُظْ عَلَيْهِمْ ۚ وَمَاْوٰىهُمْ جَهَنَّمُ ۚ وَبِئْسَ الْمَصِيْرُ ﴿٧٣﴾

**74.** ತಾವು (ಅಹಿತಕರವಾದ) ಏನನ್ನೂ ಹೇಳಲಿಲ್ಲವೆಂದು ಅಲ್ಲಾಹನ ಆಣೆಹಾಕಿ ಅವರು ಹೇಳುತ್ತಾರೆ. ಆದರೆ ದಿಟವಾಗಿಯೂ ಅವರು ಧಿಕ್ಕಾರದ ಮಾತು ಆಡಿದ್ದಾರೆ. ಅವರು ಇಸ್ಲಾಂ ಧರ್ಮ ಸ್ವೀಕರಿಸಿದ ಬಳಿಕ ಅವಿಶ್ವಾಸವನ್ನು ತಳೆದರು. ತಮಗೆ ಸಾಧಿಸಲು ಅಸಾಧ್ಯವಾದುದನ್ನು ಅವರು ಬಯಸಿದರು. ಅಲ್ಲಾಹ್ ಮತ್ತು ಅವನ ಸಂದೇಶವಾಹಕ ಅವನ (ಅಲ್ಲಾಹನ) ಅನುಗ್ರಹದಿಂದ ಅವರನ್ನು ಸಂಪನ್ನರನ್ನಾಗಿ ಮಾಡಿದುದರಿಂದಲೇ ಅವರು ದ್ವೇಷಭಾವನೆ ಹೊಂದಿದರು. ಆದ್ದರಿಂದ ಅವರು ಪಶ್ಚಾತ್ತಾಪಪಟ್ಟರೆ ಅದು ಅವರಿಗೆ ಉತ್ತಮ. ಅವರು ಮುಖ ತಿರುಗಿಸಿ ಹೋದರೆ ಅಲ್ಲಾಹನು ಅವರಿಗೆ ಇಹದಲ್ಲೂ ಪರದಲ್ಲೂ ಯಾತನಾಮಯವಾದ ಶಿಕ್ಷೆ ನೀಡುವನು. ಭೂಮಿಯಲ್ಲಿ ಅವರಿಗೆ ಮಿತ್ರನಾಗಿ ಅಥವಾ ಸಹಾಯಕನಾಗಿ ಯಾರೂ ಇರಲಾರ.

يَحْلِفُوْنَ بِاللّٰهِ مَا قَالُوْا ۚ وَلَقَدْ قَالُوْا كَلِمَةَ الْكُفْرِ وَكَفَرُوْا بَعْدَ اِسْلَامِهِمْ وَهَمُّوْا بِمَا لَمْ يَنَالُوْا ۚ وَمَا نَقَمُوْٓا اِلَّآ اَنْ اَغْنٰىهُمُ اللّٰهُ وَرَسُوْلُهٗ مِنْ فَضْلِهٖ ۚ فَاِنْ يَّتُوْبُوْا يَكُ خَيْرًا لَّهُمْ ۚ وَاِنْ يَّتَوَلَّوْا يُعَذِّبْهُمُ اللّٰهُ عَذَابًا اَلِيْمًا ۙ فِى الدُّنْيَا وَالْاٰخِرَةِ ۚ وَمَا لَهُمْ فِى الْاَرْضِ مِنْ وَّلِيٍّ وَّلَا نَصِيْرٍ ﴿٧٤﴾

**75.** ಅಲ್ಲಾಹನು ತನ್ನ ಅನುಗ್ರಹದಿಂದ ತಮಗೆ ನೀಡಿದರೆ ಖಂಡಿತವಾಗಿಯೂ ತಾವು ದಾನಧರ್ಮ ನೀಡುವೆವೆಂದೂ ಸಜ್ಜನರಲ್ಲಿ ಸೇರಿದವರಾಗುವೆವೆಂದೂ ಅವನೊಡನೆ (ಅಲ್ಲಾಹನೊಡನೆ) ಒಪ್ಪಂದ ಮಾಡಿದ ಕೆಲವರು ಸಹ ಅವರ ಪೈಕಿ (ಕಪಟ ವಿಶ್ವಾಸಿಗಳು ಪೈಕಿ) ಇದ್ದಾರೆ.

وَمِنْهُمْ مَّنْ عٰهَدَ اللّٰهَ لَىِٕنْ اٰتٰىنَا مِنْ فَضْلِهٖ لَنَصَّدَّقَنَّ وَلَنَكُوْنَنَّ مِنَ الصّٰلِحِيْنَ ﴿٧٥﴾

281. ಸಮರಕ್ಕಿಳಿದವರ ವಿರುದ್ಧ





**76.** ಆದರೆ ಅವನು (ಅಲ್ಲಾಹನು) ತನ್ನ ಅನುಗ್ರಹದಿಂದ ಅವರಿಗೆ ಸಂಪತ್ತು ನೀಡಿದಾಗ ಅವರು ಜಿಪುಣತೆ ತೋರಿಸಿ ನಿರ್ಲಕ್ಷ್ಯದಿಂದ ಮುಖ ತಿರುಗಿಸಿದರು.

فَلَمَّآ اٰتٰىهُمْ مِّنْ فَضْلِهٖ بَخِلُوْا بِهٖ وَتَوَلَّوْا وَّهُمْ مُّعْرِضُوْنَ ﴿٧٦﴾

**77.** ಅಲ್ಲಾಹನೊಡನೆ ಅವರು ಮಾಡಿದ ವಾಗ್ದಾನವನ್ನು ಮುರಿದುದರಿಂದ ಮತ್ತು ಸುಳ್ಳು ಹೇಳುತ್ತಲಿದ್ದ ಕಾರಣದಿಂದ ಅವರು ಅವನನ್ನು (ಅಲ್ಲಾಹನನ್ನು) ಸಂಧಿಸುವ ದಿನದ ವರೆಗೂ ಅವನು ಅವರ ಹೃದಯಗಳಲ್ಲಿ ಕಾಪಟ್ಯವನ್ನು ಪ್ರತಿಕಾರವಾಗಿ ನೆಲೆಗೊಳಿಸಿದನು.

فَاَعْقَبَهُمْ نِفَاقًا فِيْ قُلُوْبِهِمْ اِلٰى يَوْمِ يَلْقَوْنَهٗ بِمَآ اَخْلَفُوا اللّٰهَ مَا وَعَدُوْهُ وَبِمَا كَانُوْا يَكْذِبُوْنَ ﴿٧٧﴾

**78.** ಖಂಡಿತವಾಗಿಯೂ ಅಲ್ಲಾಹನು ಅವರ ರಹಸ್ಯಗಳನ್ನೂ ಅವರ ಗೂಢಾಲೋಚನೆಗಳನ್ನೂ ಬಲ್ಲವನೆಂದು ಅವರಿಗೆ ತಿಳಿದಿಲ್ಲವೇ? ನಿಶ್ಚಯವಾಗಿಯೂ ಅಲ್ಲಾಹನು ಎಲ್ಲ ಗುಪ್ತ ಸಂಗತಿಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

اَلَمْ يَعْلَمُوْٓا اَنَّ اللّٰهَ يَعْلَمُ سِرَّهُمْ وَنَجْوٰىهُمْ وَاَنَّ اللّٰهَ عَلَّامُ الْغُيُوْبِ ﴿٧٨﴾

**79.** ಸತ್ಯವಿಶ್ವಾಸಿಗಳ ಪೈಕಿ ಸ್ವಂತ ಇಷ್ಟದಿಂದ ದಾನಧರ್ಮ ಮಾಡುವವರನ್ನು ಮತ್ತು ತಮ್ಮ ಕಠಿಣ ಶ್ರಮ ಹೊರತು ಬೇರೇನನ್ನೂ ದಾನ ಮಾಡಲು ಅಶಕ್ತರಾದವರನ್ನು ಆಕ್ಷೇಪಿಸುವವರು ಅವರಾಗಿದ್ದಾರೆ. ಹಾಗೆ ಅವರು (ಆ ಕಪಟ ವಿಶ್ವಾಸಿಗಳು) ಇವರನ್ನು ಅಪಹಾಸ್ಯ ಮಾಡುತ್ತಾರೆ. ಅಲ್ಲಾಹನು ಅವರ ಪರಿಹಾಸಕ್ಕೆ ತಕ್ಕ ಪ್ರತಿಫಲವನ್ನು ಕೊಡುವನು. ಅವರಿಗೆ ಯಾತನಾಮಯವಾದ ಶಿಕ್ಷೆ ಇದೆ.

اَلَّذِيْنَ يَلْمِزُوْنَ الْمُطَّوِّعِيْنَ مِنَ الْمُؤْمِنِيْنَ فِى الصَّدَقٰتِ وَالَّذِيْنَ لَا يَجِدُوْنَ اِلَّا جُهْدَهُمْ فَيَسْخَرُوْنَ مِنْهُمْ ۗ سَخِرَ اللّٰهُ مِنْهُمْ ۖ وَلَهُمْ عَذَابٌ اَلِيْمٌ ﴿٧٩﴾

**80.** ನೀನು ಅವರ ಪಾಪ ವಿಮುಕ್ತಿಗಾಗಿ ಪ್ರಾರ್ಥಿಸು ಯಾ ಪ್ರಾರ್ಥಿಸದಿರು (ಅವೆರಡೂ ತುಲ್ಯ). ನೀನು ಅವರ ಪಾಪ ವಿಮುಕ್ತಿಗಾಗಿ ಎಪ್ಪತ್ತು ಸಲ ಪ್ರಾರ್ಥಿಸಿದರೂ ಅಲ್ಲಾಹನು ಅವರಿಗೆ ಎಂದಿಗೂ ಕ್ಷಮೆ ನೀಡಲಾರ. ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಅವರು ಧಿಕ್ಕರಿಸಿರುವುದೇ ಅದರ ಕಾರಣ. ಧಿಕ್ಕಾರಿಗಳಾದ ಜನರಿಗೆ ಅಲ್ಲಾಹನು ಮಾರ್ಗದರ್ಶನ ಮಾಡಲಾರ.

اِسْتَغْفِرْ لَهُمْ اَوْ لَا تَسْتَغْفِرْ لَهُمْ ۗ اِنْ تَسْتَغْفِرْ لَهُمْ سَبْعِيْنَ مَرَّةً فَلَنْ يَّغْفِرَ اللّٰهُ لَهُمْ ۗ ذٰلِكَ بِاَنَّهُمْ كَفَرُوْا بِاللّٰهِ وَرَسُوْلِهٖ ۗ وَاللّٰهُ لَا يَهْدِى الْقَوْمَ الْفٰسِقِيْنَ ﴿٨٠﴾

**81.** (ಯುದ್ಧಕ್ಕೆ ಹೋಗದೆ) **ಹಿಂದೆ ಸರಿದವರು** (ಕಪಟ ವಿಶ್ವಾಸಿಗಳು) **ಅಲ್ಲಾಹನ ಸಂದೇಶವಾಹಕನ ಆಜ್ಞೆಗೆ ವಿರುದ್ಧವಾಗಿ ತಮ್ಮ ಮನೆಗಳಲ್ಲಿ ಕುಳಿತುಕೊಂಡು ಸಂತೋಷಗೊಂಡರು ಹಾಗೂ ತಮ್ಮ ಸಂಪತ್ತಿನಿಂದಲೂ ಶರೀರದಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡುವುದನ್ನು ಇಷ್ಟಪಡಲಿಲ್ಲ. 'ಈ ಕಠಿಣ ಬೇಗೆಯಲ್ಲಿ ನೀವು** (ಯುದ್ಧಕ್ಕೆ) **ಹೊರಡಬೇಡಿರಿ' ಎಂದು ಅವರು** (ಪರಸ್ಪರ) **ಹೇಳಿದರು. ನೀನು ಹೇಳು: 'ನರಕಾಗ್ನಿಯ ಬೇಗೆ** (ಇದಕ್ಕಿಂತ) **ಕಠಿಣವಾದುದು.' ಅವರು ಅದನ್ನು ತಿಳಿದಿರುತ್ತಿದ್ದರೆ ಎಷ್ಟು ಚೆನ್ನಾಗಿತ್ತು!**

فَرِحَ الْمُخَلَّفُوْنَ بِمَقْعَدِهِمْ خِلٰفَ رَسُوْلِ اللّٰهِ وَكَرِهُوْٓا اَنْ يُّجَاهِدُوْا بِاَمْوَالِهِمْ وَاَنْفُسِهِمْ فِيْ سَبِيْلِ اللّٰهِ وَقَالُوْا لَا تَنْفِرُوْا فِي الْحَرِّ ؕ قُلْ نَارُ جَهَنَّمَ اَشَدُّ حَرًّا ؕ لَوْ كَانُوْا يَفْقَهُوْنَ ﴿٨١﴾

**82. ಆದ್ದರಿಂದ ಅವರು ನಗುವುದನ್ನು ಕಡಿಮೆ ಮಾಡಲಿ; ಅಳುವುದನ್ನು ಹೆಚ್ಚಿಸಲಿ - ಅವರು ಮಾಡಿದ ಕರ್ಮದ ಶಿಕ್ಷೆ.**

فَلْيَضْحَكُوْا قَلِيْلًا وَّلْيَبْكُوْا كَثِيْرًا ۚ جَزَآءًۢ بِمَا كَانُوْا يَكْسِبُوْنَ ﴿٨٢﴾

**83. ಅಲ್ಲಾಹನು ನಿನ್ನನ್ನು ಅವರ ಪೈಕಿ ಒಂದು ಗುಂಪಿನ ಬಳಿಗೆ** (ಯುದ್ಧ ಮುಗಿದು) **ಮರಳಿಸಿದಾಗ, ಅವರು** (ಯುದ್ಧಕ್ಕೆ ಹೊರಡಲು) **ನಿನ್ನೊಡನೆ ಅನುಮತಿ ಕೇಳಿದರೆ ಹೇಳು: 'ನೀವೆಂದಿಗೂ ನನ್ನೊಂದಿಗೆ ಯುದ್ಧಕ್ಕೆ ಹೊರಡಲಾರಿರಿ; ನನ್ನೊಂದಿಗೆ ನೀವೆಂದಿಗೂ ಶತ್ರುಗಳೊಡನೆ ಯುದ್ಧ ಮಾಡಲಾರಿರಿ.**[282] (ಏಕೆಂದರೆ) **ಮೊದಲ ಸಲ** (ಯುದ್ಧ ಮಾಡಲು ನಿಮ್ಮನ್ನು ಕರೆದಾಗ) **ನೀವು ಮನೆಯಲ್ಲೇ ಕುಳಿತುಕೊಳ್ಳಲು ಇಷ್ಟಪಟ್ಟಿದ್ದೀರಿ. ಆದ್ದರಿಂದ ಹಿಂದೆ ಉಳಿಯುವವರೊಂದಿಗೆ ನೀವು ಸಹ ಉಳಿದುಕೊಳ್ಳಿರಿ.'**

فَاِنْ رَّجَعَكَ اللّٰهُ اِلٰى طَآئِفَةٍ مِّنْهُمْ فَاسْتَاْذَنُوْكَ لِلْخُرُوْجِ فَقُلْ لَّنْ تَخْرُجُوْا مَعِيَ اَبَدًا وَّلَنْ تُقَاتِلُوْا مَعِيَ عَدُوًّا ؕ اِنَّكُمْ رَضِيْتُمْ بِالْقُعُوْدِ اَوَّلَ مَرَّةٍ فَاقْعُدُوْا مَعَ الْخٰلِفِيْنَ ﴿٨٣﴾

**84. ಅವರ ಪೈಕಿ ಮೃತಪಟ್ಟ ಯಾರಿಗೂ ನೀನೆಂದಿಗೂ** (ಜನಾಝ) **ನಮಾಝ್ ಮಾಡಬಾರದು. ಅಂತಹವನ ಗೋರಿಯ ಬಳಿ** (ಪ್ರಾರ್ಥಿಸಲಿಕ್ಕೆ) **ನೀನು ನಿಲ್ಲಬಾರದು. ಏಕೆಂದರೆ, ಅವರು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ನಂಬದೆ, ಧಿಕ್ಕಾರಿಗಳಾಗಿ ಮೃತಪಟ್ಟಿದ್ದಾರೆ.**

وَلَا تُصَلِّ عَلٰٓى اَحَدٍ مِّنْهُمْ مَّاتَ اَبَدًا وَّلَا تَقُمْ عَلٰى قَبْرِهٖ ؕ اِنَّهُمْ كَفَرُوْا بِاللّٰهِ وَرَسُوْلِهٖ وَمَاتُوْا وَهُمْ فٰسِقُوْنَ ﴿٨٤﴾

282. ನಿಮಗೆ ಅನುಮತಿ ನೀಡಲಾಗದು ಎಂದು ತಾತ್ಪರ್ಯ.





**85. ಅವರ ಸಂಪತ್ತು ಮತ್ತು ಸಂತಾನಗಳು ನಿನ್ನನ್ನು ಚಕಿತಗೊಳಿಸದಿರಲಿ. ಖಂಡಿತವಾಗಿಯೂ ಅವುಗಳ ಮೂಲಕ ಅವರನ್ನು ಇಹಲೋಕದಲ್ಲಿ ಶಿಕ್ಷಿಸಬೇಕೆಂದೂ ಅವರು ಅವಿಶ್ವಾಸಿಗಳಾಗಿರುವಂತೆಯೇ ಅವರ ಜೀವ ಹರಣವಾಗಬೇಕೆಂದೂ ಅಲ್ಲಾಹನು ಉದ್ದೇಶಿಸುತ್ತಾನೆ.**

وَلَا تُعْجِبْكَ اَمْوَالُهُمْ وَاَوْلَادُهُمْ ؕ اِنَّمَا يُرِيْدُ اللّٰهُ اَنْ يُّعَذِّبَهُمْ بِهَا فِي الدُّنْيَا وَتَزْهَقَ اَنْفُسُهُمْ وَهُمْ كٰفِرُوْنَ ﴿٨٥﴾

**86. 'ನೀವು ಅಲ್ಲಾಹನನ್ನು ನಂಬಿರಿ ಮತ್ತು ಅವನ ಸಂದೇಶವಾಹಕನೊಂದಿಗೆ ಸೇರಿಕೊಂಡು ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ' ಎಂಬ** (ಆಜ್ಞೆಯೊಂದಿಗೆ) **ಒಂದು ಅಧ್ಯಾಯ ಅವತೀರ್ಣವಾದರೆ, ಅವರಲ್ಲಿ ಐಶ್ವರ್ಯವಂತರು, 'ನೀವು ನಮ್ಮನ್ನು ಬಿಟ್ಟುಬಿಡಿರಿ; ಯುದ್ಧಕ್ಕೆ ಹೋಗದೆ ಹಿಂದೆ ಉಳಿಯುವವರೊಂದಿಗೆ ನಾವು ಸಹ ಇದ್ದುಬಿಡುತ್ತೇವೆ' ಎಂದು ಹೇಳುತ್ತಾ ಅದಕ್ಕಾಗಿ ನಿನ್ನ ಅನುಮತಿಯನ್ನು ಕೇಳುತ್ತಾರೆ.**

وَاِذَآ اُنْزِلَتْ سُوْرَةٌ اَنْ اٰمِنُوْا بِاللّٰهِ وَجَاهِدُوْا مَعَ رَسُوْلِهِ اسْتَاْذَنَكَ اُولُوا الطَّوْلِ مِنْهُمْ وَقَالُوْا ذَرْنَا نَكُنْ مَّعَ الْقٰعِدِيْنَ ﴿٨٦﴾

**87. ಹಿಂದೆ ನಿಲ್ಲುವವರೊಂದಿಗೆ**[282A] **ಇರಲು ಅವರು ಇಷ್ಟಪಡುತ್ತಾರೆ. ಅವರ ಹೃದಯಗಳಿಗೆ ಮುದ್ರೆ ಹಾಕಲಾಗಿದೆ. ಆದ್ದರಿಂದ ಅವರು ಮನವರಿಕೆ ಮಾಡಿಕೊಳ್ಳುವುದಿಲ್ಲ.**

رَضُوْا بِاَنْ يَّكُوْنُوْا مَعَ الْخَوَالِفِ وَطُبِعَ عَلٰى قُلُوْبِهِمْ فَهُمْ لَا يَفْقَهُوْنَ ﴿٨٧﴾

**88. ಆದರೆ, ಸಂದೇಶವಾಹಕ ಮತ್ತು ಅವರೊಂದಿಗೆ ವಿಶ್ವಾಸಿಗಳು ತಮ್ಮ ಸಂಪತ್ತಿನಿಂದಲೂ ದೇಹದಿಂದಲೂ** (ಅಲ್ಲಾಹನ ಮಾರ್ಗದಲ್ಲಿ) **ಹೋರಾಡುತ್ತಾರೆ. ಸರ್ವ ಒಳಿತುಗಳು ಅವರಿಗಿವೆ. ಅವರೇ ವಿಜಯಶಾಲಿಗಳು.**

لٰكِنِ الرَّسُوْلُ وَالَّذِيْنَ اٰمَنُوْا مَعَهٗ جٰهَدُوْا بِاَمْوَالِهِمْ وَاَنْفُسِهِمْ ؕ وَاُولٰٓئِكَ لَهُمُ الْخَيْرٰتُ ؗ وَاُولٰٓئِكَ هُمُ الْمُفْلِحُوْنَ ﴿٨٨﴾

**89. ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳನ್ನು ಅಲ್ಲಾಹನು ಅವರಿಗೆ ಸಿದ್ಧಪಡಿಸಿಟ್ಟಿರುವನು. ಅಲ್ಲೇ ಅವರು ನೆಲೆಸುವರು. ಅದೇ ಮಹಾ ವಿಜಯವಾಗಿದೆ.**

اَعَدَّ اللّٰهُ لَهُمْ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ؕ ذٰلِكَ الْفَوْزُ الْعَظِيْمُ ﴿٨٩﴾

**90. ಮರಳುಗಾಡಿನ ಅರಬಿಗಳ ಪೈಕಿ ನೆಪ ಹುಡುಕುವವರು ಸಹ ತಮಗೆ** (ಹಿಂದೆ ಉಳಿಯಲು) **ಅನುಮತಿ**

وَجَآءَ الْمُعَذِّرُوْنَ مِنَ الْاَعْرَابِ

282A. ಯುದ್ಧಕ್ಕೆ ಹೋಗದೆ ಹಿಂದೆ ನಿಲ್ಲುವವರು ಅಥವಾ ಮನೆ, ಶಿಬಿರಗಳಲ್ಲಿ ಉಳಿದುಕೊಳ್ಳುವ ಸ್ತ್ರೀಯರು ಮತ್ತು ಮಕ್ಕಳು.

ಪಡೆಯಲಿಕ್ಕಾಗಿ ಬಂದರು. ಅಲ್ಲಾಹನೊಡನೆ ಮತ್ತು ಅವನ ಸಂದೇಶವಾಹಕನೊಡನೆ ಸುಳ್ಳು ಹೇಳಿದವರು (ಮನೆಯಲ್ಲಿ) ಕುಳಿತುಕೊಂಡರು. ಅವರ ಪೈಕಿ ಅವಿಶ್ವಾಸ ಹೊಂದಿದವರಿಗೆ ಯಾತನಾಮಯವಾದ ಶಿಕ್ಷೆ ಬಂದೆರಗುವುದು.

لِيُؤْذَنَ لَهُمْ وَقَعَدَ الَّذِينَ
كَذَبُوا اللَّهَ وَرَسُولَهُ ۚ سَيُصِيبُ
الَّذِينَ كَفَرُوا مِنْهُمْ عَذَابٌ أَلِيمٌ ﴿٩٠﴾

**91.** ಬಲಹೀನರೂ ರೋಗಿಗಳೂ ಖರ್ಚುಮಾಡಲು ಏನೂ ಇಲ್ಲದವರೂ (ಯುದ್ಧಕ್ಕೆ ಹೋಗದಿದ್ದರೆ) - ಅವರು ಅಲ್ಲಾಹನೊಡನೆ ಮತ್ತು ಅವನ ಸಂದೇಶವಾಹಕನೊಡನೆ ಪ್ರಾಮಾಣಿಕವಾಗಿದ್ದರೆ ಅವರ ತಪ್ಪೇನೂ ಇಲ್ಲ. ಸತ್ಕರ್ಮಿಗಳ ವಿರುದ್ಧ ದೋಷಾರೋಪಣೆಗೆ ಅವಕಾಶವೇನೂ ಇಲ್ಲ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

لَيْسَ عَلَى الضُّعَفَاءِ وَلَا عَلَى الْمَرْضَىٰ
وَلَا عَلَى الَّذِينَ لَا يَجِدُونَ مَا
يُنفِقُونَ حَرَجٌ إِذَا نَصَحُوا لِلَّهِ وَ
رَسُولِهِ ۚ مَا عَلَى الْمُحْسِنِينَ مِن
سَبِيلٍ ۚ وَاللَّهُ غَفُورٌ رَّحِيمٌ ﴿٩١﴾

**92.** (ಯುದ್ಧಕ್ಕೆ ಹೋಗಲು) ತಮಗೆ ಸವಾರಿ ಒದಗಿಸಬೇಕೆಂದು ನಿನ್ನ ಬಳಿಗೆ ಬಂದು ಕೇಳಿದವರ ಮೇಲೂ ತಪ್ಪೇನಿಲ್ಲ. 'ನಿಮಗೆ ಸವಾರಿ ಒದಗಿಸಲು ನನ್ನ ಬಳಿ ಏನೂ ಇಲ್ಲ' ಎಂದು ನೀನು ಹೇಳಿದೆ. (ಆಗ) ಖರ್ಚು ಮಾಡಲು ತಮ್ಮ ಬಳಿಯೇನೂ ಇಲ್ಲವೆಂಬ ದುಃಖದಿಂದ ಅವರ ಕಣ್ಣುಗಳು ಕಣ್ಣೀರಿನಿಂದ ತುಂಬಿದ ಸ್ಥಿತಿಯಲ್ಲಿ ಅವರು ಮರಳಿದರು.

وَلَا عَلَى الَّذِينَ إِذَا مَا أَتَوْكَ
لِتَحْمِلَهُمْ قُلْتَ لَا أَجِدُ مَا
أَحْمِلُكُمْ عَلَيْهِ تَوَلَّوا وَّأَعْيُنُهُمْ
تَفِيضُ مِنَ الدَّمْعِ حَزَنًا أَلَّا يَجِدُوا
مَا يُنفِقُونَ ﴿٩٢﴾

**93.** ತಾವು ಐಶ್ವರ್ಯವಂತರಾಗಿದ್ದು ಸಹ ಹಿಂದೆ ಉಳಿಯಲು ನಿನ್ನೊಡನೆ ಅನುಮತಿ ಕೇಳಿದವರ ಮೇಲೆ ಮಾತ್ರ ತಪ್ಪು ಹೊರಿಸಲು ದಾರಿಯಿದೆ. ಹಿಂದೆ ಉಳಿಯುವವರೊಂದಿಗಿರಲು ಅವರು ಇಷ್ಟಪಟ್ಟರು. ಅವರ ಹೃದಯಗಳಿಗೆ ಅಲ್ಲಾಹನು ಮುದ್ರೆ ಹಾಕಿದುದರಿಂದ ಅವರು ಮನವರಿಕೆ ಮಾಡುವುದಿಲ್ಲ.

إِنَّمَا السَّبِيلُ عَلَى الَّذِينَ
يَسْتَأْذِنُونَكَ وَهُمْ أَغْنِيَاءُ ۚ رَضُوا
بِأَن يَكُونُوا مَعَ الْخَوَالِفِ وَ
طَبَعَ اللَّهُ عَلَىٰ قُلُوبِهِمْ فَهُمْ لَا
يَعْلَمُونَ ﴿٩٣﴾

**94.** (ಯುದ್ಧ ಮುಗಿದು) ನೀವು ಅವರ ಬಳಿಗೆ ಮರಳಿದಾಗ ಅವರು ನಿಮ್ಮೊಡನೆ ನೆಪ ಹೇಳುತ್ತಾರೆ. ಹೇಳು: 'ನೀವು ನೆಪವೇನೂ ಹೇಳಬೇಡಿರಿ. ನಿಮ್ಮಲ್ಲಿ ನಮಗೆ ವಿಶ್ವಾಸವಿಲ್ಲ. ನಿಮ್ಮ ಬಗ್ಗೆ ಅಲ್ಲಾಹನು ನಮಗೆ

يَعْتَذِرُونَ إِلَيْكُمْ إِذَا رَجَعْتُمْ
إِلَيْهِمْ ۚ قُل لَّا تَعْتَذِرُوا لَن نُّؤْمِنَ
لَكُمْ قَدْ نَبَّأَنَا اللَّهُ مِنْ أَخْبَارِكُمْ ۚ





ಅರಿವು ನೀಡಿದ್ದಾನೆ. ಅಲ್ಲಾಹನು ಮತ್ತು ಅವನ ಸಂದೇಶವಾಹಕ ನಿಮ್ಮ ನಡತೆಯನ್ನು ವೀಕ್ಷಿಸುವರು. ಆ ಬಳಿಕ ನಿಮ್ಮನ್ನು ಗೋಚರ - ಅಗೋಚರಗಳನ್ನು ತಿಳಿಯುವವನ ಬಳಿಗೆ ಮರಳಿಸಲಾಗುವುದು. ಆಗ ಅವನು ನಿಮ್ಮ ಕೃತ್ಯಗಳ ಬಗ್ಗೆ ನಿಮಗೆ ತಿಳಿಸಿಕೊಡುವನು.'

وَسَيَرَى اللَّهُ عَمَلَكُمْ وَرَسُولُهُ ثُمَّ
تُرَدُّونَ إِلَىٰ عَالِمِ الْغَيْبِ وَالشَّهَادَةِ
فَيُنَبِّئُكُم بِمَا كُنتُمْ تَعْمَلُونَ ﴿٩٤﴾

**95.** ನೀವು ಅವರ ಬಳಿಗೆ ಮರಳಿದಾಗ, ನೀವು ಅವರನ್ನು ಬಿಟ್ಟು ಬಿಡಲಿಕ್ಕಾಗಿ ಅವರು ನಿಮ್ಮೊಡನೆ ಅಲ್ಲಾಹನ ಆಣೆಹಾಕುತ್ತಾರೆ. ಆದ್ದರಿಂದ ಅವರನ್ನು ಬಿಟ್ಟುಬಿಡಿರಿ. ದಿಟವಾಗಿಯೂ ಅವರು ಅಶುದ್ಧರು. ಅವರ ವಾಸಸ್ಥಳ ನರಕವಾಗಿದೆ - ಅವರ ಕೃತ್ಯಗಳ ಪ್ರತಿಫಲ.

سَيَحْلِفُونَ بِاللَّهِ لَكُمْ إِذَا انقَلَبْتُمْ
إِلَيْهِمْ لِتُعْرِضُوا عَنْهُمْ ۖ فَأَعْرِضُوا
عَنْهُمْ ۖ إِنَّهُمْ رِجْسٌ ۖ وَمَأْوَاهُمْ
جَهَنَّمُ جَزَاءً بِمَا كَانُوا يَكْسِبُونَ ﴿٩٥﴾

**96.** ನೀವು ಅವರ ಬಗ್ಗೆ ಸಂತೃಪ್ತರಾಗಲಿಕ್ಕಾಗಿ ಅವರು ಆಣೆಹಾಕುವರು. ನೀವು ಅವರ ಬಗ್ಗೆ ಸಂತೃಪ್ತರಾದರೂ ಅಲ್ಲಾಹನು ಧಿಕ್ಕಾರಿಗಳಾದ ಜನರ ಬಗ್ಗೆ ಸಂತೃಪ್ತನಾಗಲಾರ.

يَحْلِفُونَ لَكُمْ لِتَرْضَوْا عَنْهُمْ ۖ فَإِن
تَرْضَوْا عَنْهُمْ فَإِنَّ اللَّهَ لَا يَرْضَىٰ
عَنِ الْقَوْمِ الْفَاسِقِينَ ﴿٩٦﴾

**97.** ಮರಳುಗಾಡಿನ ಅರಬರು ಅವಿಶ್ವಾಸದಲ್ಲೂ ಕಾಪಟ್ಯದಲ್ಲೂ ಅತಿ ಕಠಿಣರು. ಅಲ್ಲಾಹನು ತನ್ನ ಸಂದೇಶವಾಹಕನಿಗೆ ಅವತೀರ್ಣಗೊಳಿಸಿದ ಆಜ್ಞೆಗಳನ್ನು ಗ್ರಹಣಮಾಡದಿರಲಿಕ್ಕೆ ಅವರು ಹೆಚ್ಚು ಅರ್ಹರಾಗಿದ್ದಾರೆ. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

الْأَعْرَابُ أَشَدُّ كُفْرًا وَنِفَاقًا وَأَجْدَرُ
أَلَّا يَعْلَمُوا حُدُودَ مَا أَنزَلَ اللَّهُ عَلَىٰ
رَسُولِهِ ۗ وَاللَّهُ عَلِيمٌ حَكِيمٌ ﴿٩٧﴾

**98.** (ಅಲ್ಲಾಹನ ಮಾರ್ಗದಲ್ಲಿ) ಖರ್ಚು ಮಾಡುವುದು ನಷ್ಟವೆಂದು ಭಾವಿಸುವ ಕೆಲವರು ಸಹ ಆ ಮರಳುಗಾಡಿನ ನಿವಾಸಿಗಳಾದ ಅರಬರ ಪೈಕಿಯಲ್ಲಿದ್ದಾರೆ. ನಿಮ್ಮ ಮೇಲೆ ಆಪತ್ತುಗಳು ಬಂದೆರಗಲಿಕ್ಕಾಗಿ ಅವರು ಕಾತರದಿಂದ ಕಾಯುತ್ತಾರೆ. (ಆದರೆ) ಅವರ ಮೇಲೆಯೇ ಆಪತ್ತು ಬಂದೆರಗುವುದು. ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

وَمِنَ الْأَعْرَابِ مَن يَتَّخِذُ مَا يُنفِقُ
مَغْرَمًا وَيَتَرَبَّصُ بِكُمُ الدَّوَائِرَ ۚ
عَلَيْهِمْ دَائِرَةُ السَّوْءِ ۗ وَاللَّهُ
سَمِيعٌ عَلِيمٌ ﴿٩٨﴾

**99.** ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಡುವ ಮತ್ತು ತಾವು ಖರ್ಚುಮಾಡುವುದು ಅಲ್ಲಾಹನ

وَمِنَ الْأَعْرَابِ مَن يُؤْمِنُ بِاللَّهِ

ಸಾಮೀಪ್ಯವನ್ನು ಗಳಿಸಲಿಕ್ಕೂ ಪ್ರವಾದಿಯ ಪ್ರಾರ್ಥನೆಯ ಫಲವನ್ನು ಪಡೆಯಲಿಕ್ಕೂ ಆಗಿದೆಯೆಂದು ಗಣಿಸುವ ಕೆಲವರು ಸಹ ಆ ಮರಳುಗಾಡಿನ ಅರಬರ ಪೈಕಿಯಲ್ಲಿದ್ದಾರೆ. ತಿಳಿಯಿರಿ, ಖಂಡಿತವಾಗಿಯೂ ಅವರಿಗೆ (ಅಲ್ಲಾಹನ) ಸಾಮೀಪ್ಯ ಲಭಿಸುವುದು. ಅಲ್ಲಾಹನು ಶೀಘ್ರವೇ ಅವರನ್ನು ತನ್ನ ಕರುಣೆಗೊಳಪಡಿಸುವನು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَالْيَوْمِ الْاٰخِرِ وَيَتَّخِذُ مَا يُنْفِقُ قُرُبٰتٍ عِنْدَ اللّٰهِ وَصَلَوٰتِ الرَّسُوْلِ ۭ اَلَآ اِنَّهَا قُرْبَةٌ لَّهُمْ ۭ سَيُدْخِلُهُمُ اللّٰهُ فِيْ رَحْمَتِهٖ ۭ اِنَّ اللّٰهَ غَفُوْرٌ رَّحِيْمٌ ۹۹

100. 'ಮುಹಾಜಿರ್' ಮತ್ತು 'ಅನ್ಸಾರ್'ಗಳ ಪೈಕಿ[283] (ಸತ್ಯವಿಶ್ವಾಸದಲ್ಲಿ) ಮುಂಚೂಣಿಯಲ್ಲಿರುವ ಮೊದಲ ವಿಶ್ವಾಸಿಗಳ ಬಗ್ಗೆ ಮತ್ತು ಸತ್ಕಾರ್ಯದಲ್ಲಿ ಅವರನ್ನು ಉತ್ತಮ ರೀತಿಯಲ್ಲಿ ಅನುಸರಿಸಿದವರ ಬಗ್ಗೆ ಅಲ್ಲಾಹನು ಸಂತೃಪ್ತನಾಗಿದ್ದಾನೆ.[283A] ಅವರು ಅವನ ಬಗ್ಗೆಯೂ ಸಂತೃಪ್ತರು. ಕೆಳಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳನ್ನು ಅವನು ಅವರಿಗೆ ಸಿದ್ಧಪಡಿಸಿಟ್ಟಿದ್ದಾನೆ. ಅವರು ಅಲ್ಲೇ ಸ್ಥಿರವಾಗಿ ನೆಲೆಸುವರು. ಅದೇ ಮಹಾ ವಿಜಯವು.

وَالسّٰبِقُوْنَ الْاَوَّلُوْنَ مِنَ الْمُهٰجِرِيْنَ وَالْاَنْصَارِ وَالَّذِيْنَ اتَّبَعُوْهُمْ بِاِحْسَانٍ ۙ رَّضِيَ اللّٰهُ عَنْهُمْ وَرَضُوْا عَنْهُ وَاَعَدَّ لَهُمْ جَنّٰتٍ تَجْرِيْ تَحْتَهَا الْاَنْهٰرُ خٰلِدِيْنَ فِيْهَآ اَبَدًا ۭ ذٰلِكَ الْفَوْزُ الْعَظِيْمُ ۱۰۰

101. ನಿಮ್ಮ ಸುತ್ತಮುತ್ತಲಿರುವ ಮರಳುಗಾಡಿನ ಅರಬರಲ್ಲೂ ಮದೀನ ನಿವಾಸಿಗಳಲ್ಲೂ ಕೆಲವು ಕಪಟ ವಿಶ್ವಾಸಿಗಳಿದ್ದಾರೆ. ಅವರು ಕಪಟತನದಲ್ಲೇ ದೃಢವಾಗಿ ನಿಲ್ಲುತ್ತಾರೆ. ನೀನು ಅವರನ್ನು ಅರಿತಿಲ್ಲ. ನಾವು ಅವರನ್ನು ಬಲ್ಲೆವು. ಎರಡು ಸಲ[283B] ನಾವು ಅವರನ್ನು ಶಿಕ್ಷಿಸುವೆವು. ಅನಂತರ ಅವರನ್ನು ಕಠಿಣವಾದ ಶಿಕ್ಷೆಗೆ ಮರಳಿಸಲಾಗುವುದು.

وَمِمَّنْ حَوْلَكُمْ مِّنَ الْاَعْرَابِ مُنٰفِقُوْنَ ۚ وَمِنْ اَهْلِ الْمَدِيْنَةِ ۚ مَرَدُوْا عَلَي النِّفَاقِ ۣ لَا تَعْلَمُهُمْ ۭ نَحْنُ نَعْلَمُهُمْ ۭ سَنُعَذِّبُهُمْ مَّرَّتَيْنِ ثُمَّ يُرَدُّوْنَ اِلٰى عَذَابٍ عَظِيْمٍ ۱۰۱

283. 'ಮುಹಾಜಿರೀನ್' - ತಮ್ಮ ಸ್ವಂತ ಊರಾದ ಮಕ್ಕವನ್ನು ಬಿಟ್ಟು ಮದೀನದಲ್ಲಿ ಅಭಯ ಪಡೆದ ಮೊದಲ ಇಸ್ಲಾಂ ಧರ್ಮ ವಿಶ್ವಾಸಿಗಳು.
'ಅನ್ಸಾರ್' - ಹಾಗೆ ಅಭಯಾರ್ಥಿಗಳಾಗಿ ಬಂದವರಿಗೆ ಸಕಲ ಸಹಾಯಗಳನ್ನಿತ್ತು ಸಹಕರಿಸಿದ ಮದೀನದ ನಿವಾಸಿಗಳು.
283A. ಪ್ರಥಮದ ಮೂವರು ಖಲೀಫರನ್ನು ಧಿಕ್ಕರಿಸುವ 'ಶಿಯಾ' ಸಿದ್ಧಾಂತ ಸಂಪೂರ್ಣವಾಗಿ ತಪ್ಪೆಂದು ಈ ವಚನದಿಂದ ಸ್ಪಷ್ಟವಾಗುತ್ತದೆ.
283B. ಇದೊಂದು ಭವಿಷ್ಯವಾಣಿಯಾಗಿದೆ. ಮುಹಮ್ಮದ್ ಪೈಗಂಬರ್ (ಸ)ರ ನಿಧನದ ಬಳಿಕ ಕಪಟ ವಿಶ್ವಾಸಿಗಳ ಸಹಾಯಕ ಗೋತ್ರಗಳು ಮುಸ್ಲಿಮರ ವಿರುದ್ಧ ದಂಗೆಯೆದ್ದರು. ಆಗ ಮುಸ್ಲಿಮರು ಅವರನ್ನು ಬಗ್ಗುಬಡಿದರು. ಆ ಬಳಿಕ ಕಪಟ ವಿಶ್ವಾಸಿಗಳ ಆಶಾಕೇಂದ್ರ ಅರಬಿಗಳಾದ ಕ್ರೈಸ್ತರಾಗಿದ್ದರು. ಅವರು ಸಹ ನಾಶಗೊಳಿಸಲ್ಪಟ್ಟರು. ಈ ರೀತಿ ಅವರನ್ನು ಎರಡು ಸಲ ಘೋರ ಶಿಕ್ಷೆಗೆ ಗುರಿಪಡಿಸಲಾಯಿತು.





102. ತಮ್ಮ ತಪ್ಪನ್ನು ಒಪ್ಪಿಕೊಂಡ ಇನ್ನು ಕೆಲವರು ಸಹ ಇದ್ದಾರೆ. ಅವರು ಸತ್ಕೃತ್ಯಗಳೊಂದಿಗೆ ಬೇರೆ ಕೆಲವು ದುಷ್ಕೃತ್ಯಗಳನ್ನು ಬೆರೆಸಿರುವರು. ಅಲ್ಲಾಹನು ಅವರೆಡೆಗೆ ಕಾರುಣ್ಯದಿಂದ ತಿರುಗಬಹುದು. ಖಂಡಿತವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَاٰخَرُوْنَ اعْتَرَفُوْا بِذُنُوْبِهِمْ خَلَطُوْا عَمَلًا صَالِحًا وَّاٰخَرَ سَيِّئًا ۭ عَسَى اللّٰهُ اَنْ يَّتُوْبَ عَلَيْهِمْ ۭ اِنَّ اللّٰهَ غَفُوْرٌ رَّحِيْمٌ ۱۰۲

103. ನೀನು ಅವರ (ಸತ್ಯ ವಿಶ್ವಾಸಿಗಳ) ಧನದಿಂದ ದಾನಧರ್ಮಗಳನ್ನು ಸಂಗ್ರಹಿಸು. ಆ ಮೂಲಕ ನೀನು ಅವರನ್ನು ಶುದ್ಧೀಕರಿಸಿ ಅವರ ಅಭಿವೃದ್ಧಿಯ ಮಾರ್ಗವನ್ನು ಸುಗಮಗೊಳಿಸುವೆ. ನೀನು ಅವರಿಗೋಸ್ಕರ ಪ್ರಾರ್ಥನೆಯನ್ನು ಸಹ ಮಾಡು. ಖಂಡಿತವಾಗಿಯೂ ನಿನ್ನ ಪ್ರಾರ್ಥನೆ ಅವರಿಗೆ ಮನಃಶಾಂತಿಯನ್ನು ನೀಡುವುದು. ಅಲ್ಲಾಹನು (ಪ್ರಾರ್ಥನೆಗಳನ್ನು) ಚೆನ್ನಾಗಿ ಕೇಳುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

خُذْ مِنْ اَمْوَالِهِمْ صَدَقَةً تُطَهِّرُهُمْ وَتُزَكِّيْهِمْ بِهَا وَصَلِّ عَلَيْهِمْ ۭ اِنَّ صَلٰوتَكَ سَكَنٌ لَّهُمْ ۭ وَاللّٰهُ سَمِيْعٌ عَلِيْمٌ ۱۰۳

104. ಅಲ್ಲಾಹನೇ ತನ್ನ ಭಕ್ತಜನರಿಂದ ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ದಾನ ಧರ್ಮ ಗಳನ್ನು ಸ್ವೀಕೃತ ಮಾಡುವವನೂ ಮಾತ್ರವಲ್ಲ, ಅಲ್ಲಾಹನೇ ಅತಿ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆಂದು ಅವರಿಗೆ ಮನವರಿಕೆಯಾಗಿಲ್ಲವೇ?

اَلَمْ يَعْلَمُوْٓا اَنَّ اللّٰهَ هُوَ يَقْبَلُ التَّوْبَةَ عَنْ عِبَادِهٖ وَيَاْخُذُ الصَّدَقٰتِ وَاَنَّ اللّٰهَ هُوَ التَّوَّابُ الرَّحِيْمُ ۱۰۴

105. ಹೇಳು : 'ನೀವು (ನಿಮ್ಮ ಸ್ಥಾನಕ್ಕನುಸಾರವಾಗಿ) ವರ್ತಿಸಿರಿ. ಅಲ್ಲಾಹನೂ ಅವನ ಸಂದೇಶವಾಹಕನೂ ಸತ್ಯವಿಶ್ವಾಸಿಗಳೂ ನಿಮ್ಮ ವರ್ತನೆಯನ್ನು ವೀಕ್ಷಿಸುವರು. ಗೋಚರ - ಅಗೋಚರ ವಿಚಾರಗಳನ್ನು ಬಲ್ಲವನ ಬಳಿಗೆ ನೀವು ಮರಳಿಸಲ್ಪಡುವಿರಿ. ಆಗ ನಿಮ್ಮ ಕೃತ್ಯಗಳ ಬಗ್ಗೆ ಅವನು ನಿಮಗೆ ತಿಳಿಸಿ ಕೊಡುವನು.'

وَقُلِ اعْمَلُوْا فَسَيَرَى اللّٰهُ عَمَلَكُمْ وَرَسُوْلُهٗ وَالْمُؤْمِنُوْنَ ۭ وَسَتُرَدُّوْنَ اِلٰى عٰلِمِ الْغَيْبِ وَالشَّهَادَةِ فَيُنَبِّئُكُمْ بِمَا كُنْتُمْ تَعْمَلُوْنَ ۱۰۵

106. ಅಲ್ಲಾಹನ ತೀರ್ಮಾನಕ್ಕಾಗಿ ತಡೆಹಿಡಿಯಲ್ಪಟ್ಟ ಬೇರೆ ಕೆಲವರು ಸಹ ಇದ್ದಾರೆ. ಅವನು ಅವರನ್ನು ಶಿಕ್ಷಿಸಬಹುದು. ಅಥವಾ ಅವರ ಮೇಲೆ ಕರುಣೆ ತೋರಿಸಬಹುದು. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

وَاٰخَرُوْنَ مُرْجَوْنَ لِاَمْرِ اللّٰهِ اِمَّا يُعَذِّبُهُمْ وَاِمَّا يَتُوْبُ عَلَيْهِمْ ۭ وَاللّٰهُ عَلِيْمٌ حَكِيْمٌ ۱۰۶

وَالَّذِينَ اتَّخَذُوا مَسْجِدًا ضِرَارًا وَكُفْرًا وَتَفْرِيقًا بَيْنَ الْمُؤْمِنِينَ وَإِرْصَادًا لِمَنْ حَارَبَ اللَّهَ وَرَسُولَهُ مِنْ قَبْلُ ۚ وَلَيَحْلِفُنَّ إِنْ أَرَدْنَا إِلَّا الْحُسْنَىٰ ۖ وَاللَّهُ يَشْهَدُ إِنَّهُمْ لَكَاذِبُونَ ﴿١٠٧﴾

**107.** (ಇಸ್ಲಾಮಿಗೆ) ಹಾನಿ ಉಂಟು ಮಾಡಲಿಕ್ಕೂ ಅವಿಶ್ವಾಸವನ್ನು ಬಲ ಪಡಿಸಲಿಕ್ಕೂ ವಿಶ್ವಾಸಿಗಳ ಮಧ್ಯೆ ಒಡಕ್ಕನ್ನುಂಟು ಮಾಡಲಿಕ್ಕೂ ಅಲ್ಲಾಹ್ ಮತ್ತು ಅವನ ಸಂದೇಶವಾಹಕನೊಡನೆ ಇದಕ್ಕಿಂತ ಮೊದಲು ಯುದ್ಧಮಾಡಿದವನಿಗೆ ಆಶ್ರಯ ನೀಡಲಿಕ್ಕೂ ಬೇಕಾಗಿ ಒಂದು ಆರಾಧನಾಲಯವನ್ನು ನಿರ್ಮಿಸಿದವರು ಸಹ ಆ ಕಪಟ ವಿಶ್ವಾಸಿಗಳ ಪೈಕಿಯಲ್ಲಿದ್ದಾರೆ. 'ನಾವು ಒಳಿತು ವಿನಾ ಬೇರೇನನ್ನೂ ಉದ್ದೇಶಿಸುವುದಿಲ್ಲ' ಎಂದು ಅವರು ಖಂಡಿತವಾಗಿಯೂ ಸತ್ಯಪ್ರಮಾಣ ಮಾಡುತ್ತಾರೆ. ಅವರು ಸುಳ್ಳು ಹೇಳುತ್ತಿದ್ದಾರೆಂಬುದಕ್ಕೆ ಅಲ್ಲಾಹನೇ ಸಾಕ್ಷಿಯಾಗಿದ್ದಾನೆ.

لَا تَقُمْ فِيهِ أَبَدًا ۚ لَمَسْجِدٌ أُسِّسَ عَلَى التَّقْوَىٰ مِنْ أَوَّلِ يَوْمٍ أَحَقُّ أَنْ تَقُومَ فِيهِ ۚ فِيهِ رِجَالٌ يُحِبُّونَ أَنْ يَتَطَهَّرُوا ۚ وَاللَّهُ يُحِبُّ الْمُطَّهِّرِينَ ﴿١٠٨﴾

**108.** ನೀನೆಂದಿಗೂ ಅದರಲ್ಲಿ ನಮಾಝ್ ಮಾಡಲು ನಿಲ್ಲಬಾರದು. ಖಂಡಿತವಾಗಿಯೂ ಪ್ರಥಮ ದಿನ ದಿಂದಲೇ ದೇವಭಕ್ತಿಯ ಅಡಿಪಾಯದಲ್ಲಿ ಸ್ಥಾಪಿಸಲ್ಪಟ್ಟ ಮಸೀದಿಯೇ ನಮಾಝಿಗೆ ನಿಲ್ಲಲು ನಿನಗೆ ಅತ್ಯಂತ ಅರ್ಹವಾದುದು. ಅಲ್ಲಿ ಪರಿಶುದ್ಧರಾಗಲು ಬಯಸುವ ಜನರಿದ್ದಾರೆ. ಪರಿಶುದ್ಧರನ್ನು ಅಲ್ಲಾಹನು ಪ್ರೀತಿಸುತ್ತಾನೆ.

أَفَمَنْ أَسَّسَ بُنْيَانَهُ عَلَىٰ تَقْوَىٰ مِنَ اللَّهِ وَرِضْوَانٍ خَيْرٌ أَمْ مَنْ أَسَّسَ بُنْيَانَهُ عَلَىٰ شَفَا جُرُفٍ هَارٍ فَانْهَارَ بِهِ فِي نَارِ جَهَنَّمَ ۗ وَاللَّهُ لَا يَهْدِي الْقَوْمَ الظَّالِمِينَ ﴿١٠٩﴾

**109.** ಅಲ್ಲಾಹನೊಡನಿರುವ ಭಯಭಕ್ತಿ ಮತ್ತು (ಅವನ) ಸಂತೃಪ್ತಿಯ ಮೇಲೆ ತನ್ನ ಕಟ್ಟಡದ ಶಂಕು ಸ್ಥಾಪನೆ ಮಾಡಿದವನು ಉತ್ತಮನೋ ಅಥವಾ ಕುಸಿದು ಬೀಳುವ ಮರಳ ದಿಣ್ಣೆಯ ಮೇಲೆ ಅಡಿಪಾಯ ಹಾಕಿ ತಾನೂ ಅದರೊಂದಿಗೆ ನರಕಾಗ್ನಿಯಲ್ಲಿ ಬೀಳುವವನು ಉತ್ತಮನೋ? ಅಧರ್ಮಿಗಳಾದ ಜನರನ್ನು ಅಲ್ಲಾಹನು ಸತ್ಪಥದಲ್ಲಿ ನಡೆಸುವುದಿಲ್ಲ.

لَا يَزَالُ بُنْيَانُهُمُ الَّذِي بَنَوْا رِيبَةً فِي قُلُوبِهِمْ إِلَّا أَنْ تَقَطَّعَ قُلُوبُهُمْ ۗ وَاللَّهُ عَلِيمٌ حَكِيمٌ ﴿١١٠﴾

**110.** ಅವರ ಹೃದಯಗಳು ಒಡೆದು ಚೂರು ಚೂರಾಗುವ ವರೆಗೂ ಅವರ ಆ ಕಟ್ಟಡ ಅವರ ಹೃದಯಗಳ ಅಸ್ವಾಸ್ಥ್ಯಕ್ಕೆ ಹೇತುವಾಗುತ್ತಲೇ ಇರುವುದು. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.





إِنَّ اللَّهَ اشْتَرَىٰ مِنَ الْمُؤْمِنِينَ أَنْفُسَهُمْ وَأَمْوَالَهُمْ بِأَنَّ لَهُمُ الْجَنَّةَ ۚ يُقَاتِلُونَ فِي سَبِيلِ اللَّهِ فَيَقْتُلُونَ وَيُقْتَلُونَ ۖ وَعْدًا عَلَيْهِ حَقًّا فِي التَّوْرَاةِ وَالْإِنْجِيلِ وَالْقُرْآنِ ۚ وَمَنْ أَوْفَىٰ بِعَهْدِهِ مِنَ اللَّهِ ۚ فَاسْتَبْشِرُوا بِبَيْعِكُمُ الَّذِي بَايَعْتُمْ بِهِ ۚ وَذَٰلِكَ هُوَ الْفَوْزُ الْعَظِيمُ ﴿١١١﴾

**111.** ಸ್ವರ್ಗ ನೀಡಲಾಗುವುದೆಂಬ ಭರವಸೆಯ ಮೇಲೆ ಸತ್ಯವಿಶ್ವಾಸಿಗಳಿಂದ ಅಲ್ಲಾಹನು ಅವರ ಜೀವವನ್ನೂ ದೇಹವನ್ನೂ ಖರೀದಿಸಿರುವನು. ಅಲ್ಲಾಹನ ಮಾರ್ಗದಲ್ಲಿ ಅವರು ಹೋರಾಡುತ್ತಾರೆ. ಅವರು (ಶತ್ರುಗಳನ್ನು) ಕೊಲ್ಲುತ್ತಾರೆ. (ಕೆಲವೊಮ್ಮೆ) ಅವರು ಕೊಲ್ಲಲ್ಪಡುತ್ತಾರೆ. ಇದು ಸತ್ಯವಾದ ವಾಗ್ದಾನವಾಗಿದ್ದು ಅಲ್ಲಾಹನು ಅದರ ನೆರವೇರಿಕೆಯ ಬಗ್ಗೆ ತೌರಾತ್, ಇಂಜೀಲ್ ಮತ್ತು ಖುರ್‌ಆನಿನಲ್ಲಿ ಪ್ರಸ್ತಾಪಿಸಿದ್ದಾನೆ. ವಾಗ್ದಾನವನ್ನು ಈಡೇರಿಸುವುದರಲ್ಲಿ ಅಲ್ಲಾಹನಿಗಿಂತ ಉತ್ತಮನು ಯಾರು? ಆದ್ದರಿಂದ (ಅಲ್ಲಾಹನೊಂದಿಗೆ) ನೀವು ಮಾಡಿದ ವ್ಯಾಪಾರದ ಬಗ್ಗೆ ಸಂತೋಷಪಡಿರಿ. ಅದೇ ಮಹಾ ವಿಜಯವಾಗಿದೆ.

التَّائِبُونَ الْعَابِدُونَ الْحَامِدُونَ السَّائِحُونَ الرَّاكِعُونَ السَّاجِدُونَ الْآمِرُونَ بِالْمَعْرُوفِ وَالنَّاهُونَ عَنِ الْمُنْكَرِ وَالْحَافِظُونَ لِحُدُودِ اللَّهِ ۗ وَبَشِّرِ الْمُؤْمِنِينَ ﴿١١٢﴾

**112.** ಅವರು (ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ) ಮರಳುವವರೂ (ಅಲ್ಲಾಹನನ್ನು) ಆರಾಧಿಸುವವರೂ (ಅಲ್ಲಾಹನ) ಸ್ತುತಿ ಕೀರ್ತನೆ ಮಾಡುವವರೂ ವ್ರತಾನುಷ್ಠಾನ ಮಾಡುವವರೂ ನಮಿಸುವವರೂ ಸಾಷ್ಟಾಂಗ ಪ್ರಣಾಮ ಮಾಡುವವರೂ ಒಳಿತನ್ನು ಉಪದೇಶಿಸುವವರೂ ಕೆಡುಕನ್ನು ತಡೆಯುವವರೂ ಅಲ್ಲಾಹನ ಕಟ್ಟು - ಕಟ್ಟಳೆಗಳನ್ನು ಪಾಲಿಸುವವರೂ ಆಗಿದ್ದಾರೆ. ಸತ್ಯವಿಶ್ವಾಸಿಗಳಿಗೆ ನೀನು ಶುಭವಾರ್ತೆಯನ್ನು ತಿಳಿಸು.

مَا كَانَ لِلنَّبِيِّ وَالَّذِينَ آمَنُوا أَنْ يَسْتَغْفِرُوا لِلْمُشْرِكِينَ وَلَوْ كَانُوا أُولِي قُرْبَىٰ مِنْ بَعْدِ مَا تَبَيَّنَ لَهُمْ أَنَّهُمْ أَصْحَابُ الْجَحِيمِ ﴿١١٣﴾

**113.** ಬಹುದೇವಾರಾಧಕರು, ಅವರು ನಿಕಟ ಸಂಬಂಧಿಕರಾಗಿದ್ದರೂ ಅವರು ನರಕವಾಸಿಗಳೆಂದು ಸ್ಪಷ್ಟವಾದ ಬಳಿಕ ಅವರ ಪಾಪವಿಮುಕ್ತಿಗೋಸ್ಕರ ಪ್ರಾರ್ಥಿಸುವುದು ಪ್ರವಾದಿಗಾಗಲಿ ಸತ್ಯವಿಶ್ವಾಸಿಗಳಿಗಾಗಲಿ ಭೂಷಣವಲ್ಲ.

وَمَا كَانَ اسْتِغْفَارُ إِبْرَاهِيمَ لِأَبِيهِ إِلَّا عَنْ مَوْعِدَةٍ وَعَدَهَا إِيَّاهُ فَلَمَّا

**114.** ಇಬ್‌ರಾಹೀಂ ತನ್ನ ತಂದೆಯ ಪಾಪ ವಿಮುಕ್ತಿಗೋಸ್ಕರ ಪ್ರಾರ್ಥಿಸಿರಲಿಲ್ಲ - ಅವರು (ಮುಂಚೆ) ಆತನೊಡನೆ ಮಾಡಿದ ಒಂದು ವಾಗ್ದಾನದ ಮೇರೆಗೆ ಹೊರತು. ಆದರೆ ಆತನು ಅಲ್ಲಾಹನ ಶತ್ರುವೆಂದು ಅವರಿಗೆ ಸ್ಪಷ್ಟವಾಗಿ ಮನವರಿಕೆಯಾದಾಗ ಅದರಿಂದ ಅವರು

ಅಗಲಿದರು. ಇಬ್‌ರಾಹೀಮರಾದರೋ ನಿಶ್ಚಯವಾಗಿಯೂ ಕೋಮಲ ಹೃದಯಿ ಹಾಗೂ ಸಹನಶೀಲರಾಗಿದ್ದರು.

تَبَيَّنَ لَهُۥٓ أَنَّهُۥ عَدُوٌّ لِّلَّهِ تَبَرَّأَ مِنْهُ ۚ
إِنَّ إِبْرَٰهِيمَ لَأَوَّٰهٌ حَلِيمٌ ﴿١١٤﴾

115. ಅಲ್ಲಾಹನು ಒಂದು ಜನಾಂಗಕ್ಕೆ ಮಾರ್ಗದರ್ಶನ ಮಾಡಿದ ಬಳಿಕ ಅವರು ತಮ್ಮನ್ನು ಸಂರಕ್ಷಿಸಿಕೊಳ್ಳಲು ವಹಿಸಬೇಕಾದ ಜಾಗರೂಕತೆಗಳ ಬಗ್ಗೆ ಅವರಿಗೆ ಸ್ಪಷ್ಟಪಡಿಸುವ ತನಕ ಅವರನ್ನು ಮಾರ್ಗಭ್ರಂಶರೆಂದು ವಿಧಿಸುವುದು ಅವನ ರೂಢಿಯಲ್ಲ. ಖಂಡಿತವಾಗಿಯೂ ಅಲ್ಲಾಹನು ಎಲ್ಲ ವಿಚಾರಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

وَمَا كَانَ ٱللَّهُ لِيُضِلَّ قَوْمًۢا بَعْدَ إِذْ
هَدَىٰهُمْ حَتَّىٰ يُبَيِّنَ لَهُم مَّا يَتَّقُونَ ۚ
إِنَّ ٱللَّهَ بِكُلِّ شَىْءٍ عَلِيمٌ ﴿١١٥﴾

116. ಖಂಡಿತವಾಗಿಯೂ ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನಿಗಿದೆ. ಅವನು ಜೀವಂತಗೊಳಿಸುತ್ತಾನೆ ಹಾಗೂ ಮೃತಪಡಿಸುತ್ತಾನೆ. ಅಲ್ಲಾಹನ ಹೊರತು ನಿಮಗೆ ಮಿತ್ರನಾಗಲಿ ಸಹಾಯಕನಾಗಲಿ ಇಲ್ಲ.

إِنَّ ٱللَّهَ لَهُۥ مُلْكُ ٱلسَّمَٰوَٰتِ وَٱلْأَرْضِ ۖ
يُحْىِۦ وَيُمِيتُ ۚ وَمَا لَكُم مِّن دُونِ ٱللَّهِ
مِن وَلِىٍّ وَلَا نَصِيرٍ ﴿١١٦﴾

117. ನಿಜವಾಗಿಯೂ ಅಲ್ಲಾಹನು ಪ್ರವಾದಿಯ ಮೇಲೂ (ವಿಶ್ವಾಸಿಗಳಲ್ಲಿ) ಒಂದು ಗುಂಪಿನವರ ಹೃದಯಗಳು ವಿಚಲಿತವಾದ ಕಾರಣದಿಂದ ಅವರು (ಪ್ರವಾದಿ) ಸಂಕಷ್ಟಾವಸ್ಥೆಯಲ್ಲಿದ್ದ ಸಂದರ್ಭದಲ್ಲಿ ಅವರನ್ನು ಅನುಸರಿಸಿದ ಮುಹಾಜಿರ್ ಮತ್ತು ಅನ್ಸಾರ್‌ಗಳ[283C] ಮೇಲೂ ಬಲುದೊಡ್ಡ ಕರುಣೆ ತೋರಿಸಿದ್ದಾನೆ. ಮತ್ತೂ ಅವನು ಅವರ ಮೇಲೆ ಕರುಣೆ ತೋರಿಸಿದನು. ನಿಶ್ಚಯವಾಗಿಯೂ ಅವನು ಅವರ ಮೇಲೆ ವಾತ್ಸಲ್ಯವುಳ್ಳವನೂ ಕಾರುಣ್ಯನಿಧಿಯೂ ಆಗಿದ್ದಾನೆ.

لَّقَد تَّابَ ٱللَّهُ عَلَى ٱلنَّبِىِّ وَٱلْمُهَٰجِرِينَ
وَٱلْأَنصَارِ ٱلَّذِينَ ٱتَّبَعُوهُ فِى سَاعَةِ
ٱلْعُسْرَةِ مِنۢ بَعْدِ مَا كَادَ يَزِيغُ قُلُوبُ
فَرِيقٍ مِّنْهُمْ ثُمَّ تَابَ عَلَيْهِمْ ۚ إِنَّهُۥ
بِهِمْ رَءُوفٌ رَّحِيمٌ ﴿١١٧﴾

118. ಹಿಂದೆ ಉಳಿದು ಬಿಟ್ಟಿದ್ದ ಆ ಮೂವರ ಮೇಲೂ[284] (ಅವನು ಕರುಣೆ ತೋರಿಸಿದ್ದಾನೆ). ಭೂಮಿ

وَعَلَى ٱلثَّلَٰثَةِ ٱلَّذِينَ خُلِّفُوا۟ حَتَّىٰٓ

283C. 283ನೇ ಟಿಪ್ಪಣಿ ನೋಡಿರಿ.

284. ಕಅಬ್ ಬಿನ್ ಮಾಲಿಕ್, ಹಿಲಾಲ್ ಬಿನ್ ಉಮಯ್ಯ ಮತ್ತು ಮುರಾರಃ ಬಿನ್ ಅಬೀಅಃ (ಬುಖಾರಿ). ಈ ಮೂವರು ಸಹಾಬಿಗಳ ಬಗ್ಗೆ ಇಲ್ಲಿ ಸೂಚಿಸಲಾಗಿದೆ. ಅವರು ಕಪಟ ವಿಶ್ವಾಸಿಗಳಾಗಿರಲಿಲ್ಲ. ಪ್ರಮಾದವಶಾತ್ ಅವರು ತಬೂಕ್ ಯುದ್ಧದಲ್ಲಿ ಹಝ್ರತ್ ಮುಹಮ್ಮದ್ ರಸೂಲ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರೊಂದಿಗೆ ಭಾಗವಹಿಸದೆ ಹಿಂದೆ ಉಳಿದುಬಿಟ್ಟರು. ಮದೀನಕ್ಕೆ ಮರಳಿದ ಬಳಿಕ ಹಝ್ರತ್ ಪೈಗಂಬರರು ಆ ಮೂವರ ಮೇಲೆ ಶಿಸ್ತುಕ್ರಮ ಕೈಗೊಂಡಿದ್ದರು.





ವಿಶಾಲವಾಗಿದ್ದರೂ ಅದು ಅವರಿಗೆ ಸಂಕುಚಿತಗೊಂಡು, ಅವರ ಜೀವವೇ ಅವರಿಗೆ ಭಾರವೆನಿಸಿ, ಅಲ್ಲಾಹನ ಕೋಪದಿಂದ ಪಾರಾಗಲು ಅವನ ಅಭಯವನ್ನೇ ಪಡೆಯುವುದು ಹೊರತು ಬೇರೆ ಉಪಾಯವಿಲ್ಲವೆಂದು ಅವರಿಗೆ ಮನವರಿಕೆಯಾಗುವಂತೆ (ಅವರ ಸ್ಥಿತಿ) ಇತ್ತು. ಅನಂತರ ಅವರು ಪಶ್ಚಾತ್ತಾಪ ಪಡಲಿಕ್ಕಾಗಿ ಅಲ್ಲಾಹನು ಅವರೆಡೆಗೆ ಕಾರುಣ್ಯದಿಂದ ತಿರುಗಿದನು. ಖಂಡಿತವಾಗಿಯೂ ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

إِذَا ضَاقَتْ عَلَيْهِمُ ٱلْأَرْضُ بِمَا
رَحُبَتْ وَضَاقَتْ عَلَيْهِمْ أَنفُسُهُمْ
وَظَنُّوٓا۟ أَن لَّا مَلْجَأَ مِنَ ٱللَّهِ إِلَّآ إِلَيْهِ
ثُمَّ تَابَ عَلَيْهِمْ لِيَتُوبُوٓا۟ ۚ إِنَّ ٱللَّهَ هُوَ
ٱلتَّوَّابُ ٱلرَّحِيمُ ﴿١١٨﴾

119. ಎಲೈ ಸತ್ಯವಿಶ್ವಾಸಿಗಳೇ, ಅಲ್ಲಾಹನಿಗೆ ಭಯಭಕ್ತಿ ತೋರಿಸಿರಿ ಹಾಗೂ ಸತ್ಯಸಂಧರ ಪೈಕಿಯವರಾಗಿರಿ.

يَٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ وَكُونُوا۟
مَعَ ٱلصَّٰدِقِينَ ﴿١١٩﴾

120. ಅಲ್ಲಾಹನ ಸಂದೇಶವಾಹಕನನ್ನು ಬಿಟ್ಟು ಹಿಂದೆ ಸರಿಯುವುದು ಅಥವಾ ಅವರ (ಸಂದೇಶವಾಹಕನ) ಜೀವವನ್ನು ಲಕ್ಷಿಸದೆ ತಮ್ಮ ಜೀವದ ಬಗ್ಗೆ ಹೆಚ್ಚು ಲಕ್ಷ್ಯಗೊಡುವುದು ಮದೀನದ ನಿವಾಸಿಗಳಿಗೂ ಅವರ ಸುತ್ತುಮುತ್ತಲಿರುವ ಇತರ ಮರುಭೂಮಿ ನಿವಾಸಿಗಳಿಗೂ ಯೋಗ್ಯವಲ್ಲ. ಏಕೆಂದರೆ, ಅಲ್ಲಾಹನ ಮಾರ್ಗದಲ್ಲಿ ಅವರಿಗೆ ಉಂಟಾಗುವ ದಾಹ, ಆಯಾಸ, ಹಸಿವೆ ಮತ್ತು ಅವಿಶ್ವಾಸಿಗಳ ಕೋಪಕ್ಕೆ ಗುರಿಯಾಗುವ ರೀತಿಯ ಅವರ ಕಾರ್ಯವಿಧಾನ, ಶತ್ರುಗಳ ಮೇಲೆ ಅವರು ಸಾಧಿಸುವ ವಿಜಯ - ಇವೆಲ್ಲ ಅವರ ಸತ್ಕರ್ಮವೆಂದು ದಾಖಲಿಸಲ್ಪಡದೆ ಇರುವುದಿಲ್ಲ. ಖಂಡಿತವಾಗಿಯೂ ಅಲ್ಲಾಹನು ಸತ್ಕಾರ್ಯ ಮಾಡುವವರ ಪ್ರತಿಫಲ ನಷ್ಟವಾಗಲು ಬಿಡುವುದಿಲ್ಲ.

مَا كَانَ لِأَهْلِ ٱلْمَدِينَةِ وَمَنْ حَوْلَهُم
مِّنَ ٱلْأَعْرَابِ أَن يَتَخَلَّفُوا۟ عَن رَّسُولِ
ٱللَّهِ وَلَا يَرْغَبُوا۟ بِأَنفُسِهِمْ عَن نَّفْسِهِۦ ۚ
ذَٰلِكَ بِأَنَّهُمْ لَا يُصِيبُهُمْ ظَمَأٌ وَلَا
نَصَبٌ وَلَا مَخْمَصَةٌ فِى سَبِيلِ ٱللَّهِ وَ
لَا يَطَـُٔونَ مَوْطِئًا يَغِيظُ ٱلْكُفَّارَ وَلَا
يَنَالُونَ مِنْ عَدُوٍّ نَّيْلًا إِلَّا كُتِبَ لَهُم
بِهِۦ عَمَلٌ صَٰلِحٌ ۚ إِنَّ ٱللَّهَ لَا يُضِيعُ
أَجْرَ ٱلْمُحْسِنِينَ ﴿١٢٠﴾

121. (ಅದೇ ಪ್ರಕಾರ ಅಲ್ಲಾಹನ ಮಾರ್ಗದಲ್ಲಿ ಮಾಡುವ) ಕಿರಿದೋ ಹಿರಿದೋ ಆದ ಅವರ ಧನವ್ಯಯ ಮತ್ತು ಅವರು ಮಾಡುವ ಕಣಿವೆ ಮಾರ್ಗದ ಪ್ರಯಾಣ- ಇವು ಸಹ ಅವರಿಗೋಸ್ಕರ ದಾಖಲಿಸಲ್ಪಡದೆ ಇರುವುದಿಲ್ಲ. ಇದು ಅವರ ಕೃತ್ಯಗಳಿಗೆ ಅಲ್ಲಾಹನು ಅವರಿಗೆ ಉತ್ತಮ ಪ್ರತಿಫಲವನ್ನು ನೀಡಲಿಕ್ಕೋಸ್ಕರವಾಗಿದೆ.

وَلَا يُنفِقُونَ نَفَقَةً صَغِيرَةً وَلَا كَبِيرَةً
وَلَا يَقْطَعُونَ وَادِيًا إِلَّا كُتِبَ لَهُمْ
لِيَجْزِيَهُمُ ٱللَّهُ أَحْسَنَ مَا كَانُوا۟
يَعْمَلُونَ ﴿١٢١﴾

**122.** ಎಲ್ಲರೂ ಒಟ್ಟಿಗೆ (ಧರ್ಮಕಾರ್ಯಗಳನ್ನು ಕಲಿಸಲಿಕ್ಕಾಗಿ) ಹೊರಟು ಹೋಗುವುದು ಸತ್ಯವಿಶ್ವಾಸಿಗಳಿಗೆ ಸಾಧ್ಯವಿಲ್ಲ. ಆದರೆ ಅವರ ಪೈಕಿ ಪ್ರತಿಯೊಂದು ಪಂಗಡದಿಂದಲೂ ಒಂದೊಂದು ತಂಡ ಧಾರ್ಮಿಕ ಜ್ಞಾನವನ್ನು ಚೆನ್ನಾಗಿ ಗಳಿಸಲಿಕ್ಕೂ ತಮ್ಮ ಜನರೆಡೆಗೆ ಮರಳಿ ಬಂದರೆ, ಕೆಡುಕಿನಿಂದ ರಕ್ಷಿಸಿಕೊಳ್ಳಲು ಅವರನ್ನು ಎಚ್ಚರಿಸಲಿಕ್ಕೂ ಹೊರಡುವುದಿಲ್ಲವೇಕೆ?

وَمَا كَانَ الْمُؤْمِنُونَ لِيَنْفِرُوا كَافَّةً ۚ
فَلَوْلَا نَفَرَ مِنْ كُلِّ فِرْقَةٍ مِنْهُمْ طَائِفَةٌ
لِيَتَفَقَّهُوا فِي الدِّينِ وَلِيُنْذِرُوا قَوْمَهُمْ
إِذَا رَجَعُوا إِلَيْهِمْ لَعَلَّهُمْ يَحْذَرُونَ ﴿١٢٢﴾

**123.** ಎಲೈ ಸತ್ಯವಿಶ್ವಾಸಿಗಳೇ, ಅವಿಶ್ವಾಸಿಗಳ ಪೈಕಿ ನಿಮ್ಮ ಹತ್ತಿರವಿರುವವರೊಡನೆ ಯುದ್ಧ ಮಾಡಿರಿ. ಅವರು ನಿಮ್ಮ ದಾರ್ಢ್ಯವನ್ನು ಕಾಣಲಿ. ಖಂಡಿತವಾಗಿಯೂ ಅಲ್ಲಾಹನು ಭಯಭಕ್ತಿ ತೋರಿಸುವವರ ಜತೆಗಿದ್ದಾನೆಂದು ತಿಳಿದುಕೊಳ್ಳಿರಿ.

يَا أَيُّهَا الَّذِينَ آمَنُوا قَاتِلُوا الَّذِينَ
يَلُونَكُمْ مِنَ الْكُفَّارِ وَلْيَجِدُوا فِيكُمْ
غِلْظَةً ۚ وَاعْلَمُوا أَنَّ اللَّهَ مَعَ
الْمُتَّقِينَ ﴿١٢٣﴾

**124.** (ಖುರ್‌ಆನಿನ) ಒಂದು ಅಧ್ಯಾಯ ಅವತೀರ್ಣವಾದರೆ, 'ಇದು ನಿಮ್ಮಲ್ಲಿ ಯಾರ ವಿಶ್ವಾಸವನ್ನು ವೃದ್ಧಿಗೊಳಿಸಿದೆ' ಎಂದು ಕೇಳುವ ಕೆಲವರು ಅವರಲ್ಲಿದ್ದಾರೆ. ವಿಶ್ವಾಸಿಗಳ ಬಗ್ಗೆ ಹೇಳುವುದಾದರೆ ಅದು ಅವರ ವಿಶ್ವಾಸವನ್ನು ವೃದ್ಧಿಗೊಳಿಸಿದೆ; ಅವರು ಅದರಿಂದ ಸಂತೋಷಭರಿತರಾಗುತ್ತಾರೆ.

وَإِذَا مَا أُنْزِلَتْ سُورَةٌ فَمِنْهُمْ مَنْ
يَقُولُ أَيُّكُمْ زَادَتْهُ هَٰذِهِ إِيمَانًا ۚ
فَأَمَّا الَّذِينَ آمَنُوا فَزَادَتْهُمْ إِيمَانًا
وَهُمْ يَسْتَبْشِرُونَ ﴿١٢٤﴾

**125.** ಆದರೆ, ತಮ್ಮ ಹೃದಯಗಳಲ್ಲಿ ರೋಗವಿರುವವರ ಬಗ್ಗೆ ಹೇಳುವುದಾದರೆ, ಅದು ಅವರ ಮೊದಲೇ ಇರುವ ಮಾಲಿನ್ಯಕ್ಕೆ ಇನ್ನೂ ಹೆಚ್ಚು ಮಾಲಿನ್ಯವನ್ನು ಸೇರಿಸುತ್ತದೆ. ಅವರು ಅವಿಶ್ವಾಸಿಗಳಾಗಿಯೇ ಮರಣಪಡುವರು.

وَأَمَّا الَّذِينَ فِي قُلُوبِهِمْ مَرَضٌ
فَزَادَتْهُمْ رِجْسًا إِلَىٰ رِجْسِهِمْ وَمَاتُوا
وَهُمْ كَافِرُونَ ﴿١٢٥﴾

**126.** ತಾವು ಪ್ರತಿ ವರ್ಷ ಒಂದೋ ಎರಡೋ ಸಲ ಪರೀಕ್ಷಿಸಲ್ಪಡುತ್ತಿರುವುದಾಗಿ ಅವರು ಕಾಣುವುದಿಲ್ಲವೇ? ಆದರೂ ಅವರು ಪಶ್ಚಾತ್ತಾಪ ಪಡುವುದಿಲ್ಲ; ಪಾಠ ಕಲಿಯುವುದೂ ಇಲ್ಲ.

أَوَلَا يَرَوْنَ أَنَّهُمْ يُفْتَنُونَ فِي كُلِّ عَامٍ
مَرَّةً أَوْ مَرَّتَيْنِ ثُمَّ لَا يَتُوبُونَ وَلَا هُمْ
يَذَّكَّرُونَ ﴿١٢٦﴾

**127.** ಒಂದು ಅಧ್ಯಾಯ ಅವತೀರ್ಣವಾದರೆ ಅವರು ಪರಸ್ಪರ ನೋಡಿ (ಹೇಳುವರು): 'ನಿಮ್ಮನ್ನು ಯಾರಾದರೂ

وَإِذَا مَا أُنْزِلَتْ سُورَةٌ نَظَرَ بَعْضُهُمْ





ಕಾಣುವುದಿಲ್ಲವಷ್ಟೇ?' ಅನಂತರ ಅವರು ಹೊರಟು ಹೋಗುತ್ತಾರೆ. ಅಲ್ಲಾಹನು ಅವರ ಹೃದಯಗಳನ್ನು ತಿರುಚಿ ಬಿಟ್ಟಿದ್ದಾನೆ. ಏಕೆಂದರೆ ಅವರು ತಿಳಿಗೇಡಿಗಳಾಗಿದ್ದಾರೆ.

إِلَىٰ بَعْضٍ هَلْ يَرَاكُمْ مِنْ أَحَدٍ ثُمَّ
انْصَرَفُوا ۚ صَرَفَ اللَّهُ قُلُوبَهُمْ
بِأَنَّهُمْ قَوْمٌ لَا يَفْقَهُونَ ﴿١٢٧﴾

**128.** ನಿಜವಾಗಿಯೂ ನಿಮ್ಮ ಬಳಿಗೆ ನಿಮ್ಮಿಂದಲೇ ಇರುವ ಒಬ್ಬ ಸಂದೇಶವಾಹಕನ ಆಗಮನವಾಗಿದೆ. ನೀವು ಕಷ್ಟಕ್ಕೀಡಾಗುವುದು ಅವರನ್ನು ವ್ಯಾಕುಲಗೊಳಿಸುತ್ತದೆ. ಅವರು ನಿಮ್ಮ ಕ್ಷೇಮಾಭಿವೃದ್ಧಿಯನ್ನು ಹೃತ್ಪೂರ್ವಕವಾಗಿ ಆಶಿಸುವವರಾಗಿದ್ದಾರೆ. ಸತ್ಯವಿಶ್ವಾಸಿಗಳ ಮೇಲೆ ಅವರಿಗೆ ಕನಿಕರವೂ ದಯೆಯೂ ಇದೆ.

لَقَدْ جَاءَكُمْ رَسُولٌ مِنْ أَنْفُسِكُمْ عَزِيزٌ
عَلَيْهِ مَا عَنِتُّمْ حَرِيصٌ عَلَيْكُمْ
بِالْمُؤْمِنِينَ رَءُوفٌ رَحِيمٌ ﴿١٢٨﴾

**129.** ಹಾಗಿದ್ದೂ ಅವರು ಮುಖ ತಿರುಗಿಸಿ ಹೋದರೆ ಹೇಳು: 'ನನಗೆ ಅಲ್ಲಾಹನು ಸಾಕು; ಅವನ ಹೊರತು ಬೇರೆ ಆರಾಧ್ಯನಿಲ್ಲ. ನಾನು ಅವನ ಮೇಲೆ ಭರವಸೆಯಿಡುತ್ತೇನೆ. ಅವನು ಮಹತ್ತಾದ ಸಿಂಹಾಸನದ ಪ್ರಭುವಾಗಿದ್ದಾನೆ.'

فَإِنْ تَوَلَّوْا فَقُلْ حَسْبِيَ اللَّهُ لَا
إِلَٰهَ إِلَّا هُوَ ۖ عَلَيْهِ تَوَكَّلْتُ ۖ وَهُوَ رَبُّ
الْعَرْشِ الْعَظِيمِ ﴿١٢٩﴾

سُوْرَةُ يُوْنُسَ مَكِّيَّةٌ وَّهِيَ مَعَ الْبَسْمَلَةِ مِائَةٌ وَّعَشْرُ اٰيٰتٍ وَّاَحَدَ عَشَرَ رُكُوْعًا

# 10. ಯೂನುಸ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 110 ಆಯತ್‌ಗಳು ಹಾಗೂ 11 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

الٓرٰ ۫ تِلْكَ اٰيٰتُ الْكِتٰبِ الْحَكِيْمِ ①

2. ಅಲಿಫ್ ಲಾಂ ರಾ[285] ಇವು ಜ್ಞಾನಪೂರ್ಣ ಗ್ರಂಥದ ವಚನಗಳಾಗಿವೆ.

اَكَانَ لِلنَّاسِ عَجَبًا اَنْ اَوْحَيْنَآ اِلٰى رَجُلٍ مِّنْهُمْ اَنْ اَنْذِرِ النَّاسَ وَبَشِّرِ الَّذِيْنَ اٰمَنُوْٓا اَنَّ لَهُمْ قَدَمَ صِدْقٍ عِنْدَ رَبِّهِمْ ؕ قَالَ الْكٰفِرُوْنَ اِنَّ هٰذَا لَسٰحِرٌ مُّبِيْنٌ ②

3. 'ಜನರಿಗೆ ಮುನ್ನೆಚ್ಚರಿಕೆಯನ್ನಿತ್ತು ಸತ್ಯ ವಿಶ್ವಾಸಿಗಳಿಗೆ ತಮ್ಮ ಪ್ರಭುವಿನ ಬಳಿ ಸತ್ಯದ ಉನ್ನತ ಸ್ಥಾನವಿದೆಯೆಂಬ ಸಂತೋಷ ವಾರ್ತೆಯನ್ನು ತಿಳಿಸು' ಎಂದು ಆಜ್ಞಾಪಿಸುತ್ತಾ ಅವರ ಪೈಕಿ ಒಬ್ಬ ವ್ಯಕ್ತಿಗೆ ನಾವು ದಿವ್ಯ ಸಂದೇಶ ನೀಡಿದುದು ಅವರಿಗೆ ಅಚ್ಚರಿ ಹುಟ್ಟಿಸಿತೇ? 'ಇವನೊಬ್ಬ ಮಹಾ ಮಾಂತ್ರಿಕ' ಎಂದು ಅವಿಶ್ವಾಸಿಗಳು ಹೇಳುತ್ತಾರೆ.

اِنَّ رَبَّكُمُ اللّٰهُ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ اسْتَوٰى عَلَى الْعَرْشِ يُدَبِّرُ الْاَمْرَ ؕ مَا مِنْ شَفِيْعٍ اِلَّا مِنْۢ بَعْدِ اِذْنِهٖ ؕ ذٰلِكُمُ اللّٰهُ رَبُّكُمْ فَاعْبُدُوْهُ ؕ اَفَلَا تَذَكَّرُوْنَ ③

4. ಖಂಡಿತವಾಗಿಯೂ, ಆಕಾಶಗಳನ್ನೂ ಭೂಮಿಯನ್ನೂ ಆರು ಹಂತಗಳಲ್ಲಿ[285A] ಸೃಷ್ಟಿಸಿದ, ಅನಂತರ ಸಿಂಹಾಸನದಲ್ಲಿ ಆಸೀನನಾಗಿ ಸರ್ವವನ್ನೂ ನಿಯಂತ್ರಿಸುವವನಾದ ಅಲ್ಲಾಹನೇ ನಿಮ್ಮ ಪ್ರಭುವಾಗಿದ್ದಾನೆ. ಅವನ ಸನ್ನಿಧಿಯಲ್ಲಿ ಅವನ ಅನುಮತಿಯಿಲ್ಲದೆ ಶಿಫಾರಸು ಮಾಡುವವರು ಯಾರೂ ಇಲ್ಲ. ನಿಮ್ಮ ಪ್ರಭುವಾದ ಅಲ್ಲಾಹನು ಅವನೇ ಆಗಿದ್ದಾನೆ. ಅವನನ್ನು ನೀವು ಆರಾಧಿಸಿರಿ. ಏನು, ನೀವು ಉಪದೇಶವನ್ನು ಸ್ವೀಕರಿಸುವುದಿಲ್ಲವೇ?

اِلَيْهِ مَرْجِعُكُمْ جَمِيْعًا ؕ وَعْدَ اللّٰهِ حَقًّا ؕ اِنَّهٗ يَبْدَؤُا الْخَلْقَ ثُمَّ يُعِيْدُهٗ

5. ನಿಮ್ಮೆಲ್ಲರ ಮರಳುವಿಕೆ ಅವನ ಬಳಿಗೆಯೇ ಆಗಿದೆ. ಅಲ್ಲಾಹನ ವಾಗ್ದಾನ ಸತ್ಯವಾದುದು. ಅವನೇ ಸೃಷ್ಟಿಯನ್ನು ಆರಂಭಿಸುತ್ತಾನೆ ಮತ್ತು ಅವನೇ ಅದನ್ನು

285. "ಅನ ಅಲ್ಲಾಹು ಅರಾ" - ನಾನು ಅಲ್ಲಾಹ್ ಎಲ್ಲವನ್ನೂ ಕಾಣುತ್ತೇನೆ. (ಅಧ್ಯಾಯ 2 ವಚನ 2ರ ಟಿಪ್ಪಣಿ ನೋಡಿರಿ)

285A. ಅಧ್ಯಾಯ 7 ವಚನ 55ರ ಟಿಪ್ಪಣಿ ನೋಡಿರಿ.





لِيَجْزِيَ الَّذِيْنَ اٰمَنُوْا وَعَمِلُوا الصّٰلِحٰتِ بِالْقِسْطِ ؕ وَالَّذِيْنَ كَفَرُوْا لَهُمْ شَرَابٌ مِّنْ حَمِيْمٍ وَّعَذَابٌ اَلِيْمٌۢ بِمَا كَانُوْا يَكْفُرُوْنَ ④

ಪುನರಾವರ್ತಿಸುತ್ತಾನೆ - ಸತ್ಯ ವಿಶ್ವಾಸವನ್ನು ಕೈಗೊಂಡು ಸತ್ಕರ್ಮಗೈಯ್ಯುವವರಿಗೆ ನ್ಯಾಯಯುತವಾಗಿ ಪ್ರತಿಫಲ ನೀಡಲಿಕ್ಕೋಸ್ಕರ. ಅವಿಶ್ವಾಸಿಗಳಿಗೆ, ಅವರ ಅವಿಶ್ವಾಸದ ಕಾರಣದಿಂದಾಗಿ, ಕುದಿಯುವ ನೀರಿನ ಪಾನಕ ಮತ್ತು ಯಾತನಾಮಯ ಶಿಕ್ಷೆ ಇದೆ.

هُوَ الَّذِيْ جَعَلَ الشَّمْسَ ضِيَآءً وَّالْقَمَرَ نُوْرًا وَّقَدَّرَهٗ مَنَازِلَ لِتَعْلَمُوْا عَدَدَ السِّنِيْنَ وَالْحِسَابَ ؕ مَا خَلَقَ اللّٰهُ ذٰلِكَ اِلَّا بِالْحَقِّ ۚ يُفَصِّلُ الْاٰيٰتِ لِقَوْمٍ يَّعْلَمُوْنَ ⑤

6. ಸೂರ್ಯನನ್ನು ಪ್ರಜ್ವಲಿಸುವಂತೆಯೂ ಚಂದ್ರನನ್ನು ಪ್ರತಿಫಲಿಸುವಂತೆಯೂ ಮಾಡಿ, ವರ್ಷಗಳ ಎಣಿಕೆ ಮತ್ತು ಕಾಲಗಣನೆಯನ್ನು ನೀವು ತಿಳಿದುಕೊಳ್ಳಲಿಕ್ಕಾಗಿ ಅದಕ್ಕೆ (ಚಂದ್ರನಿಗೆ) ವಿವಿಧ ಹಂತಗಳನ್ನು ನಿಶ್ಚಯಿಸಿದವನು ಅವನೇ. ವಿವೇಕಪೂರ್ಣವಾಗಿಯೇ ಅಲ್ಲಾಹನು ಇವನ್ನೆಲ್ಲ ಸೃಷ್ಟಿಸಿರುವನು. ತಿಳುವಳಿಕೆಯುಳ್ಳ ಜನರಿಗಾಗಿ ಅವನು ದೃಷ್ಟಾಂತಗಳನ್ನು ವಿವರಿಸುತ್ತಾನೆ.

اِنَّ فِي اخْتِلَافِ الَّيْلِ وَالنَّهَارِ وَمَا خَلَقَ اللّٰهُ فِي السَّمٰوٰتِ وَالْاَرْضِ لَاٰيٰتٍ لِّقَوْمٍ يَّتَّقُوْنَ ⑥

7. ರಾತ್ರಿ - ಹಗಲುಗಳ ಪರ್ಯಾಯದಲ್ಲೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅಲ್ಲಾಹನು ಸೃಷ್ಟಿಸಿದ ವಸ್ತುಗಳಲ್ಲೂ ಭಯಭಕ್ತಿಯುಳ್ಳ ಜನರಿಗೆ ಖಂಡಿತವಾಗಿಯೂ ಹಲವು ದೃಷ್ಟಾಂತಗಳಿವೆ.

اِنَّ الَّذِيْنَ لَا يَرْجُوْنَ لِقَآءَنَا وَرَضُوْا بِالْحَيٰوةِ الدُّنْيَا وَاطْمَاَنُّوْا بِهَا وَالَّذِيْنَ هُمْ عَنْ اٰيٰتِنَا غٰفِلُوْنَ ⑦

8. ಯಾರು ನಮ್ಮೊಂದಿಗಿನ ಭೇಟಿಯನ್ನು ನಿರೀಕ್ಷಿಸುವುದಿಲ್ಲವೋ ಮತ್ತು ಐಹಿಕ ಜೀವಿತದಲ್ಲಿ ತೃಪ್ತಿಹೊಂದಿ ಅದರಲ್ಲೇ ಸಮಾಧಾನಪಟ್ಟುಕೊಂಡಿರುವರೋ ಮತ್ತು ಯಾರು ನಮ್ಮ ದೃಷ್ಟಾಂತಗಳ ಬಗ್ಗೆ ನಿರ್ಲಕ್ಷ್ಯರಾಗಿರುವರೋ -

اُولٰٓئِكَ مَاْوٰىهُمُ النَّارُ بِمَا كَانُوْا يَكْسِبُوْنَ ⑧

9. ಅಂತಹ ಜನರ ವಾಸಸ್ಥಳ ನರಕವಾಗಿದೆ - ಇದು ಅವರು ಎಸಗಿದ ಕೃತ್ಯದ ಫಲವಾಗಿದೆ.

اِنَّ الَّذِيْنَ اٰمَنُوْا وَعَمِلُوا الصّٰلِحٰتِ يَهْدِيْهِمْ رَبُّهُمْ بِاِيْمَانِهِمْ ۚ تَجْرِيْ مِنْ تَحْتِهِمُ الْاَنْهٰرُ فِيْ جَنّٰتِ النَّعِيْمِ ⑨

10. ವಿಶ್ವಾಸ ಹೊಂದಿ ಸತ್ಕರ್ಮಗಳನ್ನು ಮಾಡುವವರಿಗೆ, ಅವರ ಸತ್ಯವಿಶ್ವಾಸದ ಕಾರಣದಿಂದ, ಅವರ ಪ್ರಭು ಅವರಿಗೆ ನೇರಮಾರ್ಗವನ್ನು ತೋರಿಸುವನು. ಕೆಳಭಾಗದಲ್ಲಿ ನದಿಗಳು ಹರಿಯುವ ಸುಖಾನುಭೂತಿಯ ಸ್ವರ್ಗೀಯ ತೋಟಗಳು ಅವರಿಗೆ ಇವೆ.

**11.** ಅಲ್ಲಿ ಅವರ ಪ್ರಾರ್ಥನೆ 'ಅಲ್ಲಾಹನೇ, ನಾವು ನಿನ್ನ ಪರಿಶುದ್ಧತೆಯನ್ನು ಕೊಂಡಾಡುತ್ತೇವೆ' ಎಂದಾಗಿದೆ. ಅಲ್ಲಿ ಅವರ ಶುಭಾಶಯ ಸಲಾಮ್ (ಶಾಂತಿ) ಎಂದಾಗಿದೆ. 'ಸರ್ವಸ್ತುತಿಗಳು ಸರ್ವಲೋಕ ಪರಿಪಾಲಕನಾದ ಅಲ್ಲಾಹನಿಗೆ' ಎಂದು ಹೇಳಿ ಅವರು ಪ್ರಾರ್ಥನೆಯನ್ನು ಕೊನೆಗೊಳಿಸುತ್ತಾರೆ.

دَعْوٰىهُمْ فِيْهَا سُبْحٰنَكَ اللّٰهُمَّ وَ تَحِيَّتُهُمْ فِيْهَا سَلٰمٌ ۚ وَاٰخِرُ دَعْوٰىهُمْ اَنِ الْحَمْدُ لِلّٰهِ رَبِّ الْعٰلَمِيْنَ ﴿١١﴾

**12.** ಧನ ಸಂಪಾದನೆಗಾಗಿ ಮನುಷ್ಯರು ತ್ವರೆಗೊಳ್ಳುವ ಪ್ರಕಾರ ಅವರಿಗೆ ತಮ್ಮ (ದುಷ್ಕೃತ್ಯಗಳ) ದುಷ್ಫಲವನ್ನು ನೀಡಲು ಅಲ್ಲಾಹನು ಸಹ ತ್ವರೆ ಮಾಡಿದ್ದರೆ ಅವರ ಜೀವಿತಾವಧಿ (ಎಷ್ಟೋ ಮುಂಚೆಯೇ) ಅವರಿಗೆ ಕೊನೆಗೊಳ್ಳುತ್ತಿತ್ತು. ಆದರೆ ನಮ್ಮ ಭೇಟಿಯನ್ನು ನಿರೀಕ್ಷಿಸದವರನ್ನು ಅವರ ಅತಿಕ್ರಮದಲ್ಲಿ ಅಲೆದಾಡಲು ನಾವು ಬಿಟ್ಟುಬಿಡುತ್ತೇವೆ.

وَلَوْ يُعَجِّلُ اللّٰهُ لِلنَّاسِ الشَّرَّ اسْتِعْجَالَهُمْ بِالْخَيْرِ لَقُضِيَ اِلَيْهِمْ اَجَلُهُمْ ۚ فَنَذَرُ الَّذِيْنَ لَا يَرْجُوْنَ لِقَآءَنَا فِيْ طُغْيَانِهِمْ يَعْمَهُوْنَ ﴿١٢﴾

**13.** ಮನುಷ್ಯನಿಗೆ ವಿಪತ್ತು ಬಂದೆರಗಿದರೆ ಅವನು ತನ್ನ ಪಾರ್ಶ್ವಗಳಲ್ಲಿ ಮಲಗಿಕೊಂಡಾಗಲಿ, ಕುಳಿತುಕೊಂಡಾಗಲಿ, ನಿಂತುಕೊಂಡಾಗಲಿ ನಮ್ಮನ್ನು ಕರೆದು ಪ್ರಾರ್ಥಿಸುತ್ತಾನೆ. ಹಾಗೆ, ಅವನ ವಿಪತ್ತನ್ನು ನಾವು ಅವನಿಂದ ನಿವಾರಿಸಿದರೆ, ತನಗೆ ಬಂದೆರಗಿದ ವಿಪತ್ತನ್ನು ಹೋಗಲಾಡಿಸಲು ಅವನು ನಮ್ಮೊಡನೆ ಪ್ರಾರ್ಥಿಸಲೇ ಇಲ್ಲ ಎಂಬಂತೆ ನಡೆದುಬಿಡುತ್ತಾನೆ. ಹೀಗೆ ಅತಿವರ್ತಿಗಳಿಗೆ ಅವರ ವರ್ತನೆ ಮನೋಹರವಾಗಿ ತೋರಿಸಲ್ಪಡಲಾಗಿದೆ.

وَاِذَا مَسَّ الْاِنْسَانَ الضُّرُّ دَعَانَا لِجَنْۢبِهٖٓ اَوْ قَاعِدًا اَوْ قَآئِمًا ۚ فَلَمَّا كَشَفْنَا عَنْهُ ضُرَّهٗ مَرَّ كَاَنْ لَّمْ يَدْعُنَآ اِلٰى ضُرٍّ مَّسَّهٗ ؕ كَذٰلِكَ زُيِّنَ لِلْمُسْرِفِيْنَ مَا كَانُوْا يَعْمَلُوْنَ ﴿١٣﴾

**14.** ನಿಮಗಿಂತ ಮೊದಲು ಹಲವು ಪೀಳಿಗೆಗಳನ್ನು ಅವರು ಅಕ್ರಮಗೈದಾಗ ನಾವು ನಾಶಪಡಿಸಿದ್ದೇವೆ. ಸ್ಪಷ್ಟವಾದ ದೃಷ್ಟಾಂತಗಳ ಸಹಿತ ಅವರ ಪ್ರವಾದಿಗಳು ಅವರ ಬಳಿಗೆ ಬಂದಿದ್ದರು. ಆದರೆ ಅವರು ನಂಬಿರಲಿಲ್ಲ. ಈ ಪ್ರಕಾರ ಅಪರಾಧಿಗಳಿಗೆ ನಾವು ಪ್ರತಿಫಲ ನೀಡುತ್ತೇವೆ.

وَلَقَدْ اَهْلَكْنَا الْقُرُوْنَ مِنْ قَبْلِكُمْ لَمَّا ظَلَمُوْا ۙ وَجَآءَتْهُمْ رُسُلُهُمْ بِالْبَيِّنٰتِ وَمَا كَانُوْا لِيُؤْمِنُوْا ؕ كَذٰلِكَ نَجْزِى الْقَوْمَ الْمُجْرِمِيْنَ ﴿١٤﴾

**15.** ಅನಂತರ, ನೀವು ಹೇಗೆ ವರ್ತಿಸುವಿರೆಂದು ನೋಡಲಿಕ್ಕಾಗಿ ಅವರ ಬಳಿಕ ನಿಮ್ಮನ್ನು ನಾವು ಭೂಮಿಯಲ್ಲಿ ಉತ್ತರಾಧಿಕಾರಿಗಳಾಗಿ ಮಾಡಿರುವೆವು.

ثُمَّ جَعَلْنٰكُمْ خَلٰٓئِفَ فِى الْاَرْضِ مِنْۢ بَعْدِهِمْ لِنَنْظُرَ كَيْفَ تَعْمَلُوْنَ ﴿١٥﴾





**16.** ನಮ್ಮ ಸ್ಪಷ್ಟವಾದ ವಚನಗಳನ್ನು ಅವರಿಗೆ ಓದಿ ಹೇಳಿದಾಗ ನಮ್ಮ ಭೇಟಿಯನ್ನು ನಿರೀಕ್ಷಿಸದವರು ಹೇಳುತ್ತಾರೆ: 'ಇದಲ್ಲದೆ ಬೇರೊಂದು ಖುರ್‌ಆನನ್ನು ತಾ' ಅಥವಾ ಇದರಲ್ಲಿ ಬದಲಾವಣೆ ಮಾಡು.' ಹೇಳು: 'ನನ್ನ ಇಷ್ಟಾನುಸಾರ ಇದರಲ್ಲಿ ಬದಲಾವಣೆ ಮಾಡಲು ನನಗೆ ಸಾಧ್ಯವಿಲ್ಲ. ನನಗೆ ಅವತೀರ್ಣವಾದುದನ್ನು ಮಾತ್ರವೇ ನಾನು ಅನುಸರಿಸುತ್ತೇನೆ. ನನ್ನ ಪ್ರಭುವಿನ ಆಜ್ಞೆಯನ್ನು ನಾನು ಧಿಕ್ಕರಿಸಿದರೆ ಒಂದು ದುಃಖಕರವಾದ ದಿನದ ಶಿಕ್ಷೆಯನ್ನು ನಾನು ಭಯಪಡುತ್ತೇನೆ.'

وَاِذَا تُتْلٰى عَلَيْهِمْ اٰيَاتُنَا بَيِّنٰتٍ ۙ قَالَ الَّذِيْنَ لَا يَرْجُوْنَ لِقَآءَنَا ائْتِ بِقُرْاٰنٍ غَيْرِ هٰذَآ اَوْ بَدِّلْهُ ؕ قُلْ مَا يَكُوْنُ لِيْٓ اَنْ اُبَدِّلَهٗ مِنْ تِلْقَآئِ نَفْسِيْ ۚ اِنْ اَتَّبِعُ اِلَّا مَا يُوْحٰٓى اِلَيَّ ۚ اِنِّيْٓ اَخَافُ اِنْ عَصَيْتُ رَبِّيْ عَذَابَ يَوْمٍ عَظِيْمٍ ﴿١٦﴾

**17.** ಹೇಳು: '(ಇದರ ಬದಲಿಗೆ ಬೇರೊಂದು ಅಧ್ಯಾಪನವನ್ನು ನೀಡಬೇಕೆಂದು) ಅಲ್ಲಾಹನು ಉದ್ದೇಶಿಸಿದ್ದರೆ ಇದನ್ನು (ಖುರ್‌ಆನನ್ನು) ನಿಮಗೆ ನಾನು ಓದಿ ಹೇಳುತ್ತಿರಲಿಲ್ಲ. ಅವನು ನಿಮಗೆ ಅದರ ಕುರಿತು ತಿಳಿಸಿ ಕೊಡುತ್ತಲೂ ಇರಲಿಲ್ಲ. ಇದಕ್ಕೆ ಮುಂಚೆ ಒಂದು ದೀರ್ಘಕಾಲ ನಾನು ನಿಮ್ಮ ಮಧ್ಯೆ ಜೀವಿಸುತ್ತಿದ್ದೆನಲ್ಲವೇ? ಆದರೂ ನೀವು ಮನವರಿಕೆ ಮಾಡುವುದಿಲ್ಲವೇ?'

قُلْ لَّوْ شَآءَ اللّٰهُ مَا تَلَوْتُهٗ عَلَيْكُمْ وَلَآ اَدْرٰىكُمْ بِهٖ ۖ فَقَدْ لَبِثْتُ فِيْكُمْ عُمُرًا مِّنْ قَبْلِهٖ ؕ اَفَلَا تَعْقِلُوْنَ ﴿١٧﴾

**18.** ಅಲ್ಲಾಹನ ನಾಮದಲ್ಲಿ ಸುಳ್ಳು ಸೃಷ್ಟಿಸುವವನಿಗಿಂತ ಅಥವಾ ಅವನ ದೃಷ್ಟಾಂತಗಳನ್ನು ಸುಳ್ಳಾಗಿಸುವವನಿಗಿಂತ ದೊಡ್ಡ ಅತಿಕರ್ಮಿ ಬೇರೆ ಯಾರು? ಖಂಡಿತವಾಗಿಯೂ ಅಪರಾಧಿಗಳು ವಿಜಯಗಳಿಸಲಾರರು.

فَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِاٰيٰتِهٖ ؕ اِنَّهٗ لَا يُفْلِحُ الْمُجْرِمُوْنَ ﴿١٨﴾

**19.** ಅವರು ಅಲ್ಲಾಹನನ್ನು ಬಿಟ್ಟು ತಮಗೆ ಉಪದ್ರವನ್ನಾಗಲಿ ಉಪಕಾರವನ್ನಾಗಲಿ ಮಾಡದವುಗಳನ್ನು ಆರಾಧಿಸುತ್ತಾರೆ. 'ಇವರು ಅಲ್ಲಾಹನ ಸನ್ನಿಧಿಯಲ್ಲಿ ನಮ್ಮ ಶಿಫಾರಸುಗಾರರಾಗಿದ್ದಾರೆ' ಎಂದು ಅವರು ಹೇಳುತ್ತಾರೆ. ಹೇಳು: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅಲ್ಲಾಹನು ತಿಳಿದಿಲ್ಲದ ವಿಚಾರದ ಕುರಿತು ನೀವು ಅವನಿಗೆ ತಿಳಿಸಿಕೊಡುತ್ತೀರೋ?' ಅವರು ಅವನಿಗೆ ಸಹಭಾಗಿಗಳಾಗಿ ಮಾಡುವುದರಿಂದೆಲ್ಲ ಅವನು ಪರಿಶುದ್ಧನೂ ಮಹೋನ್ನತನೂ ಆಗಿದ್ದಾನೆ.

وَيَعْبُدُوْنَ مِنْ دُوْنِ اللّٰهِ مَا لَا يَضُرُّهُمْ وَلَا يَنْفَعُهُمْ وَيَقُوْلُوْنَ هٰٓؤُلَآءِ شُفَعَآؤُنَا عِنْدَ اللّٰهِ ؕ قُلْ اَتُنَبِّـُٔوْنَ اللّٰهَ بِمَا لَا يَعْلَمُ فِى السَّمٰوٰتِ وَلَا فِى الْاَرْضِ ؕ سُبْحٰنَهٗ وَتَعٰلٰى عَمَّا يُشْرِكُوْنَ ﴿١٩﴾

وَمَا كَانَ النَّاسُ إِلَّا أُمَّةً وَاحِدَةً فَاخْتَلَفُوا ۚ وَلَوْلَا كَلِمَةٌ سَبَقَتْ مِنْ رَبِّكَ لَقُضِيَ بَيْنَهُمْ فِيمَا فِيهِ يَخْتَلِفُونَ ﴿٢٠﴾

**20.** ಮಾನವರೆಲ್ಲರೂ ಒಂದೇ ಸಮುದಾಯವಾಗಿದ್ದರು. ಅನಂತರ ಅವರು ಬೇರೆ ಬೇರೆಯಾದರು. ನಿನ್ನ ಪ್ರಭುವಿನಿಂದ ಇದಕ್ಕೆ ಮೊದಲೇ ನಿರ್ಣಯಿಸಲ್ಪಟ್ಟ ಒಂದು ವಚನವು ಇಲ್ಲದಿರುತ್ತಿದ್ದರೆ ಅವರು ಭಿನ್ನಾಭಿಪ್ರಾಯ ಹೊಂದಿರುವ ವಿಚಾರಗಳಲ್ಲಿ ಅವರ ಮಧ್ಯೆ (ಈಗಾಗಲೇ) ತೀರ್ಮಾನ ಮಾಡಲಾಗುತ್ತಿತ್ತು.

وَيَقُولُونَ لَوْلَا أُنْزِلَ عَلَيْهِ آيَةٌ مِنْ رَبِّهِ ۖ فَقُلْ إِنَّمَا الْغَيْبُ لِلَّهِ فَانْتَظِرُوا إِنِّي مَعَكُمْ مِنَ الْمُنْتَظِرِينَ ﴿٢١﴾

**21.** 'ಅವನಿಗೆ ತನ್ನ ಪ್ರಭುವಿನಿಂದ ಒಂದು ದೃಷ್ಟಾಂತವೇಕೆ ಅವತೀರ್ಣವಾಗಲಿಲ್ಲ?' ಎಂದು ಅವರು ಕೇಳುತ್ತಾರೆ. ಹೇಳು: 'ಅಗೋಚರ ವಿಚಾರಗಳ ಕುರಿತಿರುವ ಜ್ಞಾನ ಅಲ್ಲಾಹನಿಗೆ ಮಾತ್ರವಿದೆ. ಆದ್ದರಿಂದ ನೀವು ನಿರೀಕ್ಷಿಸಿರಿ. ನಾನು ಸಹ ನಿಮ್ಮ ಜೊತೆಯಲ್ಲಿ ನಿರೀಕ್ಷಿಸುತ್ತೇನೆ.'

وَإِذَا أَذَقْنَا النَّاسَ رَحْمَةً مِنْ بَعْدِ ضَرَّاءَ مَسَّتْهُمْ إِذَا لَهُمْ مَكْرٌ فِي آيَاتِنَا ۚ قُلِ اللَّهُ أَسْرَعُ مَكْرًا ۚ إِنَّ رُسُلَنَا يَكْتُبُونَ مَا تَمْكُرُونَ ﴿٢٢﴾

**22.** ಮನುಷ್ಯರಿಗೆ ಒಂದು ವಿಪತ್ತು ಬಂದೆರಗಿದ ನಂತರ ನಾವು ಅವರನ್ನು ಕೃಪೆಗೆ ಒಳಪಡಿಸಿದರೆ, ಅಕೋ ಅವರು ಆಗ ನಮ್ಮ ದೃಷ್ಟಾಂತಗಳ ವಿಚಾರದಲ್ಲಿ (ಅದಕ್ಕೆ ವಿರುದ್ಧವಾಗಿ) ಕುತಂತ್ರ ಹೂಡುತ್ತಾರೆ. ಹೇಳು: 'ಅಲ್ಲಾಹನು ಶೀಘ್ರವಾಗಿ ಪ್ರತಿತಂತ್ರ ಹೂಡುವವನಾಗಿದ್ದಾನೆ.' ಖಂಡಿತವಾಗಿಯೂ ನಮ್ಮ ದೂತರು (ಮಲಾಯಿಕ್) ನೀವು ಹೂಡುವ ಕುತಂತ್ರಗಳನ್ನೆಲ್ಲ ದಾಖಲಿಸಿಡುತ್ತಾರೆ.

هُوَ الَّذِي يُسَيِّرُكُمْ فِي الْبَرِّ وَالْبَحْرِ ۖ حَتَّىٰ إِذَا كُنْتُمْ فِي الْفُلْكِ وَجَرَيْنَ بِهِمْ بِرِيحٍ طَيِّبَةٍ وَفَرِحُوا بِهَا جَاءَتْهَا رِيحٌ عَاصِفٌ وَجَاءَهُمُ الْمَوْجُ مِنْ كُلِّ مَكَانٍ وَظَنُّوا أَنَّهُمْ أُحِيطَ بِهِمْ ۙ دَعَوُا اللَّهَ مُخْلِصِينَ لَهُ الدِّينَ لَئِنْ أَنْجَيْتَنَا مِنْ هَٰذِهِ لَنَكُونَنَّ مِنَ الشَّاكِرِينَ ﴿٢٣﴾

**23.** ನೀವು ನೆಲದಲ್ಲೂ ಜಲದಲ್ಲೂ ಸಂಚರಿಸುವಂತೆ ಸೌಲಭ್ಯವನ್ನು ಒದಗಿಸಿದವನು ಅವನೇ. ನೀವು ಹಡಗುಗಳಲ್ಲಿ ಪ್ರಯಾಣಿಸುವಾಗ, ಅವುಗಳು ಅವರ[286] ಸಹಿತ ಅನುಕೂಲಕರ ಗಾಳಿಯಿಂದ ಸಂಚರಿಸುವಾಗ ಅವರು ಸಂತೋಷಭರಿತರಾಗುತ್ತಾರೆ. ಅಷ್ಟರಲ್ಲಿ ಅವುಗಳು ಬಿರುಗಾಳಿಗೆ ತುತ್ತಾಗಿ ಎಲ್ಲ ಕಡೆಗಳಿಂದ ಸಮುದ್ರದ ತೆರೆಗಳು ಆವರಿಸುತ್ತವೆ. ತಮ್ಮ ನಾಶ ಸಮೀಪಿಸಿತೆಂದು ಅವರು ಭಾವಿಸುತ್ತಾರೆ. ಆಗ ಅವರು ತಮ್ಮ ಅನುಸರಣೆಯನ್ನು ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು ಅವನಿಗೆ (ಹೀಗೆ) ಮೊರೆಯಿಡುತ್ತಾರೆ: 'ಇದರಿಂದ ನೀನು ನಮ್ಮನ್ನು ರಕ್ಷಿಸಿ

286. ಇಲ್ಲಿ ವಿಶ್ವಾಸಿಗಳನ್ನೂ ಅವಿಶ್ವಾಸಿಗಳನ್ನೂ ಒಟ್ಟಿಗೆ ಹೇಳಲಾಗಿದೆ.





ದರೆ, ನಾವು ಖಂಡಿತವಾಗಿಯೂ ನಿನಗೆ ಕೃತಜ್ಞತೆಯುಳ್ಳವರಾಗುವೆವು.'

فَلَمَّا أَنْجَاهُمْ إِذَا هُمْ يَبْغُونَ فِي الْأَرْضِ بِغَيْرِ الْحَقِّ ۗ يَا أَيُّهَا النَّاسُ إِنَّمَا بَغْيُكُمْ عَلَىٰ أَنْفُسِكُمْ ۖ مَتَاعَ الْحَيَاةِ الدُّنْيَا ۖ ثُمَّ إِلَيْنَا مَرْجِعُكُمْ فَنُنَبِّئُكُمْ بِمَا كُنْتُمْ تَعْمَلُونَ ﴿٢٤﴾

**24.** ಆದರೆ ಅವನು ಅವರನ್ನು ರಕ್ಷಿಸಿದಾಗ, ಅಕೋ ಅವರು ಭೂಮಿಯಲ್ಲಿ ಅನ್ಯಾಯವಾಗಿ ಅತಿಕ್ರಮವೆಸಗುತ್ತಾರೆ. ಎಲೈ ಮನುಷ್ಯರೇ, ನಿಮ್ಮ ಅತಿರೇಕ ವರ್ತನೆ ನಿಮ್ಮ ವಿರುದ್ಧವೇ ಆಗಿದೆ - ಐಹಿಕ ಜೀವನದ ತಾತ್ಕಾಲಿಕ ಸುಖ ಭೋಗ. ಅನಂತರ ನಮ್ಮ ಬಳಿಗೇ ನಿಮ್ಮ ಮರಳುವಿಕೆ. ಆಗ ನಿಮ್ಮ ಕೃತ್ಯಗಳ ಬಗ್ಗೆ ನಾವು ನಿಮಗೆ ತಿಳಿಸಿಕೊಡುವೆವು.

إِنَّمَا مَثَلُ الْحَيَاةِ الدُّنْيَا كَمَاءٍ أَنْزَلْنَاهُ مِنَ السَّمَاءِ فَاخْتَلَطَ بِهِ نَبَاتُ الْأَرْضِ مِمَّا يَأْكُلُ النَّاسُ وَالْأَنْعَامُ حَتَّىٰ إِذَا أَخَذَتِ الْأَرْضُ زُخْرُفَهَا وَازَّيَّنَتْ وَظَنَّ أَهْلُهَا أَنَّهُمْ قَادِرُونَ عَلَيْهَا أَتَاهَا أَمْرُنَا لَيْلًا أَوْ نَهَارًا فَجَعَلْنَاهَا حَصِيدًا كَأَنْ لَمْ تَغْنَ بِالْأَمْسِ ۚ كَذَٰلِكَ نُفَصِّلُ الْآيَاتِ لِقَوْمٍ يَتَفَكَّرُونَ ﴿٢٥﴾

**25.** ಐಹಿಕ ಜೀವನದ ಸಾಮ್ಯತೆ ಈ ರೀತಿಯಾಗಿದೆ: ನಾವು ಆಕಾಶದಿಂದ ಜಲ ಸುರಿಸಿದೆವು. ಮನುಷ್ಯರು ಮತ್ತು ಜಾನುವಾರುಗಳು ಭಕ್ಷಿಸುವ ಭೂಮಿಯ ಉತ್ಪನ್ನ ಗಳು ಅದರಿಂದ ಬೆಳೆದವು. ಹಾಗೆ ಭೂಮಿ ಶೋಭಿತ ವಾಗಿಯೂ ಮನೋಹರವಾಗಿಯೂ ಮಾರ್ಪಟ್ಟಾಗ ಅದರ ಮಾಲಿಕರು ತಮಗೆ ಅದರ ಮೇಲೆ ಸಂಪೂರ್ಣವಾದ ಅಧಿಕಾರವಿದೆಯೆಂದು ಭಾವಿಸಿದರು. ಆಗ ರಾತ್ರಿ ಅಥವಾ ಹಗಲು ಹಠಾತ್ತನೆ ನಮ್ಮ ವಿಧಿ ಜಾರಿಯಾಗುತ್ತದೆ. ಹಾಗೆ ಹಿಂದಿನ ದಿನ ಅದು ಅಲ್ಲಿ ಇದ್ದಿಲ್ಲವೆಂದು ತೋಚುವಂತೆ ನಾವು ಅದನ್ನು ನಿರ್ನಾಮ ಮಾಡಿದೆವು. ಚಿಂತನಶೀಲರಿಗೆ ಹೀಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಡುತ್ತೇವೆ.

وَاللَّهُ يَدْعُو إِلَىٰ دَارِ السَّلَامِ وَيَهْدِي مَنْ يَشَاءُ إِلَىٰ صِرَاطٍ مُسْتَقِيمٍ ﴿٢٦﴾

**26.** ಅಲ್ಲಾಹನು ಶಾಂತಿಯ ನೆಲೆವೀಡಿಗೆ ಆಹ್ವಾನಿಸುತ್ತಾನೆ. ತಾನು ಇಚ್ಛಿಸುವವರನ್ನು ಅವನು ನೇರವಾದ ಮಾರ್ಗದೆಡೆಗೆ ನಡೆಸುತ್ತಾನೆ.

لِلَّذِينَ أَحْسَنُوا الْحُسْنَىٰ وَزِيَادَةٌ ۖ وَلَا يَرْهَقُ وُجُوهَهُمْ قَتَرٌ وَلَا ذِلَّةٌ ۚ أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ﴿٢٧﴾

**27.** ಸತ್ಕರ್ಮಗೈಯುವವರಿಗೆ ಅತ್ಯುತ್ತಮ ಪ್ರತಿಫಲವಿದೆ; ಹೆಚ್ಚು ಅನುಗ್ರಹಗಳು ಸಹ ಇವೆ. ಅಂಧಕಾರ ಅವರ ಮುಖಗಳನ್ನು ಆವರಿಸಲಾರದು. ಅವಮಾನಕ್ಕೆ ಅವರು ಗುರಿಯಾಗಲಾರರು. ಅವರು ಸ್ವರ್ಗವಾಸಿಗಳಾಗಿದ್ದಾರೆ. ಅಲ್ಲೇ ಅವರು ಚಿರಕಾಲ ವಾಸಿಸುವರು.

وَالَّذِينَ كَسَبُوا السَّيِّئَاتِ جَزَاءُ سَيِّئَةٍ بِمِثْلِهَا وَتَرْهَقُهُمْ ذِلَّةٌ ۖ مَا لَهُمْ مِنَ اللَّهِ مِنْ عَاصِمٍ ۖ كَأَنَّمَا أُغْشِيَتْ وُجُوهُهُمْ قِطَعًا مِنَ اللَّيْلِ مُظْلِمًا ۚ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿٢٨﴾

**28.** ದುಷ್ಕರ್ಮಿಗಳಿಗೆ, ಅವರ ದುಷ್ಕೃತ್ಯದ ಶಿಕ್ಷೆ ಅದಕ್ಕೆ ತುಲ್ಯವಾಗಿರುತ್ತದೆ. ಅಪಮಾನ ಅವರನ್ನು ಆವರಿಸುವುದು. ಅಲ್ಲಾಹನಿಂದ (ಅಲ್ಲಾಹನ ಶಿಕ್ಷೆಯಿಂದ) ಅವರನ್ನು ರಕ್ಷಿಸಲು ಯಾರೂ ಇಲ್ಲ. ಅವರ ಮುಖಗಳು ರಾತ್ರಿಯ ಅಂಧಕಾರದ ಕಲೆಗಳಿಂದ ಆವರಿಸಲ್ಪಟ್ಟಂತೆ ಇರುವುವು. ಅವರು ನರಕವಾಸಿಗಳಾಗಿದ್ದಾರೆ. ಅಲ್ಲೇ ಅವರು ದೀರ್ಘಕಾಲ ವಾಸಿಸುವರು.

وَيَوْمَ نَحْشُرُهُمْ جَمِيعًا ثُمَّ نَقُولُ لِلَّذِينَ أَشْرَكُوا مَكَانَكُمْ أَنْتُمْ وَشُرَكَاؤُكُمْ ۚ فَزَيَّلْنَا بَيْنَهُمْ ۖ وَقَالَ شُرَكَاؤُهُمْ مَا كُنْتُمْ إِيَّانَا تَعْبُدُونَ ﴿٢٩﴾

**29.** ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನದಂದು ನಮಗೆ ಸಹಭಾಗಿಗಳನ್ನು ಕಲ್ಪಿಸಿದವರೊಡನೆ ನಾವು ಹೇಳುವೆವು: 'ನೀವು ಮತ್ತು (ದೇವತ್ವದ) ನಿಮ್ಮ ಸಹಭಾಗಿಗಳು ನಿಮ್ಮ ಸ್ಥಾನದಲ್ಲಿ ನಿಲ್ಲಿರಿ.' ಅನಂತರ ನಾವು ಅವರನ್ನು ಬೇರ್ಪಡಿಸುವೆವು. ಅವರ (ದೇವತ್ವದ) ಸಹಭಾಗಿಗಳು ಹೇಳುವರು: 'ನೀವು ನಮ್ಮನ್ನು ಆರಾಧಿಸುತ್ತಿರಲಿಲ್ಲ.

فَكَفَىٰ بِاللَّهِ شَهِيدًا بَيْنَنَا وَبَيْنَكُمْ إِنْ كُنَّا عَنْ عِبَادَتِكُمْ لَغَافِلِينَ ﴿٣٠﴾

**30.** 'ನಮ್ಮ - ನಿಮ್ಮ ಮಧ್ಯೆ ಅಲ್ಲಾಹನೇ ತಕ್ಕ ಸಾಕ್ಷಿಯಾಗಿದ್ದಾನೆ. ನಿಮ್ಮ ಆರಾಧನೆಯ ಬಗ್ಗೆ ನಮಗೆ ಖಂಡಿತವಾಗಿಯೂ ಅರಿವಿಲ್ಲ.'

هُنَالِكَ تَبْلُو كُلُّ نَفْسٍ مَا أَسْلَفَتْ ۚ وَرُدُّوا إِلَى اللَّهِ مَوْلَاهُمُ الْحَقِّ ۖ وَضَلَّ عَنْهُمْ مَا كَانُوا يَفْتَرُونَ ﴿٣١﴾

**31.** ಅಲ್ಲಿ ಪ್ರತಿಯೊಂದು ಆತ್ಮಕ್ಕೆ, ಅದರ ಪೂರ್ವ ಕೃತ್ಯದ ಬಗ್ಗೆ ಮನವರಿಕೆಯಾಗುವುದು. ಅವರ ನಿಜವಾದ ಒಡೆಯನಾದ ಅಲ್ಲಾಹನ ಬಳಿಗೆ ಅವರು ಹಿಂತಿರುಗಿಸಲ್ಪಡುವರು. ಅವರು ಸುಳ್ಳಾಗಿ ಸೃಜಿಸಿದ್ದೆಲ್ಲ ಅವರನ್ನು ಬಿಟ್ಟು ಹೋಗುವುವು.

قُلْ مَنْ يَرْزُقُكُمْ مِنَ السَّمَاءِ وَالْأَرْضِ أَمَّنْ يَمْلِكُ السَّمْعَ وَالْأَبْصَارَ وَمَنْ يُخْرِجُ الْحَيَّ مِنَ الْمَيِّتِ وَيُخْرِجُ الْمَيِّتَ مِنَ الْحَيِّ وَمَنْ يُدَبِّرُ الْأَمْرَ ۚ فَسَيَقُولُونَ اللَّهُ ۚ فَقُلْ أَفَلَا تَتَّقُونَ ﴿٣٢﴾

**32.** ಹೇಳು: 'ಆಕಾಶದಿಂದ ಮತ್ತು ಭೂಮಿಯಿಂದ ನಿಮಗೆ ಆಹಾರ ನೀಡುವವನು ಯಾರು? ಅಥವಾ (ನಿಮ್ಮ) ಕಿವಿಗಳನ್ನೂ ಕಣ್ಣುಗಳನ್ನೂ ನಿಯಂತ್ರಿಸುವವನು ಯಾರು? ನಿರ್ಜೀವಿಯಿಂದ ಸಜೀವಿಯನ್ನೂ ಸಜೀವಿಯಿಂದ ನಿರ್ಜೀವಿಯನ್ನೂ ಹೊರತರುವವನು ಯಾರು? ಎಲ್ಲ ಕಾರ್ಯಗಳನ್ನೂ ಸುವ್ಯವಸೆಗೊಳಿಸುವವನು ಯಾರು?' ಆಗ ಅವರು, 'ಅಲ್ಲಾಹನು' ಎಂದು ಹೇಳುವರು. 'ಹಾಗಾದರೆ ನೀವೇಕೆ ಭಯಭಕ್ತಿಯುಳ್ಳವರಾಗುವುದಿಲ್ಲ?' ಎಂದು ನೀನು ಕೇಳು.





فَذَٰلِكُمُ اللَّهُ رَبُّكُمُ الْحَقُّ ۖ فَمَاذَا بَعْدَ الْحَقِّ إِلَّا الضَّلَالُ ۖ فَأَنَّىٰ تُصْرَفُونَ ﴿٣٣﴾

**33.** ಆ ನಿಮ್ಮ ನಿಜವಾದ ಒಡೆಯ ಅಲ್ಲಾಹನೇ ಆಗಿದ್ದಾನೆ. ಸತ್ಯವನ್ನು ಬಿಟ್ಟರೆ ನಂತರ ಮಾರ್ಗಭ್ರಂಶತೆಯಲ್ಲದೆ ಇನ್ನೇನಿದೆ? ಹಾಗಿರುವಾಗ (ಸತ್ಯವನ್ನು ಬಿಟ್ಟು) ನಿಮ್ಮನ್ನು ಎತ್ತಕಡೆ ಕೊಂಡೊಯ್ಯಲಾಗುವುದು?

كَذَٰلِكَ حَقَّتْ كَلِمَتُ رَبِّكَ عَلَى الَّذِينَ فَسَقُوا أَنَّهُمْ لَا يُؤْمِنُونَ ﴿٣٤﴾

**34.** ಹೀಗೆ, ಆಜ್ಞೋಲ್ಲಂಘಕರಾದ ಜನರು ನಂಬಲಾರರು ಎಂಬ ನಿನ್ನ ಪ್ರಭುವಿನ ವಚನ ಅವರ ಕುರಿತು ಸತ್ಯವಾಗಿ ಸಾಬೀತಾಗಿದೆ.

قُلْ هَلْ مِنْ شُرَكَائِكُمْ مَنْ يَبْدَأُ الْخَلْقَ ثُمَّ يُعِيدُهُ ۚ قُلِ اللَّهُ يَبْدَأُ الْخَلْقَ ثُمَّ يُعِيدُهُ ۖ فَأَنَّىٰ تُؤْفَكُونَ ﴿٣٥﴾

**35.** ಹೇಳು: 'ಸೃಷ್ಟಿಯನ್ನು ಆರಂಭಿಸಿ ಮತ್ತು ಅದನ್ನು ಪುನರಾವರ್ತಿಸುವ ಯಾರಾದರೂ ನಿಮ್ಮ (ದೇವತ್ವದ) ಸಹಭಾಗಿಗಳಲ್ಲಿ ಇರುವರೇ?' ಹೇಳು: 'ಸೃಷ್ಟಿಯನ್ನು ಆರಂಭಿಸುವವನೂ ಅನಂತರ ಅದನ್ನು ಪುನಾರಾವರ್ತಿಸುವವನೂ ಅಲ್ಲಾಹನೇ ಆಗಿದ್ದಾನೆ. ಹಾಗಿರುವಾಗ (ಸತ್ಯವನ್ನು ಬಿಟ್ಟು) ನಿಮ್ಮನ್ನು ಎತ್ತಕಡೆ ತಿರುಗಿಸಲಾಗುವುದು?'

قُلْ هَلْ مِنْ شُرَكَائِكُمْ مَنْ يَهْدِي إِلَى الْحَقِّ ۚ قُلِ اللَّهُ يَهْدِي لِلْحَقِّ ۗ أَفَمَنْ يَهْدِي إِلَى الْحَقِّ أَحَقُّ أَنْ يُتَّبَعَ أَمَّنْ لَا يَهِدِّي إِلَّا أَنْ يُهْدَىٰ ۖ فَمَا لَكُمْ كَيْفَ تَحْكُمُونَ ﴿٣٦﴾

**36.** ಹೇಳು: 'ನಿಮ್ಮ (ದೇವತ್ವದ) ಸಹಭಾಗಿಗಳಲ್ಲಿ ಸತ್ಯದೆಡೆಗೆ ದಾರಿತೋರಿಸುವವರು ಯಾರಾದರೂ ಇದ್ದಾರೆಯೇ?' ಹೇಳು: 'ಸತ್ಯದೆಡೆಗೆ ಮಾರ್ಗದರ್ಶನ ಮಾಡುವವನು ಅಲ್ಲಾಹನೇ ಆಗಿದ್ದಾನೆ. ಹಾಗಿರುವಾಗ, ಸತ್ಯದೆಡೆಗೆ ಮಾರ್ಗದರ್ಶನ ಮಾಡುವವನೋ ಅಥವಾ ಬೇರೆ ಯಾರಾದರೂ ಮಾರ್ಗದರ್ಶನ ಮಾಡದ ವಿನಾ ಸ್ವಯಂ ಸತ್ಪಥದಲ್ಲಿ ನಡೆಯಲು ಅಶಕ್ತನಾದವನೋ (ಯಾರು) ಅನುಸರಿಸಲ್ಪಡಲು ಅತ್ಯಂತ ಅರ್ಹನು? ಹಾಗಾದರೆ ನಿಮಗೇನಾಗಿದೆ? ನೀವು ಹೇಗೆ ತೀರ್ಮಾನ ಮಾಡುತ್ತೀರಿ?'

وَمَا يَتَّبِعُ أَكْثَرُهُمْ إِلَّا ظَنًّا ۚ إِنَّ الظَّنَّ لَا يُغْنِي مِنَ الْحَقِّ شَيْئًا ۚ إِنَّ اللَّهَ عَلِيمٌ بِمَا يَفْعَلُونَ ﴿٣٧﴾

**37.** ಅವರಲ್ಲಿ ಹೆಚ್ಚಿನವರು ಊಹೆಯನ್ನು ಹೊರತು ಅನುಸರಿಸುವುದಿಲ್ಲ. ಖಂಡಿತವಾಗಿಯೂ ಊಹೆ ಸತ್ಯದ ಬದಲಿಗೆ ಯಾವುದೇ ಪ್ರಯೋಜನಕ್ಕೆ ಬಾರದು. ನಿಶ್ಚಯವಾಗಿಯೂ ಅಲ್ಲಾಹನು ಅವರ ಕೃತ್ಯಗಳನ್ನೆಲ್ಲ ಚೆನ್ನಾಗಿ ಬಲ್ಲವನಾಗಿದ್ದಾನೆ.

**38.** ಈ ಖುರ್‌ಆನ್ ಅಲ್ಲಾಹನ ಹೊರತು (ಬೇರೆ ಯಾರಿಂದಲಾದರೂ) ರಚಿತವಾಗಬಹುದಾದ ಗ್ರಂಥವಲ್ಲ. ಬದಲಿಗೆ, ಇದಕ್ಕಿಂತ ಮೊದಲಿನ ಗ್ರಂಥಗಳನ್ನು ಸತ್ಯಪಡಿಸುವ ಮತ್ತು ದೈವಿಕ ನಿಯಮಗಳನ್ನು ವಿವರಿಸುವ ಗ್ರಂಥವಾಗಿದೆ.ಇದು ಸರ್ವಲೋಕ ಪರಿಪಾಲಕನಿಂದ ಬಂದುದೆಂಬುದರಲ್ಲಿ ಏನೂ ಸಂಶಯವಿಲ್ಲ.

وَمَا كَانَ هٰذَا الْقُرْاٰنُ اَنْ يُّفْتَرٰى مِنْ دُوْنِ اللّٰهِ وَلٰكِنْ تَصْدِيْقَ الَّذِيْ بَيْنَ يَدَيْهِ وَتَفْصِيْلَ الْكِتٰبِ لَا رَيْبَ فِيْهِ مِنْ رَّبِّ الْعٰلَمِيْنَ ﴿٣٧﴾

**39.** 'ಅವನು ಅದನ್ನು ಸ್ವತಃ ರಚಿಸಿರುವನು' ಎಂದು ಅವರು ಹೇಳುತ್ತಾರೋ? ಹೇಳು: 'ಹಾಗಾದರೆ ಅದಕ್ಕೆ ಸಮನಾದ ಒಂದು ಅಧ್ಯಾಯವನ್ನು ನೀವು ತನ್ನಿರಿ. ಅಲ್ಲಾಹನ ಹೊರತು ಯಾರನ್ನೆಲ್ಲ ಕರೆಯಲು ಸಾಧ್ಯವಿದೆಯೋ ಅವರನ್ನೆಲ್ಲ ಕರೆದುಕೊಳ್ಳಿರಿ - ನೀವು ಸತ್ಯವಂತರೆಂದಾದರೆ.'

اَمْ يَقُوْلُوْنَ افْتَرٰىهُ ؕ قُلْ فَاْتُوْا بِسُوْرَةٍ مِّثْلِهٖ وَادْعُوْا مَنِ اسْتَطَعْتُمْ مِّنْ دُوْنِ اللّٰهِ اِنْ كُنْتُمْ صٰدِقِيْنَ ﴿٣٨﴾

**40.** ಹಾಗಲ್ಲ, ಅವರಿಗೆ ಪೂರ್ಣ ಜ್ಞಾನವಿಲ್ಲದ ಒಂದು ವಿಚಾರವನ್ನು ಅವರು ಅಲ್ಲಗಳೆಯುತ್ತಾರೆ. ಅದರ ವಾಸ್ತವಿಕತೆಯನ್ನು ಅವರು ಇದುವರೆಗೆ ಮನಗಂಡಿಲ್ಲ. ಇದೇ ಪ್ರಕಾರ ಅವರಿಗೆ ಮುಂಚೆ ಇದ್ದವರು ಸಹ ಅಲ್ಲಗಳೆದಿದ್ದಾರೆ. ದುಷ್ಕರ್ಮಿಗಳ ಅಂತ್ಯ ಹೇಗಾಯಿತೆಂದು ನೋಡು.

بَلْ كَذَّبُوْا بِمَا لَمْ يُحِيْطُوْا بِعِلْمِهٖ وَلَمَّا يَاْتِهِمْ تَاْوِيْلُهٗ ؕ كَذٰلِكَ كَذَّبَ الَّذِيْنَ مِنْ قَبْلِهِمْ فَانْظُرْ كَيْفَ كَانَ عَاقِبَةُ الظّٰلِمِيْنَ ﴿٣٩﴾

**41.** ಅವರ ಪೈಕಿ ಅದನ್ನು ನಂಬುವವರು ಕೆಲವರಿದ್ದಾರೆ. ಅವರ ಪೈಕಿ ಅದನ್ನು ನಂಬದವರು ಸಹ ಕೆಲವರಿದ್ದಾರೆ. ಗಲಭೆಕೋರರು ಯಾರೆಂದು ನಿನ್ನ ಪ್ರಭುವಿಗೆ ಚೆನ್ನಾಗಿ ಗೊತ್ತಿದೆ.

وَمِنْهُمْ مَّنْ يُّؤْمِنُ بِهٖ وَمِنْهُمْ مَّنْ لَّا يُؤْمِنُ بِهٖ ؕ وَرَبُّكَ اَعْلَمُ بِالْمُفْسِدِيْنَ ﴿٤٠﴾

**42.** ಮತ್ತೂ ಅವರು ನಿನ್ನನ್ನು ಸುಳ್ಳಾಗಿಸುವುದಾದರೆ, ಹೇಳು: 'ನನಗೆ ನನ್ನ ಕರ್ಮಫಲವಿದೆ; ನಿಮಗೆ ನಿಮ್ಮ ಕರ್ಮಫಲವಿದೆ. ನನ್ನ ಕೃತ್ಯಕ್ಕೆ ನೀವು ಹೊಣೆಗಾರರಲ್ಲ; ನಿಮ್ಮ ಕೃತ್ಯಕ್ಕೆ ನಾನು ಸಹ ಹೊಣೆಗಾರನಲ್ಲ.'

وَاِنْ كَذَّبُوْكَ فَقُلْ لِّيْ عَمَلِيْ وَلَكُمْ عَمَلُكُمْ ۚ اَنْتُمْ بَرِيْٓـُٔوْنَ مِمَّآ اَعْمَلُ وَاَنَا بَرِيْٓءٌ مِّمَّا تَعْمَلُوْنَ ﴿٤١﴾

**43.** ನಿನ್ನ ಮಾತಿಗೆ ಕಿವಿಗೊಡುವವರು ಸಹ ಅವರಲ್ಲಿದ್ದಾರೆ. ಏನು, ಕಿವುಡರು ಮನವರಿಕೆ ಮಾಡಿ

وَمِنْهُمْ مَّنْ يَّسْتَمِعُوْنَ اِلَيْكَ ؕ اَفَاَنْتَ





ಕೊಳ್ಳುವುದಿಲ್ಲವಾದರೂ ನೀನು ಅವರಿಗೆ ಕೇಳಿಸುವಂತೆ ಮಾಡುವಿಯೋ?

تُسْمِعُ الصُّمَّ وَلَوْ كَانُوْا لَا يَعْقِلُوْنَ ﴿٤٢﴾

**44.** ನಿನ್ನ ಕಡೆಗೆ ನೋಡುವ ಕೆಲವರು ಸಹ ಅವರಲ್ಲಿದ್ದಾರೆ. ಏನು, ಅವರು ಕಣ್ಣು ಕಾಣದ ಕುರುಡರಾಗಿದ್ದರೂ ಅವರಿಗೆ ನೀನು ಮಾರ್ಗದರ್ಶನ ನೀಡಬಲ್ಲೆಯಾ?

وَمِنْهُمْ مَّنْ يَّنْظُرُ اِلَيْكَ ؕ اَفَاَنْتَ تَهْدِى الْعُمْىَ وَلَوْ كَانُوْا لَا يُبْصِرُوْنَ ﴿٤٣﴾

**45.** ಖಂಡಿತವಾಗಿಯೂ ಅಲ್ಲಾಹನು ಮನುಷ್ಯರಿಗೆ ಅನ್ಯಾಯವನ್ನೇನೂ ಎಸಗುವುದಿಲ್ಲ. ಆದರೆ ಮನುಷ್ಯರೇ ತಮ್ಮ ಆತ್ಮಗಳಿಗೆ ದ್ರೋಹವೆಸಗುತ್ತಾರೆ.

اِنَّ اللّٰهَ لَا يَظْلِمُ النَّاسَ شَيْـًٔا وَّلٰكِنَّ النَّاسَ اَنْفُسَهُمْ يَظْلِمُوْنَ ﴿٤٤﴾

**46.** ಅವನು ಅವರನ್ನು ಒಟ್ಟುಗೂಡಿಸುವ ದಿನದಂದು ಹಗಲಿನ ಒಂದು ಚಿಕ್ಕ ಅಂಶ ಮಾತ್ರ (ಲೋಕದಲ್ಲಿ) ತಾವು ವಾಸಿಸಿದ್ದೆವೆಂದು ಅವರಿಗೆ ತೋಚುವುದು. ಅವರು ಪರಸ್ಪರ ಗುರುತಿಸುವರು. ಅಲ್ಲಾಹನ ಭೇಟಿಯನ್ನು ಅಲ್ಲಗಳೆಯುವವರು ಖಂಡಿತವಾಗಿಯೂ ನಷ್ಟಹೊಂದಿದವರು. ಅವರು ಸರಿಯಾದ ಮಾರ್ಗದರ್ಶನ ಪಡೆಯುವವರಲ್ಲ.

وَيَوْمَ يَحْشُرُهُمْ كَاَنْ لَّمْ يَلْبَثُوْٓا اِلَّا سَاعَةً مِّنَ النَّهَارِ يَتَعَارَفُوْنَ بَيْنَهُمْ ؕ قَدْ خَسِرَ الَّذِيْنَ كَذَّبُوْا بِلِقَآءِ اللّٰهِ وَمَا كَانُوْا مُهْتَدِيْنَ ﴿٤٥﴾

**47.** ನಾವು ಅವರಿಗೆ ಮುನ್ನೆಚ್ಚರಿಕೆ ನೀಡುತ್ತಿರುವ (ಶಿಕ್ಷೆಗಳಲ್ಲಿ) ಕೆಲವನ್ನು (ನಿನ್ನ ಜೀವಮಾನದಲ್ಲೇ) ನಾವು ನಿನಗೆ ತೋರಿಸಿಕೊಟ್ಟರೆ, ಅಥವಾ (ಅದಕ್ಕಿಂತ ಮುಂಚೆಯೇ) ನಿನ್ನನ್ನು ಮೃತಪಡಿಸಿದರೆ, (ಹೇಗಿದ್ದರೂ) ನಮ್ಮೆಡೆಗೆಯೇ ಅವರ ಮರಳಿಕೆಯಾಗಿದೆ. ಅವರ ಕೃತ್ಯಗಳಿಗೆಲ್ಲ ಅಲ್ಲಾಹನು ಸಾಕ್ಷಿಯಾಗಿದ್ದಾನೆ.

وَاِمَّا نُرِيَنَّكَ بَعْضَ الَّذِيْ نَعِدُهُمْ اَوْ نَتَوَفَّيَنَّكَ فَاِلَيْنَا مَرْجِعُهُمْ ثُمَّ اللّٰهُ شَهِيْدٌ عَلٰى مَا يَفْعَلُوْنَ ﴿٤٦﴾

**48.** ಪ್ರತಿಯೊಂದು ಸಮುದಾಯಕ್ಕೂ ಒಬ್ಬೊಬ್ಬ ಪ್ರವಾದಿ ಇದ್ದಾರೆ. ಹಾಗೆ ಅವರ ಪ್ರವಾದಿ ಅವರ ಬಳಿಗೆ ಬಂದರೆ ನ್ಯಾಯಯುತವಾಗಿ ಅವರ ಮಧ್ಯೆ ತೀರ್ಮಾನಿಸಲಾಗುವುದು. ಅವರಿಗೆ ಅನ್ಯಾಯವೆಸಗಲ್ಪಡದು.

وَلِكُلِّ اُمَّةٍ رَّسُوْلٌ ۚ فَاِذَا جَآءَ رَسُوْلُهُمْ قُضِيَ بَيْنَهُمْ بِالْقِسْطِ وَهُمْ لَا يُظْلَمُوْنَ ﴿٤٧﴾

**49.** ಅವರು ಕೇಳುತ್ತಾರೆ: 'ನೀವು ಸತ್ಯವಂತರಾದರೆ ಈ ವಾಗ್ದಾನ ಯಾವಾಗ (ನೆರವೇರುವುದು)?'

وَيَقُوْلُوْنَ مَتٰى هٰذَا الْوَعْدُ اِنْ كُنْتُمْ صٰدِقِيْنَ ﴿٤٨﴾

قُلْ لَّآ اَمْلِكُ لِنَفْسِيْ ضَرًّا وَّلَا نَفْعًا اِلَّا مَا شَآءَ اللّٰهُ ۭ لِكُلِّ اُمَّةٍ اَجَلٌ ۭ اِذَا جَآءَ اَجَلُهُمْ فَلَا يَسْتَاْخِرُوْنَ سَاعَةً وَّلَا يَسْتَقْدِمُوْنَ ﴿٥٠﴾

50. ಹೇಳು: 'ಅಲ್ಲಾಹನು ಇಚ್ಛಿಸಿದರೆ ಹೊರತು ನನ್ನ ಸ್ವಂತಕ್ಕೆ ಯಾವ ದೋಷವನ್ನಾಗಲಿ ಗುಣವನ್ನಾಗಲಿ ಮಾಡಲು ನನಗೆ ಶಕ್ತಿಯಿಲ್ಲ. ಪ್ರತಿಯೊಂದು ಜನಾಂಗಕ್ಕೂ (ಶಿಕ್ಷೆಗೆ ಗುರಿಯಾಗಲು) ಒಂದು ನಿಶ್ಚಿತ ಅವಧಿ ಇದೆ. ಅವರ ಸಮಯ ಸನ್ನಿಹಿತವಾದರೆ ಅವರು ಒಂದು ಕ್ಷಣವಾದರೂ ಹಿಂದೆ ಉಳಿಯಲಾರರು; ಮುಂದೆಯೂ ಹೋಗಲಾರರು.'

قُلْ اَرَءَيْتُمْ اِنْ اَتٰىكُمْ عَذَابُهٗ بَيَاتًا اَوْ نَهَارًا مَّاذَا يَسْتَعْجِلُ مِنْهُ الْمُجْرِمُوْنَ ﴿٥١﴾

51. ಹೇಳು: 'ನಿಮಗೆ ಅವನ ಶಿಕ್ಷೆ ರಾತ್ರಿಯಾಗಲಿ ಹಗಲಾಗಲಿ ಬಂದೆರಗಿದರೆ ಅಪರಾಧಿಗಳು ಅದರಿಂದ ಹೇಗೆ ತ್ವರಿತವಾಗಿ ತಪ್ಪಿಸಿಕೊಳ್ಳುವರು? ಹೇಳಿ ಕೊಡಿರಿ.'

اَثُمَّ اِذَا مَا وَقَعَ اٰمَنْتُمْ بِهٖ ۭ اٰۗلْـٰٔنَ وَقَدْ كُنْتُمْ بِهٖ تَسْتَعْجِلُوْنَ ﴿٥٢﴾

52. 'ಅದು ನಿಮ್ಮ ಮೇಲೆ ಬಂದೆರಗಿದ ಅನಂತರವೇ ನೀವು ನಂಬುವುದು? (ಆಗ ಅವರೊಡನೇ ಹೇಳಲಾಗುವುದು:) ಏನು, ಈಗಲೋ? ಅದು ಬೇಗನೆ ಬರಲಿ ಎಂದು ನೀವು (ಮೊದಲು) ಅವಸರ ಮಾಡುತ್ತಿದ್ದೀರಲ್ಲವೇ?'

ثُمَّ قِيْلَ لِلَّذِيْنَ ظَلَمُوْا ذُوْقُوْا عَذَابَ الْخُلْدِ ۚ هَلْ تُجْزَوْنَ اِلَّا بِمَا كُنْتُمْ تَكْسِبُوْنَ ﴿٥٣﴾

53. ಅನಂತರ ದುಷ್ಕರ್ಮಿಗಳೊಡನೆ ಹೇಳಲಾಗುವುದು: 'ನೀವು ದೀರ್ಘಕಾಲೀನ ಶಿಕ್ಷೆಯನ್ನು ಅನುಭವಿಸಿರಿ. ನಿಮ್ಮ ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನಲ್ಲದೆ ಬೇರೇನಾದರೂ ನಿಮಗೆ ಕೊಡಲಾಗುವುದೋ?'

وَيَسْتَنْۢبِـُٔوْنَكَ اَحَقٌّ هُوَ ۭ قُلْ اِيْ وَرَبِّيْٓ اِنَّهٗ لَحَقٌّ ۚ وَمَآ اَنْتُمْ بِمُعْجِزِيْنَ ﴿٥٤﴾

54. 'ಅದು (ಆ ಶಿಕ್ಷೆ) ನಿಜವೇ?' ಎಂದು ಅವರು ನಿನ್ನೊಡನೆ ಕೇಳುತ್ತಾರೆ. ಹೇಳು: 'ಹೌದು, ನನ್ನ ಪ್ರಭುವಿನಾಣೆ. ಅದು ಖಂಡಿತವಾಗಿಯೂ ನಿಜವೇ ಆಗಿದೆ. ಅದನ್ನು ನಿಷ್ಫಲಗೊಳಿಸಲು ನಿಮ್ಮಿಂದ ಸಾಧ್ಯವಿಲ್ಲ.'

وَلَوْ اَنَّ لِكُلِّ نَفْسٍ ظَلَمَتْ مَا فِي الْاَرْضِ لَافْتَدَتْ بِهٖ ۭ وَاَسَرُّوا النَّدَامَةَ لَمَّا رَاَوُا الْعَذَابَ ۚ وَقُضِيَ بَيْنَهُمْ بِالْقِسْطِ وَهُمْ لَا يُظْلَمُوْنَ ﴿٥٥﴾

55. ಅಕ್ರಮವಾಗಿ ವರ್ತಿಸಿದ ಪ್ರತಿಯೊಂದು ಆತ್ಮಕ್ಕೆ ಭೂಮಿಯಲ್ಲಿರುವ ಎಲ್ಲವೂ ಇದ್ದರೆ ಸಹ ಅವನ್ನೆಲ್ಲ ಅದು ಪ್ರಾಯಶ್ಚಿತ್ತವಾಗಿ ನೀಡುತ್ತಿತ್ತು. ಆ ಶಿಕ್ಷೆಯನ್ನು ಕಾಣುವಾಗ ಅವರು ತಮ್ಮ ಮರುಕವನ್ನು ಅಡಗಿಸುವರು. ಅವರ ಮಧ್ಯೆ ನ್ಯಾಯಯುತವಾಗಿ ತೀರ್ಮಾನಿಸಲಾಗುವುದು. ಅವರ ವಿರುದ್ಧ ಅನ್ಯಾಯವನ್ನೇನೂ ಎಸಗಲಾಗದು.





اَلَآ اِنَّ لِلّٰهِ مَا فِي السَّمٰوٰتِ وَالْاَرْضِ ۭ اَلَآ اِنَّ وَعْدَ اللّٰهِ حَقٌّ وَّلٰكِنَّ اَكْثَرَهُمْ لَا يَعْلَمُوْنَ ﴿٥٦﴾

56. ತಿಳಿದುಕೊಳ್ಳಿರಿ, ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೆ ಸೇರಿವೆ. ತಿಳಿದುಕೊಳ್ಳಿರಿ, ಅಲ್ಲಾಹನ ವಾಗ್ದಾನ ನಿಶ್ಚಯವಾಗಿಯೂ ಸತ್ಯವೇ ಆಗಿದೆ. ಆದರೆ ಅವರಲ್ಲಿ ಹೆಚ್ಚಿನವರು ಅದನ್ನು ಮನವರಿಕೆ ಮಾಡಿಕೊಳ್ಳುವುದಿಲ್ಲ.

هُوَ يُحْيٖ وَيُمِيْتُ وَاِلَيْهِ تُرْجَعُوْنَ ﴿٥٧﴾

57. ಜೀವಂತಗೊಳಿಸುವವನೂ ಮೃತಪಡಿಸುವವನೂ ಅವನೇ ಆಗಿದ್ದಾನೆ. ಅವನ ಬಳಿಗೆಯೇ ನೀವು ಹಿಂತಿರುಗಿಸಲ್ಪಡುವಿರಿ.

يٰٓاَيُّهَا النَّاسُ قَدْ جَاۗءَتْكُمْ مَّوْعِظَةٌ مِّنْ رَّبِّكُمْ وَشِفَاۗءٌ لِّمَا فِي الصُّدُوْرِ ۥ وَهُدًى وَّرَحْمَةٌ لِّلْمُؤْمِنِيْنَ ﴿٥٨﴾

58. ಜನರೇ, ನಿಶ್ಚಯವಾಗಿಯೂ ನಿಮ್ಮ ಪ್ರಭುವಿನ ಕಡೆಯಿಂದ ಒಂದು ತತ್ವೋಪದೇಶ ಮತ್ತು ಹೃದಯಗಳಲ್ಲಿರುವ ಎಲ್ಲ ರೋಗಗಳಿಗೂ ಶಮನಕಾರಿ ಔಷಧ ನಿಮಗೆ ಬಂದಿರುತ್ತದೆ. ಅದು ಸತ್ಯ ವಿಶ್ವಾಸಿಗಳಿಗೆ ಮಾರ್ಗದರ್ಶನವೂ ಕರುಣೆಯೂ ಆಗಿದೆ.

قُلْ بِفَضْلِ اللّٰهِ وَبِرَحْمَتِهٖ فَبِذٰلِكَ فَلْيَفْرَحُوْا ۭ هُوَ خَيْرٌ مِّمَّا يَجْمَعُوْنَ ﴿٥٩﴾

59. ಹೇಳು: 'ಇವೆಲ್ಲ ಅಲ್ಲಾಹನ ಅನುಗ್ರಹ ಮತ್ತು ಕರುಣೆಯಿಂದ.' ಆದ್ದರಿಂದ ಅವರು ಅದರಲ್ಲಿ ಸಂತೋಷಪಡಲಿ. ಅವರು ಶೇಖರಿಸುತ್ತಿರುವ ಎಲ್ಲ ವಸ್ತುಗಳಿಗಿಂತ ಇದು ಉತ್ತಮವಾಗಿದೆ.

قُلْ اَرَءَيْتُمْ مَّآ اَنْزَلَ اللّٰهُ لَكُمْ مِّنْ رِّزْقٍ فَجَعَلْتُمْ مِّنْهُ حَرَامًا وَّحَلٰلًا ۭ قُلْ اٰۗللّٰهُ اَذِنَ لَكُمْ اَمْ عَلَي اللّٰهِ تَفْتَرُوْنَ ﴿٦٠﴾

60. ಹೇಳು: 'ಅಲ್ಲಾಹನು ನಿಮಗೆ ಒದಗಿಸಿಕೊಟ್ಟ ಆಹಾರ ಸಾಮಗ್ರಿಗಳ ಬಗ್ಗೆ ನೀವು ಯೋಚಿಸಿದ್ದೀರಾ? ಅವುಗಳಲ್ಲಿ ಕೆಲವನ್ನು ನೀವು ನಿಷಿದ್ಧಗೊಳಿಸಿದಿರಿ; ಕೆಲವನ್ನು ಧರ್ಮಬದ್ಧಗೊಳಿಸಿದಿರಿ.' ಕೇಳು: 'ಅಲ್ಲಾಹನು ನಿಮಗೆ ಇದಕ್ಕೆ ಅನುಮತಿ ನೀಡಿರುವನೇ? ಅಥವಾ ನೀವು ಅಲ್ಲಾಹನ ಹೆಸರಿನಲ್ಲಿ ಸುಳ್ಳು ಸೃಷ್ಟಿಸುತ್ತೀರೇನು?'

وَمَا ظَنُّ الَّذِيْنَ يَفْتَرُوْنَ عَلَي اللّٰهِ الْكَذِبَ يَوْمَ الْقِيٰمَةِ ۭ اِنَّ اللّٰهَ لَذُوْ فَضْلٍ عَلَي النَّاسِ وَلٰكِنَّ اَكْثَرَهُمْ لَا يَشْكُرُوْنَ ﴿٦١﴾

61. ಅಲ್ಲಾಹನ ಹೆಸರಿನಲ್ಲಿ ಸುಳ್ಳು ಸೃಷ್ಟಿಸುತ್ತಿರುವವರು ಪುನರುತ್ಥಾನ ದಿನದ ಕುರಿತು ಏನು ಭಾವಿಸುತ್ತಾರೆ? ಖಂಡಿತವಾಗಿಯೂ ಅಲ್ಲಾಹನು ಮನುಷ್ಯರ ಮೇಲೆ ಕರುಣೆಯುಳ್ಳವನಾಗಿದ್ದಾನೆ. ಆದರೆ ಅವರಲ್ಲಿ ಹೆಚ್ಚಿನವರು ಕೃತಜ್ಞತೆ ತೋರಿಸುವುದಿಲ್ಲ.

**62.** ನೀನು ಯಾವುದಾದರೂ ಕಾರ್ಯದಲ್ಲಿ ನಿರತನಾಗಿದ್ದರೂ ಅವನ (ಅಲ್ಲಾಹನ) ಕಡೆಯಿಂದಿರುವ ಖುರ್‌ಆನಿನ ಯಾವುದೇ ಭಾಗವನ್ನು ಪಾರಾಯಣ ಮಾಡುತ್ತಿದ್ದರೂ ನೀವು ಯಾವುದೇ ಕೆಲಸ ಮಾಡುತ್ತಿದ್ದರೂ, ಅದರಲ್ಲಿ ನೀವು ಮಗ್ನರಾಗಿರುವಾಗಲೆಲ್ಲ ನಿಮಗೆ ನಾವು ಸಾಕ್ಷಿಯಾಗದೆ ಇರುವುದಿಲ್ಲ. ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ ಒಂದು ಅಣುವಿನಷ್ಟಾದರೂ ನಿನ್ನ ಪ್ರಭುವಿನಿಂದ ಗೋಪ್ಯವಾಗಿರಲು ಸಾಧ್ಯವಿಲ್ಲ- ಅದಕ್ಕಿಂತ ಚಿಕ್ಕದಾಗಿರಲಿ, ದೊಡ್ಡದಾಗಿರಲಿ; ಅದು ಸ್ಪಷ್ಟವಾದೊಂದು ಗ್ರಂಥದಲ್ಲಿ ದಾಖಲಿಸಲ್ಪಡುವುದು.

وَمَا تَكُونُ فِي شَأْنٍ وَمَا تَتْلُوا مِنْهُ مِنْ قُرْآنٍ وَلَا تَعْمَلُونَ مِنْ عَمَلٍ إِلَّا كُنَّا عَلَيْكُمْ شُهُودًا إِذْ تُفِيضُونَ فِيهِ ۚ وَمَا يَعْزُبُ عَنْ رَبِّكَ مِنْ مِثْقَالِ ذَرَّةٍ فِي الْأَرْضِ وَلَا فِي السَّمَاءِ وَلَا أَصْغَرَ مِنْ ذَٰلِكَ وَلَا أَكْبَرَ إِلَّا فِي كِتَابٍ مُبِينٍ ﴿٦١﴾

**63.** ತಿಳಿದುಕೊಳ್ಳಿರಿ, ಖಂಡಿತವಾಗಿಯೂ ಅಲ್ಲಾಹನ ಮಿತ್ರರಿಗೆ ಯಾವುದೇ ಭಯವಿಲ್ಲ, ಅವರು ವ್ಯಥೆಗೊಳ್ಳಲಾರರು.

أَلَا إِنَّ أَوْلِيَاءَ اللَّهِ لَا خَوْفٌ عَلَيْهِمْ وَلَا هُمْ يَحْزَنُونَ ﴿٦٢﴾

**64.** ಅವರು ವಿಶ್ವಾಸಿಗಳೂ ಧರ್ಮಶ್ರದ್ಧೆಯುಳ್ಳವರೂ ಆಗಿದ್ದಾರೆ.

الَّذِينَ آمَنُوا وَكَانُوا يَتَّقُونَ ﴿٦٣﴾

**65.** ಅವರಿಗೆ ಇಹಲೋಕದಲ್ಲೂ ಪರಲೋಕದಲ್ಲೂ ಶುಭವಾರ್ತೆ ಇದೆ. ಅಲ್ಲಾಹನ ವಚನದಲ್ಲಿ ಏನೂ ಬದಲಾವಣೆ ಇಲ್ಲ. ಅದೇ ಮಹತ್ತರ ವಿಜಯವಾಗಿದೆ.

لَهُمُ الْبُشْرَىٰ فِي الْحَيَاةِ الدُّنْيَا وَفِي الْآخِرَةِ ۚ لَا تَبْدِيلَ لِكَلِمَاتِ اللَّهِ ۚ ذَٰلِكَ هُوَ الْفَوْزُ الْعَظِيمُ ﴿٦٤﴾

**66.** ಅವರ ಮಾತುಗಳು ನಿನ್ನನ್ನು ವ್ಯಥೆಗೊಳಿಸದಿರಲಿ. ದಿಟವಾಗಿಯೂ ಎಲ್ಲ ಶಕ್ತಿ- ಗೌರವಗಳು ಅಲ್ಲಾಹನಿಗೆ ಸೇರುತ್ತವೆ. ಅವನು ಎಲ್ಲವನ್ನು ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

وَلَا يَحْزُنْكَ قَوْلُهُمْ ۘ إِنَّ الْعِزَّةَ لِلَّهِ جَمِيعًا ۚ هُوَ السَّمِيعُ الْعَلِيمُ ﴿٦٥﴾

**67.** ತಿಳಿದುಕೊಳ್ಳಿರಿ, ನಿಶ್ಚಯವಾಗಿಯೂ ಆಕಾಶಗಳಲ್ಲಿರುವವರು ಮತ್ತು ಭೂಮಿಯಲ್ಲಿರುವವರು ಅಲ್ಲಾಹನಿಗೆ ಅಧೀನರಾಗಿದ್ದಾರೆ. ಅಲ್ಲಾಹನ ಹೊರತು ಇತರರನ್ನು ಕರೆದು ಪ್ರಾರ್ಥಿಸುವವರು (ವಾಸ್ತವಿಕವಾಗಿ) ಆ ಸಹಭಾಗಿಗಳನ್ನು ಅನುಸರಿಸುವುದಿಲ್ಲ. ಅವರು ಊಹಾಪೋಹಗಳನ್ನಲ್ಲದೆ ಇನ್ನೇನನ್ನೂ ಹಿಂಬಾಲಿಸುವುದಿಲ್ಲ. ಅವರು ಕಲ್ಪನೆಗಳನ್ನಷ್ಟೇ ಮಾಡುತ್ತಾರೆ.

أَلَا إِنَّ لِلَّهِ مَنْ فِي السَّمَاوَاتِ وَمَنْ فِي الْأَرْضِ ۗ وَمَا يَتَّبِعُ الَّذِينَ يَدْعُونَ مِنْ دُونِ اللَّهِ شُرَكَاءَ ۚ إِنْ يَتَّبِعُونَ إِلَّا الظَّنَّ وَإِنْ هُمْ إِلَّا يَخْرُصُونَ ﴿٦٦﴾





**68.** ನಿಮಗೆ ವಿಶ್ರಮಿಸಲಿಕ್ಕಾಗಿ ರಾತ್ರಿಯನ್ನೂ ನಿಮಗೆ ಪ್ರಕಾಶವನ್ನು ನೀಡಲಿಕ್ಕಾಗಿ ಹಗಲನ್ನೂ ಉಂಟುಮಾಡಿದವನು ಅವನಾಗಿದ್ದಾನೆ. ನಿಶ್ಚಯವಾಗಿಯೂ ಗಮನವಿಟ್ಟು ಕೇಳುವವರಿಗೆ ಇದರಲ್ಲಿ ದೃಷ್ಟಾಂತಗಳಿವೆ.

هُوَ الَّذِي جَعَلَ لَكُمُ اللَّيْلَ لِتَسْكُنُوا فِيهِ وَالنَّهَارَ مُبْصِرًا ۚ إِنَّ فِي ذَٰلِكَ لَآيَاتٍ لِقَوْمٍ يَسْمَعُونَ ﴿٦٧﴾

**69.** 'ಅಲ್ಲಾಹನು ತನಗೊಬ್ಬ ಪುತ್ರನನ್ನು ಮಾಡಿಕೊಂಡಿದ್ದಾನೆ' ಎಂದು ಅವರು ಹೇಳುತ್ತಾರೆ. ಅವನಾದರೋ ಪರಿಶುದ್ಧನೂ ಸ್ವಯಂಪೂರ್ಣನೂ ಆಗಿದ್ದಾನೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನಿಗೆ ಸೇರುತ್ತವೆ. ಇದಕ್ಕೆ (ನಿಮ್ಮ ಹೇಳಿಕೆಗೆ) ನಿಮ್ಮ ಬಳಿ ಸಾಕ್ಷ್ಯಾಧಾರವೇನೂ ಇಲ್ಲ. ನಿಮಗೆ ತಿಳಿದಿಲ್ಲದ ವಿಚಾರವನ್ನು ನೀವು ಅಲ್ಲಾಹನ ಬಗ್ಗೆ ಹೇಳುತ್ತೀರೇನು?

قَالُوا اتَّخَذَ اللَّهُ وَلَدًا ۗ سُبْحَانَهُ ۖ هُوَ الْغَنِيُّ ۖ لَهُ مَا فِي السَّمَاوَاتِ وَمَا فِي الْأَرْضِ ۚ إِنْ عِنْدَكُمْ مِنْ سُلْطَانٍ بِهَٰذَا ۚ أَتَقُولُونَ عَلَى اللَّهِ مَا لَا تَعْلَمُونَ ﴿٦٨﴾

**70.** ಹೇಳು: 'ಅಲ್ಲಾಹನ ಬಗ್ಗೆ ಸುಳ್ಳು ಸೃಷ್ಟಿಸಿ ಹೇಳುವವರು ಖಂಡಿತವಾಗಿಯೂ ಜಯಗಳಿಸಲಾರರು.'

قُلْ إِنَّ الَّذِينَ يَفْتَرُونَ عَلَى اللَّهِ الْكَذِبَ لَا يُفْلِحُونَ ﴿٦٩﴾

**71.** (ಅವರಿಗೆ) ಇಹಲೋಕದಲ್ಲಿ ತಾತ್ಕಾಲಿಕ ಸುಖ ಸೌಕರ್ಯವಿದೆ. ಕೊನೆಗೆ ಅವರ ಮರಳಿಕೆ ನಮ್ಮ ಬಳಿಗೆಯೇ ಆಗಿದೆ. ಅನಂತರ, ಅವರು ಅವಿಶ್ವಾಸಿಗಳಾದ ಕಾರಣ ಅವರು ಕಠೋರ ಶಿಕ್ಷೆಯನ್ನು ಅನುಭವಿಸುವಂತೆ ನಾವು ಮಾಡುವೆವು.

مَتَاعٌ فِي الدُّنْيَا ثُمَّ إِلَيْنَا مَرْجِعُهُمْ ثُمَّ نُذِيقُهُمُ الْعَذَابَ الشَّدِيدَ بِمَا كَانُوا يَكْفُرُونَ ﴿٧٠﴾

**72.** ನೂಹ್‌ರ ವೃತ್ತಾಂತವನ್ನು ನೀನು ಅವರಿಗೆ ವಿವರಿಸಿ ಹೇಳು. ಅವರು ತನ್ನ ಜನತೆಯೊಡನೆ ಹೇಳಿದರು: 'ನನ್ನ ಜನರೇ, (ಅಲ್ಲಾಹನ ಬಳಿ) ನನಗಿರುವ ಸ್ಥಾನ ಮತ್ತು ಅಲ್ಲಾಹನ ದೃಷ್ಟಾಂತಗಳ ಮೂಲಕ (ನಿಮ್ಮ ಕರ್ತವ್ಯದ ಬಗ್ಗೆ) ನಾನು ಜ್ಞಾಪಿಸಿಕೊಡುತ್ತಿರುವುದು ನಿಮಗೆ ಅಸಹನೀಯವಾಗಿ ತೋರುವುದಾದರೆ ನಾನಿದೋ ನನ್ನ ವಿಚಾರವನ್ನು ಅಲ್ಲಾಹನಿಗೆ ಅರ್ಪಿಸುತ್ತೇನೆ. ಆದ್ದರಿಂದ ನಿಮ್ಮ ಯೋಜನೆಗಳನ್ನೂ ನಿಮ್ಮ (ದೇವ) ಸಹಭಾಗಿಗಳನ್ನೂ ಒಟ್ಟುಗೂಡಿಸಿರಿ. ಅನಂತರ ನಿಮ್ಮ ನಿರ್ದಿಷ್ಟ ಕಾರ್ಯವಿಧಾನ ನಿಮಗೆ ಅಸ್ಪಷ್ಟವಾಗದಿರಲಿ. ಆ ಬಳಿಕ

وَاتْلُ عَلَيْهِمْ نَبَأَ نُوحٍ إِذْ قَالَ لِقَوْمِهِ يَا قَوْمِ إِنْ كَانَ كَبُرَ عَلَيْكُمْ مَقَامِي وَتَذْكِيرِي بِآيَاتِ اللَّهِ فَعَلَى اللَّهِ تَوَكَّلْتُ فَأَجْمِعُوا أَمْرَكُمْ وَشُرَكَاءَكُمْ ثُمَّ لَا يَكُنْ أَمْرُكُمْ عَلَيْكُمْ غُمَّةً ثُمَّ

اقْضُوٓا إِلَيَّ وَلَا تُنظِرُونِ ﴿٧١﴾

(ಆ ಯೋಜನೆಯನ್ನು) ನನ್ನ ವಿರುದ್ಧ ಕಾರ್ಯಗತಗೊಳಿಸಿರಿ. ನನಗೆ ಕಾಲಾವಧಿಯನ್ನೇನೂ ಕೊಡಬೇಡಿರಿ.

فَإِن تَوَلَّيْتُمْ فَمَا سَأَلْتُكُم مِّنْ أَجْرٍ ۖ إِنْ أَجْرِيَ إِلَّا عَلَى اللَّهِ ۖ وَأُمِرْتُ أَنْ أَكُونَ مِنَ الْمُسْلِمِينَ ﴿٧٢﴾

**73.** 'ಆದರೆ ನೀವು ಬೆನ್ನು ತಿರುಗಿಸಿ ಹೋದರೆ, ನಾನು ನಿಮ್ಮಿಂದೇನೂ ಪ್ರತಿಫಲವನ್ನು ಕೇಳಿಲ್ಲವೆಂದು ತಿಳಿದುಕೊಳ್ಳಿರಿ. ಅಲ್ಲಾಹನು ಮಾತ್ರವೇ ನನಗೆ ಪುರಸ್ಕಾರ ನೀಡುವವನು. (ಅವನಿಗೆ) ಶರಣಾಗುವವರಲ್ಲಿ ಸೇರಿದವನಾಗಲಿಕ್ಕೆ ನನ್ನೊಡನೆ ಆಜ್ಞಾಪಿಸಲಾಗಿದೆ.'

فَكَذَّبُوهُ فَنَجَّيْنَاهُ وَمَن مَّعَهُ فِي الْفُلْكِ وَجَعَلْنَاهُمْ خَلَائِفَ وَأَغْرَقْنَا الَّذِينَ كَذَّبُوا بِآيَاتِنَا ۖ فَانظُرْ كَيْفَ كَانَ عَاقِبَةُ الْمُنذَرِينَ ﴿٧٣﴾

**74.** ಆದರೆ ಅವರು ಅವರನ್ನು (ನೂಹ್‌ರನ್ನು) ಸುಳ್ಳಾಗಿಸಿದರು. ಅವರನ್ನೂ (ನೂಹ್‌ರನ್ನು) ಅವರೊಂದಿಗೆ ನೌಕೆಯಲ್ಲಿರುವವರನ್ನೂ ನಾವು ರಕ್ಷಿಸಿದೆವು. ನಾವು ಅವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿದೆವು ಹಾಗೂ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರನ್ನು ಮುಳುಗಿಸಿದೆವು. ಹಾಗೆ, ಮುನ್ನೆಚ್ಚರಿಕೆ ನೀಡಲ್ಪಟ್ಟವರ ಅಂತ್ಯ ಹೇಗಾಯಿತೆಂದು ನೋಡು.

ثُمَّ بَعَثْنَا مِن بَعْدِهِ رُسُلًا إِلَىٰ قَوْمِهِمْ فَجَاءُوهُم بِالْبَيِّنَاتِ فَمَا كَانُوا لِيُؤْمِنُوا بِمَا كَذَّبُوا بِهِ مِن قَبْلُ ۚ كَذَٰلِكَ نَطْبَعُ عَلَىٰ قُلُوبِ الْمُعْتَدِينَ ﴿٧٤﴾

**75.** ಆ ಮೇಲೆ ಅವರ (ನೂಹ್‌ರ) ಬಳಿಕ ಬೇರೆಯೂ ಸಂದೇಶವಾಹಕರನ್ನು ಅವರ ಜನರೆಡೆಗೆ ನಾವು ಕಳುಹಿಸಿದೆವು. ಅವರು ಅವರ ಬಳಿಗೆ ಸ್ಪಷ್ಟವಾದ ಸಾಕ್ಷ್ಯಾಧಾರಗಳನ್ನು ತಂದರು. ಆದರೆ ಅವರು ಮುಂಚೆ (ಪ್ರವಾದಿಗಳನ್ನು) ಸುಳ್ಳಾಗಿಸಿದ ಕಾರಣದಿಂದ ಅವುಗಳನ್ನು ಅವರಿಗೆ ನಂಬಲಿಕ್ಕಾಗಲಿಲ್ಲ. ಈ ಪ್ರಕಾರದಲ್ಲಿ ಹದ್ದು ಮೀರಿದ ಜನರ ಹೃದಯಗಳಿಗೆ ನಾವು ಮುದ್ರೆ ಹಾಕುತ್ತೇವೆ.

ثُمَّ بَعَثْنَا مِن بَعْدِهِم مُّوسَىٰ وَهَارُونَ إِلَىٰ فِرْعَوْنَ وَمَلَئِهِ بِآيَاتِنَا فَاسْتَكْبَرُوا وَكَانُوا قَوْمًا مُّجْرِمِينَ ﴿٧٥﴾

**76.** ಅನಂತರ, ಅವರ ಬಳಿಕ ಮೂಸಾರನ್ನೂ ಹಾರೂನ್‌ರನ್ನೂ ನಮ್ಮ ದೃಷ್ಟಾಂತಗಳ ಸಹಿತ ಫಿರ್‌ಔನ್ ಮತ್ತು ಅವನ ಮುಖಂಡರ ಬಳಿಗೆ ನಾವು ಕಳುಹಿಸಿದೆವು. ಆದರೆ ಅವರು ದುರಂಹಕಾರದಿಂದ ವರ್ತಿಸಿದರು. ಅವರು ಪಾಪಿಗಳಾದ ಜನಾಂಗದವರಾಗಿದ್ದರು.

فَلَمَّا جَاءَهُمُ الْحَقُّ مِنْ عِندِنَا قَالُوا إِنَّ هَٰذَا لَسِحْرٌ مُّبِينٌ ﴿٧٦﴾

**77.** ಹಾಗೆ ನಮ್ಮ ಕಡೆಯಿಂದ ಅವರ ಬಳಿಗೆ ಸತ್ಯ ಬಂದಾಗಲೆಲ್ಲ, 'ಖಂಡಿತವಾಗಿಯೂ ಇದು ಸ್ಪಷ್ಟವಾದ ಮಾಯಾಜಾಲವಾಗಿದೆ' ಎಂದು ಅವರು ಹೇಳಿದರು.





قَالَ مُوسَىٰ أَتَقُولُونَ لِلْحَقِّ لَمَّا جَاءَكُمْ ۖ أَسِحْرٌ هَٰذَا وَلَا يُفْلِحُ السَّاحِرُونَ ﴿٧٧﴾

**78.** ಮೂಸಾ ಹೇಳಿದರು: 'ಸತ್ಯ ನಿಮ್ಮ ಬಳಿಗೆ ಬಂದಾಗ ಅದರ ಕುರಿತು ನೀವು (ಹೀಗೆ) ಹೇಳುವಿರೇನು? ಇದು ಮಾಯಾಜಾಲವೇ? ಮಾಯಾಜಾಲಕರು ಎಂದಿಗೂ ಜಯಿಸಲಾರರು.'

قَالُوا أَجِئْتَنَا لِتَلْفِتَنَا عَمَّا وَجَدْنَا عَلَيْهِ آبَاءَنَا وَتَكُونَ لَكُمَا الْكِبْرِيَاءُ فِي الْأَرْضِ وَمَا نَحْنُ لَكُمَا بِمُؤْمِنِينَ ﴿٧٨﴾

**79.** ಅವರು ಹೇಳಿದರು: 'ನಮ್ಮ ಪೂರ್ವಜರು ಯಾವ ಮಾರ್ಗವನ್ನು ಅನುಸರಿಸುತ್ತಿರುವುದಾಗಿ ನಾವು ಕಂಡೆವೋ ಅದರಿಂದ ನಮ್ಮನ್ನು ಪರಾಙ್ಮುಖರನ್ನಾಗಿ ಮಾಡಲಿಕ್ಕೂ ಊರಿನಲ್ಲಿ ನಿಮಗಿಬ್ಬರಿಗೆ ಸ್ಥಾನಮಾನ ಗಿಟ್ಟಿಸಿಕೊಳ್ಳಲಿಕ್ಕೂ ಬೇಕಾಗಿ ನೀನು ನಮ್ಮ ಬಳಿಗೆ ಬಂದಿದ್ದೀಯಾ? ನೀವಿಬ್ಬರನ್ನೂ ನಾವು ನಂಬಲಾರೆವು.'

وَقَالَ فِرْعَوْنُ ائْتُونِي بِكُلِّ سَاحِرٍ عَلِيمٍ ﴿٧٩﴾

**80.** ಫಿರ್‌ಔನ್ (ತನ್ನ ಜನರೊಡನೆ) ಹೇಳಿದನು: 'ಪರಿಣಿತರಾದ ಎಲ್ಲ ಮಾಯಾಜಾಲಕರನ್ನು ನನ್ನ ಬಳಿಗೆ ಕರೆತನ್ನಿರಿ.'

فَلَمَّا جَاءَ السَّحَرَةُ قَالَ لَهُم مُّوسَىٰ أَلْقُوا مَا أَنتُم مُّلْقُونَ ﴿٨٠﴾

**81.** ಹಾಗೆ ಮಾಯಾಜಾಲಕರು ಬಂದಾಗ, 'ನೀವು ಎಸೆಯಲಿಕ್ಕಿರುವುದನ್ನು ಎಸೆಯಿರಿ' ಎಂದು ಮೂಸಾ ಅವರೊಡನೆ ಹೇಳಿದರು.

فَلَمَّا أَلْقَوْا قَالَ مُوسَىٰ مَا جِئْتُم بِهِ السِّحْرُ ۖ إِنَّ اللَّهَ سَيُبْطِلُهُ ۖ إِنَّ اللَّهَ لَا يُصْلِحُ عَمَلَ الْمُفْسِدِينَ ﴿٨١﴾

**82.** ಹಾಗೆ ಅವರು (ತಮ್ಮ ಜಾಲವಿದ್ಯೆ ವಸ್ತುಗಳನ್ನು) ಎಸೆದಾಗ ಮೂಸಾ ಹೇಳಿದರು: 'ನೀವು ತೋರಿಸಿದ್ದು ಇಂದ್ರಜಾಲವಾಗಿದೆ. ಖಂಡಿತವಾಗಿಯೂ ಅಲ್ಲಾಹನು ಶೀಘ್ರವೇ ಅದನ್ನು ನಿಷ್ಫಲಗೊಳಿಸುವನು. ದಿಟವಾಗಿಯೂ ಅಲ್ಲಾಹನು ಕಿಡಿಗೇಡಿಗಳ ಕೃತ್ಯಗಳನ್ನು ಯಶಸ್ವಿಗೊಳಿಸಲಾರ.'

وَيُحِقُّ اللَّهُ الْحَقَّ بِكَلِمَاتِهِ وَلَوْ كَرِهَ الْمُجْرِمُونَ ﴿٨٢﴾

**83.** ಪಾಪಿಗಳಿಗೆ ಮೆಚ್ಚಿಗೆಯಾಗದಿದ್ದರೂ ಅಲ್ಲಾಹನು ತನ್ನ ವಚನಗಳ ಮೂಲಕ ಸತ್ಯವನ್ನು ನೆಲೆಗೊಳಿಸುತ್ತಾನೆ.

فَمَا آمَنَ لِمُوسَىٰ إِلَّا ذُرِّيَّةٌ مِّن قَوْمِهِ عَلَىٰ خَوْفٍ مِّن فِرْعَوْنَ وَمَلَئِهِمْ أَن يَفْتِنَهُمْ ۚ وَإِنَّ فِرْعَوْنَ

**84.** ಫಿರ್‌ಔನ್ ಮತ್ತು ಅವನ ಮುಖಂಡರು ತಮ್ಮನ್ನು ಕಷ್ಟಕ್ಕೆ ಗುರಿಪಡಿಸುವರೆಂದು ಭಯಪಟ್ಟು ಮೂಸಾರ ಜನತೆಯಿಂದ ಕೆಲವು ಯುವಕರು ಹೊರತು ಬೇರೆ ಯಾರೂ ಅವರನ್ನು ನಂಬಲಿಲ್ಲ. ವಾಸ್ತವದಲ್ಲಿ

ಫಿರ್‌ಔನ್ ಆ ದೇಶದಲ್ಲಿ ಒಬ್ಬ ಸ್ವೇಚ್ಛಾಧಿಪತಿಯಾಗಿದ್ದನು. ನಿಶ್ಚಯವಾಗಿಯೂ ಅವನು ಅತಿವರ್ತಿಗಳಲ್ಲಿ ಸೇರಿದವನೂ ಆಗಿದ್ದನು.

لَعَالٍ فِي الْأَرْضِ ۚ وَإِنَّهُ لَمِنَ الْمُسْرِفِينَ ﴿٨٣﴾

**85.** ಮೂಸಾ ಹೇಳಿದರು: 'ಓ ನನ್ನ ಜನರೇ, ನೀವು ಅಲ್ಲಾಹನಲ್ಲಿ ವಿಶ್ವಾಸವುಳ್ಳವರಾಗಿದ್ದರೆ, ಅವನಿಗೆ ಶರಣು ಹೋಗುವವರಾಗಿದ್ದರೆ, ಅವನ ಮೇಲೆ ಮಾತ್ರ ಭರವಸೆಯನ್ನಿಡಿರಿ.'

وَقَالَ مُوسَىٰ يَا قَوْمِ إِن كُنتُمْ آمَنتُم بِاللَّهِ فَعَلَيْهِ تَوَكَّلُوا إِن كُنتُم مُّسْلِمِينَ ﴿٨٤﴾

**86.** ಆಗ ಅವರು ಹೇಳಿದರು: 'ನಾವು ಅಲ್ಲಾಹನ ಮೇಲೆಯೇ ಭರವಸೆಯಿರಿಸಿದ್ದೇವೆ. ನಮ್ಮ ಪ್ರಭೂ, ನೀನು ನಮ್ಮನ್ನು ದುಷ್ಕರ್ಮಿಗಳ ಮೂಲಕ ಪರೀಕ್ಷೆಗೆ ಗುರಿಮಾಡದಿರು.

فَقَالُوا عَلَى اللَّهِ تَوَكَّلْنَا رَبَّنَا لَا تَجْعَلْنَا فِتْنَةً لِّلْقَوْمِ الظَّالِمِينَ ﴿٨٥﴾

**87.** 'ನಿನ್ನ ಕೃಪೆ ಮೂಲಕ ಅವಿಶ್ವಾಸಿಗಳಾದ ಜನರಿಂದ ನೀನು ನಮ್ಮನ್ನು ಕಾಪಾಡು.'

وَنَجِّنَا بِرَحْمَتِكَ مِنَ الْقَوْمِ الْكَافِرِينَ ﴿٨٦﴾

**88.** ಮೂಸಾ ಮತ್ತು ಅವರ ಸಹೋದರನಿಗೆ ನಾವು ಸಂದೇಶ ನೀಡಿದೆವು: 'ಮಿಸ್ರ್ (ಈಜಿಪ್ಟ್)ನಲ್ಲಿ ನೀವಿಬ್ಬರೂ ನಿಮ್ಮ ಜನತೆಗೋಸ್ಕರ (ಕೆಲವು) ಮನೆಗಳನ್ನು ಸಿದ್ಧಪಡಿಸಿರಿ. ನಿಮ್ಮ (ಆ) ಮನೆಗಳು ಒಂದೇ ದಿಕ್ಕಿಗೆ ಅಭಿಮುಖವಾಗಿರಲಿ. ನೀವು ಪ್ರಾರ್ಥನೆಯನ್ನು ಸ್ಥಿರಗೊಳಿಸಿರಿ ಹಾಗೂ ಸತ್ಯವಿಶ್ವಾಸಿಗಳಿಗೆ ಸಂತೋಷ ವಾರ್ತೆಯನ್ನು ಅರುಹಿರಿ.''

وَأَوْحَيْنَا إِلَىٰ مُوسَىٰ وَأَخِيهِ أَن تَبَوَّآ لِقَوْمِكُمَا بِمِصْرَ بُيُوتًا وَاجْعَلُوا بُيُوتَكُمْ قِبْلَةً وَأَقِيمُوا الصَّلَاةَ ۗ وَبَشِّرِ الْمُؤْمِنِينَ ﴿٨٧﴾

**89.** ಮೂಸಾ ಹೇಳಿದರು: 'ಓ ನಮ್ಮ ಪ್ರಭೂ, ಫಿರ್‌ಔನ್ ಮತ್ತು ಅವನ ಮುಖಂಡರಿಗೆ ಐಹಿಕ ಜೀವನದಲ್ಲಿ ನೀನು ಅಲಂಕಾರವನ್ನೂ ಐಶ್ವರ್ಯವನ್ನೂ ನೀಡಿರುವೆ. ಓ ನಮ್ಮ ಪ್ರಭೂ, ತತ್ಫಲವಾಗಿ ಅವರು (ಜನರನ್ನು) ನಿನ್ನ ಮಾರ್ಗದಿಂದ ತಪ್ಪಿಸುತ್ತಾರೆ. ಓ ನಮ್ಮ ಪ್ರಭೂ, ನೀನು ಅವರ ಸಂಪತ್ತನ್ನು ನಾಶಪಡಿಸು. ಅವರ ಹೃದಯಗಳನ್ನು ಶಿಕ್ಷೆಗೆ ಗುರಿಪಡಿಸು. ವೇದನಾಯುತ ಶಿಕ್ಷೆ ಕಾಣುವ ತನಕ ಅವರು ನಂಬಲಾರರು.'

وَقَالَ مُوسَىٰ رَبَّنَا إِنَّكَ آتَيْتَ فِرْعَوْنَ وَمَلَأَهُ زِينَةً وَأَمْوَالًا فِي الْحَيَاةِ الدُّنْيَا رَبَّنَا لِيُضِلُّوا عَن سَبِيلِكَ ۖ رَبَّنَا اطْمِسْ عَلَىٰ أَمْوَالِهِمْ وَاشْدُدْ عَلَىٰ قُلُوبِهِمْ فَلَا يُؤْمِنُوا حَتَّىٰ يَرَوُا الْعَذَابَ الْأَلِيمَ ﴿٨٨﴾





**90.** ಅಲ್ಲಾಹನು ಹೇಳಿದನು: 'ನಿಮ್ಮಿಬ್ಬರ ಪ್ರಾರ್ಥನೆಗಳೂ ಸ್ವೀಕೃತವಾಗಿವೆ. ಆದ್ದರಿಂದ ನೀವಿಬ್ಬರೂ ಸ್ಥಿರತೆಯುಳ್ಳವರಾಗಿರಿ. ತಿಳಿವಳಿಕೆ ಯಿಲ್ಲದವರ ಮಾರ್ಗವನ್ನು ನೀವು ಅನುಸರಿಸಬೇಡಿರಿ.'

قَالَ قَدْ أُجِيبَت دَّعْوَتُكُمَا فَاسْتَقِيمَا وَلَا تَتَّبِعَانِّ سَبِيلَ الَّذِينَ لَا يَعْلَمُونَ ﴿٨٩﴾

**91.** ನಾವು ಇಸ್ರಾಈಲ್ ಸಂತತಿಗಳನ್ನು ಸಮುದ್ರ ದಾಟಿಸಿದೆವು. ಆಗ ಫಿರ್‌ಔನ್ ಮತ್ತು ಅವನ ಸೈನ್ಯ ಅಕ್ರಮ ಮತ್ತು ವಿದ್ವೇಷದಿಂದ ಅವರನ್ನು ಬೆನ್ನಟ್ಟಿದರು. ಕೊನೆಗೆ ಮುಳುಗುವ ಅವಸ್ಥೆಗೆ ಅವನು ಗುರಿಯಾದಾಗ ಹೇಳಿದನು: 'ಇಸ್ರಾಈಲ್ ಸಂತತಿಗಳು ನಂಬುವ ದೇವನ ಹೊರತು ಬೇರೆ ದೇವನಿಲ್ಲವೆಂದು ನಾನು ನಂಬುತ್ತೇನೆ. (ದೇವನಿಗೆ) ಶರಣಾಗತರಾಗುವವರಲ್ಲಿ ನಾನು ಸೇರಿದವನಾಗಿದ್ದೇನೆ'

وَجَاوَزْنَا بِبَنِي إِسْرَائِيلَ الْبَحْرَ فَأَتْبَعَهُمْ فِرْعَوْنُ وَجُنُودُهُ بَغْيًا وَعَدْوًا ۖ حَتَّىٰ إِذَا أَدْرَكَهُ الْغَرَقُ قَالَ آمَنتُ أَنَّهُ لَا إِلَٰهَ إِلَّا الَّذِي آمَنَتْ بِهِ بَنُو إِسْرَائِيلَ وَأَنَا مِنَ الْمُسْلِمِينَ ﴿٩٠﴾

**92.** (ನಾವು ಹೇಳಿದೆವು:) 'ಏನು, ಈಗಲೋ? ನೀನು ಮೊದಲು ಧಿಕ್ಕಾರಿಯೂ ಗಲಭೆಕೋರರಲ್ಲಿ ಸೇರಿದವನೂ ಆಗಿದ್ದೆಯಷ್ಟೇ.

آلْآنَ وَقَدْ عَصَيْتَ قَبْلُ وَكُنتَ مِنَ الْمُفْسِدِينَ ﴿٩١﴾

**93.** 'ಆದ್ದರಿಂದ ನಿನ್ನ ಶರೀರವನ್ನು (ಮಾತ್ರ) ನಾವು ಇಂದು ಸಂರಕ್ಷಿಸುತ್ತೇವೆ[287] - ನಿನ್ನ ಬಳಿಕ ಬರುವವರಿಗೆ ನೀನು ಒಂದು ದೃಷ್ಟಾಂತ ವಾಗಿರಲಿಕ್ಕೋಸ್ಕರ. ನಿಶ್ಚಯವಾಗಿಯೂ ಮನುಷ್ಯರಲ್ಲಿ ಹೆಚ್ಚಿನವರು ನಮ್ಮ ದೃಷ್ಟಾಂತಗಳ ಬಗ್ಗೆ ನಿರ್ಲಕ್ಷ್ಯರಾಗಿದ್ದಾರೆ.

فَالْيَوْمَ نُنَجِّيكَ بِبَدَنِكَ لِتَكُونَ لِمَنْ خَلْفَكَ آيَةً ۚ وَإِنَّ كَثِيرًا مِّنَ النَّاسِ عَنْ آيَاتِنَا لَغَافِلُونَ ﴿٩٢﴾

**94.** ಇಸ್ರಾಈಲ್ ಸಂತತಿಗಳಿಗೆ ಅತ್ಯಂತ ಉತ್ತಮವಾದ ಒಂದು ವಾಸಸ್ಥಳವನ್ನು ನಾವು ಏರ್ಪಡಿಸಿದೆವು. ಉತ್ತಮವಾದ ಆಹಾರ ವಸ್ತುಗಳನ್ನೂ ನಾವು ಅವರಿಗೆ ನೀಡಿದೆವು. ಅವರಿಗೆ ಜ್ಞಾನ ಬರುವ ವರೆಗೆ ಅವರು ಭಿನ್ನಾಭಿಪ್ರಾಯ ಹೊಂದಿರಲಿಲ್ಲ. ಖಂಡಿತವಾಗಿಯೂ ನಿನ್ನ ಪ್ರಭು ಅವರು ಭಿನ್ನಾಭಿಪ್ರಾಯ ಹೊಂದಿದ ವಿಷಯದ ಬಗ್ಗೆ ಪುನರುತ್ಥಾನ ದಿನದಂದು ಅವರ ಮಧ್ಯೆ ಇತ್ಯರ್ಥ ಮಾಡುವನು.

وَلَقَدْ بَوَّأْنَا بَنِي إِسْرَائِيلَ مُبَوَّأَ صِدْقٍ وَرَزَقْنَاهُم مِّنَ الطَّيِّبَاتِ فَمَا اخْتَلَفُوا حَتَّىٰ جَاءَهُمُ الْعِلْمُ ۚ إِنَّ رَبَّكَ يَقْضِي بَيْنَهُمْ يَوْمَ الْقِيَامَةِ فِيمَا كَانُوا فِيهِ يَخْتَلِفُونَ ﴿٩٣﴾

287. ಇದು ಖುರ್‌ಆನಿನ ಸತ್ಯತೆಗೆ ಒಂದು ನಿದರ್ಶನವಾಗಿದೆ. ಪ್ರವಾದಿ ಮೂಸಾ (ಅಲೈಹಿಸ್ಸಲಾಂ)ರ ವಿರೋಧಿಯಾಗಿದ್ದ ಫಿರ್‌ಔನನ ಮೃತ ಶರೀರ ಅನಂತರ ಪತ್ತೆಯಾಗಿದ್ದು ಇಂದು ಸಹ ಅದನ್ನು ಮ್ಯೂಸಿಯಮ್‌ನಲ್ಲಿ ಸುರಕ್ಷಿತವಾಗಿಡಲಾಗಿದೆ.

**95. ನಾವು ನಿನಗೆ ಅವತೀರ್ಣಗೊಳಿಸಿರುವುದರಲ್ಲಿ ನಿನಗೆ ಸಂಶಯವಿದ್ದರೆ ನಿನಗಿಂತ ಮುಂಚೆ ಇದ್ದ ಗ್ರಂಥವನ್ನು ಓದುವವರೊಡನೆ ಕೇಳು.[288] ದಿಟವಾಗಿಯೂ ನಿನ್ನ ಪ್ರಭುವಿನಿಂದ ನಿನಗೆ ಸತ್ಯ ಬಂದಿದೆ. ಆದ್ದರಿಂದ ನೀನು ಸಂಶಯಪಡುವವರಲ್ಲಿ ಸೇರಿದವನಾಗಬಾರದು.**

فَإِن كُنتَ فِي شَكٍّ مِّمَّآ أَنزَلْنَآ إِلَيْكَ فَسْـَٔلِ ٱلَّذِينَ يَقْرَءُونَ ٱلْكِتَٰبَ مِن قَبْلِكَ ۚ لَقَدْ جَآءَكَ ٱلْحَقُّ مِن رَّبِّكَ فَلَا تَكُونَنَّ مِنَ ٱلْمُمْتَرِينَ ﴿٩٥﴾

**96. ಅಲ್ಲಾಹನ ದೃಷ್ಟಾಂತಗಳನ್ನು ಸುಳ್ಳಾಗಿಸುವವರಲ್ಲಿ ನೀನೆಂದಿಗೂ ಸೇರಿದವನಾಗಬಾರದು. ಹಾಗಾಗಿ ಬಿಟ್ಟರೆ ನೀನು ನಷ್ಟ ಹೊಂದಿದವನಾಗುವೆ.**

وَلَا تَكُونَنَّ مِنَ ٱلَّذِينَ كَذَّبُوا۟ بِـَٔايَٰتِ ٱللَّهِ فَتَكُونَ مِنَ ٱلْخَٰسِرِينَ ﴿٩٦﴾

**97. ನಿನ್ನ ಪ್ರಭುವಿನ ವಚನ ಯಾರ ವಿರುದ್ಧ ಸತ್ಯವಾಗಿ ಪರಿಣಮಿಸುತ್ತದೋ, ಅವರು ಖಂಡಿತವಾಗಿಯೂ ನಂಬಲಾರರು.**

إِنَّ ٱلَّذِينَ حَقَّتْ عَلَيْهِمْ كَلِمَتُ رَبِّكَ لَا يُؤْمِنُونَ ﴿٩٧﴾

**98. ಎಲ್ಲ ದೃಷ್ಟಾಂತಗಳೂ ಅವರಿಗೆ ತೋರಿ ಬಂದರೂ ಯಾತನಮಯವಾದ ಶಿಕ್ಷೆಯನ್ನು ಅವರು ಕಾಣುವ ವರೆಗೆ** (ಅವರು ನಂಬಲಾರರು).

وَلَوْ جَآءَتْهُمْ كُلُّ ءَايَةٍ حَتَّىٰ يَرَوُا۟ ٱلْعَذَابَ ٱلْأَلِيمَ ﴿٩٨﴾

**99. ವಿಶ್ವಾಸ ಹೊಂದಿ ತಮ್ಮ ವಿಶ್ವಾಸ ಅವರಿಗೆ ಪ್ರಯೋಜನಕರವಾಗುವಂತೆ ಯೂನುಸ್‌ರ ಜನತೆಯ ಹೊರತು ಬೇರೆ ಯಾವ ಊರಿನವರೂ ಏಕೆ ಆಗಲಿಲ್ಲ? ಅವರು ವಿಶ್ವಾಸಿಗಳಾದಾಗ, ಇಹಲೋಕ ಜೀವಿತದ ಅವಮಾನಕರವಾದ ಶಿಕ್ಷೆಯನ್ನು ನಾವು ಅವರಿಂದ ಹೋಗಲಾಡಿಸಿದೆವು. ಒಂದು ನಿಶ್ಚಿತ ಕಾಲದ ವರೆಗೆ ನಾವು ಅವರಿಗೆ ಸುಖ ಸೌಕರ್ಯವನ್ನು ನೀಡಿದೆವು.**

فَلَوْلَا كَانَتْ قَرْيَةٌ ءَامَنَتْ فَنَفَعَهَآ إِيمَٰنُهَآ إِلَّا قَوْمَ يُونُسَ لَمَّآ ءَامَنُوا۟ كَشَفْنَا عَنْهُمْ عَذَابَ ٱلْخِزْىِ فِى ٱلْحَيَوٰةِ ٱلدُّنْيَا وَمَتَّعْنَٰهُمْ إِلَىٰ حِينٍ ﴿٩٩﴾

**100. ನಿನ್ನ ಪ್ರಭು ಇಚ್ಛಿಸಿದ್ದರೆ, ಭೂಲೋಕದಲ್ಲಿರುವ ಎಲ್ಲರೂ ವಿಶ್ವಾಸ ಹೊಂದುತ್ತಿದ್ದರು.** (ಆದರೆ ಅವನು ನಿರ್ಬಂಧಪಡಿಸುವುದಿಲ್ಲ.) **ಹಾಗಿರುವಾಗ ಜನರು ವಿಶ್ವಾಸಿಗಳಾಗುವಂತೆ ನೀನು ಬಲವಂತಪಡಿಸುವಿಯೋ?**

وَلَوْ شَآءَ رَبُّكَ لَءَامَنَ مَن فِى ٱلْأَرْضِ كُلُّهُمْ جَمِيعًا ۚ أَفَأَنتَ تُكْرِهُ ٱلنَّاسَ حَتَّىٰ يَكُونُوا۟ مُؤْمِنِينَ ﴿١٠٠﴾

288. ತೋರಿಕೆಗೆ ಇದು ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರೊಡನೆ ಹೇಳಿದಂತಿದ್ದರೂ ಖುರ್‌ಆನ್ ಓದುವವರನ್ನು ಇಲ್ಲಿ ಉದ್ದೇಶಿಸಲಾಗಿದೆ. ಕಾರಣವೇನೆಂದರೆ ಪೈಗಂಬರರಿಗೆ ಯಾವುದೇ ಸಂಶಯವಿರಲಿಲ್ಲ. ಪೈಗಂಬರ್ (ಸ.) ವಿಶ್ವಾಸಿಗಳಲ್ಲಿ ಮೊದಲಿಗರೆಂದು ಖುರ್‌ಆನ್ ಹೇಳುತ್ತದೆ (6:164). ಪೈಗಂಬರರಿಗೆ ಅನ್ವಯವಾಗದ ಸಂಬೋಧನೆಗಳು ಖುರ್‌ಆನಿನಲ್ಲಿ ಬೇರೆಯೂ ಇವೆ. ಉದಾಹರಣೆಗೆ, ಮಾತಪಿತರೊಡನೆ ಮಕ್ಕಳು ತೋರಿಸಬೇಕಾದ ಕರ್ತವ್ಯಗಳ ಬಗ್ಗೆ ಆಜ್ಞೆಗಳು ಖುರ್‌ಆನಿನ 17:24,25ರಲ್ಲಿ ನೀಡಲ್ಪಟ್ಟಿವೆ. ಅಲ್ಲಿ ಸಹ ಏಕ ವಚನದಲ್ಲಿ ಪೈಗಂಬರರನ್ನು ಸಂಬೋಧಿಸಲಾಗಿದೆ ಎಂಬುದು ಗಮನಾರ್ಹ.





**101. ಅಲ್ಲಾಹನ ಅನುಮತಿ ವಿನಾ ಯಾರಿಗೂ ವಿಶ್ವಾಸಹೊಂದಲು ಸಾಧ್ಯವಿಲ್ಲ. ಬುದ್ಧಿಯನ್ನು ಉಪಯೋಗಿಸದವರ ಮೇಲೆ ಅವನು ತನ್ನ ಕ್ರೋಧವನ್ನು ಇಳಿಸುತ್ತಾನೆ.**

وَمَا كَانَ لِنَفْسٍ أَن تُؤْمِنَ إِلَّا بِإِذْنِ ٱللَّهِ ۚ وَيَجْعَلُ ٱلرِّجْسَ عَلَى ٱلَّذِينَ لَا يَعْقِلُونَ ﴿١٠١﴾

**102. ಹೇಳು: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಏನು** (ಸಂಭವಿಸುತ್ತದೆ) **ಎಂದು ನೋಡಿರಿ.' ಆದರೆ ಅವಿಶ್ವಾಸಿಗಳಿಗೆ ದೃಷ್ಟಾಂತಗಳೂ ಮುನ್ನೆಚ್ಚರಿಕೆಗಳೂ ಯಾವ ಪ್ರಯೋಜನಕ್ಕೂ ಬರಲಾರವು.'**

قُلِ ٱنظُرُوا۟ مَاذَا فِى ٱلسَّمَٰوَٰتِ وَٱلْأَرْضِ ۚ وَمَا تُغْنِى ٱلْءَايَٰتُ وَٱلنُّذُرُ عَن قَوْمٍ لَّا يُؤْمِنُونَ ﴿١٠٢﴾

**103. ಏನು, ಅವರಿಗೆ ಮುಂಚೆ ಗತಿಸಿದವರಿಗೆ ಬಂದ** (ಶಿಕ್ಷೆಯ) **ದಿನಗಳಂತಹವು ಹೊರತು ಅವರು ಬೇರೇನನ್ನಾದರೂ ನಿರೀಕ್ಷಿಸುತ್ತಾರೆಯೇ? ಹೇಳು: 'ನೀವು ನಿರೀಕ್ಷಿಸಿರಿ; ನಾನು ಸಹ ನಿಮ್ಮೊಂದಿಗೆ ನಿರೀಕ್ಷಿಸುತ್ತಿರುತ್ತೇನೆ.'**

فَهَلْ يَنتَظِرُونَ إِلَّا مِثْلَ أَيَّامِ ٱلَّذِينَ خَلَوْا۟ مِن قَبْلِهِمْ ۚ قُلْ فَٱنتَظِرُوٓا۟ إِنِّى مَعَكُم مِّنَ ٱلْمُنتَظِرِينَ ﴿١٠٣﴾

**104.** (ಆ ಶಿಕ್ಷೆಯ) **ಅನಂತರ ನಾವು ನಮ್ಮ ಸಂದೇಶವಾಹಕರನ್ನೂ ವಿಶ್ವಾಸಿಗಳನ್ನೂ ರಕ್ಷಿಸುವೆವು. ಹೀಗೆಯೇ ಯಾವಾಗಲೂ ಸಂಭವಿಸುವುದು. ಸತ್ಯವಿಶ್ವಾಸಿಗಳನ್ನು ರಕ್ಷಿಸುವುದು ನಮ್ಮ ಕರ್ತವ್ಯವಾಗಿದೆ.**

ثُمَّ نُنَجِّى رُسُلَنَا وَٱلَّذِينَ ءَامَنُوا۟ ۚ كَذَٰلِكَ حَقًّا عَلَيْنَا نُنجِ ٱلْمُؤْمِنِينَ ﴿١٠٤﴾

**105. ಹೇಳು: 'ಎಲೈ ಜನರೇ, ನನ್ನ ಧರ್ಮದ ಕುರಿತು ನೀವು ಸಂಶಯಗ್ರಸ್ತರಾಗಿದ್ದರೆ** (ತಿಳಿದುಕೊಳ್ಳಿರಿ), **ಅಲ್ಲಾಹನನ್ನು ಬಿಟ್ಟು ನೀವು ಆರಾಧಿಸುವ ಯಾರನ್ನೂ ನಾನು ಆರಾಧಿಸುವುದಿಲ್ಲ. ಆದರೆ ನಿಮ್ಮನ್ನು ಮೃತಪಡಿಸುವ ಅಲ್ಲಾಹನನ್ನು** (ಮಾತ್ರ) **ನಾನು ಆರಾಧಿಸುತ್ತೇನೆ. ಸತ್ಯವಿಶ್ವಾಸಿಗಳಲ್ಲಿ ಸೇರಿದವನಾಗಲಿಕ್ಕೆ ನನ್ನೊಡನೆ ಆಜ್ಞಾಪಿಸಲಾಗಿದೆ.'**

قُلْ يَٰٓأَيُّهَا ٱلنَّاسُ إِن كُنتُمْ فِى شَكٍّ مِّن دِينِى فَلَآ أَعْبُدُ ٱلَّذِينَ تَعْبُدُونَ مِن دُونِ ٱللَّهِ وَلَٰكِنْ أَعْبُدُ ٱللَّهَ ٱلَّذِى يَتَوَفَّىٰكُمْ ۖ وَأُمِرْتُ أَنْ أَكُونَ مِنَ ٱلْمُؤْمِنِينَ ﴿١٠٥﴾

**106. 'ನಿನ್ನ ಉದ್ದೇಶವನ್ನು ಧರ್ಮಕ್ಕಾಗಿ ಸ್ಥಿರಪಡಿಸಿ,** (ಅಲ್ಲಾಹನ ಕಡೆಗೆ) **ಸದಾಕಾಲ ಬಾಗುವವನಾಗು ಮತ್ತು ಅವನಿಗೆ ಸಹಭಾಗಿಗಳನ್ನು ಕಲ್ಪಿಸುವವರಲ್ಲಿ ಸೇರಿದವನಾ ಗಬೇಡ** (ಎಂದು ಸಹ ನಾನು ಆಜ್ಞಾಪಿಸಲ್ಪಟ್ಟಿದ್ದೇನೆ).'

وَأَنْ أَقِمْ وَجْهَكَ لِلدِّينِ حَنِيفًا وَلَا تَكُونَنَّ مِنَ ٱلْمُشْرِكِينَ ﴿١٠٦﴾

**107.** ಅಲ್ಲಾಹನ ಹೊರತು, ನಿನಗೆ ಉಪಕಾರವನ್ನಾಗಲಿ ಉಪದ್ರವನ್ನಾಗಲಿ ಮಾಡದ ಏನನ್ನೂ ನೀನು ಕರೆದು ಪ್ರಾರ್ಥಿಸಬಾರದು. ಹಾಗೇನಾದರೂ ನೀನು ಮಾಡಿದ ಪಕ್ಷದಲ್ಲಿ ಖಂಡಿತವಾಗಿಯೂ ನೀನು ಅಧರ್ಮಿಗಳಲ್ಲಿ ಸೇರಿದವನಾಗುವೆ.

وَلَا تَدْعُ مِن دُونِ اللَّهِ مَا لَا يَنفَعُكَ
وَلَا يَضُرُّكَ ۖ فَإِن فَعَلْتَ فَإِنَّكَ إِذًا
مِّنَ الظَّالِمِينَ ﴿١٠٧﴾

**108.** ಅಲ್ಲಾಹನು ನಿನಗೇನಾದರೂ ಹಾನಿ ಮಾಡುವ ಪಕ್ಷದಲ್ಲಿ ಅವನ ಹೊರತು ಅದನ್ನು ನಿವಾರಿಸುವವನಿಲ್ಲ. ಹಾಗೆಯೇ, ಅವನು ನಿನಗೇನಾದರೂ ಒಳಿತನ್ನು ಬಯಸಿದ ಪಕ್ಷದಲ್ಲಿ ಅವನ ಅನುಗ್ರಹವನ್ನು ತಡೆಯುವವರು ಕೂಡ ಯಾರೂ ಇಲ್ಲ. ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅದನ್ನು ಅವನು ಒದಗಿಸಿಕೊಡುತ್ತಾನೆ. ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَإِن يَمْسَسْكَ اللَّهُ بِضُرٍّ فَلَا كَاشِفَ
لَهُ إِلَّا هُوَ ۖ وَإِن يُرِدْكَ بِخَيْرٍ فَلَا رَادَّ
لِفَضْلِهِ ۚ يُصِيبُ بِهِ مَن يَشَاءُ مِنْ
عِبَادِهِ ۚ وَهُوَ الْغَفُورُ الرَّحِيمُ ﴿١٠٨﴾

**109.** ಹೇಳು: 'ಎಲ್ಲೈ ಜನರೇ, ನಿಮ್ಮ ಪ್ರಭುವಿನ ಕಡೆಯಿಂದ ನಿಮಗೆ ಸತ್ಯ ಬಂದಿರುತ್ತದೆ. ಯಾರಾದರೂ ಸತ್ಪಥವನ್ನು ಅನುಸರಿಸುವವನಾದರೆ ಅವನು ತನ್ನ ಒಳಿತಿಗಾಗಿಯೇ ಸತ್ಪಥವನ್ನು ಅನುಸರಿಸುತ್ತಾನೆ. ಯಾರಾದರೂ ದಾರಿತಪ್ಪಿ ಹೋಗುವವನಾದರೆ, ತನಗೆ ಹಾನಿಕರವಾಗಿ ಯೇ ಅವನು ದಾರಿತಪ್ಪುತ್ತಾನೆ. ನಾನು ನಿಮ್ಮ ಮೇಲ್ನೋಟಗಾರನಲ್ಲ.'

قُلْ يَا أَيُّهَا النَّاسُ قَدْ جَاءَكُمُ الْحَقُّ
مِن رَّبِّكُمْ ۖ فَمَنِ اهْتَدَىٰ فَإِنَّمَا
يَهْتَدِي لِنَفْسِهِ ۖ وَمَن ضَلَّ فَإِنَّمَا
يَضِلُّ عَلَيْهَا ۖ وَمَا أَنَا عَلَيْكُم بِوَكِيلٍ ﴿١٠٩﴾

**110.** ನಿನಗೆ ಅವತೀರ್ಣವಾದುದನ್ನು ನೀನು ಅನುಸರಿಸು. ಅಲ್ಲಾಹನು ತೀರ್ಮಾನ ಮಾಡುವ ತನಕ ನೀನು ಸಹನೆದೋರು. ಅವನು ನ್ಯಾಯಾಧಿಪತಿಗಳಲ್ಲಿ ಅತ್ಯುತ್ತಮನು.

وَاتَّبِعْ مَا يُوحَىٰ إِلَيْكَ وَاصْبِرْ حَتَّىٰ
يَحْكُمَ اللَّهُ ۚ وَهُوَ خَيْرُ الْحَاكِمِينَ ﴿١١٠﴾

سُوْرَةُ هُوْدٍ مَّكِّيَّةٌ وَّهِيَ مَعَ الْبَسْمَلَةِ مِائَةٌ وَّاَرْبَعٌ وَّعِشْرُوْنَ اٰيَةً وَّعَشَرَةُ رُكُوْعَاتٍ

# 11. ಹೂದ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 124 ಆಯತ್‌ಗಳು ಹಾಗೂ 10 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

الٓرٰ ۚ كِتٰبٌ اُحْكِمَتْ اٰيٰتُهٗ ثُمَّ فُصِّلَتْ مِنْ لَّدُنْ حَكِيْمٍ خَبِيْرٍ ②

**2. ಅಲಿಫ್ ಲಾಮ್ ರಾ.[289] ಇದೊಂದು ಗ್ರಂಥವಾಗಿದೆ. ಇದರ ಸೂಕ್ತಗಳು ಸುದೃಢಗೊಳಿಸಲ್ಪಟ್ಟಿವೆ ಹಾಗೂ ಅವುಗಳು ಸುಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ. ಇದು ವಿವೇಕ ಶಾಲಿಯೂ ಸರ್ವಜ್ಞನೂ ಆದ ಅಲ್ಲಾಹನಿಂದ** (ಅವತೀರ್ಣವಾದುದಾಗಿದೆ).

اَلَّا تَعْبُدُوْٓا اِلَّا اللّٰهَ ۚ اِنَّنِيْ لَكُمْ مِّنْهُ نَذِيْرٌ وَّبَشِيْرٌ ③

**3. ನೀವು ಅಲ್ಲಾಹನ ಹೊರತು ಬೇರೆ ಯಾರನ್ನೂ ಆರಾಧಿಸಬಾರದು** (ಎಂದು ಅದು ಕಲಿಸುತ್ತದೆ). **ನಾನು ಅವನ ಕಡೆಯಿಂದ ನಿಮಗೋಸ್ಕರ ಮುನ್ನೆಚ್ಚರಿಕೆ ಕೊಡುವವನೂ ಶುಭವಾರ್ತೆ ನೀಡುವವನೂ ಆಗಿದ್ದೇನೆ.**

وَّاَنِ اسْتَغْفِرُوْا رَبَّكُمْ ثُمَّ تُوْبُوْٓا اِلَيْهِ يُمَتِّعْكُمْ مَّتَاعًا حَسَنًا اِلٰٓى اَجَلٍ مُّسَمًّى وَّيُؤْتِ كُلَّ ذِيْ فَضْلٍ فَضْلَهٗ ۚ وَاِنْ تَوَلَّوْا فَاِنِّيْٓ اَخَافُ عَلَيْكُمْ عَذَابَ يَوْمٍ كَبِيْرٍ ④

**4. ನಿಮ್ಮ ಪ್ರಭುವಿನಿಂದ ನೀವು ಕ್ಷಮೆ ಯಾಚಿಸಿರಿ ಮತ್ತು ಪಶ್ಚಾತ್ತಾಪಪಟ್ಟು ಅವನೆಡೆಗೆ ಮರಳಿರಿ ಎಂದು ಸಹ** ಅದು ಉಪದೇಶಿಸುತ್ತದೆ. **ಒಂದು ನಿಶ್ಚಿತ ಕಾಲಾವಧಿವರೆಗೆ ನಿಮಗೆ ಅವನು ಉತ್ತಮ ಸುಖ ಸೌಕರ್ಯಗಳನ್ನು ಕೊಡುತ್ತಾನೆ ಮತ್ತು ಅರ್ಹತೆಯುಳ್ಳ ಪ್ರತಿಯೊಬ್ಬರಿಗೂ ಅವನು ತನ್ನ ಅನುಗ್ರಹಗಳನ್ನು ನೀಡುತ್ತಾನೆ. ನೀವು ಬೆನ್ನು ತಿರುಗಿಸಿ ಹೋಗುವ ಪಕ್ಷದಲ್ಲಿ ನಿಮ್ಮ ಮೇಲೆ ಒಂದು ಭಯಾನಕ ಶಿಕ್ಷೆ ಎರಗುವ ದಿನದ ಬಗ್ಗೆ ನಾನು ಭಯಪಡುತ್ತೇನೆ.**

اِلَى اللّٰهِ مَرْجِعُكُمْ ۚ وَهُوَ عَلٰى كُلِّ شَيْءٍ قَدِيْرٌ ⑤

**5. ನಿಮ್ಮ ಮರಳಿಕೆ ಅಲ್ಲಾಹನ ಬಳಿಗೆಯೇ ಆಗಿದೆ. ಅವನು ಸರ್ವಸಾಮರ್ಥ್ಯವುಳ್ಳವನಾಗಿದ್ದಾನೆ.**

289. "ಅನ ಅಲ್ಲಾಹು ಅರಾ" - ನಾನು ಅಲ್ಲಾಹ್ ಎಲ್ಲವನ್ನೂ ಕಾಣುತ್ತೇನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ).





اَلَآ اِنَّهُمْ يَثْنُوْنَ صُدُوْرَهُمْ لِيَسْتَخْفُوْا مِنْهُ ۚ اَلَا حِيْنَ يَسْتَغْشُوْنَ ثِيَابَهُمْ ۙ يَعْلَمُ مَا يُسِرُّوْنَ وَمَا يُعْلِنُوْنَ ۚ اِنَّهٗ عَلِيْمٌۢ بِذَاتِ الصُّدُوْرِ ⑥

**6. ಕೇಳಿರಿ, ಖಂಡಿತವಾಗಿಯೂ ಅವನಿಂದ** (ಅಲ್ಲಾಹನಿಂದ) **ಮರೆಮಾಚಲಿಕ್ಕಾಗಿ[290] ಅವರು ತಮ್ಮ ಎದೆಗಳನ್ನು ಮುದುಡಿಕೊಳ್ಳುತ್ತಾರೆ. ತಿಳಿದುಕೊಳ್ಳಿರಿ, ಅವರು ತಮ್ಮ ವಸ್ತ್ರಗಳಿಂದ ತಮ್ಮನ್ನು ಮುಚ್ಚಿಕೊಳ್ಳುವ ಸಂದರ್ಭದಲ್ಲಿ ಸಹ ಅವರು ಬಚ್ಚಿಡುವುದನ್ನೂ ಬಯಲು ಮಾಡುವುದನ್ನೂ ಅವನು ತಿಳಿಯುತ್ತಾನೆ. ನಿಶ್ಚಯವಾಗಿಯೂ ಅವನು ಹೃದಯಗಳೊಳಗಿನ ವಿಚಾರಗಳನ್ನೆಲ್ಲ ಚೆನ್ನಾಗಿ ಬಲ್ಲವನಾಗಿದ್ದಾನೆ.**

وَمَا مِنْ دَآبَّةٍ فِي الْاَرْضِ اِلَّا عَلَى اللّٰهِ رِزْقُهَا وَيَعْلَمُ مُسْتَقَرَّهَا وَمُسْتَوْدَعَهَا ۚ كُلٌّ فِيْ كِتٰبٍ مُّبِيْنٍ ⑦

**7. ಅಲ್ಲಾಹನು ಆಹಾರ ಒದಗಿಸಲು ಹೊಣೆವಹಿಸದ ಯಾವುದೇ ಜೀವಿ ಭೂಮಿಯಲ್ಲಿಲ್ಲ. ಅದರ ತಾತ್ಕಾಲಿಕ ವಾಸಸ್ಥಳವನ್ನೂ ಶಾಶ್ವತ ವಾಸಸ್ಥಳವನ್ನೂ ಅವನು ಬಲ್ಲನು. ಎಲ್ಲವೂ ಸ್ಪಷ್ಟವಾದೊಂದು ಗ್ರಂಥದಲ್ಲಿ ದಾಖಲಿಸಲ್ಪಟ್ಟಿವೆ.**

وَهُوَ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ وَّكَانَ عَرْشُهٗ عَلَى الْمَآءِ لِيَبْلُوَكُمْ اَيُّكُمْ اَحْسَنُ عَمَلًا ۚ وَلَئِنْ قُلْتَ اِنَّكُمْ مَّبْعُوْثُوْنَ مِنْۢ بَعْدِ الْمَوْتِ لَيَقُوْلَنَّ الَّذِيْنَ كَفَرُوْٓا اِنْ هٰذَآ اِلَّا سِحْرٌ مُّبِيْنٌ ⑧

**8. ಅವನು ಆಕಾಶಗಳನ್ನೂ ಭೂಮಿಯನ್ನೂ ಆರು ಘಟ್ಟಗಳಲ್ಲಿ ಸೃಷ್ಟಿಸಿದವನಾಗಿದ್ದಾನೆ. ಅವನ ಸಿಂಹಾಸನ ಜಲದ[291] ಮೇಲಿದೆ - ನಿಮ್ಮ ಪೈಕಿ ಅತ್ಯುತ್ತಮವಾಗಿ ವರ್ತಿಸುವವನು ಯಾರೆಂದು ವೀಕ್ಷಿಸಲಿಕ್ಕಾಗಿ. 'ಮರಣಾನಂತರ ನೀವು ಖಂಡಿತವಾಗಿಯೂ ಎಬ್ಬಿಸಲ್ಪಡುವಿರಿ' ಎಂದು ನೀನು ಅವರೊಡನೆ ಹೇಳಿದರೆ, 'ನಿಶ್ಚಯವಾಗಿಯೂ ಇದು ಸ್ಪಷ್ಟವಾದೊಂದು ಮೋಸವಾಗಿದೆ' ಎಂದು ಅವಿಶ್ವಾಸಿಗಳು ಹೇಳುವರು.**

وَلَئِنْ اَخَّرْنَا عَنْهُمُ الْعَذَابَ اِلٰٓى اُمَّةٍ مَّعْدُوْدَةٍ لَّيَقُوْلُنَّ مَا يَحْبِسُهٗ ۚ اَلَا يَوْمَ يَاْتِيْهِمْ لَيْسَ مَصْرُوْفًا عَنْهُمْ وَحَاقَ بِهِمْ مَّا كَانُوْا بِهٖ يَسْتَهْزِءُوْنَ ⑨

**9. ಒಂದು ನಿರ್ದಿಷ್ಟ ಕಾಲದವರೆಗೆ ನಾವು ಶಿಕ್ಷೆಯನ್ನು ತಡೆದಿಟ್ಟರೆ ಖಂಡಿತವಾಗಿಯೂ ಅವರು 'ಅದನ್ನು ತಡೆದಿಟ್ಟದ್ದು ಏಕೆ?' ಎಂದು ಕೇಳುವರು. ತಿಳಿದುಕೊಳ್ಳಿರಿ, ಅದು ಬಂದೆರಗುವ ದಿನ ಅವರಿಂದ ಅದು ತೊಲಗಿಸಲ್ಪಡಲಾರದು ಹಾಗೂ ಅವರು ಪರಿಹಾಸ್ಯ ಮಾಡುತ್ತಿದ್ದುದು ಅವರನ್ನು ಸುತ್ತುವರಿಯುವುದು.**

290. ಮನಸ್ಸಿನಲ್ಲಿರುವ ವಿಚಾರಗಳನ್ನು ಮರೆಮಾಚಲಿಕ್ಕಾಗಿ ಎಂದು ತಾತ್ಪರ್ಯ.

291. ಸಿಂಹಾಸನವೆಂದರೆ ಆಧಿಪತ್ಯವೆಂದು ತಾತ್ಪರ್ಯ. ಜಲ ಎಂಬ ಪದ ಪವಿತ್ರ ಖುರ್‌ಆನಿನಲ್ಲಿ ವಹ್ಯ್ (ದೈವಿಕ ಸಂದೇಶ) ಎಂಬರ್ಥದಲ್ಲಿ ಸಹ ಪ್ರಯೋಗಿಸಲ್ಪಟ್ಟಿದೆ. ಅಲ್ಲಾಹನ ಆಧ್ಯಾತ್ಮಿಕ ಆಧಿಪತ್ಯದ ನಿಯಮಗಳನ್ನು ವಹ್ಯ್ ಮೂಲಕ ಅವನು ಜಾರಿಗೊಳಿಸುತ್ತಾನೆಂದು ಈ ವಚನದ ತಾತ್ಪರ್ಯವಾಗಿದೆ. ಭೌತಿಕ ಜಲದ ಮೇಲೆ ಭೌತಿಕ ಸಿಂಹಾಸನ ಎಂಬುದು ಇದರ ಅರ್ಥವಲ್ಲ. "ಅವನಿಗೆ ಸಮಾನವಾಗಿ ಏನೂ ಇಲ್ಲ" ಎಂಬ ಖುರ್‌ಆನ್ ವಾಕ್ಯ (42 : 12) ಇದಕ್ಕೆ ಆಧಾರವಾಗಿದೆ.

**10.** ಮನುಷ್ಯನು ನಮ್ಮಿಂದ ಕಾರುಣ್ಯಕ್ಕೆ ಒಳಗಾಗಿ, ಅನಂತರ ನಾವು ಅವನಿಂದ ಅದನ್ನು ತೆಗೆದುಬಿಟ್ಟರೆ ಖಂಡಿತವಾಗಿಯೂ ಅವನು ನಿರಾಶೆಗೊಂಡು ಕೃತಘ್ನನಾಗುತ್ತಾನೆ.

وَلَئِنْ اَذَقْنَا الْاِنْسَانَ مِنَّا رَحْمَةً ثُمَّ نَزَعْنٰهَا مِنْهُ ۚ اِنَّهٗ لَيَئُوْسٌ كَفُوْرٌ ﴿١٠﴾

**11.** ಒಂದು ವಿಪತ್ತಿಗೆ ಗುರಿಯಾದ ಬಳಿಕ ನಾವು ಅವನಿಗೆ ಸುಖ ಸೌಕರ್ಯಗಳನ್ನು ಅನುಗ್ರಹಿಸಿದರೆ, 'ನನ್ನಿಂದ (ಎಲ್ಲ) ಸಂಕಷ್ಟಗಳೂ ದೂರವಾಗಿವೆ' ಎಂದು ಅವನು ಖಂಡಿತವಾಗಿಯೂ ಹೇಳುವನು. ನಿಶ್ಚಯವಾಗಿಯೂ ಅವನು ಮದೋನ್ಮತ್ತನೂ ದುರಂಹಕಾರಿಯೂ ಆಗಿದ್ದಾನೆ.

وَلَئِنْ اَذَقْنٰهُ نَعْمَآءَ بَعْدَ ضَرَّآءَ مَسَّتْهُ لَيَقُوْلَنَّ ذَهَبَ السَّيِّاٰتُ عَنِّيْ ۚ اِنَّهٗ لَفَرِحٌ فَخُوْرٌ ﴿١١﴾

**12.** ಸ್ಥಿರಚಿತ್ತರಾಗಿದ್ದುಕೊಂಡು ಸತ್ಕರ್ಮ ನಿರತರಾದವರು ಇದಕ್ಕೆ ಹೊರತಾಗಿರುವರು. ಅವರಿಗೆ ಕ್ಷಮಾದಾನವೂ ಮಹತ್ತಾದ ಪ್ರತಿಫಲವೂ ಇದೆ.

اِلَّا الَّذِيْنَ صَبَرُوْا وَعَمِلُوا الصّٰلِحٰتِ ۗ اُولٰٓئِكَ لَهُمْ مَّغْفِرَةٌ وَّاَجْرٌ كَبِيْرٌ ﴿١٢﴾

**13.** 'ಅವನಿಗೆ ಒಂದು ನಿಧಿ ಏಕೆ ಇಳಿಸಲ್ಪಡಲಿಲ್ಲ? ಅಥವಾ ಅವನೊಂದಿಗೆ ಓರ್ವ ದೇವದೂತ ಏಕೆ ಬರಲಿಲ್ಲ?' ಎಂದು ಅವರು (ಅವಿಶ್ವಾಸಿಗಳು) ಕೇಳುವ ಕಾರಣದಿಂದ ನಿನ್ನ ಹೃದಯ ತಲ್ಲಣಗೊಂಡು, ನಿನಗೆ ಅವತೀರ್ಣವಾದುದರಲ್ಲಿ ಕೆಲವನ್ನು ನೀನು ಬಿಟ್ಟುಬಿಡುವೆಯಾ? ನೀನು ಒಬ್ಬ ಮುನ್ನೆಚ್ಚರಿಕೆಗಾರ ಮಾತ್ರವಾಗಿರುವೆ. ಸರ್ವ ಸಂರಕ್ಷಕನು ಅಲ್ಲಾಹನೇ ಆಗಿದ್ದಾನೆ.

فَلَعَلَّكَ تَارِكٌۢ بَعْضَ مَا يُوْحٰٓى اِلَيْكَ وَضَآئِقٌۢ بِهٖ صَدْرُكَ اَنْ يَّقُوْلُوْا لَوْلَآ اُنْزِلَ عَلَيْهِ كَنْزٌ اَوْ جَآءَ مَعَهٗ مَلَكٌ ۗ اِنَّمَآ اَنْتَ نَذِيْرٌ ۗ وَاللّٰهُ عَلٰى كُلِّ شَيْءٍ وَّكِيْلٌ ﴿١٣﴾

**14.** 'ಅದು ಅವನೇ ರಚಿಸಿದ್ದು' ಎಂದು ಅವರು ಹೇಳುತ್ತಾರೆಯೇ? ಹೇಳು: 'ನೀವು ಸತ್ಯವಂತರೆಂದಾದರೆ, ಅಂತಹ ಹತ್ತು ಅಧ್ಯಾಯಗಳನ್ನು ರಚಿಸಿ ತನ್ನಿರಿ. ಅಲ್ಲಾಹನನ್ನು ಬಿಟ್ಟು ಯಾರನ್ನೆಲ್ಲ ನಿಮಗೆ (ಸಹಾಯಕ್ಕಾಗಿ) ಕರೆಯಲು ಸಾಧ್ಯವಿದೆಯೋ ಅವರನ್ನೆಲ್ಲ ನೀವು ಕರೆದುಕೊಳ್ಳಿರಿ.'

اَمْ يَقُوْلُوْنَ افْتَرٰىهُ ۗ قُلْ فَاْتُوْا بِعَشْرِ سُوَرٍ مِّثْلِهٖ مُفْتَرَيٰتٍ وَّادْعُوْا مَنِ اسْتَطَعْتُمْ مِّنْ دُوْنِ اللّٰهِ اِنْ كُنْتُمْ صٰدِقِيْنَ ﴿١٤﴾

**15.** ಆಗ ಅವರು ನಿಮಗೆ ಉತ್ತರ ನೀಡದಿದ್ದರೆ, ಇದು ಖಂಡಿತವಾಗಿಯೂ ಅಲ್ಲಾಹನ ಜ್ಞಾನವನ್ನೊಳಗೊಂಡು ಮಾತ್ರವೇ ಅವತೀರ್ಣಗೊಂಡಿದೆಯೆಂದೂ ಅವನ ಹೊರತು ಬೇರೆ ಆರಾಧ್ಯನಿಲ್ಲವೆಂದೂ ತಿಳಿದುಕೊಳ್ಳಿರಿ. ಏನು ನೀವು ಅನುಸರಣೆಯುಳ್ಳವರಾಗುವಿರೋ?

فَاِلَّمْ يَسْتَجِيْبُوْا لَكُمْ فَاعْلَمُوْٓا اَنَّمَآ اُنْزِلَ بِعِلْمِ اللّٰهِ وَاَنْ لَّآ اِلٰهَ اِلَّا هُوَ ۚ فَهَلْ اَنْتُمْ مُّسْلِمُوْنَ ﴿١٥﴾





**16.** ಐಹಿಕ ಜೀವನವನ್ನೂ ಅದರ ವೈಭವವನ್ನೂ ಯಾರು ಆಶಿಸುತ್ತಾರೋ ಅವರಿಗೆ ತಮ್ಮ ಕರ್ಮಗಳ ಫಲವನ್ನು ಪೂರ್ಣವಾಗಿ ನಾವು ಇಲ್ಲೇ ಕೊಟ್ಟು ಬಿಡುತ್ತೇವೆ. ಅವರಿಗೆ ಅದರಲ್ಲಿ ಏನೂ ಕೊರತೆಯನ್ನುಂಟು ಮಾಡುವುದಿಲ್ಲ.

مَنْ كَانَ يُرِيْدُ الْحَيٰوةَ الدُّنْيَا وَزِيْنَتَهَا نُوَفِّ اِلَيْهِمْ اَعْمَالَهُمْ فِيْهَا وَهُمْ فِيْهَا لَا يُبْخَسُوْنَ ﴿١٦﴾

**17.** ಅವರು ಪರಲೋಕದಲ್ಲಿ ಅಗ್ನಿ ಹೊರತು ಬೇರೇನೂ ಗಳಿಸದವರು. ಇಲ್ಲಿ (ಇಹಲೋಕದಲ್ಲಿ) ಅವರು ಮಾಡಿದುದೆಲ್ಲ ಅಳಿದು ಹೋಗುವುವು. ಅವರು ಮಾಡಿದ್ದೆಲ್ಲವೂ ನಿಷ್ಪ್ರಯೋಜಕ.

اُولٰٓئِكَ الَّذِيْنَ لَيْسَ لَهُمْ فِي الْاٰخِرَةِ اِلَّا النَّارُ ۖ وَحَبِطَ مَا صَنَعُوْا فِيْهَا وَبٰطِلٌ مَّا كَانُوْا يَعْمَلُوْنَ ﴿١٧﴾

**18.** ಯಾರು ತನ್ನ ಪ್ರಭುವಿನಿಂದ ಸ್ಪಷ್ಟವಾದೊಂದು ಸಾಕ್ಷ್ಯಾಧಾರವನ್ನು ಹೊಂದಿದ್ದು, ನಂತರ ಅವನಿಂದ (ಅಲ್ಲಾಹನಿಂದ) ಓರ್ವ ಸಾಕ್ಷಿ ಬರಲಿದ್ದು[292] ಮತ್ತು ಆತನಿಗೆ ಮುಂಚಿತವಾಗಿ ಮೂಸಾರ ಗ್ರಂಥ ಮಾರ್ಗದರ್ಶಕವಾಗಿಯೂ ಕೃಪೆಯಾಗಿಯೂ ಇರುವಾಗ *ಅಂತಹ ವ್ಯಕ್ತಿ ಮಿಥ್ಯವಾದಿಯಾಗಿರಲು ಸಾಧ್ಯವೇ?* ಅವರು (ಈ ವಿಚಾರಗಳನ್ನು ಮನಗಾಣುವವರು) ಆತನನ್ನು (ಪ್ರವಾದಿ ಯನ್ನು) ನಂಬುತ್ತಾರೆ. ಜನಕೂಟದಲ್ಲಿ ಯಾರಾದರೂ ಆತನನ್ನು ನಂಬದಿದ್ದರೆ, ನರಕಾಗ್ನಿಯು ಅವನ ವಾಗ್ದತ್ತ ಸ್ಥಾನವಾಗಿದೆ. ಆದ್ದರಿಂದ ತತ್ಸಂಬಂಧವಾಗಿ ನೀನು ಸಂಶಯಪಡಬೇಡ. ಅದು ನಿನ್ನ ಪ್ರಭುವಿನಿಂದ ಬಂದ ಸತ್ಯವಾಗಿದೆ. ಆದರೆ ಹೆಚ್ಚಿನ ಜನರು ನಂಬುವುದಿಲ್ಲ.

اَفَمَنْ كَانَ عَلٰى بَيِّنَةٍ مِّنْ رَّبِّهٖ وَيَتْلُوْهُ شَاهِدٌ مِّنْهُ وَمِنْ قَبْلِهٖ كِتٰبُ مُوْسٰٓى اِمَامًا وَّرَحْمَةً ۗ اُولٰٓئِكَ يُؤْمِنُوْنَ بِهٖ ۗ وَمَنْ يَّكْفُرْ بِهٖ مِنَ الْاَحْزَابِ فَالنَّارُ مَوْعِدُهٗ ۚ فَلَا تَكُ فِيْ مِرْيَةٍ مِّنْهُ ۚ اِنَّهُ الْحَقُّ مِنْ رَّبِّكَ وَلٰكِنَّ اَكْثَرَ النَّاسِ لَا يُؤْمِنُوْنَ ﴿١٨﴾

**19.** ಅಲ್ಲಾಹನ ನಾಮದಲ್ಲಿ ಸುಳ್ಳನ್ನು ಸೃಷ್ಟಿಸುವವನಿಗಿಂತ ದೊಡ್ಡ ದುಷ್ಟನು ಬೇರೆ ಯಾರು? ಅಂತಹವರನ್ನು ಅವರ ಪ್ರಭುವಿನ ಸನ್ನಿಧಿಯಲ್ಲಿ ಹಾಜರುಗೊಳಿಸಲಾಗುವುದು. 'ತಮ್ಮ ಪ್ರಭುವಿನ ಮೇಲೆ ಸುಳ್ಳು ಹೊರಿ

وَمَنْ اَظْلَمُ مِمَّنِ افْتَرٰى عَلَى اللّٰهِ كَذِبًا ۗ اُولٰٓئِكَ يُعْرَضُوْنَ عَلٰى رَبِّهِمْ وَيَقُوْلُ الْاَشْهَادُ هٰٓؤُلَآءِ الَّذِيْنَ كَذَبُوْا عَلٰى رَبِّهِمْ ۚ

292. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ನಂತರ ಆಗಮಿಸಲಿರುವ ವಾಗ್ದತ್ತ ಮಸೀಹರ ಕುರಿತು ಇಲ್ಲಿ ಸೂಚಿಸಲಾಗಿದೆ.

أَلَا لَعْنَةُ اللَّهِ عَلَى الظَّالِمِينَ ﴿١٩﴾

**ಸಿದ್ದು ಇವರೇ' ಎಂದು ಸಾಕ್ಷಿಗಳು ಹೇಳುವರು. ತಿಳಿದು ಕೊಳ್ಳಿರಿ,** (ಅಂತಹ) **ದುಷ್ಟರ ಮೇಲೆ ಅಲ್ಲಾಹನ ಶಾಪ ವಿದೆ.**

الَّذِينَ يَصُدُّونَ عَنْ سَبِيلِ اللَّهِ وَيَبْغُونَهَا عِوَجًا وَهُمْ بِالْآخِرَةِ هُمْ كَافِرُونَ ﴿٢٠﴾

**20. ಅವರು ಅಲ್ಲಾಹನ ಮಾರ್ಗದಿಂದ** (ಜನರನ್ನು) **ತಡೆಯುವವರೂ ಆ ಮಾರ್ಗವನ್ನು ವಕ್ರವಾಗಿ ಮಾಡಲು ಬಯಸುವವರೂ ಆಗಿದ್ದಾರೆ. ಅವರು ಪರಲೋಕದ ಬಗ್ಗೆ ಅವಿಶ್ವಾಸಹೊಂದಿದವರೂ ಆಗಿದ್ದಾರೆ.**

أُولَٰئِكَ لَمْ يَكُونُوا مُعْجِزِينَ فِي الْأَرْضِ وَمَا كَانَ لَهُمْ مِنْ دُونِ اللَّهِ مِنْ أَوْلِيَاءَ ۘ يُضْعَفُ لَهُمُ الْعَذَابُ ۚ مَا كَانُوا يَسْتَطِيعُونَ السَّمْعَ وَمَا كَانُوا يُبْصِرُونَ ﴿٢١﴾

**21. ಭೂಮಿಯಲ್ಲಿ** (ದೈವಿಕ ಯೋಜನೆಗಳನ್ನು) **ಪರಾಭವಗೊಳಿಸಲು ಅವರಿಗೆ ಸಾಧ್ಯವಿಲ್ಲ. ಅಲ್ಲಾಹನ ಹೊರತು ಅವರಿಗೆ ಬೇರೆ ಯಾರೂ ರಕ್ಷಕರಾಗಿ ಇರಲಾರರು. ಅವರಿಗೆ ಶಿಕ್ಷೆ ಇಮ್ಮಡಿ ಗೊಳಿಸಲಾಗುವುದು. ಅವರು** (ಏನನ್ನೂ) **ಆಲಿಸಲಾರರು;** (ಏನನ್ನೂ) **ನೋಡಲಾರರು.**

أُولَٰئِكَ الَّذِينَ خَسِرُوا أَنْفُسَهُمْ وَضَلَّ عَنْهُمْ مَا كَانُوا يَفْتَرُونَ ﴿٢٢﴾

**22. ತಮ್ಮನ್ನು ತಾವೇ ನಾಶಪಡಿಸಿದವರು ಅವರೇ ಆಗಿದ್ದಾರೆ. ಅವರು ಸೃಜಿಸಿಕೊಂಡದ್ದೆಲ್ಲ ಅವರನ್ನು ಬಿಟ್ಟು ಹೋಗುವುವು.**

لَا جَرَمَ أَنَّهُمْ فِي الْآخِرَةِ هُمُ الْأَخْسَرُونَ ﴿٢٣﴾

**23. ಪರಲೋಕದಲ್ಲಿ ಅತ್ಯಂತ ಹಾನಿಗೊಳಗಾಗು ವವರು ಅವರೇ ಎಂಬುದರಲ್ಲಿ ಸಂಶಯವಿಲ್ಲ.**

إِنَّ الَّذِينَ آمَنُوا وَعَمِلُوا الصَّالِحَاتِ وَأَخْبَتُوا إِلَىٰ رَبِّهِمْ أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ﴿٢٤﴾

**24. ವಿಶ್ವಾಸಹೊಂದಿ, ಸತ್ಕರ್ಮನಿರತರಾಗಿದ್ದು ಕೊಂಡು, ತಮ್ಮ ಪ್ರಭುವಿನ ಮುಂದೆ ವಿನಯಾನ್ವಿತರಾಗಿ ರುವವರಾರೋ, ಅವರು ಖಂಡಿತವಾಗಿಯೂ ಸ್ವರ್ಗದ ಹಕ್ಕುದಾರರಾಗಿದ್ದಾರೆ. ಅಲ್ಲೇ ಅವರು ವಾಸಿಸುವರು.**

مَثَلُ الْفَرِيقَيْنِ كَالْأَعْمَىٰ وَالْأَصَمِّ وَالْبَصِيرِ وَالسَّمِيعِ ۚ هَلْ يَسْتَوِيَانِ مَثَلًا ۚ أَفَلَا تَذَكَّرُونَ ﴿٢٥﴾

**25. ಉಭಯ ಪಕ್ಷದವರ ಸ್ಥಿತಿ - ಕುರುಡನೂ ಕಿವುಡನೂ ಆಗಿರುವ ಒಬ್ಬನಂತೆ ಮತ್ತು ಕಾಣುವ, ಕೇಳುವ ಇನ್ನೊಬ್ಬನಂತೆಯೂ ಆಗಿದೆ. ಅವರೀರ್ವರ ಸ್ಥಿತಿ ತುಲ್ಯವಾಗುವುದೇ?** (ಇನ್ನೂ) **ನೀವು ಮನವರಿಕೆ ಮಾಡಿ ಕೊಳ್ಳುವುದಿಲ್ಲವೇ?**





وَلَقَدْ أَرْسَلْنَا نُوحًا إِلَىٰ قَوْمِهِ إِنِّي لَكُمْ نَذِيرٌ مُبِينٌ ﴿٢٦﴾

**26. ನಾವು ನೂಹ್‌ರನ್ನು ಅವರ ಸಮುದಾಯಕ್ಕೆ** (ಸಂದೇಶವಾಹಕನಾಗಿ) **ಕಳುಹಿಸಿದೆವು.** (ಅವರು ಹೇಳಿದರು:) **'ಸತ್ಯವಾಗಿಯೂ ನಾನು ನಿಮಗೆ ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನಾಗಿದ್ದೇನೆ.**

أَنْ لَا تَعْبُدُوا إِلَّا اللَّهَ ۖ إِنِّي أَخَافُ عَلَيْكُمْ عَذَابَ يَوْمٍ أَلِيمٍ ﴿٢٧﴾

**27. 'ಅಲ್ಲಾಹನ ಹೊರತು** (ಬೇರೇನನ್ನೂ) **ನೀವು ಆರಾಧಿಸಬಾರದು. ಖಂಡಿತವಾಗಿಯೂ ಯಾತನಾಮಯ ವಾದ ಶಿಕ್ಷೆಯ ದಿನವೊಂದು ನಿಮಗೆ ಬರುವುದರ ಬಗ್ಗೆ ನಾನು ಭಯಭೀತನಾಗಿದ್ದೇನೆ.'**

فَقَالَ الْمَلَأُ الَّذِينَ كَفَرُوا مِنْ قَوْمِهِ مَا نَرَاكَ إِلَّا بَشَرًا مِثْلَنَا وَمَا نَرَاكَ اتَّبَعَكَ إِلَّا الَّذِينَ هُمْ أَرَاذِلُنَا بَادِيَ الرَّأْيِ ۚ وَمَا نَرَىٰ لَكُمْ عَلَيْنَا مِنْ فَضْلٍ بَلْ نَظُنُّكُمْ كَاذِبِينَ ﴿٢٨﴾

**28. ಆಗ ಅವರ ಜನತೆಯ ಅವಿಶ್ವಾಸಿಗಳಾದ ಮುಖಂಡರು ಹೇಳಿದರು: 'ನಮ್ಮಂತಹ ಒಬ್ಬ ಮನುಷ್ಯ ನಾಗಿಯೇ ಹೊರತು ನಿನ್ನನ್ನು ನಾವು ಕಾಣುವುದಿಲ್ಲ. ಹೊರ ನೋಟಕ್ಕೆ ನಮ್ಮ ಪೈಕಿ ಅತ್ಯಂತ ಕೀಳ್ಮಟ್ಟದಲ್ಲಿರುವ ವರ ಹೊರತು** (ಬೇರೆ ಯಾರೂ) **ನಿನ್ನನ್ನು ಅನುಸರಿಸುವವ ರಾಗಿಯೂ ನಾವು ಕಾಣುವುದಿಲ್ಲ. ನಮಗಿಂತ ಏನಾದರೂ ಶ್ರೇಷ್ಠತೆ ನಿನಗಿರುವುದಾಗಿಯೂ ನಾವು ಕಾಣುವುದಿಲ್ಲ. ಅಷ್ಟೇ ಅಲ್ಲ, ನೀವು ಸುಳ್ಳು ಹೇಳುವವರೆಂದು ನಾವು ಭಾವಿಸುತ್ತೇವೆ.'**

قَالَ يَا قَوْمِ أَرَأَيْتُمْ إِنْ كُنْتُ عَلَىٰ بَيِّنَةٍ مِنْ رَبِّي وَآتَانِي رَحْمَةً مِنْ عِنْدِهِ فَعُمِّيَتْ عَلَيْكُمْ أَنُلْزِمُكُمُوهَا وَأَنْتُمْ لَهَا كَارِهُونَ ﴿٢٩﴾

**29. ಅವರು** (ನೂಹ್) **ಹೇಳಿದರು: 'ನನ್ನ ಜನರೇ, ನಾನು ನನ್ನ ಪ್ರಭುವಿನಿಂದ ಸ್ಪಷ್ಟವಾದ ಸಾಕ್ಷ್ಯಾಧಾರದ ಸಹಿತ ನೆಲೆನಿಂತಿದ್ದು ಹಾಗೂ ಅವನು ತನ್ನ ಮಹತ್ತಾ ದೊಂದು ಅನುಗ್ರಹವನ್ನು ನನಗೆ ಪ್ರದಾನ ಮಾಡಿದ್ದು ನಿಮಗೆ ಅದನ್ನು ಕಾಣಲು ಸಾಧ್ಯವಾಗಲಿಲ್ಲ. ನೀವು ಅದನ್ನು ಇಷ್ಟಪಡದಿರುವಾಗ ನಾವು ನಿಮ್ಮನ್ನು ಬಲವಂತ ಪಡಿಸುವುದನ್ನು ನೀವು ಕಾಣುವಿರಾ?**[292B]

وَيَا قَوْمِ لَا أَسْأَلُكُمْ عَلَيْهِ مَالًا ۖ إِنْ أَجْرِيَ إِلَّا عَلَى اللَّهِ ۚ وَمَا أَنَا بِطَارِدِ الَّذِينَ آمَنُوا ۚ إِنَّهُمْ مُلَاقُو رَبِّهِمْ

**30. 'ಓ ನನ್ನ ಜನರೇ, ನಾನು ನಿಮ್ಮಿಂದ ಇದರ ಹೆಸರಿನಲ್ಲಿ ಧನವನ್ನೇನೂ ಕೇಳುವುದಿಲ್ಲ. ನನಗೆ ಅಲ್ಲಾಹನಿಂದ ಮಾತ್ರವೇ ಪ್ರತಿಫಲ ಸಿಗುವುದು. ವಿಶ್ವಾಸ ಹೊಂದಿದವರನ್ನು ನಾನು ದೂರಕ್ಕೆ ಅಟ್ಟುವವನಲ್ಲ.**

292B. ಧರ್ಮವನ್ನು ಬಲವಂತವಾಗಿ ಹೇರುವುದು ಪ್ರವಾದಿಗಳ ಕೆಲಸವಲ್ಲ.

ಖಂಡಿತವಾಗಿಯೂ ಅವರು ತಮ್ಮ ಪ್ರಭುವನ್ನು ಭೇಟಿಯಾಗುವವರು. ಆದರೆ ನಿಮ್ಮನ್ನು ತಿಳಿಗೇಡಿ ಜನಾಂಗವಾಗಿ ನಾನು ಕಾಣುತ್ತೇನೆ.

وَلٰكِنِّيْٓ اَرٰىكُمْ قَوْمًا تَجْهَلُوْنَ ﴿٢٩﴾

31. “ಓ ನನ್ನ ಜನರೇ, ನಾನು ಅವರನ್ನು ದೂರಕ್ಕಟ್ಟಿದರೆ ಅಲ್ಲಾಹನಿಂದ ನನಗೆ ಬಂದೆರಗಬಹುದಾದ ಶಿಕ್ಷೆಯಿಂದ ನನ್ನನ್ನು ಕಾಪಾಡಲು ನನ್ನ ನೆರವಿಗೆ ಯಾರಿದ್ದಾರೆ? ನೀವು ಆಲೋಚಿಸುವುದಿಲ್ಲವೇ?

وَيٰقَوْمِ مَنْ يَّنْصُرُنِيْ مِنَ اللّٰهِ اِنْ
طَرَدْتُّهُمْ ۭ اَفَلَا تَذَكَّرُوْنَ ﴿٣٠﴾

32. 'ನನ್ನ ಬಳಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ನನಗೆ ಅಗೋಚರ ವಿಚಾರಗಳ ಜ್ಞಾನವಿಲ್ಲ. ನಾನೊಬ್ಬ ಮಲಕ್ (ದೇವದೂತ) ಎಂದು ಸಹ ನಾನು ಹೇಳುವುದಿಲ್ಲ. ನಿಮ್ಮ ದೃಷ್ಟಿಯಲ್ಲಿ ನಿಂದ್ಯರಾಗಿರುವವರಿಗೆ ಅಲ್ಲಾಹನು ಏನೂ ಒಳಿತು ಮಾಡಲಾರನೆಂದು ಸಹ ನಾನು ಹೇಳುವುದಿಲ್ಲ. ಅವರ ಮನಸ್ಸಿನಲ್ಲಿರುವುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು. ನಾನು ಹಾಗೆ ಮಾಡಿದರೆ (ಅವರನ್ನು ದೂರಕ್ಕಟ್ಟಿದರೆ) ಖಂಡಿತವಾಗಿಯೂ ನಾನು ದುಷ್ಕರ್ಮಿಗಳಲ್ಲಿ ಸೇರಿದವನಾಗುವೆನು.'

وَلَآ اَقُوْلُ لَكُمْ عِنْدِيْ خَزَاۗىِٕنُ اللّٰهِ وَ
لَآ اَعْلَمُ الْغَيْبَ وَلَآ اَقُوْلُ اِنِّىْ مَلَكٌ وَّ
لَآ اَقُوْلُ لِلَّذِيْنَ تَزْدَرِيْٓ اَعْيُنُكُمْ
لَنْ يُّؤْتِيَهُمُ اللّٰهُ خَيْرًا ۭ اَللّٰهُ اَعْلَمُ
بِمَا فِيْٓ اَنْفُسِهِمْ ښ اِنِّىْٓ اِذًا لَّمِنَ
الظّٰلِمِيْنَ ﴿٣١﴾

33. ಅವರು ಹೇಳಿದರು: 'ಎಲೈ ನೂಹ್, ನೀನು ನಮ್ಮೊಡನೆ ವಾಗ್ವಾದ ಮಾಡಿದೆ; ತುಂಬಾ ವಾಗ್ವಾದ ಮಾಡಿದೆ. ಆದ್ದರಿಂದ, ನೀನು ಸತ್ಯವಂತನೆಂದಾದರೆ ನಮಗೆ ಬೆದರಿಕೆ ಹಾಕುತ್ತಿರುವ ಶಿಕ್ಷೆಯನ್ನು ನಮ್ಮ ಮೇಲೆ ಎರಗುವಂತೆ ಮಾಡು.'

قَالُوْا يٰنُوْحُ قَدْ جٰدَلْتَنَا فَاَكْثَرْتَ
جِدَالَنَا فَاْتِنَا بِمَا تَعِدُنَآ اِنْ كُنْتَ مِنَ
الصّٰدِقِيْنَ ﴿٣٢﴾

34. ಅವರು (ನೂಹ್) ಹೇಳಿದರು: 'ಅಲ್ಲಾಹನು ಇಚ್ಛಿಸಿದರೆ ಅವನೇ ಅದನ್ನು ಎರಗುವಂತೆ ಮಾಡುವನು. ನೀವು (ಅಲ್ಲಾಹನ ಯೋಜನೆಯನ್ನು) ಎಂದಿಗೂ ನಿಷ್ಫಲಗೊಳಿಸಲಾರಿರಿ.'

قَالَ اِنَّمَا يَاْتِيْكُمْ بِهِ اللّٰهُ اِنْ شَاۗءَ وَمَآ
اَنْتُمْ بِمُعْجِزِيْنَ ﴿٣٣﴾

35. 'ಅಲ್ಲಾಹನು ನಿಮ್ಮನ್ನು ಮಾರ್ಗಭ್ರಷ್ಟರನ್ನಾಗಿ ಮಾಡಲು ಉದ್ದೇಶಿಸಿದರೆ, ನಾನು ನಿಮ್ಮನ್ನು ಉಪದೇಶಿಸಲು ಬಯಸಿದರೂ ನನ್ನ ಉಪದೇಶ ನಿಮಗೆ

وَلَا يَنْفَعُكُمْ نُصْحِيْٓ اِنْ اَرَدْتُّ اَنْ
اَنْصَحَ لَكُمْ اِنْ كَانَ اللّٰهُ يُرِيْدُ اَنْ





ಪ್ರಯೋಜನವಾಗಲಾರದು. ಅವನೇ ನಿಮ್ಮ ಪ್ರಭು. ಅವನ ಬಳಿಗೆಯೇ ನಿಮ್ಮನ್ನು ಹಿಂತಿರುಗಿಸಲಾಗುವುದು.'

يُّغْوِيَكُمْ ۭ هُوَ رَبُّكُمْ ۣ وَاِلَيْهِ
تُرْجَعُوْنَ ﴿٣٤﴾

36. 'ಆತನೇ ಇದನ್ನು ರಚಿಸಿದ್ದು' ಎಂದು ಅವರು ಹೇಳುತ್ತಾರೆಯೇ? ಹೇಳು: 'ನಾನು ಅದನ್ನು ರಚಿಸಿದ್ದರೆ ನನ್ನ ಅಪರಾಧದ ಫಲ ನನ್ನ ಮೇಲೆ ಎರಗಲಿ. ನೀವು ಮಾಡುತ್ತಿರುವ ಪಾಪಗಳಿಂದ ನಾನು ಮುಕ್ತನಾಗಿದ್ದೇನೆ.'

اَمْ يَقُوْلُوْنَ افْتَرٰىهُ ۭ قُلْ اِنِ
افْتَرَيْتُهٗ فَعَلَيَّ اِجْرَامِيْ وَاَنَا بَرِيْۗءٌ
مِّمَّا تُجْرِمُوْنَ ﴿٣٥﴾

37. ನೂಹ್‌ರಿಗೆ (ಹೀಗೆ) ದಿವ್ಯ ಸಂದೇಶ ನೀಡಲಾಯಿತು: 'ಈಗಾಗಲೇ ವಿಶ್ವಾಸ ಹೊಂದಿದವರ ಹೊರತು ಇನ್ನಾರೂ ನಿನ್ನ ಸಮುದಾಯದಿಂದ ವಿಶ್ವಾಸ ಹೊಂದಲಾರರು. ಆದ್ದರಿಂದ ಅವರ ಕೃತ್ಯಗಳ ಬಗ್ಗೆ ನೀನು ವ್ಯಥೆಪಡಬೇಡ.

وَاُوْحِيَ اِلٰي نُوْحٍ اَنَّهٗ لَنْ يُّؤْمِنَ مِنْ
قَوْمِكَ اِلَّا مَنْ قَدْ اٰمَنَ فَلَا تَبْتَىِٕسْ
بِمَا كَانُوْا يَفْعَلُوْنَ ﴿٣٦﴾

38. 'ನಮ್ಮ ಮೇಲ್ನೋಟದಲ್ಲೂ ನಮ್ಮ ನಿರ್ದೇಶಾನುಸಾರವಾಗಿಯೂ ನೀನು ನೌಕೆಯನ್ನು ನಿರ್ಮಿಸು. ದುಷ್ಕರ್ಮಿಗಳಾದ ಜನರ ಕುರಿತು ನೀನು ನನ್ನೊಡನೆ ಮಾತನಾಡಬೇಡ. ಖಂಡಿತವಾಗಿಯೂ ಅವರು ಮುಳುಗಿಸಲ್ಪಡುವರು.'

وَاصْنَعِ الْفُلْكَ بِاَعْيُنِنَا وَوَحْيِنَا وَ
لَا تُخَاطِبْنِيْ فِي الَّذِيْنَ ظَلَمُوْا ۚ
اِنَّهُمْ مُّغْرَقُوْنَ ﴿٣٧﴾

39. ಅವರು (ನೂಹ್) ನೌಕೆಯನ್ನು ನಿರ್ಮಿಸುತ್ತಿದ್ದರು. ಅವರ ಜನಾಂಗದ ಮುಖಂಡರು ಅವರ ಹತ್ತಿರದಿಂದ ನಡೆದು ಹೋಗುತ್ತಿದ್ದಾಗ ಅವರನ್ನು (ನೂಹ್‌ರನ್ನು) ಅಪಹಾಸ್ಯ ಮಾಡುತ್ತಿದ್ದರು. ಅವರು (ನೂಹ್) ಹೇಳಿದರು: 'ನೀವು (ಈಗ) ನಮ್ಮನ್ನು ಅಪಹಾಸ್ಯಮಾಡಿದರೆ, ನೀವು ಅಪಹಾಸ್ಯ ಮಾಡುತ್ತಿದ್ದಂತೆಯೇ ನಾವೂ ನಿಮ್ಮನ್ನು ಅಪಹಾಸ್ಯ ಮಾಡುವ ಕಾಲ ಬರಲಿದೆ.

وَيَصْنَعُ الْفُلْكَ ۣ وَكُلَّمَا مَرَّ عَلَيْهِ
مَلَاٌ مِّنْ قَوْمِهٖ سَخِرُوْا مِنْهُ ۭ قَالَ اِنْ
تَسْخَرُوْا مِنَّا فَاِنَّا نَسْخَرُ مِنْكُمْ كَمَا
تَسْخَرُوْنَ ﴿٣٨﴾

40. 'ಆಗ ಯಾರಿಗೆ ಅಪಮಾನಕರವಾದ ಶಿಕ್ಷೆ ಬಂದೆರಗುವುದೆಂದೂ ಯಾರು ಶಾಶ್ವತ ಶಿಕ್ಷೆಗೆ ಗುರಿಯಾಗುವರೆಂದೂ ನೀವು ತಿಳಿಯುವಿರಿ.'

فَسَوْفَ تَعْلَمُوْنَ ۙ مَنْ يَّاْتِيْهِ عَذَابٌ
يُّخْزِيْهِ وَيَحِلُّ عَلَيْهِ عَذَابٌ مُّقِيْمٌ ﴿٣٩﴾

41. ಹಾಗೆ ನಮ್ಮ ವಿಧಿ ಪ್ರಕಾರ, (ಭೂಮಿಯಿಂದ) ನೀರಿನ ಬುಗ್ಗೆ ಉಕ್ಕಿ ಹರಿದಾಗ ನಾವು ಹೇಳಿದೆವು: '(ಅವಶ್ಯ

حَتّٰٓي اِذَا جَاۗءَ اَمْرُنَا وَفَارَ التَّنُّوْرُ ۙ قُلْنَا

ವುಳ್ಳ) ಎಲ್ಲ ಜೀವಿಗಳಿಂದ ಎರಡನ್ನು (ಒಂದು ಗಂಡು, ಒಂದು ಹೆಣ್ಣು), ನಿನ್ನ ಕುಟುಂಬವನ್ನು- ಯಾರ ವಿರುದ್ಧ ನಮ್ಮ ಆಜ್ಞೆ ಜಾರಿಗೊಂಡಿದೆಯೋ ಅವರನ್ನು ಹೊರತು ಪಡಿಸಿ - ಮತ್ತು ನಿನ್ನನ್ನು ನಂಬಿದವರನ್ನು ಅದರಲ್ಲಿ (ಹಡಗಿನಲ್ಲಿ) ಹತ್ತಿಸಿಕೋ.' ಅವರ ಜೊತೆ ವಿಶ್ವಾಸಿಗಳು ಕೆಲವರು ಮಾತ್ರವೇ ಇದ್ದರು.

احْمِلْ فِيهَا مِنْ كُلٍّ زَوْجَيْنِ اثْنَيْنِ وَأَهْلَكَ إِلَّا مَنْ سَبَقَ عَلَيْهِ الْقَوْلُ وَمَنْ آمَنَ ۚ وَمَا آمَنَ مَعَهُ إِلَّا قَلِيلٌ ﴿٤٠﴾

42. ಅವರು (ನೂಹ್) ಹೇಳಿದರು: 'ನೀವು ಅದರಲ್ಲಿ ಹತ್ತಿಕೊಳ್ಳಿರಿ. ಅದರ ಸಂಚಾರ ಮತ್ತು ತಂಗುವಿಕೆ ಅಲ್ಲಾಹನ ನಾಮದಲ್ಲಾಗಿದೆ. ಖಂಡಿತವಾಗಿಯೂ ನನ್ನ ಪ್ರಭು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.'

وَقَالَ ارْكَبُوا فِيهَا بِسْمِ اللَّهِ مَجْرَاهَا وَمُرْسَاهَا ۚ إِنَّ رَبِّي لَغَفُورٌ رَّحِيمٌ ﴿٤١﴾

43. ಅದು ಅವರ ಸಹಿತ, ಪರ್ವತಗಳಂತಹ ತೆರೆಗಳ ನಡುವೆ ಸಂಚರಿಸುತ್ತಿತ್ತು. (ತನ್ಮಧ್ಯೆ) ತನ್ನ ಮಗನು (ನೌಕೆಯನ್ನೇರದೆ) ದೂರ ನಿಂತಿದ್ದಾಗ ನೂಹ್ ಕರೆದು ಹೇಳಿದರು: 'ಓ ನನ್ನ ಪ್ರಿಯ ಮಗನೇ, ನೀನು ನಮ್ಮೊಂದಿಗೆ (ನೌಕೆಯನ್ನು) ಹತ್ತಿಕೋ; ನೀನು ಅವಿಶ್ವಾಸಿಗಳಲ್ಲಿ ಸೇರಿದವನಾಗಬೇಡ.'

وَهِيَ تَجْرِي بِهِمْ فِي مَوْجٍ كَالْجِبَالِ وَنَادَىٰ نُوحٌ ابْنَهُ وَكَانَ فِي مَعْزِلٍ يَا بُنَيَّ ارْكَب مَّعَنَا وَلَا تَكُن مَّعَ الْكَافِرِينَ ﴿٤٢﴾

44. ಅವನು ಹೇಳಿದನು: 'ಜಲಪ್ರಳಯದಿಂದ ನನ್ನನ್ನು ಕಾಪಾಡುವ ಒಂದು ಪರ್ವತದ ಮೇಲೆ ನಾನು ಆಶ್ರಯ ಪಡೆಯುವೆನು.' ಅವರು ಹೇಳಿದರು: 'ಇಂದು ಅಲ್ಲಾಹನ (ಶಿಕ್ಷೆಯ) ವಿಧಿಯಿಂದ ರಕ್ಷೆ ಹೊಂದುವವರು ಯಾರೂ ಇಲ್ಲ- ಅಲ್ಲಾಹನು ದಯೆದೋರಿದವರು ಹೊರತು.' ಅಷ್ಟರಲ್ಲಿ ಅವರಿಬ್ಬರ ಮಧ್ಯೆ ತೆರೆಯೆದ್ದಿತು. ಹಾಗೆ ಅವನು ಮುಳುಗಿದವರಲ್ಲಿ ಸೇರಿದನು.

قَالَ سَآوِي إِلَىٰ جَبَلٍ يَعْصِمُنِي مِنَ الْمَاءِ ۚ قَالَ لَا عَاصِمَ الْيَوْمَ مِنْ أَمْرِ اللَّهِ إِلَّا مَن رَّحِمَ ۚ وَحَالَ بَيْنَهُمَا الْمَوْجُ فَكَانَ مِنَ الْمُغْرَقِينَ ﴿٤٣﴾

45. (ಅನಂತರ) ಹೇಳಲಾಯಿತು: 'ಎಲೈ ಭೂಮಿಯೇ, ನಿನ್ನ ಜಲವನ್ನುನೀನು ನುಂಗಿಕೋ, ಎಲೈ ಆಕಾಶವೇ, (ನಿನ್ನ ವರ್ಷಧಾರೆಯನ್ನು) ನಿಲ್ಲಿಸು.' (ಹಾಗೆ) ನೀರು ಕೆಳಗೆ ಇಳಿಯಿತು ಮತ್ತು ಘಟನೆ ಕೊನೆ

وَقِيلَ يَا أَرْضُ ابْلَعِي مَاءَكِ وَيَا سَمَاءُ أَقْلِعِي وَغِيضَ الْمَاءُ وَقُضِيَ الْأَمْرُ وَ





ಗೊಂಡಿತು. ಅದು (ನೌಕೆ) ಜೂದಿಯಲ್ಲಿ[293] ತಂಗಿತು. ದುಷ್ಕರ್ಮಿಗಳಾದ ಜನತೆ ತೊಲಗಿ ನಾಶಹೊಂದಲಿ ಎಂದು ಹೇಳಲ್ಪಟ್ಟಿತು.

اسْتَوَتْ عَلَى الْجُودِيِّ ۖ وَقِيلَ بُعْدًا لِّلْقَوْمِ الظَّالِمِينَ ﴿٤٤﴾

46. ನೂಹ್ ತನ್ನ ಪ್ರಭುವನ್ನು ಕರೆದು ಪ್ರಾರ್ಥಿಸಿದರು: 'ನನ್ನ ಪ್ರಭೂ, ನನ್ನ ಮಗನು ನನ್ನ ಕುಟುಂಬದಲ್ಲಿ ಸೇರಿದವನೇ ಆಗಿದ್ದಾನೆ. ಖಂಡಿತ ವಾಗಿಯೂ ನಿನ್ನ ವಾಗ್ದಾನ ಸತ್ಯವಾದುದು. ನೀನು ತೀರ್ಪುಗಾರರಲ್ಲಿ ಅತ್ಯಂತ ನ್ಯಾಯಯುತವಾಗಿ ತೀರ್ಪು ನೀಡುವವನಾಗಿರುವೆ.'

وَنَادَىٰ نُوحٌ رَّبَّهُ فَقَالَ رَبِّ إِنَّ ابْنِي مِنْ أَهْلِي وَإِنَّ وَعْدَكَ الْحَقُّ وَأَنتَ أَحْكَمُ الْحَاكِمِينَ ﴿٤٥﴾

47. ಅಲ್ಲಾಹನು ಹೇಳಿದನು: 'ಎಲೈ ನೂಹ್, ನಿಶ್ಚಯವಾಗಿಯೂ ಅವನು ನಿನ್ನ ಕುಟುಂಬದಲ್ಲಿ ಸೇರಿದವನಲ್ಲ. ನಿಸ್ಸಂಶಯವಾಗಿಯೂ ಅವನು ದುಷ್ಕರ್ಮಿಯಾಗಿದ್ದಾನೆ. ಆದ್ದರಿಂದ ನಿನಗೆ ಅರಿವಿಲ್ಲದ ವಿಚಾರವನ್ನು ನೀನು ನನ್ನೊಡನೆ ಕೇಳಬಾರದು. ನೀನು ತಿಳಿಗೇಡಿಗಳಲ್ಲಿ ಸೇರಿದವನಾಗಬಾರದೆಂದು ನಿನಗೆ ನಾನು ಉಪದೇಶ ನೀಡುತ್ತಿದ್ದೇನೆ.'

قَالَ يَا نُوحُ إِنَّهُ لَيْسَ مِنْ أَهْلِكَ ۖ إِنَّهُ عَمَلٌ غَيْرُ صَالِحٍ ۖ فَلَا تَسْأَلْنِ مَا لَيْسَ لَكَ بِهِ عِلْمٌ ۖ إِنِّي أَعِظُكَ أَن تَكُونَ مِنَ الْجَاهِلِينَ ﴿٤٦﴾

48. ಅವರು ಹೇಳಿದರು: 'ನನ್ನ ಪ್ರಭೂ, ನನಗೆ ಅರಿವಿಲ್ಲದ ವಿಚಾರದ ಬಗ್ಗೆ ನಿನ್ನೊಡನೆ ಕೇಳುವುದರಿಂದ ನಾನು ನಿನ್ನ ಅಭಯವನ್ನು ಯಾಚಿಸುತ್ತೇನೆ. ನೀನು ನನಗೆ ಕ್ಷಮೆ ನೀಡದಿದ್ದರೆ, ನನ್ನ ಮೇಲೆ ಕರುಣೆ ತೋರಿಸದಿದ್ದರೆ ನಾನು ಹಾನಿಗೊಳಗಾಗುವೆನು.'

قَالَ رَبِّ إِنِّي أَعُوذُ بِكَ أَنْ أَسْأَلَكَ مَا لَيْسَ لِي بِهِ عِلْمٌ ۖ وَإِلَّا تَغْفِرْ لِي وَتَرْحَمْنِي أَكُن مِّنَ الْخَاسِرِينَ ﴿٤٧﴾

49. 'ಎಲೈ ನೂಹ್, ನಿನ್ನ ಮೇಲೆಯೂ ನಿನ್ನೊಂದಿಗೆ ಇರುವವರ ಪೈಕಿ ಜನ್ಮತಾಳುವ ಸಮುದಾಯಗಳ ಮೇಲೆಯೂ ನಮ್ಮಿಂದಿರುವ ರಕ್ಷೆ ಮತ್ತು ಅನುಗ್ರಹಗಳ ಸಹಿತ ನೀನು (ನೌಕೆಯಿಂದ) ಇಳಿ. ನಾವು (ತಾತ್ಕಾಲಿಕ) ಜೀವನ ಸಾಧನಗಳನ್ನು ನೀಡುವ ಬೇರೆ ಕೆಲವು ಸಮುದಾಯಗಳು ಸಹ ಬರಲಿಕ್ಕಿವೆ. ಅನಂತರ ಅವರು ನಮ್ಮಿಂದಿರುವ ಯಾತನಾಮಯವಾದ ಶಿಕ್ಷೆಗೆ ಗುರಿಯಾಗುವರು' ಎಂದು ಹೇಳಲಾಯಿತು.

قِيلَ يَا نُوحُ اهْبِطْ بِسَلَامٍ مِّنَّا وَبَرَكَاتٍ عَلَيْكَ وَعَلَىٰ أُمَمٍ مِّمَّن مَّعَكَ ۚ وَأُمَمٌ سَنُمَتِّعُهُمْ ثُمَّ يَمَسُّهُم مِّنَّا عَذَابٌ أَلِيمٌ ﴿٤٨﴾

293. ಜೂದಿ ಎಂಬುದು ಒಂದು ಪರ್ವತದ ಹೆಸರು. ಅದು ಅರ್ಮೇನಿಯದಲ್ಲಿದೆ.

**50.** ಇವು ಅಗೋಚರ ಸಮಾಚಾರಗಳಲ್ಲಿ ಸೇರಿದ್ದಾಗಿವೆ. ಇದನ್ನು ನಾವು ನಿನಗೆ ಅರುಹುತ್ತಿದ್ದೇವೆ. ಇದಕ್ಕೆ ಮುಂಚೆ ನೀನಾಗಲಿ ನಿನ್ನ ಸಮುದಾಯವಾಗಲಿ ಆ ಬಗ್ಗೆ ತಿಳಿದಿರಲಿಲ್ಲ. ನೀನು ಸಹನೆದೋರು. ಖಂಡಿತವಾಗಿಯೂ ಶುಭಾಂತ್ಯ ದೇವಭಯವುಳ್ಳವರಿಗಾಗಿದೆ.

تِلْكَ مِنْ أَنْبَاءِ الْغَيْبِ نُوحِيهَا إِلَيْكَ ۖ مَا كُنْتَ تَعْلَمُهَا أَنْتَ وَلَا قَوْمُكَ مِنْ قَبْلِ هَٰذَا ۖ فَاصْبِرْ ۖ إِنَّ الْعَاقِبَةَ لِلْمُتَّقِينَ ﴿٥٠﴾

**51.** ಆದ್ (ಜನಾಂಗದ) ಬಳಿಗೆ ಅವರ ಸಹೋದರ ಹೂದ್‌ರನ್ನು ಸಹ (ಸಂದೇಶವಾಹಕನಾಗಿ ನಾವು ಕಳುಹಿಸಿದೆವು). ಅವರು ಹೇಳಿದರು: 'ಓ ನನ್ನ ಜನರೇ, ಅಲ್ಲಾಹನನ್ನು ನೀವು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. (ಅವನಿಗೆ ಸಹಭಾಗಿಗಳನ್ನು ಕಲ್ಪಿಸಿರುವುದರಲ್ಲಿ) ನೀವು ಸುಳ್ಳು ಸೃಜಿಸುವವರೇ ಆಗಿದ್ದೀರಿ.

وَإِلَىٰ عَادٍ أَخَاهُمْ هُودًا ۚ قَالَ يَا قَوْمِ اعْبُدُوا اللَّهَ مَا لَكُمْ مِنْ إِلَٰهٍ غَيْرُهُ ۖ إِنْ أَنْتُمْ إِلَّا مُفْتَرُونَ ﴿٥١﴾

**52.** 'ಓ ನನ್ನ ಜನರೇ, ಅದಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಕೇಳುವುದಿಲ್ಲ. ನನಗೆ ಸಲ್ಲಬೇಕಾದ ಪ್ರತಿಫಲ ನನ್ನನ್ನು ಸೃಷ್ಟಿಸಿದವನಿಂದ ಮಾತ್ರವಾಗಿದೆ. ನೀವು ಮನವರಿಕೆಮಾಡಿಕೊಳ್ಳುವುದಿಲ್ಲವೇ?

يَا قَوْمِ لَا أَسْأَلُكُمْ عَلَيْهِ أَجْرًا ۖ إِنْ أَجْرِيَ إِلَّا عَلَى الَّذِي فَطَرَنِي ۚ أَفَلَا تَعْقِلُونَ ﴿٥٢﴾

**53.** 'ಓ ನನ್ನ ಜನರೇ, ನೀವು ನಿಮ್ಮ ಪ್ರಭುವನ್ನು ಪಾಪವಿಮುಕ್ತಿಗಾಗಿ ಯಾಚಿಸಿರಿ ಮತ್ತು ಅವನೆಡೆಗೆ ತಿರುಗಿರಿ. ಸಮೃದ್ಧವಾದ ವರ್ಷಧಾರೆಯುಂಟುಮಾಡುವ ಮೋಡಗಳನ್ನು ಅವನು ನಿಮಗೆ ಕಳುಹಿಸುವನು. ನಿಮ್ಮ ಶಕ್ತಿಗೆ ಅವನು ಹೆಚ್ಚುಶಕ್ತಿಯನ್ನು ಪ್ರದಾನ ಮಾಡುವನು. ನೀವು ಅಪರಾಧಿಗಳಾಗಿ ಹಿಂತಿರುಗಿ ಹೋಗಬೇಡಿರಿ.'

وَيَا قَوْمِ اسْتَغْفِرُوا رَبَّكُمْ ثُمَّ تُوبُوا إِلَيْهِ يُرْسِلِ السَّمَاءَ عَلَيْكُمْ مِدْرَارًا وَيَزِدْكُمْ قُوَّةً إِلَىٰ قُوَّتِكُمْ وَلَا تَتَوَلَّوْا مُجْرِمِينَ ﴿٥٣﴾

**54.** ಅವರು ಹೇಳಿದರು: 'ಎಲೈ ಹೂದ್, ನೀನು ನಮಗೆ ಸ್ಪಷ್ಟವಾದ ಯಾವುದೇ ಸಾಕ್ಷ್ಯಾಧಾರವನ್ನೂ ತಂದಿಲ್ಲ. ನೀನು ಹೇಳಿದ ಮಾತ್ರಕ್ಕೆ ನಾವು ನಮ್ಮ ದೇವರುಗಳನ್ನು ವರ್ಜಿಸಲಾರೆವು. ನಿನ್ನನ್ನು ನಾವು ನಂಬುವುದೂ ಇಲ್ಲ.

قَالُوا يَا هُودُ مَا جِئْتَنَا بِبَيِّنَةٍ وَمَا نَحْنُ بِتَارِكِي آلِهَتِنَا عَنْ قَوْلِكَ وَمَا نَحْنُ لَكَ بِمُؤْمِنِينَ ﴿٥٤﴾





**55,56.** 'ನಮ್ಮ ಕೆಲವು ದೇವರುಗಳು ನಿನಗೆ ಏನೋ ದೋಷವನ್ನುಂಟುಮಾಡಿವೆ ಎಂದು ಮಾತ್ರ ನಾವು ಹೇಳಬಲ್ಲೆವು.' ಅವರು (ಹೂದ್) ಹೇಳಿದರು: 'ನಾನು ಅಲ್ಲಾಹನನ್ನು ಸಾಕ್ಷಿ ಮಾಡುತ್ತೇನೆ. ನೀವು ಸಹ ಸಾಕ್ಷ್ಯನೀಡಿರಿ. ನೀವು ಅವನನ್ನು (ಅಲ್ಲಾಹನನ್ನು) ಬಿಟ್ಟು ಬಹುದೇವಾರಾಧನೆ ಮಾಡುವುದರಿಂದ ನಾನು ವಿರಕ್ತನಾಗಿದ್ದೇನೆ. ಆದ್ದರಿಂದ ನೀವೆಲ್ಲರೂ ಒಟ್ಟು ಸೇರಿಕೊಂಡು ನನ್ನ ವಿರುದ್ಧ ತಂತ್ರ ಹೂಡಿರಿ. ನನಗೆ ಕಾಲಾವಧಿ ನೀಡಬೇಡಿರಿ.

إِنْ نَقُولُ إِلَّا اعْتَرَاكَ بَعْضُ آلِهَتِنَا بِسُوءٍ ۗ قَالَ إِنِّي أُشْهِدُ اللَّهَ وَاشْهَدُوا أَنِّي بَرِيءٌ مِمَّا تُشْرِكُونَ ﴿٥٥﴾

مِنْ دُونِهِ ۖ فَكِيدُونِي جَمِيعًا ثُمَّ لَا تُنْظِرُونِ ﴿٥٦﴾

**57.** 'ಖಂಡಿತವಾಗಿಯೂ ನನ್ನ ಪ್ರಭುವೂ ನಿಮ್ಮ ಪ್ರಭುವೂ ಆದ ಅಲ್ಲಾಹನ ಮೇಲೆ ನಾನು ಭರವಸೆಯಿಡುತ್ತೇನೆ. (ಭೂಮಿಯಲ್ಲಿ) ಚಲಿಸುವ ಜೀವಿಗಳಲ್ಲಿ ಅವನು ಅದರ ಮುಂಜುಟ್ಟನ್ನು ಹಿಡಿಯದ ಯಾವುದೂ ಇಲ್ಲ. ನಿಶ್ಚಯವಾಗಿಯೂ ನನ್ನ ಪ್ರಭು ಸತ್ಪಥದಲ್ಲಿದ್ದಾನೆ.

إِنِّي تَوَكَّلْتُ عَلَى اللَّهِ رَبِّي وَرَبِّكُمْ ۚ مَا مِنْ دَابَّةٍ إِلَّا هُوَ آخِذٌ بِنَاصِيَتِهَا ۚ إِنَّ رَبِّي عَلَىٰ صِرَاطٍ مُسْتَقِيمٍ ﴿٥٧﴾

**58.** 'ಇನ್ನು ನೀವು ಬೆನ್ನು ತಿರುಗಿಸಿ ಹೋದರೆ *ಅದರಿಂದ ನನಗೇನೂ ದೋಷವಿಲ್ಲ*. ಯಾವ ಸಂದೇಶದ ಸಹಿತ ನಾನು ನಿಮ್ಮೆಡೆಗೆ ನಿಯೋಜಿಸಲ್ಪಟ್ಟಿರುವೆನೋ ಅದನ್ನು ನಾನು ನಿಮಗೆ ತಲಪಿಸಿದ್ದೇನೆ. (ನೀವು ಬೆನ್ನು ತಿರುಗಿಸಿ ಹೋದರೆ) ನನ್ನ ಪ್ರಭು ಬೇರೊಂದು ಸಮುದಾಯವನ್ನು ನಿಮ್ಮ ಬದಲಿಗೆ ಉತ್ತರಾಧಿಕಾರಿಗಳನ್ನಾಗಿ ಮಾಡುವನು. ಅವನಿಗೇನೂ ಹಾನಿಯುನ್ನುಂಟುಮಾಡಲು ನಿಮ್ಮಿಂದಾಗದು. ಖಂಡಿತವಾಗಿಯೂ ನನ್ನ ಪ್ರಭು ಎಲ್ಲ ವಸ್ತುಗಳ ಸಂರಕ್ಷಕನಾಗಿದ್ದಾನೆ.'

فَإِنْ تَوَلَّوْا فَقَدْ أَبْلَغْتُكُمْ مَا أُرْسِلْتُ بِهِ إِلَيْكُمْ ۚ وَيَسْتَخْلِفُ رَبِّي قَوْمًا غَيْرَكُمْ وَلَا تَضُرُّونَهُ شَيْئًا ۚ إِنَّ رَبِّي عَلَىٰ كُلِّ شَيْءٍ حَفِيظٌ ﴿٥٨﴾

**59.** ನಮ್ಮ ಆಜ್ಞೆ ಜಾರಿಗೊಂಡಾಗ, ಹೂದ್ ಮತ್ತು ಅವರೊಂದಿಗಿದ್ದ ವಿಶ್ವಾಸಿಗಳನ್ನು ನಮ್ಮ ಕಾರುಣ್ಯದಿಂದ ನಾವು ರಕ್ಷಿಸಿದೆವು. ನಾವು ಅವರನ್ನು ಕಠಿಣ ಶಿಕ್ಷೆಯಿಂದ ಪಾರುಮಾಡಿದೆವು.

وَلَمَّا جَاءَ أَمْرُنَا نَجَّيْنَا هُودًا وَالَّذِينَ آمَنُوا مَعَهُ بِرَحْمَةٍ مِنَّا وَنَجَّيْنَاهُمْ مِنْ عَذَابٍ غَلِيظٍ ﴿٥٩﴾

**60.** ಅವರೇ ಆದ್ ಸಮುದಾಯದವರು. ತಮ್ಮ ಪ್ರಭುವಿನ ದೃಷ್ಟಾಂತಗಳನ್ನು ಅವರು ಅಲ್ಲಗಳೆದರು.

وَتِلْكَ عَادٌ ۖ جَحَدُوا بِآيَاتِ رَبِّهِمْ

ಅವನ ಸಂದೇಶವಾಹಕರನ್ನು ಅವರು ತಿರಸ್ಕರಿಸಿದರು. (ಸತ್ಯದ) ವಿರೋಧಿಯಾದ ಪ್ರತಿಯೊಬ್ಬ ದುಷ್ಟನ ಆಜ್ಞೆಗಳನ್ನು ಅವರು ಅನುಸರಿಸಿದರು.

وَعَصَوْا رُسُلَهُ وَاتَّبَعُوا أَمْرَ كُلِّ جَبَّارٍ عَنِيدٍ ﴿٦٠﴾

**61.** ಇಹಲೋಕದಲ್ಲಿ ಮತ್ತು ಪುನರುತ್ಥಾನ ದಿನದಂದು ಶಾಪ ಅವರನ್ನು ಹಿಂಬಾಲಿಸುವಂತಾಯಿತು. ತಿಳಿದುಕೊಳ್ಳಿರಿ, ಖಂಡಿತವಾಗಿಯೂ ಆದ್ ಸಮುದಾಯದವರು ತಮ್ಮ ಪ್ರಭುವಿಗೆ ಕೃತಘ್ನತೆ ತೋರಿಸಿದರು. ತಿಳಿದುಕೊಳ್ಳಿರಿ, ಹೂದ್‌ರ ಸಮುದಾಯವಾದ ಆದ್ ಶಾಪಕ್ಕೆ ಗುರಿಯಾಯಿತು.

وَأُتْبِعُوا فِي هَٰذِهِ الدُّنْيَا لَعْنَةً وَيَوْمَ الْقِيَامَةِ ۗ أَلَا إِنَّ عَادًا كَفَرُوا رَبَّهُمْ ۗ أَلَا بُعْدًا لِعَادٍ قَوْمِ هُودٍ ﴿٦١﴾

**62.** ಸಮೂದ್ ಸಮುದಾಯದ ಬಳಿಗೆ ಅವರ ಸಹೋದರ ಸಾಲಿಹ್‌ರನ್ನು ಸಹ (ಸಂದೇಶವಾಹಕನಾಗಿ ನಾವು ಕಳುಹಿಸಿದೆವು). ಅವರು ಹೇಳಿದರು: 'ಎಲೈ ನನ್ನ ಜನರೇ, ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. ಅವನು ನಿಮ್ಮನ್ನು ಭೂಮಿಯಿಂದ ಮೇಲಕ್ಕೆತ್ತಿ ಅಲ್ಲಿ ನೀವು ವಾಸ ಹೂಡುವಂತೆ ಮಾಡಿದ್ದಾನೆ. ಆದ್ದರಿಂದ ಅವನಲ್ಲಿ ಕ್ಷಮಾಯಾಚನೆ ಮಾಡಿರಿ ಹಾಗೂ (ಹೃತ್ಪೂರ್ವಕವಾಗಿ) ಪಶ್ಚಾತ್ತಾಪಪಟ್ಟು ಅವನ ಬಳಿಗೆ ಮರಳಿರಿ. ಖಂಡಿತವಾಗಿಯೂ ನನ್ನ ಪ್ರಭು ಸಮೀಪದಲ್ಲಿರುವವನೂ ಪ್ರಾರ್ಥನೆಗೆ ಉತ್ತರ ಕೊಡುವವನೂ ಆಗಿದ್ದಾನೆ.'

وَإِلَىٰ ثَمُودَ أَخَاهُمْ صَالِحًا ۚ قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۖ هُوَ أَنشَأَكُم مِّنَ الْأَرْضِ وَاسْتَعْمَرَكُمْ فِيهَا فَاسْتَغْفِرُوهُ ثُمَّ تُوبُوا إِلَيْهِ ۚ إِنَّ رَبِّي قَرِيبٌ مُّجِيبٌ ﴿٦٢﴾

**63.** ಅವರು ಹೇಳಿದರು: 'ಎಲೈ ಸಾಲಿಹ್, ಇದಕ್ಕೆ ಮುಂಚೆ ನೀನು, ನಾವು ಭರವಸೆಯನ್ನಿಟ್ಟಿದ್ದ ನಮ್ಮ ಪೈಕಿ ಒಬ್ಬ ವ್ಯಕ್ತಿಯಾಗಿದ್ದೆ. ನಮ್ಮ ತಂದೆ ತಾತಂದಿರು ಆರಾಧಿಸುತ್ತಿದ್ದುದನ್ನು ನಾವು ಆರಾಧಿಸಬಾರದೆಂದು ನೀನು ನಮ್ಮನ್ನು ತಡೆಯುವಿಯಾ? ನೀನು ನಮ್ಮನ್ನು ಯಾವುದರ ಕಡೆಗೆ ಆಹ್ವಾನಿಸುತ್ತಿರುವಿಯೋ ಅದರ ಬಗ್ಗೆ ನಾವು ಕಳವಳಕಾರಿಯಾದ ಸಂಶಯದಲ್ಲಿದ್ದೇವೆ.'

قَالُوا يَا صَالِحُ قَدْ كُنتَ فِينَا مَرْجُوًّا قَبْلَ هَٰذَا ۖ أَتَنْهَانَا أَن نَّعْبُدَ مَا يَعْبُدُ آبَاؤُنَا وَإِنَّنَا لَفِي شَكٍّ مِّمَّا تَدْعُونَا إِلَيْهِ مُرِيبٍ ﴿٦٣﴾

**64.** ಅವರು (ಸಾಲಿಹ್) ಹೇಳಿದರು: 'ಎಲೈ ನನ್ನ ಜನರೇ, ನೋಡಿರಿ ನಾನು ನನ್ನ ಪ್ರಭುವಿನಿಂದ ಸ್ಪಷ್ಟವಾದ

قَالَ يَا قَوْمِ أَرَأَيْتُمْ إِن كُنتُ عَلَىٰ بَيِّنَةٍ





ದೃಷ್ಟಾಂತ ಸಹಿತ ಬಂದಿರುವಾಗ, ಅವನು ನನ್ನ ಮೇಲೆ ಕರುಣೆ ತೋರಿಸುತ್ತಿರುವಾಗ, ನಾನು ಅವನನ್ನು ಧಿಕ್ಕರಿಸಿದ ಪಕ್ಷದಲ್ಲಿ, ಅವನ ಶಿಕ್ಷೆಯಿಂದ ಪಾರಾಗಲು ನನಗೆ ಸಹಾಯ ನೀಡುವವನು ಯಾರು? ಆದ್ದರಿಂದ ನೀವು ನನ್ನನ್ನು ಇನ್ನಷ್ಟು ನಾಶಕ್ಕೆ ಗುರಿಪಡಿಸುವಿರಿ ವಿನಾ ಮತ್ತೇನೂ ಅಲ್ಲ.'

مِّن رَّبِّي وَآتَانِي مِنْهُ رَحْمَةً فَمَن يَنصُرُنِي مِنَ اللَّهِ إِنْ عَصَيْتُهُ ۖ فَمَا تَزِيدُونَنِي غَيْرَ تَخْسِيرٍ ﴿٦٤﴾

**65.** 'ಎಲೈ ನನ್ನ ಜನರೇ, ಅಲ್ಲಾಹನ ಈ ಹೆಣ್ಣು ಒಂಟೆ[294] ನಿಮಗೊಂದು ದೃಷ್ಟಾಂತವಾಗಿದೆ. ಆದ್ದರಿಂದ ಅದನ್ನು ಬಿಟ್ಟುಬಿಡಿರಿ. ಅಲ್ಲಾಹನ ಭೂಮಿಯಲ್ಲಿ ಅದು ಮೇಯುತ್ತಿರಲಿ. ನೀವು ಅದಕ್ಕೆ ಹಾನಿಯನ್ನೇನೂ ಮಾಡಬೇಡಿರಿ. ಇಲ್ಲವಾದರೆ, ಶೀಘ್ರವಾಗಿ ನೀವೊಂದು ಶಿಕ್ಷೆಗೆ ಗುರಿಯಾಗುವಿರಿ.'

وَيَا قَوْمِ هَٰذِهِ نَاقَةُ اللَّهِ لَكُمْ آيَةً فَذَرُوهَا تَأْكُلْ فِي أَرْضِ اللَّهِ وَلَا تَمَسُّوهَا بِسُوءٍ فَيَأْخُذَكُمْ عَذَابٌ قَرِيبٌ ﴿٦٥﴾

**66.** ಆದರೆ ಅವರು ಅದರ ಹಿಂಗಾಲಿನ ಸ್ನಾಯು ರಜ್ಜುಗಳನ್ನು ಕತ್ತರಿಸಿ ಊನ ಮಾಡಿದರು. ಆಗ ಅವರು (ಸಾಲಿಹ್) ಹೇಳಿದರು: 'ನೀವು ನಿಮ್ಮ ಮನೆಗಳಲ್ಲಿ ಮೂರು ದಿನಗಳ ಕಾಲ ಜೀವನದ ಸುಖಗಳನ್ನು ಅನುಭವಿಸಿರಿ. ಇದು ಉಲ್ಲಂಘಿಸಲ್ಪಡದ ಒಂದು ವಾಗ್ದಾನವಾಗಿದೆ.

فَعَقَرُوهَا فَقَالَ تَمَتَّعُوا فِي دَارِكُمْ ثَلَاثَةَ أَيَّامٍ ۖ ذَٰلِكَ وَعْدٌ غَيْرُ مَكْذُوبٍ ﴿٦٦﴾

**67.** ನಮ್ಮ (ಶಿಕ್ಷೆಯ) ಆಜ್ಞೆ ಜಾರಿಗೊಂಡಾಗ ಸಾಲಿಹ್‌ರನ್ನೂ ಅವರೊಂದಿಗಿದ್ದ ಸತ್ಯ ವಿಶ್ವಾಸಿಗಳನ್ನೂ ನಮ್ಮ ಪ್ರತ್ಯೇಕವಾದ ಕರುಣೆಯಿಂದ ನಾವು ಕಾಪಾಡಿದೆವು. ಆ ದಿನದ ಅಪಮಾನದಿಂದಲೂ (ಅವರನ್ನು ನಾವು ಪಾರು ಮಾಡಿದೆವು). ಖಂಡಿತವಾಗಿಯೂ ನಿನ್ನ ಪ್ರಭು ಶಕ್ತಿಶಾಲಿಯೂ ಪ್ರತಾಪವಂತನೂ ಆಗಿದ್ದಾನೆ.

فَلَمَّا جَاءَ أَمْرُنَا نَجَّيْنَا صَالِحًا وَالَّذِينَ آمَنُوا مَعَهُ بِرَحْمَةٍ مِّنَّا وَمِنْ خِزْيِ يَوْمِئِذٍ ۗ إِنَّ رَبَّكَ هُوَ الْقَوِيُّ الْعَزِيزُ ﴿٦٧﴾

**68.** ದೌರ್ಜನ್ಯವೆಸಗಿದವರನ್ನು ಆ ಘೋರ ಶಿಕ್ಷೆ[294A] ಆವರಿಸಿತು. ಅವರು ತಮ್ಮ ಮನೆಗಳಲ್ಲಿ ನೆಲಕಚ್ಚಿದರು.

وَأَخَذَ الَّذِينَ ظَلَمُوا الصَّيْحَةُ فَأَصْبَحُوا فِي دِيَارِهِمْ جَاثِمِينَ ﴿٦٨﴾

294. ಈ ಒಂಟೆಯ ಮೇಲೆ ಸವಾರಿ ಮಾಡುತ್ತಾ ಹಝ್ರತ್ ಸಾಲಿಹ್ (ಅಲೈಹಿಸ್ಸಲಾಂ) ಧರ್ಮ ಬೋಧನೆ ಮಾಡುತ್ತಿದ್ದರು. ಅಲ್ಲಾಹನು ಅದನ್ನು ಅವರ ಜನತೆಗೆ ಒಂದು ದೃಷ್ಟಾಂತವನ್ನಾಗಿ ಮಾಡಿದನು. ಅದಕ್ಕೆ ನಾಶವನ್ನುಂಟು ಮಾಡಿದರೆ ಸಾಲಿಹ್‌ರ ಬೋಧನೆಯನ್ನು ತಡೆದಂತಾಗಿ ತನ್ನಿಮಿತ್ತ ಅವರ ಜನತೆ ಶಿಕ್ಷೆಗೆ ಗುರಿಯಾಗುವುದೆಂದು ಇಲ್ಲಿ ಸೂಚಿಸಲಾಗಿದೆ.

294A. "ಸೈಹತ್" ಎಂಬ ಪದಕ್ಕೆ ಅಟ್ಟಹಾಸ, ಚೀತ್ಕಾರ, ಘೋರ ನಾದ, ಹಠಾತ್ ಆಕ್ರಮಣ ಎಂದೆಲ್ಲ ಅರ್ಥಗಳಿವೆ.

**69. ಅವರು ಅಲ್ಲಿ ವಾಸಿಸಿಯೇ ಇರಲಿಲ್ಲ ವೆಂಬಂತಾಯಿತು. ತಿಳಿದುಕೊಳ್ಳಿರಿ, ದಿಟವಾಗಿಯೂ ಸಮೂದ್ ಸಮುದಾಯದವರು ತಮ್ಮ ಪ್ರಭುವಿಗೆ ಕೃತಘ್ನತೆ ತೋರಿಸಿದರು. ತಿಳಿದುಕೊಳ್ಳಿರಿ, ಸಮೂದ್ ಸಮುದಾಯ ಶಾಪಕ್ಕೆ ಗುರಿಯಾಯಿತು.**

كَأَن لَّمْ يَغْنَوْا فِيهَا ۗ أَلَا إِنَّ ثَمُودَا۟
كَفَرُوا رَبَّهُمْ ۗ أَلَا بُعْدًا لِّثَمُودَ ﴿٦٩﴾

**70. ನಮ್ಮ ದೂತರು ಇಬ್‌ರಾಹೀಮರ ಬಳಿಗೆ ಶುಭ ಸಮಾಚಾರದೊಂದಿಗೆ ಆಗಮಿಸಿದರು. '**(ನಿಮ್ಮ ಮೇಲೆ) **ಶಾಂತಿ ಇರಲಿ' ಎಂದು ಅವರು ಹೇಳಿದರು. '**(ನಿಮ್ಮ ಮೇಲೆಯೂ) **ಶಾಂತಿ ಇರಲಿ' ಎಂದು ಅವರು** (ಇಬ್‌ರಾಹೀಂ) **ಹೇಳಿದರು. ತಡಮಾಡದೆ ಅವರು ಹುರಿದ ಕರುವೊಂದನ್ನು** (ಭಕ್ಷಣೆಗೋಸ್ಕರ) **ತಂದರು.**

وَلَقَدْ جَاءَتْ رُسُلُنَا إِبْرَاهِيمَ
بِالْبُشْرَىٰ قَالُوا سَلَامًا ۖ قَالَ سَلَامٌ ۖ
فَمَا لَبِثَ أَن جَاءَ بِعِجْلٍ حَنِيذٍ ﴿٧٠﴾

**71. ಆದರೆ ಅವರ ಕೈಗಳು ಅದನ್ನು ಮುಟ್ಟದಿರುವುದನ್ನು ಕಂಡಾಗ ಅವರು** (ಇಬ್‌ರಾಹೀಂ) **ಅವರ ವರ್ತನೆಯನ್ನು ಅಸಹಜವೆಂದು ತಿಳಿದುಕೊಂಡು ಅವರ ಬಗ್ಗೆ ಭಯಗೊಂಡರು. ಆಗ ಅವರು, 'ಭಯಗೊಳ್ಳಬೇಡಿರಿ, ನಾವು ಲೂತ್‌ರ ಸಮುದಾಯದೆಡೆಗೆ ಕಳುಹಿಸಲ್ಪಟ್ಟವರಾಗಿದ್ದೇವೆ' ಎಂದು ಹೇಳಿದರು.**

فَلَمَّا رَأَىٰ أَيْدِيَهُمْ لَا تَصِلُ إِلَيْهِ
نَكِرَهُمْ وَأَوْجَسَ مِنْهُمْ خِيفَةً ۚ قَالُوا
لَا تَخَفْ إِنَّا أُرْسِلْنَا إِلَىٰ قَوْمِ لُوطٍ ﴿٧١﴾

**72. ಸಮೀಪದಲ್ಲಿ ನಿಂತಿದ್ದ ಅವರ ಪತ್ನಿ ಸಹ ಭಯಚಕಿತರಾಗಿದ್ದರು. ನಾವು ಆಕೆಗೆ ಇಸ್‌ಹಾಖ್ ಬಗ್ಗೆ ಮತ್ತು ಇಸ್‌ಹಾಖ್‌ನ ನಂತರ** (ಜನಿಸುವ) **ಯಅ್‌ಖೂಬ್ ಬಗ್ಗೆ ಸಹ ಶುಭವಾರ್ತೆ ನೀಡಿದೆವು.**

وَامْرَأَتُهُ قَائِمَةٌ فَضَحِكَتْ فَبَشَّرْنَاهَا
بِإِسْحَاقَ وَمِن وَرَاءِ إِسْحَاقَ يَعْقُوبَ ﴿٧٢﴾

**73. ಆಕೆ ಹೇಳಿದಳು: 'ನನ್ನ ಪ್ರಾರಬ್ಧವೇ, ನಾನು ವೃದ್ಧೆಯೂ ನನ್ನ ಪತಿ ವೃದ್ಧನೂ ಆಗಿರುವಾಗ ನನಗೆ ಹೇಗೆ ಮಗು ಹುಟ್ಟುವುದು? ಇದು ನಿಜವಾಗಿಯೂ ಆಶ್ಚರ್ಯದ ಸಂಗತಿಯಾಗಿದೆ.'**

قَالَتْ يَا وَيْلَتَىٰ أَأَلِدُ وَأَنَا عَجُوزٌ وَهَٰذَا
بَعْلِي شَيْخًا ۖ إِنَّ هَٰذَا لَشَيْءٌ عَجِيبٌ ﴿٧٣﴾

**74. ಅವರು** (ದೇವದೂತರು) **ಹೇಳಿದರು: 'ದೇವ ವಿಧಿಯ ಬಗ್ಗೆ ನೀನು ಅಚ್ಚರಿಪಡುವಿಯಾ? ಎಲೈ ಈ ಗೃಹದ ನಿವಾಸಿಗಳೇ, ಅಲ್ಲಾಹನ ಕರುಣೆ ಮತ್ತು ಅವನ ಅನುಗ್ರಹಗಳು ನಿಮ್ಮ ಮೇಲಿವೆ. ಖಂಡಿತವಾಗಿಯೂ ಅವನು ಸ್ತುತ್ಯರ್ಹನೂ ಮಹಾಮಹಿಮನೂ ಆಗಿದ್ದಾನೆ.'**

قَالُوا أَتَعْجَبِينَ مِنْ أَمْرِ اللَّهِ ۖ رَحْمَتُ
اللَّهِ وَبَرَكَاتُهُ عَلَيْكُمْ أَهْلَ الْبَيْتِ ۚ
إِنَّهُ حَمِيدٌ مَّجِيدٌ ﴿٧٤﴾





**75. ಹಾಗೆ, ಇಬ್‌ರಾಹೀಮರ ಭಯ ನಿವಾರಣೆಯಾದಾಗ ಮತ್ತು ಶುಭವಾರ್ತೆ ಅವರಿಗೆ ತಿಳಿದಾಗ, ಅವರು ಲೂತ್ ಸಮುದಾಯದವರ ಪರವಾಗಿ ನಮ್ಮೊಡನೆ ವಾದಿಸಲು ತೊಡಗಿದರು.**

فَلَمَّا ذَهَبَ عَنْ إِبْرَاهِيمَ الرَّوْعُ وَ
جَاءَتْهُ الْبُشْرَىٰ يُجَادِلُنَا فِي قَوْمِ
لُوطٍ ﴿٧٥﴾

**76. ದಿಟವಾಗಿಯೂ ಇಬ್‌ರಾಹೀಂ ಸಹನಶೀಲರೂ ಮೃದುಲ ಹೃದಯಿಯೂ ಅಲ್ಲಾಹನ ಕಡೆಗೆ ಸದಾ ಬಾಗುವವರೂ ಆಗಿದ್ದರು.**

إِنَّ إِبْرَاهِيمَ لَحَلِيمٌ أَوَّاهٌ مُّنِيبٌ ﴿٧٦﴾

**77. 'ಎಲೈ ಇಬ್‌ರಾಹೀಂ, ನೀನು ಇದರಿಂದ ವಿಮುಖನಾಗು. ನಿನ್ನ ಪ್ರಭುವಿನ ಆಜ್ಞೆ ಹೊರಡಿಸಲ್ಪಟ್ಟಿದೆ. ತಪ್ಪಿಸಲಾಗದಂತಹ ಶಿಕ್ಷೆ ಖಂಡಿತವಾಗಿಯೂ ಅವರ ಮೇಲೆ ಬಂದೆರಗುವುದು.'**

يَا إِبْرَاهِيمُ أَعْرِضْ عَنْ هَٰذَا ۖ إِنَّهُ قَدْ
جَاءَ أَمْرُ رَبِّكَ ۖ وَإِنَّهُمْ آتِيهِمْ عَذَابٌ
غَيْرُ مَرْدُودٍ ﴿٧٧﴾

**78. ನಮ್ಮ ದೂತರು ಲೂತರ ಬಳಿಗೆ ಬಂದಾಗ, ಅವರ ನಿಮಿತ್ತ ಅವರು** (ಲೂತ್) **ದುಃಖಿತರಾದರು**[294B] **ಹಾಗೂ ಅವರ ಬಗ್ಗೆ ಅವರಿಗೆ** (ಲೂತ್‌ರಿಗೆ) **ವ್ಯಾಕುಲತೆಯುಂಟಾಯಿತು. ಅವರು** (ಲೂತ್) **ಹೇಳಿದರು: 'ಇದು ಕ್ಲೇಶಕರವಾದ ದಿನವಾಗಿದೆ.'**

وَلَمَّا جَاءَتْ رُسُلُنَا لُوطًا سِيءَ
بِهِمْ وَضَاقَ بِهِمْ ذَرْعًا وَقَالَ هَٰذَا
يَوْمٌ عَصِيبٌ ﴿٧٨﴾

**79. ಅವರ ಜನರು** (ಕೋಪಿಷ್ಠರಾಗಿ) **ಕಂಪಿಸುತ್ತಾ ಅವರ ಬಳಿಗೆ ಓಡಿ ಬಂದರು. ಇದಕ್ಕೆ ಮುಂಚೆ ಸಹ ಅವರು ದುಷ್ಕೃತ್ಯವೆಸಗುತ್ತಿದ್ದರು. ಅವರು** (ಲೂತ್) **ಹೇಳಿದರು: 'ಎಲೈ ನನ್ನ ಜನರೇ, ಇವರು** (ನಿಮ್ಮ ಮನೆಗಳಿಗೆ ವಿವಾಹಿತರಾಗಿ ಬಂದಿರುವ) **ನನ್ನ ಪುತ್ರಿಯರಾಗಿದ್ದಾರೆ. ಇವರು ನಿಮಗೆ** (ಭದ್ರತೆಗಾಗಿ ಪರ್ಯಾಪ್ತರೂ) **ಹೆಚ್ಚು**

وَجَاءَهُ قَوْمُهُ يُهْرَعُونَ إِلَيْهِ وَمِن
قَبْلُ كَانُوا يَعْمَلُونَ السَّيِّئَاتِ ۚ قَالَ
يَا قَوْمِ هَٰؤُلَاءِ بَنَاتِي هُنَّ أَطْهَرُ لَكُمْ ۖ
فَاتَّقُوا اللَّهَ وَلَا تُخْزُونِ فِي ضَيْفِي ۖ

294B. ಪ್ರವಾದಿ ಲೂತ್ (ಅಲೈಹಿಸ್ಸಲಾಂ) ಪ್ರವಾದಿ ಇಬ್‌ರಾಹೀಂ (ಅಲೈಹಿಸ್ಸಲಾಂ)ರ ಭ್ರಾತೃಜ ಆಗಿದ್ದರು. ಅವರು ಮೊದಲು ಇರಾಕ್ ನಿವಾಸಿಯಾಗಿದ್ದರು. ಈ ಸಂದರ್ಭದಲ್ಲಿ ಅವರು ಪೆಲಿಸ್ತೀನದಲ್ಲಿದ್ದರು. ಅವರು ಅಲ್ಲಿ ಅಪರಿಚಿತರಾಗಿದ್ದರು. ಬೇರೆ ಅಪರಿಚಿತರನ್ನು ಬರಮಾಡಿಕೊಳ್ಳುವುದರಿಂದ ಹಝ್ರತ್ ಲೂತ್ (ಅ)ರ ಜನತೆ ಅವರನ್ನು ತಡೆದಿತ್ತು. (ಪವಿತ್ರ ಖುರ್‌ಆನ್ 15:71). ಆದರೆ ಹಝ್ರತ್ ಲೂತ್ (ಅ) ಅತಿಥಿ ಸತ್ಕಾರ ಮಾಡುವ ಸ್ವಭಾವದವರಾಗಿದ್ದರು. ಅತಿಥಿಗಳನ್ನು ಬರಮಾಡಿಕೊಂಡುದನ್ನು ಊರಿನವರು ಕಂಡರೆ ಕೋಪಗೊಳ್ಳುವರೆಂದು ಭಾವಿಸಿ ಅವರು ದುಃಖಿತರಾದರು.

**ಪರಿಶುದ್ಧರೂ ಆಗಿರುವರು.[294C] ಆದುದರಿಂದ ನೀವು ಅಲ್ಲಾಹನ ಭಯಭಕ್ತಿ ಇರಿಸಿಕೊಳ್ಳಿರಿ. ನನ್ನ ಅತಿಥಿಗಳ ವಿಚಾರದಲ್ಲಿ ನೀವು ನನ್ನನ್ನು ಅಪಮಾನಗೊಳಿಸದಿರಿ. ನಿಮ್ಮಲ್ಲಿ ವಿವೇಕಿಯಾದ ಯಾರೂ ಇಲ್ಲವೇ.?'**

أَلَيْسَ مِنكُمْ رَجُلٌ رَّشِيدٌ ﴿٧٩﴾

**80. ಅವರು ಹೇಳಿದರು: 'ನಿನ್ನ ಹೆಣ್ಮಕ್ಕಳಲ್ಲಿ ನಮಗೆ ಏನೂ ಹಕ್ಕಿಲ್ಲವೆಂದು ನಿನಗೆ ಗೊತ್ತು. ನಮ್ಮ ಉದ್ದೇಶವೇನೆಂದು ಸಹ ನಿನಗೆ ಗೊತ್ತಿದೆ.'[294D]**

قَالُوا لَقَدْ عَلِمْتَ مَا لَنَا فِي بَنَاتِكَ مِنْ حَقٍّ وَإِنَّكَ لَتَعْلَمُ مَا نُرِيدُ ﴿٨٠﴾

**81. ಅವರು** (ಲೂತ್) **ಹೇಳಿದರು: 'ನಿಮ್ಮನ್ನು ಎದುರಿಸಲಿಕ್ಕೆ ನನಗೆ ಶಕ್ತಿ ಇರುತ್ತಿದ್ದರೆ! ಅಥವಾ ಶಕ್ತಿಯುತವಾದೊಂದು ಆಶ್ರಯವನ್ನು ಪಡೆಯಲು ನನಗೆ ಸಾಧ್ಯವಾಗುತ್ತಿದ್ದರೆ!'**

قَالَ لَوْ أَنَّ لِي بِكُمْ قُوَّةً أَوْ آوِي إِلَىٰ رُكْنٍ شَدِيدٍ ﴿٨١﴾

**82. ಆಗ ಅವರು** (ದೇವದೂತರು) **ಹೇಳಿದರು: 'ಎಲೈ ಲೂತ್, ನಾವು ನಿನ್ನ ಪ್ರಭುವಿನ ದೂತರಾಗಿದ್ದೇವೆ. ಅವರು ಎಂದಿಗೂ ನಿನ್ನ ಬಳಿಗೆ ತಲಪರಾರರು.[294E]**

قَالُوا يَا لُوطُ إِنَّا رُسُلُ رَبِّكَ لَن يَصِلُوا

294C. ಇಲ್ಲಿ ಪ್ರವಾದಿ ಲೂತ್ (ಅ) ತನ್ನ ಜನತೆಯೊಡನೆ ಹೇಳಿದುದಕ್ಕೆ ಕೆಲವು ಪೂರ್ವಿಕ ವ್ಯಾಖ್ಯಾನಗಾರರು ತಪ್ಪಾಗಿ ಹೀಗೆ ಅರ್ಥ ಹೇಳುತ್ತಾರೆ: 'ನನ್ನ ಎರಡು ಹೆಣ್ಮಕ್ಕಳಿಂದ ನೀವು ಆಶೆಯನ್ನು ಪೂರೈಸಿಕೊಳ್ಳಿರಿ; ನನ್ನ ಅತಿಥಿಗಳನ್ನು ಸತಾಯಿಸಬೇಡಿರಿ' ಎಂದು. ಇದು ಅತ್ಯಂತ ಲಜ್ಜಾಕರವಾದ ವ್ಯಾಖ್ಯಾನವಾಗಿದೆ. ಓರ್ವ ಪ್ರವಾದಿಯ ಸ್ಥಾನಮಾನಕ್ಕೆ ಇದು ಸರಿಹೊಂದುವುದಿಲ್ಲ.

ಹಝ್ರತ್ ಲೂತ್ (ಅ)ರ ಇಬ್ಬರು ಪುತ್ರಿಯರು ಅದೇ ಪಟ್ಟಣದಲ್ಲಿ ವಿವಾಹಿತರಾಗಿದ್ದರು. ಬೈಬಲ್‌ನಿಂದಲೂ ಇದು ಸಾಬೀತಾಗುತ್ತದೆ. (ಆದಿಕಾಂಡ 19:14). ಖುರ್‌ಆನ್ ಮತ್ತು ಬೈಬಲ್‌ನಲ್ಲಿ ಈ ಘಟನೆಯ ಕುರಿತು ಇರುವ ವಿವರಣೆಯಿಂದ ತಿಳಿದು ಬರುವುದೇನೆಂದರೆ: ಪ್ರವಾದಿ ಲೂತ್ (ಅ) ಪರವೂರಿನ ಜನರನ್ನು ಬರಮಾಡಿಕೊಂಡದ್ದರಿಂದ ಆ ಊರಿನವರು ಕೋಪಗೊಂಡಿದ್ದರು. ಆದುದರಿಂದ ಪ್ರವಾದಿ ಲೂತ್ ಅವರನ್ನು ಸಮಾಧಾನಪಡಿಸುತ್ತಾ ಹಾಗೆ ಹೇಳಿದ್ದರು. ಅದರ ತಾತ್ಪರ್ಯವೇನೆಂದರೆ: 'ನನ್ನ ಪುತ್ರಿಯರು ನಿಮ್ಮ ಮನೆಯಲ್ಲಿರುವಾಗ, ನನ್ನ ಅತಿಥಿಗಳಿಂದ ನಿಮಗೇನಾದರೂ ಹಾನಿಯಾಗುವುದೆಂದು ನೀವು ಭಯಪಡಬೇಕಾಗಿಲ್ಲ. ಅವರು ಆ ಬಗ್ಗೆ ನಿಮ್ಮ ಬಳಿ ಇರುವ ಜಾಮೀನುದಾರರಾಗಿದ್ದಾರೆ.'

294D. ಪ್ರವಾದಿ ಲೂತರ ಕಡೆಗೆ ಹೆಚ್ಚು ಹೆಚ್ಚು ಜನರು ಆಕರ್ಷಿತರಾಗುವುದನ್ನು ಸಹಿಸಲಾಗದೆ, ಯಾವುದೇ ಅಪರಿಚಿತ ಅತಿಥಿಗಳನ್ನು ತನ್ನ ಮನೆಗೆ ಬರಮಾಡಿಕೊಳ್ಳಬಾರದೆಂದು ಊರಿನವರು ಅವರನ್ನು ತಡೆದಿದ್ದರು.

'ನನ್ನ ಪುತ್ರಿಯರು ಜಾಮೀನುದಾರರೆಂಬಂತೆ ನಿಮ್ಮ ಮನೆಗಳಿಗೆ ವಿವಾಹಿತರಾಗಿ ಬಂದಿರುವಾಗ ನನ್ನ ಅತಿಥಿಗಳಿಂದ ನಿಮಗೇನಾದರೂ ಹಾನಿಯಾಗುವುದೆಂದು ನೀವು ಭಾವಿಸಬೇಕಾಗಿಲ್ಲ; ಹಾಗೇನಾದರೂ ಆದರೆ ನೀವು ನನ್ನ ಪುತ್ರಿಯರ ಮೂಲಕ ನನ್ನ ಮೇಲೆ ಸೇಡು ತೀರಿಸಕೊಳ್ಳಬಹುದಲ್ಲವೇ?' ಎಂಬ ಅರ್ಥದ ಪ್ರವಾದಿ ಲೂತ್ ಹೇಳಿದ ಮಾತು ಅವರ ಜನತೆಗೆ ಸಮಾಧಾನವುಂಟುಮಾಡಲಿಲ್ಲ. ಯಾಕೆಂದರೆ ಆ ಊರಿನ ವಾಡಿಕೆಯ ಪ್ರಕಾರ ಪುರುಷರು ಮಾತ್ರ ಒತ್ತೆಯಾಳಾಗಬಹುದೇ ವಿನಾ ಸ್ತ್ರೀಯರಲ್ಲ (ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕ). ಆದ್ದರಿಂದಲೇ ಅವರು ಮೇಲಿನಂತೆ ಪ್ರತ್ಯುತ್ತರ ನೀಡಿದ್ದು: " 'ನನ್ನ ಪುತ್ರಿಯರನ್ನು ಒತ್ತೆಯಾಳಾಗಿ ಇರಿಸಿಕೊಂಡು ಅತಿಥಿಗಳನ್ನು ಅವರಷ್ಟಕ್ಕೇ ಬಿಡಿರಿ' ಎಂಬ ನಿನ್ನ ಮಾತು ನಮಗೆ ಸ್ವೀಕಾರಾರ್ಹವಲ್ಲ. ನಾವೀಗ ಬಯಸುವುದು ಅಪರಿಚಿತರನ್ನು ತಡೆಯುವುದು ಮಾತ್ರವೆಂದು ನೀನು ಚೆನ್ನಾಗಿ ಬಲ್ಲೆಯಷ್ಟೇ" ಎಂದು.





**ಆದ್ದರಿಂದ ರಾತ್ರಿಯ ಒಂದು ಜಾವದಲ್ಲಿ ನೀನು ಕುಟುಂಬ ಸಮೇತ ಹೊರಟುಬಿಡು. ನಿಮ್ಮಲ್ಲಿ ಯಾರೂ ಅತ್ತಿತ್ತ ತಿರುಗಿ ನೋಡದಿರಲಿ. ನಿನ್ನ ಪತ್ನಿ ಹೊರತು** (ಬೇರೆ ಯಾರೂ ಆಜ್ಞೋಲ್ಲಂಘನೆ ಮಾಡಲಾರರು). **ಖಂಡಿತವಾಗಿಯೂ ಅವರಿಗೆ ಬಂದೆರಗುವ ವಿಪತ್ತು ಅವಳ ಮೇಲೆಯೂ ಎರಗುವುದು. ಅವರ ನಿಶ್ಚಿತ ವೇಳೆ ಪ್ರಭಾತವಾಗಿದೆ. ಏನು ಪ್ರಭಾತ ಸಮೀಪವಲ್ಲವೇ?**

إِلَيْكَ فَأَسْرِ بِأَهْلِكَ بِقِطْعٍ مِّنَ اللَّيْلِ وَلَا يَلْتَفِتْ مِنكُمْ أَحَدٌ إِلَّا امْرَأَتَكَ إِنَّهُ مُصِيبُهَا مَا أَصَابَهُمْ إِنَّ مَوْعِدَهُمُ الصُّبْحُ أَلَيْسَ الصُّبْحُ بِقَرِيبٍ ﴿٨٢﴾

**83. ಹಾಗೆ ನಮ್ಮ ಆಜ್ಞೆಯುಂಟಾದಾಗ ನಾವು ಅದನ್ನು** (ಆ ಪಟ್ಟಣವನ್ನು) **ಅಡಿಮೇಲು ಮಾಡಿದೆವು. ಮತ್ತು ಆವೆಮಣ್ಣಿನ ಸುಟ್ಟ ಕಲ್ಲುಗಳು ಅವರ ಮೇಲೆ ಪದರ ಪದರವಾಗಿ ವರ್ಷಿಸುವಂತೆ ಮಾಡಿದೆವು.**

فَلَمَّا جَاءَ أَمْرُنَا جَعَلْنَا عَالِيَهَا سَافِلَهَا وَأَمْطَرْنَا عَلَيْهَا حِجَارَةً مِّن سِجِّيلٍ مَّنضُودٍ ﴿٨٣﴾

**84. ಅದು ನಿನ್ನ ಪ್ರಭುವಿನಿಂದ ಅವರಿಗೋಸ್ಕರವೇ ವಿಧಿಸಲ್ಪಟ್ಟದ್ದಾಗಿದೆ. ಅದು** (ಅಂತಹ ಶಿಕ್ಷೆ) **ದುಷ್ಕೃತ್ಯ ಗೈಯುವ** (ಈ ಕಾಲದ) **ಜನರಿಂದಲೂ ದೂರವಿಲ್ಲ.**

مُّسَوَّمَةً عِندَ رَبِّكَ وَمَا هِيَ مِنَ الظَّالِمِينَ بِبَعِيدٍ ﴿٨٤﴾

**85. ಮದ್‌ಯನಕ್ಕೆ ಅವರ ಸಹೋದರ ಶುಐಬ್‌ರನ್ನೂ** (ಸಂದೇಶವಾಹಕನಾಗಿ ನಾವು ಕಳುಹಿಸಿದೆವು). **ಅವರು ಹೇಳಿದರು: 'ಎಲೈ ನನ್ನ ಜನರೇ, ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ಆರಾಧ್ಯನಿಲ್ಲ. ಅಳತೆಯಲ್ಲೂ ತೂಕದಲ್ಲೂ ಕಡಿಮೆ ಮಾಡಬೇಡಿರಿ. ನಾನು** (ಈಗ) **ನಿಮ್ಮನ್ನು ಅಭಿವೃದ್ಧಿಯ ಸ್ಥಿತಿಯಲ್ಲಿ ಕಾಣುತ್ತೇನೆ. ಆದರೆ ನಿಮಗೆ ಬರಲಿರುವ ವಿನಾಶಕಾರಿಯಾದ ಶಿಕ್ಷೆಯ ದಿನದ ಬಗ್ಗೆ ನಾನು ಭಯಪಡುತ್ತೇನೆ.**

وَإِلَىٰ مَدْيَنَ أَخَاهُمْ شُعَيْبًا قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ وَلَا تَنقُصُوا الْمِكْيَالَ وَالْمِيزَانَ إِنِّي أَرَاكُم بِخَيْرٍ وَإِنِّي أَخَافُ عَلَيْكُمْ عَذَابَ يَوْمٍ مُّحِيطٍ ﴿٨٥﴾

**86. 'ಎಲೈ ನನ್ನ ಜನರೇ, ನೀವು ನ್ಯಾಯಯುತವಾಗಿಯೂ ಪೂರ್ಣವಾಗಿಯೂ ಅಳೆದು ಮತ್ತು ತೂಕಮಾಡಿ ಕೊಡಿರಿ. ಜನರಿಗೆ ಸಲ್ಲಬೇಕಾದುದನ್ನು**

وَيَا قَوْمِ أَوْفُوا الْمِكْيَالَ وَالْمِيزَانَ

294E. ಪ್ರವಾದಿ ಲೂತ್‌ರೊಡನೆ ವಾಗ್ವಾದ ಮಾಡಿ ಮರಳಿದ ಜನರು ಹೆಚ್ಚಿನ ಸಿದ್ಧತೆಯೊಂದಿಗೆ ಪುನಃ ಬಂದು ಅವರ ಮೇಲೆ ಆಕ್ರಮಣ ನಡೆಸುವ ಸಾಧ್ಯತೆಯಿತ್ತು. ಆದರೆ ಅದು ಅವರಿಂದ ಸಾಧ್ಯವಾಗಲಾರದೆಂದು ಇಲ್ಲಿ ಸೂಚಿಸಲಾಗಿದೆ. ಮರುದಿನ ಪ್ರಭಾತ ವೇಳೆಯಲ್ಲಿ ಅವರ ಮೇಲೆ ದೇವಶಿಕ್ಷೆ ಎರಗಲಿತ್ತು.

ಪೂರ್ಣವಾಗಿ ಕೊಡುವುದರಲ್ಲಿ ಕಡಿಮೆಗೊಳಿಸಬೇಡಿರಿ. ನೀವು ಭೂಮಿಯಲ್ಲಿ ಕ್ಷೋಭೆ ಹರಡುತ್ತಾ ತಿರುಗಾಡಬೇಡಿರಿ.

بِالْقِسْطِ وَلَا تَبْخَسُوا النَّاسَ أَشْيَاءَهُمْ وَلَا تَعْثَوْا فِي الْأَرْضِ مُفْسِدِينَ ﴿٨٥﴾

87. 'ನೀವು ಸತ್ಯವಿಶ್ವಾಸಿಗಳಾಗಿದ್ದರೆ, ಅಲ್ಲಾಹನು ನಿಮಗೆ ಬಾಕಿಯುಳಿಸುವ ಸಂಪತ್ತೇ ಉತ್ತಮವಾದುದು (ಎಂದು ತಿಳಿಯಿರಿ). ನಾನು ನಿಮ್ಮ ಮೇಲ್ನೋಟಗಾರನೇನೂ ಅಲ್ಲ.'

بَقِيَّتُ اللَّهِ خَيْرٌ لَّكُمْ إِن كُنتُم مُّؤْمِنِينَ ۚ وَمَا أَنَا عَلَيْكُم بِحَفِيظٍ ﴿٨٦﴾

88. ಅವರು ಹೇಳಿದರು: 'ಎಲೈ ಶುಐಬ್, ನಮ್ಮ ತಂದೆ ತಾತಂದಿರು ಆರಾಧಿಸುತ್ತಿದ್ದುದನ್ನು ನಾವು ಬಿಟ್ಟು ಬಿಡಬೇಕೆಂದು ಅಥವಾ ನಮ್ಮ ಸಂಪತ್ತನ್ನು ನಮ್ಮ ಇಚ್ಛೆಯಂತೆ ವಿನಿಯೋಗಿಸಬಾರದೆಂದು ನಿನ್ನ ಪ್ರಾರ್ಥನೆ ನಿನಗೆ ಆದೇಶಿಸುತ್ತದೆಯೇ? ನೀನು ನಿಜವಾಗಿಯೂ ಬುದ್ಧಿವಂತನೂ ಸರಿಯಾದ ಮಾರ್ಗದಲ್ಲಿ ಚಲಿಸುವವನೂ ಆಗಿರುವೆ (ಎಂದು ತಿಳಿದು ಕೊಂಡಿದ್ದೀಯಾ)?'

قَالُوا يَا شُعَيْبُ أَصَلَاتُكَ تَأْمُرُكَ أَن نَّتْرُكَ مَا يَعْبُدُ آبَاؤُنَا أَوْ أَن نَّفْعَلَ فِي أَمْوَالِنَا مَا نَشَاءُ ۖ إِنَّكَ لَأَنتَ الْحَلِيمُ الرَّشِيدُ ﴿٨٧﴾

89. ಅವರು (ಶುಐಬ್) ಹೇಳಿದರು: 'ಎಲೈ ನನ್ನ ಜನರೇ, ನೀವೇ ಹೇಳಿರಿ, ನಾನು ನನ್ನ ಪ್ರಭುವಿನ ಸ್ಪಷ್ಟವಾದ ಸಾಕ್ಷ್ಯಾಧಾರದಲ್ಲಿ ಇದ್ದಂತೆ ಮತ್ತು ಅವನು ತನ್ನಿಂದ ನನಗೆ ಉತ್ತಮವಾದ ಜೀವನ ಸಾಮಗ್ರಿಗಳನ್ನು ನೀಡಿರುವಾಗ (ನೀವು ಬಯಸಿದಂತೆ ನಾನು ಮಾಡಬೇಕೇ)? ನಾನು ನಿಮಗೆ ನಿರೋಧಿಸುವುದನ್ನೇ ನಿಮ್ಮ ವಿರುದ್ಧ ಮಾಡಲು ನಾನು ಬಯಸುವುದಿಲ್ಲ. ನನ್ನ ಕೈಲಾದಷ್ಟು ಒಳಿತು ಮಾಡುವುದೇ ನನ್ನ ಉದ್ದೇಶವಾಗಿದೆ. ಅಲ್ಲಾಹನ ಮೂಲಕ ಹೊರತು ನನಗೆ ಯಾವ ಕಾರ್ಯ ಸಾಮರ್ಥ್ಯವೂ ಇಲ್ಲ. ನಾನು ಅವನ ಮೇಲೆ ಭರವಸೆ ಇಟ್ಟಿದ್ದೇನೆ. ಅವನ ಬಳಿಗೆಯೇ ನಾನು ಮರಳುತ್ತೇನೆ.

قَالَ يَا قَوْمِ أَرَأَيْتُمْ إِن كُنتُ عَلَىٰ بَيِّنَةٍ مِّن رَّبِّي وَرَزَقَنِي مِنْهُ رِزْقًا حَسَنًا ۚ وَمَا أُرِيدُ أَنْ أُخَالِفَكُمْ إِلَىٰ مَا أَنْهَاكُمْ عَنْهُ ۚ إِنْ أُرِيدُ إِلَّا الْإِصْلَاحَ مَا اسْتَطَعْتُ ۚ وَمَا تَوْفِيقِي إِلَّا بِاللَّهِ ۚ عَلَيْهِ تَوَكَّلْتُ وَإِلَيْهِ أُنِيبُ ﴿٨٨﴾

90. 'ಎಲೈ ನನ್ನ ಜನರೇ, ನಿಮಗೆ ನನ್ನ ಮೇಲಿರುವ ದ್ವೇಷ ನೂಹರ ಸಮುದಾಯಕ್ಕಾಗಲಿ, ಹೂದರ ಸಮುದಾಯ ಕ್ಕಾಗಲಿ, ಸಾಲಿಹರ ಸಮುದಾಯಕ್ಕಾಗಲಿ ಬಂದೆರಗಿದಂಥ ಶಿಕ್ಷೆ ನಿಮ್ಮ ಮೇಲೂ ಬಂದೆರಗಲು

وَيَا قَوْمِ لَا يَجْرِمَنَّكُمْ شِقَاقِي أَن يُصِيبَكُم مِّثْلُ مَا أَصَابَ قَوْمَ نُوحٍ أَوْ قَوْمَ هُودٍ أَوْ قَوْمَ صَالِحٍ ۚ وَمَا قَوْمُ





ಹೇತುವಾಗದಿರಲಿ. ಲೂತರ ಸಮುದಾಯವಾದರೋ ನಿಮಗೆ ವಿದೂರವಲ್ಲವಷ್ಟೇ.'

لُوطٍ مِّنكُم بِبَعِيدٍ ﴿٨٩﴾

91. 'ನಿಮ್ಮ ಪ್ರಭುವಿನ ಕ್ಷಮಾಯಾಚನೆ ಮಾಡಿರಿ. ಹಾಗೂ (ಪಶ್ಚಾತ್ತಾಪ ಪಟ್ಟು) ಅವನೆಡೆಗೆ ಮರಳಿರಿ. ದಿಟವಾಗಿಯೂ ನನ್ನ ಪ್ರಭು ಕಾರುಣ್ಯನಿಧಿಯೂ ಸ್ನೇಹಶೀಲನೂ ಆಗಿದ್ದಾನೆ.'

وَاسْتَغْفِرُوا رَبَّكُمْ ثُمَّ تُوبُوا إِلَيْهِ ۚ إِنَّ رَبِّي رَحِيمٌ وَدُودٌ ﴿٩٠﴾

92. ಅವರು ಹೇಳಿದರು: 'ಎಲೈ ಶುಐಬ್, ನೀನು ಹೇಳುವುದರಲ್ಲಿ ಹೆಚ್ಚಿನವು ನಮಗೆ ಅರ್ಥವಾಗುವುದಿಲ್ಲ. ನಮ್ಮೆಡೆಯಲ್ಲಿ ಒಬ್ಬ ಬಲಹೀನ ಮನುಷ್ಯನಾಗಿ ನಾವು ನಿನ್ನನ್ನು ಕಾಣುತ್ತೇವೆ. ನಿನ್ನ ಗೋತ್ರದವರಿಲ್ಲದಿರುತ್ತಿದ್ದರೆ ನಾವು ನಿನ್ನನ್ನು ಕಲ್ಲೆಸೆದು ಕೊಲ್ಲುತ್ತಿದ್ದೆವು. ನೀನು ನಮ್ಮ ವಿರುದ್ಧ ಶಕ್ತಿಶಾಲಿಯೂ ಅಲ್ಲ.'

قَالُوا يَا شُعَيْبُ مَا نَفْقَهُ كَثِيرًا مِّمَّا تَقُولُ وَإِنَّا لَنَرَاكَ فِينَا ضَعِيفًا ۖ وَلَوْلَا رَهْطُكَ لَرَجَمْنَاكَ ۖ وَمَا أَنتَ عَلَيْنَا بِعَزِيزٍ ﴿٩١﴾

93. ಅವರು (ಶುಐಬ್) ಹೇಳಿದರು: 'ಎಲೈ ನನ್ನ ಜನರೇ, ನನ್ನ ಗೋತ್ರ ಅಲ್ಲಾಹನಿಗಿಂತ ನಿಮಗೆ ಗೌರವಾನ್ವಿತವೇ? ನೀವು ಅವನನ್ನು ನಿರ್ಲಕ್ಷಿಸಿದ್ದೀರಿ. ಖಂಡಿತವಾಗಿಯೂ ನನ್ನ ಪ್ರಭು ನಿಮ್ಮ ಕೃತ್ಯಗಳನ್ನೆಲ್ಲ ಸುತ್ತುವರಿಯುತ್ತಾನೆ.

قَالَ يَا قَوْمِ أَرَهْطِي أَعَزُّ عَلَيْكُم مِّنَ اللَّهِ وَاتَّخَذْتُمُوهُ وَرَاءَكُمْ ظِهْرِيًّا ۖ إِنَّ رَبِّي بِمَا تَعْمَلُونَ مُحِيطٌ ﴿٩٢﴾

94. 'ಎಲೈ ನನ್ನ ಜನರೇ, ನೀವು ನಿಮ್ಮ ಸ್ಥಾನದಲ್ಲಿ ನಿಮ್ಮ ಕಾರ್ಯವೆಸಗಿರಿ. (ನನ್ನ ಕೆಲಸ) ನಾನೂ ಮಾಡುತ್ತೇನೆ. ಅಪಮಾನಕರವಾದ ಶಿಕ್ಷೆ (ನಮ್ಮ ಪೈಕಿ) ಯಾರಿಗೆ ಬಂದೆರಗುವುದೆಂದೂ ಯಾರು ಸುಳ್ಳುವಾದಿಯೆಂದೂ ನೀವು ಬೇಗನೆ ತಿಳಿಯುವಿರಿ. ನೀವು ನಿರೀಕ್ಷಿಸುತ್ತಿರಿ. ನಾನು ಸಹ ನಿಮ್ಮೊಂದಿಗೆ ನಿರೀಕ್ಷಿಸುತ್ತೇನೆ.'

وَيَا قَوْمِ اعْمَلُوا عَلَىٰ مَكَانَتِكُمْ إِنِّي عَامِلٌ ۖ سَوْفَ تَعْلَمُونَ مَن يَأْتِيهِ عَذَابٌ يُخْزِيهِ وَمَنْ هُوَ كَاذِبٌ ۖ وَارْتَقِبُوا إِنِّي مَعَكُمْ رَقِيبٌ ﴿٩٣﴾

95. ನಮ್ಮ ಆಜ್ಞೆ ಜಾರಿಗೊಂಡಾಗ ಶುಐಬನ್ನೂ ಅವರೊಂದಿಗಿದ್ದ ಸತ್ಯವಿಶ್ವಾಸಿಗಳನ್ನೂ ನಮ್ಮ ಕಾರುಣ್ಯದಿಂದ ನಾವು ಕಾಪಾಡಿದೆವು. ದೌರ್ಜನ್ಯವೆಸಗಿದವರು ಶಿಕ್ಷೆಗೆ ಈಡಾದರು. ಅವರ ಮನೆಗಳಲ್ಲಿ ಅವರು ನೆಲಕಚ್ಚಿದರು -

وَلَمَّا جَاءَ أَمْرُنَا نَجَّيْنَا شُعَيْبًا وَالَّذِينَ آمَنُوا مَعَهُ بِرَحْمَةٍ مِّنَّا وَأَخَذَتِ الَّذِينَ ظَلَمُوا الصَّيْحَةُ فَأَصْبَحُوا فِي دِيَارِهِمْ جَاثِمِينَ ﴿٩٤﴾

**96.** ಅವರು ಅಲ್ಲಿ ಮೊದಲೆಂದೂ ವಾಸಿಸಿರಲೇ ಇಲ್ಲವೆಂಬಂತೆ. ತಿಳಿದುಕೊಳ್ಳಿರಿ, ಸವಮೂದ್ ಶಪಿಸಲ್ಪಟ್ಟಂತೆ ಮದ್‌ಯನದವರು ಸಹ ಶಪಿಸಲ್ಪಟ್ಟರು.

كَأَن لَّمْ يَغْنَوْا فِيهَا ۗ أَلَا بُعْدًا لِّمَدْيَنَ كَمَا بَعِدَتْ ثَمُودُ ﴿٩٥﴾ ع ٨

**97.** ಮೂಸಾರನ್ನು ನಾವು ನಮ್ಮ ದೃಷ್ಟಾಂತ ಹಾಗೂ ಸ್ಪಷ್ಟವಾದ ಸಾಕ್ಷ್ಯಾಧಾರಗಳ ಸಹಿತ ಕಳುಹಿಸಿದೆವು-

وَلَقَدْ أَرْسَلْنَا مُوسَىٰ بِآيَاتِنَا وَسُلْطَانٍ مُّبِينٍ ﴿٩٦﴾

**98.** ಫಿರ್‌ಔನ್ ಮತ್ತು ಅವನ ಕೋಮಿನ ಮುಖಂಡರ ಬಳಿಗೆ. ಆದರೆ ಅವರು ಫಿರ್‌ಔನನ ಆಜ್ಞೆಯನ್ನು ಅನುಸರಿಸಿದರು. ಫಿರ್‌ಔನನ ಆಜ್ಞೆ ಯಾದರೋ ಋಜುವಾದುದಾಗಿರಲಿಲ್ಲ.

إِلَىٰ فِرْعَوْنَ وَمَلَئِهِ فَاتَّبَعُوا أَمْرَ فِرْعَوْنَ ۖ وَمَا أَمْرُ فِرْعَوْنَ بِرَشِيدٍ ﴿٩٧﴾

**99.** ಅವನು ಪುನರುತ್ಥಾನ ದಿನದಂದು ತನ್ನ ಜನರ ಮುಂದೆ ಮುಂದೆ ನಡೆದು ಅವರನ್ನು ನರಕದೆಡೆಗೆ (ಜಲಪಾನಕ್ಕಾಗಿ ಜಾನುವಾರುಗಳನ್ನು ಕೊಂಡೊಯ್ಯು ವಂತೆ) ಕೊಂಡೊಯ್ಯುವನು. ಅವರು ತಲುಪುವ ಆ ಜಲಪಾನ ಸ್ಥಳ ಅತ್ಯಂತ ಕೆಟ್ಟದ್ದಾಗಿದೆ; ಅಲ್ಲಿಗೆ ಕೊಂಡೊಯ್ಯಲ್ಪಡುವವರು ಸಹ ಕೆಟ್ಟವರು.

يَقْدُمُ قَوْمَهُ يَوْمَ الْقِيَامَةِ فَأَوْرَدَهُمُ النَّارَ ۖ وَبِئْسَ الْوِرْدُ الْمَوْرُودُ ﴿٩٨﴾

**100.** ಇಹಲೋಕದಲ್ಲೂ ಪುನರುತ್ಥಾನ ದಿನದಲ್ಲೂ ಅವರನ್ನು ಶಾಪವು ಹಿಂಬಾಲಿಸುವುದು. (ಅವರಿಗೆ) ಲಭಿಸುವ ಪ್ರತಿಫಲ ಅತಿ ನಿಕೃಷ್ಟವಾದುದು.

وَأُتْبِعُوا فِي هَٰذِهِ لَعْنَةً وَيَوْمَ الْقِيَامَةِ ۚ بِئْسَ الرِّفْدُ الْمَرْفُودُ ﴿٩٩﴾

**101.** ಇದು (ನಾಶಗೊಂಡ) ಪಟ್ಟಣಗಳ ವೃತ್ತಾಂತಗಳ ಅಂಶವಾಗಿದೆ. ನಿನಗೆ ನಾವು ಅದನ್ನು ವಿವರಿಸಿಕೊಡುತ್ತೇವೆ. ಅವುಗಳ ಪೈಕಿ ಕೆಲವು (ಈಗಲೂ) ಬಾಕಿ ಇವೆ. ಇನ್ನು ಕೆಲವು ನಾಮಾವಶೇಷವಾಗಿವೆ.

ذَٰلِكَ مِنْ أَنبَاءِ الْقُرَىٰ نَقُصُّهُ عَلَيْكَ ۖ مِنْهَا قَائِمٌ وَحَصِيدٌ ﴿١٠٠﴾

**102.** ನಾವು ಅವರಿಗೆ ಅನ್ಯಾಯವೆಸಗಲಿಲ್ಲ. ಆದರೆ ಅವರು ತಮಗೆಯೇ ಅನ್ಯಾಯವೆಸಗಿದರು. ನಿನ್ನ ಪ್ರಭುವಿನ ಆಜ್ಞೆ ಜಾರಿಗೊಂಡಾಗ ಅಲ್ಲಾಹನನ್ನು ಬಿಟ್ಟು ಅವರು ಕರೆದು ಪ್ರಾರ್ಥಿಸುತ್ತಿದ್ದ ಅವರ ದೇವರುಗಳು ಅವರಿಗೇನೂ ಪ್ರಯೋಜನಕ್ಕೆ ಬರಲಿಲ್ಲ. ಅವುಗಳು (ಆ ದೇವರುಗಳು) ಅವರಿಗೆ ವಿನಾಶವನ್ನಲ್ಲದೆ ಬೇರೇನನ್ನೂ ಹೆಚ್ಚಿಸಲಿಲ್ಲ.

وَمَا ظَلَمْنَاهُمْ وَلَٰكِن ظَلَمُوا أَنفُسَهُمْ ۖ فَمَا أَغْنَتْ عَنْهُمْ آلِهَتُهُمُ الَّتِي يَدْعُونَ مِن دُونِ اللَّهِ مِن شَيْءٍ لَّمَّا جَاءَ أَمْرُ رَبِّكَ ۖ وَمَا زَادُوهُمْ غَيْرَ تَتْبِيبٍ ﴿١٠١﴾





**103.** ಪಟ್ಟಣಗಳು ಅಕ್ರಮದಿಂದ ತುಂಬಿರುವಾಗ, ನಿನ್ನ ಪ್ರಭು ಅವುಗಳನ್ನು ಹಿಡಿದು ಶಿಕ್ಷಿಸುವಾಗ ನಿನ್ನ ಪ್ರಭುವಿನ ಹಿಡಿತ ಇದೇ ರೀತಿಯಾಗಿದೆ. ನಿಶ್ಚಯ ವಾಗಿಯೂ ಅವನ ಹಿಡಿತ ಯಾತನಾಮಯವೂ ಕಠಿಣವೂ ಆಗಿದೆ.

وَكَذَٰلِكَ أَخْذُ رَبِّكَ إِذَا أَخَذَ الْقُرَىٰ وَهِيَ ظَالِمَةٌ ۚ إِنَّ أَخْذَهُ أَلِيمٌ شَدِيدٌ ﴿١٠٢﴾

**104.** ಪರಲೋಕದ ಶಿಕ್ಷೆಯ ಕುರಿತು ಭಯ ಪಡುವವರಿಗೆ ಖಂಡಿತವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಅದು (ಬರಲಿರುವ ಆ ದಿನ) ಸರ್ವ ಮನುಷ್ಯರನ್ನು ಒಂದುಗೂಡಿಸುವ ಒಂದು ದಿನವಾಗಿದೆ. ಅದು (ಎಲ್ಲರೂ) ಸಾಕ್ಷ್ಯ ನೀಡುವ ದಿನವೂ ಆಗಿದೆ.

إِنَّ فِي ذَٰلِكَ لَآيَةً لِّمَنْ خَافَ عَذَابَ الْآخِرَةِ ۚ ذَٰلِكَ يَوْمٌ مَّجْمُوعٌ لَّهُ النَّاسُ وَذَٰلِكَ يَوْمٌ مَّشْهُودٌ ﴿١٠٣﴾

**105.** ಒಂದು ನಿಶ್ಚಿತ ಕಾಲದ ವರೆಗೆ ಹೊರತು ನಾವು ಅದನ್ನು ಮುಂದೂಡಲಾರೆವು.

وَمَا نُؤَخِّرُهُ إِلَّا لِأَجَلٍ مَّعْدُودٍ ﴿١٠٤﴾

**106.** ಆ ದಿನ ಬಂದಾಗ, ಯಾವ ಆತ್ಮವೂ ಅವನ ಅನುಮತಿ ವಿನಾ ಮಾತನಾಡಲಿಕ್ಕಿಲ್ಲ. ಅವರಲ್ಲಿ ಕೆಲವರು ದೌರ್ಭಾಗ್ಯವಂತರೂ (ಇನ್ನು ಕೆಲವರು) ಸೌಭಾಗ್ಯ ವಂತರೂ ಆಗಿ ಸಾಬೀತುಗೊಳಿಸಲ್ಪಡುವರು.

يَوْمَ يَأْتِ لَا تَكَلَّمُ نَفْسٌ إِلَّا بِإِذْنِهِ ۚ فَمِنْهُمْ شَقِيٌّ وَسَعِيدٌ ﴿١٠٥﴾

**107.** ದೌರ್ಭಾಗ್ಯವಂತರು ನರಕ ಶಿಕ್ಷೆಗೆ ಈಡಾಗು ವರು. ಅವರು ಅಲ್ಲಿ ನಿಟ್ಟುಸಿರು ಬಿಡುತ್ತಾ ಬಿಕ್ಕಳಿಸುತ್ತಾ ಇರುವರು.

فَأَمَّا الَّذِينَ شَقُوا فَفِي النَّارِ لَهُمْ فِيهَا زَفِيرٌ وَشَهِيقٌ ﴿١٠٦﴾

**108.** ಆಕಾಶಗಳೂ ಭೂಮಿಯೂ ಇರುವಷ್ಟು ಕಾಲದವರೆಗೆ[295] ಅವರು ಅಲ್ಲಿ ವಾಸಿಸುವರು- ನಿನ್ನ ಪ್ರಭು ಬಯಸುವ ಹೊರತು. ಖಂಡಿತವಾಗಿಯೂ ನಿನ್ನ ಪ್ರಭು ತಾನು ಬಯಸಿದಂತೆ ಮಾಡಬಲ್ಲವನಾಗಿದ್ದಾನೆ.

خَالِدِينَ فِيهَا مَا دَامَتِ السَّمَاوَاتُ وَالْأَرْضُ إِلَّا مَا شَاءَ رَبُّكَ ۚ إِنَّ رَبَّكَ فَعَّالٌ لِّمَا يُرِيدُ ﴿١٠٧﴾

**109.** ಸೌಭಾಗ್ಯವಂತರು ಸ್ವರ್ಗವನ್ನು ಗಳಿಸುವರು. ಆಕಾಶಗಳೂ ಭೂಮಿಯೂ ಇರುವಷ್ಟು ಕಾಲದ ವರೆಗೆ ಅವರು ಅಲ್ಲಿ ವಾಸಿಸುವರು- ನಿನ್ನ ಪ್ರಭು ಬಯಸುವ ಹೊರತು. ಕೊನೆಯಿಲ್ಲದ ನಿರಂತರ ಪಾರಿತೋಷಕಗಳು ಅವರಿಗೆ ಲಭಿಸುವುವು.

وَأَمَّا الَّذِينَ سُعِدُوا فَفِي الْجَنَّةِ خَالِدِينَ فِيهَا مَا دَامَتِ السَّمَاوَاتُ وَالْأَرْضُ إِلَّا مَا شَاءَ رَبُّكَ ۖ عَطَاءً غَيْرَ مَجْذُوذٍ ﴿١٠٨﴾

295. ದೀರ್ಘಕಾಲ ಎಂದು ತಾತ್ಪರ್ಯ.

**110.** ಈ ಜನರು ಆರಾಧಿಸುತ್ತಿರುವುದರ ಕುರಿತು ನೀನು ಸಂದೇಹಪಡಬೇಡ. ಹಿಂದೆ ಅವರ ತಂದೆ ತಾತಂದಿರು ಆರಾಧಿಸಿದ ಪ್ರಕಾರವೇ ಹೊರತು ಅವರು ಆರಾಧಿಸುವುದಿಲ್ಲ. ನಾವು ಅವರ ಪಾಲನ್ನು ಏನೂ ಕಡಿಮೆ ಮಾಡದೆ ಅವರಿಗೆ ಪೂರ್ಣವಾಗಿ ನೀಡುವೆವು.

فَلَا تَكُ فِي مِرْيَةٍ مِّمَّا يَعْبُدُ هَٰؤُلَاءِ ۚ مَا يَعْبُدُونَ إِلَّا كَمَا يَعْبُدُ آبَاؤُهُم مِّن قَبْلُ ۚ وَإِنَّا لَمُوَفُّوهُمْ نَصِيبَهُمْ غَيْرَ مَنقُوصٍ ﴿١١٠﴾

**111.** ದಿಟವಾಗಿಯೂ ನಾವು ಮೂಸಾರಿಗೆ ಗ್ರಂಥ ನೀಡಿದ್ದೇವೆ. ಅನಂತರ ಅದರ ಬಗ್ಗೆ ಭಿನ್ನಾಭಿಪ್ರಾಯ ವುಂಟಾಯಿತು. ನಿನ್ನ ಪ್ರಭುವಿನಿಂದ ಮೊದಲೇ ನಿರ್ಣಯಿಸಲ್ಪಟ್ಟ ಒಂದು ವಚನ ಇಲ್ಲದಿರುತ್ತಿದ್ದರೆ ಅವರ ಮಧ್ಯೆ (ಎಂದೋ) ತೀರ್ಮಾನವಾಗುತ್ತಿತ್ತು. ಈಗ ಅವರು ಆ ಬಗ್ಗೆ ಕಳವಳಕರವಾದ ಸಂಶಯದಲ್ಲಿದ್ದಾರೆ.

وَلَقَدْ آتَيْنَا مُوسَى الْكِتَابَ فَاخْتُلِفَ فِيهِ ۚ وَلَوْلَا كَلِمَةٌ سَبَقَتْ مِن رَّبِّكَ لَقُضِيَ بَيْنَهُمْ ۚ وَإِنَّهُمْ لَفِي شَكٍّ مِّنْهُ مُرِيبٍ ﴿١١١﴾

**112.** ಎಲ್ಲರಿಗೂ ನಿನ್ನ ಪ್ರಭು ಅವರವರ ಕೃತ್ಯಗಳ ಫಲಗಳನ್ನು ಪೂರ್ಣವಾಗಿ ಕೊಡುವನು. ಖಂಡಿತವಾಗಿಯೂ ಅವರ ಕೃತ್ಯಗಳ ಬಗ್ಗೆ ಅವನು ಪೂರ್ಣವಾಗಿಯೂ ಬಲ್ಲನು.

وَإِنَّ كُلًّا لَّمَّا لَيُوَفِّيَنَّهُمْ رَبُّكَ أَعْمَالَهُمْ ۚ إِنَّهُ بِمَا يَعْمَلُونَ خَبِيرٌ ﴿١١٢﴾

**113.** ಆದ್ದರಿಂದ ನಿನಗೆ ಆದೇಶಿಸಿದಂತೆ ನೀನು ಮತ್ತು ನಿನ್ನೊಂದಿಗೆ (ಅಲ್ಲಾಹನ ಕಡೆಗೆ) ಮರಳಿದವರು (ಸತ್ಪಥದಲ್ಲಿ) ದೃಢವಾಗಿ ನಿಲ್ಲಿರಿ. ಸೀಮೋಲ್ಲಂಘನೆ ಮಾಡಬೇಡಿರಿ. ಖಂಡಿತವಾಗಿಯೂ ನಿಮ್ಮ ಕೃತ್ಯಗಳನ್ನು ಅವನು ಚೆನ್ನಾಗಿ ಕಾಣುತ್ತಾನೆ.

فَاسْتَقِمْ كَمَا أُمِرْتَ وَمَن تَابَ مَعَكَ وَلَا تَطْغَوْا ۚ إِنَّهُ بِمَا تَعْمَلُونَ بَصِيرٌ ﴿١١٣﴾

**114.** ಅನ್ಯಾಯವೆಸಗುವವರ ಕಡೆಗೆ ನೀವು ವಾಲಬೇಡಿರಿ. ಅನ್ಯಥಾ ನಿಮ್ಮನ್ನು ಅಗ್ನಿ ಸ್ಪರ್ಶಿಸುವುದು. ನಿಮಗೆ ಅಲ್ಲಾಹನ ಹೊರತು ಮಿತ್ರರಿಲ್ಲ. ಮತ್ತೆ ನಿಮಗೆ ಯಾವ ಸಹಾಯವೂ ಲಭಿಸಲಾರದು.

وَلَا تَرْكَنُوا إِلَى الَّذِينَ ظَلَمُوا فَتَمَسَّكُمُ النَّارُ وَمَا لَكُم مِّن دُونِ اللَّهِ مِنْ أَوْلِيَاءَ ثُمَّ لَا تُنصَرُونَ ﴿١١٤﴾

**115.** ಹಗಲಿನ ಎರಡು ಅಂಶಗಳಲ್ಲೂ ರಾತ್ರಿಯ ವೇಳೆಗಳಲ್ಲೂ ನಮಾಝನ್ನು ನಿರ್ವಹಿಸಿರಿ. ಖಂಡಿತವಾಗಿಯೂ ಸತ್ಕರ್ಮಗಳು ದುಷ್ಕರ್ಮಗಳನ್ನು ಹೋಗಲಾಡಿಸುವುವು. ಇದು ನೆನಪಿಟ್ಟುಕೊಳ್ಳುವವರಿಗೆ ಒಂದು ಬೋಧನೆಯಾಗಿದೆ.

وَأَقِمِ الصَّلَاةَ طَرَفَيِ النَّهَارِ وَزُلَفًا مِّنَ اللَّيْلِ ۚ إِنَّ الْحَسَنَاتِ يُذْهِبْنَ السَّيِّئَاتِ ۚ ذَٰلِكَ ذِكْرَىٰ لِلذَّاكِرِينَ ﴿١١٥﴾





**116.** ನೀನು ಸ್ಥಿರಚಿತ್ತನಾಗಿರು. ಸಜ್ಜನರ ಪ್ರತಿಫಲವನ್ನು ಅಲ್ಲಾಹನು ವ್ಯರ್ಥಗೊಳಿಸಲಾರನು.

وَاصْبِرْ فَإِنَّ اللَّهَ لَا يُضِيعُ أَجْرَ الْمُحْسِنِينَ ﴿١١٦﴾

**117.** ನಿಮಗೆ ಮುಂಚಿನ ತಲೆಮಾರುಗಳಲ್ಲಿ ಭೂಮಿಯಲ್ಲಿ ಕ್ಷೋಭೆಯನ್ನುಂಟುಮಾಡುವುದನ್ನು ತಡೆಯುವ ಬುದ್ಧಿಶಾಲಿಗಳು ಏಕೆ ಇರಲಿಲ್ಲ- ಅವರ ಪೈಕಿ ನಾವು ರಕ್ಷಿಸಿದ ಕೇವಲ ಕೆಲವರು ಹೊರತು? ಅನ್ಯಾಯವೆಸಗಿದವರು ತಮಗೆ ಲಭಿಸಿದ ಸುಖಾಡಂಭರಗಳನ್ನು ಹಿಂಬಾಲಿಸಿದರು. ಅವರು ಅಪರಾಧಿಗಳಾದರು.

فَلَوْلَا كَانَ مِنَ الْقُرُونِ مِن قَبْلِكُمْ أُولُو بَقِيَّةٍ يَنْهَوْنَ عَنِ الْفَسَادِ فِي الْأَرْضِ إِلَّا قَلِيلًا مِّمَّنْ أَنجَيْنَا مِنْهُمْ ۗ وَاتَّبَعَ الَّذِينَ ظَلَمُوا مَا أُتْرِفُوا فِيهِ وَكَانُوا مُجْرِمِينَ ﴿١١٧﴾

**118.** ಊರುಗಳನ್ನು, ಅದರಲ್ಲಿ ನೆಲೆಸಿರುವವರು ಸಜ್ಜನರಾಗಿದ್ದರೆ, ನಿನ್ನ ಪ್ರಭು ಅನ್ಯಾಯವಾಗಿ ಅದನ್ನು ನಾಶಪಡಿಸಲಾರ.

وَمَا كَانَ رَبُّكَ لِيُهْلِكَ الْقُرَىٰ بِظُلْمٍ وَأَهْلُهَا مُصْلِحُونَ ﴿١١٨﴾

**119.** ನಿನ್ನ ಪ್ರಭು ಇಚ್ಛಿಸಿದ್ದರೆ ಮನುಷ್ಯರನ್ನೆಲ್ಲ ಒಂದೇ ಒಂದು ಸಮುದಾಯವನ್ನಾಗಿ ಮಾಡುತ್ತಿದ್ದನು. ಆದರೆ ಅವರು ಭಿನ್ನಾಭಿಪ್ರಾಯ ಹೊಂದುವುದನ್ನು ನಿಲ್ಲಿಸಲಾರರು -

وَلَوْ شَاءَ رَبُّكَ لَجَعَلَ النَّاسَ أُمَّةً وَاحِدَةً ۖ وَلَا يَزَالُونَ مُخْتَلِفِينَ ﴿١١٩﴾

**120.** ನಿನ್ನ ಪ್ರಭು ಯಾರ ಮೇಲೆ ಕರುಣೆ ತೋರಿರುವನೋ ಅವರ ಹೊರತು. ಅದಕ್ಕೋಸ್ಕರವೇ ಅವನು ಅವರನ್ನು ಸೃಷ್ಟಿಸಿರುವನು. 'ಖಂಡಿತವಾಗಿಯೂ ನಾನು (ಅವಿಧೇಯರಾದ) ಜಿನ್ನ್ ಮತ್ತು ಇನ್ಸ್‌ರಿಂದ ನರಕವನ್ನು ತುಂಬಿಸುವೆನು' ಎಂಬ ನಿನ್ನ ಪ್ರಭುವಿನ ಮಾತು ಈಡೇರುವುದು.

إِلَّا مَن رَّحِمَ رَبُّكَ ۚ وَلِذَٰلِكَ خَلَقَهُمْ ۗ وَتَمَّتْ كَلِمَةُ رَبِّكَ لَأَمْلَأَنَّ جَهَنَّمَ مِنَ الْجِنَّةِ وَالنَّاسِ أَجْمَعِينَ ﴿١٢٠﴾

**121.** ಪ್ರವಾದಿಗಳ ವೃತ್ತಾಂತಗಳಲ್ಲಿ ನಿನ್ನ ಹೃದಯಕ್ಕೆ ಸ್ಥೈರ್ಯ ನೀಡುವವನ್ನೆಲ್ಲ ನಾವು ನಿನಗೆ ವಿವರಿಸಿ ಕೊಡುತ್ತೇವೆ. ಹೀಗೆ ಈ ಸತ್ಯವು ನಿನ್ನ ಬಳಿಗೆ ಬಂದಿರುತ್ತದೆ. ಸತ್ಯವಿಶ್ವಾಸಿಗಳಿಗೆ ಇದು ಉಪದೇಶವೂ (ಕರ್ತವ್ಯಗಳ ಬಗ್ಗೆ) ಜ್ಞಾಪಕ ಹುಟ್ಟಿಸುವಂಥದ್ದೂ ಆಗಿದೆ.

وَكُلًّا نَّقُصُّ عَلَيْكَ مِنْ أَنبَاءِ الرُّسُلِ مَا نُثَبِّتُ بِهِ فُؤَادَكَ ۚ وَجَاءَكَ فِي هَٰذِهِ الْحَقُّ وَمَوْعِظَةٌ وَذِكْرَىٰ لِلْمُؤْمِنِينَ ﴿١٢١﴾

**122.** ವಿಶ್ವಾಸ ಹೊಂದದವರೊಡನೆ ಹೇಳು: 'ನಿಮ್ಮ ಸ್ಥಾನದಲ್ಲಿ ನೀವು ವರ್ತಿಸಿರಿ. ನಾವು ಸಹ (ನಮ್ಮ ಸ್ಥಾನದಲ್ಲಿ) ವರ್ತಿಸುತ್ತೇವೆ.

وَقُل لِّلَّذِينَ لَا يُؤْمِنُونَ اعْمَلُوا عَلَىٰ مَكَانَتِكُمْ إِنَّا عَامِلُونَ ﴿١٢٢﴾

**123.** 'ನೀವು ನಿರೀಕ್ಷಿಸಿರಿ; ನಾವೂ ನಿರೀಕ್ಷಿಸುತ್ತೇವೆ.'

وَانْتَظِرُوْا ۚ اِنَّا مُنْتَظِرُوْنَ ﴿١٢٢﴾

**124. ಆಕಾಶಗಳ ಮತ್ತು ಭೂಮಿಯ ನಿಗೂಢ ವಿಚಾರಗಳು ಅಲ್ಲಾಹನಿಗೆ ಸೇರಿವೆ. ಎಲ್ಲವೂ ಅವನೆಡೆಗೆ ಮರಳುವುವು. ಆದ್ದರಿಂದ ನೀನು ಅವನನ್ನು ಆರಾಧಿಸು. ಅವನ ಮೇಲೆ ಭರವಸೆಯನ್ನಿಡು. ನಿಮ್ಮ ಕೃತ್ಯಗಳ ಬಗ್ಗೆ ನಿನ್ನ ಪ್ರಭು ನಿರ್ಲಕ್ಷ್ಯನಲ್ಲ.**

وَ لِلّٰهِ غَيْبُ السَّمٰوٰتِ وَ الْاَرْضِ وَ
اِلَيْهِ يُرْجَعُ الْاَمْرُ كُلُّهٗ فَاعْبُدْهُ وَ
تَوَكَّلْ عَلَيْهِ ؕ وَمَا رَبُّكَ بِغَافِلٍ
عَمَّا تَعْمَلُوْنَ ﴿١٢٣﴾



سُوْرَةُ يُوْسُفَ مَكِّيَّةٌ وَّهِيَ مَعَ الْبَسْمَلَةِ مِائَةٌ وَّاثْنَتَا عَشَرَةَ اٰيَةً وَّاثْنَا عَشَرَ رُكُوْعًا

## 12. ಯೂಸುಫ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 112 ಆಯತ್‌ಗಳು ಹಾಗೂ 12 ರುಕೂಉ್‌ಗಳು ಇವೆ

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಅಲಿಫ್ ಲಾಂ ರಾ.**[295B] **ಇವು ಸ್ಪಷ್ಟವಾದ ಗ್ರಂಥದ ವಚನಗಳಾಗಿವೆ.**

الٓرٰ ۚ تِلْكَ اٰيٰتُ الْكِتٰبِ الْمُبِيْنِ ﴿٢﴾

**3. ನಾವು** ಪದೇ ಪದೇ ಪಾರಾಯಣ ಮಾಡಲ್ಪಡುವ **ಈ ಖುರ್‌ಆನನ್ನು ಸ್ಪಷ್ಟವಾದ ಅರಬಿ ಭಾಷೆಯಲ್ಲಿ ಅವತೀರ್ಣಗೊಳಿಸಿದ್ದೇವೆ - ನೀವು ಮನವರಿಕೆ ಮಾಡಲಿಕ್ಕಾಗಿ.**

اِنَّاۤ اَنْزَلْنٰهُ قُرْءٰنًا عَرَبِيًّا لَّعَلَّكُمْ
تَعْقِلُوْنَ ﴿٣﴾

**4. ಈ ಖುರ್‌ಆನನ್ನು ನಾವು ನಿನಗೆ ಅವತೀರ್ಣಗೊಳಿಸುವುದರ ಮೂಲಕ ಉತ್ತಮವಾದ ವೃತ್ತಾಂತವನ್ನು ನೀಡುತ್ತೇವೆ. ವಾಸ್ತವದಲ್ಲಿ ಇದಕ್ಕೆ ಮುಂಚೆ ನೀನು** (ಈ ಬಗ್ಗೆ) **ತಿಳುವಳಿಕೆಯಿಲ್ಲದವರ ಪೈಕಿಯಲ್ಲಿ ಸೇರಿದವನಾಗಿದ್ದೆ.**

نَحْنُ نَقُصُّ عَلَيْكَ اَحْسَنَ الْقَصَصِ
بِمَاۤ اَوْحَيْنَاۤ اِلَيْكَ هٰذَا الْقُرْاٰنَ ۖ وَ
اِنْ كُنْتَ مِنْ قَبْلِهٖ لَمِنَ الْغٰفِلِيْنَ ﴿٤﴾

**5. ಯೂಸುಫ್ ತನ್ನ ತಂದೆಯೊಡನೆ ಹೇಳಿದ ಸಂದರ್ಭ** (ಜ್ಞಾಪಿಸು)**: 'ನನ್ನ ತಂದೆಯೇ, ಹನ್ನೊಂದು ನಕ್ಷತ್ರಗಳನ್ನೂ ಸೂರ್ಯನನ್ನೂ ಚಂದ್ರನನ್ನೂ ನಾನು** (ಸ್ವಪ್ನದಲ್ಲಿ) **ಕಂಡೆನು - ಅವು ನನಗೆ ಸಾಷ್ಟಾಂಗ ವೆರಗುವುದನ್ನು ನಾನು ಕಂಡೆನು.'**

اِذْ قَالَ يُوْسُفُ لِاَبِيْهِ يٰۤاَبَتِ اِنِّيْ
رَاَيْتُ اَحَدَ عَشَرَ كَوْكَبًا وَّ الشَّمْسَ
وَالْقَمَرَ رَاَيْتُهُمْ لِيْ سٰجِدِيْنَ ﴿٥﴾

**6. ಅವರು** (ಯೂಸುಫರ ತಂದೆ) **ಹೇಳಿದರು: 'ನನ್ನ ಪ್ರಿಯ ಮಗನೇ, ನಿನ್ನ ಸ್ವಪ್ನ ದರ್ಶನದ ಬಗ್ಗೆ ನಿನ್ನ ಸಹೋದರರಿಗೆ ತಿಳಿಸಬೇಡ. ತಿಳಿಸಿದರೆ ಅವರು ನಿನ್ನ ವಿರುದ್ಧ ಷಡ್ಯಂತ್ರ ಹೂಡುವರು. ದಿಟವಾಗಿಯೂ ಶೈತಾನನು ಮನುಷ್ಯನ ಬಹಿರಂಗ ಶತ್ರುವಾಗಿದ್ದಾನೆ.**

قَالَ يٰبُنَيَّ لَا تَقْصُصْ رُءْيَاكَ عَلٰۤى
اِخْوَتِكَ فَيَكِيْدُوْا لَكَ كَيْدًا ؕ اِنَّ
الشَّيْطٰنَ لِلْاِنْسَانِ عَدُوٌّ مُّبِيْنٌ ﴿٦﴾

295B. "ಅನ ಅಲ್ಲಾಹು ಅರಾ" = ನಾನು ಅಲ್ಲಾಹ್ ಎಲ್ಲವನ್ನೂ ಕಾಣುತ್ತೇನೆ. (2ನೇ ಅಧ್ಯಾಯ 2ನೇ ವಚನದ ಟಿಪ್ಪಣಿ ನೋಡಿರಿ)

**7.** 'ಈ ಪ್ರಕಾರದಲ್ಲಿ ನಿನ್ನ ಪ್ರಭು ನಿನ್ನನ್ನು ಆಯ್ಕೆ ಮಾಡುವವನು ಮತ್ತು ದೈವಿಕ ವಿಚಾರಗಳ ವ್ಯಾಖ್ಯಾನವನ್ನು ನಿನಗೆ ಕಲಿಸಿಕೊಡುವವನು ಹಾಗೂ ಅವನು ತನ್ನ ಅನುಗ್ರಹವನ್ನು ಹಿಂದೆ ನಿನ್ನ ಪೂರ್ವಜರಾದ ಇಬ್‌ರಾಹೀಂ, ಇಸ್‌ಹಾಖ್ ಎಂಬವರಿಗೆ ಪೂರ್ಣಗೊಳಿಸಿದಂತೆ ನಿನಗೂ ಯಅ್‌ಖೂಬ್ ಕುಟುಂಬಕ್ಕೂ ಪೂರ್ಣಗೊಳಿಸುವನು. ದಿಟವಾಗಿಯೂ ನಿನ್ನ ಪ್ರಭು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.'

وَكَذَٰلِكَ يَجْتَبِيكَ رَبُّكَ وَيُعَلِّمُكَ مِن تَأْوِيلِ الْأَحَادِيثِ وَيُتِمُّ نِعْمَتَهُ عَلَيْكَ وَعَلَىٰ آلِ يَعْقُوبَ كَمَا أَتَمَّهَا عَلَىٰ أَبَوَيْكَ مِن قَبْلُ إِبْرَاهِيمَ وَإِسْحَاقَ ۚ إِنَّ رَبَّكَ عَلِيمٌ حَكِيمٌ ﴿٧﴾

**8.** ನಿಶ್ಚಯವಾಗಿಯೂ ಯೂಸುಫ್ ಮತ್ತು ಅವರ ಸಹೋದರರಲ್ಲಿ (ಅವರ ವೃತ್ತಾಂತದಲ್ಲಿ) ಅನ್ವೇಷಕರಿಗೆ ಅನೇಕ ದೃಷ್ಟಾಂತಗಳಿವೆ.

لَّقَدْ كَانَ فِي يُوسُفَ وَإِخْوَتِهِ آيَاتٌ لِّلسَّائِلِينَ ﴿٨﴾

**9.** 'ನಾವು ಶಕ್ತಿಶಾಲಿಗಳಾಗಿದ್ದರೂ ನಮ್ಮ ತಂದೆಗೆ ಯೂಸುಫ್ ಮತ್ತು ಅವನ ತಮ್ಮ ನಮಗಿಂತ ಪ್ರೀತಿಯವರಾಗಿದ್ದಾರೆ. ಖಂಡಿತವಾಗಿಯೂ ನಮ್ಮ ತಂದೆ ಸ್ಪಷ್ಟವಾಗಿ ತಪ್ಪು ಮಾಡುತ್ತಿದ್ದಾರೆ' ಎಂದು ಅವರು (ಯೂಸುಫರ ಹಿರಿಯ ಸಹೋದರರು ಪರಸ್ಪರ) ಹೇಳಿದಾಗ,

إِذْ قَالُوا لَيُوسُفُ وَأَخُوهُ أَحَبُّ إِلَىٰ أَبِينَا مِنَّا وَنَحْنُ عُصْبَةٌ إِنَّ أَبَانَا لَفِي ضَلَالٍ مُّبِينٍ ﴿٩﴾

**10.** (ಅವರ ಪೈಕಿ ಒಬ್ಬ ಹೇಳಿದನು:) 'ಯೂಸುಫನನ್ನು ಕೊಲ್ಲಿರಿ; ಅಥವಾ (ದೂರದ) ಒಂದು ಸ್ಥಳದಲ್ಲಿ ಅವನನ್ನು ಬಿಟ್ಟು ಬನ್ನಿರಿ. ಆಗ ನಿಮ್ಮ ತಂದೆಯ ಗಮನವೆಲ್ಲ ನಿಮ್ಮ ಕಡೆಗೆಯೇ ಇರುವುದು. ಆ ಬಳಿಕ (ಪಶ್ಚಾತ್ತಾಪಪಟ್ಟು) ನೀವು ಸಜ್ಜನರಾಗಿ ಬಾಳಬಹುದು.'

اقْتُلُوا يُوسُفَ أَوِ اطْرَحُوهُ أَرْضًا يَخْلُ لَكُمْ وَجْهُ أَبِيكُمْ وَتَكُونُوا مِن بَعْدِهِ قَوْمًا صَالِحِينَ ﴿١٠﴾

**11.** 'ಅವರಲ್ಲಿ ಇನ್ನೊಬ್ಬ ಹೇಳಿದನು: 'ನೀವು ಯೂಸುಫನನ್ನು ಕೊಲ್ಲಬೇಡಿರಿ. ನೀವೇನಾದರೂ ಮಾಡಲು ಬಯಸುವುದಾದರೆ, ಒಂದು ಆಳವಾದ ಬಾವಿಯಲ್ಲಿ ಅವನನ್ನು ಎಸೆಯಿರಿ. ಯಾತ್ರಿಕರಲ್ಲಿ ಯಾರಾದರೂ ಅವನನ್ನು ಮೇಲಕ್ಕೆತ್ತಿಕೊಂಡು ಹೋಗುವರು.'

قَالَ قَائِلٌ مِّنْهُمْ لَا تَقْتُلُوا يُوسُفَ وَأَلْقُوهُ فِي غَيَابَتِ الْجُبِّ يَلْتَقِطْهُ بَعْضُ السَّيَّارَةِ إِن كُنتُمْ فَاعِلِينَ ﴿١١﴾

**12.** ಅವರು ಹೇಳಿದರು: 'ನಮ್ಮ ತಂದೆಯೇ, ಯೂಸುಫನ ವಿಚಾರದಲ್ಲಿ ನಮ್ಮನ್ನು ನಂಬದಿರಲಿಕ್ಕೆ

قَالُوا يَا أَبَانَا مَا لَكَ لَا تَأْمَنَّا عَلَىٰ يُوسُفَ





ನಿಮಗೇನಾಗಿದೆ? ನಾವಾದರೋ, ಅವನ ನೈಜ ಹಿತಾಕಾಂಕ್ಷಿಗಳಾಗಿದ್ದೇವೆ.

وَإِنَّا لَهُ لَنَاصِحُونَ ﴿١٢﴾

**13.** 'ನಾಳೆ ಅವನನ್ನು ನಮ್ಮೊಂದಿಗೆ ಕಳುಹಿಸಿ ಕೊಡಿರಿ. ಅವನು ಆನಂದಿಸಲಿ ಮತ್ತು ಆಟವಾಡಲಿ. ಖಂಡಿತವಾಗಿಯೂ ನಾವು ಅವನ ರಕ್ಷಣೆಗೆ ಇದ್ದೇವಷ್ಟೆ.'

أَرْسِلْهُ مَعَنَا غَدًا يَرْتَعْ وَيَلْعَبْ وَإِنَّا لَهُ لَحَافِظُونَ ﴿١٣﴾

**14.** ಅವರು (ತಂದೆ) ಹೇಳಿದರು: 'ನೀವು ಅವನನ್ನು ಕರಕೊಂಡು ಹೋಗುವುದು ನನ್ನನ್ನು ವ್ಯಥೆಗೀಡುಮಾಡುತ್ತದೆ. ನೀವು ಅವನ ಬಗ್ಗೆ ನಿರ್ಲಕ್ಷ್ಯರಾಗಿರುವಾಗ ತೋಳ ಅವನನ್ನು ತಿಂದು ಬಿಡಬಹುದೆಂದು ನಾನು ಭಯಪಡುತ್ತೇನೆ.'

قَالَ إِنِّي لَيَحْزُنُنِي أَن تَذْهَبُوا بِهِ وَأَخَافُ أَن يَأْكُلَهُ الذِّئْبُ وَأَنتُمْ عَنْهُ غَافِلُونَ ﴿١٤﴾

**15.** ಅವರು ಹೇಳಿದರು: 'ನಾವಿಷ್ಟು ಬಲಿಷ್ಠರಾಗಿರುವಾಗ ತೋಳ ಅವನನ್ನು ತಿನ್ನುವುದೆಂದರೆ, ಖಂಡಿತವಾಗಿಯೂ ನಾವು ದೌರ್ಭಾಗ್ಯವಂತರಾಗುವೆವು.'

قَالُوا لَئِنْ أَكَلَهُ الذِّئْبُ وَنَحْنُ عُصْبَةٌ إِنَّا إِذًا لَّخَاسِرُونَ ﴿١٥﴾

**16.** ಹಾಗೆ ಅವರು ಆತನನ್ನು ಕರೆದುಕೊಂಡು ಹೋಗಿ, ಒಂದು ಆಳವಾದ ಬಾವಿಯಲ್ಲಿ ಎಸೆಯಲು ಒಮ್ಮತಾಭಿಪ್ರಾಯ ಹೊಂದಿದಾಗ, ನಾವು ಆತನಿಗೆ ದಿವ್ಯ ಸಂದೇಶ ನೀಡಿದೆವು: (ನೀನು ಇದರಿಂದ ಪಾರಾಗುವೆ) ಅವರ ಕೃತ್ಯದ ಕುರಿತು ನೀನು (ಮುಂದೊಂದು ದಿನ) ಅವರಿಗೆ ಹೇಳಿಕೊಡುವೆ. ಆಗ ಅವರು ನಿನ್ನ ಬಗ್ಗೆ ತಿಳಿದಿರಲಾರರು.

فَلَمَّا ذَهَبُوا بِهِ وَأَجْمَعُوا أَن يَجْعَلُوهُ فِي غَيَابَتِ الْجُبِّ ۚ وَأَوْحَيْنَا إِلَيْهِ لَتُنَبِّئَنَّهُم بِأَمْرِهِمْ هَٰذَا وَهُمْ لَا يَشْعُرُونَ ﴿١٦﴾

**17.** ಅವರು ಸಂಜೆ ಹೊತ್ತು ಅಳುತ್ತಾ ತಮ್ಮ ತಂದೆಯ ಬಳಿಗೆ ಬಂದರು.

وَجَاءُوا أَبَاهُمْ عِشَاءً يَبْكُونَ ﴿١٧﴾

**18.** ಅವರು ಹೇಳಿದರು: 'ನಮ್ಮ ತಂದೆಯೇ, ಯೂಸುಫನನ್ನು ನಮ್ಮ ಸಾಮಾನುಗಳ ಹತ್ತಿರ ಬಿಟ್ಟು ನಾವು ಸ್ಪರ್ಧಿಸುತ್ತಾ ಓಡುತ್ತಿದ್ದೆವು. ಆಗ ತೋಳ ಬಂದು ಅವನನ್ನು ತಿಂದು ಬಿಟ್ಟಿತು. ಆದರೆ ನಾವು ಸತ್ಯ ಹೇಳಿದರೂ ನೀವು ನಮ್ಮನ್ನು ನಂಬಲಿಕ್ಕಿಲ್ಲವಷ್ಟೆ.'

قَالُوا يَا أَبَانَا إِنَّا ذَهَبْنَا نَسْتَبِقُ وَتَرَكْنَا يُوسُفَ عِندَ مَتَاعِنَا فَأَكَلَهُ الذِّئْبُ ۖ وَمَا أَنتَ بِمُؤْمِنٍ لَّنَا وَلَوْ كُنَّا صَادِقِينَ ﴿١٨﴾

**19.** ಅವರು ಯೂಸುಫರ ಅಂಗಿಯ ಮೇಲೆ ಹುಸಿ ರಕ್ತವನ್ನು ಹಚ್ಚಿ ತಂದರು. ಯಅ್‌ಖೂಬ್ ಹೇಳಿದರು: 'ಇಲ್ಲ, ನಿಮಗೆ ನಿಮ್ಮ ಮನಸ್ಸು ಈ ಮೋಸದ ಕೃತ್ಯವನ್ನು ಚಲೋದಾಗಿ ತೋರಿಸಿದೆ. ಆದ್ದರಿಂದ ಉತ್ತಮವಾದ ಸಹನೆಯೇ ನನಗೀಗ ಉಚಿತವಾದುದು. ನಿಮ್ಮ ಹೇಳಿಕೆಯ ಕುರಿತು ಅಲ್ಲಾಹನಿಂದ ಮಾತ್ರ ನೆರವನ್ನು ಯಾಚಿಸಬಹುದಾಗಿದೆ.'

وَجَآءُوْ عَلٰى قَمِيْصِهٖ بِدَمٍ كَذِبٍ ؕ قَالَ بَلْ سَوَّلَتْ لَكُمْ اَنْفُسُكُمْ اَمْرًا ؕ فَصَبْرٌ جَمِيْلٌ ؕ وَاللّٰهُ الْمُسْتَعَانُ عَلٰى مَا تَصِفُوْنَ ﴿١٩﴾

**20.** ಅಲ್ಲಿಗೆ ಒಂದು ಯಾತ್ರಿಕರ ತಂಡ ಬಂತು. ಅವರು ತಮ್ಮ ನೀರು ಸೇದುವವನನ್ನು (ನೀರು ತರಲು) ಕಳುಹಿಸಿದರು. ಅವನು ತೊಟ್ಟಿಯನ್ನು ಬಾವಿಗೆ ಇಳಿಸಿದನು. 'ಓ ಶುಭವಾರ್ತೆ, ಇಲ್ಲೊಬ್ಬ ಬಾಲಕ ನಿದ್ದಾನೆ' ಎಂದು ಅವನು ಕೂಗಿ ಹೇಳಿದನು. ಅವರು ಆತನನ್ನು ವ್ಯಾಪಾರದ ಒಂದು ಸರಕಿನಂತೆ ಅಡಗಿಸಿಟ್ಟರು. ಅವರ ಕೃತ್ಯಗಳನ್ನೆಲ್ಲ ಅಲ್ಲಾಹನು ಚೆನ್ನಾಗಿ ತಿಳಿದಿದ್ದನು.

وَجَآءَتْ سَيَّارَةٌ فَاَرْسَلُوْا وَارِدَهُمْ فَاَدْلٰى دَلْوَهٗ ؕ قَالَ يٰبُشْرٰى هٰذَا غُلٰمٌ ؕ وَاَسَرُّوْهُ بِضَاعَةً ؕ وَاللّٰهُ عَلِيْمٌۢ بِمَا يَعْمَلُوْنَ ﴿٢٠﴾

**21.** ಅವರು ಆತನನ್ನು ತುಚ್ಛವಾದೊಂದು ಬೆಲೆಗೆ- ಕೆಲವು ದಿರ್ಹಮ್‌ಗಳಿಗೆ - ಮಾರಿದರು. ಅವರು ಆತನಿಂದ ಲಾಭಗಳಿಸಲು ಆಸಕ್ತರಾಗಿರಲಿಲ್ಲ.

وَشَرَوْهُ بِثَمَنٍۢ بَخْسٍ دَرَاهِمَ مَعْدُوْدَةٍ ۚ وَكَانُوْا فِيْهِ مِنَ الزّٰهِدِيْنَ ﴿٢١﴾

**22.** ಆತನನ್ನು ಖರೀದಿಸಿದ ಈಜಿಪ್ಟ್‌ಗಾರನಾದ ವ್ಯಕ್ತಿ ತನ್ನ ಪತ್ನಿಯೊಡನೆ ಹೇಳಿದನು: 'ಇವನಿಗೆ ಗೌರವಯುತ ವಾಸದ ವ್ಯವಸ್ಥೆ ಮಾಡು. ಪ್ರಾಯಶಃ ಇವನು (ಮುಂದೆ) ನಮಗೆ ಪ್ರಯೋಜನಕ್ಕೆ ಬರಬಹುದು. ಅಥವಾ ಇವನನ್ನು ನಮಗೆ ದತ್ತು ಪುತ್ರನಾಗಿ ಸ್ವೀಕರಿಸ ಬಹುದು.' ಹೀಗೆ ನಾವು ಯೂಸುಫರಿಗೆ ಆ ದೇಶದಲ್ಲಿ ಸ್ಥಾನಮಾನಗಳನ್ನು ನೀಡಿದೆವು. (ನಾವು ಹಾಗೆ ಮಾಡಿದ್ದು) *ಸ್ವಪ್ನ ದರ್ಶನ* ವಿಚಾರಗಳ ಅಂತರಾರ್ಥವನ್ನು ಅವರಿಗೆ ಕಲಿಸಿಕೊಡಲಿಕ್ಕೂ ಆಗಿತ್ತು. ಅಲ್ಲಾಹನು ತನ್ನ ಕಾರ್ಯವನ್ನು ಈಡೇರಿಸುವುದರಲ್ಲಿ ಸರ್ವಸಮರ್ಥನು. ಆದರೆ ಜನರಲ್ಲಿ ಹೆಚ್ಚಿನವರು ಮನವರಿಕೆಮಾಡುವುದಿಲ್ಲ.

وَقَالَ الَّذِى اشْتَرٰىهُ مِنْ مِّصْرَ لِامْرَاَتِهٖۤ اَكْرِمِىْ مَثْوٰىهُ عَسٰٓى اَنْ يَّنْفَعَنَاۤ اَوْ نَتَّخِذَهٗ وَلَدًا ؕ وَكَذٰلِكَ مَكَّنَّا لِيُوْسُفَ فِى الْاَرْضِ وَلِنُعَلِّمَهٗ مِنْ تَاْوِيْلِ الْاَحَادِيْثِ ؕ وَاللّٰهُ غَالِبٌ عَلٰۤى اَمْرِهٖ وَلٰكِنَّ اَكْثَرَ النَّاسِ لَا يَعْلَمُوْنَ ﴿٢٢﴾

**23.** ಹಾಗೆ ಆತನು ಪೂರ್ಣ ಪ್ರೌಢಾವಸ್ಥೆಯನ್ನು ಪಡೆದಾಗ ನಾವು ಆತನಿಗೆ ತೀರ್ಮಾನದ ಶಕ್ತಿಯನ್ನೂ ಜ್ಞಾನವನ್ನೂ ನೀಡಿದೆವು. ಈ ರೀತಿಯಲ್ಲಿ ನಾವು ಸಜ್ಜನರಿಗೆ

وَلَمَّا بَلَغَ اَشُدَّهٗۤ اٰتَيْنٰهُ حُكْمًا وَّ





ಪ್ರತಿಫಲವನ್ನು ನೀಡುತ್ತೇವೆ.

عِلْمًا ؕ وَكَذٰلِكَ نَجْزِى الْمُحْسِنِيْنَ ﴿٢٣﴾

**24.** ಅವರು (ಯೂಸುಫ್) ವಾಸಿಸುತ್ತಿದ್ದ ಮನೆಯ ಯಜಮಾನಿ ಅವರ ಇಚ್ಛೆಗೆ ವಿರುದ್ಧವಾಗಿ ಅವರನ್ನು ವಶೀಕರಿಸಲು ಪ್ರಯತ್ನಿಸಿದಳು. ಅವಳು ಬಾಗಿಲುಗಳನ್ನೆಲ್ಲ ಮುಚ್ಚಿ ಹೇಳಿದಳು: 'ನನ್ನತ್ತ ಬಾ.' ಅವರು ಹೇಳಿದರು: 'ನಾನು ಅಲ್ಲಾಹನ ಅಭಯ ಬೇಡುತ್ತೇನೆ. ಖಂಡಿತವಾಗಿಯೂ ಅವನೇ ನನ್ನ ಪ್ರಭು. ಅವನೇ ನನ್ನ ವಾಸಸ್ಥಳವನ್ನು ಉತ್ತಮಗೊಳಿಸಿರುವನು. ನಿಶ್ಚಯವಾಗಿಯೂ ದುಷ್ಕರ್ಮಿಗಳು ಯಶಸ್ಸು ಪಡೆಯಲಾರರು.'

وَرَاوَدَتْهُ الَّتِىْ هُوَ فِىْ بَيْتِهَا عَنْ نَّفْسِهٖ وَغَلَّقَتِ الْاَبْوَابَ وَقَالَتْ هَيْتَ لَكَ ؕ قَالَ مَعَاذَ اللّٰهِ اِنَّهٗ رَبِّىْۤ اَحْسَنَ مَثْوَاىَ ؕ اِنَّهٗ لَا يُفْلِحُ الظّٰلِمُوْنَ ﴿٢٤﴾

**25.** ಅವರ ಕುರಿತು ಅವಳು (ತನ್ನ ಉದ್ದೇಶದಲ್ಲಿ) ದೃಢ ನಿರ್ಧಾರ ಹೊಂದಿದ್ದಳು. ಅವಳ ಬಗ್ಗೆ ಅವರು ಸಹ (ತನ್ನ ಉದ್ದೇಶದಲ್ಲಿ)[295c] ದೃಢ ನಿರ್ಧಾರ ಹೊಂದಿದ್ದರು. ಅವರು (ಯೂಸುಫ್) ತನ್ನ ಪ್ರಭುವಿನ ಸ್ಪಷ್ಟವಾದ ದೃಷ್ಟಾಂತವನ್ನು ಕಾಣದಿರುತ್ತಿದ್ದರೆ *ಅವರಿಗೆ ಹಾಗೆ ದೃಢ ನಿರ್ಧಾರ ಕೈಗೊಳ್ಳಲು ಸಾಧ್ಯವಾಗುತ್ತಿರಲಿಲ್ಲ*. ಹೀಗೆ *ನಾವು ಮಾಡಿದ್ದು* ಅವರಿಂದ ಕೆಡುಕನ್ನೂ ಅಸಭ್ಯತೆಯನ್ನೂ ನಿವಾರಿಸಲಿಕ್ಕಾಗಿದೆ. ದಿಟವಾಗಿಯೂ ಅವರು ನಮ್ಮ ವರಿಷ್ಠ ದಾಸರಲ್ಲಿ ಒಬ್ಬರಾಗಿದ್ದಾರೆ.

وَلَقَدْ هَمَّتْ بِهٖ ۚ وَهَمَّ بِهَا لَوْلَاۤ اَنْ رَّاٰ بُرْهَانَ رَبِّهٖ ؕ كَذٰلِكَ لِنَصْرِفَ عَنْهُ السُّوْۤءَ وَالْفَحْشَآءَ ؕ اِنَّهٗ مِنْ عِبَادِنَا الْمُخْلَصِيْنَ ﴿٢٥﴾

**26.** ಅವರಿಬ್ಬರೂ ಬಾಗಿಲಿನ ಕಡೆಗೆ ಮುನ್ನುಗ್ಗಿ ಓಡಿದರು. ಅವಳು ಅವರ ಅಂಗಿಯನ್ನು ಹಿಂದಿನಿಂದ ಹಿಡಿದು ಹರಿದಳು. ಅವರಿಬ್ಬರೂ ಅವಳ ಯಜಮಾನನನ್ನು (ಪತಿಯನ್ನು) ಬಾಗಿಲ ಹತ್ತಿರ (ಬಾಗಿಲನ್ನು ತೆರೆದಾಗ) ಕಂಡರು. ಅವಳು ಹೇಳಿದಳು: 'ನಿಮ್ಮ ಪತ್ನಿಯೊಂದಿಗೆ ಅಸಭ್ಯವಾಗಿ ವರ್ತಿಸಲು ಬಯಸಿದವನಿಗೆ ಸೆರೆಮನೆ ವಾಸ ಅಥವಾ ಕಠಿಣ ಸಜೆಯಲ್ಲದೆ ಬೇರೆ ಪ್ರತಿಫಲವೇನಿದೆ?'

وَاسْتَبَقَا الْبَابَ وَقَدَّتْ قَمِيْصَهٗ مِنْ دُبُرٍ وَّاَلْفَيَا سَيِّدَهَا لَدَا الْبَابِ ؕ قَالَتْ مَا جَزَآءُ مَنْ اَرَادَ بِاَهْلِكَ سُوْۤءًا اِلَّاۤ اَنْ يُّسْجَنَ اَوْ عَذَابٌ اَلِيْمٌ ﴿٢٦﴾

**27.** ಅವರು (ಯೂಸುಫ್) ಹೇಳಿದರು: 'ನನ್ನ ಇಚ್ಛೆಗೆ ವಿರುದ್ಧವಾಗಿ ನನ್ನನ್ನು ವಶೀಕರಿಸಲು ಪ್ರಯತ್ನಿಸಿದ್ದು ಅವಳೇ.' ಅವಳ ಕುಟುಂಬಕ್ಕೆ ಸೇರಿದ ಒಬ್ಬ ಸಾಕ್ಷಿ

قَالَ هِىَ رَاوَدَتْنِىْ عَنْ نَّفْسِىْ وَشَهِدَ

295C. ಅಂದರೆ ಅವಳಿಂದ ತಪ್ಪಿಸಿಕೊಳ್ಳಲು.

ನುಡಿದನು: 'ಅವನ ಅಂಗಿ ಮುಂಭಾಗದಿಂದ ಹರಿಯಲ್ಪಟ್ಟಿದ್ದರೆ ಅವಳು ಹೇಳುವುದು ಸತ್ಯ ಹಾಗೂ ಅವನು ಸುಳ್ಳುಗಾರನಾಗುತ್ತಾನೆ.

شَاهِدٌ مِّنْ اَهْلِهَا ۚ اِنْ كَانَ قَمِيْصُهٗ قُدَّ مِنْ قُبُلٍ فَصَدَقَتْ وَ هُوَ مِنَ الْكٰذِبِيْنَ ﴿٢٧﴾

28. 'ಆದರೆ ಅವನ ಅಂಗಿ ಹಿಂಭಾಗದಿಂದ ಹರಿಯಲ್ಪಟ್ಟಿದ್ದರೆ, ಅವಳು ಹೇಳುವುದು ಸುಳ್ಳು ಹಾಗೂ ಅವನು ಸತ್ಯವಂತನು.'

وَ اِنْ كَانَ قَمِيْصُهٗ قُدَّ مِنْ دُبُرٍ فَكَذَبَتْ وَ هُوَ مِنَ الصّٰدِقِيْنَ ﴿٢٨﴾

29. ಹಾಗೆ ಅವರ ಅಂಗಿ ಹಿಂಭಾಗದಿಂದ ಹರಿದುದನ್ನು ಕಂಡಾಗ ಆತನು (ಮನೆಯ ಯಜಮಾನ ತನ್ನ ಪತ್ನಿಯೊಡನೆ) ಹೇಳಿದನು: 'ಖಂಡಿತವಾಗಿಯೂ ಇದು (ಸ್ತ್ರೀಯರಾದ) ನಿಮ್ಮ ಕುತಂತ್ರವಾಗಿದೆ. ನಿಮ್ಮ ಕುತಂತ್ರ ಭಯಂಕರವೇ ಆಗಿದೆ.

فَلَمَّا رَاٰ قَمِيْصَهٗ قُدَّ مِنْ دُبُرٍ قَالَ اِنَّهٗ مِنْ كَيْدِكُنَّ ؕ اِنَّ كَيْدَكُنَّ عَظِيْمٌ ﴿٢٩﴾

30. 'ಎಲೈ ಯೂಸುಫ್, ನೀನು ಈ ವಿಚಾರವನ್ನು ಕಡೆಗಣಿಸು. (ಎಲೈ ಸ್ತ್ರೀಯೇ,) ನಿನ್ನ ತಪ್ಪಿಗಾಗಿ ಕ್ಷಮೆ ಯಾಚಿಸು. ನಿಶ್ಚಯವಾಗಿಯೂ ನೀನು ಅಪರಾಧಿ ಯಾಗಿರುವೆ.'

يُوْسُفُ اَعْرِضْ عَنْ هٰذَا ٚ وَ اسْتَغْفِرِيْ لِذَنْۢبِكِ ۖۚ اِنَّكِ كُنْتِ مِنَ الْخٰطِـِٕيْنَ ﴿٣٠﴾

31. ಆ ಪಟ್ಟಣದ ಕೆಲವು ಸ್ತ್ರೀಯರು (ಪರಸ್ಪರ) ಮಾತನಾಡಿಕೊಂಡರು: 'ಅಝೀಝನ ಪತ್ನಿ ಅವಳ ಗುಲಾಮ ಹುಡುಗನನ್ನು ಅವನ ಇಚ್ಛೆಗೆ ವಿರುದ್ಧವಾಗಿ (ಅನೈತಿಕ ಸಂಬಂಧಕ್ಕಾಗಿ) ವಶೀಕರಿಸಲು ಯತ್ನಿಸುತ್ತಾಳೆ. ಅವನಿಂದಾಗಿ ಅವಳು ಮೋಹಪರವಶಳಾಗಿದ್ದಾಳೆ. ನಾವು ಅವಳನ್ನು ಸ್ಪಷ್ಟವಾಗಿಯೂ ತಪ್ಪುಗಾರಳಾಗಿ ಕಾಣುತ್ತೇವೆ.'

وَ قَالَ نِسْوَةٌ فِي الْمَدِيْنَةِ امْرَاَتُ الْعَزِيْزِ تُرَاوِدُ فَتٰىهَا عَنْ نَّفْسِهٖ ۚ قَدْ شَغَفَهَا حُبًّا ؕ اِنَّا لَنَرٰىهَا فِيْ ضَلٰلٍ مُّبِيْنٍ ﴿٣١﴾

32. ಅವಳು ಅವರ ಈ ಕುಹಕನುಡಿಯನ್ನು ಕೇಳಿದಾಗ ಅವರಿಗೆ ಕರೆ ಕಳುಹಿಸಿದಳು. ಅವರಿಗೋಸ್ಕರ ಒಂದು ಸತ್ಕಾರವನ್ನು ಏರ್ಪಡಿಸಿದಳು. ಅವರಲ್ಲಿ ಪ್ರತಿಯೊಬ್ಬರ ಕೈಗೆ ಒಂದೊಂದು ಚೂರಿಯನ್ನು ಕೊಟ್ಟಳು. ಅನಂತರ ಅವಳು (ಯೂಸುಫ್‌ರೊಡನೆ) ಹೇಳಿದಳು: 'ಅವರ ಎದುರಿನಿಂದ ಹಾದುಹೋಗು,' ಹಾಗೆ ಅವರು ಯೂಸುಫರನ್ನು ಕಂಡಾಗ ಅವರ ವಿಶೇಷ

فَلَمَّا سَمِعَتْ بِمَكْرِهِنَّ اَرْسَلَتْ اِلَيْهِنَّ وَ اَعْتَدَتْ لَهُنَّ مُتَّكَاً وَّ اٰتَتْ كُلَّ وَاحِدَةٍ مِّنْهُنَّ سِكِّيْنًا وَّ قَالَتِ اخْرُجْ عَلَيْهِنَّ ۚ فَلَمَّا رَاَيْنَهٗۤ اَكْبَرْنَهٗ وَ





ವ್ಯಕ್ತಿತ್ವದಿಂದ ಪ್ರಭಾವಿತರಾದರು. (ತಮಗರಿವಿಲ್ಲದೆಯೇ) ಅವರು ತಮ್ಮ ಕೈ (ಬೆರಳು)ಗಳನ್ನು ಘಾಸಿಗೊಳಿಸಿದರು. ಅವರು ಉದ್ಗರಿಸಿದರು: 'ಅಲ್ಲಾಹನು (ಆತನನ್ನು ಕೆಡುಕಿನಿಂದ) ರಕ್ಷಿಸಲಿ. ಈತನು ಮನುಷ್ಯನಲ್ಲ. ಈತನು ಶ್ರೇಷ್ಠನಾದೋರ್ವ ದೇವದೂತ (ಮಲಕ್).'

قَطَّعْنَ اَيْدِيَهُنَّ وَ قُلْنَ حَاشَ لِلّٰهِ مَا هٰذَا بَشَرًا ؕ اِنْ هٰذَاۤ اِلَّا مَلَكٌ كَرِيْمٌ ﴿٣٢﴾

33. ಅವಳು ಹೇಳಿದಳು: 'ನೀವು ಯಾವೊಬ್ಬನ ವಿಚಾರದಲ್ಲಿ ನನ್ನನ್ನು ದೂಷಿಸಿದಿರೋ ಅವನೇ ಇವನು. ನಿಜವಾಗಿಯೂ ಅವನನ್ನು ನಾನು ಅವನ ಇಚ್ಛೆಗೆ ವಿರುದ್ಧವಾಗಿ ವಶೀಕರಿಸಲು ಪ್ರಯತ್ನಿಸಿದ್ದೇನೆ. ಆದರೆ ಅವನು ತಪ್ಪಿಸಿಕೊಂಡನು. ನನ್ನ ಆಜ್ಞೆಯಂತೆ ಅವನು ನಡೆಯದಿದ್ದರೆ ಖಂಡಿತವಾಗಿಯೂ ಅವನಿಗೆ ಸೆರೆಮನೆವಾಸವೇ ಗತಿ ಹಾಗೂ ಅವನು ಅವಮಾನಿತ ನಾಗುವನು.'

قَالَتْ فَذٰلِكُنَّ الَّذِيْ لُمْتُنَّنِيْ فِيْهِ ؕ وَ لَقَدْ رَاوَدْتُّهٗ عَنْ نَّفْسِهٖ فَاسْتَعْصَمَ ؕ وَ لَئِنْ لَّمْ يَفْعَلْ مَاۤ اٰمُرُهٗ لَيُسْجَنَنَّ وَ لَيَكُوْنًا مِّنَ الصّٰغِرِيْنَ ﴿٣٣﴾

34. ಅವರು (ಯೂಸುಫ್) ಹೇಳಿದರು: 'ನನ್ನ ಪ್ರಭೂ, ಇವರು ನನ್ನನ್ನು ಯಾವುದರ ಕಡೆಗೆ ಕರೆಯುತ್ತಾರೋ ಅದಕ್ಕಿಂತಲೂ ಸೆರೆಮನೆವಾಸವೇ ನನಗಿಷ್ಟ. ನೀನು ಅವರ ಕುತಂತ್ರವನ್ನು ನನ್ನಿಂದ ದೂರಮಾಡದಿದ್ದರೆ ನಾನು ಅವರೆಡೆಗೆ ಸೆಳೆಯಲ್ಪಟ್ಟು ಅವಿವೇಕತನದಿಂದ ವರ್ತಿಸುವವರಲ್ಲಿ ಸೇರಿದವನಾಗುವೆನು.'

قَالَ رَبِّ السِّجْنُ اَحَبُّ اِلَيَّ مِمَّا يَدْعُوْنَنِيْۤ اِلَيْهِ ۚ وَ اِلَّا تَصْرِفْ عَنِّيْ كَيْدَهُنَّ اَصْبُ اِلَيْهِنَّ وَ اَكُنْ مِّنَ الْجٰهِلِيْنَ ﴿٣٤﴾

35. ಹಾಗೆ ಅವರ ಪ್ರಭು ಅವರ ಪ್ರಾರ್ಥನೆಗೆ ಉತ್ತರ ನೀಡಿದನು ಹಾಗೂ ಅವರ (ಸ್ತ್ರೀಯರ) ಕುತಂತ್ರದಿಂದ ಅವರನ್ನು ರಕ್ಷಿಸಿದನು. ಖಂಡಿತವಾಗಿಯೂ ಅವನು (ಅಲ್ಲಾಹನು) ಎಲ್ಲವನ್ನೂ ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.

فَاسْتَجَابَ لَهٗ رَبُّهٗ فَصَرَفَ عَنْهُ كَيْدَهُنَّ ؕ اِنَّهٗ هُوَ السَّمِيْعُ الْعَلِيْمُ ﴿٣٥﴾

36. ಅನಂತರ (ಯೂಸುಫರ ನಿರಪರಾಧಿತ್ವದ) ದೃಷ್ಟಾಂತಗಳು (ಜನರಿಗೆ) ಕಂಡು ಬಂದಾಗ್ಯೂ (ತಮ್ಮ ಮಾನಕ್ಕೆ ಕಳಂಕ ಉಂಟಾಗದಿರಲು) ಅವರನ್ನು (ಯೂಸುಫರನ್ನು) ಸ್ವಲ್ಪ ಕಾಲ ಸೆರೆಮನೆಗೆ ಅಟ್ಟುವುದು ಉತ್ತಮವೆಂದು ಅವರು ಬಗೆದರು.

ثُمَّ بَدَا لَهُمْ مِّنْۢ بَعْدِ مَا رَاَوُا الْاٰيٰتِ لَيَسْجُنُنَّهٗ حَتّٰى حِيْنٍ ﴿٣٦﴾

**37.** ಸೆರೆಮನೆಯಲ್ಲಿ ಅವರೊಂದಿಗೆ (ಯೂಸುಫ್ ರೊಂದಿಗೆ) ಇಬ್ಬರು ಯುವಕರೂ ಪ್ರವೇಶಿಸಿದರು. ಅವರಲ್ಲೊಬ್ಬ (ಯೂಸುಫ್‌ರೊಡನೆ) ಹೇಳಿದನು: 'ನಾನು (ಕನಸಿನಲ್ಲಿ) ಮದ್ಯ (ದ್ರಾಕ್ಷಾರಸ) ಹಿಂಡಿ ತೆಗೆಯುವುದಾಗಿ ನನ್ನನ್ನು ಕಂಡಿದ್ದೇನೆ. ಮತ್ತೊಬ್ಬ ಹೇಳಿದನು: 'ನಾನು (ಸ್ವಪ್ನದಲ್ಲಿ) ನನ್ನ ತಲೆಯ ಮೇಲೆ ರೊಟ್ಟಿಯನ್ನು ಹೊತ್ತುಕೊಂಡುದ್ದಾಗಿಯೂ ಪಕ್ಷಿಗಳು ಅದರಿಂದ ತಿನ್ನುತ್ತಿರುವುದಾಗಿಯೂ ನನ್ನನ್ನು ಕಂಡೆನು. ತಮ್ಮನ್ನು ನಾವು ಒಬ್ಬ ಸಜ್ಜನರಂತೆ ಕಾಣುತ್ತೇವೆ. (ಆದ್ದರಿಂದ) ತಾವು ನಮಗೆ ಇದರ ವ್ಯಾಖ್ಯಾನ ಹೇಳಿಕೊಡಬೇಕು.'

وَدَخَلَ مَعَهُ السِّجْنَ فَتَيَانِ ۖ قَالَ أَحَدُهُمَا إِنِّي أَرَانِي أَعْصِرُ خَمْرًا ۖ وَقَالَ الْآخَرُ إِنِّي أَرَانِي أَحْمِلُ فَوْقَ رَأْسِي خُبْزًا تَأْكُلُ الطَّيْرُ مِنْهُ ۖ نَبِّئْنَا بِتَأْوِيلِهِ ۖ إِنَّا نَرَاكَ مِنَ الْمُحْسِنِينَ ﴿٣٦﴾

**38.** ಅವರು ಹೇಳಿದರು: 'ನಿಮ್ಮಿಬ್ಬರಿಗೆ ನೀಡಲ್ಪಡುವ ಆಹಾರ ನಿಮಗೆ ದೊರಕುವುದಕ್ಕಿಂತ ಮುಂಚಿತವಾಗಿ ನಾನು ಅದರ ವ್ಯಾಖ್ಯಾನವನ್ನು ನಿಮಗೆ ಹೇಳಿಕೊಡುವೆನು. ಇದು ನನ್ನ ಪ್ರಭು ನನಗೆ ನೀಡಿದ ಜ್ಞಾನಗಳಲ್ಲೊಂದಾಗಿದೆ. ಅಲ್ಲಾಹನನ್ನು ನಂಬದ ಹಾಗೂ ಪರಲೋಕವನ್ನು ಅಲ್ಲಗಳೆಯುವ ಒಂದು ಜನತೆಯ ಮಾರ್ಗವನ್ನು ನಾನು ತೊರೆದಿರುವೆನು.

قَالَ لَا يَأْتِيكُمَا طَعَامٌ تُرْزَقَانِهِ إِلَّا نَبَّأْتُكُمَا بِتَأْوِيلِهِ قَبْلَ أَن يَأْتِيَكُمَا ۚ ذَٰلِكُمَا مِمَّا عَلَّمَنِي رَبِّي ۚ إِنِّي تَرَكْتُ مِلَّةَ قَوْمٍ لَّا يُؤْمِنُونَ بِاللَّهِ وَهُم بِالْآخِرَةِ هُمْ كَافِرُونَ ﴿٣٧﴾

**39.** 'ನನ್ನ ಪೂರ್ವಜರಾದ ಇಬ್‌ರಾಹೀಂ, ಇಸ್‌ಹಾಖ್, ಯಅ್‌ಖೂಬ್ ಎಂಬಿವರ ಮಾರ್ಗವನ್ನು ನಾನು ಅನುಸರಿಸಿದ್ದೇನೆ. ಅಲ್ಲಾಹನಿಗೆ ಏನನ್ನೂ ಸಹಭಾಗಿ ಮಾಡಲು ನಮಗೆ ಸಾಧ್ಯವಿಲ್ಲ. ಇದು ನಮಗೂ ಇತರ ಜನರಿಗೂ ಅಲ್ಲಾಹನು ನೀಡಿದ ಅನುಗ್ರಹವಾಗಿದೆ. ಆದರೆ ಜನರಲ್ಲಿ ಹೆಚ್ಚಿನವರು ಕೃತಜ್ಞತೆ ತೋರಿಸುವುದಿಲ್ಲ.

وَاتَّبَعْتُ مِلَّةَ آبَائِي إِبْرَاهِيمَ وَإِسْحَاقَ وَيَعْقُوبَ ۚ مَا كَانَ لَنَا أَن نُّشْرِكَ بِاللَّهِ مِن شَيْءٍ ۚ ذَٰلِكَ مِن فَضْلِ اللَّهِ عَلَيْنَا وَعَلَى النَّاسِ وَلَٰكِنَّ أَكْثَرَ النَّاسِ لَا يَشْكُرُونَ ﴿٣٨﴾

**40.** 'ಎಲೈ ಸೆರೆಮನೆಯ ನನ್ನ ಒಡನಾಡಿಗಳೇ, ನೀವು ಯೋಚಿಸಿರಿ. ಮತಭೇದವಿರುವ ಅನೇಕ ದೇವರುಗಳು ಉತ್ತಮವೇ ಅಥವಾ ಸರ್ವಾಧಿಪತಿಯಾದ ಏಕ ದೇವನೇ?

يَا صَاحِبَيِ السِّجْنِ أَأَرْبَابٌ مُّتَفَرِّقُونَ خَيْرٌ أَمِ اللَّهُ الْوَاحِدُ الْقَهَّارُ ﴿٣٩﴾

**41.** 'ಅವನನ್ನು ಬಿಟ್ಟು ನೀವು ಮತ್ತು ನಿಮ್ಮ ಪೂರ್ವಜರು ಹೆಸರಿಸಿದ ಕೆಲವು ನಾಮಗಳನ್ನು ಹೊರತು ನೀವು ಆರಾಧಿಸುವುದಿಲ್ಲ. ಆ ಬಗ್ಗೆ ಅಲ್ಲಾಹನು ಯಾವ ಸಾಕ್ಷ್ಯಾಧಾರವನ್ನೂ ಅವತೀರ್ಣಗೊಳಿಸಲಿಲ್ಲ. ಆಜ್ಞಾಧಿ

مَا تَعْبُدُونَ مِن دُونِهِ إِلَّا أَسْمَاءً سَمَّيْتُمُوهَا أَنتُمْ وَآبَاؤُكُم مَّا أَنزَلَ





ಕಾರ ಅಲ್ಲಾಹನಿಗೆ ಮಾತ್ರವಿದೆ. ಅವನ ಹೊರತು ನೀವು ಬೇರೆ ಯಾರನ್ನೂ ಆರಾಧಿಸಬಾರದೆಂದು ಅವನು ಆದೇಶಿಸಿದ್ದಾನೆ. ಅದೇ ಶಾಶ್ವತವಾದ ಸತ್ಯಧರ್ಮ ವಾಗಿದೆ. ಆದರೆ ಹೆಚ್ಚಿನ ಜನರು ಮನವರಿಕೆ ಮಾಡುವುದಿಲ್ಲ.

اللَّهُ بِهَا مِن سُلْطَانٍ ۚ إِنِ الْحُكْمُ إِلَّا لِلَّهِ ۚ أَمَرَ أَلَّا تَعْبُدُوا إِلَّا إِيَّاهُ ۚ ذَٰلِكَ الدِّينُ الْقَيِّمُ وَلَٰكِنَّ أَكْثَرَ النَّاسِ لَا يَعْلَمُونَ ﴿٤٠﴾

**42.** 'ಎಲೈ ಸೆರೆಮನೆಯ ನನ್ನ ಸಂಗಾತಿಗಳೇ, (ಇನ್ನು ನಿಮ್ಮ ಸ್ವಪ್ನಗಳ ಅರ್ಥವೇನೆಂದು ಹೇಳುವೆನು.) ನಿಮ್ಮಲ್ಲಿ ಒಬ್ಬನು (ಬಿಡುಗಡೆ ಹೊಂದಿ) ತನ್ನ ಯಜಮಾನನಿಗೆ ಮದ್ಯವನ್ನು ಸುರಿದುಕೊಡುವನು. ಇನ್ನೊಬ್ಬನು ಶಿಲುಬೆಗೆ ಹಾಕಿ ಕೊಲ್ಲಲ್ಪಡುವನು. ಪಕ್ಷಿಗಳು ಅವನ ತಲೆಯನ್ನು ಕುಕ್ಕಿ ತಿನ್ನುವುವು. ನೀವಿಬ್ಬರೂ ನನ್ನೊಡನೆ ವಿಚಾರಿಸಿದ ಸಂಗತಿಗಳು (ಹೀಗೆ) ತೀರ್ಮಾನಿಸಲ್ಪಟ್ಟಿವೆ.'

يَا صَاحِبَيِ السِّجْنِ أَمَّا أَحَدُكُمَا فَيَسْقِي رَبَّهُ خَمْرًا ۖ وَأَمَّا الْآخَرُ فَيُصْلَبُ فَتَأْكُلُ الطَّيْرُ مِن رَّأْسِهِ ۚ قُضِيَ الْأَمْرُ الَّذِي فِيهِ تَسْتَفْتِيَانِ ﴿٤١﴾

**43.** ಅವರಿಬ್ಬರಲ್ಲಿ ಬಿಡುಗಡೆಹೊಂದುವವನೆಂದು ತಾನು ಭಾವಿಸಿದವನೊಡನೆ, 'ನಿನ್ನ ಯಜಮಾನನಿಗೆ ನನ್ನ ನೆನಪು ಮಾಡಿಕೊಡಬೇಕು' ಎಂದು ಅವರು (ಯೂಸುಫ್) ಹೇಳಿದರು. ಆದರೆ ಅವನು ತನ್ನ ಯಜಮಾನನಿಗೆ ಅವರ ಬಗ್ಗೆ ಹೇಳುವುದನ್ನು ಮರೆಯುವಂತೆ ಶೈತಾನನು[296] ಮಾಡಿಬಿಟ್ಟನು. ಹಾಗೆ ಅವರು ಜೈಲಿನಲ್ಲೇ ಕೆಲವು ವರ್ಷಗಳ ಕಾಲ ಉಳಿಯಬೇಕಾಯಿತು.

وَقَالَ لِلَّذِي ظَنَّ أَنَّهُ نَاجٍ مِّنْهُمَا اذْكُرْنِي عِندَ رَبِّكَ فَأَنسَاهُ الشَّيْطَانُ ذِكْرَ رَبِّهِ فَلَبِثَ فِي السِّجْنِ بِضْعَ سِنِينَ ﴿٤٢﴾ ع

**44.** (ಕೆಲ ಕಾಲ ನಂತರ) ರಾಜನು (ತನ್ನ ದರ್ಬಾರಿನ ಸದಸ್ಯರೊಡನೆ) ಹೇಳಿದನು: 'ಏಳು ದಷ್ಟಪುಷ್ಟವಾದ ದನಗಳನ್ನು ಏಳು ಕೃಶಕಾಯ ದನಗಳು ತಿನ್ನುವುದಾಗಿ ನಾನು (ಸ್ವಪ್ನದಲ್ಲಿ) ಕಂಡೆನು. ಏಳು ಹಸಿರು ತೆನೆಗಳನ್ನೂ ಏಳು ಒಣಗಿ ಸುರುಟಿಕೊಂಡ ತೆನೆಗಳನ್ನೂ (ನಾನು ಕಂಡಿದ್ದೇನೆ). ಎಲೈ ನನ್ನ ಮುಖಂಡರೇ, ನೀವು ಸ್ವಪ್ನದ ವ್ಯಾಖ್ಯಾನ ಬಲ್ಲವರಾಗಿದ್ದರೆ ನನ್ನ ಸ್ವಪ್ನದ ಅರ್ಥವನ್ನು ವಿವರಿಸಿಕೊಡಿರಿ.'

وَقَالَ الْمَلِكُ إِنِّي أَرَىٰ سَبْعَ بَقَرَاتٍ سِمَانٍ يَأْكُلُهُنَّ سَبْعٌ عِجَافٌ وَسَبْعَ سُنبُلَاتٍ خُضْرٍ وَأُخَرَ يَابِسَاتٍ ۖ يَا أَيُّهَا الْمَلَأُ أَفْتُونِي فِي رُؤْيَايَ إِن كُنتُمْ لِلرُّؤْيَا تَعْبُرُونَ ﴿٤٣﴾

296. ಮನುಷ್ಯನ ದೌರ್ಬಲ್ಯಗಳನ್ನು ಶೈತಾನ್ ಎಂದು ಇಲ್ಲಿ ಸೂಚಿಸಲಾಗಿದೆ.

**45.** **ಅವರು ಹೇಳಿದರು: 'ಇವು ಗೊಂದಲ ಮಯವಾದ ಸ್ವಪ್ನಗಳು. ಇಂತಹ ಗೊಂದಲಮಯ ಸ್ವಪ್ನಗಳ ತಾತ್ಪರ್ಯ ಹೇಳುವ ಜ್ಞಾನ ನಮಗಿಲ್ಲ.'**

قَالُوٓا أَضْغَاثُ أَحْلَامٍ ۖ وَمَا نَحْنُ
بِتَأْوِيلِ الْأَحْلَامِ بِعَالِمِينَ ﴿٤٤﴾

**46.** ಆಗ (ಸೆರೆಮನೆಯಲ್ಲಿದ್ದ) **ಇಬ್ಬರಲ್ಲಿ ಬಿಡುಗಡೆಹೊಂದಿದವನಿಗೆ ತುಂಬಾ ಕಾಲದ ಬಳಿಕ** (ಯೂಸುಫರ) **ನೆನಪು ಬಂತು. ಅವನು ಹೇಳಿದನು: 'ನಾನು ಇದರ ವ್ಯಾಖ್ಯಾನವನ್ನು ನಿಮಗೆ ವಿವರಿಸಿಕೊಡುವೆನು. ಅದಕ್ಕಾಗಿ ನೀವು ನನ್ನನ್ನು** (ಯೂಸುಫರ ಬಳಿಗೆ) **ಕಳುಹಿಸಿಕೊಡಿರಿ.'**

وَقَالَ الَّذِي نَجَا مِنْهُمَا وَادَّكَرَ بَعْدَ
أُمَّةٍ أَنَا أُنَبِّئُكُمْ بِتَأْوِيلِهِ فَأَرْسِلُونِ ﴿٤٥﴾

**47.** (ಅವನು ಹೋಗಿ ಯೂಸುಫರೊಡನೆ ಹೇಳಿದನು:) **'ಸತ್ಯವಂತರಾದ ಯೂಸುಫರೇ,** (ಸ್ವಪ್ನದಲ್ಲಿ ಕಾಣಲ್ಪಟ್ಟ) **ಏಳು ಕೊಬ್ಬಿದ ದನಗಳನ್ನು ಏಳು ಬಡಕಲಾದ ದನಗಳು ತಿನ್ನುವುದರ ಅರ್ಥ ನಮಗೆ ಹೇಳಿಕೊಡಿರಿ. ಏಳು ಹಚ್ಚ ಹಸಿರು ತೆನೆಗಳು ಮತ್ತು ಏಳು ಒಣಗಿ ಸುರುಟಿಹೋದ ತೆನೆಗಳ ಬಗ್ಗೆ ಸಹ ನಮಗೆ ಹೇಳಿಕೊಡಿರಿ. ನಾನು ಜನರೆಡೆಗೆ ಮರಳಿ ಹೋಗಿ ಅವರಿಗೆ ಇದರ ಅರ್ಥವನ್ನು ಹೇಳಲಿಕ್ಕಾಗಿ** (ನಾನು ನಿಮ್ಮೊಡನೆ ಕೇಳುತ್ತಿದ್ದೇನೆ).'

يُوسُفُ أَيُّهَا الصِّدِّيقُ أَفْتِنَا فِي سَبْعِ
بَقَرَاتٍ سِمَانٍ يَأْكُلُهُنَّ سَبْعٌ عِجَافٌ
وَسَبْعِ سُنْبُلَاتٍ خُضْرٍ وَأُخَرَ يَابِسَاتٍ
لَعَلِّي أَرْجِعُ إِلَى النَّاسِ لَعَلَّهُمْ
يَعْلَمُونَ ﴿٤٦﴾

**48.** **ಅವರು** (ಯೂಸುಫ್) **ಹೇಳಿದರು: 'ನೀವು ನಿರಂತರವಾಗಿ ಏಳು ವರ್ಷಕಾಲ ಕಠಿಣವಾಗಿ ಶ್ರಮಪಟ್ಟು ಕೃಷಿ ಮಾಡುವಿರಿ. ಆಗ ನೀವು ಕೊಯ್ದ ಬೆಳೆಗಳಲ್ಲಿ ನಿಮಗೆ ಆಹಾರಕ್ಕೆ ಬೇಕಾದಷ್ಟು ಸ್ವಲ್ಪಾಂಶವನ್ನು ತೆಗೆದು ಉಳಿದುದನ್ನೆಲ್ಲ ತೆನೆಗಳಲ್ಲೇ ಬಿಟ್ಟುಬಿಡಿರಿ.**

قَالَ تَزْرَعُونَ سَبْعَ سِنِينَ دَأَبًا
فَمَا حَصَدْتُمْ فَذَرُوهُ فِي سُنْبُلِهِ إِلَّا
قَلِيلًا مِمَّا تَأْكُلُونَ ﴿٤٧﴾

**49.** **ಅನಂತರ** (ಕ್ಷಾಮಬಾಧಿತ) **ಏಳು ಕಠಿಣ ವರ್ಷಗಳು ಬರುವುವು. ನೀವು ಮುಂಚಿತವಾಗಿಯೇ ದಾಸ್ತಾನು ಮಾಡಿ ಇಟ್ಟಿದ್ದನ್ನೆಲ್ಲ** (ಆ ಬರಗಾಲದ ವರ್ಷಗಳು) **ಕಬಳಿಸಿಬಿಡುವುವು - ನೀವು ಜೋಪಾನ ವಾಗಿರಿಸುವ ಸ್ವಲ್ಪ ಧಾನ್ಯಗಳನ್ನು ಹೊರತುಪಡಿಸಿ.**

ثُمَّ يَأْتِي مِنْ بَعْدِ ذَٰلِكَ سَبْعٌ شِدَادٌ
يَأْكُلْنَ مَا قَدَّمْتُمْ لَهُنَّ إِلَّا قَلِيلًا
مِمَّا تُحْصِنُونَ ﴿٤٨﴾





**50.** **'ಆ ಬಳಿಕ ಒಂದು ವರ್ಷ ಬರುವುದು. ಆಗ ಜನರ ಸಂಕಷ್ಟ ನಿವಾರಣೆಯಾಗುವುದು; ಮತ್ತು ಅವರು ಪರಸ್ಪರ ಉಡುಗೊರೆಗಳನ್ನು ನೀಡುವರು.'**[296A]

ثُمَّ يَأْتِي مِنْ بَعْدِ ذَٰلِكَ عَامٌ فِيهِ
يُغَاثُ النَّاسُ وَفِيهِ يَعْصِرُونَ ﴿٤٩﴾

**51.** **ರಾಜ ಹೇಳಿದನು: 'ಆತನನ್ನು ನನ್ನ ಬಳಿಗೆ ಕರೆದು ತಾ.' ಹಾಗೆ ರಾಜ ದೂತ** (ಯೂಸುಫರ) **ಬಳಿಗೆ ಬಂದಾಗ ಅವರು ಹೇಳಿದರು: 'ನೀನು ನಿನ್ನ ಯಜಮಾನನ ಬಳಿಗೆ ಹಿಂತಿರುಗಿ ಹೋಗು. ಕೈಗಳನ್ನು ಘಾಸಿಗೊಳಿಸಿದ ಆ ಸ್ತ್ರೀಯರ ಸ್ಥಿತಿಯೇನೆಂದು ಕೇಳು. ನನ್ನ ಪ್ರಭು ಅವರ ಕುತಂತ್ರವನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.'**

وَقَالَ الْمَلِكُ ائْتُونِي بِهِ ۖ فَلَمَّا
جَاءَهُ الرَّسُولُ قَالَ ارْجِعْ إِلَىٰ رَبِّكَ
فَاسْأَلْهُ مَا بَالُ النِّسْوَةِ اللَّاتِي قَطَّعْنَ
أَيْدِيَهُنَّ ۚ إِنَّ رَبِّي بِكَيْدِهِنَّ عَلِيمٌ ﴿٥٠﴾

**52.** (ರಾಜನು ಆ ಸ್ತ್ರೀಯರೊಡನೆ) **ಕೇಳಿದನು: 'ಯೂಸುಫನ ಇಚ್ಛೆಗೆ ವಿರುದ್ಧವಾಗಿ ಆತನನ್ನು ವಶೀಕರಿಸಲು ನೀವು ಪ್ರಯತ್ನಿಸಿದಾಗ ನಿಜಸ್ಥಿತಿ ಯೇನಾಗಿತ್ತು?' ಅವರು ಹೇಳಿದರು: 'ಆತನು ಅಲ್ಲಾಹನ ಭಯ ನಿಮಿತ್ತ** ಪಾಪದಿಂದ ದೂರವಿದ್ದನು. **ನಾವು ಆತನಲ್ಲಿ ಯಾವ ಕೆಡುಕನ್ನೂ ಕಂಡಿಲ್ಲ.' ಅಝೀಝುನ ಪತ್ನಿ ಹೇಳಿದಳು: 'ಈಗ ಸತ್ಯ ಬೆಳಕಿಗೆ ಬಂದಿದೆ. ಆತನ ಇಚ್ಛೆಗೆ ವಿರುದ್ಧವಾಗಿ ಅವನನ್ನು ವಶೀಕರಿಸಲು ನಾನೇ ಪ್ರಯತ್ನಿಸಿದ್ದೆ. ಆತನು ಸತ್ಯಸಂಧನೇ ಆಗಿದ್ದಾನೆ.'**

قَالَ مَا خَطْبُكُنَّ إِذْ رَاوَدْتُنَّ يُوسُفَ
عَنْ نَفْسِهِ ۚ قُلْنَ حَاشَ لِلَّهِ مَا عَلِمْنَا
عَلَيْهِ مِنْ سُوءٍ ۚ قَالَتِ امْرَأَتُ
الْعَزِيزِ الْآنَ حَصْحَصَ الْحَقُّ أَنَا
رَاوَدْتُهُ عَنْ نَفْسِهِ وَإِنَّهُ لَمِنَ
الصَّادِقِينَ ﴿٥١﴾

**53.** (ಯೂಸುಫ್ ಹೇಳಿದರು:) **'ಅದು** (ಸ್ತ್ರೀಯರ ಬಗ್ಗೆ ವಿಚಾರಿಸಲು ನಾನು ಹೇಳಿದ್ದು) **ಆತನ ಅನುಪಸ್ಥಿತಿ ಯಲ್ಲಿ ನಾನು ದ್ರೋಹವೆಸಗಲಿಲ್ಲವೆಂದು ಆತನಿಗೆ ತಿಳಿಸಲಿಕ್ಕಾಗಿದೆ. ಅಲ್ಲಾಹನು ಮೋಸಗಾರರ ಕುತಂತ್ರವನ್ನು ಸಫಲಗೊಳಿಸಲಾರ** (ಎಂಬುದು ನನ್ನ ದೃಢ ನಂಬಿಕೆಯಾಗಿದೆ).

ذَٰلِكَ لِيَعْلَمَ أَنِّي لَمْ أَخُنْهُ بِالْغَيْبِ
وَأَنَّ اللَّهَ لَا يَهْدِي كَيْدَ الْخَائِنِينَ ﴿٥٢﴾

**54.** **'ನಾನು ಸ್ವಯಂ ಎಲ್ಲ ನ್ಯೂನತೆಗಳಿಂದ ಮುಕ್ತನೆಂದು ಹೇಳುವುದಿಲ್ಲ. ಮನುಷ್ಯಾತ್ಮವು ಕೆಡುಕು ಮಾಡಲು ಪ್ರೇರೇಪಿಸುತ್ತದೆ - ನನ್ನ ಪ್ರಭು ಕರುಣೆದೋರಿದ** (ಆತ್ಮಗಳು) **ಹೊರತು. ಖಂಡಿತ ವಾಗಿಯೂ ನನ್ನ ಪ್ರಭು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.'**

وَمَا أُبَرِّئُ نَفْسِي ۚ إِنَّ النَّفْسَ
لَأَمَّارَةٌ بِالسُّوءِ إِلَّا مَا رَحِمَ رَبِّي ۚ إِنَّ رَبِّي
غَفُورٌ رَحِيمٌ ﴿٥٣﴾

296A. 'ಯಅ್ಸಿರೂನ' ಅಂದರೆ 'ರಸ ಹಿಂಡುವವರು' ಎಂದು ಸಹ ಅರ್ಥವಿದೆ. ಸಾಕಷ್ಟು ಮಳೆಬಂದಾಗ, ಹಣ್ಣು ಹಂಪಲುಗಳೂ ಎಣ್ಣೆ ಬೀಜಗಳೂ ಸಮೃದ್ಧವಾಗಿ ಬೆಳೆದು ಜನರು ಅವುಗಳ ರಸಹಿಂಡಿ ಉಪಯೋಗಿಸಿಕೊಳ್ಳುವರು.

وَقَالَ الْمَلِكُ ائْتُونِي بِهِ أَسْتَخْلِصْهُ لِنَفْسِي ۖ فَلَمَّا كَلَّمَهُ قَالَ إِنَّكَ الْيَوْمَ لَدَيْنَا مَكِينٌ أَمِينٌ ﴿٥٥﴾

55. ರಾಜ ಹೇಳಿದನು: 'ನೀವು ಆತನನ್ನು ನನ್ನ ಬಳಿಗೆ ಕರೆತನ್ನಿರಿ. ನಾನು ಆತನನ್ನು ನನ್ನ ವಿಶೇಷ ಸಲಹೆಗಾರ ನನ್ನಾಗಿ ನೇಮಿಸುವೆನು.' ರಾಜನು (ಯೂಸುಫರೊಡನೆ) ಮಾತನಾಡುತ್ತಾ ಹೇಳಿದನು: 'ಇಂದು ನೀನು ನಮ್ಮ ಬಳಿ ಗೌರವಾನ್ವಿತನೂ ನಂಬಿಗಸ್ಥನೂ ಆಗಿರುವೆ.'

قَالَ اجْعَلْنِي عَلَىٰ خَزَائِنِ الْأَرْضِ ۖ إِنِّي حَفِيظٌ عَلِيمٌ ﴿٥٦﴾

56. ಅವರು (ಯೂಸುಫ್) ಹೇಳಿದರು: 'ರಾಜ್ಯ ಭಂಡಾರದ ಮೇಲಧಿಕಾರವನ್ನು ನನಗೊಪ್ಪಿಸಿರಿ. ನಾನು ಅದರ ರಕ್ಷಕನಾಗಬಲ್ಲೆ. (ಆ ಬಗ್ಗೆ) ನನಗೆ ಜ್ಞಾನವಿದೆ.'

وَكَذَٰلِكَ مَكَّنَّا لِيُوسُفَ فِي الْأَرْضِ ۚ يَتَبَوَّأُ مِنْهَا حَيْثُ يَشَاءُ ۚ نُصِيبُ بِرَحْمَتِنَا مَنْ نَشَاءُ ۖ وَلَا نُضِيعُ أَجْرَ الْمُحْسِنِينَ ﴿٥٧﴾

57. ಈ ರೀತಿ ಯೂಸುಫರನ್ನು ನಾವು ಆ ರಾಜ್ಯದಲ್ಲಿ ನೆಲೆಗೊಳಿಸಿದೆವು- ತಾನು ಬಯಸಿದ್ದಲ್ಲಿ ಅವರು ವಾಸಹೂಡುವಂತೆ. ನಾವು ಇಷ್ಟಪಡುವವರಿಗೆ ನಮ್ಮ ಕಾರುಣ್ಯವನ್ನು ತೋರಿಸುತ್ತೇವೆ. ಸಜ್ಜನರ ಪ್ರತಿಫಲವನ್ನು ನಾವು ವ್ಯರ್ಥಗೊಳಿಸುವುದಿಲ್ಲ.

وَلَأَجْرُ الْآخِرَةِ خَيْرٌ لِلَّذِينَ آمَنُوا وَكَانُوا يَتَّقُونَ ﴿٥٨﴾

58. ಮಾತ್ರವಲ್ಲ, ವಿಶ್ವಾಸವನ್ನು ಕೈಗೊಂಡು ಭಯಭಕ್ತಿಯನ್ನು ತೋರಿಸುವವರಿಗೆ ಪರಲೋಕದ ಪ್ರತಿಫಲ ಅತಿ ಉತ್ತಮವಾದುದು.

وَجَاءَ إِخْوَةُ يُوسُفَ فَدَخَلُوا عَلَيْهِ فَعَرَفَهُمْ وَهُمْ لَهُ مُنْكِرُونَ ﴿٥٩﴾

59. ಯೂಸುಫರ ಸಹೋದರರು (ಆ ರಾಜ್ಯಕ್ಕೆ) ಬಂದು ಅವರ ಮುಂದೆ ಹಾಜರಾದರು. ಅವರು (ಯೂಸುಫ್) ಅವರನ್ನು ಗುರುತಿಸಿದರು. ಆದರೆ ಅವರಿಗೆ (ಯೂಸುಫರ) ಗುರುತು ಸಿಗಲಿಲ್ಲ.

وَلَمَّا جَهَّزَهُمْ بِجَهَازِهِمْ قَالَ ائْتُونِي بِأَخٍ لَكُمْ مِنْ أَبِيكُمْ ۚ أَلَا تَرَوْنَ أَنِّي أُوفِي الْكَيْلَ وَأَنَا خَيْرُ الْمُنْزِلِينَ ﴿٦٠﴾

60. ಅವರ ಅವಶ್ಯಕತೆಯ ಸಾಮಗ್ರಿಗಳನ್ನು ಅವರು ಒದಗಿಸಿಕೊಟ್ಟು ಹೇಳಿದರು: 'ನಿಮ್ಮ ತಂದೆಯ ಬಳಿಯಿಂದ ನಿಮ್ಮ ತಮ್ಮನನ್ನೂ[296B] (ಇನ್ನು ಬರುವಾಗ) ಕರೆದು ಕೊಂಡು ಬನ್ನಿರಿ. ನಾನು ಸರಿಯಾಗಿ ಅಳೆದು ಕೊಡುತ್ತಿರುವುದಾಗಿಯೂ ಚೆನ್ನಾಗಿ ಅತಿಥಿ ಸತ್ಕಾರ ಮಾಡುತ್ತಿರುವುದಾಗಿಯೂ ನೀವು ಕಾಣುತ್ತೀರಷ್ಟೆ.

296B. ಯಅ್‌ಖೂಬರ ಇನ್ನೋರ್ವ ಪತ್ನಿಯಲ್ಲಿ ಹುಟ್ಟಿದ, ಯೂಸುಫರ ಖಾಸಾ ಸಹೋದರನಾದ ಬಿನ್‌ಯಾಮೀನ್ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆ.





فَإِنْ لَمْ تَأْتُونِي بِهِ فَلَا كَيْلَ لَكُمْ عِنْدِي وَلَا تَقْرَبُونِ ﴿٦١﴾

61. 'ಆದರೆ ನೀವು ಅವನನ್ನು ನನ್ನ ಹತ್ತಿರ ಕರೆತರದಿದ್ದರೆ ನಿಮಗೆ ನನ್ನಿಂದ ಧಾನ್ಯವೇನೂ ಸಿಗಲಾರದು. ನೀವು ನನ್ನ ಬಳಿಗೆ ಬರುವುದೂ ಬೇಡ.'

قَالُوا سَنُرَاوِدُ عَنْهُ أَبَاهُ وَإِنَّا لَفَاعِلُونَ ﴿٦٢﴾

62. ಅವರು ಹೇಳಿದರು: 'ಅವನನ್ನು ನಮ್ಮ ಜೊತೆ ಕಳುಹಿಸಿ ಕೊಡಲಿಕ್ಕೆ ನಾವು ಅವನ ತಂದೆಯೊಡನೆ ಹೇಳಿ ಪ್ರಯತ್ನಿಸುವೆವು. ನಾವು ಅದನ್ನು ಮಾಡಿಯೇ ತೀರುವೆವು.'

وَقَالَ لِفِتْيَانِهِ اجْعَلُوا بِضَاعَتَهُمْ فِي رِحَالِهِمْ لَعَلَّهُمْ يَعْرِفُونَهَا إِذَا انْقَلَبُوا إِلَىٰ أَهْلِهِمْ لَعَلَّهُمْ يَرْجِعُونَ ﴿٦٣﴾

63. ಅವರು (ಯೂಸುಫ್) ತನ್ನ ಸೇವಕರಿಗೆ ಹೇಳಿದರು: '(ಅವರು ತಂದ) ಅವರ ಹಣವನ್ನು (ಅವರಿಗೆ ತಿಳಿಯದಂತೆ) ಅವರ ಚೀಲಗಳಲ್ಲಿ ಹಾಕಿ ಬಿಡಿರಿ. ಅವರು ತಮ್ಮ ಕುಟುಂಬದ ಬಳಿಗೆ ತೆರಳಿದಾಗ ಅವರಿಗದು (ಆ ಔದಾರ್ಯ) ತಿಳಿದು ಅವರು (ಆ ಕಾರಣದಿಂದ) ಮರಳಿ ಬರಬಹುದು.'

فَلَمَّا رَجَعُوا إِلَىٰ أَبِيهِمْ قَالُوا يَا أَبَانَا مُنِعَ مِنَّا الْكَيْلُ فَأَرْسِلْ مَعَنَا أَخَانَا نَكْتَلْ وَإِنَّا لَهُ لَحَافِظُونَ ﴿٦٤﴾

64. ಅವರು ತಮ್ಮ ತಂದೆಯ ಬಳಿಗೆ ಹಿಂತೆರಳಿದಾಗ ಹೇಳಿದರು: 'ನಮ್ಮ ತಂದೆಯೇ, (ಇನ್ನು ಮುಂದೆ) ನಮಗೆ ಧಾನ್ಯ ಕೊಡುವುದನ್ನು ತಡೆಯಲಾಗಿದೆ. ಆದ್ದರಿಂದ ಧಾನ್ಯ ತರಲು (ಇನ್ನೊಮ್ಮೆ ಹೋಗುವಾಗ) ನಮ್ಮ ತಮ್ಮನನ್ನೂ ನಮ್ಮ ಜೊತೆಯಲ್ಲಿ ಕಳುಹಿಸಿಕೊಡಬೇಕು. ನಾವು ಅವನ ರಕ್ಷಣೆಯ ಹೊಣೆಯನ್ನು ವಹಿಸಿಕೊಳ್ಳುವೆವು.'

قَالَ هَلْ آمَنُكُمْ عَلَيْهِ إِلَّا كَمَا أَمِنْتُكُمْ عَلَىٰ أَخِيهِ مِنْ قَبْلُ ۖ فَاللَّهُ خَيْرٌ حَافِظًا ۖ وَهُوَ أَرْحَمُ الرَّاحِمِينَ ﴿٦٥﴾

65. ಅವರು (ಯಅ್‌ಖೂಬ್) ಹೇಳಿದರು: 'ಇವನ ಸಹೋದರ (ಯೂಸುಫ್)ನ ಬಗ್ಗೆ ಮುಂಚೆ ನಾನು ನಿಮ್ಮನ್ನು ನಂಬಿದಂತೆ ಹೊರತು (ಈಗ) ಇವನ ಬಗ್ಗೆ ನಿಮ್ಮನ್ನು ನಾನು ನಂಬುವೆನೋ? ಅಲ್ಲಾಹನೇ ಅತ್ಯುತ್ತಮ ಸಂರಕ್ಷಕನಾಗಿದ್ದಾನೆ. ಕರುಣೆ ತೋರಿಸುವವರಲ್ಲಿ ಅವನು ಅತ್ಯಂತ ಕಾರುಣ್ಯವಂತನೂ ಆಗಿದ್ದಾನೆ.'

وَلَمَّا فَتَحُوا مَتَاعَهُمْ وَجَدُوا بِضَاعَتَهُمْ رُدَّتْ إِلَيْهِمْ ۖ قَالُوا يَا أَبَانَا مَا نَبْغِي ۖ هَٰذِهِ بِضَاعَتُنَا رُدَّتْ إِلَيْنَا ۖ وَنَمِيرُ

66. ತಮ್ಮ ಸಾಮಗ್ರಿಗಳನ್ನು ತೆರೆದು ನೋಡಿದಾಗ, ಅವರ ಹಣ ಅವರಿಗೆಯೇ ಹಿಂತಿರುಗಿಸಿದ್ದನ್ನು ಅವರು ಕಂಡರು. ಆಗ ಅವರು ಹೇಳಿದರು: 'ನಮ್ಮ ತಂದೆಯೇ, ನಮಗೆ ಇನ್ನೇನು ಬೇಕು! ನಮ್ಮ ಹಣ ನಮಗೆಯೇ

أَهْلَنَا وَنَحْفَظُ أَخَانَا وَنَزْدَادُ كَيْلَ بَعِيْرٍ ۚ ذٰلِكَ كَيْلٌ يَّسِيْرٌ ﴿٦٦﴾

ಹಿಂತಿರುಗಿಸಲ್ಪಟ್ಟಿದೆ. (ನಮ್ಮ ತಮ್ಮನನ್ನು ನಮ್ಮ ಜೊತೆಯಲ್ಲಿ ಕಳುಹಿಸಿದ ಪಕ್ಷದಲ್ಲಿ) ನಮ್ಮ ಕುಟುಂಬಕ್ಕೆ ಬೇಕಾದ ಆಹಾರ ವಸ್ತುಗಳನ್ನು ನಾವು ತರುವೆವು ಹಾಗೂ ನಮ್ಮ ತಮ್ಮನ ರಕ್ಷಣೆಯನ್ನು ಸಹ ನಾವು ಮಾಡುವೆವು. ಒಂದು ಒಂಟೆ ಹೊರುವಷ್ಟು ಧಾನ್ಯ ನಮಗೆ ಹೆಚ್ಚುವರಿಯಾಗಿ ಸಿಗುವುದು. ಇದು ನಮಗೆ ಸುಲಭವಾಗಿ ದೊರಕುವ ಧಾನ್ಯದ ಪ್ರಮಾಣ.'

قَالَ لَنْ أُرْسِلَهٗ مَعَكُمْ حَتّٰى تُؤْتُوْنِ مَوْثِقًا مِّنَ اللّٰهِ لَتَأْتُنَّنِيْ بِهٖٓ إِلَّآ أَنْ يُّحَاطَ بِكُمْ ۚ فَلَمَّآ اٰتَوْهُ مَوْثِقَهُمْ قَالَ اللّٰهُ عَلٰى مَا نَقُوْلُ وَكِيْلٌ ﴿٦٧﴾

67. ಅವರು (ಯಅ್‌ಖೂಬ್) ಹೇಳಿದರು: 'ನೀವು ಯಾವುದಾದರೂ ವಿಪತ್ತಿನಲ್ಲಿ ಸಿಲುಕಿದರೆ ಹೊರತು ನೀವು ಖಂಡಿತವಾಗಿಯೂ ಅವನನ್ನು ಮರಳಿ ಕರೆದುಕೊಂಡು ಬರುವಿರೆಂದು ಅಲ್ಲಾಹನ ಮೇಲೆ ಆಣೆ ಹಾಕಿ ನನಗೆ ಭರವಸೆ ನೀಡದೆ ಇರುವ ತನಕ ಅವನನ್ನು ನಿಮ್ಮ ಜೊತೆಯಲ್ಲಿ ಕಳುಹಿಸಲಾರೆ.' ಹಾಗೆ ಅವರು ತಮ್ಮ ದೃಢ ಭರವಸೆಯನ್ನು ನೀಡಿದಾಗ ಅವರು (ಯಅ್‌ಖೂಬ್) ಹೇಳಿದರು: 'ಅಲ್ಲಾಹನು ನಾವು ಹೇಳುವುದಕ್ಕೆಲ್ಲ ಮೇಲ್ನೋಟಗಾರನಾಗಿದ್ದಾನೆ.'

وَقَالَ يٰبَنِيَّ لَا تَدْخُلُوْا مِنْۢ بَابٍ وَّاحِدٍ وَّادْخُلُوْا مِنْ أَبْوَابٍ مُّتَفَرِّقَةٍ ۚ وَمَآ أُغْنِيْ عَنْكُمْ مِّنَ اللّٰهِ مِنْ شَيْءٍ ۚ إِنِ الْحُكْمُ إِلَّا لِلّٰهِ ۚ عَلَيْهِ تَوَكَّلْتُ ۚ وَعَلَيْهِ فَلْيَتَوَكَّلِ الْمُتَوَكِّلُوْنَ ﴿٦٨﴾

68. (ಅವರು ಹೊರಡಲು ಸಿದ್ಧರಾದಾಗ) ಅವರು (ಯಅ್‌ಖೂಬ್) ಹೇಳಿದರು: 'ನನ್ನ ಪುತ್ರರೇ, ನೀವು ಒಂದೇ ಬಾಗಿಲಿನಿಂದ (ಪಟ್ಟಣದೊಳಗೆ) ಪ್ರವೇಶಿಸಬೇಡಿರಿ; ಬೇರೆ ಬೇರೆ ದ್ವಾರಗಳಿಂದ ಪ್ರವೇಶಿಸಿರಿ. ಅಲ್ಲಾಹನ ವಿಧಿಗೆ ವಿರುದ್ಧವಾಗಿ ನಿಮಗೇನೂ ಒಳಿತು ಮಾಡಲು ನನ್ನಿಂದ ಅಸಾಧ್ಯ. ತೀರ್ಮಾನ ಮಾಡುವ ಅಧಿಕಾರ ಅಲ್ಲಾಹನದ್ದೇ ಆಗಿದೆ. ನಾನು ಭರವಸೆಯನ್ನೆಲ್ಲ ಅವನ ಮೇಲಿಟ್ಟಿದ್ದೇನೆ. ಭರವಸೆಯಿಡುವವರೆಲ್ಲ ಅವನ ಮೇಲೆಯೇ ಭರವಸೆಯನ್ನಿಡಬೇಕಾಗಿದೆ.'

وَلَمَّا دَخَلُوْا مِنْ حَيْثُ أَمَرَهُمْ أَبُوْهُمْ ۚ مَا كَانَ يُغْنِيْ عَنْهُمْ مِّنَ اللّٰهِ مِنْ شَيْءٍ إِلَّا

69. ಅವರ ತಂದೆ ಹೇಳಿದ ಪ್ರಕಾರವೇ ಅವರು (ಪಟ್ಟಣದೊಳಗೆ) ಪ್ರವೇಶಿಸಿದಾಗ, ಅಲ್ಲಾಹನಿಂದ ಸಂಭವಿಸಲಿದ್ದ ಏನನ್ನಾದರೂ ತಡೆಯಲು ಅದು ಉಪಯುಕ್ತವಾಗಲಿಲ್ಲ. ಆದರೆ ಯಅ್‌ಖೂಬ್ ತನ್ನ





حَاجَةً فِيْ نَفْسِ يَعْقُوْبَ قَضٰهَا ۚ وَإِنَّهٗ لَذُوْ عِلْمٍ لِّمَا عَلَّمْنٰهُ وَلٰكِنَّ أَكْثَرَ النَّاسِ لَا يَعْلَمُوْنَ ﴿٦٨﴾

ಮನಸ್ಸಿನಲ್ಲಿದ್ದ ಒಂದು ಆಶೆಯನ್ನು ಈಡೇರಿಸಿದರು ಎಂದು ಮಾತ್ರ. ನಾವು ಅವರಿಗೆ ಕಲಿಸಿಕೊಟ್ಟದ್ದರಿಂದ ಅವರು (ಯಅ್‌ಖೂಬ್) ಬಹಳ ತಿಳುವಳಿಕೆಯುಳ್ಳವರಾಗಿದ್ದರು. ಆದರೆ ಜನರಲ್ಲಿ ಹೆಚ್ಚಿನವರು ಮನಗಾಣುವುದಿಲ್ಲ.

وَلَمَّا دَخَلُوْا عَلٰى يُوْسُفَ اٰوٰٓى إِلَيْهِ أَخَاهُ قَالَ إِنِّيْٓ أَنَا أَخُوْكَ فَلَا تَبْتَئِسْ بِمَا كَانُوْا يَعْمَلُوْنَ ﴿٦٩﴾

70. ಹಾಗೆ ಅವರು ಯೂಸುಫರ ಹತ್ತಿರ ಬಂದಾಗ, ತನ್ನ ತಮ್ಮನನ್ನು ಅವರು (ಯೂಸುಫ್) ತನ್ನ ಬಳಿ ಇರಿಸಿಕೊಂಡರು. ಅವರು ಹೇಳಿದರು: 'ನಾನು ನಿನ್ನ ಸಹೋದರನೇ ಆಗಿದ್ದೇನೆ. ಅವರ ಕುಕೃತ್ಯಗಳಿಗಾಗಿ ನೀನು ವ್ಯಥೆಪಡಬೇಡ.'

فَلَمَّا جَهَّزَهُمْ بِجَهَازِهِمْ جَعَلَ السِّقَايَةَ فِيْ رَحْلِ أَخِيْهِ ثُمَّ أَذَّنَ مُؤَذِّنٌ أَيَّتُهَا الْعِيْرُ إِنَّكُمْ لَسٰرِقُوْنَ ﴿٧٠﴾

71. ಅನಂತರ ಅವರ ಸರಕು ಸರಂಜಾಮುಗಳನ್ನು ಅವರು (ಯೂಸುಫ್) ಸಿದ್ಧಪಡಿಸಿಕೊಟ್ಟಾಗ ಕುಡಿಯಲು ಉಪಯೋಗಿಸುವ (ಒಂದು) ಲೋಟವನ್ನು ಚೀಲದೊಳಗೆ ಇಟ್ಟುಬಿಟ್ಟರು.[297] ಆ ಬಳಿಕ (ಏನಾಯಿತೆಂದರೆ ಅದನ್ನು ಕಂಡ) ಒಬ್ಬನು ಕರೆದು ಹೇಳಿದನು: 'ಎಲ್ಲೈ ಯಾತ್ರಾ ತಂಡದವರೇ, ನೀವು ಕಳ್ಳರಾಗಿದ್ದೀರಿ.'

قَالُوْا وَأَقْبَلُوْا عَلَيْهِمْ مَّاذَا تَفْقِدُوْنَ ﴿٧١﴾

72. ಆಗ ಅವರು (ಯೂಸುಫರ ಸಹೋದರರು) ಅವರೆಡೆಗೆ ತಿರುಗಿ ಕೇಳಿದರು: 'ನಿಮ್ಮದೇನು ಕಾಣೆಯಾಗಿದೆ?'

قَالُوْا نَفْقِدُ صُوَاعَ الْمَلِكِ وَلِمَنْ جَآءَ بِهٖ حِمْلُ بَعِيْرٍ وَّأَنَا بِهٖ زَعِيْمٌ ﴿٧٢﴾

73. ಅವರು ಉತ್ತರಿಸಿದರು: 'ರಾಜನ ಪಾನಪಾತ್ರೆ ಕಾಣೆಯಾಗಿದೆ.[298] ಅದನ್ನು ಪತ್ತೆಹಚ್ಚುವವನಿಗೆ ಒಂದು ಒಂಟೆ ಹೊರೆ (ಧಾನ್ಯ) ಬಹುಮಾನವಾಗಿ ನೀಡಲಾಗುವುದು.' (ಕರೆದು ಹೇಳುವವನು ಹೇಳಿದನು:) 'ಅದಕ್ಕೆ ನಾನು ಹೊಣೆಗಾರನಾಗಿದ್ದೇನೆ.'

297. ಹಝ್ರತ್ ಯೂಸುಫ್ ಅಲೈಹಿಸ್ಸಲಾಂ ಬೇಕೆಂದೇ ಹಾಗೆ ಮಾಡಿದ್ದಲ್ಲ. ಸರಕು ಸರಂಜಾಮುಗಳನ್ನು ಸಿದ್ಧಪಡಿಸಿ ಹೇರಿಸುವ ಮಧ್ಯದಲ್ಲಿ ಅವರು ಬಾಯಾರಿಕೆಗೆ ನೀರು ತರಿಸಿ ಕುಡಿದು ತನಗರಿವಿಲ್ಲದೆಯೇ ತಮ್ಮನ ಸರಕಿನೊಂದಿಗೆ ಅದನ್ನು ಇಟ್ಟುಬಿಟ್ಟಿರಬಹುದು. ಇದು ಯೂಸುಫರ ತಮ್ಮನನ್ನು ಅಲ್ಲಿಯೇ ಉಳಿಯುವಂತೆ ಮಾಡಲು ಅಲ್ಲಾಹನು ಮಾಡಿದ ಒಂದು ಯೋಜನೆಯೆಂದು 77ನೇ ವಚನದಲ್ಲಿ ಸೂಚನೆಯಿದೆ.

298. ಪೂರ್ವಿಕ ರಾಜರು ಕುಡಿಯಲಿಕ್ಕಾಗಲಿ ಅಳೆಯಲಿಕ್ಕಾಗಲಿ ಉಪಯೋಗಿಸುವ ಬೆಳ್ಳಿ ಅಥವಾ ಚಿನ್ನದ ಲೋಟ.

**74.** ಅವರು (ಯೂಸುಫರ ಸಹೋದರರು) ಹೇಳಿದರು: 'ಅಲ್ಲಾಹನಾಣೆ, ನಾವು ಈ ಊರಿನಲ್ಲಿ ಕ್ಷೋಭೆ ಹಬ್ಬಿಸಲು ಬಂದವರಲ್ಲವೆಂದು ಖಂಡಿತವಾಗಿಯೂ ನಿಮಗೆ ಗೊತ್ತಿದೆ. ನಾವು ಕಳ್ಳರಲ್ಲ.'

قَالُوا تَاللَّهِ لَقَدْ عَلِمْتُمْ مَا جِئْنَا لِنُفْسِدَ فِي الْأَرْضِ وَمَا كُنَّا سَارِقِينَ ﴿٧٣﴾

**75.** ಅವರು ಕೇಳಿದರು: 'ನೀವು ಸುಳ್ಳುಗಾರರೆಂದಾದರೆ ಅದಕ್ಕೆ ಶಿಕ್ಷೆಯೇನು?'

قَالُوا فَمَا جَزَاؤُهُ إِنْ كُنْتُمْ كَاذِبِينَ ﴿٧٤﴾

**76.** ಅವರು ಹೇಳಿದರು: 'ಅದಕ್ಕಿರುವ ಶಿಕ್ಷೆಯೇನೆಂದರೆ, ಯಾವನ ಚೀಲದಲ್ಲಿ ಅದು ಪತ್ತೆಯಾಗುತ್ತದೋ ಅವನೇ ಅದಕ್ಕೆ ಹೊಣೆಯಾಗಬೇಕು. ನಾವು (ಸಹ) ಅಪರಾಧಿಗಳನ್ನು ಹೀಗೆಯೇ ಶಿಕ್ಷಿಸುತ್ತೇವೆ.'

قَالُوا جَزَاؤُهُ مَنْ وُجِدَ فِي رَحْلِهِ فَهُوَ جَزَاؤُهُ ۚ كَذَٰلِكَ نَجْزِي الظَّالِمِينَ ﴿٧٥﴾

**77.** ಅನಂತರ ಅವರು (ಯೂಸುಫ್) ತನ್ನ ತಮ್ಮನ ಚೀಲದ ತಪಾಸಣೆ ಮಾಡುವುದಕ್ಕೆ ಮುಂಚೆ ಇತರರ ಚೀಲಗಳ ತಪಾಸಣೆ ಮಾಡಲಾರಂಭಿಸಿದರು. ಆ ಬಳಿಕ ಅವರು ತನ್ನ ತಮ್ಮನ ಚೀಲದಿಂದ ಅದನ್ನು (ಲೋಟವನ್ನು) ಹೊರತೆಗೆದರು. ಈ ರೀತಿ ನಾವು ಯೂಸುಫರಿಗೋಸ್ಕರ ಯೋಜನೆ ಮಾಡಿದೆವು. ಅಲ್ಲಾಹನು ಇಚ್ಛಿಸದಿರುತ್ತಿದ್ದರೆ ಆ ರಾಜನ ಕಾನೂನು ಪ್ರಕಾರ ತನ್ನ ತಮ್ಮನನ್ನು ಹಿಡಿದಿಡಲು ಅವರಿಗೆ (ಯೂಸುಫರಿಗೆ) ಮಾರ್ಗವಿರಲಿಲ್ಲ. ನಾವು ಮೆಚ್ಚುವವರನ್ನು ನಾವು ಹಂತಹಂತವಾಗಿ ಉನ್ನತ ಸ್ಥಾನಕ್ಕೇರಿಸುತ್ತೇವೆ. ಜ್ಞಾನವಂತರಾದ ಎಲ್ಲರಿಗಿಂತಲೂ ಮಿಗಿಲಾಗಿ ಅತ್ಯಂತ ಜ್ಞಾನಿಯಾದ ಒಬ್ಬನಿದ್ದಾನೆ.

فَبَدَأَ بِأَوْعِيَتِهِمْ قَبْلَ وِعَاءِ أَخِيهِ ثُمَّ اسْتَخْرَجَهَا مِنْ وِعَاءِ أَخِيهِ ۚ كَذَٰلِكَ كِدْنَا لِيُوسُفَ ۖ مَا كَانَ لِيَأْخُذَ أَخَاهُ فِي دِينِ الْمَلِكِ إِلَّا أَنْ يَشَاءَ اللَّهُ ۚ نَرْفَعُ دَرَجَاتٍ مَنْ نَشَاءُ ۗ وَفَوْقَ كُلِّ ذِي عِلْمٍ عَلِيمٌ ﴿٧٦﴾

**78.** ಅವರು (ಯೂಸುಫರ ಸಹೋದರರು) ಹೇಳಿದರು: 'ಇವನು ಕದ್ದಿದ್ದರೆ (ಅದರಲ್ಲಿ ಆಶ್ಚರ್ಯವಿಲ್ಲ. ಯಾಕೆಂದರೆ) ಮುಂಚೆ ಇವನ ಒಬ್ಬ ಸಹೋದರನು (ಯೂಸುಫ್) ಸಹ ಕದ್ದಿದ್ದ.' ಆದರೆ ಯೂಸುಫ್ ಅದನ್ನು ತನ್ನ ಮನಸ್ಸಿನಲ್ಲೇ ಅಡಗಿಸಿಟ್ಟರು; ಅವರಿಗೆ ಅದನ್ನು ತೋರ್ಪಡಿಸಲಿಲ್ಲ. ಅವರು (ಯೂಸುಫ್ ಮನಸ್ಸಿನಲ್ಲೇ) ಹೇಳಿದರು: 'ನೀವು ಬಲು ದುಷ್ಟರಾಗಿದ್ದೀರಿ. ನೀವು ಆರೋಪಿಸುತ್ತಿರುವುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.'

قَالُوا إِنْ يَسْرِقْ فَقَدْ سَرَقَ أَخٌ لَهُ مِنْ قَبْلُ ۚ فَأَسَرَّهَا يُوسُفُ فِي نَفْسِهِ وَلَمْ يُبْدِهَا لَهُمْ ۚ قَالَ أَنْتُمْ شَرٌّ مَكَانًا ۖ وَاللَّهُ أَعْلَمُ بِمَا تَصِفُونَ ﴿٧٧﴾





**79.** ಅವರು ಹೇಳಿದರು: 'ಮಹಾಶಯರೇ, ಇವನಿಗೆ ಒಬ್ಬ ವಯೋವೃದ್ಧ ತಂದೆ ಇದ್ದಾರೆ. ಆದ್ದರಿಂದ ಇವನ ಬದಲಿಗೆ ನಮ್ಮ ಪೈಕಿ ಒಬ್ಬನನ್ನು ತಾವು ಹಿಡಿದಿಟ್ಟುಕೊಳ್ಳಿರಿ. ತಮ್ಮನ್ನು ನಾವು ಉದಾರಶೀಲರನ್ನಾಗಿ ಕಾಣುತ್ತೇವೆ.'

قَالُوا يَا أَيُّهَا الْعَزِيزُ إِنَّ لَهُ أَبًا شَيْخًا كَبِيرًا فَخُذْ أَحَدَنَا مَكَانَهُ ۖ إِنَّا نَرَاكَ مِنَ الْمُحْسِنِينَ ﴿٧٨﴾

**80.** ಅವರು (ಯೂಸುಫ್) ಹೇಳಿದರು: 'ಯಾರ ಬಳಿ ನಮ್ಮ ವಸ್ತುವನ್ನು ನಾವು ಕಂಡಿದ್ದೇವೋ, ಅವನ ಬದಲಿಗೆ ಮತ್ತೊಬ್ಬನನ್ನು ಹಿಡಿಯುವುದರಿಂದ ಅಲ್ಲಾಹನು ನಮ್ಮನ್ನು ರಕ್ಷಿಸಲಿ. ಹಾಗೆ ಮಾಡಿದರೆ ನಾವು ತಪ್ಪಿತಸ್ಥರಾಗುವೆವು.'

قَالَ مَعَاذَ اللَّهِ أَنْ نَأْخُذَ إِلَّا مَنْ وَجَدْنَا مَتَاعَنَا عِنْدَهُ إِنَّا إِذًا لَظَالِمُونَ ﴿٧٩﴾

**81.** ಹಾಗೆ ಅವರು ಅವನ ಬಗ್ಗೆ ನಿರಾಶೆಗೊಂಡಾಗ, ದೂರಸರಿದು ಸಮಾಲೋಚನೆ ಮಾಡಿದರು. ಅವರಲ್ಲಿ ಹಿರಿಯವನು ಹೇಳಿದನು: "ಅಲ್ಲಾಹನ ಹೆಸರಿನಲ್ಲಿ ನಿಮ್ಮ ತಂದೆ ನಿಮ್ಮಿಂದ ಪ್ರತಿಜ್ಞೆ ಪಡೆದದ್ದು ಮತ್ತು ಇದಕ್ಕಿಂತ ಮುಂಚೆ ಯೂಸುಫನ ವಿಚಾರದಲ್ಲಿ ನೀವು ಅನ್ಯಾಯವಾಗಿ ವರ್ತಿಸಿದ್ದು ನಿಮಗೆ ಗೊತ್ತಿಲ್ಲವೇ? ಆದ್ದರಿಂದ ನನ್ನ ತಂದೆ ನನಗೆ ಅನುಮತಿ ನೀಡುವ ತನಕ ಅಥವಾ ಅಲ್ಲಾಹನು ನನ್ನ ಬಗ್ಗೆ ಏನನ್ನಾದರೂ ತೀರ್ಮಾನಿಸುವವರೆಗೆ ನಾನು (ಈ) ಊರನ್ನು ಬಿಡಲಾರೆ. ಅವನು (ಅಲ್ಲಾಹನು) ತೀರ್ಪು ನೀಡುವವರ ಪೈಕಿ ಅತ್ಯುತ್ತಮನಾಗಿದ್ದಾನೆ.

فَلَمَّا اسْتَيْأَسُوا مِنْهُ خَلَصُوا نَجِيًّا ۖ قَالَ كَبِيرُهُمْ أَلَمْ تَعْلَمُوا أَنَّ أَبَاكُمْ قَدْ أَخَذَ عَلَيْكُمْ مَوْثِقًا مِنَ اللَّهِ وَمِنْ قَبْلُ مَا فَرَّطْتُمْ فِي يُوسُفَ ۖ فَلَنْ أَبْرَحَ الْأَرْضَ حَتَّىٰ يَأْذَنَ لِي أَبِي أَوْ يَحْكُمَ اللَّهُ لِي ۖ وَهُوَ خَيْرُ الْحَاكِمِينَ ﴿٨٠﴾

**82.** "ನೀವು ನಿಮ್ಮ ತಂದೆಯ ಬಳಿಗೆ ಮರಳಿ ಹೋಗಿ ಹೇಳಿರಿ: 'ನಮ್ಮ ತಂದೆಯೇ, ನಿಮ್ಮ ಮಗ ಕಳ್ಳತನ ಮಾಡಿದ್ದಾನೆ. ನಮಗೆ ತಿಳಿದ ಮಟ್ಟಿಗೆ ನಾವು ಸಾಕ್ಷಿ ಹೇಳಿದ್ದೇವೆ. ನಮಗೆ ಕಾಣದ ವಿಚಾರದಲ್ಲಿ ನಾವು ಕಾವಲುಗಾರರಾಗಲು ನಮಗೆ ಅಸಾಧ್ಯವಷ್ಟೆ.

ارْجِعُوا إِلَىٰ أَبِيكُمْ فَقُولُوا يَا أَبَانَا إِنَّ ابْنَكَ سَرَقَ وَمَا شَهِدْنَا إِلَّا بِمَا عَلِمْنَا وَمَا كُنَّا لِلْغَيْبِ حَافِظِينَ ﴿٨١﴾

**83.** 'ನಾವು ತಂಗಿದ್ದ ಪಟ್ಟಣದ ಜನರೊಡನೆ ಮತ್ತು ನಮ್ಮೊಂದಿಗೆ ಮರಳಿ ಬಂದ ಯಾತ್ರಿಕ ತಂಡದೊಡನೆ ನೀವು ಕೇಳಿರಿ. ನಾವು ಸತ್ಯವನ್ನೇ ನುಡಿಯುತ್ತಿದ್ದೇವೆ'."

وَاسْأَلِ الْقَرْيَةَ الَّتِي كُنَّا فِيهَا وَالْعِيرَ الَّتِي أَقْبَلْنَا فِيهَا ۖ وَإِنَّا لَصَادِقُونَ ﴿٨٢﴾

**84.** ಅವರು (ಯಅ್‌ಖೂಬ್) ಹೇಳಿದರು: '(ಇದು ಸರಿಯೆಂದು ತೋರುವುದಿಲ್ಲ.) ನಿಮ್ಮ ಮನಸ್ಸು ಯಾವುದೋ ಒಂದು ವಿಚಾರವನ್ನು ನಿಮಗೆ ಚಲೋದಾಗಿ ತೋರಿಸಿದೆ. ಆದ್ದರಿಂದ ಉತ್ತಮ ರೀತಿಯ ಸಹನೆ ಹೊರತು ನನಗೆ ಅನ್ಯಮಾರ್ಗವಿಲ್ಲ. ಅಲ್ಲಾಹನು ಅವರನ್ನೆಲ್ಲ ನನ್ನ ಬಳಿಗೆ ತರಬಹುದು. ಖಂಡಿತವಾಗಿಯೂ ಅವನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.'

قَالَ بَلْ سَوَّلَتْ لَكُمْ اَنْفُسُكُمْ اَمْرًا ؕ فَصَبْرٌ جَمِيْلٌ ؕ عَسَى اللّٰهُ اَنْ يَّاْتِيَنِيْ بِهِمْ جَمِيْعًا ؕ اِنَّهٗ هُوَ الْعَلِيْمُ الْحَكِيْمُ ﴿٨٣﴾

**85.** ಅವರು (ಯಅ್‌ಖೂಬ್) ಅವರಿಂದ ಮುಖ ತಿರುಗಿಸಿದರು. ಅವರು ಹೇಳಿದರು: 'ಹಾ! ಯೂಸುಫನ ಬಗ್ಗೆ ನನ್ನ ದುಃಖವೇ!' ಶೋಕಾತಿರೇಕ ನಿಮಿತ್ತ ಅವರ ಕಣ್ಣುಗಳು ಕಣ್ಣೀರಿನಿಂದ ತುಂಬಿದವು. ಆದರೆ ಅವರು ತನ್ನ ದುಃಖವನ್ನು ಅದುಮಿಡುವವರಾಗಿದ್ದರು.

وَتَوَلّٰى عَنْهُمْ وَقَالَ يٰۤاَسَفٰى عَلٰى يُوْسُفَ وَابْيَضَّتْ عَيْنٰهُ مِنَ الْحُزْنِ فَهُوَ كَظِيْمٌ ﴿٨٤﴾

**86.** ಅವರು ಹೇಳಿದರು: 'ಅಲ್ಲಾಹನಾಣೆ, ತಾವು ಅನಾರೋಗ್ಯ ಪೀಡಿತರಾಗುವ ವರೆಗೆ ಅಥವಾ ಮೃತರಾಗುವ ತನಕ ತಾವು ಯೂಸುಫನ ನೆನಪು ಮಾಡಿಕೊಂಡೇ ಇರುವಿರಿ.'

قَالُوْا تَاللّٰهِ تَفْتَؤُا تَذْكُرُ يُوْسُفَ حَتّٰى تَكُوْنَ حَرَضًا اَوْ تَكُوْنَ مِنَ الْهٰلِكِيْنَ ﴿٨٥﴾

**87.** ಅವರು (ಯಅ್‌ಖೂಬ್) ಹೇಳಿದರು: 'ನನ್ನ ಮನೋವ್ಯಥೆಯನ್ನೂ ವ್ಯಾಕುಲವನ್ನೂ ಅಲ್ಲಾಹನೊಡನೆ ಮಾತ್ರ ನಾನು ನಿವೇದಿಸುತ್ತೇನೆ. ಅಲ್ಲಾಹನಿಂದ ನೀವು ತಿಳಿಯದಿರುವುದನ್ನು ನಾನು ತಿಳಿಯುತ್ತೇನೆ.

قَالَ اِنَّمَاۤ اَشْكُوْا بَثِّيْ وَحُزْنِيْۤ اِلَى اللّٰهِ وَاَعْلَمُ مِنَ اللّٰهِ مَا لَا تَعْلَمُوْنَ ﴿٨٦﴾

**88.** 'ನನ್ನ ಪುತ್ರರೇ, ನೀವು ಹೋಗಿ ಯೂಸುಫನನ್ನೂ ಅವನ ತಮ್ಮನನ್ನೂ ಹುಡುಕಿರಿ. ಅಲ್ಲಾಹನ ಕರುಣೆಯ ಬಗ್ಗೆ ನೀವು ನಿರಾಶೆಹೊಂದಬೇಡಿರಿ. ಅವಿಶ್ವಾಸಿಗಳಾದ ಜನರು ಹೊರತು ಬೇರೆ ಯಾರೂ ಅಲ್ಲಾಹನ ಕಾರುಣ್ಯದ ಕುರಿತು ನಿರಾಶೆಪಡಲಾರರು.'

يٰبَنِيَّ اذْهَبُوْا فَتَحَسَّسُوْا مِنْ يُّوْسُفَ وَاَخِيْهِ وَلَا تَايْــَٔسُوْا مِنْ رَّوْحِ اللّٰهِ ؕ اِنَّهٗ لَا يَايْــَٔسُ مِنْ رَّوْحِ اللّٰهِ اِلَّا الْقَوْمُ الْكٰفِرُوْنَ ﴿٨٧﴾

**89.** ಅನಂತರ ಅವರು ಅವರ (ಯೂಸುಫರ) ಬಳಿಗೆ ಹೋದಾಗ ಹೇಳಿದರು: 'ಮಹಾಶಯರೇ, ನಮ್ಮನ್ನೂ ನಮ್ಮ ಕುಟುಂಬವನ್ನೂ ದಾರಿದ್ರ್ಯ ಬಾಧಿಸಿದೆ. ನಾವು

فَلَمَّا دَخَلُوْا عَلَيْهِ قَالُوْا يٰۤاَيُّهَا الْعَزِيْزُ مَسَّنَا وَاَهْلَنَا الضُّرُّ وَجِئْنَا





ಸ್ವಲ್ಪವೇ ಹಣ ತಂದಿದ್ದೇವೆ. ಆದರೆ ನಮಗೆ ಪೂರ್ಣಳತೆ (ಧಾನ್ಯವನ್ನು) ನೀಡಿ ಔದಾರ್ಯ ತೋರಿಸಿರಿ. ಧಾನಧರ್ಮ ಮಾಡುವವರಿಗೆ ಖಂಡಿತವಾಗಿಯೂ ಅಲ್ಲಾಹನು ಪ್ರತಿಫಲ ನೀಡುವನು.'

بِبِضَاعَةٍ مُّزْجٰىةٍ فَاَوْفِ لَنَا الْكَيْلَ وَتَصَدَّقْ عَلَيْنَا ؕ اِنَّ اللّٰهَ يَجْزِى الْمُتَصَدِّقِيْنَ ﴿٨٨﴾

**90.** ಅವರು (ಯೂಸುಫ್) ಕೇಳಿದರು: 'ನೀವು ತಿಳಿಗೇಡಿತನದಿಂದ ಯೂಸುಫ್ ಮತ್ತು ಅವನ (ಕಿರಿಯ) ಸಹೋದರನೊಡನೆ ಹೇಗೆ ವರ್ತಿಸಿದಿರೆಂದು ನಿಮಗೆ ಗೊತ್ತಿದೆಯೇ?'

قَالَ هَلْ عَلِمْتُمْ مَّا فَعَلْتُمْ بِيُوْسُفَ وَاَخِيْهِ اِذْ اَنْتُمْ جٰهِلُوْنَ ﴿٨٩﴾

**91.** ಅವರು ಕೇಳಿದರು: 'ನಿಜವಾಗಿಯೂ ನೀನೇ ಯೂಸುಫನೇನು?' ಅವರು (ಯೂಸುಫ್) ಹೇಳಿದರು: 'ಹೌದು ನಾನು ಯೂಸುಫ್; ಇವನು ನನ್ನ ತಮ್ಮ. ನಮ್ಮ ಮೇಲೆ ಅಲ್ಲಾಹನು ಕರುಣೆ ತೋರಿಸಿರುವನು. ಭಯಭಕ್ತಿ ಮತ್ತು ಸಹನೆ ತೋರಿಸುವ ಸಜ್ಜನರ ಪ್ರತಿಫಲವನ್ನು ಖಂಡಿತವಾಗಿಯೂ ಅಲ್ಲಾಹನು ವ್ಯರ್ಥಗೊಳಿಸಲಾರ.'

قَالُوْۤا ءَاِنَّكَ لَاَنْتَ يُوْسُفُ ؕ قَالَ اَنَا يُوْسُفُ وَهٰذَاۤ اَخِيْ ؗ قَدْ مَنَّ اللّٰهُ عَلَيْنَا ؕ اِنَّهٗ مَنْ يَّتَّقِ وَيَصْبِرْ فَاِنَّ اللّٰهَ لَا يُضِيْعُ اَجْرَ الْمُحْسِنِيْنَ ﴿٩٠﴾

**92.** ಅವರು ಹೇಳಿದರು: 'ಅಲ್ಲಾಹನಾಣೆ! ಖಂಡಿತವಾಗಿಯೂ ಅಲ್ಲಾಹನು ನಿನ್ನನ್ನು ನಮಗಿಂತ ಶ್ರೇಷ್ಠಗೊಳಿಸಿರುವನು. ದಿಟವಾಗಿಯೂ ನಾವು ಪಾಪಿಗಳಾಗಿದ್ದೇವೆ.'

قَالُوْا تَاللّٰهِ لَقَدْ اٰثَرَكَ اللّٰهُ عَلَيْنَا وَاِنْ كُنَّا لَخٰطِــِٕيْنَ ﴿٩١﴾

**93.** ಅವರು (ಯೂಸುಫ್) ಹೇಳಿದರು: 'ಇಂದು ನಿಮ್ಮ ಮೇಲೆ ಯಾವುದೇ ದೋಷಾರೋಪಣೆ[298A] ಇಲ್ಲ. ಅಲ್ಲಾಹನು ನಿಮ್ಮನ್ನು ಕ್ಷಮಿಸಲಿ. ಅವನು ಕಾರುಣ್ಯವಂತರ ಪೈಕಿ ಅತ್ಯಂತ ಕಾರುಣ್ಯವಂತನಾಗಿದ್ದಾನೆ.

قَالَ لَا تَثْرِيْبَ عَلَيْكُمُ الْيَوْمَ ؕ يَغْفِرُ اللّٰهُ لَكُمْ ؗ وَهُوَ اَرْحَمُ الرّٰحِمِيْنَ ﴿٩٢﴾

298A. ಇತಿಹಾಸದ ಮತ್ತೊಂದು ಘಟನೆ ಸಹ ಇಲ್ಲಿ ಸ್ಮರಣಾರ್ಹ. ಮಕ್ಕ ವಿಜಯದ ಬಳಿಕ, ಅದುವರೆಗೆ ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರನ್ನೂ ಸಹಚರರನ್ನೂ ಅತಿ ಕ್ರೂರವಾಗಿ ಪೀಡಿಸುತ್ತಲೂ ಅವರೊಡನೆ ಯುದ್ಧಮಾಡುತ್ತಲೂ ಇದ್ದ ಮಕ್ಕ ನಿವಾಸಿಗಳಾದ ತನ್ನ ಶತ್ರುಗಳೊಡನೆ, "ಇಂದು ನಿಮ್ಮ ಮೇಲೆ ಯಾವುದೇ ದೋಷಾರೋಪಣೆ ಇಲ್ಲ" ಎಂದು ಹೇಳುತ್ತಾ ಹಝ್ರತ್ ಪೈಗಂಬರ್ (ಸ) ಅವರೆಲ್ಲರಿಗೂ ಬೇಷರತ್ತಾಗಿ ಕ್ಷಮಾದಾನ ನೀಡಿದರು. ಇಸ್ಲಾಮಿನ ಕಡು ವಿರೋಧಿಯಾಗಿದ್ದ ಅಬೂಜಹಲನ ಮಗ ಇಕ್ರಿಮ ಸಹ ಅವರ ಪೈಕಿ ಒಬ್ಬ. ಹಝ್ರತ್ ಪೈಗಂಬರ್ (ಸ)ರ ಈ ಕ್ಷಮಾದಾನ ನಿಜವಾಗಿಯೂ ಹಝ್ರತ್ ಯೂಸುಫ್ (ಅಲೈಹಿಸ್ಸಲಾಂ) ತನ್ನ ಸಹೋದರರಿಗೆ ನೀಡಿದ ಕ್ಷಮಾದಾನಕ್ಕಿಂತ ಎಷ್ಟೋ ಮಿಗಿಲಾಗಿದೆ. ಹಝ್ರತ್ ಯೂಸುಫ್ (ಅ) ತನ್ನ ತಂದೆಯ ಪುತ್ರರಿಗೆ ಕ್ಷಮಾದಾನ ನೀಡಿದ್ದಾದರೆ, ಹಝ್ರತ್ ಮುಹಮ್ಮದ್ ಪೈಗಂಬರ್ (ಸ) ತನ್ನ ಕಡು ವಿರೋಧಿಯ ಪುತ್ರನೂ ಸೇರಿದಂತೆ ಎಲ್ಲರಿಗೂ ಕ್ಷಮಾದಾನ ನೀಡಿದರು.

**94.** 'ನೀವು ಹೋಗಿ ನನ್ನ ಈ ಅಂಗಿಯನ್ನು ನನ್ನ ತಂದೆಯ ಮುಂದೆ ಇಡಿರಿ. (ಆಗ) ಎಲ್ಲ ಸಂಗತಿಗಳು ಅವರಿಗೆ ಮನವರಿಕೆಯಾಗುವುದು ಮತ್ತೆ ನೀವು ನಿಮ್ಮ ಕುಟುಂಬದವರನ್ನೆಲ್ಲ ನನ್ನ ಬಳಿಗೆ ಕರೆತನ್ನಿರಿ.'

اِذْهَبُوْا بِقَمِيْصِيْ هٰذَا فَاَلْقُوْهُ عَلٰى وَجْهِ اَبِيْ يَاْتِ بَصِيْرًا ۚ وَاْتُوْنِيْ بِاَهْلِكُمْ اَجْمَعِيْنَ ﴿٩٣﴾

**95.** ಯಾತ್ರಿಕ ತಂಡ (ಈಜಿಪ್ಟಿನಿಂದ) ನಿರ್ಗಮಿಸಿದಾಗಲೇ (ಫೆಲಸ್ತೀನದಲ್ಲಿದ್ದ) ಅವರ ತಂದೆ (ಅಲ್ಲಿದ್ದವರೊಡನೆ) ಹೇಳಿದರು: 'ನೀವು ನನಗೆ ಮುಪ್ಪಿನ ಅರುಳು ಮರುಳು ಎಂದು ಭಾವಿಸದಿದ್ದರೆ ಖಂಡಿತವಾಗಿಯೂ ಯೂಸುಫನ ಸುವಾಸನೆ ನನಗೆ ಬಡಿಯುತ್ತಿದೆ (ಎಂದು ನಾನು ಹೇಳುತ್ತೇನೆ).'

وَلَمَّا فَصَلَتِ الْعِيْرُ قَالَ اَبُوْهُمْ اِنِّيْ لَاَجِدُ رِيْحَ يُوْسُفَ لَوْلَآ اَنْ تُفَنِّدُوْنِ ﴿٩٤﴾

**96.** (ಅಲ್ಲಿದ್ದವರು) ಹೇಳಿದರು: 'ಅಲ್ಲಾಹನಾಣೆ, ನಿಮಗೆ ಆ ಹಳೆಯ ತಪ್ಪುಗ್ರಹಿಕೆ ಈಗಲೂ ಇದೆ.'

قَالُوْا تَاللّٰهِ اِنَّكَ لَفِيْ ضَلٰلِكَ الْقَدِيْمِ ﴿٩٥﴾

**97.** ಸಂತೋಷ ವಾರ್ತೆಯನ್ನು ತಿಳಿಸುವವನು (ಯಅ್‌ಖೂಬರ ಬಳಿಗೆ) ಬಂದಾಗ ಅವನು ಆ ಅಂಗಿಯನ್ನು ಅವರ ಮುಂದಿಟ್ಟನು. ಆಗ ಅವರಿಗೆ ಸಂಗತಿಗಳೆಲ್ಲ ಸ್ಪಷ್ಟಗೋಚರವಾದವು. ಅವರು ಹೇಳಿದರು: 'ನೀವು ಅರಿಯದ ವಿಚಾರವನ್ನು ಅಲ್ಲಾಹನಿಂದ ನಾನು ಅರಿಯುತ್ತಿದ್ದೇನೆಂದು ನಾನು (ಮೊದಲೇ) ನಿಮ್ಮೊಂದಿಗೆ ಹೇಳಿರಲಿಲ್ಲವೇ?'

فَلَمَّآ اَنْ جَآءَ الْبَشِيْرُ اَلْقٰىهُ عَلٰى وَجْهِهٖ فَارْتَدَّ بَصِيْرًا ۚ قَالَ اَلَمْ اَقُلْ لَّكُمْ ۚ اِنِّيْٓ اَعْلَمُ مِنَ اللّٰهِ مَا لَا تَعْلَمُوْنَ ﴿٩٦﴾

**98.** (ಆಗ) ಅವರು (ಯೂಸುಫರ ಹಿರಿಯ ಸಹೋದರರು) ಹೇಳಿದರು: 'ನಮ್ಮ ತಂದೆಯೇ, ನಮಗೋಸ್ಕರ ನಮ್ಮ ಪಾಪವನ್ನು ಕ್ಷಮಿಸಲಿಕ್ಕಾಗಿ ನೀವು ಪ್ರಾರ್ಥಿಸಿರಿ. ಖಂಡಿತವಾಗಿಯೂ ನಾವು ಪಾಪಿಗಳಾಗಿದ್ದೇವೆ.'

قَالُوْا يٰٓاَبَانَا اسْتَغْفِرْ لَنَا ذُنُوْبَنَآ اِنَّا كُنَّا خٰطِـِٕيْنَ ﴿٩٧﴾

**99.** ಅವರು (ಯಅ್‌ಖೂಬ್) ಹೇಳಿದರು: 'ನಿಶ್ಚಯವಾಗಿಯೂ ನಾನು ನಿಮ್ಮ ಪಾಪವಿಮುಕ್ತಿಗಾಗಿ ನನ್ನ ಪ್ರಭುವಿನೊಡನೆ ಪ್ರಾರ್ಥಿಸುವೆನು. ದಿಟವಾಗಿಯೂ ಅವನು ಕ್ಷಮಾಶೀಲನೂ ಕಾರುಣ್ಯ ನಿಧಿಯೂ ಆಗಿದ್ದಾನೆ.'

قَالَ سَوْفَ اَسْتَغْفِرُ لَكُمْ رَبِّيْ ۚ اِنَّهٗ هُوَ الْغَفُوْرُ الرَّحِيْمُ ﴿٩٨﴾





**100.** ಹಾಗೆ ಅವರು ಯೂಸುಫರ ಬಳಿಗೆ ಬಂದಾಗ ಅವರು (ಯೂಸುಫ್) ತನ್ನ ಮಾತಾಪಿತರನ್ನು ತನ್ನೆಡೆಗೆ ಬರಮಾಡಿಕೊಂಡರು.[298B] ಅವರು (ಯೂಸುಫ್) ಹೇಳಿದರು: 'ಅಲ್ಲಾಹನಿಗೆ ಇಷ್ಟವೆಂದಾದರೆ ನೀವು ಈಜಿಪ್ಟಿನಲ್ಲಿ ಸುಖ ಶಾಂತಿಯಿಂದ ಪ್ರವೇಶಿಸಿರಿ.'

فَلَمَّا دَخَلُوْا عَلٰى يُوْسُفَ اٰوٰٓى اِلَيْهِ اَبَوَيْهِ وَقَالَ ادْخُلُوْا مِصْرَ اِنْ شَآءَ اللّٰهُ اٰمِنِيْنَ ﴿٩٩﴾

**101.** ಅವರು ತನ್ನ ಮಾತಾಪಿತರನ್ನು ಉನ್ನತಾಸನದಲ್ಲಿ ಕುಳ್ಳಿರಿಸಿದರು. ಅವರು (ಎಲ್ಲರೂ) ಅವರ (ಯೂಸುಫರ) ಕಾರಣದಿಂದ (ಯೂಸುಫರನ್ನು ಭೇಟಿಯಾದ ಸಂತೋಷದಿಂದ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತಾ) ಸಾಷ್ಟಾಂಗವೆರಗಿದರು. ಅವರು ಹೇಳಿದರು: 'ತಂದೆಯೇ, ಇದು ನಾನು ಮುಂಚೆ ಕಂಡ ಸ್ವಪ್ನದ ಸಾಕ್ಷಾತ್ಕಾರವಾಗಿದೆ.[298C] ನನ್ನ ಪ್ರಭು ಅದನ್ನು ಸತ್ಯಪಡಿಸಿದನು. ಅಲ್ಲಾಹನು ನನ್ನನ್ನು ಸೆರೆಮನೆಯಿಂದ ಬಿಡುಗಡೆಗೊಳಿಸಿ ಹಾಗೂ ನನ್ನ ಮತ್ತು ನನ್ನ ಸಹೋದರರ ಮಧ್ಯೆ ಶೈತಾನನು ಬಿಕ್ಕಟ್ಟು ಉಂಟುಮಾಡಿದ್ದರೂ ಮರುಭೂಮಿಯಿಂದ ಅವನು (ಅಲ್ಲಾಹನು) ನಿಮ್ಮನ್ನು (ನನ್ನ ಬಳಿಗೆ) ಬರುವಂತೆ ಮಾಡಿ ಮಹದುಪಕಾರ ಮಾಡಿದ್ದಾನೆ. ಖಂಡಿತವಾಗಿಯೂ ನನ್ನ ಪ್ರಭು ತಾನು ಇಷ್ಟಪಡುವವರಿಗೆ ಕರುಣೆದೋರುವವನಾಗಿದ್ದಾನೆ. ಅವನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

وَرَفَعَ اَبَوَيْهِ عَلَى الْعَرْشِ وَخَرُّوْا لَهٗ سُجَّدًا ۚ وَقَالَ يٰٓاَبَتِ هٰذَا تَاْوِيْلُ رُءْيَايَ مِنْ قَبْلُ ۫ قَدْ جَعَلَهَا رَبِّيْ حَقًّا ۗ وَقَدْ اَحْسَنَ بِيْٓ اِذْ اَخْرَجَنِيْ مِنَ السِّجْنِ وَجَآءَ بِكُمْ مِّنَ الْبَدْوِ مِنْۢ بَعْدِ اَنْ نَّزَغَ الشَّيْطٰنُ بَيْنِيْ وَبَيْنَ اِخْوَتِيْ ۗ اِنَّ رَبِّيْ لَطِيْفٌ لِّمَا يَشَآءُ ۗ اِنَّهٗ هُوَ الْعَلِيْمُ الْحَكِيْمُ ﴿١٠٠﴾

**102.** 'ನನ್ನ ಪ್ರಭೂ, ನೀನು ನನಗೆ ಅಧಿಕಾರವನ್ನು ದಯಪಾಲಿಸಿರುವೆ; ಸ್ವಪ್ನಗಳ ವ್ಯಾಖ್ಯಾನವನ್ನು ಸಹ ನನಗೆ ಕಲಿಸಿಕೊಟ್ಟಿರುವೆ. ಆಕಾಶಗಳ ಮತ್ತು ಭೂಮಿಯ

رَبِّ قَدْ اٰتَيْتَنِيْ مِنَ الْمُلْكِ وَعَلَّمْتَنِيْ مِنْ تَاْوِيْلِ الْاَحَادِيْثِ ۚ فَاطِرَ

298B. ಇದು ಪಟ್ಟಣದ ಹೊರಗೆ ನಡೆದ ಘಟನೆ. ಹಝ್ರತ್ ಯೂಸುಫ್ (ಅ) ಮಾತಾಪಿತರ ಗೌರವಾರ್ಥ ಅವರನ್ನು ಬರಮಾಡಿಕೊಳ್ಳಲು ಪಟ್ಟಣದ ಹೊರಗೆ ಹೋಗಿದ್ದರು.

298C. ಸೂರ್ಯ, ಚಂದ್ರ ಮತ್ತು ಹನ್ನೊಂದು ನಕ್ಷತ್ರಗಳು ತನ್ನ ಮುಂದೆ ಸಾಷ್ಟಾಂಗ ಪ್ರಣಾಮ ಮಾಡುವುದನ್ನು ಹಝ್ರತ್ ಯೂಸುಫ್ (ಅ) ಸ್ವಪ್ನದಲ್ಲಿ ಕಂಡಿದ್ದರು. ದೀರ್ಘಕಾಲದ ನಂತರ ಅವರೆಲ್ಲರೂ ಒಂದುಗೂಡಲು ಅಲ್ಲಾಹನು ಅನುಗ್ರಹಿಸಿದುದರಿಂದ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತಾ ಹಝ್ರತ್ ಯೂಸುಫ್ (ಅ)ರವರ ಸಮಕ್ಷಮ ಅವರು 'ಸುಜೂದ್' (ಸಾಷ್ಟಾಂಗ ಪ್ರಣಾಮ) ಮಾಡಿದುದರಿಂದ ಆ ಸ್ವಪ್ನ ಸಾಕ್ಷಾತ್ಕರಿಸಲ್ಪಟ್ಟಿತು. 'ಸುಜೂದ್' ಮಾಡಿದ್ದು ಹಝ್ರತ್ ಯೂಸುಫ್ (ಅ)ರಿಗಲ್ಲ; ಅದು ಬಹುದೇವಾರಾಧನೆ ಆಗುತ್ತದೆ. 'ಸುಜೂದ್' ಮಾಡಿದ್ದು ಅಲ್ಲಾಹನಿಗಾಗಿತ್ತು. ಸ್ವಪ್ನದ ಅರ್ಥ ಸ್ಪಷ್ಟ. ಸೂರ್ಯ ಅಂದರೆ ತಂದೆ. ಚಂದ್ರ ಅಂದರೆ ತಾಯಿ. ಹನ್ನೊಂದು ನಕ್ಷತ್ರಗಳೆಂದರೆ ಹನ್ನೊಂದು ಸಹೋದರರು.

ಸೃಷ್ಟಿಕರ್ತನೇ, ಇಹಲೋಕದಲ್ಲೂ ಪರಲೋಕದಲ್ಲೂ ನೀನೇ ನನ್ನ ರಕ್ಷಕ. ನಿನಗೆ ಶರಣಾಗಿರುವ ಸ್ಥಿತಿಯಲ್ಲೇ ನೀನು ನನಗೆ ಮರಣವನ್ನು ಕೊಡು ಹಾಗೂ ಸಜ್ಜನರೊಂದಿಗೆ ನೀನು ನನ್ನನ್ನು ಸೇರಿಸು.'

السَّمٰوٰتِ وَالْاَرْضِ اَنْتَ وَلِيّٖ فِي الدُّنْيَا وَالْاٰخِرَةِ تَوَفَّنِيْ مُسْلِمًا وَّاَلْحِقْنِيْ بِالصّٰلِحِيْنَ ﴿١٠٢﴾

**103.** ಇದು ಅಗೋಚರ ವೃತ್ತಾಂತದಲ್ಲಿ ಸೇರುತ್ತದೆ. ಅದನ್ನು ನಾವು ನಿನಗೆ ಅರುಹಿದ್ದೇವೆ.[299] ಅವರು ಷಡ್ಯಂತ್ರ ಹೂಡಿ ತೀರ್ಮಾನಕ್ಕೆ ಬಂದ ಸಂದರ್ಭದಲ್ಲಿ ನೀನು ಅವರ ಜೊತೆಗಿರಲಿಲ್ಲ.

ذٰلِكَ مِنْ اَنْۢبَآءِ الْغَيْبِ نُوْحِيْهِ اِلَيْكَ وَمَا كُنْتَ لَدَيْهِمْ اِذْ اَجْمَعُوْٓا اَمْرَهُمْ وَهُمْ يَمْكُرُوْنَ ﴿١٠٣﴾

**104.** ನೀನು ಎಷ್ಟೇ ಬಯಸಿದರೂ ಜನರಲ್ಲಿ ಹೆಚ್ಚಿನವರು ನಂಬಲಾರರು.

وَمَآ اَكْثَرُ النَّاسِ وَلَوْ حَرَصْتَ بِمُؤْمِنِيْنَ ﴿١٠٤﴾

**105.** ಇದಕ್ಕೆ (ಈ ಸಂದೇಶವನ್ನು ತಲಪಿಸುವುದಕ್ಕೆ) ನೀನು ಅವರಿಂದ ಪ್ರತಿಫಲವನ್ನೇನೂ ಕೇಳುವುದಿಲ್ಲ. ಇದು ಸರ್ವಲೋಕಕ್ಕೂ ಒಂದು ಮಹತ್ತರ ಬೋಧನೆ ಮಾತ್ರವಾಗಿದೆ.

وَمَا تَسْـَٔلُهُمْ عَلَيْهِ مِنْ اَجْرٍ اِنْ هُوَ اِلَّا ذِكْرٌ لِّلْعٰلَمِيْنَ ﴿١٠٥﴾

**106.** ಆಕಾಶಗಳಲ್ಲೂ ಭೂಮಿಯಲ್ಲೂ ಎಷ್ಟೆಲ್ಲ ದೃಷ್ಟಾಂತಗಳು! ಅವುಗಳ ಸಮೀಪದಿಂದಲೇ (ಅವುಗಳನ್ನು ಕಾಣುತ್ತಲೇ) ನಿರ್ಲಕ್ಷ್ಯದಿಂದ ಅವರು ಹಾದು ಹೋಗುತ್ತಾರೆ.

وَكَاَيِّنْ مِّنْ اٰيَةٍ فِي السَّمٰوٰتِ وَالْاَرْضِ يَمُرُّوْنَ عَلَيْهَا وَهُمْ عَنْهَا مُعْرِضُوْنَ ﴿١٠٦﴾

**107.** ಜನರಲ್ಲಿ ಹೆಚ್ಚಿನವರು ಸಹಭಾಗಿಗಳನ್ನು ಕಲ್ಪಿಸದೆ ಅಲ್ಲಾಹನಲ್ಲಿ ನಂಬಿಕೆಯನ್ನಿಡುವುದಿಲ್ಲ.

وَمَا يُؤْمِنُ اَكْثَرُهُمْ بِاللّٰهِ اِلَّا وَهُمْ مُّشْرِكُوْنَ ﴿١٠٧﴾

**108.** ಅಲ್ಲಾಹನಿಂದ ಭಯಂಕರವಾದೊಂದು ಶಿಕ್ಷೆ ಅವರ ಮೇಲೆ ಎರಗುವುದರ ಬಗ್ಗೆ ಅಥವಾ (ಮುನ್ನೆಚ್ಚರಿಕೆ ನೀಡಲ್ಪಟ್ಟ) ನಿಶ್ಚಿತ ಸಮಯ ಅವರು ತಿಳಿಯದಿರುವಾಗಲೇ ಹಠಾತ್ತಾಗಿ ಬಂದು ಬಿಡುವ ಬಗ್ಗೆ ಅವರು ನಿರ್ಭೀತರೇ?

اَفَاَمِنُوْٓا اَنْ تَاْتِيَهُمْ غَاشِيَةٌ مِّنْ عَذَابِ اللّٰهِ اَوْ تَاْتِيَهُمُ السَّاعَةُ بَغْتَةً وَّهُمْ لَا يَشْعُرُوْنَ ﴿١٠٨﴾

299. ಇದು ಕೇವಲ ಹಿಂದಿನ ಕಥೆಯಲ್ಲ. ಇದರಲ್ಲಿ ಭವಿಷ್ಯವಾಣಿ ಸಹ ಇದೆ. ಹಿಂದೆ ಸಂಭವಿಸಿದಂತೆ ಮಹಮ್ಮದ್ ಪೈಗಂಬರ್ (ಸ) ರ ಜೀವಿತದಲ್ಲೂ ಸಂಭವಿಸುವುದೆಂದು ತಾತ್ಪರ್ಯ.





**109.** ಹೇಳು: 'ಇದು ನನ್ನ ಮಾರ್ಗವಾಗಿದೆ. ನಾನು ಅಲ್ಲಾಹನ ಕಡೆಗೆ ನಿಮ್ಮನ್ನು ಆಮಂತ್ರಿಸುತ್ತೇನೆ. ನಾನು ಮತ್ತು ನನ್ನನ್ನು ಅನುಸರಿಸುವವರು ಸಂಶಯಾತೀತ ಜ್ಞಾನವನ್ನು ಹೊಂದಿರುವೆವು. ನಾನು ಅಲ್ಲಾಹನ ಪಾವಿತ್ರ್ಯವನ್ನು ಕೊಂಡಾಡುತ್ತೇನೆ. ನಾನು ಬಹುದೇವಾರಾಧಕರಲ್ಲಿ ಸೇರಿದವನಲ್ಲ.'

قُلْ هٰذِهٖ سَبِيْلِيْٓ اَدْعُوْٓا اِلَى اللّٰهِ عَلٰى بَصِيْرَةٍ اَنَا وَمَنِ اتَّبَعَنِيْ وَسُبْحٰنَ اللّٰهِ وَمَآ اَنَا مِنَ الْمُشْرِكِيْنَ ﴿١٠٩﴾

**110.** ನಿನಗಿಂತ ಮುಂಚೆ ನಾವು ಹಲವು ರಾಜ್ಯಗಳಲ್ಲಿ ಸಂದೇಶಗಳನ್ನು ನೀಡುತ್ತಾ ಕೆಲವು ಪುರುಷರನ್ನು ಹೊರತು ಪ್ರವಾದಿಗಳನ್ನಾಗಿ ನಿಯೋಜಿಸಲಿಲ್ಲ. ಈ ಜನರಿಗಿಂತ ಮುಂಚೆ ಇದ್ದವರ ಅಂತ್ಯ ಹೇಗಾಯಿತೆಂದು ಇವರು ಭೂಮಿಯಲ್ಲಿ ಸಂಚರಿಸಿ ನೋಡಲಿಲ್ಲವೇ? ಭಯಭಕ್ತಿಯುಳ್ಳವರಿಗೆ ಪಾರತ್ರಿಕ ಜೀವನ ಗುಣಕರವಾಗಿದೆ. ನೀವೇನು ಮನವರಿಕೆ ಮಾಡಿಕೊಳ್ಳುವುದಿಲ್ಲವೇ?

وَمَآ اَرْسَلْنَا مِنْ قَبْلِكَ اِلَّا رِجَالًا نُّوْحِيْٓ اِلَيْهِمْ مِّنْ اَهْلِ الْقُرٰى اَفَلَمْ يَسِيْرُوْا فِي الْاَرْضِ فَيَنْظُرُوْا كَيْفَ كَانَ عَاقِبَةُ الَّذِيْنَ مِنْ قَبْلِهِمْ وَلَدَارُ الْاٰخِرَةِ خَيْرٌ لِّلَّذِيْنَ اتَّقَوْا اَفَلَا تَعْقِلُوْنَ ﴿١١٠﴾

**111.** ಕೊನೆಗೆ, ಪ್ರವಾದಿಗಳು (ಜನರ ಬಗ್ಗೆ) ನಿರಾಶೆಹೊಂದಿದಾಗ ಮತ್ತು ತಮ್ಮೊಡನೆ ಸುಳ್ಳುಹೇಳಲಾಯಿತೆಂದು (ಜನರು ತಪ್ಪಾಗಿ) ತಿಳಿದುಕೊಂಡಾಗ ಅವರಿಗೆ (ಪ್ರವಾದಿಗಳಿಗೆ) ನಮ್ಮ ಸಹಾಯ ಒದಗಿತು. ಆಗ ನಾವು ಇಚ್ಛಿಸಿದವರು ರಕ್ಷಿಸಲ್ಪಟ್ಟರು. ಪಾಪಿಗಳಾದ ಜನರಿಂದ ನಮ್ಮ ಶಿಕ್ಷೆ ದೂರ ಸರಿಯದು.

حَتّٰٓى اِذَا اسْتَيْـَٔسَ الرُّسُلُ وَظَنُّوْٓا اَنَّهُمْ قَدْ كُذِبُوْا جَآءَهُمْ نَصْرُنَا فَنُجِّيَ مَنْ نَّشَآءُ وَلَا يُرَدُّ بَاْسُنَا عَنِ الْقَوْمِ الْمُجْرِمِيْنَ ﴿١١١﴾

**112.** ಅವರ ವೃತ್ತಾಂತದಲ್ಲಿ ಬುದ್ಧಿಶಾಲಿಗಳಿಗೆ ಖಂಡಿತವಾಗಿಯೂ ನೀತಿ ಬೋಧನೆ ಇದೆ. ಇದು (ಖುರ್ಆನ್) ಕಟ್ಟುಕಥೆಯಲ್ಲ. ಬದಲಾಗಿ, ಇದಕ್ಕಿಂತ ಮೊದಲಿನ (ಭವಿಷ್ಯ ನುಡಿಗಳ) ಈಡೇರಿಕೆಯೂ ಎಲ್ಲ ವಿಚಾರಗಳ ವಿವರಣೆಯೂ ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನವೂ ಕಾರುಣ್ಯವೂ ಆಗಿದೆ.

لَقَدْ كَانَ فِيْ قَصَصِهِمْ عِبْرَةٌ لِّاُولِي الْاَلْبَابِ مَا كَانَ حَدِيْثًا يُّفْتَرٰى وَلٰكِنْ تَصْدِيْقَ الَّذِيْ بَيْنَ يَدَيْهِ وَتَفْصِيْلَ كُلِّ شَيْءٍ وَّهُدًى وَّرَحْمَةً لِّقَوْمٍ يُّؤْمِنُوْنَ ﴿١١٢﴾

سُوْرَةُ الرَّعْدِ مَكِّيَّةٌ وَّهِيَ مَعَ الْبَسْمَلَةِ اَرْبَعٌ وَّاَرْبَعُوْنَ اٰيَةً وَّسِتَّةُ رُكُوْعَاتٍ

# 13. ಅರ್ರಅ್‌ದ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 44 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಅಲಿಫ್ ಲಾಂ ಮೀಂ ರಾ.**[300] **ಇವು ಆ** (ಪರಿಪೂರ್ಣ) **ಗ್ರಂಥದ ವಚನಗಳಾಗಿವೆ. ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣವಾದುದು ಸತ್ಯವೇ ಆಗಿದೆ. ಆದರೆ ಜನರಲ್ಲಿ ಹೆಚ್ಚಿನವರು ನಂಬುವುದಿಲ್ಲ.**

الٓمّٓرٰ ۟ تِلْكَ اٰيٰتُ الْكِتٰبِ ؕ وَالَّذِيْٓ اُنْزِلَ اِلَيْكَ مِنْ رَّبِّكَ الْحَقُّ وَلٰكِنَّ اَكْثَرَ النَّاسِ لَا يُؤْمِنُوْنَ ②

**3. ಅಲ್ಲಾಹನು ನೀವು ಕಾಣುವಂಥ ಸ್ತಂಭಗಳಿಲ್ಲದೆ ಆಕಾಶಗಳನ್ನು ಉನ್ನತಿಯಲ್ಲಿ ಇಟ್ಟಿರುವವನು. ಅನಂತರ ಅವನು ಸಿಂಹಾಸನಾರೂಢನಾದನು. ಸೂರ್ಯನನ್ನೂ ಚಂದ್ರನನ್ನೂ ಅವನು ನಿಯಮಕ್ಕೆ ಅಧೀನಗೊಳಿಸಿದನು. ಎಲ್ಲವೂ ಒಂದು ನಿರ್ದಿಷ್ಟ ಕಾಲಾನುಸಾರ ಚಲಿಸುತ್ತಿರುತ್ತವೆ. ಅವನು ನಿಸರ್ಗ ನಿಯಮವನ್ನು ನಿಯಂತ್ರಿಸು ತ್ತಾನೆ. ನಿಮ್ಮ ಪ್ರಭುವಿನ ಭೇಟಿಯ ಬಗ್ಗೆ ನಿಮಗೆ ದೃಢ ವಿಶ್ವಾಸ ಹುಟ್ಟಲಿಕ್ಕೋಸ್ಕರ ಅವನು ದೃಷ್ಟಾಂತಗಳನ್ನು ವಿವರಿಸಿಕೊಡುತ್ತಾನೆ.**

اَللّٰهُ الَّذِيْ رَفَعَ السَّمٰوٰتِ بِغَيْرِ عَمَدٍ تَرَوْنَهَا ثُمَّ اسْتَوٰى عَلَى الْعَرْشِ وَسَخَّرَ الشَّمْسَ وَالْقَمَرَ ؕ كُلٌّ يَّجْرِيْ لِاَجَلٍ مُّسَمًّى ؕ يُدَبِّرُ الْاَمْرَ يُفَصِّلُ الْاٰيٰتِ لَعَلَّكُمْ بِلِقَآءِ رَبِّكُمْ تُوْقِنُوْنَ ③

**4. ಅವನು ಭೂತಲವನ್ನು ವಿಸ್ತಾರಗೊಳಿಸಿ ಅದರಲ್ಲಿ ಪರ್ವತಗಳನ್ನೂ ನದಿಗಳನ್ನೂ ಸೃಷ್ಟಿಸಿದ್ದಾನೆ. ಎಲ್ಲ ವಿಧ ಹಣ್ಣುಹಂಪಲುಗಳಲ್ಲಿ ಅವನು ಹೆಣ್ಣು- ಗಂಡೆಂಬ ಜೋಡಿಗಳನ್ನು ಉಂಟುಮಾಡಿದ್ದಾನೆ. ಹಗಲನ್ನು ರಾತ್ರಿಯಿಂದ ಅವನು ಮುಚ್ಚುತ್ತಾನೆ. ದಿಟವಾಗಿಯೂ ಚಿಂತನಶೀಲರಿಗೆ ಇದರಲ್ಲಿ ಹಲವು ದೃಷ್ಟಾಂತಗಳಿವೆ.**

وَهُوَ الَّذِيْ مَدَّ الْاَرْضَ وَجَعَلَ فِيْهَا رَوَاسِيَ وَاَنْهٰرًا ؕ وَمِنْ كُلِّ الثَّمَرٰتِ جَعَلَ فِيْهَا زَوْجَيْنِ اثْنَيْنِ يُغْشِي الَّيْلَ النَّهَارَ ؕ اِنَّ فِيْ ذٰلِكَ لَاٰيٰتٍ لِّقَوْمٍ يَّتَفَكَّرُوْنَ ④

300. "ಅನ ಅಲ್ಲಾಹು ಅಅ್‌ಲಮು ಅರಾ" = ನಾನು ಅಲ್ಲಾಹ್ ಎಲ್ಲವನ್ನು ಬಲ್ಲವನೂ ಎಲ್ಲವನ್ನು ಕಾಣುವವನೂ ಆಗಿದ್ದೇನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ)





**5. ಭೂಮಿಯಲ್ಲಿ ಒಂದಕ್ಕೊಂದು ತಾಗಿಕೊಂಡು ಅನೇಕ ವಲಯಗಳಿವೆ. ದ್ರಾಕ್ಷೆಯ ತೋಟಗಳೂ ಧಾನ್ಯದ ಹೊಲಗಳೂ ಖರ್ಜೂರದ ಮರಗಳೂ ಇವೆ. ಒಂದೇ ಬುಡದಿಂದ ಗುಂಪಾಗಿ ಮೊಳೆಯುವವು ಹಾಗೂ ಹಾಗೆ ಮೊಳೆಯದವು ಸಹ ಇವೆ.** (ಇವೆಲ್ಲ) **ಒಂದೇ ಜಲದಿಂದ ಬೆಳೆಯುತ್ತವೆ. ಆದರೆ ಫಲಗಳಲ್ಲಿ ಒಂದಕ್ಕಿಂತ ಇನ್ನೊಂದನ್ನು ಉತ್ಕೃಷ್ಟವಾಗಿ ನಾವು ಮಾಡುತ್ತೇವೆ. ಖಂಡಿತವಾಗಿಯೂ ವಿವೇಕಶಾಲಿಗಳಿಗೆ ಇದರಲ್ಲಿ ಹಲವು ದೃಷ್ಟಾಂತಗಳಿವೆ.**

وَفِي الْاَرْضِ قِطَعٌ مُّتَجٰوِرٰتٌ وَّجَنّٰتٌ مِّنْ اَعْنَابٍ وَّزَرْعٌ وَّنَخِيْلٌ صِنْوَانٌ وَّغَيْرُ صِنْوَانٍ يُّسْقٰى بِمَآءٍ وَّاحِدٍ ۟ وَنُفَضِّلُ بَعْضَهَا عَلٰى بَعْضٍ فِي الْاُكُلِ ؕ اِنَّ فِيْ ذٰلِكَ لَاٰيٰتٍ لِّقَوْمٍ يَّعْقِلُوْنَ ⑤

**6. ನೀನು ಆಶ್ಚರ್ಯಪಡುವುದಾದರೆ! 'ನಾವು** (ಮೃತಪಟ್ಟು) **ಮಣ್ಣು ಪಾಲಾದರೆ ಕೂಡ ನಮ್ಮನ್ನು ಹೊಸದಾಗಿ ಸೃಷ್ಟಿಸಲಾಗುವುದೇ?' ಎಂಬ ಅವರ ಮಾತು** ನಿಜಕ್ಕೂ **ಆಶ್ಚರ್ಯಕರವಾಗಿದೆ. ಅವರು ತಮ್ಮ ಪ್ರಭುವನ್ನು ನಂಬದವರು. ಅವರ ಕುತ್ತಿಗೆಗಳಲ್ಲಿ ಸಂಕೋಲೆಗಳಿವೆ. ಅವರು ನರಕವಾಸಿಗಳು. ಅವರು ಅಲ್ಲಿ ದೀರ್ಘಕಾಲ ವಾಸಿಸುವರು.**

وَاِنْ تَعْجَبْ فَعَجَبٌ قَوْلُهُمْ ءَاِذَا كُنَّا تُرٰبًا ءَاِنَّا لَفِيْ خَلْقٍ جَدِيْدٍ ؕ اُولٰٓئِكَ الَّذِيْنَ كَفَرُوْا بِرَبِّهِمْ ۚ وَاُولٰٓئِكَ الْاَغْلٰلُ فِيْٓ اَعْنَاقِهِمْ ۚ وَاُولٰٓئِكَ اَصْحٰبُ النَّارِ ۚ هُمْ فِيْهَا خٰلِدُوْنَ ⑥

**7.** (ನೀನು ವಾಗ್ದಾನ ಮಾಡಿದ) **ಒಳಿತಿಗಿಂತ ಮುಂಚಿತವಾಗಿ** (ನೀನು ಮುನ್ನೆಚ್ಚರಿಕೆ ನೀಡಿದ) **ಕೆಡುಕಿಗೋಸ್ಕರ ಅವರು ನಿನ್ನನ್ನು ತ್ವರೆಪಡಿಸುತ್ತಾರೆ. ಆದರೆ, ಅವರಿಗಿಂತ ಮುಂಚೆ** (ಇಂತಹ ಜನರಿಗೆ) **ಬುದ್ಧಿ ಕಲಿಸುವ ಶಿಕ್ಷೆಗಳು ಬಂದೆರಗಿವೆ. ಜನರು ದುಷ್ಕೃತ್ಯ ವೆಸಗಿದಾಗ್ಯೂ ನಿನ್ನ ಪ್ರಭು ಅವರಿಗೆ ಕ್ಷಮೆ ನೀಡುವವನಾಗಿದ್ದಾನೆ. ಖಂಡಿತವಾಗಿಯೂ ನಿನ್ನ ಪ್ರಭು ಕಠಿಣವಾಗಿ ಶಿಕ್ಷಿಸುವವನೂ ಆಗಿದ್ದಾನೆ.**

وَيَسْتَعْجِلُوْنَكَ بِالسَّيِّئَةِ قَبْلَ الْحَسَنَةِ وَقَدْ خَلَتْ مِنْ قَبْلِهِمُ الْمَثُلٰتُ ؕ وَاِنَّ رَبَّكَ لَذُوْ مَغْفِرَةٍ لِّلنَّاسِ عَلٰى ظُلْمِهِمْ ۚ وَاِنَّ رَبَّكَ لَشَدِيْدُ الْعِقَابِ ⑦

**8. 'ತನ್ನ ಪ್ರಭುವಿನಿಂದ ಆತನಿಗೆ ಯಾಕೆ ಒಂದು ದೃಷ್ಟಾಂತ ತೋರಿಸಲ್ಪಡುವುದಿಲ್ಲ?' ಎಂದು ಅವಿಶ್ವಾಸಿಗಳು ಕೇಳುತ್ತಾರೆ. ದಿಟವಾಗಿಯೂ ನೀನೊಬ್ಬ ಮುನ್ನೆಚ್ಚರಿಕೆಗಾರ ಮಾತ್ರ ಆಗಿರುವೆ. ಪ್ರತಿಯೊಂದು ಸಮುದಾಯಕ್ಕೂ** (ಅಲ್ಲಾಹನ ಕಡೆಯಿಂದ) **ಒಬ್ಬ ಮಾರ್ಗದರ್ಶಕ ನಿಯೋಜಿಸಲ್ಪಟ್ಟಿದ್ದಾನೆ.**

وَيَقُوْلُ الَّذِيْنَ كَفَرُوْا لَوْلَآ اُنْزِلَ عَلَيْهِ اٰيَةٌ مِّنْ رَّبِّهٖ ؕ اِنَّمَآ اَنْتَ مُنْذِرٌ وَّلِكُلِّ قَوْمٍ هَادٍ ⑧ ع

**9.** ಪ್ರತಿಯೋರ್ವ ಸ್ತ್ರೀಯು ಗರ್ಭಾಶಯದಲ್ಲಿರುವುದೇನೆಂದು ಅಲ್ಲಾಹನು ಬಲ್ಲವನಾಗಿದ್ದಾನೆ. ಗರ್ಭಾಶಯಗಳ ಸಂಕೋಚ - ವಿಕಾಸವನ್ನು ಸಹ (ಅವನು ಬಲ್ಲನು). ಪ್ರತಿಯೊಂದು ವಸ್ತುವಿಗೆ ಅವನ ಬಳಿ ಒಂದು ನಿರ್ದಿಷ್ಟ ಪರಿಮಾಣವಿದೆ.

اَللّٰهُ يَعْلَمُ مَا تَحْمِلُ كُلُّ اُنْثٰى وَ مَا
تَغِيْضُ الْاَرْحَامُ وَمَا تَزْدَادُ ؕ وَكُلُّ شَيْءٍ
عِنْدَهٗ بِمِقْدَارٍ ﴿۹﴾

**10.** ಪರೋಕ್ಷ ಮತ್ತು ಪ್ರತ್ಯಕ್ಷ ವಿಚಾರಗಳನ್ನೆಲ್ಲ ಅವನು ಬಲ್ಲನು. ಅವನು ಮಹಾಮಹಿಮನೂ ಸರ್ವೋನ್ನತನೂ ಆಗಿದ್ದಾನೆ.

عٰلِمُ الْغَيْبِ وَ الشَّهَادَةِ الْكَبِيْرُ
الْمُتَعَالِ ﴿۱۰﴾

**11.** ನಿಮ್ಮ ಪೈಕಿ ಮಾತನ್ನು ರಹಸ್ಯವಾಗಿಡುವವನೂ ಅದನ್ನು ಬಹಿರಂಗಪಡಿಸುವವನೂ ರಾತ್ರಿಯಲ್ಲಿ ಅಡಗಿರುವವನೂ ಹಗಲಿನಲ್ಲಿ ಹೊರಗೆ ಸಂಚರಿಸುವವನೂ (ಎಲ್ಲರೂ ಅವನ ದೃಷ್ಟಿಯಲ್ಲಿ) ಸಮಾನರು.

سَوَآءٌ مِّنْكُمْ مَّنْ اَسَرَّ الْقَوْلَ وَ مَنْ
جَهَرَ بِهٖ وَمَنْ هُوَ مُسْتَخْفٍۭ بِالَّيْلِ وَ
سَارِبٌۢ بِالنَّهَارِ ﴿۱۱﴾

**12.** ಅವರ [ಮುಹಮ್ಮದ್ ಪೈಗಂಬರ್ (ಸ)ರ] ಮುಂದೆ ಮತ್ತು ಹಿಂದೆ, ಅಲ್ಲಾಹನ ಆಜ್ಞೆ ಪ್ರಕಾರ ಅವರನ್ನು ಕಾವಲುಗಾಯುವ ದೇವದೂತರು (ಮಲಾಯಿಕ್) ಇದ್ದಾರೆ. ಒಂದು ಸಮುದಾಯದವರು ತಮ್ಮ ಹೃದಯದಲ್ಲಿರುವುದಕ್ಕೆ ಸ್ವಯಂ ಮಾರ್ಪಾಟು ಮಾಡುವ ತನಕ ಅವರ ಸ್ಥಿತಿಗೆ ಅಲ್ಲಾಹನು ಮಾರ್ಪಾಟು ಮಾಡಲಾರನು.[300A] ಅಲ್ಲಾಹನು ಒಂದು ಸಮುದಾಯವನ್ನು ಶಿಕ್ಷೆಗೆ ಗುರಿಪಡಿಸಲು ಬಯಸಿದರೆ ಅದನ್ನು ಹೋಗಲಾಡಿಸಲು ಯಾರಿಂದಲೂ ಸಾಧ್ಯವಿಲ್ಲ. ಅವನ ಹೊರತು ಅವರಿಗೆ ಸಹಾಯಕನಾಗಿಯೂ ಯಾರೂ ಇಲ್ಲ.

لَهٗ مُعَقِّبٰتٌ مِّنْۢ بَيْنِ يَدَيْهِ وَ مِنْ
خَلْفِهٖ يَحْفَظُوْنَهٗ مِنْ اَمْرِ اللّٰهِ ؕ اِنَّ
اللّٰهَ لَا يُغَيِّرُ مَا بِقَوْمٍ حَتّٰى يُغَيِّرُوْا مَا
بِاَنْفُسِهِمْ ؕ وَاِذَآ اَرَادَ اللّٰهُ بِقَوْمٍ سُوْٓءًا
فَلَا مَرَدَّ لَهٗ ۚ وَمَا لَهُمْ مِّنْ دُوْنِهٖ مِنْ
وَّالٍ ﴿۱۲﴾

**13.** ನಿಮಗೆ ಭಯ ಮತ್ತು ಭರವಸೆ ಹುಟ್ಟಲಿಕ್ಕೋಸ್ಕರ ಅವನು ಮಿಂಚನ್ನು ತೋರಿಸುತ್ತಾನೆ. ಅವನು ಘನವಾದ ಮೋಡಗಳನ್ನು ಮೇಲೆತ್ತುತ್ತಾನೆ.

هُوَ الَّذِيْ يُرِيْكُمُ الْبَرْقَ خَوْفًا وَّ
طَمَعًا وَّيُنْشِئُ السَّحَابَ الثِّقَالَ ﴿۱۳﴾

**14.** ಗುಡುಗು ಅವನನ್ನು ಸ್ತುತಿಸುವುದರೊಂದಿಗೆ ಅವನ ಪರಿಶುದ್ಧತೆಯನ್ನು ಕೊಂಡಾಡುತ್ತದೆ. ಅವನ

وَيُسَبِّحُ الرَّعْدُ بِحَمْدِهٖ وَالْمَلٰٓئِكَةُ

300A. 8ನೇ ಅಧ್ಯಾಯ 54ನೇ ವಚನದ ಟಿಪ್ಪಣಿ ನೋಡಿರಿ.





ಭಯದಿಂದ ದೇವದೂತರು (ಮಲಾಯಿಕ್) ಸಹ (ಹಾಗೆಯೇ ಮಾಡುತ್ತಾರೆ). ಅವನು ಸಿಡಿಲು ಮಿಂಚನ್ನು ಕಳುಹಿಸಿ ತಾನಿಚ್ಛಿಸುವವರ ಮೇಲೆ ಅದನ್ನು ಎರಗುವಂತೆ ಮಾಡುತ್ತಾನೆ- ಅವರಾದರೋ ಅಲ್ಲಾಹನ ಬಗ್ಗೆ ವಾಗ್ವಾದ ಮಾಡುತ್ತಿದ್ದಾರೆ. ಅವನು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ.

مِنْ خِيْفَتِهٖ ۚ وَ يُرْسِلُ الصَّوَاعِقَ
فَيُصِيْبُ بِهَا مَنْ يَّشَآءُ وَهُمْ يُجَادِلُوْنَ
فِي اللّٰهِ ۚ وَهُوَ شَدِيْدُ الْمِحَالِ ﴿۱۴﴾

**15.** ನಿಜವಾದ ಪ್ರಾರ್ಥನೆ ಅವನಿಗೆ ಮಾತ್ರ (ಸಲ್ಲಬೇಕಾದುದು). ಅವನ ಹೊರತು ಇವರು ಯಾರನ್ನು ಕರೆದು ಪ್ರಾರ್ಥಿಸುತ್ತಾರೋ ಅವರು ಇವರಿಗೇನೂ ಉತ್ತರ ನೀಡುವುದಿಲ್ಲ. ಬಾಯಿಗೆ ನೀರು ಬಂದು ತಲಪಲಿ ಎಂದು ಒಬ್ಬನು ತನ್ನ ಎರಡೂ ಕೈಗಳನ್ನು ನೀರಿನ ಕಡೆಗೆ ಚಾಚಿದವನಂತೆ (ಅವರ ಸ್ಥಿತಿಯಾಗಿದೆ). ಆದರೆ ಅದು ಅವನನ್ನು ತಲಪಲಾರದು. ಅವಿಶ್ವಾಸಿಗಳ ಪ್ರಾರ್ಥನೆ ಬರೇ ವ್ಯರ್ಥವಲ್ಲದೆ ಮತ್ತೇನೂ ಅಲ್ಲ.

لَهٗ دَعْوَةُ الْحَقِّ ؕ وَالَّذِيْنَ يَدْعُوْنَ مِنْ
دُوْنِهٖ لَا يَسْتَجِيْبُوْنَ لَهُمْ بِشَيْءٍ
اِلَّا كَبَاسِطِ كَفَّيْهِ اِلَى الْمَآءِ لِيَبْلُغَ
فَاهُ وَمَا هُوَ بِبَالِغِهٖ ؕ وَمَا دُعَآءُ
الْكٰفِرِيْنَ اِلَّا فِيْ ضَلٰلٍ ﴿۱۵﴾

**16.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ - ಅವುಗಳ ನೆರಳುಗಳು ಸಹ - ಇಷ್ಟದಿಂದ ಅಥವಾ ಇಷ್ಟವಿಲ್ಲದೆ ಮುಂಜಾವದಲ್ಲೂ ಮುಸ್ಸಂಜೆಯಲ್ಲೂ ಅಲ್ಲಾಹನಿಗೆಯೇ ವಿಧೇಯವಾಗಿವೆ.

وَلِلّٰهِ يَسْجُدُ مَنْ فِي السَّمٰوٰتِ وَ
الْاَرْضِ طَوْعًا وَّكَرْهًا وَّظِلٰلُهُمْ
بِالْغُدُوِّ وَالْاٰصَالِ ۩ ﴿۱۶﴾

**17.** ಕೇಳು: 'ಆಕಾಶಗಳ ಮತ್ತು ಭೂಮಿಯ ಪ್ರಭು ಯಾರು?' ಹೇಳು: 'ಅಲ್ಲಾಹನೇ'. 'ಹಾಗಿರುವಾಗ ಅವನ ಹೊರತು, ತಮಗೆಯೇ ಗುಣವನ್ನಾಗಲಿ ದೋಷವನ್ನಾಗಲಿ ಮಾಡಲಶಕ್ಯರಾದವರನ್ನು ನೀವು ನಿಮ್ಮ ರಕ್ಷಕರನ್ನಾಗಿಸಿದ್ದೀರಾ?' (ಎಂದು ನೀನು ಅವರೊಡನೆ) ಕೇಳು: 'ಕುರುಡನೂ ದೃಷ್ಟಿಯುಳ್ಳವನೂ ಸಮಾನರೇ? ಅಥವಾ ಅಂಧಕಾರ ಮತ್ತು ಪ್ರಕಾಶ ಸಮಾನವೇ? ಅಥವಾ ಅಲ್ಲಾಹನ ಸೃಷ್ಟಿಯಂತಹವುಗಳನ್ನು ಸೃಷ್ಟಿಸಿದವರನ್ನು ಅವರು ಅವನಿಗೆ ಸರಿಸಾಟಿ ಮಾಡಿರುವರೇ? ಹಾಗೆ ಆ ಸೃಷ್ಟಿಗಳು ಅವರಿಗೆ ಸರಿಸಮಾನವಾಗಿ ತೋರಿಬಂದುವೇ?' (ಎಂದೂ ಅವರೊಡನೆ) ಕೇಳು. ಹೇಳು: 'ಸರ್ವವಸ್ತುಗಳ ಸೃಷ್ಟಿಕರ್ತನು ಅಲ್ಲಾಹನೇ ಆಗಿದ್ದಾನೆ. ಅವನು ಏಕನು, ಪರಮಾಧಿಕಾರ ಹೊಂದಿದವನು.'

قُلْ مَنْ رَّبُّ السَّمٰوٰتِ وَالْاَرْضِ ؕ قُلِ
اللّٰهُ ؕ قُلْ اَفَاتَّخَذْتُمْ مِّنْ دُوْنِهٖۤ
اَوْلِيَآءَ لَا يَمْلِكُوْنَ لِاَنْفُسِهِمْ نَفْعًا
وَّلَا ضَرًّا ؕ قُلْ هَلْ يَسْتَوِي الْاَعْمٰى
وَالْبَصِيْرُ ۙ اَمْ هَلْ تَسْتَوِي الظُّلُمٰتُ
وَالنُّوْرُ ۚ اَمْ جَعَلُوْا لِلّٰهِ شُرَكَآءَ خَلَقُوْا
كَخَلْقِهٖ فَتَشَابَهَ الْخَلْقُ عَلَيْهِمْ ؕ
قُلِ اللّٰهُ خَالِقُ كُلِّ شَيْءٍ وَّهُوَ الْوَاحِدُ
الْقَهَّارُ ﴿۱۷﴾

**18.** ಅವನು ಆಕಾಶದಿಂದ ಮಳೆಯನ್ನು ಇಳಿಸುತ್ತಾನೆ. ತತ್ಫಲವಾಗಿ ಕಣಿವೆಗಳು ತುಂಬಿ ಹರಿಯುತ್ತವೆ ಹಾಗೂ ನೆರೆ ನೀರು ಮೇಲ್ಭಾಗದಲ್ಲಿ ಉಕ್ಕಿ ಬರುವ ನೊರೆಯನ್ನು ಹೊಂದುತ್ತದೆ. ಆಭರಣಗಳನ್ನಾಗಲಿ ಪಾತ್ರೆಗಳನ್ನಾಗಲಿ ಮಾಡಲಿಕ್ಕಾಗಿ ಬೆಂಕಿಯಿಂದ ಕರಗಿಸುವ *ಲೋಹಗಳಿಂದ* ಸಹ ಇದೇ ಪ್ರಕಾರದ ನೊರೆ (ಉಕ್ಕಿ ಬರುತ್ತದೆ). ಈ ರೀತಿ ಅಲ್ಲಾಹನು ಸತ್ಯ ಮತ್ತು ಅಸತ್ಯವನ್ನು (ನಿದರ್ಶನ ಸಹಿತ) ತೋರಿಸಿಕೊಡುತ್ತಾನೆ. ನೊರೆಯಂತೂ ಆರಿ ಹೋಗುತ್ತದೆ. ಮನುಷ್ಯರಿಗೆ ಉಪಯುಕ್ತವಾದುದು ನೆಲದಲ್ಲಿ ಬಾಕಿಯಾಗುತ್ತದೆ. ಹೀಗೆ ಅಲ್ಲಾಹನು ಉಪಮೆಗಳಿಂದ ವಿವರಿಸುತ್ತಾನೆ.

أَنزَلَ مِنَ السَّمَاءِ مَاءً فَسَالَتْ أَوْدِيَةٌ بِقَدَرِهَا فَاحْتَمَلَ السَّيْلُ زَبَدًا رَّابِيًا ۚ وَمِمَّا يُوقِدُونَ عَلَيْهِ فِي النَّارِ ابْتِغَاءَ حِلْيَةٍ أَوْ مَتَاعٍ زَبَدٌ مِّثْلُهُ ۚ كَذَٰلِكَ يَضْرِبُ اللَّهُ الْحَقَّ وَالْبَاطِلَ ۚ فَأَمَّا الزَّبَدُ فَيَذْهَبُ جُفَاءً ۖ وَأَمَّا مَا يَنفَعُ النَّاسَ فَيَمْكُثُ فِي الْأَرْضِ ۚ كَذَٰلِكَ يَضْرِبُ اللَّهُ الْأَمْثَالَ ﴿١٨﴾

**19.** ತಮ್ಮ ಪ್ರಭುವಿನ ಕರೆಗೆ ಓಗೊಡುವವರಿಗೆ ಅತ್ಯುತ್ತಮವಾದ ಪ್ರತಿಫಲವಿದೆ. ಅವನ ಕರೆಗೆ ಓಗೊಡದರಾದರೋ, ಅವರಿಗೆ ಭೂಮಿಯಲ್ಲಿರುವ ಎಲ್ಲವೂ ಇದ್ದು ಅದರೊಂದಿಗೆ ಇನ್ನೂ ಅಷ್ಟೇ ಇದ್ದರೆ ಸಹ ಅವನ್ನೆಲ್ಲ ಅವರು (ತಮ್ಮ ಮುಕ್ತಿಗೆ) ಪ್ರಾಯಶ್ಚಿತ್ತವಾಗಿ ಕೊಡಲು ಸಿದ್ಧರಾಗುವರು. ಅವರಿಗೆ ಬಹಳ ಕೆಡುಕಾದ ವಿಚಾರಣೆಯಿರುವುದು. ಅವರ ವಾಸಸ್ಥಳ ನರಕವಾಗಿರುವುದು. ಅದು ಬಹಳ ಕೀಳಾದ ವಾಸಸ್ಥಳವಾಗಿದೆ.

لِلَّذِينَ اسْتَجَابُوا لِرَبِّهِمُ الْحُسْنَىٰ ۚ وَالَّذِينَ لَمْ يَسْتَجِيبُوا لَهُ لَوْ أَنَّ لَهُم مَّا فِي الْأَرْضِ جَمِيعًا وَمِثْلَهُ مَعَهُ لَافْتَدَوْا بِهِ ۚ أُولَٰئِكَ لَهُمْ سُوءُ الْحِسَابِ ۖ وَمَأْوَاهُمْ جَهَنَّمُ ۖ وَبِئْسَ الْمِهَادُ ﴿١٩﴾

**20.** ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣವಾದ ಸಂದೇಶವನ್ನು ಸತ್ಯವೆಂದು ಮನಗಾಣುವವನು (ಅದನ್ನು ಮನವರಿಕೆ ಮಾಡದ) ಕುರುಡನಿಗೆ ಸಮಾನನೇ? ಬುದ್ಧಿವಂತರು ಮಾತ್ರ ಉಪದೇಶವನ್ನು ಸ್ವೀಕರಿಸುತ್ತಾರೆ.

أَفَمَن يَعْلَمُ أَنَّمَا أُنزِلَ إِلَيْكَ مِن رَّبِّكَ الْحَقُّ كَمَنْ هُوَ أَعْمَىٰ ۚ إِنَّمَا يَتَذَكَّرُ أُولُو الْأَلْبَابِ ﴿٢٠﴾

**21.** ಅವರು ಅಲ್ಲಾಹನೊಡನೆ ಮಾಡಿದ ಪ್ರತಿಜ್ಞೆಯನ್ನು ಪಾಲಿಸುವವರೂ ಒಡಂಬಡಿಕೆಯನ್ನು ಉಲ್ಲಂಘಿಸದವರೂ ಆಗಿದ್ದಾರೆ.

الَّذِينَ يُوفُونَ بِعَهْدِ اللَّهِ وَلَا يَنقُضُونَ الْمِيثَاقَ ﴿٢١﴾

**22.** ಸ್ಥಿರಗೊಳಿಸಲು ಅಲ್ಲಾಹನು ಆದೇಶಿಸಿದ ಸಂಬಂಧಗಳನ್ನು ಅವರು ಸ್ಥಿರಗೊಳಿಸುತ್ತಾರೆ; ತಮ್ಮ

وَالَّذِينَ يَصِلُونَ مَا أَمَرَ اللَّهُ بِهِ أَن





ಪ್ರಭುವಿಗೆ ಭಯಪಡುತ್ತಾರೆ ಹಾಗೂ ಕೆಡುಕಿನ ವಿಚಾರಣೆಯ ಬಗ್ಗೆ ಭೀತಿಯುಳ್ಳವರಾಗಿದ್ದಾರೆ.

يُوصَلَ وَيَخْشَوْنَ رَبَّهُمْ وَيَخَافُونَ سُوءَ الْحِسَابِ ﴿٢٢﴾

**23.** ಅವರು ತಮ್ಮ ಪ್ರಭುವಿನ ಪ್ರೀತಿಯನ್ನು ಆಶಿಸುತ್ತಾ ಸಹನೆದೋರುತ್ತಾರೆ; ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ; ನಾವು ಅವರಿಗೆ ನೀಡಿದವುಗಳಿಂದ ಗುಪ್ತವಾಗಿಯೂ ಬಹಿರಂಗವಾಗಿಯೂ ವ್ಯಯಿಸುತ್ತಾರೆ; ಕೆಡುಕನ್ನು ಒಳಿತಿನ ಮೂಲಕ ತಡೆಯುತ್ತಾರೆ. ಅಂತಹ ಜನರಿಗೆ ಆ (ಪಾರತ್ರಿಕ) ಗೃಹದ ಅತ್ಯುತ್ತಮ ಪುರಸ್ಕಾರವಿದೆ -

وَالَّذِينَ صَبَرُوا ابْتِغَاءَ وَجْهِ رَبِّهِمْ وَأَقَامُوا الصَّلَاةَ وَأَنفَقُوا مِمَّا رَزَقْنَاهُمْ سِرًّا وَعَلَانِيَةً وَيَدْرَءُونَ بِالْحَسَنَةِ السَّيِّئَةَ أُولَٰئِكَ لَهُمْ عُقْبَى الدَّارِ ﴿٢٢﴾

**24.** ಶಾಶ್ವತ ವಾಸಕ್ಕಿರುವ ಸ್ವರ್ಗೀಯ ತೋಟಗಳು. ಅವುಗಳನ್ನು ಅವರು ಪ್ರವೇಶಿಸುವರು - ಅವರ ತಂದೆ ತಾತಂದಿರು, ಬಾಳ ಸಂಗಾತಿಗಳು, ಸಂತತಿಗಳು- ಇವರ ಪೈಕಿ ಸಜ್ಜನರಾದ ಎಲ್ಲರೂ ಸಹ. ದೇವದೂತರು ಎಲ್ಲ ಬಾಗಿಲುಗಳಿಂದಲೂ ಅವರ ಬಳಿಗೆ ಪ್ರವೇಶಿಸುವರು.

جَنَّاتُ عَدْنٍ يَدْخُلُونَهَا وَمَن صَلَحَ مِنْ آبَائِهِمْ وَأَزْوَاجِهِمْ وَذُرِّيَّاتِهِمْ ۖ وَالْمَلَائِكَةُ يَدْخُلُونَ عَلَيْهِم مِّن كُلِّ بَابٍ ﴿٢٣﴾

**25.** 'ನೀವು ಸಹನೆದೋರಿದ ಕಾರಣದಿಂದ ನಿಮ್ಮ ಮೇಲೆ ಶಾಂತಿ ಇರಲಿ' (ಎಂದು ಅವರು ಹೇಳುವರು). ಅಂತಿಮ ವಾಸಸ್ಥಳ ಅದೆಷ್ಟು ಶ್ರೇಷ್ಠವಾದುದು!

سَلَامٌ عَلَيْكُم بِمَا صَبَرْتُمْ ۚ فَنِعْمَ عُقْبَى الدَّارِ ﴿٢٤﴾

**26.** ಯಾರು ಅಲ್ಲಾಹನೊಡನೆ ಒಡಂಬಡಿಕೆಯನ್ನು ದೃಢಪಡಿಸಿದ ಬಳಿಕ ಅದನ್ನು ಉಲ್ಲಂಘಿಸುತ್ತಾರೋ ಮತ್ತು ಅಲ್ಲಾಹನು ಸ್ಥಿರಗೊಳಿಸಲು ಆದೇಶಿಸಿದ ಸಂಬಂಧಗಳನ್ನು ಕಡಿಯುತ್ತಾರೋ ಹಾಗೂ ಭೂಮಿಯಲ್ಲಿ ಕೆಡುಕನ್ನು ಹರಡುತ್ತಾರೋ ಅವರಿಗೆ ಶಾಪವಿದೆ. ದುಃಖದಾಯಕ ವಾಸಸ್ಥಳ ಅವರಿಗಿದೆ.

وَالَّذِينَ يَنقُضُونَ عَهْدَ اللَّهِ مِن بَعْدِ مِيثَاقِهِ وَيَقْطَعُونَ مَا أَمَرَ اللَّهُ بِهِ أَن يُوصَلَ وَيُفْسِدُونَ فِي الْأَرْضِ ۙ أُولَٰئِكَ لَهُمُ اللَّعْنَةُ وَلَهُمْ سُوءُ الدَّارِ ﴿٢٦﴾

**27.** ತಾನಿಚ್ಛಿಸುವವರಿಗೆ ಅಲ್ಲಾಹನು ಆಹಾರ ಸಮೃದ್ಧಿಯನ್ನು ನೀಡುತ್ತಾನೆ ಹಾಗೂ (ತಾನಿಚ್ಛಿಸುವವರಿಗೆ) ಅದನ್ನು ಮೊಟಕುಗೊಳಿಸುತ್ತಾನೆ. ಐಹಿಕ ಜೀವನದಲ್ಲಿ ಅವರು ಆಹ್ಲಾದಗೊಳ್ಳುತ್ತಾರೆ. ಆದರೆ ಪರಲೋಕಕ್ಕೆ ಹೋಲಿಸಿದರೆ ಇಹಲೋಕ ಜೀವನ (ತಾತ್ಕಾಲಿಕವಾದ) ಸುಖಾನುಭವ ಮಾತ್ರವಾಗಿದೆ.

اللَّهُ يَبْسُطُ الرِّزْقَ لِمَن يَشَاءُ وَيَقْدِرُ ۚ وَفَرِحُوا بِالْحَيَاةِ الدُّنْيَا وَمَا الْحَيَاةُ الدُّنْيَا فِي الْآخِرَةِ إِلَّا مَتَاعٌ ﴿٢٧﴾

**28.** 'ಅವನಿಗೆ ತನ್ನ ಪ್ರಭುವಿನಿಂದ ಒಂದು ದೃಷ್ಟಾಂತವೇಕೆ ಅವತೀರ್ಣವಾಗುವುದಿಲ್ಲ?' ಎಂದು ಅವಿಶ್ವಾಸಿಗಳು ಕೇಳುತ್ತಾರೆ. ಹೇಳು: 'ತಾನಿಚ್ಛಿಸುವವರನ್ನು ಅಲ್ಲಾಹನು ತಪ್ಪುದಾರಿಯಲ್ಲಿ ಬಿಟ್ಟುಬಿಡುತ್ತಾನೆ. ಅವನೆಡೆಗೆ ತಿರುಗುವವರನ್ನು ಅವನು ಸರಿಯಾದ ದಾರಿಯಲ್ಲಿ ಕೊಂಡೊಯ್ಯುತ್ತಾನೆ.

وَيَقُولُ الَّذِينَ كَفَرُوا لَوْلَا أُنْزِلَ عَلَيْهِ آيَةٌ مِنْ رَبِّهِ ۗ قُلْ إِنَّ اللَّهَ يُضِلُّ مَنْ يَشَاءُ وَيَهْدِي إِلَيْهِ مَنْ أَنَابَ ﴿٢٨﴾

**29.** 'ಅವರು ವಿಶ್ವಾಸಿಗಳೂ ಅಲ್ಲಾಹನ ಸ್ಮರಣೆಯಿಂದ ಮನಶ್ಶಾಂತಿ ಗಳಿಸಿದವರೂ ಆಗಿದ್ದಾರೆ. ತಿಳಿದುಕೊಳ್ಳಿರಿ, ಅಲ್ಲಾಹನ ಸ್ಮರಣೆಯಿಂದ ಮಾತ್ರ ಮನಶ್ಶಾಂತಿ ಪ್ರಾಪ್ತಿಯಾಗುವುದು.

الَّذِينَ آمَنُوا وَتَطْمَئِنُّ قُلُوبُهُمْ بِذِكْرِ اللَّهِ ۗ أَلَا بِذِكْرِ اللَّهِ تَطْمَئِنُّ الْقُلُوبُ ﴿٢٩﴾

**30.** 'ಯಾರು ವಿಶ್ವಾಸ ಹೊಂದಿ ಸತ್ಕರ್ಮಗಳನ್ನು ಮಾಡುತ್ತಾರೋ ಅವರಿಗೆ ಪರಮಾನಂದವಿದೆ ಮತ್ತು ಮರಳಿ ಹೋಗಲಿಕ್ಕೆ ಅತ್ಯುತ್ತಮವಾದ ಸ್ಥಳವಿದೆ.'

الَّذِينَ آمَنُوا وَعَمِلُوا الصَّالِحَاتِ طُوبَىٰ لَهُمْ وَحُسْنُ مَآبٍ ﴿٣٠﴾

**31.** ಈ ರೀತಿಯಲ್ಲಿ ತಮಗಿಂತ ಮೊದಲು ಹಲವು ಪೀಳಿಗೆಗಳು ಗತಿಸಿ ಹೋಗಿರುವ ಒಂದು ಜನತೆಯೆಡೆಗೆ ನಾವು ನಿನ್ನನ್ನು ಕಳುಹಿಸಿದ್ದೇವೆ- ನಾವು ನಿನಗೆ ಅವತೀರ್ಣಗೊಳಿಸಿರುವುದನ್ನು ನೀನು ಅವರಿಗೆ ಓದಿ ಹೇಳಲಿಕ್ಕೋಸ್ಕರ. (ಆದರೂ) ಅವರು ದಯಾವಂತನನ್ನು ಧಿಕ್ಕರಿಸುತ್ತಾರೆ. ಹೇಳು: 'ಅವನೇ ನನ್ನ ಪ್ರಭು. ಅವನ ಹೊರತು ಬೇರೆ ದೇವನಿಲ್ಲ. ನಾನು ಅವನಲ್ಲಿ ಭರವಸೆ ಇಟ್ಟಿದ್ದೇನೆ. ನಾನು ಮರಳುವುದು ಅವನ ಬಳಿಗೆಯೇ ಆಗಿದೆ.'

كَذَٰلِكَ أَرْسَلْنَاكَ فِي أُمَّةٍ قَدْ خَلَتْ مِنْ قَبْلِهَا أُمَمٌ لِتَتْلُوَ عَلَيْهِمُ الَّذِي أَوْحَيْنَا إِلَيْكَ وَهُمْ يَكْفُرُونَ بِالرَّحْمَٰنِ ۚ قُلْ هُوَ رَبِّي لَا إِلَٰهَ إِلَّا هُوَ عَلَيْهِ تَوَكَّلْتُ وَإِلَيْهِ مَتَابِ ﴿٣١﴾

**32.** ಪರ್ವತಗಳು ಚಲಿಸುವಂತೆ ಮಾಡಬಲ್ಲ ಅಥವಾ ಭೂಮಿ ಸೀಳಲ್ಪಡುವಂತೆ ಮಾಡಬಲ್ಲ ಅಥವಾ ಮೃತರಾದವರು ಮಾತನಾಡುವಂತೆ ಮಾಡಬಲ್ಲ ಒಂದು ಖುರ್‌ಆನ್ ಇರುತ್ತಿದ್ದರೂ (ಅವರು ಅದನ್ನು ನಂಬುತ್ತಿರಲಿಲ್ಲ). ಆದರೆ ಎಲ್ಲ ಕಾರ್ಯಗಳೂ ಅಲ್ಲಾಹನಿಗೆ ಅಧೀನವಾಗಿವೆ. ಅಲ್ಲಾಹನು ಬಯಸಿದ್ದರೆ ಮನುಷ್ಯರೆಲ್ಲರನ್ನೂ ಅವನು ಬಲವಂತವಾಗಿ ಸತ್ಪಥದಲ್ಲಿ ನಡೆಸುತ್ತಿದ್ದನೆಂದು ಸತ್ಯವಿಶ್ವಾಸಿಗಳು

وَلَوْ أَنَّ قُرْآنًا سُيِّرَتْ بِهِ الْجِبَالُ أَوْ قُطِّعَتْ بِهِ الْأَرْضُ أَوْ كُلِّمَ بِهِ الْمَوْتَىٰ ۗ بَلْ لِلَّهِ الْأَمْرُ جَمِيعًا ۗ أَفَلَمْ يَيْأَسِ الَّذِينَ آمَنُوا أَنْ لَوْ يَشَاءُ اللَّهُ لَهَدَى النَّاسَ جَمِيعًا ۗ وَلَا يَزَالُ الَّذِينَ كَفَرُوا تُصِيبُهُمْ بِمَا صَنَعُوا قَارِعَةٌ





ಮನಗಾಣುವುದಿಲ್ಲವೇ? ಅವಿಶ್ವಾಸಿಗಳಿಗೆ ಅವರ ದುಷ್ಕೃತ್ಯ ಕಾರಣವಾಗಿ ಕೆಲವು ದೊಡ್ಡ ವಿಪತ್ತುಗಳು ಬಂದೆರಗುತ್ತಲೇ ಇರುತ್ತವೆ ಅಥವಾ ಅವರ ಮನೆಗಳ ಸಮೀಪ ಬಂದೆರಗುವುವು- ಅಲ್ಲಾಹನ ವಾಗ್ದಾನ ನೆರವೇರುವ ತನಕ. ಖಂಡಿತವಾಗಿಯೂ ಅಲ್ಲಾಹನು ವಾಗ್ದಾನವನ್ನು ಮುರಿಯಲಾರನು.

أَوْ تَحُلُّ قَرِيبًا مِنْ دَارِهِمْ حَتَّىٰ يَأْتِيَ وَعْدُ اللَّهِ ۚ إِنَّ اللَّهَ لَا يُخْلِفُ الْمِيعَادَ ﴿٣٢﴾

**33.** ದಿಟವಾಗಿಯೂ ನಿನಗೆ ಮುಂಚೆ ಸಹ ಸಂದೇಶವಾಹಕರು ಅಪಹಾಸ್ಯಕ್ಕೆ ಈಡಾಗಿದ್ದಾರೆ. ಆದರೆ ಅವಿಶ್ವಾಸಿಗಳಿಗೆ ನಾನು ಕಾಲಾವಕಾಶ ನೀಡಿದೆನು. ಅನಂತರ ನಾನು ಅವರನ್ನು ಹಠಾತ್ತಾಗಿ ಹಿಡಿದು ಬಿಟ್ಟೆನು. ಆಗ ನನ್ನ ಶಿಕ್ಷೆ ಹೇಗಿತ್ತು! (ಎಷ್ಟು ಕಠೋರವಾಗಿತ್ತು!)

وَلَقَدِ اسْتُهْزِئَ بِرُسُلٍ مِنْ قَبْلِكَ فَأَمْلَيْتُ لِلَّذِينَ كَفَرُوا ثُمَّ أَخَذْتُهُمْ ۖ فَكَيْفَ كَانَ عِقَابِ ﴿٣٣﴾

**34.** ಪ್ರತಿಯೊಬ್ಬ ವ್ಯಕ್ತಿ ಏನು ಮಾಡುತ್ತಿದ್ದಾನೆಂದು ಗಮನವಿಟ್ಟು ವೀಕ್ಷಿಸುತ್ತಿರುವವನು (ಅವರನ್ನು ಶಿಕ್ಷಿಸದೆ ಬಿಡುವನೇ?). ಆದರೂ ಅವರು ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುತ್ತಾರೆ. ಹೇಳು: 'ಆ ಸಹಭಾಗಿಗಳ ಹೆಸರನ್ನು ಹೇಳಿಕೊಡಿರಿ'. ಭೂಮಿಯಲ್ಲಿ ಅವನಿಗೆ ತಿಳಿಯದಿರುವ ವಿಚಾರಗಳ ಕುರಿತು ನೀವು ಹೇಳಿಕೊಡುವಿರೇನು? ಅಥವಾ ಅದು ಬರೇ ಬಾಯಿ ಮಾತೇ? ವಸ್ತುತಃ ಅವಿಶ್ವಾಸಿಗಳಿಗೆ ಅವರ ಕುತಂತ್ರಗಳು ಚಲೋದಾಗಿ ಕಾಣಿಸಲ್ಪಟ್ಟವು ಹಾಗೂ ಸತ್ಪಥದಿಂದ ಅವರು ತಡೆಯಲ್ಪಟ್ಟರು. ಅಲ್ಲಾಹನು ಯಾರನ್ನಾದರೂ ದಾರಿತಪ್ಪಲು ಬಿಟ್ಟರೆ ಮತ್ತೆ ಅವನಿಗೆ ಸರಿದಾರಿ ತೋರಿಸಲು ಯಾರೂ ಇಲ್ಲ.

أَفَمَنْ هُوَ قَائِمٌ عَلَىٰ كُلِّ نَفْسٍ بِمَا كَسَبَتْ ۗ وَجَعَلُوا لِلَّهِ شُرَكَاءَ قُلْ سَمُّوهُمْ ۚ أَمْ تُنَبِّئُونَهُ بِمَا لَا يَعْلَمُ فِي الْأَرْضِ أَمْ بِظَاهِرٍ مِنَ الْقَوْلِ ۗ بَلْ زُيِّنَ لِلَّذِينَ كَفَرُوا مَكْرُهُمْ وَصُدُّوا عَنِ السَّبِيلِ ۗ وَمَنْ يُضْلِلِ اللَّهُ فَمَا لَهُ مِنْ هَادٍ ﴿٣٤﴾

**35.** ಅವರಿಗೆ ಇಹಲೋಕದಲ್ಲಿ ಶಿಕ್ಷೆ ಇದೆ. ಹಾಗೂ ಪರಲೋಕದ ಶಿಕ್ಷೆ ಅತಿ ಕಠೋರವಾದುದು. ಅಲ್ಲಾಹನಿಂದ (ಅಲ್ಲಾಹನ ಶಿಕ್ಷೆಯಿಂದ) ಅವರನ್ನು ಪಾರುಮಾಡುವವನು ಯಾರೂ ಇಲ್ಲ.

لَهُمْ عَذَابٌ فِي الْحَيَاةِ الدُّنْيَا ۖ وَلَعَذَابُ الْآخِرَةِ أَشَقُّ ۖ وَمَا لَهُمْ مِنَ اللَّهِ مِنْ وَاقٍ ﴿٣٥﴾

**36.** ಸಜ್ಜನರಿಗೆ ವಾಗ್ದಾನ ಮಾಡಲ್ಪಟ್ಟ ಸ್ವರ್ಗೀಯ ತೋಟದ ಹೋಲಿಕೆ (ಈ ರೀತಿಯಾಗಿದೆ): ಅದರ ಕೆಳಬದಿಯಲ್ಲಿ ಸರಿತುಗಳು ಹರಿಯುತ್ತಲಿರುತ್ತವೆ. ಅದರ

مَثَلُ الْجَنَّةِ الَّتِي وُعِدَ الْمُتَّقُونَ ۖ تَجْرِي مِنْ تَحْتِهَا الْأَنْهَارُ ۖ أُكُلُهَا

ಫಲಗಳು ಮತ್ತು ನೆರಳುಗಳು ಸದಾಕಾಲ ಇರುತ್ತವೆ. ಭಯಭಕ್ತಿಯುಳ್ಳವರಿಗೋಸ್ಕರ ಇದು ಪ್ರತಿಫಲವಾಗಿದೆ. ಅವಿಶ್ವಾಸಿಗಳಿಗೆ ಪ್ರತಿಫಲ ನರಕವಾಗಿದೆ.

دَآئِمٌ وَّظِلُّهَا ۚ تِلْكَ عُقْبَى الَّذِينَ اتَّقَوْا ۖ وَّعُقْبَى الْكٰفِرِينَ النَّارُ ﴿٣٥﴾

**37.** ನಾವು ಯಾರಿಗೆ ಗ್ರಂಥ ನೀಡಿದ್ದೇವೋ ಅವರು ನಿನಗೆ ಅವತೀರ್ಣವಾದುದರ ಬಗ್ಗೆ ಸಂತುಷ್ಟರಾಗಿದ್ದಾರೆ. ಆ ವಿವಿಧ ಗುಂಪುಗಳಲ್ಲಿ ಸಹ ಇದರ ಕೆಲವು ಅಂಶಗಳನ್ನು ನಿರಾಕರಿಸುವ ಕೆಲವರಿದ್ದಾರೆ. ಹೇಳು: 'ಅಲ್ಲಾಹನನ್ನು ಮಾತ್ರ ಆರಾಧಿಸಬೇಕು; ಅವನಿಗೆ ಯಾರನ್ನೂ ಸಹಭಾಗಿಯಾಗಿ ಕಲ್ಪಿಸಬಾರದು ಎಂದೇ ನಾನು ಆಜ್ಞಾಪಿಸಲ್ಪಟ್ಟಿದ್ದೇನೆ. ಅವನೆಡೆಗೆ ನಾನು (ನಿಮ್ಮನ್ನು) ಕರೆಯುತ್ತಿದ್ದೇನೆ. ನಾನು ಮರಳುವುದು ಸಹ ಅವನೆಡೆಗೆಯೇ ಆಗಿದೆ.'

وَالَّذِينَ اٰتَيْنٰهُمُ الْكِتٰبَ يَفْرَحُونَ بِمَآ أُنْزِلَ إِلَيْكَ وَمِنَ الْأَحْزَابِ مَنْ يُّنْكِرُ بَعْضَهُ ۚ قُلْ إِنَّمَآ أُمِرْتُ أَنْ أَعْبُدَ اللّٰهَ وَلَآ أُشْرِكَ بِهِ ۚ إِلَيْهِ أَدْعُوا وَإِلَيْهِ مَاٰبِ ﴿٣٦﴾

**38.** ಹೀಗೆ ನಾವು ಇದನ್ನು ಸ್ಪಷ್ಟವಾದ ಒಂದು ಆಜ್ಞೆಯೆಂಬಂತೆ ಅವತೀರ್ಣಗೊಳಿಸಿದ್ದೇವೆ. ಅಲ್ಲಾಹನಿಂದ ನಿನಗೆ ಜ್ಞಾನ ಪ್ರಾಪ್ತಿಯಾದ ಬಳಿಕವೂ ನೀನು ಅವರ ಕೆಟ್ಟ ಅಭಿಲಾಷೆಗಳಂತೆ ನಡೆದರೆ ನಿನಗೆ ಅಲ್ಲಾಹನ ವಿರುದ್ಧ ಸ್ನೇಹಿತನಾಗಿ ಅಥವಾ ಸಂರಕ್ಷಕನಾಗಿ ಯಾರೂ ಇರಲಿಕ್ಕಿಲ್ಲ.

وَكَذٰلِكَ أَنْزَلْنٰهُ حُكْمًا عَرَبِيًّا ۚ وَلَئِنِ اتَّبَعْتَ أَهْوَآءَهُمْ بَعْدَ مَا جَآءَكَ مِنَ الْعِلْمِ ۙ مَا لَكَ مِنَ اللّٰهِ مِنْ وَّلِيٍّ وَّلَا وَاقٍ ﴿٣٧﴾

**39.** ದಿಟವಾಗಿಯೂ ನಿನಗಿಂತ ಮುಂಚೆ ನಾವು ಅನೇಕ ಸಂದೇಶವಾಹಕರನ್ನು ಕಳುಹಿಸಿದ್ದೇವೆ. ಅವರಿಗೆ ಪತ್ನಿಯರನ್ನು ಮತ್ತು ಮಕ್ಕಳನ್ನು ದಯಪಾಲಿಸಿದೆವು. ಯಾವ ಸಂದೇಶವಾಹಕನಿಗಾಗಲಿ, ಅಲ್ಲಾಹನ ಅನುಮತಿ ವಿನಾ ಯಾವುದೇ ದೃಷ್ಟಾಂತವನ್ನು ತರಲು ಸಾಧ್ಯವಿಲ್ಲ. ಪ್ರತಿಯೊಂದು ಕಾರ್ಯಕ್ಕೂ ಒಂದೊಂದು ದೈವಿಕ ವಿಧಿಯಿದೆ.

وَلَقَدْ أَرْسَلْنَا رُسُلًا مِّنْ قَبْلِكَ وَجَعَلْنَا لَهُمْ أَزْوَاجًا وَّذُرِّيَّةً ۚ وَمَا كَانَ لِرَسُولٍ أَنْ يَّأْتِيَ بِاٰيَةٍ إِلَّا بِإِذْنِ اللّٰهِ ۗ لِكُلِّ أَجَلٍ كِتَابٌ ﴿٣٨﴾

**40.** ತಾನು ಬಯಸಿದಂತೆ ಅಲ್ಲಾಹನು ಅಳಿಸುತ್ತಾನೆ ಯಾ ಉಳಿಸುತ್ತಾನೆ. ಎಲ್ಲ ಆಜ್ಞೆಗಳ ಮೂಲಾಧಾರ ಅವನ ಬಳಿ ಇದೆ.

يَمْحُوا اللّٰهُ مَا يَشَآءُ وَيُثْبِتُ ۖ وَعِنْدَهُٓ أُمُّ الْكِتٰبِ ﴿٣٩﴾





**41.** ನಾವು ಅವರಿಗೆ ಮುನ್ನೆಚ್ಚರಿಕೆ ಕೊಡುವ (ಶಿಕ್ಷೆಗಳಲ್ಲಿ) ಕೆಲವನ್ನು ನಿನಗೆ ನಾವು ತೋರಿಸಿಕೊಡುವೆವು ಅಥವಾ (ಅದು ಘಟಿಸುವುದಕ್ಕೆ ಮುಂಚೆಯೇ) ನಿನ್ನನ್ನು ಮೃತಪಡಿಸುವೆವು. ಸಂದೇಶವನ್ನು ತಲಪಿಸುವುದು ಮಾತ್ರವೇ ನಿನ್ನ ಕರ್ತವ್ಯವಾಗಿದೆ. ಲೆಕ್ಕನೋಡುವ ಹೊಣೆಗಾರಿಕೆ ನಮ್ಮದಾಗಿದೆ.

وَإِنْ مَّا نُرِيَنَّكَ بَعْضَ الَّذِي نَعِدُهُمْ أَوْ نَتَوَفَّيَنَّكَ فَإِنَّمَا عَلَيْكَ الْبَلٰغُ وَعَلَيْنَا الْحِسَابُ ﴿٤٠﴾

**42.** ನಾವು ಅವರ ಭೂಪ್ರದೇಶವನ್ನು ಎಲ್ಲ ಕಡೆಗಳಿಂದ ಸಂಕುಚಿತಗೊಳಿಸುವುದನ್ನು ಅವರು ಕಾಣುವುದಿಲ್ಲವೇ? ಅಲ್ಲಾಹನೇ ತೀರ್ಮಾನಿಸುವವನಾಗಿದ್ದಾನೆ. ಅವನ ತೀರ್ಮಾನವನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲ. ಅವನು ಶೀಘ್ರವಾಗಿ ಲೆಕ್ಕಾಚಾರ ಮಾಡುವವನಾಗಿದ್ದಾನೆ.

أَوَلَمْ يَرَوْا أَنَّا نَأْتِي الْأَرْضَ نَنْقُصُهَا مِنْ أَطْرَافِهَا ۚ وَاللّٰهُ يَحْكُمُ لَا مُعَقِّبَ لِحُكْمِهِ ۚ وَهُوَ سَرِيعُ الْحِسَابِ ﴿٤١﴾

**43.** ಇವರಿಗಿಂತ ಮುಂಚೆಯಿದ್ದವರು ಸಹ ಷಡ್ಯಂತ್ರ ಹೂಡಿದ್ದರು. ಆದರೆ (ಫಲದಾಯಕವಾದ) ಎಲ್ಲ ತಂತ್ರಗಳು ಅಲ್ಲಾಹನದ್ದಾಗಿವೆ. ಪ್ರತಿಯೊಂದು ಆತ್ಮದ ಸಂಪಾದನೆಯನ್ನು ಅವನು ಬಲ್ಲನು. ಈ ಗೃಹದ ಉತ್ತಮ ಪ್ರತಿಫಲ ಯಾರ ಪಾಲಿಗಿರುವುದೆಂದು ಅವಿಶ್ವಾಸಿಗಳು ಶೀಘ್ರವೇ ತಿಳಿಯುವರು.

وَقَدْ مَكَرَ الَّذِينَ مِنْ قَبْلِهِمْ فَلِلّٰهِ الْمَكْرُ جَمِيعًا ۖ يَعْلَمُ مَا تَكْسِبُ كُلُّ نَفْسٍ ۗ وَسَيَعْلَمُ الْكُفّٰرُ لِمَنْ عُقْبَى الدَّارِ ﴿٤٢﴾

**44.** 'ನೀನು ಸಂದೇಶವಾಹಕನಲ್ಲ' ಎಂದು ಅವಿಶ್ವಾಸಿಗಳು ಹೇಳುತ್ತಾರೆ. ಹೇಳು: 'ನನಗೂ ನಿಮಗೂ ಮಧ್ಯೆ ಅಲ್ಲಾಹನ ಸಾಕ್ಷ್ಯ ಸಾಕು ಮತ್ತು ದಿವ್ಯ ಗ್ರಂಥದ ಜ್ಞಾನವುಳ್ಳವನ ಸಾಕ್ಷ್ಯ ಸಾಕು.

وَيَقُولُ الَّذِينَ كَفَرُوا لَسْتَ مُرْسَلًا ۚ قُلْ كَفٰى بِاللّٰهِ شَهِيدًا بَيْنِي وَبَيْنَكُمْ ۙ وَمَنْ عِنْدَهُ عِلْمُ الْكِتٰبِ ﴿٤٣﴾

سُوْرَةُ اِبْرٰهِيْمَ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّخَمْسُوْنَ اٰيَةً وَّسَبْعَةُ رُكُوْعَاتٍ

# 14. ಇಬ್‌ರಾಹೀಂ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 53 ಆಯತ್‌ಗಳು ಹಾಗೂ 7 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಅಲಿಫ್ ಲಾಂ ರಾ.[301] ಇದು ನಾವು ನಿನಗೆ ಅವತೀರ್ಣಗೊಳಿಸಿದ ಗ್ರಂಥವಾಗಿದೆ- ನೀನು ಜನರನ್ನು ಅವರ ಪ್ರಭುವಿನ ಅನುಮತಿಯೊಂದಿಗೆ ಎಲ್ಲ ವಿಧ ಅಂಧಕಾರಗಳಿಂದ ಹೊರತಂದು ಪ್ರಕಾಶದೆಡೆಗೆ ನಡೆಸಲಿಕ್ಕಾಗಿ; ಪ್ರತಾಪಶಾಲಿಯೂ ಸ್ತುತ್ಯರ್ಹನೂ ಆದ** ಅಲ್ಲಾಹನ **ಮಾರ್ಗದೆಡೆಗೆ -**

الٓرٰ ۚ كِتٰبٌ اَنْزَلْنٰهُ اِلَيْكَ لِتُخْرِجَ النَّاسَ مِنَ الظُّلُمٰتِ اِلَى النُّوْرِ ۙ بِاِذْنِ رَبِّهِمْ اِلٰى صِرَاطِ الْعَزِيْزِ الْحَمِيْدِ ②

**3. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲಕ್ಕೂ ಅಧಿಪತಿಯಾಗಿರುವ ಅಲ್ಲಾಹನ** ಮಾರ್ಗದೆಡೆಗೆ. **ಅವಿಶ್ವಾಸಿಗಳಿಗೆ ಕಠೋರವಾದ ಶಿಕ್ಷೆ ನಿಮಿತ್ತ ಮಹಾ ನಾಶವಿದೆ.**

اللّٰهِ الَّذِيْ لَهٗ مَا فِي السَّمٰوٰتِ وَمَا فِي الْاَرْضِ ۚ وَوَيْلٌ لِّلْكٰفِرِيْنَ مِنْ عَذَابٍ شَدِيْدِ ۙ③

**4. ಅವರು ಪಾರತ್ರಿಕ ಜೀವನಕ್ಕಿಂತ ಐಹಿಕ ಜೀವನಕ್ಕೆ ಮಹತ್ವ ನೀಡುವವರಾಗಿದ್ದಾರೆ. ಅವರು ಅಲ್ಲಾಹನ ಮಾರ್ಗದಿಂದ** (ಜನರನ್ನು) **ತಡೆಯುತ್ತಾರೆ ಮತ್ತು ಆ ಮಾರ್ಗವನ್ನು ವಕ್ರವಾಗಿ ತೋರಿಸಲು ಬಯಸುತ್ತಾರೆ. ಅವರು ದಾರಿತಪ್ಪಿ ಬಹಳ ದೂರ ಹೋದವರಾಗಿದ್ದಾರೆ.**

الَّذِيْنَ يَسْتَحِبُّوْنَ الْحَيٰوةَ الدُّنْيَا عَلَى الْاٰخِرَةِ وَيَصُدُّوْنَ عَنْ سَبِيْلِ اللّٰهِ وَيَبْغُوْنَهَا عِوَجًا ۚ اُولٰٓئِكَ فِيْ ضَلٰلٍ بَعِيْدٍ ④

**5. ನಾವು ಯಾವ ಸಂದೇಶವಾಹಕನನ್ನೂ ಆತನ ಜನತೆಯ ಭಾಷೆಯ ಸಹಿತ ಹೊರತು ಕಳುಹಿಸಲಿಲ್ಲ- ಆತನು ಅವರಿಗೆ** (ದೈವಿಕ ಸಂದೇಶವನ್ನು) **ವಿವರಿಸಿಕೊಡುವಂತಾಗಲೆಂದು. ಅಲ್ಲಾಹನು ತಾನಿಚ್ಛಿಸುವವರನ್ನು ದಾರಿ ತಪ್ಪಲು ಬಿಟ್ಟುಬಿಡುತ್ತಾನೆ; ತಾನಿಚ್ಛಿಸುವವರನ್ನು ಸರಿದಾರಿಯಲ್ಲಿ ನಡೆಸುತ್ತಾನೆ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.**

وَمَآ اَرْسَلْنَا مِنْ رَّسُوْلٍ اِلَّا بِلِسَانِ قَوْمِهٖ لِيُبَيِّنَ لَهُمْ ۚ فَيُضِلُّ اللّٰهُ مَنْ يَّشَآءُ وَيَهْدِيْ مَنْ يَّشَآءُ ۚ وَهُوَ الْعَزِيْزُ الْحَكِيْمُ ⑤

301. "ಅಲ ಅಲ್ಲಾಹು ಅರಾ" = ನಾನು ಅಲ್ಲಾಹ್ ಎಲ್ಲವನ್ನೂ ಕಾಣುವವನು. (2ನೇ ಅಧ್ಯಾಯ, 2ನೇ ವಚನದ ಟಿಪ್ಪಣಿ ನೋಡಿರಿ).





**6. ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳ ಸಹಿತ ಕಳುಹಿಸಿದ್ದೆವು - 'ನಿನ್ನ ಜನತೆಯನ್ನು ಎಲ್ಲ ರೀತಿಯ ಅಂಧಕಾರಗಳಿಂದ ಹೊರಗೆ ತಂದು ಪ್ರಕಾಶದೆಡೆಗೆ ನಡೆಸು ಮತ್ತು ಅವರಿಗೆ ಅಲ್ಲಾಹನ ದಿನಗಳ[302] ಬಗ್ಗೆ ನೆನಪು ಹುಟ್ಟಿಸು' ಎಂಬ ಸಂದೇಶ ನೀಡುತ್ತಾ. ಅತ್ಯಂತ ಸಹನೆದೋರುವವರಿಗೆ ಮತ್ತು ಹೆಚ್ಚಾಗಿ ಕೃತಜ್ಞತೆ ಸೂಚಿಸುವವರಿಗೆ ದಿಟವಾಗಿಯೂ ಅದರಲ್ಲಿ ಹಲವು ದೃಷ್ಟಾಂತಗಳಿವೆ.**

وَلَقَدْ اَرْسَلْنَا مُوْسٰى بِاٰيٰتِنَآ اَنْ اَخْرِجْ قَوْمَكَ مِنَ الظُّلُمٰتِ اِلَى النُّوْرِ ۙ وَذَكِّرْهُمْ بِاَيّٰىمِ اللّٰهِ ۚ اِنَّ فِيْ ذٰلِكَ لَاٰيٰتٍ لِّكُلِّ صَبَّارٍ شَكُوْرٍ ⑥

**7. ಮೂಸಾ ತನ್ನ ಜನತೆಯೊಡನೆ ಹೇಳಿದ ಸಂದರ್ಭ** (ಜ್ಞಾಪಿಸು)**: 'ಫಿರ್‌ಔನನ ಜನರಿಂದ ಅಲ್ಲಾಹನು ನಿಮ್ಮನ್ನು ಮುಕ್ತಗೊಳಿಸಿದಾಗ ಅವನು ನಿಮಗೆ ನೀಡಿದ ಅನುಗ್ರಹವನ್ನು ಸ್ಮರಿಸಿರಿ. ಅವರು ನಿಮ್ಮ ಮೇಲೆ ಕಠಿಣ ದೌರ್ಜನ್ಯವೆಸಗಿ ನಿಮ್ಮ ಗಂಡು ಮಕ್ಕಳನ್ನು ಕೊಂದು ನಿಮ್ಮ ಸ್ತ್ರೀಯರನ್ನು ಬದುಕಲು ಬಿಡುತ್ತಿದ್ದರು. ಅದರಲ್ಲಿ ನಿಮಗೆ ನಿಮ್ಮ ಪ್ರಭುವಿನ ಕಡೆಯಿಂದ ಒಂದು ದೊಡ್ಡ ಪರೀಕ್ಷೆ ಇತ್ತು.**

وَاِذْ قَالَ مُوْسٰى لِقَوْمِهِ اذْكُرُوْا نِعْمَةَ اللّٰهِ عَلَيْكُمْ اِذْ اَنْجٰىكُمْ مِّنْ اٰلِ فِرْعَوْنَ يَسُوْمُوْنَكُمْ سُوْٓءَ الْعَذَابِ وَيُذَبِّحُوْنَ اَبْنَآءَكُمْ وَيَسْتَحْيُوْنَ نِسَآءَكُمْ ۚ وَفِيْ ذٰلِكُمْ بَلَآءٌ مِّنْ رَّبِّكُمْ عَظِيْمٌ ⑦

**8. 'ನೀವು ಕೃತಜ್ಞತೆಯುಳ್ಳವರಾದರೆ ನಾನು ಖಂಡಿತವಾಗಿಯೂ ನಿಮಗೆ ಅನುಗ್ರಹಗಳನ್ನು ವೃದ್ಧಿಗೊಳಿಸುವೆನು; ನೀವು ಕೃತಘ್ನರಾದರೆ ನನ್ನ ಶಿಕ್ಷೆ ಕಠೋರವಾಗಿರಬಹುದು' ಎಂದು ನಿಮ್ಮ ಪ್ರಭು** (ಪ್ರವಾದಿಗಳ ಮುಖಾಂತರ) **ಸಾರಿದ ಸಂದರ್ಭ ಸಹ** ಜ್ಞಾಪಿಸಿರಿ**.**

وَاِذْ تَاَذَّنَ رَبُّكُمْ لَئِنْ شَكَرْتُمْ لَاَزِيْدَنَّكُمْ وَلَئِنْ كَفَرْتُمْ اِنَّ عَذَابِيْ لَشَدِيْدٌ ⑧

**9. ಮೂಸಾ ಹೇಳಿದರು: 'ನೀವು ಮತ್ತು ಭೂಮಿಯಲ್ಲಿರುವ ಎಲ್ಲರೂ ನಂಬದಿದ್ದರೆ ಕೂಡ** ಅಲ್ಲಾಹನಿಗೆ ಹಾನಿಯೇನೂ ಆಗುವುದಿಲ್ಲ. **ಕಾರಣವೇನೆಂದರೆ ನಿಶ್ಚಯವಾಗಿಯೂ ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.**

وَقَالَ مُوْسٰٓى اِنْ تَكْفُرُوْٓا اَنْتُمْ وَمَنْ فِي الْاَرْضِ جَمِيْعًا ۙ فَاِنَّ اللّٰهَ لَغَنِيٌّ حَمِيْدٌ ⑨

**10. ನಿಮಗಿಂತ ಮುಂಚೆ ಇದ್ದ ನೂಹ್, ಆದ್ ಮತ್ತು ಸಮೂದ್ ಜನಾಂಗಗಳ ಮತ್ತು ಅವರ**

اَلَمْ يَاْتِكُمْ نَبَؤُا الَّذِيْنَ مِنْ قَبْلِكُمْ

302. ಶಿಕ್ಷೆ ಮತ್ತು ರಕ್ಷೆ ನೀಡುವ ಕಾಲ.

قَوْمِ نُوحٍ وَّعَادٍ وَّثَمُودَ ۛ وَالَّذِينَ مِن
بَعْدِهِمْ ۛ لَا يَعْلَمُهُمْ إِلَّا اللَّهُ ۚ جَاءَتْهُمْ
رُسُلُهُم بِالْبَيِّنَاتِ فَرَدُّوا أَيْدِيَهُمْ
فِي أَفْوَاهِهِمْ وَقَالُوا إِنَّا كَفَرْنَا بِمَا
أُرْسِلْتُم بِهِ وَإِنَّا لَفِي شَكٍّ مِّمَّا
تَدْعُونَنَا إِلَيْهِ مُرِيبٍ ﴿١٠﴾

ನಂತರದವರ ವೃತ್ತಾಂತಗಳು ನಿಮಗೆ ತಲಪಿಲ್ಲವೇ? ಅವರ ಬಗ್ಗೆ (ಈಗ) ಅಲ್ಲಾಹನ ಹೊರತು ಬೇರೆ ಯಾರೂ ತಿಳಿದಿಲ್ಲ. ಅವರ ಸಂದೇಶವಾಹಕರು ಅವರ ಬಳಿಗೆ ಸ್ಪಷ್ಟವಾದ ಪುರಾವೆಗಳ ಸಹಿತ ಬಂದರು. ಆಗ ಅವರು (ಪರಿಹಾಸ್ಯವಾಗಿ) ತಮ್ಮ ಕೈಗಳನ್ನು ಬಾಯಿಗಿಟ್ಟರು ಮತ್ತು ಹೇಳಿದರು: 'ನೀವು ತಂದ ಸಂದೇಶವನ್ನು ನಾವು ನಿರಾಕರಿಸುತ್ತೇವೆ. ನೀವು ನಮ್ಮನ್ನು ಯಾವುದರ ಕಡೆಗೆ ಕರೆಯುತ್ತೀರೋ ಅದರ ಬಗ್ಗೆ ನಾವು ಕಳವಳಕರವಾದ ಸಂಶಯಕ್ಕೊಳಗಾಗಿದ್ದೇವೆ.

قَالَتْ رُسُلُهُمْ أَفِي اللَّهِ شَكٌّ فَاطِرِ
السَّمَاوَاتِ وَالْأَرْضِ ۖ يَدْعُوكُمْ
لِيَغْفِرَ لَكُم مِّن ذُنُوبِكُمْ وَيُؤَخِّرَكُمْ
إِلَىٰ أَجَلٍ مُّسَمًّى ۚ قَالُوا إِنْ أَنتُمْ إِلَّا
بَشَرٌ مِّثْلُنَا تُرِيدُونَ أَن تَصُدُّونَا
عَمَّا كَانَ يَعْبُدُ آبَاؤُنَا فَأْتُونَا
بِسُلْطَانٍ مُّبِينٍ ﴿١١﴾

11. ಅವರ ಸಂದೇಶವಾಹಕರು ಹೇಳಿದರು: 'ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾದ ಅಲ್ಲಾಹನ ಕುರಿತು ನಿಮಗೆ ಸಂಶಯವೇ? ನಿಮಗೆ ನಿಮ್ಮ ಪಾಪಗಳನ್ನು ಕ್ಷಮಿಸಿಕೊಡಲಿಕ್ಕೂ ಒಂದು ನಿರ್ದಿಷ್ಟ ಸಮಯದ ವರೆಗೆ ನಿಮಗೆ ಕಾಲಾವಧಿ ನೀಡಲಿಕ್ಕೂ ಅವನು ನಿಮ್ಮನ್ನು ಕರೆಯುತ್ತಾನೆ. 'ಅವರು ಹೇಳಿದರು: 'ನೀವು ಸಹ ನಮ್ಮಂತಹ ಮನುಷ್ಯರೇ ಆಗಿದ್ದೀರಿ. ನಮ್ಮ ತಂದೆ ತಾತಂದಿರು ಆರಾಧಿಸುತ್ತಿದ್ದವುಗಳಿಂದ ನಮ್ಮನ್ನು ತಡೆಯಲು ನೀವು ಬಯಸುತ್ತೀರಿ. ಹಾಗಿದ್ದರೆ, ನೀವು ನಮಗೋಸ್ಕರ ಸ್ಪಷ್ಟವಾದ ಪುರಾವೆಗಳನ್ನು ತನ್ನಿರಿ.'

قَالَتْ لَهُمْ رُسُلُهُمْ إِن نَّحْنُ إِلَّا
بَشَرٌ مِّثْلُكُمْ وَلَٰكِنَّ اللَّهَ يَمُنُّ عَلَىٰ
مَن يَشَاءُ مِنْ عِبَادِهِ ۖ وَمَا كَانَ لَنَا أَن
نَّأْتِيَكُم بِسُلْطَانٍ إِلَّا بِإِذْنِ اللَّهِ ۚ وَ
عَلَى اللَّهِ فَلْيَتَوَكَّلِ الْمُؤْمِنُونَ ﴿١٢﴾

12. ಅವರ ಸಂದೇಶವಾಹಕರು ಹೇಳಿದರು: 'ನಾವು ಸಹ ನಿಮ್ಮಂತೆಯೇ ಇರುವ ಮನುಷ್ಯರಾಗಿದ್ದೇವೆ. ಆದರೆ ಅಲ್ಲಾಹನು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅನುಗ್ರಹ ನೀಡುತ್ತಾನೆ. ಅಲ್ಲಾಹನ ಅನುಮತಿ ವಿನಾ ನಿಮಗೊಂದು ಪುರಾವೆಯನ್ನು ತರಲು ನಮ್ಮಿಂದ ಸಾಧ್ಯವಿಲ್ಲ. ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆಯನ್ನಿಡಬೇಕಾಗಿದೆ.

وَمَا لَنَا أَلَّا نَتَوَكَّلَ عَلَى اللَّهِ وَقَدْ
هَدَانَا سُبُلَنَا ۚ وَلَنَصْبِرَنَّ عَلَىٰ مَا

13. 'ನಮ್ಮ ವಿಜಯ ಪಥಗಳಲ್ಲಿ ಅಲ್ಲಾಹನು ನಮ್ಮನ್ನು ನಡೆಸುತ್ತಿರುವಾಗ ಅವನ ಮೇಲೆ ಭರವಸೆ ಇಡದಿರಲಿಕ್ಕೆ ನಮಗೆ ಏನಾಗಿದೆ? ನೀವು ನಮ್ಮ ಮೇಲೆ ಎಸಗುವ ದೌರ್ಜನ್ಯಗಳನ್ನೆಲ್ಲ ನಾವು ಖಂಡಿತವಾಗಿಯೂ





آذَيْتُمُونَا ۚ وَعَلَى اللَّهِ فَلْيَتَوَكَّلِ
الْمُتَوَكِّلُونَ ﴿١٣﴾

ಸಹಿಸಿಕೊಳ್ಳುವೆವು. ಭರವಸೆ ಇಡುವವರು ಅಲ್ಲಾಹನ ಮೇಲೆಯೇ ಭರವಸೆಯನ್ನಿಡಬೇಕು.'

وَقَالَ الَّذِينَ كَفَرُوا لِرُسُلِهِمْ
لَنُخْرِجَنَّكُم مِّنْ أَرْضِنَا أَوْ لَتَعُودُنَّ فِي
مِلَّتِنَا ۖ فَأَوْحَىٰ إِلَيْهِمْ رَبُّهُمْ لَنُهْلِكَنَّ
الظَّالِمِينَ ﴿١٤﴾

14. ಅವಿಶ್ವಾಸಿಗಳು ಅವರ ಸಂದೇಶವಾಹಕರೊಡನೆ ಹೇಳಿದರು: 'ನಾವು ಖಂಡಿತವಾಗಿಯೂ ನಮ್ಮ ಊರಿನಿಂದ ನಿಮ್ಮನ್ನು ಹೊರಹಾಕುವೆವು. ಅಲ್ಲವಾದರೆ ನೀವು ನಮ್ಮ ಧರ್ಮಕ್ಕೆ ಮರಳಿ ಬರಲೇಬೇಕು.' ಆಗ ಅವರ ಪ್ರಭು ಅವರಿಗೆ ಅರುಹಿದನು: 'ಖಂಡಿತವಾಗಿಯೂ (ಈ) ದುಷ್ಕರ್ಮಿಗಳನ್ನು ನಾವು ನಾಶಪಡಿಸುವೆವು.

وَلَنُسْكِنَنَّكُمُ الْأَرْضَ مِن بَعْدِهِمْ ۚ
ذَٰلِكَ لِمَنْ خَافَ مَقَامِي وَخَافَ
وَعِيدِ ﴿١٥﴾

15. 'ಅವರ (ನಾಶದ) ಬಳಿಕ ನಾವು ನಿಮ್ಮನ್ನು ಈ ಊರಿನಲ್ಲಿ ನೆಲೆಸುವಂತೆ ಮಾಡುವೆವು. ಇದು ನನ್ನ ಸ್ಥಾನದ ಕುರಿತು ಭಯಪಡುವವರಿಗೆ ಮತ್ತು ನನ್ನ ಮುನ್ನೆಚ್ಚರಿಕೆಯ ಬಗ್ಗೆ ಭೀತಿಯುಳ್ಳವರಿಗೆ ಇರುವುದಾಗಿದೆ.'

وَاسْتَفْتَحُوا وَخَابَ كُلُّ جَبَّارٍ عَنِيدٍ ﴿١٦﴾

16. ಅವರು (ಪ್ರವಾದಿಗಳು) ವಿಜಯಕ್ಕೋಸ್ಕರ ಪ್ರಾರ್ಥಿಸಿದರು. ಅದರ ಪರಿಣಾಮವಾಗಿ ದುರಂಹಕಾರಿಯಾದ ಪ್ರತಿಯೊಬ್ಬ ಸತ್ಯವಿರೋಧಿ ಪರಾಜಿತನಾದನು.

مِّن وَرَائِهِ جَهَنَّمُ وَيُسْقَىٰ مِن مَّاءٍ
صَدِيدٍ ﴿١٧﴾

17. ಅದರ (ಇಹಲೋಕದ) ಅನಂತರ (ಅವನಿಗೆ) ನರಕವಿದೆ. (ಅಲ್ಲಿ) ಕುದಿಯುವ ನೀರನ್ನು ಅವನಿಗೆ ಕುಡಿಸಲಾಗುವುದು.

يَتَجَرَّعُهُ وَلَا يَكَادُ يُسِيغُهُ وَيَأْتِيهِ
الْمَوْتُ مِن كُلِّ مَكَانٍ وَمَا هُوَ
بِمَيِّتٍ ۖ وَمِن وَرَائِهِ عَذَابٌ غَلِيظٌ ﴿١٨﴾

18. ಅದನ್ನು ಅವನು (ಮನಸ್ಸಿಲ್ಲದೆ) ಸ್ವಲ್ಪ ಸ್ವಲ್ಪವಾಗಿ ಹೀರುವನು; ಸುಲಭವಾಗಿ ಅದನ್ನು ಗಂಟಲಿನಲ್ಲಿ ಇಳಿಸಲಾರನು. ಎಲ್ಲ ದಿಕ್ಕುಗಳಿಂದ ಅವನನ್ನು ಮರಣ ಆವರಿಸುವುದು. ಆದರೆ ಅವನು ಸಾಯಲಾರ. ಮುಂದೆ ಅವನಿಗೆ ಕಠೋರವಾದ ಶಿಕ್ಷೆಯೂ ಇದೆ.

مَّثَلُ الَّذِينَ كَفَرُوا بِرَبِّهِمْ ۖ
أَعْمَالُهُمْ كَرَمَادٍ اشْتَدَّتْ بِهِ

19. ತಮ್ಮ ಪ್ರಭುವನ್ನು ಧಿಕ್ಕರಿಸಿದವರ ಕರ್ಮಗಳ ಹೋಲಿಕೆ - ಬಿರುಗಾಳಿಯ ದಿನದಂದು ಬಿರುಗಾಳಿಗೆ

ತುತ್ತಾದ ಬೂದಿಯ ರಾಶಿಯಂತೆ. ತಾವು ಸಂಪಾದಿಸಿದ್ದರಲ್ಲಿ ಏನನ್ನೂ ಅವರು ಅನುಭವಿಸಲಾರರು. ಅದೇ ಅತಿ ದೊಡ್ಡ ವಿನಾಶವಾಗಿದೆ.

الرِّيْحُ فِيْ يَوْمٍ عَاصِفٍ ؕ لَا يَقْدِرُوْنَ مِمَّا كَسَبُوْا عَلٰى شَيْءٍ ؕ ذٰلِكَ هُوَ الضَّلٰلُ الْبَعِيْدُ ﴿١٩﴾

**20.** ಅಲ್ಲಾಹನು ಆಕಾಶಗಳನ್ನು ಮತ್ತು ಭೂಮಿಯನ್ನು ಯುಕ್ತವಾಗಿಯೇ ಸೃಷ್ಟಿಸಿರುವುದನ್ನು ನೀನು ಕಾಣುವುದಿಲ್ಲವೇ? ಅವನು ಇಚ್ಛಿಸುವುದಾದರೆ ನಿಮ್ಮನ್ನು ಅವನು ನಾಶಪಡಿಸಿ ಒಂದು ಹೊಸ ಸೃಷ್ಟಿಯನ್ನು ತರುವನು.

اَلَمْ تَرَ اَنَّ اللّٰهَ خَلَقَ السَّمٰوٰتِ وَ الْاَرْضَ بِالْحَقِّ ؕ اِنْ يَّشَاْ يُذْهِبْكُمْ وَ يَاْتِ بِخَلْقٍ جَدِيْدٍ ﴿٢٠﴾

**21.** ಅದು ಅಲ್ಲಾಹನಿಗೆ ಕಷ್ಟಕರವಾದ ಕಾರ್ಯವಲ್ಲ.

وَّ مَا ذٰلِكَ عَلَى اللّٰهِ بِعَزِيْزٍ ﴿٢١﴾

**22.** ಅವರೆಲ್ಲರೂ ಅಲ್ಲಾಹನ ಮುಂದೆ ಹಾಜರಾಗುವರು. ಆಗ ಬಲಹೀನರು ದುರಂಹಕಾರದಿಂದ ವರ್ತಿಸಿದವರೊಡನೆ ಹೇಳುವರು: 'ನಾವು ನಿಮ್ಮ ಹಿಂಬಾಲಕರಾಗಿದ್ದೆವಷ್ಟೆ. ಆದ್ದರಿಂದ ಅಲ್ಲಾಹನ ಶಿಕ್ಷೆಯಿಂದ ಸ್ವಲ್ಪಮಟ್ಟಿಗಾದರೂ ನಮ್ಮನ್ನು ಪಾರುಮಾಡಲು ನಿಮ್ಮಿಂದಾಗದೇ?' ಅವರು ಹೇಳುವರು: 'ಅಲ್ಲಾಹನು ನಮಗೆ ಮಾರ್ಗದರ್ಶನ ನೀಡಿರುತ್ತಿದ್ದರೆ ನಾವು ಸಹ ನಿಮಗೆ ಮಾರ್ಗದರ್ಶನ ನೀಡುತ್ತಿದ್ದೆವು. (ಆದರೆ ಈಗ) ನಾವು ಸಹನೆದೋರದಿದ್ದರೂ ಸಹನೆದೋರಿದರೂ ಸಮಾನ. ಪಾರಾಗುವ ಮಾರ್ಗವೇನೂ ನಮಗಿಲ್ಲ.'

وَ بَرَزُوْا لِلّٰهِ جَمِيْعًا فَقَالَ الضُّعَفٰٓؤُا لِلَّذِيْنَ اسْتَكْبَرُوْٓا اِنَّا كُنَّا لَكُمْ تَبَعًا فَهَلْ اَنْتُمْ مُّغْنُوْنَ عَنَّا مِنْ عَذَابِ اللّٰهِ مِنْ شَيْءٍ ؕ قَالُوْا لَوْ هَدٰىنَا اللّٰهُ لَهَدَيْنٰكُمْ ؕ سَوَآءٌ عَلَيْنَآ اَجَزِعْنَآ اَمْ صَبَرْنَا مَا لَنَا مِنْ مَّحِيْصٍ ﴿٢٢﴾

**23.** ಸಂಗತಿಯ ಇತ್ಯರ್ಥವಾದಾಗ ಶೈತಾನನು ಹೇಳುವನು: 'ಅಲ್ಲಾಹನು ನಿಮಗೆ ಸತ್ಯವಾದ ವಾಗ್ದಾನ ಮಾಡಿದ್ದನು. ಆದರೆ ನಾನು ನಿಮ್ಮೊಡನೆ ಮಾಡಿದ ವಾಗ್ದಾನವನ್ನು ನಾನು ನೆರವೇರಿಸಲಿಲ್ಲ. ನನಗೆ ನಿಮ್ಮ ಮೇಲೆ ಏನೂ ಅಧಿಕಾರವಿರಲಿಲ್ಲ - ನಾನು ನಿಮ್ಮನ್ನು ಕರೆದಾಗ ನೀವು ಓಗೊಟ್ಟಿದ್ದೀರಿ, ಅಷ್ಟೇ. ಆದ್ದರಿಂದ ನೀವು ನನ್ನನ್ನು ದೂಷಿಸಬೇಡಿ. ನೀವು ನಿಮ್ಮನ್ನೇ ದೂಷಿಸಿಕೊಳ್ಳಿರಿ. ನಾನು ನಿಮ್ಮನ್ನು ರಕ್ಷಿಸಲಾರೆ. ನೀವು

وَ قَالَ الشَّيْطٰنُ لَمَّا قُضِيَ الْاَمْرُ اِنَّ اللّٰهَ وَعَدَكُمْ وَعْدَ الْحَقِّ وَ وَعَدْتُّكُمْ فَاَخْلَفْتُكُمْ ؕ وَ مَا كَانَ لِيَ عَلَيْكُمْ مِّنْ سُلْطٰنٍ اِلَّآ اَنْ دَعَوْتُكُمْ فَاسْتَجَبْتُمْ لِيْ ۚ فَلَا تَلُوْمُوْنِيْ وَ لُوْمُوْٓا اَنْفُسَكُمْ ؕ مَآ اَنَا بِمُصْرِخِكُمْ وَ مَآ اَنْتُمْ بِمُصْرِخِيَّ ؕ





ನನ್ನನ್ನೂ ರಕ್ಷಿಸಲಾರಿರಿ. ಹಿಂದೆ ನೀವು ನನ್ನನ್ನು (ಅಲ್ಲಾಹನಿಗೆ) ಸಹಭಾಗಿಯನ್ನಾಗಿ ಮಾಡಿದುದನ್ನು ನಾನು ಈಗಾಗಲೇ ಅಲ್ಲಗಳೆದಿದ್ದೇನೆ.' ಅಧರ್ಮಿಗಳಿಗೆ ಖಂಡಿತವಾಗಿಯೂ ಯಾತನಾಮಯವಾದ ಶಿಕ್ಷೆ ಇದೆ.

اِنِّيْ كَفَرْتُ بِمَآ اَشْرَكْتُمُوْنِ مِنْ قَبْلُ ؕ اِنَّ الظّٰلِمِيْنَ لَهُمْ عَذَابٌ اَلِيْمٌ ﴿٢٣﴾

**24.** ಯಾರೂ ವಿಶ್ವಾಸ ಹೊಂದಿ ಸತ್ಕರ್ಮಗಳನ್ನು ಮಾಡುತ್ತಾರೋ ಅವರು ಕೆಳಬದಿಯಲ್ಲಿ ಸರಿತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶಿಸಲ್ಪಡುವರು. ಅವರು ತಮ್ಮ ಪ್ರಭುವಿನ ಅನುಮತಿ ಪ್ರಕಾರ ಅಲ್ಲಿ ಶಾಶ್ವತವಾಗಿ ನೆಲೆಸುವರು. ಅಲ್ಲಿ ಅವರ ಶುಭಾಶಂಸೆ 'ಸಲಾಂ' (ಶಾಂತಿ) ಎಂದಾಗಿರು ವುದು.

وَ اُدْخِلَ الَّذِيْنَ اٰمَنُوْا وَ عَمِلُوا الصّٰلِحٰتِ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا بِاِذْنِ رَبِّهِمْ ؕ تَحِيَّتُهُمْ فِيْهَا سَلٰمٌ ﴿٢٤﴾

**25.** ಒಂದು ಉತ್ತಮ ವಚನವನ್ನು ಅಲ್ಲಾಹನು ಹೇಗೆ ಹೋಲಿಸುತ್ತಾನೆಂದು ನೀನು ಕಾಣಲಿಲ್ಲವೇ? ಬೇರುಗಳು ಭದ್ರವಾಗಿದ್ದುಕೊಂಡು ಶಾಖೆಗಳು ಆಕಾಶದೆಡೆಗೆ ಚಾಚಿಕೊಂಡಿರುವ ಒಂದು ಉತ್ತಮ ವೃಕ್ಷದಂತೆ ಅದರ ಸ್ಥಿತಿಯಾಗಿದೆ.

اَلَمْ تَرَ كَيْفَ ضَرَبَ اللّٰهُ مَثَلًا كَلِمَةً طَيِّبَةً كَشَجَرَةٍ طَيِّبَةٍ اَصْلُهَا ثَابِتٌ وَّ فَرْعُهَا فِي السَّمَآءِ ﴿٢٥﴾

**26.** ಅದರ ಪ್ರಭುವಿನ ಆಜ್ಞೆಯಂತೆ ಅದು ತನ್ನ (ತಾಜಾ) ಫಲಗಳನ್ನು ಸದಾಕಾಲ ನೀಡುತ್ತಿರುತ್ತದೆ.[303] ಜನರು ಚಿಂತಿಸಿ ಮನದಟ್ಟುಮಾಡಿಕೊಳ್ಳಲಿಕ್ಕಾಗಿ ಅಲ್ಲಾಹನು ಉಪಮೆಗಳನ್ನು ನೀಡಿ ವಿವರಿಸಿಕೊಡುತ್ತಾನೆ.

تُؤْتِيْٓ اُكُلَهَا كُلَّ حِيْنٍ بِاِذْنِ رَبِّهَا ؕ وَ يَضْرِبُ اللّٰهُ الْاَمْثَالَ لِلنَّاسِ لَعَلَّهُمْ يَتَذَكَّرُوْنَ ﴿٢٦﴾

**27.** ಒಂದು ಕೆಟ್ಟ ವಚನದ ಉಪಮೆಯು, ನೆಲದ ಮೇಲಿನಿಂದ ಬೇರು ಸಹಿತ ಕಿತ್ತೆಸೆಯಲ್ಪಟ್ಟ, ಯಾವುದೇ ಸ್ಥಿರತೆ ಇಲ್ಲದ ಕೆಟ್ಟ ವೃಕ್ಷದಂತೆಯೂ ಆಗಿದೆ.[304]

وَ مَثَلُ كَلِمَةٍ خَبِيْثَةٍ كَشَجَرَةٍ خَبِيْثَةِ ۨ اجْتُثَّتْ مِنْ فَوْقِ الْاَرْضِ مَا لَهَا مِنْ قَرَارٍ ﴿٢٧﴾

**28.** ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಐಹಿಕ ಜೀವಿತದಲ್ಲೂ ಪರಲೋಕದಲ್ಲೂ ಸ್ಥಿರವಾದ ವಚನ ಮೂಲಕ ಶಕ್ತಿ ನೀಡುತ್ತಾನೆ. ದುಷ್ಕರ್ಮಿಗಳನ್ನು

يُثَبِّتُ اللّٰهُ الَّذِيْنَ اٰمَنُوْا بِالْقَوْلِ الثَّابِتِ فِي الْحَيٰوةِ الدُّنْيَا وَ فِي الْاٰخِرَةِ ۚ

303. ಇಸ್ಲಾಂ ಎಂಬ ಪವಿತ್ರ ವೃಕ್ಷದಲ್ಲಿ ದೈವಿಕ ಸಂಬಂಧವುಳ್ಳ ಸಾತ್ವಿಕರು ಸದಾ ಹುಟ್ಟುತ್ತಾರೆಂದು ಈ ವಚನದಿಂದ ಮನವರಿಕೆಯಾಗುತ್ತದೆ. ಆದರೆ ಈ ವಿಶೇಷತೆ ಬೇರೆ ಧರ್ಮಗಳಲ್ಲಿ ಗೋಚರಿಸಲ್ಪಡುವುದಿಲ್ಲ.

304. ಅದರ ಬೇರು ನೆಲದಲ್ಲಿ ಆಳಕ್ಕೆ ಇಳಿಯದಿರುವುದರಿಂದ ಅದಕ್ಕೆ ಬಲವಿಲ್ಲ. ಅಂದರೆ ನೆಲೆಯೂರಲಿಕ್ಕೆ ಅಗತ್ಯವಾದ ಆಧ್ಯಾತ್ಮಿಕ ಆಧಾರ ಅದಕ್ಕಿಲ್ಲ.

ಅಲ್ಲಾಹನು ದಾರಿತಪ್ಪಲು ಬಿಟ್ಟುಬಿಡುತ್ತಾನೆ. ಅಲ್ಲಾಹನು ತಾನು ಬಯಸಿದಂತೆ ಮಾಡುತ್ತಾನೆ.

وَيُضِلُّ اللّٰهُ الظّٰلِمِيْنَ ۙ وَيَفْعَلُ اللّٰهُ مَا يَشَآءُ ﴿٢٨﴾

**29.** ನೀನು ಕಾಣಲಿಲ್ಲವೇ ಅಲ್ಲಾಹನ ಅನುಗ್ರಹವನ್ನು ಮಿಥ್ಯೆಯಾಗಿ ಮಾರ್ಪಡಿಸುವ ಹಾಗೂ ತಮ್ಮ ಜನತೆಯನ್ನು ವಿನಾಶದ ನೆಲೆನೀಡಿಗೆ ತಳ್ಳಿಬಿಟ್ಟವರನ್ನು?

اَلَمْ تَرَ اِلَى الَّذِيْنَ بَدَّلُوْا نِعْمَتَ اللّٰهِ كُفْرًا وَّاَحَلُّوْا قَوْمَهُمْ دَارَ الْبَوَارِ ﴿٢٩﴾

**30.** (ಅಂದರೆ) ನರಕಕ್ಕೆ! ಅದರಲ್ಲಿ ಅವರು ಸುಡಲ್ಪಡುವರು. ಅದು ಬಲು ನಿಕೃಷ್ಟವಾದ ವಾಸಸ್ಥಳವಾಗಿದೆ.

جَهَنَّمَ ۚ يَصْلَوْنَهَا ۗ وَبِئْسَ الْقَرَارُ ﴿٣٠﴾

**31.** ಅವರು ಜನರನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸಲು ಅವನಿಗೆ ಸರಿಸಾಟಿಗಳನ್ನು ಮಾಡಿಕೊಂಡರು. ಹೇಳು: 'ನೀನು ಸ್ವಲ್ಪಕಾಲ ಸುಖ ಅನುಭವಿಸಿರಿ. ಅನಂತರ ನೀವು ಹೋಗಿ ತಲಪುವುದು ನರಕಕ್ಕೆ.'

وَجَعَلُوْا لِلّٰهِ اَنْدَادًا لِّيُضِلُّوْا عَنْ سَبِيْلِهٖ ۗ قُلْ تَمَتَّعُوْا فَاِنَّ مَصِيْرَكُمْ اِلَى النَّارِ ﴿٣١﴾

**32.** ವಿಶ್ವಾಸ ಹೊಂದಿದ ನನ್ನ ಭಕ್ತದಾಸರೊಡನೆ ಹೇಳು: ಅವರು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಲಿ; ಕೊಡು - ಕೊಳ್ಳುವಿಕೆಯಾಗಲಿ ಮಿತ್ರತ್ವವಾಗಲಿ ಇರಲಾರದ ಒಂದು ದಿನ ಬರುವುದಕ್ಕಿಂತ ಮುಂಚಿತವಾಗಿಯೇ ನಾವು ಅವರಿಗೆ ನೀಡಿದವುಗಳಿಂದ ಅವರು ಗುಪ್ತವಾಗಿಯೂ ಬಹಿರಂಗವಾಗಿಯೂ ಖರ್ಚುಮಾಡಲಿ.

قُلْ لِّعِبَادِيَ الَّذِيْنَ اٰمَنُوْا يُقِيْمُوا الصَّلٰوةَ وَيُنْفِقُوْا مِمَّا رَزَقْنٰهُمْ سِرًّا وَّعَلَانِيَةً مِّنْ قَبْلِ اَنْ يَّاْتِيَ يَوْمٌ لَّا بَيْعٌ فِيْهِ وَلَا خِلٰلٌ ﴿٣٢﴾

**33.** ಅಲ್ಲಾಹನು ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನೂ ಮುಗಿಲಿನಿಂದ ಮಳೆ ಸುರಿಸಿ ಅದರ ಮೂಲಕ ನಿಮಗೆ ಆಹಾರವಾಗಿ ಹಣ್ಣುಹಂಪಲುಗಳನ್ನು ಉತ್ಪಾದಿಸಿದವನೂ ಆಗಿದ್ದಾನೆ. ಸಮುದ್ರದಲ್ಲಿ ಅವನ ಆಜ್ಞೆಯಂತೆ ಚಲಿಸುವ ನೌಕೆಗಳನ್ನು ಸಹ ಅವನು ನಿಮಗೆ ಒದಗಿಸಿಕೊಟ್ಟಿರುವನು. (ನಿಮ್ಮ ಉಪಯೋಗಕ್ಕಾಗಿ) ಅವನು ನದಿಗಳನ್ನೂ ನಿಮಗೆ ಒದಗಿಸಿಕೊಟ್ಟಿರುವನು.

اَللّٰهُ الَّذِيْ خَلَقَ السَّمٰوٰتِ وَالْاَرْضَ وَاَنْزَلَ مِنَ السَّمَآءِ مَآءً فَاَخْرَجَ بِهٖ مِنَ الثَّمَرٰتِ رِزْقًا لَّكُمْ ۚ وَسَخَّرَ لَكُمُ الْفُلْكَ لِتَجْرِيَ فِي الْبَحْرِ بِاَمْرِهٖ ۚ وَسَخَّرَ لَكُمُ الْاَنْهٰرَ ﴿٣٣﴾





**34.** ಅವನು ಸೂರ್ಯನನ್ನೂ ಚಂದ್ರನನ್ನೂ ಅವುಗಳು ನಿರಂತರವಾಗಿ ತಮ್ಮ ಕಾರ್ಯಗಳನ್ನು ನಿರ್ವಹಿಸುವಂತೆ ನಿಮ್ಮ ಪ್ರಯೋಜನಕ್ಕಾಗಿ ಏರ್ಪಾಡು ಮಾಡಿಕೊಟ್ಟಿರುವನು. (ಅದೇ ಪ್ರಕಾರ) ರಾತ್ರಿಯನ್ನೂ ಹಗಲನ್ನೂ ನಿಮಗಾಗಿ ಅವನು ಏರ್ಪಡಿಸಿದ್ದಾನೆ.

وَسَخَّرَ لَكُمُ الشَّمْسَ وَالْقَمَرَ دَآئِبَيْنِ ۚ وَسَخَّرَ لَكُمُ الَّيْلَ وَالنَّهَارَ ﴿٣٤﴾

**35.** ನೀವು ಅವನಿಂದ ಬೇಡಿದ್ದನ್ನೆಲ್ಲ ಅವನು ನಿಮಗೆ ಒದಗಿಸಿರುವನು. ಅಲ್ಲಾಹನ ಅನುಗ್ರಹಗಳನ್ನು ಎಣಿಕೆಮಾಡಲು ನೀವು ಪ್ರಯತ್ನಿಸಿದರೆ ಅವನ್ನೆಲ್ಲ ಲೆಕ್ಕಹಾಕಲು ನಿಮ್ಮಿಂದ ಸಾಧ್ಯವಿಲ್ಲ. ದಿಟವಾಗಿಯೂ ಮನುಷ್ಯನು ಅಕ್ರಮಗಾರನೂ ಕೃತಘ್ನನೂ ಆಗಿದ್ದಾನೆ.

وَاٰتٰىكُمْ مِّنْ كُلِّ مَا سَاَلْتُمُوْهُ ۗ وَاِنْ تَعُدُّوْا نِعْمَتَ اللّٰهِ لَا تُحْصُوْهَا ۗ اِنَّ الْاِنْسَانَ لَظَلُوْمٌ كَفَّارٌ ﴿٣٥﴾

**36.** ಇಬ್‌ರಾಹೀಂ (ಪ್ರಾರ್ಥಿಸುತ್ತಾ) ಹೇಳಿದ ಸಂದರ್ಭ (ಜ್ಞಾಪಿಸಿರಿ): 'ನನ್ನ ಪ್ರಭೂ, ಈ ನಾಡನ್ನು ಶಾಂತಿಯ ಬೀಡಾಗಿ ಮಾಡು. ವಿಗ್ರಹಗಳ ಆರಾಧನೆಯಿಂದ ನನ್ನನ್ನೂ ನನ್ನ ಸಂತತಿಗಳನ್ನೂ ದೂರ ಮಾಡು.

وَاِذْ قَالَ اِبْرٰهِيْمُ رَبِّ اجْعَلْ هٰذَا الْبَلَدَ اٰمِنًا وَّاجْنُبْنِيْ وَبَنِيَّ اَنْ نَّعْبُدَ الْاَصْنَامَ ﴿٣٦﴾

**37.** 'ನನ್ನ ಪ್ರಭೂ, ಅವು ಅನೇಕ ಜನರನ್ನು ದಾರಿ ತಪ್ಪಿಸಿವೆ. ಯಾರು ನನ್ನನ್ನು ಅನುಸರಿಸುತ್ತಾನೋ ಅವನು ನಮ್ಮೊಂದಿಗೆ ಸೇರಿದವನಾಗುತ್ತಾನೆ. ಯಾರಾದರೂ ನನ್ನನ್ನು ಅನುಸರಿಸದಿದ್ದರೆ, ನೀನು ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಿಯಷ್ಟೆ.

رَبِّ اِنَّهُنَّ اَضْلَلْنَ كَثِيْرًا مِّنَ النَّاسِ ۚ فَمَنْ تَبِعَنِيْ فَاِنَّهٗ مِنِّيْ ۚ وَمَنْ عَصَانِيْ فَاِنَّكَ غَفُوْرٌ رَّحِيْمٌ ﴿٣٧﴾

**38.** 'ನಮ್ಮ ಪ್ರಭೂ, ನನ್ನ ಸಂತಾನಗಳಲ್ಲಿ ಕೆಲವರನ್ನು ನಿನ್ನ ಪವಿತ್ರ ಗೃಹದ ಸಮೀಪವಿರುವ ಬಂಜರು ಕಣಿವೆ ಪ್ರದೇಶದಲ್ಲಿ ನೆಲೆಸುವಂತೆ ನಾನು ಮಾಡಿರುತ್ತೇನೆ. ನಮ್ಮ ಪ್ರಭೂ, ಅವರು (ಆ ಪವಿತ್ರ ಗೃಹದಲ್ಲಿ) ಪ್ರಾರ್ಥನೆಯನ್ನು ನೆಲೆಗೊಳಿಸಲಿಕ್ಕಾಗಿ ನಾನು ಹಾಗೆ ಮಾಡಿದ್ದು. ಆದ್ದರಿಂದ ಜನಹೃದಯಗಳು ಅವರೆಡೆಗೆ ಒಲಿಯುವಂತೆ ಮಾಡು. ಅವರು ಕೃತಜ್ಞತೆಯುಳ್ಳವರಾಗಲಿಕ್ಕಾಗಿ ಹಣ್ಣು ಹಂಪಲುಗಳಿಂದ ಅವರಿಗೆ ಆಹಾರವನ್ನೂ ಒದಗಿಸಿಕೊಡು.

رَبَّنَآ اِنِّيْٓ اَسْكَنْتُ مِنْ ذُرِّيَّتِيْ بِوَادٍ غَيْرِ ذِيْ زَرْعٍ عِنْدَ بَيْتِكَ الْمُحَرَّمِ ۙ رَبَّنَا لِيُقِيْمُوا الصَّلٰوةَ فَاجْعَلْ اَفْئِدَةً مِّنَ النَّاسِ تَهْوِيْٓ اِلَيْهِمْ وَارْزُقْهُمْ مِّنَ الثَّمَرٰتِ لَعَلَّهُمْ يَشْكُرُوْنَ ﴿٣٨﴾

**39.** 'ನಮ್ಮ ಪ್ರಭೂ, ನಾವು ಅಡಗಿಸಿಡುವುದನ್ನೂ ನಾವು ಬಹಿರಂಗಪಡಿಸುವುದನ್ನೂ ಖಂಡಿತವಾಗಿಯೂ ನೀನು ಬಲ್ಲೆ. ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ ಅಲ್ಲಾಹನಿಂದ ಮರೆಯಾಗಿರುವ ಏನೂ ಇಲ್ಲ.

رَبَّنَآ اِنَّكَ تَعۡلَمُ مَا نُخۡفِيۡ وَمَا نُعۡلِنُ ؕ وَمَا يَخۡفٰى عَلَى اللّٰهِ مِنۡ شَيۡءٍ فِى الۡاَرۡضِ وَلَا فِى السَّمَآءِ ﴿۳۹﴾

**40.** 'ವೃದ್ಧಾಪ್ಯದಲ್ಲಿರುವ ನನಗೆ ಇಸ್ಮಾಈಲ್ ಮತ್ತು ಇಸ್‌ಹಾಖ್‌ರನ್ನು ದಯಪಾಲಿಸಿದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು. ಖಂಡಿತವಾಗಿಯೂ ನನ್ನ ಪ್ರಭು ಪ್ರಾರ್ಥನೆಯನ್ನು ಆಲಿಸುವವನಾಗಿದ್ದಾನೆ.

اَلۡحَمۡدُ لِلّٰهِ الَّذِىۡ وَهَبَ لِىۡ عَلَى الۡكِبَرِ اِسۡمٰعِيۡلَ وَاِسۡحٰقَ ؕ اِنَّ رَبِّىۡ لَسَمِيۡعُ الدُّعَآءِ ﴿۴۰﴾

**41.** 'ನನ್ನ ಪ್ರಭೂ, ನೀನು ನನ್ನನ್ನು, ಪ್ರಾರ್ಥನೆಯನ್ನು ನಿಷ್ಠೆಯಿಂದ ನಿರ್ವಹಿಸುವವನನ್ನಾಗಿ ಮಾಡು; ನನ್ನ ಸಂತಾನಗಳನ್ನು ಸಹ. ನಮ್ಮ ಪ್ರಭೂ, ನನ್ನ ಪ್ರಾರ್ಥನೆಯನ್ನು ನೀನು ಸ್ವೀಕರಿಸು.

رَبِّ اجۡعَلۡنِىۡ مُقِيۡمَ الصَّلٰوةِ وَمِنۡ ذُرِّيَّتِىۡ ۖ رَبَّنَا وَتَقَبَّلۡ دُعَآءِ ﴿۴۱﴾

**42.** 'ನಮ್ಮ ಪ್ರಭೂ, ವಿಚಾರಣೆಯ ದಿನದಂದು ನೀನು ನನಗೂ ನನ್ನ ಮಾತಪಿತರಿಗೂ ಸತ್ಯವಿಶ್ವಾಸಿಗಳಿಗೂ ಕ್ಷಮೆ ನೀಡು.'

رَبَّنَا اغۡفِرۡ لِىۡ وَلِوَالِدَىَّ وَلِلۡمُؤۡمِنِيۡنَ يَوۡمَ يَقُوۡمُ الۡحِسَابُ ﴿۴۲﴾ ع 18

**43.** ದೌರ್ಜನ್ಯಗಾರರ ಕೃತ್ಯಗಳನ್ನು ಅಲ್ಲಾಹನು ಗಮನಿಸುವುದಿಲ್ಲವೆಂದು ನೀನು ಎಂದಿಗೂ ಭಾವಿಸಬೇಡ. ಎವೆಯಿಕ್ಕದ ಕಣ್ಣುಗಳಿಂದ ಅವರು ನೋಡುವಂತಹ ದಿನ ಬರುವ ತನಕ ಅವನು ಕಾಲಾವಕಾಶ ನೀಡಿದ್ದಾನೆ.

وَلَا تَحۡسَبَنَّ اللّٰهَ غَافِلًا عَمَّا يَعۡمَلُ الظّٰلِمُوۡنَ ؕ اِنَّمَا يُؤَخِّرُهُمۡ لِيَوۡمٍ تَشۡخَصُ فِيۡهِ الۡاَبۡصَارُ ۙ ﴿۴۳﴾

**44.** ಅವರು ತಮ್ಮ ತಲೆಗಳನ್ನು ಮೇಲಕ್ಕೆತ್ತಿ ಭಯಭೀತಿಯಿಂದ ಓಡುತ್ತಿರುವಾಗ ಅವರ ದೃಷ್ಟಿ ಅವರೆಡೆಗೆ ಮರಳಲಾರವು. ಅವರ ಹೃದಯಗಳು ಸಹ ಬರಿದಾಗಿರುವುವು.

مُهۡطِعِيۡنَ مُقۡنِعِىۡ رُءُوۡسِهِمۡ لَا يَرۡتَدُّ اِلَيۡهِمۡ طَرۡفُهُمۡ ۚ وَاَفۡـِٕدَتُهُمۡ هَوَآءٌ ؕ ﴿۴۴﴾

**45.** ಜನರಿಗೆ ಶಿಕ್ಷೆ ಬಂದೆರಗುವ ದಿನದ ಬಗ್ಗೆ ಅವರಿಗೆ ಮುನ್ನೆಚ್ಚರಿಕೆ ನೀಡು. (ಶಿಕ್ಷೆಗೆ ಈಡಾಗುವಾಗ) ಅಧರ್ಮಿಗಳು ಹೇಳುವರು: 'ನಮ್ಮ ಪ್ರಭೂ ನಮಗೆ

وَاَنۡذِرِ النَّاسَ يَوۡمَ يَاۡتِيۡهِمُ الۡعَذَابُ فَيَقُوۡلُ الَّذِيۡنَ ظَلَمُوۡا رَبَّنَاۤ اَخِّرۡنَاۤ اِلٰٓى





ನೀನು ಸ್ವಲ್ಪ ಕಾಲಾವಕಾಶವನ್ನು ನೀಡು. ನಾವು ನಿನ್ನ ಕರೆಗೆ ಓಗೊಡುವೆವು. ಮತ್ತು ಸಂದೇಶವಾಹಕರನ್ನು ಅನುಸರಿಸುವೆವು.' (ಆಗ ಅಲ್ಲಾಹನು ಕೇಳುವನು:) 'ನಿಮ್ಮಿಂದ ಯಾವುದೇ ಲೋಪದೋಷ ಉಂಟಾಗಲಾರದೆಂದು ನೀವು ಮೊದಲು ಸಹ ಪ್ರತಿಜ್ಞೆ ಮಾಡಿರಲಿಲ್ಲವೇ?

اَجَلٍ قَرِيۡبٍ ۙ نُّجِبۡ دَعۡوَتَكَ وَنَتَّبِعِ الرُّسُلَ ؕ اَوَلَمۡ تَكُوۡنُوۡۤا اَقۡسَمۡتُمۡ مِّنۡ قَبۡلُ مَا لَكُمۡ مِّنۡ زَوَالٍ ۙ ﴿۴۵﴾

**46.** 'ತಮ್ಮ ಆತ್ಮಗಳಿಗೆ ದ್ರೋಹವೆಸಗಿದವರ ವಾಸಸ್ಥಳಗಳಲ್ಲಿ ನೀವೂ ವಾಸಹೂಡಿರುವಿರಿ. ನಾವು ಅವರೊಡನೆ ಹೇಗೆ ವರ್ತಿಸಿದ್ದೇವೆಂದು ಸಹ ನಿಮಗೆ ಸ್ಪಷ್ಟವಾಗಿ ಮನವರಿಕೆಯಾಗಿದೆ. ನಾವು ನಿಮಗೆ ಉದಾಹರಣೆ ಸಹಿತವೂ ವಿವರಿಸಿಕೊಟ್ಟಿದ್ದೇವೆ.'

وَّسَكَنۡتُمۡ فِىۡ مَسٰكِنِ الَّذِيۡنَ ظَلَمُوۡۤا اَنۡفُسَهُمۡ وَتَبَيَّنَ لَكُمۡ كَيۡفَ فَعَلۡنَا بِهِمۡ وَضَرَبۡنَا لَكُمُ الۡاَمۡثَالَ ﴿۴۶﴾

**47.** ಅವರು ತಮ್ಮ ಕುತಂತ್ರಗಳನ್ನು ಪ್ರಯೋಗಿಸಿದರು. ಅವರ ಕುತಂತ್ರಗಳು ಪರ್ವತಗಳನ್ನು ಸ್ಥಾನಪಲ್ಲಟಗೊಳಿಸುವಂತಿದ್ದರೂ ಅವರ ಕುತಂತ್ರಗಳು ಅಲ್ಲಾಹನ ಬಳಿ ಇವೆ.[305]

وَقَدۡ مَكَرُوۡا مَكۡرَهُمۡ وَعِنۡدَ اللّٰهِ مَكۡرُهُمۡ ؕ وَاِنۡ كَانَ مَكۡرُهُمۡ لِتَزُوۡلَ مِنۡهُ الۡجِبَالُ ﴿۴۷﴾

**48.** ಆದ್ದರಿಂದ ಅಲ್ಲಾಹನು ತನ್ನ ಸಂದೇಶವಾಹಕರಿಗೆ ನೀಡಿದ ವಾಗ್ದಾನವನ್ನು ಮುರಿಯುವನೆಂದು ನೀನು ಎಂದಿಗೂ ಭಾವಿಸಬೇಡ. ಅಲ್ಲಾಹನು ಪ್ರತಾಪಶಾಲಿಯೂ ತಕ್ಕ ಪ್ರತಿಫಲ ಕೊಡುವವನೂ ಆಗಿದ್ದಾನೆ.

فَلَا تَحۡسَبَنَّ اللّٰهَ مُخۡلِفَ وَعۡدِهٖ رُسُلَهٗ ؕ اِنَّ اللّٰهَ عَزِيۡزٌ ذُوۡ انۡتِقَامٍ ؕ ﴿۴۸﴾

**49.** ಈ ಭೂಮಿ ಬೇರೊಂದು ಭೂಮಿಯಾಗಿ ಮಾರ್ಪಾಟುಗೊಳ್ಳುವ ಹಾಗೂ ಆಕಾಶಗಳು ಸಹ ಮಾರ್ಪಾಟುಗೊಳ್ಳುವ ದಿನದಂದು ಏಕನೂ ಸರ್ವೋನ್ನತನೂ ಆದ ಅಲ್ಲಾಹನ ಮುಂದೆ ಅವರು ಹಾಜರಾಗುವರು.

يَوۡمَ تُبَدَّلُ الۡاَرۡضُ غَيۡرَ الۡاَرۡضِ وَالسَّمٰوٰتُ وَبَرَزُوۡا لِلّٰهِ الۡوَاحِدِ الۡقَهَّارِ ﴿۴۹﴾

**50.** ಅಂದು ಪಾಪಿಗಳನ್ನು ಸಂಕೋಲೆಗಳಲ್ಲಿ ಬಂಧಿಸಿಟ್ಟಿರುವುದನ್ನು ನೀನು ಕಾಣುವೆ.

وَتَرَى الۡمُجۡرِمِيۡنَ يَوۡمَـئِذٍ مُّقَرَّنِيۡنَ فِى الۡاَصۡفَادِ ۚ ﴿۵۰﴾

**51.** ಅವರ ಉಡುಪುಗಳು ಕಪ್ಪುರಾಳದ್ದಾಗಿರುವುವು.

سَرَابِيۡلُهُمۡ مِّنۡ قَطِرَانٍ وَّتَغۡشٰى

305. ಅವರ ಕುತಂತ್ರಗಳ ಪರಿಣಾಮಗಳು ಅಲ್ಲಾಹನ ನಿಯಂತ್ರಣದಲ್ಲಿದೆ ಎಂದು ತಾತ್ಪರ್ಯ.

وُجُوْهَهُمُ النَّارُ ﴿٥٠﴾

ಬೆಂಕಿಯ ಜ್ವಾಲೆ ಅವರ ಮುಖಗಳನ್ನು ಆವರಿಸುವುದು.

لِيَجْزِيَ اللّٰهُ كُلَّ نَفْسٍ مَّا كَسَبَتْ ؕ اِنَّ اللّٰهَ سَرِيْعُ الْحِسَابِ ﴿٥١﴾

**52.** ಇದು, ಪ್ರತಿಯೊಂದು ಆತ್ಮಕ್ಕೂ ಅದು ಸಂಪಾದಿಸಿದ ಪ್ರತಿಫಲವನ್ನು ಅಲ್ಲಾಹನು ನೀಡಲಿಕ್ಕಾಗಿದೆ. ನಿಶ್ಚಯವಾಗಿಯೂ ಅಲ್ಲಾಹನು ಶೀಘ್ರವಾಗಿ ಲೆಕ್ಕ ತೆಗೆಯುವವನಾಗಿದ್ದಾನೆ.

هٰذَا بَلٰغٌ لِّلنَّاسِ وَلِيُنْذَرُوْا بِهٖ وَلِيَعْلَمُوْۤا اَنَّمَا هُوَ اِلٰهٌ وَّاحِدٌ وَّلِيَذَّكَّرَ اُولُوا الْاَلْبَابِ ﴿٥٢﴾

**53.** ಇದು ಎಲ್ಲ ಮಾನವರಿಗೋಸ್ಕರ ಒಂದು ಸಂಪೂರ್ಣ ಉಪದೇಶವಾಗಿದೆ - ಇದರ ಮೂಲಕ ಅವರಿಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿಯೂ ಅವನು ಏಕನಾದ ದೇವನೆಂದು ಅವರು ತಿಳಿಯಲಿಕ್ಕಾಗಿಯೂ ಬುದ್ಧಿಶಾಲಿಗಳು ಚಿಂತಿಸಲಿಕ್ಕಾಗಿಯೂ.

سُوْرَةُ الْحِجْرِ مَكِّيَّةٌ وَّهِيَ مَعَ الْبَسْمَلَةِ مِائَةُ اٰيَةٍ وَّسِتَّةُ رُكُوْعَاتٍ

## 15. ಅಲ್‌ಹಿಜ್ರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 100 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಅಲಿಫ್ ಲಾಂ ರಾ.**[306] **ಪ್ರಮಾಣೀಕರಿಸುವ ಹಾಗೂ** ಪರಿಪೂರ್ಣ **ಗ್ರಂಥವಾದ ಖುರ್‌ಆನಿನ ವಚನಗಳಿವು.**

الٓرٰ تِلْكَ اٰيٰتُ الْكِتٰبِ وَقُرْاٰنٍ مُّبِيْنٍ ﴿٢﴾

**3. ತಾವು ಮುಸ್ಲಿಂ ಆಗಿದ್ದರೆ** (ಪೂರ್ಣವಾಗಿ ದೇವನಿಗೆ ಶರಣಾಗುವವರು ಆಗಿದ್ದರೆ) **ಎಷ್ಟು ಚೆನ್ನಾಗಿತ್ತು ಎಂದು ಅವಿಶ್ವಾಸಿಗಳು ಪದೇ ಪದೇ ಬಯಸುವರು.**

رُبَمَا يَوَدُّ الَّذِيْنَ كَفَرُوْا لَوْ كَانُوْا مُسْلِمِيْنَ ﴿٣﴾

**4. ಅವರನ್ನು** (ಅವರಷ್ಟಕ್ಕೆ) **ಬಿಟ್ಟುಬಿಡಿರಿ. ಅವರು ತಿಂದು ಕುಡಿದು ಸುಖಪಟ್ಟು, ವ್ಯಾಮೋಹಗಳು ಅವರನ್ನು ನಿರ್ಲಕ್ಷ್ಯರನ್ನಾಗಿ ಮಾಡಲಿ. ಆದರೆ ಅವರು ಶೀಘ್ರದಲ್ಲೇ ತಿಳಿದುಕೊಳ್ಳುವರು.**

ذَرْهُمْ يَاْكُلُوْا وَيَتَمَتَّعُوْا وَيُلْهِهِمُ الْاَمَلُ فَسَوْفَ يَعْلَمُوْنَ ﴿٤﴾

**5. ಗೊತ್ತುಪಡಿಸಲಾದ ಒಂದು ನಿಶ್ಚಿತ ವಿಧಿ ವಿನಾ ಯಾವುದೇ ನಾಡನ್ನು ನಾವು ನಾಶಪಡಿಸಲಿಲ್ಲ.**

وَمَآ اَهْلَكْنَا مِنْ قَرْيَةٍ اِلَّا وَلَهَا كِتَابٌ مَّعْلُوْمٌ ﴿٥﴾

**6. ಯಾವುದೇ ಸಮುದಾಯ ಅದರ** (ನಾಶದ) **ಕಾಲಾವಧಿಯನ್ನು ದಾಟಿ ಹೋಗದು. ಹಾಗೆಯೇ ಕಾಲಾವಧಿಗೆ ಮುಂಚಿತವಾಗಿ ಕೂಡ** (ನಾಶಗೊಳ್ಳದು).

مَا تَسْبِقُ مِنْ اُمَّةٍ اَجَلَهَا وَمَا يَسْتَاْخِرُوْنَ ﴿٦﴾

**7. ಅವರು ಹೇಳಿದರು: 'ಎಲೈ ಈ ಉಪದೇಶ ನೀಡಲ್ಪಟ್ಟವನೇ, ಖಂಡಿತವಾಗಿಯೂ ನೀನೊಬ್ಬ ಹುಚ್ಚನೇ ಸರಿ.**

وَقَالُوْا يٰٓاَيُّهَا الَّذِيْ نُزِّلَ عَلَيْهِ الذِّكْرُ اِنَّكَ لَمَجْنُوْنٌ ﴿٧﴾

306. "ಅಲ ಅಲ್ಲಾಹು ಅರಾ" = ನಾನು ಅಲ್ಲಾಹ್ ಎಲ್ಲವನ್ನೂ ಕಾಣುವವನಾಗಿದ್ದೇನೆ. (2ನೇ ಅಧ್ಯಾಯ 2ನೇ ವಚನದ ಟಿಪ್ಪಣಿ ನೋಡಿರಿ.)





**8. 'ನೀನು ಸತ್ಯವಂತನೆಂದಾದರೆ ಯಾಕೆ ನಮ್ಮ ಬಳಿಗೆ ನೀನು ದಿವ್ಯದೂತರನ್ನು** (ಮಲಾಯಿಕ್) **ಕರೆ ತರುವುದಿಲ್ಲ?'**

لَوْ مَا تَاْتِيْنَا بِالْمَلٰٓئِكَةِ اِنْ كُنْتَ مِنَ الصّٰدِقِيْنَ ﴿٨﴾

**9. ಸರಿಯಾದ ಅವಶ್ಯಕ್ಕಾಗಿ ಹೊರತು ನಾವು ದಿವ್ಯದೂತರನ್ನು ಇಳಿಸುವುದಿಲ್ಲ. ಆ ಬಳಿಕ ಅವರಿಗೆ ಕಾಲಾವಕಾಶವನ್ನೂ ನೀಡಲಾಗುವುದಿಲ್ಲ.**

مَا نُنَزِّلُ الْمَلٰٓئِكَةَ اِلَّا بِالْحَقِّ وَمَا كَانُوْٓا اِذًا مُّنْظَرِيْنَ ﴿٩﴾

**10. ದಿಟವಾಗಿಯೂ ನಾವೇ ಈ ಉಪದೇಶವನ್ನು ಅವತೀರ್ಣಗೊಳಿಸಿದ್ದು. ಖಂಡಿತವಾಗಿಯೂ ನಾವೇ ಅದನ್ನು ಸಂರಕ್ಷಿಸುವೆವು.**

اِنَّا نَحْنُ نَزَّلْنَا الذِّكْرَ وَاِنَّا لَهٗ لَحٰفِظُوْنَ ﴿١٠﴾

**11. ನಿನಗಿಂತ ಮುಂಚೆ ಪೂರ್ವಿಕರ ಹಲವು ಜನಾಂಗಗಳಲ್ಲಿ ಸಹ ನಾವು** (ಪ್ರವಾದಿಗಳನ್ನು) **ಕಳುಹಿಸಿದ್ದೇವೆ.**

وَلَقَدْ اَرْسَلْنَا مِنْ قَبْلِكَ فِيْ شِيَعِ الْاَوَّلِيْنَ ﴿١١﴾

**12. ಅವರ ಪರಿಹಾಸ್ಯಕ್ಕೆ ಗುರಿಯಾಗದೆ ಯಾವ ಸಂದೇಶವಾಹಕನೂ ಅವರ ಬಳಿಗೆ ಬಂದಿಲ್ಲ.**

وَمَا يَاْتِيْهِمْ مِّنْ رَّسُوْلٍ اِلَّا كَانُوْا بِهٖ يَسْتَهْزِءُوْنَ ﴿١٢﴾

**13. ಇದೇ ರೀತಿಯಲ್ಲಿ ಇದನ್ನು** (ಪರಿಹಾಸ್ಯ ಮಾಡುವ ಸ್ವಭಾವವನ್ನು) **ಪಾಪಿಗಳ ಹೃದಯಗಳಲ್ಲಿ ನಾವು ರೂಢಮೂಲಗೊಳಿಸುತ್ತೇವೆ.**

كَذٰلِكَ نَسْلُكُهٗ فِيْ قُلُوْبِ الْمُجْرِمِيْنَ ﴿١٣﴾

**14. ಅದನ್ನು ಅವರು ನಂಬುವುದಿಲ್ಲ. ಪೂರ್ವಿಕರಿಂದಲೇ ಇಂತಹ ವರ್ತನೆ ನಡೆದು ಬಂದಿದೆ.**

لَا يُؤْمِنُوْنَ بِهٖ وَقَدْ خَلَتْ سُنَّةُ الْاَوَّلِيْنَ ﴿١٤﴾

**15. ನಾವು ಅವರಿಗೆ ಆಕಾಶದ ಬಾಗಿಲನ್ನು ತೆರೆದು ಕೊಟ್ಟು, ಅದರ ಮೂಲಕ ಅವರು ಮೇಲೇರುತ್ತಿದ್ದರೆ** (ಸಹ) **-**

وَلَوْ فَتَحْنَا عَلَيْهِمْ بَابًا مِّنَ السَّمَآءِ فَظَلُّوْا فِيْهِ يَعْرُجُوْنَ ﴿١٥﴾

**16. ಅವರು ಹೇಳುವರು: 'ನಮ್ಮ ಕಣ್ಣುಗಳಿಗೆ ಮಂಕುಗವಿದಿದೆ. ನಾವು ಮೋಡಿಗೊಳಿಸಲ್ಪಟ್ಟವರಾಗಿದ್ದೇವೆ.'**

لَقَالُوْٓا اِنَّمَا سُكِّرَتْ اَبْصَارُنَا بَلْ نَحْنُ قَوْمٌ مَّسْحُوْرُوْنَ ﴿١٦﴾ ع

**17.** ನಾವು ಆಕಾಶದಲ್ಲಿ ಹಲವು ನಕ್ಷತ್ರ ಪುಂಜಗಳನ್ನು ರೂಪಿಸಿದ್ದೇವೆ ಹಾಗೂ ನಾವು ಅವುಗಳನ್ನು ವೀಕ್ಷಕರಿಗೆ ಸುಂದರಮಯಗೊಳಿಸಿದ್ದೇವೆ.

وَلَقَدْ جَعَلْنَا فِي السَّمَاءِ بُرُوجًا وَزَيَّنَّاهَا لِلنَّاظِرِينَ ﴿١٦﴾

**18.** ತಿರಸ್ಕರಿಸಲ್ಪಟ್ಟ ಪ್ರತಿಯೊಬ್ಬ ಶೈತಾನನಿಂದ ನಾವು ಅವುಗಳನ್ನು ಸುರಕ್ಷಿತಗೊಳಿಸಿದ್ದೇವೆ.

وَحَفِظْنَاهَا مِنْ كُلِّ شَيْطَانٍ رَجِيمٍ ﴿١٧﴾

**19.** ಆದರೆ ಯಾರಾದರೂ (ದಿವ್ಯ ವಚನಗಳನ್ನು) ಕದ್ದಾಲಿಸಿದರೆ[307] ಆಗ ಅವನನ್ನು ಒಂದು ಪ್ರಕಾಶಮಾನವಾದ ಜ್ವಾಲೆ ಬೆನ್ನಟ್ಟುವುದು.

إِلَّا مَنِ اسْتَرَقَ السَّمْعَ فَأَتْبَعَهُ شِهَابٌ مُبِينٌ ﴿١٨﴾

**20.** ನಾವು ಭೂಮಿಯನ್ನು ವಿಶಾಲಗೊಳಿಸಿ ಅದರಲ್ಲಿ ಭದ್ರವಾದ ಪರ್ವತಗಳನ್ನು ನೆಲೆಗೊಳಿಸಿದ್ದೇವೆ ಹಾಗೂ ತಕ್ಕುದಾದ ಪ್ರಮಾಣದಲ್ಲಿ ಅದರಲ್ಲಿ ಎಲ್ಲವೂ ಬೆಳೆಯುವಂತೆ ಮಾಡಿದ್ದೇವೆ.

وَالْأَرْضَ مَدَدْنَاهَا وَأَلْقَيْنَا فِيهَا رَوَاسِيَ وَأَنْبَتْنَا فِيهَا مِنْ كُلِّ شَيْءٍ مَوْزُونٍ ﴿١٩﴾

**21.** ನಿಮಗೂ ನೀವು ಆಹಾರ ನೀಡದ (ಇತರ ಜೀವಿಗಳಿಗೂ) ನಾವು ಅದರಲ್ಲಿ ಜೀವನಾಧಾರಗಳನ್ನು ಏರ್ಪಡಿಸಿದ್ದೇವೆ.

وَجَعَلْنَا لَكُمْ فِيهَا مَعَايِشَ وَمَنْ لَسْتُمْ لَهُ بِرَازِقِينَ ﴿٢٠﴾

**22.** ಯಾವುದೇ ವಸ್ತುವಿನ ಭಂಡಾರ ನಮ್ಮ ಬಳಿ ಇಲ್ಲದಿರುವುದಿಲ್ಲ. ಆದರೆ ನಿರ್ದಿಷ್ಟ ಪ್ರಮಾಣದಲ್ಲಿ ಹೊರತು ನಾವು ಅದನ್ನು ಒದಗಿಸುವುದಿಲ್ಲ.

وَإِنْ مِنْ شَيْءٍ إِلَّا عِنْدَنَا خَزَائِنُهُ وَمَا نُنَزِّلُهُ إِلَّا بِقَدَرٍ مَعْلُومٍ ﴿٢١﴾

**23.** ತೇವಾಂಶದಿಂದ ಕೂಡಿದ ವಾಯು ಬೀಸುವಂತೆ ನಾವು ಮಾಡುತ್ತೇವೆ ಮತ್ತು ಮುಗಿಲಿನಿಂದ ಮಳೆ ಸುರಿಸುತ್ತೇವೆ. ಅನಂತರ ಅದನ್ನು ನಾವು ನಿಮಗೆ ಕುಡಿಯಲು ಒದಗಿಸುತ್ತೇವೆ. ಆದರೆ ನೀವು ಅದರ ಸಂರಕ್ಷಕರಲ್ಲ.

وَأَرْسَلْنَا الرِّيَاحَ لَوَاقِحَ فَأَنْزَلْنَا مِنَ السَّمَاءِ مَاءً فَأَسْقَيْنَاكُمُوهُ وَمَا أَنْتُمْ لَهُ بِخَازِنِينَ ﴿٢٢﴾

**24.** ದಿಟವಾಗಿಯೂ ಜೀವನೀಡುವವರೂ ಮರಣಪಡಿಸುವವರೂ ನಾವೇ ಆಗಿದ್ದೇವೆ. ವಾರೀಸುದಾರರು ಸಹ ನಾವೇ.

وَإِنَّا لَنَحْنُ نُحْيِي وَنُمِيتُ وَنَحْنُ الْوَارِثُونَ ﴿٢٣﴾

307. ಅಂದರೆ, ದಿವ್ಯ ವಚನಗಳನ್ನು ಆಲಿಸಿದ ಬಳಿಕ ಅವುಗಳನ್ನು ತಿರುಚಿ ಪ್ರಚುರಪಡಿಸಿದರೆ.





**25.** ನಿಮ್ಮ ಪೈಕಿ ಮುಂದಕ್ಕೆ ಹೋಗುವವರು ಯಾರೆಂದು ನಮಗೆ ಗೊತ್ತಿದೆ. ಹಿಂದೆ ಉಳಿಯುವವರು ಯಾರೆಂದು ಸಹ ನಮಗೆ ಗೊತ್ತಿದೆ.

وَلَقَدْ عَلِمْنَا الْمُسْتَقْدِمِينَ مِنْكُمْ وَلَقَدْ عَلِمْنَا الْمُسْتَأْخِرِينَ ﴿٢٤﴾

**26.** ನಿಶ್ಚಯವಾಗಿಯೂ ನಿನ್ನ ಪ್ರಭುವೇ ಅವರನ್ನೆಲ್ಲ ಒಟ್ಟು ಸೇರಿಸುವವನು. ದಿಟವಾಗಿಯೂ ಅವನು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.

وَإِنَّ رَبَّكَ هُوَ يَحْشُرُهُمْ ۚ إِنَّهُ حَكِيمٌ عَلِيمٌ ﴿٢٥﴾

**27.** ದಿಟವಾಗಿಯೂ ನಾವು ಮನುಷ್ಯನನ್ನು ಶಬ್ದಮಾಡುವ, ರೂಪಗೊಳಿಸಲ್ಪಟ್ಟ ಒಣ ಆವೆಮಣ್ಣಿನಿಂದ ಸೃಷ್ಟಿಸಿದ್ದೇವೆ.

وَلَقَدْ خَلَقْنَا الْإِنْسَانَ مِنْ صَلْصَالٍ مِنْ حَمَإٍ مَسْنُونٍ ﴿٢٦﴾

**28.** ಅದಕ್ಕೆ ಮುಂಚೆ ತೀವ್ರವಾದ ಬೆಂಕಿಯ ಜ್ವಾಲೆಯಿಂದ ಜಿನ್ನನ್ನು ಸಹ ನಾವು ಸೃಷ್ಟಿಸಿದ್ದೇವೆ.

وَالْجَانَّ خَلَقْنَاهُ مِنْ قَبْلُ مِنْ نَارِ السَّمُومِ ﴿٢٧﴾

**29.** ನಿನ್ನ ಪ್ರಭು ದೇವದೂತರೊಡನೆ ಹೇಳಿದ ಸಂದರ್ಭ (ಸ್ಮರಿಸು): 'ಶಬ್ದಮಾಡುವ, ರೂಪಗೊಳಿಸಲ್ಪಟ್ಟ ಒಣ ಆವೆಮಣ್ಣಿನಿಂದ ನಾನು ಮನುಷ್ಯನನ್ನು ಸೃಷ್ಟಿಸಲಿದ್ದೇನೆ.

وَإِذْ قَالَ رَبُّكَ لِلْمَلَائِكَةِ إِنِّي خَالِقٌ بَشَرًا مِنْ صَلْصَالٍ مِنْ حَمَإٍ مَسْنُونٍ ﴿٢٨﴾

**30.** 'ಹಾಗೆ ನಾನು ಅವನನ್ನು ಪರಿಪೂರ್ಣಗೊಳಿಸಿ ನನ್ನ ಸಂದೇಶವಾಣಿಯನ್ನು ಅವನೊಳಗೆ ಊದಿದರೆ[308] ನೀವು (ಎಲ್ಲರೂ) ಆಜ್ಞಾನುಸರಣೆ ಮಾಡುತ್ತಾ[308A] ಅವನಿಗೆ ವಿಧೇಯರಾಗಿರಿ.

فَإِذَا سَوَّيْتُهُ وَنَفَخْتُ فِيهِ مِنْ رُوحِي فَقَعُوا لَهُ سَاجِدِينَ ﴿٢٩﴾

**31.** ಆಗ ದೇವದೂತರೆಲ್ಲರೂ ಒಟ್ಟಾಗಿ ಆಜ್ಞಾನುಸರಣೆ ಮಾಡುತ್ತಾ ವಿಧೇಯರಾದರು.

فَسَجَدَ الْمَلَائِكَةُ كُلُّهُمْ أَجْمَعُونَ ﴿٣٠﴾

**32.** ಆದರೆ ಇಬ್‌ಲೀಸ್ ವಿಧೇಯನಾಗಲಿಲ್ಲ. ಅವನು ಆಜ್ಞಾನುಸರಣೆ ಮಾಡುವವರೊಂದಿಗೆ ಸೇರಲು ಒಪ್ಪಲಿಲ್ಲ.

إِلَّا إِبْلِيسَ أَبَىٰ أَنْ يَكُونَ مَعَ السَّاجِدِينَ ﴿٣١﴾

**33.** ಅವನು (ಅಲ್ಲಾಹ್) ಕೇಳಿದನು: 'ಎಲೈ

قَالَ يَا إِبْلِيسُ مَا لَكَ أَلَّا تَكُونَ

308. ಅಂದರೆ ದಿವ್ಯ ಸಂದೇಶ ನೀಡಿ ಪ್ರವಾದಿಯನ್ನಾಗಿ ನಿಯುಕ್ತಿಗೊಳಿಸಿದರೆ.

308A. 2ನೇ ಅಧ್ಯಾಯ, 35ನೇ ವಚನದ ಟಿಪ್ಪಣಿ ನೋಡಿರಿ.

ಇಬ್‌ಲೀಸ್, ನೀನು ಆಜ್ಞಾನುಸರಣೆ ಮಾಡುವವರೊಂದಿಗೆ ಸೇರದಿರಲು ನಿನಗೇನಾಗಿದೆ?'

مَعَ السّٰجِدِيْنَ ﴿٣٢﴾

**34.** ಅವನು (ಇಬ್‌ಲೀಸ್) ಉತ್ತರಿಸಿದನು: 'ಶಬ್ದ ಮಾಡುವ ಒಣ ಆವೆಮಣ್ಣಿನಿಂದ ಸೃಷ್ಟಿಸಲ್ಪಟ್ಟ ಮನುಷ್ಯನ ಆಜ್ಞಾನುಸರಣೆ ನಾನು ಮಾಡಲಾರೆ.'

قَالَ لَمْ اَكُنْ لِّاَسْجُدَ لِبَشَرٍ خَلَقْتَهٗ مِنْ صَلْصَالٍ مِّنْ حَمَاٍ مَّسْنُوْنٍ ﴿٣٣﴾

**35.** ಅವನು (ಅಲ್ಲಾಹ್) ಹೇಳಿದನು: 'ಹಾಗಾದರೆ ಇಲ್ಲಿಂದ ಹೊರಡು; ಖಂಡಿತವಾಗಿಯೂ ನೀನು ಅಟ್ಟಲ್ಪಟ್ಟವನಾಗಿರುವೆ.'

قَالَ فَاخْرُجْ مِنْهَا فَاِنَّكَ رَجِيْمٌ ﴿٣٤﴾

**36.** 'ನ್ಯಾಯ ತೀರ್ಮಾನ ದಿನದ ವರೆಗೆ ನಿಶ್ಚಯವಾಗಿಯೂ ನಿನ್ನ ಮೇಲೆ ಶಾಪವಿದೆ.'

وَّاِنَّ عَلَيْكَ اللَّعْنَةَ اِلٰى يَوْمِ الدِّيْنِ ﴿٣٥﴾

**37.** ಅವನು (ಇಬ್‌ಲೀಸ್) ಹೇಳಿದನು: 'ನನ್ನ ಪ್ರಭೂ, ಹಾಗಾದರೆ ಅವರು ಪುನರುತ್ಥಾನಗೊಳ್ಳುವ ದಿನದ ವರೆಗೆ ನೀನು ನನಗೆ ಕಾಲಾವಕಾಶ ನೀಡು.'

قَالَ رَبِّ فَاَنْظِرْنِيْٓ اِلٰى يَوْمِ يُبْعَثُوْنَ ﴿٣٦﴾

**38.** ಅವನು (ಅಲ್ಲಾಹ್) ಹೇಳಿದನು: 'ನಿನಗೆ ಕಾಲಾವಕಾಶ ನೀಡಲಾಗಿದೆ -

قَالَ فَاِنَّكَ مِنَ الْمُنْظَرِيْنَ ﴿٣٧﴾

**39.** 'ನಿರ್ಣಯಿಸಲ್ಪಟ್ಟ ಕಾಲದ ದಿನದ ವರೆಗೆ.'

اِلٰى يَوْمِ الْوَقْتِ الْمَعْلُوْمِ ﴿٣٨﴾

**40.** ಅವನು (ಇಬ್‌ಲೀಸ್) ಹೇಳಿದನು: 'ನನ್ನ ಪ್ರಭೂ, ನೀನು ನನ್ನನ್ನು ದಾರಿತಪ್ಪಿದವನೆಂದು ವಿಧಿಸಿರುವ ಕಾರಣ ಖಂಡಿತವಾಗಿಯೂ ನಾನು ಅವರಿಗೆ ಭೂಮಿಯಲ್ಲಿ (ಕೆಡುಕನ್ನು) ಚಲೋದಾಗಿ ತೋರಿಸಿ ಕೊಡುವೆನು. ಅವರೆಲ್ಲರನ್ನೂ ನಾನು ದಾರಿತಪ್ಪಿಸುವೆನು-

قَالَ رَبِّ بِمَآ اَغْوَيْتَنِيْ لَاُزَيِّنَنَّ لَهُمْ
فِى الْاَرْضِ وَلَاُغْوِيَنَّهُمْ اَجْمَعِيْنَ ﴿٣٩﴾

**41.** 'ಅವರಲ್ಲಿ ನಿಷ್ಠಾವಂತರಾದ ನಿನ್ನ ದಾಸರನ್ನು ಹೊರತುಪಡಿಸಿ.'

اِلَّا عِبَادَكَ مِنْهُمُ الْمُخْلَصِيْنَ ﴿٤٠﴾

**42.** ಅವನು (ಅಲ್ಲಾಹ್) ಹೇಳಿದನು: 'ಇದು[309] ನನ್ನನ್ನು ತಲಪುವ ನೇರವಾದ ಮಾರ್ಗವಾಗಿದೆ.

قَالَ هٰذَا صِرَاطٌ عَلَيَّ مُسْتَقِيْمٌ ﴿٤١﴾

309. ನಿಷ್ಠೆಯಿಂದ ಕೂಡಿದ ದಾಸತ್ವ.





**43.** 'ಖಂಡಿತವಾಗಿಯೂ ಪಥಭ್ರಷ್ಟರ ಪೈಕಿ ನಿನ್ನನ್ನು ಅನುಸರಿಸುವವರನ್ನು ಹೊರತು ನನ್ನ ದಾಸರ ಮೇಲೆ ನಿನಗೆ ಯಾವ ಸ್ವಾಧೀನ ಶಕ್ತಿಯೂ ಇರಲಾರದು.'

اِنَّ عِبَادِيْ لَيْسَ لَكَ عَلَيْهِمْ سُلْطٰنٌ
اِلَّا مَنِ اتَّبَعَكَ مِنَ الْغٰوِيْنَ ﴿٤٢﴾

**44.** ದಿಟವಾಗಿಯೂ ನರಕವು ಅವರೆಲ್ಲರ ವಾಗ್ದತ್ತ ವಾಸಸ್ಥಳವಾಗಿದೆ.

وَاِنَّ جَهَنَّمَ لَمَوْعِدُهُمْ اَجْمَعِيْنَ ﴿٤٣﴾

**45.** ಅದಕ್ಕೆ ಏಳು ಬಾಗಿಲುಗಳಿವೆ. ಪ್ರತಿಯೊಂದು ಬಾಗಿಲಿನಿಂದ ಪ್ರವೇಶಿಸಲಿಕ್ಕೆ ಅವರನ್ನು ತಂಡಗಳಾಗಿ ನಿಗದಿಪಡಿಸಲಾಗಿದೆ.

لَهَا سَبْعَةُ اَبْوَابٍ ۗ لِكُلِّ بَابٍ
مِّنْهُمْ جُزْءٌ مَّقْسُوْمٌ ﴿٤٤﴾

**46.** ಖಂಡಿತವಾಗಿಯೂ ಸದ್ಧರ್ಮಿಗಳು ಉದ್ಯಾನಗಳು ಮತ್ತು ಕಾರಂಜಿಗಳಿರುವ ವಾಸಸ್ಥಳದಲ್ಲಿ ಪ್ರವೇಶಿಸಲ್ಪಡುವರು.

اِنَّ الْمُتَّقِيْنَ فِيْ جَنّٰتٍ وَّعُيُوْنٍ ﴿٤٥﴾

**47.** 'ಶಾಂತಿಯಿಂದಲೂ ನಿರ್ಭೀತಿಯಿಂದಲೂ ನೀವು ಅದರೊಳಗೆ ಪ್ರವೇಶಿಸಿರಿ' (ಎಂದು ಅವರೊಡನೆ ಹೇಳಲಾಗುವುದು).

اُدْخُلُوْهَا بِسَلٰمٍ اٰمِنِيْنَ ﴿٤٦﴾

**48.** ಅವರ ಹೃದಯಗಳಲ್ಲಿರುವ ಯಾವುದೇ ಹಗೆ-ದ್ವೇಷವನ್ನೂ ನಾವು ನೀಗಿಸುವೆವು. ಹಾಗೆ ಅವರು ಪರಸ್ಪರ ಸಹೋದರರಂತೆ ಆರಾಮಾಸನಗಳಲ್ಲಿ ಅಭಿಮುಖವಾಗಿ ಕುಳಿತುಕೊಳ್ಳುವರು.

وَنَزَعْنَا مَا فِيْ صُدُوْرِهِمْ مِّنْ غِلٍّ
اِخْوَانًا عَلٰى سُرُرٍ مُّتَقٰبِلِيْنَ ﴿٤٧﴾

**49.** ಅಲ್ಲಿ ಅವರನ್ನು ದಣಿವು ಸ್ಪರ್ಶಿಸದು. ಅವರು ಅಲ್ಲಿಂದ ಹೊರಹಾಕಲ್ಪಡಲಾರರು.

لَا يَمَسُّهُمْ فِيْهَا نَصَبٌ وَّمَا هُمْ مِّنْهَا
بِمُخْرَجِيْنَ ﴿٤٨﴾

**50.** ನಿಸ್ಸಂದೇಹವಾಗಿಯೂ ನಾನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿರುವೆನೆಂದು ನನ್ನ ಭಕ್ತದಾಸರಿಗೆ ತಿಳಿಸು.

نَبِّئْ عِبَادِيْٓ اَنِّيْٓ اَنَا الْغَفُوْرُ الرَّحِيْمُ ﴿٤٩﴾

**51.** (ಹಾಗೆಯೇ) ನನ್ನ ಶಿಕ್ಷೆ ಕೂಡ ಯಾತನಾಮಯವಾದುದು (ಎಂದೂ ತಿಳಿಸು).

وَاَنَّ عَذَابِيْ هُوَ الْعَذَابُ الْاَلِيْمُ ﴿٥٠﴾

**52.** ಇಬ್‌ರಾಹೀಮರ ಅತಿಥಿಗಳ ಕುರಿತು (ಸಹ) ನೀನು ಅವರಿಗೆ ತಿಳಿಸು.

وَنَبِّئْهُمْ عَنْ ضَيْفِ اِبْرٰهِيْمَ ﴿٥١﴾

**53.** ಅವರು (ಅತಿಥಿಗಳು) ಅವರ ಬಳಿಗೆ ಬಂದು 'ಸಲಾಂ' ಎಂದಾಗ ಅವರು ಹೇಳಿದರು: 'ನಿಮ್ಮ ಬಗ್ಗೆ ನಮಗೆ ಭಯವಾಗುತ್ತದೆ.'

إِذْ دَخَلُوا عَلَيْهِ فَقَالُوا سَلَامًا قَالَ إِنَّا مِنْكُمْ وَجِلُونَ ﴿٥٣﴾

**54.** ಅವರು ಮರುನುಡಿದರು: 'ಭಯಪಡಬೇಡಿರಿ. ನಾವು ನಿಮಗೆ ಜ್ಞಾನಸಂಪನ್ನನಾದ ಒಬ್ಬ ಪುತ್ರನ ಬಗ್ಗೆ ಶುಭವಾರ್ತೆ ಅರುಹುತ್ತೇವೆ.'

قَالُوا لَا تَوْجَلْ إِنَّا نُبَشِّرُكَ بِغُلَامٍ عَلِيمٍ ﴿٥٤﴾

**55.** ಅವರು (ಇಬ್‌ರಾಹೀಂ) ಹೇಳಿದರು: 'ನಾನು ವೃದ್ಧನಾಗಿರುವಾಗ (ಒಬ್ಬ ಪುತ್ರನ ಬಗ್ಗೆ) ನೀವು ನನಗೆ ಶುಭವಾರ್ತೆ ತಿಳಿಸುತ್ತೀರಾ? ನೀವು ಹೇಗೆ (ಯಾವ ಆಧಾರದಲ್ಲಿ) ಈ ಶುಭವಾರ್ತೆಯನ್ನು ನನಗೆ ನೀಡುತ್ತೀರಿ?'

قَالَ أَبَشَّرْتُمُونِي عَلَىٰ أَنْ مَسَّنِيَ الْكِبَرُ فَبِمَ تُبَشِّرُونَ ﴿٥٥﴾

**56.** ಅವರು ಉತ್ತರಿಸಿದರು: 'ನಾವು ಸತ್ಯಾಧಾರಿತ ಶುಭವಾರ್ತೆಯನ್ನೇ ನಿಮಗೆ ಅರುಹಿದ್ದೇವೆ. ಆದ್ದರಿಂದ ನೀವು ನಿರಾಶರಾಗಬೇಡಿರಿ.'

قَالُوا بَشَّرْنَاكَ بِالْحَقِّ فَلَا تَكُنْ مِنَ الْقَانِطِينَ ﴿٥٦﴾

**57.** ಅವರು (ಇಬ್‌ರಾಹೀಂ) ಹೇಳಿದರು: 'ಪಥ ಭ್ರಷ್ಟರು ಹೊರತು ತನ್ನ ಪ್ರಭುವಿನ ಕರುಣೆಯ ಬಗ್ಗೆ ಬೇರೆ ಯಾರು ನಿರಾಶೆಹೊಂದುವರು ?'

قَالَ وَمَنْ يَقْنَطُ مِنْ رَحْمَةِ رَبِّهِ إِلَّا الضَّالُّونَ ﴿٥٧﴾

**58.** ಅವರು (ಇಬ್‌ರಾಹೀಂ) ಕೇಳಿದರು: 'ಎಲೈ ದೂತರೇ, (ಈಗ) ನಿಮ್ಮ ಪ್ರಧಾನ ಕಾರ್ಯವೇನು?'

قَالَ فَمَا خَطْبُكُمْ أَيُّهَا الْمُرْسَلُونَ ﴿٥٨﴾

**59.** ಅವರು ಉತ್ತರಿಸಿದರು: 'ಒಂದು ಅಪರಾಧಿ ಜನತೆಯ ಬಳಿಗೆ (ಅವರನ್ನು ನಾಶಪಡಿಸಲಿಕ್ಕೆ) ನಮ್ಮನ್ನು ಕಳುಹಿಸಲಾಗಿದೆ.

قَالُوا إِنَّا أُرْسِلْنَا إِلَىٰ قَوْمٍ مُجْرِمِينَ ﴿٥٩﴾

**60.** 'ಲೂತರ ಕುಟುಂಬವನ್ನು ಹೊರತು ಪಡಿಸಿ. ಅವರನ್ನೆಲ್ಲ (ಲೂತರ ಕುಟುಂಬದವರನ್ನೆಲ್ಲ) ನಾವು ರಕ್ಷಿಸುವೆವು -

إِلَّا آلَ لُوطٍ إِنَّا لَمُنَجُّوهُمْ أَجْمَعِينَ ﴿٦٠﴾

**61.** 'ಲೂತರ ಪತ್ನಿಯನ್ನು ಬಿಟ್ಟು. ಖಂಡಿತ ವಾಗಿಯೂ ಅವಳು ಹಿಂದೆ ಉಳಿಯುವವರಲ್ಲಿ (ಮತ್ತು ನಾಶಹೊಂದುವವರಲ್ಲಿ) ಸೇರಿದವಳೆಂದು ನಾವು ಗಣಿಸುತ್ತೇವೆ.'

إِلَّا امْرَأَتَهُ قَدَّرْنَا ۙ إِنَّهَا لَمِنَ الْغَابِرِينَ ﴿٦١﴾





**62.** ಹಾಗೆ ದೂತರು ಲೂತರ ಕುಟುಂಬದ ಬಳಿಗೆ ಬಂದಾಗ,

فَلَمَّا جَاءَ آلَ لُوطٍ الْمُرْسَلُونَ ﴿٦٢﴾

**63.** ಅವರು (ಲೂತ್) ಹೇಳಿದರು: 'ನೀವು ನನಗೆ ಅಪರಿಚಿತರಾಗಿ ಕಾಣುತ್ತೀರಿ.'

قَالَ إِنَّكُمْ قَوْمٌ مُنْكَرُونَ ﴿٦٣﴾

**64.** ಅವರು ಹೇಳಿದರು: 'ಇಲ್ಲ, ಅವರು (ನಿಮ್ಮ ಜನತೆ) ಯಾವುದರ ಬಗ್ಗೆ ಸಂದೇಹಪಡುತ್ತಿದ್ದರೋ ಅದರ ಸಹಿತ ನಾವು ನಿಮ್ಮ ಬಳಿಗೆ ಬಂದಿದ್ದೇವೆ.

قَالُوا بَلْ جِئْنَاكَ بِمَا كَانُوا فِيهِ يَمْتَرُونَ ﴿٦٤﴾

**65.** 'ನಾವು ನಿಮ್ಮ ಹತ್ತಿರ ಸತ್ಯದೊಂದಿಗೆ ಬಂದಿದ್ದೇವೆ. ನಾವು ಸತ್ಯವಂತರೇ ಆಗಿದ್ದೇವೆ.

وَأَتَيْنَاكَ بِالْحَقِّ وَإِنَّا لَصَادِقُونَ ﴿٦٥﴾

**66.** 'ಆದ್ದರಿಂದ ನೀವು ನಿಮ್ಮ ಕುಟುಂಬ ಸಹಿತ ರಾತ್ರಿಯ (ಕೊನೆಯ) ಜಾವದಲ್ಲಿ ಹೊರಟು ಹೋಗಿರಿ. ಅವರ ಹಿಂದಿನಿಂದ ನೀವು ಅವರನ್ನು ಅನುಗಮಿಸಿರಿ. ನಿಮ್ಮಲ್ಲಿ ಯಾರೂ ಹಿಂತಿರುಗಿ ನೋಡಬಾರದು. ನಿಮಗೆ ಆಜ್ಞಾಪಿಸಿದ ಕಡೆಗೆ ಮುಂದೆ ಸಾಗಿರಿ.'

فَأَسْرِ بِأَهْلِكَ بِقِطْعٍ مِنَ اللَّيْلِ وَاتَّبِعْ أَدْبَارَهُمْ وَلَا يَلْتَفِتْ مِنْكُمْ أَحَدٌ وَامْضُوا حَيْثُ تُؤْمَرُونَ ﴿٦٦﴾

**67.** ಬೆಳಗಾಗುತ್ತಲೇ ಅವರ (ಲೂತ್‌ರ ಶತ್ರುಗಳ) ಬೇರು ಕೀಳಲ್ಪಡುವುದೆಂದು ಸಹ ನಾವು ಅವರಿಗೆ (ಲೂತ್‌ರಿಗೆ) ತಿಳಿಸಿದೆವು.

وَقَضَيْنَا إِلَيْهِ ذَٰلِكَ الْأَمْرَ أَنَّ دَابِرَ هَٰؤُلَاءِ مَقْطُوعٌ مُصْبِحِينَ ﴿٦٧﴾

**68.** ಆ ಪಟ್ಟಣದ ನಿವಾಸಿಗಳು ಆಹ್ಲಾದಭರಿತರಾಗಿ ಬಂದರು.

وَجَاءَ أَهْلُ الْمَدِينَةِ يَسْتَبْشِرُونَ ﴿٦٨﴾

**69.** ಅವರು (ಲೂತ್) ಹೇಳಿದರು: 'ಇವರು ನನ್ನ ಅತಿಥಿಗಳು. ಆದ್ದರಿಂದ ನೀವು ನನ್ನನ್ನು ಅವಮಾನಿಸಬೇಡಿರಿ.'

قَالَ إِنَّ هَٰؤُلَاءِ ضَيْفِي فَلَا تَفْضَحُونِ ﴿٦٩﴾

**70.** 'ಅಲ್ಲಾಹನಿಗೆ ಭಯಪಡಿರಿ, ನನಗೆ ಅವಮರ್ಯಾದೆ ಮಾಡಬೇಡಿರಿ.'

وَاتَّقُوا اللَّهَ وَلَا تُخْزُونِ ﴿٧٠﴾

**71.** ಅವರು (ಶತ್ರುಗಳು) ಹೇಳಿದರು: 'ಅಪರಿಚಿತರನ್ನೆಲ್ಲ ಸೇರಿಸಿಕೊಳ್ಳಬಾರದೆಂದು ನಾವು ನಿನಗೆ ಹೇಳಿರಲಿಲ್ಲವೇ?'

قَالُوا أَوَلَمْ نَنْهَكَ عَنِ الْعَالَمِينَ ﴿٧١﴾

**72.** **ಅವರು** (ಲೂತ್) **ಹೇಳಿದರು:** (ನನ್ನ ವಿರುದ್ಧ) **'ನೀವೇನಾದರೂ ಮಾಡಲು ಬಯಸುವುದಾದರೆ, ನನ್ನ ಈ ಹೆಣ್ಣು ಮಕ್ಕಳು** *ಉಪಸ್ಥಿತರಿರುವ ಬಗ್ಗೆ ಗಮನ ವಿರಲಿ.'*[309A]

قَالَ هٰٓؤُلَآءِ بَنٰتِيْٓ اِنْ كُنْتُمْ فٰعِلِيْنَ ﴿٧٢﴾

**73.** (ಎಲೈ ಪ್ರವಾದಿ) **ನಿನ್ನ ಜೀವಿತದಾಣೆ, ಇವರೂ** (ನಿನ್ನ ಶತ್ರುಗಳೂ) **ಖಂಡಿತವಾಗಿಯೂ** *ಅವರ ಹಾಗೆಯೇ* **ಮದೋನ್ಮತ್ತರಾಗಿ ಅಲೆದಾಡುತ್ತಿದ್ದಾರೆ.**

لَعَمْرُكَ اِنَّهُمْ لَفِيْ سَكْرَتِهِمْ يَعْمَهُوْنَ ﴿٧٣﴾

**74. ಹಾಗೆ ಸೂರ್ಯೋದಯ ವೇಳೆಯಲ್ಲಿ ಆ** (ಎಚ್ಚರಿಕೆ ನೀಡಲಾದ) **ಶಿಕ್ಷೆಗೆ ಅವರು ತುತ್ತಾದರು.**

فَاَخَذَتْهُمُ الصَّيْحَةُ مُشْرِقِيْنَ ﴿٧٤﴾

**75. ನಾವು ಅದನ್ನು** (ಆ ಪಟ್ಟಣವನ್ನು) **ಅಡಿಮೇಲು ಮಾಡಿದೆವು ಮತ್ತು ಅವರ ಮೇಲೆ ಆವೆಮಣ್ಣಿನ ಸುಟ್ಟ ಕಲ್ಲುಗಳು ವರ್ಷಿಸುವಂತೆ ಮಾಡಿದೆವು.**

فَجَعَلْنَا عَالِيَهَا سَافِلَهَا وَاَمْطَرْنَا عَلَيْهِمْ حِجَارَةً مِّنْ سِجِّيْلٍ ﴿٧٥﴾

**76. ವಿಷಯಗಳನ್ನು ಸೂಕ್ಷ್ಮವಾಗಿ ಗ್ರಹಿಸುವವರಿಗೆ ಇದರಲ್ಲಿ ದೃಷ್ಟಾಂತಗಳಿವೆ.**

اِنَّ فِيْ ذٰلِكَ لَاٰيٰتٍ لِّلْمُتَوَسِّمِيْنَ ﴿٧٦﴾

**77. ಅದು** (ಆ ಪಟ್ಟಣದ ಭಗ್ನಾವಶೇಷ ಈಗಲೂ) **ಹೆದ್ದಾರಿಯ ಬಳಿಯಲ್ಲೇ ಇದೆ.**[310]

وَاِنَّهَا لَبِسَبِيْلٍ مُّقِيْمٍ ﴿٧٧﴾

**78. ಖಂಡಿತವಾಗಿಯೂ ಇದರಲ್ಲಿ ಸತ್ಯವಿಶ್ವಾಸಿಗಳಿಗೆ ದೃಷ್ಟಾಂತವಿದೆ.**

اِنَّ فِيْ ذٰلِكَ لَاٰيَةً لِّلْمُؤْمِنِيْنَ ﴿٧٨﴾

**79. 'ಐಕತ್' ಜನಾಂಗದವರು**[311] **ಸಹ ದುಷ್ಕರ್ಮಿಗಳಾಗಿದ್ದರು.**

وَاِنْ كَانَ اَصْحٰبُ الْاَيْكَةِ لَظٰلِمِيْنَ ﴿٧٩﴾

**80. ನಾವು ಅವರ ಮೇಲೂ ಪ್ರತಿಕಾರವೆಸಗಿದೆವು. ಆ ಎರಡು ಪಟ್ಟಣಗಳೂ ವಿಶಾಲವಾದ ಹೆದ್ದಾರಿಯಲ್ಲೇ ಇವೆ.**

فَانْتَقَمْنَا مِنْهُمْ ۘ وَاِنَّهُمَا لَبِاِمَامٍ مُّبِيْنٍ ﴿٨٠﴾

309A. 11ನೇ ಅಧ್ಯಾಯ 79ನೇ ವಚನದ ಟಿಪ್ಪಣಿ ನೋಡಿರಿ.

310. ಹಿಜಾಝ್‌ನಿಂದ ಸಿರಿಯಾಕ್ಕೆ ಹೋಗುವ ಮಾರ್ಗದಲ್ಲಿ.

311. ಐಕತ್ ಅಂದರೆ ದಟ್ಟಾರಣ್ಯ ಎಂದರ್ಥ. ಪ್ರವಾದಿ ಶುಐಬ್ (ಅಲೈಹಿಸ್ಸಲಾಂ) ರವರ ಊರಾದ ಮದ್‌ಯನ್. ಅಸ್‌ಹಾಬುಲ್ ಐಕತ್ ಎಂಬುದು ಅವರ ಜನಾಂಗದ ಇನ್ನೊಂದು ಹೆಸರು.





**81. 'ಹಿಜ್‌ರ್'ನವರು**[312] **ಸಹ ಸಂದೇಶವಾಹಕರನ್ನು ಸುಳ್ಳಾಗಿಸಿದರು.**

وَلَقَدْ كَذَّبَ اَصْحٰبُ الْحِجْرِ الْمُرْسَلِيْنَ ﴿٨١﴾

**82. ನಾವು ಅವರಿಗೆ ನಮ್ಮ ದೃಷ್ಟಾಂತಗಳನ್ನು ನೀಡಿದೆವು. ಆದರೆ ಅವರು ಅವನ್ನೆಲ್ಲ ನಿರ್ಲಕ್ಷಿಸಿದರು.**

وَاٰتَيْنٰهُمْ اٰيٰتِنَا فَكَانُوْا عَنْهَا مُعْرِضِيْنَ ﴿٨٢﴾

**83. ಅವರು ಪರ್ವತಗಳನ್ನು ಕೊರೆದು ನಿರ್ಭೀತಿಯಿಂದ ಮನೆಗಳನ್ನು ನಿರ್ಮಿಸುತ್ತಿದ್ದರು.**

وَكَانُوْا يَنْحِتُوْنَ مِنَ الْجِبَالِ بُيُوْتًا اٰمِنِيْنَ ﴿٨٣﴾

**84. ಆದರೆ ಪ್ರಭಾತ ವೇಳೆಯಲ್ಲಿ ಆ ಶಿಕ್ಷೆ ಅವರ ಮೇಲೆ ಬಂದೆರಗಿತು.**

فَاَخَذَتْهُمُ الصَّيْحَةُ مُصْبِحِيْنَ ﴿٨٤﴾

**85. ಆಗ, ಅವರು ಸಂಪಾದಿಸಿದ್ದೇನೂ ಅವರ ಪ್ರಯೋಜನಕ್ಕೆ ಬರಲಿಲ್ಲ.**

فَمَآ اَغْنٰى عَنْهُمْ مَّا كَانُوْا يَكْسِبُوْنَ ﴿٨٥﴾

**86. ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯೆ ಇರುವ ಸರ್ವವನ್ನೂ ಯುಕ್ತವಾಗಿಯೇ ನಾವು ಸೃಷ್ಟಿಸಿದ್ದೇವೆ. ಆ ನಿಶ್ಚಿತ ಘಳಿಗೆ ಬಂದೇ ಬರುತ್ತದೆ. ಆದ್ದರಿಂದ ನೀನು ಅವರೊಂದಿಗೆ ಔದಾರ್ಯದಿಂದ ವರ್ತಿಸು.**

وَمَا خَلَقْنَا السَّمٰوٰتِ وَالْاَرْضَ وَمَا بَيْنَهُمَآ اِلَّا بِالْحَقِّ ۗ وَاِنَّ السَّاعَةَ لَاٰتِيَةٌ فَاصْفَحِ الصَّفْحَ الْجَمِيْلَ ﴿٨٦﴾

**87. ನಿಸ್ಸಂದೇಹವಾಗಿಯೂ ನಿನ್ನ ಪ್ರಭು ಮಹಾ ಸೃಷ್ಟಿಕರ್ತನೂ ಸರ್ವಜ್ಞನೂ ಆಗಿದ್ದಾನೆ.**

اِنَّ رَبَّكَ هُوَ الْخَلّٰقُ الْعَلِيْمُ ﴿٨٧﴾

**88. ದಿಟವಾಗಿಯೂ, ಪದೇ ಪದೇ ಪುನರಾವರ್ತಿಸಲ್ಪಡುವ ಏಳು ವಚನಗಳನ್ನೂ ಶ್ರೇಷ್ಠವಾದ ಖುರ್‌ಆನನ್ನೂ ನಾವು ನಿನಗೆ ನೀಡಿರುತ್ತೇವೆ.**

وَلَقَدْ اٰتَيْنٰكَ سَبْعًا مِّنَ الْمَثَانِيْ وَالْقُرْاٰنَ الْعَظِيْمَ ﴿٨٨﴾

**89. ಅವರ ಪೈಕಿ ಕೆಲವರಿಗೆ ನಾವು ನೀಡಿರುವ ತಾತ್ಕಾಲಿಕ ಸುಖಾಡಂಬರಗಳ ಕಡೆಗೆ ನೀನು ದಿಟ್ಟಿಸಿ ನೋಡಬೇಡ. ನೀನು ಅವರ ಬಗ್ಗೆ ವ್ಯಥೆಗೊಳ್ಳುವುದೂ ಬೇಡ. ಸತ್ಯವಿಶ್ವಾಸಿಗಳಿಗೆ ನಿನ್ನ** (ಕರುಣೆಯ) **ರೆಕ್ಕೆಯನ್ನು ಬಿಡಿಸಿಕೊಡು.**

لَا تَمُدَّنَّ عَيْنَيْكَ اِلٰى مَا مَتَّعْنَا بِهٖٓ اَزْوَاجًا مِّنْهُمْ وَلَا تَحْزَنْ عَلَيْهِمْ وَاخْفِضْ جَنَاحَكَ لِلْمُؤْمِنِيْنَ ﴿٨٩﴾

312. 'ಹಿಜ್‌ರ್' ಎಂಬ ಪದಕ್ಕೆ ಗೋಡೆ, ಕೋಟೆ ಎಂಬ ಅರ್ಥಗಳಿವೆ. ಸಮೂದ್ ಜನಾಂಗದ ಪಟ್ಟಣವನ್ನು ಇಲ್ಲಿ ಸೂಚಿಸಲಾಗಿದೆ. ಭದ್ರವಾದ ಕೋಟೆಯೊಳಗೆ ಇದ್ದ ಕಾರಣ ಅದನ್ನು ಹಿಜ್‌ರ್ ಎಂದು ಕರೆಯಲಾಯಿತು.

**90.** ಹೇಳು: 'ನಿಜವಾಗಿಯೂ ನಾನು ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನಾಗಿದ್ದೇನೆ.'

وَقُلْ إِنِّي أَنَا النَّذِيرُ الْمُبِينُ ﴿٩٠﴾

**91.** ಯಾಕೆಂದರೆ ಹಲವು ಪಂಗಡಗಳಾಗಿ ಭಿನ್ನ ಭಿನ್ನಗೊಂಡವರ ಮೇಲೆ ನಾವು (ಶಿಕ್ಷೆ) ಇಳಿಸಲು ತೀರ್ಮಾನಿಸಿದ್ದೇವೆ.

كَمَا أَنزَلْنَا عَلَى الْمُقْتَسِمِينَ ﴿٩١﴾

**92.** ಅವರಾದರೊ ಖುರ್‌ಆನನ್ನು ಸುಳ್ಳಿನ ಕಂತೆಯೆಂದು ಬಗೆದವರು.

الَّذِينَ جَعَلُوا الْقُرْآنَ عِضِينَ ﴿٩٢﴾

**93.** ಆದ್ದರಿಂದ, ನಿನ್ನ ಪ್ರಭುವಿನಾಣೆ, ಖಂಡಿತವಾಗಿಯೂ ಅವರೆಲ್ಲರ ವಿಚಾರಣೆಯನ್ನು ನಾವು ನಡೆಸುವೆವು -

فَوَرَبِّكَ لَنَسْأَلَنَّهُمْ أَجْمَعِينَ ﴿٩٣﴾

**94.** ಅವರ ಕೃತ್ಯಗಳ ಕುರಿತು.

عَمَّا كَانُوا يَعْمَلُونَ ﴿٩٤﴾

**95.** ಆದ್ದರಿಂದ ನಿನಗೆ ಆದೇಶಿಸಿರುವುದನ್ನು ನೀನು ಬಹಿರಂಗವಾಗಿ ಘೋಷಿಸು ಮತ್ತು ಬಹುದೇವಾರಾಧಕರಿಂದ ನೀನು ಅಗಲಿ ನಿಲ್ಲು.

فَاصْدَعْ بِمَا تُؤْمَرُ وَأَعْرِضْ عَنِ الْمُشْرِكِينَ ﴿٩٥﴾

**96.** ಈ ಪರಿಹಾಸ್ಯ ಮಾಡುವವರ ವಿರುದ್ಧ ಖಂಡಿತವಾಗಿಯೂ ನಾವು ನಿನಗೆ ಸಾಕು.

إِنَّا كَفَيْنَاكَ الْمُسْتَهْزِئِينَ ﴿٩٦﴾

**97.** ಅಲ್ಲಾಹನೊಂದಿಗೆ ಬೇರೆ ದೇವರನ್ನು ಅವರು ಸೇರಿಸುತ್ತಾರೆ. (ಅದರ ಪರಿಣಾಮವನ್ನು) ಅವರು ಬೇಗನೆ ತಿಳಿದುಕೊಳ್ಳುವರು.

الَّذِينَ يَجْعَلُونَ مَعَ اللَّهِ إِلَٰهًا آخَرَ ۚ فَسَوْفَ يَعْلَمُونَ ﴿٩٧﴾

**98.** ಖಂಡಿತವಾಗಿಯೂ ಅವರ ಮಾತುಗಳಿಂದ ನಿನ್ನ ಹೃದಯ ನೊಂದುಕೊಳ್ಳುತ್ತಿದೆಯೆಂದು ನಮಗೆ ಗೊತ್ತಿದೆ.

وَلَقَدْ نَعْلَمُ أَنَّكَ يَضِيقُ صَدْرُكَ بِمَا يَقُولُونَ ﴿٩٨﴾

**99.** ನೀನು ನಿನ್ನ ಪ್ರಭುವನ್ನು ಸ್ತುತಿಸುತ್ತಾ ಅವನ ಮಹತ್ವದ ಕೀರ್ತನೆ ಮಾಡು ಮತ್ತು ಅವನಿಗೆ ಸಾಷ್ಟಾಂಗವೆರಗುವವರಲ್ಲಿ ನೀನಾಗು.

فَسَبِّحْ بِحَمْدِ رَبِّكَ وَكُن مِّنَ السَّاجِدِينَ ﴿٩٩﴾

**100.** ನಿನಗೆ ಮರಣ ಬರುವ ವರೆಗೆ ನೀನು ನಿನ್ನ ಪ್ರಭುವನ್ನೇ ಆರಾಧಿಸು.

وَاعْبُدْ رَبَّكَ حَتَّىٰ يَأْتِيَكَ الْيَقِينُ ﴿١٠٠﴾

سُوْرَةُ النَّحْلِ مَكِّيَّةٌ وَّهِيَ مَعَ الْبَسْمَلَةِ مِائَةٌ وَّتِسْعٌ وَّعِشْرُوْنَ اٰيَةً وَّسِتَّةَ عَشَرَ رُكُوْعًا

# 16. ಅನ್ನಹ್ಲ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 129 ಆಯತ್‌ಗಳು ಹಾಗೂ 16 ರುಕೂಉ್‌ಗಳು ಇವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** ಅಲ್ಲಾಹನ ವಿಧಿ ಬರುತ್ತಿದೆ. ಆದುದರಿಂದ ಅದರ ಬಗ್ಗೆ ತ್ವರೆಪಡಿಸಬೇಡಿರಿ. ಅವರು ಸಹಭಾಗಿಗಳನ್ನು ಕಲ್ಪಿಸುವು ದರಿಂದೆಲ್ಲ ಅವನು ಪರಮ ಪವಿತ್ರನೂ ಮಹೋನ್ನತನೂ ಆಗಿದ್ದಾನೆ.

اَتٰۤى اَمْرُ اللّٰهِ فَلَا تَسْتَعْجِلُوْهُ ؕ
سُبْحٰنَهٗ وَتَعٰلٰى عَمَّا يُشْرِكُوْنَ ﴿٢﴾

**3.** ಅವನು ತನ್ನ ಭಕ್ತದಾಸರ ಪೈಕಿ ತಾನು ಇಚ್ಛಿಸುವವರ ಮೇಲೆ ತನ್ನ ಆಜ್ಞೆಯಿಂದ ಕೂಡಿದ ಸಂದೇಶದೊಂದಿಗೆ ದೇವದೂತರನ್ನು (ಮಲಾಯಿಕ) ಇಳಿಸುತ್ತಾನೆ - 'ನನ್ನ ಹೊರತು ಬೇರೆ ಆರಾಧ್ಯನಿಲ್ಲ. ಆದ್ದರಿಂದ ನನ್ನ ಭಯಭಕ್ತಿ ಇರಿಸಿಕೊಳ್ಳಿರಿ ಎಂದು ಜನರಿಗೆ ಎಚ್ಚರಿಕೆ ನೀಡಿರಿ (ಎಂದು ಹೇಳುತ್ತಾ).'

يُنَزِّلُ الْمَلٰٓئِكَةَ بِالرُّوْحِ مِنْ اَمْرِهٖ
عَلٰى مَنْ يَّشَآءُ مِنْ عِبَادِهٖۤ اَنْ اَنْذِرُوْۤا
اَنَّهٗ لَاۤ اِلٰهَ اِلَّاۤ اَنَا فَاتَّقُوْنِ ﴿٣﴾

**4.** ಅವನು ಆಕಾಶಗಳನ್ನೂ ಭೂಮಿಯನ್ನೂ ಯುಕ್ತವಾಗಿಯೇ ಸೃಷ್ಟಿಸಿದ್ದಾನೆ. ಅವರು ಸಹಭಾಗಿಗಳನ್ನು ಕಲ್ಪಿಸುವುದರಿಂದೆಲ್ಲ ಅವನು ಮಹೋನ್ನತನು.

خَلَقَ السَّمٰوٰتِ وَالْاَرْضَ بِالْحَقِّ ؕ
تَعٰلٰى عَمَّا يُشْرِكُوْنَ ﴿٤﴾

**5.** ಅವನು ಮನುಷ್ಯನನ್ನು ಒಂದು ವೀರ್ಯಾಣುವಿನಿಂದ ಸೃಷ್ಟಿಸಿದನು. ಆದರೆ ಅದೋ ಅವನು ಪ್ರತ್ಯಕ್ಷವಾಗಿ ವಿವಾದಕ್ಕಿಳಿಯುತ್ತಾನೆ.

خَلَقَ الْاِنْسَانَ مِنْ نُّطْفَةٍ فَاِذَا هُوَ
خَصِيْمٌ مُّبِيْنٌ ﴿٥﴾

**6.** ಅವನು ಜಾನುವಾರುಗಳನ್ನು ಸಹ ಸೃಷ್ಟಿಸಿರುವನು. ಅವುಗಳಿಂದ ನಿಮಗೆ ಮೈಬೆಚ್ಚಗಿಡುವ ಸಾಮಗ್ರಿಗಳು ಹಾಗೂ ಇನ್ನಿತರ ಪ್ರಯೋಜನಗಳು ಲಭ್ಯ. ಕೆಲವು ಪ್ರಾಣಿಗಳ ಮಾಂಸವನ್ನೂ ನೀವು ತಿನ್ನುತ್ತೀರಿ.

وَالْاَنْعَامَ خَلَقَهَا ۚ لَكُمْ فِيْهَا دِفْءٌ وَّ
مَنَافِعُ وَمِنْهَا تَاْكُلُوْنَ ﴿٦﴾





**7.** ನೀವು ಸಾಯಂಕಾಲ ಅವುಗಳನ್ನು (ಮೇಯುವಲ್ಲಿಂದ) ಮರಳಿ ತರುವಾಗಲೂ ಬೆಳಗಾತ ಅವುಗಳನ್ನು (ಮೇಯುವಲ್ಲಿಗೆ) ಕೊಂಡೊಯ್ಯುವಾಗಲೂ ನಿಮಗೆ ಅವುಗಳಲ್ಲಿ ಸೊಬಗಿದೆ.

وَلَكُمْ فِيْهَا جَمَالٌ حِيْنَ تُرِيْحُوْنَ وَ
حِيْنَ تَسْرَحُوْنَ ﴿٧﴾

**8.** ಬಹಳ ಕಷ್ಟಪಟ್ಟು ಹೊರತು ನಿಮಗೆ ತಲುಪಲು ಅಸಾಧ್ಯವಾದ ಪ್ರದೇಶಕ್ಕೆ ಅವು ನಿಮ್ಮ ಭಾರಗಳನ್ನು ಹೊತ್ತು ತರುತ್ತವೆ. ಖಂಡಿತವಾಗಿಯೂ ನಿಮ್ಮ ಪ್ರಭು ದಯಾವಂತನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَتَحْمِلُ اَثْقَالَكُمْ اِلٰى بَلَدٍ لَّمْ تَكُوْنُوْا بٰلِغِيْهِ
اِلَّا بِشِقِّ الْاَنْفُسِ ؕ اِنَّ رَبَّكُمْ لَرَءُوْفٌ
رَّحِيْمٌ ﴿٨﴾

**9.** ಕುದುರೆಗಳನ್ನೂ ಹೇಸರಗತ್ತೆಗಳನ್ನೂ ಕತ್ತೆಗಳನ್ನೂ ನಿಮ್ಮ ಸವಾರಿ ಮತ್ತು ಅಲಂಕಾರಕ್ಕಾಗಿ (ಅವನು ಸೃಷ್ಟಿಸಿದ್ದಾನೆ). ನೀವು (ಇನ್ನೂ) ತಿಳಿಯದಿರುವುದನ್ನು ಸಹ ಅವನು ಸೃಷ್ಟಿಸುವನು.

وَّالْخَيْلَ وَالْبِغَالَ وَالْحَمِيْرَ لِتَرْكَبُوْهَا وَ
زِيْنَةً ؕ وَيَخْلُقُ مَا لَا تَعْلَمُوْنَ ﴿٩﴾

**10.** ಸತ್ಪಥವನ್ನು ತೋರಿಸಿಕೊಡುವುದು ಅಲ್ಲಾಹನ ಹೊಣೆಯಾಗಿದೆ. ನೇರಮಾರ್ಗವನ್ನು ಬಿಟ್ಟು ಹೋಗುವ ಅನೇಕ ಮಾರ್ಗಗಳೂ ಇವೆ. ಅವನು ಬಯಸಿದ್ದರೆ ನಿಮ್ಮೆಲ್ಲರನ್ನೂ ಅವನು ನೇರವಾದ ಮಾರ್ಗದಲ್ಲಿ ಕೊಂಡೊಯ್ಯುತ್ತಿದ್ದನು.

وَعَلَى اللّٰهِ قَصْدُ السَّبِيْلِ وَمِنْهَا
جَآئِرٌ ؕ وَلَوْ شَآءَ لَهَدٰىكُمْ اَجْمَعِيْنَ ﴿١٠﴾ ع

**11.** ಅವನೇ ನಿಮಗೋಸ್ಕರ ಆಕಾಶದಿಂದ ನೀರು ಸುರಿಸಿದವನು. ಅದರಿಂದಲೇ ನಿಮಗೆ ಕುಡಿಯಲು ಸಿಗುತ್ತದೆ. ಅದರಿಂದಲೇ ಮರಮಟ್ಟುಗಳು ಬೆಳೆಯುತ್ತವೆ. ಅದರಿಂದಲೇ ನಿಮ್ಮ ಜಾನುವಾರುಗಳಿಗೆ ಮೇವೂ ಲಭಿಸುತ್ತದೆ.

هُوَ الَّذِيْۤ اَنْزَلَ مِنَ السَّمَآءِ مَآءً لَّكُمْ
مِّنْهُ شَرَابٌ وَّمِنْهُ شَجَرٌ فِيْهِ
تُسِيْمُوْنَ ﴿١١﴾

**12.** ಅದರ ಮೂಲಕ ಅವನು ನಿಮಗೆ (ಎಲ್ಲ ಬಗೆಯ) ದವಸ ಧಾನ್ಯಗಳನ್ನೂ ಆಲಿವ್, ಖರ್ಜೂರ, ದ್ರಾಕ್ಷೆಗಳನ್ನೂ ಇತರ ಹಣ್ಣುಹಂಪಲುಗಳನ್ನೂ ಒದಗಿಸಿಕೊಡುತ್ತಾನೆ. ಚಿಂತನಶೀಲರಿಗೆ ಅದರಲ್ಲಿ ದಿಟವಾಗಿಯೂ ದೊಡ್ಡ ದೃಷ್ಟಾಂತವಿದೆ.

يُنْۢبِتُ لَكُمْ بِهِ الزَّرْعَ وَالزَّيْتُوْنَ وَ
النَّخِيْلَ وَالْاَعْنَابَ وَمِنْ كُلِّ الثَّمَرٰتِ ؕ
اِنَّ فِيْ ذٰلِكَ لَاٰيَةً لِّقَوْمٍ يَّتَفَكَّرُوْنَ ﴿١٢﴾

**13.** ಇರುಳನ್ನೂ ಹಗಲನ್ನೂ ಸೂರ್ಯನನ್ನೂ ಚಂದ್ರನನ್ನೂ ಅವನು ನಿಮ್ಮ ಪ್ರಯೋಜನಕ್ಕಾಗಿ ವ್ಯವಸ್ಥೆಗೊಳಿಸಿದ್ದಾನೆ. ನಕ್ಷತ್ರಗಳನ್ನು ಸಹ ಅವನ ಆಜ್ಞೆಯನುಸಾರ ನಿಮ್ಮ ಪ್ರಯೋಜನಕ್ಕಾಗಿ ವ್ಯವಸ್ಥೆಗೊಳಿಸಲಾಗಿದೆ. ವಿವೇಕಶಾಲಿಗಳಿಗೆ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ.

وَسَخَّرَ لَكُمُ الَّيْلَ وَالنَّهَارَ ۙ وَالشَّمْسَ وَالْقَمَرَ ۗ وَالنُّجُوْمُ مُسَخَّرٰتٌۢ بِاَمْرِهٖ ۗ اِنَّ فِيْ ذٰلِكَ لَاٰيٰتٍ لِّقَوْمٍ يَّعْقِلُوْنَ ﴿١٣﴾

**14.** ವಿವಿಧ ಬಣ್ಣಗಳಲ್ಲಿ ಭೂಮಿಯಲ್ಲಿ ಅವನು ನಿಮಗೋಸ್ಕರ ಸೃಷ್ಟಿಸಿರುವ ವಸ್ತುಗಳನ್ನು ಸಹ (ಅವನು ನಿಮ್ಮ ಪ್ರಯೋಜನಕ್ಕಾಗಿ ವ್ಯವಸ್ಥೆಗೊಳಿಸಿರುವನು). ಬುದ್ಧಿಶಾಲಿಗಳಿಗೆ ಅದರಲ್ಲಿ ಖಂಡಿತವಾಗಿಯೂ ಹಲವು ದೃಷ್ಟಾಂತಗಳಿವೆ.

وَمَا ذَرَاَ لَكُمْ فِي الْاَرْضِ مُخْتَلِفًا اَلْوَانُهٗ ۗ اِنَّ فِيْ ذٰلِكَ لَاٰيَةً لِّقَوْمٍ يَّذَّكَّرُوْنَ ﴿١٤﴾

**15.** ಸಮುದ್ರವನ್ನೂ ಅವನು ನಿಮ್ಮ ಪ್ರಯೋಜನಕ್ಕಾಗಿ ಏರ್ಪಡಿಸಿದ್ದಾನೆ - ಅದರಿಂದ ನೀವು (ಮೀನಿನ) ತಾಜಾ ಮಾಂಸವನ್ನು ತಿನ್ನಲಿಕ್ಕಾಗಿ ಮತ್ತು ನೀವು ಧರಿಸುವ ಅಲಂಕಾರ ವಸ್ತುಗಳನ್ನು ಅದರಿಂದ ಹೊರತೆಗೆಯಲಿಕ್ಕಾಗಿ. ಅದರಲ್ಲಿ (ಜಲವನ್ನು) ಸೀಳಿ ಓಡುತ್ತಿರುವ ನೌಕೆಗಳನ್ನು ನೀನು ಕಾಣಬಹುದು. ಇವೆಲ್ಲ ನೀವು ಅವನ ಅನುಗ್ರಹವನ್ನು ಅರಸಲಿಕ್ಕೂ ಅವನಿಗೆ ಕೃತಜ್ಞರಾಗಿರಲಿಕ್ಕೂ ಆಗಿದೆ.

وَهُوَ الَّذِيْ سَخَّرَ الْبَحْرَ لِتَاْكُلُوْا مِنْهُ لَحْمًا طَرِيًّا وَّتَسْتَخْرِجُوْا مِنْهُ حِلْيَةً تَلْبَسُوْنَهَا ۚ وَتَرَى الْفُلْكَ مَوَاخِرَ فِيْهِ وَلِتَبْتَغُوْا مِنْ فَضْلِهٖ وَلَعَلَّكُمْ تَشْكُرُوْنَ ﴿١٥﴾

**16.** ಅವನು (ಅಲ್ಲಾಹನು) ಭೂಮಿಯಲ್ಲಿ ಸ್ಥಿರವಾದ ಪರ್ವತಗಳನ್ನು ನೆಲೆಗೊಳಿಸಿರುವನು - ನಿಮಗೆ ಅದರಿಂದ ಜೀವನಾಧಾರ ಲಭಿಸಲಿಕ್ಕಾಗಿ. ನದಿಗಳನ್ನೂ ರಸ್ತೆಗಳನ್ನೂ ಅವನು ಉಂಟುಮಾಡಿದನು - ನೀವು ಸರಿಯಾದ ದಾರಿಯನ್ನು ಗೊತ್ತುಹಚ್ಚುವಂತಾಗಲಿಕ್ಕಾಗಿ.

وَاَلْقٰى فِي الْاَرْضِ رَوَاسِيَ اَنْ تَمِيْدَ بِكُمْ وَاَنْهٰرًا وَّسُبُلًا لَّعَلَّكُمْ تَهْتَدُوْنَ ﴿١٦﴾

**17.** (ಬೇರೆ) ಹಲವು ಗುರುತುಗಳೂ ಇವೆ. (ಆ ಮೂಲಕವೂ) ನಕ್ಷತ್ರಗಳ ಮೂಲಕವೂ ಅವರು ದಾರಿಯನ್ನು ಗೊತ್ತು ಹಚ್ಚುತ್ತಾರೆ.

وَعَلٰمٰتٍ ۗ وَبِالنَّجْمِ هُمْ يَهْتَدُوْنَ ﴿١٧﴾

**18.** ಹೀಗಿರುವಾಗ ಸೃಷ್ಟಿಸುವವನೂ ಸೃಷ್ಟಿಸದವನೂ ಸಮಾನರಾಗುವುದು ಹೇಗೆ? ನೀವು ಮನವರಿಕೆ ಮಾಡುವುದಿಲ್ಲವೇ?

اَفَمَنْ يَّخْلُقُ كَمَنْ لَّا يَخْلُقُ ۗ اَفَلَا تَذَكَّرُوْنَ ﴿١٨﴾





**19.** ಅಲ್ಲಾಹನ ಅನುಗ್ರಹಗಳನ್ನು ನೀವು ಎಣಿಕೆ ಮಾಡಲಿಕ್ಕೆ ಪ್ರಯತ್ನಿಸಿದರೆ ಅವುಗಳನ್ನು ಎಣಿಕೆ ಮಾಡಲು ನಿಮ್ಮಿಂದ ಸಾಧ್ಯವಿಲ್ಲ. ದಿಟವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

وَاِنْ تَعُدُّوْا نِعْمَةَ اللّٰهِ لَا تُحْصُوْهَا ۗ اِنَّ اللّٰهَ لَغَفُوْرٌ رَّحِيْمٌ ﴿١٩﴾

**20.** ನೀವು ಮುಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೆಲ್ಲವನ್ನೂ ಅಲ್ಲಾಹನು ಬಲ್ಲನು.

وَاللّٰهُ يَعْلَمُ مَا تُسِرُّوْنَ وَمَا تُعْلِنُوْنَ ﴿٢٠﴾

**21.** ಅಲ್ಲಾಹನನ್ನು ಬಿಟ್ಟು ಅವರು ಯಾರನ್ನು ಕರೆದು ಪ್ರಾರ್ಥಿಸುತ್ತಾರೋ, ಅವರು ಏನನ್ನೂ ಸೃಷ್ಟಿಸುವುದಿಲ್ಲ. ವಾಸ್ತವದಲ್ಲಿ ಅವರೇ ಸೃಷ್ಟಿಗಳು.

وَالَّذِيْنَ يَدْعُوْنَ مِنْ دُوْنِ اللّٰهِ لَا يَخْلُقُوْنَ شَيْـًٔا وَّهُمْ يُخْلَقُوْنَ ﴿٢١﴾

**22.** ಅವರು ಮೃತರು; ಜೀವಂತರಲ್ಲ. ತಮ್ಮನ್ನು ಯಾವಾಗ ಎಬ್ಬಿಸಲಾಗುವುದೆಂದು ಕೂಡ ಅವರಿಗೆ ಗೊತ್ತಿಲ್ಲ.

اَمْوَاتٌ غَيْرُ اَحْيَآءٍ ۚ وَمَا يَشْعُرُوْنَ ۙ اَيَّانَ يُبْعَثُوْنَ ﴿٢٢﴾

**23.** (ನೆನಪಿಟ್ಟುಕೊಳ್ಳಿರಿ) ನಿಮ್ಮ ದೇವನು ಏಕಮಾತ್ರ ದೇವನಾಗಿದ್ದಾನೆ. ಯಾರಿಗೆ ಪರಲೋಕದ ಬಗ್ಗೆ ನಂಬಿಕೆಯಿಲ್ಲವೋ, ಅವರ ಹೃದಯಗಳು ಸತ್ಯವನ್ನು ದ್ವೇಷಿಸುತ್ತವೆ. ಅಂತಹವರು ಅಹಂಕಾರಿಗಳಾಗಿದ್ದಾರೆ.

اِلٰهُكُمْ اِلٰهٌ وَّاحِدٌ ۚ فَالَّذِيْنَ لَا يُؤْمِنُوْنَ بِالْاٰخِرَةِ قُلُوْبُهُمْ مُّنْكِرَةٌ وَّهُمْ مُّسْتَكْبِرُوْنَ ﴿٢٣﴾

**24.** ನಿಸ್ಸಂದೇಹವಾಗಿಯೂ, ಅವರು ಮುಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೂ ಅಲ್ಲಾಹನು ತಿಳಿಯುತ್ತಾನೆ. ಖಂಡಿತವಾಗಿಯೂ ಅವನು ಅಹಂಭಾವಿಗಳನ್ನು ಮೆಚ್ಚುವುದಿಲ್ಲ.

لَا جَرَمَ اَنَّ اللّٰهَ يَعْلَمُ مَا يُسِرُّوْنَ وَمَا يُعْلِنُوْنَ ۗ اِنَّهٗ لَا يُحِبُّ الْمُسْتَكْبِرِيْنَ ﴿٢٤﴾

**25.** 'ನಿಮ್ಮ ಪ್ರಭು ಅವತೀರ್ಣಗೊಳಿಸಿರುವುದರ ಬಗ್ಗೆ ನೀವೇನು ಯೋಚಿಸುತ್ತೀರಿ?' ಎಂದು ಅವರೊಡನೆ ಕೇಳುವಾಗ, '(ಇದು) ಪೂರ್ವಿಕರ ಕಟ್ಟುಕತೆಗಳು' ಎಂದು ಅವರು ಹೇಳುತ್ತಾರೆ.

وَاِذَا قِيْلَ لَهُمْ مَّاذَآ اَنْزَلَ رَبُّكُمْ ۙ قَالُوْٓا اَسَاطِيْرُ الْاَوَّلِيْنَ ﴿٢٥﴾

**26.** (ತತ್ಫಲವಾಗಿ) ಪುನರುತ್ಥಾನ ದಿನದಂದು ಎಲ್ಲ ಪಾಪಭಾರವನ್ನೂ ಅವರು ವಹಿಸುವರು. ತಿಳುವಳಿಕೆಯಿಲ್ಲದೆ ಅವರು ದಾರಿತಪ್ಪಿಸುವ ಜನರ ಪಾಪಭಾರಗಳಲ್ಲಿ ಒಂದಂಶವನ್ನು ಸಹ ಅವರು ವಹಿಸುವರು.

لِيَحْمِلُوْٓا اَوْزَارَهُمْ كَامِلَةً يَّوْمَ الْقِيٰمَةِ ۙ وَمِنْ اَوْزَارِ الَّذِيْنَ يُضِلُّوْنَهُمْ بِغَيْرِ

عِلْمٍ ۗ أَلَا سَاءَ مَا يَزِرُونَ ﴿٢٥﴾

ತಿಳಿದುಕೊಳ್ಳಿರಿ, ಅವರು ಹೊರುವ ಭಾರ ಬಹಳ ಕೆಟ್ಟ ದ್ದಾಗಿದೆ.

قَدْ مَكَرَ الَّذِينَ مِن قَبْلِهِمْ فَأَتَى اللَّهُ بُنْيَانَهُم مِّنَ الْقَوَاعِدِ فَخَرَّ عَلَيْهِمُ السَّقْفُ مِن فَوْقِهِمْ وَأَتَاهُمُ الْعَذَابُ مِنْ حَيْثُ لَا يَشْعُرُونَ ﴿٢٦﴾

27. ಇವರಿಗಿಂತ ಮುಂಚೆ ಇದ್ದವರು ಸಹ (ಸತ್ಯದ ವಿರುದ್ಧ) ಷಡ್ಯಂತ್ರ ಹೂಡಿದ್ದರು. ಆಗ ಅಲ್ಲಾಹನು ಅವರ ಕಟ್ಟಡದ ಅಡಿಪಾಯವನ್ನೇ ನಾಶಪಡಿಸಿದನು. ಆಗ ಅವರ ಮೇಲಿನಿಂದ ಮೇಲ್ಛಾವಣಿ ಅವರ ಮೇಲೆ ಬಿತ್ತು. ಅವರು ತಿಳಿದಿರದ ಕಡೆಯಿಂದ ಶಿಕ್ಷೆಯು ಅವರ ಮೇಲೆ ಬಂದೆರಗಿತು.

ثُمَّ يَوْمَ الْقِيَامَةِ يُخْزِيهِمْ وَيَقُولُ أَيْنَ شُرَكَائِيَ الَّذِينَ كُنتُمْ تُشَاقُّونَ فِيهِمْ ۚ قَالَ الَّذِينَ أُوتُوا الْعِلْمَ إِنَّ الْخِزْيَ الْيَوْمَ وَالسُّوءَ عَلَى الْكَافِرِينَ ﴿٢٧﴾

28. ಮತ್ತೆ, ಪುನರುತ್ಥಾನ ದಿನದಂದು ಅವನು (ಅಲ್ಲಾಹನು) ಅವರನ್ನು ಅಪಮಾನಕ್ಕೀಡುಮಾಡುವನು. ಅವನು ಕೇಳುವನು: 'ನೀವು ಯಾರಿಗೋಸ್ಕರ ಪ್ರವಾದಿ ಗಳನ್ನು ವಿರೋಧಿಸಿದ್ದಿರೋ ಆ (ನಿಮ್ಮ ಭಾವನೆಯ) ನನ್ನ ಸರಿಸಾಟಿಗಳು ಎಲ್ಲಿ?' ಜ್ಞಾನವುಳ್ಳವರು ಹೇಳು ವರು: 'ಖಂಡಿತವಾಗಿಯೂ ಇಂದು ಅಪಮಾನ ಮತ್ತು ವಿಪತ್ತು ಅವಿಶ್ವಾಸಿಗಳ ಮೇಲೆ -

الَّذِينَ تَتَوَفَّاهُمُ الْمَلَائِكَةُ ظَالِمِي أَنفُسِهِمْ ۖ فَأَلْقَوُا السَّلَمَ مَا كُنَّا نَعْمَلُ مِن سُوءٍ ۚ بَلَىٰ إِنَّ اللَّهَ عَلِيمٌ بِمَا كُنتُمْ تَعْمَلُونَ ﴿٢٨﴾

29. 'ತಮ್ಮ ಆತ್ಮಗಳಿಗೆ ಅನ್ಯಾಯ ಮಾಡುತ್ತಿರು ವಂತೆಯೇ ದೇವದೂತರು ಯಾರ ಜೀವವನ್ನು ಹಿಡಿಯುತ್ತಾರೋ ಅವರ ಮೇಲೆ' (ಎರಗುವುದು). ಆಗ ಅವರು ವಿಧೇಯತೆಯನ್ನು ತೋರಿಸುತ್ತಾ ಹೇಳುವರು: 'ನಾವೇನೂ ದುಷ್ಕೃತ್ಯ ಮಾಡಿಲ್ಲ.' ಅಲ್ಲ, ನಿಮ್ಮ ಕೃತ್ಯಗಳ ನ್ನೆಲ್ಲ ನಿಶ್ಚಯವಾಗಿಯೂ ಅಲ್ಲಾಹನು ಚೆನ್ನಾಗಿ ಬಲ್ಲ ವನಾಗಿದ್ದಾನೆ.

فَادْخُلُوا أَبْوَابَ جَهَنَّمَ خَالِدِينَ فِيهَا ۖ فَلَبِئْسَ مَثْوَى الْمُتَكَبِّرِينَ ﴿٢٩﴾

30. ಆದ್ದರಿಂದ ನೀವು ನರಕದ ಬಾಗಿಲುಗಳನ್ನು ಪ್ರವೇಶಿಸಿರಿ - ಅದರಲ್ಲಿ ದೀರ್ಘಕಾಲದ ವಾಸಕ್ಕಾಗಿ. ಅಹಂಕಾರಿಗಳ ವಾಸಸ್ಥಳ ಬಹಳ ನಿಕೃಷ್ಟವಾದುದಾಗಿದೆ.

وَقِيلَ لِلَّذِينَ اتَّقَوْا مَاذَا أَنزَلَ رَبُّكُمْ ۚ قَالُوا خَيْرًا ۗ لِّلَّذِينَ

31. 'ನಿಮ್ಮ ಪ್ರಭು ಏನನ್ನು ಅವತೀರ್ಣಗೊಳಿಸಿದ್ದು' ಎಂದು ಸದ್ಧರ್ಮಿಗಳೊಡನೆ ಕೇಳುವಾಗ, 'ಅತ್ಯುತ್ತಮ ವಾದುದು' ಎಂದು ಅವರು ಹೇಳುವರು. ಸತ್ಕರ್ಮ





أَحْسَنُوا فِي هَٰذِهِ الدُّنْيَا حَسَنَةٌ ۚ وَلَدَارُ الْآخِرَةِ خَيْرٌ ۚ وَلَنِعْمَ دَارُ الْمُتَّقِينَ ﴿٣٠﴾

ಮಾಡಿದವರಿಗೆ ಈ ಲೋಕದಲ್ಲಿ ಒಳಿತಿದೆ. ಪಾರತ್ರಿಕ ಮನೆ ಇದಕ್ಕಿಂತಲೂ ಒಳ್ಳೆಯದು. ಸದ್ಧರ್ಮಿಗಳ ವಾಸಸ್ಥಳ ಅತಿ ಉತ್ಕೃಷ್ಟವಾದುದಾಗಿದೆ.

جَنَّاتُ عَدْنٍ يَدْخُلُونَهَا تَجْرِي مِن تَحْتِهَا الْأَنْهَارُ ۖ لَهُمْ فِيهَا مَا يَشَاءُونَ ۚ كَذَٰلِكَ يَجْزِي اللَّهُ الْمُتَّقِينَ ﴿٣١﴾

32. ಶಾಶ್ವತವಾದ ವಾಸಕ್ಕಿರುವ ಸ್ವರ್ಗೀಯ ಉದ್ಯಾನಗಳನ್ನು ಅವರು ಪ್ರವೇಶಿಸುವರು. ಅವುಗಳ ಕೆಳಬದಿಯಲ್ಲಿ ಸರಿತ್ತುಗಳು ಹರಿಯುತ್ತವೆ. ಅವರು ಬಯಸುವುದೆಲ್ಲ ಅವರಿಗೆ ಅಲ್ಲಿವೆ. ಸದ್ಧರ್ಮಿಗಳಿಗೆ ಅಲ್ಲಾಹನು ಹಾಗೆ ಪ್ರತಿಫಲ ನೀಡುತ್ತಾನೆ.

الَّذِينَ تَتَوَفَّاهُمُ الْمَلَائِكَةُ طَيِّبِينَ ۙ يَقُولُونَ سَلَامٌ عَلَيْكُمُ ادْخُلُوا الْجَنَّةَ بِمَا كُنتُمْ تَعْمَلُونَ ﴿٣٢﴾

33. ಪರಿಶುದ್ಧರಾಗಿರುವ ಸ್ಥಿತಿಯಲ್ಲಿ ದೇವದೂತರು ಅವರ ಪ್ರಾಣಹರಣ ಮಾಡುವರು. ಅವರು (ದೇವ ದೂತರು) ಹೇಳುವರು: 'ನಿಮ್ಮ ಮೇಲೆ ಶಾಂತಿಯಿರಲಿ. ನಿಮ್ಮ ಸತ್ಕರ್ಮಗಳ ಫಲವಾಗಿ ಸ್ವರ್ಗದಲ್ಲಿ ಪ್ರವೇಶಿಸಿರಿ.'

هَلْ يَنظُرُونَ إِلَّا أَن تَأْتِيَهُمُ الْمَلَائِكَةُ أَوْ يَأْتِيَ أَمْرُ رَبِّكَ ۚ كَذَٰلِكَ فَعَلَ الَّذِينَ مِن قَبْلِهِمْ ۚ وَمَا ظَلَمَهُمُ اللَّهُ وَلَٰكِن كَانُوا أَنفُسَهُمْ يَظْلِمُونَ ﴿٣٣﴾

34. (ಅವಿಶ್ವಾಸಿಗಳ ಬಗ್ಗೆ ಹೇಳುವುದಾದರೆ) ದೇವದೂತರು ಅವರ ಬಳಿಗೆ ಬರಲಿ ಅಥವಾ ನಿನ್ನ ಪ್ರಭುವಿನ ಆಜ್ಞೆ ಬರಲಿ ಎಂದು ಹೊರತು ಬೇರೇನನ್ನು ಅವರು ನಿರೀಕ್ಷಿಸುತ್ತಾರೆ? ಇವರಿಗೆ ಮುಂಚೆ ಇದ್ದವರು ಸಹ ಹೀಗೆಯೇ ವರ್ತಿಸಿದ್ದರು. ಅಲ್ಲಾಹನು ಅವರಿಗೇನೂ ಅನ್ಯಾಯವೆಸಗಲಿಲ್ಲ. ಬದಲಾಗಿ, ಅವರೇ ಸ್ವಯಂ ತಮ್ಮ ಆತ್ಮಗಳಿಗೆ ಅನ್ಯಾಯವೆಸಗಿದ್ದಾರೆ.

فَأَصَابَهُمْ سَيِّئَاتُ مَا عَمِلُوا وَحَاقَ بِهِم مَّا كَانُوا بِهِ يَسْتَهْزِئُونَ ﴿٣٤﴾

35. ಹಾಗೆ ಅವರ ಕೃತ್ಯಗಳ ದುಷ್ಪರಿಣಾಮ ಅವರ ಮೇಲೆ ಎರಗಿತು. ಯಾವುದರ ಬಗ್ಗೆ ಅವರು ಅಪಹಾಸ್ಯ ಮಾಡುತ್ತಿದ್ದರೋ ಅದು (ಆ ಶಿಕ್ಷೆ) ಅವರನ್ನು ಆವರಿಸಿತು.

وَقَالَ الَّذِينَ أَشْرَكُوا لَوْ شَاءَ اللَّهُ مَا عَبَدْنَا مِن دُونِهِ مِن شَيْءٍ نَّحْنُ وَلَا آبَاؤُنَا وَلَا حَرَّمْنَا مِن دُونِهِ مِن شَيْءٍ ۚ

36. ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುವವರು ಹೇಳುತ್ತಾರೆ: 'ಅಲ್ಲಾಹನು ಇಚ್ಛಿಸಿದ್ದರೆ ನಾವಾಗಲಿ ನಮ್ಮ ತಂದೆ ತಾತಂದಿರಾಗಲಿ ಅವನನ್ನು ಬಿಟ್ಟು ಬೇರೇ ನನ್ನೂ ಆರಾಧಿಸುತ್ತಿರಲಿಲ್ಲ. ನಾವೇನನ್ನೂ ನಿಷಿದ್ಧಗೊ ಳಿಸುತ್ತಲೂ ಇರಲಿಲ್ಲ.' ಅವರಿಗೆ ಮುಂಚೆ ಇದ್ದವರು ಸಹ

ಇದೇ ಪ್ರಕಾರ ವರ್ತಿಸಿದ್ದಾರೆ. ಆದರೆ (ದಿವ್ಯ ಸಂದೇಶಗಳನ್ನು) ಸ್ಪಷ್ಟವಾದ ರೀತಿಯಲ್ಲಿ ಜನರಿಗೆ ತಲಪಿ ಸುವುದು ಹೊರತು (ಅಲ್ಲಾಹನ) ಸಂದೇಶವಾಹಕರಿಗೆ ಬೇರೇನಾದರೂ ಹೊಣೆಗಾರಿಕೆ ಇದೆಯೇ?

كَذٰلِكَ فَعَلَ الَّذِيْنَ مِنْ قَبْلِهِمْ ۚ فَهَلْ عَلَى الرُّسُلِ اِلَّا الْبَلٰغُ الْمُبِيْنُ ﴿٣٥﴾

37. ನಾವು ಪ್ರತಿಯೊಂದು ಸಮುದಾಯದಲ್ಲೂ ಸಂದೇಶವಾಹಕನನ್ನು ನಿಯೋಜಿಸಿದ್ದೇವೆ. 'ನೀವು ಅಲ್ಲಾಹನನ್ನು ಆರಾಧಿಸಿರಿ ಮತ್ತು ದುಷ್ಪ್ರೇರಕಗಳಿಂದೆಲ್ಲ ದೂರವಿರಿ' (ಎಂದು ಅವರ ಉಪದೇಶವಾಗಿತ್ತು). ಅಲ್ಲಾಹನು ಮಾರ್ಗದರ್ಶನ ಮಾಡಿದ ಕೆಲವರು ಅವರಲ್ಲಿ (ಆ ಜನರಲ್ಲಿ) ಇದ್ದರು. ದುರ್ಮಾರ್ಗದ ದೋಷಕ್ಕೆ ಗುರಿಯಾದ ಕೆಲವರು ಸಹ ಅವರಲ್ಲಿದ್ದರು. ನೀವು ಭೂಮಿಯಲ್ಲಿ ಸಂಚರಿಸಿ (ಪ್ರವಾದಿಗಳನ್ನು) ಸುಳ್ಳಾಗಿಸಿದವರ ಗತಿಯೇನಾಗಿತ್ತೆಂದು ನೋಡಿರಿ.

وَلَقَدْ بَعَثْنَا فِيْ كُلِّ اُمَّةٍ رَّسُوْلًا اَنِ اعْبُدُوا اللّٰهَ وَاجْتَنِبُوا الطَّاغُوْتَ ۚ فَمِنْهُمْ مَّنْ هَدَى اللّٰهُ وَمِنْهُمْ مَّنْ حَقَّتْ عَلَيْهِ الضَّلٰلَةُ ۚ فَسِيْرُوْا فِي الْاَرْضِ فَانْظُرُوْا كَيْفَ كَانَ عَاقِبَةُ الْمُكَذِّبِيْنَ ﴿٣٦﴾

38. ಅವರು ಮಾರ್ಗದರ್ಶನವನ್ನು ಪಡೆಯಬೇಕೆಂದು ನಿನಗೆ ಅತ್ಯಾಶೆಯಿದ್ದರೆ (ತಿಳಿದುಕೋ,) ಇತರರನ್ನು ದಾರಿತಪ್ಪಿಸುವವರಿಗೆ ಅಲ್ಲಾಹನು ಸತ್ಪಥ ದರ್ಶನ ಮಾಡಲಾರ. ಅವರಿಗೆ ಸಹಾಯಕರಾಗಿ ಯಾರೂ ಇರುವುದಿಲ್ಲ.

اِنْ تَحْرِصْ عَلٰى هُدٰىهُمْ فَاِنَّ اللّٰهَ لَا يَهْدِيْ مَنْ يُّضِلُّ وَمَا لَهُمْ مِّنْ نّٰصِرِيْنَ ﴿٣٧﴾

39. ಮೃತರಾದವರನ್ನು ಅಲ್ಲಾಹನು ಪುನರುತ್ಥಾನಗೊಳಿಸಲಾರ ಎಂದು ಅವರು ಅಲ್ಲಾಹನ ನಾಮದಲ್ಲಿ ದೃಢ ಪ್ರತಿಜ್ಞೆ ಮಾಡುತ್ತಾರೆ. ಹಾಗಲ್ಲ; ಇದು ಅವನು ತನ್ನನ್ನು ಬದ್ಧನನ್ನಾಗಿ ಮಾಡಿದ ಒಂದು ವಾಗ್ದಾನವಾಗಿದೆ. ಆದರೆ ಹೆಚ್ಚಿನ ಜನರು ತಿಳಿಯುವುದಿಲ್ಲ.

وَاَقْسَمُوْا بِاللّٰهِ جَهْدَ اَيْمَانِهِمْ ۙ لَا يَبْعَثُ اللّٰهُ مَنْ يَّمُوْتُ ۚ بَلٰى وَعْدًا عَلَيْهِ حَقًّا وَّلٰكِنَّ اَكْثَرَ النَّاسِ لَا يَعْلَمُوْنَ ﴿٣٨﴾

40. ಅವರು ಯಾವ ವಿಚಾರದಲ್ಲಿ ಭಿನ್ನಾಭಿಪ್ರಾಯ ಹೊಂದಿರುವರೋ ಅದರ ವಾಸ್ತವಾಂಶವನ್ನು ಅವರಿಗೆ ಸ್ಪಷ್ಟಗೊಳಿಸಲಿಕ್ಕೂ ಅವಿಶ್ವಾಸಿಗಳು ತಾವು ಸುಳ್ಳು ಹೇಳುವವರೆಂದು ತಿಳಿಯುವಂತಾಗಲಿಕ್ಕೂ (ಅಲ್ಲಾಹನು ಅವರನ್ನು ಪುನರುತ್ಥಾನಗೊಳಿಸುವನು).

لِيُبَيِّنَ لَهُمُ الَّذِيْ يَخْتَلِفُوْنَ فِيْهِ وَلِيَعْلَمَ الَّذِيْنَ كَفَرُوْٓا اَنَّهُمْ كَانُوْا كٰذِبِيْنَ ﴿٣٩﴾

41. ಒಂದು ವಸ್ತು ಆಗಬೇಕೆಂದು ನಾವು ಇಚ್ಛಿಸಿದರೆ, 'ಆಗು' ಎಂದು ಮಾತ್ರ ನಾವು ಅದರೊಡನೆ ಹೇಳುತ್ತೇವೆ. ಆಗ ಅದು ಆಗುತ್ತದೆ.

اِنَّمَا قَوْلُنَا لِشَيْءٍ اِذَآ اَرَدْنٰهُ اَنْ نَّقُوْلَ لَهٗ كُنْ فَيَكُوْنُ ﴿٤٠﴾





42. ದೌರ್ಜನ್ಯಕ್ಕೊಳಗಾದ ಬಳಿಕ ಅಲ್ಲಾಹನಿಗೋಸ್ಕರ ಯಾರು ಸ್ವದೇಶವನ್ನು ತ್ಯಜಿಸುವರೋ, ಅವರಿಗೆ ನಾವು ಈ ಲೋಕದಲ್ಲಿ ಉತ್ತಮ ವಾಸಸ್ಥಳವನ್ನು ಒದಗಿಸಿಕೊಡುವೆವು. ಪರಲೋಕದಲ್ಲಿ ಲಭಿಸುವ ಪ್ರತಿಫಲ ಅತಿದೊಡ್ಡದು - ಅವರು ಮನಗಾಣುತ್ತಿದ್ದರೆ!

وَالَّذِيْنَ هَاجَرُوْا فِي اللّٰهِ مِنْۢ بَعْدِ مَا ظُلِمُوْا لَنُبَوِّئَنَّهُمْ فِي الدُّنْيَا حَسَنَةً ۚ وَلَاَجْرُ الْاٰخِرَةِ اَكْبَرُ ۘ لَوْ كَانُوْا يَعْلَمُوْنَ ﴿٤١﴾

43. ಅವರು ಸ್ಥಿರಚಿತ್ತರಾಗಿದ್ದುಕೊಂಡು ತಮ್ಮ ಪ್ರಭುವಿನ ಮೇಲೆ ಭರವಸೆಯಿಟ್ಟಿರುವವರಾಗಿದ್ದಾರೆ.

الَّذِيْنَ صَبَرُوْا وَعَلٰى رَبِّهِمْ يَتَوَكَّلُوْنَ ﴿٤٢﴾

44. ನಿನಗಿಂತ ಮುಂಚೆ ದಿವ್ಯ ಸಂದೇಶಗಳ ಸಹಿತ ಪುರುಷರನ್ನು ಹೊರತು ನಾವು (ಪ್ರವಾದಿಗಳನ್ನಾಗಿ) ಕಳುಹಿಸಲಿಲ್ಲ. ನಿಮಗೆ ತಿಳಿದಿಲ್ಲವಾದರೆ, ಗ್ರಂಥಗಳ ಬಗ್ಗೆ ಜ್ಞಾನವಿರುವವರನ್ನು ಕೇಳಿರಿ.

وَمَآ اَرْسَلْنَا مِنْ قَبْلِكَ اِلَّا رِجَالًا نُّوْحِيْٓ اِلَيْهِمْ فَسْـَٔلُوْٓا اَهْلَ الذِّكْرِ اِنْ كُنْتُمْ لَا تَعْلَمُوْنَ ﴿٤٣﴾

45. ಸ್ಪಷ್ಟವಾದ ದೃಷ್ಟಾಂತಗಳು ಮತ್ತು ಗ್ರಂಥಗಳ ಸಹಿತ ನಾವು ಅವರನ್ನು ಕಳುಹಿಸಿದ್ದೆವು. ಈ (ಪರಿಪೂರ್ಣ) ಜ್ಞಾಪಕ (ಗ್ರಂಥ)ವನ್ನು ನಿನಗೆ ನಾವು ಅವತೀರ್ಣಗೊಳಿಸಿದ್ದೇವೆ - ಅವರಿಗೋಸ್ಕರ ಇಳಿಸಲ್ಪಟ್ಟ ಸಂದೇಶವನ್ನು ನೀನು ಜನರಿಗೆ ವಿವರಿಸಿಕೊಡಲಿಕ್ಕೂ ಅವರು ಚಿಂತನೆ ಮಾಡಲಿಕ್ಕೂ ಬೇಕಾಗಿ.

بِالْبَيِّنٰتِ وَالزُّبُرِ ۗ وَاَنْزَلْنَآ اِلَيْكَ الذِّكْرَ لِتُبَيِّنَ لِلنَّاسِ مَا نُزِّلَ اِلَيْهِمْ وَلَعَلَّهُمْ يَتَفَكَّرُوْنَ ﴿٤٤﴾

46. ಕುತಂತ್ರ ಪ್ರಯೋಗಿಸುವವರು, ಅವರನ್ನು ಅಲ್ಲಾಹನು ಭೂಮಿಯೊಳಗೆ ಅಂತರ್ಧಾನವಾಗುವಂತೆ ಮಾಡಲಾರನೆಂದಾಗಲಿ ಅಥವಾ ಅವರಿಗರಿವಿಲ್ಲದ ಕಡೆಯಿಂದ ಅವರಿಗೆ ಶಿಕ್ಷೆ ಎರಗಲಾರದೆಂದಾಗಲಿ ಭಾವಿಸಿ ನಿರ್ಭೀತಿಯಿಂದ ಇದ್ದಾರೆಯೇ?

اَفَاَمِنَ الَّذِيْنَ مَكَرُوا السَّيِّاٰتِ اَنْ يَّخْسِفَ اللّٰهُ بِهِمُ الْاَرْضَ اَوْ يَاْتِيَهُمُ الْعَذَابُ مِنْ حَيْثُ لَا يَشْعُرُوْنَ ﴿٤٥﴾

47. ಅಥವಾ ಅವರು ಅತ್ತಿತ್ತ ತಿರುಗಾಡುತ್ತಿರುವಾಗ ಅವನು ಅವರನ್ನು ಹಿಡಿಯಲಿಕ್ಕಿಲ್ಲವೆಂದು (ಅವರು ಭಾವಿಸಿದ್ದಾರೆಯೇ?). ಅವರಿಂದ (ಅಲ್ಲಾಹನ ಯೋಜನೆಯನ್ನು) ನಿಷ್ಫಲಗೊಳಿಸಲು ಸಾಧ್ಯವಿಲ್ಲ.

اَوْ يَاْخُذَهُمْ فِيْ تَقَلُّبِهِمْ فَمَا هُمْ بِمُعْجِزِيْنَ ﴿٤٦﴾

48. ಅಥವಾ ಅವನು (ಅಲ್ಲಾಹನು) ಅವರನ್ನು ಕ್ರಮೇಣ ನಾಶಪಡಿಸಲಾರನೆಂದು ಅವರು ಭಾವಿಸುತ್ತಾ

اَوْ يَاْخُذَهُمْ عَلٰى تَخَوُّفٍ ۗ فَاِنَّ رَبَّكُمْ

لَرَءُوْفٌ رَّحِيْمٌ ﴿٤٨﴾

ರೇನು? ಆದರೆ, ನಿಶ್ಚಯವಾಗಿಯೂ ನಿಮ್ಮ ಪ್ರಭು ದಯಾವಂತನೂ ಕಾರುಣ್ಯವಂತನೂ ಆಗಿದ್ದಾನೆ.

اَوَلَمْ يَرَوْا اِلٰى مَا خَلَقَ اللّٰهُ مِنْ شَيْءٍ يَّتَفَيَّؤُا ظِلٰلُهٗ عَنِ الْيَمِيْنِ وَالشَّمَآئِلِ سُجَّدًا لِّلّٰهِ وَهُمْ دٰخِرُوْنَ ﴿٤٩﴾

49. ಅಲ್ಲಾಹನು ಸೃಷ್ಟಿಸಿದ ಯಾವುದೇ ವಸ್ತುವಿನ ನೆರಳು ಬಲಕ್ಕೂ ಎಡಕ್ಕೂ ಬಾಗುತ್ತಾ ಅಲ್ಲಾಹನಿಗೆ ಪ್ರಣಾಮವೆರಗುತ್ತಾ ದೀನಭಾವವನ್ನು ತೋರ್ಪಡಿಸುವುದನ್ನು ಅವರು ಕಾಣುವುದಿಲ್ಲವೇ?

وَلِلّٰهِ يَسْجُدُ مَا فِى السَّمٰوٰتِ وَمَا فِى الْاَرْضِ مِنْ دَآبَّةٍ وَّالْمَلٰٓئِكَةُ وَهُمْ لَا يَسْتَكْبِرُوْنَ ﴿٥٠﴾

50. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲ ಜೀವಿಗಳೂ ಅಲ್ಲಾಹನಿಗೆ ಪ್ರಣಾಮವೆರಗುತ್ತವೆ. ದೇವದೂತರೂ ಹಾಗೆಯೇ ಮಾಡುತ್ತಾರೆ. ಅವರು ಅಹಂಭಾವ ತೋರಿಸುವುದಿಲ್ಲ.

يَخَافُوْنَ رَبَّهُمْ مِّنْ فَوْقِهِمْ وَيَفْعَلُوْنَ مَا يُؤْمَرُوْنَ ﴿٥١﴾

51. ಅವರು ತಮ್ಮ ಮೇಲಿರುವ ತಮ್ಮ ಪ್ರಭುವಿಗೆ ಭಯಪಡುತ್ತಾರೆ. ಅವರಿಗೆ ಆಜ್ಞಾಪಿಸಿದ ಪ್ರಕಾರ ಅವರು ವರ್ತಿಸುತ್ತಾರೆ.

وَقَالَ اللّٰهُ لَا تَتَّخِذُوْٓا اِلٰهَيْنِ اثْنَيْنِ ۚ اِنَّمَا هُوَ اِلٰهٌ وَّاحِدٌ ۚ فَاِيَّايَ فَارْهَبُوْنِ ﴿٥٢﴾

52. ಅಲ್ಲಾಹನು ಹೇಳಿರುತ್ತಾನೆ: 'ನೀವು ಎರಡೆರಡು ದೇವರುಗಳನ್ನು ಮಾಡಿಟ್ಟುಕೊಳ್ಳಬೇಡಿರಿ. ನಿಶ್ಚಯವಾಗಿಯೂ ದೇವ ನೊಬ್ಬನೇ. ಆದ್ದರಿಂದ ನನಗೆ ಮಾತ್ರ ಭಯಪಡಿರಿ.'

وَلَهٗ مَا فِى السَّمٰوٰتِ وَالْاَرْضِ وَلَهُ الدِّيْنُ وَاصِبًا ۚ اَفَغَيْرَ اللّٰهِ تَتَّقُوْنَ ﴿٥٣﴾

53. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲವೂ ಅವನಿಗೆ ಸೇರಿವೆ. ಎಂದೆಂದಿಗೂ ಅನುಸರಣೆ ಅವನಿಗೆಯೇ. ಹಾಗಿರುವಾಗ ಅಲ್ಲಾಹನ ಹೊರತು ಬೇರೆ ಯಾರಿಗಾದರೂ ನೀವು ಭಯಪಡುತ್ತೀರಾ?

وَمَا بِكُمْ مِّنْ نِّعْمَةٍ فَمِنَ اللّٰهِ ثُمَّ اِذَا مَسَّكُمُ الضُّرُّ فَاِلَيْهِ تَجْـَٔرُوْنَ ﴿٥٤﴾

54. ನಿಮ್ಮ ಬಳಿಯಿರುವ ಅನುಗ್ರಹಗಳೆಲ್ಲ ಅಲ್ಲಾಹನಿಂದಲೇ ದೊರೆತವು. ಅನಂತರ ನಿಮಗೆ ವಿಪತ್ತೇನಾದರೂ ಬಾಧಿಸಿದರೆ ನೀವು ಸಹಾಯಕ್ಕಾಗಿ ಮೊರೆಯಿಡುವುದು ಅವನಿಗೇ ಆಗಿದೆ.

ثُمَّ اِذَا كَشَفَ الضُّرَّ عَنْكُمْ اِذَا فَرِيْقٌ مِّنْكُمْ بِرَبِّهِمْ يُشْرِكُوْنَ ﴿٥٥﴾

55. ಆ ಬಳಿಕ ನಿಮ್ಮ ವಿಪತ್ತನ್ನು ಅವನು ನಿವಾರಿಸಿದರೆ, ಆದೋ ನಿಮ್ಮ ಪೈಕಿ ಕೆಲವರು ತಮ್ಮ ಪ್ರಭುವಿಗೆ ಸಹಭಾಗಿಗಳನ್ನು ಕಲ್ಪಿಸುತ್ತಾರೆ.





لِيَكْفُرُوْا بِمَآ اٰتَيْنٰهُمْ ۚ فَتَمَتَّعُوْا ۫ فَسَوْفَ تَعْلَمُوْنَ ﴿٥٦﴾

56. ತತ್ಫಲವಾಗಿ, ನಾವು ಅವರಿಗೆ ಒದಗಿಸಿದ ಅನುಗ್ರಹಗಳಿಗೆ ಅವರು ಕೃತಘ್ನತೆ ತೋರಿಸುತ್ತಾರೆ. ಇರಲಿ, ಸ್ವಲ್ಪಕಾಲ ನೀವು ಸುಖ ಅನುಭವಿಸಿರಿ. ಆದರೆ ಅನಂತರ ನೀವು ತಿಳಿಯುವಿರಿ.

وَيَجْعَلُوْنَ لِمَا لَا يَعْلَمُوْنَ نَصِيْبًا مِّمَّا رَزَقْنٰهُمْ ۚ تَاللّٰهِ لَتُسْـَٔلُنَّ عَمَّا كُنْتُمْ تَفْتَرُوْنَ ﴿٥٧﴾

57. ನಾವು ಅವರಿಗೆ ನೀಡಿರುವ ಜೀವನಾಧಾರದಿಂದ ಒಂದಂಶವನ್ನು ಅವರು ತಮಗರಿವಿಲ್ಲದ ಮಿಥ್ಯದೈವಗಳಿಗೆ ಪ್ರತ್ಯೇಕವಾಗಿಡುತ್ತಾರೆ. ಅಲ್ಲಾಹನಾಣೆ, ನೀವು ಏನೆಲ್ಲ ಸುಳ್ಳು ಸೃಷ್ಟಿಸಿರುವಿರೋ, ಆ ಬಗ್ಗೆ ನಿಮ್ಮೊಡನೆ ಕೇಳಲಾಗುವುದು.

وَيَجْعَلُوْنَ لِلّٰهِ الْبَنٰتِ سُبْحٰنَهٗ ۙ وَلَهُمْ مَّا يَشْتَهُوْنَ ﴿٥٨﴾

58. ಅವರು ಅಲ್ಲಾಹನಿಗೆ ಪುತ್ರಿಯರನ್ನು ಕಲ್ಪಿಸುತ್ತಾರೆ. ಅವನಾದರೋ ಪರಮ ಪವಿತ್ರನು. ಅವರು ತಮಗೋಸ್ಕರ ತಾವು ಇಷ್ಟಪಡುವುದನ್ನೇ[311] ಆಶಿಸುತ್ತಾರೆ.

وَاِذَا بُشِّرَ اَحَدُهُمْ بِالْاُنْثٰى ظَلَّ وَجْهُهٗ مُسْوَدًّا وَّهُوَ كَظِيْمٌ ﴿٥٩﴾

59. ಅವರಲ್ಲಿ ಯಾವನಿಗಾದರೂ ಒಂದು ಹೆಣ್ಣು ಮಗು ಹುಟ್ಟಿತೆಂಬ ವಾರ್ತೆಯನ್ನು ತಿಳಿಸಿದರೆ, ಅವನು ತನ್ನ ಕೋಪವನ್ನು ಒಳಗೆಯೇ ಅದುಮಿಡುವುದರಿಂದಾಗಿ ಅವನ ಮುಖ ಕಪ್ಪಿಡುತ್ತದೆ.

يَتَوَارٰى مِنَ الْقَوْمِ مِنْ سُوْٓءِ مَا بُشِّرَ بِهٖ ۚ اَيُمْسِكُهٗ عَلٰى هُوْنٍ اَمْ يَدُسُّهٗ فِى التُّرَابِ ۚ اَلَا سَآءَ مَا يَحْكُمُوْنَ ﴿٦٠﴾

60. ತನಗೆ ಲಭಿಸಿದ ಕೆಟ್ಟ ವಾರ್ತೆ ನಿಮಿತ್ತ ಅವನು ಜನರಿಂದ ಅಡಗುತ್ತಾನೆ. ಅಪಮಾನವನ್ನು ಸಹಿಸಿ ಕೊಂಡು ಅವನು ಅದನ್ನು ಪರಿಪೋಷಿಸುವನೇ? ಅಥವಾ ಅದನ್ನು (ಸಜೀವವಾಗಿ) ಮಣ್ಣಿನಲ್ಲಿ ಹೂಳುವನೇ? ದಿಟವಾಗಿಯೂ ಅವರ ತೀರ್ಮಾನ ಬಹಳ ನಿಕೃಷ್ಟವೇ ಆಗಿದೆ.

لِلَّذِيْنَ لَا يُؤْمِنُوْنَ بِالْاٰخِرَةِ مَثَلُ السَّوْءِ ۚ وَلِلّٰهِ الْمَثَلُ الْاَعْلٰى ۚ وَهُوَ الْعَزِيْزُ الْحَكِيْمُ ﴿٦١﴾

61. ಅತ್ಯಂತ ನಿಕೃಷ್ಟವಾದ ಉಪಮೆ ಪರಲೋಕದ ಬಗ್ಗೆ ವಿಶ್ವಾಸವಿಲ್ಲದವರಿಗೆ ಅನ್ವಯಿಸುತ್ತದೆ. ಅಲ್ಲಾಹನಿಗಾದರೋ ಅತ್ಯುನ್ನತ ಗುಣಮಹಿಮೆಗಳಿವೆ. ಅವನು ಪ್ರತಾಪ ಶಾಲಿಯೂ ಬುದ್ಧಿವಂತನೂ ಆಗಿದ್ದಾನೆ.

311. ಪುತ್ರರನ್ನು.

**62.** ಮನುಷ್ಯರನ್ನು ಅವರ ತಪ್ಪಿಗೋಸ್ಕರ ಅಲ್ಲಾಹನು (ಒಮ್ಮೆಲೇ) ಹಿಡಿದು ಶಿಕ್ಷಿಸುತ್ತಿದ್ದರೆ ಭೂಮಿಯ ಮೇಲೆ ಒಂದು ಜೀವಿಯನ್ನೂ ಅವನು ಉಳಿಯಗೊಡುತ್ತಿರಲಿಲ್ಲ. ಆದರೆ ಒಂದು ನಿಗದಿತ ಅವಧಿಯ ವರೆಗೆ ಅವರಿಗೆ ಅವನು ಕಾಲಾವಕಾಶ ನೀಡುತ್ತಾನೆ. ಹಾಗೆ ಅವರ ಸಮಯ ಬಂದರೆ ಒಂದು ಕ್ಷಣವಾದರೂ ಹಿಂದೆ ಉಳಿಯಲು ಅಥವಾ ಮುಂದೆ ಸಾಗಲು ಅವರಿಂದ ಸಾಧ್ಯವಾಗದು.

وَلَوْ يُؤَاخِذُ اللَّهُ النَّاسَ بِظُلْمِهِم مَّا تَرَكَ عَلَيْهَا مِن دَابَّةٍ وَلَٰكِن يُؤَخِّرُهُمْ إِلَىٰ أَجَلٍ مُّسَمًّى ۖ فَإِذَا جَاءَ أَجَلُهُمْ لَا يَسْتَأْخِرُونَ سَاعَةً ۖ وَلَا يَسْتَقْدِمُونَ ﴿٦٢﴾

**63.** ತಮಗೆ ಇಷ್ಟವಿಲ್ಲದುದನ್ನು ಅವರು ಅಲ್ಲಾಹನಿಗೆ ಅಧ್ಯಾರೋಪಿಸುತ್ತಾರೆ. ತಮಗೇ ಒಳಿತುಂಟಾಗುವುದೆಂದು ಅವರ ನಾಲಗೆಗಳು ಸುಳ್ಳುವಾದ ಮಾಡುತ್ತವೆ. ಯಾವ ಸಂಶಯವೂ ಇಲ್ಲ; ಅವರಿಗೆ ಖಂಡಿತವಾಗಿಯೂ ನರಕ ಶಿಕ್ಷೆ ಇದೆ. ಅಲ್ಲೇ ಅವರನ್ನು ಬಿಟ್ಟುಬಿಡಲಾಗುವುದು.

وَيَجْعَلُونَ لِلَّهِ مَا يَكْرَهُونَ وَتَصِفُ أَلْسِنَتُهُمُ الْكَذِبَ أَنَّ لَهُمُ الْحُسْنَىٰ ۖ لَا جَرَمَ أَنَّ لَهُمُ النَّارَ وَأَنَّهُم مُّفْرَطُونَ ﴿٦٣﴾

**64.** ಅಲ್ಲಾಹನಾಣೆ, ನಿಶ್ಚಯವಾಗಿಯೂ ನಿನಗಿಂತ ಹಿಂದಿನ ಸಮುದಾಯಗಳಿಗೆ ನಾವು ಸಂದೇಶವಾಹಕರನ್ನು ಕಳುಹಿಸಿದ್ದೇವೆ. ಆಗ ಶೈತಾನ ಅವರ ಕೃತ್ಯಗಳನ್ನು ಅವರಿಗೆ ಚಲೋದಾಗಿ ತೋರಿಸಿಕೊಟ್ಟನು. ಹಾಗೆ ಇಂದು ಸಹ ಅವನೇ ಅವರ ಪೋಷಕನಾಗಿರುವನು. ಅವರಿಗೆ ಯಾತನಾಮಯವಾದ ಶಿಕ್ಷೆ ಕಾದಿದೆ.

تَاللَّهِ لَقَدْ أَرْسَلْنَا إِلَىٰ أُمَمٍ مِّن قَبْلِكَ فَزَيَّنَ لَهُمُ الشَّيْطَانُ أَعْمَالَهُمْ فَهُوَ وَلِيُّهُمُ الْيَوْمَ وَلَهُمْ عَذَابٌ أَلِيمٌ ﴿٦٤﴾

**65.** ಜನರು ಯಾವ ವಿಚಾರದಲ್ಲಿ ಭಿನ್ನಾಭಿಪ್ರಾಯವನ್ನು ಹೊಂದುತ್ತಾರೋ ಆ ವಿಚಾರವನ್ನು ನೀನು ಅವರಿಗೆ ವಿವರಿಸಿಕೊಡಲಿಕ್ಕೋಸ್ಕರವೇ ನಾವು ನಿನಗೆ ಈ ಗ್ರಂಥವನ್ನು ಅವತೀರ್ಣಗೊಳಿಸಿದ್ದೇವೆ. ವಿಶ್ವಾಸ ಹೊಂದುವ ಜನರಿಗೆ ಮಾರ್ಗದರ್ಶನವೂ ಕಾರುಣ್ಯವೂ ಆಗಿ ಸಹ (ಈ ಗ್ರಂಥವನ್ನು ಅವತೀರ್ಣಗೊಳಿಸಲಾಗಿದೆ).

وَمَا أَنزَلْنَا عَلَيْكَ الْكِتَابَ إِلَّا لِتُبَيِّنَ لَهُمُ الَّذِي اخْتَلَفُوا فِيهِ ۙ وَهُدًى وَرَحْمَةً لِّقَوْمٍ يُؤْمِنُونَ ﴿٦٥﴾

**66.** ಅಲ್ಲಾಹನು ಆಕಾಶದಿಂದ ಮಳೆಯನ್ನು ಸುರಿಸಿದನು. ಹಾಗೆ, ಅದರ ಮೂಲಕ ಭೂಮಿಯ ನಿರ್ಜೀವತೆಯ ಬಳಿಕ ಅವನು ಅದನ್ನು ಜೀವಂತಗೊಳಿಸಿದನು. ಲಕ್ಷ್ಯವಿಟ್ಟು ಆಲಿಸುವವರಿಗೆ ಖಂಡಿತವಾಗಿಯೂ ಇದರಲ್ಲೊಂದು ದೃಷ್ಟಾಂತವಿದೆ.

وَاللَّهُ أَنزَلَ مِنَ السَّمَاءِ مَاءً فَأَحْيَا بِهِ الْأَرْضَ بَعْدَ مَوْتِهَا ۚ إِنَّ فِي ذَٰلِكَ لَآيَةً لِّقَوْمٍ يَسْمَعُونَ ﴿٦٦﴾





**67.** ದಿಟವಾಗಿಯೂ ಜಾನುವಾರುಗಳಲ್ಲೂ ನಿಮಗೊಂದು ಪಾಠವಿದೆ. ಅವುಗಳ ಹೊಟ್ಟೆಯಲ್ಲಿರುವ ಸೆಗಣಿ ಮತ್ತು ರಕ್ತದ ಮಧ್ಯದಿಂದ ಶುದ್ಧವೂ ಕುಡಿಯುವವರಿಗೆ ರುಚಿಕರವೂ ಆದ ಹಾಲನ್ನು ನಾವು ನಿಮಗೆ ನೀಡುತ್ತೇವೆ.

وَإِنَّ لَكُمْ فِي الْأَنْعَامِ لَعِبْرَةً ۖ نُّسْقِيكُم مِّمَّا فِي بُطُونِهِ مِن بَيْنِ فَرْثٍ وَدَمٍ لَّبَنًا خَالِصًا سَائِغًا لِّلشَّارِبِينَ ﴿٦٧﴾

**68.** ಖರ್ಜೂರದಿಂದಲೂ ದ್ರಾಕ್ಷೆಯಿಂದಲೂ ನೀವು ಮಾದಕ ಪಾನೀಯಗಳನ್ನೂ ಉತ್ತಮ ಆಹಾರಗಳನ್ನೂ ಉತ್ಪಾದಿಸುತ್ತೀರಿ. ಬುದ್ಧಿಶಾಲಿಗಳಾದ ಜನರಿಗೆ ಇದರಲ್ಲಿ ದೃಷ್ಟಾಂತವಿದೆ.

وَمِن ثَمَرَاتِ النَّخِيلِ وَالْأَعْنَابِ تَتَّخِذُونَ مِنْهُ سَكَرًا وَرِزْقًا حَسَنًا ۗ إِنَّ فِي ذَٰلِكَ لَآيَةً لِّقَوْمٍ يَعْقِلُونَ ﴿٦٨﴾

**69.** ನಿನ್ನ ಪ್ರಭು ಜೇನುನೊಣಕ್ಕೆ ವಹ್ಯ್ (ಸಂದೇಶ) ನೀಡಿದನು: 'ಬೆಟ್ಟಗಳಲ್ಲೂ ವೃಕ್ಷಗಳಲ್ಲೂ ಮನುಷ್ಯರು ನಿರ್ಮಿಸುವ ಚಪ್ಪರಗಳಲ್ಲೂ ಗೂಡುಕಟ್ಟು.

وَأَوْحَىٰ رَبُّكَ إِلَى النَّحْلِ أَنِ اتَّخِذِي مِنَ الْجِبَالِ بُيُوتًا وَمِنَ الشَّجَرِ وَمِمَّا يَعْرِشُونَ ﴿٦٩﴾

**70.** 'ಅನಂತರ ಎಲ್ಲ ಫಲವರ್ಗಗಳಿಂದ ನೀನು ತಿನ್ನು. ನಿನ್ನ ಪ್ರಭು ನಿಶ್ಚಯಿಸಿದ ಮಾರ್ಗದಲ್ಲಿ ವಿಧೇಯತೆಯಿಂದ ಸಂಚರಿಸು.' ಅವುಗಳ ಹೊಟ್ಟೆ ಯಿಂದ ವಿವಿಧ ವರ್ಣಗಳಿಂದ ಕೂಡಿದ ಒಂದು ಪಾನೀಯ ಹೊರಬರುತ್ತದೆ. ಅದರಲ್ಲಿ ಜನರಿಗೆ ರೋಗ ಶಮನವಿದೆ. ನಿಶ್ಚಯವಾಗಿಯೂ ಅದರಲ್ಲಿ ಚಿಂತಿಸುವವರಿಗೆ ದೃಷ್ಟಾಂತವಿದೆ.

ثُمَّ كُلِي مِن كُلِّ الثَّمَرَاتِ فَاسْلُكِي سُبُلَ رَبِّكِ ذُلُلًا ۚ يَخْرُجُ مِن بُطُونِهَا شَرَابٌ مُّخْتَلِفٌ أَلْوَانُهُ فِيهِ شِفَاءٌ لِّلنَّاسِ ۗ إِنَّ فِي ذَٰلِكَ لَآيَةً لِّقَوْمٍ يَتَفَكَّرُونَ ﴿٧٠﴾

**71.** ಅಲ್ಲಾಹನೇ ನಿಮ್ಮನ್ನು ಸೃಷ್ಟಿಸಿದ್ದಾನೆ. ಅನಂತರ ನಿಮ್ಮನ್ನು ಅವನೇ ಮರಣಗೊಳಿಸುತ್ತಾನೆ. ನಿಮ್ಮ ಪೈಕಿ ಕೆಲವರು ಜ್ಞಾನ ಗಳಿಸಿದ ಬಳಿಕವೂ ಏನೂ ತಿಳಿಯದವರಾಗುವಂತಹ ಅತಿವೃದ್ಧಾಪ್ಯವನ್ನು ಪಡೆಯುತ್ತಾರೆ. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ಸರ್ವಶಕ್ತನೂ ಆಗಿದ್ದಾನೆ.

وَاللَّهُ خَلَقَكُمْ ثُمَّ يَتَوَفَّاكُمْ ۚ وَمِنكُم مَّن يُرَدُّ إِلَىٰ أَرْذَلِ الْعُمُرِ لِكَيْ لَا يَعْلَمَ بَعْدَ عِلْمٍ شَيْئًا ۚ إِنَّ اللَّهَ عَلِيمٌ قَدِيرٌ ﴿٧١﴾

**72.** ನಿಮ್ಮಲ್ಲಿ ಕೆಲವರನ್ನು ಬೇರೆ ಕೆಲವರಿಗಿಂತ ಅಲ್ಲಾಹನು ಜೀವನಾಧಾರದಲ್ಲಿ ಶ್ರೇಷ್ಠರನ್ನಾಗಿ ಮಾಡಿರುವನು. ಆದರೆ ಶ್ರೇಷ್ಠತೆಯನ್ನು ಪಡೆದವರು

وَاللَّهُ فَضَّلَ بَعْضَكُمْ عَلَىٰ بَعْضٍ فِي الرِّزْقِ ۚ فَمَا الَّذِينَ فُضِّلُوا بِرَادِّي

ತಮ್ಮ ಸಂಪತ್ತನ್ನು ಅವರ ಅಧೀನದಲ್ಲಿರುವವರಿಗೆ ಅವರೆಲ್ಲರೂ ಸಮಾನರಾಗುವಂತೆ ಬಿಟ್ಟುಕೊಡಲಾರರು. ಹಾಗಾದರೆ ಅಲ್ಲಾಹನ ಅನುಗ್ರಹವನ್ನು ಅವರು ನಿರಾಕರಿಸುತ್ತಾರೋ?

رِزْقِهِمْ عَلٰى مَا مَلَكَتْ اَيْمَانُهُمْ فَهُمْ فِيْهِ سَوَآءٌ ؕ اَفَبِنِعْمَةِ اللّٰهِ يَجْحَدُوْنَ ﴿٧١﴾

**73.** ಅಲ್ಲಾಹನು ನಿಮಗೆ ನಿಮ್ಮ ವರ್ಗದಿಂದಲೇ ಬಾಳ ಸಂಗಾತಿಗಳ ಸೃಷ್ಟಿಸಿದ್ದಾನೆ. ನಿಮ್ಮ ಬಾಳ ಸಂಗಾತಿಗಳಿಂದ ಪುತ್ರರನ್ನೂ ಪೌತ್ರರನ್ನೂ ಅವನು ನಿಮಗೆ ನೀಡಿರುವವನು ಮತ್ತು ಉತ್ತಮವಾದ ಆಹಾರಗಳನ್ನು ನಿಮಗೆ ಒದಗಿಸಿರುವವನು. ಹಾಗಿರುವಾಗ ನಿರರ್ಥಕವಾದ ವಿಚಾರಗಳನ್ನು ಅವರು ನಂಬಿ ಅಲ್ಲಾಹನ ಅನುಗ್ರಹವನ್ನು ನಿರಾಕರಿಸುತ್ತಾರೋ?

وَاللّٰهُ جَعَلَ لَكُمْ مِّنْ اَنْفُسِكُمْ اَزْوَاجًا وَّجَعَلَ لَكُمْ مِّنْ اَزْوَاجِكُمْ بَنِيْنَ وَحَفَدَةً وَّرَزَقَكُمْ مِّنَ الطَّيِّبٰتِ ؕ اَفَبِالْبَاطِلِ يُؤْمِنُوْنَ وَبِنِعْمَتِ اللّٰهِ هُمْ يَكْفُرُوْنَ ﴿٧٢﴾

**74.** ಅಲ್ಲಾಹನನ್ನು ಬಿಟ್ಟು, ಆಕಾಶಗಳಿಂದಾಗಲಿ ಭೂಮಿಯಿಂದಾಗಲಿ ಅನುಗ್ರಹವಾಗಿ ಏನನ್ನಾದರೂ ತಮಗೋಸ್ಕರ ಒದಗಿಸದ ಹಾಗೂ ಅದರ ಸಾಮರ್ಥ್ಯವಿಲ್ಲದ ಶಕ್ತಿಗಳನ್ನು ಅವರು ಆರಾಧಿಸುತ್ತಾರೆ.

وَيَعْبُدُوْنَ مِنْ دُوْنِ اللّٰهِ مَا لَا يَمْلِكُ لَهُمْ رِزْقًا مِّنَ السَّمٰوٰتِ وَالْاَرْضِ شَيْـًٔا وَّلَا يَسْتَطِيْعُوْنَ ﴿٧٣﴾

**75.** ಆದುದರಿಂದ ನೀವು ಅಲ್ಲಾಹನಿಗೆ ಸಮಾನರನ್ನು ಕಲ್ಪಿಸಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಬಲ್ಲವನಾಗಿದ್ದಾನೆ; ನೀವು ಬಲ್ಲವರಲ್ಲ.

فَلَا تَضْرِبُوْا لِلّٰهِ الْاَمْثَالَ ؕ اِنَّ اللّٰهَ يَعْلَمُ وَاَنْتُمْ لَا تَعْلَمُوْنَ ﴿٧٤﴾

**76.** (ಅನ್ಯನ) ಅಧೀನದಲ್ಲಿರುವ ಹಾಗೂ ಯಾವುದಕ್ಕೂ ಅಸಮರ್ಥನಾಗಿರುವ ಒಬ್ಬ ಗುಲಾಮನನ್ನು ಅಲ್ಲಾಹನು ಉದಾಹರಿಸುತ್ತಾನೆ - ನಮ್ಮಿಂದ ಉತ್ತಮ ಜೀವನಾಧಾರವನ್ನು ನಾವು ಒದಗಿಸಿಕೊಟ್ಟ ಮತ್ತೊಬ್ಬ (ಸ್ವತಂತ್ರ) ವ್ಯಕ್ತಿಯನ್ನು ಸಹ. ಅವನು (ಆ ಸ್ವತಂತ್ರ ವ್ಯಕ್ತಿ) ಅದರಿಂದ ಗೋಪ್ಯವಾಗಿಯೂ ಬಹಿರಂಗವಾಗಿಯೂ ವ್ಯಯಿಸುತ್ತಾನೆ. ಅವರು ಸಮಾನರಾಗುವರೇ? ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ. ಆದರೆ ಅವರಲ್ಲಿ ಹೆಚ್ಚಿನವರು ಮನವರಿಕೆ ಮಾಡಿಕೊಳ್ಳುವುದಿಲ್ಲ.

ضَرَبَ اللّٰهُ مَثَلًا عَبْدًا مَّمْلُوْكًا لَّا يَقْدِرُ عَلٰى شَيْءٍ وَّمَنْ رَّزَقْنٰهُ مِنَّا رِزْقًا حَسَنًا فَهُوَ يُنْفِقُ مِنْهُ سِرًّا وَّجَهْرًا ؕ هَلْ يَسْتَوٗنَ ؕ اَلْحَمْدُ لِلّٰهِ ؕ بَلْ اَكْثَرُهُمْ لَا يَعْلَمُوْنَ ﴿٧٥﴾





**77.** ಅಲ್ಲಾಹನು ಇಬ್ಬರು ವ್ಯಕ್ತಿಗಳ ಬೇರೊಂದು ಉದಾಹರಣೆಯನ್ನೂ ನೀಡುತ್ತಾನೆ. ಅವರಲ್ಲೊಬ್ಬ ಮೂಕನು. ಅವನಿಗೇನೂ ಸಾಮರ್ಥ್ಯವಿಲ್ಲ. ಅವನು ತನ್ನ ಯಜಮಾನನಿಗೆ ಒಂದು ಭಾರವಾಗಿದ್ದಾನೆ. ಆತನು ಅವನನ್ನು ಎಲ್ಲಿಗೆ ತಿರುಗಿಸಿಬಿಟ್ಟರೂ ಅವನಿಂದ ಏನೂ ಪ್ರಯೋಜನವಾಗುವುದಿಲ್ಲ. ಮತ್ತೊಬ್ಬನು ಸ್ವಯಂ ಸತ್ಪಥದಲ್ಲಿದ್ದುಕೊಂಡು ನ್ಯಾಯನಿಷ್ಠೆಯನ್ನು ಬೋಧಿಸುತ್ತಾನೆ. ಅವರಿಬ್ಬರೂ ಸಮಾನರಾಗುವರೇ?

وَضَرَبَ اللّٰهُ مَثَلًا رَّجُلَيْنِ اَحَدُهُمَآ اَبْكَمُ لَا يَقْدِرُ عَلٰى شَيْءٍ وَّهُوَ كَلٌّ عَلٰى مَوْلٰىهُ ۙ اَيْنَمَا يُوَجِّهْهُّ لَا يَاْتِ بِخَيْرٍ ؕ هَلْ يَسْتَوِيْ هُوَ ۙ وَمَنْ يَّاْمُرُ بِالْعَدْلِ ۙ وَهُوَ عَلٰى صِرَاطٍ مُّسْتَقِيْمٍ ﴿٧٦﴾

**78.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಅಗೋಚರ ವಿಚಾರಗಳೆಲ್ಲ ಅಲ್ಲಾಹನಿಗೆ ಸೇರುತ್ತವೆ. ಆ ನಿಶ್ಚಿತ ಸಮಯದ ವಿಚಾರ ಕಣ್ಣೆವೆ ಮುಚ್ಚಿ ತೆರೆಯುವಂತೆ ಇದೆ. ಅಥವಾ ಅದು ಇನ್ನೂ ಹತ್ತಿರವಿದೆ. ನಿಶ್ಚಯವಾಗಿಯೂ ಅಲ್ಲಾಹನು ಸರ್ವಸಾಮರ್ಥ್ಯವುಳ್ಳವನಾಗಿದ್ದಾನೆ.

وَلِلّٰهِ غَيْبُ السَّمٰوٰتِ وَالْاَرْضِ ؕ وَمَآ اَمْرُ السَّاعَةِ اِلَّا كَلَمْحِ الْبَصَرِ اَوْ هُوَ اَقْرَبُ ؕ اِنَّ اللّٰهَ عَلٰى كُلِّ شَيْءٍ قَدِيْرٌ ﴿٧٧﴾

**79.** ನಿಮಗೆ ಏನೂ ತಿಳಿಯಲಸಾಧ್ಯವಾದ ಸ್ಥಿತಿಯಲ್ಲಿ ಅಲ್ಲಾಹನು ನಿಮ್ಮನ್ನು ನಿಮ್ಮ ತಾಯಂದಿರ ಉದರಗಳಿಂದ ಹೊರಗೆ ತಂದನು. ಅವನು ನಿಮಗೆ ಕಿವಿಗಳನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ದಯಪಾಲಿಸಿದನು - ನೀವು ಕೃತಜ್ಞತೆ ತೋರಿಸುವವರಾಗಲಿಕ್ಕೋಸ್ಕರ.

وَاللّٰهُ اَخْرَجَكُمْ مِّنْ بُطُوْنِ اُمَّهٰتِكُمْ لَا تَعْلَمُوْنَ شَيْـًٔا ۙ وَّجَعَلَ لَكُمُ السَّمْعَ وَالْاَبْصَارَ وَالْاَفْـِٕدَةَ ۙ لَعَلَّكُمْ تَشْكُرُوْنَ ﴿٧٨﴾

**80.** ಅಂತರಿಕ್ಷದಲ್ಲಿ (ಅಲ್ಲಾಹನ ನಿಯಮಗಳಿಗೆ) ಅಧೀನವಾದ ಸ್ಥಿತಿಯಲ್ಲಿ ಅವರು ಪಕ್ಷಿಗಳನ್ನು ಕಾಣುವುದಿಲ್ಲವೇ? ಅಲ್ಲಾಹನ ಹೊರತು ಬೇರೆ ಯಾರೂ ಅವುಗಳನ್ನು ನಿಯಂತ್ರಿಸುವುದಿಲ್ಲ. ದಿಟವಾಗಿಯೂ ವಿಶ್ವಾಸ ಹೊಂದುವವರಿಗೆ ಅದರಲ್ಲಿ ಹಲವು ದೃಷ್ಟಾಂತಗಳಿವೆ.

اَلَمْ يَرَوْا اِلَى الطَّيْرِ مُسَخَّرٰتٍ فِيْ جَوِّ السَّمَآءِ ؕ مَا يُمْسِكُهُنَّ اِلَّا اللّٰهُ ؕ اِنَّ فِيْ ذٰلِكَ لَاٰيٰتٍ لِّقَوْمٍ يُّؤْمِنُوْنَ ﴿٧٩﴾

**81.** ಅಲ್ಲಾಹನು ನಿಮಗೆ ನಿಮ್ಮ ಮನೆಗಳನ್ನು ವಿಶ್ರಾಂತಿಯ ಸ್ಥಳವನ್ನಾಗಿ ಮಾಡಿರುವವನು. ನಿಮಗೆ ಅವನು ಮೃಗಗಳ ಚರ್ಮದಿಂದಲೂ ಮನೆಗಳನ್ನು

وَاللّٰهُ جَعَلَ لَكُمْ مِّنْ بُيُوْتِكُمْ سَكَنًا وَّجَعَلَ لَكُمْ مِّنْ جُلُوْدِ الْاَنْعَامِ بُيُوْتًا

(ಡೇರೆಗಳನ್ನು) ಒದಗಿಸಿ ಕೊಟ್ಟಿರುವವನು. ನೀವು ಯಾತ್ರೆಮಾಡುತ್ತಿರುವ ಸಮಯದಲ್ಲಿ ಮತ್ತು ಯಾತ್ರೆಯ ಮಧ್ಯೆ ಎಲ್ಲಿಯಾದರೂ ತಂಗುವ ಸಮಯದಲ್ಲಿ ಅದು ನಿಮಗೆ ಹಗುರವಾಗಿದ್ದು ಅನುಕೂಲಕರವಾಗಿರುತ್ತದೆ. ಅವುಗಳ (ಮೃಗಗಳ) ಉಣ್ಣೆ, ತುಪ್ಪುಳು, ರೋಮಗಳಿಂದ ನಿಮಗೆ ಗೃಹೋಪಯೋಗಿ ಸಾಧನಗಳನ್ನೂ ತಾತ್ಕಾಲಿಕವಾಗಿ ಉಪಯೋಗಿಸುವ ವಸ್ತುಗಳನ್ನೂ ಅವನು ದಯಪಾಲಿಸಿರುವನು.

تَسْتَخِفُّوْنَهَا يَوْمَ ظَعْنِكُمْ وَيَوْمَ إِقَامَتِكُمْ ۙ وَمِنْ أَصْوَافِهَا وَأَوْبَارِهَا وَأَشْعَارِهَا أَثَاثًا وَّمَتَاعًا إِلٰى حِيْنٍ ﴿٨٠﴾

82. ಅಲ್ಲಾಹನು ಸೃಷ್ಟಿಸಿದ ಕೆಲವು ವಸ್ತುಗಳಿಂದ ನಿಮಗೆ ಅವನು ನೆರಳನ್ನು ಒದಗಿಸಿರುವನು. ಪರ್ವತಗಳಲ್ಲಿ ನಿಮಗೆ ಅವನು ಆಶ್ರಯಸ್ಥಾನವನ್ನು ಮಾಡಿರುವನು. ಉಷ್ಣದಿಂದ ನಿಮ್ಮನ್ನು ಕಾಪಾಡುವ ಉಡುಪುಗಳನ್ನೂ ನಿಮ್ಮ ಯುದ್ಧಗಳಲ್ಲಿ ನಿಮ್ಮನ್ನು ರಕ್ಷಿಸುವ ಕವಚಗಳನ್ನೂ ಅವನು ನಿಮಗೆ ದಯಪಾಲಿಸಿರುವನು. ನೀವು (ಅವನಿಗೆ) ವಿಧೇಯತೆ ತೋರಿಸಲಿಕ್ಕಾಗಿ ಈ ರೀತಿ ಅವನು ತನ್ನ ಅನುಗ್ರಹಗಳನ್ನು ನಿಮಗೆ ಪೂರ್ಣಗೊಳಿಸಿರುವನು.

وَاللّٰهُ جَعَلَ لَكُمْ مِّمَّا خَلَقَ ظِلٰلًا وَّجَعَلَ لَكُمْ مِّنَ الْجِبَالِ أَكْنَانًا وَّجَعَلَ لَكُمْ سَرَابِيْلَ تَقِيْكُمُ الْحَرَّ وَسَرَابِيْلَ تَقِيْكُمْ بَأْسَكُمْ ۚ كَذٰلِكَ يُتِمُّ نِعْمَتَهٗ عَلَيْكُمْ لَعَلَّكُمْ تُسْلِمُوْنَ ﴿٨١﴾

83. ಇನ್ನು, ಅವರು ಮುಖ ತಿರುಗಿಸಿ ಹೋದರೆ, ಸ್ಪಷ್ಟವಾದ ರೀತಿಯಲ್ಲಿ ಸಂದೇಶವನ್ನು ತಲಪಿಸುವುದು ಮಾತ್ರವೇ ನಿನ್ನ ಕರ್ತವ್ಯವಾಗಿದೆ.

فَإِنْ تَوَلَّوْا فَإِنَّمَا عَلَيْكَ الْبَلٰغُ الْمُبِيْنُ ﴿٨٢﴾

84. ಅಲ್ಲಾಹನ ಅನುಗ್ರಹಗಳನ್ನು ಅವರು ಅರಿತಿರುವರಾದರೂ ಅವುಗಳನ್ನು ಅವರು ಅಲ್ಲಗಳೆಯುತ್ತಾರೆ. ಅವರಲ್ಲಿ ಹೆಚ್ಚಿನವರು ಕೃತಘ್ನರಾಗಿದ್ದಾರೆ.

يَعْرِفُوْنَ نِعْمَتَ اللّٰهِ ثُمَّ يُنْكِرُوْنَهَا وَأَكْثَرُهُمُ الْكٰفِرُوْنَ ﴿٨٣﴾

85. ಪ್ರತಿಯೊಂದು ಸಮುದಾಯದಿಂದಲೂ ಸಾಕ್ಷಿಯನ್ನು ನಾವು ನಿಲ್ಲಿಸುವ ದಿನ (ಸ್ಮರಿಸಿರಿ). ಅನಂತರ ಅವಿಶ್ವಾಸಿಗಳಿಗೆ (ನೆಪಹೇಳಲು) ಅನುಮತಿ ನೀಡಲಾಗದು. ಅವರ ಯಾವುದೇ ಯಾಚನೆ ಸಹ ಸ್ವೀಕರಿಸಲ್ಪಡಲಾರದು.

وَيَوْمَ نَبْعَثُ مِنْ كُلِّ أُمَّةٍ شَهِيْدًا ثُمَّ لَا يُؤْذَنُ لِلَّذِيْنَ كَفَرُوْا وَلَا هُمْ يُسْتَعْتَبُوْنَ ﴿٨٤﴾

86. ದುಷ್ಕೃತ್ಯ ಮಾಡಿದವರು ಶಿಕ್ಷೆಯನ್ನು ಕಂಡರೆ,

وَإِذَا رَأَ الَّذِيْنَ ظَلَمُوا الْعَذَابَ فَلَا





ಆಗ ಅವರಿಗೆ ಅದನ್ನು ಲಘೂಕರಿಸಲಾಗದು. ಅವರಿಗೆ ಕಾಲಾವಕಾಶವೂ ನೀಡಲಾಗದು.

يُخَفَّفُ عَنْهُمْ وَلَا هُمْ يُنْظَرُوْنَ ﴿٨٥﴾

87. ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸಿದವರು ತಮ್ಮ (ಕಲ್ಪಿತ) ಸಹಭಾಗಿಗಳನ್ನು ಕಾಣುವಾಗ, 'ನಮ್ಮ ಪ್ರಭೂ, ನಿನ್ನ ಬದಲು ನಾವು ಕರೆದು ಪ್ರಾರ್ಥಿಸುತ್ತಿದ್ದ ಸಹಭಾಗಿಗಳು ಇವರೇ ಆಗಿದ್ದಾರೆ' ಎಂದು ಹೇಳುವರು. ಆಗ ಅವರು, 'ಖಂಡಿತವಾಗಿಯೂ ನೀವು ಸುಳ್ಳು ಹೇಳುತ್ತೀರಿ' ಎಂದು ಅವರಿಗೆ ಮುಯ್ಯಾಡುವರು.

وَإِذَا رَأَ الَّذِيْنَ أَشْرَكُوْا شُرَكَآءَهُمْ قَالُوْا رَبَّنَا هٰٓؤُلَآءِ شُرَكَآؤُنَا الَّذِيْنَ كُنَّا نَدْعُوْا مِنْ دُوْنِكَ ۚ فَأَلْقَوْا إِلَيْهِمُ الْقَوْلَ إِنَّكُمْ لَكٰذِبُوْنَ ﴿٨٦﴾

88. ಅಂದು ಅವರು ಅಲ್ಲಾಹನ ಸನ್ನಿಧಿಯಲ್ಲಿ ವಿಧೇಯತೆಯನ್ನು ನಿವೇದಿಸುವರು. ಅವರು ಸುಳ್ಳಾಗಿ ಸೃಜಿಸುತ್ತಿದ್ದುದೆಲ್ಲ (ಅಂದು) ಅವರಿಗೆ ನಿಷ್ಪ್ರಯೋಜಕವಾಗುವುವು.

وَأَلْقَوْا إِلَى اللّٰهِ يَوْمَئِذِ ٍالسَّلَمَ وَضَلَّ عَنْهُمْ مَّا كَانُوْا يَفْتَرُوْنَ ﴿٨٧﴾

89. ಅವಿಶ್ವಾಸಿಗಳಾಗಿದ್ದುಕೊಂಡು ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುತ್ತಿದ್ದವರು ಕಲಹವನ್ನುಂಟುಮಾಡುತ್ತಿದ್ದ ಕಾರಣದಿಂದ ನಾವು ಅವರಿಗೆ ಶಿಕ್ಷೆಯ ಮೇಲೆ ಶಿಕ್ಷೆಯನ್ನು ಕೊಡುವೆವು.

اَلَّذِيْنَ كَفَرُوْا وَصَدُّوْا عَنْ سَبِيْلِ اللّٰهِ زِدْنٰهُمْ عَذَابًا فَوْقَ الْعَذَابِ بِمَا كَانُوْا يُفْسِدُوْنَ ﴿٨٨﴾

90. ಆ ದಿನದಂದು ಪ್ರತಿಯೊಂದು ಸಮುದಾಯದಲ್ಲೂ ನಾವು ಅವರಿಗೆ ವಿರುದ್ಧವಾಗಿ ಅವರಿಂದಲೇ ಸಾಕ್ಷಿಯನ್ನು ನಿಲ್ಲಿಸುವೆವು ಹಾಗೂ (ಅದೇ ಪ್ರಕಾರ) ಈ ಜನರ ವಿರುದ್ಧವಾಗಿ ನಿನ್ನನ್ನು ಒಬ್ಬ ಸಾಕ್ಷಿಯಾಗಿ ತರುವೆವು. ಈ ಗ್ರಂಥವನ್ನು ನಾವು ನಿನಗೆ ಎಲ್ಲ ವಿಚಾರಗಳನ್ನು ವಿಶದಪಡಿಸಲು ಹಾಗೂ ಅಲ್ಲಾಹನಿಗೆ ಶರಣಾಗುವವರಿಗೆ ಮಾರ್ಗದರ್ಶನ, ಕರುಣೆ ಮತ್ತು ಶುಭವಾರ್ತೆಯಾಗಿ ಅವತೀರ್ಣಗೊಳಿಸಿರುವೆವು.

وَيَوْمَ نَبْعَثُ فِيْ كُلِّ أُمَّةٍ شَهِيْدًا عَلَيْهِمْ مِّنْ أَنْفُسِهِمْ وَجِئْنَا بِكَ شَهِيْدًا عَلٰى هٰٓؤُلَآءِ ۚ وَنَزَّلْنَا عَلَيْكَ الْكِتٰبَ تِبْيَانًا لِّكُلِّ شَيْءٍ وَّهُدًى وَّرَحْمَةً وَّبُشْرٰى لِلْمُسْلِمِيْنَ ﴿٨٩﴾

91. ನ್ಯಾಯ ನಿಷ್ಠೆಗೆ ಬದ್ಧರಾಗಲಿಕ್ಕೂ ಔದಾರ್ಯ ತೋರಿಸಲಿಕ್ಕೂ ನಿಕಟ ಬಂಧುಗಳಿಗೆ ಎಂಬಂತೆ (ಪರರಿಗೂ) ಸಹಾಯ ಮಾಡಲಿಕ್ಕೂ ಅಲ್ಲಾಹನು ಆಜ್ಞಾಪಿಸುತ್ತಾನೆ. ಅಸಭ್ಯತೆಯನ್ನೂ ದುಷ್ಕೃತ್ಯವನ್ನೂ ನಿಯಮೋಲ್ಲಂಘನೆಯನ್ನೂ ಅವನು ನಿಷಿದ್ಧಗೊಳಿಸಿದ್ದಾನೆ. ಈ

إِنَّ اللّٰهَ يَأْمُرُ بِالْعَدْلِ وَالْإِحْسَانِ وَإِيْتَآئِ ذِي الْقُرْبٰى وَيَنْهٰى عَنِ الْفَحْشَآءِ وَالْمُنْكَرِ وَالْبَغْيِ ۚ يَعِظُكُمْ

لَعَلَّكُمْ تَذَكَّرُونَ ﴿٩١﴾

ಬಗ್ಗೆ ಲಕ್ಷ್ಯಗೊಡಲಿಕ್ಕೆ ಅವನು ನಿಮಗೆ ಉಪದೇಶ ನೀಡುತ್ತಾನೆ.

وَأَوْفُوا بِعَهْدِ اللَّهِ إِذَا عَاهَدْتُمْ وَلَا تَنْقُضُوا الْأَيْمَانَ بَعْدَ تَوْكِيدِهَا وَقَدْ جَعَلْتُمُ اللَّهَ عَلَيْكُمْ كَفِيلًا ۚ إِنَّ اللَّهَ يَعْلَمُ مَا تَفْعَلُونَ ﴿٩٢﴾

92. ನೀವು ಅಲ್ಲಾಹನೊಡನೆ ಮಾಡಿದ ಕರಾರನ್ನು ಪಾಲಿಸಿರಿ. ಅಲ್ಲಾಹನನ್ನು ನೀವು ಜಾಮೀನುದಾರನನ್ನಾಗಿ ಮಾಡಿ ದೃಢ ಪ್ರತಿಜ್ಞೆಗೈದ ನಂತರ ಅದನ್ನು ಉಲ್ಲಂಘಿಸಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ತಿಳಿಯುತ್ತಾನೆ.

وَلَا تَكُونُوا كَالَّتِي نَقَضَتْ غَزْلَهَا مِنْ بَعْدِ قُوَّةٍ أَنْكَاثًا تَتَّخِذُونَ أَيْمَانَكُمْ دَخَلًا بَيْنَكُمْ أَنْ تَكُونَ أُمَّةٌ هِيَ أَرْبَىٰ مِنْ أُمَّةٍ ۚ إِنَّمَا يَبْلُوكُمُ اللَّهُ بِهِ ۚ وَلَيُبَيِّنَنَّ لَكُمْ يَوْمَ الْقِيَامَةِ مَا كُنْتُمْ فِيهِ تَخْتَلِفُونَ ﴿٩٣﴾

93. ತಾನು ನೂತ ನೂಲನ್ನು, ಅದು ಗಟ್ಟಿಯಾದ ಬಳಿಕ ತುಂಡರಿಸಿದವಳಂತೆ ನೀವು ಆಗಬೇಡಿರಿ. ಒಂದು ಪಂಗಡವು ಇನ್ನೊಂದು ಪಂಗಡಕ್ಕಿಂತ ಬಲಿಷ್ಠವಾಗಲಿಕ್ಕೋಸ್ಕರ ನೀವು ನಿಮ್ಮ ಪ್ರತಿಜ್ಞೆಗಳನ್ನು ನಿಮ್ಮ ಮಧ್ಯೆ ವಂಚನೆಗೆ ದಾರಿಮಾಡಿಕೊಳ್ಳುತ್ತೀರಿ. ನಿಶ್ಚಯವಾಗಿಯೂ ಆ ಮೂಲಕ ಅಲ್ಲಾಹನು ನಿಮ್ಮ ಸತ್ವ ಪರೀಕ್ಷೆ ಮಾಡುತ್ತಾನೆ. ನೀವು ಭಿನ್ನಾಭಿಪ್ರಾಯ ಹೊಂದಿರುವ ವಿಚಾರದ ಬಗ್ಗೆ ಪುನರುತ್ಥಾನ ದಿನದಂದು ಅಲ್ಲಾಹನು ನಿಮಗೆ ಸ್ಪಷ್ಟಗೊಳಿಸುವನು.

وَلَوْ شَاءَ اللَّهُ لَجَعَلَكُمْ أُمَّةً وَاحِدَةً وَلَٰكِنْ يُضِلُّ مَنْ يَشَاءُ وَيَهْدِي مَنْ يَشَاءُ ۚ وَلَتُسْأَلُنَّ عَمَّا كُنْتُمْ تَعْمَلُونَ ﴿٩٤﴾

94. ಅಲ್ಲಾಹನು ಬಯಸಿದ್ದರೆ ನಿಮ್ಮನ್ನೆಲ್ಲ ಅವನು ಒಂದೇ ಸಮುದಾಯವನ್ನಾಗಿ ಮಾಡುತ್ತಿದ್ದನು. ಆದರೆ ದಾರಿತಪ್ಪಲು ಇಚ್ಛಿಸುವವನನ್ನು ಅವನು ದಾರಿತಪ್ಪಲು ಬಿಡುತ್ತಾನೆ. ಸರಿಯಾದ ಮಾರ್ಗವನ್ನು ಇಚ್ಛಿಸುವವನನ್ನು ಅವನು ಸರಿದಾರಿಯಲ್ಲಿ ನಡೆಸುತ್ತಾನೆ. ನಿಮ್ಮ ಕೃತ್ಯಗಳ ಬಗ್ಗೆ ಖಂಡಿತವಾಗಿಯೂ ನಿಮ್ಮನ್ನು ಪ್ರಶ್ನಿಸಲಾಗುವುದು.

وَلَا تَتَّخِذُوا أَيْمَانَكُمْ دَخَلًا بَيْنَكُمْ فَتَزِلَّ قَدَمٌ بَعْدَ ثُبُوتِهَا وَتَذُوقُوا السُّوءَ بِمَا صَدَدْتُمْ عَنْ سَبِيلِ اللَّهِ ۖ وَلَكُمْ عَذَابٌ عَظِيمٌ ﴿٩٥﴾

95. ನಿಮ್ಮ ಪ್ರತಿಜ್ಞೆಗಳನ್ನು ನೀವು ಪರಸ್ಪರ ಮೋಸಗೊಳಿಸುವ ಸಾಧನವನ್ನಾಗಿ ಮಾಡಬೇಡಿರಿ. ಹಾಗೆ ಮಾಡಿದರೆ (ನಿಮ್ಮ) ಪಾದಗಳು ಸ್ಥಿರಗೊಂಡ ಬಳಿಕ ಜಾರಿಹೋಗಬಹುದು. ಅಲ್ಲಾಹನ ಮಾರ್ಗದಿಂದ ನೀವು ಜನರನ್ನು ತಡೆದ ಕಾರಣಕ್ಕಾಗಿ ಅದರ ದುಷ್ಪರಿಣಾಮವನ್ನು ನೀವು ಅನುಭವಿಸಬೇಕಾಗುವುದು. ನಿಮಗೆ ಕಠಿಣವಾದ ಶಿಕ್ಷೆಯೂ ಇದೆ.





وَلَا تَشْتَرُوا بِعَهْدِ اللَّهِ ثَمَنًا قَلِيلًا ۚ إِنَّمَا عِنْدَ اللَّهِ هُوَ خَيْرٌ لَكُمْ إِنْ كُنْتُمْ تَعْلَمُونَ ﴿٩٦﴾

96. ನೀವು ಅಲ್ಲಾಹನ ಒಡಂಬಡಿಕೆಯನ್ನು ತುಚ್ಛವಾದ ಬೆಲೆಗೆ ವಿನಿಮಯ ಮಾಡಬೇಡಿರಿ. ನೀವು ತಿಳಿಯುವುದಾದರೆ, ಅಲ್ಲಾಹನ ಬಳಿಯಲ್ಲಿರುವುದೇ ನಿಮಗೆ ಗುಣಕರವಾದುದು.

مَا عِنْدَكُمْ يَنْفَدُ ۖ وَمَا عِنْدَ اللَّهِ بَاقٍ ۗ وَلَنَجْزِيَنَّ الَّذِينَ صَبَرُوا أَجْرَهُمْ بِأَحْسَنِ مَا كَانُوا يَعْمَلُونَ ﴿٩٧﴾

97. ನಿಮ್ಮ ಬಳಿಯಲ್ಲಿರುವುದು ಮುಗಿದು ಹೋಗುವುದು. ಅಲ್ಲಾಹನ ಬಳಿಯಲ್ಲಿರುವುದು ಬಾಕಿಯಾಗುವುದು. ಸಹನೆದೋರುವವರಿಗೆ, ನಾವು ಅವರು ಮಾಡಿದ ಸತ್ಕರ್ಮಗಳಿಗೆ ತಕ್ಕುದಾದ ಉತ್ತಮ ಪ್ರತಿಫಲವನ್ನು ಕೊಡುವೆವು.

مَنْ عَمِلَ صَالِحًا مِنْ ذَكَرٍ أَوْ أُنْثَىٰ وَهُوَ مُؤْمِنٌ فَلَنُحْيِيَنَّهُ حَيَاةً طَيِّبَةً ۖ وَلَنَجْزِيَنَّهُمْ أَجْرَهُمْ بِأَحْسَنِ مَا كَانُوا يَعْمَلُونَ ﴿٩٨﴾

98. ಪುರುಷನಾಗಲಿ ಸ್ತ್ರೀಯಾಗಲಿ ಸತ್ಯವಿಶ್ವಾಸಿಯಾಗಿದ್ದುಕೊಂಡು ಸತ್ಕರ್ಮ ಮಾಡಿದರೆ ಖಂಡಿತವಾಗಿಯೂ ನಾವು ಅವರಿಗೆ ಪರಿಶುದ್ಧ ಜೀವನವನ್ನು ದಯಪಾಲಿಸುವೆವು. ಅವರ ಸದ್ವರ್ತನೆಗೆ ತಕ್ಕುದಾದ ಪ್ರತಿಫಲವನ್ನು ಸಹ ನಾವು ನಿಶ್ಚಯವಾಗಿಯೂ ನೀಡುವೆವು.

فَإِذَا قَرَأْتَ الْقُرْآنَ فَاسْتَعِذْ بِاللَّهِ مِنَ الشَّيْطَانِ الرَّجِيمِ ﴿٩٩﴾

99. ನೀನು ಖುರ್‌ಆನ್ ಪಾರಾಯಣ ಮಾಡುವಾಗ ತಿರಸ್ಕೃತನಾದ ಶೈತಾನನಿಂದ (ರಕ್ಷಿಸಲ್ಪಡಲಿಕ್ಕಾಗಿ) ಅಲ್ಲಾಹನ ಅಭಯವನ್ನು ಯಾಚಿಸು.

إِنَّهُ لَيْسَ لَهُ سُلْطَانٌ عَلَى الَّذِينَ آمَنُوا وَعَلَىٰ رَبِّهِمْ يَتَوَكَّلُونَ ﴿١٠٠﴾

100. ಯಾರು ವಿಶ್ವಾಸವನ್ನು ಕೈಗೊಂಡು ತಮ್ಮ ಪ್ರಭುವಿನಲ್ಲಿ ಭರವಸೆಯನ್ನಿಟ್ಟಿರುವರೋ ಅವರ ಮೇಲೆ ನಿಶ್ಚಯವಾಗಿಯೂ ಅವನಿಗೆ (ಶೈತಾನನಿಗೆ) ಯಾವ ಅಧಿಕಾರವೂ ಇಲ್ಲ.

إِنَّمَا سُلْطَانُهُ عَلَى الَّذِينَ يَتَوَلَّوْنَهُ وَالَّذِينَ هُمْ بِهِ مُشْرِكُونَ ﴿١٠١﴾

101. ಅವನನ್ನು ಮಿತ್ರನನ್ನಾಗಿ ಮಾಡಿ, ಆ ಕಾರಣದಿಂದ (ಅಲ್ಲಾಹನಿಗೆ) ಸಹಭಾಗಿಗಳನ್ನು ಕಲ್ಪಿಸುವವರ ಮೇಲೆ ಮಾತ್ರವೇ ಅವನ ಪ್ರಭಾವವಿರುತ್ತದೆ.

وَإِذَا بَدَّلْنَا آيَةً مَكَانَ آيَةٍ ۙ وَاللَّهُ أَعْلَمُ بِمَا يُنَزِّلُ قَالُوا إِنَّمَا أَنْتَ

102. ನಾವು ಒಂದು ದೃಷ್ಟಾಂತದ ಬದಲಿಗೆ ಇನ್ನೊಂದು ದೃಷ್ಟಾಂತವನ್ನು ತರುವಾಗ - ತಾನು ಅವತೀರ್ಣಗೊಳಿಸುವುದರ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ - 'ನೀನು ಸೃಷ್ಟನೆ ಮಾಡುವವ

ನಾಗಿರುವಿ' ಎಂದು ಅವರು ಹೇಳುತ್ತಾರೆ. ಹಾಗಲ್ಲ, ಅವರಲ್ಲಿ ಹೆಚ್ಚಿನವರಿಗೆ ತಿಳುವಳಿಕೆ ಇಲ್ಲ.

مُفْتَرٍ ۚ بَلْ أَكْثَرُهُمْ لَا يَعْلَمُونَ ﴿١٠١﴾

103. ಹೇಳು: 'ವಿಶ್ವಾಸಿಗಳಿಗೆ ದೃಢತೆಯನ್ನು ನೀಡಲಿಕ್ಕಾಗಿಯೂ ಮುಸ್ಲಿಮರಿಗೆ ಮಾರ್ಗದರ್ಶನ ಮತ್ತು ಶುಭವಾರ್ತೆಯಾಗಿಯೂ ನಿನ್ನ ಪ್ರಭುವಿನಿಂದ ಪರಿಶುದ್ಧಾತ್ಮ ಮೂಲಕ ಸತ್ಯದೊಂದಿಗೆ ಇದು ಅವತೀರ್ಣವಾಗಿದೆ.'

قُلْ نَزَّلَهُ رُوحُ الْقُدُسِ مِن رَّبِّكَ بِالْحَقِّ لِيُثَبِّتَ الَّذِينَ آمَنُوا وَهُدًى وَبُشْرَىٰ لِلْمُسْلِمِينَ ﴿١٠٢﴾

104. ಒಬ್ಬ ಮನುಷ್ಯನು ಆತನಿಗೆ ಇದನ್ನು ಕಲಿಸಿಕೊಡುತ್ತಾನೆಂದು ಅವರು ಹೇಳುವುದನ್ನು ನಾವು ಖಂಡಿತವಾಗಿಯೂ ತಿಳಿದಿದ್ದೇವೆ. (ಆದರೆ) ಯಾವ ಮನುಷ್ಯನ ಬಗ್ಗೆ ಅವರು ಸೂಚಿಸುತ್ತಾರೋ, ಅವನ ಭಾಷೆ ಅಜಮಿ (ಅರಬಿಯೇತರ) ಆಗಿದೆ. ಇದಾದರೋ ಸರಳ ಹಾಗೂ ಸ್ಪಷ್ಟವಾದ ಅರಬಿ ಭಾಷೆಯಾಗಿದೆ.

وَلَقَدْ نَعْلَمُ أَنَّهُمْ يَقُولُونَ إِنَّمَا يُعَلِّمُهُ بَشَرٌ ۗ لِّسَانُ الَّذِي يُلْحِدُونَ إِلَيْهِ أَعْجَمِيٌّ وَهَٰذَا لِسَانٌ عَرَبِيٌّ مُّبِينٌ ﴿١٠٣﴾

105. ಯಾರು ಅಲ್ಲಾಹನ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವುದಿಲ್ಲವೋ ಅವರಿಗೆ ಅಲ್ಲಾಹನು ಮಾರ್ಗದರ್ಶನ ಮಾಡಲಾರನು. ಅವರಿಗೆ ಯಾತನಾಮಯವಾದ ಶಿಕ್ಷೆಯಿದೆ.

إِنَّ الَّذِينَ لَا يُؤْمِنُونَ بِآيَاتِ اللَّهِ لَا يَهْدِيهِمُ اللَّهُ وَلَهُمْ عَذَابٌ أَلِيمٌ ﴿١٠٤﴾

106. ಅಲ್ಲಾಹನ ದೃಷ್ಟಾಂತಗಳಲ್ಲಿ ವಿಶ್ವಾಸವಿಡದವರು ಮಾತ್ರವೇ ಸುಳ್ಳು ಸೃಜಿಸುತ್ತಾರೆ. ಅವರೇ ಸುಳ್ಳುಗಾರರು.

إِنَّمَا يَفْتَرِي الْكَذِبَ الَّذِينَ لَا يُؤْمِنُونَ بِآيَاتِ اللَّهِ ۖ وَأُولَٰئِكَ هُمُ الْكَاذِبُونَ ﴿١٠٥﴾

107. ಅಲ್ಲಾಹನನ್ನು ನಂಬಿದ ಬಳಿಕ ಅವಿಶ್ವಾಸ ಹೊಂದುವವನು - ಹೃದಯವು ಸತ್ಯವಿಶ್ವಾಸದಿಂದ ನೆಮ್ಮದಿ ಹೊಂದಿದ್ದು ಕೂಡ ನಿರ್ಬಂಧಕ್ಕೊಳಗಾದವನ ಹೊರತು - ಅಂದರೆ ತೆರೆದ ಹೃದಯದಿಂದ ಯಾರು ಸತ್ಯವನ್ನು ಅಲ್ಲಗಳೆಯುತ್ತಾರೋ ಅವರ ಮೇಲೆ ಅಲ್ಲಾಹನ ಕ್ರೋಧವೆರಗುವುದು. ಅವರಿಗೆ ಕಠಿಣವಾದ ಶಿಕ್ಷೆ ಇದೆ.

مَن كَفَرَ بِاللَّهِ مِن بَعْدِ إِيمَانِهِ إِلَّا مَنْ أُكْرِهَ وَقَلْبُهُ مُطْمَئِنٌّ بِالْإِيمَانِ وَلَٰكِن مَّن شَرَحَ بِالْكُفْرِ صَدْرًا فَعَلَيْهِمْ غَضَبٌ مِّنَ اللَّهِ وَلَهُمْ عَذَابٌ عَظِيمٌ ﴿١٠٦﴾

108. ಇದು ಏಕೆಂದರೆ, ಅವರು ಇಹಲೋಕ ಜೀವನವನ್ನು ಪರಲೋಕ ಜೀವನಕ್ಕಿಂತ ಹೆಚ್ಚು ಪ್ರೀತಿಸಿದರು ಮತ್ತು ಏಕೆಂದರೆ ಅಲ್ಲಾಹನು ಅವಿಶ್ವಾಸಿಗಳಿಗೆ ಮಾರ್ಗದರ್ಶನ ಮಾಡುವುದಿಲ್ಲ.

ذَٰلِكَ بِأَنَّهُمُ اسْتَحَبُّوا الْحَيَاةَ الدُّنْيَا عَلَى الْآخِرَةِ وَأَنَّ اللَّهَ لَا يَهْدِي الْقَوْمَ الْكَافِرِينَ ﴿١٠٧﴾





109. ಅವರ ಹೃದಯಗಳಿಗೂ ಕಿವಿಗಳಿಗೂ ಕಣ್ಣುಗಳಿಗೂ ಅಲ್ಲಾಹನು ಮುದ್ರೆ ಹಾಕಿದ್ದಾನೆ. ಅವರು ನಿರ್ಲಕ್ಷ್ಯರೂ ಆಗಿದ್ದಾರೆ.

أُولَٰئِكَ الَّذِينَ طَبَعَ اللَّهُ عَلَىٰ قُلُوبِهِمْ وَسَمْعِهِمْ وَأَبْصَارِهِمْ ۖ وَأُولَٰئِكَ هُمُ الْغَافِلُونَ ﴿١٠٨﴾

110. ನಿಸ್ಸಂದೇಹವಾಗಿಯೂ ಅವರು ಪರಲೋಕ ಜೀವನದಲ್ಲಿ ನಷ್ಟಹೊಂದಿದವರಾಗಿದ್ದಾರೆ.

لَا جَرَمَ أَنَّهُمْ فِي الْآخِرَةِ هُمُ الْخَاسِرُونَ ﴿١٠٩﴾

111. ಮತ್ತೆ, ತಾವು ದೌರ್ಜನ್ಯಕ್ಕೊಳಗಾಗಿ (ತಮ್ಮ ಮನೆಗಳನ್ನು ತೊರೆದು) ವಲಸೆ ಹೋಗಿ, ಅನಂತರವೂ (ಅಲ್ಲಾಹನ ಮಾರ್ಗದಲ್ಲಿ) ಕಠಿಣವಾಗಿ ಶ್ರಮಪಟ್ಟು ಸಹನೆಯನ್ನು ಕೈಗೊಳ್ಳುವವರಿಗೆ, ಖಂಡಿತವಾಗಿಯೂ ಆ ಬಳಿಕ ನಿನ್ನ ಪ್ರಭು ಬಹಳವಾಗಿ ಕ್ಷಮಿಸುವವನೂ ಕರುಣೆದೋರುವವನೂ ಆಗಿದ್ದಾನೆ.

ثُمَّ إِنَّ رَبَّكَ لِلَّذِينَ هَاجَرُوا مِن بَعْدِ مَا فُتِنُوا ثُمَّ جَاهَدُوا وَصَبَرُوا إِنَّ رَبَّكَ مِن بَعْدِهَا لَغَفُورٌ رَّحِيمٌ ﴿١١٠﴾

112. ಪ್ರತಿಯೊಂದು ಆತ್ಮವೂ ಅದರ ರಕ್ಷೆಗಾಗಿ ವಾದಿಸುವ ಆ ದಿನದಂದು ಪ್ರತಿಯೊಂದು ಆತ್ಮಕ್ಕೂ ಅದರ ಕರ್ಮಫಲ ನೀಡಲಾಗುವುದು ಹಾಗೂ ಯಾರೊಡನೆಯೂ ಅನ್ಯಾಯವೆಸಗಲಾಗದು.

يَوْمَ تَأْتِي كُلُّ نَفْسٍ تُجَادِلُ عَن نَّفْسِهَا وَتُوَفَّىٰ كُلُّ نَفْسٍ مَّا عَمِلَتْ وَهُمْ لَا يُظْلَمُونَ ﴿١١١﴾

113. ಅಲ್ಲಾಹನು ಒಂದು ಪಟ್ಟಣದ ಉದಾಹರಣೆ ನೀಡುತ್ತಾನೆ. ಅಲ್ಲಿ ಶಾಂತಿಯೂ ನೆಮ್ಮದಿಯೂ ನೆಲೆಗೊಂಡಿತ್ತು. ಎಲ್ಲ ಕಡೆಗಳಿಂದಲೂ ಅದಕ್ಕೆ ಧಾರಾಳವಾಗಿ ಜೀವನಾಧಾರ ಲಭ್ಯವಾಗುತ್ತಿತ್ತು. ಆದರೆ ಅಲ್ಲಾಹನ ಅನುಗ್ರಹವನ್ನು ಅದು ಅಲ್ಲಗಳೆಯಿತು. ಆಗ ಅಲ್ಲಾಹನು *ಅದರ ನಿವಾಸಿಗಳಿಗೆ* ಅವರು ಎಸಗಿದ ಕೃತ್ಯಗಳ ನಿಮಿತ್ತ ಹಸಿವು ಮತ್ತು ಭಯದ ವಸ್ತ್ರವನ್ನು ಹೊದಿಸಿ ಶಿಕ್ಷೆಯ ರುಚಿ ಅನುಭವಿಸುವಂತೆ ಮಾಡಿದನು.

وَضَرَبَ اللَّهُ مَثَلًا قَرْيَةً كَانَتْ آمِنَةً مُّطْمَئِنَّةً يَأْتِيهَا رِزْقُهَا رَغَدًا مِّن كُلِّ مَكَانٍ فَكَفَرَتْ بِأَنْعُمِ اللَّهِ فَأَذَاقَهَا اللَّهُ لِبَاسَ الْجُوعِ وَالْخَوْفِ بِمَا كَانُوا يَصْنَعُونَ ﴿١١٢﴾

114. ಅವರ ಬಳಿಗೆ ಅವರಿಂದಲೇ ಒಬ್ಬ ಸಂದೇಶವಾಹಕ ಬಂದನು. ಆದರೆ ಅವರು ಆತನನ್ನು ಸುಳ್ಳಾಗಿಸಿದರು. ಆಗ ಅವರು ಅಕ್ರಮವೆಸಗುತ್ತಲೇ ಶಿಕ್ಷೆಗೆ ಈಡಾದರು.

وَلَقَدْ جَاءَهُمْ رَسُولٌ مِّنْهُمْ فَكَذَّبُوهُ فَأَخَذَهُمُ الْعَذَابُ وَهُمْ ظَالِمُونَ ﴿١١٣﴾

فَكُلُوا مِمَّا رَزَقَكُمُ اللّٰهُ حَلٰلًا طَيِّبًا وَّاشْكُرُوْا نِعْمَتَ اللّٰهِ اِنْ كُنْتُمْ اِيَّاهُ تَعْبُدُوْنَ ﴿١١٥﴾

**115.** ಅಲ್ಲಾಹನು ನಿಮಗೆ ಒದಗಿಸಿದ ಧರ್ಮಬದ್ಧವೂ ಪರಿಶುದ್ಧವೂ ಆದ ಆಹಾರವನ್ನು ತಿನ್ನಿರಿ. ನೀವು ಅವನನ್ನು ಮಾತ್ರವೇ ಆರಾಧಿಸುವಿರಾದರೆ ಅಲ್ಲಾಹನ ಅನುಗ್ರಹಗಳಿಗಾಗಿ ಅವನಿಗೆ ಕೃತಜ್ಞತೆ ಸಲ್ಲಿಸಿರಿ.

اِنَّمَا حَرَّمَ عَلَيْكُمُ الْمَيْتَةَ وَالدَّمَ وَلَحْمَ الْخِنْزِيْرِ وَمَا اُهِلَّ لِغَيْرِ اللّٰهِ بِهٖ ۚ فَمَنِ اضْطُرَّ غَيْرَ بَاغٍ وَّلَا عَادٍ فَاِنَّ اللّٰهَ غَفُوْرٌ رَّحِيْمٌ ﴿١١٦﴾

**116.** ಸತ್ತಪ್ರಾಣಿ, ರಕ್ತ, ಹಂದಿಮಾಂಸ ಮತ್ತು ಅಲ್ಲಾಹೇತರರ ನಾಮದಲ್ಲಿ ಅರ್ಪಿಸಲ್ಪಟ್ಟದ್ದನ್ನು[311B] ಅವನು ನಿಮಗೆ ನಿಷಿದ್ಧಗೊಳಿಸಿದ್ದಾನೆ. ಆದರೆ ಯಾರಾದರೂ ಸ್ವಯಂ ಇಚ್ಛಿಸದೆಯೂ ಮೇರೆ ಮೀರದೆಯೂ ನಿರ್ಬಂಧಿಸಲ್ಪಟ್ಟರೆ, ಆಗ ಖಂಡಿತವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

وَلَا تَقُوْلُوْا لِمَا تَصِفُ اَلْسِنَتُكُمُ الْكَذِبَ هٰذَا حَلٰلٌ وَّهٰذَا حَرَامٌ لِّتَفْتَرُوْا عَلَى اللّٰهِ الْكَذِبَ ۚ اِنَّ الَّذِيْنَ يَفْتَرُوْنَ عَلَى اللّٰهِ الْكَذِبَ لَا يُفْلِحُوْنَ ﴿١١٧﴾

**117.** ನಿಮ್ಮ ನಾಲಗೆಗಳು ಸುಳ್ಳಾಗಿ ಹೇಳುವ ಕಾರಣದಿಂದ 'ಇದು ಹಲಾಲ್ (ಧರ್ಮಬದ್ಧ), 'ಇದು ಹರಾಮ್ (ನಿಷಿದ್ಧ)' ಎಂದು ನೀವು ನುಡಿಯಬೇಡಿರಿ. ಅದು ಅಲ್ಲಾಹನ ಮೇಲೆ ಸುಳ್ಳು ಸೃಷ್ಟನೆಯಾಗುತ್ತದೆ. ಅಲ್ಲಾಹನ ಮೇಲೆ ಸುಳ್ಳಾರೋಪಣೆ ಮಾಡುವವರು ಖಂಡಿತವಾಗಿಯೂ ಯಶಸ್ವಿಯಾಗಲಾರರು.'

مَتَاعٌ قَلِيْلٌ ۖ وَّلَهُمْ عَذَابٌ اَلِيْمٌ ﴿١١٨﴾

**118.** (ಅವರ ಐಹಿಕ ಜೀವನ) ಅಲ್ಪಕಾಲದ ಸುಖಾನುಭವ ಮಾತ್ರವಾಗಿದೆ. ಅವರಿಗೆ (ಪರಲೋಕದಲ್ಲಿ) ಯಾತನಾಮಯವಾದ ಶಿಕ್ಷೆ ಇದೆ.

وَعَلَى الَّذِيْنَ هَادُوْا حَرَّمْنَا مَا قَصَصْنَا عَلَيْكَ مِنْ قَبْلُ ۚ وَمَا ظَلَمْنٰهُمْ وَلٰكِنْ كَانُوْا اَنْفُسَهُمْ يَظْلِمُوْنَ ﴿١١٩﴾

**119.** ನಾವು ನಿನಗೆ ವಿವರಿಸಿ ಕೊಟ್ಟದ್ದನ್ನೇ ಇದಕ್ಕೆ ಮುಂಚೆ ಯಹೂದ್ಯರಿಗೂ ನಾವು ನಿಷಿದ್ಧಗೊಳಿಸಿದ್ದೆವು. ನಾವು ಅವರಿಗೆ ಅನ್ಯಾಯವೆಸಗಲಿಲ್ಲ. ಬದಲಾಗಿ, ಅವರು ತಮಗೆಯೇ ಅನ್ಯಾಯವೆಸಗಿದರು.

ثُمَّ اِنَّ رَبَّكَ لِلَّذِيْنَ عَمِلُوا السُّوْٓءَ بِجَهَالَةٍ ثُمَّ تَابُوْا مِنْ بَعْدِ ذٰلِكَ وَاَصْلَحُوْٓا اِنَّ رَبَّكَ مِنْ بَعْدِهَا لَغَفُوْرٌ رَّحِيْمٌ ﴿١٢٠﴾

**120.** ಅನಂತರ, ಅಜ್ಞಾನ ಕಾರಣದಿಂದ ದುಷ್ಟವಾಗಿ ವರ್ತಿಸಿ ಆ ಬಳಿಕ ಪಶ್ಚಾತ್ತಾಪಪಟ್ಟು ಜೀವನವನ್ನು ಸರಿಪಡಿಸಿಕೊಂಡವರಿಗೆ ಖಂಡಿತವಾಗಿಯೂ ನಿನ್ನ ಪ್ರಭು ಬಹಳ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

311B. ಅಧ್ಯಾಯ 2 ವಚನ 174ರ ಟಿಪ್ಪಣಿ ನೋಡಿರಿ.





اِنَّ اِبْرٰهِيْمَ كَانَ اُمَّةً قَانِتًا لِّلّٰهِ حَنِيْفًا ۗ وَلَمْ يَكُ مِنَ الْمُشْرِكِيْنَ ﴿١٢١﴾

**121.** ಇಬ್‌ರಾಹೀಂ ಉತ್ಕೃಷ್ಟ ಸ್ವಭಾವದ ಮಾದರಿ ಪುರುಷ ಆಗಿದ್ದರು. ಅವರು ಅಲ್ಲಾಹನಿಗೆ ವಿಧೇಯರೂ ಸದಾ ಅವನೆಡೆಗೆ ಬಾಗುವವರೂ ಆಗಿದ್ದರು. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.

شَاكِرًا لِّاَنْعُمِهٖ ۚ اِجْتَبٰىهُ وَهَدٰىهُ اِلٰى صِرَاطٍ مُّسْتَقِيْمٍ ﴿١٢٢﴾

**122.** ಅವರು ಅವನ (ಅಲ್ಲಾಹನ) ಅನುಗ್ರಹಗಳಿಗೆ ಸದಾ ಕೃತಜ್ಞರಾಗಿದ್ದರು. ಅವನು ಅವರನ್ನು ಆಯ್ಕೆ ಮಾಡಿ ಸರಿಯಾದ ಮಾರ್ಗದೆಡೆಗೆ ಅವರನ್ನು ಕೊಂಡೊಯ್ದನು.

وَاٰتَيْنٰهُ فِى الدُّنْيَا حَسَنَةً ۗ وَاِنَّهٗ فِى الْاٰخِرَةِ لَمِنَ الصّٰلِحِيْنَ ﴿١٢٣﴾

**123.** ಇಹಲೋಕದಲ್ಲಿ ನಾವು ಅವರಿಗೆ ಒಳಿತನ್ನು ದಯಪಾಲಿಸಿದೆವು. ಪರಲೋಕದಲ್ಲಿ ಅವರು ನಿಶ್ಚಯವಾಗಿಯೂ ಸಜ್ಜನರಲ್ಲಿ ಸೇರಿದವರಾಗುವರು.

ثُمَّ اَوْحَيْنَآ اِلَيْكَ اَنِ اتَّبِعْ مِلَّةَ اِبْرٰهِيْمَ حَنِيْفًا ۗ وَمَا كَانَ مِنَ الْمُشْرِكِيْنَ ﴿١٢٤﴾

**124.** ನಂತರ ನಾವು ನಿನಗೆ ಅರುಹಿದೆವು: 'ಸದಾ ಕಾಲ ಅಲ್ಲಾಹನ ಒಲವು ತೋರಿಸುತ್ತಿದ್ದ ಇಬ್‌ರಾಹೀಮರ ಮಾರ್ಗವನ್ನು ಅನುಸರಿಸು. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.'

اِنَّمَا جُعِلَ السَّبْتُ عَلَى الَّذِيْنَ اخْتَلَفُوْا فِيْهِ ۚ وَاِنَّ رَبَّكَ لَيَحْكُمُ بَيْنَهُمْ يَوْمَ الْقِيٰمَةِ فِيْمَا كَانُوْا فِيْهِ يَخْتَلِفُوْنَ ﴿١٢٥﴾

**125.** ಅದರ ಬಗ್ಗೆ (ಇಬ್‌ರಾಹೀಮರ ಮಾರ್ಗದ ಬಗ್ಗೆ) ಭಿನ್ನಾಭಿಪ್ರಾಯ ಹೊಂದಿದ್ದವರಿಗೆ ಸಬ್‌ತ್ ವಿಧಿಸಲ್ಪಟ್ಟಿತ್ತು. ಅವರು ಭಿನ್ನಾಭಿಪ್ರಾಯ ಹೊಂದಿದುದರ ಕುರಿತು ನಿನ್ನ ಪ್ರಭು ಅವರ ಮಧ್ಯೆ ಪುನರುತ್ಥಾನ ದಿನದಂದು ತೀರ್ಮಾನ ಮಾಡುವನು.

اُدْعُ اِلٰى سَبِيْلِ رَبِّكَ بِالْحِكْمَةِ وَالْمَوْعِظَةِ الْحَسَنَةِ وَجَادِلْهُمْ بِالَّتِيْ هِيَ اَحْسَنُ ۚ اِنَّ رَبَّكَ هُوَ اَعْلَمُ بِمَنْ ضَلَّ عَنْ سَبِيْلِهٖ وَهُوَ اَعْلَمُ بِالْمُهْتَدِيْنَ ﴿١٢٦﴾

**126.** ಜಾಣ್ಮೆಯಿಂದಲೂ ಸದುಪದೇಶದಿಂದಲೂ ನಿನ್ನ ಪ್ರಭುವಿನ ಮಾರ್ಗದೆಡೆಗೆ ನೀನು (ಜನರನ್ನು) ಆಮಂತ್ರಿಸು. ಉತ್ತಮವಾದ ರೀತಿಯಲ್ಲಿ ಅವರೊಡನೆ ವಾಗ್ವಾದ ಮಾಡು. ತನ್ನ ಮಾರ್ಗವನ್ನು ಬಿಟ್ಟು ಹೋಗುವವರು ಯಾರೆಂದು ನಿನ್ನ ಪ್ರಭು ಚೆನ್ನಾಗಿ ಬಲ್ಲವನಾಗಿದ್ದಾನೆ. ಸರಿಯಾದ ಮಾರ್ಗವನ್ನು ಅವಲಂಬಿಸುವವರು ಯಾರೆಂದೂ ಅವನು ಚೆನ್ನಾಗಿ ತಿಳಿದಿರುತ್ತಾನೆ.

وَإِنْ عَاقَبْتُمْ فَعَاقِبُوا۟ بِمِثْلِ مَا عُوقِبْتُم بِهِۦ ۖ وَلَئِن صَبَرْتُمْ لَهُوَ خَيْرٌ لِّلصَّـٰبِرِينَ ﴿١٢٦﴾

**127.** ನೀವು ಪ್ರತಿಕಾರ ಮಾಡುವುದಾದರೆ, ನಿಮ್ಮ ಮೇಲೆ ಉಂಟಾದ ಅಕ್ರಮಕ್ಕೆ ಸಮಾನವಾದಷ್ಟು ಮಾತ್ರ ಪ್ರತಿಕಾರ ಮಾಡಿರಿ. ಆದರೆ ನೀವು ಸಹನೆ ತೋರಿಸುವುದಾದರೆ, ಸಹನಶೀಲರಿಗೆ ಅದು ಅತ್ಯುತ್ತಮವಾಗಿದೆ.

وَٱصْبِرْ وَمَا صَبْرُكَ إِلَّا بِٱللَّهِ ۚ وَلَا تَحْزَنْ عَلَيْهِمْ وَلَا تَكُ فِى ضَيْقٍ مِّمَّا يَمْكُرُونَ ﴿١٢٧﴾

**128.** ಸಹನೆದೋರು. ಅಲ್ಲಾಹನ ಸಹಾಯದಿಂದ ಮಾತ್ರ ನಿನಗೆ ಸಹನೆದೋರಲು ಸಾಧ್ಯವಾಯಿತು. ಅವರಿಗೋಸ್ಕರ ನೀನು ವ್ಯಥೆಗೊಳ್ಳಬೇಡ. ಅವರ ಕುತಂತ್ರದ ಹೇತುವಾಗಿ ನೀನು ವ್ಯಾಕುಲಪಡಬೇಡ.

إِنَّ ٱللَّهَ مَعَ ٱلَّذِينَ ٱتَّقَوا۟ وَّٱلَّذِينَ هُم مُّحْسِنُونَ ﴿١٢٨﴾

**129.** ನಿಶ್ಚಯವಾಗಿಯೂ ಭಯಭಕ್ತಿಯುಳ್ಳವರ ಮತ್ತು ಸತ್ಕರ್ಮ ಮಾಡುವವರ ಜೊತೆಯಲ್ಲಿ ಅಲ್ಲಾಹನಿದ್ದಾನೆ.

سُوْرَةُ بَنِيْٓ اِسْرَاۗءِيْلَ مَكِّيَّةٌ وَّهِيَ مَعَ الْبَسْمَلَةِ مِائَةٌ وَّاثْنَتَا عَشْرَةَ اٰيَةً وَّاثْنَا عَشَرَ رُكُوْعًا

# 17. ಬನೀ ಇಸ್ರಾಈಲ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 112 ಆಯತ್‌ಗಳು ಹಾಗೂ 12 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ತನ್ನ ದಾಸನನ್ನು 'ಮಸ್ಜಿದುಲ್ ಹರಾಮ್'ನಿಂದ 'ಮಸ್ಜಿದುಲ್ ಅಖ್ಸಾ'ಕ್ಕೆ - ಅದರ ಪರಿಸರವನ್ನು** (ಸಹ) **ನಾವು ಅನುಗ್ರಹೀತವನ್ನಾಗಿಸಿದ್ದೇವೆ - ನಮ್ಮ ದೃಷ್ಟಾಂತಗಳಲ್ಲಿ ಕೆಲವನ್ನು ತೋರಿಸಿಕೊಡಲಿಕ್ಕಾಗಿ ರಾತ್ರಿಯಲ್ಲಿ ಕರೆದುಕೊಂಡು ಹೋದವನು ಪರಿಶುದ್ಧನು.**[312] **ದಿಟವಾಗಿಯೂ ಅವನು ಎಲ್ಲವನ್ನು ಶ್ರವಿಸುವವನೂ ದರ್ಶಿಸುವ ವನೂ ಆಗಿದ್ದಾನೆ.**

سُبْحٰنَ الَّذِيْٓ اَسْرٰى بِعَبْدِهٖ لَيْلًا مِّنَ الْمَسْجِدِ الْحَرَامِ اِلَى الْمَسْجِدِ الْاَقْصَا الَّذِيْ بٰرَكْنَا حَوْلَهٗ لِنُرِيَهٗ مِنْ اٰيٰتِنَا ۭ اِنَّهٗ هُوَ السَّمِيْعُ الْبَصِيْرُ ②

**3. ನಾವು ಮೂಸಾರಿಗೆ ಗ್ರಂಥ ನೀಡಿದೆವು ಹಾಗೂ ಇಸ್ರಾಈಲ್ ಸಂತತಿಗಳಿಗೆ ಅದನ್ನು ಮಾರ್ಗದರ್ಶನವನ್ನಾಗಿ ಮಾಡಿದೆವು.** (ನಾವು ಹೇಳಿದೆವು:) **'ನನ್ನನ್ನು ಬಿಟ್ಟು ಬೇರೆ ಯಾರನ್ನೂ ನಿಮ್ಮ ರಕ್ಷಕನಾಗಿ ಮಾಡಬೇಡಿರಿ.**

وَاٰتَيْنَا مُوْسَى الْكِتٰبَ وَجَعَلْنٰهُ هُدًى لِّبَنِيْٓ اِسْرَاۗءِيْلَ اَلَّا تَتَّخِذُوْا مِنْ دُوْنِيْ وَكِيْلًا ③

**4. '**ನೀವು **ನೂಹ್‌ರೊಂದಿಗೆ ನಾವು** (ನೌಕೆಯಲ್ಲಿ) **ಸವಾರಿ ಮಾಡಿಸಿದವರ ಸಂತತಿಗಳಾಗಿದ್ದೀರಿ. ಅವರಾದರೋ ಕೃತಜ್ಞತೆಯುಳ್ಳ ಓರ್ವ ದಾಸರಾಗಿದ್ದರು.**

ذُرِّيَّةَ مَنْ حَمَلْنَا مَعَ نُوْحٍ ۭ اِنَّهٗ كَانَ عَبْدًا شَكُوْرًا ④

**5. 'ಖಂಡಿತವಾಗಿಯೂ ನೀವು ಈ ಊರಿನಲ್ಲಿ ಎರಡು ಸಲ ಕಲಹವನ್ನುಂಟುಮಾಡಿ ಬಹಳ ದೌರ್ಜನ್ಯವೆಸಗುವಿರಿ' ಎಂದು** (ಸಹ) **ಆ ಗ್ರಂಥದಲ್ಲಿ ಇಸ್ರಾಈಲ್ ಸಂತತಿಗಳಿಗೆ ನಾವು** ನಿಖರವಾಗಿ **ತಿಳಿಸಿದ್ದೆವು.**

وَقَضَيْنَآ اِلٰى بَنِيْٓ اِسْرَاۗءِيْلَ فِي الْكِتٰبِ لَتُفْسِدُنَّ فِي الْاَرْضِ مَرَّتَيْنِ وَلَتَعْلُنَّ عُلُوًّا كَبِيْرًا ⑤

312. ಇದೊಂದು ಆಧ್ಯಾತ್ಮಿಕ ದರ್ಶನವಾಗಿತ್ತು; ಶಾರೀರಿಕವಾದುದಾಗಿರಲಿಲ್ಲ. ಇದೇ ಅಧ್ಯಾಯದ 61ನೇ ವಚನದಲ್ಲಿ ಈ ಘಟನೆಯನ್ನು 'ರುಅ್‌ಯಾ' (ಆಧ್ಯಾತ್ಮಿಕ ದರ್ಶನ) ಎಂದು ಹೇಳಲಾಗಿದೆ.





**6. 'ಹಾಗೆ ಆ ಎರಡು ಮುನ್ನೆಚ್ಚರಿಕೆಗಳಲ್ಲಿ ಒಂದರ ಸಮಯ ಬಂದಾಗ ತೀವ್ರವಾಗಿ ಹೋರಾಡುವ ಸಾಮರ್ಥ್ಯವುಳ್ಳ ನಮ್ಮ ಕೆಲವು ದಾಸರನ್ನು ನಿಮ್ಮ ವಿರುದ್ಧ ನಾವು ಕಳುಹಿಸಿದೆವು. ಅವರು ಊರೊಳಗೆ ನುಗ್ಗಿದರು.**[312A] **ಇದು ಪೂರ್ಣವಾಗಿಯೂ ಈಡೇರಬೇಕಾಗಿದ್ದ ಒಂದು ಮುನ್ನೆಚ್ಚರಿಕೆಯಾಗಿತ್ತು.**

فَاِذَا جَاۗءَ وَعْدُ اُوْلٰىهُمَا بَعَثْنَا عَلَيْكُمْ عِبَادًا لَّنَآ اُولِيْ بَاْسٍ شَدِيْدٍ فَجَاسُوْا خِلٰلَ الدِّيَارِ ۭ وَكَانَ وَعْدًا مَّفْعُوْلًا ⑥

**7. 'ಅನಂತರ ಅವರನ್ನು ಸೋಲಿಸುವ ಶಕ್ತಿಯನ್ನು ನಾವು ನಿಮಗೆ ಮರಳಿ ಕೊಟ್ಟೆವು. ಸಂಪತ್ತು ಮತ್ತು ಸಂತಾನಗಳಿಂದ ನಾವು ನಿಮಗೆ ಸಹಾಯ ನೀಡಿ ಹೆಚ್ಚಿನ ಜನಸಂಖ್ಯೆಯುಳ್ಳ ಜನಾಂಗವನ್ನಾಗಿ ನಿಮ್ಮನ್ನು ಮಾಡಿದೆವು.**[312B]

ثُمَّ رَدَدْنَا لَكُمُ الْكَرَّةَ عَلَيْهِمْ وَاَمْدَدْنٰكُمْ بِاَمْوَالٍ وَّبَنِيْنَ وَجَعَلْنٰكُمْ اَكْثَرَ نَفِيْرًا ⑦

**8. 'ನೀವು ಒಳಿತು ಮಾಡುವುದಾದರೆ ನಿಮ್ಮ ಆತ್ಮಗಳಿಗೆಯೇ ನೀವು ಒಳಿತು ಮಾಡುತ್ತೀರಿ. ನೀವು ಕೆಡುಕು ಮಾಡುವುದಾದರೆ ಅದು ಸಹ ಅವುಗಳಿಗೆಯೇ** (ಹಾನಿಕರ). **ಹಾಗೆ ಎರಡನೆಯ ಮುನ್ನೆಚ್ಚರಿಕೆಯ ಸಮಯ ಬಂದಾಗ ನಿಮ್ಮ ಮುಖಗಳನ್ನು ಅವರು** (ಶತ್ರುಗಳು) **ಶೋಕಭರಿತವಾಗಿ ಮಾಡುವರು; ಮೊದಲು ಅವರು ಪ್ರವೇಶಿಸಿದಂತೆ ಮಸ್ಜಿದ್‌ನೊಳಗೆ ಪ್ರವೇಶಿಸುವರು ಹಾಗೂ ಅವರು ಸ್ವಾಧೀನಪಡಿಸಿದ್ದನ್ನೆಲ್ಲ ಸರ್ವನಾಶ ಮಾಡುವರು.**

اِنْ اَحْسَنْتُمْ اَحْسَنْتُمْ لِاَنْفُسِكُمْ ۣ وَاِنْ اَسَاْتُمْ فَلَهَا ۭ فَاِذَا جَاۗءَ وَعْدُ الْاٰخِرَةِ لِيَسُوْۗءٗا وُجُوْهَكُمْ وَلِيَدْخُلُوا الْمَسْجِدَ كَمَا دَخَلُوْهُ اَوَّلَ مَرَّةٍ وَّلِيُتَبِّرُوْا مَا عَلَوْا تَتْبِيْرًا ⑧

**9. 'ನಿಮ್ಮ ಪ್ರಭು ನಿಮ್ಮೊಡನೆ** (ಇನ್ನು ಸಹ) **ಕರುಣೆ ತೋರಿಸಬಹುದು. ಆದರೆ ನೀವು ನಿಮ್ಮ ಪೂರ್ವ ಸ್ಥಿತಿಗೆ ಮರಳಿದರೆ ನಾವು ಸಹ** (ನಮ್ಮ ಶಿಕ್ಷಾ ಕ್ರಮದೆಡೆಗೆ) **ಮರಳುವೆವು. ನರಕವನ್ನು ನಾವು ಅವಿಶ್ವಾಸಿಗಳಿಗೆ ಒಂದು ಕಾರಾಗೃಹವನ್ನಾಗಿ ಮಾಡಿದ್ದೇವೆ.'**

عَسٰى رَبُّكُمْ اَنْ يَّرْحَمَكُمْ ۚ وَاِنْ عُدْتُّمْ عُدْنَا ۘ وَجَعَلْنَا جَهَنَّمَ لِلْكٰفِرِيْنَ حَصِيْرًا ⑨

312A. ಬಾಬಿಲೋನಿಯಾದ ನೆಬೂಕದ್ನೆಚ್ಚರ್ ರಾಜನ ಆಕ್ರಮಣದ ಕುರಿತು ಇಲ್ಲಿ ಸೂಚಿಸಲಾಗಿದೆ. ಆತನು ತನ್ನ ಬಲಿಷ್ಠ ಸೈನ್ಯದೊಂದಿಗೆ ಫೆಲಸ್ತೀನನ್ನು ಆಕ್ರಮಿಸಿ ಅಲ್ಲಿನ ರಾಜನಾಗಿದ್ದ ಚಿದ್ಕೀಯನನ್ನು ಸೋಲಿಸಿ ರಾಜ್ಯವನ್ನು ವಶಪಡಿಸಿದ ನಂತರ ಇಸ್ರಾಈಲ್ ಸಂತತಿಗಳಲ್ಲಿ ಹಲವರನ್ನು ಸಂಹಾರ ಮಾಡಿ ಬಾಕಿಯುಳಿದವರನ್ನು ಸೆರೆಹಿಡಿದು ಬಾಬಿಲೋನಿಯಾಕ್ಕೆ ಕೊಂಡೊಯ್ದನು. (2 ಅರಸುಗಳು - ಅಧ್ಯಾಯ 25 ಮತ್ತು 2 ಪೂರ್ವಕಾಲ ವೃತ್ತಾಂತ - ಅಧ್ಯಾಯ 36)

312B. ಇದು ನೆಹೆಮೀಯ ಪ್ರವಾದಿಯ ಕಾಲದಲ್ಲಿ ಸಂಭವಿಸಿದ್ದು. ಪರ್ಶಿಯನ್ ಚಕ್ರವರ್ತಿ ಸೈರಸ್‌ನ ಸಹಾಯದಿಂದ ಇಸ್ರಾಈಲರು ಪುನಃ ಯೆರೂಸಲೇಮಿಗೆ ಬಂದು ನೆಲೆಸುವಂತಾಯಿತು. (2 ಪೂರ್ವಕಾಲ ವೃತ್ತಾಂತ - ಅಧ್ಯಾಯ 36)

**10.** ದಿಟವಾಗಿಯೂ ಈ ಖುರ್‌ಆನ್ ಅತ್ಯಂತ ಋಜುವಾದ ಮಾರ್ಗದರ್ಶನ ಮಾಡುತ್ತದೆ ಹಾಗೂ ಸತ್ಕರ್ಮ ಗೈಯುವ ವಿಶ್ವಾಸಿಗಳಿಗೆ ಬಹಳ ದೊಡ್ಡ ಪ್ರತಿಫಲವಿದೆಯೆಂದು ಶುಭವಾರ್ತೆಯನ್ನು ಸಹ ಅರುಹುತ್ತದೆ.

إِنَّ هَٰذَا الْقُرْآنَ يَهْدِي لِلَّتِي هِيَ أَقْوَمُ وَيُبَشِّرُ الْمُؤْمِنِينَ الَّذِينَ يَعْمَلُونَ الصَّالِحَاتِ أَنَّ لَهُمْ أَجْرًا كَبِيرًا ﴿١٠﴾

**11.** ಪರಲೋಕದ ಕುರಿತು ವಿಶ್ವಾಸವಿಲ್ಲದವರಿಗೆ ನಾವು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದೇವೆ ಎಂಬುದನ್ನೂ (ಅದು ಅರುಹುತ್ತದೆ).

وَأَنَّ الَّذِينَ لَا يُؤْمِنُونَ بِالْآخِرَةِ أَعْتَدْنَا لَهُمْ عَذَابًا أَلِيمًا ﴿١١﴾

**12.** ಮನುಷ್ಯನು ಒಳಿತಿಗಾಗಿ ಬೇಡುವವನಂತೆ ಕೆಡುಕಿಗಾಗಿ ಬೇಡುತ್ತಾನೆ. ಮನುಷ್ಯನು ದುಡುಕು ಸ್ವಭಾವದವನಾಗಿದ್ದಾನೆ.

وَيَدْعُ الْإِنْسَانُ بِالشَّرِّ دُعَاءَهُ بِالْخَيْرِ ۖ وَكَانَ الْإِنْسَانُ عَجُولًا ﴿١٢﴾

**13.** ನಾವು ರಾತ್ರಿಯನ್ನೂ ಹಗಲನ್ನೂ ಎರಡು ದೃಷ್ಟಾಂತಗಳನ್ನಾಗಿ ಮಾಡಿದ್ದೇವೆ. ರಾತ್ರಿಯ ದೃಷ್ಟಾಂತವನ್ನು ನಾವು ಅಳಿಸಿಬಿಡುತ್ತೇವೆ. ಹಗಲಿನ ದೃಷ್ಟಾಂತ ವನ್ನು ಪ್ರಕಾಶಮಯವಾಗಿ ಮಾಡಿದ್ದೇವೆ - ನಿಮ್ಮ ಪ್ರಭುವಿನಿಂದ ನೀವು ಅನುಗ್ರಹವನ್ನು ಅರಸಲಿಕ್ಕಾಗಿಯೂ ವರ್ಷಗಳ ಗಣನೆ ಮತ್ತು ಗಣಿತ ಶಾಸ್ತ್ರವನ್ನು ನೀವು ತಿಳಿದುಕೊಳ್ಳಲಿಕ್ಕಾಗಿಯೂ. ಎಲ್ಲ ಸಂಗತಿಗಳನ್ನೂ ನಾವು ಬಿಡಿಬಿಡಿಯಾಗಿ ವಿವರಿಸಿದ್ದೇವೆ.

وَجَعَلْنَا اللَّيْلَ وَالنَّهَارَ آيَتَيْنِ ۖ فَمَحَوْنَا آيَةَ اللَّيْلِ وَجَعَلْنَا آيَةَ النَّهَارِ مُبْصِرَةً لِتَبْتَغُوا فَضْلًا مِنْ رَبِّكُمْ وَلِتَعْلَمُوا عَدَدَ السِّنِينَ وَالْحِسَابَ ۚ وَكُلَّ شَيْءٍ فَصَّلْنَاهُ تَفْصِيلًا ﴿١٣﴾

**14.** ಪ್ರತಿಯೊಬ್ಬನ ಕರ್ಮಕಡತವನ್ನು ನಾವು ಅವನ ಕೊರಳಿಗೆ ಕಟ್ಟಿದ್ದೇವೆ. ಪುನರುತ್ಥಾನ ದಿನದಂದು ಅವನಿಗೋಸ್ಕರ ಒಂದು ಪುಸ್ತಕವನ್ನು ನಾವು ಹೊರತರುವೆವು. ಅದನ್ನು ತೆರೆದಿಟ್ಟಿರುವುದಾಗಿ ಅವನು ಕಾಣುವನು.

وَكُلَّ إِنْسَانٍ أَلْزَمْنَاهُ طَائِرَهُ فِي عُنُقِهِ ۖ وَنُخْرِجُ لَهُ يَوْمَ الْقِيَامَةِ كِتَابًا يَلْقَاهُ مَنْشُورًا ﴿١٤﴾

**15.** 'ನಿನ್ನ ಪುಸ್ತಕವನ್ನು ಓದು. ಇಂದು ನಿನ್ನ ವಿರುದ್ಧ ಲೆಕ್ಕ ತೆಗೆಯಲು ನಿನ್ನ ಆತ್ಮವೇ ಸಾಕು' (ಎಂದು ಅವನೊಡನೆ ಹೇಳಲಾಗುವುದು).

اقْرَأْ كِتَابَكَ كَفَىٰ بِنَفْسِكَ الْيَوْمَ عَلَيْكَ حَسِيبًا ﴿١٥﴾





**16.** ಯಾರಾದರೂ ಸತ್ಪಥದಲ್ಲಿ ನಡೆಯುವವನಾದರೆ ಅವನ ಆತ್ಮದ ಒಳಿತಿಗಾಗಿಯೇ ಅವನು ಸತ್ಪಥದಲ್ಲಿ ನಡೆಯುತ್ತಾನೆ. ಯಾರಾದರೂ ಪಥಭ್ರಷ್ಟನಾಗುವನಾದರೆ ಅದರ ದೋಷ ಸಹ ಅವನಿಗೆಯೇ. ಭಾರಹೊರುವ ಯಾವನೂ ಇನ್ನೊಬ್ಬನ ಭಾರವನ್ನು ಹೊರಲಾರನು. ಒಬ್ಬ ಸಂದೇಶವಾಹಕನನ್ನು ಕಳುಹಿಸುವ ತನಕ ನಾವು (ಜನರನ್ನು) ಶಿಕ್ಷಿಸುವುದಿಲ್ಲ.

مَنِ اهْتَدَىٰ فَإِنَّمَا يَهْتَدِي لِنَفْسِهِ ۖ وَمَنْ ضَلَّ فَإِنَّمَا يَضِلُّ عَلَيْهَا ۚ وَلَا تَزِرُ وَازِرَةٌ وِزْرَ أُخْرَىٰ ۗ وَمَا كُنَّا مُعَذِّبِينَ حَتَّىٰ نَبْعَثَ رَسُولًا ﴿١٦﴾

**17.** ಒಂದು ನಾಡನ್ನು ನಾವು ನಾಶಪಡಿಸಲು ಉದ್ದೇಶಿದರೆ ಅದರ ಸುಖಲೋಲುಪರಿಗೆ (ಪ್ರವಾದಿಗಳ ಮೂಲಕ) ನಾವು ಎಚ್ಚರಿಕೆ ನೀಡುತ್ತೇವೆ. ಆಗ ಅವರು (ಅದನ್ನು ಧಿಕ್ಕರಿಸಿ) ಆಜ್ಞಾಲಂಘನ ಮಾಡುತ್ತಾರೆ. ಆ ಕಾರಣದಿಂದ ಅದರ (ಆ ನಾಡಿನ) ಮೇಲೆ ನಮ್ಮ ಶಿಕ್ಷೆಯ ವಚನ ಪೂರ್ಣಗೊಳ್ಳುತ್ತದೆ. ಹಾಗೆ ನಾವು ಅದನ್ನು ಸಂಪೂರ್ಣವಾಗಿ ನಾಶಗೊಳಿಸುತ್ತೇವೆ.

وَإِذَا أَرَدْنَا أَنْ نُهْلِكَ قَرْيَةً أَمَرْنَا مُتْرَفِيهَا فَفَسَقُوا فِيهَا فَحَقَّ عَلَيْهَا الْقَوْلُ فَدَمَّرْنَاهَا تَدْمِيرًا ﴿١٧﴾

**18.** ನೂಹ್‌ರ ಬಳಿಕ ಎಷ್ಟೆಲ್ಲ ಸಮುದಾಯಗಳನ್ನು ನಾವು ನಾಶಪಡಿಸಿದೆವು! ತನ್ನ ದಾಸರ ಪಾಪಗಳನ್ನು ಸೂಕ್ಷ್ಮವಾಗಿ ತಿಳಿಯಲಿಕ್ಕೂ ಕಾಣಲಿಕ್ಕೂ ನಿನ್ನ ಪ್ರಭು ಸಾಕು.

وَكَمْ أَهْلَكْنَا مِنَ الْقُرُونِ مِنْ بَعْدِ نُوحٍ ۗ وَكَفَىٰ بِرَبِّكَ بِذُنُوبِ عِبَادِهِ خَبِيرًا بَصِيرًا ﴿١٨﴾

**19.** ಯಾರಾದರೂ ಇಹಲೋಕ ಜೀವನವನ್ನು ಬಯಸಿದರೆ, ಅದರಲ್ಲಿ ನಾವು ಇಚ್ಛಿಸಿದ್ದನ್ನು ನಾವು ಇಚ್ಛಿಸಿದವನಿಗೆ ಶೀಘ್ರವಾಗಿ ನೀಡುವೆವು. ಅನಂತರ ಅವನಿಗೋಸ್ಕರ ನಾವು ನರಕವನ್ನು ಸಿದ್ಧಗೊಳಿಸುವೆವು. ಅಲ್ಲಿ ಅವನು ಅಪಮಾನಿತನಾಗಿಯೂ ತಿರಸ್ಕರಿಸಲ್ಪಟ್ಟವನಾಗಿಯೂ ದಹಿಸಲ್ಪಡುವನು.

مَنْ كَانَ يُرِيدُ الْعَاجِلَةَ عَجَّلْنَا لَهُ فِيهَا مَا نَشَاءُ لِمَنْ نُرِيدُ ثُمَّ جَعَلْنَا لَهُ جَهَنَّمَ يَصْلَاهَا مَذْمُومًا مَدْحُورًا ﴿١٩﴾

**20.** ಯಾರಾದರೂ ಸತ್ಯವಿಶ್ವಾಸಿಯಾಗಿದ್ದು ಪರಲೋಕ ಜೀವನವನ್ನು ಬಯಸಿ ಅದಕ್ಕೋಸ್ಕರ ಶ್ರಮಿಸಿದರೆ ಅವರ ಪರಿಶ್ರಮ (ಅಲ್ಲಾಹನ) ಅನುಗ್ರಹಕ್ಕೆ ಪಾತ್ರವಾಗುವುದು.

وَمَنْ أَرَادَ الْآخِرَةَ وَسَعَىٰ لَهَا سَعْيَهَا وَهُوَ مُؤْمِنٌ فَأُولَٰئِكَ كَانَ سَعْيُهُمْ مَشْكُورًا ﴿٢٠﴾

كُلًّا نُّمِدُّ هٰٓؤُلَآءِ وَهٰٓؤُلَآءِ مِنْ عَطَآءِ رَبِّكَ ۚ
وَمَا كَانَ عَطَآءُ رَبِّكَ مَحْظُوْرًا ﴿٢١﴾

**21. ನಾವು ಎಲ್ಲರಿಗೂ ನೆರವಾಗುತ್ತೇವೆ - ಇವರಿಗೂ ಅವರಿಗೂ** (ಇಹಲೋಕ ಬಯಸುವವರಿಗೂ ಪರಲೋಕ ಬಯಸುವವರಿಗೂ) **- ಇದು ನಿನ್ನ ಪ್ರಭುವಿನ ಔದಾರ್ಯವಾಗಿದೆ. ನಿನ್ನ ಪ್ರಭುವಿನ ಔದಾರ್ಯ** (ಯಾರಿಗೂ) **ತಡೆಯಲ್ಪಡಲಾರದು.**

اُنْظُرْ كَيْفَ فَضَّلْنَا بَعْضَهُمْ عَلٰى بَعْضٍ ۚ
وَلَلْاٰخِرَةُ اَكْبَرُ دَرَجٰتٍ وَّاَكْبَرُ تَفْضِيْلًا ﴿٢٢﴾

**22. ನಾವು ಅವರಲ್ಲಿ ಕೆಲವರನ್ನು ಬೇರೆ ಕೆಲವರಿಗಿಂತ** (ಐಹಿಕ ಜೀವನದಲ್ಲಿ) **ಹೇಗೆ ಶ್ರೇಷ್ಠರನ್ನಾಗಿ ಮಾಡಿದ್ದೇವೆಂದು ನೋಡು. ದಿಟವಾಗಿಯೂ ಪರಲೋಕ ಜೀವನ ಉನ್ನತ ಸ್ಥಾನವಿರುವಂಥದ್ದೂ ಅತ್ಯುತ್ಕೃಷ್ಟವಾದುದೂ ಆಗಿದೆ.**

لَا تَجْعَلْ مَعَ اللّٰهِ اِلٰهًا اٰخَرَ فَتَقْعُدَ
مَذْمُوْمًا مَّخْذُوْلًا ﴿٢٣﴾

**23. ನೀನು ಅಲ್ಲಾಹನ ಜೊತೆ ಬೇರೆ ಯಾರನ್ನೂ ಆರಾಧ್ಯನಾಗಿ ಮಾಡಬೇಡ. ಹಾಗೆ ಮಾಡಿದರೆ ನೀನು ಅಪಮಾನಿತನೂ ತ್ಯಜಿಸಲ್ಪಟ್ಟವನೂ ಆಗುವೆ.**

وَقَضٰى رَبُّكَ اَلَّا تَعْبُدُوْٓا اِلَّآ اِيَّاهُ
وَبِالْوَالِدَيْنِ اِحْسَانًا ۚ اِمَّا يَبْلُغَنَّ
عِنْدَكَ الْكِبَرَ اَحَدُهُمَآ اَوْ كِلٰهُمَا فَلَا
تَقُلْ لَّهُمَآ اُفٍّ وَّلَا تَنْهَرْهُمَا وَقُلْ لَّهُمَا
قَوْلًا كَرِيْمًا ﴿٢٤﴾

**24. ನಿನ್ನ ಪ್ರಭು ಆಜ್ಞಾಪಿಸುತ್ತಾನೆ: "ಅವನ** (ಅಲ್ಲಾಹನ) **ಹೊರತು ಬೇರೆ ಯಾರನ್ನೂ ಆರಾಧಿಸಬೇಡ. ಮಾತಾಪಿತರೊಡನೆ ಉತ್ತಮವಾಗಿ ವರ್ತಿಸು. ಅವರಲ್ಲಿ ಒಬ್ಬರು ಅಥವಾ ಇಬ್ಬರು ಸಹ ನಿನ್ನ ಬಳಿ ವೃದ್ಧಾಪ್ಯ ಪಡೆದರೆ, ನೀನು ಅವರೊಡನೆ ನಿಂದನೆಯ ಮಾತನ್ನು ಆಡಬಾರದು. ನೀನು ಅವರೊಡನೆ ಗದರಿಸಿ ಮಾತನಾಡಲೂ ಬಾರದು. ಅವರಿಬ್ಬರೊಡನೆಯೂ ನೀನು ಸೌಮ್ಯವಾಗಿಯೂ ಆದರದಿಂದಲೂ ಮಾತನಾಡು.**

وَاخْفِضْ لَهُمَا جَنَاحَ الذُّلِّ مِنَ الرَّحْمَةِ وَ
قُلْ رَّبِّ ارْحَمْهُمَا كَمَا رَبَّيٰنِيْ صَغِيْرًا ﴿٢٥﴾

**25. "ಕರುಣೆಯಿಂದ ಕೂಡಿದವನಾಗಿ ನೀನು ಅವರಿಗೆ ವಿನಯದ ಬಾಹು ತಗ್ಗಿಸಿಕೊಡು ಹಾಗೂ 'ನನ್ನ ಪ್ರಭೂ, ಅವರೀರ್ವರೂ ನನ್ನ ಬಾಲ್ಯಕಾಲದಲ್ಲಿ ನನ್ನನ್ನು ಸಾಕಿ ಸಲಹಿದಂತೆ ನೀನು ಸಹ ಅವರಿಗೆ ಕರುಣೆದೋರು' ಎಂದು ಪ್ರಾರ್ಥಿಸು."**

رَبُّكُمْ اَعْلَمُ بِمَا فِيْ نُفُوْسِكُمْ ۚ اِنْ
تَكُوْنُوْا صٰلِحِيْنَ فَاِنَّهٗ كَانَ لِلْاَوَّابِيْنَ
غَفُوْرًا ﴿٢٦﴾

**26. ನಿಮ್ಮ ಮನಸ್ಸಿನಲ್ಲಿರುವುದೇನೆಂದು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು. ನೀವು ಸಜ್ಜನರಾಗಿದ್ದರೆ, ನಿಶ್ಚಯವಾಗಿಯೂ ಪಶ್ಚಾತ್ತಾಪಪಟ್ಟು ಮರಳುವವರಿಗೆ ಅವನು ಬಹಳವಾಗಿ ಕ್ಷಮೆನೀಡುತ್ತಾನೆ.**





وَاٰتِ ذَا الْقُرْبٰى حَقَّهٗ وَالْمِسْكِيْنَ وَابْنَ
السَّبِيْلِ وَلَا تُبَذِّرْ تَبْذِيْرًا ﴿٢٧﴾

**27. ನಿಮ್ಮ ನಿಕಟ ಸಂಬಂಧಿಗೆ ಅವನ ಹಕ್ಕನ್ನು ನೀಡಿರಿ.** (ಹಾಗೆಯೇ) **ಬಡವರಿಗೂ ಪಥಿಕರಿಗೂ. ಯಾವ ದುರ್ವ್ಯಯವನ್ನೂ ಮಾಡಬೇಡಿರಿ.**

اِنَّ الْمُبَذِّرِيْنَ كَانُوْٓا اِخْوَانَ الشَّيٰطِيْنِ ۚ
وَكَانَ الشَّيْطٰنُ لِرَبِّهٖ كَفُوْرًا ﴿٢٨﴾

**28. ದುಂದುವೆಚ್ಚ ಮಾಡುವವರು ಖಂಡಿತವಾಗಿಯೂ ಶೈತಾನನ ಸಹೋದರರಾಗಿದ್ದಾರೆ. ಶೈತಾನನಾದರೋ ತನ್ನ ಪ್ರಭುವಿಗೆ ಕೃತಘ್ನನು.**

وَاِمَّا تُعْرِضَنَّ عَنْهُمُ ابْتِغَآءَ رَحْمَةٍ مِّنْ
رَّبِّكَ تَرْجُوْهَا فَقُلْ لَّهُمْ قَوْلًا
مَّيْسُوْرًا ﴿٢٩﴾

**29. ನಿನ್ನ ಪ್ರಭುವಿನಿಂದ ನೀನು ನಿರೀಕ್ಷಿಸುವ ಕಾರುಣ್ಯವನ್ನು ಬೇಡುತ್ತಾ ಯಾವಾಗಲಾದರೂ ಅವರಿಂದ ನೀನು ಮುಖ ತಿರುಗಿಸುವ ಪಕ್ಷದಲ್ಲಿ**[313] (ಆಗ ಕೂಡ) **ಅವರೊಡನೆ ಸೌಮ್ಯವಾಗಿ ಮಾತನಾಡು.**

وَلَا تَجْعَلْ يَدَكَ مَغْلُوْلَةً اِلٰى عُنُقِكَ
وَلَا تَبْسُطْهَا كُلَّ الْبَسْطِ فَتَقْعُدَ مَلُوْمًا
مَّحْسُوْرًا ﴿٣٠﴾

**30. ನಿನ್ನ ಕೈಯನ್ನು** (ಜಿಪುಣತನದಿಂದ) **ಕೊರಳಿಗೆ ಕಟ್ಟಿಕೊಳ್ಳಬೇಡ.** (ಅಥವಾ ದುಂದುಗಾರಿಕೆಯಿಂದ) **ಅದನ್ನು ಸಂಪೂರ್ಣವಾಗಿ ಬಿಡಿಸುವುದೂ ಬೇಡ. ಹಾಗೆ ಮಾಡಿದರೆ ನೀನು ಆಕ್ಷೇಪಕ್ಕೆ ಗುರಿಯಾಗುವೆ ಅಥವಾ ಹಾನಿಗೀಡಾಗುವೆ.**[314]

اِنَّ رَبَّكَ يَبْسُطُ الرِّزْقَ لِمَنْ يَّشَآءُ
وَيَقْدِرُ ۚ اِنَّهٗ كَانَ بِعِبَادِهٖ خَبِيْرًا
بَصِيْرًا ﴿٣١﴾

**31. ನಿಶ್ಚಯವಾಗಿಯೂ ನಿನ್ನ ಪ್ರಭು ತಾನಿಚ್ಛಿಸುವವರಿಗೆ ಜೀವನಾಧಾರವನ್ನು ಹೆಚ್ಚಿಸಿ ಕೊಡುತ್ತಾನೆ. ಹಾಗೂ ಅವನು** (ತಾನು ಉದ್ದೇಶಿಸುವವರಿಗೆ) **ಅದನ್ನು ಕಡಿತಗೊಳಿಸುತ್ತಾನೆ. ದಿಟವಾಗಿಯೂ ಅವನು ತನ್ನ ದಾಸರ ಬಗ್ಗೆ ಚೆನ್ನಾಗಿ ಬಲ್ಲವನೂ ಸರ್ವವನ್ನು ಕಾಣುವವನೂ ಆಗಿದ್ದಾನೆ.**

وَلَا تَقْتُلُوْٓا اَوْلَادَكُمْ خَشْيَةَ اِمْلَاقٍ ۚ
نَحْنُ نَرْزُقُهُمْ وَاِيَّاكُمْ ۚ اِنَّ قَتْلَهُمْ
كَانَ خِطْاً كَبِيْرًا ﴿٣٢﴾

**32. ಬಡತನಕ್ಕೆ ಹೆದರಿಕೊಂಡು ನೀವು ನಿಮ್ಮ ಮಕ್ಕಳನ್ನು ಕೊಲ್ಲಬೇಡಿರಿ. ಅವರಿಗೂ ನಿಮಗೂ ಆಹಾರ ನೀಡುವವರು ನಾವೇ ಆಗಿದ್ದೇವೆ. ಅವರನ್ನು ಕೊಲ್ಲುವುದು ಖಂಡಿತವಾಗಿಯೂ ಮಹಾ ಪಾಪವಾಗಿದೆ.**

313. ಅರ್ಹರಾದವರಿಗೆ ಧನಸಹಾಯ ಮಾಡದಿರುವುದು ಜಿಪುಣತನದಿಂದಾಗಿರಬಾರದು; ಸಾಮರ್ಥ್ಯವಿಲ್ಲದ ಕಾರಣದಿಂದಾಗಬಹುದು. ತನಗೆ ಸಾಮರ್ಥ್ಯವುಂಟಾಗುವುದೆಂಬ ಭರವಸೆ ಮತ್ತು ಪ್ರಾರ್ಥನೆ ಸಹ ಬೇಕು. ಸಾಧ್ಯವಿರುವಾಗ ಅವರಿಗೆ ಬೇಕಾದ ಧನಸಹಾಯ ಮಾಡಬೇಕು ಎಂದು ತಾತ್ಪರ್ಯ.

314. ಅಗತ್ಯಕ್ಕೆ ಖರ್ಚುಮಾಡದೆ ಕೃಪಣತೆ ತೋರಿಸಿದರೆ ಆಕ್ಷೇಪಕ್ಕೆ ಗುರಿಯಾಗುವುದು. ದುಂದುವೆಚ್ಚ ಮಾಡಿದರೆ ಹಾನಿಗೊಳಗಾಗಿ ದುಃಖಿಸಬೇಕಾಗುವುದು.

**33.** ನೀವು ವ್ಯಭಿಚಾರದ ಸಮೀಪಕ್ಕೆ ಹೋಗಬೇಡಿರಿ. ನಿಶ್ಚಯವಾಗಿಯೂ ಅದು ಅಶ್ಲೀಲಕರವೂ ದುಷ್ಟ ಮಾರ್ಗವೂ ಆಗಿದೆ.

وَلَا تَقْرَبُوا الزِّنٰىٓ اِنَّهٗ كَانَ فَاحِشَةً ؕ وَسَآءَ سَبِيْلًا ﴿٣٢﴾

**34.** ಅಲ್ಲಾಹನು ಗೌರವ ನೀಡಿದ ಜೀವವನ್ನು ನೀವು ನ್ಯಾಯೋಚಿತವಾದ ಕಾರಣವಿಲ್ಲದೆ ಕೊಲ್ಲಬೇಡಿರಿ. ಯಾರಾದರೂ ದೌರ್ಜನ್ಯಕ್ಕೊಳಗಾಗಿ ಕೊಲ್ಲಲ್ಪಟ್ಟರೆ ನಾವು ಅವನ ವಾರೀಸುದಾರನಿಗೆ (ಪ್ರತಿಕಾರದ) ಅಧಿಕಾರವನ್ನು ನೀಡಿದ್ದೇವೆ. ಆದರೆ ಈ ಬಗ್ಗೆ ಅವನು ಮಿತಿಮೀರಬಾರದು. ಏಕೆಂದರೆ ಅವನಿಗೆ (ಕಾನೂನಿನ) ನೆರವು ದೊರಕುತ್ತದೆ.

وَلَا تَقْتُلُوا النَّفْسَ الَّتِىْ حَرَّمَ اللّٰهُ اِلَّا بِالْحَقِّ ؕ وَمَنْ قُتِلَ مَظْلُوْمًا فَقَدْ جَعَلْنَا لِوَلِيِّهٖ سُلْطٰنًا فَلَا يُسْرِفْ فِّى الْقَتْلِ ؕ اِنَّهٗ كَانَ مَنْصُوْرًا ﴿٣٣﴾

**35.** ಅನಾಥನು ತನ್ನ ಪ್ರಾಪ್ತ ವಯಸ್ಸಿಗೆ ತಲಪುವವರೆಗೆ ಉತ್ತಮವಾದ ರೀತಿಯಲ್ಲಿ ಹೊರತು ನೀವು ಅವನ ಧನವನ್ನು ಸಮೀಪಿಸಬಾರದು. ನೀವು ಕರಾರನ್ನು ಪಾಲಿಸಿರಿ. ಏಕೆಂದರೆ, ಕರಾರುಗಳ ಬಗ್ಗೆ ಪ್ರಶ್ನಿಸಲಾಗುವುದು.

وَلَا تَقْرَبُوْا مَالَ الْيَتِيْمِ اِلَّا بِالَّتِىْ هِىَ اَحْسَنُ حَتّٰى يَبْلُغَ اَشُدَّهٗ ۪ وَاَوْفُوْا بِالْعَهْدِ ۚ اِنَّ الْعَهْدَ كَانَ مَسْـُٔوْلًا ﴿٣٤﴾

**36.** ನೀವು ಅಳೆದುಕೊಡುವಾಗ ಪೂರ್ಣವಾಗಿ ಅಳೆಯಿರಿ. ತೂಕ ಮಾಡುವಾಗ ಸರಿಯಾದ ತ್ರಾಸಿನಲ್ಲಿ ತೂಕಮಾಡಿ ಕೊಡಿರಿ. ಅದು ಉತ್ತಮವಾದುದೂ ಸತ್ಪರಿಣಾಮಕಾರಿಯೂ ಆಗಿದೆ.

وَاَوْفُوا الْكَيْلَ اِذَا كِلْتُمْ وَزِنُوْا بِالْقِسْطَاسِ الْمُسْتَقِيْمِ ؕ ذٰلِكَ خَيْرٌ وَّاَحْسَنُ تَاْوِيْلًا ﴿٣٥﴾

**37.** ಯಾವುದರ ಬಗ್ಗೆ ನಿನಗೆ ಸರಿಯಾದ ಜ್ಞಾನವಿಲ್ಲವೋ ಅದನ್ನು ನೀನು ಹಿಂಬಾಲಿಸಬೇಡ. ಖಂಡಿತವಾಗಿಯೂ ಕಿವಿ, ಕಣ್ಣು, ಹೃದಯ ಇವೆಲ್ಲವುಗಳ ವಿಚಾರಣೆ ನಡೆಯುವುದು.

وَلَا تَقْفُ مَا لَيْسَ لَكَ بِهٖ عِلْمٌ ؕ اِنَّ السَّمْعَ وَالْبَصَرَ وَالْفُؤَادَ كُلُّ اُولٰٓئِكَ كَانَ عَنْهُ مَسْـُٔوْلًا ﴿٣٦﴾

**38.** ನೀನು ಭೂಮಿಯಲ್ಲಿ ಅಹಂಭಾವದಿಂದ ನಡೆಯಬೇಡ. ಏಕೆಂದರೆ ನೀನು ಭೂಮಿಯನ್ನು ಸೀಳಲಾರೆ. ಎತ್ತರದಲ್ಲಿ ನೀನು ಪರ್ವತಗಳನ್ನು ತಲಪಲಾರೆ.

وَلَا تَمْشِ فِى الْاَرْضِ مَرَحًا ۚ اِنَّكَ لَنْ تَخْرِقَ الْاَرْضَ وَلَنْ تَبْلُغَ الْجِبَالَ طُوْلًا ﴿٣٧﴾

**39.** ಈ ಎಲ್ಲ ಪಾಪಗಳ ಕೆಡುಕು ಅಲ್ಲಾಹನ ದೃಷ್ಟಿಯಲ್ಲಿ ಅಪ್ರಿಯವಾದುದು.

كُلُّ ذٰلِكَ كَانَ سَيِّئُهٗ عِنْدَ رَبِّكَ مَكْرُوْهًا ﴿٣٨﴾





**40.** ಇದು ನಿನ್ನ ಪ್ರಭು ನಿನಗೆ ಅವತೀರ್ಣಗೊಳಿಸಿದ ಜ್ಞಾನದಲ್ಲಿ ಸೇರುತ್ತದೆ. ನೀನು ಅಲ್ಲಾಹನೊಂದಿಗೆ ಬೇರೆ ಯಾರನ್ನೂ ಆರಾಧ್ಯನಾಗಿ ಮಾಡಬೇಡ. ಹಾಗೆ ಮಾಡಿದರೆ, ನೀನು ನಿಂದಿಸಲ್ಪಟ್ಟವನಾಗಿಯೂ ತ್ಯಜಿಸಲ್ಪಟ್ಟವನಾಗಿಯೂ ನರಕಕ್ಕೆ ಎಸೆಯಲ್ಪಡುವೆ.

ذٰلِكَ مِمَّآ اَوْحٰٓى اِلَيْكَ رَبُّكَ مِنَ الْحِكْمَةِ ؕ وَلَا تَجْعَلْ مَعَ اللّٰهِ اِلٰهًا اٰخَرَ فَتُلْقٰى فِىْ جَهَنَّمَ مَلُوْمًا مَّدْحُوْرًا ﴿٣٩﴾

**41.** ಏನು, ನಿಮ್ಮ ಪ್ರಭು ನಿಮಗೆ ಪುತ್ರರನ್ನು ನೀಡಿ ನಿಮ್ಮನ್ನು ವಿಶಿಷ್ಟಗೊಳಿಸಿ ದೇವದೂತರ ಪೈಕಿ ತನಗೋಸ್ಕರ ಪುತ್ರಿಯರನ್ನು ಪಡೆದುಕೊಂಡಿರುವನೇ? ಖಂಡಿತವಾಗಿಯೂ ನೀವು ಹೇಳುತ್ತಿರುವುದು ಬಲು ದೊಡ್ಡ (ಅಪಾಯಕಾರಿ) ಮಾತಾಗಿದೆ.

اَفَاَصْفٰىكُمْ رَبُّكُمْ بِالْبَنِيْنَ وَاتَّخَذَ مِنَ الْمَلٰٓئِكَةِ اِنَاثًا ؕ اِنَّكُمْ لَتَقُوْلُوْنَ قَوْلًا عَظِيْمًا ﴿٤٠﴾

**42.** ಅವರು ಉಪದೇಶವನ್ನು ಕೇಳಲಿಕ್ಕಾಗಿ ನಾವು ಈ ಖುರ್‌ಆನಿನಲ್ಲಿ ವಿವಿಧ ರೀತಿಯಲ್ಲಿ ವಿವರಿಸಿದ್ದೇವೆ. ಆದರೆ ಅದು ಅವರು ಹೆಚ್ಚು ವಿಮುಖರಾಗುವಂತೆ ಮಾಡುತ್ತದೆ.

وَلَقَدْ صَرَّفْنَا فِىْ هٰذَا الْقُرْاٰنِ لِيَذَّكَّرُوْا ؕ وَمَا يَزِيْدُهُمْ اِلَّا نُفُوْرًا ﴿٤١﴾

**43.** ಹೇಳು: 'ಅವನೊಂದಿಗೆ ಅವರು ಹೇಳುವಂತೆ (ಬೇರೆ) ದೇವರುಗಳು ಇರುತ್ತಿದ್ದರೆ ಸಿಂಹಾಸನಾಧಿಪತಿಯ ಬಳಿಗೆ ಅವರು ಒಂದು ಮಾರ್ಗವನ್ನು ಹುಡುಕುತ್ತಿದ್ದರು.'

قُلْ لَّوْ كَانَ مَعَهٗٓ اٰلِهَةٌ كَمَا يَقُوْلُوْنَ اِذًا لَّابْتَغَوْا اِلٰى ذِى الْعَرْشِ سَبِيْلًا ﴿٤٢﴾

**44.** ಅವನು ಅತ್ಯಂತ ಪರಿಶುದ್ಧನು- ಅವರು ಹೇಳುವುದರಿಂದೆಲ್ಲ ಅವನು ಉನ್ನತನು; ಅತ್ಯುನ್ನತನು.

سُبْحٰنَهٗ وَتَعٰلٰى عَمَّا يَقُوْلُوْنَ عُلُوًّا كَبِيْرًا ﴿٤٣﴾

**45.** ಏಳು ಆಕಾಶಗಳೂ ಭೂಮಿಯೂ ಅವುಗಳಲ್ಲಿರುವ ಎಲ್ಲರೂ ಅವನ ಮಹಿಮೆಯನ್ನು ಕೊಂಡಾಡುತ್ತಾರೆ. ಅವನನ್ನು ಸ್ತುತಿಸುವುದರೊಂದಿಗೆ ಅವನ ಮಹಿಮೆಯನ್ನು ಕೊಂಡಾಡದ ಯಾವುದೇ ವಸ್ತುವಿಲ್ಲ. ಆದರೆ ಅವುಗಳ ಪ್ರಕೀರ್ತನೆಗಳು ನಿಮಗೆ ಗ್ರಾಹ್ಯವಾಗುವುದಿಲ್ಲ. ಖಂಡಿತವಾಗಿಯೂ ಅವನು ಸಹನಶೀಲನೂ ಅತ್ಯಂತ ಕ್ಷಮಿಸುವವನೂ ಆಗಿದ್ದಾನೆ.

تُسَبِّحُ لَهُ السَّمٰوٰتُ السَّبْعُ وَالْاَرْضُ وَمَنْ فِيْهِنَّ ؕ وَاِنْ مِّنْ شَىْءٍ اِلَّا يُسَبِّحُ بِحَمْدِهٖ وَلٰكِنْ لَّا تَفْقَهُوْنَ تَسْبِيْحَهُمْ ؕ اِنَّهٗ كَانَ حَلِيْمًا غَفُوْرًا ﴿٤٤﴾

**46.** ನೀನು ಖುರ್‌ಆನ್ ಪಾರಾಯಣ ಮಾಡುವಾಗ ನಿನಗೆ ಮತ್ತು ಪರಲೋಕದ ಬಗ್ಗೆ ನಂಬಿಕೆಯಿಲ್ಲದವರ ಮಧ್ಯೆ ನಾವು ಒಂದು ಗುಪ್ತವಾದ ಪರದೆಯನ್ನು ಹಾಕುತ್ತೇವೆ.

وَاِذَا قَرَاْتَ الْقُرْاٰنَ جَعَلْنَا بَيْنَكَ وَبَيْنَ الَّذِيْنَ لَا يُؤْمِنُوْنَ بِالْاٰخِرَةِ حِجَابًا مَّسْتُوْرًا ﴿٤٦﴾

**47.** ಅವರು ಅದನ್ನು ಗ್ರಹಿಸದಿರಲಿಕ್ಕಾಗಿ ಅವರ ಹೃದಯಗಳ ಮೇಲೆ ನಾವು ಹೊದಿಕೆಗಳನ್ನು ಹಾಕುತ್ತೇವೆ ಮತ್ತು ಅವರ ಕಿವಿಗಳಿಗೆ ಕಿವುಡುತನವನ್ನುಂಟು ಮಾಡುತ್ತೇವೆ. ನೀನು ಖುರ್‌ಆನಿನಲ್ಲಿ ಏಕನಾದ ನಿನ್ನ ಪ್ರಭುವಿನ ಕುರಿತು ಪ್ರಸ್ತಾಪಿಸುವಾಗ ತಿರಸ್ಕಾರದಿಂದ ಅವರು ಬೆನ್ನು ತಿರುಗಿಸಿ ಹೋಗುತ್ತಾರೆ.

وَّجَعَلْنَا عَلٰى قُلُوْبِهِمْ اَكِنَّةً اَنْ يَّفْقَهُوْهُ وَفِيْٓ اٰذَانِهِمْ وَقْرًا ؕ وَاِذَا ذَكَرْتَ رَبَّكَ فِى الْقُرْاٰنِ وَحْدَهٗ وَلَّوْا عَلٰٓى اَدْبَارِهِمْ نُفُوْرًا ﴿٤٧﴾

**48.** ಅವರು ನೀನು ಹೇಳುವುದನ್ನು ಗಮನಿಸಿ ಕೇಳುವಾಗ ಅವರು ಏನನ್ನು ಗಮನಿಸಿ ಕೇಳುತ್ತಿದ್ದಾರೆಂದೂ ಅವರು ಗುಪ್ತವಾಗಿ ಮಾತನಾಡುತ್ತಿರುವಾಗ ಏನು ಹೇಳುತ್ತಿದ್ದಾರೆಂದೂ ನಮಗೆ ಗೊತ್ತಿದೆ. 'ನೀವು ಅನುಸರಿಸುವ ಈ ವ್ಯಕ್ತಿ ಮಾಟಕ್ಕೊಳಗಾದವನು' ಎಂದು ದುಷ್ಕರ್ಮಿಗಳು ಹೇಳುತ್ತಾರೆ.

نَحْنُ اَعْلَمُ بِمَا يَسْتَمِعُوْنَ بِهٖٓ اِذْ يَسْتَمِعُوْنَ اِلَيْكَ وَاِذْ هُمْ نَجْوٰٓى اِذْ يَقُوْلُ الظّٰلِمُوْنَ اِنْ تَتَّبِعُوْنَ اِلَّا رَجُلًا مَّسْحُوْرًا ﴿٤٨﴾

**49.** ನೋಡು, ಅವರು ನಿನ್ನ ಬಗ್ಗೆ ಏನೆಲ್ಲ ಉಪಮೆಗಳನ್ನು ಪ್ರಯೋಗಿಸುತ್ತಾರೆ! ಆ ಕಾರಣದಿಂದ ಅವರು ಪಥಭ್ರಷ್ಟರಾಗಿದ್ದಾರೆ. ಅವರಿಗೆ ಯಾವುದೇ ದಾರಿ ಕಾಣಲು ಸಾಧ್ಯವಾಗುವುದಿಲ್ಲ.

اُنْظُرْ كَيْفَ ضَرَبُوْا لَكَ الْاَمْثَالَ فَضَلُّوْا فَلَا يَسْتَطِيْعُوْنَ سَبِيْلًا ﴿٤٩﴾

**50.** 'ನಾವು ಎಲುಬುಗಳಾಗಿಯೂ ಚೂರುಚೂರುಗಳಾಗಿಯೂ ಮಾರ್ಪಟ್ಟ ಬಳಿಕ ಪುನಃ ಒಂದು ಹೊಸ ಸೃಷ್ಟಿಯಾಗಿ ಎಬ್ಬಿಸಲ್ಪಡುವೆವೇ?' ಎಂದು ಅವರು ಕೇಳುತ್ತಾರೆ.

وَقَالُوْٓا ءَاِذَا كُنَّا عِظَامًا وَّرُفَاتًا ءَاِنَّا لَمَبْعُوْثُوْنَ خَلْقًا جَدِيْدًا ﴿٥٠﴾

**51.** ಹೇಳು: 'ನೀವು ಕಲ್ಲಾದರೂ ಕಬ್ಬಿಣವಾದರೂ-

قُلْ كُوْنُوْا حِجَارَةً اَوْ حَدِيْدًا ﴿٥١﴾

**52.** 'ನಿಮ್ಮ ಮನಸ್ಸಿನಲ್ಲಿ ಅದಕ್ಕಿಂತ ಕಠಿಣವಾಗಿ ತೋರುವ ಬೇರೆ ಯಾವುದೇ ಸೃಷ್ಟಿಯಾದರೂ (ನೀವು ಎಬ್ಬಿಸಲ್ಪಡುವಿರಿ.)' ಆಗ ಅವರು, 'ನಮಗೆ ಪುನರುಜ್ಜೀವನ ನೀಡುವವನಾರು?' ಎಂದು ಕೇಳುವರು. 'ಮೊದಲು ನಿಮ್ಮನ್ನು ಸೃಷ್ಟಿಸಿದವನೇ' ಎಂದು ಉತ್ತರಿಸು. ಆಗ ಅವರು ತಮ್ಮ ತಲೆಗಳನ್ನು ನಿನ್ನ ಕಡೆಗೆ ಅಲ್ಲಾಡಿಸುತ್ತಾ, 'ಅದು ಯಾವಾಗ ಘಟಿಸುವುದು?' ಎಂದು ಕೇಳುವರು. ಹೇಳು: 'ಅದು ಬೇಗನೆ ಘಟಿಸಬಹುದು.'

اَوْ خَلْقًا مِّمَّا يَكْبُرُ فِيْ صُدُوْرِكُمْ ۚ فَسَيَقُوْلُوْنَ مَنْ يُّعِيْدُنَا ؕ قُلِ الَّذِيْ فَطَرَكُمْ اَوَّلَ مَرَّةٍ ۚ فَسَيُنْغِضُوْنَ اِلَيْكَ رُءُوْسَهُمْ وَيَقُوْلُوْنَ مَتٰى هُوَ ؕ قُلْ عَسٰٓى اَنْ يَّكُوْنَ قَرِيْبًا ﴿٥٢﴾

**53.** 'ಆ ದಿನದಂದು ಅವನು ನಿಮ್ಮನ್ನು ಕರೆಯುವನು; ಆಗ ನೀವು ಅವನನ್ನು ಸ್ತುತಿಸುತ್ತಾ ಕರೆಗೆ ಉತ್ತರ ನೀಡುವಿರಿ. ನೀವು ಅಲ್ಪಕಾಲ ಮಾತ್ರ (ಭೂಲೋಕದಲ್ಲಿ) ವಾಸಿಸಿದ್ದೆಂದು ಭಾವಿಸುವಿರಿ.

يَوْمَ يَدْعُوْكُمْ فَتَسْتَجِيْبُوْنَ بِحَمْدِهٖ وَتَظُنُّوْنَ اِنْ لَّبِثْتُمْ اِلَّا قَلِيْلًا ﴿٥٣﴾ ع ٥

**54.** ನನ್ನ ಭಕ್ತದಾಸರೊಡನೆ ಹೇಳು - ಅವರು ಉತ್ತಮವಾದ ರೀತಿಯಲ್ಲಿ ಮಾತನಾಡಲಿ. ನಿಶ್ಚಯವಾಗಿಯೂ ಶೈತಾನನು ಅವರ ಮಧ್ಯೆ ಬಿಕ್ಕಟ್ಟನ್ನು ಉಂಟುಮಾಡುವನು. ಖಂಡಿತವಾಗಿಯೂ ಶೈತಾನನು ಮನುಷ್ಯನ ಬಹಿರಂಗ ಶತ್ರುವಾಗಿದ್ದಾನೆ.

وَقُلْ لِّعِبَادِيْ يَقُوْلُوا الَّتِيْ هِيَ اَحْسَنُ ؕ اِنَّ الشَّيْطٰنَ يَنْزَغُ بَيْنَهُمْ ؕ اِنَّ الشَّيْطٰنَ كَانَ لِلْاِنْسَانِ عَدُوًّا مُّبِيْنًا ﴿٥٤﴾

**55.** ನಿಮ್ಮ ಪ್ರಭು ನಿಮ್ಮನ್ನು ಚೆನ್ನಾಗಿ ಬಲ್ಲನು. ಅವನಿಚ್ಛಿಸಿದರೆ ನಿಮ್ಮ ಮೇಲೆ ಕರುಣೆದೋರುವನು. ಅಥವಾ ಅವನಿಚ್ಛಿಸಿದರೆ ನಿಮ್ಮನ್ನು ಶಿಕ್ಷಿಸುವನು. ನಿನ್ನನ್ನು ಅವರ ಮೇಲ್ನೋಟಗಾರನಾಗಿ ನಾವು ಕಳುಹಿಸಲಿಲ್ಲ.

رَبُّكُمْ اَعْلَمُ بِكُمْ ؕ اِنْ يَّشَاْ يَرْحَمْكُمْ اَوْ اِنْ يَّشَاْ يُعَذِّبْكُمْ ؕ وَمَآ اَرْسَلْنٰكَ عَلَيْهِمْ وَكِيْلًا ﴿٥٥﴾

**56.** ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲರನ್ನೂ ಅಲ್ಲಾಹನು ಬಲ್ಲನು. ನಾವು ಕೆಲವು ಪ್ರವಾದಿಗಳಿಗೆ ಕೆಲವು ಪ್ರವಾದಿಗಳಿಗಿಂತ ಶ್ರೇಷ್ಠತೆ ನೀಡಿದ್ದೇವೆ. ದಾವೂದ್‌ರಿಗೆ ನಾವು ಝಬೂರ್[315] ನೀಡಿದೆವು.

وَرَبُّكَ اَعْلَمُ بِمَنْ فِى السَّمٰوٰتِ وَالْاَرْضِ ؕ وَلَقَدْ فَضَّلْنَا بَعْضَ النَّبِيّٖنَ عَلٰى بَعْضٍ وَّاٰتَيْنَا دَاوٗدَ زَبُوْرًا ﴿٥٦﴾

**57.** ಹೇಳು: 'ಅಲ್ಲಾಹನ ಹೊರತು (ದೇವರುಗಳೆಂದು) ನೀವು ಭಾವಿಸಿರುವವರನ್ನು ಕರೆದುಕೊಳ್ಳಿರಿ. ಆಗ, ನಿಮ್ಮ ಯಾವುದೇ ವಿಪತ್ತನ್ನು ಹೋಗಲಾಡಿಸಲಿಕ್ಕಾಗಲಿ ಬದಲಾಯಿಸಲಿಕ್ಕಾಗಲಿ ಅವರಿಗೆ ಸಾಧ್ಯವಿಲ್ಲ (ಎಂದು ನಿಮಗೆ ಮನವರಿಕೆಯಾಗುವುದು).

قُلِ ادْعُوا الَّذِيْنَ زَعَمْتُمْ مِّنْ دُوْنِهٖ فَلَا يَمْلِكُوْنَ كَشْفَ الضُّرِّ عَنْكُمْ وَلَا تَحْوِيْلًا ﴿٥٧﴾

315. ಝಬೂರ್ - ಹಳೆಯ ಒಡಂಬಡಿಕೆಯ ಕೀರ್ತನೆಗಳು (Psalms) ಎಂಬ ಪುಸ್ತಕ.

**58.** ಇವರು ಯಾರನ್ನು ಕರೆದು ಪ್ರಾರ್ಥಿಸುತ್ತಾರೋ ಅವರೇ ಸ್ವತಃ ತಮ್ಮ ಪ್ರಭುವನ್ನು ಸಮೀಪಿಸುವ ಮಾರ್ಗವನ್ನು ಹುಡುಕುತ್ತಿದ್ದಾರೆ - ಅವರಲ್ಲಿ ಹೆಚ್ಚು ಸಾಮೀಪ್ಯವನ್ನು ಪಡೆದವರು ಯಾರೆಂದು (ಆ ಮೂಲಕ ರಕ್ಷೆ ಹೊಂದಲಿಕ್ಕಾಗಿ). ಅವರು ಅವನ (ಅಲ್ಲಾಹನ) ಕರುಣೆಯನ್ನು ಆಶಿಸುತ್ತಾರೆ ಮತ್ತು ಅವನ ಶಿಕ್ಷೆಗೆ ಹೆದರುತ್ತಾರೆ. ಖಂಡಿತವಾಗಿಯೂ ನಿನ್ನ ಪ್ರಭುವಿನ ಶಿಕ್ಷೆಗೆ ಹೆದರಲೇ ಬೇಕು.

أُولَٰئِكَ الَّذِينَ يَدْعُونَ يَبْتَغُونَ إِلَىٰ رَبِّهِمُ الْوَسِيلَةَ أَيُّهُمْ أَقْرَبُ وَيَرْجُونَ رَحْمَتَهُ وَيَخَافُونَ عَذَابَهُ ۚ إِنَّ عَذَابَ رَبِّكَ كَانَ مَحْذُورًا ﴿٥٨﴾

**59.** ಪುನರುತ್ಥಾನ ದಿನಕ್ಕೆ ಮುಂಚೆ ನಾವು ನಾಶ ಪಡಿಸದ ಅಥವಾ ಕಠೋರವಾಗಿ ಶಿಕ್ಷಿಸದ ಯಾವುದೇ ನಾಡಿಲ್ಲ. ಇದು ದೇವನಿಯಮದಲ್ಲಿ ಬರೆಯಲ್ಪಟ್ಟಿದ್ದಾಗಿದೆ.

وَإِن مِّن قَرْيَةٍ إِلَّا نَحْنُ مُهْلِكُوهَا قَبْلَ يَوْمِ الْقِيَامَةِ أَوْ مُعَذِّبُوهَا عَذَابًا شَدِيدًا ۚ كَانَ ذَٰلِكَ فِي الْكِتَابِ مَسْطُورًا ﴿٥٩﴾

**60.** ಪೂರ್ವಿಕರು ದೃಷ್ಟಾಂತಗಳನ್ನು ಸುಳ್ಳಾಗಿಸಿದರು; ಆದರೆ ಅದು ದೃಷ್ಟಾಂತಗಳನ್ನು ಕಳುಹಿಸಲು ನಮಗೆ ಅಡ್ಡಿಯಾಗುತ್ತಿರಲಿಲ್ಲ.[315A] ನಾವು ಸಮೂದ್ ಗೋತ್ರಕ್ಕೆ ಆ ಹೆಣ್ಣು ಒಂಟೆಯನ್ನು ಸ್ಪಷ್ಟವಾದೊಂದು ದೃಷ್ಟಾಂತವಾಗಿ ನೀಡಿದೆವು. ಆದರೆ ಅವರು ಅದರೊಂದಿಗೆ ದೌರ್ಜನ್ಯದಿಂದ ವರ್ತಿಸಿದರು. ಮುನ್ನೆಚ್ಚರಿಕೆಯಾಗಿ ಹೊರತು ನಾವು ದೃಷ್ಟಾಂತಗಳನ್ನು ಕಳುಹಿಸುವುದಿಲ್ಲ.

وَمَا مَنَعَنَا أَن نُّرْسِلَ بِالْآيَاتِ إِلَّا أَن كَذَّبَ بِهَا الْأَوَّلُونَ ۚ وَآتَيْنَا ثَمُودَ النَّاقَةَ مُبْصِرَةً فَظَلَمُوا بِهَا ۚ وَمَا نُرْسِلُ بِالْآيَاتِ إِلَّا تَخْوِيفًا ﴿٦٠﴾

**61.** ನಿಶ್ಚಯವಾಗಿಯೂ ನಿನ್ನ ಪ್ರಭು ಜನರನ್ನು ಸುತ್ತುವರಿದಿದ್ದಾನೆಂದು ನಾವು ನಿನ್ನೊಡನೆ ಹೇಳಿದ ಸಂದರ್ಭ (ಸ್ಮರಿಸು). ನಾವು ನಿನಗೆ ತೋರಿಸಿದ ದಿವ್ಯ ದರ್ಶನ[316] ಜನರಿಗೆ ಒಂದು ಪರೀಕ್ಷೆಯಾಗಿತ್ತು. ಹಾಗೆಯೇ ಖುರ್‌ಆನಿನಲ್ಲಿ ಶಪಿಸಲಾದ ವೃಕ್ಷ ಸಹ.[317] ನಾವು ಅವರಿಗೆ ಎಚ್ಚರಿಕೆ ನೀಡುತ್ತೇವೆ. ಆದರೆ ಅದು ಅವರ ಮಿತಿಮೀರಿದ ಅಕ್ರಮವನ್ನು ಹೆಚ್ಚಿಸುತ್ತಲೇ ಹೋಗುತ್ತದೆ.

وَإِذْ قُلْنَا لَكَ إِنَّ رَبَّكَ أَحَاطَ بِالنَّاسِ ۚ وَمَا جَعَلْنَا الرُّؤْيَا الَّتِي أَرَيْنَاكَ إِلَّا فِتْنَةً لِّلنَّاسِ وَالشَّجَرَةَ الْمَلْعُونَةَ فِي الْقُرْآنِ ۚ وَنُخَوِّفُهُمْ فَمَا يَزِيدُهُمْ إِلَّا طُغْيَانًا كَبِيرًا ﴿٦١﴾

315A. ಜನರ ನಿರಾಕರಣೆ ದೃಷ್ಟಾಂತವನ್ನು ಕಳುಹಿಸುವುದಕ್ಕೆ ಅಡ್ಡಿಯಾಗುವುದಿಲ್ಲವೆಂದು ತಾತ್ಪರ್ಯ.
316. ಈ ಅಧ್ಯಾಯದ ಪ್ರಾರಂಭದಲ್ಲಿ ಉಲ್ಲೇಖಿಸಲಾದ ಇಸ್ರಾಅ್ ಎಂಬ ದಿವ್ಯದರ್ಶನವನ್ನು ಇಲ್ಲಿ ಉದ್ದೇಶಿಸಲಾಗಿದೆ.
317. ಯಹೂದಿ ಜನಾಂಗವೆಂದು ತಾತ್ಪರ್ಯ.





**62.** 'ಆದಮರ ಆಜ್ಞಾನುಸರಣೆ ಮಾಡಿರಿ'[317A] ಎಂದು ನಾವು ದೇವದೂತರೊಡನೆ ಹೇಳಿದಾಗ ಅವರು (ಎಲ್ಲರೂ) ಆಜ್ಞಾನುಸರಣೆ ಮಾಡಿದರು; ಆದರೆ ಇಬ್‌ಲೀಸ್ ವಿಧೇಯನಾಗಲಿಲ್ಲ. 'ನೀನು ಮಣ್ಣಿನಿಂದ ಸೃಷ್ಟಿಸಿದವನ ಆಜ್ಞಾನುಸರಣೆ ನಾನು ಮಾಡಬೇಕೇ?' ಎಂದು ಅವನು ಕೇಳಿದನು.

وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ قَالَ أَأَسْجُدُ لِمَنْ خَلَقْتَ طِينًا ﴿٦٢﴾

**63.** ಅವನು (ಇಬ್‌ಲೀಸ್) ಹೇಳಿದನು: 'ನೋಡು, ನೀನು ನನಗಿಂತ ಹೆಚ್ಚು ಶ್ರೇಷ್ಠತೆಯನ್ನು ನೀಡಿದ ವ್ಯಕ್ತಿ ಇವನಾಗಿದ್ದಾನೆ. ಪುನರುತ್ಥಾನ ದಿನದ ವರೆಗೆ ನೀನು ನನಗೆ ಕಾಲಾವಕಾಶ ನೀಡಿದರೆ ಇವನ ಸಂತತಿಗಳಲ್ಲಿ ಕೆಲವರನ್ನು ಬಿಟ್ಟು ಉಳಿದವರನ್ನೆಲ್ಲ ನಾನು ನನ್ನ ಸ್ವಾಧೀನಕ್ಕೊಳಪಡಿಸುವೆನು.'

قَالَ أَرَأَيْتَكَ هَٰذَا الَّذِي كَرَّمْتَ عَلَيَّ لَئِنْ أَخَّرْتَنِ إِلَىٰ يَوْمِ الْقِيَامَةِ لَأَحْتَنِكَنَّ ذُرِّيَّتَهُ إِلَّا قَلِيلًا ﴿٦٣﴾

**64.** ಅವನು (ಅಲ್ಲಾಹ್) ಹೇಳಿದನು: 'ತೊಲಗು; ಅವರ ಪೈಕಿ ಯಾರು ನಿನ್ನನ್ನು ಅನುಸರಿಸುತ್ತಾರೋ, ಖಂಡಿತವಾಗಿಯೂ ನರಕವು ನಿಮ್ಮೆಲ್ಲರ ಪ್ರತಿಫಲವಾಗಿದೆ - ಪುಷ್ಕಳ ಪ್ರತಿಫಲ.

قَالَ اذْهَبْ فَمَن تَبِعَكَ مِنْهُمْ فَإِنَّ جَهَنَّمَ جَزَاؤُكُمْ جَزَاءً مَّوْفُورًا ﴿٦٤﴾

**65.** 'ನಿನ್ನ ಶಬ್ದದಿಂದ ನಿನಗೆ ಸಾಧ್ಯವಿರುವವರನ್ನೆಲ್ಲ ನೀನು ಸೆಳೆದುಕೋ. ನಿನ್ನ ಕುದುರೆಗಳಿಂದಲೂ ಕಾಲಾಳುಗಳಿಂದಲೂ ನೀನು ಅವರ ವಿರುದ್ಧ ಆಕ್ರಮಣ ಮಾಡು. ಸಂಪತ್ತಿನಿಂದಲೂ ಸಂತಾನಗಳಿಂದಲೂ ನೀನು ಅವರೊಂದಿಗೆ ಸಹಭಾಗಿಯಾಗು. ನೀನು ಅವರಿಗೆ ವಾಗ್ದಾನಗಳನ್ನು ಮಾಡು. ಶೈತಾನನು ಅವರಿಗೆ ವಂಚನೆಯ ಹೊರತು ಬೇರೆ ವಾಗ್ದಾನ ಮಾಡುವುದಿಲ್ಲ.

وَاسْتَفْزِزْ مَنِ اسْتَطَعْتَ مِنْهُم بِصَوْتِكَ وَأَجْلِبْ عَلَيْهِم بِخَيْلِكَ وَرَجِلِكَ وَشَارِكْهُمْ فِي الْأَمْوَالِ وَالْأَوْلَادِ وَعِدْهُمْ ۚ وَمَا يَعِدُهُمُ الشَّيْطَانُ إِلَّا غُرُورًا ﴿٦٥﴾

**66.** 'ನನ್ನ ದಾಸರ ಬಗ್ಗೆ ಹೇಳುವುದಾದರೆ, ನಿನಗೆ ಎಂದಿಗೂ ಅವರ ಮೇಲೆ ಯಾವುದೇ ಅಧಿಕಾರವಿರಲಾರದು.' (ಎಲೈ ನನ್ನ ದಾಸನೇ,) ನಿನ್ನ ಪ್ರಭುವೇ ನಿನಗೆ ರಕ್ಷಕನಾಗಿ ಸಾಕು.

إِنَّ عِبَادِي لَيْسَ لَكَ عَلَيْهِمْ سُلْطَانٌ ۚ وَكَفَىٰ بِرَبِّكَ وَكِيلًا ﴿٦٦﴾

**67.** ನಿಮ್ಮ ಪ್ರಭು ನಿಮಗೋಸ್ಕರ ಸಮುದ್ರದಲ್ಲಿ

رَبُّكُمُ الَّذِي يُزْجِي لَكُمُ الْفُلْكَ فِي

317A. 2ನೇ ಅಧ್ಯಾಯ 35ನೇ ವಚನದ ಟಿಪ್ಪಣಿ ನೋಡಿರಿ.

ಹಡಗುಗಳನ್ನು ಸಂಚರಿಸುವಂತೆ ಮಾಡುವವನಾಗಿದ್ದಾನೆ - ಅವನ ಅನುಗ್ರಹವನ್ನು ನೀವು ಹುಡುಕಲಿಕ್ಕಾಗಿ. ಖಂಡಿತವಾಗಿಯೂ ಅವನು ನಿಮ್ಮ ಮೇಲೆ ಬಹಳ ಕರುಣೆಯುಳ್ಳವನಾಗಿದ್ದಾನೆ.

الْبَحْرِ لِتَبْتَغُوا مِنْ فَضْلِهِ ۚ إِنَّهُ كَانَ
بِكُمْ رَحِيمًا ﴿٦٦﴾

68. ಸಮುದ್ರದಲ್ಲಿ ನಿಮಗೆ ಆಪತ್ತು ಬಂದರೆ, ಅವನ ಹೊರತು ನೀವು ಯಾರನ್ನೆಲ್ಲ ಕರೆದು ಪ್ರಾರ್ಥಿಸುತ್ತೀರೋ ಅವರೆಲ್ಲರೂ ನಿಮ್ಮಿಂದ ಕಣ್ಮರೆಯಾಗುವರು. ಆದರೆ ನಿಮ್ಮನ್ನು ಅವನು ಸುರಕ್ಷಿತವಾಗಿ ದಡ ಸೇರಿಸಿದರೆ (ಅವನಿಂದ) ನೀವು ಪರಾಙ್ಮುಖರಾಗುವಿರಿ. ನಿಜವಾಗಿಯೂ ಮನುಷ್ಯನು ಕೃತಘ್ನನೇ ಸರಿ.

وَإِذَا مَسَّكُمُ الضُّرُّ فِي الْبَحْرِ ضَلَّ مَنْ
تَدْعُونَ إِلَّا إِيَّاهُ ۖ فَلَمَّا نَجَّاكُمْ إِلَى
الْبَرِّ أَعْرَضْتُمْ ۚ وَكَانَ الْإِنْسَانُ كَفُورًا ﴿٦٧﴾

69. ಹಾಗಾದರೆ, ಶುಷ್ಕ ತೀರದಲ್ಲಿ ಅವನು ನಿಮ್ಮನ್ನು ಹೂತುಹೋಗುವಂತೆ ಮಾಡಿ ಅಥವಾ ನಿಮ್ಮ ಮೇಲೆ ಒಂದು ಮರಳ ಬಿರುಗಾಳಿ ಬೀಸುವಂತಾಗಿ ಹಾಗೂ ಅದರಿಂದ ನಿಮ್ಮನ್ನು ರಕ್ಷಿಸಲಿಕ್ಕೆ ಯಾವನೇ ರಕ್ಷಕನನ್ನು ಪಡೆಯಲಾರಿರಿ ಎಂಬ ಬಗ್ಗೆ ನೀವು ನಿರ್ಭೀತರೇ?

أَفَأَمِنْتُمْ أَنْ يَخْسِفَ بِكُمْ جَانِبَ الْبَرِّ أَوْ
يُرْسِلَ عَلَيْكُمْ حَاصِبًا ثُمَّ لَا تَجِدُوا لَكُمْ
وَكِيلًا ﴿٦٨﴾

70. ಅಥವಾ ಅವನು ನಿಮ್ಮನ್ನು ಇನ್ನೊಮ್ಮೆ (ಸಮುದ್ರಕ್ಕೆ) ಕಳುಹಿಸಿ ನಿಮ್ಮ ಅವಿಶ್ವಾಸದ ಕಾರಣದಿಂದ ನಿಮ್ಮ ಮೇಲೆ ಒಂದು ಬಿರುಗಾಳಿ ಬೀಸುವಂತೆ ಮಾಡಿ ನಿಮ್ಮನ್ನು ಮುಳುಗಿಸುವುದರ ಕುರಿತು ನೀವು ನಿರ್ಭೀತರೇ? ಅನಂತರ ಈ ಬಗ್ಗೆ ನಮ್ಮ ವಿರುದ್ಧ ನಿಮಗೆ ನೆರವು ನೀಡುವ ಯಾರನ್ನೂ ನೀವು ಪಡೆಯಲಾರಿರಿ.

أَمْ أَمِنْتُمْ أَنْ يُعِيدَكُمْ فِيهِ تَارَةً أُخْرَىٰ
فَيُرْسِلَ عَلَيْكُمْ قَاصِفًا مِنَ الرِّيحِ
فَيُغْرِقَكُمْ بِمَا كَفَرْتُمْ ۙ ثُمَّ لَا تَجِدُوا
لَكُمْ عَلَيْنَا بِهِ تَبِيعًا ﴿٦٩﴾

71. ನಿಶ್ಚಯವಾಗಿಯೂ ಆದಂ ಸಂತತಿಗಳನ್ನು ನಾವು ಗೌರವಿಸಿದ್ದೇವೆ. ನೆಲದಲ್ಲೂ ಜಲದಲ್ಲೂ ಅವರಿಗೆ ಯಾನಗಳನ್ನು ಒದಗಿಸಿದ್ದೇವೆ. ಉತ್ತಮವಾದ ಆಹಾರವನ್ನೂ ಅವರಿಗೆ ದಯಪಾಲಿಸಿದ್ದೇವೆ. ನಾವು ಸೃಷ್ಟಿಸಿದ ಅನೇಕ ಸೃಷ್ಟಿಗಳಿಗಿಂತ ಅವರಿಗೆ ಶ್ರೇಷ್ಠತೆಯನ್ನು ನೀಡಿದ್ದೇವೆ.

وَلَقَدْ كَرَّمْنَا بَنِي آدَمَ وَحَمَلْنَاهُمْ فِي
الْبَرِّ وَالْبَحْرِ وَرَزَقْنَاهُمْ مِنَ الطَّيِّبَاتِ
وَفَضَّلْنَاهُمْ عَلَىٰ كَثِيرٍ مِمَّنْ خَلَقْنَا
تَفْضِيلًا ﴿٧٠﴾

72. ಎಲ್ಲ ಜನರನ್ನೂ ಅವರ ನಾಯಕರ ಸಹಿತ

يَوْمَ نَدْعُو كُلَّ أُنَاسٍ بِإِمَامِهِمْ ۖ





ನಾವು ಕರೆಯುವ ದಿವಸ - ಯಾರ ಕರ್ಮ ಪುಸ್ತಕ ತಮ್ಮ ಬಲಗೈಯಲ್ಲಿ ನೀಡಲ್ಪಡುವುದೋ ಅವರು ತಮ್ಮ ಕರ್ಮ ಪುಸ್ತಕವನ್ನು ಓದುವರು. ಅವರಿಗೆ ಲವಲೇಶವಾದರೂ ಅನ್ಯಾಯವಾಗದು.

فَمَنْ أُوتِيَ كِتَابَهُ بِيَمِينِهِ فَأُولَٰئِكَ
يَقْرَءُونَ كِتَابَهُمْ وَلَا يُظْلَمُونَ فَتِيلًا ﴿٧١﴾

73. ಯಾರು ಇಹಲೋಕದಲ್ಲಿ ಅಂಧನಾಗಿರುವನೋ ಅವನು ಪರಲೋಕದಲ್ಲೂ ಅಂಧನಾಗುವನು. ಅಷ್ಟೇ ಅಲ್ಲ, ಇನ್ನೂ ಹೆಚ್ಚು ದಾರಿತಪ್ಪಿದವನಾಗುತ್ತಾನೆ.

وَمَنْ كَانَ فِي هَٰذِهِ أَعْمَىٰ فَهُوَ فِي الْآخِرَةِ
أَعْمَىٰ وَأَضَلُّ سَبِيلًا ﴿٧٢﴾

74. ನಿನಗೆ ನಾವು ಅವತೀರ್ಣಗೊಳಿಸಿದ ಸಂದೇಶದ ಕಾರಣವಾಗಿ, ಅದಲ್ಲದ ಬೇರೊಂದನ್ನು ನೀನು ನಮ್ಮ ಮೇಲೆ ಸೃಷ್ಟನೆ ಮಾಡಿ ಹೇಳಲಿಕ್ಕಾಗಿ ಅವರು ನಿನ್ನನ್ನು ಕಠಿಣವಾದ ಪೀಡನೆಗೆ ಗುರಿಪಡಿಸುತ್ತಿದ್ದರು. ಹಾಗೆ ನೀನು ಮಾಡಿರುತ್ತಿದ್ದರೆ ಅವರು ನಿನ್ನನ್ನು ಖಂಡಿತವಾಗಿ ಒಬ್ಬ ವಿಶಿಷ್ಟ ಸ್ನೇಹಿತನನ್ನಾಗಿ ಮಾಡುತ್ತಿದ್ದರು.

وَإِنْ كَادُوا لَيَفْتِنُونَكَ عَنِ الَّذِي
أَوْحَيْنَا إِلَيْكَ لِتَفْتَرِيَ عَلَيْنَا غَيْرَهُ ۖ
وَإِذًا لَاتَّخَذُوكَ خَلِيلًا ﴿٧٣﴾

75. ನಾವು ನಿನ್ನನ್ನು (ಖುರ್‌ಆನ್ ಮೂಲಕ) ದೃಢವಾಗಿ ನಿಲ್ಲಿಸದಿರುತ್ತಿದ್ದರೆ ನೀನು ಅವರ ಕಡೆಗೆ ಸ್ವಲ್ಪ ವಾಲಿಬಿಡುತ್ತಿದ್ದೆ.

وَلَوْلَا أَنْ ثَبَّتْنَاكَ لَقَدْ كِدْتَ تَرْكَنُ
إِلَيْهِمْ شَيْئًا قَلِيلًا ﴿٧٤﴾

76. ಹಾಗೆ ಆಗಿರುತ್ತಿದ್ದರೆ ಜೀವಿತದ ಇಮ್ಮಡಿ ಶಿಕ್ಷೆಯನ್ನೂ ಮರಣದ ಇಮ್ಮಡಿ ಶಿಕ್ಷೆಯನ್ನೂ ನಾವು ನಿನಗೆ ಕೊಡುತ್ತಿದ್ದೆವು. ಆ ಬಳಿಕ ನಮ್ಮ ವಿರುದ್ಧ ನಿನಗೆ ಸಹಾಯಕನಾಗಿ ನೀನು ಯಾರನ್ನೂ ಕಾಣುತ್ತಿರಲಿಲ್ಲ.

إِذًا لَأَذَقْنَاكَ ضِعْفَ الْحَيَاةِ وَضِعْفَ
الْمَمَاتِ ثُمَّ لَا تَجِدُ لَكَ عَلَيْنَا نَصِيرًا ﴿٧٥﴾

77. ನಿಶ್ಚಯವಾಗಿಯೂ ಊರಿನಿಂದ ನಿನ್ನನ್ನು ಹೆದರಿಸಿ ಹೊರಕ್ಕಟ್ಟಲಿಕ್ಕಾಗಿ ಅವರು ಹಲವಿಧ ಪಿತೂರಿ ಹೂಡುತ್ತಿದ್ದರು. ಹಾಗೆ ಆಗಿರುತ್ತಿದ್ದರೆ ನಿನ್ನ ನಂತರ ಕಡಿಮೆ ಕಾಲವೇ ಅವರು ವಾಸಿಸುತ್ತಿದ್ದರು.

وَإِنْ كَادُوا لَيَسْتَفِزُّونَكَ مِنَ الْأَرْضِ
لِيُخْرِجُوكَ مِنْهَا ۖ وَإِذًا لَا يَلْبَثُونَ
خِلَافَكَ إِلَّا قَلِيلًا ﴿٧٦﴾

78. ನಿನಗಿಂತ ಮುಂಚೆ ನಾವು ನಿಯೋಜಿಸಿದ ಸಂದೇಶವಾಹಕರೊಡನೆ ನಾವು ವರ್ತಿಸಿದ ರೀತಿ ಹೀಗೆಯೇ ಆಗಿತ್ತು. ನಮ್ಮ ವರ್ತನೆಯ ರೀತಿಯಲ್ಲಿ

سُنَّةَ مَنْ قَدْ أَرْسَلْنَا قَبْلَكَ مِنْ رُسُلِنَا ۖ وَ

لَا تَجِدُ لِسُنَّتِنَا تَحْوِيلًا ﴿٧٧﴾

ನೀನು ಬದಲಾವಣೆಯನ್ನೇನೂ ಕಾಣಲಾರೆ.

أَقِمِ الصَّلٰوةَ لِدُلُوكِ الشَّمْسِ إِلٰى غَسَقِ اللَّيْلِ وَقُرْاٰنَ الْفَجْرِ ۖ إِنَّ قُرْاٰنَ الْفَجْرِ كَانَ مَشْهُودًا ﴿٧٨﴾

**79. ಸೂರ್ಯ ಇಳಿಮುಖವಾಗುವ ಸಮಯ ಮೊದಲ್ಗೊಂಡು ರಾತ್ರಿ ಕತ್ತಲೆಯಾವರಿಸುವ ವರೆಗೆ** (ನಿರ್ದಿಷ್ಟ ಸಮಯಗಳಲ್ಲಿ) **ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿರಿ. ಹಾಗೆಯೇ ಪ್ರಭಾತ ಕಾಲದ ಖುರ್‌ಆನ್ ಪಾರಾಯಣವನ್ನೂ** (ನಿಷ್ಠೆಯಿಂದ) **ಮಾಡಿರಿ.**[317B] **ಖಂಡಿತವಾಗಿಯೂ ಪ್ರಭಾತಕಾಲದ ಖುರ್‌ಆನ್ ಪಾರಾಯಣ** (ಅಲ್ಲಾಹನ ಸನ್ನಿಧಿಯಲ್ಲಿ ವಿಶೇಷವಾಗಿ) **ಸ್ವೀಕರಿಸಲ್ಪಡುತ್ತದೆ.**

وَمِنَ اللَّيْلِ فَتَهَجَّدْ بِهٖ نَافِلَةً لَّكَ ۖ عَسٰٓى أَنْ يَّبْعَثَكَ رَبُّكَ مَقَامًا مَّحْمُودًا ﴿٧٩﴾

**80. ರಾತ್ರಿಯ** ಕೊನೆಯ **ಜಾವದಲ್ಲಿ ಸಹ ನೀನು ಅದರಿಂದ** (ಖುರ್‌ಆನಿನಿಂದ ಪಾರಾಯಣ ಮಾಡಿ) **ತಹಜ್ಜುದ್** ನಮಾಝ್ **ನಿರ್ವಹಿಸು - ನಿನಗೆ ಅದೊಂದು ಐಚ್ಛಿಕ ಪುಣ್ಯ ಕರ್ಮವೆಂಬಂತೆ.** (ಆ ಮೂಲಕ) **ನಿನ್ನ ಪ್ರಭು ಪ್ರಶಂಸಾರ್ಹವಾದೊಂದು ಸ್ಥಾನಕ್ಕೆ ನಿನ್ನನ್ನು ಎತ್ತಲೂ ಬಹುದು.**

وَقُلْ رَّبِّ أَدْخِلْنِي مُدْخَلَ صِدْقٍ وَّأَخْرِجْنِي مُخْرَجَ صِدْقٍ وَّاجْعَلْ لِّي مِنْ لَّدُنْكَ سُلْطٰنًا نَّصِيرًا ﴿٨٠﴾

**81. ಹೇಳು: 'ನನ್ನ ಪ್ರಭೂ, ಬಾಹ್ಯವೂ ಆಂತರಿಕವೂ ಆದ ಉತ್ತಮ**[318] **ಪ್ರವೇಶ ಮಾರ್ಗದ ಮೂಲಕ ನೀನು ನನಗೆ ಪ್ರವೇಶಕೊಡು ಮತ್ತು ಬಾಹ್ಯವೂ ಆಂತರಿಕವೂ ಆದ ಉತ್ತಮ ಮಾರ್ಗದ ಮೂಲಕ ನೀನು ನನ್ನ ನಿರ್ಗಮನವಾಗುವಂತೆ ಮಾಡು. ಹಾಗೂ ನಿನ್ನ ಕಡೆಯಿಂದ ನನಗೆ ಸಹಾಯಕವಾದೊಂದು ಶಕ್ತಿಯನ್ನು ದಯಪಾಲಿಸು.'**

وَقُلْ جَآءَ الْحَقُّ وَزَهَقَ الْبَاطِلُ ۚ إِنَّ الْبَاطِلَ كَانَ زَهُوقًا ﴿٨١﴾

**82. ಹೇಳು: 'ಸತ್ಯ ಆಗಮಿಸಿತು, ಅಸತ್ಯ ಅಳಿದು ಹೋಯಿತು. ಖಂಡಿತವಾಗಿಯೂ ಅಸತ್ಯ ಅಳಿದೇ ಹೋಗುತ್ತದೆ.'**

317B. "ದುಲೂಕಿಶ್ಶಮ್ಸ್" ಎಂಬುದಕ್ಕೆ ಸೂರ್ಯನು ನಡು ಮಧ್ಯಾಹ್ನದಿಂದ ಇಳಿಮುಖನಾಗು; ಸೂರ್ಯತಾಪ ಕಡಿಮೆಯಾಗು; ಸೂರ್ಯಸ್ತಮಾನವಾಗು ಎಂಬ ಅರ್ಥಗಳಿವೆ. ಇದು ಝುಹರ್, ಅಸರ್ ಮತ್ತು ಮಗ್‌ರಿಬ್ ನಮಾಝ್‌ಗಳ ಸಮಯವನ್ನು ಸೂಚಿಸುತ್ತದೆ.
"ಗಸಕಿಲ್ಲೈಲ್" ಅಂದರೆ ಕತ್ತಲೆ ಆವರಿಸು. ಇದು ಇಶಾ ನಮಾಝಿನ ಸಮಯವನ್ನು ಸೂಚಿಸುತ್ತದೆ.
"ಖುರ್‌ಆನಲ್ ಫಜ್‌ರ್" - ಪ್ರಭಾತ ಕಾಲದ ಖುರ್‌ಆನ್ ಪಾರಾಯಣ. ಇದು ಸುಬ್‌ಹಿ ನಮಾಝಿನ ಸಮಯವನ್ನು ಸೂಚಿಸುತ್ತದೆ.
318. ಸಿದ್‌ಖ್ = ಸತ್ಯ (ಬಾಹ್ಯವಾಗಿಯೂ ಆಂತರಿಕವಾಗಿಯೂ ಉತ್ತಮವಾದುದು) - ಮುಫ್‌ರದಾತ್





وَنُنَزِّلُ مِنَ الْقُرْاٰنِ مَا هُوَ شِفَآءٌ وَّرَحْمَةٌ لِّلْمُؤْمِنِينَ ۙ وَلَا يَزِيدُ الظّٰلِمِينَ إِلَّا خَسَارًا ﴿٨٢﴾

**83. ಸತ್ಯ ವಿಶ್ವಾಸಿಗಳಿಗೆ ಉಪಶಮನ ಮತ್ತು ಕಾರುಣ್ಯವಾಗಿರುವ** ಅಧ್ಯಾಪನವನ್ನು **ನಾವು ಖುರ್‌ಆನಿನಿಂದ ಅವತೀರ್ಣಗೊಳಿಸುತ್ತಿದ್ದೇವೆ. ಆದರೆ ಅಧರ್ಮಿಗಳಿಗೆ ಅದು ನಷ್ಟವನ್ನೇ ಹೆಚ್ಚಿಸುತ್ತದೆ.**

وَإِذَآ أَنْعَمْنَا عَلَى الْإِنْسَانِ أَعْرَضَ وَنَاٰ بِجَانِبِهٖ ۚ وَإِذَا مَسَّهُ الشَّرُّ كَانَ يَـُٔوسًا ﴿٨٣﴾

**84. ಮನುಷ್ಯನಿಗೆ ನಾವು ಅನುಗ್ರಹ ನೀಡಿದರೆ ಅವನು** (ಕೃತಘ್ನನಾಗಿ) **ಮುಖ ತಿರುಗಿಸಿ ದೂರಹೋಗುತ್ತಾನೆ. ಅವನಿಗೇನಾದರೂ ಆಪತ್ತು ಬಂದರೆ ಅವನು ನಿರಾಶೆ ಹೊಂದುತ್ತಾನೆ.**

قُلْ كُلٌّ يَّعْمَلُ عَلٰى شَاكِلَتِهٖ ۖ فَرَبُّكُمْ أَعْلَمُ بِمَنْ هُوَ أَهْدٰى سَبِيلًا ﴿٨٤﴾

**85. ಹೇಳು: 'ಪ್ರತಿಯೊಬ್ಬನೂ ಅವನವನ ರೀತಿಯಲ್ಲಿ ವರ್ತಿಸುತ್ತಾನೆ. ಸರಿಯಾದ ಮಾರ್ಗವನ್ನು ಪಡೆದವನು ಯಾರೆಂದು ನಿನ್ನ ಪ್ರಭು ಚೆನ್ನಾಗಿ ಬಲ್ಲನು.'**

وَيَسْـَٔلُونَكَ عَنِ الرُّوحِ ۖ قُلِ الرُّوحُ مِنْ أَمْرِ رَبِّي وَمَآ أُوتِيتُمْ مِّنَ الْعِلْمِ إِلَّا قَلِيلًا ﴿٨٥﴾

**86. ಅವರು ನಿನ್ನೊಡನೆ ಆತ್ಮದ ಬಗ್ಗೆ ಕೇಳುತ್ತಾರೆ. ಹೇಳು: 'ಆತ್ಮವು ನನ್ನ ಪ್ರಭುವಿನ ಆಜ್ಞೆಗೆ ಅನುಗುಣವಾಗಿದೆ.** (ಅದಕ್ಕೆ ಸಂಬಂಧಿಸಿದ) **ಜ್ಞಾನದಿಂದ ನಿಮಗೆ ಸ್ವಲ್ಪ ಮಾತ್ರವೇ ನೀಡಲಾಗಿದೆ.'**

وَلَئِنْ شِئْنَا لَنَذْهَبَنَّ بِالَّذِيٓ أَوْحَيْنَآ إِلَيْكَ ثُمَّ لَا تَجِدُ لَكَ بِهٖ عَلَيْنَا وَكِيلًا ﴿٨٦﴾

**87. ನಾವು ಬಯಸಿದ್ದರೆ ನಿನಗೆ ಅವತೀರ್ಣಗೊಳಿಸಿದ ಸಂದೇಶವನ್ನು ನಾವು ತೆಗೆದುಬಿಡುತ್ತಿದ್ದೆವು. ಆ ಬಳಿಕ ಆ ಬಗ್ಗೆ ನಮ್ಮ ವಿರುದ್ಧ ರಕ್ಷಕನಾಗಿ ನೀನು ಯಾರನ್ನೂ ಪಡೆಯಲಾರೆ.**

إِلَّا رَحْمَةً مِّنْ رَّبِّكَ ۚ إِنَّ فَضْلَهٗ كَانَ عَلَيْكَ كَبِيرًا ﴿٨٧﴾

**88. ಆದರೆ ನಿನ್ನ ಪ್ರಭುವಿನ ಕಡೆಯಿಂದ** (ನಿನ್ನ ಮೇಲೆ) **ಕರುಣೆಯಿದೆ. ನಿಶ್ಚಯವಾಗಿಯೂ ನಿನ್ನ ಮೇಲಿರುವ ಅವನ ಅನುಗ್ರಹ ಮಹತ್ತರವಾದುದು.**

قُلْ لَّئِنِ اجْتَمَعَتِ الْإِنْسُ وَالْجِنُّ عَلٰٓى أَنْ يَّأْتُوا بِمِثْلِ هٰذَا الْقُرْاٰنِ لَا يَأْتُونَ بِمِثْلِهٖ وَلَوْ كَانَ بَعْضُهُمْ لِبَعْضٍ ظَهِيرًا ﴿٨٨﴾

**89. ಹೇಳು: 'ಈ ಖುರ್‌ಆನಿಗೆ ಸಮಾನವಾದ ಮತ್ತೊಂದನ್ನು ತರಲಿಕ್ಕಾಗಿ ಇನ್ಸ್ ಮತ್ತು ಜಿನ್ನ್ ಒಟ್ಟು ಸೇರಿ ಪ್ರಯತ್ನಿಸಿದರೂ - ಅವರು ಪರಸ್ಪರ ಸಹಾಯ ಮಾಡಿದರೂ - ಅದಕ್ಕೆ ತುಲ್ಯವಾದುದನ್ನು ತರಲಿಕ್ಕೆ ಅವರಿಂದ ಸಾಧ್ಯವಿಲ್ಲ.'**

**90.** ಮನುಷ್ಯರಿಗೋಸ್ಕರ ಈ ಖುರ್‌ಆನಿನಲ್ಲಿ ಎಲ್ಲ ಉಪಮೆಗಳನ್ನೂ ಹಲವು ವಿಧದಲ್ಲಿ ನಾವು ವಿವರಿಸಿದ್ದೇವೆ. ಆದರೆ ಮನುಷ್ಯರಲ್ಲಿ ಹೆಚ್ಚಿನವರು ಅವಿಶ್ವಾಸವನ್ನು ಹೊರತು ಬೇರೆಲ್ಲವನ್ನೂ ತಿರಸ್ಕರಿಸುತ್ತಾರೆ.

وَلَقَدْ صَرَّفْنَا لِلنَّاسِ فِي هَٰذَا الْقُرْآنِ مِن كُلِّ مَثَلٍ فَأَبَىٰ أَكْثَرُ النَّاسِ إِلَّا كُفُورًا ﴿٩٠﴾

**91.** ಅವರು ಹೇಳಿದರು: 'ನೀನು ನಮಗೋಸ್ಕರ ಭೂಮಿಯಿಂದ ಒಂದು ಚಿಲುಮೆ ಹೊರಹೊಮ್ಮುವಂತೆ ಮಾಡುವ ತನಕ ನಾವು ನಿನ್ನನ್ನು ನಂಬಲಾರೆವು.

وَقَالُوا لَن نُّؤْمِنَ لَكَ حَتَّىٰ تَفْجُرَ لَنَا مِنَ الْأَرْضِ يَنبُوعًا ﴿٩١﴾

**92.** 'ಅಥವಾ ನಿನಗೆ ಖರ್ಜೂರ ಮತ್ತು ದ್ರಾಕ್ಷೆಯ ತೋಟವಿದ್ದು ಅದರೊಳಗೆ ಕಾಲುವೆಗಳು ಹರಿಯುವಂತೆ ಮಾಡಬೇಕು.

أَوْ تَكُونَ لَكَ جَنَّةٌ مِّن نَّخِيلٍ وَعِنَبٍ فَتُفَجِّرَ الْأَنْهَارَ خِلَالَهَا تَفْجِيرًا ﴿٩٢﴾

**93.** 'ಅಥವಾ ನೀನು ಹೇಳಿದಂತೆ ಆಕಾಶವನ್ನು ಛಿನ್ನ ಭಿನ್ನವಾಗಿ ನಮ್ಮ ಮೇಲೆ ಬೀಳಿಸು ಅಥವಾ ಅಲ್ಲಾಹನನ್ನೂ ದೇವದೂತರನ್ನೂ ನಮ್ಮ ಮುಂದೆ ಕರೆದು ತಾ.

أَوْ تُسْقِطَ السَّمَاءَ كَمَا زَعَمْتَ عَلَيْنَا كِسَفًا أَوْ تَأْتِيَ بِاللَّهِ وَالْمَلَائِكَةِ قَبِيلًا ﴿٩٣﴾

**94.** 'ಅಥವಾ ನಿನಗೆ ಸ್ವರ್ಣರಚಿತವಾದೊಂದು ಮನೆ ಇರಬೇಕು. ಅಥವಾ ನೀನು ಆಕಾಶಕ್ಕೇರಿ ಹೋಗಬೇಕು. (ಹಾಗೆ ಆಕಾಶದಿಂದ) ನಾವು ಓದುವಂತಹ ಒಂದು ಗ್ರಂಥವನ್ನು ನೀನು ಇಳಿಸಿಕೊಡದಿದ್ದರೆ ನಾವು ನಿನ್ನ ಆಕಾಶಾರೋಹಣವನ್ನು ನಂಬಲಾರೆವು. ನೀನು ಹೇಳು: 'ನನ್ನ ಪ್ರಭು ಪರಿಶುದ್ಧನು. ನಾನೊಬ್ಬ ಸಂದೇಶವಾಹಕನಾದ ಮನುಷ್ಯನು ಮಾತ್ರ ಆಗಿದ್ದೇನೆ.' 318A

أَوْ يَكُونَ لَكَ بَيْتٌ مِّن زُخْرُفٍ أَوْ تَرْقَىٰ فِي السَّمَاءِ وَلَن نُّؤْمِنَ لِرُقِيِّكَ حَتَّىٰ تُنَزِّلَ عَلَيْنَا كِتَابًا نَّقْرَؤُهُ ۗ قُلْ سُبْحَانَ رَبِّي هَلْ كُنتُ إِلَّا بَشَرًا رَّسُولًا ﴿٩٤﴾

**95.** ಮನುಷ್ಯರಿಗೋಸ್ಕರ ಮಾರ್ಗದರ್ಶನ ಬಂದಾಗಲೆಲ್ಲ 'ಅಲ್ಲಾಹನು ಒಬ್ಬ ಮನುಷ್ಯನನ್ನು ಸಂದೇಶವಾಹಕನಾಗಿ ಕಳುಹಿಸಿದನೇ?' ಎಂದು ಅವರು ಪ್ರಶ್ನಿಸುವ ಮೂಲಕ ನಂಬಿಕೆಗೆ ತಡೆಯೊಡ್ಡುತ್ತಾರೆ.

وَمَا مَنَعَ النَّاسَ أَن يُؤْمِنُوا إِذْ جَاءَهُمُ الْهُدَىٰ إِلَّا أَن قَالُوا أَبَعَثَ اللَّهُ بَشَرًا رَّسُولًا ﴿٩٥﴾

318A. ವಿರೋಧಿಗಳು ಸವಾಲೊಡ್ಡಿದರೂ ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಅಲ್ಪಕಾಲಕ್ಕಾದರೂ ಆಕಾಶಕ್ಕೇರಿ ಹೋಗಿರಲಿಲ್ಲ. ಅದು ಅಲ್ಲಾಹನ ಪರಿಶುದ್ಧತೆಗೆ ವಿರುದ್ಧವಾಗಿದೆಯೆಂದು ಇಲ್ಲಿ ಹೇಳಲಾಗಿದೆ. ಇದರಿಂದ, ಹಝ್ರತ್ ಈಸಾ (ಅಲೈಹಿಸ್ಸಲಾಂ) ಶರೀರ ಸಹಿತ ಈಗಲೂ ಆಕಾಶದಲ್ಲಿ ಬದುಕಿದ್ದಾರೆಂಬ ಈ ಕಾಲದ ಬಹು ಸಂಖ್ಯಾತ ಮುಸ್ಲಿಮರ ವಿಶ್ವಾಸವು ಪವಿತ್ರ ಖುರ್‌ಆನಿನ ಅಧ್ಯಾಪನಕ್ಕೆ ವಿರುದ್ಧವಾದುದೆಂದು ಸ್ಪಷ್ಟವಾಗುತ್ತದೆ.





**96.** ಭೂಮಿಯಲ್ಲಿ ನೆಮ್ಮದಿಯಿಂದ ನಡೆದಾಡುವ ದೇವದೂತರು ನೆಲೆಸಿರುತ್ತಿದ್ದರೆ ನಾವು ಅವರಿಗೆ ಆಕಾಶದಿಂದ ಒಬ್ಬ ದೇವದೂತನನ್ನು ಸಂದೇಶವಾಹಕನಾಗಿ ಕಳುಹಿಸುತ್ತಿದ್ದೆವು ಎಂದು ಹೇಳು.

قُل لَّوْ كَانَ فِي الْأَرْضِ مَلَائِكَةٌ يَمْشُونَ مُطْمَئِنِّينَ لَنَزَّلْنَا عَلَيْهِم مِّنَ السَّمَاءِ مَلَكًا رَّسُولًا ﴿٩٦﴾

**97.** ಹೇಳು: 'ನನಗೂ ನಿಮಗೂ ಮಧ್ಯೆ ಸಾಕ್ಷಿಯಾಗಿ ಅಲ್ಲಾಹನು ಸಾಕು. ದಿಟವಾಗಿಯೂ ಅವನು ತನ್ನ ದಾಸರನ್ನು ಚೆನ್ನಾಗಿ ಬಲ್ಲವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.'

قُلْ كَفَىٰ بِاللَّهِ شَهِيدًا بَيْنِي وَبَيْنَكُمْ ۚ إِنَّهُ كَانَ بِعِبَادِهِ خَبِيرًا بَصِيرًا ﴿٩٧﴾

**98.** ಅಲ್ಲಾಹನು ಯಾರಿಗೆ ಸರಿಯಾದ ಮಾರ್ಗದರ್ಶನ ಮಾಡುತ್ತಾನೋ ಆತನೇ ಸತ್ಪಥವನ್ನು ಪಡೆದವನು. ಯಾರಾದರೂ (ಅಲ್ಲಾಹನ ದೃಷ್ಟಿಯಲ್ಲಿ) ಪಥಭ್ರಷ್ಟನಾದರೆ, ಅವನನ್ನು ಬಿಟ್ಟು ಅವರಿಗೆ ಸಹಾಯಕ ಮಿತ್ರರಾಗಿ ನೀನು ಯಾರನ್ನೂ ಕಾಣಲಾರೆ. ಪುನರುತ್ಥಾನ ದಿನದಂದು ನಾವು ಅವರನ್ನು ಅಂಧರನ್ನಾಗಿಯೂ ಮೂಕರನ್ನಾಗಿಯೂ ಕಿವುಡರನ್ನಾಗಿಯೂ ಒಂದುಗೂಡಿಸುವೆವು. ಅವರ ವಾಸಸ್ಥಳ ನರಕವಾಗಿದೆ. ಅದು (ನರಕಾಗ್ನಿ) ಮಂದವಾಗುವಾಗ ನಾವು ಅವರಿಗೆ (ಅದರ) ಜ್ವಾಲೆಯನ್ನು ಹೆಚ್ಚು ಮಾಡುವೆವು.

وَمَن يَهْدِ اللَّهُ فَهُوَ الْمُهْتَدِ ۖ وَمَن يُضْلِلْ فَلَن تَجِدَ لَهُمْ أَوْلِيَاءَ مِن دُونِهِ ۖ وَنَحْشُرُهُمْ يَوْمَ الْقِيَامَةِ عَلَىٰ وُجُوهِهِمْ عُمْيًا وَبُكْمًا وَصُمًّا ۖ مَّأْوَاهُمْ جَهَنَّمُ ۖ كُلَّمَا خَبَتْ زِدْنَاهُمْ سَعِيرًا ﴿٩٨﴾

**99.** ನಮ್ಮ ದೃಷ್ಟಾಂತಗಳನ್ನು ಅವರು ನಿರಾಕರಿಸಿ, 'ನಾವು ಅಸ್ಥಿಗಳಾಗಿಯೂ ಚೂರುಚೂರಾಗಿಯೂ ಆದ ಬಳಿಕ ಒಂದು ಹೊಸ ಸೃಷ್ಟಿಯಾಗಿ ಎಬ್ಬಿಸಲ್ಪಡುವೆವೋ?' ಎಂದು ಅವರು ಕೇಳಿದ ಕಾರಣದಿಂದ ಅದು ಅವರ ಪ್ರತಿಫಲವಾಗಿದೆ.

ذَٰلِكَ جَزَاؤُهُم بِأَنَّهُمْ كَفَرُوا بِآيَاتِنَا وَقَالُوا أَإِذَا كُنَّا عِظَامًا وَرُفَاتًا أَإِنَّا لَمَبْعُوثُونَ خَلْقًا جَدِيدًا ﴿٩٩﴾

**100.** ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದ ಅಲ್ಲಾಹನು ಖಂಡಿತವಾಗಿಯೂ ಅವರಂಥವರನ್ನು ಸೃಷ್ಟಿಸಲು ಶಕ್ತನೆಂದು ಅವರು ಗ್ರಹಿಸುವುದಿಲ್ಲವೇ? ಅವನು ಅವರಿಗೆ ಒಂದು ಕಾಲಾವಧಿಯನ್ನು ನಿಶ್ಚಯಿಸಿದ್ದಾನೆ; ಅದರಲ್ಲೇನೂ ಸಂಶಯವಿಲ್ಲ. ಆದರೆ ಈ ಅಧರ್ಮಿಗಳು ಅವಿಶ್ವಾಸವನ್ನು ಹೊರತು ಬೇರೆಲ್ಲವನ್ನೂ ತಿರಸ್ಕರಿಸುತ್ತಾರೆ.

أَوَلَمْ يَرَوْا أَنَّ اللَّهَ الَّذِي خَلَقَ السَّمَاوَاتِ وَالْأَرْضَ قَادِرٌ عَلَىٰ أَن يَخْلُقَ مِثْلَهُمْ وَجَعَلَ لَهُمْ أَجَلًا لَّا رَيْبَ فِيهِ فَأَبَى الظَّالِمُونَ إِلَّا كُفُورًا ﴿١٠٠﴾

قُلْ لَّوْ اَنْتُمْ تَمْلِكُوْنَ خَزَآئِنَ رَحْمَةِ رَبِّيْٓ اِذًا لَّاَمْسَكْتُمْ خَشْيَةَ الْاِنْفَاقِ ۭ وَكَانَ الْاِنْسَانُ قَتُوْرًا ﴿١٠١﴾ ع

**101.** ಹೇಳು: 'ನನ್ನ ಪ್ರಭುವಿನ ಕರುಣೆಯ ಭಂಡಾರದ ಒಡೆತನವನ್ನು ನೀವು ಪಡೆದಿದ್ದರೂ ಅದು ಖರ್ಚಾಗಿ ಹೋಗುವುದೆಂಬ ಭಯದಿಂದ ನೀವು ಅದನ್ನು ತಡೆ ಹಿಡಿಯುತ್ತಿದ್ದಿರಿ. ಮನುಷ್ಯನು ಬಲು ಜಿಪುಣನಾಗಿದ್ದಾನೆ.'

وَلَقَدْ اٰتَيْنَا مُوْسٰى تِسْعَ اٰيٰتٍۢ بَيِّنٰتٍ فَسْـَٔلْ بَنِيْٓ اِسْرَآءِيْلَ اِذْ جَآءَهُمْ فَقَالَ لَهٗ فِرْعَوْنُ اِنِّيْ لَاَظُنُّكَ يٰمُوْسٰى مَسْحُوْرًا ﴿١٠٢﴾

**102.** ದಿಟವಾಗಿಯೂ ಮೂಸಾರಿಗೆ ನಾವು ಸ್ಪಷ್ಟವಾದ ಒಂಭತ್ತು ದೃಷ್ಟಾಂತಗಳನ್ನು ನೀಡಿದ್ದೇವೆ. ನೀವು ಇಸ್ರಾಈಲ್ ಸಂತತಿಗಳೊಡನೆ ಕೇಳಿರಿ. ಅವರು (ಮೂಸಾ) ಅವರ ಬಳಿಗೆ ಬಂದಾಗ ಫಿರ್‌ಔನ್ ಹೇಳಿದನು: 'ಎಲೈ ಮೂಸಾ, ನೀನು ಮೋಸಕ್ಕೀಡಾಗಿರುವೆ ಎಂದು ನಾನು ಭಾವಿಸುತ್ತೇನೆ.'

قَالَ لَقَدْ عَلِمْتَ مَآ اَنْزَلَ هٰٓؤُلَآءِ اِلَّا رَبُّ السَّمٰوٰتِ وَالْاَرْضِ بَصَآئِرَ ۚ وَاِنِّيْ لَاَظُنُّكَ يٰفِرْعَوْنُ مَثْبُوْرًا ﴿١٠٣﴾

**103.** ಅವರು (ಮೂಸಾ) ಹೇಳಿದರು: 'ಇವುಗಳನ್ನು ನಿನಗೆ ಅಂತರ್ದೃಷ್ಟಿ ನೀಡಲಿಕ್ಕಾಗಿ ಆಕಾಶ ಗಳ ಮತ್ತು ಭೂಮಿಯ ಪ್ರಭುವಾದ ಅಲ್ಲಾಹನೇ ಇಳಿಸಿದ್ದಾನೆಂದು ನಿನಗೆ ಚೆನ್ನಾಗಿ ಗೊತ್ತು. ಎಲೈ ಫಿರ್‌ಔನ್, ಖಂಡಿತವಾಗಿಯೂ ನೀನು ನಾಶಕ್ಕೊಳಗಾಗಿರುವೆ ಎಂದು ನಾನು ಭಾವಿಸುತ್ತೇನೆ.'

فَاَرَادَ اَنْ يَّسْتَفِزَّهُمْ مِّنَ الْاَرْضِ فَاَغْرَقْنٰهُ وَمَنْ مَّعَهٗ جَمِيْعًا ﴿١٠٤﴾

**104.** ಆಗ ಅವರನ್ನು ಊರಿನಿಂದ ಹೊರಕ್ಕಟ್ಟಲು ಅವನು ಬಯಸಿದನು. ಆದರೆ ಅವನನ್ನೂ ಅವನ ಜೊತೆಯಲ್ಲಿ ಇದ್ದವರನ್ನೂ ನಾವು ಮುಳುಗಿಸಿಬಿಟ್ಟೆವು.

وَّقُلْنَا مِنْۢ بَعْدِهٖ لِبَنِيْٓ اِسْرَآءِيْلَ اسْكُنُوا الْاَرْضَ فَاِذَا جَآءَ وَعْدُ الْاٰخِرَةِ جِئْنَا بِكُمْ لَفِيْفًا ﴿١٠٥﴾

**105.** ಅವನ ಬಳಿಕ ಇಸ್ರಾಈಲ್ ಸಂತತಿಗಳೊಡನೆ ನಾವು ಹೇಳಿದೆವು: 'ನೀವು ಈ ರಾಜ್ಯದಲ್ಲಿ ವಾಸಿಸಿರಿ. ಆ ಮೇಲೆ ಕೊನೆಯ ವಾಗ್ದಾನ ಈಡೇರುವ ಕಾಲ ಬಂದರೆ[318C] ನಾವು ನಿಮ್ಮನ್ನು ಮತ್ತೊಮ್ಮೆ ಒಂದುಗೂಡಿಸುವೆವು.'

318C. ಇದು ವಾಗ್ದತ್ತ ಮಸೀಹರ ಆಗಮನದ ಕಾಲವನ್ನು ಸೂಚಿಸುತ್ತದೆ. (ತಫ್ಸೀರ್ ಫತ್‌ಹುಲ್ ಬಯಾನ್). ಕೊನೆಯ ಕಾಲದಲ್ಲಿ ಯಹೂದ್ಯರು ಲೋಕದ ನಾನಾಭಾಗಗಳಿಂದ ಪುನಃ ಫೆಲಸ್ತೀನಕ್ಕೆ ಬಂದು ಆಧಿಪತ್ಯ ಸ್ಥಾಪಿಸುವರೆಂದು ಇದರ ತಾತ್ಪರ್ಯ. ಈಗ ಅದು ಈಡೇರಿದೆ.





وَبِالْحَقِّ اَنْزَلْنٰهُ وَبِالْحَقِّ نَزَلَ ۭ وَمَآ اَرْسَلْنٰكَ اِلَّا مُبَشِّرًا وَّنَذِيْرًا ﴿١٠٦﴾

**106.** ಸತ್ಯದೊಂದಿಗೆ ನಾವು ಅದನ್ನು ಅವತೀರ್ಣಗೊಳಿಸಿದ್ದೇವೆ. ಸತ್ಯದೊಂದಿಗೆ ಅದು ಇಳಿದಿದೆ. ಶುಭವಾರ್ತೆಯನ್ನು ತಿಳಿಸುವವನಾಗಿ ಮತ್ತು ಮುನ್ನೆಚ್ಚರಿಕೆಯನ್ನು ನೀಡುವವನಾಗಿ ನಾವು ನಿನ್ನನ್ನು ನಿಯೋಜಿಸಿದ್ದೇವೆ.

وَقُرْاٰنًا فَرَقْنٰهُ لِتَقْرَاَهٗ عَلَى النَّاسِ عَلٰى مُكْثٍ وَّنَزَّلْنٰهُ تَنْزِيْلًا ﴿١٠٧﴾

**107.** ಖುರ್‌ಆನನ್ನು, ನೀನು ಅದನ್ನು ಜನರಿಗೆ ಸ್ವಲ್ಪ ಸ್ವಲ್ಪವಾಗಿ ಪಠಿಸಿ ಹೇಳಲಿಕ್ಕಾಗಿ ನಾವು ಹಲವು ಭಾಗಗಳಾಗಿ ವಿಂಗಡಿಸಿದ್ದೇವೆ. ಅದನ್ನು ನಾವು ಕ್ರಮ ಕ್ರಮವಾಗಿ ಅವತೀರ್ಣಗೊಳಿಸಿದ್ದೇವೆ.

قُلْ اٰمِنُوْا بِهٖٓ اَوْ لَا تُؤْمِنُوْا ۭ اِنَّ الَّذِيْنَ اُوْتُوا الْعِلْمَ مِنْ قَبْلِهٖٓ اِذَا يُتْلٰى عَلَيْهِمْ يَخِرُّوْنَ لِلْاَذْقَانِ سُجَّدًا ﴿١٠٨﴾

**108.** ಹೇಳು: "ನೀವು ಇದನ್ನು ನಂಬಿದರೂ ನಂಬದಿದ್ದರೂ ಇದಕ್ಕೆ ಮುಂಚೆ ಜ್ಞಾನ ನೀಡಲ್ಪಟ್ಟವರು, ಅವರಿಗೆ ಇದನ್ನು ಓದಿ ಹೇಳಿದರೆ, ಹಣೆಯೂರಿ ಅಡ್ಡ ಬಿದ್ದು ಪ್ರಣಾಮ ಮಾಡುತ್ತಾರೆ.

وَّيَقُوْلُوْنَ سُبْحٰنَ رَبِّنَآ اِنْ كَانَ وَعْدُ رَبِّنَا لَمَفْعُوْلًا ﴿١٠٩﴾

**109.** 'ನಮ್ಮ ಪ್ರಭು ಪರಿಶುದ್ಧನು. ನಮ್ಮ ಪ್ರಭುವಿನ ವಾಗ್ದಾನ ಖಂಡಿತವಾಗಿಯೂ ಈಡೇರಲ್ಪಡುವುದು' ಎಂದು ಅವರು ಹೇಳುತ್ತಾರೆ."

وَيَخِرُّوْنَ لِلْاَذْقَانِ يَبْكُوْنَ وَيَزِيْدُهُمْ خُشُوْعًا ﴿١١٠﴾

**110.** ಅವರು ಅಳುತ್ತಾ ಅಧೋಮುಖರಾಗಿ ಬೀಳುವರು. ಅದು ಅವರ ಭಯಭಕ್ತಿಯನ್ನು ಹೆಚ್ಚಿಸುವುದು.

قُلِ ادْعُوا اللّٰهَ اَوِ ادْعُوا الرَّحْمٰنَ ۭ اَيًّا مَّا تَدْعُوْا فَلَهُ الْاَسْمَآءُ الْحُسْنٰى ۚ وَلَا تَجْهَرْ بِصَلَاتِكَ وَلَا تُخَافِتْ بِهَا وَابْتَغِ بَيْنَ ذٰلِكَ سَبِيْلًا ﴿١١١﴾

**111.** ಹೇಳು: 'ನೀವು ಅಲ್ಲಾಹ್ ಎಂದು ಕರೆಯಿರಿ ಅಥವಾ ರಹ್ಮಾನ್ ಎಂದು ಕರೆಯಿರಿ. ನೀವು ಯಾವ ಹೆಸರಿನಿಂದ ಕರೆದರೂ ಅತ್ಯುತ್ತಮವಾದ ನಾಮಗಳು ಅವನಿಗಿವೆ.' ಹೆಚ್ಚು ಉಚ್ಚ ಸ್ವರದಲ್ಲಿ ನೀನು ನಿನ್ನ ಪ್ರಾರ್ಥನೆಯನ್ನು ಮಾಡಬೇಡ; ಹೆಚ್ಚು ಮೆಲು ಧ್ವನಿಯಲ್ಲೂ ಮಾಡಬೇಡ. ಎರಡಕ್ಕೂ ಮಧ್ಯವಿರುವ ಮಾರ್ಗವನ್ನು ಅವಲಂಬಿಸು.

وَقُلِ الْحَمْدُ لِلّٰهِ الَّذِيْ لَمْ يَتَّخِذْ
وَلَدًا وَّ لَمْ يَكُنْ لَّهٗ شَرِيْكٌ فِي الْمُلْكِ
وَلَمْ يَكُنْ لَّهٗ وَلِيٌّ مِّنَ الذُّلِّ وَكَبِّرْهُ
تَكْبِيْرًا ﴿١١٢﴾

**112.** ಹೇಳು: 'ಯಾರನ್ನೂ ತನ್ನ ಪುತ್ರನನ್ನಾಗಿ ಮಾಡಿಕೊಳ್ಳದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು. ಅವನ ಒಡೆತನದಲ್ಲಿ ಸಹಭಾಗಿಯಾಗಿ ಯಾರೂ ಇಲ್ಲ. ಬಲಹೀನತೆಯ ನಿಮಿತ್ತ ಅವನಿಗೆ ನೆರವು ನೀಡುವವನೂ ಯಾರೂ ಇಲ್ಲ.' ಅವನ ಮಹಿಮೆಯನ್ನು ನೀನು ಸರ್ವ ವಿಧದಲ್ಲೂ ಕೊಂಡಾಡು.

سُورَةُ الْكَهْفِ مَكِّيَّةٌ وَهِيَ مَعَ الْبَسْمَلَةِ مِائَةٌ وَإِحْدَى عَشْرَةَ آيَةً وَاثْنَا عَشَرَ رُكُوعًا

# 18. ಅಲ್‌ಕಹ್ಫ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 111 ಆಯತ್‌ಗಳು ಹಾಗೂ 12 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ತನ್ನ ದಾಸನಿಗೆ ಈ ಗ್ರಂಥವನ್ನು ಅವತೀರ್ಣಗೊಳಿಸಿದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು. ಅವನು ಅದರಲ್ಲೇನೂ ವಕ್ರತೆ ಇರಿಸಲಿಲ್ಲ.**

اَلْحَمْدُ لِلّٰهِ الَّذِيْٓ اَنْزَلَ عَلٰى عَبْدِهِ
الْكِتٰبَ وَلَمْ يَجْعَلْ لَّهٗ عِوَجًا ﴿٢﴾

**3. ಅದು** ಸತ್ಯಪೂರ್ಣವಾಗಿಯೂ ಋಜುವಾಗಿಯೂ **ಸುಸ್ಥಿರವಾಗಿ ನಿಲ್ಲುವಂಥದ್ದು. ಅದು ಅವನ ಕಡೆಯಿಂದಿರುವ ಕಠಿಣವಾದ ಶಿಕ್ಷೆಯ ಕುರಿತು ಮುನ್ನೆಚ್ಚರಿಕೆ ನೀಡಲಿಕ್ಕೂ ಸತ್ಕರ್ಮ ನಿರತ ಸತ್ಯವಿಶ್ವಾಸಿಗಳಿಗೆ ಉತ್ತಮ ಪ್ರತಿಫಲ** (ಸ್ವರ್ಗ) **ವಿದೆಯೆಂಬ ಶುಭವಾರ್ತೆ ತಿಳಿಸಲಿಕ್ಕೂ ಆಗಿದೆ.**

قَيِّمًا لِّيُنْذِرَ بَاْسًا شَدِيْدًا مِّنْ لَّدُنْهُ
وَيُبَشِّرَ الْمُؤْمِنِيْنَ الَّذِيْنَ يَعْمَلُوْنَ
الصّٰلِحٰتِ اَنَّ لَهُمْ اَجْرًا حَسَنًا ﴿٣﴾

**4. ಅಲ್ಲಿ ಅವರು ಶಾಶ್ವತವಾಗಿ ವಾಸಿಸುವರು.**

مّٰكِثِيْنَ فِيْهِ اَبَدًا ﴿٤﴾

**5. ಅಲ್ಲಾಹನು ತನಗೋಸ್ಕರ ಒಬ್ಬ ಪುತ್ರನನ್ನು ಮಾಡಿಕೊಂಡಿದ್ದಾನೆ ಎಂದು ಹೇಳುವವರಿಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿಯೂ** (ಈ ಗ್ರಂಥ ಅವತೀರ್ಣವಾಗಿದೆ).

وَّيُنْذِرَ الَّذِيْنَ قَالُوا اتَّخَذَ اللّٰهُ وَلَدًا ﴿٥﴾

**6. ಅವರಿಗಾಗಲಿ ಅವರ ತಂದೆತಾತಂದಿರಿಗಾಗಲಿ ಆ ಬಗ್ಗೆ ಏನೂ ತಿಳುವಳಿಕೆ ಇಲ್ಲ. ಅವರ ಬಾಯಿಯಿಂದ ಹೊರಡುವ ಮಾತುಗಳು ಅತಿ ಕಠೋರವಾಗಿವೆ. ಸುಳ್ಳು ಹೊರತು ಅವರು ಹೇಳುವುದಿಲ್ಲ.**

مَا لَهُمْ بِهٖ مِنْ عِلْمٍ وَّلَا لِاٰبَآئِهِمْ ؕ
كَبُرَتْ كَلِمَةً تَخْرُجُ مِنْ اَفْوَاهِهِمْ ؕ
اِنْ يَّقُوْلُوْنَ اِلَّا كَذِبًا ﴿٦﴾

**7. ಅವರು ಈ ಮಾತಿನಲ್ಲಿ ನಂಬಿಕೆಯಿಡದಿದ್ದರೆ ಅವರ ಬಗ್ಗೆ ನೀನು ವ್ಯಾಕುಲಪಡುತ್ತಾ ನಿನ್ನ ಜೀವಕ್ಕೆ ಹಾನಿಯನ್ನು ಮಾಡುವಿಯಾ?**

فَلَعَلَّكَ بَاخِعٌ نَّفْسَكَ عَلٰٓى اٰثَارِهِمْ اِنْ
لَّمْ يُؤْمِنُوْا بِهٰذَا الْحَدِيْثِ اَسَفًا ﴿٧﴾





**8. ನಿಶ್ಚಯವಾಗಿಯೂ ಭೂಮಿಯ ಮೇಲಿರುವ ಎಲ್ಲವನ್ನೂ ನಾವು ಅದಕ್ಕೆ ಅಲಂಕಾರವಾಗಿರಿಸಿರುತ್ತೇವೆ- ಉತ್ತಮವಾಗಿ ವರ್ತಿಸುವವರು ಯಾರೆಂದು ಅವರನ್ನು ಪರೀಕ್ಷಿಸಲಿಕ್ಕೋಸ್ಕರ.**

اِنَّا جَعَلْنَا مَا عَلَى الْاَرْضِ زِيْنَةً لَّهَا
لِنَبْلُوَهُمْ اَيُّهُمْ اَحْسَنُ عَمَلًا ﴿٨﴾

**9.** (ಮುಂದೊಂದು ದಿನ) **ಅದರ ಮೇಲಿರುವುದನ್ನೆಲ್ಲ ನಾವು ಬರಡು ನೆಲವನ್ನಾಗಿ ಮಾಡುವೆವು.**

وَاِنَّا لَجٰعِلُوْنَ مَا عَلَيْهَا صَعِيْدًا
جُرُزًا ﴿٩﴾

**10. ಗುಹಾನಿವಾಸಿಗಳು ಮತ್ತು ಶಿಲಾ ಲೇಖನಗಳ ಜನರು ನಮ್ಮ ದೃಷ್ಟಾಂತಗಳಲ್ಲಿ ಒಂದು ಅದ್ಭುತವೆಂದು ನೀನು ಭಾವಿಸುತ್ತೀಯೋ?**[319]

اَمْ حَسِبْتَ اَنَّ اَصْحٰبَ الْكَهْفِ وَ
الرَّقِيْمِ ۙ كَانُوْا مِنْ اٰيٰتِنَا عَجَبًا ﴿١٠﴾

**11. ಆ ಯುವಕರು ಗುಹೆಯಲ್ಲಿ ಆಶ್ರಯ ಪಡೆದಾಗ ಹೇಳಿದರು: 'ನಮ್ಮ ಪ್ರಭೂ, ನೀನು ನಮ್ಮ ಮೇಲೆ ನಿನ್ನ ಕರುಣೆಯನ್ನು ತೋರಿಸು. ನಮ್ಮ ವಿಚಾರದಲ್ಲಿ ನೀನು ನಮಗೆ ಮಾರ್ಗದರ್ಶನ ಮಾಡು.'**

اِذْ اَوَى الْفِتْيَةُ اِلَى الْكَهْفِ فَقَالُوْا
رَبَّنَآ اٰتِنَا مِنْ لَّدُنْكَ رَحْمَةً وَّهَيِّئْ
لَنَا مِنْ اَمْرِنَا رَشَدًا ﴿١١﴾

**12. ಹಾಗೆ ಆ ಗುಹೆಯಲ್ಲಿ ಕೆಲವು ವರ್ಷಗಳ ಕಾಲ ಅವರು** ಹೊರ ಪ್ರಪಂಚದ **ವಾರ್ತೆಗಳನ್ನು ಆಲಿಸದಂತೆ ನಾವು ಮಾಡಿದೆವು.**

فَضَرَبْنَا عَلٰٓى اٰذَانِهِمْ فِي الْكَهْفِ
سِنِيْنَ عَدَدًا ﴿١٢﴾

**13. ಅನಂತರ, ಎರಡು ಪಕ್ಷಗಳಲ್ಲಿ ಯಾವುದು ತನ್ನ** (ಗುಹಾ) **ವಾಸಕಾಲವನ್ನು ಅತ್ಯುತ್ತಮವಾಗಿ ಗಣಿಸುತ್ತದೆಂದು ನಾವು ತಿಳಿಯಲಿಕ್ಕಾಗಿ ಅವರನ್ನು ಎಬ್ಬಿಸಿದೆವು.**

ثُمَّ بَعَثْنٰهُمْ لِنَعْلَمَ اَيُّ الْحِزْبَيْنِ
اَحْصٰى لِمَا لَبِثُوْٓا اَمَدًا ﴿١٣﴾

319. ಅಸ್ಹಾಬುಲ್ ಕಹ್ಫ್ = ಗುಹೆಯ ಜನರು. ದೀರ್ಘ ಕಾಲದ ವರೆಗೆ ಗುಹೆಯಲ್ಲಿ ಆಶ್ರಯ ಪಡೆಯಬೇಕಾಗಿ ಬಂದ ಕಾರಣದಿಂದ "ಗುಹಾ ನಿವಾಸಿಗಳು" ಎಂದು ಕರೆಯಲ್ಪಟ್ಟ ಜನರು. ಆ ಗುಹೆಗಳು ಕ್ಯಾಟಕೋಮ್ಸ್ (Catacombs) ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಅವರು ಏಕದೇವ ತತ್ವದಲ್ಲಿ ವಿಶ್ವಾಸವಿರಿಸಿದ್ದ ಪ್ರವಾದಿ ಈಸಾ (ಅಲೈಹಿಸ್ಸಲಾಂ)ರ ಅನುಯಾಯಿಗಳಾದ ಆದಿಕಾಲದ ಕ್ರೈಸ್ತರಲ್ಲಿ ಸೇರಿದವರಾಗಿದ್ದರು. ಈ ಸ್ಥಳವು ರೋಮ್‌ಗೆ ಸಮೀಪದಲ್ಲಿತ್ತು. ಬಹುದೇವಾರಾಧಕರಾದ ಆಡಳಿತಾಧಿಕಾರಿಗಳೂ ಜನನಾಯಕರೂ ಅವರನ್ನು ಹಿಂಸಿಸಿ ತಮ್ಮ ವಿಶ್ವಾಸವನ್ನು ತ್ಯಜಿಸಲಿಕ್ಕೆ ಅವರ ಮೇಲೆ ಒತ್ತಡ ಹೇರುತ್ತಿದ್ದರು. ಆ ಕಾರಣದಿಂದ ರೋಮ್‌ನ ಸಮೀಪದ ಪರ್ವತ ಪ್ರದೇಶದಲ್ಲಿ ಆಶ್ರಯ ಪಡೆಯಲು ಅವರು ನಿರ್ಬಂಧಿತರಾದರು. ದೌರ್ಜನ್ಯ ಅತಿ ಹೆಚ್ಚಾದಾಗ ಅವರು ಗುಹೆಗಳಲ್ಲಿ ಅವಿತು ಕೊಳ್ಳುವುದು ರೂಢಿಯಾಗಿತ್ತು. ಹೀಗೆ ಗುಹೆಯಲ್ಲಿ ಆಶ್ರಯ ಹೊಂದುತ್ತಲೂ ಅದರಿಂದ ಹೊರಗೆ ಬರುತ್ತಲೂ ಮುನ್ನೂರು ವರ್ಷಗಳ ಕಾಲ ಆ ತಲೆಮಾರು ಗುಹಾನಿವಾಸಿಗಳಾಗಿ ಕಾಲ ಕಳೆಯಿತು. ಅನಂತರ ಕೋನ್‌ಸ್ಟೈಂಟೈನ್ ಚಕ್ರವರ್ತಿ ಕ್ರೈಸ್ತ ಧರ್ಮ ಸ್ವೀಕರಿಸಿದ ಕಾರಣದಿಂದ ಈ ಸ್ಥಿತಿ ಬದಲಾಯಿತು. [ಹೆಚ್ಚಿನ ವಿವರಗಳನ್ನು ಅಹ್ಮದಿಯಾ ಜಮಾಅತಿನ ದ್ವಿತೀಯ ಖಲೀಫ ಹಝ್ರತ್ ಮಿರ್ಝಾ ಬಶೀರುದ್ದೀನ್ ಮಹ್‌ಮೂದ್ ಅಹ್ಮದ್ (ರಝಿಯಲ್ಲಾಹು ಅನ್‌ಹು) ರಚಿಸಿದ "ತಫ್‌ಸೀರ್ ಕಬೀರ್" ಎಂಬ ಪವಿತ್ರ ಖುರ್‌ಆನಿನ ಬೃಹತ್ ವ್ಯಾಖ್ಯಾನ ಗ್ರಂಥದಿಂದ ತಿಳಿದುಕೊಳ್ಳಬಹುದು.]

**14.** ನಾವು ಅವರ ನಿಜವಾದ ವೃತ್ತಾಂತವನ್ನು ನಿನಗೆ ತಿಳಿಸಿಕೊಡುತ್ತೇವೆ. ದಿಟವಾಗಿಯೂ ಅವರು ತಮ್ಮ ಪ್ರಭುವನ್ನು ನಂಬಿದ ತರುಣರಾಗಿದ್ದರು. ಸನ್ಮಾರ್ಗ ದರ್ಶನವನ್ನು ನಾವು ಅವರಿಗೆ ವೃದ್ಧಿಗೊಳಿಸಿದೆವು.

نَحْنُ نَقُصُّ عَلَيْكَ نَبَاَهُمْ بِالْحَقِّ ؕ
اِنَّهُمْ فِتْيَةٌ اٰمَنُوْا بِرَبِّهِمْ وَزِدْنٰهُمْ
هُدًى ﴿١٤﴾

**15.** ಅವರು (ತಮ್ಮ ಊರನ್ನು ಬಿಟ್ಟು ಹೋಗಲು) ಎದ್ದು ನಿಂತ ಸಂದರ್ಭದಲ್ಲಿ ನಾವು ಅವರ ಹೃದಯಗಳನ್ನು ಬಲಪಡಿಸಿದೆವು. ಅವರು (ಪರಸ್ಪರ) ಹೇಳಿದರು: 'ನಮ್ಮ ಪ್ರಭು ಆಕಾಶಗಳ ಮತ್ತು ಭೂಮಿಯ ಒಡೆಯನಾಗಿದ್ದಾನೆ. ನಾವು ಅವನನ್ನು ಬಿಟ್ಟು ಬೇರೊಬ್ಬ ದೇವನನ್ನು ಎಂದಿಗೂ ಕರೆದು ಪ್ರಾರ್ಥಿಸಲಾರೆವು. ಹಾಗೆ ನಾವು ಮಾಡಿದರೆ ನಾವು ಹದ್ದು ಮೀರಿದ ಮಾತನ್ನಾಡುವವರಾಗುವೆವು.

وَّرَبَطْنَا عَلٰى قُلُوْبِهِمْ اِذْ قَامُوْا
فَقَالُوْا رَبُّنَا رَبُّ السَّمٰوٰتِ وَالْاَرْضِ
لَنْ نَّدْعُوَا۠ مِنْ دُوْنِهٖۤ اِلٰهًا لَّقَدْ
قُلْنَاۤ اِذًا شَطَطًا ﴿١٥﴾

**16.** 'ನಮ್ಮ ಜನರಾದ ಇವರು ಅಲ್ಲಾಹನನ್ನು ಬಿಟ್ಟು ಬೇರೆ ಆರಾಧ್ಯರನ್ನು ಮಾಡಿಕೊಂಡಿದ್ದಾರೆ. ಅವರಿಗೋಸ್ಕರ ಏಕೆ ಅವರು ಸ್ಪಷ್ಟವಾದ ಸಾಕ್ಷ್ಯಾಧಾರಗಳನ್ನು ತರುವುದಿಲ್ಲ? ಅಲ್ಲಾಹನ ಮೇಲೆ ಸುಳ್ಳು ಸೃಷ್ಟನೆ ಮಾಡುವವನಿಗಿಂತ ದುಷ್ಟನು ಬೇರೆ ಯಾರು?

هٰۤؤُلَآءِ قَوْمُنَا اتَّخَذُوْا مِنْ دُوْنِهٖۤ
اٰلِهَةً ؕ لَوْلَا يَاْتُوْنَ عَلَيْهِمْ بِسُلْطٰنٍۢ
بَيِّنٍ ؕ فَمَنْ اَظْلَمُ مِمَّنِ افْتَرٰى عَلَى
اللّٰهِ كَذِبًا ؕ﴿١٦﴾

**17.** ' ಅವರನ್ನೂ ಅಲ್ಲಾಹನನ್ನು ಹೊರತು ಅವರು ಆರಾಧಿಸುವ ವಸ್ತುಗಳನ್ನೂ ನೀವು ತೊರೆದಿರುವುದರಿಂದ ನೀವು ಗುಹೆಯಲ್ಲಿ ಆಶ್ರಯವನ್ನು ಪಡೆಯಿರಿ. ನಿಮ್ಮ ಪ್ರಭು ನಿಮಗೆ ಅವನ ಕೃಪೆಯನ್ನು ತೆರೆದು ಕೊಡುವನು. ನಿಮ್ಮ (ಈ) ಕಾರ್ಯದಲ್ಲಿ ನಿಮಗೆ ಅವನು ಸೌಕರ್ಯಗಳನ್ನು ಒದಗಿಸಿಕೊಡುವನು.'

وَاِذِ اعْتَزَلْتُمُوْهُمْ وَمَا يَعْبُدُوْنَ اِلَّا
اللّٰهَ فَاْوٗۤا اِلَى الْكَهْفِ يَنْشُرْ لَكُمْ رَبُّكُمْ
مِّنْ رَّحْمَتِهٖ وَيُهَيِّئْ لَكُمْ مِّنْ اَمْرِكُمْ
مِّرْفَقًا ﴿١٧﴾

**18.** ಅವರು (ಗುಹೆಯ) ವಿಶಾಲವಾದ ಒಳಭಾಗದಲ್ಲಿದ್ದು ಸೂರ್ಯ ಉದಿಸುವಾಗ ಅದು ಗುಹೆಯ ಬಲಭಾಗದೆಡೆಗೆ ಸರಿದು ಹೋಗುತ್ತಿದ್ದಂತೆಯೂ ಅದು ಅಸ್ತಮಿಸುವಾಗ ಎಡಭಾಗದೆಡೆಗೆ ಸರಿದು ಹೋಗುವಂತೆಯೂ ನೀನು ಕಾಣುವೆ. ಅದು ಅಲ್ಲಾಹನ ದೃಷ್ಟಾಂತವಾಗಿದೆ. ಅಲ್ಲಾಹನು ಯಾರನ್ನು ಸತ್ಪಥದಲ್ಲಿ ನಡೆಸುತ್ತಾ

وَتَرَى الشَّمْسَ اِذَا طَلَعَتْ تَّزٰوَرُ عَنْ
كَهْفِهِمْ ذَاتَ الْيَمِيْنِ وَاِذَا غَرَبَتْ
تَّقْرِضُهُمْ ذَاتَ الشِّمَالِ وَهُمْ فِيْ
فَجْوَةٍ مِّنْهُ ؕ ذٰلِكَ مِنْ اٰيٰتِ اللّٰهِ ؕ مَنْ





ನೋ ಅವನು ಸತ್ಪಥವನ್ನು ಪಡೆಯುತ್ತಾನೆ. ಆದರೆ ಅವನು ಯಾರನ್ನಾದರೂ ದಾರಿತಪ್ಪಲು ಬಿಟ್ಟರೆ ಅವನಿಗೆ ಮಾರ್ಗದರ್ಶಕನಾಗಿ ಯಾರಾದರೂ ನೆರವಾಗುವುದನ್ನು ನೀನು ಕಾಣಲಾರೆ.

يَّهْدِ اللّٰهُ فَهُوَ الْمُهْتَدِ ۚ وَمَنْ يُّضْلِلْ فَلَنْ
تَجِدَ لَهٗ وَلِيًّا مُّرْشِدًا ﴿١٨﴾

**19.** ಅವರು ಎಚ್ಚರವಿದ್ದಾರೆಂದು ನೀನು ಭಾವಿಸಬಹುದು. ಆದರೆ ಅವರು ನಿದ್ರೆಯಲ್ಲಿದ್ದಾರೆ. ಅವರು ಬಲಮಗ್ಗುಲಿಗೂ ಎಡಮಗ್ಗುಲಿಗೂ ತಿರುಗುವಂತೆ ನಾವು ಮಾಡುವೆವು. ಅವರ ನಾಯಿ ಹೊಸ್ತಿಲಲ್ಲಿ ಮುಂಗಾಲುಗಳನ್ನು ಚಾಚಿಕೊಂಡಿರುತ್ತದೆ. ನೀನು ಅವರನ್ನು ಕಂಡಿದ್ದರೆ ಅವರ ಬಳಿಯಿಂದ ನೀನು ಹಿಂತಿರುಗಿ ಓಡಿ ಹೋಗುತ್ತಿದ್ದೆ ಹಾಗೂ ಅವರ ಬಗ್ಗೆ ನೀನು ಭಯವಿಹ್ವಲನಾಗುತ್ತಿದ್ದೆ.

وَتَحْسَبُهُمْ اَيْقَاظًا وَّهُمْ رُقُوْدٌ ۖ وَّ
نُقَلِّبُهُمْ ذَاتَ الْيَمِيْنِ وَذَاتَ
الشِّمَالِ ۖ وَكَلْبُهُمْ بَاسِطٌ ذِرَاعَيْهِ
بِالْوَصِيْدِ ؕ لَوِ اطَّلَعْتَ عَلَيْهِمْ لَوَلَّيْتَ
مِنْهُمْ فِرَارًا وَّلَمُلِئْتَ مِنْهُمْ رُعْبًا ﴿١٩﴾

**20.** ಅದೇ ರೀತಿ ನಾವು ಅವರನ್ನು (ಅವರ ನಿಸ್ಸಹಾಯಕ ಸ್ಥಿತಿಯಿಂದ) ಎಬ್ಬಿಸಿದೆವು. ಆಗ ಅವರು ಪರಸ್ಪರ ಪ್ರಶ್ನಿಸಲಾರಂಭಿಸಿದರು: 'ನೀವು ಎಷ್ಟು ಕಾಲ ಇಲ್ಲಿ ವಾಸಿಸಿದಿರಿ?' ಎಂದು ಅವರಲ್ಲೊಬ್ಬ ಕೇಳಿದನು. ಅವರು ಹೇಳಿದರು: 'ನಾವು ಒಂದು ದಿನ ಅಥವಾ ದಿನದ ಒಂದಂಶದಷ್ಟು ಕಾಲ ವಾಸಿಸಿದೆವು.' ಬೇರೆ ಕೆಲವರು ಹೇಳಿದರು: 'ನೀವು ಎಷ್ಟು ಕಾಲ ವಾಸಿಸಿದ್ದಿರೆಂದು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು. ಈಗ ಈ ಬೆಳ್ಳಿಯ ನಾಣ್ಯವನ್ನು ಕೊಟ್ಟು ನಿಮ್ಮಲ್ಲಿ ಒಬ್ಬನನ್ನು ಪಟ್ಟಣಕ್ಕೆ ಕಳುಹಿಸಿರಿ. ಅಲ್ಲಿರುವ ಅತಿ ಶುದ್ಧವಾದ ಆಹಾರವೇನೆಂದು ನೋಡಿ ಅದರಿಂದ ನಮಗೆ ಭಕ್ಷ್ಯ ವಸ್ತುಗಳನ್ನು ಅವನು ತರಲಿ. ಅವನು ಸಭ್ಯತೆಯಿಂದ (ಹಾಗೂ ಜಾಗ್ರತೆಯಿಂದ) ವರ್ತಿಸಲಿ. ನಿಮ್ಮ ಬಗ್ಗೆ ಅವನು ಯಾರೊಡನೆಯೂ ಏನನ್ನೂ ಹೇಳದಿರಲಿ.

وَكَذٰلِكَ بَعَثْنٰهُمْ لِيَتَسَآءَلُوْا بَيْنَهُمْ ؕ
قَالَ قَآئِلٌ مِّنْهُمْ كَمْ لَبِثْتُمْ ؕ قَالُوْا
لَبِثْنَا يَوْمًا اَوْ بَعْضَ يَوْمٍ ؕ قَالُوْا
رَبُّكُمْ اَعْلَمُ بِمَا لَبِثْتُمْ ؕ فَابْعَثُوْۤا
اَحَدَكُمْ بِوَرِقِكُمْ هٰذِهٖۤ اِلَى الْمَدِيْنَةِ
فَلْيَنْظُرْ اَيُّهَاۤ اَزْكٰى طَعَامًا فَلْيَاْتِكُمْ
بِرِزْقٍ مِّنْهُ وَلْيَتَلَطَّفْ وَلَا يُشْعِرَنَّ
بِكُمْ اَحَدًا ﴿٢٠﴾

**21.** 'ಏಕೆಂದರೆ, ಅವರು ನಿಮ್ಮನ್ನು ಕಂಡರೆ ನಿಮ್ಮನ್ನು ಕಲ್ಲೆಸೆದು ಕೊಲ್ಲುವರು; ಅಥವಾ ನಿಮ್ಮನ್ನು ಅವರ ಮತಕ್ಕೆ ಮರಳಿಸುವರು. ಹಾಗೆ ಆದರೆ ನೀವೆಂದೂ ಜಯಗಳಿಸಲಾರಿರಿ.'

اِنَّهُمْ اِنْ يَّظْهَرُوْا عَلَيْكُمْ يَرْجُمُوْكُمْ
اَوْ يُعِيْدُوْكُمْ فِيْ مِلَّتِهِمْ وَلَنْ تُفْلِحُوْۤا
اِذًا اَبَدًا ﴿٢١﴾

**22. ಅಲ್ಲಾಹನ ವಾಗ್ದಾನ ಸತ್ಯವಾದುದೆಂದೂ ಆ ನಿಶ್ಚಿತ ಸಮಯದ ಬಗ್ಗೆ ಸಂಶಯವೇನೂ ಇಲ್ಲವೆಂದೂ ಜನರು ಮನಗಾಣಲಿಕ್ಕಾಗಿ ಹೀಗೆ ನಾವು ಅವರ ಬಗ್ಗೆ** (ಜನರಿಗೆ) **ಬಹಿರಂಗಪಡಿಸಿದೆವು. ಅವರ ಕುರಿತು ಜನರು 'ಪರಸ್ಪರ ಚರ್ಚೆಮಾಡುತ್ತಿದ್ದರು. 'ನೀವು ಅವರ ಮೇಲೆ**[319A] **ಒಂದು ಕಟ್ಟಡ ನಿರ್ಮಿಸಿರಿ. ಅವರ ಬಗ್ಗೆ ಅವರ ಪ್ರಭು ಚೆನ್ನಾಗಿ ಬಲ್ಲನು' ಎಂದು ಅವರು ಹೇಳಿದರು. ತಮ್ಮ ವಾದದಲ್ಲಿ ವಿಜಯ ಸಾಧಿಸಿದವರು ಹೇಳಿದರು: 'ನಾವು ಅವರ ಮೇಲೆ ಒಂದು ಆರಾಧನಾಲಯವನ್ನು ನಿರ್ಮಿಸುವೆವು.'**

وَكَذٰلِكَ اَعْثَرْنَا عَلَيْهِمْ لِيَعْلَمُوْٓا اَنَّ
وَعْدَ اللّٰهِ حَقٌّ وَّاَنَّ السَّاعَةَ لَا رَيْبَ
فِيْهَا ۚ اِذْ يَتَنَازَعُوْنَ بَيْنَهُمْ اَمْرَهُمْ
فَقَالُوا ابْنُوْا عَلَيْهِمْ بُنْيَانًا ۗ رَبُّهُمْ
اَعْلَمُ بِهِمْ ۗ قَالَ الَّذِيْنَ غَلَبُوْا عَلٰٓى
اَمْرِهِمْ لَنَتَّخِذَنَّ عَلَيْهِمْ مَّسْجِدًا ﴿٢١﴾

**23. ಅವರಲ್ಲಿ ಕೆಲವರು ಹೇಳುತ್ತಾರೆ: 'ಅವರು ಮೂವರಿದ್ದರು; ನಾಲ್ಕನೆಯದು ಅವರ ನಾಯಿ ಆಗಿತ್ತು.' ಬೇರೆ ಕೆಲವರು ಅದೃಶ್ಯವಾದುದನ್ನು ಊಹಿಸಿಕೊಂಡು, 'ಅವರು ಐವರಿದ್ದರು; ಆರನೆಯದು ಅವರ ನಾಯಿ ಆಗಿತ್ತು' ಎಂದೂ ಹೇಳುತ್ತಾರೆ. ಬೇರೆ ಕೆಲವರು: 'ಅವರು ಏಳು ಮಂದಿ ಇದ್ದರು; ಎಂಟನೆಯದು ಅವರ ನಾಯಿಯಾಗಿತ್ತು' ಎಂದು ಸಹ ಹೇಳುತ್ತಾರೆ. ನೀನು ಹೇಳು: 'ಅವರ ಸರಿಯಾದ ಸಂಖ್ಯೆಯನ್ನು ನನ್ನ ಪ್ರಭು ಚೆನ್ನಾಗಿ ಬಲ್ಲನು ಹೊರತು ಬೇರೆ ಯಾರಿಗೂ ಅವರ ಬಗ್ಗೆ ತಿಳಿಯದು.' ಆದ್ದರಿಂದ ಮುಖ್ಯ ವಿಷಯವನ್ನು ಬಿಟ್ಟು ನೀನು ಅವರ** (ಸಂಖ್ಯೆಯ) **ಬಗ್ಗೆ ವಾದಿಸಬೇಡ ಹಾಗೂ ಅವರ ಬಗ್ಗೆ ನೀನು ಯಾರೊಡನೆಯಾಗಲಿ ವಿಚಾರಿಸುವುದೂ ಬೇಡ.**

سَيَقُوْلُوْنَ ثَلٰثَةٌ رَّابِعُهُمْ كَلْبُهُمْ ۚ
وَيَقُوْلُوْنَ خَمْسَةٌ سَادِسُهُمْ كَلْبُهُمْ
رَجْمًا بِالْغَيْبِ ۚ وَيَقُوْلُوْنَ سَبْعَةٌ
وَّثَامِنُهُمْ كَلْبُهُمْ ۗ قُلْ رَّبِّيْٓ اَعْلَمُ
بِعِدَّتِهِمْ مَّا يَعْلَمُهُمْ اِلَّا قَلِيْلٌ ۗ فَلَا
تُمَارِ فِيْهِمْ اِلَّا مِرَآءً ظَاهِرًا ۖ وَّلَا
تَسْتَفْتِ فِيْهِمْ مِّنْهُمْ اَحَدًا ﴿٢٢﴾

**24. 'ಖಂಡಿತವಾಗಿಯೂ ನಾನು ನಾಳೆ ಅದನ್ನು ಮಾಡುವೆನು ಎಂದು ನೀನು ಯಾವ ಕಾರ್ಯದ ಬಗ್ಗೆಯೂ ಹೇಳಬೇಡ -**

وَلَا تَقُوْلَنَّ لِشَايْءٍ اِنِّيْ فَاعِلٌ ذٰلِكَ
غَدًا ﴿٢٣﴾

**25. 'ಅಲ್ಲಾಹನು ಇಚ್ಛಿಸಿದರೆ'** (ಎಂದು ಸೇರಿಸಿ ಹೇಳುವುದರ) **ಹೊರತು. ನೀನು** (ಯಾವಾಗಲಾದರೂ) **ಮರೆತು ಹೋದ ಪಕ್ಷದಲ್ಲಿ** (ನೆನಪಾದಾಗ) **ನಿನ್ನ ಪ್ರಭುವನ್ನು** (ಪ್ರಭುವಿನ ವಾಗ್ದಾನವನ್ನು) **ಜ್ಞಾಪಿಸು. 'ಸನ್ಮಾರ್ಗಕ್ಕೆ ಇದಕ್ಕಿಂತ ಸಮೀಪದ ದಾರಿಯನ್ನು ನನ್ನ ಪ್ರಭು ನನಗೆ ತೋರಿಸಿಕೊಡುವನು' ಎಂದು ಸಹ ಹೇಳು.**

اِلَّآ اَنْ يَّشَآءَ اللّٰهُ ۫ وَاذْكُرْ رَّبَّكَ اِذَا
نَسِيْتَ وَقُلْ عَسٰٓى اَنْ يَّهْدِيَنِ رَبِّيْ
لِاَقْرَبَ مِنْ هٰذَا رَشَدًا ﴿٢٤﴾

---

319A. ಅವರ ಸ್ಮರಣೆಗಾಗಿ.





**26.** (ಕೆಲವರ ಅಭಿಪ್ರಾಯದಲ್ಲಿ) **ಅವರು ತಮ್ಮ ಗುಹೆಯಲ್ಲಿ ಮುನ್ನೂರು ವರ್ಷಕಾಲ ವಾಸಿಸಿದರು.** (ಕೆಲವರು) **ಒಂಭತ್ತು ವರ್ಷಗಳನ್ನು ಸೇರಿಸಿದರು.**

وَلَبِثُوْا فِيْ كَهْفِهِمْ ثَلٰثَ مِائَةٍ سِنِيْنَ
وَازْدَادُوْا تِسْعًا ﴿٢٥﴾

**27. ಹೇಳು: 'ಅವರು ಅಲ್ಲಿ ಎಷ್ಟು ಕಾಲ ವಾಸಿಸಿದ್ದರೆಂದು ಅಲ್ಲಾಹನೇ ಬಲ್ಲನು.' ಆಕಾಶಗಳ ಮತ್ತು ಭೂಮಿಯ ಗೋಪ್ಯ ವಿಚಾರವೆಲ್ಲ ಅವನಿಗೆ ಸೇರುತ್ತವೆ. ಅವನು ಎಷ್ಟು ಚೆನ್ನಾಗಿ ವೀಕ್ಷಿಸುತ್ತಾನೆ ಮತ್ತು ಆಲಿಸುತ್ತಾನೆ! ಅವನ ಹೊರತು ಅವರಿಗೆ ಬೇರೆ ಮಿತ್ರನಿಲ್ಲ. ಅವನ ಆಧಿಪತ್ಯದಲ್ಲಿ ಅವನು ಯಾರನ್ನೂ ಸಹಭಾಗಿ ಮಾಡುವುದಿಲ್ಲ.**

قُلِ اللّٰهُ اَعْلَمُ بِمَا لَبِثُوْا ۚ لَهٗ غَيْبُ
السَّمٰوٰتِ وَالْاَرْضِ ۗ اَبْصِرْ بِهٖ وَاَسْمِعْ ۗ
مَا لَهُمْ مِّنْ دُوْنِهٖ مِنْ وَّلِيٍّ ۫ وَّلَا يُشْرِكُ
فِيْ حُكْمِهٖٓ اَحَدًا ﴿٢٦﴾

**28. ನಿನಗೆ ಅವತೀರ್ಣವಾದ ನಿನ್ನ ಪ್ರಭುವಿನ ಗ್ರಂಥದಿಂದ ನೀನು ಪಠಿಸು. ಅವನ ವಚನಗಳನ್ನು ಯಾರೂ ಬದಲಾಯಿಸಲಾರ ಹಾಗೂ ಅವನ ಹೊರತು ನಿನಗೆ ಆಶ್ರಯದಾತ ಬೇರೆ ಯಾರೂ ಇಲ್ಲ.**

وَاتْلُ مَآ اُوْحِيَ اِلَيْكَ مِنْ كِتٰبِ
رَبِّكَ ۚ لَا مُبَدِّلَ لِكَلِمٰتِهٖ ۚ وَلَنْ
تَجِدَ مِنْ دُوْنِهٖ مُلْتَحَدًا ﴿٢٧﴾

**29. ತಮ್ಮ ಪ್ರಭುವಿನ ಪ್ರೀತಿಯನ್ನು ಬಯಸುತ್ತಾ ಮುಂಜಾವ ಮತ್ತು ಮುಸ್ಸಂಜೆ ಅವನೊಡನೆ ಪ್ರಾರ್ಥಿಸುವವರೊಂದಿಗೆ ನೀನು ಸಂಬಂಧವಿರಿಸಿಕೋ. ಇಹಲೋಕ ಜೀವಿತದ ವೈಭವವನ್ನು ಬಯಸಿ ನಿನ್ನ ಕಣ್ಣುಗಳು ಅವರಿಂದ ಅಗಲಿ ಹೋಗದಿರಲಿ. ನಮ್ಮ ಸ್ಮರಣೆಯಿಂದ ಯಾರ ಹೃದಯ ನಿರ್ಲಕ್ಷ್ಯವಾಗಿರುವುದೋ, ಯಾರು ತನ್ನ ಸ್ವೇಚ್ಛಾಚಾರಕ್ಕೆ ಅಧೀನನಾಗಿರುವನೋ, ಯಾರು ತನ್ನ ವರ್ತನೆಯಲ್ಲಿ ಮಿತಿ ಮೀರಿರುವನೋ, ಅಂತಹವನನ್ನು ನೀನು ಅನುಸರಿಸಬಾರದು.**

وَاصْبِرْ نَفْسَكَ مَعَ الَّذِيْنَ يَدْعُوْنَ
رَبَّهُمْ بِالْغَدٰوةِ وَالْعَشِيِّ يُرِيْدُوْنَ
وَجْهَهٗ وَلَا تَعْدُ عَيْنٰكَ عَنْهُمْ ۚ
تُرِيْدُ زِيْنَةَ الْحَيٰوةِ الدُّنْيَا ۚ وَلَا تُطِعْ
مَنْ اَغْفَلْنَا قَلْبَهٗ عَنْ ذِكْرِنَا وَاتَّبَعَ
هَوٰىهُ وَكَانَ اَمْرُهٗ فُرُطًا ﴿٢٨﴾

**30. ಹೇಳು: 'ಇದು ನಿಮ್ಮ ಪ್ರಭುವಿನ ಕಡೆಯಿಂದಿರುವ ಸತ್ಯವಾಗಿದೆ. ಆದ್ದರಿಂದ ಯಾರು ಇಚ್ಛಿಸುತ್ತಾನೋ ಅವನು ನಂಬಲಿ. ಯಾರು**

وَقُلِ الْحَقُّ مِنْ رَّبِّكُمْ ۗ فَمَنْ شَآءَ
فَلْيُؤْمِنْ وَّمَنْ شَآءَ فَلْيَكْفُرْ ۙ اِنَّآ

ಇಚ್ಛಿಸುತ್ತಾನೋ ಅವನು ನಿರಾಕರಿಸಲಿ.' ದುರ್ಜನರಿಗೆ ನಾವು ಖಂಡಿತವಾ ಗಿಯೂ ನರಕಾಗ್ನಿಯನ್ನು ಸಿದ್ಧಪಡಿಸಿದ್ದೇವೆ. ಮೇಲೇ ಳುವ ಅದರ ಜ್ವಾಲೆಗಳು ಅವರನ್ನು ಆವರಿಸುವುವು. ಅವರು ಸಹಾಯಕ್ಕಾಗಿ ಮೊರೆಯಿಟ್ಟರೆ, ಕರಗಿಸಿದ ಸೀಸದಂತಿರುವ ನೀರಿನಿಂದ ಅವರಿಗೆ ನೆರವು ನೀಡಲಾಗು ವುದು. ಅದು ಮುಖವನ್ನು ಸುಟ್ಟುಬಿಡುವುದು. ಅದೆಷ್ಟು ಭಯಾನಕವಾದ ಪಾನೀಯ! ಅದೆಷ್ಟು ಕೆಟ್ಟ ವಿರಾಮ ಸ್ಥಳ!

أَعْتَدْنَا لِلظَّالِمِينَ نَارًا أَحَاطَ بِهِمْ سُرَادِقُهَا ۚ وَإِن يَسْتَغِيثُوا يُغَاثُوا بِمَاءٍ كَالْمُهْلِ يَشْوِي الْوُجُوهَ ۚ بِئْسَ الشَّرَابُ وَسَاءَتْ مُرْتَفَقًا ۝٢٩

31. ಖಂಡಿತವಾಗಿಯೂ ಯಾರು ನಂಬುತ್ತಾರೋ ಮತ್ತು ಸತ್ಕರ್ಮ ಮಾಡುತ್ತಾರೋ ನಿಶ್ಚಯವಾಗಿಯೂ ಅಂತಹ ಸತ್ಕರ್ಮ ಗೈದವರ ಪ್ರತಿಫಲ ವ್ಯರ್ಥವಾಗಲು ನಾವು ಬಿಡಲಾರೆವು.

إِنَّ الَّذِينَ آمَنُوا وَعَمِلُوا الصَّالِحَاتِ إِنَّا لَا نُضِيعُ أَجْرَ مَنْ أَحْسَنَ عَمَلًا ۝٣٠

32. ಕೆಳಬದಿಯಲ್ಲಿ ಸರಿತುಗಳು ಹರಿಯುವ ಸ್ವರ್ಗೀಯ ತೋಟಗಳು ಅವರಿಗಿವೆ. ಅಲ್ಲಿ ಅವರು ನಿತ್ಯವಾಸ ಮಾಡುವರು. ಅವರಿಗೆ ಸ್ವರ್ಣ ಬಳೆಗಳನ್ನು ತೊಡಿಸಲಾಗುವುದು. ನುಣುಪಾದ ಹಸಿರು ಬಣ್ಣದ ದಪ್ಪ ರೇಶ್ಮೆ ಬಟ್ಟೆಯನ್ನು ಅವರಿಗೆ ಉಡಿಸಲಾಗುವುದು. ಅಲ್ಲಿ ಉನ್ನತ ಮಟ್ಟದ ಪರ್ಯಂಕಗಳಲ್ಲಿ ಅವರು ಪವಡಿಸು ವರು. ಎಷ್ಟು ಉತ್ತಮ ಪ್ರತಿಫಲ! ಎಷ್ಟು ಉತ್ತಮ ವಿಶ್ರಾಂತಿ ಸ್ಥಳ!

أُولَٰئِكَ لَهُمْ جَنَّاتُ عَدْنٍ تَجْرِي مِن تَحْتِهِمُ الْأَنْهَارُ يُحَلَّوْنَ فِيهَا مِنْ أَسَاوِرَ مِن ذَهَبٍ وَيَلْبَسُونَ ثِيَابًا خُضْرًا مِّن سُندُسٍ وَإِسْتَبْرَقٍ مُّتَّكِئِينَ فِيهَا عَلَى الْأَرَائِكِ ۚ نِعْمَ الثَّوَابُ وَحَسُنَتْ مُرْتَفَقًا ۝٣١

33. ನೀನು ಅವರಿಗೆ ಈರ್ವರು ವ್ಯಕ್ತಿಗಳ ಸ್ಥಿತಿಯನ್ನು ಉಪಮಾರೂಪದಲ್ಲಿ ವಿವರಿಸಿಕೊಡು. ಅವರಲ್ಲೊಬ್ಬನಿಗೆ ದ್ರಾಕ್ಷೆಯ ಎರಡು ತೋಟಗಳನ್ನು ನಾವು ಒದಗಿಸಿದೆವು. ಅವುಗಳನ್ನು ಖರ್ಜೂರದ ಮರಗಳು ಸುತ್ತುವರಿದಿದ್ದವು. ಅವೆರಡರ ಮಧ್ಯದಲ್ಲಿ ನಾವು ಒಂದು ಹೊಲವನ್ನೂ ಉಂಟುಮಾಡಿದ್ದೆವು.

وَاضْرِبْ لَهُم مَّثَلًا رَّجُلَيْنِ جَعَلْنَا لِأَحَدِهِمَا جَنَّتَيْنِ مِنْ أَعْنَابٍ وَحَفَفْنَاهُمَا بِنَخْلٍ وَجَعَلْنَا بَيْنَهُمَا زَرْعًا ۝٣٢

34. ಆ ಎರಡು ತೋಟಗಳೂ ಏನೂ ಕೊರತೆಯಿಲ್ಲದೆ ಸಮೃದ್ಧವಾಗಿ ಫಲನೀಡುತ್ತಿದ್ದವು. ಅವುಗಳ ಮಧ್ಯೆ ನಾವು ಒಂದು ಕಾಲುವೆಯನ್ನು ಸಹ ಹರಿಯುವಂತೆ ಮಾಡಿದೆವು.

كِلْتَا الْجَنَّتَيْنِ آتَتْ أُكُلَهَا وَلَمْ تَظْلِم مِّنْهُ شَيْئًا ۚ وَفَجَّرْنَا خِلَالَهُمَا نَهَرًا ۝٣٣





35. ಅವನಿಗೆ ಧಾರಾಳವಾಗಿ ಫಸಲು ಸಹ ಸಿಗುತ್ತಿತ್ತು. ಆಗ ಅವನು ತನ್ನ ಸಂಗಡಿಗನೊಡನೆ ಮಾತನಾಡುತ್ತಾ ಹೇಳಿದನು: 'ನಾನು ನಿನಗಿಂತ ಹೆಚ್ಚು ಸಿರಿವಂತನು. ಜನಬೆಂಬಲ ಸಹ ನನಗೆ ಹೆಚ್ಚು ಇದೆ.'

وَكَانَ لَهُ ثَمَرٌ فَقَالَ لِصَاحِبِهِ وَهُوَ يُحَاوِرُهُ أَنَا أَكْثَرُ مِنكَ مَالًا وَأَعَزُّ نَفَرًا ۝٣٤

36. ತನ್ನ ಆತ್ಮಕ್ಕೆ ಅನ್ಯಾಯವೆಸಗುತ್ತಾ ಅವನು ತೋಟದೊಳಗೆ ಪ್ರವೇಶಿಸಿದನು. ಅವನು ಹೇಳಿದನು: 'ಇದು ಯಾವಾಗಲಾದರೂ ನಾಶವಾಗುವುದೆಂದು ನಾನು ಭಾವಿಸುವುದಿಲ್ಲ.

وَدَخَلَ جَنَّتَهُ وَهُوَ ظَالِمٌ لِّنَفْسِهِ قَالَ مَا أَظُنُّ أَن تَبِيدَ هَٰذِهِ أَبَدًا ۝٣٥

37. (ವಿನಾಶದ) 'ನಿಶ್ಚಿತ ಸಮಯ ಬರುವುದೆಂದು ಕೂಡ ನಾನು ಭಾವಿಸುವುದಿಲ್ಲ. ಇನ್ನು, ನಾನು ನನ್ನ ರಕ್ಷಕನ ಬಳಿಗೆ ಮರಳಿ ಹೋದರೂ ಇದಕ್ಕಿಂತ ಉತ್ತಮವಾದೊಂದು ವಾಸಸ್ಥಳವನ್ನು ನಾನು ಹೊಂದುವೆನು.'

وَمَا أَظُنُّ السَّاعَةَ قَائِمَةً وَلَئِن رُّدِدتُّ إِلَىٰ رَبِّي لَأَجِدَنَّ خَيْرًا مِّنْهَا مُنقَلَبًا ۝٣٦

38. ಅವನ ಸಂಗಡಿಗನು ಅವನೊಡನೆ ಮಾತನಾಡುತ್ತಾ ಹೇಳಿದನು: "ನಿನ್ನನ್ನು (ಮೊದಲು) ಮಣ್ಣಿನಿಂದಲೂ ಮತ್ತೆ ವೀರ್ಯದಿಂದಲೂ ಸೃಷ್ಟಿಸಿ ಅನಂತರ ನಿನ್ನನ್ನು ಒಬ್ಬ ಮನುಷ್ಯನನ್ನಾಗಿ ರೂಪುಗೊಳಿಸಿದವನನ್ನು ನೀನು ನಂಬುವುದಿಲ್ಲವೇ?

قَالَ لَهُ صَاحِبُهُ وَهُوَ يُحَاوِرُهُ أَكَفَرْتَ بِالَّذِي خَلَقَكَ مِن تُرَابٍ ثُمَّ مِن نُّطْفَةٍ ثُمَّ سَوَّاكَ رَجُلًا ۝٣٧

39. "ಆದರೆ (ನನ್ನ ಬಗ್ಗೆ ಹೇಳುವುದಾದರೆ, ನಾನು ನಂಬುವುದೇನೆಂದರೆ) ಅಲ್ಲಾಹನು ಮಾತ್ರ ನನ್ನ ಪ್ರಭು. ನನ್ನ ಪ್ರಭುವಿಗೆ ನಾನು ಯಾರನ್ನೂ ಸಹಭಾಗಿ ಮಾಡಲಾರೆ.

لَّٰكِنَّا هُوَ اللَّهُ رَبِّي وَلَا أُشْرِكُ بِرَبِّي أَحَدًا ۝٣٨

40. "ನಿನ್ನ ತೋಟದೊಳಗೆ ನೀನು ಪ್ರವೇಶಿಸಿದಾಗ, 'ಅಲ್ಲಾಹನು ಇಚ್ಛಿಸಿದ್ದೇ *ಸಂಭವಿಸುತ್ತದೆ;* ಅಲ್ಲಾಹನ (ಶಕ್ತಿಯ) ಹೊರತು ಬೇರೆ ಶಕ್ತಿಯಿಲ್ಲ' ಎಂದು ನೀನು ಯಾಕೆ ಹೇಳಲಿಲ್ಲ? ಸಂಪತ್ತು ಮತ್ತು ಸಂತತಿಯಲ್ಲಿ ನಿನಗಿಂತ ಕೀಳಾಗಿ ನೀನು ನನ್ನನ್ನು ಕಾಣುವುದಾದರೆ -

وَلَوْلَا إِذْ دَخَلْتَ جَنَّتَكَ قُلْتَ مَا شَاءَ اللَّهُ لَا قُوَّةَ إِلَّا بِاللَّهِ ۚ إِن تَرَنِ أَنَا أَقَلَّ مِنكَ مَالًا وَوَلَدًا ۝٣٩

41. "ನಿನ್ನ ತೋಟಕ್ಕಿಂತ ಉತ್ತಮವಾದುದನ್ನು ನನ್ನ ಪ್ರಭು ನನಗೆ ನೀಡಬಹುದು. ಅದರ (ನಿನ್ನ ತೋಟದ)

فَعَسَىٰ رَبِّي أَن يُؤْتِيَنِ خَيْرًا مِّن

ಮೇಲೆ ಆಕಾಶದಿಂದ ಅವನು ಸಿಡಿಲು ಮಿಂಚನ್ನು ಕಳುಹಿಸಿ ಅದನ್ನು ಬರಡುಭೂಮಿಯನ್ನಾಗಿ ಮಾರ್ಪಡಿಸಲೂ ಬಹುದು -

جَنَّتِكَ وَيُرْسِلَ عَلَيْهَا حُسْبَانًا مِّنَ السَّمَاءِ فَتُصْبِحَ صَعِيدًا زَلَقًا ﴿٤٠﴾

**42.** "ಅಥವಾ ಅದರ ನೀರು ಬತ್ತಿ ಹೋಗಿ ಮತ್ತೆ ನಿನಗೆ ಅದನ್ನು ಕಾಣಲು ಸಾಧ್ಯವಾಗದಿರಬಹುದು."

أَوْ يُصْبِحَ مَاؤُهَا غَوْرًا فَلَن تَسْتَطِيعَ لَهُ طَلَبًا ﴿٤١﴾

**43.** ಹಾಗೆ ಅವನ ಫಸಲು (ನಿಜವಾಗಿಯೂ) ನಾಶವಾಯಿತು. ತೋಟವು ಚಪ್ಪರದೊಂದಿಗೆ ನೆಲಕಚ್ಚಿರುವಾಗ (ಅದನ್ನು ಕಂಡು) ತಾನು ಅದಕ್ಕಾಗಿ ವ್ಯಯ ಮಾಡಿದ ಬಗ್ಗೆ ವ್ಯಾಕುಲಗೊಂಡು ಅವನು ತನ್ನ ಎರಡು ಕೈಗಳನ್ನು ಹಿಸುಕುತ್ತಿದ್ದನು. ಅವನು ಪ್ರಲಾಪಿಸಿದನು: 'ಅಕಟಾ, ನಾನು ನನ್ನ ಪ್ರಭುವಿಗೆ ಬೇರೆ ಯಾರನ್ನೂ ಸಹಭಾಗಿ ಮಾಡದಿರುತ್ತಿದ್ದರೆ ಎಷ್ಟು ಚೆನ್ನಾಗಿತ್ತು!'

وَأُحِيطَ بِثَمَرِهِ فَأَصْبَحَ يُقَلِّبُ كَفَّيْهِ عَلَىٰ مَا أَنفَقَ فِيهَا وَهِيَ خَاوِيَةٌ عَلَىٰ عُرُوشِهَا وَيَقُولُ يَا لَيْتَنِي لَمْ أُشْرِكْ بِرَبِّي أَحَدًا ﴿٤٢﴾

**44.** ಅಲ್ಲಾಹನ ಹೊರತು ಅವನಿಗೆ ನೆರವಾಗಲು ಬೇರೆ ಯಾವ ಜನರೂ ಇರಲಿಲ್ಲ. ತನ್ನ ಆತ್ಮರಕ್ಷಣೆ ಮಾಡಿಕೊಳ್ಳಲಿಕ್ಕೂ ಅವನಿಗೆ ಸಾಧ್ಯವಾಗಲಿಲ್ಲ.

وَلَمْ تَكُن لَّهُ فِئَةٌ يَنصُرُونَهُ مِن دُونِ اللَّهِ وَمَا كَانَ مُنتَصِرًا ﴿٤٣﴾

**45.** ಅಂತಹ ಸಂದರ್ಭಗಳಲ್ಲಿ ಸಹಾಯ ಲಭಿಸುವುದು ಸತ್ಯ ಸ್ವರೂಪನಾದ ಅಲ್ಲಾಹನಿಂದ ಮಾತ್ರವಾಗಿದೆ. ಪ್ರತಿಫಲ ನೀಡುವುದರಲ್ಲಿ ಅತ್ಯುತ್ತಮನು ಅವನೇ ಆಗಿದ್ದಾನೆ. ಉತ್ತಮ ಪರಿಣಾಮ ಉಂಟಾಗುವಂತೆ ಮಾಡುವವನು ಸಹ ಅವನೇ ಆಗಿರುವನು.

هُنَالِكَ الْوَلَايَةُ لِلَّهِ الْحَقِّ هُوَ خَيْرٌ ثَوَابًا وَخَيْرٌ عُقْبًا ﴿٤٤﴾

**46.** ಇಹಲೋಕ ಜೀವನದ ಹೋಲಿಕೆಯನ್ನು ನೀನು ಅವರಿಗೆ ವಿವರಿಸಿಕೊಡು. ಅದು ನಾವು ಆಕಾಶದಿಂದ ಸುರಿಸುವ ಮಳೆಯಂತಾಗಿದೆ. ಅದರೊಂದಿಗೆ ಭೂಮಿಯ ಸಸ್ಯಗಳು ಬೆರೆತು ಬೆಳೆಯುತ್ತವೆ. ಅನಂತರ ಅವು ಒಣಗಿ ಚೂರು ಚೂರಾಗಿ ಗಾಳಿಯಲ್ಲೆಲ್ಲ ಚಲ್ಲಾಪಿಲ್ಲಿಯಾಗುತ್ತವೆ. ಅಲ್ಲಾಹನು ಎಲ್ಲ ಕಾರ್ಯದಲ್ಲೂ ಸರ್ವಶಕ್ತನಾಗಿದ್ದಾನೆ.

وَاضْرِبْ لَهُم مَّثَلَ الْحَيَاةِ الدُّنْيَا كَمَاءٍ أَنزَلْنَاهُ مِنَ السَّمَاءِ فَاخْتَلَطَ بِهِ نَبَاتُ الْأَرْضِ فَأَصْبَحَ هَشِيمًا تَذْرُوهُ الرِّيَاحُ وَكَانَ اللَّهُ عَلَىٰ كُلِّ شَيْءٍ مُّقْتَدِرًا ﴿٤٥﴾





**47.** ಸಂಪತ್ತು ಮತ್ತು ಸಂತಾನಗಳು ಇಹಲೋಕ ಜೀವನದ ಸೊಬಗು. ಆದರೆ ಬಾಳಿಕೆ ಬರುವ ಪುಣ್ಯಕರ್ಮಗಳೇ ನಿನ್ನ ಪ್ರಭುವಿನ ಬಳಿ ಪ್ರತಿಫಲದ ದೃಷ್ಟಿಯಲ್ಲಿ ಅತ್ಯುತ್ತಮವಾಗಿವೆ. ಹಾಗೂ ನಿರೀಕ್ಷೆಯ ದೃಷ್ಟಿಯಲ್ಲೂ ಉತ್ತಮವಾಗಿವೆ.

الْمَالُ وَالْبَنُونَ زِينَةُ الْحَيَاةِ الدُّنْيَا وَالْبَاقِيَاتُ الصَّالِحَاتُ خَيْرٌ عِندَ رَبِّكَ ثَوَابًا وَخَيْرٌ أَمَلًا ﴿٤٦﴾

**48.** ಪರ್ವತಗಳನ್ನು ನಾವು ಚಲಿಸುವಂತೆ ಮಾಡುವ ದಿನ, ಭೂಮಿಯು (ತನ್ನ ನಿಕ್ಷೇಪಗಳನ್ನು) ಹೊರಹಾಕುವುದನ್ನು ನೀನು ಕಾಣುವ ದಿನ ನಾವು ಅವರನ್ನೆಲ್ಲ ಒಂದುಗೂಡಿಸುವೆವು. ಅವರಲ್ಲಿ ಯಾರನ್ನೂ ನಾವು ಬಿಟ್ಟುಬಿಡಲಾರೆವು.

وَيَوْمَ نُسَيِّرُ الْجِبَالَ وَتَرَى الْأَرْضَ بَارِزَةً وَحَشَرْنَاهُمْ فَلَمْ نُغَادِرْ مِنْهُمْ أَحَدًا ﴿٤٧﴾

**49.** ಸಾಲು ಸಾಲಾಗಿ ಅವರನ್ನು ನಿನ್ನ ಪ್ರಭುವಿನ ಮುಂದೆ ಹಾಜರುಪಡಿಸಲಾಗುವುದು. (ಅಲ್ಲಾಹನು ಹೇಳುವನು:) 'ಮೊದಲ ಸಲ ನಾವು ನಿಮ್ಮನ್ನು ಸೃಷ್ಟಿಸಿದ್ದಂತೆಯೇ ಈಗ ನೀವು ನಮ್ಮ ಬಳಿಗೆ ಬಂದಿದ್ದೀರಿ. ಆದರೆ ನಮ್ಮ ವಾಗ್ದಾನ ಈಡೇರುವ ಒಂದು ದಿನವನ್ನು ನಿಮಗೆ ನಾವು ಎಂದಿಗೂ ನಿರ್ದಿಷ್ಟಪಡಿಸಲಿಕ್ಕಿಲ್ಲವೆಂದು ನೀವು ಭಾವಿಸಿದಿರಿ.'

وَعُرِضُوا عَلَىٰ رَبِّكَ صَفًّا لَّقَدْ جِئْتُمُونَا كَمَا خَلَقْنَاكُمْ أَوَّلَ مَرَّةٍ بَلْ زَعَمْتُمْ أَلَّن نَّجْعَلَ لَكُم مَّوْعِدًا ﴿٤٨﴾

**50.** (ಅವರ ಕರ್ಮಗಳ) **ಪುಸ್ತಕ** (ಅವರ ಮುಂದೆ) ಇರಿಸಲ್ಪಡುವುದು. ಆಗ (ತಮ್ಮ ಕರ್ಮಗಳು) ಅದರಲ್ಲಿರುವುದರ ಕಾರಣವಾಗಿ ಅಪರಾಧಿಗಳು ಭಯಭೀತರಾಗುವುದನ್ನು ನೀನು ಕಾಣುವೆ. ಅವರು ಆಲಾಪಿಸುವರು: 'ಅಕಟಾ, ಇದೆಂಥ ಪುಸ್ತಕ! ಸಣ್ಣದಾಗಲಿ ದೊಡ್ಡದಾಗಲಿ ಯಾವುದನ್ನೂ ಅದು ದಾಖಲು ಮಾಡದೆ ಬಿಡಲಿಲ್ಲವಲ್ಲಾ!' ಅವರ ಕೃತ್ಯಗಳೆಲ್ಲವನ್ನೂ ಅವರ ಮುಂದೆ ಹಾಜರುಪಡಿಸುವುದನ್ನು ಅವರು ಕಾಣುವರು. ನಿನ್ನ ಪ್ರಭು ಯಾರೊಡಯೂ ಅನ್ಯಾಯವಾಗಿ ವರ್ತಿಸ ಲಾರ.

وَوُضِعَ الْكِتَابُ فَتَرَى الْمُجْرِمِينَ مُشْفِقِينَ مِمَّا فِيهِ وَيَقُولُونَ يَا وَيْلَتَنَا مَالِ هَٰذَا الْكِتَابِ لَا يُغَادِرُ صَغِيرَةً وَلَا كَبِيرَةً إِلَّا أَحْصَاهَا وَوَجَدُوا مَا عَمِلُوا حَاضِرًا وَلَا يَظْلِمُ رَبُّكَ أَحَدًا ﴿٤٩﴾

**51.** 'ಆದಮರ ಆಜ್ಞಾನುಸರಣೆ ಮಾಡಿರಿ'[319B] ಎಂದು ನಾವು ದೇವದೂತರೊಡನೆ ಹೇಳಿದ ಸಂದರ್ಭ.

وَإِذْ قُلْنَا لِلْمَلَائِكَةِ اسْجُدُوا لِآدَمَ

319B. 2ನೇ ಅಧ್ಯಾಯ 35ನೇ ವಚನದ ಟಿಪ್ಪಣಿ ನೋಡಿರಿ.

ಆಗ ಅವರು (ಎಲ್ಲರೂ) ಆಜ್ಞಾನುಸರಣೆ ಮಾಡಿದರು; ಆದರೆ ಇಬ್‌ಲೀಸ್ ವಿಧೇಯನಾಗಲಿಲ್ಲ. ಅವನು ಜಿನ್ನ್ ಪೈಕಿಯವನಾಗಿದ್ದನು. ಅವನು ತನ್ನ ಪ್ರಭುವಿನ ಆಜ್ಞೆಯನ್ನು ಧಿಕ್ಕರಿಸಿದನು. ಹಾಗಿರುವಾಗ, ನೀವು ನನ್ನನ್ನು ಬಿಟ್ಟು ನಿಮ್ಮ ಶತ್ರುಗಳಾಗಿರುವ ಅವನನ್ನೂ ಅವನ ಸಂತತಿಗಳನ್ನೂ ಮಿತ್ರರನ್ನಾಗಿ ಮಾಡಿ ಕೊಳ್ಳುವಿರಾ? ದುರ್ಜನರಿಗೆ ಸಿಗುವ ಪ್ರತಿಫಲ ಅತಿ ಕೆಟ್ಟದ್ದಾಗಿದೆ.

فَسَجَدُوْٓا اِلَّآ اِبْلِيْسَ ؕ كَانَ مِنَ الْجِنِّ فَفَسَقَ عَنْ اَمْرِ رَبِّهٖ ؕ اَفَتَتَّخِذُوْنَهٗ وَذُرِّيَّتَهٗۤ اَوْلِيَآءَ مِنْ دُوْنِيْ وَهُمْ لَكُمْ عَدُوٌّ ؕ بِئْسَ لِلظّٰلِمِيْنَ بَدَلًا ﴿٥١﴾

52. ಆಕಾಶಗಳ ಮತ್ತು ಭೂಮಿಯ ಸೃಷ್ಟಿಗಾಗಲಿ ಅವರದೇ ಸೃಷ್ಟಿಗಾಗಲಿ ನಾನು ಅವರನ್ನು ಸಾಕ್ಷಿಮಾಡ ಲಿಲ್ಲ. ಪಥಭ್ರಷ್ಟ ಗೊಳಿಸುವವರನ್ನು ಸಹಾಯಕರನ್ನಾಗಿ ನಾನು ಮಾಡಿಕೊಳ್ಳುವುದಿಲ್ಲ.

مَآ اَشْهَدْتُّهُمْ خَلْقَ السَّمٰوٰتِ وَالْاَرْضِ وَلَا خَلْقَ اَنْفُسِهِمْ ۪ وَمَا كُنْتُ مُتَّخِذَ الْمُضِلِّيْنَ عَضُدًا ﴿٥٢﴾

53. 'ನನ್ನ ಸಹಭಾಗಿಗಳೆಂದು ನೀವು ಭಾವಿಸಿದವ ರನ್ನು ಕರೆಯಿರಿ' ಎಂದು ಅವನು (ಅಲ್ಲಾಹನು) ಹೇಳುವ ದಿನ. ಆಗ ಅವರು ಅವರನ್ನು ಕರೆಯುವರು. ಆದರೆ ಅವರು ಉತ್ತರ ನೀಡಲಾರರು. ಅವರ ಮಧ್ಯೆ ನಾವು ಒಂದು ತಡೆಯನ್ನು ಇರಿಸುವೆವು.

وَيَوْمَ يَقُوْلُ نَادُوْا شُرَكَآءِيَ الَّذِيْنَ زَعَمْتُمْ فَدَعَوْهُمْ فَلَمْ يَسْتَجِيْبُوْا لَهُمْ وَجَعَلْنَا بَيْنَهُمْ مَّوْبِقًا ﴿٥٣﴾

54. ಅಪರಾಧಿಗಳು ನರಕಾಗ್ನಿಯನ್ನು ದರ್ಶಿಸುವರು. ಆಗ ಅವರು ಅದರೊಳಗೆ ಬೀಳಲಿರುವುದಾಗಿ ಮನಗಾಣು ವರು. ಅದರಿಂದ ತಪ್ಪಿಸಿಕೊಳ್ಳುವ ಯಾವ ದಾರಿಯನ್ನೂ ಅವರು ಕಾಣಲಾರರು.

وَرَاَ الْمُجْرِمُوْنَ النَّارَ فَظَنُّوْٓا اَنَّهُمْ مُّوَاقِعُوْهَا وَلَمْ يَجِدُوْا عَنْهَا مَصْرِفًا ﴿٥٤﴾ ع

55. ನಾವು ಈ ಖುರ್‌ಆನಿನಲ್ಲಿ ಮನುಷ್ಯರಿ ಗೋಸ್ಕರ ಎಲ್ಲ ಉದಾಹರಣೆಗಳನ್ನು ವಿವರಿಸಿದ್ದೇವೆ. ಮನುಷ್ಯನಾದರೋ ಹೆಚ್ಚು ಕಲಹಶೀಲನಾಗಿದ್ದಾನೆ.

وَلَقَدْ صَرَّفْنَا فِيْ هٰذَا الْقُرْاٰنِ لِلنَّاسِ مِنْ كُلِّ مَثَلٍ ؕ وَكَانَ الْاِنْسَانُ اَكْثَرَ شَيْءٍ جَدَلًا ﴿٥٥﴾

56. ಜನರಿಗೆ ಮಾಗದರ್ಶನ ಬಂದಾಗ ಅವರು ಅದನ್ನು ನಂಬುವುದರಿಂದ ಮತ್ತು ತಮ್ಮ ಪ್ರಭುವಿನ ಕ್ಷಮಾಯಾಚನೆ ಮಾಡುವುದರಿಂದ ಅವರನ್ನು ತಡೆದುದು, ಪೂರ್ವಿಕರಿಗೆ ಸಂಭವಿಸಿದಂತೆ ತಮಗೂ ಆಗಲಿ (ಎಂದು ಅವರು ಕಾದು ಕುಳಿತರು ಎಂಬುದೂ) ಅಥವಾ ದೇವ ಶಿಕ್ಷೆ ತಮ್ಮ ಕಣ್ಣಮುಂದೆ ಬರಲಿ (ಎಂದು ಅವರು ಹಟ ಹಿಡಿದರು) ಎಂಬುದೂ ಆಗಿತ್ತು.

وَمَا مَنَعَ النَّاسَ اَنْ يُّؤْمِنُوْٓا اِذْ جَآءَهُمُ الْهُدٰى وَيَسْتَغْفِرُوْا رَبَّهُمْ اِلَّآ اَنْ تَاْتِيَهُمْ سُنَّةُ الْاَوَّلِيْنَ اَوْ يَاْتِيَهُمُ الْعَذَابُ قُبُلًا ﴿٥٦﴾





57. ಶುಭವಾರ್ತೆ ಅರುಹುವವರಾಗಿಯೂ ಮುನ್ನೆಚ್ಚರಿಕೆ ನೀಡುವವರಾಗಿಯೂ ಹೊರತು ನಾವು ಸಂದೇಶವಾಹಕರನ್ನು ನಿಯೋಜಿಸುವುದಿಲ್ಲ. ಅವಿಶ್ವಾಸಿಗಳು ಸತ್ಯವನ್ನು ಸೋಲಿಸಲಿಕ್ಕಾಗಿ ಅಸತ್ಯದ ಮೂಲಕ ವಾಗ್ವಾದ ಮಾಡುತ್ತಾರೆ. ನನ್ನ ದೃಷ್ಟಾಂತ ಗಳನ್ನೂ ಮುನ್ನೆಚ್ಚರಿಕೆಗಳನ್ನೂ ಅವರು ಅಪಹಾಸ್ಯ ಮಾಡುತ್ತಾರೆ.

وَمَا نُرْسِلُ الْمُرْسَلِيْنَ اِلَّا مُبَشِّرِيْنَ وَمُنْذِرِيْنَ ۚ وَيُجَادِلُ الَّذِيْنَ كَفَرُوْا بِالْبَاطِلِ لِيُدْحِضُوْا بِهِ الْحَقَّ وَاتَّخَذُوْٓا اٰيٰتِيْ وَمَآ اُنْذِرُوْا هُزُوًا ﴿٥٧﴾

58. ತನ್ನ ಪ್ರಭುವಿನ ದೃಷ್ಟಾಂತಗಳ ಬಗ್ಗೆ ನೆನಪಿಸಿಕೊಟ್ಟಾಗಲೂ ಅದರಿಂದ ಮುಖ ತಿರುಗಿಸಿದ ಮತ್ತು ತನ್ನ ಎರಡು ಕೈಗಳು ಗೈದುದನ್ನು ಮರೆತು ಬಿಟ್ಟವ ನಿಗಿಂತ ದೊಡ್ಡ ದುಷ್ಕರ್ಮಿ ಬೇರೆ ಯಾರು? ಅವರು ಅದನ್ನು ತಿಳಿಯದಂತಾಗಲು ಅವರ ಹೃದಯಗಳ ಮೇಲೆ ಪರದೆಗಳನ್ನು ನಾವು ಹಾಕಿರುವೆವು ಮತ್ತು ಅವರ ಕಿವಿಗಳನ್ನು ಕಿವುಡುಮಾಡಿರುವೆವು. ನೀನು ಅವರನ್ನು ಸತ್ಪಥದೆಡೆಗೆ ಕರೆದರೂ ಅವರೆಂದಿಗೂ ಮಾರ್ಗದರ್ಶನ ಪಡೆಯಲಾರರು.

وَمَنْ اَظْلَمُ مِمَّنْ ذُكِّرَ بِاٰيٰتِ رَبِّهٖ فَاَعْرَضَ عَنْهَا وَنَسِيَ مَا قَدَّمَتْ يَدٰهُ ؕ اِنَّا جَعَلْنَا عَلٰى قُلُوْبِهِمْ اَكِنَّةً اَنْ يَّفْقَهُوْهُ وَفِيْٓ اٰذَانِهِمْ وَقْرًا ؕ وَاِنْ تَدْعُهُمْ اِلَى الْهُدٰى فَلَنْ يَّهْتَدُوْٓا اِذًا اَبَدًا ﴿٥٨﴾

59. ನಿನ್ನ ಪ್ರಭು ಅತ್ಯಂತ ಕ್ಷಮಾಶೀಲನೂ ಮಹಾ ಕಾರುಣ್ಯನಿಧಿಯೂ ಆಗಿದ್ದಾನೆ. ಅವರು ಗೈದ ಅಪರಾಧಕ್ಕೆ ಅವನು ಅವರನ್ನು ಶಿಕ್ಷಿಸುವುದಾಗಿದ್ದರೆ, ಶೀಘ್ರುವೇ ಅವರಿಗೆ ಅವನು ಶಿಕ್ಷೆ ನೀಡುತ್ತಿದ್ದನು. ಆದರೆ ಅವರಿಗೆ ಒಂದು ನಿರ್ದಿಷ್ಟ ಕಾಲಾವಧಿಯಿದೆ. ಅದರಾಚೆ ಅವರು ಯಾವುದೇ ಅಭಯ ಸ್ಥಾನವನ್ನು ಹೊಂದಲಾರರು.

وَرَبُّكَ الْغَفُوْرُ ذُو الرَّحْمَةِ ؕ لَوْ يُؤَاخِذُهُمْ بِمَا كَسَبُوْا لَعَجَّلَ لَهُمُ الْعَذَابَ ؕ بَلْ لَّهُمْ مَّوْعِدٌ لَّنْ يَّجِدُوْا مِنْ دُوْنِهٖ مَوْئِلًا ﴿٥٩﴾

60. ಆ ಊರಿನವರು ದುಷ್ಕರ್ಮಿಗಳಾದಾಗ ನಾವು ಅವರನ್ನು ನಾಶಪಡಿಸಿದೆವು. ಅವರ ವಿನಾಶಕ್ಕೆ ನಾವು ಒಂದು ನಿರ್ದಿಷ್ಟ ಸಮಯವನ್ನು ನಿಗದಿಪಡಿಸಿದ್ದೆವು.

وَتِلْكَ الْقُرٰٓى اَهْلَكْنٰهُمْ لَمَّا ظَلَمُوْا وَجَعَلْنَا لِمَهْلِكِهِمْ مَّوْعِدًا ﴿٦٠﴾ ع

61. ಮೂಸಾ ತನ್ನ ಯುವಕ (ಸಂಗಡಿಗ) ನೊಡನೆ[319C] ಹೇಳಿದ ಸಂದರ್ಭ - 'ಎರಡು ಸಮುದ್ರಗಳ

وَاِذْ قَالَ مُوْسٰى لِفَتٰىهُ لَآ اَبْرَحُ حَتّٰٓى اَبْلُغَ

319C. ಇದು ಪ್ರವಾದಿ ಮೂಸಾ (ಅಲೈಹಿಸ್ಸಲಾಂ) ರಿಗೆ ಉಂಟಾದ ಒಂದು ದಿವ್ಯದರ್ಶನವಾಗಿದೆ. ಯುವ ಸಂಗಡಿಗನೆಂದು ಇಲ್ಲಿ ಹೇಳಲಾದುದು ಪ್ರವಾದಿ ಈಸಾ (ಅಲೈಹಿಸ್ಸಲಾಂ) ರನ್ನಾಗಿದೆ.

مَجْمَعَ الْبَحْرَيْنِ اَوْ اَمْضِيَ حُقُبًا ﴿٦٠﴾

ಸಂಗಮ ಸ್ಥಾನವನ್ನು[320] ತಲಪುವ ವರೆಗೆ ನಾನು ಪ್ರಯಾಣವನ್ನು ನಿಲ್ಲಿಸಲಾರೆ. ಅಥವಾ ಶತಮಾನಗಳ ತನಕ ನಾನು (ಪ್ರಯಾಣದಲ್ಲಿ) ಮುಂದುವರಿಯುವೆನು.'

فَلَمَّا بَلَغَا مَجْمَعَ بَيْنِهِمَا نَسِيَا حُوْتَهُمَا فَاتَّخَذَ سَبِيْلَهٗ فِي الْبَحْرِ سَرَبًا ﴿٦١﴾

62. ಹಾಗೆ ಅವರೀರ್ವರೂ ಆ ಎರಡು ಸಮುದ್ರಗಳ ಸಂಗಮ ಸ್ಥಾನವನ್ನು ತಲಪಿದಾಗ ಅವರು ತಮ್ಮ ಮೀನನ್ನು[321] ಮರೆತು ಬಿಟ್ಟರು. ಆಗ ಅದು ಸಮುದ್ರ ದಲ್ಲಿ ತನ್ನ ದಾರಿ ಹಿಡಿಯುತ್ತಾ ವೇಗವಾಗಿ ಹೋಗಿ ಬಿಟ್ಟಿತು.

فَلَمَّا جَاوَزَا قَالَ لِفَتٰىهُ اٰتِنَا غَدَآءَنَا ز لَقَدْ لَقِيْنَا مِنْ سَفَرِنَا هٰذَا نَصَبًا ﴿٦٢﴾

63. ಹಾಗೆ ಅವರು ಇಬ್ಬರೂ ಮುಂದಕ್ಕೆ ಪ್ರಯಾಣಿಸಿದಾಗ, ಅವರು ತನ್ನ ಯುವಕ (ಸಂಗಡಿಗ) ನೊಡನೆ ಹೇಳಿದರು: 'ನಮ್ಮ ಬೆಳಗ್ಗಿನ ಉಪಾಹಾರವನ್ನು ಕೊಡು. ನಮ್ಮ ಈ ಯಾತ್ರೆಯ ಕಾರಣದಿಂದ ನಾವು ತುಂಬಾ ದಣಿದಿದ್ದೇವೆ.'

قَالَ اَرَءَيْتَ اِذْ اَوَيْنَآ اِلَى الصَّخْرَةِ فَاِنِّيْ نَسِيْتُ الْحُوْتَ ز وَمَآ اَنْسٰىنِيْهُ اِلَّا الشَّيْطٰنُ اَنْ اَذْكُرَهٗ ج وَاتَّخَذَ سَبِيْلَهٗ فِي الْبَحْرِ ۖ عَجَبًا ﴿٦٣﴾

64. ಅವನು (ಸಂಗಡಿಗ) ಹೇಳಿದನು: 'ನೋಡಿರಿ, ನಾವು ವಿಶ್ರಾಂತಿ ಪಡೆಯಲಿಕ್ಕೆ ಆ ಬಂಡೆಯ[322] ಬಳಿಗೆ ಹೋದಾಗ ನಾನು ಮೀನನ್ನು ಮರೆತುಬಿಟ್ಟೆನು. ಅದರ ಕುರಿತು ನಾನು (ನಿಮ್ಮೊಡನೆ) ಹೇಳುವುದನ್ನು ಸಹ ಮರೆತು ಬಿಡುವಂತೆ ಶೈತಾನ ಮಾಡಿದನು. ಅದು ಸಮುದ್ರದಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ಅದರ ದಾರಿ ಹಿಡಿದು ಹೋಯಿತು.'

320. ಧರ್ಮಶಾಸ್ತ್ರ ವಾಹಕರಾದ ಹಝ್ರತ್ ಮೂಸಾ (ಅ) ಮತ್ತು ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸ್ಸಲ್ಲಂ)ರ ಕಾಲಘಟ್ಟದ ಸಂಗಮವನ್ನು ಇಲ್ಲಿ ಉದ್ದೇಶಿಸಲಾಗಿದೆ. ಅಂದರೆ, ಹಝ್ರತ್ ಮೂಸಾ (ಅ)ರ ಕಾಲ ಕೊನೆಗೊಂಡು ಹಝ್ರತ್ ಮುಹಮ್ಮದ್ ಪೈಗಂಬರ್ (ಸ)ರವರ ಕಾಲ ಆರಂಭಿಸುವ ಘಟ್ಟ.

321. ಸ್ವಪ್ನಶಾಸ್ತ್ರ ಪ್ರಕಾರ ಮೀನು ಭಕ್ತರ ಆರಾಧನಾಲಯವನ್ನು ಸೂಚಿಸುತ್ತದೆ. ಆ ಕಾಲದಲ್ಲಿ ಹಝ್ರತ್ ಮೂಸಾ (ಅ) ಮತ್ತು ಹಝ್ರತ್ ಈಸಾ (ಅ)ರ ಸಮುದಾಯಗಳಲ್ಲಿ ಆಧ್ಯಾತ್ಮಿಕತೆ ಮತ್ತು ದೇವಭಕ್ತಿ ನಾಸ್ತಿಯಾಗಿರುವುದೆಂದು ತಾತ್ಪರ್ಯ.

322. ಸ್ವಪ್ನದಲ್ಲಿ ಬಂಡೆಯು ಅಧಾರ್ಮಿಕತೆಯನ್ನೂ ದುರ್ನಡತೆಗಳನ್ನೂ ಸೂಚಿಸುತ್ತದೆ (ತಅ್‌ತೀರುಲ್ ಅನಾಂ). ಹಝ್ರತ್ ಮುಹಮ್ಮದ್ ಪೈಗಂಬರ್ (ಸ)ರವರ ಕಾಲ ಬಂದಾಗ ಪ್ರವಾದಿ ಮೂಸಾ (ಅ) ಮತ್ತು ಪ್ರವಾದಿ ಈಸಾ (ಅ)ರ ಸಮುದಾಯಗಳು ಭೌತಿಕತೆ ಮತ್ತು ದುರ್ನಡತೆಗಳಲ್ಲಿ ನಿರತರಾದ ಕಾರಣದಿಂದ ಆಧ್ಯಾತ್ಮಿಕತೆ ಮತ್ತು ದೇವಭಕ್ತಿ ಅವರಿಗೆ ನಷ್ಟವಾಗುವುದೆಂದು ತಾತ್ಪರ್ಯ. ಪ್ರಯಾಣ ಎಂಬುದು ಎರಡು ಸಮುದಾಯಗಳು ಹಾದು ಹೋಗುವ ಕಾಲಘಟ್ಟವನ್ನು ಸೂಚಿಸುತ್ತದೆ.





قَالَ ذٰلِكَ مَا كُنَّا نَبْغِ ۖ فَارْتَدَّا عَلٰٓى اٰثَارِهِمَا قَصَصًا ﴿٦٤﴾

65. ಅವರು ಹೇಳಿದರು: 'ನಾವು ಹುಡುಕುತ್ತಿದ್ದ ಸ್ಥಳ ಅದೇ ಆಗಿದೆ.' ಹಾಗೆ ಅವರು ತಮ್ಮ ಹೆಜ್ಜೆಗಳನ್ನು ಗುರುತಿಸುತ್ತಾ ಮರಳಿದರು.[323]

فَوَجَدَا عَبْدًا مِّنْ عِبَادِنَآ اٰتَيْنٰهُ رَحْمَةً مِّنْ عِنْدِنَا وَعَلَّمْنٰهُ مِنْ لَّدُنَّا عِلْمًا ﴿٦٥﴾

66. ಆಗ ನಮ್ಮ ದಾಸರ ಪೈಕಿ ಓರ್ವ ವಿಶಿಷ್ಟ ದಾಸನನ್ನು ಅವರಿಬ್ಬರೂ ಭೇಟಿಯಾದರು.[324] ಅವರಿಗೆ ನಾವು ನಮ್ಮ ಕಡೆಯಿಂದಿರುವ ಕಾರುಣ್ಯವನ್ನು ನೀಡಿರುವೆವು ಹಾಗೂ ವಿಶಿಷ್ಟವಾದ ಜ್ಞಾನವನ್ನು ಕಲಿಸಿಕೊಟ್ಟಿರುವೆವು.

قَالَ لَهٗ مُوْسٰى هَلْ اَتَّبِعُكَ عَلٰٓى اَنْ تُعَلِّمَنِ مِمَّا عُلِّمْتَ رُشْدًا ﴿٦٦﴾

67. ಮೂಸಾ ಅವರೊಡನೆ ಕೇಳಿದರು: 'ನಿಮಗೆ ಲಭಿಸಿದ ಮಾರ್ಗದರ್ಶನದಿಂದ ನೀವು ನನಗೆ ಕಲಿಸಿ ಕೊಡುವಿರೆಂಬ ನಿಬಂಧನೆಯ ಮೇರೆಗೆ ನಾನು ನಿಮ್ಮನ್ನು ಅನುಗಮಿಸಲೇ?'

قَالَ اِنَّكَ لَنْ تَسْتَطِيْعَ مَعِيَ صَبْرًا ﴿٦٧﴾

68. ಅವರು ಉತ್ತರಿಸಿದರು: 'ನನ್ನ ಜೊತೆಯಲ್ಲಿ ಸಹನೆಯಿಂದ ಹಿಂಬಾಲಿಸಲಿಕ್ಕೆ ನಿಮಗೆಂದಿಗೂ ಸಾಧ್ಯವಿಲ್ಲ.

وَكَيْفَ تَصْبِرُ عَلٰى مَا لَمْ تُحِطْ بِهٖ خُبْرًا ﴿٦٨﴾

69. 'ನೀವು ಸಾಕಷ್ಟು ಗ್ರಹಿಸಿಲ್ಲದ ಒಂದು ವಿಚಾರದ ಬಗ್ಗೆ ನೀವು ಹೇಗೆ ಸಹನೆದೋರುವಿರಿ?'

قَالَ سَتَجِدُنِيْٓ اِنْ شَآءَ اللّٰهُ صَابِرًا وَّلَآ اَعْصِيْ لَكَ اَمْرًا ﴿٦٩﴾

70. ಅವರು (ಮೂಸಾ) ಹೇಳಿದರು: 'ಅಲ್ಲಾಹನಿಚ್ಛಿಸಿದರೆ ನೀವು ನನ್ನನ್ನು ಸಹನಶೀಲನನ್ನಾಗಿ ಕಾಣುವಿರಿ. ಯಾವ ವಿಚಾರದಲ್ಲೂ ನಿಮಗೆ ನಾನು ಅವಿಧೇಯನಾಗಲಾರೆ.'

قَالَ فَاِنِ اتَّبَعْتَنِيْ فَلَا تَسْـَٔلْنِيْ عَنْ شَيْءٍ حَتّٰٓى اُحْدِثَ لَكَ مِنْهُ ذِكْرًا ﴿٧٠﴾

71. ಆಗ ಅವರು (ಆ ಮಹಾಪುರುಷ) ಹೇಳಿದರು: 'ನೀವು ನನ್ನನ್ನು ಹಿಂಬಾಲಿಸುವುದಾದರೆ ಯಾವುದೇ ವಿಚಾರದ ಬಗ್ಗೆ, ನಾನೇ ಅದನ್ನು ವಿವರಿಸುವುದಕ್ಕಿಂತ ಮುಂಚೆ ನೀವು ನನ್ನೊಡನೆ ಪ್ರಶ್ನಿಸಬಾರದು.'

323. ಮುಹಮ್ಮದ್ ಪೈಗಂಬರ್ (ಸ)ರವರ ಆಗಮನದ ಬಗ್ಗೆ ಇಬ್ಬರೂ ಪ್ರವಾದಿಗಳ ಭವಿಷ್ಯ ನುಡಿಗಳನ್ನು ತಾವು ಮರೆತಿರುವುದಾಗಿ ಅವರು (ಅವರ ಸಮುದಾಯಗಳು) ಮನಗಂಡರು. ಕೊನೆಗೆ ಅದರೆಡೆಗೆ ಎರಡು ಸಮುದಾಯಗಳೂ ಮರಳುವುವು ಎಂದು ತಾತ್ಪರ್ಯ.

324. ಮುಹಮ್ಮದ್ ಪೈಗಂಬರ್ (ಸ)ರವರನ್ನು ಇಲ್ಲಿ ಸೂಚಿಸಲಾಗಿದೆ.

**72.** ಹಾಗೆ ಅವರಿಬ್ಬರೂ ಪ್ರಯಾಣ ಹೊರಟರು. ಅವರೀರ್ವರೂ ಒಂದು ನೌಕೆಯನ್ನು ಹತ್ತಿದಾಗ ಅವರು ಅದಕ್ಕೆ ತೂತು ಕೊರೆದರು. ಆಗ ಅವರು (ಮೂಸಾ) ಕೇಳಿದರು: 'ನೀವು ನೌಕೆಯಲ್ಲಿರುವವರನ್ನು ಮುಳುಗಿಸಲಿಕ್ಕಾಗಿ ತೂತು ಕೊರೆದಿರೇನು? ನಿಜವಾಗಿಯೂ ನೀವು ಬಹಳ ಕೆಟ್ಟ ಕೆಲಸಮಾಡಿದ್ದೀರಿ.'

فَانْطَلَقَا حَتّٰٓى اِذَا رَكِبَا فِي السَّفِيْنَةِ خَرَقَهَا ؕ قَالَ اَخَرَقْتَهَا لِتُغْرِقَ اَهْلَهَا ۚ لَقَدْ جِئْتَ شَيْئًا اِمْرًا ﴿٧١﴾

**73.** ಆಗ ಅವರು ಹೇಳಿದರು: 'ನನ್ನ ಜೊತೆಯಲ್ಲಿದ್ದುಕೊಂಡು ಸಹನೆದೋರಲಿಕ್ಕೆ ನಿಮಗೆ ಸಾಧ್ಯವಿಲ್ಲವೆಂದು ನಾನು ಹೇಳಿರಲಿಲ್ಲವೇ?'

قَالَ اَلَمْ اَقُلْ اِنَّكَ لَنْ تَسْتَطِيْعَ مَعِيَ صَبْرًا ﴿٧٢﴾

**74.** ಅವರು (ಮೂಸಾ) ಹೇಳಿದರು: 'ನಾನು ನಿಮ್ಮ ಉಪದೇಶವನ್ನು ಮರೆತ ಕಾರಣಕ್ಕೆ ನನ್ನನ್ನು ನೀವು ಶಿಕ್ಷಿಸಬಾರದು. ನನ್ನ ತಪ್ಪಿಗಾಗಿ ನೀವು ನನ್ನೊಡನೆ ಕಠೋರವಾಗಿ ವರ್ತಿಸಬೇಡಿರಿ.'

قَالَ لَا تُؤَاخِذْنِيْ بِمَا نَسِيْتُ وَلَا تُرْهِقْنِيْ مِنْ اَمْرِيْ عُسْرًا ﴿٧٣﴾

**75.** ಮತ್ತೆ ಅವರಿಬ್ಬರೂ ಯಾತ್ರೆಯನ್ನು ಮುಂದುವರಿಸಿದರು. ಅವರೊಬ್ಬ ಬಾಲಕನನ್ನು ಭೇಟಿಯಾದರು. ಅವರು ಆ ಬಾಲಕನನ್ನು ಕೊಂದುಬಿಟ್ಟರು.[325] ಅವರು (ಮೂಸಾ) ಹೇಳಿದರು: 'ಆ ಬಾಲಕನು ಯಾರನ್ನೂ ಕೊಲ್ಲದೆ ನಿರಪರಾಧಿಯಾಗಿರುವಾಗ ನೀವು ಅವನನ್ನು ಕೊಂದುಬಿಟ್ಟಿರಲ್ಲಾ? ನಿಜವಾಗಿಯೂ ನೀವು ಒಂದು ನೀಚ ಕೃತ್ಯವೆಸಗಿದ್ದೀರಿ.'

فَانْطَلَقَا حَتّٰٓى اِذَا لَقِيَا غُلٰمًا فَقَتَلَهٗ ۙ قَالَ اَقَتَلْتَ نَفْسًا زَكِيَّةً ۢ بِغَيْرِ نَفْسٍ ؕ لَقَدْ جِئْتَ شَيْئًا نُّكْرًا ﴿٧٤﴾

**76.** ಆಗ ಅವರು ಹೇಳಿದರು: 'ನನ್ನ ಜೊತೆಯಲ್ಲಿದ್ದುಕೊಂಡು ಸಹನೆದೋರಲಿಕ್ಕೆ ನಿಮಗೆ ಸಾಧ್ಯವಿಲ್ಲವೆಂದು ನಾನು ನಿಮ್ಮೊಡನೆ ಹೇಳಿರಲಿಲ್ಲವೇ?'

قَالَ اَلَمْ اَقُلْ لَّكَ اِنَّكَ لَنْ تَسْتَطِيْعَ مَعِيَ صَبْرًا ﴿٧٥﴾

**77.** ಅವರು (ಮೂಸಾ) ಹೇಳಿದರು: 'ಇನ್ನು ಮುಂದೆ ನಾನು ನಿಮ್ಮೊಡನೆ ಏನನ್ನಾದರೂ ಕೇಳಿದರೆ ನೀವು ನನ್ನನ್ನು ಜೊತೆಗಾರನನ್ನಾಗಿ ಮಾಡಬೇಡಿರಿ. ನಿಮಗೆ ನನ್ನಿಂದ ಅದಕ್ಕೆ ಕಾರಣ ಸಿಕ್ಕಿದೆಯಲ್ಲವೇ?'

قَالَ اِنْ سَاَلْتُكَ عَنْ شَيْءٍ ۢ بَعْدَهَا فَلَا تُصٰحِبْنِيْ ۚ قَدْ بَلَغْتَ مِنْ لَّدُنِّيْ عُذْرًا ﴿٧٦﴾

325. ಸ್ವಪ್ನಶಾಸ್ತ್ರ ಪ್ರಕಾರ 'ಬಾಲಕ' ಎಂಬುದು ಆವೇಶ ಮತ್ತು ಶಕ್ತಿಯ ಸಂಕೇತವಾಗಿದೆ. ಮದ್ಯಪಾನ ಮತ್ತು ಜೂಜಾಟವನ್ನು ವಿರೋಧಿಸಿದಂತೆಯೇ ಆವೇಶ ಮತ್ತು ಶಕ್ತಿ ಪಡೆಯಲಿಕ್ಕಾಗಿ ಅಹಿತ ಮಾರ್ಗಗಳನ್ನು ಕೈಗೊಳ್ಳುವುದನ್ನು ಪೈಗಂಬರರು ತಡೆದಿದ್ದಾರೆ.





**78.** ಪುನಃ ಅವರಿಬ್ಬರೂ ಪ್ರಯಾಣ ಮುಂದುವರಿಸಿದರು. ಹಾಗೆ ಅವರು ಒಂದು ಊರಿನ ಜನರನ್ನು ಸಮೀಪಿಸಿದಾಗ ಅವರೊಡನೆ ಆಹಾರವನ್ನು ಕೇಳಿದರು. ಆದರೆ ಅವರೀರ್ವರಿಗೂ ಆತಿಥ್ಯ ನೀಡಲು ಅವರು ನಿರಾಕರಿಸಿದರು.[326] ಅಲ್ಲಿ ಅವರು ಕುಸಿದು ಬೀಳಲು ಸಿದ್ಧವಾಗಿದ್ದ ಒಂದು ಗೋಡೆಯನ್ನು ಕಂಡರು. ಅದನ್ನು ಅವರು (ಆ ಮಹಾತ್ಮ) ದುರಸ್ತಿ ಮಾಡಿ ನಿಲ್ಲಿಸಿದರು. ಆಗ ಅವರು (ಮೂಸಾ) ಹೇಳಿದರು: 'ನೀವು ಬಯಸಿದ್ದರೆ ಅದಕ್ಕೆ ಅವರಿಂದ ಪ್ರತಿಫಲ ಪಡೆಯಬಹುದಾಗಿತ್ತು.'

فَانْطَلَقَا حَتّٰٓى اِذَآ اَتَيَآ اَهْلَ قَرْيَةِ ۨاسْتَطْعَمَآ اَهْلَهَا فَاَبَوْا اَنْ يُّضَيِّفُوْهُمَا فَوَجَدَا فِيْهَا جِدَارًا يُّرِيْدُ اَنْ يَّنْقَضَّ فَاَقَامَهٗ ؕ قَالَ لَوْ شِئْتَ لَتَّخَذْتَ عَلَيْهِ اَجْرًا ﴿٧٧﴾

**79.** ಅವರು ಹೇಳಿದರು: 'ಇದು ನನ್ನ ಮತ್ತು ನಿಮ್ಮ ಅಗಲುವಿಕೆಯ ಸಮಯವಾಗಿದೆ. ನಿಮಗೆ ಸಹಿಸಲು ಸಾಧ್ಯವಾಗದ ಸಂಗತಿಗಳ ವಾಸ್ತವಿಕತೆಯನ್ನು ಈಗ ನಾನು ನಿಮಗೆ ಹೇಳಿ ಕೊಡುವೆನು.

قَالَ هٰذَا فِرَاقُ بَيْنِيْ وَبَيْنِكَ ۚ سَاُنَبِّئُكَ بِتَاْوِيْلِ مَا لَمْ تَسْتَطِعْ عَّلَيْهِ صَبْرًا ﴿٧٨﴾

**80.** 'ಆ ನೌಕೆಯ ವಿಚಾರ - ಅದು ಸಮುದ್ರದಲ್ಲಿ ದುಡಿಯುತ್ತಿರುವ ಕೆಲವು ನಿರ್ಗತಿಕರದ್ದಾಗಿತ್ತು.[327] ಅದಕ್ಕೆ ಹಾನಿಯುಂಟು ಮಾಡಲು ನಾನು ಬಯಸಿದೆನು.[328] (ಏಕೆಂದರೆ) ಅವರ ಹಿಂದೆ ಎಲ್ಲ ನೌಕೆಗಳನ್ನೂ[329] ಬಲಾತ್ಕಾರವಾಗಿ ಹಿಡಿಯುವ ಒಬ್ಬ (ದುಷ್ಟ) ರಾಜನಿದ್ದನು.[330]

اَمَّا السَّفِيْنَةُ فَكَانَتْ لِمَسٰكِيْنَ يَعْمَلُوْنَ فِي الْبَحْرِ فَاَرَدْتُّ اَنْ اَعِيْبَهَا وَكَانَ وَرَآءَهُمْ مَّلِكٌ يَّاْخُذُ كُلَّ سَفِيْنَةٍ غَصْبًا ﴿٨٠﴾

**81.** 'ಆ ಬಾಲಕನ ವಿಚಾರ - ಅವನ ಮಾತಾಪಿತರು ಸತ್ಯವಿಶ್ವಾಸಿಗಳಾಗಿದ್ದರು. ಆದರೆ ಅವನು ತನ್ನ ಬಂಡುಕೋರತನದಿಂದ ಮತ್ತು ಅವಿಶ್ವಾಸದಿಂದ ಅವರಿಗೆ ಕೆಡುಕು ಮಾಡುವನೆಂದು ನಾವು ಹೆದರಿದೆವು.

وَاَمَّا الْغُلٰمُ فَكَانَ اَبَوٰهُ مُؤْمِنَيْنِ فَخَشِيْنَآ اَنْ يُّرْهِقَهُمَا طُغْيَانًا وَّكُفْرًا ﴿٨١﴾

326. ಹಝ್ರತ್ ಮುಹಮ್ಮದ್ ಪೈಗಂಬರ್ (ಸ) ಯಹೂದಿಯರ ಮತ್ತು ಕ್ರೈಸ್ತರ ಸಹಕಾರವನ್ನು ಕೋರಿದ ಬಗ್ಗೆ ಇಲ್ಲಿ ಸೂಚಿಸಲಾಗಿದೆ. ಆದರೆ ಅವರು ಅದನ್ನು ತಿರಸ್ಕರಿಸಿದರು.

327. ಬಡಜನರನ್ನು ಪ್ರೀತಿಸಿ ಅವರಿಗೆ ನೆರವಾಗಲು ಸಿದ್ಧರಾಗಿರುವ ಸಾಧು ಸ್ವಭಾವದ ಜನರು ಎಂದು ತಾತ್ಪರ್ಯ.

328. ಭೌತಿಕವಾದ ಸಂಪತ್ತಿನಿಂದ ಮತ್ತು ಇತರ ವರಮಾನಗಳಿಂದ ಒಂದಂಶವನ್ನು ಧರ್ಮ ಮತ್ತು ಸಮುದಾಯಕ್ಕಾಗಿ ವ್ಯಯಿಸಬೇಕೆಂದು ಅವರು ತನ್ನ ಧರ್ಮಶಾಸ್ತ್ರದಲ್ಲಿ ಕಡ್ಡಾಯಗೊಳಿಸಿದರು. ಇಲ್ಲವಾದರೆ ಭೌತಿಕಾಸಕ್ತಿಯಲ್ಲಿ ಜನರು ಮುಳುಗಿಹೋಗುತ್ತಾರೆ.

329. ಇಲ್ಲಿ ನೌಕೆ ಅಂದರೆ ಭೌತಿಕವಾದ ಸಂಪಾದನೆ ಮತ್ತು ಸಂಪತ್ತು ಎಂದು ತಾತ್ಪರ್ಯ.

330. ಭೌತಿಕ ಆಸಕ್ತಿ ಮತ್ತು ಆಕಾಂಕ್ಷೆಯಲ್ಲಿ ಮುಳುಗಿಹೋಗಿ ಆಧ್ಯಾತ್ಮಿಕ ಅವನತಿಯುಂಟಾಗುವುದೆಂದು ತಾತ್ಪರ್ಯ.

**82.** 'ಆದ್ದರಿಂದ ಅವನ ಬದಲಿಗೆ ಪರಿಶುದ್ಧತೆಯಲ್ಲಿ ಅವನಿಗಿಂತ ಉತ್ತಮನಾದ ಮತ್ತು ಕರುಣೆದೋರುವುದರಲ್ಲಿ ಅವನಿಗಿಂತ ಮಿಗಿಲಾದ ಒಬ್ಬ ಮಗನನ್ನು ಅವರ ಪ್ರಭು ಅವರಿಗೆ ದಯಪಾಲಿಸಲಿ ಎಂದು ನಾವು ಬಯಸಿದೆವು.

فَاَرَدْنَاۤ اَنْ يُّبْدِلَهُمَا رَبُّهُمَا خَيْرًا مِّنْهُ زَكٰوةً وَّاَقْرَبَ رُحْمًا ﴿۸۲﴾

**83.** 'ಇನ್ನು ಆ ಗೋಡೆಯ ವಿಚಾರ - ಅದು ಆ ಪಟ್ಟಣದ ಎರಡು ಅನಾಥ ಬಾಲಕರದ್ದಾಗಿತ್ತು. ಅದರ ಅಡಿಯಲ್ಲಿ ಅವರಿಗೋಸ್ಕರವಿರುವ ಒಂದು ನಿಧಿ ಇತ್ತು. ಅವರ ಪಿತ ಓರ್ವ ಸಜ್ಜನ ಆಗಿದ್ದನು. ಅವರಿಬ್ಬರೂ ಪ್ರೌಢಾವಸ್ಥೆಗೆ ತಲಪಬೇಕೆಂದೂ ಆ ಮೇಲೆ ಅದು ಹೊರತೆಗೆಯಲ್ಪಡಬೇಕೆಂದೂ ನಿಮ್ಮ ಪ್ರಭು ಬಯಸಿದನು.[331] ಅದು ನಿಮ್ಮ ಪ್ರಭುವಿನ ಕೃಪೆಯಾಗಿತ್ತು. ಇವನ್ನೆಲ್ಲ ನಾನು ನನ್ನ ಇಚ್ಛಾನುಸಾರ ಮಾಡಿದ್ದಲ್ಲ. ನಿಮಗೆ ಸೈರಿಸಿಕೊಳ್ಳಲಾಗದ ವಿಚಾರಗಳ ವಿವರಣೆ ಇದಾಗಿದೆ.'

وَاَمَّا الْجِدَارُ فَكَانَ لِغُلٰمَيْنِ يَتِيْمَيْنِ فِى الْمَدِيْنَةِ وَكَانَ تَحْتَهٗ كَنْزٌ لَّهُمَا وَكَانَ اَبُوْهُمَا صَالِحًا ۚ فَاَرَادَ رَبُّكَ اَنْ يَّبْلُغَاۤ اَشُدَّهُمَا وَيَسْتَخْرِجَا كَنْزَهُمَا ۖ رَحْمَةً مِّنْ رَّبِّكَ ۚ وَمَا فَعَلْتُهٗ عَنْ اَمْرِىْ ؕ ذٰلِكَ تَاْوِيْلُ مَا لَمْ تَسْطِعْ عَّلَيْهِ صَبْرًا ﴿۸۳﴾

**84.** ಅವರು ನಿನ್ನೊಡನೆ 'ದುಲ್‌ಖರ್‌ನೈನ್'ನ[331A] ಕುರಿತು ಕೇಳುತ್ತಾರೆ. ಹೇಳು: 'ಆತನ ಬಗ್ಗೆ ಕೆಲವು ಸಂಗತಿಗಳನ್ನು ನಾನು ನಿಮಗೆ ವಿವರಿಸಿಕೊಡುವೆನು.'

وَيَسْـَٔلُوْنَكَ عَنْ ذِى الْقَرْنَيْنِ ؕ قُلْ سَاَتْلُوْا عَلَيْكُمْ مِّنْهُ ذِكْرًا ﴿۸۴﴾

**85.** ನಾವು ಆತನಿಗೆ ಭೂಮಿಯಲ್ಲಿ ಆಧಿಪತ್ಯ ನೀಡಿದ್ದೆವು. ಎಲ್ಲವನ್ನೂ ಗಳಿಸುವ ಮಾರ್ಗಗಳನ್ನು ಸಹ ನಾವು ಆತನಿಗೆ ದಯಪಾಲಿಸಿದ್ದೆವು.

اِنَّا مَكَّنَّا لَهٗ فِى الْاَرْضِ وَاٰتَيْنٰهُ مِنْ كُلِّ شَىْءٍ سَبَبًا ﴿۸۵﴾

331. ಗೋಡೆ ಎಂಬುದರ ತಾತ್ಪರ್ಯ ಯಹೂದಿಯರ ಮತ್ತು ಕ್ರೈಸ್ತರ ಆಧ್ಯಾತ್ಮಿಕ ನಾಯಕರುಗಳಾದ ಪ್ರವಾದಿ ಮೂಸಾ (ಅ) ಮತ್ತು ಪ್ರವಾದಿ ಈಸಾ (ಅ)ರಿಗೆ ದೊರೆತ ಸಂದೇಶಗಳಾಗಿವೆ. ಅವರ ಪಿತ ಎಂಬುದರ ತಾತ್ಪರ್ಯ ಪ್ರವಾದಿ ಹಝ್ರತ್ ಇಬ್‌ರಾಹೀಂ (ಅ). ನಿಧಿ ಎಂಬುದರ ತಾತ್ಪರ್ಯ ಹಝ್ರತ್ ಮೂಸಾ ಮತ್ತು ಹಝ್ರತ್ ಈಸಾರ ಸಮುದಾಯಗಳು ಸಂರಕ್ಷಿಸಿಟ್ಟಿರುವ ಜ್ಞಾನ ಭಂಡಾರ. ಅವರ ಅಸಡ್ಡೆ ಕಾರಣದಿಂದ ಆ ನಿಕ್ಷೇಪ ನಷ್ಟವಾಗುವುದೆಂಬ ಶಂಕೆಯಿತ್ತು. ಆಗ ಹಝ್ರತ್ ಮುಹಮ್ಮದ್ ಪೈಗಂಬರ್ (ಸ) ಅದನ್ನು ಸಂರಕ್ಷಿಸಿದರು - ಯಹೂದಿಯರು ಮತ್ತು ಕ್ರೈಸ್ತರು ಪ್ರಜ್ಞಾವಂತರಾಗುವಾಗ ಆ ಜ್ಞಾನದ ಪ್ರಯೋಜನವನ್ನು ಪಡೆದು ಪೈಗಂಬರರನ್ನು ನಂಬಲಿಕ್ಕೋಸ್ಕರ. ಇದೊಂದು ಮಹತ್ತರ ಭವಿಷ್ಯವಾಣಿಯಾಗಿದೆ.

331A. ದುಲ್‌ಖರ್‌ನೈನ್ ಪರ್ಶಿಯಾ ಮತ್ತು ಮೇದ್ಯ ರಾಜ್ಯಗಳ ಚಕ್ರವರ್ತಿಯಾಗಿದ್ದ ಸೈರಸ್ (Cyrus). ಎರಡು ಕೊಂಬುಳ್ಳವ ಎಂದು ಇದರ ಶಬ್ದಾರ್ಥ. ದಾನಿಯೇಲ್ ಪ್ರವಾದಿಯ ಒಂದು ಸ್ವಪ್ನದರ್ಶನದ ಪ್ರಕಾರ ಆ ಹೆಸರಿನಿಂದ (ದುಲ್‌ಖರನೈನ್) ಅವರು ಕರೆಯಲ್ಪಡುತ್ತಾರೆ. (ನೋಡಿರಿ ಬೈಬಲ್-ದಾನಿಯೇಲ್ 8:20)





**86.** ಹಾಗೆ ಆತನು ಒಂದು ನಿರ್ದಿಷ್ಟ ಪಥದಲ್ಲಿ ಸಂಚರಿಸಿದನು.

فَاَتْبَعَ سَبَبًا ﴿۸۶﴾

**87.** ಆತನು ಸೂರ್ಯನು ಅಸ್ತಮಿಸುವ ಸ್ಥಳಕ್ಕೆ ತಲಪಿದಾಗ ಅದು ಕಪ್ಪು ನೀರಿನ ಜಲಾಶಯವೊಂದರಲ್ಲಿ[332] ಮುಳುಗುವುದನ್ನು ಆತನು ಕಂಡನು. ಅದರ ಸಮೀಪದಲ್ಲೇ ಒಂದು ಜನತೆಯನ್ನು ಸಹ ಆತನು ಕಂಡನು. ನಾವು ಹೇಳಿದೆವು: 'ಎಲೈ ದುಲ್‌ಖರ್‌ನೈನ್, ಒಂದೋ ನೀನು ಅವರನ್ನು ಶಿಕ್ಷಿಸು ಅಥವಾ ಅವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸು.'

حَتّٰۤى اِذَا بَلَغَ مَغْرِبَ الشَّمْسِ وَجَدَهَا تَغْرُبُ فِىْ عَيْنٍ حَمِئَةٍ وَّوَجَدَ عِنْدَهَا قَوْمًا ؕ قُلْنَا يٰذَا الْقَرْنَيْنِ اِمَّاۤ اَنْ تُعَذِّبَ وَاِمَّاۤ اَنْ تَتَّخِذَ فِيْهِمْ حُسْنًا ﴿۸۷﴾

**88.** ಆತನು ಹೇಳಿದನು: 'ಯಾರು ಅನ್ಯಾಯವಾಗಿ ವರ್ತಿಸುತ್ತಾರೋ ಖಂಡಿತವಾಗಿಯೂ ಅವರನ್ನು ನಾವು ಶಿಕ್ಷಿಸುವೆವು. ಅನಂತರ ಅವನು ತನ್ನ ಪ್ರಭುವಿನ ಕಡೆಗೆ ಮರಳಿಸಲ್ಪಡುವನು. ಆಗ ಅವನು (ಅಲ್ಲಾಹನು) ಅವನನ್ನು ಕಠೋರವಾಗಿ ಶಿಕ್ಷಿಸುವನು.

قَالَ اَمَّا مَنْ ظَلَمَ فَسَوْفَ نُعَذِّبُهٗ ثُمَّ يُرَدُّ اِلٰى رَبِّهٖ فَيُعَذِّبُهٗ عَذَابًا نُّكْرًا ﴿۸۸﴾

**89.** ಯಾರು ವಿಶ್ವಾಸ ಹೊಂದಿ ಸತ್ಕರ್ಮಗೈಯ್ಯುತ್ತಾನೋ, ಅವನಿಗೆ (ಅಲ್ಲಾಹನಿಂದ) ಉತ್ತಮ ಪ್ರತಿಫಲವಿದೆ. ನಮ್ಮ ಆಜ್ಞೆಯಲ್ಲಿ ಸುಲಭವಾದುದನ್ನು ನಾವು ಅವನೊಡನೆ ಹೇಳುವೆವು.

وَاَمَّا مَنْ اٰمَنَ وَعَمِلَ صَالِحًا فَلَهٗ جَزَآءَ ۨالْحُسْنٰى ۚ وَسَنَقُوْلُ لَهٗ مِنْ اَمْرِنَا يُسْرًا ﴿۸۹﴾

**90.** ಅನಂತರ ಆತನು (ದುಲ್‌ಖರ್‌ನೈನ್) ಬೇರೊಂದು ಮಾರ್ಗವನ್ನು ಹಿಡಿದು ಹೋದನು.

ثُمَّ اَتْبَعَ سَبَبًا ﴿۹۰﴾

**91.** ಹಾಗೆ ಆತನು ಸೂರ್ಯೋದಯವಾಗುವ ಸ್ಥಳಕ್ಕೆ ತಲಪಿದಾಗ, ಒಂದು ಜನತೆಯ ಮೇಲೆ ಅದು ಉದಯಿಸುವುದನ್ನು ಕಂಡನು. ಅದರಿಂದ ತಡೆಯುವ ಯಾವ ಪರದೆಯನ್ನೂ ನಾವು ಅವರಿಗೆ ಮಾಡಿಲ್ಲ.

حَتّٰۤى اِذَا بَلَغَ مَطْلِعَ الشَّمْسِ وَجَدَهَا تَطْلُعُ عَلٰى قَوْمٍ لَّمْ نَجْعَلْ لَّهُمْ مِّنْ دُوْنِهَا سِتْرًا ﴿۹۱﴾

**92.** ಅದು ಹಾಗೆಯೇ. ಆತನ ಬಳಿ ಇರುವುದರ ಬಗ್ಗೆ ನಮಗೆ ಪರಿಪೂರ್ಣವಾದ ಜ್ಞಾನವಿತ್ತು.

كَذٰلِكَ ؕ وَقَدْ اَحَطْنَا بِمَا لَدَيْهِ خُبْرًا ﴿۹۲﴾

332. ಕಪ್ಪು ಸಮುದ್ರ.

ثُمَّ أَتْبَعَ سَبَبًا ﴿٩٢﴾

**93.** ಅನಂತರ ಆತನು ಬೇರೊಂದು ದಾರಿ ಹಿಡಿದು ಹೋದನು.

حَتَّىٰ إِذَا بَلَغَ بَيْنَ السَّدَّيْنِ وَجَدَ مِن دُونِهِمَا قَوْمًا لَّا يَكَادُونَ يَفْقَهُونَ قَوْلًا ﴿٩٣﴾

**94.** ಹಾಗೆ ಆತನು ಎರಡು ಪರ್ವತಗಳ ಮಧ್ಯದಲ್ಲಿರುವ ಸ್ಥಳವನ್ನು ತಲಪಿದಾಗ ಅದರಾಚೆ ಒಂದು ಜನತೆಯನ್ನು ಕಂಡನು. ಅವರಿಗೆ (ಆತನ) ಮಾತುಗಳನ್ನು ಬಹಳ ಕಷ್ಟದಿಂದಲ್ಲದೆ ತಿಳಿದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

قَالُوا يَا ذَا الْقَرْنَيْنِ إِنَّ يَأْجُوجَ وَمَأْجُوجَ مُفْسِدُونَ فِي الْأَرْضِ فَهَلْ نَجْعَلُ لَكَ خَرْجًا عَلَىٰ أَن تَجْعَلَ بَيْنَنَا وَبَيْنَهُمْ سَدًّا ﴿٩٤﴾

**95.** ಅವರು ಹೇಳಿದರು: 'ಎಲೈ ದುಲ್‌ಖರ್‌ನೈನ್, ಯಅ್‌ಜೂಜ್ ಮತ್ತು ಮಅ್‌ಜೂಜ್[333] ಊರಿನಲ್ಲಿ ಗಲಭೆ ಹುಟ್ಟಿಸುತ್ತಿದ್ದಾರೆ. ನಮಗೂ ಅವರಿಗೂ ಮಧ್ಯೆ ನೀವೊಂದು ತಡೆ ಗೋಡೆಯನ್ನು ನಿರ್ಮಿಸುವಿರೆಂಬ ಶರ್ತದಲ್ಲಿ ನಾವು ನಿಮಗೆ ಕೊಡಲು ಕರ ನಿಶ್ಚರ್ಷ ಮಾಡಬಹುದೇ?'

قَالَ مَا مَكَّنِّي فِيهِ رَبِّي خَيْرٌ فَأَعِينُونِي بِقُوَّةٍ أَجْعَلْ بَيْنَكُمْ وَبَيْنَهُمْ رَدْمًا ﴿٩٥﴾

**96.** ಆತನು ಹೇಳಿದನು: 'ನನ್ನ ಪ್ರಭು ನನಗೆ ಮಿಗಿಲಾದ ಶಕ್ತಿ ಸಾಮರ್ಥ್ಯಗಳನ್ನು ದಯಪಾಲಿಸಿದ್ದಾನೆ. ಆದರೆ ನೀವು ನನಗೆ ಜನಶಕ್ತಿಯ ಸಹಾಯ ನೀಡಿರಿ. ನಿಮಗೂ ಅವರಿಗೂ ಮಧ್ಯೆ ನಾನು ಗೋಡೆ ನಿರ್ಮಿಸುವೆನು.

آتُونِي زُبَرَ الْحَدِيدِ ۖ حَتَّىٰ إِذَا سَاوَىٰ بَيْنَ الصَّدَفَيْنِ قَالَ انفُخُوا ۖ حَتَّىٰ إِذَا جَعَلَهُ نَارًا قَالَ آتُونِي أُفْرِغْ عَلَيْهِ قِطْرًا ﴿٩٦﴾

**97.** 'ನನಗೆ ಕಬ್ಬಿಣದ ತುಂಡುಗಳನ್ನು ತಂದು ಕೊಡಿರಿ.' ಹಾಗೆ ಎರಡು ಪರ್ವತಗಳ ಮಧ್ಯದ ಎಡೆಯನ್ನು ಸಮತಟ್ಟು ಮಾಡಿ ಆತನು ಹೇಳಿದನು: 'ಇನ್ನು ನೀವು ಬೆಂಕಿ ಉರಿಸಿರಿ.' ಹಾಗೆ ಆ ಗೋಡೆ ಕೆಂಪು ಕೆಂಡದಂತೆ ಆದಾಗ ಆತನು ಹೇಳಿದನು: 'ಕರಗಿಸಿದ ತಾಮ್ರವನ್ನು ತನ್ನಿರಿ; ಅದನ್ನು ನಾನು ಅದರ ಮೇಲೆ ಹೊಯ್ಯುವೆನು.'

333. ಪ್ರವಾದಿ ನೂಹ್ (ಅಲೈಹಿಸ್ಸಲಾಂ)ರ ಮಗ 'ಯಾಫಿಸ್'ನ ಇಬ್ಬರು ಪುತ್ರರು ಯಅ್‌ಜೂಜ್ ಮತ್ತು ಮಅ್‌ಜೂಜ್. ಅವರ ಸಂತತಿಗೋತ್ರಗಳು ಅನಂತರ ಈ ಪಿತಾಮಹರುಗಳ ಹೆಸರಿನಲ್ಲಿ ಕರೆಯಲ್ಪಟ್ಟರು. ಬೈಬಲಿನ ಯೆಹೆಜ್ಕೇಲ 38ನೇ ಅಧ್ಯಾಯದಲ್ಲಿ ಅವರ ಬಗ್ಗೆ ವಿವರಣೆಯಿದೆ. ಬೈಬಲ್ ಪ್ರಕಾರ ಅವರ ವಾಸಸ್ಥಳ ರೋಷ್, ಮೆಷೆಕ್ ಮತ್ತು ತೂಬಲ್ (ರಶ್ಯಾ, ಮೋಸ್ಕೋ, ತುಬಾಲಕ್ಸ್) ಹಾಗೂ ಕೆಲವು ಪಾಶ್ಚಾತ್ಯ ಕ್ರೈಸ್ತ ರಾಷ್ಟ್ರಗಳು ಎಂದು ತಿಳಿದುಬರುತ್ತದೆ. ಅವರು ಆಗಾಗ ಗಡಿದಾಟಿ ಬಂದು ಪರ್ಶಿಯಾವನ್ನು ಆಕ್ರಮಿಸುತ್ತಿದ್ದರು. ಒಂದು ಕಾಲದಲ್ಲಿ ಅವರು ಪರ್ಶಿಯಾವನ್ನು ಅಧೀನಪಡಿಸಿದ್ದರೆಂದು ಸಹ ಚರಿತ್ರೆಯಲ್ಲಿ ಉಲ್ಲೇಖಿತವಾಗಿದೆ. ಅವರ ಆಕ್ರಮಣವನ್ನು ತಡೆಯಲಿಕ್ಕಾಗಿ ಮಾರ್ಗಮಧ್ಯೆಯಲ್ಲಿರುವ ಪರ್ವತಗಳ ಎಡೆಯಲ್ಲಿ ದರ್‌ಬಂದ್ ಸಮೀಪ ದುಲ್‌ಖರ್‌ನೈನ್ (ಸೈರಸ್ ರಾಜ) ಒಂದು ಮಹಾಗೋಡೆಯನ್ನು ನಿರ್ಮಿಸಿದ್ದನು.





فَمَا اسْطَاعُوا أَن يَظْهَرُوهُ وَمَا اسْتَطَاعُوا لَهُ نَقْبًا ﴿٩٧﴾

**98.** ಹಾಗೆ ಅವರಿಗೆ (ಯಅ್‌ಜೂಜ್, ಮಅ್‌ಜೂಜ್‌ರಿಗೆ) ಅದರ ಮೇಲೆ ಹತ್ತಲಿಕ್ಕಾಗಲಿ ಅದನ್ನು ಅಗೆದು ದಾಟಲಿಕ್ಕಾಗಲಿ ಸಾಧ್ಯವಾಗಲಿಲ್ಲ.

قَالَ هَٰذَا رَحْمَةٌ مِّن رَّبِّي ۖ فَإِذَا جَاءَ وَعْدُ رَبِّي جَعَلَهُ دَكَّاءَ ۖ وَكَانَ وَعْدُ رَبِّي حَقًّا ﴿٩٨﴾

**99.** ಆತನು ಹೇಳಿದನು: 'ಇದು ನನ್ನ ಪ್ರಭುವಿನ ಕೃಪೆಯಾಗಿದೆ. ಆದರೆ ನನ್ನ ಪ್ರಭುವಿನ ವಾಗ್ದಾನ ಈಡೇರುವ ಕಾಲ ಬಂದರೆ ಅವನು ಅದನ್ನು ಛಿದ್ರ ಛಿದ್ರಗೊಳಿಸುವನು. ನನ್ನ ಪ್ರಭುವಿನ ವಾಗ್ದಾನ ಸತ್ಯವೇ ಆಗಿದೆ.'

وَتَرَكْنَا بَعْضَهُمْ يَوْمَئِذٍ يَمُوجُ فِي بَعْضٍ ۖ وَنُفِخَ فِي الصُّورِ فَجَمَعْنَاهُمْ جَمْعًا ﴿٩٩﴾

**100.** ಆ ದಿನದಂದು ಅವರು ಪರಸ್ಪರ ಹೊಯ್ದಾಡಲು ನಾವು ಬಿಡುವೆವು. ಕಹಳೆ ಊದಲ್ಪಡುವುದು. ಆ ಮೇಲೆ ನಾವು ಅವರನ್ನೆಲ್ಲ ಒಂದು ಗೂಡಿಸುವೆವು.

وَعَرَضْنَا جَهَنَّمَ يَوْمَئِذٍ لِّلْكَافِرِينَ عَرْضًا ﴿١٠٠﴾

**101.** ಆ ದಿನದಂದು ನಾವು ಅವಿಶ್ವಾಸಿಗಳ ಮುಂದೆ ನರಕವನ್ನು ತಂದಿಡುವೆವು.

الَّذِينَ كَانَتْ أَعْيُنُهُمْ فِي غِطَاءٍ عَن ذِكْرِي وَكَانُوا لَا يَسْتَطِيعُونَ سَمْعًا ﴿١٠١﴾

**102.** ಅವರ ಕಣ್ಣುಗಳು ನನ್ನ ಮುನ್ನೆಚ್ಚರಿಕೆಯನ್ನು ಗಮನಿಸದೆ ಪರದೆಯೊಳಗಿದ್ದವು. ಅವರು ಆಲಿಸಲಿಕ್ಕೂ ಅಸಮರ್ಥರಾಗಿದ್ದರು.

أَفَحَسِبَ الَّذِينَ كَفَرُوا أَن يَتَّخِذُوا عِبَادِي مِن دُونِي أَوْلِيَاءَ ۚ إِنَّا أَعْتَدْنَا جَهَنَّمَ لِلْكَافِرِينَ نُزُلًا ﴿١٠٢﴾

**103.** ನನ್ನ ಬದಲಿಗೆ ನನ್ನ ದಾಸರನ್ನು ರಕ್ಷಕರನ್ನಾಗಿ ಮಾಡಿಕೊಳ್ಳಬಹುದೆಂದು ಅವಿಶ್ವಾಸಿಗಳು ಭಾವಿಸುತ್ತಾರೇನು? ದಿಟವಾಗಿಯೂ ಅವಿಶ್ವಾಸಿಗಳ ಸತ್ಕಾರಕ್ಕೋಸ್ಕರ ನಾವು ನರಕವನ್ನು ಸಿದ್ಧಪಡಿಸಿದ್ದೇವೆ.

قُلْ هَلْ نُنَبِّئُكُم بِالْأَخْسَرِينَ أَعْمَالًا ﴿١٠٣﴾

**104.** ಹೇಳು: 'ತಮ್ಮ ಕೃತ್ಯಗಳಲ್ಲಿ ಅತ್ಯಂತ ಹಾನಿಗೊಳಗಾದವರು ಯಾರೆಂದು ನಾವು ನಿಮಗೆ ತಿಳಿಸಿಕೊಡಲೇ?'

الَّذِينَ ضَلَّ سَعْيُهُمْ فِي الْحَيَاةِ الدُّنْيَا وَهُمْ يَحْسَبُونَ أَنَّهُمْ يُحْسِنُونَ صُنْعًا ﴿١٠٤﴾

**105.** 'ಅವರೆಂದರೆ, ಇಹಲೋಕ ಜೀವನದ ಸಾಧನೆಯಲ್ಲಿ ತಮ್ಮ ಪರಿಶ್ರಮಗಳನ್ನು ವ್ಯರ್ಥಗೊಳಿಸಿದವರಾಗಿದ್ದಾರೆ. ತಾವು ಸತ್ಕರ್ಮ ಮಾಡುತ್ತಿರುವುದಾಗಿ ಅವರು ಭಾವಿಸುತ್ತಾರೆ.'

**106.** ಅವರು ತಮ್ಮ ಪ್ರಭುವಿನ ದೃಷ್ಟಾಂತಗಳನ್ನೂ ಅವನನ್ನು ಭೇಟಿಯಾಗುವುದನ್ನೂ ಅಲ್ಲಗಳೆದವರಾಗಿದ್ದಾರೆ. ಅವರ ಕೃತ್ಯಗಳೆಲ್ಲ ವ್ಯರ್ಥ. ಪುನರುತ್ಥಾನ ದಿನದಂದು ನಾವು ಅವರಿಗೆ ಯಾವ ಬೆಲೆಯನ್ನೂ ಕೊಡಲಾರೆವು.

أُولَٰئِكَ الَّذِينَ كَفَرُوا بِآيَاتِ رَبِّهِمْ
وَلِقَائِهِ فَحَبِطَتْ أَعْمَالُهُمْ فَلَا نُقِيمُ
لَهُمْ يَوْمَ الْقِيَامَةِ وَزْنًا ﴿١٠٦﴾

**107.** ನರಕ - ಅದು ಅವರ ಪ್ರತಿಫಲವಾಗಿದೆ. ಏಕೆಂದರೆ ಅವರು ನಂಬಲಿಲ್ಲ; ನನ್ನ ದೃಷ್ಟಾಂತಗಳನ್ನೂ ಸಂದೇಶವಾಹಕರನ್ನೂ ಅವರು ಅಪಹಾಸ್ಯ ಮಾಡಿದರು.

ذَٰلِكَ جَزَاؤُهُمْ جَهَنَّمُ بِمَا كَفَرُوا وَ
اتَّخَذُوا آيَاتِي وَرُسُلِي هُزُوًا ﴿١٠٧﴾

**108.** ಸತ್ಯವಿಶ್ವಾಸಿಗಳಾಗಿದ್ದುಕೊಂಡು ಸತ್ಕರ್ಮಗಳನ್ನು ಮಾಡುವವರಿಗೆ ಖಂಡಿತವಾಗಿಯೂ ಸ್ವರ್ಗದ ತೋಟಗಳು ಸತ್ಕಾರವಾಗಿ ದೊರಕುವುವು.

إِنَّ الَّذِينَ آمَنُوا وَعَمِلُوا الصَّالِحَاتِ
كَانَتْ لَهُمْ جَنَّاتُ الْفِرْدَوْسِ نُزُلًا ﴿١٠٨﴾

**109.** ಅಲ್ಲೇ ಅವರು ಶಾಶ್ವತವಾಗಿ ವಾಸಿಸುವರು. ಅಲ್ಲಿಂದ ಬೇರ್ಪಡಲು ಅವರು ಬಯಸಲಾರರು.

خَالِدِينَ فِيهَا لَا يَبْغُونَ عَنْهَا حِوَلًا ﴿١٠٩﴾

**110.** ಹೇಳು: 'ನನ್ನ ಪ್ರಭುವಿನ ವಚನಗಳಿಗೋಸ್ಕರ ಸಮುದ್ರವೇ ಶಾಯಿಯಾದರೆ ಸಹ, ನನ್ನ ಪ್ರಭುವಿನ ವಚನಗಳು ಕೊನೆಗೊಳ್ಳುವುದಕ್ಕಿಂತ ಮುಂಚೆ ಸಮುದ್ರ ಬತ್ತಿಹೋಗುವುದು - ಅದಕ್ಕೆ ಸಮಾನವಾದ ಬೇರೊಂದನ್ನು ನೆರವಿಗೆ ತಂದರೆ ಕೂಡ.'

قُلْ لَوْ كَانَ الْبَحْرُ مِدَادًا لِكَلِمَاتِ
رَبِّي لَنَفِدَ الْبَحْرُ قَبْلَ أَنْ تَنْفَدَ كَلِمَاتُ
رَبِّي وَلَوْ جِئْنَا بِمِثْلِهِ مَدَدًا ﴿١١٠﴾

**111.** ಹೇಳು: 'ನಾನು ನಿಮ್ಮಂತಹ ಒಬ್ಬ ಮನುಷ್ಯ ಮಾತ್ರ. ಆದರೆ ನಿಮ್ಮ ಪ್ರಭು ಒಬ್ಬನೇ ಒಬ್ಬನೆಂದು ನನಗೆ ದಿವ್ಯ ಸಂದೇಶ ನೀಡಲ್ಪಟ್ಟಿದೆ. ಆದ್ದರಿಂದ ಯಾರು ತನ್ನ ಪ್ರಭುವನ್ನು ಭೇಟಿಯಾಗಲು ಇಚ್ಛಿಸುತ್ತಾನೋ, ಅವನು ಸತ್ಕರ್ಮ ಮಾಡಲಿ ಮತ್ತು ತನ್ನ ಪ್ರಭುವನ್ನು ಆರಾಧಿಸುವ ವಿಚಾರದಲ್ಲಿ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರಲಿ.'

قُلْ إِنَّمَا أَنَا بَشَرٌ مِثْلُكُمْ يُوحَىٰ إِلَيَّ أَنَّمَا
إِلَٰهُكُمْ إِلَٰهٌ وَاحِدٌ ۖ فَمَنْ كَانَ يَرْجُو
لِقَاءَ رَبِّهِ فَلْيَعْمَلْ عَمَلًا صَالِحًا وَ
لَا يُشْرِكْ بِعِبَادَةِ رَبِّهِ أَحَدًا ﴿١١١﴾

سُورَةُ مَرْيَمَ مَكِّيَّةٌ وَهِيَ مَعَ الْبَسْمَلَةِ تِسْعٌ وَتِسْعُونَ آيَةً وَسِتَّةُ رُكُوعَاتٍ

# 19. ಮರ್ಯಮ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 99 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿۱﴾

**2. ಕಾಫ್ ಹಾ ಯಾ ಐನ್ ಸ್ವಾದ್.**[334]

كٓهٰيٰعٓصٓ ﴿۲﴾

**3. ಇದು ನಿನ್ನ ಪ್ರಭು ತನ್ನ ದಾಸ ಝಕರಿಯಾರಿಗೆ ತೋರಿಸಿದ ಕೃಪೆಯ ವೃತ್ತಾಂತವಾಗಿದೆ.**

ذِكْرُ رَحْمَتِ رَبِّكَ عَبْدَهٗ زَكَرِيَّا ﴿۳﴾

**4. ಅವರು ತನ್ನ ಪ್ರಭುವನ್ನು ಮೆಲು ಧ್ವನಿಯಲ್ಲಿ ಕರೆಯುತ್ತಾ,**

اِذْ نَادٰى رَبَّهٗ نِدَآءً خَفِيًّا ﴿۴﴾

**5. ಹೇಳಿದರು: 'ನನ್ನ ಪ್ರಭೂ, ನನ್ನ ಅಸ್ಥಿಗಳು ಬಲಗುಂದಿವೆ. ನೆರೆತ ಕೂದಲಿನಿಂದ ತಲೆ ಹೊಳೆಯುತ್ತದೆ. ಆದರೆ ನನ್ನ ಪ್ರಭೂ, ನಾನು ನಿನ್ನೊಡನೆ ಪ್ರಾರ್ಥಿಸಿ ಒಮ್ಮೆಯೂ ಹತಭಾಗ್ಯನಾಗಲಿಲ್ಲ.**

قَالَ رَبِّ اِنِّيْ وَهَنَ الْعَظْمُ مِنِّيْ وَاشْتَعَلَ الرَّاْسُ شَيْبًا وَّلَمْ اَكُنْۢ بِدُعَآئِكَ رَبِّ شَقِيًّا ﴿۵﴾

**6. 'ನನ್ನ ಅನಂತರ ನನ್ನ ಸಂಬಂಧಿಕರ ಬಗ್ಗೆ ನಾನು ಭಯಪಡುತ್ತೇನೆ. ನನ್ನ ಪತ್ನಿಯಾದರೋ ಬಂಜೆ. ಆದ್ದರಿಂದ ನೀನು ನನಗೆ ಒಬ್ಬ ವಾರೀಸುದಾರನನ್ನು ನಿನ್ನಿಂದ ದಯಪಾಲಿಸು.**

وَاِنِّيْ خِفْتُ الْمَوَالِيَ مِنْ وَّرَآءِيْ وَكَانَتِ امْرَاَتِيْ عَاقِرًا فَهَبْ لِيْ مِنْ لَّدُنْكَ وَلِيًّا ﴿۶﴾

**7. 'ಅವನು ನನ್ನ ಉತ್ತರಾಧಿಕಾರಿಯಾಗಿರಲಿ. ಯಅ್‌ಖೂಬ್ ಮನೆತನಕ್ಕೂ ಉತ್ತರಾಧಿಕಾರಿಯಾಗಿರಲಿ. ನನ್ನ ಪ್ರಭೂ, ನೀನು ಅವನನ್ನು ನಿನ್ನ ಪ್ರೀತಿಗೆ ಪಾತ್ರನನ್ನಾಗಿ ಮಾಡು.'**

يَّرِثُنِيْ وَيَرِثُ مِنْ اٰلِ يَعْقُوْبَ ۖ وَاجْعَلْهُ رَبِّ رَضِيًّا ﴿۷﴾

334. ಕಾಫ್ = ಕಾಫಿನ್ - ಸಾಕಾಗುವವನು. ಹಾ = ಹಾದಿನ್ - ಮಾರ್ಗದರ್ಶಕ. ಯಾ = ಓ (ಸಂಬೋಧನೆ). ಐನ್ = ಅಲಿಮ್ - ಜ್ಞಾನವುಳ್ಳವನು. ಸ್ವಾದ್ = ಸಾದಿಖ್ - ಸತ್ಯವಂತ. ಓ ಸರ್ವಜ್ಞನೂ ಸತ್ಯಸ್ವರೂಪನೂ ಆದ ಅಲ್ಲಾಹನೇ, ನೀನು ಎಲ್ಲರಿಗೂ ಸಾಕಾಗುವವನೂ ಮಾರ್ಗದರ್ಶಕನೂ ಆಗಿರುವೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8.** (ಅಲ್ಲಾಹನು ಹೇಳಿದನು:) **'ಎಲ್ಯೆ ಝಕರಿಯ್ಯಾ, ಯಹ್ಯಾ ಎಂಬ ಹೆಸರಿನ ಓರ್ವ ಪುತ್ರನ ಕುರಿತು ನಿನಗೆ ನಾವು ಶುಭವಾರ್ತೆಯನ್ನು ಅರುಹುತ್ತೇವೆ. ಈ ಮುಂಚೆ ನಾವು ಯಾರನ್ನೂ ಆ ಹೆಸರಿನ ಸಮನಾಗಿ ಮಾಡಲಿಲ್ಲ.'**

يٰزَكَرِيَّآ اِنَّا نُبَشِّرُكَ بِغُلٰمِ ِۨاسْمُهٗ يَحْيٰى ۙ لَمْ نَجْعَلْ لَّهٗ مِنْ قَبْلُ سَمِيًّا ﴿۸﴾

**9. ಅವರು ಹೇಳಿದರು: 'ನನ್ನ ಪ್ರಭೂ, ನನ್ನ ಪತ್ನಿ ಬಂಜೆಯೂ ನಾನು ಬಲು ವೃದ್ಧನೂ ಆಗಿರುವಾಗ ನಾನು ಹೇಗೆ ಒಬ್ಬ ಪುತ್ರನನ್ನು ಪಡೆಯಬಲ್ಲೆ?'**

قَالَ رَبِّ اَنّٰى يَكُوْنُ لِيْ غُلٰمٌ وَّكَانَتِ امْرَاَتِيْ عَاقِرًا وَّقَدْ بَلَغْتُ مِنَ الْكِبَرِ عِتِيًّا ﴿۹﴾

**10. ಅವನು ಹೇಳಿದನು: 'ಅದು ಹಾಗೆಯೇ. ನಿನ್ನ ಪ್ರಭು ಹೇಳುತ್ತಾನೆ: ಅದು ನನಗೆ ಸುಲಭ ಕಾರ್ಯವಾಗಿದೆ. ನೀನು ಏನೂ ಆಗಿಲ್ಲದಿದ್ದಾಗ, ಇದಕ್ಕಿಂತ ಮುಂಚೆ ನಾನು ನಿನ್ನನ್ನು ಸೃಷ್ಟಿಸಿದ್ದೇನಲ್ಲವೇ?'**

قَالَ كَذٰلِكَ ۚ قَالَ رَبُّكَ هُوَ عَلَيَّ هَيِّنٌ وَّقَدْ خَلَقْتُكَ مِنْ قَبْلُ وَلَمْ تَكُ شَيْـًٔا ﴿۱۰﴾

**11. ಅವರು ಹೇಳಿದರು: 'ನನ್ನ ಪ್ರಭೂ, ನನಗೆ ಆದೇಶವನ್ನೇನಾದರೂ ನೀಡು.'** ಅಲ್ಲಾಹನು **ಹೇಳಿದನು: 'ನೀನು ಮೂರು** ದಿನ **ರಾತ್ರಿಗಳ ಕಾಲ ಯಾರೊಡನೆಯೂ ಮಾತನಾಡಬಾರದು ಎಂಬುದೇ ನಿನಗಿರುವ ಆದೇಶ.'**

قَالَ رَبِّ اجْعَلْ لِّيْٓ اٰيَةً ۚ قَالَ اٰيَتُكَ اَلَّا تُكَلِّمَ النَّاسَ ثَلٰثَ لَيَالٍ سَوِيًّا ﴿۱۱﴾

**12. ತದನಂತರ ಅವರು ತನ್ನ ಪ್ರಾರ್ಥನಾ ಕೋಣೆಯಿಂದ ಹೊರಗೆ ಬಂದು ತನ್ನ ಜನರೊಡನೆ, ಅವರು ಹಗಲು ಮತ್ತು ರಾತ್ರಿ ಅಲ್ಲಾಹನ ಸ್ತುತಿಸ್ತೋತ್ರ ಮಾಡಬೇಕೆಂದು ಸಂಜ್ಞೆ ಮೂಲಕ ಸೂಚಿಸಿದರು.**

فَخَرَجَ عَلٰى قَوْمِهٖ مِنَ الْمِحْرَابِ فَاَوْحٰٓى اِلَيْهِمْ اَنْ سَبِّحُوْا بُكْرَةً وَّعَشِيًّا ﴿۱۲﴾

**13. 'ಎಲ್ಯೆ ಯಹ್ಯಾ, ನೀನು ಗ್ರಂಥವನ್ನು ಭದ್ರವಾಗಿ ಹಿಡಿದುಕೋ.'** (ಎಂದು ಭವಿಷ್ಯವಾಣಿ ಪ್ರಕಾರ ಜನಿಸಿದ ಪುತ್ರನೊಡನೆ ನಾವು ಹೇಳಿದೆವು). **ಅವರ** (ಯಹ್ಯಾರ) **ಬಾಲ್ಯಕಾಲದಲ್ಲೇ ನಾವು ಅವರಿಗೆ ಜ್ಞಾನವನ್ನು ನೀಡಿದ್ದೆವು.**

يٰيَحْيٰى خُذِ الْكِتٰبَ بِقُوَّةٍ ۚ وَاٰتَيْنٰهُ الْحُكْمَ صَبِيًّا ﴿۱۳﴾

**14. ನಮ್ಮಿಂದ ಕರುಣೆಯನ್ನೂ ಪರಿಶುದ್ಧತೆಯನ್ನೂ ನಾವು ಅವರಿಗೆ ದಯಪಾಲಿಸಿದ್ದೆವು. ಅವರು ದೇವಭಕ್ತರಾಗಿದ್ದರು.**

وَّحَنَانًا مِّنْ لَّدُنَّا وَزَكٰوةً ۚ وَكَانَ تَقِيًّا ﴿۱۴﴾

**15.** ಅವರು ತಮ್ಮ ಮಾತಾಪಿತರೊಂದಿಗೆ ಕರ್ತವ್ಯ ನಿಷ್ಠೆಯಿಂದ ವರ್ತಿಸಿದರು. ಅವರು ಅವಿಧೇಯರನೋ ಧಿಕ್ಕಾರಿಯೋ ಆಗಿರಲಿಲ್ಲ.

وَبَرًّا بِوَالِدَيْهِ وَلَمْ يَكُن جَبَّارًا عَصِيًّا ﴿١٤﴾

**16.** ಅವರ ಜನನ ದಿನವೂ ಮರಣ ದಿನವೂ ಪುನರುತ್ಥಾನ ದಿನವೂ ಅವರಿಗೆ ಶಾಂತಿದಾಯಕ.

وَسَلَامٌ عَلَيْهِ يَوْمَ وُلِدَ وَيَوْمَ يَمُوتُ وَيَوْمَ يُبْعَثُ حَيًّا ﴿١٥﴾

**17.** ಈ ಗ್ರಂಥ ಮೂಲಕ ನೀನು ಮರ್ಯಮ್ ಕುರಿತು ತಿಳಿಸಿಕೊಡು. ಆಕೆ ತನ್ನ ಸಂಬಂಧಿಕರಿಂದ ಅಗಲಿ ಪೂರ್ವ ದಿಕ್ಕಿನ ಒಂದು ಸ್ಥಳಕ್ಕೆ ಹೋದ ಸಂದರ್ಭದಲ್ಲಿ,

وَاذْكُرْ فِي الْكِتَابِ مَرْيَمَ إِذِ انتَبَذَتْ مِنْ أَهْلِهَا مَكَانًا شَرْقِيًّا ﴿١٦﴾

**18.** ಆಕೆ (ತನ್ನ ಮತ್ತು) ಅವರ ಮಧ್ಯೆ ಒಂದು ಮರೆ ಹಾಕಿದಳು. ಆಗ ನಮ್ಮ ದೂತನನ್ನು (ಮಲಕ್) ಆಕೆಯ ಬಳಿಗೆ ಕಳುಹಿಸಿದೆವು. ಅವನು (ಆ ದೂತನು) ಆಕೆಗೆ ಪರಿಪೂರ್ಣ ಮನುಷ್ಯ ರೂಪದಲ್ಲಿ ಕಾಣಿಸಿಕೊಂಡನು.

فَاتَّخَذَتْ مِن دُونِهِمْ حِجَابًا فَأَرْسَلْنَا إِلَيْهَا رُوحَنَا فَتَمَثَّلَ لَهَا بَشَرًا سَوِيًّا ﴿١٧﴾

**19.** ಆಕೆ ಹೇಳಿದಳು: 'ನಾನು ನಿನ್ನ ವಿರುದ್ಧ ಪರಮ ಕಾರುಣ್ಯವಂತನ (ಅಲ್ಲಾಹನ) ಅಭಯವನ್ನು ಬೇಡುತ್ತೇನೆ - ನೀನು ಅವನಿಗೆ ಭಯಪಡುವವನಾಗಿದ್ದರೆ.'

قَالَتْ إِنِّي أَعُوذُ بِالرَّحْمَٰنِ مِنكَ إِن كُنتَ تَقِيًّا ﴿١٨﴾

**20.** ಅವನು ಹೇಳಿದನು: 'ನಾನು ಪರಿಶುದ್ಧನಾದ ಒಬ್ಬ ಪುತ್ರನ ಕುರಿತು ನಿನಗೆ ಸುವಾರ್ತೆಯನ್ನು ತಿಳಿಸಲಿಕ್ಕಾಗಿ ನಿನ್ನ ಪ್ರಭುವಿನಿಂದ ಕಳುಹಿಸಲ್ಪಟ್ಟ ಒಬ್ಬ ದೂತನಾಗಿದ್ದೇನೆ.'

قَالَ إِنَّمَا أَنَا رَسُولُ رَبِّكِ لِأَهَبَ لَكِ غُلَامًا زَكِيًّا ﴿١٩﴾

**21.** ಆಕೆ ಹೇಳಿದಳು: 'ಯಾವ ಪುರುಷನೂ ನನ್ನನ್ನು ಸ್ಪರ್ಶಿಸಲಿಲ್ಲ; ನಾನು ದುಶ್ಶೀಲೆಯೂ ಅಲ್ಲ. ಹಾಗಿರುವಾಗ ನಾನು ಒಬ್ಬ ಪುತ್ರನನ್ನು ಪಡೆಯುವುದು ಹೇಗೆ?'

قَالَتْ أَنَّىٰ يَكُونُ لِي غُلَامٌ وَلَمْ يَمْسَسْنِي بَشَرٌ وَلَمْ أَكُ بَغِيًّا ﴿٢٠﴾

**22.** ಅವನು ಉತ್ತರಿಸಿದನು: "ಅದು ಹಾಗೆಯೇ. ನಿನ್ನ ಪ್ರಭು ಹೇಳುತ್ತಾನೆ: 'ಅದು ನನಗೆ ಸುಲಭ ಕಾರ್ಯವಾಗಿದೆ.[334A] ನಾವು ಅವನನ್ನು ಜನರಿಗೆ ಒಂದು

قَالَ كَذَٰلِكِ قَالَ رَبُّكِ هُوَ عَلَيَّ هَيِّنٌ وَلِنَجْعَلَهُ آيَةً لِّلنَّاسِ وَرَحْمَةً مِّنَّا وَ

334A. ಕನ್ಯೆ ಗರ್ಭಧರಿಸುವುದು ಅಸಂಭಾವ್ಯವಲ್ಲವೆಂದು ಆಧುನಿಕ ವಿಜ್ಞಾನ ಸಾಬೀತುಪಡಿಸಿದೆ. ವಿಜ್ಞಾನಿಗಳು ಅದಕ್ಕೆ ಅನೇಕ ಉದಾಹರಣೆಗಳನ್ನು ನೀಡಿದ್ದಾರೆ.





ದೃಷ್ಟಾಂತವಾಗಿಯೂ ನಮ್ಮಿಂದ ಒಂದು ಕೃಪೆಯಾಗಿಯೂ ಮಾಡುವೆವು.' ಇದು ನಿಶ್ಚಯಿಸಲ್ಪಟ್ಟ ವಿಚಾರವಾಗಿದೆ."

كَانَ أَمْرًا مَّقْضِيًّا ﴿٢١﴾

**23.** ಹಾಗೆ, ಆಕೆ ಗರ್ಭಧರಿಸಿದ ಬಳಿಕ ದೂರದ ಒಂದು ಸ್ಥಳಕ್ಕೆ ಹೋದಳು.

فَحَمَلَتْهُ فَانتَبَذَتْ بِهِ مَكَانًا قَصِيًّا ﴿٢٢﴾

**24.** ಪ್ರಸವ ವೇದನೆಯು ಆಕೆಯನ್ನು ಖರ್ಜೂರ ಮರದ ಬಳಿಗೆ ಕೊಂಡೊಯ್ಯಿತು. ಆಕೆ ಪ್ರಲಾಪಿಸಿದಳು: 'ಅಕಟಾ, ಇದಕ್ಕಿಂತ ಮುಂಚೆಯೇ ನಾನು ಮೃತಪಟ್ಟು ಸಂಪೂರ್ಣವಾಗಿ ಮರೆತು ಹೋದವಳಾಗಿ ಬಿಟ್ಟಿದ್ದರೆ ಎಷ್ಟು ಚೆನ್ನಾಗಿತ್ತು.'

فَأَجَاءَهَا الْمَخَاضُ إِلَىٰ جِذْعِ النَّخْلَةِ قَالَتْ يَا لَيْتَنِي مِتُّ قَبْلَ هَٰذَا وَكُنتُ نَسْيًا مَّنسِيًّا ﴿٢٣﴾

**25.** ಆಗ ಅವನು (ದಿವ್ಯದೂತ) ಆಕೆ ಇದ್ದ ಸ್ಥಳದ ಕೆಳಭಾಗದಿಂದ ಕರೆದು ಹೇಳಿದನು: "ನೀನು ವ್ಯಥೆಪಡಬೇಡ ನಿನ್ನ ಪ್ರಭು ನೀನಿರುವ ಸ್ಥಳದ ಕೆಳಭಾಗದಲ್ಲಿ ಒಂದು ಚಿಲುಮೆ ಹರಿಯುವಂತೆ ಮಾಡಿರುವನು.[334B]

فَنَادَاهَا مِن تَحْتِهَا أَلَّا تَحْزَنِي قَدْ جَعَلَ رَبُّكِ تَحْتَكِ سَرِيًّا ﴿٢٤﴾

**26.** "ನೀನು ಖರ್ಜೂರ ಮರದ ಕಾಂಡವನ್ನು ಹಿಡಿದು ನಿನ್ನ ಕಡೆಗೆ ಅಲುಗಾಡಿಸು. ಆಗ ಅದು ನಿನಗೆ ತಾಜಾ ಖರ್ಜೂರ ಹಣ್ಣುಗಳನ್ನು ಬೀಳಿಸಿಕೊಡುವುದು.

وَهُزِّي إِلَيْكِ بِجِذْعِ النَّخْلَةِ تُسَاقِطْ عَلَيْكِ رُطَبًا جَنِيًّا ﴿٢٥﴾

**27.** "ಆಗ ನೀನು (ಖರ್ಜೂರ) ತಿಂದು (ನೀರು) ಕುಡಿ ಮತ್ತು ನಿನ್ನ ಕಣ್ಣುಗಳನ್ನು (ಸಂತೃಪ್ತಿಯಿಂದ) ತಂಪಾಗಿಡು. ನೀನು ಮನುಷ್ಯರಲ್ಲಿ ಯಾರನ್ನಾದರೂ ಕಂಡರೆ, 'ನಾನು ದಯಾವಂತನಾದ ನನ್ನ ಪ್ರಭುವಿಗೆ ಉಪವಾಸ ವ್ರತದ ಹರಕೆ ಮಾಡಿದ್ದೇನೆ. ಆದ್ದರಿಂದ ನಾನು ಈ ದಿನ ಯಾರೊಂದಿಗೂ ಮಾತನಾಡಲಾರೆ' ಎಂದು ಹೇಳು."

فَكُلِي وَاشْرَبِي وَقَرِّي عَيْنًا فَإِمَّا تَرَيِنَّ مِنَ الْبَشَرِ أَحَدًا فَقُولِي إِنِّي نَذَرْتُ لِلرَّحْمَٰنِ صَوْمًا فَلَنْ أُكَلِّمَ الْيَوْمَ إِنسِيًّا ﴿٢٦﴾

**28.** ಅನಂತರ ಆಕೆ ಅವನನ್ನು (ತನ್ನ ಪುತ್ರನನ್ನು) ಸವಾರಿ ಮೇಲೆ ಹೇರಿಕೊಂಡು ತನ್ನ ಜನರ ಬಳಿಗೆ ಕರೆತಂದಳು. ಆಗ ಅವರು ಹೇಳಿದರು: ಓ ಮರ್ಯಮ್, ನೀನು ತುಂಬಾ ಕೆಟ್ಟ ಕೆಲಸ ಮಾಡಿರುವೆ.

فَأَتَتْ بِهِ قَوْمَهَا تَحْمِلُهُ قَالُوا يَا مَرْيَمُ لَقَدْ جِئْتِ شَيْئًا فَرِيًّا ﴿٢٧﴾

334B. ನೀನು ಅಲ್ಲಿಗೆ ಹೋಗಿ ನಿನ್ನನ್ನೂ ನಿನ್ನ ಮಗುವನ್ನೂ ಶುದ್ಧಿಮಾಡಿಕೋ ಎಂದು ತಾತ್ಪರ್ಯ.

**29. 'ಎಲೈ ಹಾರೂನನ ಸಹೋದರಿಯೇ,**[334C] **ನಿನ್ನ ತಂದೆ ಒಬ್ಬ ಕೆಟ್ಟ ಮನುಷ್ಯನಾಗಿರಲಿಲ್ಲ; ನಿನ್ನ ತಾಯಿ ಕೂಡ ದುಶ್ಶೀಲೆಯಾಗಿರಲಿಲ್ಲ.'**

يَٰٓأُخْتَ هَٰرُونَ مَا كَانَ أَبُوكِ ٱمْرَأَ سَوْءٍ وَمَا كَانَتْ أُمُّكِ بَغِيًّا ﴿٢٨﴾

**30. ಆಗ ಆಕೆ ಅವನ ಕಡೆಗೆ ಸಂಜ್ಞೆ ಮಾಡಿದಳು. ಅವರು ಹೇಳಿದರು: '**(ನಿನ್ನೆ ತನಕ) **ತೊಟ್ಟಿಲಿನ ಕೂಸಾಗಿದ್ದವನೊಡನೆ ನಾವು ಮಾತನಾಡುವುದೇನು?'**

فَأَشَارَتْ إِلَيْهِ ۖ قَالُوا۟ كَيْفَ نُكَلِّمُ مَن كَانَ فِى ٱلْمَهْدِ صَبِيًّا ﴿٢٩﴾

**31. ಅವರು** (ಈಸಾ) **ಹೇಳಿದರು: 'ನಾನು ಅಲ್ಲಾಹನ ಒಬ್ಬ ದಾಸನಾಗಿದ್ದೇನೆ. ಅವನು ನನಗೆ ಗ್ರಂಥ ನೀಡಿದ್ದಾನೆ ಮತ್ತು ನನ್ನನ್ನು ಪ್ರವಾದಿಯನ್ನಾಗಿ ಮಾಡಿದ್ದಾನೆ.'**

قَالَ إِنِّى عَبْدُ ٱللَّهِ ءَاتَىٰنِىَ ٱلْكِتَٰبَ وَجَعَلَنِى نَبِيًّا ﴿٣٠﴾

**32. 'ನಾನು ಎಲ್ಲಿದ್ದರೂ ಅವನು ನನ್ನನ್ನು ಅನುಗ್ರಹೀತನನ್ನಾಗಿ ಮಾಡಿರುವನು. ನಾನು ಬದುಕಿರುವ ತನಕ ಪ್ರಾರ್ಥನೆ ಮಾಡಲಿಕ್ಕೂ ದಾನಧರ್ಮ ಕೊಡಲಿಕ್ಕೂ ಅವನು ನನಗೆ ಆಜ್ಞಾಪಿಸಿದ್ದಾನೆ.**

وَجَعَلَنِى مُبَارَكًا أَيْنَ مَا كُنتُ وَأَوْصَٰنِى بِٱلصَّلَوٰةِ وَٱلزَّكَوٰةِ مَا دُمْتُ حَيًّا ﴿٣١﴾

**33. 'ಅವನು ನನ್ನನ್ನು ನನ್ನ ಮಾತೆಯೊಡನೆ ಉತ್ತಮವಾಗಿ ವರ್ತಿಸುವವನಾಗಿ ಮಾಡಿರುವನು. ಅವನು ನನ್ನನ್ನು ಅಹಂಕಾರಿಯನ್ನಾಗಿಯೂ ಅನುಗ್ರಹರಹಿತನನ್ನಾಗಿಯೂ ಮಾಡಲಿಲ್ಲ.**

وَبَرًّۢا بِوَٰلِدَتِى وَلَمْ يَجْعَلْنِى جَبَّارًا شَقِيًّا ﴿٣٢﴾

**34. 'ನನ್ನ ಜನನ ದಿನವೂ ನನ್ನ ಮರಣ ದಿನವೂ ನನ್ನ ಪುನರುತ್ಥಾನದ ದಿನವೂ ನನಗೆ ಶಾಂತಿದಾಯಕ.'**

وَٱلسَّلَٰمُ عَلَىَّ يَوْمَ وُلِدتُّ وَيَوْمَ أَمُوتُ وَيَوْمَ أُبْعَثُ حَيًّا ﴿٣٣﴾

**35. ಇದು ಮರ್ಯಮ್ ಪುತ್ರ ಈಸಾ** (ಅವರ ವೃತ್ತಾಂತವಾಗಿದೆ). **ಸತ್ಯವಾದ ವಿವರಣೆ** (ಇದೇ ಆಗಿದೆ). **ಇದರ ಬಗ್ಗೆ ಅವರು ಸಂಶಯಪಡುತ್ತಾರೆ.**

ذَٰلِكَ عِيسَى ٱبْنُ مَرْيَمَ ۚ قَوْلَ ٱلْحَقِّ ٱلَّذِى فِيهِ يَمْتَرُونَ ﴿٣٤﴾

334C. ಇಲ್ಲಿ ಮರ್ಯಮ್‌ರನ್ನು ಹಾರೂನನ ಸಹೋದರಿ ಎಂದು ಹೇಳಿದ ಕುರಿತು ಕ್ರಿಸ್ತೀಯರು, ಖುರ್‌ಆನ್ ಅಜ್ಞತೆ ನಿಮಿತ್ತ ಪ್ರವಾದಿ ಈಸಾ (ಅ)ರ ಮಾತೆಯನ್ನು ಪ್ರವಾದಿ ಮೂಸಾ (ಅ) ಮತ್ತು ಪ್ರವಾದಿ ಹಾರೂನ್ (ಅ)ರ ಸಹೋದರಿ ಎಂದು ತಿಳಿದುಕೊಂಡಿದೆ ಎಂಬುದಾಗಿ ಆಕ್ಷೇಪಿಸುತ್ತಾರೆ. ಆದರೆ ಈ ಆಕ್ಷೇಪ ಅವರ ಅಜ್ಞತೆಯನ್ನೇ ಸೂಚಿಸುತ್ತದೆ. ಪೂರ್ವಿಕ ಮಹಾತ್ಮರುಗಳ ಹೆಸರನ್ನು ತಮ್ಮ ಮಕ್ಕಳಿಗೆ ಇಡುವುದು ಎಲ್ಲ ಸಮುದಾಯಗಳಲ್ಲಿರುವ ಸಂಪ್ರದಾಯವಾಗಿದೆ. ಮರ್ಯಮರ ಒಬ್ಬ ಸಹೋದರನ ಹೆಸರು ಹಾರೂನ್ ಎಂದಿದ್ದರೆ, ಅವರನ್ನು ಹಾರೂನನ ಸಹೋದರಿ ಎಂದು ಕರೆದುದರಲ್ಲಿ ಏನು ತಪ್ಪಿದೆ? ಈ ಪ್ರಶ್ನೆಯನ್ನು ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರೊಡನೆ ಸಹ ಕೇಳಲಾಗಿತ್ತು. ಪೈಗಂಬರರು ಇದೇ ಉತ್ತರವನ್ನು ನೀಡಿದ್ದರು. (ಫತಹುಲ್ ಬಯಾನ್ ಸಂಪುಟ 6, ಪುಟ 16)





**36. ಯಾರನ್ನಾದರೂ ಪುತ್ರನನ್ನಾಗಿ ಮಾಡಿಕೊಳ್ಳುವುದು ಅಲ್ಲಾಹನಿಗೆ ಭೂಷಣವಲ್ಲ. ಅವನು ಪರಮ ಪವಿತ್ರನು. ಯಾವುದೇ ವಿಚಾರವನ್ನು ಅವನು ತೀರ್ಮಾನ ಮಾಡಿದರೆ 'ಆಗು' ಎಂದಷ್ಟೇ ಹೇಳಿದಾಗ ಅದು ಆಗುತ್ತದೆ.**

مَا كَانَ لِلَّهِ أَن يَتَّخِذَ مِن وَلَدٍ ۖ سُبْحَٰنَهُۥٓ ۚ إِذَا قَضَىٰٓ أَمْرًا فَإِنَّمَا يَقُولُ لَهُۥ كُن فَيَكُونُ ﴿٣٥﴾

**37. 'ಅಲ್ಲಾಹನೇ ನನ್ನ ಪ್ರಭು; ನಿಮ್ಮ ಪ್ರಭು ಸಹ ಅವನೇ. ಆದ್ದರಿಂದ ಅವನನ್ನೇ ಆರಾಧಿಸಿರಿ. ಇದೇ ಸತ್ಪಥವಾಗಿದೆ.'** (ಎಂದು ಈಸಾ ಉಪದೇಶಿಸಿದರು).

وَإِنَّ ٱللَّهَ رَبِّى وَرَبُّكُمْ فَٱعْبُدُوهُ ۚ هَٰذَا صِرَٰطٌ مُّسْتَقِيمٌ ﴿٣٦﴾

**38. ಆದರೆ ವಿವಿಧ ಪಕ್ಷಗಳು ಪರಸ್ಪರ ಭಿನ್ನಾಭಿಪ್ರಾಯ ಹೊಂದಿದವು. ಅವಿಶ್ವಾಸಿಗಳಿಗೆ ಅವರು ಕಾಣಲಿರುವ ಮಹತ್ತರ ದಿನವು ವಿನಾಶಕರವಾಗಿದೆ.**

فَٱخْتَلَفَ ٱلْأَحْزَابُ مِنۢ بَيْنِهِمْ ۖ فَوَيْلٌ لِّلَّذِينَ كَفَرُوا۟ مِن مَّشْهَدِ يَوْمٍ عَظِيمٍ ﴿٣٧﴾

**39. ಅವರನ್ನು ನಮ್ಮ ಮುಂದೆ ಹಾಜರುಪಡಿಸಲಾಗುವ ದಿನ ಅವರ ಕೇಳುವ ಮತ್ತು ಕಾಣುವ ಶಕ್ತಿ ತುಂಬಾ ತೀಕ್ಷ್ಣವಾಗಿರುವುದು. ಆದರೆ ಇಂದು ಆ ದುಷ್ಕರ್ಮಿಗಳು ಸ್ಪಷ್ಟವಾದ ತಪ್ಪುಹಾದಿಯಲ್ಲಿದ್ದಾರೆ.**

أَسْمِعْ بِهِمْ وَأَبْصِرْ يَوْمَ يَأْتُونَنَا ۖ لَٰكِنِ ٱلظَّٰلِمُونَ ٱلْيَوْمَ فِى ضَلَٰلٍ مُّبِينٍ ﴿٣٨﴾

**40. ಎಲ್ಲ ವಿಚಾರಗಳು ತೀರ್ಮಾನಿಸಲ್ಪಡುವ ಆ ದುಃಖದ ದಿನದ ಬಗ್ಗೆ ಮುನ್ನೆಚ್ಚರಿಕೆ ನೀಡು.** (ಈಗಲಾದರೋ) **ಅವರು ಅಲಕ್ಷ್ಯರಾಗಿರುವ ಕಾರಣದಿಂದ ಅವರು ನಂಬುವುದಿಲ್ಲ.**

وَأَنذِرْهُمْ يَوْمَ ٱلْحَسْرَةِ إِذْ قُضِىَ ٱلْأَمْرُ وَهُمْ فِى غَفْلَةٍ وَهُمْ لَا يُؤْمِنُونَ ﴿٣٩﴾

**41. ಈ ಭೂಮಿಯ ಮತ್ತು ಅದರಲ್ಲಿರುವವರೆಲ್ಲರ ಉತ್ತರಾಧಿಕಾರಿಗಳು ನಾವೇ. ಅವರೆಲ್ಲರೂ ನಮ್ಮ ಬಳಿಗೆ ಮರಳಿಸಲ್ಪಡುವರು.**

إِنَّا نَحْنُ نَرِثُ ٱلْأَرْضَ وَمَنْ عَلَيْهَا وَإِلَيْنَا يُرْجَعُونَ ﴿٤٠﴾

**42. ಈ ಗ್ರಂಥ'ದ ಮೂಲಕ ನೀನು ಇಬ್‌ರಾಹೀಮರ ಕುರಿತು ತಿಳಿಸಿಕೊಡು. ಅವರು ಮಹಾ ಸತ್ಯಸಂಧರಾದ ಪ್ರವಾದಿಯಾಗಿದ್ದರು.**

وَٱذْكُرْ فِى ٱلْكِتَٰبِ إِبْرَٰهِيمَ ۚ إِنَّهُۥ كَانَ صِدِّيقًا نَّبِيًّا ﴿٤١﴾

**43. ಅವರು ತನ್ನ ತಂದೆಯೊಡನೆ ಹೇಳಿದ ಸಂದರ್ಭ: 'ಓ ನನ್ನ ತಂದೆಯೇ, ಏನನ್ನೂ ಶ್ರವಿಸಲಾರದ, ಏನನ್ನೂ ಕಾಣಲಾರದ ಹಾಗೂ ನಿಮಗೆ ಯಾವ**

إِذْ قَالَ لِأَبِيهِ يَٰٓأَبَتِ لِمَ تَعْبُدُ مَا لَا يَسْمَعُ وَلَا يُبْصِرُ وَلَا يُغْنِى عَنكَ

ಪ್ರಯೋಜನವನ್ನೂ ಮಾಡಲಾರದ ವಸ್ತುವನ್ನು ನೀವೇಕೆ ಆರಾಧಿಸುತ್ತೀರಿ?

شَيْـًٔا ﴿٤٣﴾

**44.** 'ಓ ನನ್ನ ತಂದೆಯೇ, ನಿಮಗೆ ಲಭಿಸದೆ ಇರುವ ಜ್ಞಾನ ನನಗೆ ಲಭಿಸಿರುತ್ತದೆ. ಆದ್ದರಿಂದ ನೀವು ನನ್ನನ್ನು ಅನುಸರಿಸಿರಿ. ನಾನು ನಿಮ್ಮನ್ನು ಸತ್ಪಥದಲ್ಲಿ ನಡೆಸುವೆನು.

يٰٓاَبَتِ اِنِّيْ قَدْ جَآءَنِيْ مِنَ الْعِلْمِ مَا لَمْ يَاْتِكَ فَاتَّبِعْنِيْٓ اَهْدِكَ صِرَاطًا سَوِيًّا ﴿٤٤﴾

**45.** 'ಓ ನನ್ನ ತಂದೆಯೇ, ನೀವು ಶೈತಾನನನ್ನು ಆರಾಧಿಸಬೇಡಿರಿ. ಖಂಡಿತವಾಗಿಯೂ ಶೈತಾನನು ದಯಾವಂತನಾದ ದೇವನಿಗೆ ಅವಿಧೇಯತೆ ತೋರಿಸಿದವನಾಗಿದ್ದಾನೆ.'

يٰٓاَبَتِ لَا تَعْبُدِ الشَّيْطٰنَ ؕ اِنَّ الشَّيْطٰنَ كَانَ لِلرَّحْمٰنِ عَصِيًّا ﴿٤٥﴾

**46.** 'ಓ ನನ್ನ ತಂದೆಯೇ, ದಯಾವಂತನಾದ ದೇವನಿಂದ ನಿಮಗೆ ಏನಾದರೂ ಶಿಕ್ಷೆ ಎರಗಿ ನೀವು ಶೈತಾನನ ಮಿತ್ರರಾಗಿ ಬಿಡುವರೆಂದು ನಾನು ಹೆದರುತ್ತೇನೆ.'

يٰٓاَبَتِ اِنِّيْٓ اَخَافُ اَنْ يَّمَسَّكَ عَذَابٌ مِّنَ الرَّحْمٰنِ فَتَكُوْنَ لِلشَّيْطٰنِ وَلِيًّا ﴿٤٦﴾

**47.** ಆತ (ಇಬ್‌ರಾಹೀಮರ ತಂದೆ) ಹೇಳಿದನು: 'ಓ ಇಬ್‌ರಾಹೀಂ ನೀನು ನನ್ನ ದೇವರುಗಳನ್ನು ದ್ವೇಷಿಸುತ್ತೀಯೋ? ಅದನ್ನು ನೀನು ನಿಲ್ಲಿಸದಿದ್ದರೆ, ನಾನು ನಿನ್ನನ್ನು ಕಲ್ಲೆಸೆದು ಕೊಲ್ಲುವೆನು. ಈಗ ನೀನು ನನ್ನಿಂದ ದೂರ ಹೋಗಿಬಿಡು.'

قَالَ اَرَاغِبٌ اَنْتَ عَنْ اٰلِهَتِيْ يٰٓاِبْرٰهِيْمُ ۚ لَئِنْ لَّمْ تَنْتَهِ لَاَرْجُمَنَّكَ وَاهْجُرْنِيْ مَلِيًّا ﴿٤٧﴾

**48.** ಅವರು (ಇಬ್‌ರಾಹೀಂ) ಹೇಳಿದರು: 'ನಿಮ್ಮ ಮೇಲೆ ಶಾಂತಿ ಇರಲಿ. ನಾನು ನಿಮಗೋಸ್ಕರ ನನ್ನ ಪ್ರಭುವಿನಿಂದ ಕ್ಷಮೆಯಾಚಿಸುತ್ತೇನೆ. ಖಂಡಿತವಾಗಿಯೂ ಅವನು ನನ್ನ ಮೇಲೆ ಕೃಪೆ ತೋರಿಸುವವನಾಗಿದ್ದಾನೆ.

قَالَ سَلٰمٌ عَلَيْكَ ۚ سَاَسْتَغْفِرُ لَكَ رَبِّيْ ؕ اِنَّهٗ كَانَ بِيْ حَفِيًّا ﴿٤٨﴾

**49.** 'ನಾನು ನಿಮ್ಮಿಂದಲೂ ಅಲ್ಲಾಹನನ್ನು ಬಿಟ್ಟು ನೀವು ಕರೆದು ಪ್ರಾರ್ಥಿಸುವ ಆರಾಧ್ಯರಿಂದಲೂ ದೂರ ಹೋಗುತ್ತೇನೆ. ನಾನು ನನ್ನ ಪ್ರಭುವನ್ನು ಮಾತ್ರ ಕರೆದು ಪ್ರಾರ್ಥಿಸುತ್ತೇನೆ. ನಾನು ನನ್ನ ಪ್ರಭುವನ್ನು ಪ್ರಾರ್ಥಿಸಿ ಹತಭಾಗ್ಯನಾಗಲಾರೆನೆಂದು ನನಗೆ ಭರವಸೆ ಇದೆ.'

وَاَعْتَزِلُكُمْ وَمَا تَدْعُوْنَ مِنْ دُوْنِ اللّٰهِ وَاَدْعُوْا رَبِّيْ ۖ عَسٰٓى اَلَّآ اَكُوْنَ بِدُعَآءِ رَبِّيْ شَقِيًّا ﴿٤٩﴾





**50.** ಹಾಗೆ ಅವರು (ಇಬ್‌ರಾಹೀಂ) ಅವರಿಂದಲೂ ಅಲ್ಲಾಹನನ್ನು ಬಿಟ್ಟು ಕರೆದು ಪ್ರಾರ್ಥಿಸುವ ಅವರ ಆರಾಧ್ಯರಿಂದಲೂ ಅಗಲಿ ಹೋದಾಗ ಅವರಿಗೆ (ಇಬ್‌ರಾಹೀಮ್‌ರಿಗೆ) ನಾವು ಇಸ್‌ಹಾಖ್ ಮತ್ತು ಯಅ್‌ಖೂಬ್‌ರನ್ನು ದಯಪಾಲಿಸಿದೆವು. ಅವರೆಲ್ಲರನ್ನೂ ನಾವು ಪ್ರವಾದಿಗಳನ್ನಾಗಿ ಮಾಡಿದೆವು.

فَلَمَّا اعْتَزَلَهُمْ وَمَا يَعْبُدُوْنَ مِنْ دُوْنِ اللّٰهِ ۙ وَهَبْنَا لَهٗٓ اِسْحٰقَ وَيَعْقُوْبَ ؕ وَكُلًّا جَعَلْنَا نَبِيًّا ﴿٥٠﴾

**51.** ನಾವು ನಮ್ಮ ಕೃಪೆಯನ್ನು ಅವರಿಗೆ ಪ್ರದಾನ ಮಾಡಿದೆವು ಹಾಗೂ ಅವರಿಗೆ ಶಾಶ್ವತವಾದ ಸುಪ್ರಸಿದ್ಧಿಯನ್ನು ದಯಪಾಲಿಸಿದೆವು.

وَوَهَبْنَا لَهُمْ مِّنْ رَّحْمَتِنَا وَجَعَلْنَا لَهُمْ لِسَانَ صِدْقٍ عَلِيًّا ﴿٥١﴾

**52.** ಈ ಗ್ರಂಥದ ಮೂಲಕ ನೀನು ಮೂಸಾರ ವೃತ್ತಾಂತವನ್ನು ತಿಳಿಸಿಕೊಡು. ದಿಟವಾಗಿಯೂ ಅವರೊಬ್ಬ ವರಿಷ್ಟ ವ್ಯಕ್ತಿಯೂ ಸಂದೇಶವಾಹಕನೂ ಪ್ರವಾದಿಯೂ ಆಗಿದ್ದರು.

وَاذْكُرْ فِي الْكِتٰبِ مُوْسٰٓى ۫ اِنَّهٗ كَانَ مُخْلَصًا وَّكَانَ رَسُوْلًا نَّبِيًّا ﴿٥٢﴾

**53.** ನಾವು ಅವರನ್ನು ಆ ಪರ್ವತದ ಬಲಬದಿಯಿಂದ ಕರೆದೆವು ಹಾಗೂ ರಹಸ್ಯ ಜ್ಞಾನವನ್ನು ಅರುಹಿ ಅವರಿಗೆ ನಮ್ಮ ಸಾಮೀಪ್ಯವನ್ನು ದಯಪಾಲಿಸಿದೆವು.

وَنَادَيْنٰهُ مِنْ جَانِبِ الطُّوْرِ الْاَيْمَنِ وَقَرَّبْنٰهُ نَجِيًّا ﴿٥٣﴾

**54.** ನಾವು ಅವರಿಗೆ ನಮ್ಮ ಕೃಪೆಯಿಂದ, ಅವರ ಸಹೋದರ ಹಾರೂನ್‌ರನ್ನು ಪ್ರವಾದಿಯಾಗಿ ಮಾಡಿ ನೆರವು ನೀಡಿದೆವು.

وَوَهَبْنَا لَهٗ مِنْ رَّحْمَتِنَآ اَخَاهُ هٰرُوْنَ نَبِيًّا ﴿٥٤﴾

**55.** ನೀನು ಈ ಗ್ರಂಥ ಮೂಲಕ ಇಸ್ಮಾಈಲ್‌ರ ಕುರಿತು ಸಹ ತಿಳಿಸಿಕೊಡು. ಅವರು ತನ್ನ ವಾಗ್ದಾನವನ್ನು ಈಡೇರಿಸುವುದರಲ್ಲಿ ನಿಷ್ಠರಾಗಿದ್ದರು. ಅವರು ಸಂದೇಶವಾಹಕರೂ ಪ್ರವಾದಿಯೂ ಆಗಿದ್ದರು.

وَاذْكُرْ فِي الْكِتٰبِ اِسْمٰعِيْلَ ۫ اِنَّهٗ كَانَ صَادِقَ الْوَعْدِ وَكَانَ رَسُوْلًا نَّبِيًّا ﴿٥٥﴾

**56.** ಪ್ರಾರ್ಥನೆ ಮತ್ತು ದಾನಧರ್ಮ ಮಾಡುವುದರ ಕುರಿತು ಅವರು ತನ್ನ ಮನೆಯವರಿಗೆ ಆದೇಶಿಸುತ್ತಿದ್ದರು. ಅವರು ತನ್ನ ಪ್ರಭುವಿನ ಸಂಪ್ರೀತಿಗೆ ಪಾತ್ರರಾಗಿದ್ದರು.

وَكَانَ يَاْمُرُ اَهْلَهٗ بِالصَّلٰوةِ وَالزَّكٰوةِ ۪ وَكَانَ عِنْدَ رَبِّهٖ مَرْضِيًّا ﴿٥٦﴾

**57.** ನೀನು ಈ ಗ್ರಂಥ ಮೂಲಕ ಇದ್‌ರೀಸ್‌ರ ಕುರಿತು ಸಹ ತಿಳಿಸಿಕೊಡು. ಅವರು ಮಹಾ ಸತ್ಯಸಂಧರೂ ಪ್ರವಾದಿಯೂ ಆಗಿದ್ದರು.

وَاذْكُرْ فِي الْكِتٰبِ اِدْرِيْسَ ۫ اِنَّهٗ كَانَ صِدِّيْقًا نَّبِيًّا ﴿٥٧﴾

**58.** ನಾವು ಅವರನ್ನು ಉನ್ನತ ಸ್ಥಾನಕ್ಕೆ ಏರಿಸಿದ್ದೇವೆ.[334D]

وَّرَفَعْنٰهُ مَكَانًا عَلِيًّا ۝٥٧

**59.** ಇವರೆಲ್ಲರೂ ಅಲ್ಲಾಹನು ಅನುಗ್ರಹಿಸಿದ ಪ್ರವಾದಿಗಳ ಪೈಕಿಯವರಾಗಿದ್ದಾರೆ. ಇವರು ಆದಮರ ಸಂತತಿಗೆ ಸೇರಿದವರೂ ನೂಹ್‌ರೊಂದಿಗೆ ನಾವು (ಹಡಗಿನಲ್ಲಿ) ಪ್ರಯಾಣ ಮಾಡಿಸಿ ರಕ್ಷಿಸಿದವರ ಸಂತಾನಕ್ಕೆ ಸೇರಿದವರೂ ಇಬ್‌ರಾಹೀಂ ಮತ್ತು ಇಸ್ರಾಈಲರ ಸಂತತಿಗಳಿಗೆ ಸೇರಿದವರೂ ನಾವು ಮಾರ್ಗದರ್ಶನ ನೀಡಿ ಆಯ್ಕೆ ಮಾಡಿದವರಲ್ಲಿ ಸೇರಿದವರೂ ಆಗಿದ್ದಾರೆ. ದಯಾವಂತನಾದ ಅಲ್ಲಾಹನ ವಚನಗಳನ್ನು ವಾಚಿಸುವಾಗ ಅವರು ಸಾಷ್ಟಾಂಗವೆರಗುತ್ತಾ ರೋಧಿಸುತ್ತಾರೆ.

اُولٰٓئِكَ الَّذِيْنَ اَنْعَمَ اللّٰهُ عَلَيْهِمْ مِّنَ النَّبِيّٖنَ مِنْ ذُرِّيَّةِ اٰدَمَ ۗ وَمِمَّنْ حَمَلْنَا مَعَ نُوْحٍ ۫ وَّمِنْ ذُرِّيَّةِ اِبْرٰهِيْمَ وَاِسْرَآءِيْلَ ۫ وَمِمَّنْ هَدَيْنَا وَاجْتَبَيْنَا ؕ اِذَا تُتْلٰى عَلَيْهِمْ اٰيٰتُ الرَّحْمٰنِ خَرُّوْا سُجَّدًا وَّبُكِيًّا ۩ ۝٥٨

**60.** ಅವರ ಬಳಿಕ ಪ್ರಾರ್ಥನೆಯನ್ನು ನಿರ್ಲಕ್ಷಿಸಿದ ಮತ್ತು ಸ್ವೇಚ್ಛಾಚಾರದಿಂದ ನಡೆದ ಒಂದು ಪೀಳಿಗೆಯವರು ಅವರ ಉತ್ತರಾಧಿಕಾರಿಯಾದರು. ಆದ್ದರಿಂದ ಬೇಗನೇ ಅವರು ನಾಶವನ್ನು ಕಾಣುವರು.

فَخَلَفَ مِنْ بَعْدِهِمْ خَلْفٌ اَضَاعُوا الصَّلٰوةَ وَاتَّبَعُوا الشَّهَوٰتِ فَسَوْفَ يَلْقَوْنَ غَيًّا ۝٥٩

**61.** ಆದರೆ ಪಶ್ಚಾತ್ತಾಪಪಟ್ಟು, ಸತ್ಯವಿಶ್ವಾಸವನ್ನು ಹೊಂದಿ ಸತ್ಕರ್ಮಗೈಯ್ಯುವವರು ಅದರಿಂದ ಹೊರತಾಗುವರು. ಅವರು ಸ್ವರ್ಗವನ್ನು ಪ್ರವೇಶಿಸುವರು. ಅವರ ಮೇಲೆ ಏನೂ ಅನ್ಯಾಯವೆಸಗಲಾಗದು.

اِلَّا مَنْ تَابَ وَاٰمَنَ وَعَمِلَ صَالِحًا فَاُولٰٓئِكَ يَدْخُلُوْنَ الْجَنَّةَ وَلَا يُظْلَمُوْنَ شَيْـًٔا ۝٦٠

**62.** ದಯಾವಂತನಾದ ಅಲ್ಲಾಹನು ತನ್ನ ಇಷ್ಟದಾಸರಿಗೆ ಅದೃಶ್ಯ ಲೋಕದಲ್ಲಿ ವಾಗ್ದಾನ ಮಾಡಿದ ಶಾಶ್ವತ ವಾಸದ ಸ್ವರ್ಗೀಯ ತೋಟಗಳಲ್ಲಿ ಅವರು ಪ್ರವೇಶಿಸುವರು. ಖಂಡಿತವಾಗಿಯೂ ಅವನ ವಾಗ್ದಾನ ಈಡೇರಿಸಲ್ಪಡುವುದು.

جَنّٰتِ عَدْنِ ِۨالَّتِيْ وَعَدَ الرَّحْمٰنُ عِبَادَهٗ بِالْغَيْبِ ؕ اِنَّهٗ كَانَ وَعْدُهٗ مَاْتِيًّا ۝٦١

**63.** ಅವರು ಅಲ್ಲಿ ಶಾಂತಿಯ ಮಾತುಗಳನ್ನು ಹೊರತು ವ್ಯರ್ಥವಾದ ಏನನ್ನೂ ಆಲಿಸಲಾರರು. ಅಲ್ಲಿ ಅವರಿಗೆ ಬೆಳಿಗ್ಗೆ ಮತ್ತು ಸಂಜೆ ಅವರ ಆಹಾರವನ್ನು ನೀಡಲಾಗುವುದು.

لَا يَسْمَعُوْنَ فِيْهَا لَغْوًا اِلَّا سَلٰمًا ؕ وَلَهُمْ رِزْقُهُمْ فِيْهَا بُكْرَةً وَّعَشِيًّا ۝٦٢

334D. ಉನ್ನತ ಸ್ಥಾನಕ್ಕೆ ಏರಿಸಿದ್ದೇವೆ ಎಂಬುದರ ತಾತ್ಪರ್ಯ ಅವರ ಪದವಿಯನ್ನು ಉನ್ನತಗೊಳಿಸಿದ್ದೇವೆ ಎಂದಾಗಿದೆ.





**64.** ಅದು ನಮ್ಮ ದಾಸರ ಪೈಕಿ ಸಜ್ಜನರನ್ನು ನಾವು ವಾರೀಸುದಾರರನ್ನಾಗಿ ಮಾಡುವ ಸ್ವರ್ಗವಾಗಿದೆ.

تِلْكَ الْجَنَّةُ الَّتِيْ نُوْرِثُ مِنْ عِبَادِنَا مَنْ كَانَ تَقِيًّا ۝٦٣

**65.** (ದೇವದೂತರು ಹೇಳುತ್ತಾರೆ:) 'ನಿನ್ನ ಪ್ರಭುವಿನ ಆಜ್ಞಾನುಸಾರ ವಿನಾ ನಾವು ಇಳಿದು ಬರುವುದಿಲ್ಲ. ನಮ್ಮ ಮುಂದೆ, ನಮ್ಮ ಹಿಂದೆ ಮತ್ತು ಅವುಗಳ ಮಧ್ಯೆ ಇರುವ ಎಲ್ಲವೂ ಅವನಿಗೆ ಸೇರುತ್ತವೆ. ನಿನ್ನ ಪ್ರಭು (ಏನನ್ನೂ) ಮರೆತುಬಿಡುವವನಲ್ಲ.'

وَمَا نَتَنَزَّلُ اِلَّا بِاَمْرِ رَبِّكَ ۚ لَهٗ مَا بَيْنَ اَيْدِيْنَا وَمَا خَلْفَنَا وَمَا بَيْنَ ذٰلِكَ ۚ وَمَا كَانَ رَبُّكَ نَسِيًّا ۝٦٤

**66.** ಅವನು ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಪ್ರಭು ವಾಗಿದ್ದಾನೆ. ಆದ್ದರಿಂದ ಅವನನ್ನು ಆರಾಧಿಸಿರಿ. ಅವನ ಆರಾಧನೆಯಲ್ಲಿ ಸ್ಥಿರಚಿತ್ತರಾಗಿರಿ. ಅವನಿಗೆ ಸಮಾನವಾಗಿರುವ ಯಾರನ್ನಾದರೂ ನೀವು ಬಲ್ಲಿರಾ?

رَبُّ السَّمٰوٰتِ وَالْاَرْضِ وَمَا بَيْنَهُمَا فَاعْبُدْهُ وَاصْطَبِرْ لِعِبَادَتِهٖ ؕ هَلْ تَعْلَمُ لَهٗ سَمِيًّا ۝٦٥

**67.** ಮನುಷ್ಯನು ಹೇಳುತ್ತಾನೆ: 'ಏನು, ನಾನು ಮೃತಪಟ್ಟರೆ, ಪುನಃ ನನ್ನನ್ನು ಜೀವಂತ ಗೊಳಿಸಲಾಗುವುದೇ?'

وَيَقُوْلُ الْاِنْسَانُ ءَاِذَا مَا مِتُّ لَسَوْفَ اُخْرَجُ حَيًّا ۝٦٦

**68.** ಏನು, ಇದಕ್ಕಿಂತ ಮುಂಚೆ ಮನುಷ್ಯನು ಏನೂ ಆಗಿಲ್ಲದಿರುವಾಗ ನಾವು ಅವನನ್ನು ಸೃಷ್ಟಿಸಿದ್ದೇವೆ ಎಂಬ ವಿಚಾರವನ್ನು ಅವನು ಸ್ಮರಿಸುವುದಿಲ್ಲವೇ?

اَوَلَا يَذْكُرُ الْاِنْسَانُ اَنَّا خَلَقْنٰهُ مِنْ قَبْلُ وَلَمْ يَكُ شَيْـًٔا ۝٦٧

**69.** ನಿನ್ನ ಪ್ರಭುವಿನಾಣೆ, ನಾವು ಖಂಡಿತವಾಗಿಯೂ ಅವರನ್ನೂ ಶೈತಾನ್‌ಗಳನ್ನೂ ಒಟ್ಟು ಸೇರಿಸುವೆವು. ಆ ಮೇಲೆ ಅವರೆಲ್ಲರನ್ನೂ ನಾವು ನರಕದ ಸುತ್ತಲೂ ಮೊಣಕಾಲೂರಿದ ಸ್ಥಿತಿಯಲ್ಲಿ ಹಾಜರುಪಡಿಸುವೆವು.

فَوَرَبِّكَ لَنَحْشُرَنَّهُمْ وَالشَّيٰطِيْنَ ثُمَّ لَنُحْضِرَنَّهُمْ حَوْلَ جَهَنَّمَ جِثِيًّا ۝٦٨

**70.** ಅನಂತರ, ಖಂಡಿತವಾಗಿಯೂ ನಾವು ಪ್ರತಿಯೊಂದು ಗುಂಪಿನಿಂದ, ದಯಾವಂತನಾದ ದೇವನೊಡನೆ ತೀವ್ರ ಧಿಕ್ಕಾರ ತೋರಿಸಿದವರನ್ನು ಎಳೆದು ಬೇರ್ಪಡಿಸುವೆವು.

ثُمَّ لَنَنْزِعَنَّ مِنْ كُلِّ شِيْعَةٍ اَيُّهُمْ اَشَدُّ عَلَى الرَّحْمٰنِ عِتِيًّا ۝٦٩

**71.** ಅದರಲ್ಲಿ (ನರಕದಲ್ಲಿ) ಪ್ರವೇಶಿಸಲು ಹೆಚ್ಚು ಅರ್ಹರು ಯಾರೆಂದು ನಾವು ಚೆನ್ನಾಗಿ ಬಲ್ಲೆವು.

ثُمَّ لَنَحْنُ أَعْلَمُ بِالَّذِينَ هُمْ أَوْلَىٰ بِهَا صِلِيًّا ﴿٧١﴾

**72.** ನಿಮ್ಮಲ್ಲಿ ಯಾರೂ ಅದನ್ನು ಹಾದುಹೋಗದೆ ಇರುವುದಿಲ್ಲ.[335] ಇದು ನಿಮ್ಮ ಪ್ರಭುವಿನಿಂದ ನಿರ್ಧರಿಸಲ್ಪಟ್ಟ ವಿಧಿಯಾಗಿದೆ.

وَإِنْ مِنْكُمْ إِلَّا وَارِدُهَا ۚ كَانَ عَلَىٰ رَبِّكَ حَتْمًا مَقْضِيًّا ﴿٧٢﴾

**73.** ಭಯಭಕ್ತಿಯುಳ್ಳವರನ್ನು ನಂತರ ನಾವು ರಕ್ಷಿಸುವೆವು; ಹಾಗೂ ಅಧರ್ಮಿಗಳನ್ನು ಅದರಲ್ಲಿ ಮೊಣಕಾಲೂರಿ ಬೀಳುವಂತೆ ನಾವು ಬಿಟ್ಟುಬಿಡುವೆವು.

ثُمَّ نُنَجِّي الَّذِينَ اتَّقَوْا وَنَذَرُ الظَّالِمِينَ فِيهَا جِثِيًّا ﴿٧٣﴾

**74.** ಅವರಿಗೆ ನಮ್ಮ ವಚನಗಳನ್ನು ಸ್ಪಷ್ಟವಾಗಿ ವಾಚಿಸಿದಾಗ, ಅವಿಶ್ವಾಸಿಗಳು ಸತ್ಯವಿಶ್ವಾಸಿಗಳೊಡನೆ, 'ನಮ್ಮ ಈ ಎರಡು ಪಂಗಡಗಳಲ್ಲಿ ಯಾರು ಉತ್ತಮ ಸ್ಥಾನಮಾನ ಹೊಂದಿರುವವರು ಮತ್ತು ಯಾರ ಕೂಟ ಹೆಚ್ಚು ಶೋಭಾಯಮಾನವಾಗಿದೆ?' ಎಂದು ಕೇಳುವರು.

وَإِذَا تُتْلَىٰ عَلَيْهِمْ آيَاتُنَا بَيِّنَاتٍ قَالَ الَّذِينَ كَفَرُوا لِلَّذِينَ آمَنُوا أَيُّ الْفَرِيقَيْنِ خَيْرٌ مَقَامًا وَأَحْسَنُ نَدِيًّا ﴿٧٤﴾

**75.** ಐಶ್ವರ್ಯದಲ್ಲೂ ಬಾಹ್ಯವಾದ ಆಡಂಬರ ಗಳಲ್ಲೂ ಇವರಿಗಿಂತ ಮಿಗಿಲಾದ ಎಷ್ಟೆಲ್ಲ ಪೀಳಿಗೆಗಳನ್ನು ನಾವು ಇವರಿಗಿಂತ ಮುಂಚೆ ನಾಶಪಡಿಸಿದ್ದೇವೆ!

وَكَمْ أَهْلَكْنَا قَبْلَهُمْ مِنْ قَرْنٍ هُمْ أَحْسَنُ أَثَاثًا وَرِئْيًا ﴿٧٥﴾

**76.** ಹೇಳು: 'ಯಾರು ಪಥಭ್ರಷ್ಟನಾಗುತ್ತಾನೋ ಅವನಿಗೆ ದಯಾವಂತನಾದ ಅಲ್ಲಾಹನು ದೀರ್ಘ ಕಾಲಾವಧಿ ಕೊಡುತ್ತಾನೆ. ಹಾಗೆ ಅವರಿಗೆ ಮುನ್ನೆಚ್ಚರಿಕೆ ನೀಡಿದ್ದನ್ನು ಅವರು ಕಂಡರೆ- ಲೌಕಿಕ ಶಿಕ್ಷೆಯ ರೂಪದಲ್ಲಿ

قُلْ مَنْ كَانَ فِي الضَّلَالَةِ فَلْيَمْدُدْ لَهُ الرَّحْمَٰنُ مَدًّا ۚ حَتَّىٰ إِذَا رَأَوْا مَا يُوعَدُونَ إِمَّا الْعَذَابَ وَإِمَّا السَّاعَةَ

335. ಎರಡು ನರಕಗಳಿವೆಯೆಂದು ಖುರ್‌ಆನಿನಿಂದ ತಿಳಿದು ಬರುತ್ತದೆ. ಒಂದು ಈ ಲೋಕದಲ್ಲಿ, ಮತ್ತೊಂದು ಪರಲೋಕದಲ್ಲಿ. ಸತ್ಯವಿಶ್ವಾಸಿ ನರಕದ ಯಾತನೆಯನ್ನು ಈ ಲೋಕದಲ್ಲಿ ಅನುಭವಿಸುತ್ತಾನೆ. ಅಂದರೆ ಅವಿಶ್ವಾಸಿಗಳು ಅವರಿಗೆ ತರತರದ ತೊಂದರೆ ಕೊಡುತ್ತಾರೆ. ಹಾಗಲ್ಲದೆ, ಸತ್ಯ ವಿಶ್ವಾಸಿಗಳು ಸಹ ಪರಲೋಕದ ನರಕದಲ್ಲಿ ಪ್ರವೇಶಿಸುತ್ತಾರೆ ಎಂದು ಇದರ ಅರ್ಥವಲ್ಲ. ಯಾಕೆಂದರೆ, ಖುರ್‌ಆನ್ ಪ್ರಕಾರ ಸತ್ಯ ವಿಶ್ವಾಸಿ ಪರಲೋಕದ ನರಕದಲ್ಲಿ ಎಂದೂ ಪ್ರವೇಶಿಸಲಾರ. ಸತ್ಯವಿಶ್ವಾಸಿಯ ಬಗ್ಗೆ ಖುರ್‌ಆನಿನಲ್ಲಿ 'ಲಾ ಯಸ್‌ಮವೂನ ಹಸೀಸಹಾ' ಅಂದರೆ ಸತ್ಯವಿಶ್ವಾಸಿ ನರಕದಿಂದ, ಅದರ ಶಬ್ದ ಕೂಡ ಆಲಿಸಲಾರದಷ್ಟು ದೂರದಲ್ಲಿ ಇರುವನೆಂದು ಹೇಳಲಾಗಿದೆ. ಒಟ್ಟಿನಲ್ಲಿ, ಇಹಲೋಕದ ಕಷ್ಟಾನುಭವಗಳೇ ಸತ್ಯವಿಶ್ವಾಸಿಗಳ ಮಟ್ಟಿಗೆ ನರಕವನ್ನು ಹಾದುಹೋಗುವಂತೆ ಆಗಿದೆ.





ಅಥವಾ ಸಂಪೂರ್ಣವಾದ (ಸಾಮೂಹಿಕ) ನಾಶ ರೂಪದಲ್ಲಿ- ಆಗ ಯಾರ ಸ್ಥಾನ ನಿಕೃಷ್ಟ ವಾದುದೆಂದೂ ಯಾರ ಪಕ್ಷ ಬಲಹೀನ ವಾದುದೆಂದೂ ಅವರಿಗೆ ಮನವರಿಕೆಯಾಗುವುದು.'

فَسَيَعْلَمُونَ مَنْ هُوَ شَرٌّ مَكَانًا وَأَضْعَفُ جُنْدًا ﴿٧٦﴾

**77.** ಸತ್ಪಥ ಪಡೆದವರಿಗೆ ಅಲ್ಲಾಹನು ಸತ್ಪಥದಲ್ಲಿ ಪ್ರಗತಿ ನೀಡುತ್ತಾನೆ. ಸ್ಥಾಯಿಯಾದ ಸತ್ಕರ್ಮಗಳು ನಿನ್ನ ಪ್ರಭುವಿನ ಬಳಿ ಪ್ರತಿಫಲ ಮತ್ತು ಪರಿಣಾಮದ ದೃಷ್ಟಿಯಲ್ಲಿ ಉತ್ತಮವಾಗಿವೆ.

وَيَزِيدُ اللَّهُ الَّذِينَ اهْتَدَوْا هُدًى ۗ وَالْبَاقِيَاتُ الصَّالِحَاتُ خَيْرٌ عِنْدَ رَبِّكَ ثَوَابًا وَخَيْرٌ مَرَدًّا ﴿٧٧﴾

**78.** ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆದು 'ಖಂಡಿತವಾಗಿಯೂ ನನಗೆ ಸಂಪತ್ತು ಮತ್ತು ಸಂತಾನಗಳನ್ನು ನೀಡಲಾಗುವುದು' ಎಂದು ಹೇಳುವವನನ್ನು ನೀನು ಕಂಡಿದ್ದೀಯಾ?

أَفَرَأَيْتَ الَّذِي كَفَرَ بِآيَاتِنَا وَقَالَ لَأُوتَيَنَّ مَالًا وَوَلَدًا ﴿٧٨﴾

**79.** ಅವನು ಅಗೋಚರ ಸಂಗತಿಯನ್ನು ಬಲ್ಲನೇ? ಅಥವಾ ಅವನು ದಯಾವಂತನಾದ ಅಲ್ಲಾಹನಿಂದ ಯಾವುದಾದರೂ ವಾಗ್ದಾನವನ್ನು ಪಡೆದಿರುವನೇ?

أَطَّلَعَ الْغَيْبَ أَمِ اتَّخَذَ عِنْدَ الرَّحْمَٰنِ عَهْدًا ﴿٧٩﴾

**80.** ಎಂದಿಗೂ ಇಲ್ಲ. ಅವನು ಹೇಳುವುದನ್ನು ನಾವು ಬರೆದಿಡುವೆವು ಮತ್ತು ಅವನ ಶಿಕ್ಷೆಯನ್ನು ದೀರ್ಘಗೊಳಿಸುವೆವು.

كَلَّا ۚ سَنَكْتُبُ مَا يَقُولُ وَنَمُدُّ لَهُ مِنَ الْعَذَابِ مَدًّا ﴿٨٠﴾

**81.** ಯಾವುದರ ಬಗ್ಗೆ ಅವನು ಹೆಮ್ಮೆಯಿಂದ ಹೇಳುತ್ತಾನೋ ಅದಕ್ಕೆ ನಾವು ವಾರೀಸುದಾರರಾಗುವೆವು. ಅವನು ಒಬ್ಬಂಟಿಗನಾಗಿ ನಮ್ಮ ಬಳಿಗೆ ಬರುವನು.

وَنَرِثُهُ مَا يَقُولُ وَيَأْتِينَا فَرْدًا ﴿٨١﴾

**82.** ತಮಗೆ ಗೌರವ ಸಿದ್ಧಿಸಲಿಕ್ಕೋಸ್ಕರ ಅವರು ಅಲ್ಲಾಹನನ್ನು ಬಿಟ್ಟು ಅನೇಕ ದೇವರುಗಳನ್ನು ಮಾಡಿಟ್ಟಿರುವರು.

وَاتَّخَذُوا مِنْ دُونِ اللَّهِ آلِهَةً لِيَكُونُوا لَهُمْ عِزًّا ﴿٨٢﴾

**83.** ಎಂದಿಗೂ ಇಲ್ಲ. ಅವರು (ಆ ದೇವರುಗಳು) ಇವರ ಆರಾಧನೆಯನ್ನು ಅಲ್ಲಗಳೆಯುವರು. ಅವರು ಇವರಿಗೆ ವಿರೋಧಿಗಳಾಗುವರು.

كَلَّا ۚ سَيَكْفُرُونَ بِعِبَادَتِهِمْ وَيَكُونُونَ عَلَيْهِمْ ضِدًّا ﴿٨٣﴾

**84. ಅವಿಶ್ವಾಸಿಗಳಿಗೆ ಅತಿಯಾಗಿ ಉತ್ತೇಜನ ನೀಡುವ ದುರ್ಜನರನ್ನು ನಾವು ಅವರ ಬಳಿಗೆ ಕಳುಹಿಸಿರುವುದು ನಿನಗೆ ಗೊತ್ತಿಲ್ಲವೇ?**

أَلَمْ تَرَ أَنَّآ أَرْسَلْنَا الشَّيٰطِينَ عَلَى الْكٰفِرِينَ تَؤُزُّهُمْ أَزًّا ﴿٨٣﴾

**85. ಆದ್ದರಿಂದ ಅವರ ವಿರುದ್ಧ ನೀನು ಅವಸರ ಪಡಬೇಡ. ಖಂಡಿತವಾಗಿಯೂ ಅವರ ನಾಶದ ದಿನಗಳನ್ನು ನಾವು ಎಣಿಕೆಮಾಡಿ ಇಟ್ಟಿದ್ದೇವೆ.**

فَلَا تَعْجَلْ عَلَيْهِمْ ۖ إِنَّمَا نَعُدُّ لَهُمْ عَدًّا ﴿٨٤﴾

**86. ಭಯಭಕ್ತಿಯುಳ್ಳವರನ್ನು ಒಟ್ಟುಗೂಡಿಸಿ** (ವಿಶಿಷ್ಟ) **ಅತಿಥಿಗಳಂತೆ ದಯಾವಂತನಾದ** *ಅಲ್ಲಾಹನ* **ಸನ್ನಿಧಿಗೆ ಕರೆದುಕೊಂಡು ಹೋಗುವ ದಿನ,**

يَوْمَ نَحْشُرُ الْمُتَّقِينَ إِلَى الرَّحْمٰنِ وَفْدًا ﴿٨٥﴾

**87. ಹಾಗೂ ದುಷ್ಕರ್ಮಿಗಳನ್ನು** (ಬಾಯಾರಿದ) **ಜಾನುವಾರುಗಳನ್ನು ಜಲಾಶಯಕ್ಕೆ ಕೊಂಡೊಯ್ಯುವಂತೆ ನರಕಕ್ಕೆ ಅಟ್ಟಿಕೊಂಡು ಹೋಗುವ ದಿನ,**

وَنَسُوقُ الْمُجْرِمِينَ إِلٰى جَهَنَّمَ وِرْدًا ﴿٨٦﴾

**88.** (ಅಂದು) **ದಯಾವಂತನಾದ** *ಅಲ್ಲಾಹನಿಂದ* **ವಾಗ್ದಾನ ಪಡೆದವರಿಗೆ ಹೊರತು ಬೇರೆ ಯಾರಿಗೂ ಶಿಫಾರಸ್ಸು ಮಾಡುವ ಅಧಿಕಾರವಿರಲಾರದು.**

لَا يَمْلِكُونَ الشَّفٰعَةَ إِلَّا مَنِ اتَّخَذَ عِنْدَ الرَّحْمٰنِ عَهْدًا ﴿٨٧﴾

**89. ದಯಾವಂತನಾದ** *ದೇವನು* **ಒಬ್ಬ ಪುತ್ರನನ್ನು ಹೊಂದಿದ್ದಾನೆಂದು ಅವರು ಹೇಳುತ್ತಾರೆ.**

وَقَالُوا اتَّخَذَ الرَّحْمٰنُ وَلَدًا ﴿٨٨﴾

**90.** (ನೀನು ಹೇಳು:) **'ನೀವು ಅತಿ ಘೋರವಾದ ಮಾತನ್ನಾಡಿದ್ದೀರಿ.'**

لَقَدْ جِئْتُمْ شَيْـًٔا إِدًّا ﴿٨٩﴾

**91. ಆಕಾಶಗಳು ಸ್ಫೋಟಗೊಳ್ಳಬಹುದು, ಭೂಮಿ ಸೀಳಲ್ಪಡಬಹುದು, ಪರ್ವತಗಳು ಛಿದ್ರ ಛಿದ್ರಗೊಳ್ಳಬಹುದು.**

تَكَادُ السَّمٰوٰتُ يَتَفَطَّرْنَ مِنْهُ وَتَنْشَقُّ الْأَرْضُ وَتَخِرُّ الْجِبَالُ هَدًّا ﴿٩٠﴾

**92. ಏಕೆಂದರೆ, ದಯಾವಂತನಾದ** *ದೇವನಿಗೆ* **ಒಬ್ಬ ಪುತ್ರನಿದ್ದಾನೆಂದು ಅವರು ವಾದಿಸುತ್ತಾರೆ.**

أَنْ دَعَوْا لِلرَّحْمٰنِ وَلَدًا ﴿٩١﴾

**93. ತಾನೊಬ್ಬ ಪುತ್ರನನ್ನು ಹೊಂದುವುದು ದಯಾವಂತನಾದ** *ದೇವನಿಗೆ* **ಎಂದಿಗೂ ಭೂಷಣವಲ್ಲ.**

وَمَا يَنْبَغِي لِلرَّحْمٰنِ أَنْ يَتَّخِذَ وَلَدًا ﴿٩٢﴾





**94. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ದಯಾವಂತನಾದ** *ದೇವನ* **ಮುಂದೆ ಗುಲಾಮರಂತೆ ಹಾಜರಾಗುವರು.**

إِنْ كُلُّ مَنْ فِي السَّمٰوٰتِ وَالْأَرْضِ إِلَّآ اٰتِي الرَّحْمٰنِ عَبْدًا ﴿٩٣﴾

**95. ಖಂಡಿತವಾಗಿಯೂ ಅವನು ಅವರ ಬಗ್ಗೆ ತಿಳಿದುಕೊಂಡಿದ್ದಾನೆ ಮತ್ತು ಎಣಿಕೆ ಮಾಡಿಟ್ಟಿದ್ದಾನೆ.**

لَقَدْ أَحْصٰهُمْ وَعَدَّهُمْ عَدًّا ﴿٩٤﴾

**96. ಅವರೆಲ್ಲರೂ ಪುನರುತ್ಥಾನ ದಿನದಂದು ಒಬ್ಬಂಟಿಗರಾಗಿ ಅವನ ಮುಂದೆ ಹಾಜರಾಗುವರು.**

وَكُلُّهُمْ اٰتِيهِ يَوْمَ الْقِيٰمَةِ فَرْدًا ﴿٩٥﴾

**97. ಯಾರು ಸತ್ಯವಿಶ್ವಾಸಿಗಳಾಗಿ ಸತ್ಕೃತ್ಯ ಮಾಡುತ್ತಾರೋ, ದಯಾವಂತನಾದ** *ದೇವನು* **ಅವರ ಹೃದಯಗಳಲ್ಲಿ ವಿಶೇಷವಾದೊಂದು ಪ್ರೀತಿಯನ್ನು ಹುಟ್ಟಿಸುತ್ತಾನೆ.**

إِنَّ الَّذِينَ اٰمَنُوا وَعَمِلُوا الصّٰلِحٰتِ سَيَجْعَلُ لَهُمُ الرَّحْمٰنُ وُدًّا ﴿٩٦﴾

**98. ಈ ಖುರ್‌ಆನ್ ಮೂಲಕ ಭಯಭಕ್ತಿಯುಳ್ಳವರಿಗೆ ನೀನು ಶುಭವಾರ್ತೆಯನ್ನು ಅರುಹಲಿಕ್ಕಾಗಿಯೂ ಕಲಹ ಸೃಷ್ಟಿಸುವವರಿಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿಯೂ ನಾವು ಇದನ್ನು ನಿನ್ನ ಭಾಷೆಯಲ್ಲಿ ಸರಳಗೊಳಿಸಿದ್ದೇವೆ.**

فَإِنَّمَا يَسَّرْنٰهُ بِلِسَانِكَ لِتُبَشِّرَ بِهِ الْمُتَّقِينَ وَتُنْذِرَ بِهِ قَوْمًا لُدًّا ﴿٩٧﴾

**99. ಇವರಿಗೆ ಮುಂಚೆ ಎಷ್ಟೆಲ್ಲ ಪೀಳಿಗೆಗಳನ್ನು ನಾವು ನಾಶಗೊಳಿಸಿದ್ದೇವೆ! ಅವರ ಪೈಕಿ ಯಾರನ್ನಾದರೂ ನೀನು ಕಾಣುತ್ತಿದ್ದೀಯಾ? ಅಥವಾ ಯಾರದೇ ಪಿಸುಗುಟ್ಟುವ ಶಬ್ದವನ್ನಾದರೂ ನೀನು ಕೇಳುತ್ತಿದ್ದೀಯಾ?**

وَكَمْ أَهْلَكْنَا قَبْلَهُمْ مِنْ قَرْنٍ ۖ هَلْ تُحِسُّ مِنْهُمْ مِنْ أَحَدٍ أَوْ تَسْمَعُ لَهُمْ رِكْزًا ﴿٩٨﴾

سُوْرَةُ طٰهٰ مَكِّيَّةٌ وَّهِيَ مَعَ الْبَسْمَلَةِ مِائَةٌ وَّسِتٌّ وَّثَلٰثُوْنَ اٰيَةً وَّثَمَانِيَةُ رُكُوْعَاتٍ

# 20. ತಾಹಾ

ಮಕ್ಕದಲ್ಲಿ ಅವತೀರ್ಣವಾದುದು

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 136 ಆಯತ್‌ಗಳು ಹಾಗೂ 8 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಎಲೈ ಸಕಲ ಗುಣಸಂಪನ್ನನಾದ ಮನುಷ್ಯಾ,**[336]

طٰهٰ ﴿٢﴾

**3. ನಿನ್ನನ್ನು ಸಂಕಷ್ಟಕ್ಕೀಡುಮಾಡಲಿಕ್ಕಾಗಿ ನಾವು ಈ ಖುರ್‌ಆನನ್ನು ಅವತೀರ್ಣಗೊಳಿಸಲಿಲ್ಲ.**

مَآ اَنْزَلْنَا عَلَيْكَ الْقُرْاٰنَ لِتَشْقٰٓى ﴿٣﴾

**4. ಬದಲು, ಅದು** (ಅಲ್ಲಾಹನಿಗೆ) **ಭಯಪಡುವವರಿಗೆ ಉಪದೇಶವಾಗಿದೆ.**

اِلَّا تَذْكِرَةً لِّمَنْ يَّخْشٰى ﴿٤﴾

**5. ಭೂಮಿ ಮತ್ತು ಉನ್ನತವಾದ ಆಕಾಶಗಳನ್ನು ಸೃಷ್ಟಿಸಿದವನಿಂದ ಅದು ಅವತೀರ್ಣವಾಗಿದೆ.**

تَنْزِيْلًا مِّمَّنْ خَلَقَ الْاَرْضَ وَالسَّمٰوٰتِ الْعُلٰى ﴿٥﴾

**6.** ಅವನು **ಸಿಂಹಾಸನಾರೂಢನಾಗಿರುವ ಪರಮ ದಯಾವಂತನಾಗಿದ್ದಾನೆ.**

اَلرَّحْمٰنُ عَلَى الْعَرْشِ اسْتَوٰى ﴿٦﴾

**7. ಆಕಾಶಗಳಲ್ಲೂ ಭೂಮಿಯಲ್ಲೂ ಅವುಗಳ ಮಧ್ಯದಲ್ಲಿಯೂ ತೇವವುಳ್ಳ ಮಣ್ಣಿನಡಿಯಲ್ಲಿಯೂ ಇರುವ ಎಲ್ಲವೂ ಅವನಿಗೆ ಸೇರುತ್ತವೆ.**

لَهٗ مَا فِى السَّمٰوٰتِ وَمَا فِى الْاَرْضِ وَمَا بَيْنَهُمَا وَمَا تَحْتَ الثَّرٰى ﴿٧﴾

**8. ನೀನು ಉಚ್ಚ ಸ್ವರದಲ್ಲಿ ಮಾತನಾಡಿದರೂ** (ಮೆಲುದನಿಯಲ್ಲಿ ಮಾತನಾಡಿದರೂ ಅವನು ಅದನ್ನು ಆಲಿಸುತ್ತಾನೆ.) **ಅವನು ರಹಸ್ಯ ವಿಚಾರಗಳನ್ನೂ ಅತಿ ಗೋಪ್ಯವಾದ ಸಂಗತಿಗಳನ್ನೂ ಬಲ್ಲವನಾಗಿದ್ದಾನೆ.**

وَاِنْ تَجْهَرْ بِالْقَوْلِ فَاِنَّهٗ يَعْلَمُ السِّرَّ وَاَخْفٰى ﴿٨﴾

336. ಮೂಲದಲ್ಲಿ ತಾಹಾ ಎಂದು ಇದೆ. ಇದು ಕೆಲವು ಅಧ್ಯಾಯಗಳ ಆರಂಭದಲ್ಲಿರುವಂತಹ ಬಿಡಿ ಅಕ್ಷರಗಳ (ಮುಖತ್ತಆತ್) ಸಾಲಿಗೆ ಸೇರಿದ್ದಲ್ಲ. ವಿವಿಧ ಅರಬಿ ಗೋತ್ರಗಳಲ್ಲಿ ಬಳಕೆಯಲ್ಲಿರುವಂತೆ ಇದರ ಅರ್ಥ "ಓ ಸಕಲಗುಣ ಸಂಪನ್ನನಾದ ಮನುಷ್ಯಾ" ಎಂದಾಗಿದೆ. (ಫತಹುಲ್ ಬಯಾನ್)





**9. ಅಲ್ಲಾಹ್ - ಅವನ ಹೊರತು ಬೇರೆ ದೇವನಿಲ್ಲ. ಅವನಿಗೆ ಅತಿ ಸುಂದರವಾದ ನಾಮಗಳಿವೆ.**

اَللّٰهُ لَآ اِلٰهَ اِلَّا هُوَ ؕ لَهُ الْاَسْمَآءُ الْحُسْنٰى ﴿٩﴾

**10. ಮೂಸಾರ ವೃತ್ತಾಂತ ನಿನಗೆ ತಲಪಿದೆಯೇ?**

وَهَلْ اَتٰىكَ حَدِيْثُ مُوْسٰى ﴿١٠﴾

**11. ಅವರು ಒಂದು ಬೆಂಕಿಯನ್ನು ಕಂಡಾಗ ತನ್ನ ಕುಟುಂಬದವರೊಡನೆ ಹೇಳಿದರು: 'ನೀವಿಲ್ಲಿ ನಿಲ್ಲಿರಿ. ನಾನೊಂದು ಬೆಂಕಿಯನ್ನು ಕಂಡಿದ್ದೇನೆ. ಪ್ರಾಯಶಃ ಅದರಿಂದ ಒಂದು ಕೆಂಡವನ್ನು ನಾನು ನಿಮಗೋಸ್ಕರ ತರುವೆನು.**[336A] **ಅಥವಾ ನಾನು ಬೆಂಕಿಯ ಸಮೀಪ ಮಾರ್ಗದರ್ಶನವನ್ನೇನಾದರೂ ಪಡೆಯಬಹುದು.'**

اِذْ رَاٰ نَارًا فَقَالَ لِاَهْلِهِ امْكُثُوْٓا اِنِّىْٓ اٰنَسْتُ نَارًا لَّعَلِّىْٓ اٰتِيْكُمْ مِّنْهَا بِقَبَسٍ اَوْ اَجِدُ عَلَى النَّارِ هُدًى ﴿١١﴾

**12. ಹಾಗೆ ಅವರು ಅದರ ಹತ್ತಿರ ಬಂದಾಗ, ಒಂದು ವಾಣಿ ಕೇಳಿಸಿತು: 'ಎಲೈ ಮೂಸಾ,**

فَلَمَّآ اَتٰىهَا نُوْدِىَ يٰمُوْسٰى ﴿١٢﴾

**13. 'ದಿಟವಾಗಿಯೂ ನಾನೇ ನಿನ್ನ ಪ್ರಭು. ಆದ್ದರಿಂದ ನೀನು ನಿನ್ನ ಎರಡು ಪಾದರಕ್ಷೆಗಳನ್ನೂ ಕಳಚು.**[337] **ಏಕೆಂದರೆ ನೀನೀಗ ಪವಿತ್ರವಾದ ತುವಾ ಕಣಿವೆಯಲ್ಲಿರುವೆ.**

اِنِّىْٓ اَنَا رَبُّكَ فَاخْلَعْ نَعْلَيْكَ ۚ اِنَّكَ بِالْوَادِ الْمُقَدَّسِ طُوًى ﴿١٣﴾

**14. 'ನಾನು ನಿನ್ನನ್ನು ಆಯ್ಕೆ ಮಾಡಿದ್ದೇನೆ. ಆದ್ದರಿಂದ ನಿನಗೆ ನೀಡಲಾಗುವ ದಿವ್ಯ ಸಂದೇಶವನ್ನು ಆಲಿಸು.**

وَاَنَا اخْتَرْتُكَ فَاسْتَمِعْ لِمَا يُوْحٰى ﴿١٤﴾

336A. "ಒಂದು ಬೆಂಕಿ" ಎಂದು ಹೇಳಿದುದರಿಂದ ಪ್ರವಾದಿ ಮೂಸಾ (ಅಲೈಹಿಸ್ಸಲಾಂ) ಸ್ವತಃ ಈ ದೃಶ್ಯವನ್ನು ಒಂದು ದಿವ್ಯದರ್ಶನವೆಂದು ಮನಗಂಡಿದ್ದರೆಂದು ತಿಳಿದುಬರುತ್ತದೆ. ಸಾಮಾನ್ಯವಾದ ಬೆಂಕಿಯಾಗಿದ್ದರೆ "ಒಂದು ಬೆಂಕಿ" ಎಂದು ಹೇಳಬೇಕಾಗಿಲ್ಲ; ಬೆಂಕಿ ಎಂದು ಮಾತ್ರ ಹೇಳಿದರೆ ಸಾಕಾಗುತ್ತಿತ್ತು. ಯಥಾರ್ಥದಲ್ಲಿ ಬೆಂಕಿಯ ರೂಪದಲ್ಲಿ ಅವರಿಗೆ ಕಂಡುದು ಒಂದು ದಿವ್ಯದರ್ಶನವಾಗಿತ್ತು. ಇದು ಅಲ್ಲಾಹನ ಕಡೆಯಿಂದ ಎಂದು ಮನಗಂಡದ್ದರಿಂದ ತಾನು ಒಂದು ಬೆಂಕಿಯನ್ನು ಕಂಡಿದ್ದೇನೆಂದು ಹಝ್ರತ್ ಮೂಸಾ (ಅ) ತನ್ನ ಕುಟುಂಬದವರೊಡನೆ ಹೇಳಿದರು.

"ನಾನು ಅದರಿಂದ ಒಂದು ಕೆಂಡವನ್ನು ನಿಮಗೋಸ್ಕರ ತರುವೆನು" ಅಂದರೆ, 'ನನಗೆ ಲಭಿಸುವ ದಿವ್ಯದರ್ಶನವು ನಿಮಗೂ ಸಮುದಾಯಕ್ಕೂ ಅನ್ವಯಿಸುವಂಥದ್ದಾಗಿದ್ದರೆ ಆ ನಂತರ ನಾನು ನಿಮಗೆಲ್ಲ ಆ ಮೂಲಕ ಉಪದೇಶ ನೀಡುವೆನು' ಎಂದರ್ಥ. (27ನೇ ಅಧ್ಯಾಯ 8ನೇ ವಚನ ಸಹ ನೋಡಿರಿ).

337. ಪಾದರಕ್ಷೆ ಎಂಬುದರ ತಾತ್ಪರ್ಯ ಲೌಕಿಕ ಸಂಬಂಧವಾಗಿದೆ. ಅವು ಎರಡು ವಿಧ. ಒಂದು ಕೌಟುಂಬಿಕ ಸಂಬಂಧ ಮತ್ತೊಂದು ಸಾಮಾಜಿಕ ಸಂಬಂಧ. ಅಲ್ಲಾಹನ ಸನ್ನಿಧಿಯಲ್ಲಿರುವಾಗ ಲೌಕಿಕವಾದ ಈ ಸಂಬಂಧಗಳ ಕಡೆಗೆ ಗಮನಹರಿಸುವುದರಿಂದ ವಿಮುಕ್ತನಾಗಿರಬೇಕೆಂದು ತಾತ್ಪರ್ಯ.

**15. 'ದಿಟವಾಗಿಯೂ ನಾನೇ ಅಲ್ಲಾಹ್. ನನ್ನ ಹೊರತು ಬೇರೆ ದೇವನಿಲ್ಲ. ಆದ್ದರಿಂದ ನನ್ನನ್ನು ಆರಾಧಿಸು; ನನ್ನ ಸ್ಮರಣೆಗೋಸ್ಕರ ಪ್ರಾರ್ಥನೆಯನ್ನು ನಿಷ್ಠೆಯಿಂದ ಸಲ್ಲಿಸು.**

إِنَّنِيٓ أَنَا ٱللَّهُ لَآ إِلَٰهَ إِلَّآ أَنَا۠ فَٱعۡبُدۡنِي وَ
أَقِمِ ٱلصَّلَوٰةَ لِذِكۡرِيٓ ﴿١٥﴾

**16. 'ಖಂಡಿತವಾಗಿಯೂ ಅಂತ್ಯದಿನ ಬರಲಿದೆ. ಪ್ರತಿಯೊಂದು ಆತ್ಮ ಅದರ ಕರ್ಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವಂತಾಗಲು ನಾನು ಅದನ್ನು ಪ್ರಕಟ ಪಡಿಸುವೆನು.**

إِنَّ ٱلسَّاعَةَ ءَاتِيَةٌ أَكَادُ أُخۡفِيهَا لِتُجۡزَىٰ
كُلُّ نَفۡسِۭ بِمَا تَسۡعَىٰ ﴿١٦﴾

**17. 'ಆದ್ದರಿಂದ ಅದರ** (ಅಂತ್ಯದಿನದ) **ಬಗ್ಗೆ ವಿಶ್ವಾಸಹೊಂದದೆ ಸ್ವೇಚ್ಛಾಚಾರವನ್ನು ಕೈಗೊಳ್ಳುವವನು ಅದರಿಂದ** (ಆ ನಂಬಿಕೆಯಿಂದ) **ನಿನ್ನನ್ನು ತಡೆದು ನಾಶಕ್ಕೀಡುಮಾಡದಿರಲಿ.'**

فَلَا يَصُدَّنَّكَ عَنۡهَا مَن لَّا يُؤۡمِنُ بِهَا
وَٱتَّبَعَ هَوَىٰهُ فَتَرۡدَىٰ ﴿١٧﴾

**18.** (ಅವರೊಡನೆ ಕೇಳಲಾಯಿತು:) **'ಓ ಮೂಸಾ, ನಿನ್ನ ಬಲಗೈಯಲ್ಲಿ ಇರುವುದೇನು?'**

وَمَا تِلۡكَ بِيَمِينِكَ يَٰمُوسَىٰ ﴿١٨﴾

**19. ಅವರು ಹೇಳಿದರು: 'ಇದು ನನ್ನ ಬಡಿಗೆಯಾಗಿದೆ. ಇದನ್ನು ಊರಿಕೊಂಡು ನಾನು ನಡೆಯುತ್ತೇನೆ. ಇದರಿಂದ ನನ್ನ ಆಡುಗಳಿಗೆ ನಾನು** (ಮರದ ಎಲೆಗಳನ್ನು) **ಝಾಡಿಸುತ್ತೇನೆ. ಇದರಿಂದ ನನಗೆ ಬೇರೆಯೂ ಅನೇಕ ಉಪಯೋಗಗಳಿವೆ.'**

قَالَ هِيَ عَصَايَ أَتَوَكَّؤُاْ عَلَيۡهَا وَأَهُشُّ
بِهَا عَلَىٰ غَنَمِي وَلِيَ فِيهَا مَـَٔارِبُ أُخۡرَىٰ ﴿١٩﴾

**20.** ಅಲ್ಲಾಹ್ **ಹೇಳಿದನು: 'ಓ ಮೂಸಾ ಅದನ್ನು ನೀನು ಕೆಳಗೆ ಎಸೆ.'**

قَالَ أَلۡقِهَا يَٰمُوسَىٰ ﴿٢٠﴾

**21. ಆಗ ಅವರು ಅದನ್ನು ಕೆಳಗೆ ಎಸೆದರು. ಆಗ ಅದೊಂದು ಹರಿದಾಡುವ ಹಾವಾಯಿತು.**

فَأَلۡقَىٰهَا فَإِذَا هِيَ حَيَّةٞ تَسۡعَىٰ ﴿٢١﴾

**22.** ಅಲ್ಲಾಹ್ **ಹೇಳಿದನು: 'ಅದನ್ನು ಹಿಡಿದುಕೋ; ಹೆದರಬೇಡ. ನಾವು ಅದನ್ನು ಅದರ ಪೂರ್ವಸ್ಥಿತಿಗೆ ತರುವೆವು.**

قَالَ خُذۡهَا وَلَا تَخَفۡۖ سَنُعِيدُهَا
سِيرَتَهَا ٱلۡأُولَىٰ ﴿٢٢﴾

**23. 'ನಿನ್ನ ಕೈಯನ್ನು ನಿನ್ನ ಬಗಲಿಗೆ ಅದುಮಿ ಹಿಡಿ. ರೋಗರಹಿತವಾಗಿಯೇ ಅದು ಬೆಳ್ಳಗಾಗಿ ಹೊರ ಬರುವುದು. ಇದು ಇನ್ನೊಂದು ದೃಷ್ಟಾಂತವಾಗಿದೆ.**

وَٱضۡمُمۡ يَدَكَ إِلَىٰ جَنَاحِكَ تَخۡرُجۡ
بَيۡضَآءَ مِنۡ غَيۡرِ سُوٓءٍ ءَايَةً أُخۡرَىٰ ﴿٢٣﴾





**24. '**ಇದು **ನಿನಗೆ ನಮ್ಮ ಕೆಲವು ದೊಡ್ಡ ದೃಷ್ಟಾಂತಗಳನ್ನು ತೋರಿಸಲಿಕ್ಕೋಸ್ಕರವಾಗಿದೆ.**

لِنُرِيَكَ مِنۡ ءَايَٰتِنَا ٱلۡكُبۡرَى ﴿٢٤﴾

**25. 'ನೀನು ಫಿರ್‌ಔನನ ಬಳಿಗೆ ಹೋಗು. ಅವನು ದುಷ್ಕರ್ಮಿಯಾಗಿದ್ದಾನೆ.'**

ٱذۡهَبۡ إِلَىٰ فِرۡعَوۡنَ إِنَّهُۥ طَغَىٰ ﴿٢٥﴾

**26. ಮೂಸಾ ಹೇಳಿದರು: 'ನನ್ನ ಪ್ರಭೂ, ನನ್ನ ಹೃದಯವನ್ನು ನೀನು ವಿಶಾಲಗೊಳಿಸು.**

قَالَ رَبِّ ٱشۡرَحۡ لِي صَدۡرِي ﴿٢٦﴾

**27. 'ನನ್ನ ಕಾರ್ಯಭಾರ ನೀನು ಸುಲಭಗೊಳಿಸು.**

وَيَسِّرۡ لِيٓ أَمۡرِي ﴿٢٧﴾

**28. 'ನನ್ನ ನಾಲಗೆಯ ತೊಡಕನ್ನು ನೀಗಿಸು.**

وَٱحۡلُلۡ عُقۡدَةٗ مِّن لِّسَانِي ﴿٢٨﴾

**29. 'ನನ್ನ ಮಾತನ್ನು ಅವರು ತಿಳಿಯುವಂತಾಗಲಿ.**

يَفۡقَهُواْ قَوۡلِي ﴿٢٩﴾

**30. 'ನನ್ನ ಕುಟುಂಬದಿಂದ ಒಬ್ಬ ಸಹಾಯಕನನ್ನು ನನಗೆ ನೀಡು -**

وَٱجۡعَل لِّي وَزِيرٗا مِّنۡ أَهۡلِي ﴿٣٠﴾

**31. 'ನನ್ನ ಸಹೋದರ ಹಾರೂನನನ್ನು.**

هَٰرُونَ أَخِي ﴿٣١﴾

**32. 'ಆತನ ಮೂಲಕ ನನ್ನ ಶಕ್ತಿಯನ್ನು ಹೆಚ್ಚಿಸು.**

ٱشۡدُدۡ بِهِۦٓ أَزۡرِي ﴿٣٢﴾

**33. 'ನನ್ನ ಕೆಲಸದಲ್ಲಿ ಆತನನ್ನು ಸಹಭಾಗಿಯನ್ನಾಗಿ ಮಾಡು.**

وَأَشۡرِكۡهُ فِيٓ أَمۡرِي ﴿٣٣﴾

**34. 'ಹಾಗೆ ನಾವು ಹೆಚ್ಚು ಹೆಚ್ಚು ನಿನ್ನ ಸ್ತುತಿ ಗಾನವನ್ನು ಮಾಡುವಂತಾಗಲಿ.**

كَيۡ نُسَبِّحَكَ كَثِيرٗا ﴿٣٤﴾

**35. 'ಹಾಗೂ ನಿನ್ನನ್ನು ಹೆಚ್ಚು ಹೆಚ್ಚಾಗಿ ಸ್ಮರಿಸುವಂತಾಗಲಿ.**

وَنَذۡكُرَكَ كَثِيرًا ﴿٣٥﴾

**36. 'ನೀನಾದರೋ ನಮ್ಮನ್ನು ಚೆನ್ನಾಗಿ ಕಾಣುವವನಾಗಿರುವೆ.'**

إِنَّكَ كُنتَ بِنَا بَصِيرٗا ﴿٣٦﴾

**37.** ಅಲ್ಲಾಹ್ **ಹೇಳಿದನು: ''ಎಲೈ ಮೂಸಾ, ನಿನ್ನ ಬೇಡಿಕೆಯಂತೆ ನಿನಗೆ ನೀಡಲಾಗಿದೆ.**

قَالَ قَدۡ أُوتِيتَ سُؤۡلَكَ يَٰمُوسَىٰ ﴿٣٧﴾

38. "(ಇದಕ್ಕೆ ಮುಂಚೆ) ಬೇರೊಂದು ಸಂದರ್ಭದಲ್ಲಿ ಸಹ ನಿನಗೆ ನಾವು ಅನುಗ್ರಹ ನೀಡಿದ್ದೆವು.

وَلَقَدْ مَنَنَّا عَلَيْكَ مَرَّةً أُخْرَىٰ ٣٧

39. "ದಿವ್ಯ ಸಂದೇಶ ಮೂಲಕ ಅರುಹಲು ಅವಶ್ಯವಾದುದನ್ನು ಆಗ ನಿನ್ನ ತಾಯಿಗೆ ನಾವು ದಿವ್ಯ ಸಂದೇಶವಾಗಿ ಹೀಗೆ ಅರುಹಿದ ಸಂದರ್ಭ-

إِذْ أَوْحَيْنَا إِلَىٰ أُمِّكَ مَا يُوحَىٰ ٣٨

40. ಅವನನ್ನು ಪೆಟ್ಟಿಗೆಯಲ್ಲಿ ಇರಿಸಿ ಅದನ್ನು ನದಿಯಲ್ಲಿ ತೇಲಿಸಿಬಿಡು. ನದಿಯು ಅದನ್ನು ದಡ ಸೇರಿಸುವುದು. (ಆಗ) ಅದನ್ನು ನನ್ನ ಮತ್ತು ಅವನ ಶತ್ರುವಾಗಿರುವ ಓರ್ವನು ಎತ್ತಿಕೊಳ್ಳುವನು.' ಹಾಗೆ ನನ್ನ ಪ್ರೀತಿಯಿಂದ ನಾನು ನಿನ್ನನ್ನು ಆವರಿಸಿಕೊಂಡೆನು. ನೀನು ನನ್ನ ಕಣ್ಮುಂದೆ ಪೋಷಿಸಲ್ಪಡಲಿಕ್ಕಾಗಿ ಹೀಗೆ ಮಾಡಲಾಯಿತು.

أَنِ اقْذِفِيهِ فِي التَّابُوتِ فَاقْذِفِيهِ فِي الْيَمِّ فَلْيُلْقِهِ الْيَمُّ بِالسَّاحِلِ يَأْخُذْهُ عَدُوٌّ لِي وَعَدُوٌّ لَهُ ۚ وَأَلْقَيْتُ عَلَيْكَ مَحَبَّةً مِنِّي ۚ وَلِتُصْنَعَ عَلَىٰ عَيْنِي ٣٩

41. "ನಿನ್ನ ಸಹೋದರಿ (ಆ ಪೆಟ್ಟಿಗೆಯನ್ನು ನೋಡುತ್ತಾ ನದಿಯ ದಡದಲ್ಲಿ) ನಡೆದು ಹೋಗಿ 'ಇದರ (ಈ ಮಗುವಿನ) ಪಾಲನೆ ಪೋಷಣೆ ಮಾಡಬಲ್ಲ ಒಬ್ಬಳ ಬಗ್ಗೆ ನಾನು ನಿಮಗೆ ತಿಳಿಸಲೇ?' ಎಂದು ಕೇಳಿದಳು. ಹಾಗೆ ನಿನ್ನನ್ನು ನಾವು ನಿನ್ನ ಮಾತೆಯ ಬಳಿಗೆ ಮರಳಿಸಿದೆವು - ಆಕೆಯ ಕಣ್ಣನ್ನು ತಂಪು ಗೊಳಿಸಲಿಕ್ಕೋಸ್ಕರ ಮತ್ತು ಆಕೆ ದುಃಖಿಸದಿರಲಿಕ್ಕೋಸ್ಕರ. ನೀನು ಒಬ್ಬನನ್ನು ಹತ್ಯೆಮಾಡಿದ್ದೆ. ಆದರೆ ನಿನ್ನನ್ನು ನಾವು ದುಃಖದಿಂದ ವಿಮುಕ್ತಗೊಳಿಸಿದೆವು. ನಿನ್ನನ್ನು ನಾವು ನಾನಾ ತರದಲ್ಲಿ ಪರೀಕ್ಷಿಸಿದೆವು. ಅನಂತರ ಮದ್‌ಯನ್ ನಿವಾಸಿಗಳೊಂದಿಗೆ ಹಲವು ವರ್ಷಕಾಲ ನೀನು ವಾಸಿಸಿದೆ. ಎಲೈ ಮೂಸಾ, ಆ ಬಳಿಕ ನೀನು (ನಮ್ಮ ಸಂದೇಶವನ್ನು ಪಡೆಯಲು ಪ್ರಾಪ್ತನಾಗುವ) ಸಮುಚಿತ ಮಟ್ಟಕ್ಕೆ ತಲಪಿದೆ.

إِذْ تَمْشِي أُخْتُكَ فَتَقُولُ هَلْ أَدُلُّكُمْ عَلَىٰ مَنْ يَكْفُلُهُ ۖ فَرَجَعْنَاكَ إِلَىٰ أُمِّكَ كَيْ تَقَرَّ عَيْنُهَا وَلَا تَحْزَنَ ۚ وَقَتَلْتَ نَفْسًا فَنَجَّيْنَاكَ مِنَ الْغَمِّ وَفَتَنَّاكَ فُتُونًا ۚ فَلَبِثْتَ سِنِينَ فِي أَهْلِ مَدْيَنَ ثُمَّ جِئْتَ عَلَىٰ قَدَرٍ يَا مُوسَىٰ ٤٠

42. "ಹಾಗೆ, ನಾನು ನಿನ್ನನ್ನು ನನಗೋಸ್ಕರ ಆಯ್ಕೆ ಮಾಡಿದೆ.

وَاصْطَنَعْتُكَ لِنَفْسِي ٤١

43. "ನೀನು ಮತ್ತು ನಿನ್ನ ಸಹೋದರ ನನ್ನ ದೃಷ್ಟಾಂತಗಳೊಂದಿಗೆ ಹೋಗಿರಿ. ನನ್ನನ್ನು ಸ್ಮರಿಸುವ

اذْهَبْ أَنْتَ وَأَخُوكَ بِآيَاتِي وَلَا تَنِيَا





ವಿಚಾರದಲ್ಲಿ ನೀವು ಆಲಸಿಗಳಾಗಬೇಡಿರಿ.

فِي ذِكْرِي ٤٢

44. "ನೀವಿಬ್ಬರೂ ಫಿರ್‌ಔನನ ಬಳಿಗೆ ಹೋಗಿರಿ, ಅವನು ಅತಿಕ್ರಮಿಯಾಗಿದ್ದಾನೆ.

اذْهَبَا إِلَىٰ فِرْعَوْنَ إِنَّهُ طَغَىٰ ٤٣

45. "ಆದರೆ ಅವನೊಡನೆ ಸೌಮ್ಯವಾಗಿ ಮಾತನಾಡಿರಿ. ಅವನು ಉಪದೇಶವನ್ನು ಕೇಳಬಹುದು ಅಥವಾ ಹೆದರಬಹುದು."

فَقُولَا لَهُ قَوْلًا لَيِّنًا لَعَلَّهُ يَتَذَكَّرُ أَوْ يَخْشَىٰ ٤٤

46. ಅವರು (ಮೂಸಾ ಮತ್ತು ಹಾರೂನ್) ಹೇಳಿದರು: 'ನಮ್ಮ ಪ್ರಭೂ, ಅವನು ನಮ್ಮ ವಿರುದ್ಧ ಅತಿರೇಕದಿಂದ ವರ್ತಿಸಬಹುದು ಅಥವಾ ಅತಿಕ್ರಮವೆಸಗಬಹುದೆಂದು ನಮಗೆ ಭಯವಿದೆ.'

قَالَا رَبَّنَا إِنَّنَا نَخَافُ أَنْ يَفْرُطَ عَلَيْنَا أَوْ أَنْ يَطْغَىٰ ٤٥

47. ಅವನು ಹೇಳಿದನು: "ಭಯಪಡಬೇಡಿರಿ. ನಿಮ್ಮೀರ್ವರ ಜೊತೆಗೆ ನಾನೂ ಇದ್ದೇನೆ. ನಾನು (ನಿಮ್ಮ ಪ್ರಾರ್ಥನೆಗಳನ್ನು) ಆಲಿಸುತ್ತೇನೆ ಮತ್ತು (ಸ್ಥಿತಿ ಗತಿಗಳನ್ನು) ಕಾಣುತ್ತೇನೆ.

قَالَ لَا تَخَافَا ۖ إِنَّنِي مَعَكُمَا أَسْمَعُ وَأَرَىٰ ٤٦

48. "ಆದ್ದರಿಂದ ನೀವಿಬ್ಬರೂ ಅವನ ಬಳಿಗೆ ಹೋಗಿ ಹೀಗೆ ಹೇಳಿರಿ: 'ನಾವು ನಿನ್ನ ಪ್ರಭುವಿನಿಂದ ಬಂದ ಸಂದೇಶವಾಹಕರಾಗಿದ್ದೇವೆ. ಆದುದರಿಂದ ಇಸ್ರಾಈಲ್ ಸಂತತಿಗಳನ್ನು ನಮ್ಮೊಂದಿಗೆ ಕಳುಹಿಸಿಕೊಡು. ಅವರನ್ನು ಹಿಂಸಿಸಬೇಡ. ನಾವು ನಿನಗೋಸ್ಕರ ನಿನ್ನ ಪ್ರಭುವಿನಿಂದ ಒಂದು ದೃಷ್ಟಾಂತವನ್ನು ತಂದಿದ್ದೇವೆ. ಸತ್ಪಥವನ್ನು ಅನುಸರಿಸುವವನ ಮೇಲೆ ಶಾಂತಿ ಇರಲಿ.

فَأْتِيَاهُ فَقُولَا إِنَّا رَسُولَا رَبِّكَ فَأَرْسِلْ مَعَنَا بَنِي إِسْرَائِيلَ وَلَا تُعَذِّبْهُمْ ۖ قَدْ جِئْنَاكَ بِآيَةٍ مِنْ رَبِّكَ ۖ وَالسَّلَامُ عَلَىٰ مَنِ اتَّبَعَ الْهُدَىٰ ٤٧

49. 'ಯಾರು ಧಿಕ್ಕಾರ ತೋರಿಸಿ ಮುಖ ತಿರುಗಿಸಿ ಹೋಗುತ್ತಾನೋ ಅವನ ಮೇಲೆ ಶಿಕ್ಷೆ ಎರಗುವುದೆಂದು ನಮಗೆ ದಿವ್ಯ ಸಂದೇಶ ಲಭಿಸಿರುತ್ತದೆ.' "

إِنَّا قَدْ أُوحِيَ إِلَيْنَا أَنَّ الْعَذَابَ عَلَىٰ مَنْ كَذَّبَ وَتَوَلَّىٰ ٤٨

50. (ಹಾಗೆ ಅವರೀರ್ವರೂ ದೇವಸಂದೇಶವನ್ನು ಫಿರ್‌ಔನನಿಗೆ ತಲಪಿಸಿದಾಗ) ಅವನು ಕೇಳಿದನು: 'ಎಲೈ ಮೂಸಾ, ನಿಮ್ಮಿಬ್ಬರ ಪ್ರಭು ಯಾರು?'

قَالَ فَمَنْ رَبُّكُمَا يَا مُوسَىٰ ٤٩

**51.** **ಅವರು** (ಮೂಸಾ) **ಹೇಳಿದರು: 'ಪ್ರತಿಯೊಂದು ವಸ್ತುವನ್ನು ಅದರ ಸರಿಯಾದ ರೂಪದಲ್ಲಿ ಸೃಷ್ಟಿಸಿ, ಅನಂತರ ಅದಕ್ಕೆ ಮಾರ್ಗದರ್ಶನ ನೀಡಿದವನೇ ನಮ್ಮ ಪ್ರಭು.'**

قَالَ رَبُّنَا الَّذِيٓ اَعْطٰى كُلَّ شَيْءٍ خَلْقَهٗ ثُمَّ هَدٰى ﴿٥١﴾

**52.** **ಅವನು** (ಫಿರ್‌ಔನ್) **ಕೇಳಿದನು: 'ಹಾಗಾದರೆ ಹಿಂದಿನ ಪೀಳಿಗೆಗಳ ಗತಿಯೇನು?'**[337A]

قَالَ فَمَا بَالُ الْقُرُوْنِ الْاُوْلٰى ﴿٥٢﴾

**53.** **ಅವರು ಹೇಳಿದರು: 'ಅವರ ಬಗ್ಗೆ ವಿವರವೆಲ್ಲ ನನ್ನ ಪ್ರಭುವಿನ ಬಳಿಯಿರುವ ಒಂದು ಗ್ರಂಥದಲ್ಲಿದೆ. ನನ್ನ ಪ್ರಭು ತಪ್ಪುಮಾಡುವವನಲ್ಲ; ಮರೆತು ಬಿಡುವವನೂ ಅಲ್ಲ.**

قَالَ عِلْمُهَا عِنْدَ رَبِّيْ فِيْ كِتٰبٍ ۚ لَا يَضِلُّ رَبِّيْ وَلَا يَنْسَى ﴿٥٣﴾

**54.** **'ಅವನೇ ನಿಮಗೆ ಭೂಮಿಯನ್ನು ಹಾಸಿ ಕೊಟ್ಟಿದ್ದಾನೆ. ಅದರಲ್ಲಿ ಹಲವು ಮಾರ್ಗಗಳನ್ನು ತೆರೆದುಕೊಟ್ಟಿದ್ದಾನೆ. ಆಕಾಶದಿಂದ ನೀರನ್ನೂ ಇಳಿಸಿಕೊಟ್ಟಿದ್ದಾನೆ. ಅದರಿಂದ ವಿವಿಧ ತರದ ಸಸ್ಯಗಳು ಬೆಳೆಯುವಂತೆ ನಾವು ಮಾಡುತ್ತೇವೆ.**

الَّذِيْ جَعَلَ لَكُمُ الْاَرْضَ مَهْدًا وَّسَلَكَ لَكُمْ فِيْهَا سُبُلًا وَّاَنْزَلَ مِنَ السَّمَآءِ مَآءً ۗ فَاَخْرَجْنَا بِهٖٓ اَزْوَاجًا مِّنْ نَّبَاتٍ شَتّٰى ﴿٥٤﴾

**55.** **ನೀವು ಭಕ್ಷಿಸಿರಿ. ನಿಮ್ಮ ಜಾನುವಾರುಗಳನ್ನೂ ಮೇಯಿಸಿರಿ. ನಿಶ್ಚಯವಾಗಿಯೂ ಬುದ್ಧಿಶಾಲಿಗಳಿಗೆ ಇದರಲ್ಲಿ ಹಲವು ದೃಷ್ಟಾಂತಗಳಿವೆ.**

كُلُوْا وَارْعَوْا اَنْعَامَكُمْ ۗ اِنَّ فِيْ ذٰلِكَ لَاٰيٰتٍ لِّاُولِي النُّهٰى ﴿٥٥﴾

**56.** **ಅದರಿಂದಲೇ** (ಭೂಮಿಯಿಂದ) **ನಾವು ನಿಮ್ಮನ್ನು ಸೃಷ್ಟಿಸಿದ್ದೇವೆ. ಅದರೊಳಗೆ ನೀವು ಮರಳುವಂತೆ ಮಾಡುವೆವು. ಅದರಿಂದಲೇ ಇನ್ನೊಮ್ಮೆ ನಿಮ್ಮನ್ನು ಹೊರಡಿಸುವೆವು.**

مِنْهَا خَلَقْنٰكُمْ وَفِيْهَا نُعِيْدُكُمْ وَمِنْهَا نُخْرِجُكُمْ تَارَةً اُخْرٰى ﴿٥٦﴾

**57.** **ಅವನಿಗೆ** (ಫಿರ್‌ಔನನಿಗೆ) **ನಾವು ನಮ್ಮ ದೃಷ್ಟಾಂತಗಳನ್ನೆಲ್ಲ ತೋರಿಸಿದೆವು. ಆದರೆ ಅವನು ಸುಳ್ಳಾಗಿಸಿದನು ಮತ್ತು ನಿರಾಕರಿಸಿದನು.**

وَلَقَدْ اَرَيْنٰهُ اٰيٰتِنَا كُلَّهَا فَكَذَّبَ وَاَبٰى ﴿٥٧﴾

337A. "ಹಾಗಾದರೆ ಹಿಂದಿನ ಪೀಳಿಗೆಗಳ ಗತಿಯೇನು?" ಅಂದರೆ ಹಿಂದಿನ ಪೀಳಿಗೆಯವರು ನಿನ್ನ ಪ್ರವಾದಿತ್ವದ ಬಗ್ಗೆ ತಿಳಿದಿಲ್ಲದ ಕಾರಣದಿಂದ ಅವರೊಂದಿಗೆ ದೇವರು ಯಾವ ರೀತಿ ವರ್ತಿಸುವನು? ಇದು ಈಗಲೂ ಅವಿಶ್ವಾಸಿಗಳು ಕೇಳುತ್ತಿರುವ ಒಂದು ಪ್ರಶ್ನೆಯಾಗಿದೆ.





**58.** **ಅವನು ಹೇಳಿದನು: 'ನಿನ್ನ ಜಾಲವಿದ್ಯೆ ಮೂಲಕ ನಮ್ಮ ಊರಿನಿಂದ ನಮ್ಮನ್ನು ಹೊರ ಅಟ್ಟಲಿಕ್ಕಾಗಿ ನೀನು ಬಂದಿದ್ದೀಯಾ ಓ ಮೂಸಾ?**

قَالَ اَجِئْتَنَا لِتُخْرِجَنَا مِنْ اَرْضِنَا بِسِحْرِكَ يٰمُوْسٰى ﴿٥٨﴾

**59.** **'ಹಾಗಾದರೆ ಅಂಥ ಒಂದು ಜಾಲವಿದ್ಯೆಯನ್ನು ನಿನ್ನ ವಿರುದ್ಧ ನಾವು ಸಹ ಪ್ರಯೋಗಿಸುವೆವು. ಆದ್ದರಿಂದ ನಮಗೂ ನಿನಗೂ ಮಧ್ಯೆ ನೀನೊಂದು ಸಮಯವನ್ನು ನಿಶ್ಚಯಿಸು. ನಾವಾಗಲಿ ನೀನಾಗಲಿ ಅದನ್ನು ಉಲ್ಲಂಘಿಸಬಾರದು. ಉಭಯ ಪಕ್ಷಗಳಿಗೂ ಸಮಾನ ಸೌಕರ್ಯವಿರುವ ಒಂದು ಸ್ಥಳದಲ್ಲಿ** (ಅದು ನಡೆಯಲಿ)**.'**

فَلَنَاْتِيَنَّكَ بِسِحْرٍ مِّثْلِهٖ فَاجْعَلْ بَيْنَنَا وَبَيْنَكَ مَوْعِدًا لَّا نُخْلِفُهٗ نَحْنُ وَلَآ اَنْتَ مَكَانًا سُوًى ﴿٥٩﴾

**60.** **ಅವರು** (ಮೂಸಾ) **ಹೇಳಿದರು : 'ಹಬ್ಬದಂದು ನಿಮ್ಮ ನಿಶ್ಚಿತ ದಿನವಾಗಲಿ.** (ಅಂದು) **ಪೂರ್ವಾಹ್ನ ಸಮಯದಲ್ಲಿ ಜನರು ಬಂದು ಸೇರಲಿ.'**

قَالَ مَوْعِدُكُمْ يَوْمُ الزِّيْنَةِ وَاَنْ يُّحْشَرَ النَّاسُ ضُحًى ﴿٦٠﴾

**61.** **ಆಗ ಫಿರ್‌ಔನ್ ಮುಖ ತಿರುಗಿಸಿ ಹೋಗಿ ಬಿಟ್ಟನು. ತನ್ನ ಎಲ್ಲ ಕುತಂತ್ರಗಳನ್ನು ಸಜ್ಜುಗೊಳಿಸಿ** (ನಿಶ್ಚಿತ ಸಮಯದಲ್ಲಿ) **ಪುನಃ ಬಂದನು.**

فَتَوَلّٰى فِرْعَوْنُ فَجَمَعَ كَيْدَهٗ ثُمَّ اَتٰى ﴿٦١﴾

**62.** **ಮೂಸಾ ಅವರೊಡನೆ ಹೇಳಿದರು: 'ನಿಮಗೆ ನಾಶ; ನೀವು ಅಲ್ಲಾಹನ ಮೇಲೆ ಸುಳ್ಳು ಸೃಷ್ಟನೆ ಮಾಡಿ ಹೇಳಬೇಡಿರಿ. ಹಾಗೆ ಮಾಡಿದರೆ ನಿಮ್ಮನ್ನು ಅವನು ಶಿಕ್ಷೆಗೆ ಗುರಿಪಡಿಸಿ ನಾಶಗೊಳಿಸುವನು.** (ಅಲ್ಲಾಹನ ಮೇಲೆ) **ಸುಳ್ಳು ಸೃಷ್ಟನೆ ಮಾಡಿ ಹೇಳುವವರು ಖಂಡಿತವಾಗಿಯೂ ಪರಾಜಿತರಾಗುವರು.'**

قَالَ لَهُمْ مُّوْسٰى وَيْلَكُمْ لَا تَفْتَرُوْا عَلَى اللّٰهِ كَذِبًا فَيُسْحِتَكُمْ بِعَذَابٍ ۚ وَقَدْ خَابَ مَنِ افْتَرٰى ﴿٦٢﴾

**63.** **ಆಗ ಅವರು** (ಫಿರ್‌ಔನ್ ಮತ್ತು ಸಂಗಡಿಗರು) **ಪರಸ್ಪರ ತಮ್ಮ ವಿಚಾರದಲ್ಲಿ ಭಿನ್ನಾಭಿಪ್ರಾಯ ವುಳ್ಳವರಾದರು ಮತ್ತು ಅವರು ಗೂಢಾಲೋಚನೆ ಮಾಡ ಲಾರಂಭಿಸಿದರು.**

فَتَنَازَعُوْٓا اَمْرَهُمْ بَيْنَهُمْ وَاَسَرُّوا النَّجْوٰى ﴿٦٣﴾

**64.** **ಅವರು** (ತಮ್ಮೊಳಗೆ) **ಹೇಳಿದರು: 'ದಿಟವಾಗಿಯೂ ಇವರೀರ್ವರೂ ಇಂದ್ರಜಾಲಿಗ**

قَالُوْٓا اِنْ هٰذٰنِ لَسٰحِرٰنِ يُرِيْدٰنِ

ರಾಗಿದ್ದಾರೆ. ಅವರು ತಮ್ಮ ಜಾದೂ ವಿದ್ಯೆಯಿಂದ ನಿಮ್ಮನ್ನು ನಿಮ್ಮ ಊರಿನಿಂದ ಹೊರಗೆ ಹಾಕಿ ನಿಮ್ಮ ಉತ್ಕೃಷ್ಟ ಪರಂಪರೆಯನ್ನು ನಾಶಪಡಿಸಲು ಬಯಸುತ್ತಾರೆ.

أَن يُخْرِجَاكُم مِّنْ أَرْضِكُم بِسِحْرِهِمَا وَيَذْهَبَا بِطَرِيقَتِكُمُ الْمُثْلَىٰ ﴿٦٤﴾

65. 'ಆದ್ದರಿಂದ ನಿಮ್ಮ ತಂತ್ರಗಳ ಬಗ್ಗೆ ಕಲೆತು ಯೋಚಿಸಿರಿ. ಆ ಮೇಲೆ ನೀವೆಲ್ಲರೂ ಒಂದಾಗಿ ಬನ್ನಿರಿ. ಖಂಡಿತವಾಗಿಯೂ ಮೇಲುಗೈ ಸಾಧಿಸುವವನು ಈ ದಿನ ವಿಜಯಿಯಾಗುವನು.'

فَأَجْمِعُوا كَيْدَكُمْ ثُمَّ ائْتُوا صَفًّا ۚ وَقَدْ أَفْلَحَ الْيَوْمَ مَنِ اسْتَعْلَىٰ ﴿٦٥﴾

66. ಅವರು ಹೇಳಿದರು: ' ಓ ಮೂಸಾ, ನೀನು ನಿನ್ನ ವಿದ್ಯೆಯನ್ನು ಪ್ರದರ್ಶಿಸು. ಇಲ್ಲವಾದರೆ ಮೊದಲು ನಾವು ಪ್ರದರ್ಶಿಸುತ್ತೇವೆ.'

قَالُوا يَا مُوسَىٰ إِمَّا أَن تُلْقِيَ وَإِمَّا أَن نَّكُونَ أَوَّلَ مَنْ أَلْقَىٰ ﴿٦٦﴾

67. ಮೂಸಾ ಹೇಳಿದರು: 'ಇಲ್ಲ, ಮೊದಲು ನೀವೇ ಪ್ರದರ್ಶಿಸಿರಿ.' ಆಗ ಅದೋ, ಅವರ ಜಾಲವಿದ್ಯೆಯಿಂದ ಅವರ ಹಗ್ಗಗಳೂ ಬಡಿಗೆಗಳೂ ಹರಿದಾಡುವುದಾಗಿ ಅವರಿಗೆ ಭಾಸವಾಯಿತು.

قَالَ بَلْ أَلْقُوا ۖ فَإِذَا حِبَالُهُمْ وَعِصِيُّهُمْ يُخَيَّلُ إِلَيْهِ مِن سِحْرِهِمْ أَنَّهَا تَسْعَىٰ ﴿٦٧﴾

68. ಆಗ ಮೂಸಾ ತನ್ನ ಮನಸ್ಸಿನ ಭಯವನ್ನು ಮುಚ್ಚಿಟ್ಟರು.

فَأَوْجَسَ فِي نَفْسِهِ خِيفَةً مُّوسَىٰ ﴿٦٨﴾

69. ಆಗ ನಾವು ಹೇಳಿದೆವು: 'ಭಯಪಡಬೇಡ; ಖಂಡಿತವಾಗಿಯೂ ನೀನೇ ಮೇಲುಗೈ ಸಾಧಿಸುವೆ.

قُلْنَا لَا تَخَفْ إِنَّكَ أَنتَ الْأَعْلَىٰ ﴿٦٩﴾

70. 'ನಿನ್ನ ಬಲಗೈಯಲ್ಲಿರುವುದನ್ನು ನೆಲಕ್ಕೆಸೆ. ಅವರು ಸೃಷ್ಟಿಸಿದ್ದನ್ನೆಲ್ಲ ಅದು ನುಂಗಿ ಹಾಕುವುದು. ಅವರ ಸೃಷ್ಟನೆ ಜಾದೂಗಾರನ ಒಂದು ತಂತ್ರವೇ ಆಗಿದೆ. ಜಾದೂಗಾರ ಎಲ್ಲಿ ಹೋದರೂ ಜಯಗಳಿಸಲಾರ.'

وَأَلْقِ مَا فِي يَمِينِكَ تَلْقَفْ مَا صَنَعُوا ۖ إِنَّمَا صَنَعُوا كَيْدُ سَاحِرٍ ۖ وَلَا يُفْلِحُ السَّاحِرُ حَيْثُ أَتَىٰ ﴿٧٠﴾

71. ಆಗ[337B] (ಫಿರ್‌ಔನನ ಜೊತೆಗಿದ್ದ) ಆ ಜಾದೂಗಾರರನ್ನು ಸಾಷ್ಟಾಂಗವೆರಗುವಂತೆ ಮಾಡಲಾಯಿತು. ಅವರು ಹೇಳಿದರು: 'ಹಾರೂನ್ ಮತ್ತು ಮೂಸಾರ ಪ್ರಭುವನ್ನು ನಾವು ನಂಬಿದ್ದೇವೆ.'

فَأُلْقِيَ السَّحَرَةُ سُجَّدًا قَالُوا آمَنَّا بِرَبِّ هَارُونَ وَمُوسَىٰ ﴿٧١﴾

337B. ಅಂದರೆ, ದೇವ ನಿರ್ದೇಶದಂತೆ ಹಝ್ರತ್ ಮೂಸಾ (ಅ) ತನ್ನ ಕೈಯಲ್ಲಿದ್ದ ಬಡಿಗೆಯನ್ನು ನೆಲಕ್ಕೆಸೆದಾಗ.





72. ಅವನು (ಫಿರ್‌ಔನ್) ಹೇಳಿದನು: 'ನಾನು ನಿಮಗೆ ಅನುಮತಿ ನೀಡುವ ಮೊದಲೇ ನೀವು ಅವನನ್ನು ನಂಬಿಬಿಟ್ಟಿದ್ದೀರಾ? ಅವನು ನಿಮಗೆ ಜಾಲವಿದ್ಯೆಯನ್ನು ಕಲಿಸಿದ ನಿಮ್ಮ ಮುಖಂಡನೇ ಆಗಿರಬೇಕು. ಆದ್ದರಿಂದ ಖಂಡಿತವಾಗಿಯೂ ನಾನು ನಿಮ್ಮ ಕೈಗಳನ್ನೂ ಕಾಲುಗಳನ್ನೂ ವಿರುದ್ಧ ದಿಕ್ಕುಗಳಿಂದ ಕಡಿದು ಖರ್ಜೂರದ ಮರಗಳ ಮೇಲೆ ನಿಮ್ಮನ್ನು ಶಿಲುಬೆಗೇರಿಸುವೆನು. ನಮ್ಮ ಪೈಕಿ ಅತಿ ಕಠೋರವಾದ ಹಾಗೂ ದೀರ್ಘಕಾಲದ ಶಿಕ್ಷೆಯನ್ನು ನೀಡುವವನು ಯಾರೆಂದು ಆಗ ನಿಮಗೆ ಮನವರಿಕೆಯಾಗುವುದು.'

قَالَ آمَنتُمْ لَهُ قَبْلَ أَنْ آذَنَ لَكُمْ ۖ إِنَّهُ لَكَبِيرُكُمُ الَّذِي عَلَّمَكُمُ السِّحْرَ ۖ فَلَأُقَطِّعَنَّ أَيْدِيَكُمْ وَأَرْجُلَكُم مِّنْ خِلَافٍ وَلَأُصَلِّبَنَّكُمْ فِي جُذُوعِ النَّخْلِ وَلَتَعْلَمُنَّ أَيُّنَا أَشَدُّ عَذَابًا وَأَبْقَىٰ ﴿٧٢﴾

73. ಅವರು (ಜಾದೂಗಾರರು) ಹೇಳಿದರು: 'ನಮ್ಮ ಗೋಚರಕ್ಕೆ ಬಂದ ದೃಷ್ಟಾಂತಗಳಿಗಿಂತ ಮತ್ತು ನಮ್ಮನ್ನು ಸೃಷ್ಟಿಸಿದ ದೇವನಿಗಿಂತ ನಾವೆಂದಿಗೂ ನಿನಗೆ ಆದ್ಯತೆಯನ್ನು ನೀಡಲಾರೆವು. ಆದ್ದರಿಂದ ನಿನಗೆ ವಿಧಿಸಲು ಸಾಧ್ಯವಿರುವುದನ್ನು ನೀನು ವಿಧಿಸು. ಖಂಡಿತವಾಗಿಯೂ ಈ ಇಹಲೋಕ ಜೀವನಕ್ಕೆ ಸಂಬಂಧಿಸಿ ಮಾತ್ರ ನೀನು ವಿಧಿಸಬಲ್ಲೆ.

قَالُوا لَن نُّؤْثِرَكَ عَلَىٰ مَا جَاءَنَا مِنَ الْبَيِّنَاتِ وَالَّذِي فَطَرَنَا ۖ فَاقْضِ مَا أَنتَ قَاضٍ ۖ إِنَّمَا تَقْضِي هَٰذِهِ الْحَيَاةَ الدُّنْيَا ﴿٧٣﴾

74. 'ನಿಜವಾಗಿಯೂ ನಮ್ಮ ಪ್ರಭುವನ್ನು ನಾವು ನಂಬಿದ್ದೇವೆ - ನಮ್ಮ ಪಾಪಗಳನ್ನು ಮತ್ತು ನೀನು ನಮ್ಮಿಂದ ಬಲವಂತವಾಗಿ ಮಾಡಿಸಿದ ಜಾದೂ ಕೃತ್ಯಗಳನ್ನು ಅವನು ನಮಗೆ ಕ್ಷಮಿಸಲಿಕ್ಕೋಸ್ಕರ. ಅಲ್ಲಾಹನು ಅತ್ಯುತ್ತಮನೂ ಅನಶ್ವರನೂ ಆಗಿದ್ದಾನೆ.'

إِنَّا آمَنَّا بِرَبِّنَا لِيَغْفِرَ لَنَا خَطَايَانَا وَمَا أَكْرَهْتَنَا عَلَيْهِ مِنَ السِّحْرِ ۗ وَاللَّهُ خَيْرٌ وَأَبْقَىٰ ﴿٧٤﴾

75. ಖಂಡಿತವಾಗಿಯೂ ಯಾರು ಪಾಪಿಯಾಗಿ ತನ್ನ ಪ್ರಭುವಿನ ಬಳಿಗೆ ಬರುತ್ತಾನೋ, ಅವನಿಗೆ ನರಕ ಕಾದಿದೆ. ಅಲ್ಲಿ ಅವನು ಸಾಯುವುದೂ ಇಲ್ಲ; ಬದುಕುವುದೂ ಇಲ್ಲ.

إِنَّهُ مَن يَأْتِ رَبَّهُ مُجْرِمًا فَإِنَّ لَهُ جَهَنَّمَ لَا يَمُوتُ فِيهَا وَلَا يَحْيَىٰ ﴿٧٥﴾

76. ಆದರೆ ಸತ್ಕರ್ಮ ಗೈದ ಸತ್ಯವಿಶ್ವಾಸಿಯಾಗಿ ಅವನ ಬಳಿಗೆ ಬಂದವನಿಗೆ ಉನ್ನತವಾದ ಸ್ಥಾನವಿದೆ -

وَمَن يَأْتِهِ مُؤْمِنًا قَدْ عَمِلَ الصَّالِحَاتِ فَأُولَٰئِكَ لَهُمُ الدَّرَجَاتُ الْعُلَىٰ ﴿٧٦﴾

**77.** **ಸ್ಥಿರವಾಸದ ಸ್ವರ್ಗೀಯ ತೋಟಗಳು. ಅವುಗಳ ಕೆಳಭಾಗದಲ್ಲಿ ಸರಿತ್ತುಗಳು ಹರಿಯುತ್ತವೆ. ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು. ಪರಿಶುದ್ಧಿಗಳಿಸಿದವರಿಗೆ ಅದು ಪ್ರತಿಫಲವಾಗಿದೆ.**

جَنَّٰتُ عَدْنٍ تَجْرِي مِن تَحْتِهَا ٱلْأَنْهَٰرُ خَٰلِدِينَ فِيهَا ۚ وَذَٰلِكَ جَزَآءُ مَن تَزَكَّىٰ ٧٦

**78.** **ನಾವು ಮೂಸಾರಿಗೆ ಹೀಗೆ ದಿವ್ಯ ಸಂದೇಶ ಅರುಹಿದೆವು: 'ನನ್ನ ದಾಸರೊಂದಿಗೆ ನೀನು ರಾತ್ರಿ ವೇಳೆಯಲ್ಲಿ ಹೊರಡು. ಅನಂತರ ಸಮುದ್ರದಲ್ಲಿ ಒಂದು ಒಣರಸ್ತೆಯನ್ನು ಅವರಿಗೆ ತೋರಿಸಿ ಕೊಡು.** *ಶತ್ರುಗಳ* **ಬೆನ್ನಟ್ಟುವಿಕೆಯನ್ನು ನೀನು ಭಯಪಡಬೇಡ;** (ಬೇರೆ ಯಾವ ವಿಪತ್ತಿನ ಕುರಿತು ಸಹ) **ನೀನು ಹೆದರಬೇಡ.'**

وَلَقَدْ أَوْحَيْنَآ إِلَىٰ مُوسَىٰٓ أَنْ أَسْرِ بِعِبَادِى فَٱضْرِبْ لَهُمْ طَرِيقًا فِى ٱلْبَحْرِ يَبَسًا لَّا تَخَٰفُ دَرَكًا وَلَا تَخْشَىٰ ٧٧

**79.** **ಫಿರ್‌ಔನ್ ತನ್ನ ಸೈನ್ಯದೊಂದಿಗೆ ಅವರನ್ನು ಬೆನ್ನಟ್ಟಿದನು. ಆಗ ಸಮುದ್ರ ಅವರನ್ನೆಲ್ಲ ಸಂಪೂರ್ಣ ವಾಗಿ ಮುಚ್ಚಿಬಿಟ್ಟಿತು.**

فَأَتْبَعَهُمْ فِرْعَوْنُ بِجُنُودِهِۦ فَغَشِيَهُم مِّنَ ٱلْيَمِّ مَا غَشِيَهُمْ ٧٨

**80.** **ಫಿರ್‌ಔನ್ ತನ್ನ ಜನರನ್ನು ತಪ್ಪು ಹಾದಿಗೆಳೆದನು; ಅವರಿಗೆ ಸರಿಯಾದ ಪಥವನ್ನು ತೋರಿಸಲಿಲ್ಲ.**

وَأَضَلَّ فِرْعَوْنُ قَوْمَهُۥ وَمَا هَدَىٰ ٧٩

**81.** **'ಎಲೈ ಇಸ್ರಾಈಲ್ ಸಂತತಿಗಳೇ, ನಾವು ನಿಮ್ಮನ್ನು ನಿಮ್ಮ ಶತ್ರುವಿನಿಂದ ವಿಮುಕ್ತಿಗೊಳಿಸಿದೆವು.** (ಅನಂತರ) **ಆ ಪರ್ವತದ ಬಲಬದಿಯಲ್ಲಿ ನಿಮ್ಮೊಂದಿಗೆ ನಾವು ಒಪ್ಪಂದ ಮಾಡಿದೆವು. ನಿಮಗೆ ನಾವು 'ಮನ್ನ' ಮತ್ತು 'ಸಲ್ವಾ'**[337C] **ಒದಗಿಸಿಕೊಟ್ಟೆವು.'**

يَٰبَنِىٓ إِسْرَٰٓءِيلَ قَدْ أَنجَيْنَٰكُم مِّنْ عَدُوِّكُمْ وَوَٰعَدْنَٰكُمْ جَانِبَ ٱلطُّورِ ٱلْأَيْمَنَ وَنَزَّلْنَا عَلَيْكُمُ ٱلْمَنَّ وَٱلسَّلْوَىٰ ٨٠

**82.** (ನಾವು ಹೇಳಿದ್ದೆವು:) **'ನಾವು ನಿಮಗೋಸ್ಕರ ಒದಗಿಸಿದ ಉತ್ತಮ ಆಹಾರಗಳಿಂದ ತಿನ್ನಿರಿ. ನೀವು ಅದರಲ್ಲಿ ಮಿತಿಮೀರಬಾರದು. ಹಾಗೆ ಮಾಡಿದರೆ ನಿಮ್ಮ ಮೇಲೆ ನನ್ನ ಕ್ರೋಧವೆರಗುವುದು. ಯಾರ ಮೇಲೆ ನನ್ನ ಕ್ರೋಧವೆರಗುವುದೋ ಅವನು ನಾಶವಾಗುವನು.'**

كُلُوا۟ مِن طَيِّبَٰتِ مَا رَزَقْنَٰكُمْ وَلَا تَطْغَوْا۟ فِيهِ فَيَحِلَّ عَلَيْكُمْ غَضَبِى ۖ وَمَن يَحْلِلْ عَلَيْهِ غَضَبِى فَقَدْ هَوَىٰ ٨١

337C. ಅಧ್ಯಾಯ 2 ವಚನ 58ರ ಟಿಪ್ಪಣಿ ನೋಡಿರಿ.





**83.** **'ಆದರೆ ಯಾರು ಪಶ್ಚಾತ್ತಾಪಪಟ್ಟು, ವಿಶ್ವಾಸ ಹೊಂದಿ, ಸತ್ಕರ್ಮಗೈದು, ಸತ್ಪಥದಲ್ಲೇ ನೆಲೆ ಯೂರುತ್ತಾನೋ ಅವನನ್ನು ನಾನು ಖಂಡಿತವಾಗಿಯೂ ಕ್ಷಮಿಸುತ್ತೇನೆ.'**

وَإِنِّى لَغَفَّارٌ لِّمَن تَابَ وَءَامَنَ وَعَمِلَ صَٰلِحًا ثُمَّ ٱهْتَدَىٰ ٨٢

**84.** **'**(ನಾವು ಕೇಳಿದೆವು:) **ಎಲೈ ಮೂಸಾ, ನಿನ್ನ ಜನರನ್ನು ಬಿಟ್ಟು ನೀನು ತ್ವರಿತವಾಗಿ ಬರಲು ಕಾರಣವೇನು?'**

وَمَآ أَعْجَلَكَ عَن قَوْمِكَ يَٰمُوسَىٰ ٨٣

**85.** **ಅವರು** (ಮೂಸಾ) **ಹೇಳಿದರು: 'ಅವರು** (ನನ್ನ ಹಾದಿಯಲ್ಲಿ) **ನನ್ನ ಹಿಂದೆಯೇ ಬರುತ್ತಿದ್ದಾರೆ. ನನ್ನ ಪ್ರಭೂ, ನೀನು ಸಂಪ್ರೀತನಾಗಲಿಕ್ಕೋಸ್ಕರ ನಿನ್ನ ಬಳಿಗೆ ನಾನು ತ್ವರಿತವಾಗಿ ಬಂದಿದ್ದೇನೆ.'**

قَالَ هُمْ أُو۟لَآءِ عَلَىٰٓ أَثَرِى وَعَجِلْتُ إِلَيْكَ رَبِّ لِتَرْضَىٰ ٨٤

**86.** **ಅವನು** (ಅಲ್ಲಾಹ್) **ಹೇಳಿದನು: 'ನಿನ್ನ ಅನುಪಸ್ಥಿತಿಯಲ್ಲಿ ನಾವು ನಿನ್ನ ಜನತೆಯನ್ನು ಪರೀಕ್ಷೆಗೊಳಪಡಿಸಿದೆವು. 'ಸಾಮಿರಿ' ಅವರನ್ನು ಮಾರ್ಗಭ್ರಂಶಗೊಳಿಸಿದನು.'**

قَالَ فَإِنَّا قَدْ فَتَنَّا قَوْمَكَ مِنۢ بَعْدِكَ وَأَضَلَّهُمُ ٱلسَّامِرِىُّ ٨٥

**87.** **ಮೂಸಾ ತನ್ನ ಜನರ ಬಳಿಗೆ ಕೋಪಾವಿಷ್ಟನಾಗಿ ಹಾಗೂ ಶೋಕತಪ್ತನಾಗಿ ಮರಳಿದರು. ಅವರು ಕೇಳಿದರು: 'ಎಲೈ ನನ್ನ ಜನರೇ, ನಿಮ್ಮ ಪ್ರಭು ನಿಮಗೆ ಉತ್ತಮವಾದೊಂದು ವಾಗ್ದಾನವನ್ನು ನೀಡಲಿಲ್ಲವೇ? ಆ ನಿಗದಿತ ಸಮಯ ನಿಮಗೆ ದೀರ್ಘವಾಗಿ ಕಂಡಿತೇ? ಅಥವಾ ನಿಮ್ಮ ಪ್ರಭುವಿನ ಕೋಪ ನಿಮ್ಮ ಮೇಲೆ ಎರಗಲಿ ಎಂದು ನೀವು ಬಯಸಿದ ಕಾರಣ ನನ್ನೊಡನೆ ಮಾಡಿದ ವಾಗ್ದಾನವನ್ನು ನೀವು ಮುರಿದಿರೇನು?'**

فَرَجَعَ مُوسَىٰٓ إِلَىٰ قَوْمِهِۦ غَضْبَٰنَ أَسِفًا ۚ قَالَ يَٰقَوْمِ أَلَمْ يَعِدْكُمْ رَبُّكُمْ وَعْدًا حَسَنًا ۚ أَفَطَالَ عَلَيْكُمُ ٱلْعَهْدُ أَمْ أَرَدتُّمْ أَن يَحِلَّ عَلَيْكُمْ غَضَبٌ مِّن رَّبِّكُمْ فَأَخْلَفْتُم مَّوْعِدِى ٨٦

**88.** **ಅವರು ಹೇಳಿದರು: 'ನಾವು ನಿಮ್ಮೊಡನೆ ಮಾಡಿದ ವಾಗ್ದಾನವನ್ನು ನಮ್ಮ ಇಷ್ಟ ಪ್ರಕಾರ ಮುರಿಯಲಿಲ್ಲ. ಜನರ ಆಭರಣಗಳ ಭಾರವನ್ನು ನಮ್ಮ ಮೇಲೆ ಹೊರಿಸಲಾಗಿತ್ತು. ಅದನ್ನು ನಾವು ಎಸೆದೆವು.' ಆ ರೀತಿ ಸಾಮಿರಿ** *ಯೋಜನೆ* **ಹಾಕಿದನು.**

قَالُوا۟ مَآ أَخْلَفْنَا مَوْعِدَكَ بِمَلْكِنَا وَلَٰكِنَّا حُمِّلْنَآ أَوْزَارًا مِّن زِينَةِ ٱلْقَوْمِ فَقَذَفْنَٰهَا فَكَذَٰلِكَ أَلْقَى ٱلسَّامِرِىُّ ٨٧

**89.** ಅವನು (ಸಾಮಿರಿ) ಅವರಿಗೋಸ್ಕರ ಒಂದು ಕರುವನ್ನು ರಚಿಸಿದನು - ಶಬ್ದ ಹೊರಡಿಸುತ್ತಿದ್ದ ಒಂದು ವಿಗ್ರಹ. ಅವರು (ಸಾಮಿರಿ ಮತ್ತು ಅವನ ಸಂಗಡಿಗರು) ಹೇಳಿದರು: 'ಇದು ನಿಮ್ಮ ದೇವರು; ಮೂಸಾರ ದೇವರು ಕೂಡ. ಆದರೆ ಅವರು (ಮೂಸಾ) ಮರೆತು ಬಿಟ್ಟಿದ್ದಾರೆ.'

فَأَخْرَجَ لَهُمْ عِجْلًا جَسَدًا لَّهُۥ خُوَارٌ فَقَالُوا۟ هَـٰذَآ إِلَـٰهُكُمْ وَإِلَـٰهُ مُوسَىٰ فَنَسِىَ ﴿٨٩﴾

**90.** ಏನು ಅದು ಅವರ ಯಾವುದೇ ಮಾತಿಗೂ ಉತ್ತರ ಕೊಡುವುದಿಲ್ಲವೆಂದೂ ಅವರಿಗೆ ದೋಷವಾಗಲಿ ಗುಣವಾಗಲಿ ಮಾಡಲಿಕ್ಕೆ ಅದಕ್ಕೆ ಸಾಮರ್ಥ್ಯವಿಲ್ಲ ವೆಂದೂ ಅವರು ಮನವರಿಕೆ ಮಾಡುವುದಿಲ್ಲವೇ?

أَفَلَا يَرَوْنَ أَلَّا يَرْجِعُ إِلَيْهِمْ قَوْلًا وَلَا يَمْلِكُ لَهُمْ ضَرًّا وَلَا نَفْعًا ﴿٩٠﴾

**91.** (ಮೂಸಾ ಮರಳಿ ಬರುವುದಕ್ಕೆ) ಮುಂಚೆಯೇ ಹಾರೂನ್ ಅವರೊಡನೆ ಹೀಗೆ ಹೇಳಿದ್ದರು: 'ಎಲೈ ನನ್ನ ಜನರೇ, ದಿಟವಾಗಿಯೂ ನೀವು ಇದರ (ಕರುವಿನ) ಮೂಲಕ ಪರೀಕ್ಷೆಗೆ ಈಡಾಗಿದ್ದೀರಿ. ನಿಶ್ಚಯವಾಗಿಯೂ ಪರಮ ದಯಾವಂತನೇ ನಿಮ್ಮ ದೇವನಾಗಿದ್ದಾನೆ. ಆದುದರಿಂದ ನನ್ನನ್ನು ಅನುಸರಿಸಿರಿ ಮತ್ತು ನನ್ನ ಆಜ್ಞೆಯನ್ನು ಪಾಲಿಸಿರಿ.'

وَلَقَدْ قَالَ لَهُمْ هَـٰرُونُ مِن قَبْلُ يَـٰقَوْمِ إِنَّمَا فُتِنتُم بِهِۦ ۖ وَإِنَّ رَبَّكُمُ ٱلرَّحْمَـٰنُ فَٱتَّبِعُونِى وَأَطِيعُوٓا۟ أَمْرِى ﴿٩١﴾

**92.** ಅವರು ಉತ್ತರಿಸಿದರು: 'ಮೂಸಾ ನಮ್ಮ ಬಳಿಗೆ ಹಿಂತಿರುಗಿ ಬರುವ ತನಕ ನಾವು ಅದರ ಆರಾಧನೆಯನ್ನು ನಿಲ್ಲಿಸಲಾರೆವು.'

قَالُوا۟ لَن نَّبْرَحَ عَلَيْهِ عَـٰكِفِينَ حَتَّىٰ يَرْجِعَ إِلَيْنَا مُوسَىٰ ﴿٩٢﴾

**93.** ಅವರು (ಮೂಸಾ) ಕೇಳಿದರು: 'ಎಲೈ ಹಾರೂನ್, ಅವರು ದಾರಿತಪ್ಪಿರುವುದನ್ನು ಕಂಡಾಗ, ನಿನ್ನನ್ನು ತಡೆದುದಾದರೂ ಏನು?-

قَالَ يَـٰهَـٰرُونُ مَا مَنَعَكَ إِذْ رَأَيْتَهُمْ ضَلُّوٓا۟ ﴿٩٣﴾

**94.** 'ನನ್ನನ್ನು ಅನುಸರಿಸದಂತೆ? ನೀನು ನನ್ನ ಆಜ್ಞೆಯನ್ನು ಉಲ್ಲಂಘಿಸಿದೆಯಾ?'

أَلَّا تَتَّبِعَنِ ۖ أَفَعَصَيْتَ أَمْرِى ﴿٩٤﴾

**95.** ಅವರು (ಹಾರೂನ್) ಉತ್ತರಿಸಿದರು: "ಓ ನನ್ನ ತಾಯಿಯ ಮಗನೇ, ನನ್ನ ಗಡ್ಡವನ್ನಾಗಲಿ ತಲೆಗೂದಲನ್ನಾಗಲಿ ನೀನು ಹಿಡಿದೆಳೆಯಬೇಡ.[337E] 'ಇಸ್ರಾಈಲ್ ಸಂತತಿಗಳ ಮಧ್ಯೆ ನೀನು ಬಿಕ್ಕಟ್ಟನ್ನು ಸೃಷ್ಟಿಸಿದೆ. ನನ್ನ ಮಾತಿಗೆ ನೀನು ಕಾಯಲಿಲ್ಲ' ಎಂದು ನೀನು ಹೇಳುವಿಯೋ ಎಂದು ನಾನು ಭಯಪಟ್ಟೆ."

قَالَ يَبْنَؤُمَّ لَا تَأْخُذْ بِلِحْيَتِى وَلَا بِرَأْسِىٓ ۖ إِنِّى خَشِيتُ أَن تَقُولَ فَرَّقْتَ بَيْنَ بَنِىٓ إِسْرَٰٓءِيلَ وَلَمْ تَرْقُبْ قَوْلِى ﴿٩٥﴾

337E. ನನ್ನ ತೇಜೋವಧೆಮಾಡಬೇಡ ಎಂದರ್ಥ.





**96.** ಅವರು (ಮೂಸಾ) ಕೇಳಿದರು: 'ಎಲೈ ಸಾಮಿರಿ, ನಿನಗೆ ಏನು ಹೇಳಲಿಕ್ಕಿದೆ?'

قَالَ فَمَا خَطْبُكَ يَـٰسَـٰمِرِىُّ ﴿٩٦﴾

**97.** ಅವನು (ಸಾಮಿರಿ) ಹೇಳಿದನು: 'ಅವರು ಕಾಣದಿದ್ದುದನ್ನು ನಾನು ಕಂಡಿದ್ದೆ. ಹಾಗೆ ನಾನು ಸಂದೇಶವಾಹಕನ (ಮೂಸಾರ) ಹೆಜ್ಜೆ ಗುರುತುಗಳಲ್ಲಿ ಕೆಲವನ್ನು ಸ್ವೀಕರಿಸಿದ್ದೆ. ನಂತರ (ಸಂದರ್ಭ ಬಂದಾಗ) ಅದನ್ನೂ ಬಿಸುಟು ಬಿಟ್ಟೆ. ನನ್ನ ಮನಸ್ಸಿಗೆ ಇದು ಒಳ್ಳೆಯದೆಂದು ತೋಚಿತು.'

قَالَ بَصُرْتُ بِمَا لَمْ يَبْصُرُوا۟ بِهِۦ فَقَبَضْتُ قَبْضَةً مِّنْ أَثَرِ ٱلرَّسُولِ فَنَبَذْتُهَا وَكَذَٰلِكَ سَوَّلَتْ لِى نَفْسِى ﴿٩٧﴾

**98.** ಅವರು (ಮೂಸಾ) ಹೇಳಿದರು: "ನೀನು ದೂರ ಹೋಗು. ನೀನು ನಿನ್ನ ಜೀವನದಲ್ಲಿ 'ನನ್ನನ್ನು ಸ್ಪರ್ಶಿಸಬಾರದು' ಎಂದು ಹೇಳುವ ಕಾಲ ಬರುವುದು. ನಿನಗೆ (ನಿನ್ನ ಶಿಕ್ಷೆಗೆ) ಒಂದು ನಿಗದಿತ ಕಾಲವಿದೆ. ಅದನ್ನು ನೀನು ತಪ್ಪಿಸಲಾರೆ. ನೀನು ಭಕ್ತಿಯಿಂದ ಆರಾಧಿಸುತ್ತಿದ್ದ ನಿನ್ನ ಆರಾಧ್ಯ ವಸ್ತುವನ್ನು ನೋಡು. ಖಂಡಿತ ವಾಗಿಯೂ ನಾವು ಅದನ್ನು ಸುಟ್ಟು ಹಾಕಿ ಭಸ್ಮಮಾಡಿ ಸಮುದ್ರಕ್ಕೆ ಎಸೆದು ಬಿಡುವೆವು.

قَالَ فَٱذْهَبْ فَإِنَّ لَكَ فِى ٱلْحَيَوٰةِ أَن تَقُولَ لَا مِسَاسَ ۖ وَإِنَّ لَكَ مَوْعِدًا لَّن تُخْلَفَهُۥ ۖ وَٱنظُرْ إِلَىٰٓ إِلَـٰهِكَ ٱلَّذِى ظَلْتَ عَلَيْهِ عَاكِفًا ۖ لَّنُحَرِّقَنَّهُۥ ثُمَّ لَنَنسِفَنَّهُۥ فِى ٱلْيَمِّ نَسْفًا ﴿٩٨﴾

**99.** "ಅಲ್ಲಾಹನು ಮಾತ್ರ ನಿಮ್ಮ ದೇವನು. ಅವನ ಹೊರತು ಬೇರೆ ದೇವನಿಲ್ಲ. ಅವನ ಜ್ಞಾನ ಸರ್ವ ವಸ್ತುಗಳನ್ನೂ ಆವರಿಸಿಕೊಂಡಿವೆ."

إِنَّمَآ إِلَـٰهُكُمُ ٱللَّهُ ٱلَّذِى لَآ إِلَـٰهَ إِلَّا هُوَ ۚ وَسِعَ كُلَّ شَىْءٍ عِلْمًا ﴿٩٩﴾

**100.** ಹೀಗೆ, ಗತ ವೃತ್ತಾಂತಗಳಲ್ಲಿ ಕೆಲವನ್ನು ನಾವು ನಿನಗೆ ತಿಳಿಸಿಕೊಡುತ್ತೇವೆ. ನಾವು ನಿನಗೆ ನಮ್ಮ ಕಡೆಯಿಂದ ಒಂದು ಜ್ಞಾಪಕವನ್ನು (ಖುರ್‌ಆನನ್ನು) ಅವತೀರ್ಣಗೊಳಿಸಿದ್ದೇವೆ.

كَذَٰلِكَ نَقُصُّ عَلَيْكَ مِنْ أَنۢبَآءِ مَا قَدْ سَبَقَ ۚ وَقَدْ ءَاتَيْنَـٰكَ مِن لَّدُنَّا ذِكْرًا ﴿١٠٠﴾

**101.** ಯಾರು ಅದರಿಂದ ಮುಖ ತಿರುಗಿಸುತ್ತಾನೋ, ಖಂಡಿತವಾಗಿಯೂ ಅವನು ಪುನರುತ್ಥಾನ ದಿನದಂದು ಬಹಳ ದೊಡ್ಡ ಭಾರವನ್ನು ಹೊರುವನು.

مَّنْ أَعْرَضَ عَنْهُ فَإِنَّهُۥ يَحْمِلُ يَوْمَ ٱلْقِيَـٰمَةِ وِزْرًا ﴿١٠١﴾

**102.** ಅವರು ಅಲ್ಲಿ ದೀರ್ಘಕಾಲ ವಾಸಿಸುವರು. ಪುನರುತ್ಥಾನ ದಿನದಂದು ಅವರಿಗೆ ಆ ಭಾರ ದುಃಖ ದಾಯಕವಾಗುವುದು.

خَـٰلِدِينَ فِيهِ ۖ وَسَآءَ لَهُمْ يَوْمَ ٱلْقِيَـٰمَةِ حِمْلًا ﴿١٠٢﴾

**103.** ಕಹಳೆ ಊದಲ್ಪಡುವ ಆ ದಿನ. ಅಂದು ನಾವು ಅಪರಾಧಿಗಳನ್ನು ಒಟ್ಟುಸೇರಿಸುವೆವು- ನೀಲಿ ಕಣ್ಣುಗಳನ್ನು ಹೊಂದಿದವರನ್ನು.

يَوْمَ يُنفَخُ فِي الصُّورِ وَنَحْشُرُ الْمُجْرِمِينَ يَوْمَئِذٍ زُرْقًا ﴿١٠٢﴾

**104.** ನೀವು ಹತ್ತು ದಿನ ಮಾತ್ರ ವಾಸಿಸಿರಬೇಕು ಎಂದು ಅವರು ಪರಸ್ಪರ ಪಿಸುಮಾತಿನಲ್ಲಿ ಹೇಳುವರು.

يَتَخَافَتُونَ بَيْنَهُمْ إِن لَّبِثْتُمْ إِلَّا عَشْرًا ﴿١٠٣﴾

**105.** ಅವರು ಹೇಳುವುದರ ಬಗ್ಗೆ ನಮಗೆ ಚೆನ್ನಾಗಿ ಗೊತ್ತಿದೆ. 'ನೀವು ಒಂದು ದಿನ ಮಾತ್ರ ವಾಸಿಸಿದ್ದೀರಿ' ಎಂದು ಅವರ ಪೈಕಿ ಅತ್ಯುತ್ತಮ ಗುಣ ನಡತೆಯವನು ಹೇಳುವನು.

نَّحْنُ أَعْلَمُ بِمَا يَقُولُونَ إِذْ يَقُولُ أَمْثَلُهُمْ طَرِيقَةً إِن لَّبِثْتُمْ إِلَّا يَوْمًا ﴿١٠٤﴾

**106.** ಪರ್ವತಗಳ ಬಗ್ಗೆ ಅವರು ನಿನ್ನೊಡನೆ ಕೇಳುತ್ತಾರೆ. ನೀನು ಹೇಳು: 'ನನ್ನ ಪ್ರಭು ಅವುಗಳನ್ನು ಛಿದ್ರ ಛಿದ್ರಗೊಳಿಸಿ ಧೂಳೀಕರಿಸುವನು.

وَيَسْأَلُونَكَ عَنِ الْجِبَالِ فَقُلْ يَنسِفُهَا رَبِّي نَسْفًا ﴿١٠٥﴾

**107.** 'ಅನಂತರ ಅವುಗಳನ್ನು ಸಮತಟ್ಟಾದ ಬಯಲನ್ನಾಗಿ ಮಾಡಿಬಿಡುವನು.

فَيَذَرُهَا قَاعًا صَفْصَفًا ﴿١٠٦﴾

**108.** 'ಅದರಲ್ಲಿ ನೀನು ಓರೆಕೋರೆಯನ್ನಾಗಲಿ ಏರುತಗ್ಗನ್ನಾಗಲಿ ಕಾಣಲಾರೆ.'

لَّا تَرَىٰ فِيهَا عِوَجًا وَلَا أَمْتًا ﴿١٠٧﴾

**109.** ಅಂದು ಅವರು ಆ ಕರೆಯುವವನನ್ನು ಹಿಂಬಾಲಿಸುವರು. ಆತನಲ್ಲಿ ಯಾವ ವಕ್ರತೆಯೂ ಇರಲಾರದು. ಎಲ್ಲ ಶಬ್ದಗಳೂ ಪರಮ ದಯಾವಂತನ ಮುಂದೆ ಕುಗ್ಗಿಹೋಗುವುವು. ಮರ್ಮರ ಧ್ವನಿ ಹೊರತು ನೀನು ಏನನ್ನೂ ಆಲಿಸಲಾರೆ.

يَوْمَئِذٍ يَتَّبِعُونَ الدَّاعِيَ لَا عِوَجَ لَهُ ۖ وَخَشَعَتِ الْأَصْوَاتُ لِلرَّحْمَٰنِ فَلَا تَسْمَعُ إِلَّا هَمْسًا ﴿١٠٨﴾

**110.** ಪರಮ ದಯಾವಂತನು ಯಾರಿಗೋಸ್ಕರ ಅನುಮತಿ ನೀಡುತ್ತಾನೋ ಮತ್ತು ಯಾರ ಬಗ್ಗೆ ಮಾತನ್ನು ಕೇಳಲು ಇಷ್ಟಪಡುತ್ತಾನೋ ಅವನಿಗೆ ಹೊರತು ಬೇರೆ ಯಾರಿಗೂ ಶಿಫಾರಸ್ಸು ಆ ದಿನದಂದು ಫಲಕಾರಿಯಾಗದು.

يَوْمَئِذٍ لَّا تَنفَعُ الشَّفَاعَةُ إِلَّا مَنْ أَذِنَ لَهُ الرَّحْمَٰنُ وَرَضِيَ لَهُ قَوْلًا ﴿١٠٩﴾

**111.** ಅವರ ಮುಂದೆ ಮತ್ತು ಹಿಂದೆ ಇರುವ

يَعْلَمُ مَا بَيْنَ أَيْدِيهِمْ وَمَا خَلْفَهُمْ وَلَا





ಎಲ್ಲವನ್ನೂ ಅವನು (ಅಲ್ಲಾಹನು) ಬಲ್ಲನು. ಅವರಾದರೋ ತಮಗಿರುವ ಜ್ಞಾನದಿಂದ ಅವನನ್ನು (ಅಲ್ಲಾಹನನ್ನು) ಪೂರ್ಣವಾಗಿ ತಿಳಿಯಲಾರರು.

يُحِيطُونَ بِهِ عِلْمًا ﴿١١٠﴾

**112.** (ಆ ದಿನದಂದು) ಚಿರಂತನನೂ ಸರ್ವವನ್ನು ನೆಲೆಗೊಳಿಸುವವನೂ ಆದ ಅಲ್ಲಾಹನ ಮುಂದೆ ಎಲ್ಲ ಮುಖಗಳೂ (ನಮ್ರವಾಗಿ) ಬಾಗುವುವು. ಯಾರು ದುಷ್ಕರ್ಮದ ಭಾರ ಹೊರುತ್ತಾನೋ ಅವನು ಖಂಡಿತವಾಗಿಯೂ ಪರಾಜಿತನಾಗುವನು.

وَعَنَتِ الْوُجُوهُ لِلْحَيِّ الْقَيُّومِ ۖ وَقَدْ خَابَ مَنْ حَمَلَ ظُلْمًا ﴿١١١﴾

**113.** ಸತ್ಯವಿಶ್ವಾಸಿಯಾಗಿದ್ದುಕೊಂಡು ಯಾರು ಸತ್ಕರ್ಮಗೈಯುತ್ತಾನೋ ಅವನಿಗೆ ಅನ್ಯಾಯ ಅಥವಾ ಹಾನಿಯ ಭಯವಿಲ್ಲ.

وَمَن يَعْمَلْ مِنَ الصَّالِحَاتِ وَهُوَ مُؤْمِنٌ فَلَا يَخَافُ ظُلْمًا وَلَا هَضْمًا ﴿١١٢﴾

**114.** ಹೀಗೆ ಇದನ್ನು ಅರಬಿ ಭಾಷೆಯಲ್ಲಿರುವ ಖುರ್‌ಆನ್ ಆಗಿ ನಾವು ಅವತೀರ್ಣಗೊಳಿಸಿದ್ದೇವೆ. ಅವರು ಭಯಭಕ್ತಿಯುಳ್ಳವರಾಗಲಿಕ್ಕಾಗಿ ಅಥವಾ ಅದು (ಖುರ್‌ಆನ್) ಅವರಿಗೆ ದೇವಸ್ಮರಣೆಯ ಪ್ರೇರಣೆ ನೀಡಲಿಕ್ಕಾಗಿ ಮುನ್ನೆಚ್ಚರಿಕೆಗಳ ಬಗ್ಗೆ ಸಹ ನಾವು ಅದರಲ್ಲಿ ವಿವರಿಸಿದ್ದೇವೆ.

وَكَذَٰلِكَ أَنزَلْنَاهُ قُرْآنًا عَرَبِيًّا وَصَرَّفْنَا فِيهِ مِنَ الْوَعِيدِ لَعَلَّهُمْ يَتَّقُونَ أَوْ يُحْدِثُ لَهُمْ ذِكْرًا ﴿١١٣﴾

**115.** ಯಥಾರ್ಥ ರಾಜನಾದ ಅಲ್ಲಾಹನು ಮಹೋನ್ನತನು. ಖುರ್‌ಆನಿನ ಸಂದೇಶ ನಿನಗೆ ಪೂರ್ಣವಾಗಿ ಅವತೀರ್ಣಗೊಳ್ಳುವುದಕ್ಕೆ ಮುಂಚೆ ಅದರ ಕುರಿತು ನೀನು ತ್ವರೆಪಡಬಾರದು. 'ನನ್ನ ಪ್ರಭೂ, ನನ್ನ ಜ್ಞಾನವನ್ನು ಹೆಚ್ಚಿಸು' ಎಂದಷ್ಟೇ ನೀನು ಹೇಳು.

فَتَعَالَى اللَّهُ الْمَلِكُ الْحَقُّ ۗ وَلَا تَعْجَلْ بِالْقُرْآنِ مِن قَبْلِ أَن يُقْضَىٰ إِلَيْكَ وَحْيُهُ ۖ وَقُل رَّبِّ زِدْنِي عِلْمًا ﴿١١٤﴾

**116.** ಇದಕ್ಕೆ ಮುಂಚೆ ನಾವು ಆದಮರಿಗೆ ಒಂದು ಆದೇಶ ನೀಡಿದ್ದೆವು. ಅವರು ಅದನ್ನು ಮರೆತುಬಿಟ್ಟರು. ಆದರೆ (ಅವಿಧೇಯತೆಯ) ಮನಃಪೂರ್ವಕ ನಿರ್ಧಾರವನ್ನು ನಾವು ಅವರಲ್ಲಿ ಕಾಣಲಿಲ್ಲ.

وَلَقَدْ عَهِدْنَا إِلَىٰ آدَمَ مِن قَبْلُ فَنَسِيَ وَلَمْ نَجِدْ لَهُ عَزْمًا ﴿١١٥﴾

**117.** 'ಆದಮರ ಆಜ್ಞಾನುಸರಣೆ ಮಾಡಿರಿ'[337F]

وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا

337F. 2ನೇ ಅಧ್ಯಾಯ 35ನೇ ವಚನದ ಟಿಪ್ಪಣಿ ನೋಡಿರಿ.

إِلَّآ إِبۡلِيسَ أَبَىٰ ﴿١١٧﴾

ಎಂದು ನಾವು ದೇವದೂತರೊಡನೆ ಹೇಳಿದಾಗ ಅವರು (ಎಲ್ಲರೂ) ಆಜ್ಞಾನುಸರಣೆ ಮಾಡಿದರು; ಆದರೆ ಇಬ್‌ಲೀಸ್ ವಿಧೇಯನಾಗಲಿಲ್ಲ. ಅವನು ನಿರಾಕರಿಸಿದನು.

فَقُلۡنَا يَـٰٓـَٔادَمُ إِنَّ هَـٰذَا عَدُوٌّ لَّكَ وَلِزَوۡجِكَ فَلَا يُخۡرِجَنَّكُمَا مِنَ ٱلۡجَنَّةِ فَتَشۡقَىٰٓ ﴿١١٨﴾

**118.** ಆಗ ನಾವು ಹೇಳಿದೆವು: 'ಓ ಆದಂ, ಇವನು ನಿನ್ನ ಮತ್ತು ನಿನ್ನ ಪತ್ನಿಯ ಶತ್ರು ಆಗಿದ್ದಾನೆ. ಆದ್ದರಿಂದ ಇವನು ನಿಮ್ಮಿಬ್ಬರನ್ನೂ ಈ ತೋಟದಿಂದ[337G] ಹೊರಗೆ ಅಟ್ಟಿ ಸಂಕಷ್ಟಕ್ಕೆ ಗುರಿಪಡಿಸದಿರಲಿ.

إِنَّ لَكَ أَلَّا تَجُوعَ فِيهَا وَلَا تَعۡرَىٰ ﴿١١٩﴾

**119.** 'ಇಲ್ಲಿ ನಿನಗೆ ಹಸಿವೆ ಮತ್ತು ನಗ್ನತೆಯ ಬಾಧೆ ತಟ್ಟದು.

وَأَنَّكَ لَا تَظۡمَؤُاْ فِيهَا وَلَا تَضۡحَىٰ ﴿١٢٠﴾

**120.** 'ಬಾಯಾರಿಕೆ ಮತ್ತು ಬಿಸಿಲ ಬೇಗೆಗೆ ಕೂಡ ನೀನು ತುತ್ತಾಗಲಾರೆ.'

فَوَسۡوَسَ إِلَيۡهِ ٱلشَّيۡطَـٰنُ قَالَ يَـٰٓـَٔادَمُ هَلۡ أَدُلُّكَ عَلَىٰ شَجَرَةِ ٱلۡخُلۡدِ وَمُلۡكٍ لَّا يَبۡلَىٰ ﴿١٢١﴾

**121.** ಆದರೆ ಶೈತಾನನು ಅವರನ್ನು ದುಷ್ಪ್ರೇರಣೆಗೆ ಗುರಿಪಡಿಸಿದನು. ಅವನು ಹೇಳಿದನು: ' ಓ ಆದಂ ನಾನು ನಿನಗೆ ಶಾಶ್ವತ ಜೀವನ ನೀಡುವ ವೃಕ್ಷ ಮತ್ತು ಅನಶ್ವರ ಸಾಮ್ರಾಜ್ಯದ ಬಗ್ಗೆ ತಿಳಿಸಲೇ?'

فَأَكَلَا مِنۡهَا فَبَدَتۡ لَهُمَا سَوۡءَٰتُهُمَا وَطَفِقَا يَخۡصِفَانِ عَلَيۡهِمَا مِن وَرَقِ ٱلۡجَنَّةِۚ وَعَصَىٰٓ ءَادَمُ رَبَّهُۥ فَغَوَىٰ ﴿١٢٢﴾

**122.** ಹಾಗೆ ಅವರಿಬ್ಬರೂ ಅದರಿಂದ ತಿಂದರು. ಆಗ ಅವರ ನಗ್ನತೆ (ಕುಂದು ಕೊರತೆ) ಅವರಿಗೆ ಸ್ಪಷ್ಟವಾಗಿ ಗೋಚರಿಸಿತು. ಅವರೀರ್ವರೂ ತೋಟದ ಎಲೆಗಳಿಂದ ತಮ್ಮನ್ನು ಮುಚ್ಚಿಕೊಳ್ಳಲಾರಂಭಿಸಿದರು.[338] ಆದಂ ತನ್ನ ಪ್ರಭುವಿಗೆ ಅವಿಧೇಯತೆ ತೋರಿಸಿದರು. ಆದ್ದರಿಂದ ಅವರು ಸತ್ಪಥದಿಂದ ವ್ಯತಿಕ್ರಮಿಸಿಹೋದರು.

ثُمَّ ٱجۡتَبَٰهُ رَبُّهُۥ فَتَابَ عَلَيۡهِ وَهَدَىٰ ﴿١٢٣﴾

**123.** ಅನಂತರ ಅವರ ಪ್ರಭು ಅವರನ್ನು (ತನ್ನ ಕೃಪೆಗೆ ಪಾತ್ರರಾಗಲು) ಆಯ್ಕೆಮಾಡಿದನು. ಅವನು ಅವರ ಕಡೆಗೆ ಕನಿಕರದಿಂದ ತಿರುಗಿದನು. ಹಾಗೆ ಅವರನ್ನು ಸತ್ಪಥದಲ್ಲಿ ನಡೆಸಿದನು.

337G. 2ನೇ ಅಧ್ಯಾಯ 36ನೇ ವಚನದ ಟಿಪ್ಪಣಿ (12D) ನೋಡಿರಿ.

338. 7ನೇ ಅಧ್ಯಾಯ 23ನೇ ವಚನದ ಟಿಪ್ಪಣಿ ನೋಡಿರಿ. (ಟಿಪ್ಪಣಿ ಸಂಖ್ಯೆ 242)





قَالَ ٱهۡبِطَا مِنۡهَا جَمِيعَۢاۖ بَعۡضُكُمۡ لِبَعۡضٍ عَدُوٌّۖ فَإِمَّا يَأۡتِيَنَّكُم مِّنِّي هُدٗى فَمَنِ ٱتَّبَعَ هُدَايَ فَلَا يَضِلُّ وَلَا يَشۡقَىٰ ﴿١٢٤﴾

**124.** ಅವನು (ಅಲ್ಲಾಹನು) ಹೇಳಿದನು: 'ನೀವು ಉಭಯ ಪಕ್ಷದವರು[339] ಎಲ್ಲರೂ ಇಲ್ಲಿಂದ ಹೊರಗೆ ಹೋಗಿರಿ. ನಿಮ್ಮಲ್ಲಿ ಕೆಲವರು ಕೆಲವರ ಶತ್ರುಗಳಾಗುವಿರಿ. ಮುಂದೆ, ನನ್ನ ಕಡೆಯಿಂದ ನಿಮಗೆ ಮಾರ್ಗದರ್ಶನ ಬಂದರೆ, ಯಾರು ನನ್ನ ಮಾರ್ಗದರ್ಶನವನ್ನು ಅನುಸರಿಸುತ್ತಾನೋ ಅವನು ದಾರಿತಪ್ಪಲಾರ ಹಾಗೂ ವ್ಯಥೆಗೆ ಈಡಾಗಲಾರ.

وَمَنۡ أَعۡرَضَ عَن ذِكۡرِي فَإِنَّ لَهُۥ مَعِيشَةٗ ضَنكٗا وَنَحۡشُرُهُۥ يَوۡمَ ٱلۡقِيَٰمَةِ أَعۡمَىٰ ﴿١٢٥﴾

**125.** 'ಆದರೆ ಯಾರು ನನ್ನ ಸ್ಮರಣೆಯಿಂದ ವಿಮುಖನಾಗುತ್ತಾನೋ, ಅವನ ಜೀವನ ದುಸ್ತರ ವಾಗುವುದು. ಪುನರುತ್ಥಾನ ದಿನದಂದು ನಾವು ಅವನನ್ನು ಕುರುಡನಾಗಿ ಎಬ್ಬಿಸುವೆವು.'

قَالَ رَبِّ لِمَ حَشَرۡتَنِيٓ أَعۡمَىٰ وَقَدۡ كُنتُ بَصِيرٗا ﴿١٢٦﴾

**126.** ಅವನು ಕೇಳುವನು: 'ನನ್ನ ಪ್ರಭೂ, ನೀನು ನನ್ನನ್ನೇಕೆ ಕುರುಡನಾಗಿ ಎಬ್ಬಿಸಿರುವೆ; ನಾನು ಮೊದಲು ದೃಷ್ಟಿಹೊಂದಿದವನಾಗಿದ್ದೆನಷ್ಟೇ?'

قَالَ كَذَٰلِكَ أَتَتۡكَ ءَايَٰتُنَا فَنَسِيتَهَاۖ وَكَذَٰلِكَ ٱلۡيَوۡمَ تُنسَىٰ ﴿١٢٧﴾

**127.** ಅಲ್ಲಾಹನು ಹೇಳುವನು: 'ಅದು ಹಾಗೆಯೇ. ನನ್ನ ದೃಷ್ಟಾಂತಗಳು ಬಂದಾಗ ನೀನು ಅವುಗಳನ್ನು ಕಡಗಣಿಸಿದೆ. ಅದೇ ಪ್ರಕಾರ ನಿನ್ನನ್ನು ಇಂದು ಕಡೆಗಣಿಸಲಾಗುವುದು.'

وَكَذَٰلِكَ نَجۡزِي مَنۡ أَسۡرَفَ وَلَمۡ يُؤۡمِنۢ بِـَٔايَٰتِ رَبِّهِۦۚ وَلَعَذَابُ ٱلۡأٓخِرَةِ أَشَدُّ وَأَبۡقَىٰٓ ﴿١٢٨﴾

**128.** ಹದ್ದು ಮೀರಿ ವರ್ತಿಸುವವನಿಗೂ ತನ್ನ ಪ್ರಭುವಿನ ದೃಷ್ಟಾಂತಗಳನ್ನು ನಂಬದವನಿಗೂ ನಾವು ನೀಡುವ ಪ್ರತಿಫಲ ಇದೇ ಆಗಿದೆ. ಪರಲೋಕದ ಶಿಕ್ಷೆ ಖಂಡಿತವಾಗಿಯೂ ಕಠೋರ ಮತ್ತು ದೀರ್ಘ ಕಾಲದ್ದಾಗಿದೆ.

أَفَلَمۡ يَهۡدِ لَهُمۡ كَمۡ أَهۡلَكۡنَا قَبۡلَهُم مِّنَ ٱلۡقُرُونِ يَمۡشُونَ فِي مَسَٰكِنِهِمۡۚ إِنَّ فِي ذَٰلِكَ لَأٓيَٰتٖ لِّأُوْلِي ٱلنُّهَىٰ ﴿١٢٩﴾

**129.** ಇವರಿಗೆ ಮುಂಚೆ ಎಷ್ಟೆಲ್ಲ ಪೀಳಿಗೆಗಳನ್ನು ನಾವು ನಿರ್ಮೂಲ ಮಾಡಿದೆವು ಎಂಬ ವಿಚಾರ ಅವರಿಗೆ ಮಾರ್ಗದರ್ಶನ ನೀಡುವುದಿಲ್ಲವೇ? ಅವರ ವಾಸಸ್ಥಳದಲ್ಲೇ ಇವರು ಸುತ್ತಾಡುತ್ತಿದ್ದಾರೆ. ದಿಟವಾಗಿಯೂ ವಿವೇಕಶಾಲಿಗಳಿಗೆ ಇದರಲ್ಲಿ ದೃಷ್ಟಾಂತಗಳಿವೆ.

339. ಆದಮರ ಅನುಯಾಯಿಗಳು ಮತ್ತು ಶೈತಾನನ ಅನುಯಾಯಿಗಳು.

**130.** ನಿನ್ನ ಪ್ರಭುವಿನಿಂದ ಮೊದಲೇ ನಿರ್ಣಯಿಸಲ್ಪಟ್ಟ ಒಂದು ವಚನ ಇಲ್ಲದಿರುತ್ತಿದ್ದರೆ ಹಾಗೂ ಒಂದು ಕಾಲಾವಧಿ ನಿರ್ಧರಿಸಲ್ಪಡದಿರುತ್ತಿದ್ದರೆ ಅವರಿಗೆ ಅದು (ತಕ್ಷಣದ ಶಿಕ್ಷೆ) ಅನಿವಾರ್ಯ ವಾಗುತ್ತಿತ್ತು.

وَلَوْلَا كَلِمَةٌ سَبَقَتْ مِن رَّبِّكَ لَكَانَ لِزَامًا وَأَجَلٌ مُّسَمًّى ﴿١٢٩﴾

**131.** ಅವರು ಹೇಳುವುದನ್ನು ನೀನು ಸಹಿಸಿಕೋ. ಸೂರ್ಯೋದಯದ ಮುಂಚೆಯೂ ಅದರ ಅಸ್ತಮಾನದ ಮುನ್ನವೂ ನಿನ್ನ ಪ್ರಭುವಿನ ಸ್ತುತಿಸ್ತೋತ್ರದೊಂದಿಗೆ ಅವನ ಪಾವಿತ್ರ್ಯವನ್ನು ಕೊಂಡಾಡು. ರಾತ್ರಿಯ ಸಮಯಗಳಲ್ಲೂ ಹಗಲಿನ ಅಂಶಗಳಲ್ಲೂ ಅವನ ಪರಿಶುದ್ಧತೆಯನ್ನು ಶ್ಲಾಘಿಸು - ನೀನು ಸಂತೃಪ್ತ ನಾಗಲಿಕ್ಕಾಗಿ.

فَاصْبِرْ عَلَىٰ مَا يَقُولُونَ وَسَبِّحْ بِحَمْدِ رَبِّكَ قَبْلَ طُلُوعِ الشَّمْسِ وَقَبْلَ غُرُوبِهَا ۖ وَمِنْ آنَاءِ اللَّيْلِ فَسَبِّحْ وَأَطْرَافَ النَّهَارِ لَعَلَّكَ تَرْضَىٰ ﴿١٣٠﴾

**132.** ಅವರ ಪೈಕಿ ಕೆಲವರಿಗೆ ನಾವು ಇಹಲೋಕ ಜೀವನದ ವೈಭವಗಳನ್ನು ನೀಡಿ ಸುಖಸೌಕರ್ಯಗಳನ್ನು ಅನುಭವಿಸುವಂತೆ ಮಾಡಿದುದನ್ನು ನೀನು ಕಣ್ಣೆತ್ತಿ ನೋಡಬೇಡ. ಆ ಮೂಲಕ ಅವರನ್ನು ಪರೀಕ್ಷಿಸಲಿಕ್ಕೋಸ್ಕರ ನಾವು ಅದನ್ನು ನೀಡಿದ್ದೇವೆ. ನಿನ್ನ ಪ್ರಭುವಿನ ಅನುಗ್ರಹ ಅತ್ಯುತ್ತಮವಾದುದೂ ಶಾಶ್ವತವಾದುದೂ ಆಗಿದೆ.

وَلَا تَمُدَّنَّ عَيْنَيْكَ إِلَىٰ مَا مَتَّعْنَا بِهِ أَزْوَاجًا مِّنْهُمْ زَهْرَةَ الْحَيَاةِ الدُّنْيَا لِنَفْتِنَهُمْ فِيهِ ۚ وَرِزْقُ رَبِّكَ خَيْرٌ وَأَبْقَىٰ ﴿١٣١﴾

**133.** ನಮಾಝ್ ಅನುಷ್ಠಿಸಲಿಕ್ಕೆ ನೀನು ನಿನ್ನ ಕುಟುಂಬಕ್ಕೆ ಆಜ್ಞಾಪಿಸು. ನೀನು ಸಹ ಅದರಲ್ಲಿ ಸ್ಥಿರನಿಷ್ಠನಾಗಿರು. ನಾವು ನಿನ್ನಿಂದ ಆಹಾರವನ್ನು ಕೇಳುವುದಿಲ್ಲ. (ಬದಲು) ನಾವೇ ನಿನಗೆ ಆಹಾರವನ್ನು ಒದಗಿಸುತ್ತೇವೆ. ಭಯಭಕ್ತಿಗೆ ಉತ್ತಮ ವಾದ ಅಂತಿಮ ಫಲವಿದೆ.

وَأْمُرْ أَهْلَكَ بِالصَّلَاةِ وَاصْطَبِرْ عَلَيْهَا ۖ لَا نَسْأَلُكَ رِزْقًا ۖ نَّحْنُ نَرْزُقُكَ ۗ وَالْعَاقِبَةُ لِلتَّقْوَىٰ ﴿١٣٢﴾

**134.** 'ತನ್ನ ಪ್ರಭುವಿನಿಂದ ಆತನು (ಮುಹಮ್ಮದ್) ಏಕೆ ಒಂದು ದೃಷ್ಟಾಂತವನ್ನು ತರುವುದಿಲ್ಲ?' ಎಂದು ಅವರು ಕೇಳುತ್ತಾರೆ. ಪೂರ್ವಿಕ ಧರ್ಮಗ್ರಂಥಗಳ ಸ್ಪಷ್ಟವಾದ ಸಾಕ್ಷ್ಯಾಧಾರ ಅವರ ಬಳಿಗೆ ಬಂದಿಲ್ಲವೇ?

وَقَالُوا لَوْلَا يَأْتِينَا بِآيَةٍ مِّن رَّبِّهِ ۚ أَوَلَمْ تَأْتِهِم بَيِّنَةُ مَا فِي الصُّحُفِ الْأُولَىٰ ﴿١٣٣﴾





**135.** ಇದಕ್ಕೆ ಮುಂಚೆ ಯಾವುದಾದರೂ ಶಿಕ್ಷೆಯಿಂದ ನಾವು ಅವರನ್ನು ನಾಶಪಡಿಸಿದ್ದರೆ, 'ನಮ್ಮ ಪ್ರಭೂ, ನೀನೇಕೆ ನಮ್ಮ ಬಳಿಗೆ ಒಬ್ಬ ಸಂದೇಶ ವಾಹಕನನ್ನು ಕಳುಹಿಸಲಿಲ್ಲ? ನಿಂದನೆಗೂ ಅಪಕೀರ್ತಿಗೂ ಈಡಾಗುವುದಕ್ಕೆ ಮುಂಚೆಯೇ ನಾವು ನಿನ್ನ ಆಜ್ಞೆಯನ್ನು ಪಾಲಿಸುತ್ತಿದ್ದೆವಲ್ಲವೇ?' ಎಂದು ಅವರು ಕೇಳುತ್ತಿದ್ದರು.

وَلَوْ أَنَّا أَهْلَكْنَاهُم بِعَذَابٍ مِّن قَبْلِهِ لَقَالُوا رَبَّنَا لَوْلَا أَرْسَلْتَ إِلَيْنَا رَسُولًا فَنَتَّبِعَ آيَاتِكَ مِن قَبْلِ أَن نَّذِلَّ وَنَخْزَىٰ ﴿١٣٤﴾

**136.** ಹೇಳು: 'ಪ್ರತಿಯೊಬ್ಬನೂ ಪ್ರತೀಕ್ಷಿಸುತ್ತಿದ್ದಾನೆ. ನೀವು ಸಹ ಪ್ರತೀಕ್ಷಿಸಿರಿ. ಸತ್ಪಥದ ಜನರು ಯಾರೆಂದೂ ಸತ್ಪಥ ಗಳಿಸಿದವರು ಯಾರೆಂದೂ ಆಗ ನೀವು ಮನಗಾಣುವಿರಿ.'

قُلْ كُلٌّ مُّتَرَبِّصٌ فَتَرَبَّصُوا ۖ فَسَتَعْلَمُونَ مَنْ أَصْحَابُ الصِّرَاطِ السَّوِيِّ وَمَنِ اهْتَدَىٰ ﴿١٣٥﴾

سُورَةُ الْاَنْبِيَاۤءِ مَكِّيَّةٌ وَّهِيَ مَعَ الْبَسْمَلَةِ مِائَةٌ وَّثَلٰثَ عَشْرَةَ اٰيَةً وَّسَبْعَةُ رُكُوْعَاتٍ

# 21. ಅಲ್‌ಅಂಬಿಯಾಅ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 113 ಆಯತ್‌ಗಳು ಹಾಗೂ 7 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ۝

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

اِقْتَرَبَ لِلنَّاسِ حِسَابُهُمْ وَهُمْ فِيْ غَفْلَةٍ مُّعْرِضُوْنَ ۝١

**2. ಮನುಷ್ಯರಿಗೆ ಅವರ ಲೆಕ್ಕಾಚಾರದ** (ಸಮಯ) **ಸಮೀಪಿಸಿದೆ. ಆದರೆ ಅವರು ನಿರ್ಲಕ್ಷ್ಯದಿಂದ ಮುಖ ತಿರುಗಿಸಿ ಹೋಗುತ್ತಿದ್ದಾರೆ.**

مَا يَاْتِيْهِمْ مِّنْ ذِكْرٍ مِّنْ رَّبِّهِمْ مُّحْدَثٍ اِلَّا اسْتَمَعُوْهُ وَهُمْ يَلْعَبُوْنَ ۝٢

**3. ಅವರ ಪ್ರಭುವಿನಿಂದ ಯಾವುದೇ ಹೊಸ ಉಪದೇಶ ಅವರಿಗೆ ಬರುವುದಿಲ್ಲ- ಅವರು ಅದನ್ನು ಅಪಹಾಸ್ಯದಿಂದ ಆಲಿಸುವುದರ ಹೊರತು.**

لَاهِيَةً قُلُوْبُهُمْ ۗ وَاَسَرُّوا النَّجْوَى ۖ الَّذِيْنَ ظَلَمُوْا ۖ هَلْ هٰذَاۤ اِلَّا بَشَرٌ مِّثْلُكُمْ ۚ اَفَتَاْتُوْنَ السِّحْرَ وَاَنْتُمْ تُبْصِرُوْنَ ۝٣

**4. ಅವರ ಹೃದಯಗಳು ಅಸಡ್ಡೆಯಲ್ಲಿ ಮುಳುಗಿವೆ. ಅಧರ್ಮಿಗಳಾದ ಜನರು ಗುಪ್ತವಾಗಿ ಸಮಾಲೋಚನೆ ನಡೆಸುತ್ತಾರೆ: 'ಇವನು ನಿಮ್ಮಂಥ ಒಬ್ಬ ಮನುಷ್ಯನಲ್ಲವೇ? ಆದರೂ ನೀವು ತಿಳಿದು ಕೂಡ ಮಾಂತ್ರಿಕ ವಿದ್ಯೆಗೆ ಗುರಿಯಾಗುತ್ತೀರಾ?'**

قٰلَ رَبِّيْ يَعْلَمُ الْقَوْلَ فِي السَّمَاۤءِ وَالْاَرْضِ ۖ وَهُوَ السَّمِيْعُ الْعَلِيْمُ ۝٤

**5. ಅವರು** (ಮುಹಮ್ಮದ್ ಪೈಗಂಬರ್) **ಹೇಳಿದರು:**[340] **'ಆಕಾಶದಲ್ಲಿ ಮತ್ತು ಭೂಮಿಯಲ್ಲಿ ನುಡಿಯಲ್ಪಡುವ ಮಾತುಗಳನ್ನೆಲ್ಲ ನನ್ನ ಪ್ರಭು ತಿಳಿಯುತ್ತಾನೆ. ಅವನು ಸರ್ವವನ್ನು ಆಲಿಸುವವನೂ ಎಲ್ಲವನ್ನು ಬಲ್ಲವನೂ ಆಗಿದ್ದಾನೆ.'**

بَلْ قَالُوْۤا اَضْغَاثُ اَحْلَامٍۭ بَلِ افْتَرٰىهُ بَلْ هُوَ شَاعِرٌ ۖۚ فَلْيَاْتِنَا بِاٰيَةٍ كَمَاۤ اُرْسِلَ الْاَوَّلُوْنَ ۝٥

**6. ಆದರೆ ಅವರು** (ವಿರೋಧಿಗಳು) **ಹೇಳಿದರು: 'ಇದು** (ಈ ವಚನ) **ಹುಸಿ ಕನಸುಗಳಾಗಿವೆ. ಅಲ್ಲ, ಅವನೇ ಇದನ್ನು ಸ್ವಯಂ ರಚಿಸಿದ್ದಾನೆ. ಅಲ್ಲ, ಅವ**

340. ಹಾಗೆ ಹೇಳಲು ಅಲ್ಲಾಹನು ನಿರ್ದೇಶಿಸಿದನು ಎಂದರ್ಥ.





**ನೊಬ್ಬ ಕವಿಯಾಗಿದ್ದಾನೆ.** (ಅವನು ಸತ್ಯವಂತನೆಂದಾದರೆ) **ಪೂರ್ವಿಕ ಪ್ರವಾದಿಗಳು** (ದೃಷ್ಟಾಂತಗಳೊಂದಿಗೆ) **ಕಳುಹಿಸಲ್ಪಟ್ಟ ಪ್ರಕಾರ ಅವನು ನಮ್ಮ ಬಳಿಗೆ ಒಂದು ದೃಷ್ಟಾಂತವನ್ನು ತರಲಿ.'**

مَاۤ اٰمَنَتْ قَبْلَهُمْ مِّنْ قَرْيَةٍ اَهْلَكْنٰهَا ۚ اَفَهُمْ يُؤْمِنُوْنَ ۝٦

**7. ಇವರಿಗೆ ಮುಂಚೆ ನಾವು ನಾಶಪಡಿಸಿದ್ದ ಯಾವುದೇ ಊರಿನವರು ವಿಶ್ವಾಸಹೊಂದಿರಲಿಲ್ಲ. ಹಾಗಿರುವಾಗ, ಇವರು ವಿಶ್ವಾಸಹೊಂದುವರೇ?**

وَمَاۤ اَرْسَلْنَا قَبْلَكَ اِلَّا رِجَالًا نُّوْحِيْۤ اِلَيْهِمْ فَسْـَٔلُوْۤا اَهْلَ الذِّكْرِ اِنْ كُنْتُمْ لَا تَعْلَمُوْنَ ۝٧

**8. ನಾವು ದಿವ್ಯ ಸಂದೇಶವನ್ನು ನೀಡುತ್ತಿದ್ದ ಪುರುಷರನ್ನು ಮಾತ್ರ ನಿನಗಿಂತ ಮುಂಚೆ** (ಸಂದೇಶವಾಹಕರಾಗಿ) **ಕಳುಹಿಸಿದ್ದೇವೆ.** (ಎಲೈ ಅವಿಶ್ವಾಸಿಗಳೇ,) **ನಿಮಗೆ ಆ ಬಗ್ಗೆ ತಿಳುವಳಿಕೆಯಿಲ್ಲವಾದರೆ** (ವೇದ ಗ್ರಂಥಗಳ) **ಪರಿಜ್ಞಾನ ವಿರುವವರೊಡನೆ ಕೇಳಿರಿ.**

وَمَا جَعَلْنٰهُمْ جَسَدًا لَّا يَاْكُلُوْنَ الطَّعَامَ وَمَا كَانُوْا خٰلِدِيْنَ ۝٨

**9. ಆಹಾರವನ್ನು ಭಕ್ಷಿಸದ ಶರೀರವನ್ನು ನಾವು ಅವರಿಗೆ ಕೊಡಲಿಲ್ಲ. ಅವರು ಅಸಾಮಾನ್ಯವಾಗಿ ದೀರ್ಘಕಾಲ ಬದುಕುವವರೂ ಆಗಿರಲಿಲ್ಲ.**

ثُمَّ صَدَقْنٰهُمُ الْوَعْدَ فَاَنْجَيْنٰهُمْ وَمَنْ نَّشَاۤءُ وَاَهْلَكْنَا الْمُسْرِفِيْنَ ۝٩

**10. ನಾವು ಅವರಿಗೆ ನಮ್ಮ ವಾಗ್ದಾನವನ್ನು ಪೂರೈಸಿ ಕೊಟ್ಟೆವು. ಹಾಗೆ, ನಾವು ಅವರನ್ನೂ ನಮ್ಮ ಪ್ರೀತಿಗೆ ಪಾತ್ರರಾದವರನ್ನೂ ರಕ್ಷಿಸಿದೆವು. ಹದ್ದುಮೀರಿ ವರ್ತಿಸಿದವರನ್ನು ನಾವು ಶಿಕ್ಷಿಸಿದೆವು.**

لَقَدْ اَنْزَلْنَاۤ اِلَيْكُمْ كِتٰبًا فِيْهِ ذِكْرُكُمْ ۚ اَفَلَا تَعْقِلُوْنَ ۝١٠

**11. ನಾವು ಒಂದು ಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ. ಅದರಲ್ಲಿ ನಿಮ್ಮ ಜ್ಞಾಪನವಿದೆ. ಆದರೂ ನೀವು ಮನವರಿಕೆ ಮಾಡುವುದಿಲ್ಲವೇ?**

وَكَمْ قَصَمْنَا مِنْ قَرْيَةٍ كَانَتْ ظَالِمَةً وَّاَنْشَاْنَا بَعْدَهَا قَوْمًا اٰخَرِيْنَ ۝١١

**12. ಅಕ್ರಮವೆಸಗುತ್ತಿದ್ದ ಎಷ್ಟೆಲ್ಲ ಊರುಗಳನ್ನು ನಾವು ನಾಶಪಡಿಸಿದೆವು! ಅನಂತರ ನಾವು ಬೇರೊಂದು ಜನಾಂಗವನ್ನು ಸೃಷ್ಟಿಸಿದೆವು.**

فَلَمَّاۤ اَحَسُّوْا بَاْسَنَاۤ اِذَا هُمْ مِّنْهَا يَرْكُضُوْنَ ۝١٢

**13. ಹಾಗೆ, ಅವರು ನಮ್ಮ ಶಿಕ್ಷೆಯನ್ನು ಅನುಭವಿಸುವಾಗ, ಅಗೋ ಅವರು ಅದರಿಂದ** (ಪಾರಾಗಲು) **ಓಡಿ ಹೋಗುತ್ತಾರೆ.**

**14.** (ಆಗ ನಾವು ಹೇಳಿದೆವು:) **'ನೀವು ಓಡಿಹೋಗಬೇಡಿರಿ. ನೀವು ಅನುಭವಿಸುತ್ತಿದ್ದ ಸುಖಾಡಂಬರ ಮತ್ತು ನಿಮ್ಮ ವಾಸಸ್ಥಳದ ಕಡೆಗೆ ನೀವು ಮರಳಿರಿ - ನಿಮ್ಮನ್ನು ವಿಚಾರಣೆಗೊಳಪಡಿಸಲಿಕ್ಕೋಸ್ಕರ.'**

لَا تَرْكُضُوا وَارْجِعُوا إِلَىٰ مَا أُتْرِفْتُمْ فِيهِ وَمَسَاكِنِكُمْ لَعَلَّكُمْ تُسْأَلُونَ ﴿١٣﴾

**15. ಅವರು ಪ್ರಲಾಪಿಸಿದರು: 'ಅಕಟಾ, ನಾವು ಅಧರ್ಮಿಗಳಾಗಿದ್ದೆವು.'**

قَالُوا يَا وَيْلَنَا إِنَّا كُنَّا ظَالِمِينَ ﴿١٤﴾

**16. ಅವರ ರೋಧನ ಹಾಗೆ ಮುಂದುವರಿಯಿತು- ನಾವು ಅವರನ್ನು ಬೆಳೆಕೊಯ್ದ ಗದ್ದೆಯಂತೆ ನಿಶ್ಚೇಷ್ಟರನ್ನಾಗಿ ಮಾಡುವ ತನಕ.**

فَمَا زَالَت تِّلْكَ دَعْوَاهُمْ حَتَّىٰ جَعَلْنَاهُمْ حَصِيدًا خَامِدِينَ ﴿١٥﴾

**17. ಆಕಾಶ, ಭೂಮಿ ಮತ್ತು ಅವುಗಳ ಮಧ್ಯೆ ಇರುವುದನ್ನೆಲ್ಲ ನಾವು ವಿನೋದಕ್ಕಾಗಿ ಸೃಷ್ಟಿಸಲಿಲ್ಲ.**

وَمَا خَلَقْنَا السَّمَاءَ وَالْأَرْضَ وَمَا بَيْنَهُمَا لَاعِبِينَ ﴿١٦﴾

**18. ನಾವು ಒಂದು ವಿನೋದವಾಡಲು ಬಯಸಿರುತ್ತಿದ್ದರೆ, ನಮ್ಮ ಬಳಿಯಿಂದಲೇ ನಾವು ಅದನ್ನು ಏರ್ಪಡಿಸುತ್ತಿದ್ದೆವು- ನಾವು ಹಾಗೆ ಮಾಡುವುದಾಗಿದ್ದರೆ.**

لَوْ أَرَدْنَا أَن نَّتَّخِذَ لَهْوًا لَّاتَّخَذْنَاهُ مِن لَّدُنَّا إِن كُنَّا فَاعِلِينَ ﴿١٧﴾

**19. ನಾವು ಅಸತ್ಯದ ಮೇಲೆ ಸತ್ಯದ ಏಟು ಹಾಕುತ್ತೇವೆ. ಆಗ ಅದರ** (ಅಸತ್ಯದ) **ತಲೆಯೊಡೆಯುತ್ತದೆ. ಹಾಗೆ ಅದು ನಾಶವಾಗುತ್ತದೆ. ನೀವು** ಅಲ್ಲಾಹನ ಮೇಲೆ **ಸುಳ್ಳಾರೋಪಿಸುವ ಕಾರಣದಿಂದ ನಿಮಗೆ ನಾಶ.**

بَلْ نَقْذِفُ بِالْحَقِّ عَلَى الْبَاطِلِ فَيَدْمَغُهُ فَإِذَا هُوَ زَاهِقٌ ۚ وَلَكُمُ الْوَيْلُ مِمَّا تَصِفُونَ ﴿١٨﴾

**20. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ಅವನಿಗೆ ಸೇರುತ್ತಾರೆ. ಅವನ ಸನ್ನಿಧಿಯಲ್ಲಿರುವವರು ಅವನ ಉಪಾಸನೆಯನ್ನು ನಿರ್ಲಕ್ಷ್ಯಮಾಡಲಾರರು; ಅವರಿಗೆ ದಣಿವಾಗಲಾರದು.**

وَلَهُ مَن فِي السَّمَاوَاتِ وَالْأَرْضِ ۚ وَمَنْ عِندَهُ لَا يَسْتَكْبِرُونَ عَنْ عِبَادَتِهِ وَلَا يَسْتَحْسِرُونَ ﴿١٩﴾

**21. ಅವರು ರಾತ್ರಿ ಮತ್ತು ಹಗಲು ಅವನ** (ಅಲ್ಲಾಹನ) **ಪಾವಿತ್ರ್ಯದ ಗುಣಗಾನ ಮಾಡುವರು. ಅವರಿಗೆ ಆಯಾಸವುಂಟಾಗಲಾರದು.**

يُسَبِّحُونَ اللَّيْلَ وَالنَّهَارَ لَا يَفْتُرُونَ ﴿٢٠﴾

**22. ಏನು, ಮೃತರಾದವರನ್ನು ಪುನರುಜ್ಜೀವನಗೊಳಿಸುವ ಕೆಲವು ದೇವರುಗಳನ್ನು ಅವರು ಭೂಮಿಯಿಂದ ಮಾಡಿಕೊಂಡಿರುವರೇ?**

أَمِ اتَّخَذُوا آلِهَةً مِّنَ الْأَرْضِ هُمْ يُنشِرُونَ ﴿٢١﴾





**23. ಅವೆರಡರಲ್ಲಿ** (ಆಕಾಶ ಮತ್ತು ಭೂಮಿಯಲ್ಲಿ) **ಅಲ್ಲಾಹನಲ್ಲದೆ ಬೇರೆ ದೇವರುಗಳು ಸಹ ಇರುತ್ತಿದ್ದರೆ ಅವೆರಡೂ ನಾಶವಾಗುತ್ತಿದ್ದವು. ಸಿಂಹಾಸನದ ಪ್ರಭುವಾದ ಅಲ್ಲಾಹನು ಅವರ ಆರೋಪಗಳಿಂದೆಲ್ಲ ಪರಿಶುದ್ಧನು.**

لَوْ كَانَ فِيهِمَا آلِهَةٌ إِلَّا اللَّهُ لَفَسَدَتَا ۚ فَسُبْحَانَ اللَّهِ رَبِّ الْعَرْشِ عَمَّا يَصِفُونَ ﴿٢٢﴾

**24. ಅವನು** (ಅಲ್ಲಾಹನು) **ಮಾಡಿದುದರ ಬಗ್ಗೆ ಪ್ರಶ್ನಿಸಲ್ಪಡಲಾರನು. ಅವರಾದರೋ** (ಮನುಷ್ಯರು) **ಪ್ರಶ್ನಿಸಲ್ಪಡುವರು.**

لَا يُسْأَلُ عَمَّا يَفْعَلُ وَهُمْ يُسْأَلُونَ ﴿٢٣﴾

**25. ಅವನ** (ಅಲ್ಲಾಹನ) **ಹೊರತು ಬೇರೆ ದೇವರುಗಳನ್ನು ಅವರು ಕೈಗೊಂಡಿರುವರೇ? ಹೇಳು: 'ನಿಮ್ಮ ಸಾಕ್ಷ್ಯಾಧಾರವನ್ನು ತನ್ನಿರಿ. ಇದು** (ಖುರ್‌ಆನ್) **ನನ್ನ ಜೊತೆಗಿರುವವರಿಗೆ ಮಹತ್ವ ನೀಡುವಂಥದ್ದು ಹಾಗೂ ನನ್ನ ಹಿಂದಿನವರಿಗೆ ಮಹತ್ವ ನೀಡುವಂಥದ್ದೂ ಆಗಿದೆ.' ಆದರೆ ಅವರ ಪೈಕಿ ಹೆಚ್ಚಿನವರು ಸತ್ಯವನ್ನು ಮನಗಾಣುವುದಿಲ್ಲ. ಆದುದರಿಂದ ಅವರು ವಿಮುಖರಾಗುತ್ತಾರೆ.**

أَمِ اتَّخَذُوا مِن دُونِهِ آلِهَةً ۖ قُلْ هَاتُوا بُرْهَانَكُمْ ۖ هَٰذَا ذِكْرُ مَن مَّعِيَ وَذِكْرُ مَن قَبْلِي ۗ بَلْ أَكْثَرُهُمْ لَا يَعْلَمُونَ الْحَقَّ ۖ فَهُم مُّعْرِضُونَ ﴿٢٤﴾

**26. 'ಖಂಡಿತವಾಗಿಯೂ ನನ್ನ ಹೊರತು ಬೇರೆ ದೇವನಿಲ್ಲ; ಆದುದರಿಂದ ನನ್ನನ್ನು ಮಾತ್ರ ಆರಾಧಿಸಿರಿ' ಎಂದು ನಾವು ದಿವ್ಯ ಸಂದೇಶ ನೀಡದೆ ನಿನಗಿಂತ ಮುಂಚೆ ಯಾವ ಸಂದೇಶವಾಹಕನನ್ನೂ ನಾವು ಕಳುಹಿಸಲಿಲ್ಲ.**

وَمَا أَرْسَلْنَا مِن قَبْلِكَ مِن رَّسُولٍ إِلَّا نُوحِي إِلَيْهِ أَنَّهُ لَا إِلَٰهَ إِلَّا أَنَا فَاعْبُدُونِ ﴿٢٥﴾

**27. 'ದಯಾವಂತನಾದ** *ದೇವನಿಗೆ* **ಪುತ್ರನಿದ್ದಾನೆ' ಎಂದು ಅವರು ಹೇಳುತ್ತಾರೆ.** (ಅವರ ಈ ಮಾತು ಸರಿಯಲ್ಲ)**. ಅವನು ಪರಮ ಪವಿತ್ರನು. ವಾಸ್ತವದಲ್ಲಿ ಅವರು** (ದೇವನ ಪುತ್ರನೆಂದು ಭಾವಿಸಲ್ಪಡುವ ಎಲ್ಲರೂ) **ಗೌರವಾನ್ವಿತ ದಾಸರೇ ಆಗಿದ್ದಾರೆ.**

وَقَالُوا اتَّخَذَ الرَّحْمَٰنُ وَلَدًا ۗ سُبْحَانَهُ ۚ بَلْ عِبَادٌ مُّكْرَمُونَ ﴿٢٦﴾

**28. ಅವರು ಅವನ** (ಅಲ್ಲಾಹನ) **ಮಾತುಗಳನ್ನು ಮೀರುವುದಿಲ್ಲ. ಅವನ ಆಜ್ಞೆ ಪ್ರಕಾರವೇ ಅವರು ವರ್ತಿಸುತ್ತಾರೆ.**

لَا يَسْبِقُونَهُ بِالْقَوْلِ وَهُم بِأَمْرِهِ يَعْمَلُونَ ﴿٢٧﴾

**29.** ಅವರ ಹಿಂದೆ - ಮುಂದೆ ಇರುವುದನ್ನೆಲ್ಲ ಅವನು ಬಲ್ಲನು. ಯಾರ ಬಗ್ಗೆ ಅವನು ತೃಪ್ತಿಪಡುತ್ತಾನೋ ಆತನಿಗೆ ಹೊರತು ಬೇರೆ ಯಾರಿಗೂ ಅವರು ಶಿಫಾರಸು ಮಾಡಲಾರರು. ಅವನ ಭಯ ನಿಮಿತ್ತ ಅವರು ಬಹಳ ಎಚ್ಚರಿಕೆಯಿಂದ ವರ್ತಿಸುತ್ತಾರೆ.

يَعْلَمُ مَا بَيْنَ أَيْدِيهِمْ وَمَا خَلْفَهُمْ وَلَا يَشْفَعُونَ إِلَّا لِمَنِ ارْتَضَىٰ وَهُم مِّنْ خَشْيَتِهِ مُشْفِقُونَ ﴿٢٨﴾

**30.** ಅವರ ಪೈಕಿ 'ಅಲ್ಲಾಹನಲ್ಲದೆ ನಾನು ಒಬ್ಬ ದೇವನಾಗಿದ್ದೇನೆ' ಎಂದು ಯಾರಾದರೂ ಹೇಳಿದರೆ ನಾವು ಅವನಿಗೆ ನರಕ ಶಿಕ್ಷೆ ನೀಡುವೆವು.[340A] ಅಧರ್ಮಿಗಳಿಗೆ ನಾವು ನೀಡುವ ಶಿಕ್ಷೆ ಇದೇ ಆಗಿದೆ.

وَمَن يَقُلْ مِنْهُمْ إِنِّي إِلَٰهٌ مِّن دُونِهِ فَذَٰلِكَ نَجْزِيهِ جَهَنَّمَ ۚ كَذَٰلِكَ نَجْزِي الظَّالِمِينَ ﴿٢٩﴾

**31.** ಅವಿಶ್ವಾಸಿಗಳು ಕಾಣುವುದಿಲ್ಲವೇ - ಆಕಾಶಗಳೂ ಭೂಮಿಯೂ ಅನ್ಯೋನ್ಯ ಒಟ್ಟುಗೂಡಿಕೊಂಡಿದ್ದವು. ಮತ್ತೆ ನಾವು ಅವುಗಳನ್ನು ಬೇರ್ಪಡಿಸಿದೆವು. ಪ್ರತಿಯೊಂದು ಜೀವಿಯನ್ನು ನಾವು ನೀರಿನಿಂದ ಸೃಷ್ಟಿಸಿದೆವು. ಅವರು ನಂಬುವುದಿಲ್ಲವೇ?

أَوَلَمْ يَرَ الَّذِينَ كَفَرُوا أَنَّ السَّمَاوَاتِ وَالْأَرْضَ كَانَتَا رَتْقًا فَفَتَقْنَاهُمَا ۖ وَجَعَلْنَا مِنَ الْمَاءِ كُلَّ شَيْءٍ حَيٍّ ۖ أَفَلَا يُؤْمِنُونَ ﴿٣٠﴾

**32.** ಭೂಮಿ ಜನರೊಂದಿಗೆ ಕಂಪನಕ್ಕೀಡಾಗದಿರಲಿಕ್ಕಾಗಿ ನಾವು ಪರ್ವತಗಳನ್ನು ರೂಪಿಸಿದ್ದೇವೆ. ಅವರು ಗುರಿ ತಲಪಲಿಕ್ಕಾಗಿ ನಾವು ಅದರಲ್ಲಿ ವಿಶಾಲವಾದ ಮಾರ್ಗಗಳನ್ನೂ ಮಾಡಿದ್ದೇವೆ.

وَجَعَلْنَا فِي الْأَرْضِ رَوَاسِيَ أَن تَمِيدَ بِهِمْ وَجَعَلْنَا فِيهَا فِجَاجًا سُبُلًا لَّعَلَّهُمْ يَهْتَدُونَ ﴿٣١﴾

**33.** ನಾವು ಆಕಾಶವನ್ನು ಸಂರಕ್ಷಣೆಯ ಛಾವಣಿಯನ್ನಾಗಿ ಮಾಡಿದ್ದೇವೆ. ಅವರಾದರೋ ಅದರ ದೃಷ್ಟಾಂತಗಳ ಬಗ್ಗೆ ನಿರ್ಲಕ್ಷ್ಯರಾಗಿದ್ದಾರೆ.

وَجَعَلْنَا السَّمَاءَ سَقْفًا مَّحْفُوظًا ۖ وَهُمْ عَنْ آيَاتِهَا مُعْرِضُونَ ﴿٣٢﴾

340A. ಮನುಷ್ಯನು ಎಂದಿಗೂ ದೇವನಾಗಲಾರ. ಇದು ಸಾಮಾನ್ಯವಾಗಿ ಎಲ್ಲರಿಗೂ ಮನವರಿಕೆಯಾಗುವಂಥ ವಿಚಾರವಾಗಿದೆ. ತಾನು ದೇವನೆಂದು ಒಬ್ಬನು ವಾದಿಸುವುದಾದರೆ ಆತನಿಗೆ ಅಲ್ಲಾಹನು ನಿಶ್ಚೈಸಿದ ಶಿಕ್ಷೆ ನರಕವಾಗಿದೆಯೆಂದು ಇಲ್ಲಿ ವ್ಯಕ್ತಪಡಿಸಲಾಗಿದೆ. ಇಹಲೋಕದಲ್ಲಿ ಅಂಥವರಿಗೆ ಶಿಕ್ಷೆಯಾಗುವುದೆಂದು ಪವಿತ್ರ ಖುರ್‌ಆನಿನಲ್ಲಿ ಎಲ್ಲಿಯೂ ಹೇಳಿಲ್ಲ. ಇನ್ನು, ಒಬ್ಬನು ತಾನು ಪ್ರವಾದಿಯೆಂದು ಸುಳ್ಳಾಗಿ ವಾದಿಸುವುದಾದರೆ ಅವನಿಗೆ ಇಹಲೋಕದಲ್ಲೇ ಶಿಕ್ಷೆ ಸಿಗುವುದೆಂದು ಪವಿತ್ರ ಖುರ್‌ಆನ್ ಸ್ಪಷ್ಟಪಡಿಸಿದೆ. ಅಲ್ಲಾಹನು ತನಗೆ ದೈವೀ ಪ್ರಕಾಶನ ನೀಡಿರುವನೆಂದು ಅಲ್ಲಾಹನ ಮೇಲೆ ಸುಳ್ಳಾಗಿ ಪ್ರಚಾರ ಮಾಡುವವನನ್ನು ಅಲ್ಲಾಹನು ಬಲಗೈಯಿಂದ ಹಿಡಿದು ಅವನ ಜೀವನಾಡಿಯನ್ನು ತುಂಡರಿಸುವನೆಂದೂ ಅವನನ್ನು ರಕ್ಷಿಸಲು ಯಾರಿಂದಲೂ ಸಾಧ್ಯವಿಲ್ಲವೆಂದೂ ಪವಿತ್ರ ಖುರ್‌ಆನಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ (69:45-48). ಅಂಥ ಸುಳ್ಳುವಾದಿಯನ್ನು ಇಹಲೋಕದಲ್ಲೇ ಅಲ್ಲಾಹನು ಹಿಡಿದು ಶಿಕ್ಷಿಸುವನೆಂದು ತಾತ್ಪರ್ಯ. ಅಲ್ಲಾಹನ ಮೇಲೆ ಸುಳ್ಳಾರೋಪಿಸಿ ಹೇಳುವವರು ದೊಡ್ಡ ಅಧರ್ಮಿಗಳೆಂದೂ ಅವರು ಐಹಿಕ ಜೀವಿತದಲ್ಲಿ ಪರಾಜಿತರಾಗುವರೆಂದೂ ಸಾರುವ ವಚನಗಳು ಸಹ ಖುರ್‌ಆನಿನಲ್ಲಿವೆ.





**34.** ರಾತ್ರಿ - ಹಗಲುಗಳನ್ನೂ ಸೂರ್ಯ-ಚಂದ್ರರನ್ನೂ ಅವನು ಸೃಷ್ಟಿಸಿದನು. ಎಲ್ಲವೂ (ಅವುಗಳ) ಕಕ್ಷೆಯಲ್ಲಿ ಭ್ರಮಣಮಾಡುತ್ತವೆ.

وَهُوَ الَّذِي خَلَقَ اللَّيْلَ وَالنَّهَارَ وَالشَّمْسَ وَالْقَمَرَ ۖ كُلٌّ فِي فَلَكٍ يَسْبَحُونَ ﴿٣٣﴾

**35.** ನಿನಗಿಂತ ಮುಂಚೆ ಯಾವ ಮನುಷ್ಯನನ್ನೂ ನಾವು ಚಿರಂಜೀವಿಯನ್ನಾಗಿ ಮಾಡಿಲ್ಲ. ನೀನು ಮೃತಪಟ್ಟು ಅವರು ಚಿರಂಜೀವಿಗಳಾಗುವುದೇ?

وَمَا جَعَلْنَا لِبَشَرٍ مِّن قَبْلِكَ الْخُلْدَ ۖ أَفَإِن مِّتَّ فَهُمُ الْخَالِدُونَ ﴿٣٤﴾

**36.** ಪ್ರತಿಯೊಂದು ಜೀವಿಯೂ ಮರಣದ ರುಚಿಯನ್ನು ಅನುಭವಿಸಬೇಕಾಗಿದೆ. ಕೆಡುಕಿನಿಂದಲೂ ಒಳಿತಿನಿಂದಲೂ ನಾವು ನಿಮ್ಮನ್ನು ಪರೀಕ್ಷಿಸುವೆವು. ನಮ್ಮ ಬಳಿಗೇ ನಿಮ್ಮನ್ನು ಮರಳಿಸಲಾಗುವುದು.

كُلُّ نَفْسٍ ذَائِقَةُ الْمَوْتِ ۗ وَنَبْلُوكُم بِالشَّرِّ وَالْخَيْرِ فِتْنَةً ۖ وَإِلَيْنَا تُرْجَعُونَ ﴿٣٥﴾

**37.** ಅವಿಶ್ವಾಸಿಗಳು ನಿನ್ನನ್ನು ಕಂಡರೆ ಪರಿಹಾಸವನ್ನೇ ಮಾಡುತ್ತಾರೆ. 'ನಿಮ್ಮ ದೇವರುಗಳ ಕುರಿತು ಆಕ್ಷೇಪಿಸುವವನು ಇವನೇ ಅಲ್ಲವೇ?' (ಎಂದು ಅವರು ಕೇಳುವರು.) ಅವರಾದರೋ ಪರಮ ದಯಾವಂತನಾದ ದೇವನ ಸ್ಮರಣೆಯನ್ನು ತಿರಸ್ಕರಿಸುವವರಾಗಿದ್ದಾರೆ.

وَإِذَا رَآكَ الَّذِينَ كَفَرُوا إِن يَتَّخِذُونَكَ إِلَّا هُزُوًا أَهَٰذَا الَّذِي يَذْكُرُ آلِهَتَكُمْ وَهُم بِذِكْرِ الرَّحْمَٰنِ هُمْ كَافِرُونَ ﴿٣٦﴾

**38.** ಮನುಷ್ಯನನ್ನು ದುಡುಕು ಸ್ವಭಾವದಿಂದ ಸೃಷ್ಟಿಸಲಾಗಿದೆ. ನಾನು ಖಂಡಿತವಾಗಿಯೂ ನನ್ನ ದೃಷ್ಟಾಂತಗಳನ್ನು ತೋರ್ಪಡಿಸುವೆನು. ಆದರೆ ನೀವು ತ್ವರೆಪಡಿಸಬೇಡಿರಿ.

خُلِقَ الْإِنسَانُ مِنْ عَجَلٍ ۚ سَأُورِيكُمْ آيَاتِي فَلَا تَسْتَعْجِلُونِ ﴿٣٧﴾

**39.** ಅವರು (ಅವಿಶ್ವಾಸಿಗಳು) ಹೇಳುತ್ತಾರೆ : 'ನೀವು ಸತ್ಯವಂತರೆಂದಾದರೆ, ಈ ವಾಗ್ದಾನ ಯಾವಾಗ ಈಡೇರುವುದು?'

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ﴿٣٨﴾

**40.** ತಮ್ಮ ಮುಖಗಳಿಂದಲೂ ಬೆನ್ನುಗಳಿಂದಲೂ ಬೆಂಕಿಯನ್ನು ದೂರಮಾಡಲಾಗದ ಹಾಗೂ ತಮಗೆ ನೆರವು ಸಿಗಲಾಗದ ಸಂದರ್ಭವನ್ನು ಅವಿಶ್ವಾಸಿಗಳು ತಿಳಿದಿರುತ್ತಿದ್ದರೆ!

لَوْ يَعْلَمُ الَّذِينَ كَفَرُوا حِينَ لَا يَكُفُّونَ عَن وُجُوهِهِمُ النَّارَ وَلَا عَن ظُهُورِهِمْ وَلَا هُمْ يُنصَرُونَ ﴿٣٩﴾

**41.** ಆದರೆ ಅದು (ಆ ಶಿಕ್ಷೆ) ಅವರಿಗೆ ಅನಿರೀಕ್ಷಿತವಾಗಿ ಬಂದೆರಗುವುದು. ಅದು ಅವರನ್ನು ಗಾಬರಿಗೊಳಿಸುವುದು. ಆಗ ಅದನ್ನು ತಡೆಯಲು ಅವರಿಂದ ಸಾಧ್ಯವಾಗಲಾರದು. ಅವರಿಗೆ ಕಾಲಾವಧಿ ಕೂಡ ಸಿಗಲಾರದು.

بَلْ تَأْتِيهِم بَغْتَةً فَتَبْهَتُهُمْ فَلَا يَسْتَطِيعُونَ رَدَّهَا وَلَا هُمْ يُنظَرُونَ ﴿٤٠﴾

**42.** ನಿಜವಾಗಿಯೂ ನಿನಗಿಂತ ಮುಂಚೆ ಸಹ ಸಂದೇಶವಾಹಕರು ಪರಿಹಾಸಕ್ಕೆ ಗುರಿಯಾಗಿದ್ದಾರೆ. ಆದರೆ ಯಾವುದರ ಮೂಲಕ ಅವರು ಅಪಹಾಸ್ಯ ಮಾಡಿದರೋ ಅದೇ ಅವರನ್ನು ಸುತ್ತುವರಿಯಿತು.

وَلَقَدِ اسْتُهْزِئَ بِرُسُلٍ مِّن قَبْلِكَ فَحَاقَ بِالَّذِينَ سَخِرُوا مِنْهُم مَّا كَانُوا بِهِ يَسْتَهْزِئُونَ ﴿٤١﴾

**43.** ಹೇಳು: 'ಪರಮ ದಯಾವಂತನಾದ ಅಲ್ಲಾಹನ ಹಿಡಿತದಿಂದ ರಾತ್ರಿ - ಹಗಲು ನಿಮ್ಮನ್ನು ಕಾಪಾಡುವವರು ಯಾರು?' ಆದರೆ ಅವರು ತಮ್ಮ ಪ್ರಭುವಿನ ಸ್ಮರಣೆಯಿಂದ ವಿಮುಖರಾಗುತ್ತಾರೆ.

قُلْ مَن يَكْلَؤُكُم بِاللَّيْلِ وَالنَّهَارِ مِنَ الرَّحْمَٰنِ ۗ بَلْ هُمْ عَن ذِكْرِ رَبِّهِم مُّعْرِضُونَ ﴿٤٢﴾

**44.** ನಮ್ಮ ಹೊರತು ಅವರನ್ನು ಕಾಪಾಡುವ ಬೇರೆ ಯಾರಾದರೂ ದೇವರುಗಳು ಅವರಿಗೆ ಇದ್ದಾರೆಯೇ? ಅವರು (ಆ ಕಲ್ಪನೆಯ ದೇವರುಗಳು) ಸ್ವತಃ ತಮ್ಮನ್ನು ಕಾಪಾಡಲು ಸಾಮರ್ಥ್ಯವಿಲ್ಲದವರು. ನಮ್ಮ ವಿರುದ್ಧವಾಗಿ ಯಾರೂ ಅವರಿಗೆ ಸಹಾಯ ನೀಡಲಾರರು.

أَمْ لَهُمْ آلِهَةٌ تَمْنَعُهُم مِّن دُونِنَا ۚ لَا يَسْتَطِيعُونَ نَصْرَ أَنفُسِهِمْ وَلَا هُم مِّنَّا يُصْحَبُونَ ﴿٤٣﴾

**45.** ವಾಸ್ತವವೇನೆಂದರೆ, ಇವರು ಮತ್ತು ಇವರ ಪೂರ್ವಿಕರು ತಮ್ಮ ಜೀವನದಲ್ಲಿ ಸುಖವನ್ನು ಅನುಭವಿಸುವಂತೆ ನಾವು ಮಾಡಿದೆವು. ಆದರೆ ನಾವು ಭೂಮಿಗೆ ಬಂದು ಅದರ ನಾನಾ ಭಾಗಗಳಿಂದಲೂ ಅದನ್ನು ಕುಗ್ಗಿಸುತ್ತಿರುವುದನ್ನು[341] ಇವರು ಕಾಣುವುದಿಲ್ಲವೇ? ಹಾಗಿರುವಾಗ ಇವರು ವಿಜಯಿಗಳಾಗುವರೇನು?

بَلْ مَتَّعْنَا هَٰؤُلَاءِ وَآبَاءَهُمْ حَتَّىٰ طَالَ عَلَيْهِمُ الْعُمُرُ ۗ أَفَلَا يَرَوْنَ أَنَّا نَأْتِي الْأَرْضَ نَنقُصُهَا مِنْ أَطْرَافِهَا ۚ أَفَهُمُ الْغَالِبُونَ ﴿٤٤﴾

**46.** ಹೇಳು: 'ನಾನು ದಿವ್ಯ ಸಂದೇಶ ಮೂಲಕವೇ ನಿಮ್ಮನ್ನು ಎಚ್ಚರಿಸುತ್ತಿದ್ದೇನೆ.' ಆದರೆ ಕಿವುಡರನ್ನು ಎಚ್ಚರಿಸುವಾಗ ಅವರು ಆ ಕರೆಯನ್ನು ಕೇಳಲಾರರು.

قُلْ إِنَّمَا أُنذِرُكُم بِالْوَحْيِ ۚ وَلَا يَسْمَعُ الصُّمُّ الدُّعَاءَ إِذَا مَا يُنذَرُونَ ﴿٤٥﴾

341. ಅಂದರೆ, ಸತ್ಯಸಂಘಟನೆಯಲ್ಲಿ ಜನಸಂಖ್ಯೆ ವೃದ್ಧಿಗೊಂಡು ಅವಿಶ್ವಾಸಿಗಳ ಸಂಖ್ಯೆ ಕಮ್ಮಿಯಾಗುವಾಗ ಶತ್ರುಗಳ ಭೂಮಿ ಕುಗ್ಗುತ್ತಾ ಬರುತ್ತದೆ.





**47.** ನಿನ್ನ ಪ್ರಭುವಿನ ಶಿಕ್ಷೆಯ ಗಾಳಿಯೇನಾದರೂ ಅವರನ್ನು ಸ್ಪರ್ಶಿಸಿದರೆ ಖಂಡಿತವಾಗಿಯೂ ಅವರು, 'ಅಕಟಾ, ನಾವು ಅಧರ್ಮಿಗಳಾಗಿ ಬಿಟ್ಟೆವಲ್ಲ!' ಎಂದು ಪ್ರಲಾಪಿಸುವರು.

وَلَئِن مَّسَّتْهُمْ نَفْحَةٌ مِّنْ عَذَابِ رَبِّكَ لَيَقُولُنَّ يَا وَيْلَنَا إِنَّا كُنَّا ظَالِمِينَ ﴿٤٦﴾

**48.** ಯಾರಿಗೂ ಏನೂ ಅನ್ಯಾಯವಾಗದಿರಲಿಕ್ಕೋಸ್ಕರ ಪುನರುತ್ಥಾನ ದಿನದಂದು ಸರಿಯಾದ ತಕ್ಕಡಿಗಳನ್ನು ನಾವು ಸ್ಥಾಪಿಸುವೆವು. (ಆ ಕರ್ಮವು) ಒಂದು ಸಾಸಿವೆ ಕಾಳಿನಷ್ಟಿದ್ದರೆ ಕೂಡ ನಾವು ಅದನ್ನು ತರುವೆವು. ಲೆಕ್ಕ ಪರಿಶೋಧಕರಾಗಿ ನಾವು ಸಾಕು.

وَنَضَعُ الْمَوَازِينَ الْقِسْطَ لِيَوْمِ الْقِيَامَةِ فَلَا تُظْلَمُ نَفْسٌ شَيْئًا ۖ وَإِن كَانَ مِثْقَالَ حَبَّةٍ مِّنْ خَرْدَلٍ أَتَيْنَا بِهَا ۗ وَكَفَىٰ بِنَا حَاسِبِينَ ﴿٤٧﴾

**49.** ಮೂಸಾ ಮತ್ತು ಹಾರೂನ್‌ರಿಗೆ ನಾವು ಸತ್ಯಾಸತ್ಯ ವಿವೇಚನೆ ಮತ್ತು ಪ್ರಕಾಶವನ್ನು ಹಾಗೂ ಭಯಭಕ್ತಿಯುಳ್ಳವರಿಗೆ ನೆನಪು ಹುಟ್ಟಿಸುವ ಉಪದೇಶವನ್ನು ದಯಪಾಲಿಸಿದ್ದೆವು.

وَلَقَدْ آتَيْنَا مُوسَىٰ وَهَارُونَ الْفُرْقَانَ وَضِيَاءً وَذِكْرًا لِّلْمُتَّقِينَ ﴿٤٨﴾

**50.** ಅವರು ಏಕಾಂತದಲ್ಲೂ ತಮ್ಮ ಪ್ರಭುವಿನ ಭಯವಿರಿಸಿಕೊಳ್ಳುವವರಾಗಿದ್ದಾರೆ. ಪುನರುತ್ಥಾನ ದಿನದ ಬಗ್ಗೆ ಸಹ ಅವರಿಗೆ ಭೀತಿಯಿದೆ.

الَّذِينَ يَخْشَوْنَ رَبَّهُم بِالْغَيْبِ وَهُم مِّنَ السَّاعَةِ مُشْفِقُونَ ﴿٤٩﴾

**51.** ಇದು (ಖುರ್‌ಆನ್) ನಾವು ನಿಮಗೆ ಅವತೀರ್ಣಗೊಳಿಸಿದ ಅನುಗ್ರಹೀತ ಬೋಧನೆಯಾಗಿದೆ. ಆದರೆ ನೀವು ಅದನ್ನು ತಿರಸ್ಕರಿಸುತ್ತೀರಾ?

وَهَٰذَا ذِكْرٌ مُّبَارَكٌ أَنزَلْنَاهُ ۚ أَفَأَنتُمْ لَهُ مُنكِرُونَ ﴿٥٠﴾

**52.** ನಿಶ್ಚಯವಾಗಿಯೂ ಇದಕ್ಕಿಂತ ಮುಂಚೆ ನಾವು ಇಬ್‌ರಾಹೀಮರಿಗೆ ಅವರ (ಶ್ರೇಷ್ಠತೆಗೆ ತಕ್ಕುದಾದ) ಮಾರ್ಗದರ್ಶನ ನೀಡಿದ್ದೆವು. ಅವರ ಬಗ್ಗೆ ನಾವು ಚೆನ್ನಾಗಿ ಅರಿತಿದ್ದೆವು.

وَلَقَدْ آتَيْنَا إِبْرَاهِيمَ رُشْدَهُ مِن قَبْلُ وَكُنَّا بِهِ عَالِمِينَ ﴿٥١﴾

**53.** 'ನೀವು ಇಷ್ಟೆಲ್ಲಾ ಭಕ್ತ್ಯಾದರ ತೋರಿಸುವ ಈ ವಿಗ್ರಹಗಳು ಯಾವುವು?' ಎಂದು ಅವರು ತನ್ನ ತಂದೆ ಮತ್ತು ಜನರೊಡನೆ ಕೇಳಿದಾಗ,

إِذْ قَالَ لِأَبِيهِ وَقَوْمِهِ مَا هَٰذِهِ التَّمَاثِيلُ الَّتِي أَنتُمْ لَهَا عَاكِفُونَ ﴿٥٢﴾

**54.** 'ನಮ್ಮ ತಂದೆ ತಾತಂದಿರು ಅವುಗಳನ್ನು ಆರಾಧಿಸುತ್ತಿರುವುದಾಗಿ ನಾವು ಕಂಡಿದ್ದೇವೆ' ಎಂದು ಅವರು ಉತ್ತರಿಸಿದರು.

قَالُوا وَجَدْنَا آبَاءَنَا لَهَا عَابِدِينَ ﴿٥٣﴾

قَالَ لَقَدْ كُنتُمْ أَنتُمْ وَآبَاؤُكُمْ فِي ضَلَالٍ مُّبِينٍ ﴿٥٥﴾

**55.** **ಅವರು** (ಇಬ್‌ರಾಹೀಂ) **ಹೇಳಿದರು: 'ದಿಟವಾಗಿಯೂ ನೀವೂ ನಿಮ್ಮ ತಂದೆ ತಾತಂದಿರೂ ಸ್ಪಷ್ಟವಾದ ಮಾರ್ಗಭ್ರಂಶದಲ್ಲಿದ್ದಿರಿ.'**

قَالُوا أَجِئْتَنَا بِالْحَقِّ أَمْ أَنتَ مِنَ اللَّاعِبِينَ ﴿٥٦﴾

**56.** **ಅವರು ಹೇಳಿದರು: 'ನೀನು** (ನಿಜವಾಗಿಯೂ) **ನಮಗೆ ಸತ್ಯವನ್ನು ತಂದಿದ್ದೀಯಾ ಅಥವಾ ನಮ್ಮನ್ನು ಅಪಹಾಸ್ಯ ಮಾಡುತ್ತಿರುವೆಯಾ?'**

قَالَ بَل رَّبُّكُمْ رَبُّ السَّمَاوَاتِ وَالْأَرْضِ الَّذِي فَطَرَهُنَّ وَأَنَا عَلَىٰ ذَٰلِكُم مِّنَ الشَّاهِدِينَ ﴿٥٧﴾

**57.** **ಅವರು** (ಇಬ್‌ರಾಹೀಂ) **ಮರು ನುಡಿದರು: 'ವಾಸ್ತವವೇನೆಂದರೆ ನಿಮ್ಮ ಪ್ರಭು ಆಕಾಶಗಳ ಮತ್ತು ಭೂಮಿಯ ಒಡೆಯನಾಗಿದ್ದಾನೆ. ಅವನೇ ಅವುಗಳನ್ನು ಸೃಷ್ಟಿಸಿರುವನು. ನಾನು ಅದಕ್ಕೆ ಸಾಕ್ಷಿಯಾಗಿದ್ದೇನೆ.**

وَتَاللَّهِ لَأَكِيدَنَّ أَصْنَامَكُم بَعْدَ أَن تُوَلُّوا مُدْبِرِينَ ﴿٥٨﴾

**58.** **'ಅಲ್ಲಾಹನಾಣೆ, ನೀವು ಬೆನ್ನು ತಿರುಗಿಸಿ ಹೋದ ಬಳಿಕ ನಿಮ್ಮ ವಿಗ್ರಹಗಳ ವಿರುದ್ಧವಾಗಿ ನಾನೊಂದು ಉಪಾಯ ಹೂಡುವೆನು.'**

فَجَعَلَهُمْ جُذَاذًا إِلَّا كَبِيرًا لَّهُمْ لَعَلَّهُمْ إِلَيْهِ يَرْجِعُونَ ﴿٥٩﴾

**59.** **ಹಾಗೆ ಅವರು** (ಇಬ್‌ರಾಹೀಂ) **ಅವುಗಳನ್ನೆಲ್ಲ ನುಚ್ಚುನೂರು ಮಾಡಿದರು. ಜನರು ಹಿಂತಿರುಗಿ ಬಂದು ವಿಚಾರಿಸಲಿಕ್ಕಾಗಿ ಅವರ ದೊಡ್ಡ ಒಂದು ವಿಗ್ರಹವನ್ನು ಹಾಗೆಯೇ ಬಿಟ್ಟುಬಿಟ್ಟರು.**

قَالُوا مَن فَعَلَ هَٰذَا بِآلِهَتِنَا إِنَّهُ لَمِنَ الظَّالِمِينَ ﴿٦٠﴾

**60.** **ಅವರು** (ಜನರು) **ಪರಸ್ಪರ ಮಾತನಾಡಿಕೊಂಡರು: 'ನಮ್ಮ ದೇವರುಗಳನ್ನು ಹೀಗೆ ಮಾಡಿದ್ದು ಯಾರು? ಖಂಡಿತವಾಗಿಯೂ ಅವನು ದುಷ್ಕರ್ಮಿಗಳ ಪೈಕಿಯವನಾಗಿದ್ದಾನೆ.'**

قَالُوا سَمِعْنَا فَتًى يَذْكُرُهُمْ يُقَالُ لَهُ إِبْرَاهِيمُ ﴿٦١﴾

**61.** (ಅವರಲ್ಲಿ ಕೆಲವರು) **ಹೇಳಿದರು: 'ಇಬ್‌ರಾಹೀಂ ಎಂದು ಕರೆಯಲ್ಪಡುವ ಒಬ್ಬ ತರುಣ ಅವುಗಳ ಬಗ್ಗೆ** (ಕೆಟ್ಟದ್ದಾಗಿ) **ಹೇಳುವುದನ್ನು ನಾವು ಕೇಳಿದ್ದೇವೆ.'**

قَالُوا فَأْتُوا بِهِ عَلَىٰ أَعْيُنِ النَّاسِ لَعَلَّهُمْ يَشْهَدُونَ ﴿٦٢﴾

**62.** **ಆಗ ಅವರು** (ಮುಖಂಡರು) **ಹೇಳಿದರು: 'ಹಾಗಾದರೆ ನೀವು ಅವನನ್ನು ಜನರ ಮುಂದೆ ತನ್ನಿರಿ; ಅವರು ಸಾಕ್ಷ್ಯನೀಡಲಿ.'**





قَالُوا أَأَنتَ فَعَلْتَ هَٰذَا بِآلِهَتِنَا يَا إِبْرَاهِيمُ ﴿٦٣﴾

**63.** **ಅವರು ಕೇಳಿದರು: 'ಎಲೈ ಇಬ್‌ರಾಹೀಂ, ನಮ್ಮ ದೇವರುಗಳಿಗೆ ಹೀಗೆಲ್ಲ ಮಾಡಿದ್ದು ನೀನೋ?'**

قَالَ بَلْ فَعَلَهُ كَبِيرُهُمْ هَٰذَا فَاسْأَلُوهُمْ إِن كَانُوا يَنطِقُونَ ﴿٦٤﴾

**64.** **ಅವರು** (ಇಬ್‌ರಾಹೀಂ) **ಹೇಳಿದರು: 'ಅಂತೂ ಯಾರೋ ಹಾಗೆ ಮಾಡಿದ್ದಾರೆ. ಇದೋ ಇಲ್ಲಿ ಅವುಗಳಲ್ಲಿ ದೊಡ್ಡದು. ಅವು[342] ಮಾತನಾಡುವುದಿದ್ದರೆ ಅವುಗಳನ್ನೇ ಕೇಳಿರಿ.'**

فَرَجَعُوا إِلَىٰ أَنفُسِهِمْ فَقَالُوا إِنَّكُمْ أَنتُمُ الظَّالِمُونَ ﴿٦٥﴾

**65.** **ಆಗ ಅವರು ತಮ್ಮ ಮುಖಂಡರುಗಳ ಕಡೆಗೆ ತಿರುಗಿ, 'ನಿಶ್ಚಯವಾಗಿಯೂ ತಪ್ಪುಗಾರರು ನೀವೇ ಆಗಿದ್ದೀರಿ' ಎಂದು ಹೇಳಿದರು.**

ثُمَّ نُكِسُوا عَلَىٰ رُءُوسِهِمْ لَقَدْ عَلِمْتَ مَا هَٰؤُلَاءِ يَنطِقُونَ ﴿٦٦﴾

**66.** **ಅವರ ತಲೆಗಳು** (ನಾಚಿಕೆಯಿಂದ) **ತಗ್ಗಿಸಲ್ಪಟ್ಟವು.** (ಅವರು ಇಬ್‌ರಾಹೀಮರೊಡನೆ ಹೇಳಿದರು:) **'ಅವು ಮಾತನಾಡುವುದಿಲ್ಲವೆಂದು ನೀನು ಖಂಡಿತವಾಗಿಯೂ ಬಲ್ಲೆ.'**

قَالَ أَفَتَعْبُدُونَ مِن دُونِ اللَّهِ مَا لَا يَنفَعُكُمْ شَيْئًا وَلَا يَضُرُّكُمْ ﴿٦٧﴾

**67.** **ಅವರು** (ಇಬ್‌ರಾಹೀಂ) **ಹೇಳಿದರು: 'ಹಾಗಾದರೆ, ಅಲ್ಲಾಹನನ್ನು ಬಿಟ್ಟು, ನಿಮಗೆ ಗುಣವಾಗಲಿ ದೋಷವಾಗಲಿ ಮಾಡಲು ಅಸಮರ್ಥವಾದವುಗಳನ್ನು ನೀವು ಆರಾಧಿಸುತ್ತಿರುವುದೇ?**

أُفٍّ لَّكُمْ وَلِمَا تَعْبُدُونَ مِن دُونِ اللَّهِ أَفَلَا تَعْقِلُونَ ﴿٦٨﴾

**68.** **'ನಿಮಗೂ ಅಲ್ಲಾಹನನ್ನು ಬಿಟ್ಟು ನೀವು ಆರಾಧಿಸುವವುಗಳಿಗೂ ಧಿಕ್ಕಾರ! ನೀವು ಮನವರಿಕೆ ಮಾಡುವುದಿಲ್ಲವೇ?'**

قَالُوا حَرِّقُوهُ وَانصُرُوا آلِهَتَكُمْ إِن كُنتُمْ فَاعِلِينَ ﴿٦٩﴾

**69.** **ಅವರು** (ಕೋಪಾವಿಷ್ಟರಾಗಿ) **ಹೇಳಿದರು: 'ನೀವೇನಾದರೂ ಮಾಡಲು ಉದ್ದೇಶಿಸಿದ್ದರೆ, ಇವನನ್ನು ಸುಟ್ಟುಹಾಕಿ ನಿಮ್ಮ ದೇವರುಗಳಿಗೆ ಸಹಾಯಮಾಡಿರಿ.'**

قُلْنَا يَا نَارُ كُونِي بَرْدًا وَسَلَامًا عَلَىٰ إِبْرَاهِيمَ ﴿٧٠﴾

**70.** (ಹಾಗೆ, ಜನರು ಇಬ್‌ರಾಹೀಮರನ್ನು ಸುಟ್ಟುಹಾಕಲು ಸಿದ್ಧರಾದಾಗ) **ನಾವು ಹೇಳಿದೆವು: 'ಎಲೈ ಅಗ್ನಿಯೇ, ನೀನು ತಣ್ಣಗಾಗು ಹಾಗೂ ಇಬ್‌ರಾಹೀಮ್ ಗೋಸ್ಕರ ಶಾಂತಿದಾಯಕವಾಗು.'**

342. ಅರ್ಥಾತ್ ಆ ವಿಗ್ರಹಗಳು.

وَاَرَادُوْا بِهٖ كَيْدًا فَجَعَلْنٰهُمُ الْاَخْسَرِيْنَ ۝٧٠

**71.** ಅವರು ಅವರಿಗೆ (ಇಬ್‌ರಾಹೀಮರಿಗೆ) ಕೆಡುಕುಂಟು ಮಾಡಲು ಬಯಸಿದ್ದರು. ಆಗ ನಾವು ಅವರಿಗೆ (ಜನರಿಗೆ) ಸೋಲಾಗುವಂತೆ ಮಾಡಿದೆವು.

وَنَجَّيْنٰهُ وَلُوْطًا اِلَى الْاَرْضِ الَّتِيْ بٰرَكْنَا فِيْهَا لِلْعٰلَمِيْنَ ۝٧١

**72.** ನಾವು ಅವರನ್ನೂ (ಇಬ್‌ರಾಹೀಮರನ್ನೂ) ಲೂತ್‌ರನ್ನೂ ರಕ್ಷಿಸಿ ಸರ್ವಜನರಿಗೋಸ್ಕರ ನಾವು ಅನುಗ್ರಹಿಸಿದ ನಾಡಿಗೆ[343] ಕರೆತಂದೆವು.

وَوَهَبْنَا لَهٗٓ اِسْحٰقَ ؕ وَيَعْقُوْبَ نَافِلَةً ؕ وَكُلًّا جَعَلْنَا صٰلِحِيْنَ ۝٧٢

**73.** ನಾವು ಅವರಿಗೆ (ಇಬ್‌ರಾಹೀಮರಿಗೆ) ಇಸ್‌ಹಾಖರನ್ನು ಅನುಗ್ರಹಿಸಿ ನೀಡಿದೆವು. ಮೊಮ್ಮಗನಾಗಿ ಯಅ್‌ಖೂಬರನ್ನೂ ನೀಡಿದೆವು. ಅವರೆಲ್ಲರನ್ನೂ ನಾವು ಸಜ್ಜನರನ್ನಾಗಿ ಮಾಡಿದ್ದೇವೆ.

وَجَعَلْنٰهُمْ اَئِمَّةً يَّهْدُوْنَ بِاَمْرِنَا وَاَوْحَيْنَآ اِلَيْهِمْ فِعْلَ الْخَيْرٰتِ وَاِقَامَ الصَّلٰوةِ وَاِيْتَآءَ الزَّكٰوةِ ۚ وَكَانُوْا لَنَا عٰبِدِيْنَ ۝٧٣

**74.** ನಮ್ಮ ಆಜ್ಞೆಯಂತೆ ಜನರಿಗೆ ಮಾರ್ಗದರ್ಶನ ಮಾಡುವ ಮುಖಂಡರನ್ನಾಗಿಯೂ ನಾವು ಅವರನ್ನು ಮಾಡಿದೆವು. ಸತ್ಕರ್ಮಗಳನ್ನು ಮಾಡಲಿಕ್ಕೂ ಪ್ರಾರ್ಥನೆ ನಿರ್ವಹಿಸಲಿಕ್ಕೂ ದಾನಧರ್ಮ ನೀಡಲಿಕ್ಕೂ ನಾವು ಅವರಿಗೆ ದಿವ್ಯ ಸಂದೇಶ ಅರುಹಿದೆವು. ಅವರು ನಮ್ಮನ್ನು (ಮಾತ್ರ) ಆರಾಧಿಸುತ್ತಿದ್ದರು.

وَلُوْطًا اٰتَيْنٰهُ حُكْمًا وَّعِلْمًا وَّنَجَّيْنٰهُ مِنَ الْقَرْيَةِ الَّتِيْ كَانَتْ تَّعْمَلُ الْخَبٰٓئِثَ ؕ اِنَّهُمْ كَانُوْا قَوْمَ سَوْءٍ فٰسِقِيْنَ ۝٧٤

**75.** ಲೂತ್‌ರಿಗೆ ನಾವು ನಿರ್ಣಯಿಸುವ ಸಾಮರ್ಥ್ಯವನ್ನೂ ಜ್ಞಾನವನ್ನೂ ಪ್ರದಾನ ಮಾಡಿದೆವು. ಅಶ್ಲೀಲವಾದ ದುಷ್ಚಟಕ್ಕೀಡಾದವರ ನಾಡಿನಿಂದ ನಾವು ಅವರನ್ನು ರಕ್ಷಿಸಿದೆವು. ನಿಶ್ಚಯವಾಗಿಯೂ ಆ ಜನರು ದುರ್ನಡತೆಗಾರರೂ ಧಿಕ್ಕಾರಿಗಳೂ ಆಗಿದ್ದರು.

وَاَدْخَلْنٰهُ فِيْ رَحْمَتِنَا ؕ اِنَّهٗ مِنَ الصّٰلِحِيْنَ ۝٧٥

**76.** ನಾವು ಅವರನ್ನು (ಲೂತ್‌ರನ್ನು) ನಮ್ಮ ಕಾರುಣ್ಯಕ್ಕೆ ಒಳಪಡಿಸಿದೆವು. ದಿಟವಾಗಿಯೂ ಅವರೊಬ್ಬ ಸಾತ್ವಿಕರಾಗಿದ್ದರು.

وَنُوْحًا اِذْ نَادٰى مِنْ قَبْلُ فَاسْتَجَبْنَا

**77.** ನೂಹ್‌ರ ಬಗ್ಗೆ *ಹೇಳುವುದಾದರೆ*, ಇದಕ್ಕೆ ಮೊದಲು ಅವರು ನಮ್ಮನ್ನು ಕರೆದಾಗ, ಅವರ ಪ್ರಾರ್ಥನೆಗೆ ನಾವು ಉತ್ತರಕೊಟ್ಟೆವು. ಹಾಗೆ ನಾವು

343. ಪೆಲಸ್ತೀನ್‌ಗೆ.





لَهٗ فَنَجَّيْنٰهُ وَاَهْلَهٗ مِنَ الْكَرْبِ الْعَظِيْمِ ۝٧٦

ಅವರನ್ನೂ ಅವರ ಪರಿವಾರವನ್ನೂ ಆ ದೊಡ್ಡ ವ್ಯಾಕುಲತೆಯಿಂದ ಮುಕ್ತಗೊಳಿಸಿದೆವು.

وَنَصَرْنٰهُ مِنَ الْقَوْمِ الَّذِيْنَ كَذَّبُوْا بِاٰيٰتِنَا ؕ اِنَّهُمْ كَانُوْا قَوْمَ سَوْءٍ فَاَغْرَقْنٰهُمْ اَجْمَعِيْنَ ۝٧٧

**78.** ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದ ಜನರ ವಿರುದ್ಧ ನಾವು ಅವರಿಗೆ (ನೂಹ್‌ರಿಗೆ) ನೆರವಿತ್ತೆವು. ದಿಟವಾಗಿಯೂ ಅವರು ದುರ್ಜನರಾಗಿದ್ದರು. ಆದ್ದರಿಂದ ನಾವು ಅವರನ್ನೆಲ್ಲ ಮುಳುಗಿಸಿಬಿಟ್ಟೆವು.

وَدَاوٗدَ وَسُلَيْمٰنَ اِذْ يَحْكُمٰنِ فِي الْحَرْثِ اِذْ نَفَشَتْ فِيْهِ غَنَمُ الْقَوْمِ ۚ وَكُنَّا لِحُكْمِهِمْ شٰهِدِيْنَ ۝٧٨

**79.** ದಾವೂದ್ ಮತ್ತು ಸುಲೈಮಾನರ *ಬಗ್ಗೆ ಪ್ರಸ್ತಾಪ:* ಅವರಿಬ್ಬರೂ ಒಂದು ಕೃಷಿಯ ಕುರಿತು - ಒಂದು ಕೋಮಿನವರ ಕುರಿಗಳು (ರಾತ್ರಿಹೊತ್ತು) ಅದನ್ನು ಮೇದು ನಾಶಪಡಿಸಿದ್ದಾಗ -[343A] ಸಮಸ್ಯೆಯನ್ನು ಇತ್ಯರ್ಥಗೊಳಿಸಿದ ಸಂದರ್ಭದಲ್ಲಿ ಅವರ ತೀರ್ಮಾನಕ್ಕೆ ನಾವು ಸಾಕ್ಷಿಯಾಗಿದ್ದೆವು.

فَفَهَّمْنٰهَا سُلَيْمٰنَ ۚ وَكُلًّا اٰتَيْنَا حُكْمًا وَّعِلْمًا ؗ وَّسَخَّرْنَا مَعَ دَاوٗدَ الْجِبَالَ يُسَبِّحْنَ وَالطَّيْرَ ؕ وَكُنَّا فٰعِلِيْنَ ۝٧٩

**80.** ಹಾಗೆ ಸುಲೈಮಾನ್‌ರಿಗೆ ನಾವು ಆ ಬಗ್ಗೆ ನಿಜಾಂಶವನ್ನು ಮನಗಾಣಿಸಿಕೊಟ್ಟೆವು. ಅವರಿಬ್ಬರಿಗೂ ನಾವು ನಿರ್ಣಯ ಶಕ್ತಿಯನ್ನೂ ಜ್ಞಾನವನ್ನೂ ದಯಪಾಲಿಸಿದೆವು. ದಾವೂದ್‌ರ ಜೊತೆಯಲ್ಲಿ ನಮ್ಮ ಗುಣಗಾನ ಮಾಡಲು ಪರ್ವತಗಳನ್ನೂ ಪಕ್ಷಿಗಳನ್ನೂ[343B] ನಾವು (ಅವರ) ಅಧೀನಕ್ಕೊಳಪಡಿಸಿದೆವು. ಹೀಗೆಲ್ಲ ಮಾಡಿದವರು ನಾವೇ ಆಗಿದ್ದೇವೆ.

وَعَلَّمْنٰهُ صَنْعَةَ لَبُوْسٍ لَّكُمْ لِتُحْصِنَكُمْ مِّنْ بَاْسِكُمْ ۚ فَهَلْ اَنْتُمْ شٰكِرُوْنَ ۝٨٠

**81.** ನಿಮ್ಮ ಯುದ್ಧಗಳ *ಹಾನಿಯಿಂದ* ನಿಮ್ಮನ್ನು ರಕ್ಷಿಸಲಿಕ್ಕಾಗಿ ನಿಮಗೋಸ್ಕರ ಕವಚದ ಉಡುಪನ್ನು ರಚಿಸಲು ನಾವು ಅವರಿಗೆ ಕಲಿಸಿಕೊಟ್ಟೆವು. ಏನು ನೀವು ಕೃತಜ್ಞತೆಯುಳ್ಳವರಾಗುವಿರಾ?

343A. ಇಲ್ಲಿ ಕುರಿಗಳು (ಘನಮುಲ್ ಖೌಮ್) ಎಂಬುದರ ತಾತ್ಪರ್ಯ ಗಲಭೆಕೋರರು ಅಥವಾ ಮೃಗಸಮಾನರಾದ ಜನರು ಎಂದಾಗಿದೆ. ಕೃಷಿ ಎಂಬುದರ ತಾತ್ಪರ್ಯ ಸುಸ್ಥಾಪಿತವಾದ ಸರಕಾರ. ನೆರೆರಾಜ್ಯದ ಕೆಲವು ಗೋತ್ರದವರು ಈ ರಾಜ್ಯದ ಮೇಲೆ ಧಾಳಿ ಮಾಡುತ್ತಲೂ ಕೊಳ್ಳೆಹೊಡೆಯುತ್ತಲೂ ಇದ್ದು ಸರಕಾರವನ್ನು ಉರುಳಿಸಲು ಪ್ರಯತ್ನಿಸುತ್ತಿದ್ದರು. ಅದಕ್ಕೆದುರಾಗಿ ಪ್ರವಾದಿ ದಾವೂದ್ (ಅ) ಕಠಿಣಕ್ರಮ ಕೈಗೊಂಡಿದ್ದರು. ಆ ಬಳಿಕ ಪ್ರವಾದಿ ಸುಲೈಮಾನ್ (ಅ)ರವರ ಆಳ್ವಿಕೆಯ ಕಾಲದಲ್ಲಿ ಅವರು ಸಹ ಬಹಳ ಯುಕ್ತಿಪೂರ್ವಕವಾಗಿ ವರ್ತಿಸಿ ಶತ್ರುಗಳೊಂದಿಗೆ ಕೆಲವು ಒಪ್ಪಂದಗಳನ್ನು ಮಾಡಿಕೊಂಡು ಶಾಂತಿಸ್ಥಾಪನೆಯಾಗುವಂತೆ ಯತ್ನಿಸಿ ಸರಕಾರವನ್ನು ಬಲಪಡಿಸಿದರು.

343B. ಪರ್ವತ ಅಂದರೆ ಪರ್ವತನಿವಾಸಿಗಳಾದ ಜನರು. ಪಕ್ಷಿಗಳು ಅಂದರೆ ಆಧ್ಯಾತ್ಮಿಕ ಗಗನದಲ್ಲಿ ವಿಹರಿಸುವ, ಸರ್ವವಿಧ ತ್ಯಾಗಗಳಿಗೆ ಸನ್ನದ್ಧರಾಗುವ ಪರಿಶುದ್ಧ ಜನರು.

**82.** ತೀವ್ರವಾಗಿ ಬೀಸುವ ಗಾಳಿಯನ್ನೂ ನಾವು ಸುಲೈಮಾನರ ಅಧೀನಕ್ಕೊಳಪಡಿಸಿದೆವು.[344] ಅದು ಅವರ ಆಜ್ಞಾನುಸಾರ ನಾವು ಅನುಗ್ರಹಿಸಿದ ನಾಡಿನತ್ತ ಬೀಸುತ್ತಿತ್ತು. ಎಲ್ಲ ವಿಚಾರಗಳ ಬಗ್ಗೆ ನಾವು ಚೆನ್ನಾಗಿ ಬಲ್ಲವರಾಗಿದ್ದೇವೆ.

وَلِسُلَيْمَانَ الرِّيحَ عَاصِفَةً تَجْرِي بِأَمْرِهِ إِلَى الْأَرْضِ الَّتِي بَارَكْنَا فِيهَا ۚ وَكُنَّا بِكُلِّ شَيْءٍ عَالِمِينَ ﴿٨٢﴾

**83.** ಬಂಡುಕೋರರಲ್ಲಿ[344A] ಕೆಲವರು ಅವರಿಗೋಸ್ಕರ ಮುಳುಗುತ್ತಿದ್ದರು. ಅದಲ್ಲದೆ ಅವರು ಬೇರೆಯೂ ಕೆಲಸಮಾಡುತ್ತಿದ್ದರು. ನಾವು ಅವರಿಗೆ ರಕ್ಷಣೆ ನೀಡುತ್ತಿದ್ದೆವು.

وَمِنَ الشَّيَاطِينِ مَنْ يَغُوصُونَ لَهُ وَيَعْمَلُونَ عَمَلًا دُونَ ذَٰلِكَ ۖ وَكُنَّا لَهُمْ حَافِظِينَ ﴿٨٣﴾

**84.** ಇನ್ನು ಅಯ್ಯೂಬ್‌ರ ಕುರಿತು: ಅವರು ತನ್ನ ಪ್ರಭುವನ್ನು ಕರೆದು ಹೀಗೆ ಪ್ರಾರ್ಥಿಸಿದರು: 'ನಾನು ಸಂಕಷ್ಟಕ್ಕೀಡಾಗಿದ್ದೇನೆ. ನೀನಾದರೋ ಕರುಣೆ ತೋರಿಸುವವರ ಪೈಕಿ ಅತ್ಯಂತ ಕಾರುಣ್ಯವಂತನಾಗಿರುವೆ.'

وَأَيُّوبَ إِذْ نَادَىٰ رَبَّهُ أَنِّي مَسَّنِيَ الضُّرُّ وَأَنْتَ أَرْحَمُ الرَّاحِمِينَ ﴿٨٤﴾

**85.** ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು. ಅವರು ಅನುಭವಿಸುತ್ತಿದ್ದ ಸಂಕಷ್ಟವನ್ನು ನಾವು ಹೋಗಲಾಡಿಸಿದೆವು. ನಾವು ಅವರಿಗೆ ಅವರ ಕುಟುಂಬವನ್ನು ದಯಪಾಲಿಸಿದೆವು. ಹಾಗೂ ನಮ್ಮ ಕಡೆಯಿಂದ ಒಂದು ಕರುಣೆಯೆಂಬಂತೆ ಅವರ ಹಾಗೆಯೇ ಇರುವವರನ್ನು ಸಹ ಅವರೊಂದಿಗೆ ದಯಪಾಲಿಸಿದೆವು. ಇದು (ಅಲ್ಲಾಹನ) ಆರಾಧಕರಿಗೆ ಒಂದು ಉಪದೇಶವಾಗಿದೆ.

فَاسْتَجَبْنَا لَهُ فَكَشَفْنَا مَا بِهِ مِنْ ضُرٍّ ۖ وَآتَيْنَاهُ أَهْلَهُ وَمِثْلَهُمْ مَعَهُمْ رَحْمَةً مِنْ عِنْدِنَا وَذِكْرَىٰ لِلْعَابِدِينَ ﴿٨٥﴾

**86.** ಇಸ್ಮಾಈಲ್, ಇದ್‌ರೀಸ್ ಮತ್ತು ದಲ್‌ಕಿಫ್ಲ್ - ಅವರೆಲ್ಲರೂ ಸಹನಶೀಲರಾಗಿದ್ದರು.

وَإِسْمَاعِيلَ وَإِدْرِيسَ وَذَا الْكِفْلِ ۖ كُلٌّ مِنَ الصَّابِرِينَ ﴿٨٦﴾

344. ಆ ಕಾಲದಲ್ಲಿ ಗಾಳಿಯಿಂದ ನಿಯಂತ್ರಿಸಲ್ಪಡುವ ಹಾಯಿಹಡಗುಗಳ ಸಾರಿಗೆ ಸಂಚಾರ ಪ್ರಗತಿಯಲ್ಲಿತ್ತು. ಪರದೇಶಗಳ ಜೊತೆಗೆ ಸರಕುಗಳ ಆಮದು-ರಫ್ತಿಗೆ ಈ ಹಡಗುಗಳನ್ನು ಉಪಯೋಗಿಸಲಾಗುತ್ತಿತ್ತು. 'ಗಾಳಿಯನ್ನು ಅಧೀನಕ್ಕೊಳಪಡಿಸಿದೆವು' ಎಂಬುದರ ತಾತ್ಪರ್ಯ ಇದೇ ಆಗಿದೆ.

344A. 'ಶಯಾತೀನ್' ಎಂಬ ಪದವನ್ನು ಇಲ್ಲಿ 'ಬಂಡುಕೋರರು' ಎಂದು ಭಾಷಾಂತರಿಸಲಾಗಿದೆ. ಶೈತಾನ್ ಎಂಬ ಪದವು ಖುರ್‌ಆನಿನಲ್ಲಿ ದಂಗೆಕೋರ, ಧಿಕ್ಕಾರಿ, ಬಂಡುಕೋರ ಇತ್ಯಾದಿ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಪರ್ಶಿಯನ್ ಕೊಲ್ಲಿ ತೀರ ಪ್ರದೇಶದಲ್ಲಿ ವಾಸಿಸುತ್ತಿದ್ದ ಕೆಲವು ಪುಂಡ ಗುಂಪಿನ ಜನರನ್ನು ಪ್ರವಾದಿ ಸುಲೈಮಾನ್ (ಅ) ಅಧೀನಗೊಳಿಸಿ ದುಡಿಸುತ್ತಿದ್ದರು. ಅವರಲ್ಲಿ ಕೆಲವರು ಬಹರೈನ್, ಮಸ್ಕತ್ ಎಂಬೆಡೆಗಳಲ್ಲಿ ಆಳ ಸಮುದ್ರದಲ್ಲಿ ಮುಳುಗಿ ಮುತ್ತುಗಳನ್ನು ಹೊರತೆಗೆಯುತ್ತಿದ್ದರು. ಅದನ್ನು ಇಲ್ಲಿ ಸೂಚಿಸಲಾಗಿದೆ.





**87.** ಅವರನ್ನೆಲ್ಲ ನಾವು ನಮ್ಮ ಕರುಣೆಗೊಳಪಡಿಸಿದ್ದೇವೆ. ಅವರೆಲ್ಲರೂ ಸಾತ್ವಿಕರಾಗಿದ್ದರು.

وَأَدْخَلْنَاهُمْ فِي رَحْمَتِنَا ۖ إِنَّهُمْ مِنَ الصَّالِحِينَ ﴿٨٧﴾

**88.** ದನ್ನೂನ್‌ರನ್ನೂ[345] ಜ್ಞಾಪಿಸು. ಅವರು ಕೋಪಾವಿಷ್ಟರಾದ ಸಂದರ್ಭದಲ್ಲಿ, ನಾವು ಅವರನ್ನು ಸಂಕಷ್ಟಕ್ಕೆ ಗುರಿಪಡಿಸಲಿಕ್ಕಿಲ್ಲವೆಂದು ಅವರು ಭಾವಿಸಿದ್ದರು. ಅನಂತರ ಅವರು ಅಂಧಕಾರದಲ್ಲಿ ಹೀಗೆ ಗೋಳಿಟ್ಟರು: 'ನಿನ್ನ ಹೊರತು ಬೇರೆ ದೇವನಿಲ್ಲ, ನೀನು ಪರಿಶುದ್ಧನು. ನಾನಾದರೋ ತಪ್ಪುಗಾರನಾಗಿದ್ದೇನೆ.'

وَذَا النُّونِ إِذْ ذَهَبَ مُغَاضِبًا فَظَنَّ أَنْ لَنْ نَقْدِرَ عَلَيْهِ فَنَادَىٰ فِي الظُّلُمَاتِ أَنْ لَا إِلَٰهَ إِلَّا أَنْتَ سُبْحَانَكَ إِنِّي كُنْتُ مِنَ الظَّالِمِينَ ﴿٨٨﴾

**89.** ಆಗ ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು ಮತ್ತು ಅವರನ್ನು ದುಃಖದಿಂದ ಮುಕ್ತಗೊಳಿಸಿದೆವು. ಹೀಗೆ ನಾವು ಸತ್ಯವಿಶ್ವಾಸಿಗಳನ್ನು ಪಾರುಮಾಡುತ್ತೇವೆ.

فَاسْتَجَبْنَا لَهُ وَنَجَّيْنَاهُ مِنَ الْغَمِّ ۚ وَكَذَٰلِكَ نُنْجِي الْمُؤْمِنِينَ ﴿٨٩﴾

**90.** ಝಕರಿಯ್ಯಾರನ್ನೂ ಜ್ಞಾಪಿಸು. ಅವರು ತನ್ನ ಪ್ರಭುವಿಗೆ ಹೀಗೆ ಮೊರೆಯಿಟ್ಟರು: 'ನನ್ನ ಪ್ರಭೂ, ನನ್ನನ್ನು ಒಬ್ಬಂಟಿಗನಾಗಿ ಬಿಟ್ಟು ಬಿಡಬೇಡ. ನೀನು ಎಲ್ಲ ವಾರಿಸುದಾರರಿಗಿಂತ ಅತ್ಯುತ್ತಮನಾಗಿರುವೆ.'

وَزَكَرِيَّا إِذْ نَادَىٰ رَبَّهُ رَبِّ لَا تَذَرْنِي فَرْدًا وَأَنْتَ خَيْرُ الْوَارِثِينَ ﴿٩٠﴾

**91.** ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು. ಯಹ್ಯಾರನ್ನು ನಾವು ಅವರಿಗೆ ಪ್ರದಾನ ಮಾಡಿದೆವು. ಅವರಿಗೋಸ್ಕರ ನಾವು ಅವರ ಪತ್ನಿಯ ಬಂಜೆತನವನ್ನು ಗುಣಪಡಿಸಿದೆವು. ನಿಶ್ಚಯವಾಗಿಯೂ ಅವರೆಲ್ಲರೂ ಸತ್ಕರ್ಮಗಳಲ್ಲಿ ಸ್ಪರ್ಧಿಸುವವರಾಗಿದ್ದರು. ಅವರು ಭರವಸೆಯಿಂದಲೂ ಭೀತಿಯಿಂದಲೂ ನಮಗೆ ಮೊರೆಯಿಡುತ್ತಿದ್ದರು. ಅವರು ನಮ್ಮ ಮುಂದೆ ವಿನಮ್ರರಾಗಿದ್ದರು.

فَاسْتَجَبْنَا لَهُ وَوَهَبْنَا لَهُ يَحْيَىٰ وَأَصْلَحْنَا لَهُ زَوْجَهُ ۚ إِنَّهُمْ كَانُوا يُسَارِعُونَ فِي الْخَيْرَاتِ وَيَدْعُونَنَا رَغَبًا وَرَهَبًا ۖ وَكَانُوا لَنَا خَاشِعِينَ ﴿٩١﴾

**92.** ತನ್ನ ಶೀಲವನ್ನು ಕಾಪಾಡಿದಾಕೆಯನ್ನು[345A] ಸಹ ಜ್ಞಾಪಿಸು. ನಾವು ಆಕೆಗೆ ನಮ್ಮ ದಿವ್ಯ ಸಂದೇಶದ ಕೆಲವು ವಚನಗಳನ್ನು ನೀಡಿದೆವು. ಆಕೆಯನ್ನೂ ಆಕೆಯ ಪುತ್ರನನ್ನೂ ನಾವು ಲೋಕಕ್ಕೆ ಒಂದು ದೃಷ್ಟಾಂತವನ್ನಾಗಿ ಮಾಡಿದೆವು.

وَالَّتِي أَحْصَنَتْ فَرْجَهَا فَنَفَخْنَا فِيهَا مِنْ رُوحِنَا وَجَعَلْنَاهَا وَابْنَهَا آيَةً لِلْعَالَمِينَ ﴿٩٢﴾

345. ಪ್ರವಾದಿ ಯೂನುಸ್. 345A. ಹಝ್ರತ್ ಮರ್ಯಮ್.

إِنَّ هَٰذِهِ أُمَّتُكُمْ أُمَّةً وَاحِدَةً وَأَنَا رَبُّكُمْ فَاعْبُدُونِ ﴿٩٣﴾

**93.** ನಿಶ್ಚಯವಾಗಿಯೂ ಇದು ನಿಮ್ಮ ಸಮುದಾಯವಾಗಿದೆ; ಏಕ ಸಮುದಾಯ. ನಾನು ನಿಮ್ಮ ಪ್ರಭು ಆಗಿದ್ದೇನೆ; ಆದ್ದರಿಂದ ನನ್ನನ್ನು ಆರಾಧಿಸಿರಿ.

وَتَقَطَّعُوا أَمْرَهُمْ بَيْنَهُمْ ۖ كُلٌّ إِلَيْنَا رَاجِعُونَ ﴿٩٤﴾

**94.** ಅವರು (ಪ್ರವಾದಿಗಳ ವಿರೋಧಿಗಳು) ತಮ್ಮ ವಿಚಾರದಲ್ಲಿ ಪರಸ್ಪರ ಭಿನ್ನಾಭಿಪ್ರಾಯ ಹೊಂದಿದರು. ಅವರೆಲ್ಲರೂ ನಮ್ಮ ಬಳಿಗೆಯೇ ಮರಳುವರು.

فَمَنْ يَعْمَلْ مِنَ الصَّالِحَاتِ وَهُوَ مُؤْمِنٌ فَلَا كُفْرَانَ لِسَعْيِهِ وَإِنَّا لَهُ كَاتِبُونَ ﴿٩٥﴾

**95.** ಯಾರು ಸತ್ಕರ್ಮ ಮಾಡುತ್ತಾನೋ ಹಾಗೂ ವಿಶ್ವಾಸಿಯಾಗಿರುತ್ತಾನೋ, ಆತನ ಪರಿಶ್ರಮವು ಅವಗಣಿಸಲ್ಪಡಲಾರದು. ಖಂಡಿತವಾಗಿಯೂ ನಾವು ಅದನ್ನು ಬರೆದಿಡುತ್ತೇವೆ.

وَحَرَامٌ عَلَىٰ قَرْيَةٍ أَهْلَكْنَاهَا أَنَّهُمْ لَا يَرْجِعُونَ ﴿٩٦﴾

**96.** ನಾವು ನಾಶಪಡಿಸಿದ ನಾಡಿನ ಜನರು ಮರಳಿ ಬರಲಾರರೆಂಬುದು ಒಂದು ಅಲಂಘ್ಯ ನಿಯಮವಾಗಿದೆ.

حَتَّىٰ إِذَا فُتِحَتْ يَأْجُوجُ وَمَأْجُوجُ وَهُمْ مِنْ كُلِّ حَدَبٍ يَنْسِلُونَ ﴿٩٧﴾

**97.** 'ಯಅ್‌ಜೂಜ್' ಮತ್ತು 'ಮಅ್‌ಜೂಜ್'[346] ಬಂಧಮುಕ್ತರಾಗಿ ಎಲ್ಲ ಎತ್ತರವಾದ ಸ್ಥಳಗಳಿಂದ ದುಮುಕುವಾಗ,

وَاقْتَرَبَ الْوَعْدُ الْحَقُّ فَإِذَا هِيَ شَاخِصَةٌ أَبْصَارُ الَّذِينَ كَفَرُوا يَا وَيْلَنَا قَدْ كُنَّا فِي غَفْلَةٍ مِنْ هَٰذَا بَلْ كُنَّا ظَالِمِينَ ﴿٩٨﴾

**98.** ಹಾಗೂ ಸತ್ಯವಾದ ವಾಗ್ದಾನ ಈಡೇರುವ ಕಾಲವು ಸಮೀಪಿಸುವಾಗ ಅವಿಶ್ವಾಸಿಗಳ ಕಣ್ಣುಗಳು ದಿಟ್ಟಿಸಿ ನೋಡುವುವು. (ಅವರು ಹೇಳುವರು:) 'ಅಕಟಕಟಾ, ನಾವು ಈ ಬಗ್ಗೆ ನಿರ್ಲಕ್ಷ್ಯರಾಗಿದ್ದೆವು; ಅಲ್ಲ, ನಾವು ಅಧರ್ಮಿಗಳಾಗಿದ್ದೆವು.'

إِنَّكُمْ وَمَا تَعْبُدُونَ مِنْ دُونِ اللَّهِ

**99.** (ಆಗ ಈ ರೀತಿ ಹೇಳಲ್ಪಡುವುದು:) 'ಖಂಡಿತವಾಗಿಯೂ ನೀವೂ ಅಲ್ಲಾಹನನ್ನು ಬಿಟ್ಟು ನೀವು ಆರಾಧಿ

346. ಈ ವಚನದಲ್ಲಿ ಯಅ್‌ಜೂಜ್ - ಮಅ್‌ಜೂಜರ ಹೊರಡುವಿಕೆಯ ಬಗ್ಗೆ ಭವಿಷ್ಯ ನುಡಿಯಲಾಗಿದೆ. ಅಂದರೆ, ಮೇಲೆ ಹೇಳಿದ ಎರಡು ಸಮುದಾಯಗಳು ಅಂತ್ಯಕಾಲದಲ್ಲಿ ಎರಡು ಶಕ್ತಿಗಳಾಗಿ ಬೆಳೆದು ಲೋಕಾಧಿಪತ್ಯವನ್ನು ಹೊಂದಲಿಕ್ಕಾಗಿ ಪರಸ್ಪರ ಪೈಪೋಟಿ ನಡೆಸುತ್ತಾ ಘೋರ ಯುದ್ಧ ಮಾಡುವರು. ಪವಿತ್ರ ಖುರ್‌ಆನ್ 18:100ರಲ್ಲಿ ಸಹ ಈ ಭವಿಷ್ಯವಾಣಿಯನ್ನು ಕಾಣಬಹುದು. ಪ್ರವಾದಿ ನುಡಿಗಳಲ್ಲಿ ಸಹ ಯಅ್‌ಜೂಜ್ ಮಅ್‌ಜೂಜ್‌ರ ಹೊರಡುವಿಕೆ ಮತ್ತು ಪರಾಕ್ರಮಗಳ ಬಗ್ಗೆ ದೀರ್ಘವಾದ ಪ್ರವಾದನೆಗಳಿವೆ. ವಾಗ್ದತ್ತ ಮಹ್‌ದೀ ಮಸೀಹರ ಆಗಮನ ಕಾಲದಲ್ಲಿ ಅವರ ಹೊರಡುವಿಕೆಯಾಗುವುದೆಂದೂ ಹೇಳಲಾಗಿದೆ. ಯಅ್‌ಜೂಜ್ ಮಅ್‌ಜೂಜ್ ಎಂದರೆ ರಶ್ಯಾದವರು ಮತ್ತು ಇಂಗ್ಲೀಷರೆಂದು ವಾಗ್ದತ್ತ ಮಸೀಹ್ ಹಝ್ರತ್ ಮಿರ್ಝಾ ಗುಲಾಂ ಅಹ್ಮದ್ (ಅಲೈಹಿಸ್ಸಲಾಂ) "ಇಝಾಲಯೆ ಔಹಾಂ" ಎಂಬ ತನ್ನ ಗ್ರಂಥದಲ್ಲಿ ಸ್ಪಷ್ಟವಾಗಿ ಬರೆದಿರುವರು. ಹಾಗೆ ಅವರಿಗೆ ಸಂಬಂಧಿಸಿದ ಭವಿಷ್ಯವಾಣಿಗಳು ಈಡೇರಿವೆ. (18:95ರ ಟಿಪ್ಪಣಿ ಸಹ ನೋಡಿರಿ)





حَصَبُ جَهَنَّمَ ۖ أَنْتُمْ لَهَا وَارِدُونَ ﴿٩٩﴾

ಸುವವುಗಳೆಲ್ಲವೂ ನರಕದ ಇಂಧನ. ಅಲ್ಲಿಗೆಯೇ ನೀವೆಲ್ಲರೂ ತಲಪುವಿರಿ.'

لَوْ كَانَ هَٰؤُلَاءِ آلِهَةً مَا وَرَدُوهَا ۖ وَكُلٌّ فِيهَا خَالِدُونَ ﴿١٠٠﴾

**100.** ಇವುಗಳೆಲ್ಲ (ನಿಜವಾದ) ದೇವರುಗಳಾಗಿದ್ದರೆ ಅಲ್ಲಿಗೆ ಬಂದು ಬೀಳುತ್ತಿರಲಿಲ್ಲ. ಅವರೆಲ್ಲರೂ ಅದರಲ್ಲಿ ದೀರ್ಘಕಾಲ ವಾಸಿಸುವರು.

لَهُمْ فِيهَا زَفِيرٌ وَهُمْ فِيهَا لَا يَسْمَعُونَ ﴿١٠١﴾

**101.** ಅಲ್ಲಿ ಅವರು ನರಳಾಡುವರು. ಅಲ್ಲಿ ಅವರು ಬೇರೇನನ್ನೂ ಆಲಿಸಲಾರರು.

إِنَّ الَّذِينَ سَبَقَتْ لَهُمْ مِنَّا الْحُسْنَىٰ ۙ أُولَٰئِكَ عَنْهَا مُبْعَدُونَ ﴿١٠٢﴾

**102.** ನಮ್ಮ ಕಡೆಯಿಂದ ಅತ್ಯುತ್ತಮ ಪ್ರತಿಫಲದ ವಾಗ್ದಾನ ಯಾರಿಗೆ ಮುಂಚಿತವಾಗಿ ನೀಡಲಾಗಿದೆಯೋ ಅವರು ಅದರಿಂದ ಖಂಡಿತವಾಗಿಯೂ ದೂರಗೊಳಿಸಲ್ಪಡುವರು.

لَا يَسْمَعُونَ حَسِيسَهَا ۖ وَهُمْ فِي مَا اشْتَهَتْ أَنْفُسُهُمْ خَالِدُونَ ﴿١٠٣﴾

**103.** ಅವರು ಅದರ (ನರಕದ) ತುಸುಮಾತ್ರ ಶಬ್ದವನ್ನಾದರೂ ಕೇಳಲಾರರು. ಅವರು ತಮ್ಮ ಮನಸ್ಸು ಬಯಸುವ ಸ್ಥಳದಲ್ಲಿ ನಿತ್ಯವಾಸಿಗಳಾಗುವರು.

لَا يَحْزُنُهُمُ الْفَزَعُ الْأَكْبَرُ وَتَتَلَقَّاهُمُ الْمَلَائِكَةُ هَٰذَا يَوْمُكُمُ الَّذِي كُنْتُمْ تُوعَدُونَ ﴿١٠٤﴾

**104.** ಆ ದೊಡ್ಡ ಭೀತಿಯ ಸಂದರ್ಭದಲ್ಲಿ ಅವರು ವ್ಯಥೆಗೀಡಾಗಲಾರರು. ದಿವ್ಯದೂತರು ಅವರನ್ನು ಎದಿರ್ಗೊಂಡು,'ಇದು ನಿಮಗೆ ವಾಗ್ದಾನ ಮಾಡಿದ ನಿಮ್ಮ ದಿನವಾಗಿದೆ' ಎಂದು ಹೇಳುವರು.

يَوْمَ نَطْوِي السَّمَاءَ كَطَيِّ السِّجِلِّ لِلْكُتُبِ ۚ كَمَا بَدَأْنَا أَوَّلَ خَلْقٍ نُعِيدُهُ ۚ وَعْدًا عَلَيْنَا ۚ إِنَّا كُنَّا فَاعِلِينَ ﴿١٠٥﴾

**105.** ಗ್ರಂಥಗಳ ಹಾಳೆಗಳನ್ನು ಸುರುಳಿ ಸುತ್ತುವಂತೆ ನಾವು ಆಕಾಶವನ್ನು ಸುರುಳಿ ಸುತ್ತುವ ಆ ದಿನ. ನಾವು ಮುಂಚೆ ಸೃಷ್ಟಿಯನ್ನು ಆರಂಭಿಸಿದ ರೀತಿಯಲ್ಲೇ ನಾವು ಅದನ್ನು ಪುನರಾವರ್ತಿಸುವೆವು. ಇದು ನಮ್ಮ ಮೇಲೆ ಬಾಧ್ಯತೆಯಿರುವ ವಾಗ್ದಾನವಾಗಿದೆ. ಖಂಡಿತವಾಗಿಯೂ ನಾವು ಅದನ್ನು ಮಾಡಿಯೇ ತೀರುವೆವು.

وَلَقَدْ كَتَبْنَا فِي الزَّبُورِ مِنْ بَعْدِ

**106.** ನಾವು 'ಝಬೂರ್'ನಲ್ಲಿ ಕೆಲವು ಉಪದೇಶಗಳ ಅನಂತರ ಹೀಗೆ ಬರೆದಿದ್ದೇವೆ: 'ನನ್ನ ಸಾತ್ವಿಕರಾದ

الذِّكْرِ أَنَّ الْأَرْضَ يَرِثُهَا عِبَادِيَ الصّٰلِحُوْنَ ﴿١٠٦﴾

ಜನರು ಆ (ಪವಿತ್ರ) ಭೂಮಿಗೆ[346A] ಉತ್ತರಾಧಿಕಾರಿಗಳಾಗುವರು.'

إِنَّ فِيْ هٰذَا لَبَلٰغًا لِّقَوْمٍ عٰبِدِيْنَ ﴿١٠٧﴾

**107.** ಖಂಡಿತವಾಗಿಯೂ ಇದರಲ್ಲಿ (ಅಲ್ಲಾಹ ನನ್ನು) ಆರಾಧಿಸುವವರಿಗೆ ಒಂದು ಸಂದೇಶವಿದೆ.

وَمَا أَرْسَلْنٰكَ إِلَّا رَحْمَةً لِّلْعٰلَمِيْنَ ﴿١٠٨﴾

**108.** ಲೋಕದ ಎಲ್ಲ ಜನರಿಗೆ ಒಂದು ಅನುಗ್ರಹವಾಗಿಯೇ ನಾವು ನಿನ್ನನ್ನು ಕಳುಹಿಸಿದ್ದೇವೆ.

قُلْ إِنَّمَا يُوْحٰى إِلَيَّ أَنَّمَا إِلٰهُكُمْ إِلٰهٌ وَّاحِدٌ ۚ فَهَلْ أَنْتُمْ مُّسْلِمُوْنَ ﴿١٠٩﴾

**109.** ಹೇಳು: 'ನಿಮ್ಮ ದೇವರು ಒಬ್ಬನೇ ಒಬ್ಬ ದೇವನೆಂದು ನನಗೆ ದೇವಸಂದೇಶ ಲಭಿಸಿದೆ. ನೀವು ಈ ಮಾತನ್ನು ಒಪ್ಪುವಿರೇನು?'

فَإِنْ تَوَلَّوْا فَقُلْ اٰذَنْتُكُمْ عَلٰى سَوَآءٍ ۚ وَإِنْ أَدْرِيْٓ أَقَرِيْبٌ أَمْ بَعِيْدٌ مَّا تُوْعَدُوْنَ ﴿١١٠﴾

**110.** ಇನ್ನು ಅವರು ಬೆನ್ನು ತಿರುಗಿಸಿ ಹೋಗುವುದಾದರೆ ಹೇಳು: 'ನಿಮಗೆಲ್ಲರಿಗೂ ನಾನು ಸಮಾನ ರೀತಿಯಲ್ಲಿ ಎಚ್ಚರಿಕೆ ನೀಡಿರುವೆನು. ಯಾವುದರ ಬಗ್ಗೆ ನಿಮಗೆ ಮುನ್ನೆಚ್ಚರಿಕೆ ಕೊಡಲಾಗಿದೆಯೋ ಅದು ನಿಕಟವಿದೆಯೋ ದೂರವಿದೆಯೇ ಎಂದು ನನಗೆ ತಿಳಿದಿಲ್ಲ.

إِنَّهٗ يَعْلَمُ الْجَهْرَ مِنَ الْقَوْلِ وَيَعْلَمُ مَا تَكْتُمُوْنَ ﴿١١١﴾

**111.** 'ಖಂಡಿತವಾಗಿಯೂ ಅವನು (ಅಲ್ಲಾಹನು) ಮಾತಿನಲ್ಲಿ ಬಹಿರಂಗವಾಗುವುದನ್ನು ಬಲ್ಲನು; ನೀವು ಬಚ್ಚಿಡುವುದನ್ನೂ ಅವನು ಬಲ್ಲನು.

وَإِنْ أَدْرِيْ لَعَلَّهٗ فِتْنَةٌ لَّكُمْ وَمَتَاعٌ إِلٰى حِيْنٍ ﴿١١٢﴾

**112.** 'ನಾನರಿಯೆ, ಪ್ರಾಯಶಃ ಅದು ನಿಮಗೊಂದು ಪರೀಕ್ಷೆ ಮತ್ತು ಒಂದು ನಿರ್ದಿಷ್ಟ ಕಾಲದವರೆಗೆ ಸುಖಾನುಭವವಾಗಿರಬಹುದು.'

قٰلَ رَبِّ احْكُمْ بِالْحَقِّ ۗ وَرَبُّنَا الرَّحْمٰنُ الْمُسْتَعَانُ عَلٰى مَا تَصِفُوْنَ ﴿١١٣﴾

**113.** ಅವರು (ಮುಹಮ್ಮದ್ ಪೈಗಂಬರ್) ಹೀಗೂ ಹೇಳಿದರು: 'ನನ್ನ ಪ್ರಭೂ, ನೀನು ಸತ್ಯದೊಂದಿಗೆ ತೀರ್ಪು ನೀಡು. ನಮ್ಮ ಪ್ರಭು ಪರಮ ದಯಾವಂತನಾಗಿದ್ದಾನೆ. ನೀವು (ಅವಿಶ್ವಾಸಿಗಳು) ಪ್ರತಿಪಾದಿಸುವುದರ ವಿರುದ್ಧ ಅವನಿಂದಲೇ ಸಹಾಯ ಯಾಚಿಸಬೇಕಾಗಿದೆ.'

346A. ಪೆಲಸ್ತೀನ್‌ಗೆ.

سُوْرَةُ الْحَجِّ مَدَنِيَّةٌ وَّهِيَ مَعَ الْبَسْمَلَةِ تِسْعٌ وَّسَبْعُوْنَ اٰيَةً وَّعَشَرَةُ رُكُوْعَاتٍ

## 22. ಅಲ್‌ಹಜ್ಜ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 79 ಆಯತ್‌ಗಳು ಹಾಗೂ 10 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ۝١

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

يٰٓأَيُّهَا النَّاسُ اتَّقُوْا رَبَّكُمْ ۚ إِنَّ زَلْزَلَةَ السَّاعَةِ شَيْءٌ عَظِيْمٌ ۝٢

**2.** ಓ ಮನುಷ್ಯರೇ, ನಿಮ್ಮ ಪ್ರಭುವಿನ ಭಯ ಭಕ್ತಿಯುಳ್ಳವರಾಗಿರಿ. ಖಂಡಿತವಾಗಿಯೂ ಆ ನಿಶ್ಚಿತ ಸಮಯದ ಭೀಕರ ಕಂಪನ ಪ್ರಚಂಡವಾದುದು.

يَوْمَ تَرَوْنَهَا تَذْهَلُ كُلُّ مُرْضِعَةٍ عَمَّا أَرْضَعَتْ وَتَضَعُ كُلُّ ذَاتِ حَمْلٍ حَمْلَهَا وَتَرَى النَّاسَ سُكٰرٰى وَمَا هُمْ بِسُكٰرٰى وَلٰكِنَّ عَذَابَ اللّٰهِ شَدِيْدٌ ۝٣

**3.** ನೀವು ಅದನ್ನು ಕಾಣುವ ದಿನದಂದು, ಮೊಲೆಯೂಡಿಸುವ ಎಲ್ಲ ತಾಯಂದಿರೂ ಹಾಲುಣ್ಣಿಸುವ ತಮ್ಮ ಮಕ್ಕಳನ್ನು ಮರೆತು ಬಿಡುವರು. ಎಲ್ಲ ಗರ್ಭಿಣಿಯರೂ ತಮ್ಮ ಗರ್ಭವನ್ನು ಹೆತ್ತು ಬಿಡುವರು. ಜನರು ಪಾನಮತ್ತರಲ್ಲವಾದರೂ ನೀನು ಅವರನ್ನು ಮತ್ತರಂತೆ ಕಾಣುವೆ. ಆದರೆ ಖಂಡಿತವಾಗಿಯೂ ಅಲ್ಲಾಹನ ಶಿಕ್ಷೆ ಅತಿ ಕಠೋರವಾದುದಾಗಿದೆ.

وَمِنَ النَّاسِ مَنْ يُّجَادِلُ فِي اللّٰهِ بِغَيْرِ عِلْمٍ وَّيَتَّبِعُ كُلَّ شَيْطٰنٍ مَّرِيْدٍ ۝٤

**4.** ಅಲ್ಲಾಹನ ವಿಚಾರದಲ್ಲಿ ಏನೂ ತಿಳಿವಳಿಕೆಯಿಲ್ಲದೆ ವಾಗ್ವಾದ ಮಾಡುವ ಹಾಗೂ ಧಿಕ್ಕಾರಿಯಾದ ಪ್ರತಿಯೊಬ್ಬ ಶೈತಾನನನ್ನು ಹಿಂಬಾಲಿಸುವ ಕೆಲವು ಜನರಿದ್ದಾರೆ.

كُتِبَ عَلَيْهِ أَنَّهُ مَنْ تَوَلَّاهُ فَأَنَّهُ يُضِلُّهُ وَيَهْدِيْهِ إِلٰى عَذَابِ السَّعِيْرِ ۝٥

**5.** ಯಾರಾದರೂ ಅವನನ್ನು (ಶೈತಾನನನ್ನು) ಮಿತ್ರನನ್ನಾಗಿ ಮಾಡಿದರೆ ಖಂಡಿತವಾಗಿಯೂ ಅವನು (ಶೈತಾನ) ಅವನನ್ನು ಪಥಭ್ರಷ್ಟಗೊಳಿಸುವನು ಹಾಗೂ ಅವನನ್ನು ನರಕಾಗ್ನಿಯೆಡೆಗೆ ಕೊಂಡೊಯ್ಯುವನೆಂದು ಅವನ (ಶೈತಾನನ) ಬಗ್ಗೆ ತೀರ್ಮಾನಿಸಲಾಗಿದೆ.

يٰٓأَيُّهَا النَّاسُ إِنْ كُنْتُمْ فِيْ رَيْبٍ مِّنَ

**6.** ಎಲೈ ಮನುಷ್ಯರೇ, ನಿಮಗೆ ಪುನರುತ್ಥಾನದ ಬಗ್ಗೆ ಸಂಶಯವಿದ್ದರೆ, (ಯೋಚಿಸಿರಿ) ನಿಮ್ಮನ್ನು





الْبَعْثِ فَإِنَّا خَلَقْنٰكُمْ مِّنْ تُرَابٍ ثُمَّ مِنْ نُّطْفَةٍ ثُمَّ مِنْ عَلَقَةٍ ثُمَّ مِنْ مُّضْغَةٍ مُّخَلَّقَةٍ وَّغَيْرِ مُخَلَّقَةٍ لِّنُبَيِّنَ لَكُمْ ۚ وَنُقِرُّ فِي الْأَرْحَامِ مَا نَشَاءُ إِلٰى أَجَلٍ مُّسَمًّى ثُمَّ نُخْرِجُكُمْ طِفْلًا ثُمَّ لِتَبْلُغُوْا أَشُدَّكُمْ ۚ وَمِنْكُمْ مَّنْ يُّتَوَفّٰى وَمِنْكُمْ مَّنْ يُّرَدُّ إِلٰى أَرْذَلِ الْعُمُرِ لِكَيْلَا يَعْلَمَ مِنْ بَعْدِ عِلْمٍ شَيْئًا ۚ وَتَرَى الْأَرْضَ هَامِدَةً فَإِذَا أَنْزَلْنَا عَلَيْهَا الْمَاءَ اهْتَزَّتْ وَرَبَتْ وَأَنْبَتَتْ مِنْ كُلِّ زَوْجٍ بَهِيْجٍ ۝٦

(ಮೊದಲು) ನಾವು ಮಣ್ಣಿನಿಂದಲೂ ಅನಂತರ ವೀರ್ಯದಿಂದಲೂ ಅನಂತರ (ಗರ್ಭಾಶಯದಲ್ಲಿ) ಅಂಟಿಕೊಳ್ಳುವ ಒಂದು ಸ್ಥಿತಿಯಲ್ಲೂ ಅನಂತರ ಅಂಶತಃ ರೂಪುಗೊಂಡ ಮತ್ತು ಅಂಶತಃ ರೂಪುಗೊಳ್ಳದ ಮಾಂಸ ಮುದ್ದೆಯಿಂದಲೂ ಸೃಷ್ಟಿಸಿದ್ದೇವೆ - (ನಮ್ಮ ಸಾಮರ್ಥ್ಯವನ್ನು) ನಿಮಗೆ ಅಭಿವ್ಯಕ್ತಿಗೊಳಿಸಲಿಕ್ಕಾಗಿ. ನಾವು ಇಚ್ಛಿಸುವುದನ್ನು ಒಂದು ನಿಗದಿತ ಕಾಲದ ವರೆಗೆ ಗರ್ಭಾಶಯಗಳಲ್ಲಿ ನಾವು ಬಾಕಿಯುಳಿಸುತ್ತೇವೆ. ಅನಂತರ ನಿಮ್ಮನ್ನು ನಾವು ಶಿಶುವಿನ ರೂಪದಲ್ಲಿ ಹೊರ ತರುತ್ತೇವೆ. ಅನಂತರ ನೀವು ಪ್ರೌಢಾವಸ್ಥೆಯನ್ನು ಹೊಂದುತ್ತೀರಿ. (ಯೌವ್ವನಕ್ಕೆ) ಮುಂಚಿತವಾಗಿ ಮರಣ ಹೊಂದುವ ಕೆಲವರು ಸಹ ನಿಮ್ಮಲ್ಲಿದ್ದಾರೆ. ಮುಪ್ಪಿನ ದೌರ್ಬಲ್ಯದತ್ತ ತಿರುಗಿಸಲ್ಪಡುವ ಕೆಲವರೂ ನಿಮ್ಮಲ್ಲಿದ್ದಾರೆ. ತತ್ಫಲವಾಗಿ ಅವರು (ಮೊದಲು) ತಿಳುವಳಿಕೆ ಇದ್ದರೂ ಅನಂತರ ಏನೂ ತಿಳುವಳಿಕೆ ಇಲ್ಲದವರಾಗುತ್ತಾರೆ. (ಕೆಲವೊಮ್ಮೆ) ಭೂಮಿ ಒಣಗಿ ಬರಡಾಗುವುದನ್ನು ನೀನು ಕಾಣುತ್ತಿ. ಅದರ ಮೇಲೆ ನಾವು ಮಳೆ ಸುರಿಸಿದರೆ ಅದರಲ್ಲಿ ಹೊಸ ಕಳೆ ಮೂಡಿ ಎಲ್ಲ ಜಾತಿಯ ಮನೋಹರವಾದ ಸಸ್ಯಲತಾದಿಗಳು ಬೆಳೆಯುತ್ತವೆ.

ذٰلِكَ بِأَنَّ اللّٰهَ هُوَ الْحَقُّ وَأَنَّهُ يُحْيِ الْمَوْتٰى وَأَنَّهُ عَلٰى كُلِّ شَيْءٍ قَدِيْرٌ ۝٧

**7.** ಅದು ಏಕೆಂದರೆ ಅಲ್ಲಾಹನೇ ಸತ್ಯಸ್ವರೂಪನು, ಅವನು ಮೃತರಾದವರನ್ನು ಬದುಕಿಸುತ್ತಾನೆ; ಅವನು ಎಲ್ಲ ಸಂಗತಿಗಳ ಮೇಲೂ ಸಾಮರ್ಥ್ಯವುಳ್ಳವನು.

وَّأَنَّ السَّاعَةَ اٰتِيَةٌ لَّا رَيْبَ فِيْهَا ۙ وَأَنَّ اللّٰهَ يَبْعَثُ مَنْ فِي الْقُبُوْرِ ۝٨

**8.** ಆ ನಿಶ್ಚಿತ ವೇಳೆ ಬಂದೇ ಬರುತ್ತದೆ; ಅದರಲ್ಲೇನೂ ಸಂದೇಹವಿಲ್ಲ. ಗೋರಿಗಳಲ್ಲಿರುವವರನ್ನು ಅಲ್ಲಾಹನು ಖಂಡಿತವಾಗಿಯೂ ಎಬ್ಬಿಸುವನು.

وَمِنَ النَّاسِ مَنْ يُّجَادِلُ فِي اللّٰهِ بِغَيْرِ عِلْمٍ وَّلَا هُدًى وَّلَا كِتٰبٍ مُّنِيْرٍ ۝٩

**9.** ಯಾವುದೇ ಜ್ಞಾನವಾಗಲಿ ಮಾರ್ಗದರ್ಶನವಾಗಲಿ ಪ್ರಕಾಶ ಬೀರುವ ಗ್ರಂಥವಾಗಲಿ ಇಲ್ಲದೆ ಅಲ್ಲಾಹನ ವಿಚಾರದಲ್ಲಿ ವಾಗ್ವಾದ ಮಾಡುವವರು ಜನರ ಪೈಕಿಯಲ್ಲಿದ್ದಾರೆ.

**10.** ಅಲ್ಲಾಹನ ಮಾರ್ಗದಿಂದ ಜನರನ್ನು ದಾರಿ ತಪ್ಪಿಸಲಿಕ್ಕಾಗಿ (ಅಹಂಕಾರದಿಂದ) ತನ್ನ ಪಾರ್ಶ್ವಗಳನ್ನು ತಿರುಗಿಸುತ್ತಾ ಅವನು ಹಾಗೆ ಮಾಡುತ್ತಾನೆ. ಅಂಥವನಿಗೆ ಈ ಲೋಕದಲ್ಲಿ ಅಪಮಾನವಿದೆ. ಪುನರುತ್ಥಾನ ದಿನದಂದು ಅವನು ಜ್ವಲಿಸುವ ಅಗ್ನಿ ಶಿಕ್ಷೆಯ ರುಚಿಯನ್ನು ನೋಡುವಂತೆ ನಾವು ಮಾಡುವೆವು.

ثَانِيَ عِطْفِهٖ لِيُضِلَّ عَنْ سَبِيْلِ اللّٰهِ ؕ لَهٗ فِي الدُّنْيَا خِزْيٌ وَّ نُذِيْقُهٗ يَوْمَ الْقِيٰمَةِ عَذَابَ الْحَرِيْقِ ﴿١٠﴾

**11.** (ಆ ದಿನ ನಾವು ಹೇಳುವೆವು:) 'ಇದು ನಿನ್ನ ಎರಡು ಕೈಗಳು ಮುಂಚೆ ಮಾಡಿದುದರ ಫಲವಾಗಿದೆ. ಖಂಡಿತವಾಗಿಯೂ ಅಲ್ಲಾಹನು ತನ್ನ ದಾಸರಿಗೆ ಅನ್ಯಾಯವೆಸಗಲಾರ.'

ذٰلِكَ بِمَا قَدَّمَتْ يَدٰكَ وَاَنَّ اللّٰهَ لَيْسَ بِظَلَّامٍ لِّلْعَبِيْدِ ﴿١١﴾ ع

**12.** ಅರೆ ಮನಸ್ಸಿನಿಂದ ಅಲ್ಲಾಹನನ್ನು ಆರಾಧಿಸುವ ಕೆಲವರಿದ್ದಾರೆ. ಅವರಿಗೆ ಒಳಿತುಂಟಾದರೆ ಅದರಲ್ಲಿ ಅವರು ಸಂತೋಷಪಡುತ್ತಾರೆ. ಆದರೆ ಅವರು ಪರೀಕ್ಷೆಗೆ ಈಡಾದರೆ ತಮ್ಮ ಪೂರ್ವಸ್ಥಿತಿಗೆ ಮರಳುತ್ತಾರೆ. ಅವರು ಇಹಲೋಕದಲ್ಲೂ ಪರಲೋಕದಲ್ಲೂ ನಷ್ಟಕ್ಕೆ ಗುರಿಯಾಗುತ್ತಾರೆ. ಅದು ಸುಸ್ಪಷ್ಟವಾದೊಂದು ನಷ್ಟವೇ ಆಗಿದೆ.

وَمِنَ النَّاسِ مَنْ يَّعْبُدُ اللّٰهَ عَلٰى حَرْفٍ ۚ فَاِنْ اَصَابَهٗ خَيْرُ ِۨاطْمَاَنَّ بِهٖ ۚ وَاِنْ اَصَابَتْهُ فِتْنَةُ ِۨانْقَلَبَ عَلٰى وَجْهِهٖ ۚ خَسِرَ الدُّنْيَا وَالْاٰخِرَةَ ؕ ذٰلِكَ هُوَ الْخُسْرَانُ الْمُبِيْنُ ﴿١٢﴾

**13.** ಅಲ್ಲಾಹನನ್ನು ಬಿಟ್ಟು, ಅವರು ತಮಗೆ ದೋಷವನ್ನಾಗಲಿ ಗುಣವನ್ನಾಗಲಿ ಮಾಡದವುಗಳನ್ನು ಕರೆದು ಪ್ರಾರ್ಥಿಸುತ್ತಾರೆ. ಅದು ನಿಶ್ಚಯವಾಗಿಯೂ ದೊಡ್ಡ ಮಾರ್ಗಭ್ರಂಶವಾಗಿದೆ.

يَدْعُوْا مِنْ دُوْنِ اللّٰهِ مَا لَا يَضُرُّهٗ وَمَا لَا يَنْفَعُهٗ ؕ ذٰلِكَ هُوَ الضَّلٰلُ الْبَعِيْدُ ﴿١٣﴾

**14.** ಯಾರ ದೋಷವು ಗುಣಕ್ಕಿಂತ ಸಮೀಪವಾಗಿರುವುದೋ ಅಂತಹವನನ್ನು ಅವರು ಕರೆದು ಪ್ರಾರ್ಥಿಸುತ್ತಾರೆ. ಎಷ್ಟು ಕೆಟ್ಟ ಆಶ್ರಯದಾತ! ಹಾಗೂ ಎಷ್ಟು ಕೆಟ್ಟ ಸಂಗಾತಿ!

يَدْعُوْا لَمَنْ ضَرُّهٗۤ اَقْرَبُ مِنْ نَّفْعِهٖ ؕ لَبِئْسَ الْمَوْلٰى وَلَبِئْسَ الْعَشِيْرُ ﴿١٤﴾

**15.** ಯಾರು ವಿಶ್ವಾಸಹೊಂದಿ ಸತ್ಕರ್ಮಗೈಯ್ಯುತ್ತಾರೋ ಅವರಿಗೆ ಅಲ್ಲಾಹನು ಕೆಳಭಾಗದಲ್ಲಿ ಸರಿತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶ ನೀಡುವನು. ಖಂಡಿತವಾಗಿಯೂ ಅಲ್ಲಾಹನು ತಾನು ಇಚ್ಛಿಸುವುದನ್ನು ಮಾಡುತ್ತಾನೆ.

اِنَّ اللّٰهَ يُدْخِلُ الَّذِيْنَ اٰمَنُوْا وَعَمِلُوا الصّٰلِحٰتِ جَنّٰتٍ تَجْرِيْ مِنْ تَحْتِهَا الْاَنْهٰرُ ؕ اِنَّ اللّٰهَ يَفْعَلُ مَا يُرِيْدُ ﴿١٥﴾





**16.** ಅಲ್ಲಾಹನು ಅವರಿಗೆ (ಮುಹಮ್ಮದ್ ಪೈಗಂಬರ್‌ರಿಗೆ) ಇಹದಲ್ಲೂ ಪರದಲ್ಲೂ ಸಹಾಯ ನೀಡಲಾರನೆಂದು ಭಾವಿಸುವವನು (ಸಾಧ್ಯವಿದ್ದರೆ) ಆಕಾಶಕ್ಕೆ ಒಂದು ದಾರಿಯನ್ನು ಕಂಡುಕೊಳ್ಳಲಿ ಹಾಗೂ (ಪೈಗಂಬರರಿಗೆ ಲಭಿಸುವ ದೈವಿಕ ಸಹಾಯವನ್ನು) ಕಡಿದು ಹಾಕಲಿ. ಅನಂತರ ಅವನ ಯೋಜನೆ ಅವನ ಕೋಪಕ್ಕೆ ಕಾರಣವಾಗಿರುವ ಸಂಗತಿಗಳನ್ನು ನೀಗಿಸುವುದೇ ಎಂದು ನೋಡಲಿ.

مَنْ كَانَ يَظُنُّ اَنْ لَّنْ يَّنْصُرَهُ اللّٰهُ فِي الدُّنْيَا وَالْاٰخِرَةِ فَلْيَمْدُدْ بِسَبَبٍ اِلَى السَّمَآءِ ثُمَّ لْيَقْطَعْ فَلْيَنْظُرْ هَلْ يُذْهِبَنَّ كَيْدُهٗ مَا يَغِيْظُ ﴿١٦﴾

**17.** ಇದೇ ರೀತಿಯಲ್ಲಿ ನಾವು ಇದನ್ನು (ಖುರ್‌ಆನನ್ನು) ಸ್ಪಷ್ಟವಾದ ದೃಷ್ಟಾಂತವಾಗಿ ಅವತೀರ್ಣಗೊಳಿಸಿದ್ದೇವೆ. ಖಂಡಿತವಾಗಿಯೂ ಅಲ್ಲಾಹನು ತಾನು ಇಚ್ಛಿಸುವವರಿಗೆ ಮಾರ್ಗದರ್ಶನ ನೀಡುತ್ತಾನೆ.

وَكَذٰلِكَ اَنْزَلْنٰهُ اٰيٰتٍۭ بَيِّنٰتٍ ۙ وَّاَنَّ اللّٰهَ يَهْدِيْ مَنْ يُّرِيْدُ ﴿١٧﴾

**18.** ಸತ್ಯವಿಶ್ವಾಸಿಗಳು, ಯಹೂದಿಯರು, ಸಾಬಿಯರು, ಕ್ರೈಸ್ತರು, ಮಜೂಸಿಯರು, ಬಹುದೇವಾರಾಧಕರು - ನಿಶ್ಚಯವಾಗಿಯೂ ಪುನರುತ್ಥಾನ ದಿನದಂದು ಅಲ್ಲಾಹನು ಅವರ ಮಧ್ಯೆ ತೀರ್ಮಾನಿಸುವನು. ಖಂಡಿತವಾಗಿಯೂ ಅಲ್ಲಾಹನು ಎಲ್ಲಕ್ಕೂ ಸಾಕ್ಷಿಯಾಗಿದ್ದಾನೆ.

اِنَّ الَّذِيْنَ اٰمَنُوْا وَالَّذِيْنَ هَادُوْا وَالصّٰبِـِٕيْنَ وَالنَّصٰرٰى وَالْمَجُوْسَ وَالَّذِيْنَ اَشْرَكُوْۤا ۖ اِنَّ اللّٰهَ يَفْصِلُ بَيْنَهُمْ يَوْمَ الْقِيٰمَةِ ؕ اِنَّ اللّٰهَ عَلٰى كُلِّ شَيْءٍ شَهِيْدٌ ﴿١٨﴾

**19.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರು, ಸೂರ್ಯ, ಚಂದ್ರ, ನಕ್ಷತ್ರಗಳು, ಪರ್ವತಗಳು, ವೃಕ್ಷಗಳು, ಮೃಗಗಳು ಹಾಗೂ ಮನುಷ್ಯರಲ್ಲಿ ಹೆಚ್ಚಿನವರು ಅಲ್ಲಾಹನ ಆಜ್ಞಾನುಸರಣೆ ಮಾಡುವುದನ್ನು ನೀನು ಕಾಣುವುದಿಲ್ಲವೇ? ಆದರೆ ಅಲ್ಲಾಹನ ಶಿಕ್ಷೆಗೆ ಗುರಿಯಾಗುವವರೂ ಹಲವರಿದ್ದಾರೆ. ಅಲ್ಲಾಹನು ಯಾರನ್ನು ಅಪಮಾನಿಸುತ್ತಾನೋ ಅವನನ್ನು ಗೌರವಿಸುವವನು ಯಾರೂ ಇಲ್ಲ. ನಿಸ್ಸಂದೇಹವಾಗಿಯೂ ಅಲ್ಲಾಹನು ತಾನು ಇಚ್ಛಿಸುವುದನ್ನು ಮಾಡುತ್ತಾನೆ.

اَلَمْ تَرَ اَنَّ اللّٰهَ يَسْجُدُ لَهٗ مَنْ فِي السَّمٰوٰتِ وَمَنْ فِي الْاَرْضِ وَالشَّمْسُ وَالْقَمَرُ وَالنُّجُوْمُ وَالْجِبَالُ وَالشَّجَرُ وَالدَّوَآبُّ وَكَثِيْرٌ مِّنَ النَّاسِ ؕ وَكَثِيْرٌ حَقَّ عَلَيْهِ الْعَذَابُ ؕ وَمَنْ يُّهِنِ اللّٰهُ فَمَا لَهٗ مِنْ مُّكْرِمٍ ؕ اِنَّ اللّٰهَ يَفْعَلُ مَا يَشَآءُ ۩ ﴿١٩﴾

**20.** ಇವರು ತಮ್ಮ ಪ್ರಭುವಿನ ಕುರಿತು ಪರಸ್ಪರ ವಾಗ್ವಾದ ಮಾಡುವ ಎರಡು ಪ್ರತಿದ್ವಂದ್ವಿ ಬಣಗಳು. ಅವಿಶ್ವಾಸಿಗಳಿಗೆ ಬೆಂಕಿಯ ಉಡುಪು ಸಿದ್ಧಗೊಳಿಸ

هٰذٰنِ خَصْمٰنِ اخْتَصَمُوْا فِيْ رَبِّهِمْ ۫ فَالَّذِيْنَ كَفَرُوْا قُطِّعَتْ لَهُمْ ثِيَابٌ

ಲ್ಪಡುವುದು. ಅವರ ತಲೆಯ ಮೇಲೆ ಕುದಿಯುವ ನೀರನ್ನು ಸುರಿಸಲಾಗುವುದು.

مِّنْ نَّارٍ ۖ يُصَبُّ مِنْ فَوْقِ رُءُوْسِهِمُ الْحَمِيْمُ ﴿٢٠﴾

**21.** ಅದರಿಂದಾಗಿ ಅವರ ಹೊಟ್ಟೆಗಳಲ್ಲಿರುವುದು ಮತ್ತು ಚರ್ಮಗಳು ಕರಗಿ ಹೋಗುವುವು.

يُصْهَرُ بِهٖ مَا فِيْ بُطُوْنِهِمْ وَالْجُلُوْدُ ﴿٢١﴾

**22.** ಅವರಿಗೋಸ್ಕರ ಕಬ್ಬಿಣದ ಗದೆಗಳು (ಸಿದ್ಧಗೊಳಿಸಲ್ಪಟ್ಟು) ಇವೆ.

وَلَهُمْ مَّقَامِعُ مِنْ حَدِيْدٍ ﴿٢٢﴾

**23.** ಕಷ್ಟಾನುಭವದ ಕಾರಣ ಅದರಿಂದ ಅವರು ಹೊರಗೆ ಹೋಗಲು ಬಯಸುವಾಗಲೆಲ್ಲ ಅವರು ಅದರೆಡೆಗೆಯೇ ಮರಳಿಸಲ್ಪಡುವರು. 'ಅಗ್ನಿಯ ಶಿಕ್ಷೆಯ ರುಚಿ ನೋಡಿರಿ' (ಎಂದು ಅವರೊಡನೆ ಹೇಳಲಾಗುವುದು).

كُلَّمَآ اَرَادُوْٓا اَنْ يَّخْرُجُوْا مِنْهَا مِنْ غَمٍّ اُعِيْدُوْا فِيْهَا ۚ وَذُوْقُوْا عَذَابَ الْحَرِيْقِ ﴿٢٣﴾

**24.** ಖಂಡಿತವಾಗಿಯೂ ಸತ್ಯವಿಶ್ವಾಸವನ್ನು ಹೊಂದಿ ಸತ್ಕರ್ಮಗೈಯ್ಯುವವರಿಗೆ ಅಲ್ಲಾಹನು ಕೆಳ ಭಾಗದಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶನೀಡುವನು. ಅಲ್ಲಿ ಅವರಿಗೆ ಬಂಗಾರದ ಬಳೆಗಳನ್ನೂ ಮುತ್ತುಗಳನ್ನೂ ತೊಡಿಸಲಾಗುವುದು. ಅಲ್ಲಿ ಅವರು ರೇಷ್ಮೆ ಬಟ್ಟೆಗಳನ್ನು ಧರಿಸುವರು.

اِنَّ اللّٰهَ يُدْخِلُ الَّذِيْنَ اٰمَنُوْا وَعَمِلُوا الصّٰلِحٰتِ جَنّٰتٍ تَجْرِيْ مِنْ تَحْتِهَا الْاَنْهٰرُ يُحَلَّوْنَ فِيْهَا مِنْ اَسَاوِرَ مِنْ ذَهَبٍ وَّلُؤْلُؤًا ۚ وَلِبَاسُهُمْ فِيْهَا حَرِيْرٌ ﴿٢٤﴾

**25.** ಪರಿಶುದ್ಧವಾದ ಮಾತಿನ ಕಡೆಗೆ ಅವರಿಗೆ ಮಾರ್ಗದರ್ಶನ ನೀಡಲಾಗುವುದು. ಸ್ತುತ್ಯರ್ಹನಾದ ದೇವನ ಪಥದೆಡೆಗೆ ಅವರು ಮಾರ್ಗದರ್ಶನ ನೀಡಲ್ಪಡುವರು.

وَهُدُوْٓا اِلَى الطَّيِّبِ مِنَ الْقَوْلِ ۚ وَهُدُوْٓا اِلٰى صِرَاطِ الْحَمِيْدِ ﴿٢٥﴾

**26.** ಯಾರು ಅವಿಶ್ವಾಸಿಗಳಾಗಿರುವರೋ ಮತ್ತು ಯಾರು (ಜನರನ್ನು) ಅಲ್ಲಾಹನ ಮಾರ್ಗದಿಂದ ಹಾಗೂ ಮಸ್ಜಿದುಲ್ ಹರಾಮ್‌ನಿಂದ ತಡೆಯುತ್ತಾರೋ - ಅಲ್ಲಿಯ ನಿವಾಸಿಗಳಿಗೂ ಹೊರಗಿನಿಂದ ಬರುವವರಿಗೂ ನಾವು ಅದರಲ್ಲಿ ಸಮಾನ ಹಕ್ಕನ್ನು ನೀಡಿರುವೆವು - ಮತ್ತು ಯಾರು ಅಲ್ಲಿ ಅಕ್ರಮ - ಅನ್ಯಾಯವೆಸಗುತ್ತಾರೋ ಅವರಿಗೆ ಕಠೋರವಾದ ಶಿಕ್ಷೆ ಇದೆ.

اِنَّ الَّذِيْنَ كَفَرُوْا وَيَصُدُّوْنَ عَنْ سَبِيْلِ اللّٰهِ وَالْمَسْجِدِ الْحَرَامِ الَّذِيْ جَعَلْنٰهُ لِلنَّاسِ سَوَآءَ ۨالْعَاكِفُ فِيْهِ وَالْبَادِ ۚ وَمَنْ يُّرِدْ فِيْهِ بِاِلْحَادٍ بِظُلْمٍ نُّذِقْهُ مِنْ عَذَابٍ اَلِيْمٍ ﴿٢٦﴾





**27.** ಇಬ್‌ರಾಹೀಮರಿಗೆ ನಾವು ಆ ಪವಿತ್ರ ಮನೆಯ ಸ್ಥಳವನ್ನು ಒದಗಿಸಿದಾಗ (ನಾವು ಅವರಿಗೆ ಹೀಗೆ ಆದೇಶಿಸಿದೆವು:) 'ನೀನು ನನಗೆ ಏನನ್ನೂ ಸಹಭಾಗಿ ಮಾಡಬಾರದು. ಪ್ರದಕ್ಷಿಣೆ ಮಾಡುವವರಿಗೂ ನಿಂತುಕೊಂಡು, ಬಾಗಿಕೊಂಡು ಮತ್ತು ಸಾಷ್ಟಾಂಗವೆರಗಿಕೊಂಡು ಪ್ರಾರ್ಥಿಸುವವರಿಗೂ ನನ್ನ ಮನೆಯನ್ನು ಶುದ್ಧಗೊಳಿಸಿಡಬೇಕು.

وَاِذْ بَوَّاْنَا لِاِبْرٰهِيْمَ مَكَانَ الْبَيْتِ اَنْ لَّا تُشْرِكْ بِيْ شَيْـًٔا وَّطَهِّرْ بَيْتِيَ لِلطَّآئِفِيْنَ وَالْقَآئِمِيْنَ وَالرُّكَّعِ السُّجُوْدِ ﴿٢٧﴾

**28.** 'ಜನರಿಗೆ ಹಜ್ಜ್‌ಯಾತ್ರೆಗಾಗಿ ಕರೆನೀಡು. ಕಾಲ್ನಡೆಯಾಗಿಯೂ (ಯಾತ್ರೆಯ ಕಾರಣದಿಂದ) ಕೃಶವಾದ ಒಂಟೆಯ ಮೇಲೆ ಸವಾರಿಮಾಡಿಕೊಂಡೂ ದೂರ ದೂರದಿಂದ ಅವರು ನಿನ್ನ ಬಳಿಗೆ ಬರುವರು.

وَاَذِّنْ فِي النَّاسِ بِالْحَجِّ يَاْتُوْكَ رِجَالًا وَّعَلٰى كُلِّ ضَامِرٍ يَّاْتِيْنَ مِنْ كُلِّ فَجٍّ عَمِيْقٍ ﴿٢٨﴾

**29.** '(ಅದು) ಅವರಿಗೆ ಪ್ರಯೋಜನಕರವಾದ ಅನೇಕ ಸಂಗತಿಗಳಿಗೆ ಅವರು ಸಾಕ್ಷಿಗಳಾಗಲು ಮತ್ತು ಅಲ್ಲಾಹನು ಅವರಿಗೆ ದಯಪಾಲಿಸಿರುವ ಜಾನುವಾರುಗಳ ಮೇಲೆ ಕೆಲವು ನಿರ್ದಿಷ್ಟ ದಿನಗಳಲ್ಲಿ (ಅವುಗಳನ್ನು ಬಲಿ ಕೊಡುವಾಗ) ಅವನ ನಾಮೋಚ್ಚಾರಣೆ ಮಾಡಲಿಕ್ಕಾಗಿದೆ. ಅದರಿಂದ (ಆ ಬಲಿಮೃಗಗಳ ಮಾಂಸದಿಂದ) ನೀವೂ ತಿನ್ನಿರಿ; ಕಷ್ಟದಲ್ಲಿರುವ ದರಿದ್ರನಿಗೂ ತಿನ್ನಲು ಕೊಡಿರಿ.

لِّيَشْهَدُوْا مَنَافِعَ لَهُمْ وَيَذْكُرُوا اسْمَ اللّٰهِ فِيْٓ اَيَّامٍ مَّعْلُوْمٰتٍ عَلٰى مَا رَزَقَهُمْ مِّنْ بَهِيْمَةِ الْاَنْعَامِ ۚ فَكُلُوْا مِنْهَا وَاَطْعِمُوا الْبَآئِسَ الْفَقِيْرَ ﴿٢٩﴾

**30.** ಅನಂತರ ಅವರು ತಮ್ಮ ಮಾಲಿನ್ಯಗಳನ್ನು ನೀಗಿಸಲಿ; ತಮ್ಮ ಹರಕೆಗಳನ್ನು ನೆರವೇರಿಸಲಿ ಮತ್ತು ಆ ಪುರಾತನ ಭವನಕ್ಕೆ (ಕಅ್‌ಬಕ್ಕೆ) ಪ್ರದಕ್ಷಿಣೆ ಮಾಡಲಿ.

ثُمَّ لْيَقْضُوْا تَفَثَهُمْ وَلْيُوْفُوْا نُذُوْرَهُمْ وَلْيَطَّوَّفُوْا بِالْبَيْتِ الْعَتِيْقِ ﴿٣٠﴾

**31.** ಅದು ಅಲ್ಲಾಹನ ಆಜ್ಞೆಯಾಗಿದೆ. ಅಲ್ಲಾಹನು ಗೌರವಿಸಿದವುಗಳನ್ನು ಯಾರು ಗೌರವಿಸುತ್ತಾನೋ ಅವನಿಗೆ ತನ್ನ ಪ್ರಭುವಿನ ಬಳಿ ಒಳಿತಿದೆ. ನಿಮಗೆ ವಿವರಿಸಿ ಕೊಡಲಾದವುಗಳನ್ನು ಹೊರತು ಬೇರೆಲ್ಲ ಚತುಷ್ಪಾದಿಗಳನ್ನು ನಿಮಗೆ ಧರ್ಮಬದ್ಧಗೊಳಿಸಲಾಗಿದೆ. ಆದ್ದರಿಂದ ವಿಗ್ರಹಾರಾಧನೆಯ ಕೆಡುಕಿನಿಂದ ನೀವು ದೂರವಿರಿ. ಸುಳ್ಳು ಹೇಳುವುದರಿಂದಲೂ ದೂರವಿದ್ದುಕೊಳ್ಳಿರಿ.

ذٰلِكَ ۚ وَمَنْ يُّعَظِّمْ حُرُمٰتِ اللّٰهِ فَهُوَ خَيْرٌ لَّهٗ عِنْدَ رَبِّهٖ ۚ وَاُحِلَّتْ لَكُمُ الْاَنْعَامُ اِلَّا مَا يُتْلٰى عَلَيْكُمْ فَاجْتَنِبُوا الرِّجْسَ مِنَ الْاَوْثَانِ وَاجْتَنِبُوْا قَوْلَ الزُّوْرِ ﴿٣١﴾

**32.** ಅಲ್ಲಾಹನ ಕಡೆಗೆ ಸದಾ ಒಲವಿರಿಸಿಕೊಳ್ಳಿರಿ; ಅವನಿಗೆ ಏನನ್ನೂ ಸಹಭಾಗಿ ಮಾಡದಿರಿ. ಯಾರಾದರೂ ಅಲ್ಲಾಹನಿಗೆ ಏನನ್ನಾದರೂ ಸಹಭಾಗಿ ಮಾಡಿದರೆ, ನಿಶ್ಚಯವಾಗಿಯೂ ಅವನು ಎತ್ತರದಿಂದ ಕೆಳಗೆ ಬಿದ್ದವನಂತೆ ಆಗುವನು. ಆಗ ಪಕ್ಷಿಗಳು ಬಂದು ಅವನನ್ನು ಎಗರಿಸಿಕೊಂಡು ಹೋಗುವುವು. ಅಥವಾ ಗಾಳಿ ಅವನನ್ನು ದೂರದ ಸ್ಥಳಕ್ಕೆ ಕೊಂಡೊಯ್ಯುವುದು.

حُنَفَآءَ لِلّٰهِ غَيْرَ مُشْرِكِيْنَ بِهٖ ؕ وَمَنْ يُّشْرِكْ بِاللّٰهِ فَكَاَنَّمَا خَرَّ مِنَ السَّمَآءِ فَتَخْطَفُهُ الطَّيْرُ اَوْ تَهْوِيْ بِهِ الرِّيْحُ فِيْ مَكَانٍ سَحِيْقٍ ﴿٣١﴾

**33.** ಅದು ಹಾಗೆಯೇ. ಯಾರಾದರೂ ಅಲ್ಲಾಹನ ಪವಿತ್ರ ಕುರುಹುಗಳನ್ನು ಗೌರವಿಸಿದರೆ ಖಂಡಿತವಾಗಿಯೂ ಅದು ಹೃದಯಗಳ ಭಯಭಕ್ತಿಯ ಕಾರಣದಿಂದಾಗಿದೆ.

ذٰلِكَ ۗ وَمَنْ يُّعَظِّمْ شَعَآئِرَ اللّٰهِ فَاِنَّهَا مِنْ تَقْوَى الْقُلُوْبِ ﴿٣٢﴾

**34.** ನಿಮಗೆ ಅವುಗಳಿಂದ (ಬಲಿಮೃಗಗಳಿಂದ) ಒಂದು ನಿರ್ದಿಷ್ಟ ಕಾಲದ ವರೆಗೆ ಹಲವಿಧ ಪ್ರಯೋಜನ ಪಡೆಯಬಹುದಾಗಿದೆ. ಅನಂತರ ಅವುಗಳ ಗುರಿ ಪುರಾತನ ಗೃಹ (ಕಅ್‌ಬ)ದ ಕಡೆಗೆ ಆಗಿರಬೇಕು.

لَكُمْ فِيْهَا مَنَافِعُ اِلٰٓى اَجَلٍ مُّسَمًّى ثُمَّ مَحِلُّهَآ اِلَى الْبَيْتِ الْعَتِيْقِ ﴿٣٣﴾

**35.** ಪ್ರತಿಯೊಂದು ಜನಾಂಗಕ್ಕೆ ನಾವು ಬಲಿಯ ಒಂದು ಕ್ರಮವನ್ನು ನಿಶ್ಚಯಿಸಿದ್ದೇವೆ - ಅವರಿಗೆ ದಯಪಾಲಿಸಲಾದ ಜಾನುವಾರುಗಳ ಮೇಲೆ ಅವರು ಅಲ್ಲಾಹನ ನಾಮೋಚ್ಚಾರಣೆ ಮಾಡಲಿಕ್ಕೋಸ್ಕರ. ನಿಮ್ಮ ದೇವನು ಏಕ ದೇವನು. ನೀವು ಅವನಿಗೆ ಮಾತ್ರ ಶರಣಾಗಿರಿ. ವಿನೀತರಾಗಿರುವವರಿಗೆ ನೀನು ಶುಭವಾರ್ತೆಯನ್ನು ಅರುಹು.

وَلِكُلِّ اُمَّةٍ جَعَلْنَا مَنْسَكًا لِّيَذْكُرُوا اسْمَ اللّٰهِ عَلٰى مَا رَزَقَهُمْ مِّنْۢ بَهِيْمَةِ الْاَنْعَامِ ؕ فَاِلٰهُكُمْ اِلٰهٌ وَّاحِدٌ فَلَهٗٓ اَسْلِمُوْا ؕ وَبَشِّرِ الْمُخْبِتِيْنَ ﴿٣٤﴾

**36.** ಅಲ್ಲಾಹನ ನಾಮೋಚ್ಚಾರಣೆ ಮಾಡುವಾಗ ಅವರ ಹೃದಯಗಳು ಭಯ ಭಕ್ತಿಯಿಂದ ಕಂಪಿಸುತ್ತವೆ. ತಮಗೇನಾದರೂ ವಿಪತ್ತು ಬಾಧಿಸಿದರೆ ಅವರು ಸೈರಿಸಿಕೊಳ್ಳುತ್ತಾರೆ ಮತ್ತು ನಮಾಝುನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ. ನಾವು ಅವರಿಗೆ ದಯಪಾಲಿಸಿದವುಗಳಿಂದ ಅವರು (ದೇವಪಥದಲ್ಲಿ) ಖರ್ಚುಮಾಡುತ್ತಾರೆ.

الَّذِيْنَ اِذَا ذُكِرَ اللّٰهُ وَجِلَتْ قُلُوْبُهُمْ وَالصّٰبِرِيْنَ عَلٰى مَآ اَصَابَهُمْ وَالْمُقِيْمِى الصَّلٰوةِ ۙ وَمِمَّا رَزَقْنٰهُمْ يُنْفِقُوْنَ ﴿٣٥﴾





**37.** ಬಲಿಯರ್ಪಿಸಲ್ಪಡುವ ಒಂಟೆಗಳನ್ನು ನಾವು ನಿಮಗೆ ಅಲ್ಲಾಹನ ಕುರುಹುಗಳಾಗಿ ನಿಶ್ಚಯಿಸಿದ್ದೇವೆ. ನಿಮಗೆ ಅದರಲ್ಲಿ ಒಳಿತಿದೆ. ನೀವು ಅವುಗಳನ್ನು (ಬಲಿ ಕೊಡಲು) ಸಾಲಾಗಿ ನಿಲ್ಲಿಸಿ ಅವುಗಳ ಮೇಲೆ ಅಲ್ಲಾಹನ ನಾಮೋಚ್ಚಾರಣೆ ಮಾಡಿರಿ. ಹಾಗೆ ಅವು (ವಧಿಸಲ್ಪಟ್ಟು) ತಮ್ಮ ಪಾರ್ಶ್ವಗಳಲ್ಲಿ ಬಿದ್ದರೆ ಅವುಗಳ ಮಾಂಸವನ್ನು ಭಕ್ಷಿಸಿರಿ. ಇದ್ದುದರಲ್ಲಿ ತೃಪ್ತರಾಗಿರುವವರಿಗೂ ದರಿದ್ರರಿಗೂ ಅದರಿಂದ ತಿನ್ನಲು ನೀಡಿರಿ. ನೀವು ಕೃತಜ್ಞತೆಯುಳ್ಳವರಾಗಲಿಕ್ಕಾಗಿ ಈ ಪ್ರಕಾರದಲ್ಲಿ ನಾವು ನಿಮಗೆ ಅವುಗಳನ್ನು ಪ್ರಯೋಜನಕರವನ್ನಾಗಿ ಮಾಡಿದ್ದೇವೆ.

وَالْبُدْنَ جَعَلْنٰهَا لَكُمْ مِّنْ شَعَآئِرِ اللّٰهِ لَكُمْ فِيْهَا خَيْرٌ ۖ فَاذْكُرُوا اسْمَ اللّٰهِ عَلَيْهَا صَوَآفَّ ۚ فَاِذَا وَجَبَتْ جُنُوْبُهَا فَكُلُوْا مِنْهَا وَاَطْعِمُوا الْقَانِعَ وَالْمُعْتَرَّ ؕ كَذٰلِكَ سَخَّرْنٰهَا لَكُمْ لَعَلَّكُمْ تَشْكُرُوْنَ ﴿٣٦﴾

**38.** ಅವುಗಳ ಮಾಂಸವಾಗಲಿ ರಕ್ತವಾಗಲಿ ಅಲ್ಲಾಹನಿಗೆ ತಲಪುವುದಿಲ್ಲ. ಆದರೆ ನಿಮ್ಮ ಭಯಭಕ್ತಿ ಮಾತ್ರ ಅವನಿಗೆ ತಲಪುತ್ತದೆ. ಅಲ್ಲಾಹನು ನಿಮಗೆ ಮಾರ್ಗದರ್ಶನ ನೀಡಿದುದಕ್ಕಾಗಿ ನೀವು ಅವನನ್ನು ಕೊಂಡಾಡಲಿಕ್ಕೋಸ್ಕರ ಈ ರೀತಿಯಾಗಿ ಅವನು ಅವುಗಳನ್ನು ನಿಮ್ಮ ಅಧೀನಕ್ಕೊಳಪಡಿಸಿರುವನು. ಸತ್ಕರ್ಮನಿರತರಿಗೆ ನೀನು ಶುಭವಾರ್ತೆಯನ್ನು ಅರುಹು.

لَنْ يَّنَالَ اللّٰهَ لُحُوْمُهَا وَلَا دِمَآؤُهَا وَلٰكِنْ يَّنَالُهُ التَّقْوٰى مِنْكُمْ ؕ كَذٰلِكَ سَخَّرَهَا لَكُمْ لِتُكَبِّرُوا اللّٰهَ عَلٰى مَا هَدٰىكُمْ ؕ وَبَشِّرِ الْمُحْسِنِيْنَ ﴿٣٧﴾

**39.** ಖಂಡಿತವಾಗಿಯೂ ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಸಂರಕ್ಷಿಸುತ್ತಾನೆ. ಯಾವ ವಂಚಕನನ್ನಾಗಲಿ ಕೃತಘ್ನನನ್ನಾಗಲಿ ಅಲ್ಲಾಹನು ಮೆಚ್ಚುವುದಿಲ್ಲ.

اِنَّ اللّٰهَ يُدٰفِعُ عَنِ الَّذِيْنَ اٰمَنُوْا ؕ اِنَّ اللّٰهَ لَا يُحِبُّ كُلَّ خَوَّانٍ كَفُوْرٍ ﴿٣٨﴾

**40.** ಯಾರ ವಿರುದ್ಧ ಯುದ್ಧಹೂಡಲಾಗಿದೆಯೋ ಅವರಿಗೆ ಪ್ರತಿಯುದ್ಧ ಮಾಡುವ ಅನುಮತಿ ಇದೆ; ಏಕೆಂದರೆ ಅವರು ಆಕ್ರಮಣಕ್ಕೊಳಗಾಗಿದ್ದಾರೆ. ನಿಶ್ಚಯವಾಗಿಯೂ ಅವರಿಗೆ ಸಹಾಯ ನೀಡಲು ಅಲ್ಲಾಹನಿಗೆ ಸಾಮರ್ಥ್ಯವಿದೆ.

اُذِنَ لِلَّذِيْنَ يُقٰتَلُوْنَ بِاَنَّهُمْ ظُلِمُوْا ؕ وَاِنَّ اللّٰهَ عَلٰى نَصْرِهِمْ لَقَدِيْرُ ﴿٣٩﴾

**41.** 'ಅಲ್ಲಾಹನೇ ನಮ್ಮ ಪ್ರಭು' ಎಂದು ಹೇಳಿದ ಮಾತ್ರಕ್ಕೆ ಅವರನ್ನು ಅನ್ಯಾಯವಾಗಿ ಅವರ ಮನೆಗಳಿಂದ ಹೊರಗೆ ಅಟ್ಟಲಾಯಿತು. ಅಲ್ಲಾಹನು ಜನರಲ್ಲಿ ಕೆಲವರನ್ನು (ಅವರು ಎಸಗುವ ದೌರ್ಜನ್ಯಗಳನ್ನು) ಬೇರೆ ಕೆಲವರ ಮೂಲಕ ತಡೆಯದಿರುತ್ತಿದ್ದರೆ ಸನ್ಯಾಸಿ ಮಠ

الَّذِيْنَ اُخْرِجُوْا مِنْ دِيَارِهِمْ بِغَيْرِ حَقٍّ اِلَّآ اَنْ يَّقُوْلُوْا رَبُّنَا اللّٰهُ ؕ وَلَوْلَا دَفْعُ اللّٰهِ النَّاسَ بَعْضَهُمْ بِبَعْضٍ لَّهُدِّمَتْ صَوَامِعُ وَبِيَعٌ وَّ

صَلَوٰتٌ وَّمَسٰجِدُ يُذْكَرُ فِيْهَا اسْمُ
اللّٰهِ كَثِيْرًا ؕ وَلَيَنْصُرَنَّ اللّٰهُ مَنْ
يَّنْصُرُهٗ ؕ اِنَّ اللّٰهَ لَقَوِيٌّ عَزِيْزٌ ﴿۴۰﴾

ಗಳೂ ಇಗರ್ಜಿಗಳೂ ಯಹೂದಿ ಮಂದಿರಗಳೂ ಮಸೀದಿಗಳೂ ನಿರ್ನಾಮವಾಗುತ್ತಿದ್ದವು. ಅವುಗಳಲ್ಲಿ ಅಲ್ಲಾಹನ ನಾಮ ಹೆಚ್ಚು ಹೆಚ್ಚಾಗಿ ಸ್ಮರಿಸಲ್ಪಡುತ್ತದೆ. ತನಗೆ ನೆರವು ನೀಡುವವರಿಗೆ ಅಲ್ಲಾಹನು ಖಂಡಿತವಾಗಿಯೂ ನೆರವಾಗುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹನು ಸರ್ವ ಸಮರ್ಥನೂ ಪ್ರತಾಪಶಾಲಿಯೂ ಆಗಿದ್ದಾನೆ.

اَلَّذِيْنَ اِنْ مَّكَّنّٰهُمْ فِى الْاَرْضِ
اَقَامُوا الصَّلٰوةَ وَاٰتَوُا الزَّكٰوةَ وَ
اَمَرُوْا بِالْمَعْرُوْفِ وَنَهَوْا عَنِ
الْمُنْكَرِ ؕ وَلِلّٰهِ عَاقِبَةُ الْاُمُوْرِ ﴿۴۱﴾

42. ಭೂಮಿಯಲ್ಲಿ ನಾವು ಅವರನ್ನು ನೆಲೆಗೊಳಿಸಿದರೆ ಅವರು ನಮಾಝನ್ನು ನಿಷ್ಠೆಯಿಂದ ನಿರ್ವಹಿಸುವರು; ಝಕಾತ್ ನೀಡುವರು; ಒಳಿತನ್ನು ಉಪದೇಶಿಸುವರು ಮತ್ತು ಕೆಡುಕನ್ನು ತಡೆಯುವರು. ಎಲ್ಲ ಕಾರ್ಯಗಳ ಅಂತ್ಯ ಪರಿಣಾಮ ಅಲ್ಲಾಹನ ಕೈಯಲ್ಲಿದೆ.

وَاِنْ يُّكَذِّبُوْكَ فَقَدْ كَذَّبَتْ قَبْلَهُمْ
قَوْمُ نُوْحٍ وَّعَادٌ وَّثَمُوْدُ ﴿۴۲﴾

43. ಅವರು (ಶತ್ರುಗಳು) ನಿನ್ನನ್ನು ಸುಳ್ಳುಗಾರನೆಂದು ಆಪಾದಿಸಿದರೆ, ಅವರಿಗೆ ಮುಂಚೆ ನೂಹ್, ಆದ್ ಮತ್ತು ಸಮೂದ್‌ರ ಜನತೆಗಳು ಸಹ (ಅವರ ಪ್ರವಾದಿಗಳನ್ನು) ಸುಳ್ಳಾಗಿಸಿದ್ದಾರೆ.

وَقَوْمُ اِبْرٰهِيْمَ وَقَوْمُ لُوْطٍ ﴿۴۳﴾

44. ಅದೇ ಪ್ರಕಾರ ಇಬ್‌ರಾಹೀಮ್‌ರ ಜನತೆ ಮತ್ತು ಲೂತ್‌ರ ಜನತೆ ಸಹ (ಸುಳ್ಳಾಗಿಸಿದ್ದಾರೆ).

وَّاَصْحٰبُ مَدْيَنَ ۚ وَكُذِّبَ مُوْسٰى
فَاَمْلَيْتُ لِلْكٰفِرِيْنَ ثُمَّ اَخَذْتُهُمْ ۚ
فَكَيْفَ كَانَ نَكِيْرِ ﴿۴۴﴾

45. ಮದ್‌ಯನ್ ನಿವಾಸಿಗಳು ಕೂಡ. ಮೂಸಾರು ಸಹ ಸುಳ್ಳುವಾದದ ಆಪಾದನೆಗೆ ಗುರಿಯಾಗಿದ್ದಾರೆ. ಆದರೆ ನಾನು ಅವಿಶ್ವಾಸಿಗಳಿಗೆ ಗಡುವು ನೀಡಿದೆ. ಅನಂತರ ನಾನು ಅವರನ್ನು ಹಿಡಿದು ಶಿಕ್ಷಿಸಿದೆನು. ನಿರಾಕರಣೆಯ ಪರಿಣಾಮ ಹೇಗಿತ್ತು?

فَكَاَيِّنْ مِّنْ قَرْيَةٍ اَهْلَكْنٰهَا وَهِىَ
ظَالِمَةٌ فَهِىَ خَاوِيَةٌ عَلٰى عُرُوْشِهَا وَ
بِئْرٍ مُّعَطَّلَةٍ وَّقَصْرٍ مَّشِيْدٍ ﴿۴۵﴾

46. ಹಾಗೆ ದೌರ್ಜನ್ಯವೆಸಗುತ್ತಿದ್ದ ಎಷ್ಟೆಲ್ಲ ನಾಡುಗಳನ್ನು ನಾವು ನಾಶಪಡಿಸಿಬಿಟ್ಟೆವು! ಅವುಗಳ ಮೇಲ್ಛಾವಣಿಗಳ ಸಹಿತ ಅವು ಕುಸಿದು ಬಿದ್ದಿವೆ. ಪಾಳು ಬಿದ್ದ ಎಷ್ಟು ಬಾವಿಗಳು! ಎಷ್ಟು ಉನ್ನತವಾದ ಕಟ್ಟಡಗಳು!

اَفَلَمْ يَسِيْرُوْا فِى الْاَرْضِ فَتَكُوْنَ

47. ಅವರಿಗೆ ಮನವರಿಕೆ ಮಾಡುವ ಹೃದಯಗಳೂ ಕೇಳಿ ತಿಳಿದುಕೊಳ್ಳುವ ಕಿವಿಗಳೂ ಉಂಟಾಗಲಿಕ್ಕಾಗಿ,





لَهُمْ قُلُوْبٌ يَّعْقِلُوْنَ بِهَاۤ اَوْ اٰذَانٌ
يَّسْمَعُوْنَ بِهَا ۚ فَاِنَّهَا لَا تَعْمَى
الْاَبْصَارُ وَلٰكِنْ تَعْمَى الْقُلُوْبُ الَّتِىْ
فِى الصُّدُوْرِ ﴿۴۶﴾

ಏನು, ಅವರು ಭೂಮಿಯಲ್ಲಿ ಸಂಚರಿಸುವುದಿಲ್ಲವೇ? ವಾಸ್ತವದಲ್ಲಿ ಕಣ್ಣುಗಳು ಕುರುಡಲ್ಲ; ಎದೆಗಳೊಳಗಿರುವ ಹೃದಯಗಳು ಕುರುಡು.

وَيَسْتَعْجِلُوْنَكَ بِالْعَذَابِ وَلَنْ
يُّخْلِفَ اللّٰهُ وَعْدَهٗ ؕ وَاِنَّ يَوْمًا عِنْدَ
رَبِّكَ كَاَلْفِ سَنَةٍ مِّمَّا تَعُدُّوْنَ ﴿۴۷﴾

48. ಅವರು ನಿನ್ನೊಡನೆ ಶಿಕ್ಷೆಯ ಬಗ್ಗೆ ಪ್ರಶ್ನಿಸಿ ತ್ವರೆಪಡಿಸುತ್ತಾರೆ. ಅಲ್ಲಾಹನು ಎಂದಿಗೂ ತನ್ನ ವಾಗ್ದಾನವನ್ನು ಭಂಗಪಡಿಸಲಾರ. ನಿನ್ನ ಪ್ರಭುವಿನ ಬಳಿ ಒಂದು ದಿನವೆಂದರೆ ನೀವು ಎಣಿಕೆ ಮಾಡುವ ಸಾವಿರ ವರ್ಷಗಳಷ್ಟು.

وَكَاَيِّنْ مِّنْ قَرْيَةٍ اَمْلَيْتُ لَهَا وَ
هِىَ ظَالِمَةٌ ثُمَّ اَخَذْتُهَا ۚ وَاِلَىَّ
الْمَصِيْرُ ﴿۴۸﴾

49. ದೌರ್ಜನ್ಯವೆಸಗುತ್ತಿದ್ದ ಎಷ್ಟೆಲ್ಲ ನಾಡುಗಳಿಗೆ ನಾನು ಕಾಲಾವಕಾಶ ನೀಡಿದ್ದೆ. ಅನಂತರ ನಾನು ಅವುಗಳನ್ನು ಹಿಡಿದು ಶಿಕ್ಷಿಸಿದೆ. ಮರಳಿಕೆ ನನ್ನೆಡೆಗೆಯೇ ಆಗಿದೆ.

قُلْ يٰۤاَيُّهَا النَّاسُ اِنَّمَاۤ اَنَا لَكُمْ نَذِيْرٌ
مُّبِيْنٌ ﴿۴۹﴾

50. ನೀನು ಹೇಳು: 'ಎಲೈ ಜನರೇ, ನಾನು ಕೇವಲ ನಿಮಗೆ ಸ್ಪಷ್ಟವಾದ ರೀತಿಯಲ್ಲಿ ಮುನ್ನೆಚ್ಚರಿಕೆ ನೀಡುವವನು ಮಾತ್ರವಾಗಿದ್ದೇನೆ.'

فَالَّذِيْنَ اٰمَنُوْا وَعَمِلُوا الصّٰلِحٰتِ
لَهُمْ مَّغْفِرَةٌ وَّرِزْقٌ كَرِيْمٌ ﴿۵۰﴾

51. ಯಾರು ವಿಶ್ವಾಸ ಕೈಗೊಂಡು ಸತ್ಕರ್ಮ ನಿರತರಾಗುತ್ತಾರೋ ಅವರಿಗೆ ಕ್ಷಮಾದಾನ ಮತ್ತು ಗೌರವಾರ್ಹ ಆಹಾರವಿದೆ.

وَالَّذِيْنَ سَعَوْا فِىْۤ اٰيٰتِنَا مُعٰجِزِيْنَ
اُولٰٓئِكَ اَصْحٰبُ الْجَحِيْمِ ﴿۵۱﴾

52. ನಮ್ಮ ದೃಷ್ಟಾಂತಗಳ ವಿರುದ್ಧವಾಗಿ (ನಮ್ಮ ಉದ್ದೇಶಗಳನ್ನು) ನಿಷ್ಫಲಗೊಳಿಸಲು ಪ್ರಯತ್ನಿಸುವವರು ನರಕವಾಸಿಗಳಾಗುವರು.

وَمَاۤ اَرْسَلْنَا مِنْ قَبْلِكَ مِنْ رَّسُوْلٍ
وَّلَا نَبِىٍّ اِلَّاۤ اِذَا تَمَنّٰۤى اَلْقَى الشَّيْطٰنُ
فِىْۤ اُمْنِيَّتِهٖ ۚ فَيَنْسَخُ اللّٰهُ مَا يُلْقِى

53. ನಿನಗಿಂತ ಮುಂಚೆ ಒಬ್ಬ ಸಂದೇಶ ವಾಹಕನನ್ನಾಗಲಿ ಒಬ್ಬ ಪ್ರವಾದಿಯನ್ನಾಗಲಿ, ಆತನು ಏನಾದರೂ ಉದ್ದೇಶಿಸಿದರೆ, ಆತನ ಉದ್ದೇಶ ಮಾರ್ಗದಲ್ಲಿ ಶೈತಾನನು ತಡೆಯೊಡ್ಡದ ಸ್ಥಿತಿಯಲ್ಲಿ ನಾವು ಕಳುಹಿಸಲಿಲ್ಲ.

ಆದರೆ ಅಲ್ಲಾಹನು ಶೈತಾನ ಒಡ್ಡಿದ ಅಡ್ಡಿ ಆತಂಕಗಳನ್ನು ನಿವಾರಿಸಿಬಿಡುತ್ತಾನೆ.[347] ಅನಂತರ ಅಲ್ಲಾಹನು ತನ್ನ ದೃಷ್ಟಾಂತಗಳನ್ನು ಬಲಗೊಳಿಸುತ್ತಾನೆ. ಅಲ್ಲಾಹನು ಎಲ್ಲ ಬಲ್ಲವನೂ ವಿವೇಕಶಾಲಿಯೂ ಆಗಿದ್ದಾನೆ.

الشَّيْطَٰنُ ثُمَّ يُحْكِمُ اللَّهُ آيَٰتِهِۦ ۗ وَاللَّهُ عَلِيمٌ حَكِيمٌ ﴿٥٢﴾

**54.** ಶೈತಾನನು ಒಡ್ಡುವ ತಡೆಗಳು ಹೃದಯಗಳಲ್ಲಿ ರೋಗವಿರುವವರಿಗೂ ಹೃದಯ ಕಾಠಿಣ್ಯವಿರುವವರಿಗೂ ಪರೀಕ್ಷೆಗೆ ಕಾರಣವಾಗುತ್ತವೆ. ಖಂಡಿತವಾಗಿಯೂ ಈ ಅತಿಕರ್ಮಿಗಳು (ಶೈತಾನ ಮತ್ತು ಸಂಗಡಿಗರು) ಪಥಭ್ರಷ್ಟತೆಯಲ್ಲಿ ಬಹಳ ದೂರ ಹೋದವರು.

لِّيَجْعَلَ مَا يُلْقِى الشَّيْطَٰنُ فِتْنَةً لِّلَّذِينَ فِى قُلُوبِهِم مَّرَضٌ وَالْقَاسِيَةِ قُلُوبُهُمْ ۗ وَإِنَّ الظَّٰلِمِينَ لَفِى شِقَاقٍۭ بَعِيدٍ ﴿٥٣﴾

**55.** ಜ್ಞಾನ ಸಿದ್ಧಿಸಿದವರು, ಇದು ನಿನ್ನ ಪ್ರಭುವಿನಿಂದ ಬಂದಿರುವ ಸತ್ಯವೆಂದು ಮನಗಾಣಲಿಕ್ಕಾಗಿ ಸಹ (ಈ ಪರೀಕ್ಷೆ). ತತ್ಫಲವಾಗಿ ಅವರು ಅದನ್ನು ನಂಬಿ ಅವರ ಹೃದಯಗಳು ಅವನಿಗೆ (ಅಲ್ಲಾಹನಿಗೆ) ಅಧೀನವಾಗುವುವು. ನಿಶ್ಚಯವಾಗಿಯೂ ಅಲ್ಲಾಹನು ವಿಶ್ವಾಸಿಗಳನ್ನು ಸತ್ಪಥದೆಡೆಗೆ ಮಾರ್ಗದರ್ಶನ ಮಾಡುತ್ತಾನೆ.

وَلِيَعْلَمَ الَّذِينَ أُوتُوا الْعِلْمَ أَنَّهُ الْحَقُّ مِن رَّبِّكَ فَيُؤْمِنُوا بِهِۦ فَتُخْبِتَ لَهُۥ قُلُوبُهُمْ ۗ وَإِنَّ اللَّهَ لَهَادِ الَّذِينَ آمَنُوٓا إِلَىٰ صِرَٰطٍ مُّسْتَقِيمٍ ﴿٥٤﴾

**56.** ಅವರಿಗೆ ಹಠಾತ್ತಾಗಿ ಆ (ನಾಶದ) ವೇಳೆ ಬರುವವರೆಗೆ ಅಥವಾ ವಿನಾಶಕಾರಿಯಾದ ಆ ದಿನದ ಶಿಕ್ಷೆ ಬರುವವರೆಗೆ ಅವಿಶ್ವಾಸಿಗಳು ಇದರ ಬಗ್ಗೆ ಸಂದೇಹವನ್ನು ನಿವಾರಿಸಿಕೊಳ್ಳಲಾರರು.

وَلَا يَزَالُ الَّذِينَ كَفَرُوا فِى مِرْيَةٍ مِّنْهُ حَتَّىٰ تَأْتِيَهُمُ السَّاعَةُ بَغْتَةً أَوْ يَأْتِيَهُمْ عَذَابُ يَوْمٍ عَقِيمٍ ﴿٥٥﴾

**57.** ಆ ದಿನದಂದು ಆಧಿಪತ್ಯ ಅಲ್ಲಾಹನಿಗೆ ಮಾತ್ರವಿರುವುದು. ಅವನು ಅವರ ಮಧ್ಯೆ ತೀರ್ಮಾನಿಸುವನು. ವಿಶ್ವಾಸ ಹೊಂದಿ ಸತ್ಕರ್ಮ ನಿರತರಾದವರಿಗೆ ಸುಖಾನುಭೂತಿಯ ಸ್ವರ್ಗೀಯ ತೋಟಗಳು ದೊರಕುವುವು.

الْمُلْكُ يَوْمَئِذٍ لِّلَّهِ يَحْكُمُ بَيْنَهُمْ ۚ فَالَّذِينَ آمَنُوا وَعَمِلُوا الصَّٰلِحَٰتِ فِى جَنَّٰتِ النَّعِيمِ ﴿٥٦﴾

**58.** ಅವಿಶ್ವಾಸ ಹೊಂದಿ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರಿಗೆ ಅಪಮಾನಕರವಾದ ಶಿಕ್ಷೆಯೂ ಇದೆ.

وَالَّذِينَ كَفَرُوا وَكَذَّبُوا بِآيَٰتِنَا فَأُولَٰٓئِكَ لَهُمْ عَذَابٌ مُّهِينٌ ﴿٥٧﴾

347. ಎಲ್ಲ ಪ್ರವಾದಿಗಳು ಸತ್ಕಾರ್ಯಗಳನ್ನು ಉದ್ದೇಶಿಸುತ್ತಾರೆ. ಶತ್ರುಗಳು ಅದನ್ನು ನಿಷ್ಫಲಗೊಳಿಸಲು ಪ್ರಯತ್ನಿಸುತ್ತಾರೆ. ಆದರೆ, ಅಲ್ಲಾಹನು ಪ್ರವಾದಿಗಳ ಉದ್ದೇಶಗಳನ್ನು ಈಡೇರಿಸಿಕೊಟ್ಟು ಶತ್ರುಗಳನ್ನು ಸೋಲಿಸುತ್ತಾನೆ.





**59.** ಅಲ್ಲಾಹನ ಮಾರ್ಗದಲ್ಲಿ ಸ್ವದೇಶವನ್ನು ತ್ಯಜಿಸಿ ವಲಸೆಹೋಗುವವರು, ಅನಂತರ ಹತ್ಯೆಗೀಡಾದರೆ ಅಥವಾ (ಸಹಜವಾಗಿ) ಮಡಿದರೆ, ಅಲ್ಲಾಹನು ಅವರಿಗೆ ಉತ್ತಮವಾದ ಪ್ರತಿಫಲವನ್ನು ನೀಡುವನು. ಪುರಸ್ಕಾರ ನೀಡುವವರಲ್ಲಿ ಅಲ್ಲಾಹನು ಅತಿ ಶ್ರೇಷ್ಠನಾಗಿದ್ದಾನೆ.

وَالَّذِينَ هَاجَرُوا فِى سَبِيلِ اللَّهِ ثُمَّ قُتِلُوٓا أَوْ مَاتُوا لَيَرْزُقَنَّهُمُ اللَّهُ رِزْقًا حَسَنًا ۚ وَإِنَّ اللَّهَ لَهُوَ خَيْرُ الرَّٰزِقِينَ ﴿٥٨﴾

**60.** ನಿಶ್ಚಯವಾಗಿಯೂ ಅವರಿಗೆ ತೃಪ್ತಿಕರವಾದ ಸ್ಥಳದಲ್ಲಿ ಅಲ್ಲಾಹನು ಅವರಿಗೆ ಪ್ರವೇಶ ನೀಡುವನು. ನಿಸ್ಸಂದೇಹವಾಗಿಯೂ ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿದ್ದಾನೆ.

لَيُدْخِلَنَّهُم مُّدْخَلًا يَرْضَوْنَهُۥ ۗ وَإِنَّ اللَّهَ لَعَلِيمٌ حَلِيمٌ ﴿٥٩﴾

**61.** ಅದು ಹಾಗೆಯೇ. ಯಾರಾದರೂ ತನಗೆ ಉಂಟಾದ ಉಪದ್ರದಷ್ಟೇ ಪ್ರತಿಕಾರವನ್ನು ಮಾಡಿದಾಗ, ಆತನ ವಿರುದ್ಧ ಮತ್ತೂ ಅನ್ಯಾಯವೆಸಗಲ್ಪಟ್ಟರೆ ಖಂಡಿತವಾಗಿಯೂ ಅಲ್ಲಾಹನು ಆತನಿಗೆ ನೆರವಾಗುವನು. ನಿಶ್ಚಯವಾಗಿಯೂ ಅಲ್ಲಾಹನು ಪಾಪಗಳನ್ನು ಅಳಿಸಿಬಿಡುವವನೂ ಕ್ಷಮಾಶೀಲನೂ ಆಗಿದ್ದಾನೆ.

ذَٰلِكَ وَمَنْ عَاقَبَ بِمِثْلِ مَا عُوقِبَ بِهِۦ ثُمَّ بُغِىَ عَلَيْهِ لَيَنصُرَنَّهُ اللَّهُ ۗ إِنَّ اللَّهَ لَعَفُوٌّ غَفُورٌ ﴿٦٠﴾

**62.** ಅದು ಏಕೆಂದರೆ, ಅಲ್ಲಾಹನು ರಾತ್ರಿಯನ್ನು ಹಗಲಿನಲ್ಲಿ ಪ್ರವೇಶಗೊಳಿಸುತ್ತಾನೆ ಮತ್ತು ಹಗಲನ್ನು ರಾತ್ರಿಯಲ್ಲಿ ಪ್ರವೇಶಗೊಳಿಸುತ್ತಾನೆ.[347A] ದಿಟವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

ذَٰلِكَ بِأَنَّ اللَّهَ يُولِجُ الَّيْلَ فِى النَّهَارِ وَيُولِجُ النَّهَارَ فِى الَّيْلِ وَأَنَّ اللَّهَ سَمِيعٌۢ بَصِيرٌ ﴿٦١﴾

**63.** ಅದೇಕೆಂದರೆ,[347B] ಅಲ್ಲಾಹನೇ ಸತ್ಯಸ್ವರೂಪನಾಗಿರುವನು; ಅವನನ್ನು ಬಿಟ್ಟು ಅವರು ಕರೆದು ಪ್ರಾರ್ಥಿಸುವವುಗಳೆಲ್ಲ ಮಿಥ್ಯ. ಅಲ್ಲಾಹನೇ ಅತ್ಯುನ್ನತನೂ ಮಹತ್ವವುಳ್ಳವನೂ ಆಗಿದ್ದಾನೆ.

ذَٰلِكَ بِأَنَّ اللَّهَ هُوَ الْحَقُّ وَأَنَّ مَا يَدْعُونَ مِن دُونِهِۦ هُوَ الْبَٰطِلُ وَأَنَّ اللَّهَ هُوَ الْعَلِىُّ الْكَبِيرُ ﴿٦٢﴾

**64.** ನೀನು ಕಂಡಿಲ್ಲವೇ? ಅಲ್ಲಾಹನು ಆಕಾಶದಿಂದ ಮಳೆಯನ್ನು ಸುರಿಸುತ್ತಾನೆ; ತತ್ಫಲವಾಗಿ ಭೂಮಿಯು ಹಚ್ಚಹಸಿರಾಗುತ್ತದೆ. ನಿಶ್ಚಯವಾಗಿಯೂ

أَلَمْ تَرَ أَنَّ اللَّهَ أَنزَلَ مِنَ السَّمَآءِ مَآءً فَتُصْبِحُ الْأَرْضُ مُخْضَرَّةً ۗ إِنَّ

347A. ಇಲ್ಲಿ ರಾತ್ರಿ ಎಂಬುದು ಜನತೆಯ ಅವನತಿಯನ್ನೂ ಹಗಲು ಎಂಬುದು ಉನ್ನತಿಯನ್ನೂ ಸೂಚಿಸುತ್ತದೆ.
347B. ಪ್ರಾರ್ಥನೆಗಳನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿರುವುದು.

ٱللَّهَ لَطِيفٌ خَبِيرٌ ﴿٦٤﴾

ಅಲ್ಲಾಹನು ಸೂಕ್ಷ್ಮಗ್ರಾಹಿಯೂ ಸರ್ವಜ್ಞನೂ ಆಗಿದ್ದಾನೆ.

لَّهُۥ مَا فِى ٱلسَّمَٰوَٰتِ وَمَا فِى ٱلْأَرْضِ ۗ وَإِنَّ ٱللَّهَ لَهُوَ ٱلْغَنِىُّ ٱلْحَمِيدُ ﴿٦٥﴾

**65.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನದ್ದಾಗಿವೆ. ನಿಶ್ಚಯವಾಗಿಯೂ ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

أَلَمْ تَرَ أَنَّ ٱللَّهَ سَخَّرَ لَكُم مَّا فِى ٱلْأَرْضِ وَٱلْفُلْكَ تَجْرِى فِى ٱلْبَحْرِ بِأَمْرِهِۦ وَيُمْسِكُ ٱلسَّمَآءَ أَن تَقَعَ عَلَى ٱلْأَرْضِ إِلَّا بِإِذْنِهِۦٓ ۗ إِنَّ ٱللَّهَ بِٱلنَّاسِ لَرَءُوفٌ رَّحِيمٌ ﴿٦٦﴾

**66.** ನೀನು ಕಂಡಿಲ್ಲವೇ? ಅಲ್ಲಾಹನು ಭೂಮಿಯಲ್ಲಿರುವ ಎಲ್ಲವನ್ನೂ, ಅವನ ಆಜ್ಞಾನುಸಾರ ಸಮುದ್ರದಲ್ಲಿ ಸಂಚರಿಸುವ ಹಡಗುಗಳನ್ನೂ ನಿಮಗೆ ಅಧೀನಪಡಿಸಿಕೊಟ್ಟಿರುವನು. ಅವನ ಆಜ್ಞೆಯ ಹೊರತು ಆಕಾಶಕಾಯಗಳು ಭೂಮಿಯ ಮೇಲೆ ಬೀಳದಂತೆ ಅವನು ತಡೆದಿಟ್ಟಿರುವನು. ದಿಟವಾಗಿಯೂ ಅಲ್ಲಾಹನು ಮನುಷ್ಯರ ಮೇಲೆ ಅತಿ ಹೆಚ್ಚು ದಯೆಯುಳ್ಳವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَهُوَ ٱلَّذِىٓ أَحْيَاكُمْ ثُمَّ يُمِيتُكُمْ ثُمَّ يُحْيِيكُمْ ۗ إِنَّ ٱلْإِنسَٰنَ لَكَفُورٌ ﴿٦٧﴾

**67.** ಅವನೇ ನಿಮಗೆ ಜೀವ ನೀಡಿದವನು ಮತ್ತೆ ಅವನೇ ನಿಮ್ಮನ್ನು ಮೃತಪಡಿಸುವನು. ಅನಂತರ ಅವನೇ (ಪುನಃ) ನಿಮಗೆ ಜೀವ ನೀಡುವನು. ನಿಶ್ಚಯವಾಗಿಯೂ ಮನುಷ್ಯನು ಕೃತಘ್ನನಾಗಿದ್ದಾನೆ.

لِّكُلِّ أُمَّةٍ جَعَلْنَا مَنسَكًا هُمْ نَاسِكُوهُ ۖ فَلَا يُنَٰزِعُنَّكَ فِى ٱلْأَمْرِ ۚ وَٱدْعُ إِلَىٰ رَبِّكَ ۖ إِنَّكَ لَعَلَىٰ هُدًى مُّسْتَقِيمٍ ﴿٦٨﴾

**68.** ಪ್ರತಿಯೊಂದು ಜನಾಂಗಕ್ಕೂ ನಾವು ಆರಾಧನಾ ಕ್ರಮವನ್ನು ನಿಶ್ಚಯಿಸಿದ್ದೇವೆ. ಅವರು ಅದನ್ನು ಅನುಷ್ಠಿಸುತ್ತಾರೆ. ಆದ್ದರಿಂದ ಈ ಕ್ರಮದ ಬಗ್ಗೆ (ಇಸ್ಲಾಮೀ ಆರಾಧನಾ ಕ್ರಮದ ಬಗ್ಗೆ) ಅವರು ನಿನ್ನೊಡನೆ ವಾಗ್ವಾದ ಮಾಡದಿರಲಿ. ನಿನ್ನ ಪ್ರಭುವಿನ ಕಡೆಗೆ ನೀನು ಅವರನ್ನು ಆಹ್ವಾನಿಸು. ಖಂಡಿತವಾಗಿಯೂ ನೀನು ಸತ್ಪಥದಲ್ಲಿ ನಡೆಯುತ್ತಿರುವೆ.

وَإِن جَٰدَلُوكَ فَقُلِ ٱللَّهُ أَعْلَمُ بِمَا تَعْمَلُونَ ﴿٦٩﴾

**69.** ಮತ್ತೂ ಅವರು ನಿನ್ನೊಡನೆ ವಾಗ್ವಾದ ಮಾಡಿದರೆ ನೀನು ಹೇಳು: 'ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ಬಲ್ಲನು.





ٱللَّهُ يَحْكُمُ بَيْنَكُمْ يَوْمَ ٱلْقِيَٰمَةِ فِيمَا كُنتُمْ فِيهِ تَخْتَلِفُونَ ﴿٧٠﴾

**70.** 'ನೀವು ಭಿನ್ನಾಭಿಪ್ರಾಯ ಹೊಂದಿರುವುದರ ಬಗ್ಗೆ ಪುನರುತ್ಥಾನ ದಿನದಂದು ಅಲ್ಲಾಹನು ತೀರ್ಮಾನಿಸುವನು.'

أَلَمْ تَعْلَمْ أَنَّ ٱللَّهَ يَعْلَمُ مَا فِى ٱلسَّمَآءِ وَٱلْأَرْضِ ۗ إِنَّ ذَٰلِكَ فِى كِتَٰبٍ ۚ إِنَّ ذَٰلِكَ عَلَى ٱللَّهِ يَسِيرٌ ﴿٧١﴾

**71.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅಲ್ಲಾಹನು ಬಲ್ಲನು ಎಂದು ನಿನಗೆ ತಿಳಿದಿಲ್ಲವೇ? ನಿಶ್ಚಯವಾಗಿಯೂ ಅವೆಲ್ಲ ಒಂದು ಗ್ರಂಥದಲ್ಲಿ ದಾಖಲಿಸಲ್ಪಟ್ಟಿವೆ. ಖಂಡಿತವಾಗಿಯೂ ಅದು ಅಲ್ಲಾಹನಿಗೆ ಬಲು ಸುಲಭ.

وَيَعْبُدُونَ مِن دُونِ ٱللَّهِ مَا لَمْ يُنَزِّلْ بِهِۦ سُلْطَٰنًا وَمَا لَيْسَ لَهُم بِهِۦ عِلْمٌ ۗ وَمَا لِلظَّٰلِمِينَ مِن نَّصِيرٍ ﴿٧٢﴾

**72.** ಅವರು ಅಲ್ಲಾಹನ ಹೊರತು ಬೇರೆ ವಸ್ತುಗಳನ್ನು ಆರಾಧಿಸುತ್ತಾರೆ. ಅವುಗಳ ಬಗ್ಗೆ ಯಾವ ಸಾಕ್ಷ್ಯಾಧಾರವನ್ನೂ ಅವನು ಅವತೀರ್ಣಗೊಳಿಸಲಿಲ್ಲ. ಅದರ ಕುರಿತು ಅವರಿಗೆ ಏನೂ ಜ್ಞಾನವಿಲ್ಲ ಹಾಗೂ ಅಧರ್ಮಿಗಳಿಗೆ ಯಾರೂ ಸಹಾಯಕನಿಲ್ಲ.

وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ تَعْرِفُ فِى وُجُوهِ ٱلَّذِينَ كَفَرُوا۟ ٱلْمُنكَرَ ۖ يَكَادُونَ يَسْطُونَ بِٱلَّذِينَ يَتْلُونَ عَلَيْهِمْ ءَايَٰتِنَا ۗ قُلْ أَفَأُنَبِّئُكُم بِشَرٍّ مِّن ذَٰلِكُمُ ۗ ٱلنَّارُ وَعَدَهَا ٱللَّهُ ٱلَّذِينَ كَفَرُوا۟ ۖ وَبِئْسَ ٱلْمَصِيرُ ﴿٧٣﴾

**73.** ನಮ್ಮ ಸ್ಪಷ್ಟವಾದ ವಚನಗಳನ್ನು ಅವರಿಗೆ ಓದಿ ಹೇಳಿದರೆ ಅವಿಶ್ವಾಸಿಗಳ ಮುಖದಲ್ಲಿ ವಿರೋಧದ ಚಹರೆಯನ್ನು ನೀನು ಕಾಣುವೆ. ನಮ್ಮ ವಚನಗಳನ್ನು ಅವರಿಗೆ ಓದಿ ಹೇಳುವವರ ಮೇಲೆ ಅವರು ಆಕ್ರಮಣ ಮಾಡಬಹುದು. ಹೇಳು: 'ಅದಕ್ಕಿಂತ ದೋಷಕರವಾದುದರ ಕುರಿತು ನಾನು ನಿಮಗೆ ಹೇಳಿಕೊಡಲೇ? ಅದು ನರಕವಾಗಿದೆ. ಅವಿಶ್ವಾಸಿಗಳಿಗೆ ಅದನ್ನು ಅಲ್ಲಾಹನು ವಾಗ್ದಾನ ಮಾಡಿರುವನು. ಅದು ಬಲುಕೆಟ್ಟ ವಾಸಸ್ಥಳವಾಗಿದೆ.'

يَٰٓأَيُّهَا ٱلنَّاسُ ضُرِبَ مَثَلٌ فَٱسْتَمِعُوا۟ لَهُۥٓ ۚ إِنَّ ٱلَّذِينَ تَدْعُونَ مِن دُونِ ٱللَّهِ لَن يَخْلُقُوا۟ ذُبَابًا وَلَوِ ٱجْتَمَعُوا۟ لَهُۥ ۖ وَإِن يَسْلُبْهُمُ ٱلذُّبَابُ شَيْـًٔا لَّا يَسْتَنقِذُوهُ مِنْهُ ۚ ضَعُفَ ٱلطَّالِبُ وَٱلْمَطْلُوبُ ﴿٧٤﴾

**74.** ಎಲೈ ಜನರೇ, ನಿಮಗೊಂದು ಉದಾಹರಣೆ ನೀಡಲಾಗುತ್ತದೆ. ನೀವು ಅದನ್ನು ಗಮನವಿಟ್ಟು ಕೇಳಿರಿ. ಅಲ್ಲಾಹನನ್ನು ಬಿಟ್ಟು ನೀವು ಯಾರನ್ನೆಲ್ಲ ಕರೆದು ಪ್ರಾರ್ಥಿಸುತ್ತಿರುವಿರೋ, ಅವರು ಒಂದು ನೊಣವನ್ನಾಗಲಿ ಸೃಷ್ಟಿಸಲಾರರು - ಅದಕ್ಕೋಸ್ಕರ ಅವರೆಲ್ಲರೂ ಒಂದುಗೂಡಿದರೆ ಕೂಡ. ಅವರಿಂದ ನೊಣವು ಏನನ್ನಾದರೂ ಕಸಿದುಕೊಂಡು ಹೋದರೆ ಅದರಿಂದ (ಆ ನೊಣದಿಂದ) ಅವರು ಅದನ್ನು ಮರಳಿ ಪಡೆಯಲಾರರು. ಪ್ರಾರ್ಥಿಸುವವನೂ ಪ್ರಾರ್ಥಿಸಲ್ಪಡುವವನೂ ಇಬ್ಬರೂ ಬಲಹೀನರೇ.

مَا قَدَرُوا اللّٰهَ حَقَّ قَدْرِهٖ ۚ اِنَّ اللّٰهَ
لَقَوِيٌّ عَزِيْزٌ ﴿٧٥﴾

**75.** ಅಲ್ಲಾಹನ ಗುಣಗಳನ್ನು ಅವುಗಳ ಅರ್ಹತೆಗೆ ತಕ್ಕಂತೆ ಅವರು ಮನಗಾಣಲಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಸರ್ವಸಮರ್ಥನೂ ಪ್ರತಾಪಶಾಲಿಯೂ ಆಗಿದ್ದಾನೆ.

اَللّٰهُ يَصْطَفِيْ مِنَ الْمَلٰٓئِكَةِ رُسُلًا وَّمِنَ
النَّاسِ ۚ اِنَّ اللّٰهَ سَمِيْعٌۢ بَصِيْرٌ ﴿٧٦﴾

**76.** ಅಲ್ಲಾಹನು ದೇವದೂತರಿಂದಲೂ (ಮಲಾಯಿಕ) ಮನುಷ್ಯರಿಂದಲೂ ಸಂದೇಶವಾಹಕರನ್ನು ಆಯ್ಕೆ ಮಾಡುತ್ತಾನೆ. ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

يَعْلَمُ مَا بَيْنَ اَيْدِيْهِمْ وَمَا خَلْفَهُمْ ۚ وَ
اِلَى اللّٰهِ تُرْجَعُ الْاُمُوْرُ ﴿٧٧﴾

**77.** ಅವರ ಹಿಂದೆ ಇರುವುದನ್ನೂ ಅವರ ಮುಂದೆ ಇರುವುದನ್ನೂ ಅವನು ತಿಳಿಯುತ್ತಾನೆ. ಎಲ್ಲ ಕಾರ್ಯಗಳು ಅಲ್ಲಾಹನ ಬಳಿಗೇ ಮರಳಿಸಲ್ಪಡುವುವು.

يٰٓاَيُّهَا الَّذِيْنَ اٰمَنُوا ارْكَعُوْا وَ
اسْجُدُوْا وَاعْبُدُوْا رَبَّكُمْ وَافْعَلُوا
الْخَيْرَ لَعَلَّكُمْ تُفْلِحُوْنَ ﴿٧٨﴾

**78.** ಎಲೈ ವಿಶ್ವಾಸಿಗಳೇ, ನೀವು (ಅಲ್ಲಾಹನ ಮುಂದೆ) ಬಾಗಿರಿ, ಸಾಷ್ಟಾಂಗವೆರಗಿರಿ, ನಿಮ್ಮ ಪ್ರಭುವನ್ನು ಆರಾಧಿಸಿರಿ ಮತ್ತು ಸತ್ಕರ್ಮಗಳನ್ನು ಮಾಡಿರಿ- ನೀವು ವಿಜಯಗಳಿಸಲಿಕ್ಕಾಗಿ.

وَجَاهِدُوْا فِي اللّٰهِ حَقَّ جِهَادِهٖ ۚ هُوَ
اجْتَبٰىكُمْ وَمَا جَعَلَ عَلَيْكُمْ فِي الدِّيْنِ
مِنْ حَرَجٍ ۚ مِلَّةَ اَبِيْكُمْ اِبْرٰهِيْمَ ۚ
هُوَ سَمّٰىكُمُ الْمُسْلِمِيْنَ ۙ مِنْ قَبْلُ
وَفِيْ هٰذَا لِيَكُوْنَ الرَّسُوْلُ شَهِيْدًا
عَلَيْكُمْ وَتَكُوْنُوْا شُهَدَآءَ عَلَى
النَّاسِ ۖ فَاَقِيْمُوا الصَّلٰوةَ وَاٰتُوا
الزَّكٰوةَ وَاعْتَصِمُوْا بِاللّٰهِ ۚ هُوَ
مَوْلٰىكُمْ ۚ فَنِعْمَ الْمَوْلٰى وَنِعْمَ
النَّصِيْرُ ﴿٧٩﴾

**79.** ಅಲ್ಲಾಹನ ಮಾರ್ಗದಲ್ಲಿ ಶ್ರಮಪಡಬೇಕಾದ ರೀತಿಯಲ್ಲೇ ನೀವು ಶ್ರಮಪಡಿರಿ. ಅವನೇ ನಿಮ್ಮನ್ನು ಆಯ್ಕೆ ಮಾಡಿದ್ದಾನೆ. ಅವನು ನಿಮಗೆ ಧರ್ಮಾಚರಣೆಯನ್ನು ಕ್ಲಿಷ್ಟಕರವನ್ನಾಗಿ ಮಾಡಲಿಲ್ಲ - ನಿಮ್ಮ ಪಿತಾಮಹನಾದ ಇಬ್‌ರಾಹೀಮರ ಧರ್ಮ. ಅವನು (ಅಲ್ಲಾಹನು) ಇದಕ್ಕೆ ಮುಂಚೆ ಮತ್ತು ಈ ಗ್ರಂಥದಲ್ಲಿ ನಿಮಗೆ 'ಮುಸ್ಲಿಮರು' ಎಂದು ಹೆಸರಿಟ್ಟಿರುವನು. ಈ ಸಂದೇಶವಾಹಕನು ನಿಮಗೆ ಸಾಕ್ಷಿಯಾಗಲಿಕ್ಕೂ ನೀವು ಮನುಷ್ಯಕುಲಕ್ಕೆ ಸಾಕ್ಷಿಯಾಗಲಿಕ್ಕೂ (ಹೀಗೆ ಮಾಡಲಾಗಿದೆ). ಆದುದರಿಂದ ನೀವು ನಮಾಝುನ್ನು ನಿಷ್ಠೆಯಿಂದ ನಿರ್ವಹಿಸಿರಿ; ಝಕಾತ್ ನೀಡಿರಿ ಮತ್ತು ಅಲ್ಲಾಹನನ್ನು ಬಿಗಿಯಾಗಿ ಹಿಡಿಯಿರಿ. ಅವನೇ ನಿಮ್ಮ ಯಜಮಾನ. ಅತಿ ಶ್ರೇಷ್ಠ ಯಜಮಾನ ! ಅತ್ಯುತ್ತಮ ಸಹಾಯಕ!

سورة المؤمنون مكية وهي مع البسملة مائة وتسع عشرة آية وست ركوعات

## 23. ಅಲ್‌ಮುಅ್‌ಮಿನೂನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 119 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

| | |
|---|---|
| **1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** | بِسْمِ اللّٰهِ الرَّحْمٰنِ الرَّحِيْمِ ① |
| **2. ಖಂಡಿತವಾಗಿಯೂ ಆ ಸತ್ಯವಿಶ್ವಾಸಿಗಳು ಜಯ ಗಳಿಸಿದರು.** | قَدْ اَفْلَحَ الْمُؤْمِنُوْنَ ② |
| **3. ಅವರು ತಮ್ಮ ನಮಾಝಿನಲ್ಲಿ ವಿನಮ್ರರಾಗಿರು ತ್ತಾರೆ.** | الَّذِيْنَ هُمْ فِيْ صَلَاتِهِمْ خَاشِعُوْنَ ③ |
| **4. ಅವರು ನಿಷ್ಪ್ರಯೋಜಕವಾದ ಸಂಗತಿಗಳಿಂದೆಲ್ಲ ದೂರವಿದ್ದುಕೊಳ್ಳುತ್ತಾರೆ.** | وَالَّذِيْنَ هُمْ عَنِ اللَّغْوِ مُعْرِضُوْنَ ④ |
| **5. ಅವರು ಸರಿಯಾದ ಕ್ರಮದಲ್ಲಿ ಝಕಾತ್ ನೀಡು ತ್ತಾರೆ.** | وَالَّذِيْنَ هُمْ لِلزَّكٰوةِ فَاعِلُوْنَ ⑤ |
| **6. ಅವರು ತಮ್ಮ ಗುಪ್ತಾಂಗಗಳನ್ನು ಕಾಪಾಡು ತ್ತಾರೆ.** | وَالَّذِيْنَ هُمْ لِفُرُوْجِهِمْ حٰفِظُوْنَ ⑥ |
| **7. ತಮ್ಮ ಪತ್ನಿಯರೊಂದಿಗೆ ಅಥವಾ ತಮ್ಮ ಬಲಗೈಯ ಅಧೀನಕ್ಕೊಳಗಾದವರೊಡನೆ ಹೊರತು.[348] ಹಾಗೆ ಅವರು ಆಕ್ಷೇಪಕ್ಕೆ ಗುರಿಯಾಗುವುದಿಲ್ಲ.** | اِلَّا عَلٰٓى اَزْوَاجِهِمْ اَوْ مَا مَلَكَتْ اَيْمَانُهُمْ فَاِنَّهُمْ غَيْرُ مَلُوْمِيْنَ ⑦ |

348. مَا مَلَكَتْ اَيْمَانُهُمْ (ಮಾ ಮಲಕತ್ ಐಮಾನುಹುಂ) = ತಮ್ಮ ಬಲಗೈಯ ಅಧೀನಕ್ಕೊಳಗಾದವರು. ಅಂದರೆ, ತಮ್ಮ ಅಧೀನದಲ್ಲಿರುವ ಗುಲಾಮ ಸ್ತ್ರೀಯರು ಅಥವಾ ಯುದ್ಧ ಕೈದಿಗಳಾದ ಸ್ತ್ರೀಯರು ಎಂದು ತಾತ್ಪರ್ಯ. ಅವರನ್ನು ವಿವಾಹಮಾಡಿಕೊಳ್ಳಬಹುದಾಗಿದೆ.

ಮೇಲಿನ ವಚನದಲ್ಲಿ "ತಮ್ಮ ಬಲಗೈಯ ಅಧೀನಕ್ಕೊಳಗಾದ ಸ್ತ್ರೀಯರು" ಎಂಬುದರ ತಾತ್ಪರ್ಯ, ತಾವು ವಿವಾಹವಾದ ಗುಲಾಮ ಸ್ತ್ರೀಯರೆಂದಾಗಿದೆ. ಬದಲು, ವಿವಾಹವಾಗದೆಯೇ ಅವರೊಡನೆ ಲೈಂಗಿಕ ಸಂಪರ್ಕ ಹೊಂದಬಹುದೆಂದಲ್ಲ.

ಗುಲಾಮ ಸ್ತ್ರೀಯರನ್ನು ಅವಿವಾಹಿತರನ್ನಾಗಿಯೇ ಉಳಿಸಿಕೊಳ್ಳುವುದು ಸಾಮಾಜಿಕ ಅನಾಹುತಕ್ಕೆ ಕಾರಣವಾಗುವುದರಿಂದ ಅವರಿಗೆ ವಿವಾಹವೇರ್ಪಡಿಸಬೇಕೆಂದು ಖುರ್‌ಆನ್ ಹೇಳುತ್ತದೆ (24 : 33,34). ಹಾಗೆಯೇ ಸ್ವತಂತ್ರ ಸ್ತ್ರೀಯರನ್ನು ವಿವಾಹವಾಗಲು ಸಾಮರ್ಥ್ಯವಿಲ್ಲದವರು ಗುಲಾಮ ಸ್ತ್ರೀಯರನ್ನು ವಿವಾಹವಾಗಬೇಕೆಂದೂ ಖುರ್‌ಆನ್ ಹೇಳುತ್ತದೆ (4 : 26). ಗುಲಾಮ ಸ್ತ್ರೀಯ ರೊಡನೆ ವಿವಾಹವಾಗದೆ ಲೈಂಗಿಕ ಸಂಪರ್ಕ ಹೊಂದಬಾರದೆಂದು ಈ ಎರಡು ವಚನಗಳಿಂದ ಸ್ಪಷ್ಟವಾಗುತ್ತದೆ. ಅಂದರೆ, ವಿವಾಹೇತರ ದಾಸಿ ಸಂಪ್ರದಾಯ ಇಸ್ಲಾಮಿನಲ್ಲಿಲ್ಲ. (ಅಧ್ಯಾಯ - 4 ವಚನ 25ರ ಟಿಪ್ಪಣಿ ನೋಡಿರಿ. ಹೆಚ್ಚಿನ ವಿವರಣೆಗೆ ತಫ್‌ಸೀರ್ ಕಬೀರ್ ಓದಿರಿ).

8. ಆದರೆ ಅದನ್ನು ಮೀರಿ ಯಾರಾದರೂ ಇಚ್ಛಿಸಿದರೆ ಅವರು ಆಜ್ಞೋಲ್ಲಂಘಕರಾಗುತ್ತಾರೆ.

فَمَنِ ابْتَغٰى وَرَآءَ ذٰلِكَ فَاُولٰٓئِكَ هُمُ الْعٰدُوْنَ ﴿٨﴾

9. ಅವರು (ಆ ಸತ್ಯವಿಶ್ವಾಸಿಗಳು) ತಮ್ಮ ಅಮಾನತ್ತು ಮತ್ತು ಒಡಂಬಡಿಕೆಗಳ ಬಗ್ಗೆ ಲಕ್ಷ್ಯವುಳ್ಳವರು;

وَالَّذِيْنَ هُمْ لِاَمٰنٰتِهِمْ وَعَهْدِهِمْ رٰعُوْنَ ﴿٩﴾

10. ಅವರು ತಮ್ಮ ನಮಾಝ್‌ಗಳ ಅನುಷ್ಠಾನವನ್ನು ಶ್ರದ್ಧೆಯಿಂದ ಕಾಪಾಡಿಕೊಳ್ಳುತ್ತಾರೆ.

وَالَّذِيْنَ هُمْ عَلٰى صَلَوٰتِهِمْ يُحَافِظُوْنَ ﴿١٠﴾

11. ಅವರೇ ನಿಜವಾದ ವಾರೀಸುದಾರರು -

اُولٰٓئِكَ هُمُ الْوٰرِثُوْنَ ﴿١١﴾

12. ಅವರು ಸ್ವರ್ಗದ ಹಕ್ಕುದಾರರಾಗುವರು. ಅಲ್ಲೇ ಅವರು ಶಾಶ್ವತವಾಗಿ ನೆಲೆಸುವರು.

الَّذِيْنَ يَرِثُوْنَ الْفِرْدَوْسَ ؕ هُمْ فِيْهَا خٰلِدُوْنَ ﴿١٢﴾

13. ದಿಟವಾಗಿಯೂ ನಾವು ಮನುಷ್ಯನನ್ನು ಆವೆಮಣ್ಣಿನ ಸತ್ವದಿಂದ ಸೃಷ್ಟಿಸಿದ್ದೇವೆ.

وَلَقَدْ خَلَقْنَا الْاِنْسَانَ مِنْ سُلٰلَةٍ مِّنْ طِيْنٍ ﴿١٣﴾

14. ಅನಂತರ ನಾವು ಅದನ್ನು ವೀರ್ಯರೂಪದಲ್ಲಿ ಸುಭದ್ರವಾದೊಂದು ಸ್ಥಳದಲ್ಲಿರಿಸಿದೆವು.

ثُمَّ جَعَلْنٰهُ نُطْفَةً فِيْ قَرَارٍ مَّكِيْنٍ ﴿١٤﴾

15. ಅನಂತರ ನಾವು ಆ ವೀರ್ಯವನ್ನು ಅಂಟಿಕೊಳ್ಳುವ ವಸ್ತುವನ್ನಾಗಿ ಮಾಡಿದೆವು. ಅನಂತರ ಆ ಅಂಟಿಕೊಳ್ಳುವ ವಸ್ತುವನ್ನು (ಆಕಾರ ರಹಿತವಾದ) ಮಾಂಸ ಮುದ್ದೆಯನ್ನಾಗಿ ಮಾಡಿದೆವು. ಅನಂತರ ಆ ಮಾಂಸ ಮುದ್ದೆಯನ್ನು ಅಸ್ಥಿಗಳನ್ನಾಗಿ ರೂಪಾಂತರ ಗೊಳಿಸಿದೆವು. ಅನಂತರ ಮಾಂಸದಿಂದ ಎಲುಬುಗಳನ್ನು ಮುಚ್ಚಿದೆವು. ಅನಂತರ ನಾವು ಅದನ್ನು ಇನ್ನೊಂದು ಸೃಷ್ಟಿಯಾಗಿ ಮಾರ್ಪಡಿಸಿದೆವು. ಹೀಗೆ ಅತ್ಯುತ್ತಮವಾಗಿ ಸೃಷ್ಟಿಸುವ ಅಲ್ಲಾಹನು ಅನುಗ್ರಹಪೂರ್ಣನಾಗಿದ್ದಾನೆ.

ثُمَّ خَلَقْنَا النُّطْفَةَ عَلَقَةً فَخَلَقْنَا الْعَلَقَةَ مُضْغَةً فَخَلَقْنَا الْمُضْغَةَ عِظٰمًا فَكَسَوْنَا الْعِظٰمَ لَحْمًا ۚ ثُمَّ اَنْشَاْنٰهُ خَلْقًا اٰخَرَ ؕ فَتَبٰرَكَ اللّٰهُ اَحْسَنُ الْخٰلِقِيْنَ ﴿١٥﴾





16. ಮತ್ತೆ, ಖಂಡಿತವಾಗಿಯೂ ಆ ಬಳಿಕ ನೀವು ಮೃತರಾಗುವಿರಿ.

ثُمَّ اِنَّكُمْ بَعْدَ ذٰلِكَ لَمَيِّتُوْنَ ﴿١٦﴾

17. ಆ ಮೇಲೆ, ದಿಟವಾಗಿಯೂ ಪುನರುತ್ಥಾನ ದಿನದಂದು ನೀವು ಎಬ್ಬಿಸಲ್ಪಡುವಿರಿ.

ثُمَّ اِنَّكُمْ يَوْمَ الْقِيٰمَةِ تُبْعَثُوْنَ ﴿١٧﴾

18. ನಾವು ನಿಮ್ಮ ಮೇಲ್ಗಡೆ (ಪದವಿಗಳ) ಏಳು (ಆಧ್ಯಾತ್ಮಿಕ) ಮಾರ್ಗಗಳನ್ನು ಸೃಷ್ಟಿಸಿದ್ದೇವೆ. ನಾವು ಸೃಷ್ಟಿಯ ಬಗ್ಗೆ ನಿರ್ಲಕ್ಷ್ಯರಲ್ಲ.

وَلَقَدْ خَلَقْنَا فَوْقَكُمْ سَبْعَ طَرَآئِقَ ۖ وَمَا كُنَّا عَنِ الْخَلْقِ غٰفِلِيْنَ ﴿١٨﴾

19. ನಾವು ಆಕಾಶದಿಂದ ತಕ್ಕ ಪ್ರಮಾಣದಲ್ಲಿ ಜಲವನ್ನು ಸುರಿಸಿ ಅನಂತರ ಅದನ್ನು ಭೂಮಿಯಲ್ಲಿ ನಿಲ್ಲಿಸಿದೆವು. ಖಂಡಿತವಾಗಿಯೂ ಅದನ್ನು ತೆಗೆದು ಬಿಡಲಿಕ್ಕೂ ನಾವು ಸಮರ್ಥರು.

وَاَنْزَلْنَا مِنَ السَّمَآءِ مَآءًۢ بِقَدَرٍ فَاَسْكَنّٰهُ فِي الْاَرْضِ ۖ وَاِنَّا عَلٰى ذَهَابٍۢ بِهٖ لَقٰدِرُوْنَ ﴿١٩﴾

20. ಹಾಗೆ ಅದರ (ನೀರಿನ) ಮೂಲಕ ನಾವು ನಿಮಗೋಸ್ಕರ ಖರ್ಜೂರ ಮತ್ತು ದ್ರಾಕ್ಷೆಯ ತೋಟಗಳನ್ನು ಸೃಷ್ಟಿಸಿದೆವು. ಅವುಗಳಲ್ಲಿ ನಿಮಗೋಸ್ಕರ ಧಾರಾಳ ಹಣ್ಣು ಹಂಪಲುಗಳಿವೆ. ಅವುಗಳಿಂದ ನೀವು ತಿನ್ನುತ್ತೀರಿ.

فَاَنْشَاْنَا لَكُمْ بِهٖ جَنّٰتٍ مِّنْ نَّخِيْلٍ وَّاَعْنَابٍ ۘ لَكُمْ فِيْهَا فَوَاكِهُ كَثِيْرَةٌ وَّمِنْهَا تَاْكُلُوْنَ ﴿٢٠﴾

21. ಸೀನಾಯ್ ಪರ್ವತದಲ್ಲಿ ಬೆಳೆಯುವ ಒಂದು ವೃಕ್ಷವನ್ನು ಸಹ (ನಾವು ಸೃಷ್ಟಿಸಿದೆವು). ಅದು ಎಣ್ಣೆಯನ್ನು ಉತ್ಪಾದಿಸುತ್ತದೆ; ಉಣ್ಣುವವರಿಗೆ ರುಚಿಕರವಾದ ಪದಾರ್ಥವನ್ನು ಸಹ.

وَشَجَرَةً تَخْرُجُ مِنْ طُوْرِ سَيْنَآءَ تَنْۢبُتُ بِالدُّهْنِ وَصِبْغٍ لِّلْاٰكِلِيْنَ ﴿٢١﴾

22. ನಿಶ್ಚಯವಾಗಿಯೂ ಜಾನುವಾರುಗಳಲ್ಲಿ (ಸಹ) ನಿಮಗೊಂದು ಬುದ್ಧಿವಾದದ ಪಾಠವಿದೆ. ಅವುಗಳ ಹೊಟ್ಟೆಯಲ್ಲಿ ಇರುವ ವಸ್ತುವಿನಿಂದ (ಹಾಲಿನಿಂದ) ನಾವು ನಿಮಗೆ ಕುಡಿಸುತ್ತೇವೆ. ಅವುಗಳಿಂದ ನಿಮಗೆ ಅನೇಕ ಪ್ರಯೋಜನಗಳಿವೆ. ನೀವು ಅವುಗಳ ಮಾಂಸವನ್ನೂ ತಿನ್ನುತ್ತೀರಿ.

وَاِنَّ لَكُمْ فِي الْاَنْعَامِ لَعِبْرَةً ؕ نُسْقِيْكُمْ مِّمَّا فِيْ بُطُوْنِهَا وَلَكُمْ فِيْهَا مَنَافِعُ كَثِيْرَةٌ وَّمِنْهَا تَاْكُلُوْنَ ﴿٢٢﴾

**23.** ಅವುಗಳ ಮೇಲೂ ಹಡಗುಗಳಲ್ಲೂ ನೀವು ಸವಾರಿ ಮಾಡುತ್ತೀರಿ.

وَعَلَيْهَا وَعَلَى الْفُلْكِ تُحْمَلُونَ ﴿٢٢﴾

**24.** ನಾವು ನೂಹ್‌ರನ್ನು ಅವರ ಜನರ ಬಳಿಗೆ ಕಳುಹಿಸಿದ್ದೆವು. ಅವರು ಹೇಳಿದರು: 'ಎಲೈ ನನ್ನ ಜನರೇ, ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ದೇವನಿಲ್ಲ. ನೀವೇನು ಭಯಭಕ್ತಿ ತೋರಿಸುವುದಿಲ್ಲವೇ?'

وَلَقَدْ أَرْسَلْنَا نُوحًا إِلَىٰ قَوْمِهِ فَقَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۚ أَفَلَا تَتَّقُونَ ﴿٢٣﴾

**25.** ಆಗ ಅವರ ಜನರ ಪೈಕಿ ಅವಿಶ್ವಾಸಿಗಳಾದ ಮುಖಂಡರು ಹೇಳಿದರು: 'ಇವನು ನಿಮ್ಮಂತಹ ಒಬ್ಬ ಮನುಷ್ಯನೇ ಆಗಿದ್ದಾನೆ. ಇವನು ನಿಮಗಿಂತ ಶ್ರೇಷ್ಠನಾಗಲಿಕ್ಕೆ ಬಯಸುತ್ತಾನೆ. ಹಾಗೇನಾದರೂ ಅಲ್ಲಾಹನು (ಪ್ರವಾದಿಯನ್ನು ಕಳುಹಿಸಲು) ಬಯಸಿದ್ದರೆ ದೇವದೂತರನ್ನೇ ಇಳಿಸುತ್ತಿದ್ದನು. ಇಂತಹ ಸಂಗತಿ ನಾವು ನಮ್ಮ ಪೂರ್ವಿಕರಾದ ತಂದೆ ತಾತಂದಿರಿಂದ ಕೇಳಿಲ್ಲ.

فَقَالَ الْمَلَأُ الَّذِينَ كَفَرُوا مِن قَوْمِهِ مَا هَٰذَا إِلَّا بَشَرٌ مِّثْلُكُمْ يُرِيدُ أَن يَتَفَضَّلَ عَلَيْكُمْ وَلَوْ شَاءَ اللَّهُ لَأَنزَلَ مَلَائِكَةً مَّا سَمِعْنَا بِهَٰذَا فِي آبَائِنَا الْأَوَّلِينَ ﴿٢٤﴾

**26.** 'ಅವನು ಹುಚ್ಚು ಹಿಡಿದ ಒಬ್ಬ ಮನುಷ್ಯನಾಗಿದ್ದಾನೆ. ಆದ್ದರಿಂದ ಅವನ ಬಗ್ಗೆ ಸ್ವಲ್ಪ ಕಾಲ ನೀವು ಕಾಯುತ್ತಾ ಇರಿ.'

إِنْ هُوَ إِلَّا رَجُلٌ بِهِ جِنَّةٌ فَتَرَبَّصُوا بِهِ حَتَّىٰ حِينٍ ﴿٢٥﴾

**27.** ಅವರು (ನೂಹ್) ಹೇಳಿದರು: 'ಓ ನನ್ನ ಪ್ರಭೂ, ನನಗೆ ಸಹಾಯ ಮಾಡು. ಏಕೆಂದರೆ ಇವರು ನನ್ನನ್ನು ಸುಳ್ಳುಗಾರನನ್ನಾಗಿ ಮಾಡಿದ್ದಾರೆ.'

قَالَ رَبِّ انصُرْنِي بِمَا كَذَّبُونِ ﴿٢٦﴾

**28.** ಆಗ ನಾವು ಅವರಿಗೆ (ನೂಹ್‌ರಿಗೆ) ಹೀಗೆ ದಿವ್ಯ ಸಂದೇಶ ನೀಡಿದೆವು: ''ಆ ನೌಕೆಯನ್ನು ನಮ್ಮ ಕಣ್ಣೆದುರಲ್ಲಿ ಮತ್ತು ನಾವು ಅರುಹಿದಂತೆ ನಿರ್ಮಿಸು. ನಮ್ಮ ಆಜ್ಞೆಯಾದಾಗ ಮತ್ತು ನೀರಿನ ಒರತೆಗಳು ಉಕ್ಕಿ ಹರಿಯುವಾಗ ನೀನು ಅದರೊಳಗೆ (ನಾವು ನಿರ್ದೇಶಿಸಿದ) ಪ್ರತಿಯೊಂದು ಜಾತಿಯ (ಜೀವಿಗಳಲ್ಲಿ) ಒಂದೊಂದು ಗಂಡು - ಹೆಣ್ಣು ಜೋಡಿಯನ್ನು ಮತ್ತು ನಿನ್ನ ಕುಟುಂಬದವರನ್ನು - ಯಾರ ಬಗ್ಗೆ ಮುಂಚಿತವಾಗಿಯೇ ಹೇಳಲ್ಪಟ್ಟಿದೆಯೋ ಅವರನ್ನು ಹೊರತು - ಅದರೊಳಗೆ ಸೇರಿಸಿ

فَأَوْحَيْنَا إِلَيْهِ أَنِ اصْنَعِ الْفُلْكَ بِأَعْيُنِنَا وَوَحْيِنَا فَإِذَا جَاءَ أَمْرُنَا وَفَارَ التَّنُّورُ ۙ فَاسْلُكْ فِيهَا مِن كُلٍّ زَوْجَيْنِ اثْنَيْنِ وَأَهْلَكَ إِلَّا مَن سَبَقَ عَلَيْهِ الْقَوْلُ





ಕೋ. ದುಷ್ಕರ್ಮವೆಸಗಿದವರ ಬಗ್ಗೆ ನೀನು ನನ್ನೊಡನೆ ಏನೂ ಪ್ರಸ್ತಾಪಿಸಬೇಡ. ಖಂಡಿತವಾಗಿಯೂ ಅವರು ಮುಳುಗಿಸಲ್ಪಡುವರು.

مِنْهُمْ ۖ وَلَا تُخَاطِبْنِي فِي الَّذِينَ ظَلَمُوا ۖ إِنَّهُم مُّغْرَقُونَ ﴿٢٧﴾

**29.** ''ನೀನು ಮತ್ತು ನಿನ್ನ ಜೊತೆಯಲ್ಲಿರುವವರು ನೌಕೆಯಲ್ಲಿ ಕುಳಿತುಕೊಂಡ ಬಳಿಕ, 'ದೌರ್ಜನ್ಯಗಾರರಾದ ಜನರಿಂದ ನಮ್ಮನ್ನು ಪಾರುಮಾಡಿದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು ಸಲ್ಲುತ್ತವೆ' ಎಂದು ಹೇಳು.

فَإِذَا اسْتَوَيْتَ أَنتَ وَمَن مَّعَكَ عَلَى الْفُلْكِ فَقُلِ الْحَمْدُ لِلَّهِ الَّذِي نَجَّانَا مِنَ الْقَوْمِ الظَّالِمِينَ ﴿٢٨﴾

**30.** ''ಮತ್ತೆ ಹೀಗೆ ಹೇಳು: 'ನನ್ನ ಪ್ರಭೂ, ನೀನು ನನ್ನನ್ನು ಅನುಗ್ರಹೀತವಾದ ಸ್ಥಳದಲ್ಲಿ ದಡಸೇರಿಸು. ನೀನು (ಜನರನ್ನು) ಗುರಿಮುಟ್ಟಿಸುವವರಲ್ಲಿ ಅತ್ಯುತ್ತಮನಾಗಿರುವೆ.''

وَقُل رَّبِّ أَنزِلْنِي مُنزَلًا مُّبَارَكًا وَأَنتَ خَيْرُ الْمُنزِلِينَ ﴿٢٩﴾

**31.** ಖಂಡಿತವಾಗಿಯೂ ಇದರಲ್ಲಿ (ಈ ಘಟನೆಯಲ್ಲಿ) ಹಲವು ದೃಷ್ಟಾಂತಗಳಿವೆ. ನಿಶ್ಚಯವಾಗಿಯೂ ನಾವು ಸದಾ (ಜನರನ್ನು) ಪರೀಕ್ಷಿಸುತ್ತಾ ಇರುತ್ತೇವೆ.

إِنَّ فِي ذَٰلِكَ لَآيَاتٍ وَإِن كُنَّا لَمُبْتَلِينَ ﴿٣٠﴾

**32.** ಅನಂತರ ನಾವು ಅವರ ಬಳಿಕ ಮತ್ತೊಂದು ಜನಾಂಗವನ್ನು ಸೃಷ್ಟಿಸಿದೆವು.

ثُمَّ أَنشَأْنَا مِن بَعْدِهِمْ قَرْنًا آخَرِينَ ﴿٣١﴾

**33.** ಆಮೇಲೆ ಅವರಿಂದಲೇ ಓರ್ವ ಸಂದೇಶವಾಹಕನನ್ನು ಅವರ ಬಳಿಗೆ ನಾವು (ಈ ಸಂದೇಶದೊಂದಿಗೆ) ಕಳುಹಿಸಿದೆವು: 'ನೀವು ಅಲ್ಲಾಹನನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಬೇರೆ ದೇವನಿಲ್ಲ. ನೀವೇನು ಭಯಭಕ್ತಿ ತೋರಿಸುವುದಿಲ್ಲವೇ?'

فَأَرْسَلْنَا فِيهِمْ رَسُولًا مِّنْهُمْ أَنِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۖ أَفَلَا تَتَّقُونَ ﴿٣٢﴾

**34.** ಆ ಸಂದೇಶವಾಹಕನ ಜನರ ಪೈಕಿ ಅವಿಶ್ವಾಸಿಗಳಾದ ಮತ್ತು ಪರಲೋಕದಲ್ಲಿ (ಅಲ್ಲಾಹನ) ಭೇಟಿಯನ್ನು ಅಲ್ಲಗಳೆಯುವ ಮುಖಂಡರು - ಅವರಿಗೆ ನಾವು ಐಹಿಕ ಜೀವನದಲ್ಲಿ ಸುಖ ಸೌಕರ್ಯಗಳನ್ನು ದಯಪಾಲಿಸಿದ್ದೇವೆ - ಹೇಳಿದರು: 'ಇವನು ನಿಮ್ಮ ಹಾಗೆಯೇ

وَقَالَ الْمَلَأُ مِن قَوْمِهِ الَّذِينَ كَفَرُوا وَكَذَّبُوا بِلِقَاءِ الْآخِرَةِ وَأَتْرَفْنَاهُمْ فِي الْحَيَاةِ الدُّنْيَا مَا هَٰذَا إِلَّا بَشَرٌ مِّثْلُكُمْ يَأْكُلُ مِمَّا تَأْكُلُونَ مِنْهُ وَ

يَشْرَبُ مِمَّا تَشْرَبُونَ ﴿٣٤﴾

ಒಬ್ಬ ಮನುಷ್ಯನಾಗಿದ್ದಾನೆ. ನೀವು ತಿನ್ನುವಂಥದ್ದನ್ನೇ ಇವನು ಸಹ ತಿನ್ನುತ್ತಾನೆ. ನೀವು ಕುಡಿಯುವಂಥದ್ದನ್ನೇ ಇವನು ಸಹ ಕುಡಿಯುತ್ತಾನೆ.

وَلَئِنْ أَطَعْتُمْ بَشَرًا مِّثْلَكُمْ إِنَّكُمْ
إِذًا لَّخٰسِرُونَ ﴿٣٥﴾

**35.** 'ನೀವು ನಿಮ್ಮಂತಹ ಒಬ್ಬ ಮನುಷ್ಯನಿಗೆ ವಿಧೇಯರಾದರೆ, ಖಂಡಿತವಾಗಿಯೂ ನೀವು ಹಾನಿಗೊಳಗಾಗುವಿರಿ.

أَيَعِدُكُمْ أَنَّكُمْ إِذَا مِتُّمْ وَكُنْتُمْ
تُرَابًا وَّعِظَامًا أَنَّكُمْ مُّخْرَجُونَ ﴿٣٦﴾

**36.** 'ನೀವು ಮೃತಪಟ್ಟು ಮಣ್ಣು ಮತ್ತು ಅಸ್ಥಿಗಳಾಗಿ ಮಾರ್ಪಟ್ಟರೆ (ಪುನಃ ನಿಮ್ಮನ್ನು ಬದುಕಿಸಿ) ಹೊರಗೆ ತರಲಾಗುವುದೆಂದು ಅವನು ನಿಮಗೆ ವಾಗ್ದಾನ ಮಾಡುತ್ತಿರುವನೇ?

هَيْهَاتَ هَيْهَاتَ لِمَا تُوعَدُونَ ﴿٣٧﴾

**37.** 'ಬಲು ದೂರ! ನಿಮಗೆ ನೀಡಲ್ಪಟ್ಟ ವಾಗ್ದಾನ (ಸತ್ಯದಿಂದ) ಬಹಳ ದೂರ!

إِنْ هِيَ إِلَّا حَيَاتُنَا الدُّنْيَا نَمُوتُ
وَنَحْيَا وَمَا نَحْنُ بِمَبْعُوثِينَ ﴿٣٨﴾

**38.** 'ನಮ್ಮ ಇಹಲೋಕ ಜೀವನದ ಹೊರತು ಬೇರೆ ಜೀವನವಿಲ್ಲ. ನಾವು (ಇಲ್ಲಿಯೇ) ಸಾಯುತ್ತೇವೆ; (ಇಲ್ಲಿಯೇ) ಬದುಕುತ್ತೇವೆ. ನಾವು ಪುನಃ ಜೀವಂತಗೊಳಿಸಲ್ಪಡಲಾರೆವು.

إِنْ هُوَ إِلَّا رَجُلٌ افْتَرَىٰ عَلَى اللَّهِ كَذِبًا
وَّمَا نَحْنُ لَهُ بِمُؤْمِنِينَ ﴿٣٩﴾

**39.** 'ಅವನು ಅಲ್ಲಾಹನ ಬಗ್ಗೆ ಸುಳ್ಳು ಸೃಷ್ಟಿಸಿ ಹೇಳುವ ಒಬ್ಬ ಮನುಷ್ಯನಾಗಿದ್ದಾನೆ. ನಾವೆಂದಿಗೂ ಅವನ ಮಾತನ್ನು ನಂಬಲಾರೆವು'.

قَالَ رَبِّ انْصُرْنِي بِمَا كَذَّبُونِ ﴿٤٠﴾

**40.** ಅವರು (ಪ್ರವಾದಿ) ಹೇಳಿದರು: 'ನನ್ನ ಪ್ರಭೂ, ನನಗೆ ಸಹಾಯ ಮಾಡು; ಏಕೆಂದರೆ ಅವರು ನನ್ನನ್ನು ಸುಳ್ಳುಗಾರನೆಂದು ತಿಳಿದುಕೊಂಡಿದ್ದಾರೆ.'

قَالَ عَمَّا قَلِيلٍ لَّيُصْبِحُنَّ نٰدِمِينَ ﴿٤١﴾

**41.** ಅವನು (ಅಲ್ಲಾಹನು) ಹೇಳಿದನು: 'ಖಂಡಿತವಾಗಿಯೂ ಸದ್ಯೋಭವಿಷ್ಯದಲ್ಲೇ ಅವರು ಪಶ್ಚಾತ್ತಾಪಪಡಲಿರುವರು'.

فَأَخَذَتْهُمُ الصَّيْحَةُ بِالْحَقِّ فَجَعَلْنٰهُمْ
غُثَاءً ۚ فَبُعْدًا لِّلْقَوْمِ الظّٰلِمِينَ ﴿٤٢﴾

**42.** ಹಾಗೆ ಆ ಶಿಕ್ಷೆ ತಕ್ಕ ರೀತಿಯಲ್ಲೇ ಅವರ ಮೇಲೆ ಬಂದೆರಗಿತು. ನಾವು ಅವರನ್ನು ಕಸದಂತೆ ಮಾಡಿಬಿಟ್ಟೆವು. ದುಷ್ಟ ಜನರಿಗೆ ಶಾಪ.





ثُمَّ أَنْشَأْنَا مِنْ بَعْدِهِمْ قُرُونًا
آخَرِينَ ﴿٤٣﴾

**43.** ಅನಂತರ, ಅವರ ಬಳಿಕ ಇನ್ನೂ ಕೆಲವು ಪೀಳಿಗೆಗಳನ್ನು ಮತ್ತೆ ನಾವು ಸೃಷ್ಟಿಸಿದೆವು.

مَا تَسْبِقُ مِنْ أُمَّةٍ أَجَلَهَا وَمَا
يَسْتَأْخِرُونَ ﴿٤٤﴾

**44.** ಯಾವುದೇ ಸಮುದಾಯ ಅದರ (ನಾಶದ) ಕಾಲಾವಧಿಯನ್ನು ದಾಟಿ ಹೋಗದು. ಹಾಗೆಯೇ ಕಾಲಾವಧಿಗೆ ಮುಂಚಿತವಾಗಿ ಕೂಡ (ನಾಶಗೊಳ್ಳದು).

ثُمَّ أَرْسَلْنَا رُسُلَنَا تَتْرَا ۖ كُلَّمَا جَاءَ
أُمَّةً رَّسُولُهَا كَذَّبُوهُ فَأَتْبَعْنَا
بَعْضَهُمْ بَعْضًا وَّجَعَلْنٰهُمْ أَحَادِيثَ ۚ
فَبُعْدًا لِّقَوْمٍ لَّا يُؤْمِنُونَ ﴿٤٥﴾

**45.** ಅನಂತರ ನಾವು ನಮ್ಮ ಸಂದೇಶವಾಹಕರನ್ನು ನಿರಂತರ ಕಳುಹಿಸುತ್ತಾ ಇದ್ದೆವು. ಪ್ರತಿಯೊಂದು ಜನತೆಯ ಬಳಿಗೆ ಅವರ ಸಂದೇಶವಾಹಕ ಬಂದಾಗಲೆಲ್ಲ ಅವರು ಆ ಸಂದೇಶವಾಹಕನನ್ನು ಸುಳ್ಳುಗಾರನನ್ನಾಗಿ ಮಾಡಿದರು. ಆಗ ನಾವು ಅವರನ್ನು (ಆ ಜನಾಂಗಗಳನ್ನು) ಒಂದರ ಬೆನ್ನಿಗೆ ಇನ್ನೊಂದರಂತೆ ನಾಶ ಮಾಡಿದೆವು ಮತ್ತು ಅವರನ್ನು ಕೇವಲ ಕಥೆಗಳಾಗಿ ಮಾಡಿಬಿಟ್ಟೆವು. ಅವಿಶ್ವಾಸಿಗಳಾದ ಜನರಿಗೆ ಶಾಪ.

ثُمَّ أَرْسَلْنَا مُوسَىٰ وَأَخَاهُ هٰرُونَ ۙ
بِآيٰتِنَا وَسُلْطٰنٍ مُّبِينٍ ﴿٤٦﴾

**46.** ಅನಂತರ ನಾವು ಮೂಸಾ ಮತ್ತು ಅವರ ಸಹೋದರ ಹಾರೂನ್‌ರನ್ನು ನಮ್ಮ ದೃಷ್ಟಾಂತ ಮತ್ತು ಸ್ಪಷ್ಟವಾದ ಸಾಕ್ಷ್ಯಗಳೊಂದಿಗೆ ಕಳುಹಿಸಿದೆವು -

إِلَىٰ فِرْعَوْنَ وَمَلَئِهِ فَاسْتَكْبَرُوا وَ
كَانُوا قَوْمًا عَالِينَ ﴿٤٧﴾

**47.** ಫಿರ್‌ಔನ್ ಮತ್ತು ಅವನ ಮುಖಂಡರ ಬಳಿಗೆ. ಆದರೆ ಅವರು ದುರಹಂಕಾರದಿಂದ ವರ್ತಿಸಿದರು. ಅವರು ಬಹಳ ದರ್ಪದ ಜನರಾಗಿದ್ದರು.

فَقَالُوا أَنُؤْمِنُ لِبَشَرَيْنِ مِثْلِنَا وَ
قَوْمُهُمَا لَنَا عٰبِدُونَ ﴿٤٨﴾

**48.** ಅವರು ಹೇಳಿದರು: 'ನಮ್ಮಂತೆಯೇ ಇರುವ ಇಬ್ಬರು ಮನುಷ್ಯರನ್ನು ನಾವು ನಂಬಬೇಕೇ? ಅವರ ಸಮುದಾಯದವರು ನಮ್ಮ ಗುಲಾಮರು!'

فَكَذَّبُوهُمَا فَكَانُوا مِنَ الْمُهْلَكِينَ ﴿٤٩﴾

**49.** ಅವರು ಅವರೀರ್ವರನ್ನೂ ಸುಳ್ಳುಗಾರರನ್ನಾಗಿ ಮಾಡಿದರು. ಹಾಗೆ ಅವರು ನಾಶಕ್ಕೆ ತುತ್ತಾದರು.

وَلَقَدْ آتَيْنَا مُوسَى الْكِتٰبَ لَعَلَّهُمْ
يَهْتَدُونَ ﴿٥٠﴾

**50.** ಅವರ (ಮೂಸಾರ ಜನತೆಯು) ಮಾರ್ಗ ದರ್ಶನಕ್ಕಾಗಿ ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು.

51. ನಾವು ಮರ್ಯಮರ ಪುತ್ರನನ್ನೂ ಅವರ ಮಾತೆಯನ್ನೂ ಒಂದು ದೃಷ್ಟಾಂತವಾಗಿ ಮಾಡಿದೆವು. ವಿಶ್ರಾಂತಿಗೆ ಯೋಗ್ಯವೂ ನೀರಿನ ಒರತೆಗಳೂ ಇರುವ ಒಂದು ಉನ್ನತ ಪ್ರದೇಶದೆಡೆಗೆ ತಲುಪುವಂತೆ ಮಾಡಿ ನಾವು ಅವರಿಗೆ ಆಶ್ರಯ ನೀಡಿದೆವು.

وَجَعَلْنَا ابْنَ مَرْيَمَ وَأُمَّهُ آيَةً وَآوَيْنَاهُمَا إِلَىٰ رَبْوَةٍ ذَاتِ قَرَارٍ وَمَعِينٍ ﴿٥١﴾

52. ಎಲೈ ಪ್ರವಾದಿಗಳೇ , ಪರಿಶುದ್ಧವಾದುದನ್ನು ಭುಜಿಸಿರಿ ಮತ್ತು ಸತ್ಕರ್ಮಗಳನ್ನು ಮಾಡಿರಿ. ಖಂಡಿತವಾಗಿಯೂ ನಿಮ್ಮ ಕೃತ್ಯಗಳ ಬಗ್ಗೆ ನಾನು ಚೆನ್ನಾಗಿ ಬಲ್ಲವನಾಗಿದ್ದೇನೆ.

يَا أَيُّهَا الرُّسُلُ كُلُوا مِنَ الطَّيِّبَاتِ وَاعْمَلُوا صَالِحًا ۖ إِنِّي بِمَا تَعْمَلُونَ عَلِيمٌ ﴿٥٢﴾

53. ನಿಮ್ಮ ಈ ಸಮುದಾಯ ಒಂದೇ ಸಮುದಾಯವಾಗಿದೆ. ನಾನು ನಿಮ್ಮ ಪ್ರಭು. ಆದ್ದರಿಂದ ನನ್ನ ಭಯಭಕ್ತಿ ಇರಿಸಿಕೊಳ್ಳಿರಿ.

وَإِنَّ هَٰذِهِ أُمَّتُكُمْ أُمَّةً وَاحِدَةً وَأَنَا رَبُّكُمْ فَاتَّقُونِ ﴿٥٣﴾

54. ಆದರೆ ಅವರು (ಜನರು) ತಮ್ಮ ವಿಶ್ವಾಸದ ಬಗ್ಗೆ ಭಿನ್ನಾಭಿಪ್ರಾಯ ತಾಳಿ ವಿವಿಧ ಪಕ್ಷಗಳಾಗಿ ಬೇರ್ಪಟ್ಟರು. ಪ್ರತಿಯೊಂದು ಪಕ್ಷ ತನ್ನ ಬಳಿಯಲ್ಲಿರುವುದರ ಕುರಿತು ಸಂತೋಷಪಡುತ್ತದೆ.

فَتَقَطَّعُوا أَمْرَهُمْ بَيْنَهُمْ زُبُرًا ۖ كُلُّ حِزْبٍ بِمَا لَدَيْهِمْ فَرِحُونَ ﴿٥٤﴾

55. ಆದ್ದರಿಂದ ಸ್ವಲ್ಪ ಕಾಲ ಅವರನ್ನು ಅವರ ಗೊಂದಲದಲ್ಲೇ ಬಿಟ್ಟುಬಿಡು.

فَذَرْهُمْ فِي غَمْرَتِهِمْ حَتَّىٰ حِينٍ ﴿٥٥﴾

56. ಸಂಪತ್ತು ಮತ್ತು ಸಂತಾನ ಮೂಲಕ ನಾವು ಅವರಿಗೆ ಸಹಾಯಮಾಡಿದ ಬಗ್ಗೆ ಅವರು ಭಾವಿಸುತ್ತಿರುವರೇನು -

أَيَحْسَبُونَ أَنَّمَا نُمِدُّهُمْ بِهِ مِنْ مَالٍ وَبَنِينَ ﴿٥٦﴾

57. ನಾವು ಅವರಿಗೆ ತ್ವರಿತವಾಗಿ ಒಳಿತು ಮಾಡುತ್ತೇವೆಂದು? ಆದರೆ ಅವರು (ನಿಜಾಂಶವೇನೆಂದು) ಮನಗಾಣುವುದಿಲ್ಲ.

نُسَارِعُ لَهُمْ فِي الْخَيْرَاتِ ۚ بَلْ لَا يَشْعُرُونَ ﴿٥٧﴾

58. ನಿಶ್ಚಯವಾಗಿಯೂ, ಯಾರು ತಮ್ಮ ಪ್ರಭುವಿನ ಭಯದಿಂದ ಕಂಪಿಸುತ್ತಾರೋ,

إِنَّ الَّذِينَ هُمْ مِنْ خَشْيَةِ رَبِّهِمْ مُشْفِقُونَ ﴿٥٨﴾

59. ಯಾರು ತಮ್ಮ ಪ್ರಭುವಿನ ದೃಷ್ಟಾಂತಗಳನ್ನು ನಂಬುತ್ತಾರೋ,

وَالَّذِينَ هُمْ بِآيَاتِ رَبِّهِمْ يُؤْمِنُونَ ﴿٥٩﴾





60. ಯಾರು ತಮ್ಮ ಪ್ರಭುವಿಗೆ ಸಹಭಾಗಿಗಳನ್ನು ಕಲ್ಪಿಸುವುದಿಲ್ಲವೋ,

وَالَّذِينَ هُمْ بِرَبِّهِمْ لَا يُشْرِكُونَ ﴿٦٠﴾

61. ಯಾರು, ತಾವು ತಮ್ಮ ಪ್ರಭುವಿನೆಡೆಗೆ ಮರಳುವವರೆಂಬ ಕಾರಣ ಭಯತುಂಬಿದ ಹೃದಯದಿಂದ ದಾನ ಮಾಡುವುದನ್ನೆಲ್ಲ ದಾನಮಾಡುತ್ತಾರೋ,

وَالَّذِينَ يُؤْتُونَ مَا آتَوْا وَقُلُوبُهُمْ وَجِلَةٌ أَنَّهُمْ إِلَىٰ رَبِّهِمْ رَاجِعُونَ ﴿٦١﴾

62. ಅಂತಹ ಜನರೇ ಸತ್ಕರ್ಮದಲ್ಲಿ ತ್ವರೆ ಮಾಡುವವರೂ ಅದಕ್ಕಾಗಿ ಒಬ್ಬರಿಗಿಂತ ಇನ್ನೊಬ್ಬರು ಮುಂದಾಗುವವರೂ ಆಗಿದ್ದಾರೆ.

أُولَٰئِكَ يُسَارِعُونَ فِي الْخَيْرَاتِ وَهُمْ لَهَا سَابِقُونَ ﴿٦٢﴾

63. ಯಾವುದೇ ಆತ್ಮಕ್ಕೂ ಅದರ ಶಕ್ತಿಗೆ ಮೀರಿದ ಯಾವುದೇ ಹೊಣೆಗಾರಿಕೆಯನ್ನು ನಾವು ಹೊರಿಸುವುದಿಲ್ಲ. ನಮ್ಮ ಬಳಿಯಲ್ಲಿ ಸತ್ಯ ನುಡಿಯುವ ಒಂದು ಗ್ರಂಥವಿದೆ. ಮತ್ತೆ ಅವರಿಗೇನೂ ಅನ್ಯಾಯವಾಗದು.

وَلَا نُكَلِّفُ نَفْسًا إِلَّا وُسْعَهَا ۖ وَلَدَيْنَا كِتَابٌ يَنْطِقُ بِالْحَقِّ ۚ وَهُمْ لَا يُظْلَمُونَ ﴿٦٣﴾

64. ಆದರೆ ಅವರ ಹೃದಯಗಳು ಈ ಬಗ್ಗೆ ನಿರ್ಲಕ್ಷ್ಯವಾಗಿವೆ. ಅವರಿಗೆ ಬೇರೆಯೇ ಕೆಲಸಗಳಿವೆ. ಅವರು ಅದರಲ್ಲೇ ಮಗ್ನರಾಗಿದ್ದಾರೆ.

بَلْ قُلُوبُهُمْ فِي غَمْرَةٍ مِنْ هَٰذَا وَلَهُمْ أَعْمَالٌ مِنْ دُونِ ذَٰلِكَ هُمْ لَهَا عَامِلُونَ ﴿٦٤﴾

65. ಕೊನೆಗೆ ನಾವು ಅವರ ಪೈಕಿ ಸುಖಭೋಗಗಳಲ್ಲಿ ಮುಳುಗಿರುವವರನ್ನು ಶಿಕ್ಷೆಗೊಳಪಡಿಸುವಾಗ ಅವರು ನೆರವಿಗಾಗಿ ಮೊರೆಯಿಡುತ್ತಾರೆ.

حَتَّىٰ إِذَا أَخَذْنَا مُتْرَفِيهِمْ بِالْعَذَابِ إِذَا هُمْ يَجْأَرُونَ ﴿٦٥﴾

66. (ಆಗ ಅವರೊಡನೆ ಹೇಳಲಾಗುವುದು:) 'ಇಂದು ನೀವು ವಿಲಾಪಿಸುವುದು ಬೇಡ; ನಿಮಗೆ ನಮ್ಮಿಂದೇನೂ ನೆರವು ಸಿಗಲಾರದು.

لَا تَجْأَرُوا الْيَوْمَ ۖ إِنَّكُمْ مِنَّا لَا تُنْصَرُونَ ﴿٦٦﴾

67. 'ನಿಜವಾಗಿಯೂ ನನ್ನ ವಚನಗಳನ್ನು ನಿಮಗೆ ಓದಿ ಹೇಳಲಾಗಿತ್ತು. ಆಗ ನೀವು ಬೆನ್ನು ತಿರುಗಿಸಿ ಹೋಗಿದ್ದೀರಿ.

قَدْ كَانَتْ آيَاتِي تُتْلَىٰ عَلَيْكُمْ فَكُنْتُمْ عَلَىٰ أَعْقَابِكُمْ تَنْكِصُونَ ﴿٦٧﴾

68. 'ನೀವು ಅಹಂಭಾವವನ್ನು ತೋರಿಸುತ್ತಾ ಅದರ (ಖುರ್‌ಆನಿನ) ಬಗ್ಗೆ ಕಥೆ ಕಟ್ಟಿ ಹೇಳುತ್ತಾ ಅಸಂಬದ್ಧವಾಗಿ ಮಾತನಾಡುತ್ತಿದ್ದಿರಿ.'

مُسْتَكْبِرِينَ بِهِ سَامِرًا تَهْجُرُونَ ﴿٦٨﴾

**69.** ಹಾಗಾದರೆ ಅವರು ಈ ವಚನದ (ಖುರ್ ಆನಿನ) ಕುರಿತು ಚಿಂತಿಸಲಿಲ್ಲವೇ? ಅಥವಾ ಅವರ ಪೂರ್ವಜರ ಬಳಿಗೆ ಬರದಿದ್ದುದು ಅವರ ಬಳಿಗೆ ಬಂದಿದೆಯೇ?

أَفَلَمْ يَدَّبَّرُوا الْقَوْلَ أَمْ جَآءَهُم مَّا لَمْ يَأْتِ ءَابَآءَهُمُ الْأَوَّلِينَ ﴿٦٩﴾

**70.** ಅಥವಾ ಅವರು ತಮ್ಮ ಸಂದೇಶವಾಹಕನನ್ನು ಗುರುತಿಸಲಿಲ್ಲವೇ? ಆ ಕಾರಣದಿಂದ ಅವರು ನಿರಾಕರಿಸುತ್ತಿದ್ದಾರೆಯೇ?

أَمْ لَمْ يَعْرِفُوا رَسُولَهُمْ فَهُمْ لَهُۥ مُنكِرُونَ ﴿٧٠﴾

**71.** ಅಥವಾ ಅವರು 'ಅವನಿಗೆ ಹುಚ್ಚು ಇದೆ' ಎಂದು ಹೇಳುತ್ತಾರೆಯೇ? ಇಲ್ಲ, ಆ ಪ್ರವಾದಿ ಅವರ ಬಳಿಗೆ ಸತ್ಯವನ್ನೇ ತಂದಿದ್ದಾರೆ. ಆದರೆ ಅವರ ಪೈಕಿ ಹೆಚ್ಚಿನವರು ಸತ್ಯವನ್ನು ದ್ವೇಷಿಸುತ್ತಾರೆ.

أَمْ يَقُولُونَ بِهِۦ جِنَّةٌۢ ۚ بَلْ جَآءَهُم بِالْحَقِّ وَأَكْثَرُهُمْ لِلْحَقِّ كَٰرِهُونَ ﴿٧١﴾

**72.** ಸತ್ಯವು ಅವರ ಅಭಿಲಾಷೆಗಳನ್ನು ಅನುಗಮಿಸುತ್ತಿದ್ದರೆ ಆಕಾಶಗಳೂ ಭೂಮಿಯೂ ಅವುಗಳಲ್ಲಿರುವ ಎಲ್ಲವೂ ತಾರುಮಾರು ಆಗುತ್ತಿದ್ದವು. ನಾವಾದರೋ ಅವರಿಗೋಸ್ಕರ ಉಪದೇಶವನ್ನು ತಂದಿದ್ದೇವೆ. ಆದರೆ ಅವರು ತಮಗಿರುವ ಉಪದೇಶದಿಂದ ಮುಖ ತಿರುಗಿಸುತ್ತಾರೆ.

وَلَوِ اتَّبَعَ الْحَقُّ أَهْوَآءَهُمْ لَفَسَدَتِ السَّمَٰوَٰتُ وَالْأَرْضُ وَمَن فِيهِنَّ ۚ بَلْ أَتَيْنَٰهُم بِذِكْرِهِمْ فَهُمْ عَن ذِكْرِهِم مُّعْرِضُونَ ﴿٧٢﴾

**73.** ನೀನು ಅವರೊಡನೆ ಪ್ರತಿಫಲವನ್ನೇನಾದರೂ ಕೇಳುತ್ತೀಯಾ? ಆದರೆ,ನಿನ್ನ ಪ್ರಭುವಿನ ಪ್ರತಿಫಲವೇ ಅತಿ ಶ್ರೇಷ್ಠವಾದುದು. ಅವನು ಅನ್ನದಾತರಲ್ಲಿ ಅತ್ಯುತ್ತಮನಾಗಿದ್ದಾನೆ.

أَمْ تَسْـَٔلُهُمْ خَرْجًا فَخَرَاجُ رَبِّكَ خَيْرٌ ۖ وَهُوَ خَيْرُ الرَّٰزِقِينَ ﴿٧٣﴾

**74.** ನಿಜವಾಗಿಯೂ ನೀನು ಅವರನ್ನು ಸತ್ಪಥದೆಡೆಗೆ ಕರೆಯುತ್ತಿರುವೆ.

وَإِنَّكَ لَتَدْعُوهُمْ إِلَىٰ صِرَٰطٍ مُّسْتَقِيمٍ ﴿٧٤﴾

**75.** ಆದರೆ ಪರಲೋಕದ ಬಗ್ಗೆ ನಂಬಿಕೆಯಿಲ್ಲದವರು ಆ ಪಥವನ್ನು ಬಿಟ್ಟು ದೂರ ಸರಿಯುತ್ತಾರೆ.

وَإِنَّ الَّذِينَ لَا يُؤْمِنُونَ بِالْءَاخِرَةِ عَنِ الصِّرَٰطِ لَنَٰكِبُونَ ﴿٧٥﴾

**76.** ನಾವು ಅವರ ಮೇಲೆ ಕರುಣೆ ತೋರಿಸಿ ಅವರ ಸಂಕಷ್ಟವನ್ನು ಹೋಗಲಾಡಿಸಿರುತ್ತಿದ್ದರೆ ಅವರು ತಮ್ಮ ಅತಿರೇಕ ವರ್ತನೆಯಲ್ಲಿ ಅಂಧರಾಗಿ ಮುಂದುವರಿಯುತ್ತಿದ್ದರು.

وَلَوْ رَحِمْنَٰهُمْ وَكَشَفْنَا مَا بِهِم مِّن ضُرٍّ لَّلَجُّوا فِي طُغْيَٰنِهِمْ يَعْمَهُونَ ﴿٧٦﴾





**77.** ನಿಶ್ಚಯವಾಗಿಯೂ ನಾವು ಅವರನ್ನು ಶಿಕ್ಷೆಗೆ ಗುರಿಪಡಿಸಿದ್ದೇವೆ. ಆದರೂ ಅವನು ತಮ್ಮ ಪ್ರಭುವಿಗೆ ಶರಣಾಗಲಿಲ್ಲ. ಅವರು ವಿನಯಭಾವವನ್ನು ಕೂಡ ತೋರ್ಪಡಿಸಲಿಲ್ಲ.

وَلَقَدْ أَخَذْنَٰهُم بِالْعَذَابِ فَمَا اسْتَكَانُوا لِرَبِّهِمْ وَمَا يَتَضَرَّعُونَ ﴿٧٧﴾

**78.** ಕೊನೆಗೆ, ಕಠೋರ ಶಿಕ್ಷೆಯ ಒಂದು ಕವಾಟವನ್ನು ನಾವು ಅವರಿಗೆ ತೆರೆದಾಗ ಅವರು ಹತಾಶರಾಗುತ್ತಾರೆ.

حَتَّىٰٓ إِذَا فَتَحْنَا عَلَيْهِم بَابًا ذَا عَذَابٍ شَدِيدٍ إِذَا هُمْ فِيهِ مُبْلِسُونَ ﴿٧٨﴾

**79.** ಅವನು (ಅಲ್ಲಾಹನು) ನಿಮಗೆ ಕಿವಿಗಳನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ಸೃಷ್ಟಿಸಿರುವವನು. (ಆದರೆ) ನೀವು ಕೃತಜ್ಞತೆ ತೋರಿಸುವುದು ಬಹಳ ವಿರಳ.

وَهُوَ الَّذِىٓ أَنشَأَ لَكُمُ السَّمْعَ وَالْأَبْصَٰرَ وَالْأَفْـِٔدَةَ ۚ قَلِيلًا مَّا تَشْكُرُونَ ﴿٧٩﴾

**80.** ನಿಮ್ಮನ್ನು ಭೂಮಿಯಲ್ಲಿ ವೃದ್ಧಿಗೊಳಿಸಿದವನು ಅವನೇ ಆಗಿರುವನು. ಅವನ ಬಳಿಗೆಯೇ ನಿಮ್ಮನ್ನು ಒಂದುಗೂಡಿಸಿ ಕೊಂಡೊಯ್ಯಲಾಗುವುದು.

وَهُوَ الَّذِى ذَرَأَكُمْ فِى الْأَرْضِ وَإِلَيْهِ تُحْشَرُونَ ﴿٨٠﴾

**81.** ಜೀವ ನೀಡುವವನೂ ಮೃತಪಡಿಸುವವನೂ ಅವನೇ ಆಗಿದ್ದಾನೆ. ರಾತ್ರಿ - ಹಗಲುಗಳ ಪರ್ಯಾಯ ಅವನ ನಿಯಂತ್ರಣದಲ್ಲಿದೆ. ನೀವು ಚಿಂತಿಸುವುದಿಲ್ಲವೇ?

وَهُوَ الَّذِى يُحْىِۦ وَيُمِيتُ وَلَهُ اخْتِلَٰفُ الَّيْلِ وَالنَّهَارِ ۚ أَفَلَا تَعْقِلُونَ ﴿٨١﴾

**82.** ಆದರೆ ಅವರು ಅವರ ಪೂರ್ವಜರು ಹೇಳಿದಂತೆಯೇ ಹೇಳುತ್ತಾರೆ.

بَلْ قَالُوا مِثْلَ مَا قَالَ الْأَوَّلُونَ ﴿٨٢﴾

**83.** ಅವರು ಹೇಳುತ್ತಾರೆ: 'ಏನು ನಾವು ಮೃತಪಟ್ಟು ಮಣ್ಣು ಮತ್ತು ಅಸ್ಥಿಗಳಾಗಿ ಮಾರ್ಪಟ್ಟ ಬಳಿಕ ಪುನಃ ಎಬ್ಬಿಸಲ್ಪಡುವೆವೇ?

قَالُوٓا أَءِذَا مِتْنَا وَكُنَّا تُرَابًا وَعِظَٰمًا أَءِنَّا لَمَبْعُوثُونَ ﴿٨٣﴾

**84.** 'ಇದಕ್ಕೆ ಮುಂಚೆ ನಮಗೆ ಮತ್ತು ನಮ್ಮ ತಂದೆ ತಾತಂದಿರಿಗೆ ಈ ವಾಗ್ದಾನ ನೀಡಲಾಗಿತ್ತು. ಇದು ಹಿಂದಿನವರ ಕಟ್ಟು ಕಥೆಗಳು ಮಾತ್ರವಾಗಿದೆ.'

لَقَدْ وُعِدْنَا نَحْنُ وَءَابَآؤُنَا هَٰذَا مِن قَبْلُ إِنْ هَٰذَآ إِلَّآ أَسَٰطِيرُ الْأَوَّلِينَ ﴿٨٤﴾

**85.** ಹೇಳು: 'ನಿಮಗೆ ಗೊತ್ತಿದ್ದರೆ (ಹೇಳಿರಿ) ಭೂಮಿ ಮತ್ತು ಅದರಲ್ಲಿರುವುದೆಲ್ಲ ಯಾರದ್ದು?

قُل لِّمَنِ الْأَرْضُ وَمَن فِيهَآ إِن كُنتُمْ تَعْلَمُونَ ﴿٨٥﴾

سَيَقُوْلُوْنَ لِلّٰهِ ۚ قُلْ اَفَلَا تَذَكَّرُوْنَ ﴿٨٦﴾

86. 'ಅಲ್ಲಾಹನದು' ಎಂದು ಅವರು ಉತ್ತರಿಸುವರು. ನೀನು ಹೇಳು: 'ನೀವೇನು ಚಿಂತಿಸುವುದಿಲ್ಲವೇ?'

قُلْ مَنْ رَّبُّ السَّمٰوٰتِ السَّبْعِ وَرَبُّ الْعَرْشِ الْعَظِيْمِ ﴿٨٧﴾

87. ಹೇಳು: 'ಏಳು ಆಕಾಶಗಳ ಪ್ರಭು ಯಾರು? ಹಾಗೂ ಮಹಾ ಸಿಂಹಾಸನದ ಪ್ರಭು?'

سَيَقُوْلُوْنَ لِلّٰهِ ۚ قُلْ اَفَلَا تَتَّقُوْنَ ﴿٨٨﴾

88. '(ಅವೆಲ್ಲವೂ) ಅಲ್ಲಾಹನದು' ಎಂದು ಅವರು ಉತ್ತರಿಸುವರು. ನೀನು ಹೇಳು (ಹಾಗಿರುವಾಗ) ನೀವು ಭಯಭಕ್ತಿ ತೋರಿಸುವುದಿಲ್ಲವೇ?'

قُلْ مَنْ بِيَدِهٖ مَلَكُوْتُ كُلِّ شَيْءٍ وَّهُوَ يُجِيْرُ وَلَا يُجَارُ عَلَيْهِ اِنْ كُنْتُمْ تَعْلَمُوْنَ ﴿٨٩﴾

89. ಹೇಳು: 'ಯಾರ ಕೈಯಲ್ಲಿ ಎಲ್ಲ ವಸ್ತುಗಳ ಮೇಲಿನ ಆಧಿಪತ್ಯ ಇದೆಯೋ, ಯಾರು ಅಭಯ ನೀಡುತ್ತಾನೋ ಮತ್ತು ಯಾರ ವಿರುದ್ಧವಾಗಿ ಯಾವುದೇ ಅಭಯ ದೊರಕಲಾರದೋ ಅವನು ಯಾರು? ನಿಮಗೆ ತಿಳಿದಿದ್ದರೆ (ಹೇಳಿರಿ).'

سَيَقُوْلُوْنَ لِلّٰهِ ۚ قُلْ فَاَنّٰى تُسْحَرُوْنَ ﴿٩٠﴾

90. '(ಅವೆಲ್ಲ) ಅಲ್ಲಾಹನಿಗೆ ಸಂಬಂಧಿಸಿದ್ದು' ಎಂದು ಅವರು ಹೇಳುವರು. ಹೇಳು: 'ಮತ್ತೆ ನೀವು ಹೇಗೆ ಮೋಸ ಹೋಗಿದ್ದೀರಿ?'

بَلْ اَتَيْنٰهُمْ بِالْحَقِّ وَاِنَّهُمْ لَكٰذِبُوْنَ ﴿٩١﴾

91. ವಾಸ್ತವವೇನೆಂದರೆ ನಾವು ಅವರ ಬಳಿಗೆ ಸತ್ಯವನ್ನು ತಂದೆವು. ಅವರಾದರೋ ಸುಳ್ಳು ಹೇಳುವವರು.

مَا اتَّخَذَ اللّٰهُ مِنْ وَّلَدٍ وَّمَا كَانَ مَعَهٗ مِنْ اِلٰهٍ اِذًا لَّذَهَبَ كُلُّ اِلٰهٍۢ بِمَا خَلَقَ وَلَعَلَا بَعْضُهُمْ عَلٰى بَعْضٍ ۚ سُبْحٰنَ اللّٰهِ عَمَّا يَصِفُوْنَ ﴿٩٢﴾

92. ಅಲ್ಲಾಹನು ಯಾರನ್ನೂ ಪುತ್ರನನ್ನಾಗಿ ಮಾಡಿಕೊಂಡಿಲ್ಲ. ಅವನ ಜೊತೆಗೆ ಬೇರೆ ಯಾವ ದೇವನೂ ಇಲ್ಲ. (ಹಾಗೇನಾದರೂ ಇರುತ್ತಿದ್ದರೆ) ಪ್ರತಿಯೊಬ್ಬ ದೇವನೂ ತಾನು ಸೃಷ್ಟಿಸಿದವುಗಳನ್ನು ಕೊಂಡೊಯ್ಯುತ್ತಿದ್ದನು ಹಾಗೂ ಅವರ ಪೈಕಿ ಕೆಲವರು ಬೇರೆ ಕೆಲವರ ಮೇಲೆ ಅಧಿಕಾರ ಚಲಾಯಿಸುತ್ತಿದ್ದರು. ಅವರ ಹೇಳಿಕೆಗಳಿಂದೆಲ್ಲ ಅಲ್ಲಾಹನು ಪರಿಶುದ್ಧನಾಗಿದ್ದಾನೆ.

عٰلِمِ الْغَيْبِ وَالشَّهَادَةِ فَتَعٰلٰى عَمَّا يُشْرِكُوْنَ ﴿٩٣﴾ ع

93. ಅಗೋಚರವನ್ನೂ ಗೋಚರವನ್ನೂ ಅವನು ಬಲ್ಲನು. ಅವರು ಸಹಭಾಗಿಗಳನ್ನು ಕಲ್ಪಿಸುವುದರಿಂದೆಲ್ಲ ಅವನು ಮಹೋನ್ನತನು.





قُلْ رَّبِّ اِمَّا تُرِيَنِّيْ مَا يُوْعَدُوْنَ ﴿٩٤﴾

94. ಹೇಳು: 'ನನ್ನ ಪ್ರಭೂ, ಅವರಿಗೆ ಮುನ್ನೆಚ್ಚರಿಕೆ ನೀಡಲಾದ ಶಿಕ್ಷೆಯನ್ನು ನೀನು ನನಗೆ ತೋರಿಸುವುದಾದರೆ -

رَبِّ فَلَا تَجْعَلْنِيْ فِي الْقَوْمِ الظّٰلِمِيْنَ ﴿٩٥﴾

95. 'ನನ್ನ ಪ್ರಭೂ, ದುಷ್ಟರಾದ ಜನರೊಂದಿಗೆ ನನ್ನನ್ನು ಸೇರಿಸಬೇಡ.'

وَاِنَّا عَلٰٓى اَنْ نُّرِيَكَ مَا نَعِدُهُمْ لَقٰدِرُوْنَ ﴿٩٦﴾

96. ನಾವು ಅವರಿಗೆ ಮುನ್ನೆಚ್ಚರಿಕೆ ನೀಡಿದ ಶಿಕ್ಷೆಯನ್ನು ನಿನಗೆ ತೋರಿಸಲಿಕ್ಕೆ ನಿಸ್ಸಂದೇಹವಾಗಿಯೂ ನಮಗೆ ಸಾಮರ್ಥ್ಯವಿದೆ.

اِدْفَعْ بِالَّتِيْ هِيَ اَحْسَنُ السَّيِّئَةَ ۚ نَحْنُ اَعْلَمُ بِمَا يَصِفُوْنَ ﴿٩٧﴾

97. ಒಳಿತಿನ ಮೂಲಕ ನೀನು ಕೆಡುಕನ್ನು ದೂರ ಮಾಡು. ಅವರು ಹೇಳುವ ವಿಚಾರಗಳನ್ನೆಲ್ಲ ನಾವು ಚೆನ್ನಾಗಿ ಬಲ್ಲೆವು.

وَقُلْ رَّبِّ اَعُوْذُ بِكَ مِنْ هَمَزٰتِ الشَّيٰطِيْنِ ﴿٩٨﴾

98. ಹೇಳು: 'ನನ್ನ ಪ್ರಭೂ, ದುರ್ಜನರ ಪ್ರಚೋದನೆಗಳ ವಿರುದ್ಧವಾಗಿ ನಾನು ನಿನ್ನ ಅಭಯವನ್ನು ಬೇಡುತ್ತೇನೆ.'

وَاَعُوْذُ بِكَ رَبِّ اَنْ يَّحْضُرُوْنِ ﴿٩٩﴾

99. 'ಅವರು ನನ್ನ ಸಮೀಪ ಬರುವುದರ ವಿರುದ್ಧವಾಗಿ ಸಹ ನಾನು ನಿನ್ನ ಅಭಯ ಯಾಚನೆ ಮಾಡುತ್ತೇನೆ.'

حَتّٰٓى اِذَا جَآءَ اَحَدَهُمُ الْمَوْتُ قَالَ رَبِّ ارْجِعُوْنِ ﴿١٠٠﴾

100. ಹಾಗೆ ಅವರಲ್ಲೊಬ್ಬನಿಗೆ ಮರಣ ಬಂದುಬಿಟ್ಟರೆ, ಅವನು ದೈನ್ಯವಾಗಿ ಹೀಗೆ ಬೇಡುವನು: 'ನನ್ನ ಪ್ರಭೂ, ನನ್ನನ್ನು ನೀನು ಮರಳಿ ಕಳುಹಿಸು -

لَعَلِّيْٓ اَعْمَلُ صَالِحًا فِيْمَا تَرَكْتُ كَلَّا ۚ اِنَّهَا كَلِمَةٌ هُوَ قَآئِلُهَا ۚ وَمِنْ وَّرَآئِهِمْ بَرْزَخٌ اِلٰى يَوْمِ يُبْعَثُوْنَ ﴿١٠١﴾

101. 'ನಾನು ಬಿಟ್ಟುಬಂದ ಲೋಕದಲ್ಲಿ ಸತ್ಕರ್ಮಗಳನ್ನು ಮಾಡಲಿಕ್ಕೋಸ್ಕರ.' ಎಂದಿಗೂ ಇಲ್ಲ. ಇದು ಕೇವಲ ಅವನ ಬಾಯಿಮಾತಾಗಿದೆ. ಅವರು ಪುನರುತ್ಥಾನಗೊಳಿಸಲ್ಪಡುವ ತನಕ ಅವರ ಹಿಂದೆ ಒಂದು ತಡೆಯಿದೆ.

فَاِذَا نُفِخَ فِي الصُّوْرِ فَلَآ اَنْسَابَ بَيْنَهُمْ يَوْمَئِذٍ وَّلَا يَتَسَآءَلُوْنَ ﴿١٠٢﴾

102. ಕಹಳೆ ಊದಲ್ಪಟ್ಟಾಗ ಆ ದಿನದಂದು ಅವರ ಮಧ್ಯೆ ಕೌಟುಂಬಿಕ ಸಂಬಂಧವೇನೂ ಇರಲಾರದು; ಒಬ್ಬನ ಕುರಿತು ಇನ್ನೊಬ್ಬ ಏನನ್ನೂ ವಿಚಾರಿಸಲಾರ.

**103.** ಯಾರ (ಸತ್ಕರ್ಮಗಳ) ತಕ್ಕಡಿಗಳು ಭಾರವಾಗಿವೆಯೋ ಅವರೇ ಜಯಶಾಲಿಗಳು.

فَمَنْ ثَقُلَتْ مَوَازِيْنُهٗ فَاُولٰٓئِكَ هُمُ
الْمُفْلِحُوْنَ ﴿١٠٣﴾

**104.** ಯಾರ (ಸತ್ಕರ್ಮಗಳ) ತ್ರಾಸುಗಳು ಹಗುರವಾಗಿವೆಯೋ ಅವರು ತಮ್ಮ ಆತ್ಮಗಳಿಗೆ ಹಾನಿಯುಂಟು ಮಾಡಿದವರು. ಅವರು ನರಕದಲ್ಲಿ ದೀರ್ಘಕಾಲ ವಾಸಿಸುವರು.

وَمَنْ خَفَّتْ مَوَازِيْنُهٗ فَاُولٰٓئِكَ الَّذِيْنَ
خَسِرُوْٓا اَنْفُسَهُمْ فِيْ جَهَنَّمَ خٰلِدُوْنَ ﴿١٠٤﴾

**105.** ಅಗ್ನಿಯು ಅವರ ಮುಖಗಳನ್ನು ಸುಡುವುದು. ಅವರು ಅಲ್ಲಿ ವಿಷಣ್ಣತೆಯಿಂದ ಹಲ್ಲುಕಿರಿಯುವರು.

تَلْفَحُ وُجُوْهَهُمُ النَّارُ وَ هُمْ فِيْهَا
كٰلِحُوْنَ ﴿١٠٥﴾

**106.** (ಅಲ್ಲಾಹನು ಅವರೊಡನೆ ಕೇಳುವನು:) 'ನನ್ನ ವಚನಗಳನ್ನು ನಿಮಗೆ ಓದಿ ಹೇಳಲಾಗಿಲ್ಲವೇ? ಆಗ ನೀವು ಅವುಗಳನ್ನು ಸುಳ್ಳೆಂದು ಹೇಳಿದಿರಷ್ಟೆ?'

اَلَمْ تَكُنْ اٰيٰتِيْ تُتْلٰى عَلَيْكُمْ فَكُنْتُمْ
بِهَا تُكَذِّبُوْنَ ﴿١٠٦﴾

**107.** ಅವರು ಹೇಳುವರು: 'ನಮ್ಮ ಪ್ರಭೂ, ನಮ್ಮ ದುರ್ದೈವ ನಮ್ಮ ಮೇಲೆ ಜಯಗಳಿಸಿತು. ನಾವು ದಾರಿತಪ್ಪಿದ ಜನರಾಗಿ ಬಿಟ್ಟೆವು.

قَالُوْا رَبَّنَا غَلَبَتْ عَلَيْنَا شِقْوَتُنَا وَ
كُنَّا قَوْمًا ضَآلِّيْنَ ﴿١٠٧﴾

**108.** 'ನಮ್ಮ ಪ್ರಭೂ, ನಮ್ಮನ್ನು ಇದರಿಂದ (ಈ ನರಕದಿಂದ) ಪಾರುಮಾಡಿ ಹೊರಗೆ ಬಿಡು. ಇನ್ನು ಮುಂದೆ ನಾವು (ಪಾಪದ ಕಡೆಗೆ) ಮರಳಿದರೆ ನಾವು ದುಷ್ಕರ್ಮಿಗಳೇ ಸರಿ.'

رَبَّنَآ اَخْرِجْنَا مِنْهَا فَاِنْ عُدْنَا فَاِنَّا
ظٰلِمُوْنَ ﴿١٠٨﴾

**109.** (ಅಲ್ಲಾಹನು) ಹೇಳುವನು: "ಅದರಲ್ಲೇ ಬಿದ್ದುಕೊಳ್ಳಿರಿ" ನನ್ನೊಡನೆ ಮಾತನಾಡಬೇಡಿರಿ.

قَالَ اخْسَئُوْا فِيْهَا وَلَا تُكَلِّمُوْنِ ﴿١٠٩﴾

**110.** "ನನ್ನ ಭಕ್ತದಾಸರ ಪೈಕಿ ಒಂದು ಪಂಗಡದವರು 'ನಮ್ಮ ಪ್ರಭೂ, ನಾವು ನಂಬಿರುತ್ತೇವೆ. ಆದ್ದರಿಂದ ನಮ್ಮ ಪಾಪಗಳನ್ನು ಕ್ಷಮಿಸು. ನಮ್ಮ ಮೇಲೆ ಕರುಣೆ ತೋರಿಸು. ಕರುಣೆ ತೋರಿಸುವವರ ಪೈಕಿ ನೀನು ಅತಿ ಶ್ರೇಷ್ಠನಾಗಿರುವೆ' ಎಂದು ಪ್ರಾರ್ಥಿಸುತ್ತಿದ್ದರು.

اِنَّهٗ كَانَ فَرِيْقٌ مِّنْ عِبَادِيْ يَقُوْلُوْنَ
رَبَّنَآ اٰمَنَّا فَاغْفِرْ لَنَا وَارْحَمْنَا وَاَنْتَ
خَيْرُ الرّٰحِمِيْنَ ﴿١١٠﴾





**111.** "ಆಗ ನೀವು ಅವರನ್ನು ಅಪಹಾಸ್ಯಕ್ಕೀಡು ಮಾಡಿದಿರಿ. ಹಾಗೆ ಅವರ ನಿಮಿತ್ತ ನಿಮಗೆ ನನ್ನ ಸ್ಮರಣೆ ಮರೆತುಹೋಯಿತು. ನೀವು ಅವರನ್ನು ಗೇಲಿ ಮಾಡುತ್ತಲೇ ಇದ್ದಿರಿ.

فَاتَّخَذْتُمُوْهُمْ سِخْرِيًّا حَتّٰىٓ اَنْسَوْكُمْ
ذِكْرِيْ وَكُنْتُمْ مِّنْهُمْ تَضْحَكُوْنَ ﴿١١١﴾

**112.** "ಅವರ ಸ್ಥೈರಣೆಗೋಸ್ಕರ ಇಂದು ನಾನು ಅವರಿಗೆ ಪ್ರತಿಫಲ ನೀಡಿದ್ದೇನೆ. ಖಂಡಿತವಾಗಿಯೂ ಅವರೇ ಜಯಶಾಲಿಗಳು."

اِنِّيْ جَزَيْتُهُمُ الْيَوْمَ بِمَا صَبَرُوْٓا ۙ
اَنَّهُمْ هُمُ الْفَآئِزُوْنَ ﴿١١٢﴾

**113.** ಅಲ್ಲಾಹನು (ಅವಿಶ್ವಾಸಿಗಳೊಡನೆ) ಕೇಳುವನು: 'ನೀವು ಎಷ್ಟು ಕಾಲ ಭೂಮಿಯಲ್ಲಿ ಕಳೆದಿರಿ?'

قٰلَ كَمْ لَبِثْتُمْ فِي الْاَرْضِ عَدَدَ سِنِيْنَ ﴿١١٣﴾

**114.** ಅವರು ಹೇಳುವರು: 'ಒಂದು ದಿನ ಅಥವಾ ಒಂದು ದಿನದ ಸ್ವಲ್ಪ ಕಾಲ ನಾವು ಅಲ್ಲಿದ್ದೆವು; ಲೆಕ್ಕವಿಡುವವರೊಡನೆ ನೀನು ಕೇಳು.'

قَالُوْا لَبِثْنَا يَوْمًا اَوْ بَعْضَ يَوْمٍ
فَسْئَلِ الْعَآدِّيْنَ ﴿١١٤﴾

**115.** ಅವನು (ಅಲ್ಲಾಹನು) ಹೇಳುವನು: 'ನೀವಲ್ಲಿ ಅಲ್ಪಕಾಲ[348A] ಮಾತ್ರವೇ ಕಳೆದಿದ್ದೀರಿ; ನೀವು ಅದನ್ನು ಮನವರಿಕೆ ಮಾಡಿರುತ್ತಿದ್ದರೆ!

قٰلَ اِنْ لَّبِثْتُمْ اِلَّا قَلِيْلًا لَّوْ اَنَّكُمْ
كُنْتُمْ تَعْلَمُوْنَ ﴿١١٥﴾

**116.** 'ಉದ್ದೇಶರಹಿತವಾಗಿ ನಾವು ನಿಮ್ಮನ್ನು ಸೃಷ್ಟಿಸಿದ್ದೇವೆಂದೂ ನೀವು ನಮ್ಮ ಕಡೆಗೆ ಮರಳಿಸಲ್ಪಡಲಾರಿರೆಂದೂ ನೀವು ಭಾವಿಸಿ ತಿಳಿದುಕೊಂಡಿದ್ದೀರಷ್ಟೆ?'

اَفَحَسِبْتُمْ اَنَّمَا خَلَقْنٰكُمْ عَبَثًا وَّ
اَنَّكُمْ اِلَيْنَا لَا تُرْجَعُوْنَ ﴿١١٦﴾

**117.** ಯಥಾರ್ಥ ಸಾರ್ವಭೌಮನಾದ ಅಲ್ಲಾಹನೇ ಸರ್ವೋನ್ನತನು. ಅವನ ಹೊರತು ಬೇರೆ ದೇವನಿಲ್ಲ; ಮಹಿಮೆಯುಳ್ಳ ಸಿಂಹಾಸನದ ಪ್ರಭು.

فَتَعٰلَى اللّٰهُ الْمَلِكُ الْحَقُّ ۚ لَآ اِلٰهَ اِلَّا هُوَ ۚ
رَبُّ الْعَرْشِ الْكَرِيْمِ ﴿١١٧﴾

**118.** ಅಲ್ಲಾಹನೊಂದಿಗೆ ಬೇರೊಬ್ಬ ದೇವನನ್ನು ಯಾರಾದರೂ ಕರೆದು ಪ್ರಾರ್ಥಿಸಿದರೆ - ಅದಕ್ಕೆ ಅವನ ಬಳಿ ಆಧಾರವೇನೂ ಇಲ್ಲ - ಅವನ ಪ್ರಭುವಿಗೆ ಆ ಬಗ್ಗೆ

وَمَنْ يَّدْعُ مَعَ اللّٰهِ اِلٰهًا اٰخَرَ ۙ لَا
بُرْهَانَ لَهٗ بِهٖ ۙ فَاِنَّمَا حِسَابُهٗ عِنْدَ

348A. ಪಾರತ್ರಿಕ ಜೀವಿತಕ್ಕೆ ಹೋಲಿಸಿದರೆ ಐಹಿಕ ಜೀವಿತ ಕ್ಷಣಿಕ ಮಾತ್ರವಾಗಿದೆ. ಮುಖ್ಯವಾಗಿ, ಪಾರತ್ರಿಕ ಜೀವಿತ ದುಃಖಪೂರ್ಣವಾಗಿರುವಾಗ ಅದು ಹೆಚ್ಚು ದೀರ್ಘವಾಗಿಯೂ ಐಹಿಕ ಜೀವಿತ ಬಹಳ ಹ್ರಸ್ವವಾಗಿಯೂ ಅನುಭವವಾಗುವುದು.

رَبِّهٖ ۭ اِنَّهٗ لَا يُفْلِحُ الْكٰفِرُوْنَ ﴿١١٨﴾

ಅವನು ಸಮಜಾಯಿಷಿ ನೀಡಬೇಕಾಗಿದೆ. ದಿಟವಾಗಿಯೂ ಅವಿಶ್ವಾಸಿಗಳು ಯಶಸ್ಸುಗಳಿಸಲಾರರು.

وَقُلْ رَّبِّ اغْفِرْ وَارْحَمْ وَاَنْتَ خَيْرُ الرّٰحِمِيْنَ ﴿١١٩﴾

119. ಹೇಳು: 'ನನ್ನ ಪ್ರಭೂ, ನನ್ನನ್ನು ಕ್ಷಮಿಸು; ನನ್ನ ಮೇಲೆ ಕರುಣೆ ತೋರಿಸು. ಕರುಣೆ ತೋರಿಸುವವರ ಪೈಕಿ ನೀನು ಅತಿ ಶ್ರೇಷ್ಠನಾಗಿರುವೆ.'

سُورَةُ النُّورِ مَدَنِيَّةٌ وَهِيَ مَعَ الْبَسْمَلَةِ خَمْسٌ وَّسِتُّونَ آيَةً وَّتِسْعُ رُكُوعَاتٍ

# 24. ಅನ್ನೂರ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 65 ಆಯತ್‌ಗಳು ಹಾಗೂ 9 ರುಕೂಅ್‌ಗಳು ಇವೆ.)

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಇದು ನಾವು ಅವತೀರ್ಣಗೊಳಿಸಿದ ಒಂದು ಅಧ್ಯಾಯವಾಗಿದೆ. ಇದನ್ನು** (ಇದರ ವಿಧಿಗಳನ್ನು) **ನಾವು ಕಡ್ಡಾಯಗೊಳಿಸಿದ್ದೇವೆ. ನೀವು ಉಪದೇಶದ ಕಡೆಗೆ ಲಕ್ಷ್ಯಗೊಡಲಿಕ್ಕೋಸ್ಕರ ನಾವು ಇದರಲ್ಲಿ ಸ್ಪಷ್ಟವಾದ ವಿಧಿಗಳನ್ನು ಅವತೀರ್ಣಗೊಳಿಸಿದ್ದೇವೆ.**

سُوْرَةٌ اَنْزَلْنٰهَا وَفَرَضْنٰهَا وَاَنْزَلْنَا فِيْهَآ اٰيٰتٍۢ بَيِّنٰتٍ لَّعَلَّكُمْ تَذَكَّرُوْنَ ﴿٢﴾

**3. ವ್ಯಭಿಚಾರಿಣಿ ಮತ್ತು ವ್ಯಭಿಚಾರಿ - ಅವರಿಬ್ಬರಲ್ಲಿ ಒಬ್ಬೊಬ್ಬರಿಗೂ ನೂರರಂತೆ ಛಡಿಯೇಟು ಕೊಡಿರಿ. ನೀವು ಅಲ್ಲಾಹನಲ್ಲಿ ಮತ್ತು ಅಂತ್ಯ ದಿನದ ಬಗ್ಗೆ ವಿಶ್ವಾಸವುಳ್ಳವರಾಗಿದ್ದರೆ, ಅಲ್ಲಾಹನ ನಿಯಮವನ್ನು ಜಾರಿಗೆ ತರುವ ವಿಚಾರದಲ್ಲಿ ಅವರೀರ್ವರಿಗೆ ಸಂಬಂಧಿಸಿದಂತೆ ನೀವು ಏನೂ ದಾಕ್ಷಿಣ್ಯ ತೋರಿಸಬಾರದು. ಅವರಿಬ್ಬರ ಶಿಕ್ಷೆಗೂ ವಿಶ್ವಾಸಿಗಳ ಒಂದು ಗುಂಪು ಸಾಕ್ಷಿಯಾಗಿರಲಿ.**

اَلزَّانِيَةُ وَالزَّانِيْ فَاجْلِدُوْا كُلَّ وَاحِدٍ مِّنْهُمَا مِائَةَ جَلْدَةٍ ۪ وَّلَا تَاْخُذْكُمْ بِهِمَا رَاْفَةٌ فِيْ دِيْنِ اللّٰهِ اِنْ كُنْتُمْ تُؤْمِنُوْنَ بِاللّٰهِ وَالْيَوْمِ الْاٰخِرِ ۚ وَلْيَشْهَدْ عَذَابَهُمَا طَآئِفَةٌ مِّنَ الْمُؤْمِنِيْنَ ﴿٣﴾

**4. ವ್ಯಭಿಚಾರಿಯು ವ್ಯಭಿಚಾರಿಣಿ ಅಥವಾ ಬಹುದೇವಾರಾಧಕಳೊಂದಿಗೆ ಹೊರತು ಸಂಸರ್ಗ ಮಾಡಲಾರ.**[349] **ಅದೇ ಪ್ರಕಾರ ವ್ಯಭಿಚಾರಿಣಿಯು ವ್ಯಭಿಚಾರಿ ಅಥವಾ ಬಹುದೇವಾರಾಧಕನೊಂದಿಗೆ ಹೊರತು ಸಂಸರ್ಗ ಮಾಡಲಾರಳು. ಸತ್ಯವಿಶ್ವಾಸಿಗಳಿಗೆ ಅದು ನಿಷಿದ್ಧವಾಗಿದೆ.**

اَلزَّانِيْ لَا يَنْكِحُ اِلَّا زَانِيَةً اَوْ مُشْرِكَةً ۫ وَّالزَّانِيَةُ لَا يَنْكِحُهَآ اِلَّا زَانٍ اَوْ مُشْرِكٌ ۚ وَحُرِّمَ ذٰلِكَ عَلَى الْمُؤْمِنِيْنَ ﴿٤﴾

349. 'ನಿಕಾಹ್' ಎಂಬ ಪದಕ್ಕೆ ಎರಡು ಅರ್ಥಗಳಿವೆ. ಒಂದನೆಯದು, ವಿಧ್ಯುಕ್ತವಾಗಿ ನಡೆಯುವ ವಿವಾಹ. ಎರಡನೆಯದು, ಯಾರಾದರೂ ಗಂಡು - ಹೆಣ್ಣು ನಡೆಸುವ ಸಂಭೋಗ. ಮೇಲಿನ ವಚನದಲ್ಲಿ 'ನಿಕಾಹ್' ಎಂಬ ಪದವು ಎರಡನೆಯ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.
ವ್ಯಭಿಚಾರ ನಡೆಯುವುದು ವ್ಯಭಿಚಾರಿ ಮತ್ತು ವ್ಯಭಿಚಾರಿಣಿಯ ಮಧ್ಯದಲ್ಲಿ ಮಾತ್ರವಾಗಿರುತ್ತದೆಂದು ಇಲ್ಲಿ ಹೇಳಲಾಗಿದೆ. ಅಂದರೆ, ಒಬ್ಬ ವ್ಯಭಿಚಾರಿಗೆ ಚಾರಿತ್ರ್ಯ ಪ್ರಜ್ಞೆ ಇರುವ ಓರ್ವ ಸ್ತ್ರೀಯನ್ನು ವಶಪಡಿಸಲು ಸಾಧ್ಯವಿಲ್ಲ. ಅದೇ ಪ್ರಕಾರ ಓರ್ವ ವ್ಯಭಿಚಾರಿಣಿಗೆ ಚಾರಿತ್ರ್ಯ ಪ್ರಜ್ಞೆ ಇರುವ ಒಬ್ಬ ಪುರುಷನನ್ನು ತನ್ನ ಬಲೆಗೆ ಹಾಕಲು ಸಹ ಸಾಧ್ಯವಿಲ್ಲ. ಆದ್ದರಿಂದಲೇ ಹಿಂದಿನ ವಚನದಲ್ಲಿ ಇಬ್ಬರಿಗೂ ಶಿಕ್ಷೆ ಕೊಡಲು ಆದೇಶಿಸಲಾಗಿದೆ.





**5. ಯಾರು ಚಾರಿತ್ರ್ಯವತಿಯರಾದ ಸ್ತ್ರೀಯರ ಮೇಲೆ** (ವ್ಯಭಿಚಾರದ) **ಆರೋಪವನ್ನು ಹೊರಿಸಿ, ಅದಕ್ಕೆ ನಾಲ್ವರು ಸಾಕ್ಷಿಗಳನ್ನು ಒದಗಿಸುವುದಿಲ್ಲವೋ, ಅವರಿಗೆ** (ಆರೋಪ ಹೊರಿಸಿದವರಿಗೆ) **ಎಂಭತ್ತು ಛಡಿಯೇಟುಗಳನ್ನು ಕೊಡಿರಿ.** (ಆ ಬಳಿಕ) **ಅವರ ಸಾಕ್ಷ್ಯವನ್ನು ಎಂದಿಗೂ ನೀವು ಸ್ವೀಕರಿಸಬಾರದು. ಅವರೇ** (ಧರ್ಮದ) **ಎಲ್ಲೆ ಮೀರಿ ವರ್ತಿಸುವವರು.**

وَالَّذِيْنَ يَرْمُوْنَ الْمُحْصَنٰتِ ثُمَّ لَمْ يَاْتُوْا بِاَرْبَعَةِ شُهَدَآءَ فَاجْلِدُوْهُمْ ثَمٰنِيْنَ جَلْدَةً وَّلَا تَقْبَلُوْا لَهُمْ شَهَادَةً اَبَدًا ۚ وَاُولٰٓئِكَ هُمُ الْفٰسِقُوْنَ ﴿٥﴾

**6.** (ಆದರೆ) **ಅನಂತರ ಪಶ್ಚಾತ್ತಾಪಪಟ್ಟು ತಮ್ಮನ್ನು ತಿದ್ದಿಕೊಳ್ಳುವವರು ಇದಕ್ಕೆ ಹೊರತಾಗಿದ್ದಾರೆ. ಖಂಡಿತವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

اِلَّا الَّذِيْنَ تَابُوْا مِنْۢ بَعْدِ ذٰلِكَ وَاَصْلَحُوْا ۚ فَاِنَّ اللّٰهَ غَفُوْرٌ رَّحِيْمٌ ﴿٦﴾

**7. ತಮ್ಮ ಪತ್ನಿಯರ ಮೇಲೆ** (ವ್ಯಭಿಚಾರದ) **ಆರೋಪವನ್ನು ಹೊರಿಸುವವರು - ಅದಕ್ಕೆ ತಾವೇ ಹೊರತು ಬೇರೆ ಸಾಕ್ಷಿಗಳಿಲ್ಲದಿದ್ದರೆ - ಖಂಡಿತವಾಗಿಯೂ ತಾನು ಸತ್ಯ ನುಡಿಯುತ್ತೇನೆಂದು ನಾಲ್ಕು ಸಲ ಅಲ್ಲಾಹನ ನಾಮದಲ್ಲಿ ಪ್ರಮಾಣಮಾಡಿ ಹೇಳಬೇಕಾಗುತ್ತದೆ.**

وَالَّذِيْنَ يَرْمُوْنَ اَزْوَاجَهُمْ وَلَمْ يَكُنْ لَّهُمْ شُهَدَآءُ اِلَّآ اَنْفُسُهُمْ فَشَهَادَةُ اَحَدِهِمْ اَرْبَعُ شَهٰدٰتٍۢ بِاللّٰهِ ۙ اِنَّهٗ لَمِنَ الصّٰدِقِيْنَ ﴿٧﴾

**8. ಐದನೆಯ ಸಲ ಅವನು** ಪ್ರಮಾಣಮಾಡಿ, **'ತಾನು ಸುಳ್ಳುಗಾರನಾಗಿದ್ದರೆ ತನ್ನ ಮೇಲೆ ಅಲ್ಲಾಹನ ಶಾಪ ವಿರಲಿ ಎಂದು** *ಸಹ ಹೇಳಬೇಕಾಗಿದೆ.*

وَالْخَامِسَةُ اَنَّ لَعْنَتَ اللّٰهِ عَلَيْهِ اِنْ كَانَ مِنَ الْكٰذِبِيْنَ ﴿٨﴾

**9. ಆದರೆ 'ಖಂಡಿತವಾಗಿಯೂ ಅವನು** (ಪತಿ) **ಸುಳ್ಳು ಹೇಳುತ್ತಾನೆ' ಎಂದು ಅಲ್ಲಾಹನ ನಾಮದಲ್ಲಿ ಪ್ರಮಾಣ ಮಾಡಿ ನಾಲ್ಕು ಸಲ ಅವಳು** (ಆರೋಪಿಸಲ್ಪಟ್ಟ ಪತ್ನಿ) **ಹೇಳಿದರೆ ಅವಳು ಶಿಕ್ಷೆಯಿಂದ ಪಾರಾಗುವಳು;**

وَيَدْرَؤُا عَنْهَا الْعَذَابَ اَنْ تَشْهَدَ اَرْبَعَ شَهٰدٰتٍۢ بِاللّٰهِ ۙ اِنَّهٗ لَمِنَ الْكٰذِبِيْنَ ﴿٩﴾

**10.** (ಅಷ್ಟೇ ಅಲ್ಲ) **ಅವಳು ಐದನೆಯ ಸಲ** ಪ್ರಮಾಣ ಮಾಡಿ **ಅವನು ಸತ್ಯವಂತನಾಗಿದ್ದರೆ ತನ್ನ ಮೇಲೆ ಅಲ್ಲಾಹನ ಕೋಪವೆರಗಲಿ ಎಂದು** *ಸಹ ಹೇಳಬೇಕಾಗಿದೆ.*

وَالْخَامِسَةَ اَنَّ غَضَبَ اللّٰهِ عَلَيْهَآ اِنْ كَانَ مِنَ الصّٰدِقِيْنَ ﴿١٠﴾

**11.** ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಅವನ ಕರುಣೆ ಇಲ್ಲದಿರುತ್ತಿದ್ದರೆ ಹಾಗೂ ಅಲ್ಲಾಹನು ದಯಾವಂತನೂ ವಿವೇಕಶಾಲಿಯೂ ಅಲ್ಲದಿರುತ್ತಿದ್ದರೆ (ನೀವು ಸಂಕಷ್ಟಕ್ಕೆ ಗುರಿಯಾಗುತ್ತಿದ್ದಿರಿ).

وَلَوْلَا فَضْلُ اللّٰهِ عَلَيْكُمْ وَرَحْمَتُهٗ وَاَنَّ اللّٰهَ تَوَّابٌ حَكِيْمٌ ﴿١١﴾ ع

**12.** ನಿಶ್ಚಯವಾಗಿಯೂ ಆ ಮಹಾ ಸುಳ್ಳನ್ನು ಆರೋಪಿಸಿದವರು ನಿಮ್ಮ ಪೈಕಿಯ ಒಂದು ಗುಂಪಿನವರೇ ಆಗಿದ್ದಾರೆ.[349A] ಅದು ನಿಮಗೆ ದೋಷಕರವೆಂದು ಭಾವಿಸಬೇಡಿರಿ. ಬದಲು, ನಿಮಗೆ ಅದು ಗುಣಕರವಾಗಿದೆ. ಅವರ ಪೈಕಿ ಪ್ರತಿಯೊಬ್ಬನಿಗೂ ಅವನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆ ಸಿಗುವುದು. ಹಾಗೂ ಅವರಲ್ಲಿ ಆ ಬಗ್ಗೆ ಮುಖ್ಯ ಪಾತ್ರ ವಹಿಸಿದವನಿಗೆ ಬಲು ದೊಡ್ಡ ಶಿಕ್ಷೆ ಕಾದಿದೆ.

اِنَّ الَّذِيْنَ جَآءُوْ بِالْاِفْكِ عُصْبَةٌ مِّنْكُمْ ۚ لَا تَحْسَبُوْهُ شَرًّا لَّكُمْ ۚ بَلْ هُوَ خَيْرٌ لَّكُمْ ۚ لِكُلِّ امْرِئٍ مِّنْهُمْ مَّا اكْتَسَبَ مِنَ الْاِثْمِ ۚ وَالَّذِيْ تَوَلّٰى كِبْرَهٗ مِنْهُمْ لَهٗ عَذَابٌ عَظِيْمٌ ﴿١٢﴾

**13.** ನೀವು ಆ ಮಾತನ್ನು ಕೇಳಿದಾಗ ಸತ್ಯ ವಿಶ್ವಾಸಿಗಳಾದ ಪುರುಷರೂ ಸ್ತ್ರೀಯರೂ ತಮ್ಮ ಜನರ ಕುರಿತು ಒಳಿತನ್ನು ಬಗೆದು 'ಇದು ಬರೇ ಸುಳ್ಳು' ಎಂದು ಯಾಕೆ ಹೇಳಲಿಲ್ಲ?

لَوْلَآ اِذْ سَمِعْتُمُوْهُ ظَنَّ الْمُؤْمِنُوْنَ وَالْمُؤْمِنٰتُ بِاَنْفُسِهِمْ خَيْرًا ۙ وَّقَالُوْا هٰذَآ اِفْكٌ مُّبِيْنٌ ﴿١٣﴾

**14.** ಅದಕ್ಕೆ (ಅದನ್ನು ರುಜುಪಡಿಸಲಿಕ್ಕೋಸ್ಕರ) ಅವರು ನಾಲ್ಕು ಸಾಕ್ಷಿಗಳನ್ನೇಕೆ ತರಲಿಲ್ಲ? ಅಗತ್ಯದ ಸಾಕ್ಷಿಗಳನ್ನು ಅವರು ತಾರದೆ ಇದ್ದ ಕಾರಣ ಅಲ್ಲಾಹನ ದೃಷ್ಟಿಯಲ್ಲಿ ಅವರೇ ಸುಳ್ಳು ಹೇಳುವವರಾಗುತ್ತಾರೆ.

لَوْلَا جَآءُوْ عَلَيْهِ بِاَرْبَعَةِ شُهَدَآءَ ۚ فَاِذْ لَمْ يَاْتُوْا بِالشُّهَدَآءِ فَاُولٰٓئِكَ عِنْدَ اللّٰهِ هُمُ الْكٰذِبُوْنَ ﴿١٤﴾

**15.** ಅಲ್ಲಾಹನ ಅನುಗ್ರಹ ಮತ್ತು ಕರುಣೆ ಇಹದಲ್ಲಿಯೂ ಪರದಲ್ಲಿಯೂ ನಿಮಗೆ ದೊರಕದಿರುತ್ತಿದ್ದರೆ ನಿಮ್ಮ ಹದೆಗೆಟ್ಟ ಮಾತಿನ ಕಾರಣದಿಂದ ನೀವು ಬಲುದೊಡ್ಡ ಶಿಕ್ಷೆಗೆ ಗುರಿಯಾಗುತ್ತಿದ್ದಿರಿ.

وَلَوْلَا فَضْلُ اللّٰهِ عَلَيْكُمْ وَرَحْمَتُهٗ فِى الدُّنْيَا وَالْاٰخِرَةِ لَمَسَّكُمْ فِيْ مَآ اَفَضْتُمْ فِيْهِ عَذَابٌ عَظِيْمٌ ﴿١٥﴾

**16.** ನಿಮ್ಮ ನಾಲಗೆಯಿಂದ ನೀವು ಆ ಮಾತನ್ನು ಎತ್ತಿಕೊಂಡು ಪ್ರಚಾರ ಮಾಡುತ್ತಲೂ ನಿಮಗೆ ತಿಳಿದಿಲ್ಲದ ವಿಚಾರವನ್ನು ಕುರಿತು ನೀವು ನಿಮ್ಮ ಬಾಯಿಯಿಂದ ಹೇಳುತ್ತಲೂ ಇದ್ದಾಗ, ಅದೊಂದು

اِذْ تَلَقَّوْنَهٗ بِاَلْسِنَتِكُمْ وَتَقُوْلُوْنَ بِاَفْوَاهِكُمْ مَّا لَيْسَ لَكُمْ بِهٖ عِلْمٌ وَّ

349A. ಹಝ್ರತ್ ಆಯಿಶಾ(ರ) ಅವರ ಕುರಿತು ಕಪಟ ವಿಶ್ವಾಸಿಗಳು ಸೃಷ್ಟನೆ ಮಾಡಿದ ಸುಳ್ಳು ಇಲ್ಲಿ ಉದ್ದೇಶಿಸಲ್ಪಟ್ಟಿದೆ.





ಕ್ಷುಲ್ಲಕ ಸಂಗತಿಯೆಂದು ನೀವು ಭಾವಿಸಿದಿರಿ. ಆದರೆ ಅಲ್ಲಾಹನ ದೃಷ್ಟಿಯಲ್ಲಿ ಅದು ಅತಿ ಗಂಭೀರವಾದ ವಿಷಯವಾಗಿದೆ.

تَحْسَبُوْنَهٗ هَيِّنًا ۖ وَّهُوَ عِنْدَ اللّٰهِ عَظِيْمٌ ﴿١٦﴾

**17.** ನೀವು ಆ ಸುದ್ದಿಯನ್ನು ಕೇಳಿದಾಗ, 'ನಾವು ಈ ಬಗ್ಗೆ ಮಾತನಾಡಬಾರದು. ಅಲ್ಲಾಹನೇ ನೀನು ಪರಿಶುದ್ಧನು; ಇದು ದೊಡ್ಡದಾದೊಂದು ಸುಳ್ಳಾರೋಪವಾಗಿದೆ' ಎಂದು ನೀವೇಕೆ ಹೇಳಲಿಲ್ಲ?

وَلَوْلَآ اِذْ سَمِعْتُمُوْهُ قُلْتُمْ مَّا يَكُوْنُ لَنَآ اَنْ نَّتَكَلَّمَ بِهٰذَا ۖ سُبْحٰنَكَ هٰذَا بُهْتَانٌ عَظِيْمٌ ﴿١٧﴾

**18.** ನೀವು ಸತ್ಯ ವಿಶ್ವಾಸಿಗಳಾಗಿದ್ದರೆ ಅಂತಹ ವರ್ತನೆಯನ್ನು ಮುಂದೆಂದೂ ತೋರಿಸಬಾರದೆಂದು ಅಲ್ಲಾಹನು ನಿಮಗೆ ಉಪದೇಶಿಸುತ್ತಾನೆ.

يَعِظُكُمُ اللّٰهُ اَنْ تَعُوْدُوْا لِمِثْلِهٖٓ اَبَدًا اِنْ كُنْتُمْ مُّؤْمِنِيْنَ ﴿١٨﴾

**19.** ಅಲ್ಲಾಹನು ನಿಮಗೆ (ತನ್ನ) ವಿಧಿಗಳ ಬಗ್ಗೆ ವಿವರಿಸಿ ಕೊಡುತ್ತಾನೆ. ಅಲ್ಲಾಹನು ಸರ್ವಜ್ಞನೂ ಜಾಣ್ಮೆಯುಳ್ಳವನೂ ಆಗಿದ್ದಾನೆ.

وَيُبَيِّنُ اللّٰهُ لَكُمُ الْاٰيٰتِ ۗ وَاللّٰهُ عَلِيْمٌ حَكِيْمٌ ﴿١٩﴾

**20.** ಸತ್ಯವಿಶ್ವಾಸಿಗಳ ಮಧ್ಯೆ ಅಶ್ಲೀಲತೆ ಹರಡಬೇಕೆಂದು ಬಯಸುವವರಿಗೆ ಈ ಲೋಕದಲ್ಲೂ ಪರಲೋಕದಲ್ಲೂ ಯಾತನಾಮಯವಾದ ಶಿಕ್ಷೆ ಇದೆ. ಅಲ್ಲಾಹನು ತಿಳಿಯುತ್ತಾನೆ; ನೀವು ತಿಳಿಯುವುದಿಲ್ಲ.

اِنَّ الَّذِيْنَ يُحِبُّوْنَ اَنْ تَشِيْعَ الْفَاحِشَةُ فِى الَّذِيْنَ اٰمَنُوْا لَهُمْ عَذَابٌ اَلِيْمٌ ۙ فِى الدُّنْيَا وَالْاٰخِرَةِ ۗ وَاللّٰهُ يَعْلَمُ وَاَنْتُمْ لَا تَعْلَمُوْنَ ﴿٢٠﴾

**21.** ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಕರುಣೆ ಇಲ್ಲದಿರುತ್ತಿದ್ದರೆ ಹಾಗೂ ಅಲ್ಲಾಹನು ದಯಾವಂತನೂ ಕಾರುಣ್ಯವಂತನೂ ಅಲ್ಲದಿರುತ್ತಿದ್ದರೆ (ನೀವು ಸಂಕಷ್ಟಕ್ಕೊಳಗಾಗುತ್ತಿದ್ದಿರಿ).

وَلَوْلَا فَضْلُ اللّٰهِ عَلَيْكُمْ وَرَحْمَتُهٗ وَاَنَّ اللّٰهَ رَءُوْفٌ رَّحِيْمٌ ﴿٢١﴾ ع

**22.** ಎಲ್ಲೈ ಸತ್ಯವಿಶ್ವಾಸಿಗಳೇ, ಶೈತಾನನ ಹೆಜ್ಜೆಗಳನ್ನು ನೀವು ಅನುಗಮಿಸಬೇಡಿರಿ. ಶೈತಾನನ ಹೆಜ್ಜೆಗಳನ್ನು ಅನುಗಮಿಸುವವರು ತಿಳಿದುಕೊಳ್ಳಲಿ ಖಂಡಿತವಾಗಿಯೂ ಅವನು ಅಶ್ಲೀಲತೆಯನ್ನೂ ಕೆಡುಕನ್ನೂ ಆದೇಶಿಸುತ್ತಾನೆ. ಅಲ್ಲಾಹನ ಅನುಗ್ರಹ ಮತ್ತು ಅವನ ಕರುಣೆ ನಿಮ್ಮ ಮೇಲೆ ಇಲ್ಲದಿರುತ್ತಿದ್ದರೆ

يٰٓاَيُّهَا الَّذِيْنَ اٰمَنُوْا لَا تَتَّبِعُوْا خُطُوٰتِ الشَّيْطٰنِ ۗ وَمَنْ يَّتَّبِعْ خُطُوٰتِ الشَّيْطٰنِ فَاِنَّهٗ يَاْمُرُ بِالْفَحْشَآءِ وَالْمُنْكَرِ ۗ وَلَوْلَا فَضْلُ اللّٰهِ عَلَيْكُمْ وَرَحْمَتُهٗ مَا زَكٰى

ನಿಮ್ಮ ಪೈಕಿ ಯಾರೊಬ್ಬನೂ ಎಂದಿಗೂ ಪರಿಶುದ್ಧನಾಗುತ್ತಿರಲಿಲ್ಲ. ಆದರೆ, ಅಲ್ಲಾಹನು ತಾನಿಚ್ಛಿಸುವವರನ್ನು ಪರಿಶುದ್ಧರನ್ನಾಗಿ ಮಾಡುತ್ತಾನೆ. ಅಲ್ಲಾಹನು ಬಹಳವಾಗಿ ಆಲಿಸುವವನೂ ಸರ್ವಜ್ಞನೂ ಆಗಿದ್ದಾನೆ.

مِنْكُمْ مِّنْ اَحَدٍ اَبَدًا ۙ وَّلٰكِنَّ اللّٰهَ يُزَكِّيْ مَنْ يَّشَآءُ ۗ وَاللّٰهُ سَمِيْعٌ عَلِيْمٌ ﴿٢١﴾

**23.** ನಿಮ್ಮ ಪೈಕಿ (ಧಾರ್ಮಿಕವಾಗಿಯೂ ಭೌತಿಕವಾಗಿಯೂ) ಉನ್ನತ ಸ್ಥಾನದಲ್ಲಿರುವವರು ಮತ್ತು ಐಶ್ವರ್ಯವಂತರು ತಮ್ಮ ನಿಕಟ ಸಂಬಂಧಿಕರಿಗೂ ನಿರ್ಗತಿಕರಿಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋದವರಿಗೂ ಏನನ್ನೂ ನೀಡೆವು ಎಂದು ಪ್ರತಿಜ್ಞೆ ಮಾಡಬಾರದು. ಅವರು ಕ್ಷಮಿಸಲಿ ಮತ್ತು ಸೈರಿಸಿಕೊಳ್ಳಲಿ. ಅಲ್ಲಾಹನು ನಿಮಗೆ ಕ್ಷಮೆ ನೀಡಬೇಕೆಂದು ನೀವು ಬಯಸುವುದಿಲ್ಲವೇ? ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯ ನಿಧಿಯೂ ಆಗಿದ್ದಾನೆ.

وَلَا يَأْتَلِ اُولُوا الْفَضْلِ مِنْكُمْ وَالسَّعَةِ اَنْ يُّؤْتُوْٓا اُولِي الْقُرْبٰى وَالْمَسٰكِيْنَ وَالْمُهٰجِرِيْنَ فِيْ سَبِيْلِ اللّٰهِ ۖ وَلْيَعْفُوْا وَلْيَصْفَحُوْا ۗ اَلَا تُحِبُّوْنَ اَنْ يَّغْفِرَ اللّٰهُ لَكُمْ ۗ وَاللّٰهُ غَفُوْرٌ رَّحِيْمٌ ﴿٢٢﴾

**24.** ಚಾರಿತ್ರ್ಯವತಿಯರೂ (ಮುಗ್ಧೆಯರೂ ಆದ) ಸತ್ಯವಿಶ್ವಾಸಿನಿಯರ ಮೇಲೆ ಯಾರು ಆರೋಪ ಹೊರಿಸುತ್ತಾರೋ ಅವರು ಇಹಲೋಕದಲ್ಲೂ ಪರಲೋಕದಲ್ಲೂ ಶಾಪಕ್ಕೆ ಗುರಿಯಾಗುವರು. ಅವರಿಗೆ ಕಠೋರವಾದ ಶಿಕ್ಷೆ ಇದೆ.

اِنَّ الَّذِيْنَ يَرْمُوْنَ الْمُحْصَنٰتِ الْغٰفِلٰتِ الْمُؤْمِنٰتِ لُعِنُوْا فِي الدُّنْيَا وَالْاٰخِرَةِ ۪ وَلَهُمْ عَذَابٌ عَظِيْمٌ ﴿٢٣﴾

**25.** ಅವರ ಕೃತ್ಯಗಳ ಬಗ್ಗೆ ಅವರ ನಾಲಗೆಗಳೂ ಅವರ ಕೈಗಳೂ ಅವರ ಕಾಲುಗಳೂ ಅವರ ವಿರುದ್ಧ ಸಾಕ್ಷ್ಯ ನೀಡುವ ದಿನ -

يَّوْمَ تَشْهَدُ عَلَيْهِمْ اَلْسِنَتُهُمْ وَاَيْدِيْهِمْ وَاَرْجُلُهُمْ بِمَا كَانُوْا يَعْمَلُوْنَ ﴿٢٤﴾

**26.** ಆ ದಿನದಂದು ಅಲ್ಲಾಹನು ಅವರಿಗೆ ತಕ್ಕುದಾದ ಪ್ರತಿಫಲ ನೀಡುವನು. ಅಲ್ಲಾಹನೇ ಸ್ಪಷ್ಟವಾದ ಸತ್ಯಸ್ವರೂಪನೆಂದು ಅವರು ಮನಗಾಣುವರು.

يَوْمَئِذٍ يُّوَفِّيْهِمُ اللّٰهُ دِيْنَهُمُ الْحَقَّ وَيَعْلَمُوْنَ اَنَّ اللّٰهَ هُوَ الْحَقُّ الْمُبِيْنُ ﴿٢٥﴾

**27.** ದುಷ್ಕೃತ್ಯಗಳು ದುರ್ಜನರಿಗೆ ಹಾಗೂ ದುರ್ಜನರು ದುಷ್ಕೃತ್ಯಗಳಿಗೆ. ಅದೇ ರೀತಿ ಸತ್ಕರ್ಮಗಳು ಸಜ್ಜನರಿಗೆ ಹಾಗೂ ಸಜ್ಜನರು ಸತ್ಕರ್ಮಗಳಿಗೆ. ಅವರು (ದುರಾರೋಪ ಹೊರಿಸುವವರು) ಹೇಳುವುದರಿಂದೆಲ್ಲ

اَلْخَبِيْثٰتُ لِلْخَبِيْثِيْنَ وَالْخَبِيْثُوْنَ لِلْخَبِيْثٰتِ ۚ وَالطَّيِّبٰتُ لِلطَّيِّبِيْنَ وَ





ಅಂತಹವರು (ಸಜ್ಜನರು) ಪರಿಶುದ್ಧರು. ಅವರಿಗೆ ಕ್ಷಮಾದಾನ ಮತ್ತು ಗೌರವಯುತ ಆಹಾರವಿದೆ.

الطَّيِّبُوْنَ لِلطَّيِّبٰتِ ۚ اُولٰٓئِكَ مُبَرَّءُوْنَ مِمَّا يَقُوْلُوْنَ ۗ لَهُمْ مَّغْفِرَةٌ وَّرِزْقٌ كَرِيْمٌ ﴿٢٦﴾

**28.** ಎಲೈ ಸತ್ಯವಿಶ್ವಾಸಿಗಳೇ, ನಿಮ್ಮ ಸ್ವಂತ ಮನೆಗಳನ್ನು ಹೊರತು ಅನ್ಯರ ಮನೆಗಳನ್ನು ಅವರ ಅನುಮತಿ ವಿನಾ ಮತ್ತು ಅವರಿಗೆ ಸಲಾಂ ಹೇಳದೆ ನೀವು ಪ್ರವೇಶಿಸಬಾರದು. ನೀವು ಲಕ್ಷ್ಯಗೊಡುವುದಾದರೆ ಇದು ನಿಮಗೆ ಉತ್ತಮವಾಗಿದೆ.

يٰٓاَيُّهَا الَّذِيْنَ اٰمَنُوْا لَا تَدْخُلُوْا بُيُوْتًا غَيْرَ بُيُوْتِكُمْ حَتّٰى تَسْتَاْنِسُوْا وَتُسَلِّمُوْا عَلٰٓى اَهْلِهَا ۗ ذٰلِكُمْ خَيْرٌ لَّكُمْ لَعَلَّكُمْ تَذَكَّرُوْنَ ﴿٢٧﴾

**29.** ಅಲ್ಲಿ ನೀವು ಯಾರನ್ನೂ ಕಾಣದಿದ್ದರೆ ನಿಮಗೆ ಅನುಮತಿ ಸಿಗುವ ತನಕ ನೀವು ಅದರೊಳಗೆ ಪ್ರವೇಶಿಬಾರದು. 'ಹಿಂತಿರುಗಿ ಹೋಗಿರಿ' ಎಂದು ನಿಮ್ಮೊಡನೆ ಹೇಳಲಾದರೆ ನೀವು ಹಿಂತಿರುಗಿ ಹೋಗಿರಿ. ಅದು ನಿಮಗೆ ಪರಿಶುದ್ಧವಾದ ಕ್ರಮವಾಗಿದೆ. ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

فَاِنْ لَّمْ تَجِدُوْا فِيْهَآ اَحَدًا فَلَا تَدْخُلُوْهَا حَتّٰى يُؤْذَنَ لَكُمْ ۚ وَاِنْ قِيْلَ لَكُمُ ارْجِعُوْا فَارْجِعُوْا هُوَ اَزْكٰى لَكُمْ ۗ وَاللّٰهُ بِمَا تَعْمَلُوْنَ عَلِيْمٌ ﴿٢٨﴾

**30.** ಜನವಾಸವಿಲ್ಲದ ಮನೆಗಳೊಳಗೆ, ಅಲ್ಲಿ ನಿಮ್ಮ ಸಾಮಾನು ಸರಂಜಾಮುಗಳೇನಾದರೂ ಇದ್ದರೆ, ನೀವು ಪ್ರವೇಶಿಸಿದರೆ ತಪ್ಪಿಲ್ಲ. ನೀವು ಬಹಿರಂಗ ಪಡಿಸುವುದನ್ನೂ ಬಚ್ಚಿಡುವುದನ್ನೂ ಅಲ್ಲಾಹನು ಬಲ್ಲನು.

لَيْسَ عَلَيْكُمْ جُنَاحٌ اَنْ تَدْخُلُوْا بُيُوْتًا غَيْرَ مَسْكُوْنَةٍ فِيْهَا مَتَاعٌ لَّكُمْ ۗ وَاللّٰهُ يَعْلَمُ مَا تُبْدُوْنَ وَمَا تَكْتُمُوْنَ ﴿٢٩﴾

**31.** ಸತ್ಯವಿಶ್ವಾಸಿಗಳೊಡನೆ ಹೇಳು - ಅವರು ತಮ್ಮ ಕಣ್ಣುಗಳನ್ನು ಹತೋಟಿಯಲ್ಲಿಡಲಿ ಮತ್ತು ತಮ್ಮ ಗುಪ್ತಾಂಗಗಳನ್ನು ಕಾಪಾಡಿಕೊಳ್ಳಲಿ. ಅದು ಅವರಿಗೆ ಪರಿಶುದ್ಧವಾದ ಮಾರ್ಗವಾಗಿದೆ. ಅವರ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

قُلْ لِّلْمُؤْمِنِيْنَ يَغُضُّوْا مِنْ اَبْصَارِهِمْ وَيَحْفَظُوْا فُرُوْجَهُمْ ۗ ذٰلِكَ اَزْكٰى لَهُمْ ۗ اِنَّ اللّٰهَ خَبِيْرٌ ۢ بِمَا يَصْنَعُوْنَ ﴿٣٠﴾

**32.** ಸತ್ಯವಿಶ್ವಾಸಿನಿಯವರೊಡನೆ ಹೇಳು - ಅವರು ತಮ್ಮ ಕಣ್ಣುಗಳನ್ನು ಹತೋಟಿಯಲ್ಲಿಡಲಿ ಮತ್ತು ಗುಪ್ತಾಂಗಗಳನ್ನು ಕಾಪಾಡಲಿ. ಅವರು ತಮ್ಮ ಸೌಂದರ್ಯವನ್ನು ತೋರ್ಪಡಿಸದಿರಲಿ - ತನ್ನಿಂತಾನೆ

وَقُلْ لِّلْمُؤْمِنٰتِ يَغْضُضْنَ مِنْ اَبْصَارِهِنَّ وَيَحْفَظْنَ فُرُوْجَهُنَّ وَلَا يُبْدِيْنَ زِيْنَتَهُنَّ اِلَّا مَا ظَهَرَ مِنْهَا وَلْيَضْرِبْنَ بِخُمُرِهِنَّ عَلٰى

ಪ್ರಕಟಗೊಳ್ಳುವುದರ ಹೊರತು. ಅವರು ತಮ್ಮ ಶಿರೋವಸ್ತ್ರದಿಂದ ತಮ್ಮ ಎದೆಯನ್ನೂ ಮುಚ್ಚಲಿ. ಅವರು ತಮ್ಮ ಪತಿಯರು, ಪಿತರು, ಪತಿಯ ಪಿತರು, ಪುತ್ರರು, ಪತಿಯ ಪುತ್ರರು, ಸಹೋದರರು, ಸಹೋದರರ ಪುತ್ರರು, ಸಹೋದರಿಯರ ಪುತ್ರರು, ತಮ್ಮಂತಹ ಸ್ತ್ರೀಯರು ತಮ್ಮ ಅಧೀನದಲ್ಲಿರುವವರು (ದಾಸಿಯರು), ಪುರುಷರ ಪೈಕಿ ಲೈಂಗಿಕಾಭಿಲಾಷೆಯಿಲ್ಲದ ಪರಿಚಾರಕರು, ಸ್ತ್ರೀಯರ ಲೈಂಗಿಕ ರಹಸ್ಯಗಳ ಅರಿವಿಲ್ಲದ ಬಾಲಕರು - ಇವರಿಗೆ ಹೊರತು ತಮ್ಮ ಸೌಂದರ್ಯವನ್ನು ತೋರ್ಪಡಿಸಬಾರದು. ತಮ್ಮ ಮುಚ್ಚಿಟ್ಟ ಸೌಂದರ್ಯವನ್ನು ಬಹಿರಂಗಪಡಿಸಲಿಕ್ಕಾಗಿ ಅವರು ತಮ್ಮ ಕಾಲುಗಳನ್ನು ನೆಲಕ್ಕೆ ಅಪ್ಪಳಿಸಬಾರದು. ಎಲೈ ಸತ್ಯ ವಿಶ್ವಾಸಿಗಳೇ, ನೀವು ಯಶಸ್ಸು ಗಳಿಸಲಿ ಕ್ಕೋಸ್ಕರ ಎಲ್ಲರೂ ಅಲ್ಲಾಹನ ಕಡೆಗೆ ಮರಳಿರಿ.

جُيُوبِهِنَّ ۖ وَلَا يُبْدِينَ زِينَتَهُنَّ إِلَّا
لِبُعُولَتِهِنَّ أَوْ آبَائِهِنَّ أَوْ آبَاءِ بُعُولَتِهِنَّ
أَوْ أَبْنَائِهِنَّ أَوْ أَبْنَاءِ بُعُولَتِهِنَّ أَوْ
إِخْوَانِهِنَّ أَوْ بَنِي إِخْوَانِهِنَّ أَوْ بَنِي
أَخَوَاتِهِنَّ أَوْ نِسَائِهِنَّ أَوْ مَا مَلَكَتْ
أَيْمَانُهُنَّ أَوِ التَّابِعِينَ غَيْرِ أُولِي
الْإِرْبَةِ مِنَ الرِّجَالِ أَوِ الطِّفْلِ الَّذِينَ
لَمْ يَظْهَرُوا عَلَىٰ عَوْرَاتِ النِّسَاءِ ۖ وَلَا
يَضْرِبْنَ بِأَرْجُلِهِنَّ لِيُعْلَمَ مَا يُخْفِينَ مِنْ
زِينَتِهِنَّ ۚ وَتُوبُوا إِلَى اللَّهِ جَمِيعًا أَيُّهَ
الْمُؤْمِنُونَ لَعَلَّكُمْ تُفْلِحُونَ ﴿٣١﴾

**33.** ನಿಮ್ಮಲ್ಲಿರುವ ವಿಧವೆಯರಿಗೂ (ಮದುವೆಗೆ) ಯೋಗ್ಯರಾದ ಪುರುಷ ಮತ್ತು ಸ್ತ್ರೀ ಗುಲಾಮರಿಗೂ ವಿವಾಹ ಮಾಡಿಸಿರಿ. ಅವರು ದರಿದ್ರರಾಗಿದ್ದರೆ ಅಲ್ಲಾಹನು ತನ್ನ ಅನುಗ್ರಹದಿಂದ ಅವರಿಗೆ ಐಶ್ವರ್ಯವನ್ನು ದಯಪಾಲಿಸುವನು. ಅಲ್ಲಾಹನು ಅತಿ ಉದಾರಿಯೂ ಸರ್ವಜ್ಞನೂ ಆಗಿದ್ದಾನೆ.

وَأَنْكِحُوا الْأَيَامَىٰ مِنْكُمْ وَالصَّالِحِينَ مِنْ
عِبَادِكُمْ وَإِمَائِكُمْ ۚ إِنْ يَكُونُوا فُقَرَاءَ
يُغْنِهِمُ اللَّهُ مِنْ فَضْلِهِ ۗ وَاللَّهُ وَاسِعٌ
عَلِيمٌ ﴿٣٢﴾

**34.** ಮದುವೆಯಾಗಲು ಅನುಕೂಲವಿಲ್ಲದವರು ಅಲ್ಲಾಹನು ತನ್ನ ಅನುಗ್ರಹದಿಂದ ಅವರನ್ನು ಸಂಪನ್ನಗೊಳಿಸುವ ತನಕ ತಮ್ಮ ಚಾರಿತ್ರ್ಯವನ್ನು ಕಾಪಾಡಿಕೊಳ್ಳಲಿ. ನಿಮ್ಮ ಗುಲಾಮರ ಪೈಕಿ ಯಾರಾದರೂ ಬಿಡುಗಡೆಯ ಒಪ್ಪಂದವನ್ನು ಬರೆದುಕೊಡಲು ಅಪೇಕ್ಷಿಸಿದರೆ - ಅವರಿಗೆ ಅರ್ಹತೆ ಇದೆಯೆಂದು ನಿಮಗೆ ಮನವರಿಕೆಯಾದರೆ- ಬರೆದುಕೊಡಿರಿ. ನಿಮಗೆ ಅಲ್ಲಾಹನು ದಯಪಾಲಿಸಿದ ಸಂಪತ್ತಿನಿಂದ ಅವರಿಗೂ ನೀಡಿರಿ. ನಿಮ್ಮ ಗುಲಾಮ ಸ್ತ್ರೀಯರನ್ನು, ಅವರು ಚಾರಿತ್ರ್ಯವನ್ನು ಕಾಪಾಡಲು

وَلْيَسْتَعْفِفِ الَّذِينَ لَا يَجِدُونَ نِكَاحًا
حَتَّىٰ يُغْنِيَهُمُ اللَّهُ مِنْ فَضْلِهِ ۗ وَالَّذِينَ
يَبْتَغُونَ الْكِتَابَ مِمَّا مَلَكَتْ أَيْمَانُكُمْ
فَكَاتِبُوهُمْ إِنْ عَلِمْتُمْ فِيهِمْ خَيْرًا ۖ





ಬಯಸಿದರೆ, ನೀವು ಐಹಿಕ ಜೀವನದ ಐಶ್ವರ್ಯದ ಅಭಿಲಾಷೆಯಿಂದ (ಅವರ ಮದುವೆಯನ್ನು ತಡೆದು) ಅವರನ್ನು ವ್ಯಭಿಚಾರಕ್ಕೆ ಬಲವಂತಪಡಿಸಬೇಡಿರಿ.[349B] ಯಾರಾದರೂ ಅವರನ್ನು (ಆ ಗುಲಾಮ ಸ್ತ್ರೀಯರನ್ನು ವ್ಯಭಿಚಾರಕ್ಕೆ) ಬಲವಂತ ಮಾಡಿದರೆ, ಅವರು ಬಲವಂತಕ್ಕೊಳಗಾದ ಕಾರಣ ಅಲ್ಲಾಹನು ನಿಶ್ಚಯವಾಗಿಯೂ (ಅವರಿಗೆ) ಕ್ಷಮೆ ನೀಡುವವನೂ ಕರುಣೆದೋರುವವನೂ ಆಗಿದ್ದಾನೆ.

وَآتُوهُمْ مِنْ مَالِ اللَّهِ الَّذِي آتَاكُمْ ۚ
وَلَا تُكْرِهُوا فَتَيَاتِكُمْ عَلَى الْبِغَاءِ إِنْ
أَرَدْنَ تَحَصُّنًا لِتَبْتَغُوا عَرَضَ الْحَيَاةِ
الدُّنْيَا ۚ وَمَنْ يُكْرِهْهُنَّ فَإِنَّ اللَّهَ مِنْ
بَعْدِ إِكْرَاهِهِنَّ غَفُورٌ رَحِيمٌ ﴿٣٣﴾

**35.** ದಿಟವಾಗಿಯೂ ನಾವು ನಿಮಗೆ ಸ್ಪಷ್ಟವಾದ ದೃಷ್ಟಾಂತಗಳನ್ನೂ ನಿಮಗಿಂತ ಮೊದಲು ಗತಿಸಿದವರ ಉದಾಹರಣೆಗಳನ್ನೂ ಭಯಭಕ್ತಿ ತೋರಿಸುವವರಿಗೆ ತತ್ವೋಪದೇಶಗಳನ್ನೂ ಅವತೀರ್ಣಗೊಳಿಸಿದ್ದೇವೆ.

وَلَقَدْ أَنْزَلْنَا إِلَيْكُمْ آيَاتٍ مُبَيِّنَاتٍ وَمَثَلًا
مِنَ الَّذِينَ خَلَوْا مِنْ قَبْلِكُمْ وَمَوْعِظَةً
لِلْمُتَّقِينَ ﴿٣٤﴾ ع

**36.** ಅಲ್ಲಾಹನು ಆಕಾಶಗಳ ಮತ್ತು ಭೂಮಿಯ ಪ್ರಕಾಶವಾಗಿದ್ದಾನೆ. ಅವನ ಪ್ರಕಾಶದ ಉಪಮೆ - ಒಂದು (ಹೊಳವುಳ್ಳ) ಗೋಡೆಗೂಡು ಇದ್ದು ಅದರೊಳಗೆ ಒಂದು ದೀಪವಿಟ್ಟ ಹಾಗೆ. ಆ ದೀಪ ಒಂದು ಗಾಜಿನ ಬುರುಡೆಯೊಳಗಿದೆ; ಆ ಗಾಜಿನ ಬುರುಡೆ ಪ್ರಕಾಶಮಾನವಾದ ನಕ್ಷತ್ರದಂತೆ ಹೊಳೆಯುತ್ತದೆ. ಅದು (ಆ ದೀಪ), ಪೌರ್ವಾತ್ಯವಾಗಲಿ ಪಾಶ್ಚಿಮಾತ್ಯ ವಾಗಲಿ ಅಲ್ಲದ [350] ಅನುಗ್ರಹೀತವಾದೊಂದು ಓಲಿವ್ ವೃಕ್ಷದ ತೈಲದಿಂದ ಉರಿಸಲ್ಪಡುತ್ತದೆ; ಅಗ್ನಿ ಆ ತೈಲವನ್ನು ಸ್ಪರ್ಶಿಸಿಲ್ಲವಾದರೂ ಅದು ತನ್ನಿಂತಾನೇ ಪ್ರಕಾಶಿಸುವುದು; ಪ್ರಕಾಶದ ಮೇಲೆ ಪ್ರಕಾಶ. ಅಲ್ಲಾಹನು ತಾನಿಚ್ಛಿಸುವವರನ್ನು ತನ್ನ ಪ್ರಕಾಶದ ಕಡೆಗೆ ಕೊಂಡೊಯ್ಯುತ್ತಾನೆ. ಜನರಿಗೋಸ್ಕರ ಅಲ್ಲಾಹನು ಉಪಮೆಗಳನ್ನು ನೀಡುತ್ತಾನೆ. ಅಲ್ಲಾಹನು ಎಲ್ಲ

اللَّهُ نُورُ السَّمَاوَاتِ وَالْأَرْضِ ۚ مَثَلُ نُورِهِ
كَمِشْكَاةٍ فِيهَا مِصْبَاحٌ ۖ الْمِصْبَاحُ فِي
زُجَاجَةٍ ۖ الزُّجَاجَةُ كَأَنَّهَا كَوْكَبٌ دُرِّيٌّ
يُوقَدُ مِنْ شَجَرَةٍ مُبَارَكَةٍ زَيْتُونَةٍ
لَا شَرْقِيَّةٍ وَلَا غَرْبِيَّةٍ يَكَادُ زَيْتُهَا
يُضِيءُ وَلَوْ لَمْ تَمْسَسْهُ نَارٌ ۚ نُورٌ عَلَىٰ
نُورٍ ۗ يَهْدِي اللَّهُ لِنُورِهِ مَنْ يَشَاءُ ۚ وَ
يَضْرِبُ اللَّهُ الْأَمْثَالَ لِلنَّاسِ ۗ وَاللَّهُ بِكُلِّ

349B. ಅವರ ವಿವಾಹಕ್ಕೆ ಅಡ್ಡಿಪಡಿಸುವುದು ಅವರನ್ನು ವ್ಯಭಿಚಾರಕ್ಕೆ ನೂಕಿದಂತೆ. ಆದ್ದರಿಂದ ಇಲ್ಲಿ ಅವರನ್ನು ವ್ಯಭಿಚಾರಕ್ಕೆ ಬಲವಂತಪಡಿಸಬೇಡಿರಿ ಎಂದು ಹೇಳಲಾಗಿದೆ.

350. ಪೌರ್ವಾತ್ಯ ಅಥವಾ ಪಾಶ್ಚಿಮಾತ್ಯವಲ್ಲದ ವೃಕ್ಷ ಎಂಬುದರ ತಾತ್ಪರ್ಯ ಪೂರ್ವಕ್ಕೆ ಅಥವಾ ಪಶ್ಚಿಮಕ್ಕೆ ವಿಶೇಷ ಪರಿಗಣನೆಯಿಲ್ಲದ ಅಧ್ಯಾಪನೆಗಳು ಎಂದಾಗಿದೆ. ಅದು ಕೇವಲ ಪವಿತ್ರ ಖುರ್ಆನಿನ ಬೋಧನೆಗಳೇ ಆಗಿವೆ. ಅರಬಿಯನಿಗೆ ಅರಬಿಯೇತರನಿಗಿಂತ ಯಾವ ಶ್ರೇಷ್ಠತೆಯೂ ಇಲ್ಲವೆಂದು ಮುಹಮ್ಮದ್ ಪೈಗಂಬರ್ (ಸ) ರವರು ಸಹ ನುಡಿದಿದ್ದಾರೆ.

ವಿಚಾರಗಳನ್ನು ಬಲ್ಲವನಾಗಿದ್ದಾನೆ.

شَيْءٍ عَلِيمٌ ﴿٣٥﴾

**37.** ಯಾವ ಗೃಹಗಳನ್ನು ಅಲ್ಲಾಹನು ಉನ್ನತಗೊಳಿಸಲು ಮತ್ತು ಅವುಗಳಲ್ಲಿ ಅವನ ನಾಮ ಸ್ಮರಿಸಲ್ಪಡಲು ಆಜ್ಞಾಪಿಸಿರುವನೋ ಅಂಥ ಗೃಹಗಳಲ್ಲಿ ಅದು (ಆ ಬೆಳಕು) ಇರುತ್ತದೆ. (ಜನರು) ಮುಂಜಾವ ಮತ್ತು ಮುಸ್ಸಂಜೆಗಳಲ್ಲಿ ಅಲ್ಲಿ ಅವನ ಗುಣಗಾನ ಮಾಡುತ್ತಾರೆ.

فِي بُيُوتٍ أَذِنَ اللَّهُ أَن تُرْفَعَ وَيُذْكَرَ فِيهَا اسْمُهُ يُسَبِّحُ لَهُ فِيهَا بِالْغُدُوِّ وَالْآصَالِ ﴿٣٦﴾

**38.** ಆ ಜನರ (ಅಲ್ಲಾಹನ ಸ್ತುತಿ ಕೀರ್ತನೆ ಮಾಡುವವರ) ವ್ಯಾಪಾರ - ವ್ಯವಹಾರಗಳು ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನ ನಿರ್ವಹಣೆಯಿಂದಲೂ ಝಕಾತಿನ ನೀಡುವಿಕೆಯಿಂದಲೂ ಅವರನ್ನು ಪರಾಙ್ಮುಖರನ್ನಾಗಿ ಮಾಡುವುದಿಲ್ಲ. ಹೃದಯಗಳು ತಳಮಳಗೊಳ್ಳುವ ಮತ್ತು ಕಣ್ಣುಗಳು ಅಡಿಮೇಲಾಗುವ ಒಂದು ದಿನದ ಬಗ್ಗೆ ಅವರು ಭಯಪಡುತ್ತಾರೆ.

رِجَالٌ لَّا تُلْهِيهِمْ تِجَارَةٌ وَلَا بَيْعٌ عَن ذِكْرِ اللَّهِ وَإِقَامِ الصَّلَاةِ وَإِيتَاءِ الزَّكَاةِ يَخَافُونَ يَوْمًا تَتَقَلَّبُ فِيهِ الْقُلُوبُ وَالْأَبْصَارُ ﴿٣٧﴾

**39.** ತತ್ಫಲವಾಗಿ ಅವರ ಕರ್ಮಗಳಿಗೆ ಅಲ್ಲಾಹನು ಉತ್ತಮವಾದ ಪ್ರತಿಫಲವನ್ನು ನೀಡುವನು ಮತ್ತು ಅವರನ್ನು ತನ್ನ ಅನುಗ್ರಹದಿಂದ ಅಭಿವೃದ್ಧಿಗೊಳಿಸುವನು. ಅಲ್ಲಾಹನು ತಾನಿಚ್ಛಿಸುವವರಿಗೆ ಎಣಿಸಲಾಗದಷ್ಟು ಜೀವನ ಸಾಮಾಗ್ರಿಗಳನ್ನು ದಯಪಾಲಿಸುತ್ತಾನೆ.

لِيَجْزِيَهُمُ اللَّهُ أَحْسَنَ مَا عَمِلُوا وَيَزِيدَهُم مِّن فَضْلِهِ ۗ وَاللَّهُ يَرْزُقُ مَن يَشَاءُ بِغَيْرِ حِسَابٍ ﴿٣٨﴾

**40.** ಅವಿಶ್ವಾಸಿಗಳಾದರೋ, ಅವರ ಕೃತ್ಯಗಳು ಮರುಭೂಮಿಯಲ್ಲಿರುವ ಮರೀಚಿಕೆಯಂತೆ. ಬಾಯಾರಿಕೆಯಾದವನು ಅದನ್ನು ನೀರೆಂದು ಗ್ರಹಿಸುತ್ತಾನೆ. ಅವನು ಹತ್ತಿರ ಬಂದಾಗ ಅದು ಏನೂ ಅಲ್ಲವೆಂದು ಅವನಿಗೆ ಮನವರಿಕೆಯಾಗುತ್ತದೆ. ಅಲ್ಲಿ ಅವನು ಪೂರ್ಣವಾಗಿ ಲೆಕ್ಕತೆಗೆಯುವ ಅಲ್ಲಾಹನನ್ನು ಕಾಣುವನು. ಅಲ್ಲಾಹನು ಶೀಘ್ರವಾಗಿ ಲೆಕ್ಕತೆಗೆಯುವವನಾಗಿದ್ದಾನೆ.

وَالَّذِينَ كَفَرُوا أَعْمَالُهُمْ كَسَرَابٍ بِقِيعَةٍ يَحْسَبُهُ الظَّمْآنُ مَاءً ۖ حَتَّىٰ إِذَا جَاءَهُ لَمْ يَجِدْهُ شَيْئًا وَوَجَدَ اللَّهَ عِندَهُ فَوَفَّاهُ حِسَابَهُ ۗ وَاللَّهُ سَرِيعُ الْحِسَابِ ﴿٣٩﴾





**41.** ಅಥವಾ (ಅವರ ಕೃತ್ಯಗಳು) ಆಳವಾದ ಸಮುದ್ರದ ಅಂಧಕಾರದಂತೆ. ಅದನ್ನು (ಸಮುದ್ರವನ್ನು) ಅಲೆಗಳು ಮುಚ್ಚುತ್ತವೆ. ಅಲೆಗಳ ಮೇಲೆ ಅಲೆಗಳು ಏಳುತ್ತವೆ. ಅದರ ಮೇಲೆ ಮೇಘಗಳು. ಒಂದರ ಮೇಲೆ ಮತ್ತೊಂದರಂತೆ ಅಂಧಕಾರಗಳೇ. ತನ್ನ ಕೈಯನ್ನು ಹೊರ ಚಾಚಿದರೆ ಅವನು ಅದನ್ನೂ ಕಾಣಲಾರ. ಯಾರಿಗೆ ಅಲ್ಲಾಹನು ಪ್ರಕಾಶವನ್ನು ನೀಡುವುದಿಲ್ಲವೋ ಅವನಿಗೆ ಯಾವ ಪ್ರಕಾಶವೂ ಲಭಿಸಲಾರದು.

أَوْ كَظُلُمَاتٍ فِي بَحْرٍ لُّجِّيٍّ يَغْشَاهُ مَوْجٌ مِّن فَوْقِهِ مَوْجٌ مِّن فَوْقِهِ سَحَابٌ ۚ ظُلُمَاتٌ بَعْضُهَا فَوْقَ بَعْضٍ إِذَا أَخْرَجَ يَدَهُ لَمْ يَكَدْ يَرَاهَا ۗ وَمَن لَّمْ يَجْعَلِ اللَّهُ لَهُ نُورًا فَمَا لَهُ مِن نُّورٍ ﴿٤٠﴾

**42.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಗುಣಗಾನ ಮಾಡುತ್ತಿರುವುದನ್ನು ನೀನು ಕಂಡಿಲ್ಲವೇ? ಪಕ್ಷಿಗಳು ತಮ್ಮ ರೆಕ್ಕೆಗಳನ್ನು ಚಾಚಿಕೊಂಡು (ಹಾಗೆಯೇ ಮಾಡುತ್ತವೆ). ಅವುಗಳ ಪೈಕಿ ಪ್ರತಿಯೊಂದೂ (ಸ್ವಭಾವಾನುಸಾರ) ತನ್ನ ಪ್ರಾರ್ಥನೆ ಮತ್ತು ಪ್ರಕೀರ್ತನೆಯನ್ನು ಅರಿತಿದೆ. ಅವುಗಳ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

أَلَمْ تَرَ أَنَّ اللَّهَ يُسَبِّحُ لَهُ مَن فِي السَّمَاوَاتِ وَالْأَرْضِ وَالطَّيْرُ صَافَّاتٍ ۖ كُلٌّ قَدْ عَلِمَ صَلَاتَهُ وَتَسْبِيحَهُ ۗ وَاللَّهُ عَلِيمٌ بِمَا يَفْعَلُونَ ﴿٤١﴾

**43.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನಿಗೆ ಸೇರಿದೆ. ಮರಳಿಕೆಯೆಲ್ಲ ಅಲ್ಲಾಹನ ಕಡೆಗೆಯೇ ಆಗಿದೆ.

وَلِلَّهِ مُلْكُ السَّمَاوَاتِ وَالْأَرْضِ ۖ وَإِلَى اللَّهِ الْمَصِيرُ ﴿٤٢﴾

**44.** ನೀನು ಕಂಡಿಲ್ಲವೇ - ಮೋಡಗಳು ಮೆಲ್ಲ ಮೆಲ್ಲನೆ ಚಲಿಸುವಂತೆ ಅಲ್ಲಾಹನು ಮಾಡುತ್ತಾನೆ. ಅನಂತರ ಅವುಗಳನ್ನು ಒಂದುಗೂಡಿಸುತ್ತಾನೆ. ಆ ಬಳಿಕ ಅವುಗಳನ್ನು ಒಂದರ ಮೇಲೊಂದರಂತೆ ಪೇರಿಸಿಡುತ್ತಾನೆ. ಆಗ ಅವುಗಳೆಡೆಯಿಂದ ಮಳೆ ಸುರಿಯುವುದನ್ನು ನೀನು ಕಾಣುವೆ. ಆಕಾಶದಲ್ಲಿರುವ ಪರ್ವತದಂತಹ ಮೋಡಗಳಿಂದ ಅಲ್ಲಾಹನು ಆಲಿಕಲ್ಲುಗಳನ್ನು ಸುರಿಸಿ ಆ ಮೂಲಕ ತಾನು ಇಚ್ಛಿಸುವವರನ್ನು ಹಾನಿಗೀಡುಮಾಡುತ್ತಾನೆ; ತಾನು ಇಚ್ಛಿಸುವವರನ್ನು ಅದರಿಂದ ರಕ್ಷಿಸುತ್ತಾನೆ. ಅದರ ಮಿಂಚಿನ ಪ್ರಕಾಶ ದೃಷ್ಟಿಯನ್ನು ಕಸಿದುಕೊಂಡು ಹೋಗುವಂತಿದೆ.

أَلَمْ تَرَ أَنَّ اللَّهَ يُزْجِي سَحَابًا ثُمَّ يُؤَلِّفُ بَيْنَهُ ثُمَّ يَجْعَلُهُ رُكَامًا فَتَرَى الْوَدْقَ يَخْرُجُ مِنْ خِلَالِهِ وَيُنَزِّلُ مِنَ السَّمَاءِ مِن جِبَالٍ فِيهَا مِن بَرَدٍ فَيُصِيبُ بِهِ مَن يَشَاءُ وَيَصْرِفُهُ عَن مَّن يَشَاءُ ۖ يَكَادُ سَنَا بَرْقِهِ يَذْهَبُ بِالْأَبْصَارِ ﴿٤٣﴾

**45.** ಅಲ್ಲಾಹನು ರಾತ್ರಿ - ಹಗಲುಗಳನ್ನು ಪರ್ಯಾಯವಾಗಿ (ಬರುವಂತೆ) ಮಾಡಿರುವವನು. ಖಂಡಿತವಾಗಿಯೂ ಅದರಲ್ಲಿ ಕಣ್ಣಿದ್ದವರಿಗೆ ದೊಡ್ಡ ಪಾಠವಿದೆ.

يُقَلِّبُ اللّٰهُ الَّيْلَ وَالنَّهَارَ ۚ اِنَّ فِيْ ذٰلِكَ لَعِبْرَةً لِّاُولِي الْاَبْصَارِ ﴿٤٤﴾

**46.** ಅಲ್ಲಾಹನು ಪ್ರತಿಯೊಂದು ಜೀವಿಯನ್ನು ನೀರಿನಿಂದ ಸೃಷ್ಟಿಸಿದ್ದಾನೆ. ಅವುಗಳಲ್ಲಿ ಕೆಲವು ತಮ್ಮ ಹೊಟ್ಟೆಯ ಮೇಲೆ ಹರಿದಾಡುತ್ತವೆ; ಕೆಲವು ತಮ್ಮ ಎರಡು ಕಾಲುಗಳಲ್ಲಿ ನಡೆಯುತ್ತವೆ; ಇನ್ನು ಕೆಲವು ನಾಲ್ಕು ಕಾಲುಗಳಲ್ಲಿ ನಡೆಯುತ್ತವೆ. ಅಲ್ಲಾಹನು ತಾನಿಚ್ಛಿಸುವುದನ್ನು ಸೃಷ್ಟಿ ಮಾಡುತ್ತಾನೆ. ಖಂಡಿತವಾಗಿಯೂ ಅಲ್ಲಾಹನಿಗೆ ಸರ್ವ ಸಾಮರ್ಥ್ಯವಿದೆ.

وَاللّٰهُ خَلَقَ كُلَّ دَآبَّةٍ مِّنْ مَّآءٍ ۚ فَمِنْهُمْ مَّنْ يَّمْشِيْ عَلٰى بَطْنِهٖ ۚ وَمِنْهُمْ مَّنْ يَّمْشِيْ عَلٰى رِجْلَيْنِ ۚ وَمِنْهُمْ مَّنْ يَّمْشِيْ عَلٰٓى اَرْبَعٍ ۚ يَخْلُقُ اللّٰهُ مَا يَشَآءُ ۚ اِنَّ اللّٰهَ عَلٰى كُلِّ شَيْءٍ قَدِيْرٌ ﴿٤٥﴾

**47.** ದಿಟವಾಗಿಯೂ ನಾವು ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸಿದ್ದೇವೆ. ಅಲ್ಲಾಹನು ತಾನಿಚ್ಛಿಸುವವರನ್ನು ನೇರವಾದ ದಾರಿಯಲ್ಲಿ ನಡೆಯಿಸುತ್ತಾನೆ.

لَقَدْ اَنْزَلْنَآ اٰيٰتٍ مُّبَيِّنٰتٍ ۚ وَاللّٰهُ يَهْدِيْ مَنْ يَّشَآءُ اِلٰى صِرَاطٍ مُّسْتَقِيْمٍ ﴿٤٦﴾

**48.** 'ನಾವು ಅಲ್ಲಾಹನನ್ನೂ ಪ್ರವಾದಿಯನ್ನೂ ನಂಬುತ್ತೇವೆ ಮತ್ತು ನಾವು ವಿಧೇಯರಾಗಿದ್ದೇವೆ' ಎಂದು ಅವರು ಹೇಳುತ್ತಾರೆ. ಮತ್ತೆ ಅವರ ಪೈಕಿ ಕೆಲವರು ಆ ಬಳಿಕ ಪರಾಙ್ಮುಖರಾಗುತ್ತಾರೆ. ಅಂಥವರು ಸತ್ಯವಿಶ್ವಾಸಿಗಳಲ್ಲ.

وَيَقُوْلُوْنَ اٰمَنَّا بِاللّٰهِ وَبِالرَّسُوْلِ وَاَطَعْنَا ثُمَّ يَتَوَلّٰى فَرِيْقٌ مِّنْهُمْ مِّنْۢ بَعْدِ ذٰلِكَ ۚ وَمَآ اُولٰٓئِكَ بِالْمُؤْمِنِيْنَ ﴿٤٧﴾

**49.** ಅವರ ಮಧ್ಯೆ ತೀರ್ಮಾನ ಮಾಡಲಿಕ್ಕೋಸ್ಕರ ಅಲ್ಲಾಹನ ಮತ್ತು ಅವನ ಸಂದೇಶವಾಹಕನ ಕಡೆಗೆ ಅವರನ್ನು ಆಹ್ವಾನಿಸಿದಾಗ ಅಗೋ ಅವರಲ್ಲಿ ಒಂದು ಪಂಗಡದವರು ಮುಖ ತಿರುಗಿಸಿ ಹೋಗುತ್ತಾರೆ.

وَاِذَا دُعُوْٓا اِلَى اللّٰهِ وَرَسُوْلِهٖ لِيَحْكُمَ بَيْنَهُمْ اِذَا فَرِيْقٌ مِّنْهُمْ مُّعْرِضُوْنَ ﴿٤٨﴾

**50.** ಅವರಿಗೇನಾದರೂ ಹಕ್ಕು ಲಭಿಸಬೇಕೆಂದಿದ್ದರೆ ಅವರು ವಿಧೇಯತೆಯನ್ನು ತೋರ್ಪಡಿಸುತ್ತಾ ಅವರ (ಪ್ರವಾದಿಯ) ಬಳಿಗೆ ಓಡಿ ಬರುತ್ತಾರೆ.

وَاِنْ يَّكُنْ لَّهُمُ الْحَقُّ يَاْتُوْٓا اِلَيْهِ مُذْعِنِيْنَ ﴿٤٩﴾





**51.** ಏನು, ಅವರ ಹೃದಯಗಳಲ್ಲಿ ರೋಗವೇನಾದರೂ ಇದೆಯೇ? ಅಥ‌ವಾ ಅವರು ಸಂಶಯಗ್ರಸ್ತರಾದರೇ? ಅಥವಾ ಅಲ್ಲಾಹನು ಮತ್ತು ಅವನ ಪ್ರವಾದಿ ಅವರಿಗೇನಾದರೂ ಅನ್ಯಾಯ ವೆಸಗುವರೆಂದು ಅವರು ಭಯಪಡುತ್ತಾರೆಯೇ? ಹಾಗೇನಿಲ್ಲ, ಅವರು ದುಷ್ಕರ್ಮಿಗಳೇ ಸರಿ.

اَفِيْ قُلُوْبِهِمْ مَّرَضٌ اَمِ ارْتَابُوْٓا اَمْ يَخَافُوْنَ اَنْ يَّحِيْفَ اللّٰهُ عَلَيْهِمْ وَرَسُوْلُهٗ ۚ بَلْ اُولٰٓئِكَ هُمُ الظّٰلِمُوْنَ ﴿٥٠﴾

**52.** ಸತ್ಯ ವಿಶ್ವಾಸಿಗಳ ಮಧ್ಯೆ ತೀರ್ಮಾನವನ್ನೇನಾದರೂ ಮಾಡಲಿಕ್ಕೋಸ್ಕರ ಅಲ್ಲಾಹನ ಮತ್ತು ಅವನ ಪ್ರವಾದಿಯ ಕಡೆಗೆ ಅವರನ್ನು (ಸತ್ಯ ವಿಶ್ವಾಸಿಗಳನ್ನು) ಆಹ್ವಾನಿಸಿದರೆ ಅವರು, 'ನಾವು ಆಲಿಸಿದೆವು, ನಾವು ವಿಧೇಯರಾಗಿದ್ದೇವೆ' ಎಂದು ಹೇಳುವರು. ಅವರೇ ವಿಜಯ ಶಾಲಿಗಳು.

اِنَّمَا كَانَ قَوْلَ الْمُؤْمِنِيْنَ اِذَا دُعُوْٓا اِلَى اللّٰهِ وَرَسُوْلِهٖ لِيَحْكُمَ بَيْنَهُمْ اَنْ يَّقُوْلُوْا سَمِعْنَا وَاَطَعْنَا ۚ وَاُولٰٓئِكَ هُمُ الْمُفْلِحُوْنَ ﴿٥١﴾

**53.** ಯಾರು ಅಲ್ಲಾಹನಿಗೂ ಅವನ ಸಂದೇಶ ವಾಹಕನಿಗೂ ವಿಧೇಯರಾಗಿದ್ದುಕೊಂಡು, ಅಲ್ಲಾಹನ ಭಯವಿರಿಸಿ ಕೆಡುಕುಗಳಿಂದ ತಮ್ಮನ್ನು ರಕ್ಷಿಸಿ ಕೊಳ್ಳುತ್ತಾರೋ ಅವರೇ ಯಶಸ್ಸುಗಳಿಸುವವರು.

وَمَنْ يُّطِعِ اللّٰهَ وَرَسُوْلَهٗ وَيَخْشَ اللّٰهَ وَيَتَّقْهِ فَاُولٰٓئِكَ هُمُ الْفَآئِزُوْنَ ﴿٥٢﴾

**54.** ನೀನು ಅವರಿಗೆ ಆಜ್ಞಾಪಿಸಿದರೆ, ಖಂಡಿತ ವಾಗಿಯೂ ತಾವು ಅದನ್ನು ಕಾರ್ಯಗತ ಗೊಳಿಸ ಲಿಕ್ಕೋಸ್ಕರ ಹೊರಡುವೆವೆಂದು ಅಲ್ಲಾಹನಾಣೆ ಹಾಕಿ ಅವರು ದೃಢಪ್ರತಿಜ್ಞೆ ಮಾಡುತ್ತಾರೆ. ಹೇಳು: 'ನೀವು ಪ್ರತಿಜ್ಞೆ ಮಾಡಬೇಡಿರಿ. ಸಾಮಾನ್ಯವಾದ ವಿಧೇಯತೆಯೇ ಸಾಕು. ನಿಶ್ಚಯವಾಗಿಯೂ ನಿಮ್ಮ ವರ್ತನೆಗಳ ಬಗ್ಗೆ ಅಲ್ಲಾಹನು ಬಲ್ಲವನಾಗಿದ್ದಾನೆ.'

وَاَقْسَمُوْا بِاللّٰهِ جَهْدَ اَيْمَانِهِمْ لَئِنْ اَمَرْتَهُمْ لَيَخْرُجُنَّ ۚ قُلْ لَّا تُقْسِمُوْا ۚ طَاعَةٌ مَّعْرُوْفَةٌ ۚ اِنَّ اللّٰهَ خَبِيْرٌۢ بِمَا تَعْمَلُوْنَ ﴿٥٣﴾

**55.** ಹೇಳು: 'ಅಲ್ಲಾಹನಿಗೆ ವಿಧೇಯರಾಗಿರಿ; ಪ್ರವಾದಿಗೂ ವಿಧೇಯರಾಗಿರಿ.' ಇನ್ನು ನೀವು ವಿಮುಖರಾದರೆ, *ತಿಳಿದುಕೊಳ್ಳಿರಿ* ಅವರ (ಪ್ರವಾದಿಯ) ಹೊಣೆಗಾರಿಕೆ ಮಾತ್ರ ಅವರಿಗಿದೆ. ನಿಮ್ಮ ಹೊಣೆಗಾರಿಕೆ ನಿಮಗೂ ಇದೆ. ನೀವು ಅವರನ್ನು (ಪ್ರವಾದಿಯನ್ನು) ಅನುಸರಿಸಿದರೆ ನೀವು ಸತ್ಪಥವನ್ನು ಪಡೆಯುವಿರಿ.

قُلْ اَطِيْعُوا اللّٰهَ وَاَطِيْعُوا الرَّسُوْلَ ۚ فَاِنْ تَوَلَّوْا فَاِنَّمَا عَلَيْهِ مَا حُمِّلَ وَعَلَيْكُمْ مَّا حُمِّلْتُمْ ۚ وَاِنْ تُطِيْعُوْهُ تَهْتَدُوْا ۚ

ಸ್ಪಷ್ಟವಾದ ರೀತಿಯಲ್ಲಿ ಸಂದೇಶವನ್ನು ತಲುಪಿಸುವುದು ಹೊರತು ಪ್ರವಾದಿಗೆ ಬೇರೇನೂ ಜವಾಬ್ದಾರಿಕೆ ಇಲ್ಲ.

وَمَا عَلَى الرَّسُولِ إِلَّا الْبَلَاغُ الْمُبِينُ ﴿٥٤﴾

**56.** ನಿಮ್ಮ ಪೈಕಿ ವಿಶ್ವಾಸ ಹೊಂದಿ ಸತ್ಕರ್ಮ ಗೈಯುವವರಿಗೆ, ಅವರಿಗಿಂತ ಮುಂಚೆ ಇದ್ದವರನ್ನು ಖಲೀಫರನ್ನಾಗಿ ಮಾಡಿದಂತೆಯೇ ಖಂಡಿತವಾಗಿಯೂ ಅವರನ್ನು ಸಹ ಭೂಮಿಯಲ್ಲಿ ಖಲೀಫರನ್ನಾಗಿ ಮಾಡುವನೆಂದೂ ಅವರಿಗೋಸ್ಕರ ಅವನು ತೃಪ್ತಿಗೊಂಡ ಧರ್ಮವನ್ನು ಅವರಿಗೆ ಬಲಪಡಿಸಿ ಕೊಡುವನೆಂದೂ ಅವರ ಭಯ ಭೀತಿಯ ಬಳಿಕ ಅವರಿಗೆ ಸುರಕ್ಷತೆ ಮತ್ತು ನೆಮ್ಮದಿಯನ್ನು ದಯಪಾಲಿಸುವನೆಂದೂ ಅಲ್ಲಾಹನು ವಾಗ್ದಾನ ಮಾಡಿದ್ದಾನೆ. ಅವರು ನನ್ನನ್ನು ಮಾತ್ರ ಆರಾಧಿಸುವರು; ನನಗೆ ಯಾರನ್ನೂ ಸಹಭಾಗಿ ಮಾಡಲಾರರು. ಅನಂತರವೂ ಯಾರಾದರೂ ನಿರಾಕರಿಸಿದರೆ ಅವರೇ ಧಿಕ್ಕಾರಿಗಳು.

وَعَدَ اللَّهُ الَّذِينَ آمَنُوا مِنكُمْ وَ
عَمِلُوا الصَّالِحَاتِ لَيَسْتَخْلِفَنَّهُمْ فِي
الْأَرْضِ كَمَا اسْتَخْلَفَ الَّذِينَ مِن قَبْلِهِمْ ۖ
وَلَيُمَكِّنَنَّ لَهُمْ دِينَهُمُ الَّذِي ارْتَضَىٰ لَهُمْ
وَلَيُبَدِّلَنَّهُم مِّن بَعْدِ خَوْفِهِمْ أَمْنًا ۚ
يَعْبُدُونَنِي لَا يُشْرِكُونَ بِي شَيْئًا ۚ وَمَن كَفَرَ
بَعْدَ ذَٰلِكَ فَأُولَٰئِكَ هُمُ الْفَاسِقُونَ ﴿٥٥﴾

**57.** ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕೋಸ್ಕರ ನೀವು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿರಿ, ಝಕಾತ್ ನೀಡಿರಿ ಮತ್ತು ಪ್ರವಾದಿಗೆ ವಿಧೇಯರಾಗಿದ್ದುಕೊಳ್ಳಿರಿ.

وَأَقِيمُوا الصَّلَاةَ وَآتُوا الزَّكَاةَ وَأَطِيعُوا
الرَّسُولَ لَعَلَّكُمْ تُرْحَمُونَ ﴿٥٦﴾

**58.** ಅವಿಶ್ವಾಸಿಗಳು ಭೂಮಿಯಲ್ಲಿ (ನಮ್ಮ ಯೋಜನೆಗಳನ್ನು) ನಿಷ್ಫಲಗೊಳಿಸುವರೆಂದು ನೀನು ಭಾವಿಸಬೇಡ. ಅವರ ವಾಸಸ್ಥಳ ನರಕವಾಗಿದೆ - ಅತಿ ನಿಕೃಷ್ಟವಾದ ನೆಲೆ.

لَا تَحْسَبَنَّ الَّذِينَ كَفَرُوا مُعْجِزِينَ فِي
الْأَرْضِ ۚ وَمَأْوَاهُمُ النَّارُ ۖ وَلَبِئْسَ الْمَصِيرُ ﴿٥٧﴾

**59.** ಎಲೈ ಸತ್ಯವಿಶ್ವಾಸಿಗಳೇ, ನಿಮ್ಮ ಅಧೀನದಲ್ಲಿರುವವರು ಮತ್ತು ಪ್ರೌಢಾವಸ್ಥೆಯನ್ನು ತಲುಪದ ಮಕ್ಕಳು (ನಿಮ್ಮ ಖಾಸಗಿ ಕೊಠಡಿಯನ್ನು ಪ್ರವೇಶಿಸಲು) ಮೂರು ಹೊತ್ತುಗಳಲ್ಲಿ ನಿಮ್ಮ ಅನುಮತಿ ಪಡೆಯಬೇಕಾಗಿದೆ - ಪ್ರಭಾತದ ನಮಾಝಿಗೆ ಮುಂಚೆ, ಮಧ್ಯಾಹ್ನ ನೀವು ನಿಮ್ಮ (ಹೊರ) ಉಡುಪುಗಳನ್ನು ಕಳಚಿರುವಾಗ ಮತ್ತು ರಾತ್ರೆಯ ನಮಾಝಿನ ಬಳಿಕ. ಇವು ನಿಮ್ಮ ಮೂರು ಖಾಸಗಿ ಸಮಯಗಳಾಗಿವೆ. ಇವುಗಳ

يَا أَيُّهَا الَّذِينَ آمَنُوا لِيَسْتَأْذِنكُمُ الَّذِينَ
مَلَكَتْ أَيْمَانُكُمْ وَالَّذِينَ لَمْ يَبْلُغُوا
الْحُلُمَ مِنكُمْ ثَلَاثَ مَرَّاتٍ ۚ مِّن قَبْلِ صَلَاةِ
الْفَجْرِ وَحِينَ تَضَعُونَ ثِيَابَكُم مِّنَ
الظَّهِيرَةِ وَمِن بَعْدِ صَلَاةِ الْعِشَاءِ ۚ
ثَلَاثُ عَوْرَاتٍ لَّكُمْ ۚ لَيْسَ عَلَيْكُمْ وَلَا





ಹೊರತು ಬೇರೆ ಸಮಯಗಳಲ್ಲಾದರೆ ನಿಮ್ಮ ಮೇಲಾಗಲಿ ಅವರ ಮೇಲಾಗಲಿ ತಪ್ಪೇನಿಲ್ಲ. ಏಕೆಂದರೆ ಅವರು ನಿಮ್ಮ ಬಳಿಯೇ ಅತ್ತಿತ್ತ ಸುತ್ತಾಡುವವರಾಗಿದ್ದಾರೆ. ಹೀಗೆ ಅಲ್ಲಾಹನು (ತನ್ನ) ಆಜ್ಞೆಗಳನ್ನು ನಿಮಗೆ ವಿವರಿಸಿ ಕೊಡುತ್ತಾನೆ. ಅಲ್ಲಾಹನು ಸರ್ವಜ್ಞನೂ ಬುದ್ಧಿ ಶಾಲಿಯೂ ಆಗಿದ್ದಾನೆ.

عَلَيْهِمْ جُنَاحٌ بَعْدَهُنَّ ۚ طَوَّافُونَ
عَلَيْكُم بَعْضُكُمْ عَلَىٰ بَعْضٍ ۚ كَذَٰلِكَ يُبَيِّنُ
اللَّهُ لَكُمُ الْآيَاتِ ۗ وَاللَّهُ عَلِيمٌ حَكِيمٌ ﴿٥٨﴾

**60.** ನಿಮ್ಮ ಮಕ್ಕಳು ಪ್ರೌಢಾವಸ್ಥೆಯನ್ನು ಪಡೆದರೆ, ಅವರಿಗೆ ಮುಂಚೆ ಇದ್ದವರು ಅನುಮತಿ ಕೇಳಿದಂತೆಯೇ ಅವರು ಸಹ ಅನುಮತಿ ಕೇಳಬೇಕಾಗಿದೆ. ಹೀಗೆ ಅಲ್ಲಾಹನು ತನ್ನ ಆಜ್ಞೆಗಳನ್ನು ನಿಮಗೆ ವಿಶದಪಡಿಸುತ್ತಾನೆ. ಅಲ್ಲಾಹನು ಸರ್ವಜ್ಞನೂ ಬುದ್ಧಿ ಶಾಲಿಯೂ ಆಗಿದ್ದಾನೆ.

وَإِذَا بَلَغَ الْأَطْفَالُ مِنكُمُ الْحُلُمَ
فَلْيَسْتَأْذِنُوا كَمَا اسْتَأْذَنَ الَّذِينَ مِن
قَبْلِهِمْ ۚ كَذَٰلِكَ يُبَيِّنُ اللَّهُ لَكُمْ آيَاتِهِ ۗ
وَاللَّهُ عَلِيمٌ حَكِيمٌ ﴿٥٩﴾

**61.** ವಿವಾಹವನ್ನು ಬಯಸದ ವೃದ್ಧೆಯರು ಸೌಂದರ್ಯವನ್ನು ತೋರ್ಪಡಿಸದ ರೀತಿಯಲ್ಲಿ ತಮ್ಮ ಘೋಷಾ ವಸ್ತ್ರವನ್ನು ತೆಗೆದಿರಿಸಿದರೆ ತಪ್ಪೇನಿಲ್ಲ. ಆದರೆ ಮುಂಜಾಗ್ರತೆವಹಿಸುವುದು ಅವರಿಗೆ ಉತ್ತಮ. ಅಲ್ಲಾಹನು ಎಲ್ಲ ಆಲಿಸುವವನೂ ಸರ್ವಜ್ಞನೂ ಆಗಿದ್ದಾನೆ.

وَالْقَوَاعِدُ مِنَ النِّسَاءِ اللَّاتِي لَا يَرْجُونَ
نِكَاحًا فَلَيْسَ عَلَيْهِنَّ جُنَاحٌ أَن يَضَعْنَ
ثِيَابَهُنَّ غَيْرَ مُتَبَرِّجَاتٍ بِزِينَةٍ ۖ وَ
أَن يَسْتَعْفِفْنَ خَيْرٌ لَّهُنَّ ۗ وَاللَّهُ
سَمِيعٌ عَلِيمٌ ﴿٦٠﴾

**62.** ಅಂಧ, ಕುಂಟ, ರೋಗಿ[351] ಇವರು ಮಾತ್ರವಲ್ಲ, ನೀವು ಕೂಡ ನಿಮ್ಮ ಮನೆಗಳಿಂದಾಗಲಿ ನಿಮ್ಮ ತಂದೆ ತಾತಂದಿರ ಮನೆಗಳಿಂದಾಗಲಿ ನಿಮ್ಮ ತಾಯಂದಿರ ಮನೆಗಳಿಂದಾಗಲಿ, ನಿಮ್ಮ ಸಹೋದರರ ಮನೆಗಳಿಂದಾಗಲಿ, ನಿಮ್ಮ ಸಹೋದರಿಯರ ಮನೆಗಳಿಂದಾಗಲಿ, ನಿಮ್ಮ ಪಿತೃ ಸಹೋದರರ ಮನೆಗಳಿಂದಾಗಲಿ, ನಿಮ್ಮ ಪಿತೃ ಸಹೋದರಿಯರ ಮನೆಗಳಿಂದಾಗಲಿ, ನಿಮ್ಮ ಮಾತೃ ಸಹೋದರರ ಮನೆಗಳಿಂದಾಗಲಿ, ನಿಮ್ಮ ಮಾತೃ ಸಹೋದರಿಯರ ಮನೆಗಳಿಂದಾಗಲಿ, ಕೀಲಿಗೈಗಳು ನಿಮ್ಮ

لَيْسَ عَلَى الْأَعْمَىٰ حَرَجٌ وَلَا عَلَى الْأَعْرَجِ
حَرَجٌ وَلَا عَلَى الْمَرِيضِ حَرَجٌ وَلَا عَلَىٰ
أَنفُسِكُمْ أَن تَأْكُلُوا مِن بُيُوتِكُمْ أَوْ
بُيُوتِ آبَائِكُمْ أَوْ بُيُوتِ أُمَّهَاتِكُمْ أَوْ
بُيُوتِ إِخْوَانِكُمْ أَوْ بُيُوتِ أَخَوَاتِكُمْ أَوْ
بُيُوتِ أَعْمَامِكُمْ أَوْ بُيُوتِ عَمَّاتِكُمْ أَوْ
بُيُوتِ أَخْوَالِكُمْ أَوْ بُيُوتِ خَالَاتِكُمْ أَوْ مَا
مَلَكْتُم مَّفَاتِحَهُ أَوْ صَدِيقِكُمْ ۚ لَيْسَ

351. ಯಹೂದಿ ಅಧ್ಯಾಪನೆ ಪ್ರಕಾರ ಅಂಧರು, ಕುಂಟರು ಮತ್ತು ಇತರ ಅಂಗ ವಿಕಲತೆ ಇರುವವರನ್ನು ಕೀಳಾಗಿ ಗಣಿಸಲಾಗುತ್ತಿತ್ತು. ಪವಿತ್ರ ಖುರ್‌ಆನ್ ಆ ತಪ್ಪನ್ನು ತಿದ್ದಿದೆ.

ಸ್ವಾಧೀನದಲ್ಲಿರುವ ಮನೆಗಳಿಂದಾಗಲಿ, ನಿಮ್ಮ ಮಿತ್ರರ ಮನೆಗಳಿಂದಾಗಲಿ ಉಣ್ಣುವುದರಲ್ಲಿ ತಪ್ಪೇನಿಲ್ಲ. ನೀವು ಒಟ್ಟಿಗೆ ಅಥವಾ ಬೇರೆ ಬೇರೆಯಾಗಿ ಉಂಡರೆ ಅದರಲ್ಲಿ ತಪ್ಪಿಲ್ಲ. ನೀವು ಮನೆಯೊಳಗೆ ಪ್ರವೇಶಿಸುವಾಗ ಅಲ್ಲಾಹನ ಕಡೆಯಿಂದಿರುವ ಅನುಗ್ರಹದಾಯಕವೂ ಪವಿತ್ರವೂ ಆದ ಶುಭಕೋರಿಕೆಯೆಂಬಂತೆ ನಿಮ್ಮ ಜನರಿಗೆ ನೀವು ಸಲಾಂ ಹೇಳಿರಿ. ಈ ರೀತಿಯಾಗಿ, ನಿಮಗೆ ಮನವರಿಕೆಯಾಗಲಿಕ್ಕೋಸ್ಕರ ಅಲ್ಲಾಹನು ತನ್ನ ಆದೇಶಗಳನ್ನು ವಿವರಿಸಿ ಕೊಡುತ್ತಾನೆ.

عَلَيْكُمْ جُنَاحٌ أَن تَأْكُلُوا جَمِيعًا أَوْ أَشْتَاتًا ۚ فَإِذَا دَخَلْتُم بُيُوتًا فَسَلِّمُوا عَلَىٰ أَنفُسِكُمْ تَحِيَّةً مِّنْ عِندِ اللَّهِ مُبَارَكَةً طَيِّبَةً ۚ كَذَٰلِكَ يُبَيِّنُ اللَّهُ لَكُمُ الْآيَاتِ لَعَلَّكُمْ تَعْقِلُونَ ﴿٦١﴾

63. ನಿಜವಾದ ವಿಶ್ವಾಸಿಗಳು ಯಾರೆಂದರೆ- ಅಲ್ಲಾಹನನ್ನೂ ಅವನ ಪ್ರವಾದಿಯನ್ನೂ ಅವರು ನಂಬುತ್ತಾರೆ. ಅವರ (ಪ್ರವಾದಿಯ) ಜೊತೆಯಲ್ಲಿ ಒಂದು ಸಾಮೂಹಿಕ ಮಹತ್ವವಿರುವ ಕಾರ್ಯದಲ್ಲಿ ಅವರು ಭಾಗಿಯಾಗಿರುವಾಗ (ಪ್ರವಾದಿಯ) ಅನುಮತಿ ವಿನಾ ಅವರು ಎದ್ದು ಹೋಗಲಾರರು. ನಿನ್ನೊಡನೆ ಯಾರು ಅನುಮತಿ ಕೇಳುತ್ತಾರೋ ಅವರೇ ಅಲ್ಲಾಹನನ್ನು ಮತ್ತು ಅವನ ಪ್ರವಾದಿಯನ್ನು ನಿಜವಾಗಿಯೂ ನಂಬುವವರು. ಆದುದರಿಂದ ಅವರ ಕೆಲವು ಕಾರ್ಯಗಳಿಗೋಸ್ಕರ ಅವರು ನಿನ್ನೊಡನೆ ಅನುಮತಿ ಕೇಳಿದರೆ, ಅವರ ಪೈಕಿ ನೀನು ಇಚ್ಛಿಸುವವರಿಗೆ ಅನುಮತಿ ನೀಡು. ಅವರಿಗೋಸ್ಕರ ಅಲ್ಲಾಹನ ಕ್ಷಮೆ ಯಾಚಿಸು. ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

إِنَّمَا الْمُؤْمِنُونَ الَّذِينَ آمَنُوا بِاللَّهِ وَرَسُولِهِ وَإِذَا كَانُوا مَعَهُ عَلَىٰ أَمْرٍ جَامِعٍ لَّمْ يَذْهَبُوا حَتَّىٰ يَسْتَأْذِنُوهُ ۚ إِنَّ الَّذِينَ يَسْتَأْذِنُونَكَ أُولَٰئِكَ الَّذِينَ يُؤْمِنُونَ بِاللَّهِ وَرَسُولِهِ ۚ فَإِذَا اسْتَأْذَنُوكَ لِبَعْضِ شَأْنِهِمْ فَأْذَن لِّمَن شِئْتَ مِنْهُمْ وَاسْتَغْفِرْ لَهُمُ اللَّهَ ۚ إِنَّ اللَّهَ غَفُورٌ رَّحِيمٌ ﴿٦٢﴾

64. ಪ್ರವಾದಿಯ ಕರೆಯನ್ನು ನೀವು ಪರಸ್ಪರ ಕರೆಯುವಂತೆ ಗಣಿಸಬಾರದು. ನಿಮ್ಮ ಪೈಕಿ ಗುಪ್ತವಾಗಿ ತಲೆ ಮರೆಸಿಹೋಗುವವರ ಬಗ್ಗೆ ಅಲ್ಲಾಹನು ಬಲ್ಲನು. ಆದ್ದರಿಂದ ಅವರ (ಪ್ರವಾದಿಯ) ಆಜ್ಞೆಯನ್ನು ಉಲ್ಲಂಘಿಸುವವರು, ತಮಗೆ ಬರುವ ಪರೀಕ್ಷೆಯ ಬಗ್ಗೆ ಅಥವಾ ಯಾತನಾಮಯವಾದ ಶಿಕ್ಷೆಯ ಬಗ್ಗೆ ಎಚ್ಚರ ವಹಿಸಿಕೊಳ್ಳಲಿ.

لَّا تَجْعَلُوا دُعَاءَ الرَّسُولِ بَيْنَكُمْ كَدُعَاءِ بَعْضِكُم بَعْضًا ۚ قَدْ يَعْلَمُ اللَّهُ الَّذِينَ يَتَسَلَّلُونَ مِنكُمْ لِوَاذًا ۚ فَلْيَحْذَرِ الَّذِينَ يُخَالِفُونَ عَنْ أَمْرِهِ أَن تُصِيبَهُمْ فِتْنَةٌ أَوْ يُصِيبَهُمْ عَذَابٌ أَلِيمٌ ﴿٦٣﴾





65. ತಿಳಿದುಕೊಳ್ಳಿರಿ, ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನದ್ದಾಗಿವೆ. ನೀವು ಯಾವ ಸ್ಥಿತಿಯಲ್ಲಿದ್ದೀರೆಂದು ಅವನು ಬಲ್ಲನು. ಅವರು ಅವನೆಡೆಗೆ ಮರಳಿಸಲ್ಪಡುವ ದಿನದಂದು ಅವರ ಕೃತ್ಯಗಳ ಬಗ್ಗೆ ಅವನು ಅವರಿಗೆ ವಿವರಿಸಿ ಹೇಳುವನು. ಅಲ್ಲಾಹನು ಎಲ್ಲ ಸಂಗತಿಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

أَلَا إِنَّ لِلَّهِ مَا فِي السَّمَاوَاتِ وَالْأَرْضِ ۖ قَدْ يَعْلَمُ مَا أَنتُمْ عَلَيْهِ وَيَوْمَ يُرْجَعُونَ إِلَيْهِ فَيُنَبِّئُهُم بِمَا عَمِلُوا ۗ وَاللَّهُ بِكُلِّ شَيْءٍ عَلِيمٌ ﴿٦٤﴾

سُوْرَةُ الْفُرْقَانِ مَكِّيَّةٌ وَّهِيَ مَعَ الْبَسْمَلَةِ ثَمَانٍ وَّسَبْعُوْنَ اٰيَةً وَّسِتَّةُ رُكُوْعَاتٍ

# 25. ಅಲ್ ಫುರ್ಖಾನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 78 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ﴿١﴾

2. ಸರ್ವಲೋಕಕ್ಕೂ ಮುನ್ನೆಚ್ಚರಿಕೆಗಾರನಾಗಲಿಕ್ಕಾಗಿ ತನ್ನ ದಾಸನಿಗೆ ಈ ಸತ್ಯಾಸತ್ಯ ನಿರ್ಣಾಯಕ ಗ್ರಂಥವನ್ನು (ಖುರ್‌ಆನನ್ನು) ಅವತೀರ್ಣ ಗೊಳಿಸಿದವನು ಅನುಗ್ರಹಪೂರ್ಣನಾಗಿದ್ದಾನೆ.

تَبٰرَكَ الَّذِيْ نَزَّلَ الْفُرْقَانَ عَلٰى عَبْدِهٖ لِيَكُوْنَ لِلْعٰلَمِيْنَ نَذِيْرًا ﴿٢﴾

3. ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅವನದ್ದಾಗಿದೆ. ಅವನು ಯಾರನ್ನೂ ಪುತ್ರನನ್ನಾಗಿ ಮಾಡಿಕೊಂಡಿಲ್ಲ. ಅವನ ಆಧಿಪತ್ಯದಲ್ಲಿ ಅವನಿಗೆ ಯಾರೂ ಸಹಭಾಗಿಯೂ ಇಲ್ಲ. ಅವನು ಎಲ್ಲವನ್ನೂ ಸೃಷ್ಟಿಸಿ ತಕ್ಕ ಪರಿಮಾಣವನ್ನು ನಿಗದಿಪಡಿಸಿರುವನು.

الَّذِيْ لَهٗ مُلْكُ السَّمٰوٰتِ وَالْاَرْضِ وَلَمْ يَتَّخِذْ وَلَدًا وَّلَمْ يَكُنْ لَّهٗ شَرِيْكٌ فِي الْمُلْكِ وَخَلَقَ كُلَّ شَيْءٍ فَقَدَّرَهٗ تَقْدِيْرًا ﴿٣﴾

4. ಅವನನ್ನು ಬಿಟ್ಟು ಅವರು ಬೇರೆ ದೇವರುಗಳನ್ನು ಮಾಡಿಕೊಂಡಿರುವರು. ಅವರು (ಕಲ್ಪಿತ ದೇವರುಗಳು) ಏನನ್ನೂ ಸೃಷ್ಟಿಸುವುದಿಲ್ಲ; ಅವರೇ ಸೃಷ್ಟಿಸಲ್ಪಟ್ಟವರು. ಸ್ವತಃ ತಮಗೆಯೇ ಏನಾದರೂ ದೋಷ ಅಥವಾ ಗುಣ ಮಾಡಲಿಕ್ಕೆ ಕೂಡ ಅವರಿಗೆ ಸಾಮರ್ಥ್ಯವಿಲ್ಲ. ಮರಣ, ಜೀವನ, ಪುನರುತ್ಥಾನ ಇವುಗಳು ಕೂಡ ಅವರ ನಿಯಂತ್ರಣದಲ್ಲಿಲ್ಲ.

وَاتَّخَذُوْا مِنْ دُوْنِهٖٓ اٰلِهَةً لَّا يَخْلُقُوْنَ شَيْـًٔا وَّهُمْ يُخْلَقُوْنَ وَلَا يَمْلِكُوْنَ لِاَنْفُسِهِمْ ضَرًّا وَّلَا نَفْعًا وَّلَا يَمْلِكُوْنَ مَوْتًا وَّلَا حَيٰوةً وَّلَا نُشُوْرًا ﴿٤﴾

5. 'ಇದು ಅವನು ಸ್ವಷ್ಟನೆ ಮಾಡಿದ ಒಂದು ಸುಳ್ಳೇ ಆಗಿದೆ. ಅದಕ್ಕೆ ಬೇರೊಂದು ಜನಾಂಗ ಅವನಿಗೆ ಸಹಾಯ ಮಾಡಿದೆ' ಎಂದು ಅವಿಶ್ವಾಸಿಗಳು ಹೇಳುತ್ತಾರೆ. ಹಾಗೆ ಅವರು ಅನ್ಯಾಯವೆಸಗಿದ್ದಾರೆ ಹಾಗೂ ಸುಳ್ಳನ್ನೂ ಹೇಳಿದ್ದಾರೆ.

وَقَالَ الَّذِيْنَ كَفَرُوْٓا اِنْ هٰذَآ اِلَّآ اِفْكُ ۨافْتَرٰىهُ وَاَعَانَهٗ عَلَيْهِ قَوْمٌ اٰخَرُوْنَ ۚ فَقَدْ جَاۗءُوْ ظُلْمًا وَّزُوْرًا ﴿٥﴾





6. ಅವರು ಹೇಳುತ್ತಾರೆ: '(ಈ ಖುರ್‌ಆನ್) ಪೂರ್ವಿಕರ ಕಟ್ಟುಕಥೆಗಳಾಗಿವೆ. ಅವುಗಳನ್ನು ಅವನು ನಕಲು ಮಾಡಿಸಿದ್ದಾನೆ. ಅದನ್ನು ಅವನಿಗೆ ಬೆಳಿಗ್ಗೆ ಮತ್ತು ಸಂಜೆ ಓದಿ ಹೇಳಲಾಗುತ್ತದೆ.'

وَقَالُوْٓا اَسَاطِيْرُ الْاَوَّلِيْنَ اكْتَتَبَهَا فَهِيَ تُمْلٰى عَلَيْهِ بُكْرَةً وَّاَصِيْلًا ﴿٦﴾

7. ಹೇಳು: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಸರ್ವ ರಹಸ್ಯಗಳನ್ನು ಬಲ್ಲವನು ಇದನ್ನು ಅವತೀರ್ಣಗೊಳಿಸಿರುವನು. ಖಂಡಿತವಾಗಿಯೂ ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.'

قُلْ اَنْزَلَهُ الَّذِيْ يَعْلَمُ السِّرَّ فِي السَّمٰوٰتِ وَالْاَرْضِ ۭ اِنَّهٗ كَانَ غَفُوْرًا رَّحِيْمًا ﴿٧﴾

8. ಅವರು ಹೇಳುತ್ತಾರೆ: 'ಈ ಸಂದೇಶವಾಹಕನಿಗೆ ಏನಾಗಿದೆ? ಅವನು ಆಹಾರ ಸೇವಿಸುತ್ತಾನೆ ಹಾಗೂ ಪೇಟೆಗಳಲ್ಲಿ ನಡೆದಾಡುತ್ತಾನೆ. ಅವನ ಜೊತೆಗೆ ಮುನ್ನೆಚ್ಚರಿಕೆ ನೀಡುವ ಒಬ್ಬ ದೇವದೂತನು ಏಕೆ ಇಳಿಸಲ್ಪಡಲಿಲ್ಲ?

وَقَالُوْا مَالِ هٰذَا الرَّسُوْلِ يَاْكُلُ الطَّعَامَ وَيَمْشِيْ فِي الْاَسْوَاقِ ۭ لَوْلَآ اُنْزِلَ اِلَيْهِ مَلَكٌ فَيَكُوْنَ مَعَهٗ نَذِيْرًا ﴿٨﴾

9. 'ಅಥವಾ ಅವನಿಗೆ ಒಂದು ನಿಧಿಯನ್ನು ಎಸೆದುಕೊಡಬೇಕಾಗಿತ್ತು. ಅಥವಾ ಹಣ್ಣುಹಂಪಲುಗಳನ್ನು ತಿನ್ನಲು ಅವನಿಗೆ ಒಂದು ತೋಟವಿರಬೇಕಾಗಿತ್ತು.' ಆ ಅಧರ್ಮಿಗಳು ಹೀಗೂ ಹೇಳುತ್ತಾರೆ: 'ಮೋಡಿಗೊಳಗಾದ ಒಬ್ಬ ವ್ಯಕ್ತಿಯನ್ನು ನೀವು ಅನುಸರಿಸುತ್ತಿದ್ದೀರಿ.'

اَوْ يُلْقٰٓى اِلَيْهِ كَنْزٌ اَوْ تَكُوْنُ لَهٗ جَنَّةٌ يَّاْكُلُ مِنْهَا ۭ وَقَالَ الظّٰلِمُوْنَ اِنْ تَتَّبِعُوْنَ اِلَّا رَجُلًا مَّسْحُوْرًا ﴿٩﴾

10. ನೋಡು, ನಿನ್ನ ಬಗ್ಗೆ ಅವರು ಏನೆಲ್ಲ ಉಪಮೆಗಳನ್ನು ಪ್ರಯೋಗಿಸುತ್ತಾರೆ? ಹಾಗೆ ಅವರು ದಾರಿತಪ್ಪಿಹೋಗಿದ್ದಾರೆ. ಸರಿಯಾದ ದಾರಿಯನ್ನು ಪಡೆಯಲು ಅವರಿಗೆ ಸಾಧ್ಯವಿಲ್ಲ.

اُنْظُرْ كَيْفَ ضَرَبُوْا لَكَ الْاَمْثَالَ فَضَلُّوْا فَلَا يَسْتَطِيْعُوْنَ سَبِيْلًا ﴿١٠﴾

11. ಅವನು (ಅಲ್ಲಾಹನು) ಅನುಗ್ರಹಪೂರ್ಣನಾಗಿದ್ದಾನೆ. ಅವನು ಇಚ್ಛಿಸಿದರೆ, ಅದಕ್ಕಿಂತ (ವಿರೋಧಿಗಳ ಭಾವನೆಯ ತೋಟಕ್ಕಿಂತ) ಉತ್ತಮವಾದುದನ್ನು ನಿನಗೆ ದಯಪಾಲಿಸುವನು - ಕೆಳಭಾಗದಲ್ಲಿ ಸರಿತ್ತುಗಳು ಪ್ರವಹಿಸುವ ತೋಟಗಳನ್ನು. ಅವನು ನಿನಗೆ ಅರಮನೆಗಳನ್ನೂ ಒದಗಿಸುವನು.

تَبٰرَكَ الَّذِيْٓ اِنْ شَاۗءَ جَعَلَ لَكَ خَيْرًا مِّنْ ذٰلِكَ جَنّٰتٍ تَجْرِيْ مِنْ تَحْتِهَا الْاَنْهٰرُ ۙ وَيَجْعَلْ لَّكَ قُصُوْرًا ﴿١١﴾

بَلْ كَذَّبُوا بِالسَّاعَةِ وَأَعْتَدْنَا لِمَنْ كَذَّبَ بِالسَّاعَةِ سَعِيرًا ﴿١٢﴾

**12.** ಅವರಾದರೋ ಅಂತ್ಯದಿನವನ್ನು ಅಲ್ಲಗಳೆಯುತ್ತಾರೆ. ಅಂತ್ಯದಿನವನ್ನು ಅಲ್ಲಗಳೆಯುವವರಿಗೆ ನಾವು ಜ್ವಲಿಸುವ ಅಗ್ನಿಯನ್ನು ಸಿದ್ಧಪಡಿಸಿಟ್ಟಿದ್ದೇವೆ.

إِذَا رَأَتْهُمْ مِنْ مَكَانٍ بَعِيدٍ سَمِعُوا لَهَا تَغَيُّظًا وَزَفِيرًا ﴿١٣﴾

**13.** ಅದು ಅವರನ್ನು ದೂರದಿಂದ ಕಾಣುವಾಗಲೇ ಅದರ ಪ್ರಕೋಪವನ್ನೂ ಭೋರಾಟವನ್ನೂ ಅವರು ಆಲಿಸುವರು.

وَإِذَا أُلْقُوا مِنْهَا مَكَانًا ضَيِّقًا مُقَرَّنِينَ دَعَوْا هُنَالِكَ ثُبُورًا ﴿١٤﴾

**14.** ಅವರು ಸಂಕೋಲೆಯಿಂದ ಬಂಧಿಸಲ್ಪಟ್ಟು ಅಲ್ಲಿ ಒಂದು ಇಕ್ಕಟ್ಟಾದೆಡೆಗೆ ಎಸೆಯಲ್ಪಟ್ಟಾಗ, ಅವರು ತಮ್ಮ ನಾಶಕ್ಕೋಸ್ಕರ ಪ್ರಾರ್ಥಿಸುವರು.

لَا تَدْعُوا الْيَوْمَ ثُبُورًا وَاحِدًا وَادْعُوا ثُبُورًا كَثِيرًا ﴿١٥﴾

**15.** (ಆಗ ದೇವದೂತರು ಅವರೊಡನೆ ಹೀಗೆ ಹೇಳುವರು:) 'ನೀವು ಒಂದು ನಾಶಕ್ಕಾಗಿ ಪ್ರಾರ್ಥಿಸಿದರೆ ಸಾಕಾಗದು. ಅನೇಕ ನಾಶಗಳಿಗಾಗಿ ಪ್ರಾರ್ಥಿಸಿರಿ.'

قُلْ أَذَٰلِكَ خَيْرٌ أَمْ جَنَّةُ الْخُلْدِ الَّتِي وُعِدَ الْمُتَّقُونَ ۚ كَانَتْ لَهُمْ جَزَاءً وَمَصِيرًا ﴿١٦﴾

**16.** ಹೇಳು: 'ಅದು ಉತ್ತಮವಾದುದೋ ಅಥವಾ ಸಜ್ಜನರಿಗೆ ವಾಗ್ದಾನ ಮಾಡಲ್ಪಟ್ಟ ನಿತ್ಯ ಜೀವನದ ಸ್ವರ್ಗವೋ? ಅದು ಅವರಿಗೆ ತಕ್ಕುದಾದ ಪುರಸ್ಕಾರ ಮತ್ತು ಅಂತಿಮ ವಾಸ ಸ್ಥಳವಾಗಿದೆ.'

لَهُمْ فِيهَا مَا يَشَاءُونَ خَالِدِينَ ۚ كَانَ عَلَىٰ رَبِّكَ وَعْدًا مَسْئُولًا ﴿١٧﴾

**17.** ಅಲ್ಲಿ ಅವರು ಶಾಶ್ವತವಾಗಿ ವಾಸಿಸಿಕೊಂಡು ತಾವು ಬಯಸುವುದನ್ನೇ ಗಳಿಸುವರು. ಇದು ನಿನ್ನ ಪ್ರಭುವಿನ ಮೇಲೆ, ಪೂರೈಸಲು ಬದ್ಧವಾಗಿರುವ ಒಂದು ವಾಗ್ದಾನವಾಗಿದೆ.

وَيَوْمَ يَحْشُرُهُمْ وَمَا يَعْبُدُونَ مِنْ دُونِ اللَّهِ فَيَقُولُ أَأَنْتُمْ أَضْلَلْتُمْ عِبَادِي هَٰؤُلَاءِ أَمْ هُمْ ضَلُّوا السَّبِيلَ ﴿١٨﴾

**18.** ಅವರನ್ನೂ ಅಲ್ಲಾಹನ ಹೊರತು ಅವರು ಆರಾಧಿಸಿದವರನ್ನೂ ಅವನು (ಅಲ್ಲಾಹನು) ಒಟ್ಟುಗೂಡಿಸುವ ದಿನದಂದು ಅವನು ಕೇಳುವನು: 'ನನ್ನ ಈ ದಾಸರನ್ನು ಪಥಭ್ರಷ್ಟಗೊಳಿಸಿದ್ದು ನೀವೋ ಅಥವಾ ಅವರೇ ಸ್ವಯಂ ದಾರಿತಪ್ಪಿಹೋದರೋ?'

قَالُوا سُبْحَانَكَ مَا كَانَ يَنْبَغِي لَنَا أَنْ نَتَّخِذَ مِنْ دُونِكَ مِنْ أَوْلِيَاءَ وَلَٰكِنْ





مَتَّعْتَهُمْ وَآبَاءَهُمْ حَتَّىٰ نَسُوا الذِّكْرَ ۚ وَكَانُوا قَوْمًا بُورًا ﴿١٩﴾

**19.** ಅವರು ಉತ್ತರಿಸುವರು: 'ನೀನು ಪರಿಶುದ್ಧನಾಗಿರುವೆ. ನಿನ್ನ ಹೊರತು ಬೇರೆ ಯಾರನ್ನಾದರೂ ರಕ್ಷಕನನ್ನಾಗಿ ಮಾಡುವುದು ನಮಗೆ ಉಚಿತವಾಗಿರಲಿಲ್ಲ. ಆದರೆ ನೀನು ಅವರಿಗೂ ಅವರ ತಂದೆ ತಾತಂದಿರಿಗೂ ಜೀವನದ ವೈಭೋಗಗಳನ್ನು ನೀಡಿದೆ. ಹಾಗೆ ಅವರು (ನಿನ್ನ) ಸ್ಮರಣೆಯನ್ನು ತ್ಯಜಿಸಿ ನಾಶಗೊಳ್ಳುವ ಜನಾಂಗದವರಾದರು.'

فَقَدْ كَذَّبُوكُمْ بِمَا تَقُولُونَ فَمَا تَسْتَطِيعُونَ صَرْفًا وَلَا نَصْرًا ۚ وَمَنْ يَظْلِمْ مِنْكُمْ نُذِقْهُ عَذَابًا كَبِيرًا ﴿٢٠﴾

**20.** ಆಗ (ಅವಿಶ್ವಾಸಿಗಳೊಡನೆ ಹೀಗೆ ಹೇಳಲಾಗುವುದು:) 'ನೀವು ಹೇಳುವುದನ್ನು ಇವರು (ನಿಮ್ಮ ಆರಾಧ್ಯರು) ಅಲ್ಲಗಳೆದಿದ್ದಾರೆ. ಆದ್ದರಿಂದ ನೀವು ಶಿಕ್ಷೆಯಿಂದ ತಪ್ಪಿಸಿಕೊಳ್ಳಲಾರಿರಿ; ನಿಮಗೆ ನೆರವೂ ದೊರಕಲಾರದು. ನಿಮ್ಮ ಪೈಕಿ ಯಾರು ಅಕ್ರಮವೆಸಗುತ್ತಾನೋ ಅವನಿಗೆ ನಾವು ಕಠೋರ ಶಿಕ್ಷೆಯ ರುಚಿ ತೋರಿಸುತ್ತೇವೆ.'

وَمَا أَرْسَلْنَا قَبْلَكَ مِنَ الْمُرْسَلِينَ إِلَّا إِنَّهُمْ لَيَأْكُلُونَ الطَّعَامَ وَيَمْشُونَ فِي الْأَسْوَاقِ ۗ وَجَعَلْنَا بَعْضَكُمْ لِبَعْضٍ فِتْنَةً أَتَصْبِرُونَ ۗ وَكَانَ رَبُّكَ بَصِيرًا ﴿٢١﴾

**21.** ದಿಟವಾಗಿಯೂ ನಿನಗಿಂತ ಮುಂಚೆ ಸಂದೇಶವಾಹಕರ ಪೈಕಿ ಯಾರನ್ನೂ ಆಹಾರವನ್ನು ಸೇವಿಸುವವರಾಗಿಯೂ ಪೇಟೆಗಳಲ್ಲಿ ನಡೆದಾಡುವವರಾಗಿಯೂ ಅಲ್ಲದೆ ನಾವು ಕಳುಹಿಸಲಿಲ್ಲ. ನಿಮ್ಮ ಪೈಕಿ ಕೆಲವರನ್ನು ಇತರ ಕೆಲವರಿಂದ ಪರೀಕ್ಷೆಗೆ ಗುರಿಪಡಿಸಿರುತ್ತೇವೆ. ನೀವು ಸೈರಿಸಿಕೊಳ್ಳುತ್ತೀರೋ (ಎಂದು ಗೊತ್ತುಮಾಡಲಿಕ್ಕಾಗಿ). ನಿನ್ನ ಪ್ರಭು ಸರ್ವವನ್ನೂ ಕಾಣುತ್ತಾನೆ.

وَقَالَ الَّذِينَ لَا يَرْجُونَ لِقَاءَنَا لَوْلَا أُنْزِلَ عَلَيْنَا الْمَلَائِكَةُ أَوْ نَرَىٰ رَبَّنَا ۗ لَقَدِ اسْتَكْبَرُوا فِي أَنْفُسِهِمْ وَعَتَوْا عُتُوًّا كَبِيرًا ﴿٢٢﴾

**22.** ನಮ್ಮನ್ನು ಭೇಟಿಯಾಗಲು ಬಯಸದವರು ಹೀಗೆ ಹೇಳುತ್ತಾರೆ: 'ನಮ್ಮ ಬಳಿಗೆ ದೇವದೂತರು ಇಳಿಸಲ್ಪಡುವುದಿಲ್ಲವೇಕೆ? ಅಥವಾ ನಮ್ಮ ಪ್ರಭುವನ್ನು ನಾವು ಕಾಣುವುದಿಲ್ಲವೇಕೆ?' ದಿಟವಾಗಿಯೂ ಅವರು ಅಹಂಭಾವಿಗಳಾಗಿದ್ದಾರೆ ಹಾಗೂ ಬಹಳವಾಗಿ ಹದ್ದು ಮೀರಿ ವರ್ತಿಸಿದ್ದಾರೆ.

يَوْمَ يَرَوْنَ الْمَلَائِكَةَ لَا بُشْرَىٰ يَوْمَئِذٍ لِلْمُجْرِمِينَ وَيَقُولُونَ حِجْرًا مَحْجُورًا ﴿٢٣﴾

**23.** ದೇವದೂತರನ್ನು ಅವರು ಭೇಟಿಯಾಗುವ ಆ ದಿನದಂದು ಪಾಪಿಗಳಿಗೆ ಯಾವ ಶುಭವಾರ್ತೆಯೂ ಲಭಿಸಲಾರದು. '(ಅಕಟಾ) ಒಂದು ತಡೆಗಟ್ಟು ಇರುತ್ತಿದ್ದರೆ!' ಎಂದು ಅವರು ಆಲಾಪಿಸುವರು.

**24.** ಅವರು ಎಸಗಿದ ಪ್ರತಿಯೊಂದು ಕೃತ್ಯದೆಡೆಗೆ ನಾವು ಗಮನ ಹರಿಸುವೆವು. ಆಮೇಲೆ ನಾವು ಅದನ್ನು ಧೂಳೀಕರಿಸಿ ಹರಡಿಬಿಡುವೆವು.

وَقَدِمْنَآ إِلَىٰ مَا عَمِلُوا۟ مِنْ عَمَلٍ
فَجَعَلْنَٰهُ هَبَآءً مَّنثُورًا ﴿٢٣﴾

**25.** ಸ್ವರ್ಗದ ನಿವಾಸಿಗಳು ಆ ದಿನದಂದು ಉತ್ತಮವಾದ ವಾಸಸ್ಥಳವನ್ನು ಪಡೆದವರೂ ಉತ್ತಮವಾದ ವಿಶ್ರಮ ಸ್ಥಳವನ್ನು ಹೊಂದಿದವರೂ ಆಗಿರುತ್ತಾರೆ.

أَصْحَٰبُ ٱلْجَنَّةِ يَوْمَئِذٍ خَيْرٌ مُّسْتَقَرًّا
وَأَحْسَنُ مَقِيلًا ﴿٢٤﴾

**26.** ಮೇಘಗಳೊಂದಿಗೆ ಆಕಾಶ ಬಿರಿಯುವ ಮತ್ತು ಬಹು ಸಂಖ್ಯೆಯಲ್ಲಿ ದೇವದೂತರು ಇಳಿಸಲ್ಪಡುವ ಆ ದಿನ.

وَيَوْمَ تَشَقَّقُ ٱلسَّمَآءُ بِٱلْغَمَٰمِ وَ
نُزِّلَ ٱلْمَلَٰٓئِكَةُ تَنزِيلًا ﴿٢٥﴾

**27.** ಅಂದು ನಿಜವಾದ ಆಧಿಪತ್ಯ ದಯಾವಂತನಿಗೆ (ಅಲ್ಲಾಹನಿಗೆ) ಇರುವುದು. ಅದು ಅವಿಶ್ವಾಸಿಗಳು ಬಹಳ ಕಷ್ಟ ಅನುಭವಿಸುವ ದಿನವಾಗಿರುವುದು.

ٱلْمُلْكُ يَوْمَئِذٍ ٱلْحَقُّ لِلرَّحْمَٰنِ ۚ وَ
كَانَ يَوْمًا عَلَى ٱلْكَٰفِرِينَ عَسِيرًا ﴿٢٦﴾

**28.** ಪಾಪಿ ತನ್ನ ಕೈ ಕೈ ಹಿಸುಕಿಕೊಳ್ಳುತ್ತಾ ಹೀಗೆ ಆಲಾಪಿಸುವನು: 'ಅಕಟಾ, ಪ್ರವಾದಿ ತೋರಿಸಿದ ಅದೇ ಮಾರ್ಗವನ್ನು ನಾನು ಅನುಸರಿಸಿದ್ದರೆ (ಎಷ್ಟು ಚೆನ್ನಾಗಿತ್ತು)!

وَيَوْمَ يَعَضُّ ٱلظَّالِمُ عَلَىٰ يَدَيْهِ يَقُولُ
يَٰلَيْتَنِى ٱتَّخَذْتُ مَعَ ٱلرَّسُولِ سَبِيلًا ﴿٢٧﴾

**29.** 'ನನ್ನ ದುರದೃಷ್ಟವೇ, ಅಂತಹ ವ್ಯಕ್ತಿಯನ್ನು ನಾನು ಮಿತ್ರನನ್ನಾಗಿ ಮಾಡದೆ ಇರುತ್ತಿದ್ದರೆ!

يَٰوَيْلَتَىٰ لَيْتَنِى لَمْ أَتَّخِذْ فُلَانًا خَلِيلًا ﴿٢٨﴾

**30.** 'ಈ ಉಪದೇಶ ನನಗೆ ನೀಡಲ್ಪಟ್ಟಿದ್ದರೂ ಅನಂತರ ಅವನು (ಶೈತಾನ) ನನ್ನನ್ನು ದಾರಿಗೆಡಿಸಿದನು.' ಶೈತಾನನಾದರೋ, ಕೊನೆಗೆ ಮನುಷ್ಯನನ್ನು ಕೈಬಿಡುವವನೇ ಆಗಿದ್ದಾನೆ.

لَّقَدْ أَضَلَّنِى عَنِ ٱلذِّكْرِ بَعْدَ إِذْ
جَآءَنِى ۗ وَكَانَ ٱلشَّيْطَٰنُ لِلْإِنسَٰنِ
خَذُولًا ﴿٢٩﴾

**31.** 'ನನ್ನ ಪ್ರಭೂ, ನನ್ನ ಜನರು ಈ ಖುರ್‌ಆನನ್ನು ತ್ಯಾಜ್ಯ ವಸ್ತುವಿನಂತೆ ತಳ್ಳಿ ಬಿಟ್ಟಿರುವರು' ಎಂದು ಪ್ರವಾದಿ ಹೇಳುವರು.

وَقَالَ ٱلرَّسُولُ يَٰرَبِّ إِنَّ قَوْمِى
ٱتَّخَذُوا۟ هَٰذَا ٱلْقُرْءَانَ مَهْجُورًا ﴿٣٠﴾

**32.** ಹಿಂದೆ ನಾವು ಪ್ರತಿಯೊಬ್ಬ ಪ್ರವಾದಿಗೆ ಪಾಪಿಗಳ ಪೈಕಿಯಿಂದ ಶತ್ರುವನ್ನು ಉಂಟು

وَكَذَٰلِكَ جَعَلْنَا لِكُلِّ نَبِىٍّ عَدُوًّا مِّنَ





ಮಾಡಿದ್ದೇವೆ. ನಿನ್ನ ಪ್ರಭು ಮಾರ್ಗ ದರ್ಶಕನಾಗಿಯೂ ಸಹಾಯಕನಾಗಿಯೂ ಸಾಕು.

ٱلْمُجْرِمِينَ ۗ وَكَفَىٰ بِرَبِّكَ هَادِيًا وَ
نَصِيرًا ﴿٣١﴾

**33.** 'ಒಂದೇ ಬಾರಿಗೆ ಖುರ್‌ಆನ್ ಅವನಿಗೆ ಒಟ್ಟಾಗಿ ಅವತೀರ್ಣವಾಗಿಲ್ಲವೇಕೇ?' ಎಂದು ಅವಿಶ್ವಾಸಿಗಳು ಕೇಳುವರು. ನಿನ್ನ ಹೃದಯ ದಾರ್ಢ್ಯವನ್ನು ಹೆಚ್ಚಿಸಲಿಕ್ಕೋಸ್ಕರ ಹಾಗೆ ಮಾಡಲಾಗಿದೆ. ಹಾಗೂ ನಾವು ಅದನ್ನು ಉತ್ತಮವಾದ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದೇವೆ.

وَقَالَ ٱلَّذِينَ كَفَرُوا۟ لَوْلَا نُزِّلَ عَلَيْهِ
ٱلْقُرْءَانُ جُمْلَةً وَٰحِدَةً ۚ كَذَٰلِكَ ۛ
لِنُثَبِّتَ بِهِۦ فُؤَادَكَ ۖ وَرَتَّلْنَٰهُ تَرْتِيلًا ﴿٣٢﴾

**34.** ಅವರು ನಿನ್ನ ವಿರುದ್ಧ ಯಾವುದಾದರೂ ಸಿದ್ಧಾಂತವನ್ನು ಮುಂದಿಟ್ಟರೆ ಶಕ್ತಿಯುತವೂ ನ್ಯಾಯಯುತವೂ ಆದ ಉತ್ತಮ ವಿವರಣೆಯನ್ನು ನಾವು ನಿನಗೆ ನೀಡುತ್ತೇವೆ.

وَلَا يَأْتُونَكَ بِمَثَلٍ إِلَّا جِئْنَٰكَ بِٱلْحَقِّ
وَأَحْسَنَ تَفْسِيرًا ﴿٣٣﴾

**35.** ಯಾರು ತಮ್ಮ ಮುಖಂಡರ ಸಹಿತ ನರಕಕ್ಕೆ ತಳ್ಳಲ್ಪಡುವರೋ ಅವರು ಅತಿ ನೀಚ ಸ್ಥಾನವನ್ನು ಹೊಂದಿದವರೂ ಅತ್ಯಂತ ಮಾರ್ಗಭ್ರಷ್ಟರೂ ಆಗಿದ್ದಾರೆ.

ٱلَّذِينَ يُحْشَرُونَ عَلَىٰ وُجُوهِهِمْ إِلَىٰ
جَهَنَّمَ ۙ أُو۟لَٰٓئِكَ شَرٌّ مَّكَانًا وَأَضَلُّ
سَبِيلًا ﴿٣٤﴾

**36.** ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು ಹಾಗೂ ಅವರ ಜೊತೆಗೆ ಅವರ ಸಹೋದರ ಹಾರೂನ್‌ರನ್ನು ಸಹಾಯಕನಾಗಿ ನೇಮಿಸಿದೆವು.

وَلَقَدْ ءَاتَيْنَا مُوسَى ٱلْكِتَٰبَ وَجَعَلْنَا مَعَهُۥٓ
أَخَاهُ هَٰرُونَ وَزِيرًا ﴿٣٥﴾

**37.** 'ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವ ಜನರ ಬಳಿಗೆ ನೀವಿಬ್ಬರೂ ಹೋಗಿರಿ' ಎಂದು ನಾವು ಹೇಳಿದೆವು. ತದನಂತರ (ಅವರ ಉಪದೇಶವನ್ನು ಜನರು ತಿರಸ್ಕರಿಸಿದಾಗ) ನಾವು ಆ ಜನರನ್ನು ಸಂಪೂರ್ಣವಾಗಿ ನಿರ್ನಾಮಮಾಡಿದೆವು.

فَقُلْنَا ٱذْهَبَآ إِلَى ٱلْقَوْمِ ٱلَّذِينَ كَذَّبُوا۟
بِـَٔايَٰتِنَا ۖ فَدَمَّرْنَٰهُمْ تَدْمِيرًا ﴿٣٦﴾

**38.** ನೂಹ್‌ರ ಜನರು ಪ್ರವಾದಿಗಳನ್ನು ಧಿಕ್ಕರಿಸಿದಾಗ ನಾವು ಅವರನ್ನು ಮುಳುಗಿಸಿದೆವು. ಹಾಗೂ ಅವರನ್ನು ಮನುಷ್ಯ ಕುಲಕ್ಕೆ ಒಂದು

وَقَوْمَ نُوحٍ لَّمَّا كَذَّبُوا۟ ٱلرُّسُلَ
أَغْرَقْنَٰهُمْ وَجَعَلْنَٰهُمْ لِلنَّاسِ ءَايَةً ۖ

ದೃಷ್ಟಾಂತವನ್ನಾಗಿ ಮಾಡಿದೆವು. ಪಾಪಿಗಳಿಗೆ ನಾವು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದೇವೆ.

وَأَعْتَدْنَا لِلظَّالِمِينَ عَذَابًا أَلِيمًا ﴿٣٧﴾

39. ಆದ್, ಸಮೂದ್ ಗೋತ್ರಗಳನ್ನೂ ರಸ್ಸ್[352] ಜನತೆಯನ್ನೂ ತನ್ಮಧ್ಯೆ ಅನೇಕ ಪೀಳಿಗೆಗಳನ್ನೂ ನಾವು ನಾಶಪಡಿಸಿದೆವು.

وَعَادًا وَثَمُودَ وَأَصْحَابَ الرَّسِّ وَقُرُونًا بَيْنَ ذَٰلِكَ كَثِيرًا ﴿٣٨﴾

40. ಪ್ರತಿಯೊಂದಕ್ಕೂ (ಪ್ರತಿಯೊಂದು ಸಮುದಾಯಕ್ಕೂ) ನಾವು ಉದಾಹರಣೆಗಳನ್ನು ವಿವರಿಸಿ ಕೊಟ್ಟೆವು. ಅನಂತರ (ಅವರು ನಿರಾಕರಿಸಿದಾಗ) ಪ್ರತಿಯೊಂದನ್ನು ನಾವು ನಾಶಗೊಳಿಸಿದೆವು.

وَكُلًّا ضَرَبْنَا لَهُ الْأَمْثَالَ ۖ وَكُلًّا تَبَّرْنَا تَتْبِيرًا ﴿٣٩﴾

41. ವಿನಾಶಕಾರಿಯಾದ ಮಳೆ ಸುರಿಸಲ್ಪಟ್ಟ ನಾಡಿನ[352A] ಸಮೀಪದಿಂದ ಇವರು (ಮಕ್ಕ ನಿವಾಸಿಗಳು) ಹಾದು ಹೋಗಿದ್ದಾರೆ. ಆಗ ಇವರು ಅದರ ಅವಶೇಷಗಳನ್ನು ಕಂಡಿಲ್ಲವೇ? ವಾಸ್ತವವೇನೆಂದರೆ ಇವರು ಪುನಃ ಎಬ್ಬಿಸಲ್ಪಡುವ ಬಗ್ಗೆ ಭರವಸೆ ಇಲ್ಲದವರು.

وَلَقَدْ أَتَوْا عَلَى الْقَرْيَةِ الَّتِي أُمْطِرَتْ مَطَرَ السَّوْءِ ۚ أَفَلَمْ يَكُونُوا يَرَوْنَهَا ۚ بَلْ كَانُوا لَا يَرْجُونَ نُشُورًا ﴿٤٠﴾

42. ಅವರು ನಿನ್ನನ್ನು ಕಾಣುವಾಗ 'ಇವನನ್ನೋ ಅಲ್ಲಾಹನು ಪ್ರವಾದಿಯಾಗಿ ಕಳುಹಿಸಿದ್ದು?' ಎಂದು ಅಪಹಾಸ್ಯ ಮಾಡುತ್ತಾರೆ.

وَإِذَا رَأَوْكَ إِنْ يَتَّخِذُونَكَ إِلَّا هُزُوًا أَهَٰذَا الَّذِي بَعَثَ اللَّهُ رَسُولًا ﴿٤١﴾

43. 'ನಾವು ದೃಢಚಿತ್ತರಾಗಿರದಿರುತ್ತಿದ್ದರೆ ನಮ್ಮನ್ನು ಇವನು ಖಂಡಿತವಾಗಿಯೂ ನಮ್ಮ ದೇವರುಗಳಿಂದ ದೂರ ಕೊಂಡೊಯ್ದು ದಾರಿ ತಪ್ಪಿಸುತ್ತಿದ್ದನು' (ಎಂದು ಅವರು ಹೇಳುತ್ತಾರೆ). ಅವರು ಶಿಕ್ಷೆಯನ್ನು ಕಾಣುವಾಗ ದಾರಿತಪ್ಪಿ ದೂರ ಹೋದವರು ಯಾರೆಂದು ಅವರಿಗೆ ಮನವರಿಕೆಯಾಗುವುದು.

إِنْ كَادَ لَيُضِلُّنَا عَنْ آلِهَتِنَا لَوْلَا أَنْ صَبَرْنَا عَلَيْهَا ۚ وَسَوْفَ يَعْلَمُونَ حِينَ يَرَوْنَ الْعَذَابَ مَنْ أَضَلُّ سَبِيلًا ﴿٤٢﴾

44. ತನ್ನ ದೇಹೇಚ್ಛೆಯನ್ನು ದೇವರನ್ನಾಗಿ ಮಾಡಿದವನ ಅವಸ್ಥೆಯನ್ನು ನೀನು ಕಂಡೆಯಾ? ಅವನ

أَرَأَيْتَ مَنِ اتَّخَذَ إِلَٰهَهُ هَوَاهُ

352. ರಸ್ಸ್ ಜನತೆಯ ಬಗ್ಗೆ ವ್ಯಾಖ್ಯಾನಗಾರರಲ್ಲಿ ಭಿನ್ನಾಭಿಪ್ರಾಯವಿದೆ. ಇವರು ಸಮೂದ್ ಜನತೆಯ ನಂತರದವರೆಂದು ಈ ವಚನದಿಂದ ತಿಳಿದುಬರುತ್ತದೆ. 'ಬಹರುಲ್ ಮುಹೀತ್' ಈ ಅಭಿಪ್ರಾಯವನ್ನು ಬೆಂಬಲಿಸುತ್ತದೆ.

352A. ಪ್ರವಾದಿ ಲೂತ್ (ಅಲೈಹಿಸ್ಸಲಾಂ) ರ ಊರು.





ರಕ್ಷಕನಾಗಲು ನಿನಗೆ ಸಾಧ್ಯವೇ?

أَفَأَنْتَ تَكُونُ عَلَيْهِ وَكِيلًا ﴿٤٣﴾

45. ಅಥವಾ ಅವರಲ್ಲಿ ಹೆಚ್ಚಿನವರು ಕೇಳುತ್ತಲೂ ಮನವರಿಕೆಮಾಡುತ್ತಲೂ ಇದ್ದಾರೆಂದು ನೀನು ಭಾವಿಸುತ್ತೀಯಾ? ಅವರು ಜಾನುವಾರುಗಳಿಗೆ ಮಾತ್ರ ಸಮಾನರು. ಅಲ್ಲ, ಅವರು ಬಹಳವಾಗಿ ದಾರಿತಪ್ಪಿ ಹೋದವರು.

أَمْ تَحْسَبُ أَنَّ أَكْثَرَهُمْ يَسْمَعُونَ أَوْ يَعْقِلُونَ ۚ إِنْ هُمْ إِلَّا كَالْأَنْعَامِ ۖ بَلْ هُمْ أَضَلُّ سَبِيلًا ﴿٤٤﴾

46. ನಿನ್ನ ಪ್ರಭು ನೆರಳನ್ನು ಹೇಗೆ ಉದ್ದಗೊಳಿಸುತ್ತಾನೆಂದು ನೀನು ನೋಡಿಲ್ಲವೇ? ಅವನು ಇಚ್ಛಿಸಿದ್ದರೆ ಅದನ್ನು ಅವನು ಇದ್ದಲ್ಲೇ ಇರುವಂತೆ ಮಾಡುತ್ತಿದ್ದನು. ನಾವು ಸೂರ್ಯನನ್ನು ಅದಕ್ಕೆ ಮಾರ್ಗದರ್ಶಕವಾಗಿ ಮಾಡಿದ್ದೇವೆ.

أَلَمْ تَرَ إِلَىٰ رَبِّكَ كَيْفَ مَدَّ الظِّلَّ وَلَوْ شَاءَ لَجَعَلَهُ سَاكِنًا ثُمَّ جَعَلْنَا الشَّمْسَ عَلَيْهِ دَلِيلًا ﴿٤٥﴾

47. ಅನಂತರ ನಾವು ಅದನ್ನು ನಮ್ಮ ಕಡೆಗೆ ಮೆಲ್ಲ ಮೆಲ್ಲನೆ ಸೆಳೆಯುತ್ತೇವೆ.

ثُمَّ قَبَضْنَاهُ إِلَيْنَا قَبْضًا يَسِيرًا ﴿٤٦﴾

48. ಅವನೇ (ಅಲ್ಲಾಹನೇ) ರಾತ್ರಿಯನ್ನು ನಿಮಗೆ ಹೊದಿಕೆಯನ್ನಾಗಿಯೂ ನಿದ್ರೆಯನ್ನು ವಿಶ್ರಾಂತಿಗಾಗಿಯೂ ಹಗಲನ್ನು ಚಟುವಟಿಕೆಗಾಗಿಯೂ ಮಾಡಿಟ್ಟಿರುವನು.

وَهُوَ الَّذِي جَعَلَ لَكُمُ اللَّيْلَ لِبَاسًا وَالنَّوْمَ سُبَاتًا وَجَعَلَ النَّهَارَ نُشُورًا ﴿٤٧﴾

49. ತನ್ನ ಕರುಣೆಗೆ ಮುಂಚೆ ಶುಭ ಸಂದೇಶವಾಗಿ ಮಾರುತಗಳನ್ನು ಕಳುಹಿಸುವವನು ಅವನೇ ಆಗಿದ್ದಾನೆ. ನಾವು ಶುದ್ಧವಾದ ಜಲವನ್ನು ಆಕಾಶದಿಂದ ಸುರಿಸುತ್ತೇವೆ.

وَهُوَ الَّذِي أَرْسَلَ الرِّيَاحَ بُشْرًا بَيْنَ يَدَيْ رَحْمَتِهِ ۚ وَأَنْزَلْنَا مِنَ السَّمَاءِ مَاءً طَهُورًا ﴿٤٨﴾

50. ಹಾಗೆ ನಾವು ಆ (ಜಲ) ಮೂಲಕ ನಿರ್ಜೀವವಾದ ಭೂಪ್ರದೇಶವನ್ನು ಜೀವಂತಗೊಳಿಸುತ್ತೇವೆ ಹಾಗೂ ನಮ್ಮ ಸೃಷ್ಟಿಗಳಾದ ಜಾನುವಾರುಗಳಿಗೂ ಅಸಂಖ್ಯಾತ ಮನುಷ್ಯರಿಗೂ ಕುಡಿಯಲಿಕ್ಕೂ ಒದಗಿಸುತ್ತೇವೆ.

لِنُحْيِيَ بِهِ بَلْدَةً مَيْتًا وَنُسْقِيَهُ مِمَّا خَلَقْنَا أَنْعَامًا وَأَنَاسِيَّ كَثِيرًا ﴿٤٩﴾

51. ಅವರು ಗಮನಿಸಲಿಕ್ಕೋಸ್ಕರ ಇದನ್ನು (ಖುರ್‌ಆನನ್ನು) ನಾವು ಅವರಿಗೆ ವಿವಿಧ ರೂಪದಲ್ಲಿ

وَلَقَدْ صَرَّفْنَاهُ بَيْنَهُمْ لِيَذَّكَّرُوا

فَأَبَىٰٓ أَكْثَرُ ٱلنَّاسِ إِلَّا كُفُورًا ﴿٥٠﴾

ವಿವರಿಸಿದ್ದೇವೆ. ಆದರೆ ಮನುಷ್ಯರಲ್ಲಿ ಹೆಚ್ಚಿನವರು ತಿರಸ್ಕರಿಸುತ್ತಾ ಕೃತಘ್ನರಾದರು.

وَلَوْ شِئْنَا لَبَعَثْنَا فِى كُلِّ قَرْيَةٍ نَّذِيرًا ﴿٥١﴾

**52.** ನಾವು ಬಯಸಿದ್ದರೆ, ಖಂಡಿತವಾಗಿಯೂ ಪ್ರತಿಯೊಂದು ನಾಡಿನಲ್ಲೂ ನಾವು ಒಬ್ಬೊಬ್ಬ ಮುನ್ನೆಚ್ಚರಿಕೆಗಾರನನ್ನು (ಪ್ರವಾದಿಯನ್ನು) ನಿಯೋಜಿಸುತ್ತಿದ್ದೆವು.

فَلَا تُطِعِ ٱلْكَٰفِرِينَ وَجَٰهِدْهُم بِهِۦ جِهَادًا كَبِيرًا ﴿٥٢﴾

**53.** ನೀವು ಅವಿಶ್ವಾಸಿಗಳಿಗೆ ವಿಧೇಯರಾಗಬೇಡಿರಿ. ಅವರ ವಿರುದ್ಧ ಅದರ (ಖುರ್‌ಆನಿನ) ಮೂಲಕ ಹೋರಾಡಿರಿ - ಬಲು ದೊಡ್ಡ ಹೋರಾಟ.

وَهُوَ ٱلَّذِى مَرَجَ ٱلْبَحْرَيْنِ هَٰذَا عَذْبٌ فُرَاتٌ وَهَٰذَا مِلْحٌ أُجَاجٌ وَجَعَلَ بَيْنَهُمَا بَرْزَخًا وَحِجْرًا مَّحْجُورًا ﴿٥٣﴾

**54.** ಅವನೇ ಎರಡು ಸಮುದ್ರಗಳನ್ನು ಹರಿಯುವಂತೆ ಮಾಡಿದವನು. ಒಂದು ರುಚಿಕರವೂ ಸಿಹಿಯೂ ಆಗಿದೆ. ಮತ್ತೊಂದು ಉಪ್ಪಾಗಿದ್ದು ಕಹಿಯಾಗಿದೆ. ಅವೆರಡರ ಮಧ್ಯೆ ಅವನು ಒಂದು ತಡೆಗಟ್ಟನ್ನು ನಿರ್ಮಿಸಿ ಪ್ರತ್ಯೇಕಿಸಿದ್ದಾನೆ.

وَهُوَ ٱلَّذِى خَلَقَ مِنَ ٱلْمَآءِ بَشَرًا فَجَعَلَهُۥ نَسَبًا وَصِهْرًا ۗ وَكَانَ رَبُّكَ قَدِيرًا ﴿٥٤﴾

**55.** ಅವನೇ ಜಲದಿಂದ ಮನುಷ್ಯನನ್ನು ಸೃಷ್ಟಿಸಿದವನು. ಅನಂತರ ಅವನಿಗೆ ರಕ್ತಸಂಬಂಧವನ್ನೂ ವೈವಾಹಿಕ ಸಂಬಂಧವನ್ನೂ ಅವನು ಉಂಟು ಮಾಡಿದನು. ನಿನ್ನ ಪ್ರಭು ಸರ್ವಶಕ್ತನಾಗಿದ್ದಾನೆ.

وَيَعْبُدُونَ مِن دُونِ ٱللَّهِ مَا لَا يَنفَعُهُمْ وَلَا يَضُرُّهُمْ ۗ وَكَانَ ٱلْكَافِرُ عَلَىٰ رَبِّهِۦ ظَهِيرًا ﴿٥٥﴾

**56.** ಅಲ್ಲಾಹನನ್ನು ಬಿಟ್ಟು ಅವರು (ಅವಿಶ್ವಾಸಿಗಳು) ತಮಗೆ ಗುಣವನ್ನಾಗಲಿ ದೋಷವನ್ನಾಗಲಿ ಮಾಡದವುಗಳನ್ನು ಆರಾಧಿಸುತ್ತಾರೆ. ಅವಿಶ್ವಾಸಿ ತನ್ನ ಪ್ರಭುವಿನ ವಿರುದ್ಧವಾಗಿ ವರ್ತಿಸುವವರ ಸಹಾಯಕನಾಗಿದ್ದಾನೆ.

وَمَآ أَرْسَلْنَٰكَ إِلَّا مُبَشِّرًا وَنَذِيرًا ﴿٥٦﴾

**57.** ಶುಭ ವಾರ್ತೆ ಅರುಹುವವನೂ ಮುನ್ನೆಚ್ಚರಿಕೆ ನೀಡುವವನೂ ಆಗಿ ಹೊರತು ನಿನ್ನನ್ನು ನಾವು ಕಳುಹಿಸಲಿಲ್ಲ.

قُلْ مَآ أَسْـَٔلُكُمْ عَلَيْهِ مِنْ أَجْرٍ إِلَّا مَن

**58.** ಹೇಳು: 'ಯಾರು ಇಚ್ಛಿಸುತ್ತಾನೋ ಅವನು ತನ್ನ ಪ್ರಭುವಿನೆಡೆಗಿರುವ ಮಾರ್ಗವನ್ನು ಅವಲಂಬಿಸಲಿ





شَآءَ أَن يَتَّخِذَ إِلَىٰ رَبِّهِۦ سَبِيلًا ﴿٥٧﴾

ಎಂಬುದೇ (ನನ್ನ ಉದ್ದೇಶ) ಹೊರತು ಬೇರೆ ಪ್ರತಿಫಲವನ್ನೇನೂ ನಾನು ನಿಮ್ಮಿಂದ ಕೇಳುವುದಿಲ್ಲ.'

وَتَوَكَّلْ عَلَى ٱلْحَىِّ ٱلَّذِى لَا يَمُوتُ وَسَبِّحْ بِحَمْدِهِۦ ۚ وَكَفَىٰ بِهِۦ بِذُنُوبِ عِبَادِهِۦ خَبِيرًا ﴿٥٨﴾

**59.** ಅನಶ್ವರನಾದ, ಸದಾ ಜೀವಂತನಾಗಿರುವ ಅಲ್ಲಾಹನ ಮೇಲೆ ನೀನು ಭರವಸೆಯನ್ನಿಡು. ಅವನ ಸ್ತುತಿ ಕೀರ್ತನೆಯನ್ನೂ ಗುಣಗಾನವನ್ನೂ ಮಾಡು. ತನ್ನ ದಾಸರ ಪಾಪಗಳ ಬಗ್ಗೆ ಅವನು ಸಾಕಷ್ಟು ತಿಳಿದವನಾಗಿದ್ದಾನೆ.

ٱلَّذِى خَلَقَ ٱلسَّمَٰوَٰتِ وَٱلْأَرْضَ وَمَا بَيْنَهُمَا فِى سِتَّةِ أَيَّامٍ ثُمَّ ٱسْتَوَىٰ عَلَى ٱلْعَرْشِ ۚ ٱلرَّحْمَٰنُ فَسْـَٔلْ بِهِۦ خَبِيرًا ﴿٥٩﴾

**60.** ಅವನೇ ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ಆರು ಹಂತಗಳಲ್ಲಿ ಸೃಷ್ಟಿಸಿದವನು. ತದನಂತರ ಅವನು ಸಿಂಹಾಸನಾರೂಢನಾದನು. (ಅವನೇ) ಪರಮ ದಯಾವಂತನು. (ಎಲೈ ಮನುಷ್ಯಾ) ನೀನು ಅವನ ಬಗ್ಗೆ ಜ್ಞಾನವುಳ್ಳವನೊಡನೆ[353] ವಿಚಾರಿಸು.

وَإِذَا قِيلَ لَهُمُ ٱسْجُدُوا۟ لِلرَّحْمَٰنِ قَالُوا۟ وَمَا ٱلرَّحْمَٰنُ أَنَسْجُدُ لِمَا تَأْمُرُنَا وَزَادَهُمْ نُفُورًا ۩ ﴿٦٠﴾

**61.** 'ಪರಮ ದಯಾವಂತನಾದ ದೇವನಿಗೆ ಸಾಷ್ಟಾಂಗ ಪ್ರಣಾಮ ಮಾಡಿರಿ' ಎಂದು ಹೇಳುವಾಗ, 'ಪರಮ ದಯಾವಂತನು ಯಾರು? ನಿನ್ನ ಆದೇಶದಂತೆ ನಾವು ಸಾಷ್ಟಾಂಗವೆರಗಬೇಕೇ?' ಎಂದು ಅವರು ಪ್ರಶ್ನಿಸುತ್ತಾರೆ. ಇದು ಅವರ ವಿರೋಧವನ್ನು ಇನ್ನೂ ಹೆಚ್ಚಿಸಿತು.

تَبَارَكَ ٱلَّذِى جَعَلَ فِى ٱلسَّمَآءِ بُرُوجًا وَجَعَلَ فِيهَا سِرَٰجًا وَقَمَرًا مُّنِيرًا ﴿٦١﴾

**62.** ಆಕಾಶದಲ್ಲಿ ನಕ್ಷತ್ರ ಪುಂಜವನ್ನೂ ಪ್ರಜ್ವಲಿಸುವ ಸೂರ್ಯನನ್ನೂ ಪ್ರಕಾಶಿಸುವ ಚಂದ್ರನನ್ನೂ ಸೃಷ್ಟಿಸಿದವನು ಅನುಗ್ರಹಪೂರ್ಣನು.

وَهُوَ ٱلَّذِى جَعَلَ ٱلَّيْلَ وَٱلنَّهَارَ خِلْفَةً لِّمَنْ أَرَادَ أَن يَذَّكَّرَ أَوْ أَرَادَ شُكُورًا ﴿٦٢﴾

**63.** (ದೇವ) ಸ್ಮರಣೆ ಮಾಡಲು ಬಯಸುವ ಅಥವಾ ಕೃತಜ್ಞತೆ ತೋರಿಸಲು ಬಯಸುವವನಿಗೋಸ್ಕರ ಅವನು (ಅಲ್ಲಾಹನು) ರಾತ್ರಿ ಮತ್ತು ಹಗಲನ್ನು ಪರ್ಯಾಯಗೊಳಿಸಿರುವನು.

وَعِبَادُ ٱلرَّحْمَٰنِ ٱلَّذِينَ يَمْشُونَ عَلَى

**64.** ಪರಮ ದಯಾವಂತನ (ಅಲ್ಲಾಹನ)

353. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ಎಂದು ತಾತ್ಪರ್ಯ.

ಭಕ್ತದಾಸರು ಭೂಮಿಯಲ್ಲಿ ನಮ್ರತೆಯಿಂದ ನಡೆಯುವವರಾಗಿದ್ದಾರೆ. ಅಜ್ಞಾನಿಗಳಾದ ಜನರು ಅವರನ್ನು ಮಾತಿಗೆಳೆದರೆ ಅವರು 'ಸಲಾಂ' (ಶಾಂತಿ) ಎಂದು ಹೇಳುತ್ತಾರೆ.

الْأَرْضِ هَوْنًا وَإِذَا خَاطَبَهُمُ الْجَاهِلُونَ
قَالُوا سَلَامًا ﴿٦٣﴾

65. ಅವರು ರಾತ್ರಿ ಹೊತ್ತನ್ನು ತಮ್ಮ ಪ್ರಭುವಿನ ಮುಂದೆ ಪ್ರಣಾಮ ಮಾಡುತ್ತಲೂ ನಿಂತು ಪ್ರಾರ್ಥಿಸುತ್ತಲೂ ಕಳೆಯುತ್ತಾರೆ.

وَالَّذِينَ يَبِيتُونَ لِرَبِّهِمْ سُجَّدًا وَ
قِيَامًا ﴿٦٤﴾

66. ಅವರು ಹೀಗೆ ಪ್ರಾರ್ಥಿಸುತ್ತಾರೆ: 'ನಮ್ಮ ಪ್ರಭೂ, ನಮ್ಮಿಂದ ನೀನು ನರಕ ಶಿಕ್ಷೆಯನ್ನು ದೂರ ಮಾಡು - ಖಂಡಿತವಾಗಿಯೂ ಆ ಶಿಕ್ಷೆ ಮಹಾ ನಾಶಕಾರಿಯಾಗಿದೆ.

وَالَّذِينَ يَقُولُونَ رَبَّنَا اصْرِفْ عَنَّا عَذَابَ
جَهَنَّمَ ۖ إِنَّ عَذَابَهَا كَانَ غَرَامًا ﴿٦٥﴾

67. 'ಅದು ತಾತ್ಕಾಲೀನ ವಾಸಕ್ಕೂ ಶಾಶ್ವತ ವಾಸಕ್ಕೂ ಬಲು ಕೆಡುಕಿನ ಸ್ಥಳವಾಗಿದೆ.'

إِنَّهَا سَاءَتْ مُسْتَقَرًّا وَمُقَامًا ﴿٦٦﴾

68. ಅವರು ದುಂದುವೆಚ್ಚ ಮಾಡದೆಯೂ ಜಿಪುಣತನ ತೋರಿಸದೆಯೂ ಅವೆರಡರ ಮಧ್ಯದಲ್ಲಿ ಮಿತವ್ಯಯ ಮಾಡುವವರಾಗಿದ್ದಾರೆ.

وَالَّذِينَ إِذَا أَنفَقُوا لَمْ يُسْرِفُوا وَ
لَمْ يَقْتُرُوا وَكَانَ بَيْنَ ذَٰلِكَ قَوَامًا ﴿٦٧﴾

69. ಅವರು ಅಲ್ಲಾಹನ ಜೊತೆಗೆ ಅನ್ಯ ದೇವರನ್ನು ಕರೆದು ಪ್ರಾರ್ಥಿಸಲಾರರು. ಅಲ್ಲಾಹನು ನಿಷಿದ್ಧಗೊಳಿಸಿದ ಯಾವ ಜೀವವನ್ನೂ ವಿನಾ ಕಾರಣ ಅವರು ಕೊಲ್ಲಲಾರರು. ಅವರು ವ್ಯಭಿಚಾರ ಮಾಡಲಾರರು. ಹಾಗೆ ಮಾಡುವವನು ಪಾಪದ ಶಿಕ್ಷೆಯನ್ನು ಪಡೆಯುವನು.

وَالَّذِينَ لَا يَدْعُونَ مَعَ اللَّهِ إِلَٰهًا آخَرَ وَ
لَا يَقْتُلُونَ النَّفْسَ الَّتِي حَرَّمَ اللَّهُ إِلَّا
بِالْحَقِّ وَلَا يَزْنُونَ ۚ وَمَن يَفْعَلْ
ذَٰلِكَ يَلْقَ أَثَامًا ﴿٦٨﴾

70. ಪುನರುತ್ಥಾನ ದಿನದಂದು ಅವನಿಗೆ ಶಿಕ್ಷೆ ದ್ವಿಗುಣಗೊಳಿಸಲ್ಪಡುವುದು. ಅಲ್ಲಿ ಅವನು ಅವಮಾನಿತನಾಗಿ ವಾಸಿಸುವನು.

يُضَاعَفْ لَهُ الْعَذَابُ يَوْمَ الْقِيَامَةِ وَ
يَخْلُدْ فِيهِ مُهَانًا ﴿٦٩﴾

71. ಪಶ್ಚಾತ್ತಾಪಪಟ್ಟು ವಿಶ್ವಾಸವನ್ನು ಕೈಗೊಂಡು ಸತ್ಕೃತ್ಯ ಮಾಡುವವರು ಇದರಿಂದ ಹೊರತಾಗಿದ್ದಾರೆ. ಯಾಕೆಂದರೆ ಅಲ್ಲಾಹನು ಅವರ ದುಷ್ಕರ್ಮಗಳನ್ನು ಸತ್ಕರ್ಮಗಳನ್ನಾಗಿ ಪರಿವರ್ತಿಸುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

إِلَّا مَن تَابَ وَآمَنَ وَعَمِلَ عَمَلًا
صَالِحًا فَأُولَٰئِكَ يُبَدِّلُ اللَّهُ سَيِّئَاتِهِمْ
حَسَنَاتٍ ۗ وَكَانَ اللَّهُ غَفُورًا رَّحِيمًا ﴿٧٠﴾

72. ಯಾರಾದರೂ ಪಶ್ಚಾತ್ತಾಪಪಟ್ಟು ಸತ್ಕರ್ಮ ನಿರತರಾದರೆ ಅವರೇ ನಿಜವಾಗಿಯೂ ಅಲ್ಲಾಹನೆಡೆಗೆ ಸಂಪೂರ್ಣವಾಗಿ ಬಾಗಿದವರು.

وَمَن تَابَ وَعَمِلَ صَالِحًا فَإِنَّهُ يَتُوبُ إِلَى
اللَّهِ مَتَابًا ﴿٧١﴾

73. ಅವರು ಸುಳ್ಳು ಸಾಕ್ಷಿ ಹೇಳುವವರಲ್ಲ. ನಿಷ್ಪ್ರಯೋಜಕ ವಿಚಾರಗಳ ಬಗ್ಗೆ ಅವರು ಗಮನ ಕೊಡದೆ ಗಾಂಭೀರ್ಯದಿಂದ ವರ್ತಿಸುವವರಾಗಿದ್ದಾರೆ.

وَالَّذِينَ لَا يَشْهَدُونَ الزُّورَ وَإِذَا مَرُّوا
بِاللَّغْوِ مَرُّوا كِرَامًا ﴿٧٢﴾

74. ಅವರಿಗೆ ಅವರ ಪ್ರಭುವಿನ ದೃಷ್ಟಾಂತಗಳನ್ನು ನೆನಪಿಸುವಾಗ ಆ ಬಗ್ಗೆ ಅವರು ಕಿವುಡರಂತಾಗಲಿ ಕುರುಡರಂತಾಗಲಿ ವರ್ತಿಸಲಾರರು.

وَالَّذِينَ إِذَا ذُكِّرُوا بِآيَاتِ رَبِّهِمْ لَمْ
يَخِرُّوا عَلَيْهَا صُمًّا وَعُمْيَانًا ﴿٧٣﴾

75. ಅವರು ಹೀಗೆ ಪ್ರಾರ್ಥಿಸುತ್ತಾರೆ: 'ನಮ್ಮ ಪ್ರಭೂ, ನಮ್ಮ ಬಾಳ ಸಂಗಾತಿಗಳನ್ನೂ ನಮ್ಮ ಮಕ್ಕಳನ್ನೂ ನಮಗೆ ನಯನಾನಂದಕರವಾಗಿ ಮಾಡು ಹಾಗೂ ನಮ್ಮನ್ನು ಸಜ್ಜನರಿಗೆ ನಾಯಕರನ್ನಾಗಿ ಮಾಡು.'

وَالَّذِينَ يَقُولُونَ رَبَّنَا هَبْ لَنَا مِنْ
أَزْوَاجِنَا وَذُرِّيَّاتِنَا قُرَّةَ أَعْيُنٍ وَاجْعَلْنَا
لِلْمُتَّقِينَ إِمَامًا ﴿٧٤﴾

76. ಅವರು ಸಹನಶೀಲರಾಗಿದ್ದುದರಿಂದ ಅವರಿಗೆ *ಸ್ವರ್ಗೀಯವಾದ* ಉತ್ತುಂಗ ಸ್ಥಾನ ಪ್ರತಿಫಲವಾಗಿ ನೀಡಲ್ಪಡುವುದು. ಶುಭಾಶಂಸನೆಗಳಿಂದಲೂ ಶಾಂತಿಕೋರಿಕೆಯಿಂದಲೂ ಅವರು ಅಲ್ಲಿ ಸ್ವಾಗತಿಸಲ್ಪಡುವರು.

أُولَٰئِكَ يُجْزَوْنَ الْغُرْفَةَ بِمَا صَبَرُوا وَ
يُلَقَّوْنَ فِيهَا تَحِيَّةً وَسَلَامًا ﴿٧٥﴾

77. ಅಲ್ಲಿ ಅವರು ಶಾಶ್ವತವಾಗಿ ನೆಲೆಸುವರು. ಅದು ವಿಶ್ರಾಂತಿ ಮತ್ತು ವಾಸಕ್ಕೆ ಅತ್ಯುತ್ತಮ ಸ್ಥಳವಾಗಿದೆ.

خَالِدِينَ فِيهَا ۚ حَسُنَتْ مُسْتَقَرًّا وَ
مُقَامًا ﴿٧٦﴾

78. ಹೇಳು: 'ನಿಮ್ಮ ಪ್ರಾರ್ಥನೆ ಇಲ್ಲದಿದ್ದರೆ ನನ್ನ ಪ್ರಭು ನಿಮ್ಮನ್ನು ಏನು ಗಮನಿಸಲಿಕ್ಕೆ? ನೀವಾದರೋ ಅದನ್ನು ಧಿಕ್ಕರಿಸಿದಿರಿ. ತತ್ಫಲವಾಗಿ ಖಂಡಿತವಾಗಿಯೂ ನೀವು ಶಿಕ್ಷೆಗೆ ಗುರಿಯಾಗುವಿರಿ.

قُلْ مَا يَعْبَأُ بِكُمْ رَبِّي لَوْلَا دُعَاؤُكُمْ ۖ
فَقَدْ كَذَّبْتُمْ فَسَوْفَ يَكُونُ لِزَامًا ﴿٧٧﴾

سُوْرَةُ الشُّعَرَآءِ مَكِّيَّةٌ وَّهِيَ مَعَ الْبَسْمَلَةِ مِائَتَانِ وَثَمَانٍ وَّعِشْرُوْنَ اٰيَةً وَّاَحَدَ عَشَرَ رُكُوْعًا

## 26. ಅಶ್ಶುಅರಾಅ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 228 ಆಯತ್‌ಗಳು ಹಾಗೂ 11 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ತ್ವಾ ಸೀನ್ ಮೀಮ್.**[354]

طٰسٓمّٓ ﴿٢﴾

**3. ಇವು ಸುಸ್ಪಷ್ಟವಾದ ಗ್ರಂಥದ ವಚನಗಳಾಗಿವೆ.**

تِلْكَ اٰيٰتُ الْكِتٰبِ الْمُبِيْنِ ﴿٣﴾

**4. ಪ್ರಾಯಶಃ, ಅವರು ನಂಬುವುದಿಲ್ಲವೆಂಬ ಕಾರಣದಿಂದ** (ವ್ಯಾಕುಲಗೊಂಡು) **ನೀನು ನಿನ್ನ ಜೀವವನ್ನು ಹಾನಿಗೊಳಿಸುವೆ.**

لَعَلَّكَ بَاخِعٌ نَّفْسَكَ اَلَّا يَكُوْنُوْا مُؤْمِنِيْنَ ﴿٤﴾

**5. ನಾವು ಇಚ್ಛಿಸಿದರೆ, ಅವರಿಗೋಸ್ಕರ ಆಕಾಶದಿಂದ ಒಂದು ದೃಷ್ಟಾಂತವನ್ನು ಇಳಿಸುವೆವು. ಆಗ ಅದರ ಮುಂದೆ ಅವರ ಕೊರಳುಗಳು ಬಾಗುವುವು.**

اِنْ نَّشَاْ نُنَزِّلْ عَلَيْهِمْ مِّنَ السَّمَآءِ اٰيَةً فَظَلَّتْ اَعْنَاقُهُمْ لَهَا خٰضِعِيْنَ ﴿٥﴾

**6. ದಯಾವಂತನಿಂದ** (ಅಲ್ಲಾಹನಿಂದ) **ಯಾವುದೇ ಹೊಸ ಬೋಧನೆ ಅವರೆಡೆಗೆ ಬರುವಾಗಲೂ ಅವರು ಅದರಿಂದ ವಿಮುಖರಾಗದಿರುವುದಿಲ್ಲ.**

وَمَا يَاْتِيْهِمْ مِّنْ ذِكْرٍ مِّنَ الرَّحْمٰنِ مُحْدَثٍ اِلَّا كَانُوْا عَنْهُ مُعْرِضِيْنَ ﴿٦﴾

**7. ಹಾಗೆ, ಅವರು ಸುಳ್ಳಾಗಿಸಿದರು. ಆದರೆ ಯಾವುದನ್ನು ಅವರು ಪರಿಹಾಸ್ಯ ಮಾಡುತ್ತಿದ್ದರೋ ಅದರ** (ಈಡೇರಿಕೆಯ ಬಗ್ಗೆ) **ವಾರ್ತೆಗಳು ಶೀಘ್ರುವೇ ಅವರ ಬಳಿಗೆ ಬರುವುವು.**

فَقَدْ كَذَّبُوْا فَسَيَاْتِيْهِمْ اَنْۢبٰٓؤُا مَا كَانُوْا بِهٖ يَسْتَهْزِءُوْنَ ﴿٧﴾

**8. ಭೂಮಿಯ ಕಡೆಗೆ ಅವರು ನೋಡುವುದಿಲ್ಲವೇ- ವಿಶಿಷ್ಟ ವರ್ಗಗಳ ಎಷ್ಟೆಲ್ಲ ವೃಕ್ಷಲತಾದಿಗಳನ್ನು ನಾವು ಸೃಷ್ಟಿಸಿದ್ದೇವೆಂದು?**

اَوَلَمْ يَرَوْا اِلَى الْاَرْضِ كَمْ اَنْۢبَتْنَا فِيْهَا مِنْ كُلِّ زَوْجٍ كَرِيْمٍ ﴿٨﴾

354. ತ್ವಾ=ತ್ವಾಹಿರ್ (ಪರಿಶುದ್ಧನು). ಸೀನ್=ಸಮೀಅ್ (ಎಲ್ಲವನ್ನೂ ಆಲಿಸುವವನು). ಮೀಮ್ = ಮಜೀದ್ (ಮಹಾಮಹಿಮನು). ಅಂದರೆ ಪರಿಶುದ್ಧನೂ ಎಲ್ಲವನ್ನು ಆಲಿಸುವವನೂ ಮಹಾಮಹಿಮನೂ ಆದ ಅಲ್ಲಾಹನು ಈ ಅಧ್ಯಾಯವನ್ನು ಅವತೀರ್ಣಗೊಳಿಸಿದ್ದಾನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ).





**9. ದಿಟವಾಗಿಯೂ ಅದರಲ್ಲಿ ದೃಷ್ಟಾಂತವಿದೆ. ಆದಾಗ್ಯೂ ಅವರಲ್ಲಿ ಹೆಚ್ಚಿನವರು ನಂಬುವುದಿಲ್ಲ.**

اِنَّ فِيْ ذٰلِكَ لَاٰيَةً ۚ وَمَا كَانَ اَكْثَرُهُمْ مُّؤْمِنِيْنَ ﴿٩﴾

**10. ನಿನ್ನ ಪ್ರಭು ನಿಜವಾಗಿಯೂ ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.**

وَاِنَّ رَبَّكَ لَهُوَ الْعَزِيْزُ الرَّحِيْمُ ﴿١٠﴾

**11. ನಿನ್ನ ಪ್ರಭು ಮೂಸಾರನ್ನು ಕರೆದು ಹೇಳಿದ ಸಂದರ್ಭ: 'ಅಧರ್ಮಿಗಳಾದ ಜನರ ಬಳಿಗೆ ಹೋಗು -**

وَاِذْ نَادٰى رَبُّكَ مُوْسٰٓى اَنِ ائْتِ الْقَوْمَ الظّٰلِمِيْنَ ﴿١١﴾

**12. 'ಫಿರ್‌ಔನನ ಜನರ ಬಳಿಗೆ. ಅವರು ಭಯಭಕ್ತಿ ತೋರಿಸಲಾರರೇನು?** (ಎಂದು ಅವರೊಡನೆ ಕೇಳು).'

قَوْمَ فِرْعَوْنَ ۚ اَلَا يَتَّقُوْنَ ﴿١٢﴾

**13. ಅವರು** (ಮೂಸಾ) **ಹೇಳಿದರು: 'ನನ್ನ ಪ್ರಭೂ, ಅವರು ನನ್ನನ್ನು ಸುಳ್ಳುಗಾರನನ್ನಾಗಿ ಮಾಡುವರೆಂದು ನಾನು ಭಯಪಡುತ್ತೇನೆ.**

قَالَ رَبِّ اِنِّيْٓ اَخَافُ اَنْ يُّكَذِّبُوْنِ ﴿١٣﴾

**14. 'ನನ್ನ ಹೃದಯ ಸಂಕುಚಿತಗೊಂಡಿದೆ. ನನ್ನ ನಾಲಗೆ ತಡವರಿಸುತ್ತದೆ. ಆದುದರಿಂದ** (ನನ್ನ ಜೊತೆಗೆ) **ಹಾರೂನ್‌ನನ್ನು ಸಹ ನಿಯೋಜಿಸು.**

وَيَضِيْقُ صَدْرِيْ وَلَا يَنْطَلِقُ لِسَانِيْ فَاَرْسِلْ اِلٰى هٰرُوْنَ ﴿١٤﴾

**15. 'ಅವರ ಬಳಿ ನನ್ನ ಮೇಲೆ ಒಂದು ಆಪಾದನೆ ಸಹ ಇದೆ.**[355] **ಆದ್ದರಿಂದ ಅವರು ನನ್ನನ್ನು ಕೊಂದು ಬಿಡುವರೆಂದು ನಾನು ಭಯಪಡುತ್ತೇನೆ.'**

وَلَهُمْ عَلَيَّ ذَنْۢبٌ فَاَخَافُ اَنْ يَّقْتُلُوْنِ ﴿١٥﴾

**16. ಅವನು** (ಅಲ್ಲಾಹನು) **ಹೇಳಿದನು: 'ಎಂದಿಗೂ ಇಲ್ಲ. ನೀವಿಬ್ಬರೂ ನಮ್ಮ ದೃಷ್ಟಾಂತಗಳೊಂದಿಗೆ ಹೋಗಿರಿ. ನಾವು ನಿಮ್ಮೊಂದಿಗಿದ್ದೇವೆ;** (ನಿಮ್ಮ ಪ್ರಾರ್ಥನೆಗಳನ್ನು) **ಆಲಿಸುತ್ತೇವೆ.**

قَالَ كَلَّا ۚ فَاذْهَبَا بِاٰيٰتِنَآ اِنَّا مَعَكُمْ مُّسْتَمِعُوْنَ ﴿١٦﴾

**17. 'ಆದ್ದರಿಂದ ನೀವಿಬ್ಬರೂ ಫಿರ್‌ಔನನ ಬಳಿಗೆ ಹೋಗಿ ಹೇಳಿರಿ: 'ನಾವು ಸರ್ವಲೋಕಗಳ ಪ್ರಭುವಿನ ಸಂದೇಶವಾಹಕರಾಗಿದ್ದೇವೆ.**

فَاْتِيَا فِرْعَوْنَ فَقُوْلَآ اِنَّا رَسُوْلُ رَبِّ الْعٰلَمِيْنَ ﴿١٧﴾

355. ಆಕಸ್ಮಿಕವಾಗಿ ಪ್ರವಾದಿ ಮೂಸಾ (ಅಲೈಹಿಸ್ಸಲಾಂ)ರವರ ಕೈಯಿಂದ ಒಬ್ಬ 'ಖಿಬ್ತಿ' ಕೊಲ್ಲಲ್ಪಟ್ಟಿದ್ದನು. ಅದನ್ನು ಇಲ್ಲಿ ಸೂಚಿಸಲಾಗಿದೆ.

**18. 'ಇಸ್ರಾಈಲ್ ಸಂತತಿಗಳನ್ನು ನಮ್ಮ ಸಂಗಡ ಕಳುಹಿಸಿಕೊಡಬೇಕು'.**

أَنْ أَرْسِلْ مَعَنَا بَنِيٓ إِسْرَآءِيلَ ﴿١٨﴾

**19.** (ಹಾಗೆ ಮೂಸಾ ಮತ್ತು ಹಾರೂನ್ ದೇವ ಸಂದೇಶವನ್ನು ಫಿರ್‌ಔನನಿಗೆ ತಲಪಿಸಿದಾಗ) **ಅವನು ಹೇಳಿದನು: 'ನೀನು ನಮ್ಮ ಮಧ್ಯೆ ಶಿಶುವಾಗಿದ್ದಾಗ ನಾವು ನಿನ್ನ ಪಾಲನೆ ಪೋಷಣೆ ಮಾಡಲಿಲ್ಲವೇ? ನಿನ್ನ ಆಯುಷ್ಕಾಲದಲ್ಲಿ ಹಲವು ವರ್ಷ ನೀನು ನಮ್ಮೊಂದಿಗೆ ಇದ್ದೆಯಷ್ಟೇ?**

قَالَ أَلَمْ نُرَبِّكَ فِينَا وَلِيدًا وَلَبِثْتَ فِينَا مِنْ عُمُرِكَ سِنِينَ ﴿١٩﴾

**20. 'ನೀನು ಮಾಡಬೇಕಾದ ನಿನ್ನ ಕೃತ್ಯವನ್ನು ನೀನು ಮಾಡಿ ಬಿಟ್ಟಿರುವೆ.**[355A] **ನೀನು ಕೃತಘ್ನರಲ್ಲಿ ಸೇರಿದವನು.'**

وَفَعَلْتَ فَعْلَتَكَ ٱلَّتِي فَعَلْتَ وَأَنتَ مِنَ ٱلْكَٰفِرِينَ ﴿٢٠﴾

**21. ಅವರು** (ಮೂಸಾ) **ಹೇಳಿದರು: 'ನಾನು ಅರಿವಿಲ್ಲದೆ ಅದನ್ನು ಮಾಡಿಬಿಟ್ಟಿದ್ದೆ.**

قَالَ فَعَلْتُهَآ إِذًا وَأَنَا۠ مِنَ ٱلضَّآلِّينَ ﴿٢١﴾

**22. 'ಆ ಬಳಿಕ ನಿಮ್ಮ ಭಯದಿಂದ ನಾನು ನಿಮ್ಮನ್ನು ಬಿಟ್ಟು ಪರಾರಿಯಾದೆ. ಆಗ ನನ್ನ ಪ್ರಭು ನನಗೆ ದಿವ್ಯಜ್ಞಾನ ನೀಡಿದನು ಮತ್ತು ನನ್ನನ್ನು ಸಂದೇಶ ವಾಹಕರಲ್ಲಿ ಒಬ್ಬನನ್ನಾಗಿ ಮಾಡಿದನು.**

فَفَرَرْتُ مِنكُمْ لَمَّا خِفْتُكُمْ فَوَهَبَ لِي رَبِّي حُكْمًا وَجَعَلَنِي مِنَ ٱلْمُرْسَلِينَ ﴿٢٢﴾

**23.** (ಶಿಶುವಾಗಿದ್ದಾಗ ನನ್ನನ್ನು ಪಾಲನೆ ಪೋಷಣೆ ಮಾಡಿದುದರ ಬಗ್ಗೆ ಹೇಳುವುದಾದರೆ) **'ನೀನು ಇಸ್ರಾಈಲ್ ಸಂತತಿಗಳನ್ನು ಗುಲಾಮರನ್ನಾಗಿ ಮಾಡಿ ಕೊಂಡಿದ್ದು ನನ್ನ ಮೇಲಿನ ಆ ಉಪಕಾರದ ಕುರಿತು ಹೇಳಿ ನನ್ನನ್ನು ಹಂಗಿಸುತ್ತೀ.'**

وَتِلْكَ نِعْمَةٌ تَمُنُّهَا عَلَيَّ أَنْ عَبَّدتَّ بَنِيٓ إِسْرَآءِيلَ ﴿٢٣﴾

**24. ಫಿರ್‌ಔನ್ ಕೇಳಿದನು: 'ಸರ್ವಲೋಕಗಳ ಪ್ರಭು ಎಂದರೇನು?'**

قَالَ فِرْعَوْنُ وَمَا رَبُّ ٱلْعَٰلَمِينَ ﴿٢٤﴾

**25. ಅವರು** (ಮೂಸಾ) **ಹೇಳಿದರು: 'ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯೆ ಇರುವ ಎಲ್ಲವುಗಳ ಪ್ರಭು. ನೀವು ನಂಬಿಕೆ ಹೊಂದಿದರೆ** (ಎಷ್ಟು ಚೆನ್ನಾಗಿತ್ತು!)'

قَالَ رَبُّ ٱلسَّمَٰوَٰتِ وَٱلْأَرْضِ وَمَا بَيْنَهُمَآ إِن كُنتُم مُّوقِنِينَ ﴿٢٥﴾

355A. ಟಿಪ್ಪಣಿ 355ರಲ್ಲಿ ಹೇಳಿದ ಸಂಭವದ ಕಡೆಗೆ ಸೂಚನೆ.





**26. ಅವನು** (ಫಿರ್‌ಔನ್) **ತನ್ನ ಸುತ್ತಮುತ್ತಲಿರುವವರೊಡನೆ ಕೇಳಿದನು: 'ನೀವು ಆಲಿಸುತ್ತಿಲ್ಲವೇ?'**

قَالَ لِمَنْ حَوْلَهُۥٓ أَلَا تَسْتَمِعُونَ ﴿٢٦﴾

**27. ಅವರು** (ಮೂಸಾ) **ಹೇಳಿದರು: 'ನಿಮ್ಮ ಪ್ರಭು, ನಿಮ್ಮ ಪೂರ್ವಿಕರಾದ ತಂದೆ ತಾತಂದಿರ ಪ್ರಭುವೂ ಹೌದು.'**

قَالَ رَبُّكُمْ وَرَبُّ ءَابَآئِكُمُ ٱلْأَوَّلِينَ ﴿٢٧﴾

**28. ಅವನು** (ಫಿರ್‌ಔನ್ ತನ್ನ ಸಭಾಸದರೊಡನೆ) **ಹೇಳಿದನು: 'ನಿಮ್ಮ ಬಳಿಗೆ ಕಳುಹಿಸಲ್ಪಟ್ಟ ನಿಮ್ಮ ಈ ಸಂದೇಶವಾಹಕ ಖಂಡಿತವಾಗಿಯೂ ಒಬ್ಬ ಹುಚ್ಚನಾಗಿದ್ದಾನೆ.'**

قَالَ إِنَّ رَسُولَكُمُ ٱلَّذِيٓ أُرْسِلَ إِلَيْكُمْ لَمَجْنُونٌ ﴿٢٨﴾

**29. ಅವರು** (ಮೂಸಾ) **ಹೇಳಿದರು:** '(ಸರ್ವಲೋಕಗಳ ಪ್ರಭು ಎಂದರೆ) **ಪೂರ್ವ, ಪಶ್ಚಿಮ ಮತ್ತು ಅವೆರಡರ ಮಧ್ಯದಲ್ಲಿರುವ ಎಲ್ಲವುಗಳ ಪ್ರಭು. ನೀವು ಅದನ್ನು ಮನವರಿಕೆ ಮಾಡುವಿರಾದರೆ** (ಎಷ್ಟು ಚೆನ್ನಾಗಿತ್ತು!)'

قَالَ رَبُّ ٱلْمَشْرِقِ وَٱلْمَغْرِبِ وَمَا بَيْنَهُمَآ إِن كُنتُمْ تَعْقِلُونَ ﴿٢٩﴾

**30. ಅವನು** (ಫಿರ್‌ಔನ್) **ಹೇಳಿದನು: 'ನೀನು ನನ್ನನ್ನು ಹೊರತು ಬೇರೆ ದೇವನನ್ನು ಅಂಗೀಕರಿಸಿದರೆ ನಾನು ನಿನ್ನನ್ನು ಸೆರೆಮನೆಯಲ್ಲಿಡುವೆನು.'**

قَالَ لَئِنِ ٱتَّخَذْتَ إِلَٰهًا غَيْرِي لَأَجْعَلَنَّكَ مِنَ ٱلْمَسْجُونِينَ ﴿٣٠﴾

**31. ಅವರು** (ಮೂಸಾ) **ಹೇಳಿದರು: 'ನಾನು ನಿನ್ನ ಬಳಿಗೆ ಸ್ಪಷ್ಟವಾದೊಂದು ದೃಷ್ಟಾಂತವನ್ನು ತಂದರೆ?'**

قَالَ أَوَلَوْ جِئْتُكَ بِشَيْءٍ مُّبِينٍ ﴿٣١﴾

**32. ಅವನು ಹೇಳಿದನು: 'ನೀನು ಸತ್ಯವಂತನೆಂದಾದರೆ ಅದನ್ನು ತಾ?'**

قَالَ فَأْتِ بِهِۦٓ إِن كُنتَ مِنَ ٱلصَّٰدِقِينَ ﴿٣٢﴾

**33. ಆಗ ಅವರು ತನ್ನ ಬಡಿಗೆಯನ್ನು ಕೆಳಗೆ ಎಸೆದರು. ಆಗ ಪಕ್ಕನೆ ಅದೊಂದು ಸ್ಪಷ್ಟವಾಗಿ ಕಾಣುವ ಹಾವಾಯಿತು.**

فَأَلْقَىٰ عَصَاهُ فَإِذَا هِيَ ثُعْبَانٌ مُّبِينٌ ﴿٣٣﴾

**34. ಅನಂತರ ಅವರು ತನ್ನ ಕೈಯನ್ನು ಹೊರಗೆಳೆದಾಗ ಅಕೋ, ಅದು ನೋಡುವವರಿಗೆ ಬೆಳ್ಳಗಾಗಿ ಗೋಚರಿಸಿತು.**

وَنَزَعَ يَدَهُۥ فَإِذَا هِيَ بَيْضَآءُ لِلنَّٰظِرِينَ ﴿٣٤﴾

**35.** ಅವನು (ಫಿರ್‌ಔನ್) ತನ್ನ ಸುತ್ತುಮುತ್ತಲಿದ್ದ ಮುಖಂಡರೊಡನೆ ಹೇಳಿದನು: 'ಇವನು ನುರಿತ ಜಾದೂಗಾರನೇ ಆಗಿದ್ದಾನೆ.

قَالَ لِلْمَلَإِ حَوْلَهُۥٓ إِنَّ هَٰذَا لَسَٰحِرٌ عَلِيمٌ ﴿٣٥﴾

**36.** 'ಅವನು ತನ್ನ ಜಾದೂಗಾರಿಕೆಯಿಂದ ನಿಮ್ಮನ್ನು ನಿಮ್ಮ ನಾಡಿನಿಂದ ಹೊರಹಾಕಲು ಬಯಸುತ್ತಾನೆ. ಈಗ ನಿಮ್ಮ ಸಲಹೆಯೇನು?'

يُرِيدُ أَن يُخْرِجَكُم مِّنْ أَرْضِكُم بِسِحْرِهِۦ فَمَاذَا تَأْمُرُونَ ﴿٣٦﴾

**37.** ಅವರು ಹೇಳಿದರು: 'ಅವನಿಗೂ ಅವನ ಸಹೋದರನಿಗೂ (ಸ್ವಲ್ಪ ಕಾಲ) ಬಿಡುವು ಕೊಡು. (ಜಾದೂಗಾರರನ್ನು) ಕರೆದು ತರಲು ಪಟ್ಟಣಗಳಿಗೆ ಜನರನ್ನು ಕಳುಹಿಸು.

قَالُوٓا۟ أَرْجِهْ وَأَخَاهُ وَٱبْعَثْ فِى ٱلْمَدَآئِنِ حَٰشِرِينَ ﴿٣٧﴾

**38.** 'ಅವರು ಎಲ್ಲ ನಿಪುಣ ಜಾದೂಗಾರರನ್ನು ನಿನ್ನ ಬಳಿಗೆ ಕರೆದು ತರಲಿ.'

يَأْتُوكَ بِكُلِّ سَحَّارٍ عَلِيمٍ ﴿٣٨﴾

**39.** ಹಾಗೆ ಒಂದು ನಿಶ್ಚಿತ ದಿನದಂದು ನಿರ್ದಿಷ್ಟ ಸಮಯದಲ್ಲಿ ಎಲ್ಲ ಜಾದೂಗಾರರೂ ಜಮಾಯಿಸಲ್ಪಟ್ಟರು.

فَجُمِعَ ٱلسَّحَرَةُ لِمِيقَٰتِ يَوْمٍ مَّعْلُومٍ ﴿٣٩﴾

**40.** ಜನರೊಡನೆ ಹೀಗೆ ಕೇಳಲಾಯಿತು: 'ನೀವು ಸಹ ಬಂದು ಸೇರುತ್ತೀರಾ?

وَقِيلَ لِلنَّاسِ هَلْ أَنتُم مُّجْتَمِعُونَ ﴿٤٠﴾

**41.** 'ಜಾದೂಗಾರರು ಜಯಗಳಿಸಿದರೆ ನಾವು ಅವರನ್ನು ಅನುಸರಿಸಬಹುದಲ್ಲವೇ?'

لَعَلَّنَا نَتَّبِعُ ٱلسَّحَرَةَ إِن كَانُوا۟ هُمُ ٱلْغَٰلِبِينَ ﴿٤١﴾

**42.** ಹಾಗೆ, ಜಾದೂಗಾರರು ಬಂದು ಸೇರಿದಾಗ, ಅವರು ಫಿರ್‌ಔನನೊಡನೆ ಕೇಳಿದರು: 'ನಾವು ಜಯಗಳಿಸಿದರೆ ನಮಗೆ ಬಹುಮಾನ ಸಿಗುವುದೇ?'

فَلَمَّا جَآءَ ٱلسَّحَرَةُ قَالُوا۟ لِفِرْعَوْنَ أَئِنَّ لَنَا لَأَجْرًا إِن كُنَّا نَحْنُ ٱلْغَٰلِبِينَ ﴿٤٢﴾

**43.** ಅವನು (ಫಿರ್‌ಔನ್) ಉತ್ತರಿಸಿದನು: 'ಹೌದು. (ಅಷ್ಟೇ ಅಲ್ಲ;) ಖಂಡಿತವಾಗಿಯೂ ಆಗ ನೀವು ನನ್ನ ಸಾಮೀಪ್ಯವನ್ನು ಸಹ ಪಡೆಯುವಿರಿ.'

قَالَ نَعَمْ وَإِنَّكُمْ إِذًا لَّمِنَ ٱلْمُقَرَّبِينَ ﴿٤٣﴾

**44.** ಮೂಸಾ ಅವರೊಡನೆ ಹೇಳಿದರು: '(ಈಗ) ನೀವು ಪ್ರದರ್ಶಿಸುವುದನ್ನು ಪ್ರದರ್ಶಿಸಿರಿ.'

قَالَ لَهُم مُّوسَىٰٓ أَلْقُوا۟ مَآ أَنتُم مُّلْقُونَ ﴿٤٤﴾





**45.** ಆಗ ಅವರು ತಮ್ಮ ಹಗ್ಗಗಳನ್ನೂ ಬಡಿಗೆಗಳನ್ನೂ ಕೆಳಗೆ ಎಸೆದು, 'ಫಿರ್‌ಔನನ ಗೌರವದ ಪ್ರಮಾಣ, ನಾವು ಖಂಡಿತವಾಗಿಯೂ ಜಯಗಳಿಸುವೆವು' ಎಂದು ಹೇಳಿದರು.

فَأَلْقَوْا۟ حِبَالَهُمْ وَعِصِيَّهُمْ وَقَالُوا۟ بِعِزَّةِ فِرْعَوْنَ إِنَّا لَنَحْنُ ٱلْغَٰلِبُونَ ﴿٤٥﴾

**46.** ಆಗ ಮೂಸಾ ತನ್ನ ಬಡಿಗೆಯನ್ನು ಎಸೆದರು. ಅಗೋ ಅವರು ಕೃತಕವಾಗಿ ಸೃಷ್ಟಿಸಿದ್ದನ್ನೆಲ್ಲ ಅದು ನುಂಗಿಹಾಕಿತು.

فَأَلْقَىٰ مُوسَىٰ عَصَاهُ فَإِذَا هِىَ تَلْقَفُ مَا يَأْفِكُونَ ﴿٤٦﴾

**47.** ಆಗ ಆ ಜಾದೂಗಾರರು (ಅಲ್ಲಾಹನಿಗೆ) ಸಾಷ್ಟಾಂಗ ಪ್ರಣಾಮ ಮಾಡಲು ಪ್ರಚೋದಿಸಲ್ಪಟ್ಟರು.

فَأُلْقِىَ ٱلسَّحَرَةُ سَٰجِدِينَ ﴿٤٧﴾

**48.** ಅವರು ಘೋಷಿಸಿದರು: 'ನಾವು ಸಕಲ ಲೋಕಗಳ ಪ್ರಭುವನ್ನು ನಂಬುತ್ತೇವೆ.

قَالُوٓا۟ ءَامَنَّا بِرَبِّ ٱلْعَٰلَمِينَ ﴿٤٨﴾

**49.** 'ಮೂಸಾ ಮತ್ತು ಹಾರೂನ್‌ರ ಪ್ರಭು.'

رَبِّ مُوسَىٰ وَهَٰرُونَ ﴿٤٩﴾

**50.** ಅವನು (ಫಿರ್‌ಔನ್) ಹೇಳಿದನು: 'ನಾನು ಅನುಮತಿ ನೀಡುವ ಮೊದಲೇ ನೀವು ಅವನನ್ನು ನಂಬಿಬಿಟ್ಟದ್ದೀರಾ? ಖಂಡಿತವಾಗಿಯೂ ಅವನು ನಿಮಗೆ ಜಾದೂಗಾರಿಕೆಯನ್ನು ಕಲಿಸಿದ ನಿಮ್ಮ ನಾಯಕನಾಗಿದ್ದಾನೆ. ಆದ್ದರಿಂದ ಇದರ ಪರಿಣಾಮವನ್ನು ನೀವು ಬೇಗನೇ ಮನಗಾಣುವಿರಿ. ಖಂಡಿತವಾಗಿಯೂ ನಾನು ನಿಮ್ಮ ಕೈಗಳನ್ನೂ ಕಾಲುಗಳನ್ನೂ ವಿರುದ್ಧ ಪಾರ್ಶ್ವಗಳಿಂದ ಕಡಿದು ಹಾಕುವೆನು. ಖಂಡಿತವಾಗಿಯೂ ನಿಮ್ಮನ್ನೆಲ್ಲ ನಾನು ಶಿಲುಬೆಗೇರಿಸಿ ಸಾಯಿಸುವೆನು.'

قَالَ ءَامَنتُمْ لَهُۥ قَبْلَ أَنْ ءَاذَنَ لَكُمْ ۖ إِنَّهُۥ لَكَبِيرُكُمُ ٱلَّذِى عَلَّمَكُمُ ٱلسِّحْرَ فَلَسَوْفَ تَعْلَمُونَ ۚ لَأُقَطِّعَنَّ أَيْدِيَكُمْ وَأَرْجُلَكُم مِّنْ خِلَٰفٍ وَلَأُصَلِّبَنَّكُمْ أَجْمَعِينَ ﴿٥٠﴾

**51.** ಅವರು ಹೇಳಿದರು: 'ಅದರಲ್ಲೇನೂ ಹಾನಿ ಇಲ್ಲ. ನಿಶ್ಚಯವಾಗಿಯೂ ನಾವು ನಮ್ಮ ಪ್ರಭುವಿನ ಬಳಿಗೆಯೇ ಮರಳುವವರಾಗಿದ್ದೇವೆ.

قَالُوا۟ لَا ضَيْرَ ۖ إِنَّآ إِلَىٰ رَبِّنَا مُنقَلِبُونَ ﴿٥١﴾

**52.** ' ನಾವು ವಿಶ್ವಾಸಿಗಳಲ್ಲಿ ಮೊದಲಿಗರಾಗಿದ್ದೇವೆ. ಆದ್ದರಿಂದ ನಮ್ಮ ಪಾಪಗಳನ್ನು ನಮ್ಮ ಪ್ರಭು ಕ್ಷಮಿಸುವನೆಂದು ನಾವು ಭರವಸೆಪಡುತ್ತೇವೆ.'

إِنَّا نَطْمَعُ أَن يَغْفِرَ لَنَا رَبُّنَا خَطَٰيَٰنَآ أَن كُنَّآ أَوَّلَ ٱلْمُؤْمِنِينَ ﴿٥٢﴾

وَأَوْحَيْنَا إِلَىٰ مُوسَىٰ أَنْ أَسْرِ بِعِبَادِي إِنَّكُم مُّتَّبَعُونَ ٥٢

53. ನಾವು ಮೂಸಾರಿಗೆ ಹೀಗೆ ದಿವ್ಯ ಸಂದೇಶ ನೀಡಿದೆವು: 'ನನ್ನ ದಾಸರೊಂದಿಗೆ ರಾತ್ರಿ ಹೊತ್ತಿನಲ್ಲಿ (ಊರು ಬಿಟ್ಟು) ಹೊರಟುಹೋಗಿರಿ. ಖಂಡಿತ ವಾಗಿಯೂ ನೀವು ಬೆನ್ನಟ್ಟಲ್ಪಡುವಿರಿ.'

فَأَرْسَلَ فِرْعَوْنُ فِي الْمَدَائِنِ حَاشِرِينَ ٥٣

54. ಫಿರ್‌ಔನ್ ಜನರನ್ನು ಕರೆದು ತರುವ ರಾಜದೂತರನ್ನು ಪಟ್ಟಣಗಳಿಗೆ ಕಳುಹಿಸಿದನು.

إِنَّ هَٰؤُلَاءِ لَشِرْذِمَةٌ قَلِيلُونَ ٥٤

55. (ಫಿರ್‌ಔನ್ ಹೇಳಿದನು:) 'ಇವರು (ಇಸ್ರಾಈಲ್ಯರು) ಕೇವಲ ಅಲ್ಪಸಂಖ್ಯಾತರಾಗಿದ್ದಾರೆ.

وَإِنَّهُمْ لَنَا لَغَائِظُونَ ٥٥

56. '(ಹಾಗಿದ್ದೂ) ಅವರು ನಮ್ಮನ್ನು ರೇಗಿಸಿದ್ದಾರೆ.

وَإِنَّا لَجَمِيعٌ حَاذِرُونَ ٥٦

57. 'ನಾವಾದರೋ ಬಹುಸಂಖ್ಯಾತರೂ ಸುಸಜ್ಜಿತರೂ ಆಗಿದ್ದೇವೆ.'

فَأَخْرَجْنَاهُم مِّن جَنَّاتٍ وَعُيُونٍ ٥٧

58. ಆಗ ನಾವು ಅವರನ್ನು (ಫಿರ್‌ಔನ್ ಮತ್ತು ಅವನ ಜನರನ್ನು) ತೋಟಗಳಿಂದಲೂ ನೀರ ಒರತೆಗಳಿರುವ ಸ್ಥಳಗಳಿಂದಲೂ ಹೊರಕ್ಕಟ್ಟಿದೆವು.

وَكُنُوزٍ وَمَقَامٍ كَرِيمٍ ٥٨

59. ಮಾತ್ರವಲ್ಲ; ಖಜಾನೆಗಳಿಂದ ಮತ್ತು ಪ್ರತಿಷ್ಠೆಯ ವಾಸಸ್ಥಳಗಳಿಂದ ಸಹ.

كَذَٰلِكَ وَأَوْرَثْنَاهَا بَنِي إِسْرَائِيلَ ٥٩

60. ಹಾಗೆಯೇ ಮತ್ತೆ ನಾವು ಅವುಗಳಿಗೆ ಇಸ್ರಾಈಲ್ ಸಂತತಿಗಳನ್ನು ವಾರೀಸುದಾರರನ್ನಾಗಿ ಮಾಡಿದೆವು.[355B]

فَأَتْبَعُوهُم مُّشْرِقِينَ ٦٠

61. ಸೂರ್ಯೋದಯ ಹೊತ್ತಿನಲ್ಲಿ ಅವರು (ಫಿರ್‌ಔನ್ ಮತ್ತು ಜನರು) ಇವರನ್ನು (ಇಸ್ರಾ ಈಲ್ಯರನ್ನು) ಬೆನ್ನಟ್ಟಿದರು.

فَلَمَّا تَرَاءَى الْجَمْعَانِ قَالَ أَصْحَابُ مُوسَىٰ إِنَّا لَمُدْرَكُونَ ٦١

62. ಹಾಗೆ ಉಭಯ ಪಕ್ಷದವರು ಪರಸ್ಪರ ಕಾಣುವಂತಾದಾಗ, 'ನಾವಿದೋ ಹಿಡಿಯಲ್ಪಡುತ್ತೇವೆ' ಎಂದು ಮೂಸಾರ ಸಂಗಡಿಗರು ಹೇಳಿದರು.

355B. ಈಜಿಪ್ಟಿನಂತೆಯೇ ತೋಟಗಳೂ ಒರತೆಗಳೂ ನಿಧಿನಿಕ್ಷೇಪಗಳೂ ವಿಶಿಷ್ಟವಾದ ವಾಸಸ್ಥಳಗಳೂ ಇರುವ ಬೇರೊಂದು ನಾಡಿಗೆ- ಅಂದರೆ ಫೆಲಸ್ತೀನಕ್ಕೆ- ಇಸ್ರಾಈಲ್ ಸಂತತಿಗಳನ್ನು ವಾರೀಸುದಾರರನ್ನಾಗಿ ಮಾಡಲಾಯಿತು ಎಂದು ತಾತ್ಪರ್ಯ. ಅಲ್ಲದೆ, ಫಿರ್‌ಔನನ ಬಳಿಕ ಬನೀ ಇಸ್ರಾಈಲ್ಯರಿಗೆ ಈಜಿಪ್ಟಿನ ಆಡಳಿತ ಲಭ್ಯವಾಯಿತೆಂದು ಇದರ ಅರ್ಥವಲ್ಲ.





قَالَ كَلَّا إِنَّ مَعِيَ رَبِّي سَيَهْدِينِ ٦٢

63. ಅವರು (ಮೂಸಾ) ಹೇಳಿದರು: "ಎಂದಿಗೂ ಇಲ್ಲ; ನನ್ನ ಪ್ರಭು ನನ್ನ ಜೊತೆಗಿದ್ದಾನೆ. ಅವನು ನನಗೆ ಸರಿಯಾದ ಮಾರ್ಗದರ್ಶನ ಮಾಡುವನು.'

فَأَوْحَيْنَا إِلَىٰ مُوسَىٰ أَنِ اضْرِب بِّعَصَاكَ الْبَحْرَ فَانفَلَقَ فَكَانَ كُلُّ فِرْقٍ كَالطَّوْدِ الْعَظِيمِ ٦٣

64. 'ನಿನ್ನ ಬಡಿಗೆಯಿಂದ ಸಮುದ್ರಕ್ಕೆ ಹೊಡೆ' ಎಂದು ನಾವು ಮೂಸಾರಿಗೆ ದಿವ್ಯ ಸಂದೇಶ ಅರುಹಿದೆವು. ಆಗ ಅದು ಇಬ್ಭಾಗವಾಯಿತು. ಪ್ರತಿಯೊಂದು ಭಾಗ ದೊಡ್ಡ ಪರ್ವತದಂತೆ ಗೋಚರಿಸಿತು.

وَأَزْلَفْنَا ثَمَّ الْآخَرِينَ ٦٤

65. ಇನ್ನೊಂದು ಪಕ್ಷವನ್ನು (ಬೆನ್ನಟ್ಟುವವರನ್ನು) ಸಹ ನಾವು ಅದಕ್ಕೆ ಸಮೀಪಗೊಳಿಸಿದೆವು.

وَأَنجَيْنَا مُوسَىٰ وَمَن مَّعَهُ أَجْمَعِينَ ٦٥

66. ನಾವು ಮೂಸಾ ಮತ್ತು ಅವರ ಸಂಗಡಿಗರನ್ನೆಲ್ಲ ಪಾರುಮಾಡಿದೆವು.

ثُمَّ أَغْرَقْنَا الْآخَرِينَ ٦٦

67. ಇತರರನ್ನು (ಬೆನ್ನಟ್ಟಿ ಬಂದ ಫಿರ್‌ಔನ್ ಮತ್ತು ಜೊತೆಗಾರರನ್ನು) ನಾವು ಮುಳುಗಿಸಿದೆವು.

إِنَّ فِي ذَٰلِكَ لَآيَةً وَمَا كَانَ أَكْثَرُهُم مُّؤْمِنِينَ ٦٧

68. ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತ ವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.

وَإِنَّ رَبَّكَ لَهُوَ الْعَزِيزُ الرَّحِيمُ ٦٨

69. ನಿಶ್ಚಯವಾಗಿಯೂ ನಿನ್ನ ಪ್ರಭು ಪ್ರತಾಪ ಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.

وَاتْلُ عَلَيْهِمْ نَبَأَ إِبْرَاهِيمَ ٦٩

70. ಇನ್ನು ಇಬ್‌ರಾಹೀಮರ ವೃತ್ತಾಂತವನ್ನು ನೀನು ಅವರಿಗೆ ವಿವರಿಸಿಕೊಡು.

إِذْ قَالَ لِأَبِيهِ وَقَوْمِهِ مَا تَعْبُدُونَ ٧٠

71. 'ನೀವು ಏನನ್ನು ಆರಾಧಿಸುತ್ತೀರಿ?' ಎಂದು ಅವರು ತನ್ನ ತಂದೆಯೊಡನೆ ಮತ್ತು ತನ್ನ ಜನರೊಡನೆ ಕೇಳಿದರು.

72. 'ನಾವು ವಿಗ್ರಹಗಳನ್ನು ಆರಾಧಿಸುತ್ತೇವೆ. ನಾವು ಅದೇ ಭಕ್ತಿಭಾವದಲ್ಲಿ ಮುಂದುವರಿಯುತ್ತೇವೆ' ಎಂದು ಅವರು ಉತ್ತರಿಸಿದರು.

قَالُوا نَعْبُدُ أَصْنَامًا فَنَظَلُّ لَهَا عَاكِفِينَ ٧١

**73.** ಅವರು (ಇಬ್‌ರಾಹೀಂ) ಕೇಳಿದರು: 'ನೀವು ಪ್ರಾರ್ಥಿಸುವಾಗ ಅವರು ಆಲಿಸುತ್ತಾರೋ?

قَالَ هَلْ يَسْمَعُونَكُمْ إِذْ تَدْعُونَ ﴿٧٢﴾

**74.** 'ಅಥವಾ ಅವರು ನಿಮಗೆ ಏನಾದರೂ ಒಳಿತನ್ನಾಗಲಿ ಕೆಡುಕನ್ನಾಗಲಿ ಮಾಡುತ್ತಾರೋ?'

أَوْ يَنفَعُونَكُمْ أَوْ يَضُرُّونَ ﴿٧٣﴾

**75.** ಅವರು ಉತ್ತರಿಸಿದರು: 'ಇಲ್ಲ. ಆದರೆ ನಮ್ಮ ತಂದೆ ತಾತಂದಿರು ಹಾಗೆ ಮಾಡುವುದನ್ನು (ವಿಗ್ರಹಗಳಿಗೆ ಆರಾಧನೆ ಸಲ್ಲಿಸುವುದನ್ನು) ನಾವು ಕಂಡಿದ್ದೇವೆ.'

قَالُوا بَلْ وَجَدْنَا آبَاءَنَا كَذَٰلِكَ يَفْعَلُونَ ﴿٧٤﴾

**76.** ಅವರು (ಇಬ್‌ರಾಹೀಂ) ಹೇಳಿದರು: 'ನೀವು ಏನನ್ನು ಆರಾಧಿಸುತ್ತಿದ್ದೀರೆಂದು ನಿಮಗೆ ಗೊತ್ತಿದೆಯೇ-

قَالَ أَفَرَأَيْتُم مَّا كُنتُمْ تَعْبُدُونَ ﴿٧٥﴾

**77.** 'ನೀವೂ ನಿಮಗಿಂತ ಮುಂಚಿನ ನಿಮ್ಮ ತಂದೆ ತಾತಂದಿರೂ (ಆರಾಧಿಸುತ್ತಿದ್ದುದು).

أَنتُمْ وَآبَاؤُكُمُ الْأَقْدَمُونَ ﴿٧٦﴾

**78.** 'ಅವೆಲ್ಲವೂ ನನ್ನ ಶತ್ರುಗಳು. ಸರ್ವಲೋಕಗಳ ಪ್ರಭು ಹೊರತು.[355C]

فَإِنَّهُمْ عَدُوٌّ لِّي إِلَّا رَبَّ الْعَالَمِينَ ﴿٧٧﴾

**79.** 'ಅವನು ನನ್ನನ್ನು ಸೃಷ್ಟಿಸಿದವನು. ಅವನೇ ನನಗೆ ಮಾರ್ಗದರ್ಶನ ಮಾಡುವವನು.

الَّذِي خَلَقَنِي فَهُوَ يَهْدِينِ ﴿٧٨﴾

**80.** 'ನನಗೆ ತಿನ್ನಲಿಕ್ಕೂ ಕುಡಿಯಲಿಕ್ಕೂ ನೀಡುವವನು ಅವನೇ ಆಗಿದ್ದಾನೆ.

وَالَّذِي هُوَ يُطْعِمُنِي وَيَسْقِينِ ﴿٧٩﴾

**81.** 'ನಾನು ರೋಗಪೀಡಿತನಾದರೆ ಅವನು ನನ್ನನ್ನು ಗುಣ ಪಡಿಸುತ್ತಾನೆ.

وَإِذَا مَرِضْتُ فَهُوَ يَشْفِينِ ﴿٨٠﴾

**82.** 'ನನ್ನನ್ನು ಮೃತಪಡಿಸುವವನೂ ಅನಂತರ ನನ್ನನ್ನು ಪುನರುತ್ಥಾನಗೊಳಿಸುವವನೂ ಅವನೇ ಆಗಿದ್ದಾನೆ.

وَالَّذِي يُمِيتُنِي ثُمَّ يُحْيِينِ ﴿٨١﴾

**83.** 'ನ್ಯಾಯ ತೀರ್ಮಾನದ ದಿನದಂದು ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದು ನಾನು ಭರವಸೆ ಪಡುತ್ತೇನೆ.

وَالَّذِي أَطْمَعُ أَن يَغْفِرَ لِي خَطِيئَتِي يَوْمَ الدِّينِ ﴿٨٢﴾

355C. ಜಗತ್ತಿನಲ್ಲಿ ಆರಾಧಿಸಲ್ಪಡುತ್ತಿರುವ ಸಕಲ ಆರಾಧ್ಯರ ಪೈಕಿ ಸರ್ವಲೋಕಗಳ ಪ್ರಭುವಾದ ಅಲ್ಲಾಹನ ಹೊರತು ಇನ್ನಾರನ್ನೂ ನಾನು ಆರಾಧಿಸಲಾರೆ ಎಂದು ತಾತ್ಪರ್ಯ.





**84.** 'ನನ್ನ ಪ್ರಭೂ, ನೀನು ನನಗೆ ವಿವೇಕ ಜ್ಞಾನವನ್ನು ನೀಡು ಮತ್ತು ನನ್ನನ್ನು ಸಜ್ಜನರೊಂದಿಗೆ ಸೇರಿಸು.

رَبِّ هَبْ لِي حُكْمًا وَأَلْحِقْنِي بِالصَّالِحِينَ ﴿٨٣﴾

**85.** 'ಮುಂದಿನ ಪೀಳಿಗೆಯಲ್ಲಿ ನನಗೆ ನಿಜವಾದ ಕೀರ್ತಿ ಲಭ್ಯವಾಗುವಂತೆ ಮಾಡು.

وَاجْعَل لِّي لِسَانَ صِدْقٍ فِي الْآخِرِينَ ﴿٨٤﴾

**86.** 'ನೀನು ನನ್ನನ್ನು ಸುಖಾನುಭೂತಿಯ ಸ್ವರ್ಗದ ವಾರೀಸುದಾರರಲ್ಲಿ ಸೇರಿದವನನ್ನಾಗಿ ಮಾಡು.

وَاجْعَلْنِي مِن وَرَثَةِ جَنَّةِ النَّعِيمِ ﴿٨٥﴾

**87.** 'ನನ್ನ ತಂದೆಗೆ ಕ್ಷಮೆ ನೀಡು; ಅವರು ದಾರಿ ತಪ್ಪಿದವರಾಗಿದ್ದಾರೆ.

وَاغْفِرْ لِأَبِي إِنَّهُ كَانَ مِنَ الضَّالِّينَ ﴿٨٦﴾

**88.** 'ಅವರು ಪುನರುತ್ಥಾನಗೊಳಿಸಲ್ಪಡುವ ದಿನದಂದು ನೀನು ನನ್ನನ್ನು ಅಪಕೀರ್ತಿಗೆ ಗುರಿಪಡಿಸಬೇಡ.

وَلَا تُخْزِنِي يَوْمَ يُبْعَثُونَ ﴿٨٧﴾

**89.** 'ಅಂದು ಸಂಪತ್ತಾಗಲಿ ಸಂತಾನವಾಗಲಿ ಪ್ರಯೋಜನಕ್ಕೆ ಬರಲಾರದು.

يَوْمَ لَا يَنفَعُ مَالٌ وَلَا بَنُونَ ﴿٨٨﴾

**90.** 'ಆದರೆ ವಿನಮ್ರವಾದ ಹೃದಯದೊಂದಿಗೆ ಅಲ್ಲಾಹನ ಬಳಿಗೆ ಬರುವವನು ಮಾತ್ರ ಪ್ರಯೋಜನ ಪಡೆಯುವನು.'

إِلَّا مَنْ أَتَى اللَّهَ بِقَلْبٍ سَلِيمٍ ﴿٨٩﴾

**91.** ಭಯಭಕ್ತಿ ತೋರಿಸುವವರ ಸಮೀಪಕ್ಕೆ ಸ್ವರ್ಗವನ್ನು ತರಲಾಗುವುದು.

وَأُزْلِفَتِ الْجَنَّةُ لِلْمُتَّقِينَ ﴿٩٠﴾

**92.** ಮಾರ್ಗಭ್ರಷ್ಟರಿಗೆ ನರಕವನ್ನು ತೆರೆದಿಡಲಾಗುವುದು.

وَبُرِّزَتِ الْجَحِيمُ لِلْغَاوِينَ ﴿٩١﴾

**93.** ಅವರೊಡನೆ ಕೇಳಲಾಗುವುದು: 'ನೀವು ಆರಾಧಿಸುತ್ತಿದ್ದುದು ಎಲ್ಲಿದೆ?-

وَقِيلَ لَهُمْ أَيْنَ مَا كُنتُمْ تَعْبُدُونَ ﴿٩٢﴾

**94.** 'ಅಲ್ಲಾಹನನ್ನು ಬಿಟ್ಟು ನೀವು ಆರಾಧಿಸುತ್ತಿದ್ದುದು. ಅವರು ನಿಮಗೆ ಸಹಾಯ ಮಾಡಬಲ್ಲರೇ? ಅಥವಾ ಸ್ವತಃ ಅವರೇ ಸಹಾಯವನ್ನು ಪಡೆಯಬಲ್ಲರೇ?'

مِن دُونِ اللَّهِ هَلْ يَنصُرُونَكُمْ أَوْ يَنتَصِرُونَ ﴿٩٣﴾

**95. ಅನಂತರ ಅವರು ಅದರಲ್ಲಿ** (ನರಕದಲ್ಲಿ) **ತಲೆಕೆಳಗಾಗಿ ರಭಸದಿಂದ ಬೀಳಿಸಲ್ಪಡುವರು- ಅವರು ಮತ್ತು ಪಥಭ್ರಷ್ಟರಾದವರು.**

فَكُبْكِبُوْا فِيْهَا هُمْ وَالْغَاوٗنَ ﴿٩٥﴾

**96. ಇಬ್‌ಲೀಸನ ಸೈನ್ಯದವರು ಸಹ; ಎಲ್ಲರೂ ಒಟ್ಟಿಗೆ.**

وَجُنُوْدُ اِبْلِيْسَ اَجْمَعُوْنَ ﴿٩٦﴾

**97. ಅಲ್ಲಿ ಅವರು ಪರಸ್ಪರ ಜಗಳಾಡುತ್ತಾ ಹೇಳುವರು:**

قَالُوْا وَهُمْ فِيْهَا يَخْتَصِمُوْنَ ﴿٩٧﴾

**98. 'ಅಲ್ಲಾಹನಾಣೆ, ನಾವು ಸ್ಪಷ್ಟವಾಗಿಯೂ ಪಥಭ್ರಷ್ಟರಾಗಿದ್ದೆವು.**

تَاللّٰهِ اِنْ كُنَّا لَفِيْ ضَلٰلٍ مُّبِيْنٍ ﴿٩٨﴾

**99. 'ನಿಮ್ಮನ್ನು ನಾವು ಸರ್ವಲೋಕಗಳ ಪ್ರಭುವಿಗೆ** (ಅಲ್ಲಾಹನಿಗೆ) **ಸರಿಸಾಟಿಯಾಗಿ ಗಣಿಸಿದ್ದಾಗ.**

اِذْ نُسَوِّيْكُمْ بِرَبِّ الْعٰلَمِيْنَ ﴿٩٩﴾

**100. 'ನಮ್ಮನ್ನು ಅಪರಾಧಿಗಳು ಹೊರತು ಬೇರೆ ಯಾರೂ ತಪ್ಪುಹಾದಿಗೆಳೆಯಲಿಲ್ಲ;**

وَمَاۤ اَضَلَّنَاۤ اِلَّا الْمُجْرِمُوْنَ ﴿١٠٠﴾

**101. 'ಈಗ ನಮಗೆ ಶಿಫಾರಸುಗಾರರು ಯಾರೂ ಇಲ್ಲ;**

فَمَا لَنَا مِنْ شَافِعِيْنَ ﴿١٠١﴾

**102. 'ಪ್ರೀತಿಸುವ ಮಿತ್ರ ಸಹ ಇಲ್ಲ.**

وَلَا صَدِيْقٍ حَمِيْمٍ ﴿١٠٢﴾

**103. 'ನಮಗೆ** (ಭೂಮಿಗೆ) **ಹಿಂತೆರಳು ಸಾಧ್ಯವಿರುತ್ತಿದ್ದರೆ ನಾವು ಸತ್ಯವಿಶ್ವಾಸಿಗಳಾಗುತ್ತಿದ್ದೆವು.'**

فَلَوْ اَنَّ لَنَا كَرَّةً فَنَكُوْنَ مِنَ الْمُؤْمِنِيْنَ ﴿١٠٣﴾

**104. ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.**

اِنَّ فِيْ ذٰلِكَ لَاٰيَةً ؕ وَمَا كَانَ اَكْثَرُهُمْ مُّؤْمِنِيْنَ ﴿١٠٤﴾

**105. ದಿಟವಾಗಿಯೂ ನಿನ್ನ ಪ್ರಭು - ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.**

وَاِنَّ رَبَّكَ لَهُوَ الْعَزِيْزُ الرَّحِيْمُ ﴿١٠٥﴾





**106. ನೂಹ್‌ರ ಜನರು ಸಂದೇಶವಾಹಕರನ್ನು[355D] ಮಿಥ್ಯಾವಾದಿಗಳೆಂದು ಗಣಿಸಿದರು.**

كَذَّبَتْ قَوْمُ نُوْحِ ِۨالْمُرْسَلِيْنَ ﴿١٠٦﴾

**107. ಅವರ ಸಹೋದರ ನೂಹ್ ಅವರೊಡನೆ ಹೇಳಿದ ಸಂದರ್ಭ: 'ನೀವು ಭಯಭಕ್ತಿಯುಳ್ಳವರಾಗುವುದಿಲ್ಲವೇ?'**

اِذْ قَالَ لَهُمْ اَخُوْهُمْ نُوْحٌ اَلَا تَتَّقُوْنَ ﴿١٠٧﴾

**108. 'ದಿಟವಾಗಿಯೂ ನಾನು ನಿಮಗೋಸ್ಕರ ಒಬ್ಬ ವಿಶ್ವಾಸಯೋಗ್ಯ ಪ್ರವಾದಿಯಾಗಿ ಬಂದಿರುವೆನು.**

اِنِّيْ لَكُمْ رَسُوْلٌ اَمِيْنٌ ﴿١٠٨﴾

**109. 'ಆದ್ದರಿಂದ ನೀವು ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ.**

فَاتَّقُوا اللّٰهَ وَاَطِيْعُوْنِ ﴿١٠٩﴾

**110. 'ಅದಕ್ಕೆ ನಾನು ನಿಮ್ಮಿಂದ ಪ್ರತಿಫಲವನ್ನೇನೂ ಕೇಳುವುದಿಲ್ಲ. ನನಗೆ ಪ್ರತಿಫಲ ಸರ್ವಲೋಕಗಳ ಪ್ರಭುವಿನ ಬಳಿಯಲ್ಲಿ ಮಾತ್ರವಿದೆ.**

وَمَاۤ اَسْـَٔلُكُمْ عَلَيْهِ مِنْ اَجْرٍ ۚ اِنْ اَجْرِيَ اِلَّا عَلٰى رَبِّ الْعٰلَمِيْنَ ﴿١١٠﴾

**111. 'ಆದ್ದರಿಂದ ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ.'**

فَاتَّقُوا اللّٰهَ وَاَطِيْعُوْنِ ﴿١١١﴾

**112. ಅವರು** (ಅವಿಶ್ವಾಸಿಗಳು) **ಕೇಳಿದರು: 'ಬಹಳ ಕೀಳ್ಮಟ್ಟದ ಜನರು ನಿನ್ನನ್ನು ಅನುಸರಿಸುತ್ತಿರುವಾಗ ನಾವು ನಿನ್ನನ್ನು ನಂಬಬೇಕೇ?'**

قَالُوْۤا اَنُؤْمِنُ لَكَ وَاتَّبَعَكَ الْاَرْذَلُوْنَ ﴿١١٢﴾

**113. ಅವರು** (ನೂಹ್) **ಹೇಳಿದರು: 'ಅವರ ಕೃತ್ಯಗಳ ಬಗ್ಗೆ ನನಗೇನು ಗೊತ್ತು?**

قَالَ وَمَا عِلْمِيْ بِمَا كَانُوْا يَعْمَلُوْنَ ﴿١١٣﴾

**114. 'ಅವರ ಲೆಕ್ಕಾಚಾರವೆಲ್ಲ ನನ್ನ ಪ್ರಭುವಿನ ಬಳಿಯಲ್ಲಿದೆ- ಅದನ್ನು ನೀವು ತಿಳಿದಿರುತ್ತಿದ್ದರೆ!**

اِنْ حِسَابُهُمْ اِلَّا عَلٰى رَبِّيْ لَوْ تَشْعُرُوْنَ ﴿١١٤﴾

**115. 'ಸತ್ಯವಿಶ್ವಾಸಿಗಳನ್ನು ನಾನು ದೂರಕ್ಕೆ ಅಟ್ಟಲಾರೆ.'**

وَمَاۤ اَنَا بِطَارِدِ الْمُؤْمِنِيْنَ ﴿١١٥﴾

355D. ಒಬ್ಬ ಪ್ರವಾದಿಯನ್ನು ತಿರಸ್ಕರಿಸುವುದು ಎಲ್ಲ ಪ್ರವಾದಿಗಳನ್ನು ತಿರಸ್ಕರಿಸುವುದಕ್ಕೆ ತುಲ್ಯ. ಆದ್ದರಿಂದಲೇ, ನೂಹ್‌ರನ್ನು ನಿರಾಕರಿಸಿದವರ ಬಗ್ಗೆ, ಅವರು ಸಂದೇಶವಾಹಕರನ್ನು ಮಿಥ್ಯಾವಾದಿಗಳೆಂದು ಗಣಿಸಿದರು ಎಂದು ಹೇಳಲಾಗಿದೆ.

**116.** 'ನಾನು ಕೇವಲ ಒಬ್ಬ ಮುನ್ನೆಚ್ಚರಿಕೆಗಾರ ನಾಗಿದ್ದೇನೆ.'

إِنْ أَنَا إِلَّا نَذِيرٌ مُّبِينٌ ﴿١١٦﴾

**117.** ಅವರು (ಅವಿಶ್ವಾಸಿಗಳು) ಹೇಳಿದರು: 'ಎಲೈ ನೂಹ್, ನೀನು (ಉಪದೇಶಿಸುವುದನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ನೀನು ಕಲ್ಲೆಸೆದು ಕೊಲ್ಲಲ್ಪಡುವೆ'

قَالُوا لَئِن لَّمْ تَنتَهِ يَا نُوحُ لَتَكُونَنَّ مِنَ الْمَرْجُومِينَ ﴿١١٧﴾

**118.** ಅವರು (ನೂಹ್) ಹೇಳಿದರು: 'ನನ್ನ ಪ್ರಭೂ, ನನ್ನ ಜನರು ನನ್ನನ್ನು ಸುಳ್ಳುಗಾರನೆಂದು ಗಣಿಸಿರುತ್ತಾರೆ.

قَالَ رَبِّ إِنَّ قَوْمِي كَذَّبُونِ ﴿١١٨﴾

**119.** 'ಆದ್ದರಿಂದ ನನ್ನ ಮತ್ತು ಅವರ ಮಧ್ಯೆ ನೀನು ನಿಖರವಾದ ತೀರ್ಮಾನ ಮಾಡು; ಹಾಗೂ ನನ್ನನ್ನೂ ನನ್ನೊಂದಿಗಿರುವ ಸತ್ಯವಿಶ್ವಾಸಿಗಳನ್ನೂ ಕಾಪಾಡು.'

فَافْتَحْ بَيْنِي وَبَيْنَهُمْ فَتْحًا وَنَجِّنِي وَمَن مَّعِيَ مِنَ الْمُؤْمِنِينَ ﴿١١٩﴾

**120.** ಹಾಗೆ ನಾವು ಅವರನ್ನೂ ಅವರ ಜೊತೆಗಿರುವವರನ್ನೂ ಒಂದು ತುಂಬಿದ ಹಡಗಿನಲ್ಲಿ ಪಾರುಮಾಡಿದೆವು.

فَأَنجَيْنَاهُ وَمَن مَّعَهُ فِي الْفُلْكِ الْمَشْحُونِ ﴿١٢٠﴾

**121.** ಆ ಮೇಲೆ ಬಾಕಿಯುಳಿದವರನ್ನು ನಾವು ಮುಳುಗಿಸಿದೆವು.

ثُمَّ أَغْرَقْنَا بَعْدُ الْبَاقِينَ ﴿١٢١﴾

**122.** ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٢٢﴾

**123.** ದಿಟವಾಗಿಯೂ ನಿನ್ನ ಪ್ರಭು - ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٢٣﴾

**124.** ಆದ್ ಗೋತ್ರದವರು (ಸಹ) ತಮ್ಮ ಪ್ರವಾದಿಗಳನ್ನು ತಿರಸ್ಕರಿಸಿದರು.

كَذَّبَتْ عَادٌ الْمُرْسَلِينَ ﴿١٢٤﴾

**125.** ಅವರ ಸಹೋದರ ಹೂದ್ ಅವರೊಡನೆ ಹೇಳಿದ ಸಂದರ್ಭ: 'ನೀವು ಭಯ ಭಕ್ತಿಯುಳ್ಳವರಾಗುವುದಿಲ್ಲವೇ?

إِذْ قَالَ لَهُمْ أَخُوهُمْ هُودٌ أَلَا تَتَّقُونَ ﴿١٢٥﴾

**126.** 'ದಿಟವಾಗಿಯೂ ನಾನು ನಿಮಗೋಸ್ಕರ ಒಬ್ಬ ವಿಶ್ವಾಸಯೋಗ್ಯ ಪ್ರವಾದಿಯಾಗಿ ಬಂದಿರುವೆನು.

إِنِّي لَكُمْ رَسُولٌ أَمِينٌ ﴿١٢٦﴾





**127.** 'ಆದ್ದರಿಂದ ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٢٧﴾

**128.** 'ಅದಕ್ಕೆ ನಾನು ನಿಮ್ಮಿಂದ ಪ್ರತಿಫಲ ವನ್ನೇನೂ ಕೇಳುವುದಿಲ್ಲ. ನನಗೆ ಪ್ರತಿಫಲ ಸರ್ವ ಲೋಕಗಳ ಪ್ರಭುವಿನ ಬಳಿಯಲ್ಲಿ ಮಾತ್ರವಿದೆ.

وَمَا أَسْأَلُكُمْ عَلَيْهِ مِنْ أَجْرٍ ۖ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٢٨﴾

**129.** 'ಪ್ರತಿಯೊಂದು ಉನ್ನತ ಸ್ಥಳದ ಮೇಲೆ ನಿಷ್ಫಲವಾದ ಕೀರ್ತಿಗೋಸ್ಕರ ನೀವು ಸ್ಮಾರಕಗಳನ್ನು ನಿರ್ಮಿಸುತ್ತಿರುವಿರಾ?

أَتَبْنُونَ بِكُلِّ رِيعٍ آيَةً تَعْبَثُونَ ﴿١٢٩﴾

**130.** 'ಹಾಗೂ ನೀವು ಶಾಶ್ವತವಾಗಿ ವಾಸ ಹೂಡುವ ರೀತಿಯಲ್ಲಿ ದೊಡ್ಡ ದೊಡ್ಡ ಮಹಲುಗಳನ್ನೂ ನಿರ್ಮಿಸುತ್ತಿದ್ದೀರಲ್ಲವೇ?

وَتَتَّخِذُونَ مَصَانِعَ لَعَلَّكُمْ تَخْلُدُونَ ﴿١٣٠﴾

**131.** 'ನೀವು ಯಾರನ್ನಾದರೂ ಹಿಡಿಯುವಾಗ ಕ್ರೂರಿಗಳಂತೆ ಹಿಡಿಯುತ್ತೀರಿ.

وَإِذَا بَطَشْتُم بَطَشْتُمْ جَبَّارِينَ ﴿١٣١﴾

**132.** 'ನೀವು ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٣٢﴾

**133.** 'ನೀವು ನಿಮಗೆ ತಿಳಿದಿರುವ ವಸ್ತುಗಳನ್ನು ನಿಮಗೆ ನೀಡಿ ಸಹಾಯವಿತ್ತವನ (ಅಲ್ಲಾಹನ) ಭಯವಿರಿಸಿರಿ.

وَاتَّقُوا الَّذِي أَمَدَّكُم بِمَا تَعْلَمُونَ ﴿١٣٣﴾

**134.** 'ಅವನು ನಿಮಗೆ ಜಾನುವಾರುಗಳ ಮೂಲಕ ಮತ್ತು ಸಂತಾನಗಳ ಮೂಲಕ ಸಹಾಯಮಾಡಿರುವನು.

أَمَدَّكُم بِأَنْعَامٍ وَبَنِينَ ﴿١٣٤﴾

**135.** 'ತೋಟಗಳಿಂದಲೂ ಒರತೆಗಳಿಂದಲೂ (ಅವನು ಸಹಾಯ ಮಾಡಿರುವನು).

وَجَنَّاتٍ وَعُيُونٍ ﴿١٣٥﴾

**136.** 'ಒಂದು ಭಯಾನಕ ದಿನದ ಶಿಕ್ಷೆ ನಿಮ್ಮ ಮೇಲೆ ಎರಗುವುದರ ಬಗ್ಗೆ ನಾನು ಭಯಪಡುತ್ತೇನೆ.'

إِنِّي أَخَافُ عَلَيْكُمْ عَذَابَ يَوْمٍ عَظِيمٍ ﴿١٣٦﴾

**137.** ಅವರು (ಅವಿಶ್ವಾಸಿಗಳು) ಹೇಳಿದರು: 'ನೀನು ಉಪದೇಶಿಸಿದರೂ ಉಪದೇಶಿಸದಿದ್ದರೂ ನಮಗೆ ಅದು ಸಮಾನವಾಗಿದೆ.

قَالُوا سَوَاءٌ عَلَيْنَا أَوَعَظْتَ أَمْ لَمْ تَكُن مِّنَ الْوَاعِظِينَ ﴿١٣٧﴾

138. 'ಇದು[356] ಪೂರ್ವಜರ ನಡವಳಿಕೆಯೇ ಆಗಿದೆ.

إِنْ هَٰذَآ إِلَّا خُلُقُ ٱلْأَوَّلِينَ ﴿١٣٨﴾

139. 'ನಾವು ಶಿಕ್ಷೆಗೆ ಗುರಿಯಾಗಲಾರೆವು.'

وَمَا نَحْنُ بِمُعَذَّبِينَ ﴿١٣٩﴾

140. ಹಾಗೆ ಅವರನ್ನು (ಪ್ರವಾದಿ ಹೂದ್‌ರನ್ನು) ಅವರು ಸುಳ್ಳಾಗಿಸಿದರು. ಆಗ ನಾವು ಅವರನ್ನು ನಾಶ ಮಾಡಿದೆವು. ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.

فَكَذَّبُوهُ فَأَهْلَكْنَٰهُمْ ۗ إِنَّ فِى ذَٰلِكَ لَءَايَةً ۖ وَمَا كَانَ أَكْثَرُهُم مُّؤْمِنِينَ ﴿١٤٠﴾

141. ದಿಟವಾಗಿಯೂ ನಿನ್ನ ಪ್ರಭು - ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.

وَإِنَّ رَبَّكَ لَهُوَ ٱلْعَزِيزُ ٱلرَّحِيمُ ﴿١٤١﴾

142. ಸಮೂದ್ ಗೋತ್ರದವರು ಪ್ರವಾದಿಗಳನ್ನು ಸುಳ್ಳಾಗಿಸಿದರು.

كَذَّبَتْ ثَمُودُ ٱلْمُرْسَلِينَ ﴿١٤٢﴾

143. ಅವರ ಸಹೋದರ ಸಾಲಿಹ್ ಅವರೊಡನೆ ಹೇಳಿದ ಸಂದರ್ಭ: 'ನೀವು ಭಯ ಭಕ್ತಿಯುಳ್ಳವ ರಾಗುವುದಿಲ್ಲವೇ?'

إِذْ قَالَ لَهُمْ أَخُوهُمْ صَٰلِحٌ أَلَا تَتَّقُونَ ﴿١٤٣﴾

144. 'ದಿಟವಾಗಿಯೂ ನಾನು ನಿಮಗೋಸ್ಕರ ಒಬ್ಬ ವಿಶ್ವಾಸಯೋಗ್ಯ ಪ್ರವಾದಿಯಾಗಿ ಬಂದಿರುವೆನು.

إِنِّى لَكُمْ رَسُولٌ أَمِينٌ ﴿١٤٤﴾

145. 'ಆದ್ದರಿಂದ ನೀವು ಅಲ್ಲಾಹನ ಭಯವಿರಿಸಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ﴿١٤٥﴾

146. 'ಅದಕ್ಕೆ ನಾನು ನಿಮ್ಮಿಂದ ಪ್ರತಿಫಲ ವನ್ನೇನೂ ಕೇಳುವುದಿಲ್ಲ. ನನಗೆ ಪ್ರತಿಫಲ ಸರ್ವ ಲೋಕಗಳ ಪ್ರಭುವಿನ ಬಳಿಯಲ್ಲಿ ಮಾತ್ರವಿದೆ.

وَمَآ أَسْـَٔلُكُمْ عَلَيْهِ مِنْ أَجْرٍ ۖ إِنْ أَجْرِىَ إِلَّا عَلَىٰ رَبِّ ٱلْعَٰلَمِينَ ﴿١٤٦﴾

147. 'ಇಲ್ಲಿ ಇರುವುದರೊಂದಿಗೆ ಸುರಕ್ಷಿತವಾಗಿ (ಬದುಕಲು) ನಿಮ್ಮನ್ನು ಬಿಟ್ಟು ಬಿಡಲಾಗುವುದೇ?-

أَتُتْرَكُونَ فِى مَا هَٰهُنَآ ءَامِنِينَ ﴿١٤٧﴾

356. 'ಇದು' ಎಂಬುದರ ತಾತ್ಪರ್ಯ ಆದ್ ಗೋತ್ರದ ಆ ಕಾಲದ ನಡೆವಳಿಕೆಗಳಾಗಿವೆ. ಅವರು ತಮ್ಮ ವಿಶ್ವಾಸ ಆಚಾರಗಳನ್ನು ಪೂರ್ವಜರ ನಡೆವಳಿಕೆಗಳೆಂದು ಹೇಳಿ ಸಮರ್ಥಿಸುತ್ತಿದ್ದರು ಎಂದು ತಾತ್ಪರ್ಯ. ತಫ್ಸೀರ್ ಬಹ್ರುಲ್ ಮುಹೀತ್‌ನಲ್ಲಿ ಅಲ್ಲಾಮ ಅಬೂಹಯ್ಯಾನ್ ಇದೇ ರೀತಿ ವ್ಯಾಖ್ಯಾನಿಸಿದ್ದಾರೆ.





148. 'ತೋಟಗಳು ಮತ್ತು ಒರತೆಗಳ ಮಧ್ಯದಲ್ಲಿ;

فِى جَنَّٰتٍ وَعُيُونٍ ﴿١٤٨﴾

149. 'ಧಾನ್ಯದ ಹೊಲಗಳಲ್ಲಿ ಮತ್ತು ಭಾರದಿಂದ ತುಂಡರಿಸಲ್ಪಡುವಂತಹ ಗೊಂಚಲುಗಳಿಂದ ಕೂಡಿದ ಖರ್ಜೂರದ ಮರಗಳಲ್ಲಿ. (ಇವೆಲ್ಲವುಗಳ ಮಧ್ಯೆ ನಿಮ್ಮನ್ನು ಸದಾಕಾಲ ಬದುಕಲು ಬಿಡಲಾಗುವುದೆಂದು ನೀವು ಭಾವಿಸುತ್ತೀರಾ?)

وَزُرُوعٍ وَنَخْلٍ طَلْعُهَا هَضِيمٌ ﴿١٤٩﴾

150. 'ನೀವು ಅತಿ ನಿಪುಣತೆಯಿಂದ ಪರ್ವತಗಳನ್ನು ಕಡಿದು ಮನೆಗಳನ್ನು ನಿರ್ಮಿಸಿ ಹೆಮ್ಮೆಪಡುತ್ತೀರಿ.

وَتَنْحِتُونَ مِنَ ٱلْجِبَالِ بُيُوتًا فَٰرِهِينَ ﴿١٥٠﴾

151. 'ನೀವು ಅಲ್ಲಾಹನ ಭಯವಿರಿಸಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ﴿١٥١﴾

152. 'ಹದ್ದುಮೀರಿ ವರ್ತಿಸುವವರ ಆಜ್ಞೆಗಳಿಗೆ ನೀವು ವಿಧೇಯರಾಗಬೇಡಿರಿ.

وَلَا تُطِيعُوٓا۟ أَمْرَ ٱلْمُسْرِفِينَ ﴿١٥٢﴾

153. 'ಅವರು ಭೂಮಿಯಲ್ಲಿ ಅಶಾಂತಿಯನ್ನು ಹರಡುವವರೂ ಸುಧಾರಣೆ ಮಾಡದವರೂ ಆಗಿದ್ದಾರೆ.

ٱلَّذِينَ يُفْسِدُونَ فِى ٱلْأَرْضِ وَلَا يُصْلِحُونَ ﴿١٥٣﴾

154. ಆಗ ಅವರು (ಸಾಲಿಹ್ ಪ್ರವಾದಿಯ ವಿರೋಧಿಗಳು) ಹೇಳಿದರು: 'ಖಂಡಿತವಾಗಿಯೂ ನೀನು ಮಾಟಕ್ಕೊಳಗಾಗಿರುವೆ.'

قَالُوٓا۟ إِنَّمَآ أَنتَ مِنَ ٱلْمُسَحَّرِينَ ﴿١٥٤﴾

155. ನೀನು ನಮ್ಮಂಥ ಒಬ್ಬ ಮನುಷ್ಯನು ಮಾತ್ರ ವಾಗಿರುವೆ. ನೀನು ಸತ್ಯವಾದಿಯೆಂದಾದರೆ ಒಂದು ದೃಷ್ಟಾಂತವನ್ನು ತಾ.'

مَآ أَنتَ إِلَّا بَشَرٌ مِّثْلُنَا فَأْتِ بِـَٔايَةٍ إِن كُنتَ مِنَ ٱلصَّٰدِقِينَ ﴿١٥٥﴾

156. ಅವರು (ಸಾಲಿಹ್) ಹೇಳಿದರು: 'ಇದೋ ಈ ಹೆಣ್ಣು ಒಂಟೆ. ಅದಕ್ಕೆ ನೀರು ಕುಡಿಯುವ ಸರದಿ ಇದೆ. ನಿಮಗೆ ಸಹ ನೀರು ಕುಡಿಯಲು ಸರದಿ ಇದೆ - ನಿಗದಿ ಪಡಿಸಿದ ದಿನದಂದು.

قَالَ هَٰذِهِۦ نَاقَةٌ لَّهَا شِرْبٌ وَلَكُمْ شِرْبُ يَوْمٍ مَّعْلُومٍ ﴿١٥٦﴾

**157.** 'ಅದಕ್ಕೆ ನೀವೇನೂ ಹಾನಿ ಮಾಡಬಾರದು. ಅನ್ಯಥಾ, ಒಂದು ಭಯಾನಕ ದಿನದ ಶಿಕ್ಷೆಗೆ ನೀವು ಗುರಿಯಾಗುವಿರಿ.'

وَلَا تَمَسُّوهَا بِسُوٓءٍ فَيَأْخُذَكُمْ عَذَابُ يَوْمٍ عَظِيمٍ ﴿١٥٧﴾

**158.** ಆದರೆ ಅವರು ಅದರ ಹಿಂಗಾಲ ಮೊಣ ಕಾಲಿನ ಸ್ನಾಯುರಜ್ಜುಗಳನ್ನು ಕೊಯ್ದುಬಿಟ್ಟರು. ಆ ಮೇಲೆ ಅವರು ಖೇದಗೊಂಡರು.

فَعَقَرُوهَا فَأَصْبَحُوا نَٰدِمِينَ ﴿١٥٨﴾

**159.** ಆಗ ಆ (ಮುನ್ನೆಚ್ಚರಿಕೆ ನೀಡಲಾದ) ಶಿಕ್ಷೆ ಅವರನ್ನು ಆವರಿಸಿತು. ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.

فَأَخَذَهُمُ الْعَذَابُ ۗ إِنَّ فِي ذَٰلِكَ لَآيَةً ۖ وَمَا كَانَ أَكْثَرُهُمْ مُؤْمِنِينَ ﴿١٥٩﴾

**160.** ದಿಟವಾಗಿಯೂ ನಿನ್ನ ಪ್ರಭು - ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٦٠﴾

**161.** ಲೂತ್‌ರ ಜನರು ಪ್ರವಾದಿಗಳನ್ನು ಸುಳ್ಳಾಗಿಸಿದರು.

كَذَّبَتْ قَوْمُ لُوطٍ الْمُرْسَلِينَ ﴿١٦١﴾

**162.** ಅವರ ಸಹೋದರ ಲೂತ್ ಅವರೊಡನೆ ಹೇಳಿದ ಸಂದರ್ಭ: 'ನೀವು ಭಯಭಕ್ತಿಯುಳ್ಳವ ರಾಗುವುದಿಲ್ಲವೇ?

إِذْ قَالَ لَهُمْ أَخُوهُمْ لُوطٌ أَلَا تَتَّقُونَ ﴿١٦٢﴾

**163.** 'ದಿಟವಾಗಿಯೂ ನಾನು ನಿಮಗೋಸ್ಕರ ಒಬ್ಬ ವಿಶ್ವಾಸಯೋಗ್ಯ ಪ್ರವಾದಿಯಾಗಿ ಬಂದಿರುವೆನು.

إِنِّي لَكُمْ رَسُولٌ أَمِينٌ ﴿١٦٣﴾

**164.** 'ಆದ್ದರಿಂದ ನೀವು ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٦٤﴾

**165.** 'ಅದಕ್ಕೆ ನಾನು ನಿಮ್ಮಿಂದ ಪ್ರತಿಫಲ ವನ್ನೇನೂ ಕೇಳುವುದಿಲ್ಲ. ನನಗೆ ಪ್ರತಿಫಲ ಸರ್ವಲೋಕಗಳ ಪ್ರಭುವಿನ ಬಳಿಯಲ್ಲಿ ಮಾತ್ರವಿದೆ.'

وَمَا أَسْأَلُكُمْ عَلَيْهِ مِنْ أَجْرٍ ۖ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٦٥﴾

**166.** 'ಮನುಷ್ಯರ ಪೈಕಿ ಪುರುಷರ ಬಳಿಗೆ ನೀವು ಹೋಗುತ್ತಿರುವಿರಾ.'

أَتَأْتُونَ الذُّكْرَانَ مِنَ الْعَالَمِينَ ﴿١٦٦﴾





**167.** 'ಹಾಗೂ ನಿಮ್ಮ ಪ್ರಭು ನಿಮಗೋಸ್ಕರ ಸೃಷ್ಟಿಸಿದ ನಿಮ್ಮ ಪತ್ನಿಯರನ್ನು ನೀವು ಬಿಟ್ಟು ಬಿಡುತ್ತೀರಾ? ನೀವು ಹದ್ದುಮೀರಿ ವರ್ತಿಸುವ ಜನರೇ ಸರಿ.'

وَتَذَرُونَ مَا خَلَقَ لَكُمْ رَبُّكُمْ مِنْ أَزْوَاجِكُمْ ۚ بَلْ أَنْتُمْ قَوْمٌ عَادُونَ ﴿١٦٧﴾

**168.** ಅವರು (ಅವಿಶ್ವಾಸಿಗಳು) ಹೇಳಿದರು: 'ಎಲೈ ಲೂತ್, ನೀನು ಇದನ್ನು (ನಿನ್ನ ಉಪದೇಶವನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ನಿನ್ನನ್ನು ಇಲ್ಲಿಂದ ಹೊರಗೆ ಅಟ್ಟಲಾಗುವುದು.'

قَالُوا لَئِنْ لَمْ تَنْتَهِ يَا لُوطُ لَتَكُونَنَّ مِنَ الْمُخْرَجِينَ ﴿١٦٨﴾

**169.** ಅವರು (ಲೂತ್) ಹೇಳಿದರು: 'ಖಂಡಿತ ವಾಗಿಯೂ ನಾನು ನಿಮ್ಮ ನಡತೆಯ ಬಗ್ಗೆ ಅಸಹ್ಯಪಡುತ್ತೇನೆ.

قَالَ إِنِّي لِعَمَلِكُمْ مِنَ الْقَالِينَ ﴿١٦٩﴾

**170.** 'ನನ್ನ ಪ್ರಭೂ, ಅವರ ದುಷ್ಕೃತ್ಯಗಳಿಂದ ನೀನು ನನ್ನನ್ನೂ ನನ್ನ ಕುಟುಂಬವನ್ನೂ ಪಾರುಮಾಡು.'

رَبِّ نَجِّنِي وَأَهْلِي مِمَّا يَعْمَلُونَ ﴿١٧٠﴾

**171.** ಹಾಗೆ ನಾವು ಲೂತ್ ಮತ್ತು ಅವರ ಕುಟುಂಬದವರನ್ನೆಲ್ಲ ಕಾಪಾಡಿದೆವು -

فَنَجَّيْنَاهُ وَأَهْلَهُ أَجْمَعِينَ ﴿١٧١﴾

**172.** ಓರ್ವ ಮುದುಕಿಯನ್ನು ಹೊರತುಪಡಿಸಿ. ಆಕೆ ಹಿಂದೆ ಸರಿದವರಲ್ಲಿ ಸೇರಿದವಳಾಗಿದ್ದಳು.

إِلَّا عَجُوزًا فِي الْغَابِرِينَ ﴿١٧٢﴾

**173.** ನಾವು ಅನಂತರ (ಲೂತ್ ಮತ್ತು ಅವರ ಕುಟುಂಬದವರನ್ನು ಕಾಪಾಡಿದ ನಂತರ) ಇತರರನ್ನೆಲ್ಲ ನಾಶಪಡಿಸಿದೆವು.

ثُمَّ دَمَّرْنَا الْآخَرِينَ ﴿١٧٣﴾

**174.** ಅವರ ಮೇಲೆ ನಾವೊಂದು ಮಳೆ ಸುರಿಸಿದೆವು. ಮುನ್ನೆಚ್ಚರಿಕೆ ನೀಡಲ್ಪಟ್ಟವರ ಮೇಲೆ ಸುರಿದ ಆ ಮಳೆ ಬಹಳ ಹಾನಿಕರವಾಗಿತ್ತು.

وَأَمْطَرْنَا عَلَيْهِمْ مَطَرًا ۖ فَسَاءَ مَطَرُ الْمُنْذَرِينَ ﴿١٧٤﴾

**175.** ದಿಟವಾಗಿಯೂ ಅದರಲ್ಲೊಂದು ದೃಷ್ಟಾಂತ ವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُمْ مُؤْمِنِينَ ﴿١٧٥﴾

| | |
|---|---|
| **176.** ದಿಟವಾಗಿಯೂ ನಿನ್ನ ಪ್ರಭು - ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ. | وَاِنَّ رَبَّكَ لَهُوَ الْعَزِيْزُ الرَّحِيْمُ ﴿۱۷۶﴾ |
| **177.** ಐಕತ್ ಜನಾಂಗದವರು (ವನದ ನಿವಾಸಿಗಳು)[356A] ಸಹ ಪ್ರವಾದಿಗಳನ್ನು ಸುಳ್ಳಾಗಿಸಿದರು. | كَذَّبَ اَصْحٰبُ لْئَيْكَةِ الْمُرْسَلِيْنَ ﴿۱۷۷﴾ |
| **178.** ಶುಐಬ್ ಅವರೊಡನೆ ಹೇಳಿದ ಸಂದರ್ಭ: 'ನೀವು ಭಯಭಕ್ತಿಯುಳ್ಳವರಾಗುವುದಿಲ್ಲವೇ? | اِذْ قَالَ لَهُمْ شُعَيْبٌ اَلَا تَتَّقُوْنَ ﴿۱۷۸﴾ |
| **179.** 'ದಿಟವಾಗಿಯೂ ನಾನು ನಿಮಗೋಸ್ಕರ ಒಬ್ಬ ವಿಶ್ವಾಸಯೋಗ್ಯ ಪ್ರವಾದಿಯಾಗಿ ಬಂದಿರುವೆನು. | اِنِّيْ لَكُمْ رَسُوْلٌ اَمِيْنٌ ﴿۱۷۹﴾ |
| **180.** 'ಆದ್ದರಿಂದ ನೀವು ಅಲ್ಲಾಹನ ಭಯವಿರಿಸಿರಿ ಹಾಗೂ ನನ್ನನ್ನು ಅನುಸರಿಸಿರಿ. | فَاتَّقُوا اللّٰهَ وَاَطِيْعُوْنِ ﴿۱۸۰﴾ |
| **181.** 'ಅದಕ್ಕೆ ನಾನು ನಿಮ್ಮಿಂದ ಪ್ರತಿಫಲ ವನ್ನೇನೂ ಕೇಳುವುದಿಲ್ಲ. ನನಗೆ ಪ್ರತಿಫಲ ಸರ್ವಲೋಕಗಳ ಪ್ರಭುವಿನ ಬಳಿಯಲ್ಲಿ ಮಾತ್ರವಿದೆ. | وَمَآ اَسْئَلُكُمْ عَلَيْهِ مِنْ اَجْرٍ اِنْ اَجْرِيَ اِلَّا عَلٰى رَبِّ الْعٰلَمِيْنَ ﴿۱۸۱﴾ |
| **182.** 'ನೀವು ಅಳೆದು ಕೊಡುವಾಗ ಪೂರ್ಣವಾಗಿ ಕೊಡಿರಿ; ಕಡಿಮೆ ಮಾಡಿ ಕೊಡುವವರಾಗಬೇಡಿರಿ. | اَوْفُوا الْكَيْلَ وَلَا تَكُوْنُوْا مِنَ الْمُخْسِرِيْنَ ﴿۱۸۲﴾ |
| **183.** 'ನೀವು ಸರಿಯಾದ ತಕ್ಕಡಿಯಲ್ಲಿ ತೂಕಮಾಡಿ ಕೊಡಿರಿ. | وَزِنُوْا بِالْقِسْطَاسِ الْمُسْتَقِيْمِ ﴿۱۸۳﴾ |
| **184.** 'ಜನರಿಗೆ ಅವರ ಸಾಧನ-ಸಾಮಗ್ರಿಗಳಲ್ಲಿ ಕೊರತೆಯನ್ನುಂಟುಮಾಡಬೇಡಿರಿ. ಭೂಮಿಯಲ್ಲಿ ಭ್ರಷ್ಟವಾಗಿ ವರ್ತಿಸಿಕೊಂಡು ಶಾಂತಿಭಂಗವನ್ನುಂಟು ಮಾಡಬೇಡಿರಿ. | وَلَا تَبْخَسُوا النَّاسَ اَشْيَآءَهُمْ وَلَا تَعْثَوْا فِي الْاَرْضِ مُفْسِدِيْنَ ﴿۱۸۴﴾ |
| **185.** 'ನೀವು ನಿಮ್ಮನ್ನೂ ಪೂರ್ವಿಕ ಜನಾಂಗ ಗಳನ್ನೂ ಸೃಷ್ಟಿಸಿದವನ ಭಯವಿರಿಸಿಕೊಳ್ಳಿರಿ.' | وَاتَّقُوا الَّذِيْ خَلَقَكُمْ وَالْجِبِلَّةَ الْاَوَّلِيْنَ ﴿۱۸۵﴾ |
| **186.** ಅವರು (ಅವಿಶ್ವಾಸಿಗಳು) ಹೇಳಿದರು: 'ನೀನು ಖಂಡಿತವಾಗಿಯೂ ಮೋಡಿಗೊಳಗಾಗಿರುವೆ. | قَالُوْٓا اِنَّمَآ اَنْتَ مِنَ الْمُسَحَّرِيْنَ ﴿۱۸۶﴾ |

356A. ಪ್ರವಾದಿ ಶುಐಬ್ (ಅಲೈಹಿಸ್ಸಲಾಂ)ರ ಜನಾಂಗ. 15ನೇ ಅಧ್ಯಾಯ 79ನೇ ವಚನದ ಟಿಪ್ಪಣಿ ನೋಡಿರಿ.





| | |
|---|---|
| **187.** 'ನೀನು ನಮ್ಮಂಥ ಒಬ್ಬ ಮನುಷ್ಯ ಮಾತ್ರ. ನಿನ್ನನ್ನು ನಾವು ಸುಳ್ಳುಗಾರನೆಂದು ಭಾವಿಸುತ್ತೇವೆ. | وَمَآ اَنْتَ اِلَّا بَشَرٌ مِّثْلُنَا وَاِنْ نَّظُنُّكَ لَمِنَ الْكٰذِبِيْنَ ﴿۱۸۷﴾ |
| **188.** 'ಅಥವಾ ನೀನು ಸತ್ಯವಾದಿಯೆಂದಾದರೆ ನಮ್ಮ ಮೇಲೆ ಮುಗಿಲಿನಿಂದ ತುಣುಕುಗಳನ್ನು ಬೀಳಿಸು.' | فَاَسْقِطْ عَلَيْنَا كِسَفًا مِّنَ السَّمَآءِ اِنْ كُنْتَ مِنَ الصّٰدِقِيْنَ ﴿۱۸۸﴾ |
| **189.** ಅವರು (ಶುಐಬ್) ಹೇಳಿದರು: 'ನಿಮ್ಮ ಕೃತ್ಯಗಳನ್ನೆಲ್ಲ ನನ್ನ ಪ್ರಭು ಚೆನ್ನಾಗಿ ಬಲ್ಲನು.' | قَالَ رَبِّيْٓ اَعْلَمُ بِمَا تَعْمَلُوْنَ ﴿۱۸۹﴾ |
| **190.** ಆದರೆ ಅವರು (ಐಕತ್ ಜನಾಂಗದವರು) ಅವರನ್ನು ಸುಳ್ಳಾಗಿಸಿದರು. ತತ್ಫಲವಾಗಿ ಛಾಯಾವೃತ ದಿನದ ಶಿಕ್ಷೆ ಅವರನ್ನು ಆವರಿಸಿತು. ಅದು ನಿಜವಾಗಿಯೂ ಒಂದು ಭಯಾನಕ ಶಿಕ್ಷೆಯ ದಿನವಾಗಿತ್ತು. | فَكَذَّبُوْهُ فَاَخَذَهُمْ عَذَابُ يَوْمِ الظُّلَّةِ اِنَّهٗ كَانَ عَذَابَ يَوْمٍ عَظِيْمٍ ﴿۱۹۰﴾ |
| **191.** ದಿಟವಾಗಿಯೂ ಅದರಲ್ಲಿ ಒಂದು ದೃಷ್ಟಾಂತವಿದೆ. ಬಹುಸಂಖ್ಯಾತರಾದ ಅವರು ವಿಶ್ವಾಸ ಹೊಂದದವರಾಗಿದ್ದರು. | اِنَّ فِيْ ذٰلِكَ لَاٰيَةً وَمَا كَانَ اَكْثَرُهُمْ مُّؤْمِنِيْنَ ﴿۱۹۱﴾ |
| **192.** ದಿಟವಾಗಿಯೂ ನಿನ್ನ ಪ್ರಭು ಪ್ರತಾಪ ಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ. | وَاِنَّ رَبَّكَ لَهُوَ الْعَزِيْزُ الرَّحِيْمُ ﴿۱۹۲﴾ |
| **193.** ನಿಜವಾಗಿಯೂ ಇದು ಸರ್ವಲೋಕಗಳ ಪ್ರಭುವಿನಿಂದ ಅವತೀರ್ಣವಾದುದಾಗಿದೆ. | وَاِنَّهٗ لَتَنْزِيْلُ رَبِّ الْعٰلَمِيْنَ ﴿۱۹۳﴾ |
| **194.** ವಿಶ್ವಾಸಯೋಗ್ಯನಾದ ದಿವ್ಯದೂತನ ಮೂಲಕ ಇದರ ಅವತರಣೆಯಾಗಿದೆ - | نَزَلَ بِهِ الرُّوْحُ الْاَمِيْنُ ﴿۱۹۴﴾ |
| **195.** ನಿನ್ನ ಹೃದಯದಲ್ಲಿ; ನೀನು ಮುನ್ನೆಚ್ಚರಿಕೆ ನೀಡುವವನು ಆಗಲಿಕ್ಕೋಸ್ಕರ; | عَلٰى قَلْبِكَ لِتَكُوْنَ مِنَ الْمُنْذِرِيْنَ ﴿۱۹۵﴾ |
| **196.** ಸುಸ್ಪಷ್ಟವಾದ ಅರಬಿ ಭಾಷೆಯಲ್ಲಿ. | بِلِسَانٍ عَرَبِيٍّ مُّبِيْنٍ ﴿۱۹۶﴾ |

**197.** ಇದರ ಬಗ್ಗೆ ಪೂರ್ವ ಧರ್ಮಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ.

وَإِنَّهُ لَفِي زُبُرِ الْأَوَّلِينَ ﴿١٩٦﴾

**198.** ಇಸ್ರಾಈಲ್ ಸಂತತಿಗಳ ಧರ್ಮ ಪಂಡಿತರು ಇದನ್ನು ಬಲ್ಲರು ಎಂಬುದು ಇವರಿಗೆ ಒಂದು ದೃಷ್ಟಾಂತವಲ್ಲವೇ?

أَوَلَمْ يَكُن لَّهُمْ آيَةً أَن يَعْلَمَهُ عُلَمَاءُ بَنِي إِسْرَائِيلَ ﴿١٩٧﴾

**199.** ಇದನ್ನು ನಾವು ಅರಬಿಯೇತರನಾದ ಒಬ್ಬನಿಗೆ ಅವತೀರ್ಣಗೊಳಿಸಿದ್ದರೆ,

وَلَوْ نَزَّلْنَاهُ عَلَىٰ بَعْضِ الْأَعْجَمِينَ ﴿١٩٨﴾

**200.** ಹಾಗೂ ಅವನು ಅದನ್ನು ಅವರಿಗೆ ಓದಿ ಹೇಳಿದ್ದರೆ ಕೂಡ ಅವರು ನಂಬುತ್ತಿರಲಿಲ್ಲ.

فَقَرَأَهُ عَلَيْهِم مَّا كَانُوا بِهِ مُؤْمِنِينَ ﴿١٩٩﴾

**201.** ಇದೇ ಪ್ರಕಾರ ನಾವು ಅದನ್ನು (ಅವಿಶ್ವಾಸವನ್ನು) ಪಾಪಿಗಳ ಹೃದಯಗಳಲ್ಲಿ ಮೂಡಿಸುತ್ತೇವೆ.

كَذَٰلِكَ سَلَكْنَاهُ فِي قُلُوبِ الْمُجْرِمِينَ ﴿٢٠٠﴾

**202.** ಯಾತನಾಮಯವಾದ ಶಿಕ್ಷೆಯನ್ನು ಕಾಣುವ ತನಕ ಅವರು ಅದನ್ನು ನಂಬಲಾರರು.

لَا يُؤْمِنُونَ بِهِ حَتَّىٰ يَرَوُا الْعَذَابَ الْأَلِيمَ ﴿٢٠١﴾

**203.** ಆದರೆ ಅದು (ಆ ಶಿಕ್ಷೆ) ಅನಿರೀಕ್ಷಿತವಾಗಿ ಅವರ ಮೇಲೆ ಎರಗುವುದು.

فَيَأْتِيَهُم بَغْتَةً وَهُمْ لَا يَشْعُرُونَ ﴿٢٠٢﴾

**204.** ಆಗ ಅವರು, 'ನಮಗೆ ಕಾಲಾವಕಾಶ ನೀಡಲಾಗುವುದೇ?' ಎಂದು ಕೇಳುವರು.

فَيَقُولُوا هَلْ نَحْنُ مُنظَرُونَ ﴿٢٠٣﴾

**205.** ಏನು, ನಮ್ಮ ಶಿಕ್ಷೆ ಶೀಘ್ರವಾಗಿ ಬರಲಿ ಎಂದು ಅವರು ಈಗ ಬಯಸುತ್ತಾರೇನು?

أَفَبِعَذَابِنَا يَسْتَعْجِلُونَ ﴿٢٠٤﴾

**206.** ನೀನು ನೋಡಿದೆಯಾ? ವರ್ಷಗಟ್ಟಲೆ ಕಾಲ ನಾವು ಇವರಿಗೆ ಇಹಲೋಕ ಜೀವನದ ಸುಖವನ್ನು ಅನುಭವಿಸಲು ಬಿಟ್ಟು,

أَفَرَأَيْتَ إِن مَّتَّعْنَاهُمْ سِنِينَ ﴿٢٠٥﴾

**207.** ಆ ಮೇಲೆ ಅವರಿಗೆ ಮುನ್ನೆಚ್ಚರಿಕೆ ನೀಡಲಾದ ಶಿಕ್ಷೆ ಬಂದೆರಗಿದರೆ,

ثُمَّ جَاءَهُم مَّا كَانُوا يُوعَدُونَ ﴿٢٠٦﴾





**208.** ಅವರು ಅನುಭೋಗಿಸುತ್ತಿದ್ದ ಸುಖ ಸಂಪತ್ತುಗಳು ಅವರಿಗೆ ಯಾವುದೇ ಪ್ರಯೋಜನಕ್ಕೂ ಬರಲಾರವು.

مَا أَغْنَىٰ عَنْهُم مَّا كَانُوا يُمَتَّعُونَ ﴿٢٠٧﴾

**209.** ಮುನ್ನೆಚ್ಚರಿಕೆ ನೀಡುವವರನ್ನು ಕಳುಹಿಸದೆ ನಾವು ಯಾವುದೇ ನಾಡನ್ನು ನಾಶಪಡಿಸಲಿಲ್ಲ.

وَمَا أَهْلَكْنَا مِن قَرْيَةٍ إِلَّا لَهَا مُنذِرُونَ ﴿٢٠٨﴾

**210.** ಇದು ಅವರಿಗೊಂದು ಪಾಠವಾಗಿದೆ. ನಾವೆಂದಿಗೂ ಅನ್ಯಾಯಗಾರರಲ್ಲ.

ذِكْرَىٰ وَمَا كُنَّا ظَالِمِينَ ﴿٢٠٩﴾

**211.** ಇದನ್ನು (ಖುರ್‌ಆನನ್ನು) ಶೈತಾನ್‌ಗಳು ಅವತೀರ್ಣಗೊಳಿಸಿದುದಲ್ಲ.

وَمَا تَنَزَّلَتْ بِهِ الشَّيَاطِينُ ﴿٢١٠﴾

**212.** ಅವರಿಗೆ ಅದಕ್ಕೆ ಯೋಗ್ಯತೆಯಿಲ್ಲ; ಅವರಿಗೆ ಅದರ ಸಾಮರ್ಥ್ಯವೂ ಇಲ್ಲ.

وَمَا يَنبَغِي لَهُمْ وَمَا يَسْتَطِيعُونَ ﴿٢١١﴾

**213.** ಖಂಡಿತವಾಗಿಯೂ ಅವರು ಅದನ್ನು (ಖುರ್‌ಆನನ್ನು) ಆಲಿಸುವುದರಿಂದ ತಡೆಯಲ್ಪಟ್ಟಿರುವರು.

إِنَّهُمْ عَنِ السَّمْعِ لَمَعْزُولُونَ ﴿٢١٢﴾

**214.** ಆದ್ದರಿಂದ, ನೀನು ಅಲ್ಲಾಹನ ಜೊತೆಗೆ ಬೇರೆ ದೇವರುಗಳನ್ನು ಕರೆದು ಪ್ರಾರ್ಥಿಸಬೇಡ. ಅನ್ಯಥಾ, ನೀನು ಶಿಕ್ಷಿಸಲ್ಪಡುವವರಲ್ಲಿ ಸೇರುವೆ.

فَلَا تَدْعُ مَعَ اللَّهِ إِلَٰهًا آخَرَ فَتَكُونَ مِنَ الْمُعَذَّبِينَ ﴿٢١٣﴾

**215.** ನೀನು (ಮೊದಲಿಗೆ) ನಿನ್ನ ನಿಕಟ ಬಂಧುಗಳಿಗೆ ಮುನ್ನೆಚ್ಚರಿಕೆ ನೀಡು.

وَأَنذِرْ عَشِيرَتَكَ الْأَقْرَبِينَ ﴿٢١٤﴾

**216.** ನಿನ್ನನ್ನು ಅನುಸರಿಸುವ ವಿಶ್ವಾಸಿಗಳಿಗೆ ನೀನು ನಿನ್ನ (ಪ್ರೀತಿಯ) ಬಾಹುಗಳನ್ನು ತಗ್ಗಿಸಿಕೊಡು.

وَاخْفِضْ جَنَاحَكَ لِمَنِ اتَّبَعَكَ مِنَ الْمُؤْمِنِينَ ﴿٢١٥﴾

**217.** ಅವರು ನಿನಗೆ ಅವಿಧೇಯತೆ ತೋರಿಸಿದರೆ, ನಿಮ್ಮ ವರ್ತನೆಗಳಿಂದ ನಾನು ಹೊಣೆಮುಕ್ತನಾಗಿದ್ದೇನೆ' ಎಂದು ಹೇಳು.

فَإِنْ عَصَوْكَ فَقُلْ إِنِّي بَرِيءٌ مِّمَّا تَعْمَلُونَ ﴿٢١٦﴾

**218.** ಹಾಗೂ ಪ್ರತಾಪಶಾಲಿಯೂ ಕಾರುಣ್ಯವಂತನೂ ಆದವನ (ಅಲ್ಲಾಹನ) ಮೇಲೆ ನೀನು ಭರವಸೆಯನ್ನಿಡು.

وَتَوَكَّلْ عَلَى الْعَزِيزِ الرَّحِيمِ ﴿٢١٨﴾

**219.** ನೀನು (ಪ್ರಾರ್ಥನೆಗಾಗಿ ಒಬ್ಬಂಟಿಗನಾಗಿ) ನಿಲ್ಲುವಾಗ ಅವನು ನಿನ್ನನ್ನು ಕಾಣುತ್ತಾನೆ.

الَّذِي يَرَاكَ حِينَ تَقُومُ ﴿٢١٩﴾

**220.** ಹಾಗೂ ಸಾಷ್ಟಾಂಗ ಪ್ರಣಾಮ ಮಾಡುವವರ ಮಧ್ಯೆ ನಿನ್ನ ಚಲನವಲನಗಳನ್ನು ಅವನು ವೀಕ್ಷಿಸುತ್ತಾನೆ.

وَتَقَلُّبَكَ فِي السَّاجِدِينَ ﴿٢٢٠﴾

**221.** ದಿಟವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ.

إِنَّهُ هُوَ السَّمِيعُ الْعَلِيمُ ﴿٢٢١﴾

**222.** ಯಾರ ಮೇಲೆ ಶೈತಾನ್‌ಗಳು ಇಳಿಯುತ್ತಾರೆಂದು ನಾನು ನಿಮಗೆ ತಿಳಿಸಿಕೊಡಲೇ?

هَلْ أُنَبِّئُكُمْ عَلَىٰ مَنْ تَنَزَّلُ الشَّيَاطِينُ ﴿٢٢٢﴾

**223.** ಪ್ರತಿಯೊಬ್ಬ ಮಹಾ ಸುಳ್ಳುಗಾರ ಮತ್ತು ಪಾಪಿಯ ಮೇಲೆ ಅವರು ಇಳಿಯುತ್ತಾರೆ.

تَنَزَّلُ عَلَىٰ كُلِّ أَفَّاكٍ أَثِيمٍ ﴿٢٢٣﴾

**224.** ಅವರು ಕಿವಿಗೊಟ್ಟು ಕೇಳುತ್ತಾರೆ; ಅವರಲ್ಲಿ ಹೆಚ್ಚಿನವರು ಸುಳ್ಳುಗಾರರು.

يُلْقُونَ السَّمْعَ وَأَكْثَرُهُمْ كَاذِبُونَ ﴿٢٢٤﴾

**225.** ಕವಿಗಳಾದರೋ - ಹಾದಿತಪ್ಪಿದವರು ಅವರನ್ನು ಅನುಸರಿಸುತ್ತಾರೆ.[356B]

وَالشُّعَرَاءُ يَتَّبِعُهُمُ الْغَاوُونَ ﴿٢٢٥﴾

**226.** ನೀನು ಕಾಣುವುದಿಲ್ಲವೇ? - ಗೊತ್ತು ಗುರಿಯಿಲ್ಲದೆ ಪ್ರತಿಯೊಂದು ಕಣಿವೆಯಲ್ಲೂ ಅವರು ಅಲೆದಾಡುತ್ತಾರೆ.

أَلَمْ تَرَ أَنَّهُمْ فِي كُلِّ وَادٍ يَهِيمُونَ ﴿٢٢٦﴾

**227.** ಹಾಗೂ ಅವರು ಮಾಡದಿರುವುದನ್ನು ಹೇಳುತ್ತಾರೆ.

وَأَنَّهُمْ يَقُولُونَ مَا لَا يَفْعَلُونَ ﴿٢٢٧﴾

356B. ಹೆಚ್ಚಿನ ಎಲ್ಲ ಕವಿಗಳು ತಮ್ಮದೇ ಆದ ಭ್ರಮಾಲೋಕದಲ್ಲಿ ವಿಹರಿಸುವವರಾಗಿದ್ದಾರೆ. ಹಾಗೆಯೇ ಅವರ ಸಂಗಡಿಗರು ಸಹ. ಆದರೆ ಸತ್ಯವಿಶ್ವಾಸಿಗಳಾದ ಕವಿಗಳು ಇದರಿಂದ ಹೊರತು ಎಂಬುದಾಗಿ 228ನೇ ವಚನದಲ್ಲಿ ಸ್ಪಷ್ಟಗೊಳಿಸಲಾಗಿದೆ. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿವ ಸಲ್ಲಂ)ರ ಸಂಗಡಿಗರಲ್ಲಿ ಸಹ ಕೆಲವು ಕವಿಗಳಿದ್ದರು. ಉದಾ: ಹಸ್ಸಾನ್ ಬಿನ್ ಸಾಬಿತ್ (ರಝಿಯಲ್ಲಾಹುಅನ್‌ಹು).





**228.** ಆದರೆ (ಕವಿಗಳಲ್ಲಿ) ಸತ್ಯವಿಶ್ವಾಸ ಹೊಂದಿದ, ಸತ್ಕರ್ಮ ನಿರತರಾದ, ಅಧಿಕವಾಗಿ ಅಲ್ಲಾಹನ ಸ್ಮರಣೆ ಮಾಡುವ ಮತ್ತು ದೌರ್ಜನ್ಯಕ್ಕೆ ಗುರಿಯಾದ ನಂತರ ಮಾತ್ರ ಪ್ರತಿಕಾರ ಮಾಡುವವರು ಇದಕ್ಕೆ ಹೊರತಾಗಿದ್ದಾರೆ. ದುಷ್ಕರ್ಮಿಗಳು ತಾವು ಯಾವ ತಾಣಕ್ಕೆ ಮರಳಿಸಲ್ಪಡುವರೆಂದು ಶೀಘ್ರದಲ್ಲೇ ತಿಳಿಯುವರು.

إِلَّا الَّذِينَ آمَنُوا وَعَمِلُوا الصَّالِحَاتِ وَذَكَرُوا اللَّهَ كَثِيرًا وَانْتَصَرُوا مِنْ بَعْدِ مَا ظُلِمُوا ۗ وَسَيَعْلَمُ الَّذِينَ ظَلَمُوا أَيَّ مُنْقَلَبٍ يَنْقَلِبُونَ ﴿٢٢٨﴾

سُوْرَةُ النَّمْلِ مَكِّيَّةٌ وَّهِيَ مَعَ الْبَسْمَلَةِ اَرْبَعٌ وَّتِسْعُوْنَ اٰيَةً وَّسَبْعَةُ رُكُوْعَاتٍ

# 27. ಅನ್ನಮ್ಲ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 94 ಆಯತ್‌ಗಳು ಹಾಗೂ 7 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ತ್ವಾ ಸೀನ್.**[357] **ಇವು ಖುರ್‌ಆನಿನ - ಸುಸ್ಪಷ್ಟ ವಾದ ಗ್ರಂಥದ - ವಚನಗಳಾಗಿವೆ.**

طٰسٓ تِلْكَ اٰيٰتُ الْقُرْاٰنِ وَ كِتَابٍ مُّبِيْنٍ ②

**3.** (ಇದು) **ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನ ಮತ್ತು ಶುಭ ಸಂದೇಶವಾಗಿದೆ.**

هُدًى وَّ بُشْرٰى لِلْمُؤْمِنِيْنَ ③

**4. ಅವರು ನಮಾಝನ್ನು ನಿಷ್ಠೆಯಿಂದ ನಿರ್ವಹಿಸು ವವರೂ ಝಕಾತ್ ನೀಡುವವರೂ ಪರಲೋಕದ ಬಗ್ಗೆ ದೃಢ ನಂಬಿಕೆಯುಳ್ಳವರೂ ಆಗಿದ್ದಾರೆ.**

الَّذِيْنَ يُقِيْمُوْنَ الصَّلٰوةَ وَ يُؤْتُوْنَ الزَّكٰوةَ وَهُمْ بِالْاٰخِرَةِ هُمْ يُوْقِنُوْنَ ④

**5. ಪರಲೋಕದ ಕುರಿತು ನಂಬಿಕೆಯಿಲ್ಲದವರಿಗೆ, ಅವರ ಕೃತ್ಯಗಳು ಸುಂದರವಾಗಿ ಕಾಣುವಂತೆ ನಾವು ಮಾಡಿ ದ್ದೇವೆ. ಹಾಗೆ ಅವರು ಅಂಧರಾಗಿ ಅಲೆದಾಡುತ್ತಾರೆ.**

اِنَّ الَّذِيْنَ لَا يُؤْمِنُوْنَ بِالْاٰخِرَةِ زَيَّنَّا لَهُمْ اَعْمَالَهُمْ فَهُمْ يَعْمَهُوْنَ ⑤

**6. ಅವರಿಗೆ ಯಾತನಾಮಯವಾದ ಶಿಕ್ಷೆ ಇದೆ. ಪರ ಲೋಕದಲ್ಲಿ ಅತಿ ದೊಡ್ಡ ನಷ್ಟವನ್ನು ಅನುಭವಿಸುವವರು ಅವರೇ ಆಗಿದ್ದಾರೆ.**

اُولٰٓئِكَ الَّذِيْنَ لَهُمْ سُوْٓءُ الْعَذَابِ وَهُمْ فِي الْاٰخِرَةِ هُمُ الْاَخْسَرُوْنَ ⑥

**7. ನಿಜವಾಗಿಯೂ ಬುದ್ಧಿಶಾಲಿಯೂ ಸರ್ವಜ್ಞನೂ ಆದವನಿಂದ** (ಅಲ್ಲಾಹನಿಂದ) **ಈ ಖುರ್‌ಆನ್ ನಿನಗೆ ನೀಡಲ್ಪಡುತ್ತಿದೆ.**

وَاِنَّكَ لَتُلَقَّى الْقُرْاٰنَ مِنْ لَّدُنْ حَكِيْمٍ عَلِيْمٍ ⑦

357. ತ್ವಾ=ತಾಹಿರ್ (ಪರಿಶುದ್ಧನು). ಸೀನ್=ಸಮೀಅ್ (ಎಲ್ಲ ಆಲಿಸುವವನು). ಪರಿಶುದ್ಧನೂ ಎಲ್ಲವನ್ನು ಆಲಿಸುವವನೂ ಆದ ಅಲ್ಲಾಹನು ಈ ಅಧ್ಯಾಯವನ್ನು ಅವತೀರ್ಣಗೊಳಿಸಿದ್ದಾನೆ ಎಂದು ತಾತ್ಪರ್ಯ. (ವಿವರಣೆಗಾಗಿ 2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8. ಮೂಸಾ ತನ್ನ ಕುಟುಂಬದವರೊಡನೆ ಹೇಳಿದ ಸಂದರ್ಭ: 'ನಾನು ಒಂದು ಬೆಂಕಿಯನ್ನು ಕಂಡಿದ್ದೇನೆ.**[357A] **ಅಲ್ಲಿಂದ ನಾನು ನಿಮಗೆ ಸಮಾಚಾರ ವನ್ನೇನಾದರೂ ತರುವೆನು - ಅಥವಾ ನೀವು ಬೆಂಕಿ ಕಾಯಿಸಿ ಕೊಳ್ಳಲಿಕ್ಕೋ ಸ್ಕರ ನಿಮಗೆ ಒಂದು ಪ್ರಜ್ವಲಿಸುವ ಕೆಂಡವನ್ನು ತರುವೆನು.'**

اِذْ قَالَ مُوْسٰى لِاَهْلِهٖٓ اِنِّيْٓ اٰنَسْتُ نَارًا ؕ سَاٰتِيْكُمْ مِّنْهَا بِخَبَرٍ اَوْ اٰتِيْكُمْ بِشِهَابٍ قَبَسٍ لَّعَلَّكُمْ تَصْطَلُوْنَ ⑧

**9. ಹಾಗೆ ಅವರು** (ಮೂಸಾ) **ಅದರ ಸಮೀಪಕ್ಕೆ ಬಂದಾಗ ಅವರನ್ನು ಕರೆದು ಹೀಗೆ ಹೇಳಲಾಯಿತು: 'ಅಗ್ನಿಯಲ್ಲಿರುವವನೂ**[357B] **ಅದರ ಸಮೀಪದಲ್ಲಿರು ವವನೂ ಅನುಗ್ರಹೀತನು. ಸರ್ವಲೋಕಗಳ ಪ್ರಭುವಾದ ಅಲ್ಲಾಹನು ಪರಿಶುದ್ಧನು.**

فَلَمَّا جَآءَهَا نُوْدِيَ اَنْۢ بُوْرِكَ مَنْ فِي النَّارِ وَمَنْ حَوْلَهَا ؕ وَسُبْحٰنَ اللّٰهِ رَبِّ الْعٰلَمِيْنَ ⑨

**10. 'ಎಲೈ ಮೂಸಾ, ನಾನು ಅಲ್ಲಾಹ್ ಪ್ರತಾಪ ವಂತನೂ ಬುದ್ಧಿಶಾಲಿಯೂ ಆಗಿದ್ದೇನೆ.**

يٰمُوْسٰٓى اِنَّهٗٓ اَنَا اللّٰهُ الْعَزِيْزُ الْحَكِيْمُ ⑩

**11. 'ನಿನ್ನ ಬಡಿಗೆಯನ್ನು ಕೆಳಗೆ ಎಸೆ'** (ಹಾಗೆ ಅವರು ಬಡಿಗೆಯನ್ನು ಕೆಳಗೆ ಎಸೆದರು). **ಆಗ ಅದೊಂದು ಹಾವಿನಂತೆ ಹರಿದಾಡಲಾರಂಭಿಸಿದುದನ್ನು ಅವರು ಕಂಡಾಗ ಬೆನ್ನುಹಾಕಿ ಓಡಿದರು; ತಿರುಗಿ ನೋಡಲಿಲ್ಲ.** (ಅಲ್ಲಾಹನು ಹೇಳಿದನು)**: 'ಎಲೈ ಮೂಸಾ, ನೀನು ಭಯ ಪಡಬೇಡ; ನಾನು** ನಿನ್ನ ಜೊತೆಯಲ್ಲಿದ್ದೇನೆ. **ನನ್ನ ಸನ್ನಿಧಿ ಯಲ್ಲಿ ಸಂದೇಶವಾಹಕರು ಭಯಪಡುವುದಿಲ್ಲ.**

وَاَلْقِ عَصَاكَ ؕ فَلَمَّا رَاٰهَا تَهْتَزُّ كَاَنَّهَا جَآنٌّ وَّلّٰى مُدْبِرًا وَّ لَمْ يُعَقِّبْ ؕ يٰمُوْسٰى لَا تَخَفْ اِنِّيْ لَا يَخَافُ لَدَيَّ الْمُرْسَلُوْنَ ⑪

**12. 'ಯಾರಾದರೂ ಅಕ್ರಮವೆಸಗಿದ ಅನಂತರ, ಕೆಡುಕಿನ ಬದಲಿಗೆ ಒಳಿತನ್ನು ಮಾಡಿದರೆ** (ಅವರನ್ನು) **ನಾನು ಅತಿಯಾಗಿ ಕ್ಷಮಿಸುವವನೂ ಕರುಣೆದೋರುವವನೂ ಆಗಿದ್ದೇನೆ.**

اِلَّا مَنْ ظَلَمَ ثُمَّ بَدَّلَ حُسْنًۢا بَعْدَ سُوْٓءٍ فَاِنِّيْ غَفُوْرٌ رَّحِيْمٌ ⑫

**13. 'ನಿನ್ನ ಕೈಯನ್ನು ನಿನ್ನ ಬಗಲ ಜೇಬಿನೊಳಗೆ ಹಾಕಿ ಹಿಡಿ. ಅದು ರೋಗ ರಹಿತವಾಗಿ ಬಿಳಿಯಾಗಿ ಹೊರ ಬರುವುದು.** (ಇದು) **ಫಿರ್‌ಔನ್ ಮತ್ತು ಅವನ ಜನರಿಗಿ**

وَاَدْخِلْ يَدَكَ فِيْ جَيْبِكَ تَخْرُجْ بَيْضَآءَ مِنْ غَيْرِ سُوْٓءٍ فِيْ تِسْعِ اٰيٰتٍ

357A. 20ನೇ ಅಧ್ಯಾಯ 11ನೇ ವಚನದ ಟಿಪ್ಪಣಿ ನೋಡಿರಿ.

357B. ಅಗ್ನಿಯಲ್ಲಿರುವವನು ಅಂದರೆ ದೇವ ಪ್ರೇಮದಲ್ಲಿ ಲೀನನಾಗಿರುವವನು ಎಂದರ್ಥ. ಇದು, ರೂಢಿಯಲ್ಲಿರುವ ಪ್ರೇಮಾಗ್ನಿ ಎಂಬ ಪ್ರಯೋಗದಂತೆ ಇದೆ.

ರುವ ಒಂಭತ್ತು ದೃಷ್ಟಾಂತಗಳಲ್ಲಿ ಸೇರುತ್ತದೆ. ಖಂಡಿತ ವಾಗಿಯೂ ಅವರು ಅತಿಕರ್ಮಿಗಳಾಗಿದ್ದಾರೆ.'

إِلَىٰ فِرْعَوْنَ وَقَوْمِهِۦٓ ۚ إِنَّهُمْ كَانُوا۟ قَوْمًا فَـٰسِقِينَ ﴿١٢﴾

**14.** ಆದರೆ, ಅವರ ಕಣ್ಣುತೆರೆಸುವಂತೆ ಮಾಡುವ ನಮ್ಮ ದೃಷ್ಟಾಂತಗಳು ಅವರ ಬಳಿಗೆ ಬಂದಾಗ, 'ಇದು ಬರೇ ಜಾದೂ ವಿದ್ಯೆ' ಎಂದು ಅವರು ಉದ್ಗರಿಸಿದರು.

فَلَمَّا جَآءَتْهُمْ ءَايَـٰتُنَا مُبْصِرَةً قَالُوا۟ هَـٰذَا سِحْرٌ مُّبِينٌ ﴿١٣﴾

**15.** ಅವರ ಹೃದಯಗಳಿಗೆ ಆ ದೃಷ್ಟಾಂತಗಳ ಬಗ್ಗೆ ಮನವರಿಕೆಯಾಗಿದ್ದರೂ ಅನ್ಯಾಯವಾಗಿಯೂ ಅಹಂಕಾರದಿಂದಲೂ ಅವರು ಅವುಗಳನ್ನು ತಿರಸ್ಕರಿಸಿದರು. ಕಿಡಿಗೇಡಿಗಳ ಅಂತ್ಯ ಹೇಗಾಯಿತೆಂದು ನೋಡು.

وَجَحَدُوا۟ بِهَا وَٱسْتَيْقَنَتْهَآ أَنفُسُهُمْ ظُلْمًا وَعُلُوًّا ۚ فَٱنظُرْ كَيْفَ كَانَ عَـٰقِبَةُ ٱلْمُفْسِدِينَ ﴿١٤﴾

**16.** ನಾವು ದಾವೂದ್ ಮತ್ತು ಸುಲೈಮಾನ್‌ರಿಗೆ ಜ್ಞಾನವನ್ನು ನೀಡಿದೆವು. ಅವರು ಹೇಳಿದರು: 'ಸತ್ಯ ವಿಶ್ವಾಸಿಗಳಾದ ತನ್ನ ಅನೇಕ ಭಕ್ತದಾಸರಿಗಿಂತ ನಮಗೆ ಉನ್ನತ ಸ್ಥಾನವನ್ನು ದಯಪಾಲಿಸಿರುವ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು ಸಲ್ಲುತ್ತವೆ.'

وَلَقَدْ ءَاتَيْنَا دَاوُۥدَ وَسُلَيْمَـٰنَ عِلْمًا ۖ وَقَالَا ٱلْحَمْدُ لِلَّهِ ٱلَّذِى فَضَّلَنَا عَلَىٰ كَثِيرٍ مِّنْ عِبَادِهِ ٱلْمُؤْمِنِينَ ﴿١٥﴾

**17.** ಸುಲೈಮಾನ್ ದಾವೂದರ ಉತ್ತರಾಧಿಕಾರಿ ಯಾದರು. ಅವರು (ಸುಲೈಮಾನ್) ಹೇಳಿದರು: 'ಎಲ್ಲೈ ಜನರೇ, ನಮಗೆ ಪಕ್ಷಿಗಳ[358] ಭಾಷೆಯನ್ನು ಕಲಿಸಲಾಗಿದೆ. (ಅಗತ್ಯವುಳ್ಳ) ಎಲ್ಲವನ್ನೂ ನಮಗೆ ನೀಡಲಾಗಿದೆ. ಇದು ನಿಜವಾಗಿಯೂ (ಅಲ್ಲಾಹನ) ಸ್ಪಷ್ಟವಾದ ಅನುಗ್ರಹವಾಗಿದೆ.'

وَوَرِثَ سُلَيْمَـٰنُ دَاوُۥدَ ۖ وَقَالَ يَـٰٓأَيُّهَا ٱلنَّاسُ عُلِّمْنَا مَنطِقَ ٱلطَّيْرِ وَأُوتِينَا مِن كُلِّ شَىْءٍ ۖ إِنَّ هَـٰذَا لَهُوَ ٱلْفَضْلُ ٱلْمُبِينُ ﴿١٦﴾

**18.** (ಒಮ್ಮೆ) ಸುಲೈಮಾನರ ಮುಂದೆ 'ಜಿನ್ನ್', 'ಇನ್ಸ್' ಮತ್ತು 'ಪಕ್ಷಿ'ಗಳಿಗೆ ಸೇರಿದ ಸೈನ್ಯಗಳು ಜಮಾಯಿಸಲ್ಪಟ್ಟವು. ಅನಂತರ ಅವರು ಹಲವು ವಿಭಾಗಗಳಾಗಿ ವಿಂಗಡಿಸಲ್ಪಟ್ಟರು. (ಆ ಬಳಿಕ ಹೊರಡಲು ಅವರಿಗೆ ಆದೇಶ ನೀಡಲಾಯಿತು.)

وَحُشِرَ لِسُلَيْمَـٰنَ جُنُودُهُۥ مِنَ ٱلْجِنِّ وَٱلْإِنسِ وَٱلطَّيْرِ فَهُمْ يُوزَعُونَ ﴿١٧﴾

358. ಪಕ್ಷಿಗಳು ಅಂದರೆ ಆಧ್ಯಾತ್ಮಿಕ ಗಗನದಲ್ಲಿ ಹಾರಾಡುವ ಮಹಾತ್ಮರುಗಳು (ದೇವ ಸಾಮೀಪ್ಯ ಲಭಿಸಿದವರು) ಎಂದು ತಾತ್ಪರ್ಯ.





**19.** ಹಾಗೆ ಅವರು 'ವಾದಿನ್ನಮ್ಲ್' (ನಮ್ಲ್ ಕಣಿವೆ)[359] ತಲಪಿದಾಗ, 'ನಮ್ಲ್' ಗೋತ್ರದ ಓರ್ವ ಸ್ತ್ರೀ ಹೇಳಿದಳು: 'ಎಲ್ಲೈ ನಮ್ಲ್ ಗೋತ್ರದವರೇ, ನೀವು ನಿಮ್ಮ ವಾಸಸ್ಥಳಕ್ಕೆ ತೆರಳಿರಿ. ಇಲ್ಲವಾದರೆ ಸುಲೈಮಾನರ ಸೈನ್ಯ ಅರಿವಿಲ್ಲದೆ ನಿಮ್ಮನ್ನು ಸದೆ ಬಡಿದು ನುಚ್ಚುನೂರು ಮಾಡಬಹುದು.'

حَتَّىٰٓ إِذَآ أَتَوْا۟ عَلَىٰ وَادِ ٱلنَّمْلِ قَالَتْ نَمْلَةٌ يَـٰٓأَيُّهَا ٱلنَّمْلُ ٱدْخُلُوا۟ مَسَـٰكِنَكُمْ لَا يَحْطِمَنَّكُمْ سُلَيْمَـٰنُ وَجُنُودُهُۥ وَهُمْ لَا يَشْعُرُونَ ﴿١٨﴾

**20.** ಆಗ ಅವರು ಆ ಮಾತು ಕೇಳಿ ನಕ್ಕು ಬಿಟ್ಟರು. ಅವರು ಹೇಳಿದರು : 'ನನ್ನ ಪ್ರಭೂ, ನೀನು ನನಗೂ ನನ್ನ ಮಾತಾಪಿತರಿಗೂ ನೀಡಿದ ಅನುಗ್ರಹಕ್ಕೆ ಕೃತಜ್ಞತೆ ಸಲ್ಲಿಸಲು ನನಗೆ ಸೌಭಾಗ್ಯವನ್ನು ದಯಪಾಲಿಸು. ನೀನು ಮೆಚ್ಚುವ ಸತ್ಕಾರ್ಯಗಳನ್ನು ನಾನು ಮಾಡುವಂತಾಗಲಿ. ನಿನ್ನ ಕರುಣೆಯಿಂದ ನಿನ್ನ ಸಜ್ಜನರಾದ ಭಕ್ತದಾಸರಲ್ಲಿ ನೀನು ನನ್ನನ್ನು ಸೇರಿಸು.'

فَتَبَسَّمَ ضَاحِكًا مِّن قَوْلِهَا وَقَالَ رَبِّ أَوْزِعْنِىٓ أَنْ أَشْكُرَ نِعْمَتَكَ ٱلَّتِىٓ أَنْعَمْتَ عَلَىَّ وَعَلَىٰ وَٰلِدَىَّ وَأَنْ أَعْمَلَ صَـٰلِحًا تَرْضَىٰهُ وَأَدْخِلْنِى بِرَحْمَتِكَ فِى عِبَادِكَ ٱلصَّـٰلِحِينَ ﴿١٩﴾

**21.** ಅವರು (ಸುಲೈಮಾನ್) ಪಕ್ಷಿದಳದ ಪರಿಶೀಲನೆ ನಡೆಸುತ್ತಾ ಹೇಳಿದರು: 'ನಾನೇಕೆ ಹುದ್‌ಹುದ್‌ನನ್ನು[360] ಕಾಣುವುದಿಲ್ಲ? ಅವನು (ಉದ್ದೇಶಪೂರ್ವಕ) ಗೈರು ಹಾಜರಾಗಿದ್ದಾನೆಯೇ?'

وَتَفَقَّدَ ٱلطَّيْرَ فَقَالَ مَا لِىَ لَآ أَرَى ٱلْهُدْهُدَ أَمْ كَانَ مِنَ ٱلْغَآئِبِينَ ﴿٢٠﴾

**22.** 'ಅವನು (ತನ್ನ ಗೈರುಹಾಜರಿಗೆ) ಸ್ಪಷ್ಟವಾದ ಕಾರಣವನ್ನು ನೀಡದಿದ್ದರೆ ಖಂಡಿತವಾಗಿಯೂ ನಾನು ಅವನನ್ನು ಕಠಿಣವಾಗಿ ಶಿಕ್ಷಿಸುವೆನು ಅಥವಾ ಕೊಂದು ಬಿಡುವೆನು.'

لَأُعَذِّبَنَّهُۥ عَذَابًا شَدِيدًا أَوْ لَأَا۟ذْبَحَنَّهُۥٓ أَوْ لَيَأْتِيَنِّى بِسُلْطَـٰنٍ مُّبِينٍ ﴿٢١﴾

359. ಡಮಾಸ್ಕಸ್‌ನಿಂದ ಹಿಜಾಝ್‌ಗೆ ಹೋಗುವ ದಾರಿಯಲ್ಲಿ ಸಮುದ್ರ ತೀರದಲ್ಲಿ 'ವಾದಿನ್ನಮ್ಲ್' ಇದೆ.

360. ಹಲವು ರೋಮನ್ ರಾಜರುಗಳ ಹೆಸರು 'ಹುದದ್' ಎಂದಾಗಿತ್ತು. ಅದನ್ನು ಅರಬರು ತಮ್ಮ ಭಾಷಾ ರೀತಿಗನುಸಾರವಾಗಿ 'ಹುದ್‌ಹುದ್' ಎಂದು ಹೇಳುತ್ತಿದ್ದರು. ಈ ಹೆಸರು ಇಸ್ಮಾಈಲ್ ಸಂತತಿಗಳಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿತ್ತು. ಪ್ರವಾದಿ ಸುಲೈಮಾನ್ (ಅಲೈಹಿಸ್ಸಲಾಂ) ರ ದರ್ಬಾರಿನಲ್ಲಿ ಒಬ್ಬ ಮುಖಂಡನ ಹೆಸರು 'ಹುದ್‌ಹುದ್' ಎಂದಾಗಿತ್ತು. ಹಝ್ರತ್ ಸುಲೈಮಾನ್ (ಅ) ಓರ್ವ ಇಂಜಿನಿಯರ್ ಆಗಿದ್ದ 'ಮೌಆಬ್' ಎಂಬವನನ್ನು ಅವನ ಕುತಂತ್ರಗಳ ಕಾರಣವಾಗಿ ಮರಣದಂಡನೆ ಶಿಕ್ಷೆಗೀಡು ಮಾಡಿದ್ದರು. ಆಗ ಈ 'ಹುದ್‌ಹುದ್', ತನ್ನನ್ನು ಸಹ ಕೊಲ್ಲಲಾಗುವುದೆಂದು ಹೆದರಿ ಈಜಿಪ್ಟ್‌ಗೆ ಪಲಾಯನ ಮಾಡಿದ್ದನು. ಅನಂತರ ಕ್ಷಮೆಕೋರಿ ಶಿಫಾರಸು ಮಾಡಿಸಿ ಮರಳಿ ಬಂದನು. (ಜ್ಯೂಯಿಷ್ ಎನ್‌ಸೈಕ್ಲೋಪೀಡಿಯಾ). ಪ್ರಾಯಶಃ ಹುದ್‌ಹುದ್ ಎಂಬುದು ಸರ್ವಸಾಮಾನ್ಯ ನಾಮವಾಗಿರಬಹುದು. ಕೆಲವು ನಾಯಕರುಗಳಿಗೂ ಈ ನಾಮ ಇದ್ದಿರಬಹುದು. ಹುದ್‌ಹುದ್ ಒಂದು ಪಕ್ಷಿಯ ಹೆಸರು ಸಹ ಆಗಿದೆ. ಆದ್ದರಿಂದಲೇ ಆ ಪಕ್ಷಿಯ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆಯೆಂದು ಕೆಲವು ವ್ಯಾಖ್ಯಾನಗಾರರು ತಪ್ಪಾಗಿ ಭಾವಿಸಿದರು.

**23. ಹಾಗೆ ಅವರು** (ಸುಲೈಮಾನ್) **ಸ್ವಲ್ಪ ಹೊತ್ತು ಕಾದರು.** (ಅಷ್ಟರಲ್ಲಿ ಹುದ್‌ಹುದ್ ಬಂದು) **ಹೇಳಿದನು: 'ನೀವು ತಿಳಿಯದೆ ಇದ್ದ ಒಂದು ಸಂಗತಿಯನ್ನು ನಾನು ತಿಳಿದು ಬಂದಿದ್ದೇನೆ. ನಾನು 'ಸಬಾ'ದಿಂದ ಪ್ರಾಮುಖ್ಯವಾದೊಂದು ಸಮಾಚಾರವನ್ನು ತಂದಿದ್ದೇನೆ.**

فَمَكَثَ غَيْرَ بَعِيْدٍ فَقَالَ اَحَطْتُّ بِمَا لَمْ تُحِطْ بِهٖ وَجِئْتُكَ مِنْ سَبَاٍۢ بِنَبَاٍ يَّقِيْنٍ ﴿٢٣﴾

**24. 'ಓರ್ವ ಮಹಿಳೆ ಅವರನ್ನು ಆಳುತ್ತಿರುವುದಾಗಿ ನಾನು ಕಂಡಿದ್ದೇನೆ. ಸಕಲ ಸವಲತ್ತುಗಳು ಆಕೆಗೆ ನೀಡಲ್ಪಟ್ಟಿವೆ. ಆಕೆಗೆ ಒಂದು ದೊಡ್ಡ ಸಿಂಹಾಸನ ಸಹ ಇದೆ.**

اِنِّيْ وَجَدْتُّ امْرَاَةً تَمْلِكُهُمْ وَاُوْتِيَتْ مِنْ كُلِّ شَيْءٍ وَّلَهَا عَرْشٌ عَظِيْمٌ ﴿٢٤﴾

**25. 'ಆಕೆ ಮತ್ತು ಆಕೆಯ ಜನರು ಅಲ್ಲಾಹನ ಬದಲಿಗೆ ಸೂರ್ಯನನ್ನು ಆರಾಧಿಸುವುದನ್ನು ನಾನು ಕಂಡಿದ್ದೇನೆ. ಶೈತಾನನು ಅವರ ಕರ್ಮಗಳನ್ನು ಅವರಿಗೆ ಚಲೋದಾಗಿ ತೋರುವಂತೆ ಮಾಡಿದ್ದಾನೆ. ಹಾಗೆ ಅವನು ಅವರನ್ನು ಸರಿಯಾದ ಮಾರ್ಗದಿಂದ ತಡೆದಿದ್ದಾನೆ. ಆದ್ದರಿಂದ ಅವರು ಸತ್ಪಥದಲ್ಲಿ ನಡೆಯುವುದಿಲ್ಲ.**

وَجَدْتُّهَا وَقَوْمَهَا يَسْجُدُوْنَ لِلشَّمْسِ مِنْ دُوْنِ اللّٰهِ وَزَيَّنَ لَهُمُ الشَّيْطٰنُ اَعْمَالَهُمْ فَصَدَّهُمْ عَنِ السَّبِيْلِ فَهُمْ لَا يَهْتَدُوْنَ ﴿٢٥﴾

**26. 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಗುಪ್ತವಾಗಿರುವವುಗಳನ್ನೆಲ್ಲ ಬಹಿರಂಗಪಡಿಸುವವನೂ ನೀವು ಬಚ್ಚಿಡುವ ಮತ್ತು ಬಹಿರಂಗಗೊಳಿಸುವ ಎಲ್ಲವನ್ನು ತಿಳಿಯುವವನೂ ಆದ ಅಲ್ಲಾಹನಿಗೆ ಅವರು ಸಾಷ್ಟಾಂಗ ಪ್ರಣಾಮ ಮಾಡದಂತೆ** (ಶೈತಾನನು ಅವರನ್ನು ತಡೆಯುತ್ತಾನೆ).'

اَلَّا يَسْجُدُوْا لِلّٰهِ الَّذِيْ يُخْرِجُ الْخَبْءَ فِي السَّمٰوٰتِ وَالْاَرْضِ وَيَعْلَمُ مَا تُخْفُوْنَ وَمَا تُعْلِنُوْنَ ﴿٢٦﴾

**27. 'ಅಲ್ಲಾಹ್! ಅವನ ಹೊರತು ಬೇರೆ ದೇವನಿಲ್ಲ. ಅವನು ಮಹಾ ಸಿಂಹಾಸನದ ಪ್ರಭುವಾಗಿದ್ದಾನೆ.'**

اَللّٰهُ لَآ اِلٰهَ اِلَّا هُوَ رَبُّ الْعَرْشِ الْعَظِيْمِ ﴿٢٧﴾

**28. ಅವರು** (ಸುಲೈಮಾನ್) **ಹೇಳಿದರು: 'ನೀನು ಸತ್ಯ ಹೇಳಿದ್ದೀಯಾ ಅಥವಾ ಸುಳ್ಳು ಹೇಳುವವರ ಪೈಕಿಯವನಾಗಿದ್ದೀಯಾ ಎಂದು ನಾವು ನೋಡುವೆವು.**

قَالَ سَنَنْظُرُ اَصَدَقْتَ اَمْ كُنْتَ مِنَ الْكٰذِبِيْنَ ﴿٢٨﴾

**29. 'ನನ್ನ ಈ ಪತ್ರದೊಂದಿಗೆ ನೀನು ಹೋಗಿ ಅದನ್ನು ಅವರ ಮುಂದಿಟ್ಟು ಹಿಂದೆ ಸರಿ. ಆಗ ಅವರು ಏನು ಉತ್ತರ ಕೊಡುತ್ತಾರೆಂದು ನೋಡು.'**

اِذْهَبْ بِّكِتٰبِيْ هٰذَا فَاَلْقِهْ اِلَيْهِمْ ثُمَّ تَوَلَّ عَنْهُمْ فَانْظُرْ مَاذَا يَرْجِعُوْنَ ﴿٢٩﴾





**30. ಆಕೆ** (ಆ ರಾಣಿ) **ಹೇಳಿದಳು: "ಎಲೈ ಮುಖಂಡರೇ, ಗೌರವಾರ್ಹವಾದೊಂದು ಪತ್ರವನ್ನು ನನಗೆ ತಲಪಿಸಲಾಗಿದೆ.**

قَالَتْ يٰٓاَيُّهَا الْمَلَؤُا اِنِّيْٓ اُلْقِيَ اِلَيَّ كِتٰبٌ كَرِيْمٌ ﴿٣٠﴾

**31. "ಇದು ಸುಲೈಮಾನರಿಂದ ಬಂದುದು. ಅದರ ಒಕ್ಕಣೆ ಹೀಗಿದೆ: 'ಪರಮ ದಯಾವಂತನೂ ಕಾರುಣ್ಯ ನಿಧಿಯೂ ಆದ ಅಲ್ಲಾಹನ ನಾಮದಿಂದ.**

اِنَّهٗ مِنْ سُلَيْمٰنَ وَاِنَّهٗ بِسْمِ اللّٰهِ الرَّحْمٰنِ الرَّحِيْمِ ﴿٣١﴾

**32. 'ನೀವು ನನ್ನ ವಿರುದ್ಧ ದುರಂಹಕಾರದಿಂದ ವರ್ತಿಸಬೇಡಿರಿ; ವಿಧೇಯರಾಗಿ ನನ್ನ ಬಳಿಗೆ ಬನ್ನಿರಿ.' "**

اَلَّا تَعْلُوْا عَلَيَّ وَاْتُوْنِيْ مُسْلِمِيْنَ ﴿٣٢﴾

**33. ಆಕೆ ಹೇಳಿದಳು: 'ಎಲೈ ಮುಖಂಡರೇ, ನನ್ನ ಕಾರ್ಯದ ಬಗ್ಗೆ ನನಗೆ ಸಲಹೆ ನೀಡಿರಿ. ನೀವು ನನ್ನ ಬಳಿ ಹಾಜರಾಗಿ ನಿಮ್ಮ ಸಲಹೆಯನ್ನು ನೀಡುವ ತನಕ ನಾನು ಯಾವ ವಿಚಾರದಲ್ಲೂ ಎಂದೂ ತೀರ್ಮಾನ ಮಾಡುವುದಿಲ್ಲ.'**

قَالَتْ يٰٓاَيُّهَا الْمَلَؤُا اَفْتُوْنِيْ فِيْٓ اَمْرِيْ ۚ مَا كُنْتُ قَاطِعَةً اَمْرًا حَتّٰى تَشْهَدُوْنِ ﴿٣٣﴾

**34. ಅವರು ಉತ್ತರಿಸಿದರು: 'ನಮಗೆ ಶಕ್ತಿ ಸಾಮರ್ಥ್ಯವಿದೆ. ನಾವು ಶೂರಯೋಧರು. ಆದರೆ ತೀರ್ಮಾನ ಮಾಡುವವರು ತಾವು. ಆದ್ದರಿಂದ ಏನು ಆದೇಶಿಸಬೇಕೆಂದು ತಾವೇ ಯೋಚಿಸಿರಿ.'**

قَالُوْا نَحْنُ اُولُوْا قُوَّةٍ وَّاُولُوْا بَاْسٍ شَدِيْدٍ ۙ وَّالْاَمْرُ اِلَيْكِ فَانْظُرِيْ مَاذَا تَاْمُرِيْنَ ﴿٣٤﴾

**35. ಆಕೆ ಹೇಳಿದಳು: 'ನಿಶ್ಚಯವಾಗಿಯೂ ರಾಜರು ಒಂದು ನಾಡನ್ನು ಪ್ರವೇಶಿಸಿದರೆ ಅದನ್ನು ನಾಶ ಮಾಡಿಬಿಡುತ್ತಾರೆ ಮತ್ತು ಅದರ ಉನ್ನತ ಮಟ್ಟದಲ್ಲಿರುವ ಜನರನ್ನು ಕೀಳ್ಮಟ್ಟಕ್ಕೆ ಇಳಿಸುತ್ತಾರೆ. ಹಾಗೆ ಮಾಡುವುದೇ ಅವರ ವರ್ತನೆಯಾಗಿದೆ.**

قَالَتْ اِنَّ الْمُلُوْكَ اِذَا دَخَلُوْا قَرْيَةً اَفْسَدُوْهَا وَجَعَلُوْٓا اَعِزَّةَ اَهْلِهَآ اَذِلَّةً ۚ وَكَذٰلِكَ يَفْعَلُوْنَ ﴿٣٥﴾

**36. 'ಅವರಿಗೆ** (ಸುಲೈಮಾನರಿಗೆ) **ನಾನೊಂದು ಕಾಣಿಕೆಯನ್ನು ಕಳುಹಿಸುತ್ತೇನೆ. ದೂತರು ಏನು** (ಉತ್ತರ) **ತರುತ್ತಾರೆಂದು ನೋಡುವೆನು.'**

وَاِنِّيْ مُرْسِلَةٌ اِلَيْهِمْ بِهَدِيَّةٍ فَنٰظِرَةٌۢ بِمَ يَرْجِعُ الْمُرْسَلُوْنَ ﴿٣٦﴾

**37. ಹಾಗೆ ಅವನು** (ರಾಣಿಯ ರಾಜದೂತ) **ಸುಲೈಮಾನರ ಬಳಿಗೆ ಬಂದಾಗ ಅವರು** (ಸುಲೈಮಾನ್)

فَلَمَّا جَآءَ سُلَيْمٰنَ قَالَ اَتُمِدُّوْنَنِ بِمَالٍ ۫

ಹೇಳಿದರು: 'ನೀವು ಧನದಿಂದ ನನಗೆ ನೆರವೀಯುತ್ತೀರೇನು? ಅಲ್ಲಾಹನು ನಿಮಗೆ ನೀಡಿದುದಕ್ಕಿಂತ ಉತ್ತಮವಾದುದನ್ನು ನನಗೆ ನೀಡಿದ್ದಾನೆ. ಆದರೆ ನೀವು ನಿಮ್ಮ ಕಾಣಿಕೆಯ ಬಗ್ಗೆ ಹೆಮ್ಮೆ ಪಡುತ್ತೀರಿ.

فَمَآ ءَاتَىٰنِۦَ ٱللَّهُ خَيْرٌ مِّمَّآ ءَاتَىٰكُم ج بَلْ أَنتُم بِهَدِيَّتِكُمْ تَفْرَحُونَ ٣٦

**38.** 'ಅವರ ಬಳಿಗೆ ಮರಳಿ ಹೋಗು. ಖಂಡಿತವಾಗಿಯೂ ಅವರಿಗೆ ಎದುರಿಸಲು ಅಸಾಧ್ಯವಾದ ಸೈನ್ಯದೊಂದಿಗೆ ನಾವು ಅವರ ಬಳಿಗೆ ಬರುವೆವು. ಅನಂತರ ನಾವು ಅವರನ್ನು ಹೀನ ಹಾಗೂ ಶರಣಾಗತ ಸ್ಥಿತಿಯಲ್ಲಿ ಅಲ್ಲಿಂದ ಹೊರ ಅಟ್ಟುವೆವು.'

ٱرْجِعْ إِلَيْهِمْ فَلَنَأْتِيَنَّهُم بِجُنُودٍ لَّا قِبَلَ لَهُم بِهَا وَلَنُخْرِجَنَّهُم مِّنْهَآ أَذِلَّةً وَهُمْ صَٰغِرُونَ ٣٧

**39.** (ಆ ಬಳಿಕ) **ಅವರು** (ಸುಲೈಮಾನ್) **ಕೇಳಿದರು: 'ಮುಖಂಡರೇ, ಅವರು ವಿಧೇಯರಾಗಿ ನನ್ನ ಬಳಿಗೆ ಬರುವುದಕ್ಕಿಂತ ಮುಂಚೆ ನಿಮ್ಮಲ್ಲಿ ಆಕೆಯ ಸಿಂಹಾಸನವನ್ನು ನನ್ನ ಬಳಿ ತರಬಲ್ಲವನು ಯಾರು?**[361]

قَالَ يَٰٓأَيُّهَا ٱلْمَلَؤُا۟ أَيُّكُمْ يَأْتِينِى بِعَرْشِهَا قَبْلَ أَن يَأْتُونِى مُسْلِمِينَ ٣٨

**40.** **ಜಿನ್ನ್‌ಗಳ ಪೈಕಿ ಬಲಿಷ್ಠನಾದ ಒಬ್ಬ ಮುಖಂಡ** (ಇಫ್‌ರೀತ್) **ಹೇಳಿದನು: 'ನೀವು ಇಲ್ಲಿಂದ ಹೋಗುವುದಕ್ಕೆ ಮುಂಚಿತ ವಾಗಿ ಅದನ್ನು ನಾನು ನಿಮಗೆ ತಂದೊಪ್ಪಿಸುವೆನು. ನನಗೆ ಅದಕ್ಕಿರುವ ಸಾಮರ್ಥ್ಯವಿದೆ. ಆದ್ದರಿಂದ ನಾನು ವಿಶ್ವಾಸಾರ್ಹನಾಗಿದ್ದೇನೆ.'**

قَالَ عِفْرِيتٌ مِّنَ ٱلْجِنِّ أَنَا۠ ءَاتِيكَ بِهِۦ قَبْلَ أَن تَقُومَ مِن مَّقَامِكَ ج وَإِنِّى عَلَيْهِ لَقَوِىٌّ أَمِينٌ ٣٩

**41.** (ಆಗ) **ದೈವಿಕ ಗ್ರಂಥದ ಪರಿಜ್ಞಾನವಿರುವ ಓರ್ವ ಹೇಳಿದನು: ನೀವು ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ನಾನು ಅದನ್ನು ನಿಮ್ಮ ಮುಂದೆ ತರುವೆನು.**[361A] **ಹಾಗೆ ಅವರು** (ಸುಲೈಮಾನ್) **ಅದನ್ನು ತನ್ನ ಮುಂದೆ ಕಂಡಾಗ ಉದ್ಗರಿಸಿದರು: 'ಇದು ನನ್ನ ಪ್ರಭುವಿನ ಅನುಗ್ರಹದಿಂದಾಗಿದೆ - ನಾನು ಕೃತಜ್ಞನೋ ಅಥವಾ ಕೃತಘ್ನನೋ ಎಂದು ಪರೀಕ್ಷಿಸಲಿಕ್ಕೋಸ್ಕರವಾಗಿದೆ ಇದು. ಯಾರು**

قَالَ ٱلَّذِى عِندَهُۥ عِلْمٌ مِّنَ ٱلْكِتَٰبِ أَنَا۠ ءَاتِيكَ بِهِۦ قَبْلَ أَن يَرْتَدَّ إِلَيْكَ طَرْفُكَ ۚ فَلَمَّا رَءَاهُ مُسْتَقِرًّا عِندَهُۥ قَالَ هَٰذَا مِن فَضْلِ رَبِّى لِيَبْلُوَنِىٓ

361. ಆಕೆಯ ಸಿಂಹಾಸನಕ್ಕೆ ಹೋಲುವ ಒಂದು ಸಿಂಹಾಸನವನ್ನು ನಿರ್ಮಿಸಿ ಕೊಡಬೇಕೆಂದು ತಾತ್ಪರ್ಯ.

361A. ಈ ಘಟನೆ ನಡೆದುದು ಯಹೂದ್ಯ ರಾಜ್ಯದಲ್ಲಾದ್ದರಿಂದ ಯಹೂದ್ಯ ಕುಶಲಕರ್ಮಿಗಳು ತನಗೆ ನೆರವು ನೀಡುವರೆಂದೂ ತನಗೋಸ್ಕರ ಅತಿ ಶೀಘ್ರವಾಗಿ ಕಾರ್ಯಶೀಲರಾಗಿ 'ಇಫ್‌ರೀತ್'ಗಿಂತ ಮುಂಚಿತವಾಗಿ ಸಿಂಹಾಸನವನ್ನು ತಯಾರಿಸಲು ಸಾಧ್ಯವೆಂದೂ ಆ ಹೀಬ್ರೂ ಪಂಡಿತನಿಗೆ ಭರವಸೆ ಇದ್ದಿತು. ತಾನು ಅತಿ ಶೀಘ್ರವಾಗಿ ಸಿಂಹಾಸನವನ್ನು ತಲಪಿಸುವೆನೆಂದಾಗಿತ್ತು ಆತನು ಹೇಳಿದುದರ ತಾತ್ಪರ್ಯ. "ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ" ಎಂಬ ಪ್ರಯೋಗ ಹೆಚ್ಚಿನ ಭಾಷೆಗಳಲ್ಲಿವೆ.





**ಕೃತಜ್ಞತೆ ಸೂಚಿಸುತ್ತಾನೋ ಆತನು ತನ್ನ ಸ್ವಂತ ಒಳಿತಿಗಾಗಿಯೇ ಕೃತಜ್ಞತೆ ಸೂಚಿಸುತ್ತಾನೆ. ಯಾರಾದರೂ ಕೃತಘ್ನತೆ ತೋರಿಸಿದರೆ,** (ಅವನು ತಿಳಿದುಕೊಳ್ಳಲಿ) **ನಿಶ್ಚಯವಾಗಿಯೂ ನನ್ನ ಪ್ರಭು ಸ್ವಯಂಪೂರ್ಣನೂ ಔದಾರ್ಯವಂತನೂ ಆಗಿದ್ದಾನೆ.'**

ءَأَشْكُرُ أَمْ أَكْفُرُ ۖ وَمَن شَكَرَ فَإِنَّمَا يَشْكُرُ لِنَفْسِهِۦ ج وَمَن كَفَرَ فَإِنَّ رَبِّى غَنِىٌّ كَرِيمٌ ٤٠

**42.** **ಅವರು** (ಸುಲೈಮಾನ್) **ಹೇಳಿದ್ದರು: 'ಆಕೆಯ ಸಿಂಹಾಸನ ಸಾಮಾನ್ಯವಾದುದೆಂದು ಆಕೆಗೆ ತೋಚುವಂತೆ ಮಾಡಿರಿ.**[361B] **ಆಕೆ ಸತ್ಪಥವನ್ನು ಪಡೆಯುತ್ತಾಳೋ ಅಥವಾ ಸತ್ಪಥವನ್ನು ಪಡೆಯದವರಲ್ಲಿ ಸೇರುತ್ತಾಳೋ ಎಂದು ನೋಡೋಣ'.**

قَالَ نَكِّرُوا۟ لَهَا عَرْشَهَا نَنظُرْ أَتَهْتَدِىٓ أَمْ تَكُونُ مِنَ ٱلَّذِينَ لَا يَهْتَدُونَ ٤١

**43.** **ಆಕೆ ಬಂದಾಗ, 'ನಿನ್ನ ಸಿಂಹಾಸನ ಹೀಗೆಯೇ ಇದೆಯೇ?' ಎಂದು ಕೇಳಲಾಯಿತು. ಆಕೆ ಹೇಳಿದಳು: 'ಇದು ಅದರಂತೆಯೇ ಇದೆ. ನಮಗೆ ಇದಕ್ಕಿಂತ ಮುಂಚೆಯೇ ವಿವರ ಲಭಿಸಿದೆ. ನಾವು ವಿಧೇಯರಾಗಿದ್ದೇವೆ.'**

فَلَمَّا جَآءَتْ قِيلَ أَهَٰكَذَا عَرْشُكِ ۖ قَالَتْ كَأَنَّهُۥ هُوَ ج وَأُوتِينَا ٱلْعِلْمَ مِن قَبْلِهَا وَكُنَّا مُسْلِمِينَ ٤٢

**44.** **ಅಲ್ಲಾಹನನ್ನು ಬಿಟ್ಟು ಆಕೆ ಏನನ್ನು ಆರಾಧಿಸುತ್ತಿದ್ದಳೋ ಅದರಿಂದ ಆಕೆಯನ್ನು ಅವರು** (ಸುಲೈಮಾನ್) **ತಡೆದರು. ನಿಸ್ಸಂದೇಹವಾಗಿಯೂ ಆಕೆ ಅವಿಶ್ವಾಸಿ ಜನಾಂಗದವಳಾಗಿದ್ದಳು.**

وَصَدَّهَا مَا كَانَت تَّعْبُدُ مِن دُونِ ٱللَّهِ ۖ إِنَّهَا كَانَتْ مِن قَوْمٍ كَٰفِرِينَ ٤٣

**45.** **'ಅರಮನೆಯನ್ನು ಪ್ರವೇಶಿಸು' ಎಂದು ಆಕೆಯೊಡನೆ ಹೇಳಲಾಯಿತು. ಆಕೆ ಅದನ್ನು ಕಂಡಾಗ ಅದು ದೊಡ್ಡ ಒಂದು ಸರೋವರವೆಂದು ಭಾವಿಸಿ ಗಾಬರಿಗೊಂಡಳು.**[361C] **ಆಗ ಅವರು** (ಸುಲೈಮಾನ್) **ಹೇಳಿದರು: 'ಇದು ನುಣುಪಾದ ಗಾಜು ಹಾಸಲಾದ ಅರಮನೆಯಾಗಿದೆ.' ಆಗ ಆಕೆ ಹೇಳಿದಳು: 'ನನ್ನ ಪ್ರಭೂ, ನಿಶ್ಚಯವಾಗಿಯೂ ನಾನು ನನ್ನ ಆತ್ಮಕ್ಕೆ ದ್ರೋಹವೆಸಗಿರುವೆನು. ನಾನು ಸುಲೈಮಾನ್‌ರೊಂದಿಗೆ ಸರ್ವಲೋಕಗಳ ಪ್ರಭುವಾದ ಅಲ್ಲಾಹನಿಗೆ ಶರಣಾಗುತ್ತೇನೆ'.**[362]

قِيلَ لَهَا ٱدْخُلِى ٱلصَّرْحَ ج فَلَمَّا رَأَتْهُ حَسِبَتْهُ لُجَّةً وَكَشَفَتْ عَن سَاقَيْهَا ۚ قَالَ إِنَّهُۥ صَرْحٌ مُّمَرَّدٌ مِّن قَوَارِيرَ ۗ قَالَتْ رَبِّ إِنِّى ظَلَمْتُ نَفْسِى وَأَسْلَمْتُ مَعَ سُلَيْمَٰنَ لِلَّهِ رَبِّ ٱلْعَٰلَمِينَ ٤٤

361B. ಅಂದರೆ ಆಕೆಯ ಸಿಂಹಾಸನಕ್ಕಿಂತಲೂ ಮಿಗಿಲಾದ ಸಿಂಹಾಸನವನ್ನು ತಯಾರಿಸಿ ತನ್ನಿರಿ ಎಂದರ್ಥ.

361C. ಈ ವಚನದಲ್ಲಿರುವ 'ಕಶಫತ್ ಅನ್ ಸಾಖೈಹಾ' ಎಂಬುದಕ್ಕೆ 'ಆಕೆ ತನ್ನ ಕಣಕಾಲುಗಳ ಬಟ್ಟೆಯನ್ನು ಮೇಲೆತ್ತಿದಳು' ಎಂದು ಸಹ ಅರ್ಥವಿದೆ.

**46. ನಾವು ಸಮೂದ್ ಗೋತ್ರದ ಬಳಿಗೆ ಅವರ ಸಹೋದರ ಸಾಲಿಹ್‌ರನ್ನು ಕಳುಹಿಸಿದೆವು. 'ನೀವು ಅಲ್ಲಾಹನನ್ನು ಆರಾಧಿಸಿರಿ' ಎಂದು** ಅವರು ಹೇಳಿದರು. **ಆಗ ಅವರು ಅದೋ ಪರಸ್ಪರ ಜಗಳಾಡುವ ಎರಡು ಪಂಗಡಗಳಾಗಿ ಬಿಟ್ಟರು.**

وَلَقَدْ أَرْسَلْنَا إِلَىٰ ثَمُودَ أَخَاهُمْ صَالِحًا أَنِ اعْبُدُوا اللَّهَ فَإِذَا هُمْ فَرِيقَانِ يَخْتَصِمُونَ ﴿٤٦﴾

**47. ಅವರು** (ಸಾಲಿಹ್) **ಹೇಳಿದರು: 'ಎಲೈ ನನ್ನ ಜನರೇ, ಒಳಿತಿಗೆ ಮುಂಚಿತವಾಗಿ ಕೆಡುಕಿಗೆ ನೀವೇಕೆ ತ್ವರೆ ಪಡಿಸುತ್ತೀರಿ? ನಿಮಗೆ ಕರುಣೆ ತೋರಿಸಲಿಕ್ಕಾಗಿ ನೀವೇಕೆ ಅಲ್ಲಾಹನೊಡನೆ ಪಾಪವಿಮುಕ್ತಿಗೋಸ್ಕರ ಯಾಚಿಸುವುದಿಲ್ಲ ?'**

قَالَ يَا قَوْمِ لِمَ تَسْتَعْجِلُونَ بِالسَّيِّئَةِ قَبْلَ الْحَسَنَةِ ۖ لَوْلَا تَسْتَغْفِرُونَ اللَّهَ لَعَلَّكُمْ تُرْحَمُونَ ﴿٤٧﴾

**48. ಅವರು ಹೇಳಿದರು: 'ನಿನ್ನಿಂದಲೂ ನಿನ್ನ ಜೊತೆಗಿರುವವರಿಂದಲೂ ನಾವು ಅಪಶಕುನವನ್ನೇ ದರ್ಶಿಸುತ್ತೇವೆ.' ಅವರು** (ಸಾಲಿಹ್) **ಹೇಳಿದರು: 'ನಿಮ್ಮ ಅಪಶಕುನಕ್ಕೆ** ಕಾರಣ **ಅಲ್ಲಾಹನ ಬಳಿಯಿದೆ. ವಾಸ್ತವವೇನೆಂದರೆ ನೀವು ಪರೀಕ್ಷೆಗೆ ಗುರಿಯಾದ ಒಂದು ಜನತೆಯಾಗಿದ್ದೀರಿ.'**

قَالُوا اطَّيَّرْنَا بِكَ وَبِمَن مَّعَكَ ۚ قَالَ طَائِرُكُمْ عِندَ اللَّهِ ۖ بَلْ أَنتُمْ قَوْمٌ تُفْتَنُونَ ﴿٤٨﴾

**49. ನಾಡಿನಲ್ಲಿ ಶಾಂತಿಭಂಗ ಮಾಡುವ ಒಂಭತ್ತು ಮಂದಿ** (ಶತ್ರು ನೇತಾರರು) **ಆ ಪಟ್ಟಣದಲ್ಲಿದ್ದರು. ಅವರು ಒಳಿತು ಮಾಡುತ್ತಿರಲಿಲ್ಲ.**

وَكَانَ فِي الْمَدِينَةِ تِسْعَةُ رَهْطٍ يُفْسِدُونَ فِي الْأَرْضِ وَلَا يُصْلِحُونَ ﴿٤٩﴾

**50. ಅವರು** (ಪರಸ್ಪರ) **ಹೇಳಿದರು: 'ಅಲ್ಲಾಹನ ನಾಮದಲ್ಲಿ ಹೀಗೆ ಪ್ರಮಾಣ ಮಾಡೋಣ: ಖಂಡಿತವಾಗಿಯೂ ಅವನನ್ನೂ** (ಸಾಲಿಹ್‌ರನ್ನೂ) **ಅವನ ಕುಟುಂಬದವರನ್ನೂ ರಾತ್ರಿ ಹೊತ್ತಿನಲ್ಲಿ ನಾವು ಕೊಲೆ ಮಾಡುವೆವು. ಆ ಮೇಲೆ ಅವನ ವಾರೀಸುದಾರನೊಡನೆ,**[362A] **ಅವನ ಕುಟುಂಬದ ನಾಶಕ್ಕೆ ನಾವು ಸಾಕ್ಷಿಗಳಲ್ಲ; ನಿಶ್ಚಯವಾಗಿಯೂ ನಾವು ಸತ್ಯವನ್ನೇ ನುಡಿಯುತ್ತೇವೆ ಎಂದು ಹೇಳುವೆವು.'**

قَالُوا تَقَاسَمُوا بِاللَّهِ لَنُبَيِّتَنَّهُ وَأَهْلَهُ ثُمَّ لَنَقُولَنَّ لِوَلِيِّهِ مَا شَهِدْنَا مَهْلِكَ أَهْلِهِ وَإِنَّا لَصَادِقُونَ ﴿٥٠﴾

362. ಪ್ರವಾದಿ ಸುಲೈಮಾನ್ (ಅ) ನೀರಿನ ಮೇಲೆ ನುಣುಪಾದ ಗಾಜನ್ನು ಹಾಸಿ ಮಾಡಿದ ಈ ವ್ಯವಸ್ಥೆ ರಾಣಿಗೆ ನಿಜ ಸಂಗತಿಯನ್ನು ಮನಗಾಣಿಸಿಕೊಡಲು ನೆರವಾಯಿತು. ಆಕೆ ತನ್ನ ತಪ್ಪನ್ನು ತಿಳಿದುಕೊಂಡಳು. ಗಾಜಿನ ಅಡಿಭಾಗದಲ್ಲಿ ನೀರು ಗೋಚರಿಸಿದ ರೀತಿಯಲ್ಲಿ ಸೂರ್ಯನ ಪ್ರಕಾಶ ಅಲ್ಲಾಹನ ಕಡೆಯಿಂದಾಗಿದೆ. ಆದ್ದರಿಂದ ಸೂರ್ಯನನ್ನಲ್ಲ; ಏಕದೇವನಾದ ಅಲ್ಲಾಹನನ್ನು ಆರಾಧಿಸಬೇಕೆಂದು ಆಕೆ ಮನವರಿಕೆ ಮಾಡಿದಳು.





**51. ಹಾಗೆ ಅವರು ಒಂದು ತಂತ್ರ ಹೂಡಿದರು. ನಾವು ಸಹ ಒಂದು ತಂತ್ರ ಹೂಡಿದೆವು. ಆದರೆ ಅದನ್ನು ಅವರಿಗೆ ಗ್ರಹಿಸಲಾಗಲಿಲ್ಲ.**

وَمَكَرُوا مَكْرًا وَمَكَرْنَا مَكْرًا وَهُمْ لَا يَشْعُرُونَ ﴿٥١﴾

**52. ಅವರ ತಂತ್ರದ ಅಂತ್ಯ ಹೇಗಾಯಿತೆಂದು ನೋಡು! ನಾವು ಅವರನ್ನೂ ಅವರ ಜನತೆಯನ್ನೂ ಸಂಪೂರ್ಣವಾಗಿ ನಾಶಮಾಡಿ ಬಿಟ್ಟೆವು.**

فَانظُرْ كَيْفَ كَانَ عَاقِبَةُ مَكْرِهِمْ أَنَّا دَمَّرْنَاهُمْ وَقَوْمَهُمْ أَجْمَعِينَ ﴿٥٢﴾

**53. ಅವು ಅವರ ಮನೆಗಳು; ನಿರ್ಜನವಾಗಿಬಿಟ್ಟಿವೆ- ಅವರು ಅಕ್ರಮವೆಸಗಿದ ಕಾರಣದಿಂದ. ನಿಶ್ಚಯವಾಗಿಯೂ ಅದರಲ್ಲಿ ತಿಳುವಳಿಕೆಯುಳ್ಳ ಜನರಿಗೆ ದೃಷ್ಟಾಂತವಿದೆ.**

فَتِلْكَ بُيُوتُهُمْ خَاوِيَةً بِمَا ظَلَمُوا ۗ إِنَّ فِي ذَٰلِكَ لَآيَةً لِّقَوْمٍ يَعْلَمُونَ ﴿٥٣﴾

**54. ವಿಶ್ವಾಸ ಕೈಗೊಂಡು ದೇವಭಯವಿರಿಸಿ ಕೊಂಡವರನ್ನು ನಾವು ರಕ್ಷಿಸಿದೆವು.**

وَأَنجَيْنَا الَّذِينَ آمَنُوا وَكَانُوا يَتَّقُونَ ﴿٥٤﴾

**55. ಲೂತ್‌ರನ್ನು ಸಹ** (ನಾವು ಪ್ರವಾದಿಯಾಗಿ ಕಳುಹಿಸಿದೆವು). **ಅವರು ತನ್ನ ಜನತೆಗೆ ಹೇಳಿದ ಸಂದರ್ಭ: 'ನೀವು** (ಕೆಡುಕನ್ನು) **ಕಾಣುತ್ತಿದ್ದರೂ ಅಶ್ಲೀಲ ಕೃತ್ಯವನ್ನು ಮಾಡುತ್ತಿದ್ದೀರಲ್ಲವೇ?**

وَلُوطًا إِذْ قَالَ لِقَوْمِهِ أَتَأْتُونَ الْفَاحِشَةَ وَأَنتُمْ تُبْصِرُونَ ﴿٥٥﴾

**56. 'ಏನು! ನೀವು ಸ್ತ್ರೀಯರನ್ನು ಬಿಟ್ಟು ಕಾಮ ತೃಪ್ತಿಗಾಗಿ ಪುರುಷರನ್ನು ಸಮೀಪಿಸುತ್ತಿದ್ದೀರಾ? ನಿಜವಾಗಿ ಯೂ ನೀವು ಅವಿವೇಕಿ ಜನರಾಗಿದ್ದೀರಿ'.**

أَئِنَّكُمْ لَتَأْتُونَ الرِّجَالَ شَهْوَةً مِّن دُونِ النِّسَاءِ ۚ بَلْ أَنتُمْ قَوْمٌ تَجْهَلُونَ ﴿٥٦﴾

**57. ಆಗ ಅವರ** (ಲೂತ್‌ರ) **ಜನತೆಯ ಪ್ರತಿಕ್ರಿಯೆ - 'ನೀವು ಲೂತ್‌ನ ಕುಟುಂಬವನ್ನು**[362B] **ಊರಿನಿಂದ ಹೊರಗೆ ಅಟ್ಟಿರಿ. ಅವರು ದೊಡ್ಡ ಪಾವಿತ್ರ್ಯವನ್ನು ತೋರ್ಪಡಿಸುವ ಜನರಾಗಿದ್ದಾರೆ!' ಎಂದು ಹೇಳುವುದು ಮಾತ್ರವಾಗಿತ್ತು.**

فَمَا كَانَ جَوَابَ قَوْمِهِ إِلَّا أَن قَالُوا أَخْرِجُوا آلَ لُوطٍ مِّن قَرْيَتِكُمْ ۖ إِنَّهُمْ أُنَاسٌ يَتَطَهَّرُونَ ﴿٥٧﴾

362A. ಮೂಲದಲ್ಲಿ "ವಲಿಯ್ಯ್" ಎಂದಿದೆ. ರಕ್ಷಕ, ಸಹಾಯಕ, ಮಿತ್ರ ಎಂದೆಲ್ಲ ಇದಕ್ಕೆ ಅರ್ಥವಿದೆ. ಒಬ್ಬನು ಕೊಲೆಯಾದರೆ ಅದಕ್ಕೆ ಪರಿಹಾರ ಕೇಳುವವ ಎಂದು ಸಹ ಇದಕ್ಕೆ ಅರ್ಥವಿದೆ.

362B. ಇದರಲ್ಲಿ ಅನುಯಾಯಿಗಳೂ ಸೇರುತ್ತಾರೆ.

**58.** ನಾವು ಅವರನ್ನೂ (ಲೂತ್‌ರನ್ನೂ) ಅವರ ಕುಟುಂಬವನ್ನೂ ರಕ್ಷಿಸಿದೆವು - ಲೂತರ ಪತ್ನಿಯನ್ನು ಹೊರತುಪಡಿಸಿ. ಅವಳು ಹಿಂದಕ್ಕೆ ಸರಿದು ನಿಂತವರೊಂದಿಗೆ ಸೇರಿದವಳೆಂದು ನಾವು ಗಣಿಸಿದೆವು.

فَأَنجَيْنَٰهُ وَأَهْلَهُۥٓ إِلَّا ٱمْرَأَتَهُۥ قَدَّرْنَٰهَا مِنَ ٱلْغَٰبِرِينَ ﴿٥٨﴾

**59.** ನಾವು ಅವರ ಮೇಲೊಂದು ಮಳೆಯನ್ನು ಸುರಿಸಿದೆವು. ಮುನ್ನೆಚ್ಚರಿಕೆ ನೀಡಲ್ಪಟ್ಟವರಿಗೆ ಆ ಮಳೆ ಬಹಳ ಹಾನಿಕರವಾಗಿತ್ತು.

وَأَمْطَرْنَا عَلَيْهِم مَّطَرًا ۖ فَسَآءَ مَطَرُ ٱلْمُنذَرِينَ ﴿٥٩﴾

**60.** ಹೇಳು: 'ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ. ಅವನ ವರಿಷ್ಠರಾದ ಭಕ್ತದಾಸರ ಮೇಲೆ ಶಾಂತಿಯಿರಲಿ.' ಅಲ್ಲಾಹನು ಶ್ರೇಷ್ಠನೋ ಅಥವಾ (ಅಲ್ಲಾಹನಿಗೆ) ಸಹಭಾಗಿಯಾಗಿ ಅವರು ಕಲ್ಪಿಸುವವುಗಳೋ?

قُلِ ٱلْحَمْدُ لِلَّهِ وَسَلَٰمٌ عَلَىٰ عِبَادِهِ ٱلَّذِينَ ٱصْطَفَىٰٓ ۗ ءَآللَّهُ خَيْرٌ أَمَّا يُشْرِكُونَ ﴿٦٠﴾

**61.** ಅಥವಾ (ಎಲೈ ಜನರೇ ಹೇಳಿರಿ) - ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿ ನಿಮಗೆ ಆಕಾಶದಿಂದ ಜಲವನ್ನು ಸುರಿಸಿಕೊಟ್ಟವನು ಯಾರು? ಅನಂತರ ಆ ಮೂಲಕ ನಾವು ಮನೋಹರವಾದ ತೋಟಗಳು ಬೆಳೆಯುವಂತೆ ಮಾಡಿದೆವು. ಅವುಗಳ ಮರಗಳು ಬೆಳೆಯುವಂತೆ ಮಾಡಲು ನಿಮಗೆ ಸಾಮರ್ಥ್ಯವಿರಲಿಲ್ಲ. ಅಲ್ಲಾಹನ ಜೊತೆಯಲ್ಲಿ (ಅವನಿಗೆ ಸಹಭಾಗಿಯಾಗಿ) ಬೇರೆ ದೇವನಿದ್ದಾನೆಯೇ? ಇಲ್ಲ. ಅವರು (ಸತ್ಯಪಥವನ್ನು ಬಿಟ್ಟು) ದೂರಹೋಗುವ ಜನರಾಗಿದ್ದಾರೆ.

أَمَّنْ خَلَقَ ٱلسَّمَٰوَٰتِ وَٱلْأَرْضَ وَأَنزَلَ لَكُم مِّنَ ٱلسَّمَآءِ مَآءً فَأَنۢبَتْنَا بِهِۦ حَدَآئِقَ ذَاتَ بَهْجَةٍ مَّا كَانَ لَكُمْ أَن تُنۢبِتُوا۟ شَجَرَهَآ ۗ أَءِلَٰهٌ مَّعَ ٱللَّهِ ۚ بَلْ هُمْ قَوْمٌ يَعْدِلُونَ ﴿٦١﴾

**62.** ಅಥವಾ - ಭೂಮಿಯನ್ನು ವಾಸಸ್ಥಳವನ್ನಾಗಿ ಮಾಡಿದವನೂ ಅದರ ಮಧ್ಯೆ ನದಿಗಳು ಹರಿಯುವಂತೆ ಮಾಡಿದವನೂ ಅದಕ್ಕೋಸ್ಕರ ಸ್ಥಿರ ಪರ್ವತಗಳನ್ನು ಸ್ಥಾಪಿಸಿದವನೂ ಎರಡು ಸಮುದ್ರಗಳ ಮಧ್ಯೆ ಒಂದು ತಡೆಗಟ್ಟು ಉಂಟುಮಾಡಿದವನೂ ಯಾರು? ಅಲ್ಲಾಹನ ಜೊತೆಯಲ್ಲಿ ಬೇರೆ ದೇವನಿದ್ದಾನೆಯೇ? ಆದರೆ ವಾಸ್ತವಿಕವಾಗಿ ಅವರಲ್ಲಿ ಹೆಚ್ಚಿನವರು ತಿಳುವಳಿಕೆಯಿಲ್ಲದವರಾಗಿದ್ದಾರೆ.

أَمَّن جَعَلَ ٱلْأَرْضَ قَرَارًا وَجَعَلَ خِلَٰلَهَآ أَنْهَٰرًا وَجَعَلَ لَهَا رَوَٰسِىَ وَجَعَلَ بَيْنَ ٱلْبَحْرَيْنِ حَاجِزًا ۗ أَءِلَٰهٌ مَّعَ ٱللَّهِ ۚ بَلْ أَكْثَرُهُمْ لَا يَعْلَمُونَ ﴿٦٢﴾





**63.** ಅಥವಾ - ಸಂಕಷ್ಟಕ್ಕೆ ಗುರಿಯಾದವನು ಪ್ರಾರ್ಥಿಸುವಾಗ ಅವನ ಪ್ರಾರ್ಥನೆಗೆ ಉತ್ತರ ನೀಡುವವನೂ ಕ್ಲೇಶಗಳನ್ನು ಹೋಗಲಾಡಿಸುವವನೂ ನಿಮ್ಮನ್ನು ಭೂಮಿಯಲ್ಲಿ ಉತ್ತರಾಧಿಕಾರಿಗಳನ್ನಾಗಿ ಮಾಡುವವನೂ ಯಾರು? ಅಲ್ಲಾಹನ ಜೊತೆಯಲ್ಲಿ ಬೇರೆ ದೇವನಿದ್ದಾನೆಯೇ? ನೀವು ಉಪದೇಶಕ್ಕೆ ಕಿವಿಗೊಡುವುದೇ ಇಲ್ಲ.

أَمَّن يُجِيبُ ٱلْمُضْطَرَّ إِذَا دَعَاهُ وَيَكْشِفُ ٱلسُّوٓءَ وَيَجْعَلُكُمْ خُلَفَآءَ ٱلْأَرْضِ ۗ أَءِلَٰهٌ مَّعَ ٱللَّهِ ۚ قَلِيلًا مَّا تَذَكَّرُونَ ﴿٦٣﴾

**64.** ಅಥವಾ - ನೆಲ, ಜಲಗಳ ಅಂಧಕಾರದಲ್ಲಿ ನಿಮಗೆ ದಾರಿತೋರಿಸುವವನು ಯಾರು? ತನ್ನ ಅನುಗ್ರಹಕ್ಕೆ (ಮಳೆಗೆ) ಮುಂಚಿತವಾಗಿ ಸುವಾರ್ತೆಯಾಗಿ ಮಾರುತಗಳನ್ನು ಕಳುಹಿಸುವವನು ಯಾರು? ಅಲ್ಲಾಹನ ಜೊತೆಯಲ್ಲಿ ಬೇರೆ ದೇವನಿದ್ದಾನೆಯೇ? ಅವರು ಅವನಿಗೆ ಸರಿಸಾಟಿಗಳನ್ನು ಕಲ್ಪಿಸುವುದರಿಂದೆಲ್ಲ ಅವನು ಶ್ರೇಷ್ಠನಾಗಿದ್ದಾನೆ.

أَمَّن يَهْدِيكُمْ فِى ظُلُمَٰتِ ٱلْبَرِّ وَٱلْبَحْرِ وَمَن يُرْسِلُ ٱلرِّيَٰحَ بُشْرًۢا بَيْنَ يَدَىْ رَحْمَتِهِۦٓ ۗ أَءِلَٰهٌ مَّعَ ٱللَّهِ ۚ تَعَٰلَى ٱللَّهُ عَمَّا يُشْرِكُونَ ﴿٦٤﴾

**65.** ಅಥವಾ - ಮೊದಲು ಸೃಷ್ಟಿಯನ್ನು ಆರಂಭಿಸಿದವನು ಮತ್ತು ಅದನ್ನು ಪುನರಾವರ್ತನೆ ಮಾಡಿದವನು ಯಾರು? ಹಾಗೂ ಆಕಾಶ ಮತ್ತು ಭೂಮಿಯಿಂದ ನಿಮಗೆ ಆಹಾರ ಒದಗಿಸಿದವನು ಯಾರು? ಅಲ್ಲಾಹನ ಜೊತೆಯಲ್ಲಿ ಬೇರೆ ದೇವನಿದ್ದಾನೆಯೇ? (ಎಲೈ ಪ್ರವಾದಿ) ಹೇಳು: 'ನೀವು ಸತ್ಯವಂತರೆಂದಾದರೆ ನಿಮ್ಮ ಪುರಾವೆಗಳನ್ನು ತನ್ನಿರಿ'.

أَمَّن يَبْدَؤُا۟ ٱلْخَلْقَ ثُمَّ يُعِيدُهُۥ وَمَن يَرْزُقُكُم مِّنَ ٱلسَّمَآءِ وَٱلْأَرْضِ ۗ أَءِلَٰهٌ مَّعَ ٱللَّهِ ۚ قُلْ هَاتُوا۟ بُرْهَٰنَكُمْ إِن كُنتُمْ صَٰدِقِينَ ﴿٦٥﴾

**66.** ಹೇಳು: 'ಅಲ್ಲಾಹನ ಹೊರತು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಯಾರೇ ಆಗಲಿ ಅಗೋಚರ ವಿಚಾರವನ್ನು ಬಲ್ಲವರಲ್ಲ. ಅವರು ಯಾವಾಗ ಎಬ್ಬಿಸಲ್ಪಡುವರೆಂದು (ಕೂಡ) ಅವರಿಗೆ ಗೊತ್ತಿಲ್ಲ.'

قُل لَّا يَعْلَمُ مَن فِى ٱلسَّمَٰوَٰتِ وَٱلْأَرْضِ ٱلْغَيْبَ إِلَّا ٱللَّهُ ۚ وَمَا يَشْعُرُونَ أَيَّانَ يُبْعَثُونَ ﴿٦٦﴾

**67.** ವಾಸ್ತವದಲ್ಲಿ, ಪರಲೋಕದ ಬಗ್ಗೆ ಅವರ ಜ್ಞಾನ ಪರಿಸಮಾಪ್ತಿಗೊಂಡಿದೆ. ಅಷ್ಟೇ ಅಲ್ಲ, ಅವರು ಅದರ ಕುರಿತು ಸಂಶಯಪಡುತ್ತಾರೆ. ಅಲ್ಲ, ಅವರು ಅದಕ್ಕೆ ಸಂಬಂಧಿಸಿ ಕುರುಡರಾಗಿ ಬಿಟ್ಟಿದ್ದಾರೆ.

بَلِ ٱدَّٰرَكَ عِلْمُهُمْ فِى ٱلْـَٔاخِرَةِ ۚ بَلْ هُمْ فِى شَكٍّ مِّنْهَا ۖ بَلْ هُم مِّنْهَا عَمُونَ ﴿٦٧﴾

**68. ಅವಿಶ್ವಾಸಿಗಳು ಹೇಳುತ್ತಾರೆ: 'ಏನು! ನಾವು ಮತ್ತು ನಮ್ಮ ತಂದೆತಾತಂದಿರು** (ಮೃತಪಟ್ಟು) **ಮಣ್ಣಾದರೂ ನಾವು** (ಪುನಃ ಜೀವಂತರಾಗಿ) **ಹೊರತರಲ್ಪಡುವೆವೋ?**

وَقَالَ الَّذِيْنَ كَفَرُوْٓا ءَاِذَا كُنَّا تُرٰبًا وَّاٰبَآؤُنَآ اَئِنَّا لَمُخْرَجُوْنَ ﴿٦٨﴾

**69. 'ಇದಕ್ಕೆ ಮುಂಚೆ ಸಹ ನಮಗೆ ಮತ್ತು ನಮ್ಮ ತಂದೆತಾತಂದಿರಿಗೆ ಈ ಮುನ್ನೆಚ್ಚರಿಕೆಯನ್ನು ನೀಡಲಾಗಿತ್ತು. ಇದು ಕೇವಲ ಪೂರ್ವಿಕರ ಕಟ್ಟುಕತೆಯಾಗಿದೆ.'**

لَقَدْ وُعِدْنَا هٰذَا نَحْنُ وَاٰبَآؤُنَا مِنْ قَبْلُ ۙ اِنْ هٰذَآ اِلَّآ اَسَاطِيْرُ الْاَوَّلِيْنَ ﴿٦٩﴾

**70.** ನೀನು ಹೇಳು: 'ನೀವು ಭೂಮಿಯಲ್ಲೆಲ್ಲ ಸಂಚರಿಸಿ ಪಾಪಿಗಳ ಅಂತ್ಯ ಹೇಗಾಯಿತೆಂದು ನೋಡಿರಿ'.

قُلْ سِيْرُوْا فِى الْاَرْضِ فَانْظُرُوْا كَيْفَ كَانَ عَاقِبَةُ الْمُجْرِمِيْنَ ﴿٧٠﴾

**71. ಅವರಿಗೋಸ್ಕರ ನೀನು ವ್ಯಥೆಪಡಬೇಡ; ಅವರ ಷಡ್ಯಂತ್ರಗಳ ಬಗ್ಗೆ ನೀನು ವ್ಯಾಕುಲಪಡಬೇಡ.**

وَلَا تَحْزَنْ عَلَيْهِمْ وَلَا تَكُنْ فِيْ ضَيْقٍ مِّمَّا يَمْكُرُوْنَ ﴿٧١﴾

**72. 'ನೀವು ಸತ್ಯವಂತರೆಂದಾದರೆ ಈ ವಾಗ್ದಾನ** (ಮುನ್ನೆಚ್ಚರಿಕೆ ನೀಡಲಾದ ಶಿಕ್ಷೆ) **ಯಾವಾಗ ಈಡೇರುವುದು?' ಎಂದು ಅವರು ಕೇಳುತ್ತಾರೆ.**

وَيَقُوْلُوْنَ مَتٰى هٰذَا الْوَعْدُ اِنْ كُنْتُمْ صٰدِقِيْنَ ﴿٧٢﴾

**73. ಹೇಳು: 'ನೀವು ಯಾವುದರ ಬಗ್ಗೆ ತ್ವರೆ ಪಡಿಸುತ್ತೀರೋ ಅವುಗಳಲ್ಲಿ ಕೆಲವು ನಿಮ್ಮನ್ನು ಬೆನ್ನಟ್ಟುತ್ತಿರಬಹುದು.'**

قُلْ عَسٰٓى اَنْ يَّكُوْنَ رَدِفَ لَكُمْ بَعْضُ الَّذِيْ تَسْتَعْجِلُوْنَ ﴿٧٣﴾

**74. ದಿಟವಾಗಿಯೂ ನಿನ್ನ ಪ್ರಭು ಮನುಷ್ಯರ ಮೇಲೆ ಅನುಗ್ರಹ ತೋರಿಸುವವನಾಗಿದ್ದಾನೆ. ಆದರೆ ಅವರಲ್ಲಿ ಹೆಚ್ಚಿನವರು ಕೃತಜ್ಞತೆ ತೋರಿಸುವುದಿಲ್ಲ.**

وَاِنَّ رَبَّكَ لَذُوْ فَضْلٍ عَلَى النَّاسِ وَلٰكِنَّ اَكْثَرَهُمْ لَا يَشْكُرُوْنَ ﴿٧٤﴾

**75. ಅವರ ಹೃದಯಗಳು ಬಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನು ನಿನ್ನ ಪ್ರಭು ನಿಶ್ಚಯವಾಗಿಯೂ ತಿಳಿಯುತ್ತಾನೆ.**

وَاِنَّ رَبَّكَ لَيَعْلَمُ مَا تُكِنُّ صُدُوْرُهُمْ وَمَا يُعْلِنُوْنَ ﴿٧٥﴾

**76. ಒಂದು ಸುಸ್ಪಷ್ಟವಾದ ಗ್ರಂಥದಲ್ಲಿ ದಾಖಲಿಸಲ್ಪಡದೆ ಆಕಾಶದಲ್ಲಾಗಲಿ ಭೂಮಿಯಲ್ಲಾಗಲಿ ಗುಪ್ತವಾಗಿ ಏನೂ ಇಲ್ಲ.**

وَمَا مِنْ غَآئِبَةٍ فِى السَّمَآءِ وَالْاَرْضِ اِلَّا فِيْ كِتٰبٍ مُّبِيْنٍ ﴿٧٦﴾





**77. ಇಸ್ರಾಈಲ್ ಸಂತತಿಗಳು ಭಿನ್ನಾಭಿಪ್ರಾಯ ಹೊಂದಿರುವ ವಿಚಾರಗಳಲ್ಲಿ ಹೆಚ್ಚಿನವುಗಳನ್ನು ಈ ಖುರ್‌ಆನ್ ಅವರಿಗೆ ವಿವರಿಸಿಕೊಡುತ್ತದೆ.**

اِنَّ هٰذَا الْقُرْاٰنَ يَقُصُّ عَلٰى بَنِيْٓ اِسْرَآءِيْلَ اَكْثَرَ الَّذِيْ هُمْ فِيْهِ يَخْتَلِفُوْنَ ﴿٧٧﴾

**78. ದಿಟವಾಗಿಯೂ ಇದು ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನವೂ ಅನುಗ್ರಹವೂ ಆಗಿದೆ.**

وَاِنَّهٗ لَهُدًى وَّرَحْمَةٌ لِّلْمُؤْمِنِيْنَ ﴿٧٨﴾

**79. ನಿಶ್ಚಯವಾಗಿಯೂ ನಿನ್ನ ಪ್ರಭು ತನ್ನ ತೀರ್ಮಾನ ಮೂಲಕ ಅವರ ಮಧ್ಯೆ ಇತ್ಯರ್ಥ ಮಾಡುವನು. ಅವನು ಪ್ರತಾಪಶಾಲಿಯೂ ಸರ್ವಜ್ಞನೂ ಆಗಿದ್ದಾನೆ.**

اِنَّ رَبَّكَ يَقْضِيْ بَيْنَهُمْ بِحُكْمِهٖ ۚ وَهُوَ الْعَزِيْزُ الْعَلِيْمُ ﴿٧٩﴾

**80. ಆದ್ದರಿಂದ ನೀನು ಅಲ್ಲಾಹನ ಮೇಲೆ ಭರವಸೆಯನ್ನಿಡು. ನಿಶ್ಚಯವಾಗಿಯೂ ನೀನು ಸುಸ್ಪಷ್ಟವಾದ ಸತ್ಯದಲ್ಲಿರುವೆ.**

فَتَوَكَّلْ عَلَى اللّٰهِ ۭ اِنَّكَ عَلَى الْحَقِّ الْمُبِيْنِ ﴿٨٠﴾

**81. ನಿಶ್ಚಯವಾಗಿಯೂ ಮೃತರು ಆಲಿಸುವಂತೆ ನೀನು ಮಾಡಲಾರೆ; ಕಿವುಡರು ನಿನ್ನ ಕರೆಯನ್ನು ಕೇಳುವಂತೆಯೂ ನೀನು ಮಾಡಲಾರೆ - ಅವರು ಬೆನ್ನು ತಿರುಗಿಸಿ ಹೋಗುತ್ತಿರುವಾಗ.**

اِنَّكَ لَا تُسْمِعُ الْمَوْتٰى وَلَا تُسْمِعُ الصُّمَّ الدُّعَآءَ اِذَا وَلَّوْا مُدْبِرِيْنَ ﴿٨١﴾

**82. ನೀನು ಕುರುಡರನ್ನು ಅವರ ದುರ್ಮಾರ್ಗದಿಂದ** (ವಿಮೋಚನೆಗೊಳಿಸಿ) **ಸತ್ಪಥದಲ್ಲಿ ನಡೆಸಲಾರೆ. ನಮ್ಮ ದೃಷ್ಟಾಂತಗಳನ್ನು ನಂಬಿಕೊಂಡು ಆಜ್ಞಾನುಸರಣೆ ಮಾಡುವವರಿಗೆ ಮಾತ್ರ ನೀನು ಕೇಳಿಸುವಂತೆ ಮಾಡಬಲ್ಲೆ.**

وَمَآ اَنْتَ بِهٰدِى الْعُمْيِ عَنْ ضَلٰلَتِهِمْ ۭ اِنْ تُسْمِعُ اِلَّا مَنْ يُّؤْمِنُ بِاٰيٰتِنَا فَهُمْ مُّسْلِمُوْنَ ﴿٨٢﴾

**83. ಅವರ ನಾಶದ ಕುರಿತಿರುವ ಭವಿಷ್ಯದ್ವಚನ ಈಡೇರಿದರೆ ಅವರಿಗಾಗಿ ಭೂಮಿಯಿಂದ ನಾವೊಂದು ಕ್ರಿಮಿಯನ್ನು[362C] ಹೊರಡಿಸುವೆವು. ಅದು ಅವರನ್ನು ಘಾಸಿಗೊಳಿಸುವುದು. ಏಕೆಂದರೆ ಜನರು ನಮ್ಮ ದೃಷ್ಟಾಂತಗಳನ್ನು ನಂಬಲಿಲ್ಲ.**

وَاِذَا وَقَعَ الْقَوْلُ عَلَيْهِمْ اَخْرَجْنَا لَهُمْ دَآبَّةً مِّنَ الْاَرْضِ تُكَلِّمُهُمْ ۙ اَنَّ النَّاسَ كَانُوْا بِاٰيٰتِنَا لَا يُوْقِنُوْنَ ﴿٨٣﴾ ع

362C. "ದಾಬ್ಬತುಲ್ ಅರ್ಳ್" = ಭೂಮಿಯ ಕ್ರಿಮಿ. ಪ್ರವಾದಿ ವಚನಗಳಲ್ಲಿ ಸಹ ಈ ಬಗ್ಗೆ ಪ್ರಸ್ತಾಪಿಸಲಾಗಿದೆ. ಅಂತ್ಯಕಾಲದಲ್ಲಿ ಬರುವ ಒಂದು ಶಿಕ್ಷೆ ಎಂಬಂತೆ ಅದರ ಕುರಿತು ಮುನ್ನೆಚ್ಚರಿಕೆ ನೀಡಲಾಗಿದೆ. ಪ್ಲೇಗಿನ ಕ್ರಿಮಿಗಳನ್ನು ಇಲ್ಲಿ ಉದ್ದೇಶಿಸಲಾಗಿದೆ. ವಾಗ್ದತ್ತ ಮಸೀಹ್ (ಅಲೈಹಿಸ್ಸಲಾಂ) ರ ಕಾಲದಲ್ಲೇ ಅದು ಘಟಿಸಿತು. ಅವರು ಆ ಬಗ್ಗೆ ವಿಶೇಷ ಮುನ್ನೆಚ್ಚರಿಕೆ ನೀಡಿದ್ದರೆಂಬುದು ಗಮನಾರ್ಹ. "ತುಕಲ್ಲಿಮು" ಎಂಬುದಕ್ಕೆ "ಘಾಸಿಗೊಳಿಸು" ಎಂದು ಸಹ ಅರ್ಥವಿದೆ (ಅಖ್‌ರಬ್). ಅಂದರೆ, ಆ ಕ್ರಿಮಿ ಮನುಷ್ಯ ಶರೀರವನ್ನು ಗಾಯಗೊಳಿಸಿ ಪ್ರವೇಶಿಸಿ ಮಾರಕವಾದ ಆ ರೋಗವನ್ನು ಹರಡುವುದೆಂದು ತಾತ್ಪರ್ಯ.

وَيَوْمَ نَحْشُرُ مِنْ كُلِّ اُمَّةٍ فَوْجًا مِّمَّنْ يُّكَذِّبُ بِاٰيٰتِنَا فَهُمْ يُوْزَعُوْنَ ﴿٨٤﴾

**84. ಪ್ರತಿಯೊಂದು ಜನಾಂಗದಿಂದಲೂ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವವರ ಪೈಕಿ ಒಂದೊಂದು ಗುಂಪನ್ನು ಒಟ್ಟುಗೂಡಿಸಿ, ಆ ಬಳಿಕ ಅವರನ್ನು ವಿವಿಧ ತಂಡಗಳನ್ನಾಗಿ ಬೇರ್ಪಡಿಸುವ ದಿನ.** (ಆ ದಿನದ ಬಗ್ಗೆ ನೆನಪು ಮಾಡಿಕೊಡು.)

حَتّٰٓى اِذَا جَآءُوْ قَالَ اَكَذَّبْتُمْ بِاٰيٰتِيْ وَلَمْ تُحِيْطُوْا بِهَا عِلْمًا اَمَّاذَا كُنْتُمْ تَعْمَلُوْنَ ﴿٨٥﴾

**85. ಹಾಗೆ ಅವರು** (ಅಲ್ಲಾಹನ ಸನ್ನಿಧಿಗೆ) **ಬಂದಾಗ ಅವನು ಕೇಳುವನು: 'ನೀವು ನನ್ನ ದೃಷ್ಟಾಂತಗಳನ್ನು ಪರಿಪೂರ್ಣವಾದ ಜ್ಞಾನವಿಲ್ಲದೆ ಸುಳ್ಳೆಂದು ಬಗೆದಿರೋ? ಅಥವಾ** (ಸತ್ಯದ ವಿರುದ್ಧವಾಗಿ) **ನೀವು ಮಾಡುತ್ತಿದ್ದುದಾದರೂ ಏನು?'**

وَوَقَعَ الْقَوْلُ عَلَيْهِمْ بِمَا ظَلَمُوْا فَهُمْ لَا يَنْطِقُوْنَ ﴿٨٦﴾

**86. ಅವರು ಅಕ್ರಮವೆಸಗಿದ ಕಾರಣದಿಂದ, ಮುಂಚಿತವಾಗಿ ಹೇಳಲಾದ ಶಿಕ್ಷೆ ಅವರ ಮೇಲೆ ಎರಗುವುದು. ಆಗ ಏನೂ ಹೇಳಲು ಅವರಿಗೆ ಸಾಧ್ಯವಾಗಲಾರದು.**

اَلَمْ يَرَوْا اَنَّا جَعَلْنَا الَّيْلَ لِيَسْكُنُوْا فِيْهِ وَالنَّهَارَ مُبْصِرًا ؕ اِنَّ فِيْ ذٰلِكَ لَاٰيٰتٍ لِّقَوْمٍ يُّؤْمِنُوْنَ ﴿٨٧﴾

**87. ಅವರ ವಿಶ್ರಾಂತಿಗಾಗಿ ನಾವು ರಾತ್ರಿಯನ್ನೂ ದೃಷ್ಟಿದಾಯಕವಾಗಿ ಹಗಲನ್ನೂ ವ್ಯವಸ್ಥೆ ಗೊಳಿಸಿರುವುದನ್ನು ಅವರು ಕಾಣುವುದಿಲ್ಲವೇ? ವಿಶ್ವಾಸಿಗಳಾದ ಜನರಿಗೆ ಅದರಲ್ಲಿ ಖಂಡಿತವಾಗಿಯೂ ದೃಷ್ಟಾಂತವಿದೆ.**

وَيَوْمَ يُنْفَخُ فِي الصُّوْرِ فَفَزِعَ مَنْ فِي السَّمٰوٰتِ وَمَنْ فِي الْاَرْضِ اِلَّا مَنْ شَآءَ اللّٰهُ ؕ وَكُلٌّ اَتَوْهُ دٰخِرِيْنَ ﴿٨٨﴾

**88. ಕಹಳೆಯಿಂದ ಊದಲ್ಪಡುವ ದಿನವನ್ನೂ** (ನೀನು ಅವರಿಗೆ ನೆನಪಿಸಿಕೊಡು). **ಅಂದು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲರೂ - ಅಲ್ಲಾಹನು ಇಚ್ಛಿಸುವವರನ್ನು ಹೊರತು ಪಡಿಸಿ - ಭಯಭೀತರಾಗುವರು. ಎಲ್ಲರೂ ಅವನ ಮುಂದೆ ವಿನಮ್ರವಾಗಿ ಹಾಜರಾಗುವರು.**

وَتَرَى الْجِبَالَ تَحْسَبُهَا جَامِدَةً وَّهِيَ تَمُرُّ مَرَّ السَّحَابِ ؕ صُنْعَ اللّٰهِ الَّذِيْٓ اَتْقَنَ كُلَّ شَيْءٍ ؕ اِنَّهٗ خَبِيْرٌ بِمَا تَفْعَلُوْنَ ﴿٨٩﴾

**89. ಪರ್ವತಗಳು ಸ್ಥಿರವಾಗಿ ಇರುವಂತೆ ನೀನು ಕಾಣುವೆಯಾದರೂ ಅವು ಮೋಡಗಳು ಚಲಿಸುವಂತೆ ಚಲಿಸುವುವು.[363] ಇದು, ಎಲ್ಲವನ್ನೂ ಸುವ್ಯವಸ್ಥೆಗೊಳಿಸಿದ ಅಲ್ಲಾಹನ ಕೃತ್ಯವಾಗಿದೆ. ನಿಮ್ಮ ವರ್ತನೆಗಳ ಬಗ್ಗೆ ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.**

363. ಇಲ್ಲಿ 'ಜಿಬಾಲ್' (ಪರ್ವತಗಳು) ಎಂದು ಹೇಳಿದುದರ ತಾತ್ಪರ್ಯ ಇಸ್ಲಾಮಿಗೆ ವಿರುದ್ಧವಾಗಿರುವ ಶಕ್ತಿಗಳೂ ಉನ್ನತ ಮಟ್ಟದ ನಾಯಕತ್ವವೂ ಅವರ ಸಂಘಟನೆಗಳೂ ಆಗಿವೆ. ಇಸ್ಲಾಮಿಗೆ ವಿರುದ್ಧವಾಗಿ ಅವು ನೆಲೆನಿಲ್ಲಲಾರವು. ಅವು ಎಷ್ಟೇ ಸುದೃಢವಾಗಿ ಕಂಡು ಬಂದರೂ ಮೋಡಗಳು ಗಾಳಿಗೆ ಕರಗಿ ಹೋಗುವಂತೆ ಸತ್ಯಕ್ಕೆ ವಿರುದ್ಧವಾದ ಆ ಅಡಚಣೆಗಳೆಲ್ಲ ನೀಗಿಸಲ್ಪಡುವುವು. ಈ ಭವಿಷ್ಯವಾಣಿ ಹಿಂದೆ ಈಡೇರಿದೆ. ಮುಂದೆಯೂ ಈಡೇರಲಿದೆ.





مَنْ جَآءَ بِالْحَسَنَةِ فَلَهٗ خَيْرٌ مِّنْهَا ۚ وَهُمْ مِّنْ فَزَعٍ يَّوْمَئِذٍ اٰمِنُوْنَ ﴿٩٠﴾

**90. ಯಾರಾದರೂ ಒಂದು ಸತ್ಕರ್ಮವನ್ನು ಮಾಡಿದರೆ ಅದಕ್ಕಿಂತ ಉತ್ತಮವಾದ ಪ್ರತಿಫಲವನ್ನು ಅವನು ಪಡೆಯುವನು. ಅಂತಹವರು ಅಂದು ಭಯದಿಂದ ಪಾರಾಗುವರು.**

وَمَنْ جَآءَ بِالسَّيِّئَةِ فَكُبَّتْ وُجُوْهُهُمْ فِي النَّارِ ؕ هَلْ تُجْزَوْنَ اِلَّا مَا كُنْتُمْ تَعْمَلُوْنَ ﴿٩١﴾

**91. ಯಾರಾದರೂ ದುಷ್ಕರ್ಮ ಮಾಡಿದರೆ, ಅವರು ಬೋರಲಾಗಿ ನರಕದಲ್ಲಿ ಬೀಳಿಸಲ್ಪಡುವರು. 'ನಿಮಗೆ ನೀಡಲಾದುದು ನಿಮ್ಮ ಕೃತ್ಯಕ್ಕೆ ತಕ್ಕುದಾದ ಪ್ರತಿಫಲ ಮಾತ್ರವಷ್ಟೇ?'** (ಎಂದು ಅವರೊಡನೆ ಕೇಳಲಾಗುವುದು.)

اِنَّمَآ اُمِرْتُ اَنْ اَعْبُدَ رَبَّ هٰذِهِ الْبَلْدَةِ الَّذِيْ حَرَّمَهَا وَلَهٗ كُلُّ شَيْءٍ ؗ وَّاُمِرْتُ اَنْ اَكُوْنَ مِنَ الْمُسْلِمِيْنَ ﴿٩٢﴾

**92.** (ಹೇಳು) **'ಈ ಪಟ್ಟಣ** (ಮಕ್ಕ) **ವನ್ನು ಪವಿತ್ರವಾಗಿರಿಸಿರುವ ಇದರ ಪ್ರಭುವನ್ನು ಮಾತ್ರ ಆರಾಧಿಸಲು ನಾನು ಆಜ್ಞಾಪಿಸಲ್ಪಟ್ಟಿರುವೆನು. ಎಲ್ಲವೂ ಅವನ ಅಧೀನದಲ್ಲಿವೆ. ದೇವಶರಣರಲ್ಲಿ ಸೇರಿದವನಾಗಲಿಕ್ಕೂ ನಾನು ಆಜ್ಞಾಪಿಸಲ್ಪಟ್ಟಿದ್ದೇನೆ.**

وَاَنْ اَتْلُوَا الْقُرْاٰنَ ۚ فَمَنِ اهْتَدٰى فَاِنَّمَا يَهْتَدِيْ لِنَفْسِهٖ ۚ وَمَنْ ضَلَّ فَقُلْ اِنَّمَآ اَنَا مِنَ الْمُنْذِرِيْنَ ﴿٩٣﴾

**93. 'ಈ ಖುರ್‌ಆನ್‌ನ್ನು ಪಠಿಸಲಿಕ್ಕೂ** (ನಾನು ಆಜ್ಞಾಪಿಸಲ್ಪಟ್ಟಿದ್ದೇನೆ).**' ಆದ್ದರಿಂದ ಯಾರು ಸತ್ಪಥವನ್ನು ಅನುಸರಿಸುತ್ತಾನೋ ಅವನು ತನ್ನ ಆತ್ಮದ ಒಳಿತಿಗಾಗಿಯೇ ಅನುಸರಿಸುತ್ತಾನೆ. ಯಾರು ದಾರಿ ತಪ್ಪಿ ಹೋಗುತ್ತಾನೋ ಅವನೊಡನೆ, 'ನಾನು ಕೇವಲ ಒಬ್ಬ ಮುನ್ನೆಚ್ಚರಿಕೆಗಾರ' ಎಂದು ಹೇಳು.**

وَقُلِ الْحَمْدُ لِلّٰهِ سَيُرِيْكُمْ اٰيٰتِهٖ فَتَعْرِفُوْنَهَا ؕ وَمَا رَبُّكَ بِغَافِلٍ عَمَّا تَعْمَلُوْنَ ﴿٩٤﴾ ع

**94. 'ಎಲ್ಲ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ. ಅವನು ಶೀಘ್ರದಲ್ಲಿಯೇ ಅವನ ದೃಷ್ಟಾಂತಗಳನ್ನು ನಿಮಗೆ ತೋರಿಸುವನು. ಆಗ ಅವುಗಳ ಬಗ್ಗೆ ನೀವು ತಿಳಿಯುವಿರಿ' ಎಂದು ಸಹ ಹೇಳು. ನಿಮ್ಮ ಕೃತ್ಯಗಳ ಬಗ್ಗೆ ನಿನ್ನ ಪ್ರಭು ತಿಳಿಯದವನಲ್ಲ.**

سُورَةُ الْقَصَصِ مَكِّيَّةٌ وَّهِيَ مَعَ الْبَسْمَلَةِ تِسْعٌ وَّثَمَانُوْنَ اٰيَةً وَّتِسْعَةُ رُكُوْعَاتٍ

# 28. ಅಲ್‌ಖಸಸ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 89 ಆಯತ್‌ಗಳು ಹಾಗೂ 9 ರುಕೂಉ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ತ್ವಾ ಸೀನ್ ಮೀಂ.**[364]

طٰسٓمّٓ ﴿٢﴾

**3. ಇವು ಸುಸ್ಪಷ್ಟವಾದ ಗ್ರಂಥದ ವಚನಗಳಾಗಿವೆ.**

تِلْكَ اٰيٰتُ الْكِتٰبِ الْمُبِيْنِ ﴿٣﴾

**4. ಸತ್ಯವಿಶ್ವಾಸ ಕೈಗೊಳ್ಳುವವರ ಪ್ರಯೋಜನಕ್ಕಾಗಿ ಮೂಸಾರ ಮತ್ತು ಫಿರ್‌ಔನನ ವೃತ್ತಾಂತದಿಂದ** ಕೆಲವನ್ನು **ವಸ್ತುನಿಷ್ಠವಾಗಿ ನಾವು ನಿನಗೆ ಹೇಳಿಕೊಡುವೆವು.**

نَتْلُوْا عَلَيْكَ مِنْ نَّبَاِ مُوْسٰى وَفِرْعَوْنَ بِالْحَقِّ لِقَوْمٍ يُّؤْمِنُوْنَ ﴿٤﴾

**5. ಫಿರ್‌ಔನನು ಭೂಮಿಯಲ್ಲಿ ದುರಂಹಕಾರದಿಂದ ವರ್ತಿಸಿದನು; ಜನರನ್ನು ವಿವಿಧ ಪಕ್ಷ, ಪಂಗಡಗಳನ್ನಾಗಿ ಬೇರ್ಪಡಿಸಿದನು. ಅವನು ಅವರ ಪೈಕಿ ಒಂದು ಪಂಗಡದವರ ಪುರುಷ ಸಂತಾನಗಳನ್ನು ಕೊಲೆಗೈಯ್ಯುದ್ದ ಹಾಗೂ ಸ್ತ್ರೀಯರನ್ನು ಬಾಕಿಯುಳಿಸಿ ಅವರನ್ನು ನಿರ್ಬಲಗೊಳಿಸಿದನು. ನಿಶ್ಚಯವಾಗಿಯೂ ಅವನು ಕೇಡು ಬಗೆಯುವವರ ಪೈಕಿಯವನಾಗಿದ್ದನು.**

اِنَّ فِرْعَوْنَ عَلَا فِي الْاَرْضِ وَجَعَلَ اَهْلَهَا شِيَعًا يَّسْتَضْعِفُ طَآئِفَةً مِّنْهُمْ يُذَبِّحُ اَبْنَآءَهُمْ وَيَسْتَحْيٖ نِسَآءَهُمْ ؕ اِنَّهٗ كَانَ مِنَ الْمُفْسِدِيْنَ ﴿٥﴾

**6. ನಾವಾದರೋ, ಭೂಮಿಯಲ್ಲಿ ನಿರ್ಬಲರೆಂದು ಪರಿಗಣಿಸಲ್ಪಟ್ಟವರಿಗೆ ನಮ್ಮ ಅನುಗ್ರಹಗಳನ್ನು ನೀಡಬೇಕೆಂದೂ ಅವರನ್ನು ನೇತಾರರನ್ನಾಗಿಯೂ** (ನಮ್ಮ ಅನುಗ್ರಹಗಳಿಗೆ) **ವಾರೀಸುದಾರರನ್ನಾಗಿಯೂ ಮಾಡಬೇಕೆಂದೂ ಬಯಸಿದೆವು.**

وَنُرِيْدُ اَنْ نَّمُنَّ عَلَى الَّذِيْنَ اسْتُضْعِفُوْا فِي الْاَرْضِ وَنَجْعَلَهُمْ اَئِمَّةً وَّنَجْعَلَهُمُ الْوٰرِثِيْنَ ﴿٦﴾

---

364. ತ್ವಾ=ತಾಹಿರ್ (ಪರಿಶುದ್ಧನು). ಸೀನ್=ಸಮೀಅ್ (ಎಲ್ಲ ಆಲಿಸುವವನು). ಮೀಂ=ಮಜೀದ್ (ಮಹಾಮಹಿಮನು). ಪರಿಶುದ್ಧನೂ ಎಲ್ಲ ಆಲಿಸುವವನೂ ಮಹಾಮಹಿಮನೂ ಆದ ಅಲ್ಲಾಹನು ಈ ಅಧ್ಯಾಯವನ್ನು ಅವತೀರ್ಣಗೊಳಿಸಿದ್ದಾನೆಂದು ತಾತ್ಪರ್ಯ. (ವಿವರಣೆಗಾಗಿ 2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**7. ಭೂಮಿಯ ಮೇಲೆ ಅವರಿಗೆ** (ಇಸ್ರಾಈಲ್ ಸಂತತಿಗಳಿಗೆ) **ಆಧಿಪತ್ಯವನ್ನು ನೀಡಬೇಕೆಂದೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೈನ್ಯದವರು ಅವರಿಂದ ಯಾವ ವಿಚಾರದಲ್ಲಿ ಭಯಪಡುತ್ತಿದ್ದರೋ ಅದನ್ನು ಅವರಿಗೆ ತೋರಿಸಿಕೊಡಬೇಕೆಂದು ಸಹ** (ನಾವು ಬಯಸಿದೆವು).

وَنُمَكِّنَ لَهُمْ فِي الْاَرْضِ وَنُرِيَ فِرْعَوْنَ وَهَامٰنَ وَجُنُوْدَهُمَا مِنْهُمْ مَّا كَانُوْا يَحْذَرُوْنَ ﴿٧﴾

**8. ಮೂಸಾರ ಮಾತೆಗೆ** (ಪ್ರಸವದ ಬಳಿಕ) **ನಾವು ಹೀಗೆ ಸಂದೇಶವಿತ್ತೆವು: 'ನೀನು ಆ ಮಗುವಿಗೆ ಮೊಲೆಯುಣ್ಣಿಸು. ಅದರ** (ಆ ಮಗುವಿನ) **ಬಗ್ಗೆ ನಿನಗೆ ಹೆದರಿಕೆ ಇದ್ದರೆ ಅದನ್ನು** (ಒಂದು ಪೆಟ್ಟಿಗೆಯಲ್ಲಿಟ್ಟು) **ನದಿಯಲ್ಲಿ ಬಿಟ್ಟು ಬಿಡು. ನೀನು ಭಯಪಡಬೇಡ ಹಾಗೂ ದುಃಖಿಸಬೇಡ. ನಾವು ಅವನನ್ನು ನಿನಗೆ ಹಿಂತಿರುಗಿಸುವೆವು ಹಾಗೂ ಅವನನ್ನು ಸಂದೇಶವಾಹಕರಲ್ಲಿ ಒಬ್ಬನನ್ನಾಗಿ ಮಾಡುವೆವು.'** (ಹಾಗೆ ಮೂಸಾರ ಮಾತೆ ಆ ಮಗುವನ್ನು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ಬಿಟ್ಟರು.)

وَاَوْحَيْنَآ اِلٰٓى اُمِّ مُوْسٰٓى اَنْ اَرْضِعِيْهِ ۚ فَاِذَا خِفْتِ عَلَيْهِ فَاَلْقِيْهِ فِي الْيَمِّ وَلَا تَخَافِيْ وَلَا تَحْزَنِيْ ۚ اِنَّا رَآدُّوْهُ اِلَيْكِ وَجَاعِلُوْهُ مِنَ الْمُرْسَلِيْنَ ﴿٨﴾

**9. ಅನಂತರ ಫಿರ್‌ಔನನ ಕುಟುಂಬದವರು** (ನದಿಯಿಂದ) **ಅದನ್ನು ಮೇಲಕ್ಕೆತ್ತಿದರು. ಅದರ ಪರಿಣಾಮವೇನಾಯಿತೆಂದರೆ, ಅದು** (ಆ ಮಗು) **ಅವರ ಶತ್ರುವಾಯಿತಲ್ಲದೆ ಅವರ ದುಃಖಕ್ಕೆ ಕಾರಣೀಭೂತವೂ ಆಯಿತು. ಫಿರ್‌ಔನ್, ಹಾಮಾನ್ ಮತ್ತು ಅವರ ಸೈನ್ಯದವರು ತಪ್ಪಿತಸ್ಥರಾಗಿದ್ದರು.**

فَالْتَقَطَهٗٓ اٰلُ فِرْعَوْنَ لِيَكُوْنَ لَهُمْ عَدُوًّا وَّحَزَنًا ؕ اِنَّ فِرْعَوْنَ وَهَامٰنَ وَجُنُوْدَهُمَا كَانُوْا خٰطِئِيْنَ ﴿٩﴾

**10. ಫಿರ್‌ಔನನ** (ಕುಟುಂಬದ ಓರ್ವ) **ಸ್ತ್ರೀ ಹೇಳಿದಳು: 'ಅವನು ನನಗೂ ನಿಮಗೂ ಕಣ್ಣಿಗೆ ತಂಪನ್ನೀಯುವವನು. ಅವನನ್ನು ಕೊಲ್ಲಬೇಡಿರಿ. ಪ್ರಾಯಶಃ ಅವನು ನಮ್ಮ ಪ್ರಯೋಜನಕ್ಕೆ ಬರುವನು. ಅಥವಾ ನಾವು ಅವನನ್ನು ದತ್ತುಪುತ್ರನನ್ನಾಗಿ ಮಾಡಬಹುದು.' ಆದರೆ ಅವರಿಗೆ ನಿಜಾಂಶ ತಿಳಿದಿರಲಿಲ್ಲ.**

وَقَالَتِ امْرَاَتُ فِرْعَوْنَ قُرَّتُ عَيْنٍ لِّيْ وَلَكَ ؕ لَا تَقْتُلُوْهُ ۖ عَسٰٓى اَنْ يَّنْفَعَنَآ اَوْ نَتَّخِذَهٗ وَلَدًا وَّهُمْ لَا يَشْعُرُوْنَ ﴿١٠﴾

**11.** (ಇತ್ತ) **ಮೂಸಾರ ಮಾತೆಯ ಹೃದಯ** ಕಳವಳ **ಮುಕ್ತವಾಗಿತ್ತು.**[364A] **ಆಕೆ ವಿಶ್ವಾಸಿಗಳಲ್ಲಿ ಸೇರಿದವಳಾಗ**

وَاَصْبَحَ فُؤَادُ اُمِّ مُوْسٰى فٰرِغًا ؕ اِنْ

---

364A. ಫಿರ್‌ಔನನ ಆಕ್ರಮಣದಿಂದ ಪ್ರವಾದಿ ಮೂಸಾ (ಅಲೈಹಿಸ್ಸಲಾಂ) ಸಂರಕ್ಷಿಸಲ್ಪಡುವರೆಂದು ಅಲ್ಲಾಹನು ಮೂಸಾ (ಅ)ರ ಮಾತೆಗೆ ದಿವ್ಯ ಸಂದೇಶ ಮೂಲಕ ಶುಭವಾರ್ತೆ ಅರುಹಿದ್ದನು. ಆದುದರಿಂದ ಅವರ ಹೃದಯ ಕಳವಳ ಮುಕ್ತವಾಗಿತ್ತು.

كَادَتْ لَتُبْدِي بِهِۦ لَوْلَآ أَن رَّبَطْنَا عَلَىٰ قَلْبِهَا لِتَكُونَ مِنَ ٱلْمُؤْمِنِينَ ١٠

ಲಿಕ್ಕಾಗಿ ನಾವು ಆಕೆಯ ಹೃದಯವನ್ನು ಬಲಪಡಿಸದಿರುತ್ತಿದ್ದರೆ ಆಕೆ ಅದನ್ನು (ಆ ರಹಸ್ಯವನ್ನು) ಬಯಲು ಮಾಡುತ್ತಿದ್ದಳು.

وَقَالَتْ لِأُخْتِهِۦ قُصِّيهِ ۖ فَبَصُرَتْ بِهِۦ عَن جُنُبٍ وَهُمْ لَا يَشْعُرُونَ ١١

**12.** ಆಕೆ ಆತನ (ಮೂಸಾರ) ಸಹೋದರಿಯೊಡನೆ ಹೇಳಿದಳು: '(ಪೆಟ್ಟಿಗೆಯಲ್ಲಿ ತೇಲಿಕೊಂಡು ಹೋಗುವ) ಅವನನ್ನು ಹಿಂಬಾಲಿಸು.' ಹಾಗೆ ಅವಳು ದೂರದಿಂದಲೇ ಅವನನ್ನು ವೀಕ್ಷಿಸುತ್ತಿದ್ದಳು. ಆದರೆ ಅವರು (ಜನರು) ಅದನ್ನು ತಿಳಿದಿರಲಿಲ್ಲ.

وَحَرَّمْنَا عَلَيْهِ ٱلْمَرَاضِعَ مِن قَبْلُ فَقَالَتْ هَلْ أَدُلُّكُمْ عَلَىٰٓ أَهْلِ بَيْتٍ يَكْفُلُونَهُۥ لَكُمْ وَهُمْ لَهُۥ نَٰصِحُونَ ١٢

**13.** ಮೊಲೆಯೂಡಿಸುವ (ಬೇರೆ) ಸ್ತ್ರೀಯರನ್ನು ನಾವು ಮೊದಲೇ ಅವನಿಗೆ ನಿಷಿದ್ಧಗೊಳಿಸಿದ್ದೆವು. ಆಗ ಅವಳು (ಮೂಸಾರ ಸಹೋದರಿ) ಹೇಳಿದಳು: 'ನಿಮಗೋಸ್ಕರ ಈ ಮಗುವನ್ನು ಸಾಕಿ ಸಲಹುವ ಹಾಗೂ ಅವನ ನಿಜವಾದ ಹಿತವನ್ನು ಬಯಸುವ ಒಂದು ಮನೆಯವರ ಬಗ್ಗೆ ನಾನು ನಿಮಗೆ ತಿಳಿಸಿಕೊಡಲೇ?'

فَرَدَدْنَٰهُ إِلَىٰٓ أُمِّهِۦ كَىْ تَقَرَّ عَيْنُهَا وَلَا تَحْزَنَ وَلِتَعْلَمَ أَنَّ وَعْدَ ٱللَّهِ حَقٌّ وَلَٰكِنَّ أَكْثَرَهُمْ لَا يَعْلَمُونَ ١٣

**14.** ಹಾಗೆ ಅದರ (ಆ ಮಗುವಿನ) ಮಾತೆಯ ಕಣ್ಣನ್ನು ತಂಪುಗೊಳಿಸಲಿಕ್ಕಾಗಿಯೂ ಆಕೆ ದುಃಖಿಸದಿರಲಿಕ್ಕಾಗಿಯೂ ಅಲ್ಲಾಹನ ವಾಗ್ದಾನ ಸತ್ಯವೆಂದು ಆಕೆಗೆ ತಿಳಿಯಲಿಕ್ಕಾಗಿಯೂ ಅದನ್ನು (ಆ ಶಿಶುವನ್ನು) ನಾವು ಆಕೆಯ ಬಳಿಗೆ ಹಿಂತಿರುಗಿಸಿದೆವು. ಆದರೆ ಜನರ ಪೈಕಿ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

وَلَمَّا بَلَغَ أَشُدَّهُۥ وَٱسْتَوَىٰٓ ءَاتَيْنَٰهُ حُكْمًا وَعِلْمًا ۚ وَكَذَٰلِكَ نَجْزِى ٱلْمُحْسِنِينَ ١٤

**15.** ಅವರು ತನ್ನ ಪ್ರೌಢಾವಸ್ಥೆಗೆ ತಲಪಿ ಬಲಿಷ್ಠನಾದಾಗ ನಾವು ಅವರಿಗೆ ವಿವೇಕವನ್ನೂ ಜ್ಞಾನವನ್ನೂ ದಯಪಾಲಿಸಿದೆವು. ಸತ್ಕರ್ಮಿಗಳಿಗೆ ಹೀಗೆ ನಾವು ಪ್ರತಿಫಲವನ್ನು ನೀಡುತ್ತೇವೆ.

وَدَخَلَ ٱلْمَدِينَةَ عَلَىٰ حِينِ غَفْلَةٍ مِّنْ أَهْلِهَا فَوَجَدَ فِيهَا رَجُلَيْنِ يَقْتَتِلَانِ هَٰذَا مِن شِيعَتِهِۦ وَهَٰذَا

**16.** (ಒಂದು ದಿನ) ಪಟ್ಟಣದ ನಿವಾಸಿಗಳು ಅವರನ್ನು ಗಮನಿಸದಿದ್ದ ಸಂದರ್ಭದಲ್ಲಿ ಅವರು (ಮೂಸಾ) ಅದನ್ನು (ಪಟ್ಟಣವನ್ನು) ಪ್ರವೇಶಿಸಿದರು. ಆಗ ಅಲ್ಲಿ, ಇಬ್ಬರು ಜಗಳವಾಡುವುದನ್ನು ಅವರು ಕಂಡರು. ಒಬ್ಬ ಅವರ ಪಕ್ಷದವನಾಗಿದ್ದನು. ಇನ್ನೊಬ್ಬ ಅವರ ಶತ್ರು ಪಕ್ಷದವನಾ





مِنْ عَدُوِّهِۦ ۖ فَٱسْتَغَٰثَهُ ٱلَّذِى مِن شِيعَتِهِۦ عَلَى ٱلَّذِى مِنْ عَدُوِّهِۦ فَوَكَزَهُۥ مُوسَىٰ فَقَضَىٰ عَلَيْهِ ۖ قَالَ هَٰذَا مِنْ عَمَلِ ٱلشَّيْطَٰنِ ۖ إِنَّهُۥ عَدُوٌّ مُّضِلٌّ مُّبِينٌ ١٥

ಗಿದ್ದನು. ತನ್ನ ಪಕ್ಷದವನು ಶತ್ರುಪಕ್ಷದವನ ವಿರುದ್ಧವಾಗಿ ಅವರೊಡನೆ (ಮೂಸಾರೊಡನೆ) ಸಹಾಯವನ್ನು ಕೇಳಿದನು. ಆಗ ಅವರು (ಮೂಸಾ) ತನ್ನ ಮುಷ್ಟಿಯಿಂದ ಅವನಿಗೆ ಹೊಡೆದು ಸಾಯಿಸಿದರು. ಆಗ ಅವರು, 'ಇದು ಶೈತಾನನ ಕೃತ್ಯವಾಗಿದೆ; ಅವನು ಶತ್ರುವೂ ಸ್ಪಷ್ಟವಾಗಿಯೂ ದಾರಿತಪ್ಪಿಸುವವನೂ ಆಗಿದ್ದಾನೆ' ಎಂದು ಉದ್ಗರಿಸಿದರು.

قَالَ رَبِّ إِنِّى ظَلَمْتُ نَفْسِى فَٱغْفِرْ لِى فَغَفَرَ لَهُۥٓ ۚ إِنَّهُۥ هُوَ ٱلْغَفُورُ ٱلرَّحِيمُ ١٦

**17.** ಅವರು ಪ್ರಾರ್ಥಿಸಿದರು: 'ನನ್ನ ಪ್ರಭೂ, ನಾನು ನನ್ನ ಆತ್ಮಕ್ಕೆ ದ್ರೋಹವೆಸಗಿದ್ದೇನೆ. ಆದ್ದರಿಂದ ನನ್ನನ್ನು ಕ್ಷಮಿಸು.' ಹಾಗೆ ಅಲ್ಲಾಹನು ಅವರನ್ನು ಕ್ಷಮಿಸಿದನು. ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

قَالَ رَبِّ بِمَآ أَنْعَمْتَ عَلَىَّ فَلَنْ أَكُونَ ظَهِيرًا لِّلْمُجْرِمِينَ ١٧

**18.** ಅವರು ಹೇಳಿದರು: 'ನನ್ನ ಪ್ರಭೂ, ನೀನು ನನ್ನ ಮೇಲೆ ಅನುಗ್ರಹ ತೋರಿಸಿರುವೆ; ನಾನು ಇನ್ನೆಂದಿಗೂ ಅಪರಾಧಿಗಳಿಗೆ ನೆರವಾಗಲಾರೆ.'

فَأَصْبَحَ فِى ٱلْمَدِينَةِ خَآئِفًا يَتَرَقَّبُ فَإِذَا ٱلَّذِى ٱسْتَنصَرَهُۥ بِٱلْأَمْسِ يَسْتَصْرِخُهُۥ ۚ قَالَ لَهُۥ مُوسَىٰٓ إِنَّكَ لَغَوِىٌّ مُّبِينٌ ١٨

**19.** ಬೆಳಿಗ್ಗೆ ಎದ್ದು ಅವರು ಭಯವಿಹ್ವಲರಾಗಿ ಅತ್ತಿತ್ತ ನೋಡಿಕೊಂಡು ಪಟ್ಟಣಕ್ಕೆ ಹೋದಾಗ ಅದೋ ಹಿಂದಿನ ದಿನ ಅವರೊಡನೆ ಸಹಾಯ ಕೇಳಿದವನು (ಪುನಃ) ಸಹಾಯಕ್ಕಾಗಿ ಅವರನ್ನು ಕರೆಯುತ್ತಿದ್ದಾನೆ. ಮೂಸಾ ಅವನೊಡನೆ, 'ನೀನು ಸ್ಪಷ್ಟವಾಗಿಯೂ ದಾರಿತಪ್ಪಿದವನಾಗಿರುವೆ' ಎಂದು ಹೇಳಿದರು.

فَلَمَّآ أَنْ أَرَادَ أَن يَبْطِشَ بِٱلَّذِى هُوَ عَدُوٌّ لَّهُمَا قَالَ يَٰمُوسَىٰٓ أَتُرِيدُ أَن تَقْتُلَنِى كَمَا قَتَلْتَ نَفْسًۢا بِٱلْأَمْسِ ۖ إِن تُرِيدُ إِلَّآ أَن تَكُونَ جَبَّارًا فِى ٱلْأَرْضِ وَمَا تُرِيدُ أَن تَكُونَ مِنَ ٱلْمُصْلِحِينَ ١٩

**20.** ಹಾಗೆ ಅವರು (ಮೂಸಾ) ಅವರಿಬ್ಬರಿಗೂ ಶತ್ರುವಾಗಿದ್ದವನನ್ನು ಹಿಡಿಯಲು ಇಚ್ಛಿಸಿದಾಗ ಅವನು ಹೇಳಿದನು: 'ಎಲೈ ಮೂಸಾ, ನಿನ್ನೆ ನೀನು ಒಬ್ಬನನ್ನು ಕೊಂದ ಹಾಗೆ ನನ್ನನ್ನು ಸಹ ಕೊಲ್ಲಲು ಬಯಸುವೆಯಾ? ನಾಡಿನಲ್ಲಿ ನೀನು (ದುರ್ಬಲರನ್ನು) ಸದೆಬಡಿಯಲು ಮಾತ್ರ ಉದ್ದೇಶಿಸಿದಂತಿದೆ. ನೀನು ಶಾಂತಿಸ್ಥಾಪನೆಗೆ ಇಚ್ಛಿಸುವುದಿಲ್ಲ.'

**21.** (ಆಗ) ಪಟ್ಟಣದ ದೂರ ಪ್ರದೇಶದಿಂದ ಒಬ್ಬ ವ್ಯಕ್ತಿ ಓಡಿಬಂದು ಹೀಗೆ ಹೇಳಿದನು: 'ಎಲೈ ಮೂಸಾ, ನಿಜವಾಗಿಯೂ ನಿನ್ನನ್ನು ಕೊಲ್ಲಲಿಕ್ಕಾಗಿ ನಾಡಿನ ಮುಖಂಡರು ಒಟ್ಟುಸೇರಿ ಸಮಾಲೋಚನೆ ನಡೆಸುತ್ತಿದ್ದಾರೆ. ಆದ್ದರಿಂದ ನೀನು ಇಲ್ಲಿಂದ ದೂರ ಹೋಗಿ ಬಿಡು. ವಾಸ್ತವವಾಗಿಯೂ ನಾನು ನಿನ್ನ ಹಿತೈಷಿಯಾಗಿದ್ದೇನೆ.'

وَجَآءَ رَجُلٌ مِّنْ أَقْصَا ٱلْمَدِينَةِ يَسْعَىٰ قَالَ يَٰمُوسَىٰٓ إِنَّ ٱلْمَلَأَ يَأْتَمِرُونَ بِكَ لِيَقْتُلُوكَ فَٱخْرُجْ إِنِّى لَكَ مِنَ ٱلنَّٰصِحِينَ ﴿٢١﴾

**22.** ಹಾಗೆ ಅವರು ಭಯವಿಹ್ವಲರಾಗಿ ಅತ್ತಿತ್ತ ನೋಡಿಕೊಂಡು ಅಲ್ಲಿಂದ ಹೊರಟು ಹೋದರು. ಅವರು ಹೀಗೆ ಪ್ರಾರ್ಥಿಸಿದರು: 'ನನ್ನ ಪ್ರಭೂ, ಅನ್ಯಾಯಗಾರರಾದ ಜನರಿಂದ ನನ್ನನ್ನು ನೀನು ರಕ್ಷಿಸು'.

فَخَرَجَ مِنْهَا خَآئِفًا يَتَرَقَّبُ قَالَ رَبِّ نَجِّنِى مِنَ ٱلْقَوْمِ ٱلظَّٰلِمِينَ ﴿٢٢﴾ ع

**23.** ಅವರು ಮದ್‌ಯನದ ಕಡೆಗೆ ಪ್ರಯಾಣ ಆರಂಭಿಸುತ್ತಾ ಉದ್ಗರಿಸಿದರು: 'ನನ್ನ ಪ್ರಭು ನನ್ನನ್ನು ಸರಿಯಾದ ಮಾರ್ಗದಲ್ಲಿ ನಡೆಸುವನೆಂದು ನಾನು ಭರವಸೆ ಪಡುತ್ತೇನೆ.'

وَلَمَّا تَوَجَّهَ تِلْقَآءَ مَدْيَنَ قَالَ عَسَىٰ رَبِّىٓ أَن يَهْدِيَنِى سَوَآءَ ٱلسَّبِيلِ ﴿٢٣﴾

**24.** ಅವರು ಮದ್‌ಯನ್ ಪಟ್ಟಣದ ಒಂದು ಜಲಾಶಯವನ್ನು ತಲಪಿದಾಗ ಜನರ ಒಂದು ತಂಡವು (ತಮ್ಮ ಜಾನುವಾರುಗಳಿಗೆ) ನೀರು ಕುಡಿಸುವುದನ್ನು ಅವರು ಕಂಡರು. (ತಮ್ಮ ಜಾನುವಾರುಗಳ ಸಹಿತ) ಅವರಿಂದ ಹಿಂದೆ ಸರಿದು ನಿಂತಿರುವ ಇಬ್ಬರು ಸ್ತ್ರೀಯರನ್ನೂ ಅವರು ಕಂಡರು. ಅವರು ಆ ಸ್ತ್ರೀಯರೊಡನೆ ಕೇಳಿದರು: 'ನಿಮ್ಮ ಸಂಗತಿ ಏನು?' ಅವರು ಉತ್ತರಿಸಿದರು: 'ಈ ಕುರುಬರು (ತಮ್ಮ ಜಾನುವಾರುಗಳಿಗೆ) ನೀರು ಕುಡಿಸಿಕೊಂಡೊಯ್ಯುವ ತನಕ ನಾವು (ನಮ್ಮ ಜಾನುವಾರುಗಳಿಗೆ) ನೀರು ಕುಡಿಸುವಂತಿಲ್ಲ; ನಮ್ಮ ತಂದೆಯಾದರೋ ವೃದ್ಧ ಮನುಷ್ಯ.'

وَلَمَّا وَرَدَ مَآءَ مَدْيَنَ وَجَدَ عَلَيْهِ أُمَّةً مِّنَ ٱلنَّاسِ يَسْقُونَ وَوَجَدَ مِن دُونِهِمُ ٱمْرَأَتَيْنِ تَذُودَانِ قَالَ مَا خَطْبُكُمَا قَالَتَا لَا نَسْقِى حَتَّىٰ يُصْدِرَ ٱلرِّعَآءُ وَأَبُونَا شَيْخٌ كَبِيرٌ ﴿٢٤﴾

**25.** ಆಗ ಅವರು (ಮೂಸಾ) ಅವರೀರ್ವರಿಗೋಸ್ಕರ (ಅವರ ಜಾನುವಾರುಗಳಿಗೆ) ನೀರು ಕುಡಿಸಿದರು. ಅನಂತರ ಅವರು ನೆರಳಿದ್ದಲ್ಲಿಗೆ ಹೋದರು ಮತ್ತು ಹೀಗೆ ಪ್ರಾರ್ಥಿಸಿದರು: 'ನನ್ನ ಪ್ರಭೂ, ನೀನು ನನಗೆ ಯಾವುದೇ ಗುಣಕರವಾದ ಕೊಡುಗೆಯನ್ನು ಇಳಿಸಿಕೊಟ್ಟರೂ ನಾನು ಅದರ ಬೇಡಿಕೆಯುಳ್ಳವನಾಗಿರುತ್ತೇನೆ.'

فَسَقَىٰ لَهُمَا ثُمَّ تَوَلَّىٰٓ إِلَى ٱلظِّلِّ فَقَالَ رَبِّ إِنِّى لِمَآ أَنزَلْتَ إِلَىَّ مِنْ خَيْرٍ فَقِيرٌ ﴿٢٥﴾





**26.** ಆ ಬಳಿಕ ಅವರಲ್ಲೊಬ್ಬಳು ಲಜ್ಜೆಯಿಂದ ನಡೆದುಕೊಂಡು ಅವರ ಬಳಿಗೆ ಬಂದು ಹೇಳಿದಳು: 'ನಮಗೋಸ್ಕರ (ನಮ್ಮ ಜಾನುವಾರುಗಳಿಗೆ) ನೀವು ನೀರು ಕುಡಿಸಿದ್ದಕ್ಕೆ ನಿಮಗೆ ಪ್ರತಿಫಲ ನೀಡಲಿಕ್ಕಾಗಿ ನನ್ನ ತಂದೆ ನಿಮ್ಮನ್ನು ಕರೆಯುತ್ತಾರೆ.' ಆಗ ಅವರು (ಮೂಸಾ) ಅವರ ಬಳಿಗೆ ಬಂದು (ತನ್ನ) ಕಥೆಯನ್ನು ಹೇಳಿದಾಗ ಅವರು, 'ಹೆದರಬೇಡ. ಅನ್ಯಾಯಗಾರರಾದ ಜನರಿಂದ ನೀನು ಪಾರಾಗಿದ್ದಿ' ಎಂದು ಹೇಳಿದರು.

فَجَآءَتْهُ إِحْدَىٰهُمَا تَمْشِى عَلَى ٱسْتِحْيَآءٍ قَالَتْ إِنَّ أَبِى يَدْعُوكَ لِيَجْزِيَكَ أَجْرَ مَا سَقَيْتَ لَنَا فَلَمَّا جَآءَهُۥ وَقَصَّ عَلَيْهِ ٱلْقَصَصَ قَالَ لَا تَخَفْ نَجَوْتَ مِنَ ٱلْقَوْمِ ٱلظَّٰلِمِينَ ﴿٢٦﴾

**27.** ಆ ಇಬ್ಬರು ಸ್ತ್ರೀಯರ ಪೈಕಿ ಒಬ್ಬಳು ಹೇಳಿದಳು: 'ಅಪ್ಪಾ, ಅವರನ್ನು ಕೆಲಸಕ್ಕಿಟ್ಟುಕೊಳ್ಳಿರಿ. ನೀವು ಕೆಲಸಕ್ಕಿಡುವವರಲ್ಲಿ ಬಲಶಾಲಿಯೂ ನಂಬಿಗಸ್ಥನೂ ಆಗಿರುವವನೇ ಉತ್ತಮನು.'

قَالَتْ إِحْدَىٰهُمَا يَٰٓأَبَتِ ٱسْتَـْٔجِرْهُ إِنَّ خَيْرَ مَنِ ٱسْتَـْٔجَرْتَ ٱلْقَوِىُّ ٱلْأَمِينُ ﴿٢٧﴾

**28.** ಅವರು ಹೇಳಿದರು: 'ನೀನು ಎಂಟು ವರ್ಷಗಳ ಕಾಲ ನನ್ನ ಬಳಿ ದುಡಿಯುವ ಶರ್ತದಲ್ಲಿ ನನ್ನ ಈ ಎರಡು ಪುತ್ರಿಯರ ಪೈಕಿ ಒಬ್ಬಳನ್ನು ನಿನಗೆ ಮದುವೆಮಾಡಿ ಕೊಡಲು ನಾನು ಇಚ್ಛಿಸುತ್ತೇನೆ. ಆದರೆ ನೀನು ಹತ್ತು ವರ್ಷಗಳ ಕಾಲ ನೌಕರಿ ಮಾಡುವುದಾದರೆ ಅದು ನಿನ್ನ ಇಷ್ಟ. ನಾನು ನಿನ್ನನ್ನು ಬಲವಂತಪಡಿಸಲಾರೆ. ಅಲ್ಲಾಹನಿಚ್ಛಿಸಿದರೆ ನೀನು ನನ್ನನ್ನು ಸಜ್ಜನನಾಗಿ ಕಾಣುವೆ.'

قَالَ إِنِّىٓ أُرِيدُ أَنْ أُنكِحَكَ إِحْدَى ٱبْنَتَىَّ هَٰتَيْنِ عَلَىٰٓ أَن تَأْجُرَنِى ثَمَٰنِىَ حِجَجٍ فَإِنْ أَتْمَمْتَ عَشْرًا فَمِنْ عِندِكَ وَمَآ أُرِيدُ أَنْ أَشُقَّ عَلَيْكَ سَتَجِدُنِىٓ إِن شَآءَ ٱللَّهُ مِنَ ٱلصَّٰلِحِينَ ﴿٢٨﴾

**29.** ಅವರು (ಮೂಸಾ) ಹೇಳಿದರು: 'ಇದು ನನ್ನ ಮತ್ತು ನಿಮ್ಮ ಮಧ್ಯದ ಒಪ್ಪಂದವಾಗಿದೆ. ಈ ಎರಡು ಅವಧಿಗಳಲ್ಲಿ ಯಾವುದಾದರೊಂದನ್ನು ನಾನು ಪೂರ್ಣಗೊಳಿಸಿದರೂ ನನಗೆ ಅನ್ಯಾಯವಾಗಬಾರದು. ನಾವು ಹೇಳುವುದಕ್ಕೆ ಅಲ್ಲಾಹನು ಸಾಕ್ಷಿಯಾಗಿದ್ದಾನೆ.'

قَالَ ذَٰلِكَ بَيْنِى وَبَيْنَكَ أَيَّمَا ٱلْأَجَلَيْنِ قَضَيْتُ فَلَا عُدْوَٰنَ عَلَىَّ وَٱللَّهُ عَلَىٰ مَا نَقُولُ وَكِيلٌ ﴿٢٩﴾ ع

**30.** ಹಾಗೆ ಮೂಸಾ ತನ್ನ ಅವಧಿಯನ್ನು ಪೂರ್ಣಗೊಳಿಸಿ ತನ್ನ ಕುಟುಂಬದೊಂದಿಗೆ ಪ್ರಯಾಣ ಮಾಡುತ್ತಿದ್ದಾಗ ಪರ್ವತದ ಕಡೆಯಲ್ಲಿ ಒಂದು ಬೆಂಕಿಯನ್ನು ಕಂಡರು. ಅವರು ತನ್ನ ಕುಟುಂಬದವರೊಡನೆ ಹೇಳಿದರು: 'ನೀವಿಲ್ಲಿ ನಿಲ್ಲಿರಿ. ನಾನೊಂದು ಬೆಂಕಿಯನ್ನು ಕಂಡಿದ್ದೇನೆ. ಪ್ರಾಯಶಃ ಅಲ್ಲಿಂದ ನಾನು ನಿಮಗೆ (ಪ್ರಯೋಜನ

فَلَمَّا قَضَىٰ مُوسَى ٱلْأَجَلَ وَسَارَ بِأَهْلِهِۦٓ ءَانَسَ مِن جَانِبِ ٱلطُّورِ نَارًا قَالَ لِأَهْلِهِ ٱمْكُثُوٓا۟ إِنِّىٓ ءَانَسْتُ نَارًا

لَعَلِّيٓ اٰتِيۡكُمۡ مِّنۡهَا بِخَبَرٍ اَوۡ جَذۡوَةٍ
مِّنَ النَّارِ لَعَلَّكُمۡ تَصۡطَلُوۡنَ ﴿٢٩﴾

ಕರವಾದ) ಮಾಹಿತಿಯನ್ನು ತರುವೆನು ಅಥವಾ ನಿಮಗೆ ಬೆಂಕಿ ಕಾಯಿಸಲಿಕ್ಕೋಸ್ಕರ ಉರಿಯುವ ಬೆಂಕಿಯ ಒಂದು ಕೆಂಡವನ್ನು ತರುವೆನು.'[364B]

فَلَمَّآ اَتٰىهَا نُوۡدِيَ مِنۡ شَاطِئِ الۡوَادِ
الۡاَيۡمَنِ فِي الۡبُقۡعَةِ الۡمُبٰرَكَةِ مِنَ
الشَّجَرَةِ اَنۡ يّٰمُوۡسٰٓى اِنِّيۡٓ اَنَا اللّٰهُ رَبُّ
الۡعٰلَمِيۡنَ ﴿٣٠﴾

**31.** ಹಾಗೆ ಅವರು (ಮೂಸಾ) ಅಲ್ಲಿಗೆ ಬಂದಾಗ, ಆ ಅನುಗ್ರಹೀತ ಪ್ರದೇಶದಲ್ಲಿರುವ ಕಣಿವೆಯ ಬಲಬದಿಯ ಒಂದು ವೃಕ್ಷದಿಂದ ಅವರನ್ನು ಕರೆದು ಹೀಗೆ ಹೇಳಲಾಯಿತು: 'ಎಲೈ ಮೂಸಾ, ಸರ್ವ ಲೋಕಗಳ ಪ್ರಭುವಾದ ಅಲ್ಲಾಹನು ನಾನೇ ಆಗಿದ್ದೇನೆ.

وَاَنۡ اَلۡقِ عَصَاكَ ؕ فَلَمَّا رَاٰهَا تَهۡتَزُّ
كَاَنَّهَا جَآنٌّ وَّلّٰى مُدۡبِرًا وَّلَمۡ
يُعَقِّبۡ ؕ يٰمُوۡسٰٓى اَقۡبِلۡ وَلَا تَخَفۡ ۟
اِنَّكَ مِنَ الۡاٰمِنِيۡنَ ﴿٣١﴾

**32.** 'ನಿನ್ನ ಬಡಿಗೆಯನ್ನು ನೀನು ಕೆಳಗೆ ಎಸೆ' (ಆಗ ಅವರು ಅದನ್ನು ಕೆಳಗೆ ಎಸೆದರು). ಆಗ ಅದು ಹಾವಿನಂತೆ ಹರಿದಾಡಲು ತೊಡಗಿದಾಗ ಅವರು ಅಲ್ಲಿಂದ ಬೆನ್ನು ತಿರುಗಿಸಿ ಓಡಿದರು; ಹಿಂದಿರುಗಿ ನೋಡಲಿಲ್ಲ. (ಆಗ ಹೀಗೆ ಹೇಳಲಾಯಿತು:) 'ಎಲೈ ಮೂಸಾ, ನೀನು ಭಯಪಡ ಬೇಡ. ನೀನು ಸುರಕ್ಷಿತನಾಗಿರುವೆ.

اُسۡلُكۡ يَدَكَ فِيۡ جَيۡبِكَ تَخۡرُجۡ بَيۡضَآءَ
مِنۡ غَيۡرِ سُوۡٓءٍ ۫ وَّاضۡمُمۡ اِلَيۡكَ
جَنَاحَكَ مِنَ الرَّهۡبِ فَذٰنِكَ
بُرۡهَانٰنِ مِنۡ رَّبِّكَ اِلٰى فِرۡعَوۡنَ وَ
مَلَا۟ئِهٖ ؕ اِنَّهُمۡ كَانُوۡا قَوۡمًا فٰسِقِيۡنَ ﴿٣٢﴾

**33.** 'ನಿನ್ನ ಕೈಯನ್ನು ನಿನ್ನ ಬಗಲ ಜೇಬಿನೊಳಗೆ ತುರುಕಿಹಿಡಿ. ಅದು ರೋಗರಹಿತವಾಗಿ ಬೆಳ್ಳಗಾಗಿ ಹೊರ ಬರುವುದು. ಭಯದಿಂದ ಬಿಡುಗಡೆ ಹೊಂದಲಿಕ್ಕಾಗಿ ನಿನ್ನ ತೋಳನ್ನು ಹಿಂದಕ್ಕೆಳೆದು ಶರೀರಕ್ಕೆ ಒತ್ತಿ ಹಿಡಿದುಕೋ. ಇವು ಫಿರ್‌ಔನ್ ಮತ್ತು ಅವನ (ಕೈ ಕೆಳಗಿನ) ಮುಖಂಡ ರಿಗೆ ನಿನ್ನ ಪ್ರಭುವಿನ ಕಡೆಯಿಂದಿರುವ ಎರಡು ದೃಷ್ಟಾಂತಗ ಳಾಗಿವೆ. ದಿಟವಾಗಿಯೂ ಅವರು ಧಿಕ್ಕಾರಿಗಳಾದ ಜನರಾ ಗಿದ್ದಾರೆ.'

قَالَ رَبِّ اِنِّيۡ قَتَلۡتُ مِنۡهُمۡ نَفۡسًا فَاَخَافُ
اَنۡ يَّقۡتُلُوۡنِ ﴿٣٣﴾

**34.** ಅವರು (ಮೂಸಾ) ಹೇಳಿದರು: 'ಪ್ರಭೂ, ಅವರ ಪೈಕಿಯ ಒಬ್ಬನನ್ನು ನಾನು ಕೊಂದುಬಿಟ್ಟಿದ್ದೇನೆ. ಆದ್ದ ರಿಂದ ಅವರು ನನ್ನನ್ನು ಕೊಲ್ಲುವರೆಂದು ನನಗೆ ಭಯ ವಿದೆ.

وَاَخِيۡ هٰرُوۡنُ هُوَ اَفۡصَحُ مِنِّيۡ لِسَانًا

**35.** 'ನನ್ನ ಸಹೋದರ ಹಾರೂನ್ - ಆತನು ನನಗಿಂತ ನಿರರ್ಗಳವಾಗಿ ಮಾತನಾಡುವವನಾಗಿದ್ದಾನೆ;

364B. ಅಧ್ಯಾಯ 20 ವಚನ 11ರ ಟಿಪ್ಪಣಿ ನೋಡಿರಿ.





فَاَرۡسِلۡهُ مَعِيَ رِدۡاً يُّصَدِّقُنِيۡٓ ۫ اِنِّيۡٓ
اَخَافُ اَنۡ يُّكَذِّبُوۡنِ ﴿٣٤﴾

ಆದ್ದರಿಂದ ನನ್ನ ಸಹಾಯಕನಾಗಿ ಆತನನ್ನು ಸಹ ನೀನು ನನ್ನೊಂದಿಗೆ ಕಳುಹಿಸು. ಆತನು ನನ್ನ ಸತ್ಯಸಂಧತೆಗೆ ಸಾಕ್ಷಿ ಆಗಲಿ. ಅವರು ನನ್ನನ್ನು ಸುಳ್ಳುಗಾರನೆಂದು ಆಪಾದಿಸು ವರೆಂದು ನನಗೆ ಭಯವಿದೆ.'

قَالَ سَنَشُدُّ عَضُدَكَ بِاَخِيۡكَ وَ
نَجۡعَلُ لَكُمَا سُلۡطٰنًا فَلَا يَصِلُوۡنَ
اِلَيۡكُمَا ۚۛ بِاٰيٰتِنَا ۚۛ اَنۡتُمَا وَ مَنِ
اتَّبَعَكُمَا الۡغٰلِبُوۡنَ ﴿٣٥﴾

**36.** ಅವನು (ಅಲ್ಲಾಹನು) ಹೇಳಿದನು: 'ನಿನ್ನ ಸಹೋದರನ ಮೂಲಕ ನಾವು ನಿನ್ನ ಕೈಯನ್ನು ಬಲಪಡಿಸುವೆವು. ನಿಮಗಿಬ್ಬರಿಗೂ ನಾವು ಶಕ್ತಿಯನ್ನು ನೀಡುವೆವು. ಆದ ಕಾರಣ ಅವರು ನಿಮ್ಮನ್ನು ಸಮೀಪಿಸಲಾರರು. ನಮ್ಮ ದೃಷ್ಟಾಂತಗಳ ಸಹಿತ (ನೀವು ಹೋಗಿರಿ). ನೀವಿಬ್ಬರೂ ನಿಮ್ಮನ್ನು ಅನುಸರಿಸುವವರೂ ವಿಜಯಿಗಳಾಗುವಿರಿ.'

فَلَمَّا جَآءَهُمۡ مُّوۡسٰى بِاٰيٰتِنَا بَيِّنٰتٍ
قَالُوۡا مَا هٰذَآ اِلَّا سِحۡرٌ مُّفۡتَرًى وَّمَا
سَمِعۡنَا بِهٰذَا فِيۡٓ اٰبَآئِنَا الۡاَوَّلِيۡنَ ﴿٣٦﴾

**37.** ಹಾಗೆ ನಮ್ಮ ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಮೂಸಾ ಅವರ ಬಳಿಕ ಬಂದಾಗ ಅವರು ಹೀಗೆ ಹೇಳಿದರು: 'ಇದು ಜಾದೂವಿದ್ಯೆಯ ತಂತ್ರವಲ್ಲದೆ ಬೇರೇನೂ ಅಲ್ಲ. ನಾವು ನಮ್ಮ ಪೂರ್ವಿಕರಾದ ತಂದೆ ತಾತಂದಿರಿಂದ ಇಂತಹದ್ದನ್ನು ಕೇಳಿಯೇ ಇಲ್ಲ.'

وَقَالَ مُوۡسٰى رَبِّيۡٓ اَعۡلَمُ بِمَنۡ جَآءَ
بِالۡهُدٰى مِنۡ عِنۡدِهٖ وَمَنۡ تَكُوۡنُ لَهٗ
عَاقِبَةُ الدَّارِ ؕ اِنَّهٗ لَا يُفۡلِحُ
الظّٰلِمُوۡنَ ﴿٣٧﴾

**38.** ಮೂಸಾ ಹೇಳಿದರು: 'ತನ್ನ ಕಡೆಯಿಂದ ಮಾರ್ಗದರ್ಶನವನ್ನು ತಂದವನ ಬಗ್ಗೆ ನನ್ನ ಪ್ರಭು ಚೆನ್ನಾಗಿ ಬಲ್ಲವನಾಗಿದ್ದಾನೆ. ಯಾರ ಅಂತ್ಯ ಉತ್ತಮ ವಾದುದೆಂದು ಸಹ ಅವನು ಬಲ್ಲನು. ಖಂಡಿತವಾಗಿಯೂ ಅನ್ಯಾಯಗಾರರು ಜಯಗಳಿಸಲಾರರು.'

وَقَالَ فِرۡعَوۡنُ يٰۤاَيُّهَا الۡمَلَاُ مَا
عَلِمۡتُ لَكُمۡ مِّنۡ اِلٰهٍ غَيۡرِيۡ ۚ
فَاَوۡقِدۡ لِيۡ يٰهَامٰنُ عَلَى الطِّيۡنِ
فَاجۡعَلۡ لِّيۡ صَرۡحًا لَّعَلِّيۡٓ اَطَّلِعُ اِلٰٓى اِلٰهِ
مُوۡسٰى ۙ وَاِنِّيۡ لَاَظُنُّهٗ مِنَ الۡكٰذِبِيۡنَ ﴿٣٨﴾

**39.** ಫಿರ್‌ಔನ್ ಹೇಳಿದನು: 'ಎಲೈ ಮುಖಂಡರೇ, ನನ್ನ ಹೊರತು ನಿಮಗೆ ಬೇರೆ ದೇವನಿರುವುದಾಗಿ ನಾನ ರಿಯೆ. ಎಲೈ ಹಾಮಾನ್ ನನಗೋಸ್ಕರ ನೀನು ಆವೆ ಮಣ್ಣನ್ನು ಬೇಯಿಸು[365] ಮತ್ತು ನನಗೊಂದು ಗೋಪುರವನ್ನು ನಿರ್ಮಿಸು. (ಅದರ ಮೇಲೆ ಹತ್ತಿ) ನಾನು ಮೂಸಾನ ದೇವನನ್ನು ಹುಡುಕುವೆ. ಅವನು ಸುಳ್ಳುಗಾರನೇ ಆಗಿದ್ದಾನೆಂದು ನಾನು ಭಾವಿಸುತ್ತೇನೆ.'

365. ಇಟ್ಟಿಗೆಗಳನ್ನು ತಯಾರಿಸು ಎಂದರ್ಥ.

**40.** ಅವನು (ಫಿರ್‌ಔನ್) ಮತ್ತು ಅವನ ಸೈನಿಕರು ನಾಡಿನಲ್ಲಿ ಅನ್ಯಾಯವಾಗಿಯೂ ದುರಹಂಕಾರದಿಂದಲೂ ವರ್ತಿಸಿದರು. ಅವರು ನಮ್ಮ ಬಳಿಗೆ ಮರಳಿಸಲ್ಪಡಲಾರರೆಂದು ಅವರು ಭಾವಿಸಿದರು.

وَاسْتَكْبَرَ هُوَ وَجُنُودُهُ فِي الْأَرْضِ بِغَيْرِ الْحَقِّ وَظَنُّوا أَنَّهُمْ إِلَيْنَا لَا يُرْجَعُونَ ﴿٤٠﴾

**41.** ಆದ್ದರಿಂದ ನಾವು ಅವನನ್ನೂ ಅವನ ಪಡೆಯನ್ನೂ ಹಿಡಿದೆವು ಮತ್ತು ಅವರನ್ನು ಸಮುದ್ರಕ್ಕೆ ಎಸೆದೆವು. ದುಷ್ಕರ್ಮಿಗಳ ಅಂತ್ಯ ಎಷ್ಟು ಕೆಟ್ಟದೆಂದು ನೋಡು.

فَأَخَذْنَاهُ وَجُنُودَهُ فَنَبَذْنَاهُمْ فِي الْيَمِّ ۖ فَانْظُرْ كَيْفَ كَانَ عَاقِبَةُ الظَّالِمِينَ ﴿٤١﴾

**42.** ನಾವು ಅವರನ್ನು ನರಕದೆಡೆಗೆ ಕರೆಯುವ ಮುಖಂಡರನ್ನಾಗಿ ಮಾಡಿದೆವು. ಪುನರುತ್ಥಾನ ದಿನದಂದು ಅವರಿಗೆ ಯಾವ ಸಹಾಯವೂ ದೊರಕಲಾರದು.

وَجَعَلْنَاهُمْ أَئِمَّةً يَدْعُونَ إِلَى النَّارِ ۖ وَيَوْمَ الْقِيَامَةِ لَا يُنْصَرُونَ ﴿٤٢﴾

**43.** ನಾವು ಈ ಲೋಕದಲ್ಲಿ ಶಾಪ ಅವರನ್ನು ಬೆನ್ನಟ್ಟುವಂತೆ ಮಾಡಿದ್ದೇವೆ. ಪುನರುತ್ಥಾನ ದಿನದಂದು ಅವರು ದುರವಸ್ಥೆಗೆ ಗುರಿಯಾದವರಲ್ಲಿ ಸೇರುವರು.

وَأَتْبَعْنَاهُمْ فِي هَٰذِهِ الدُّنْيَا لَعْنَةً ۖ وَيَوْمَ الْقِيَامَةِ هُمْ مِنَ الْمَقْبُوحِينَ ﴿٤٣﴾

**44.** ಪೂರ್ವಿಕ ತಲೆಮಾರುಗಳನ್ನು ನಾಶಪಡಿಸಿದ ಬಳಿಕ, ಜನರಿಗೆ ತಿಳುವಳಿಕೆ ಮೂಡಿಸಲಿಕ್ಕಾಗಿಯೂ ಮಾರ್ಗದರ್ಶನ ಮತ್ತು ಕರುಣೆಯಾಗಿಯೂ ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು - ಜನರು ಉಪದೇಶವನ್ನು ಸ್ವೀಕರಿಸಲಿಕ್ಕೋಸ್ಕರ.

وَلَقَدْ آتَيْنَا مُوسَى الْكِتَابَ مِنْ بَعْدِ مَا أَهْلَكْنَا الْقُرُونَ الْأُولَىٰ بَصَائِرَ لِلنَّاسِ وَهُدًى وَرَحْمَةً لَعَلَّهُمْ يَتَذَكَّرُونَ ﴿٤٤﴾

**45.** ನಾವು ಮೂಸಾರಿಗೆ (ಪ್ರವಾದಿತ್ವದ) ದೌತ್ಯವನ್ನು ಒಪ್ಪಿಸಿದಾಗ ನೀನು (ಆ ಪರ್ವತದ) ಪಶ್ಚಿಮ ದಿಕ್ಕಿನಲ್ಲಿ ಇದ್ದಿರಲಿಲ್ಲ.[365A] ನೀನು ಸಾಕ್ಷಿಗಳಲ್ಲಿ ಸೇರಿದವನೂ ಆಗಿರಲಿಲ್ಲ.

وَمَا كُنْتَ بِجَانِبِ الْغَرْبِيِّ إِذْ قَضَيْنَا إِلَىٰ مُوسَى الْأَمْرَ وَمَا كُنْتَ مِنَ الشَّاهِدِينَ ﴿٤٥﴾

**46.** ಆದರೆ ನಾವು (ಮೂಸಾರ ಬಳಿಕ) ಅನೇಕ ಪೀಳಿಗೆಗಳನ್ನು ಸೃಷ್ಟಿಸಿದೆವು. ಅವರ ಆಯುಷ್ಯವನ್ನು

وَلَٰكِنَّا أَنْشَأْنَا قُرُونًا فَتَطَاوَلَ

365A. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರ ಕುರಿತು ಪ್ರವಾದಿ ಮೂಸಾ (ಅ)ರಿಗೆ ದಿವ್ಯಜ್ಞಾನ ಲಭಿಸಿದ್ದು ಆ ಸಂದರ್ಭದಲ್ಲಾಗಿತ್ತು. "ನೀನು ಆಗ ಅಲ್ಲಿ ಇದ್ದಿರಲಿಲ್ಲ" ಎಂದರೆ "ನಿನ್ನ ಕುರಿತು ತೌರಾತ್‌ನಲ್ಲಿರುವ ಭವಿಷ್ಯವಾಣಿಯು ನೀನು ಹೇಳಿಕೊಟ್ಟು ಬರೆಸಿದ್ದಲ್ಲ" ಎಂದು ತಾತ್ಪರ್ಯ.





**ದೀರ್ಘಗೊಳಿಸಿದೆವು.** (ಹಾಗೆ ಅವರು ತಮ್ಮ ಭವಿಷ್ಯವಾಣಿಯನ್ನು ಮರೆತು ಬಿಟ್ಟರು.)[365B] **ನೀನು ಮದ್‌ಯನ್ ನಿವಾಸಿಗಳೊಂದಿಗೆ ವಾಸಮಾಡಿ ಅವರಿಗೆ ನಮ್ಮ ವಚನಗಳನ್ನು ಓದಿ ಹೇಳಿರಲಿಲ್ಲ. ಆದರೆ ನಿಶ್ಚಯವಾಗಿಯೂ ಸಂದೇಶವಾಹಕರನ್ನು ಕಳುಹಿಸಿದವರು ನಾವೇ ಆಗಿದ್ದೇವೆ.**

عَلَيْهِمُ الْعُمُرُ ۚ وَمَا كُنْتَ ثَاوِيًا فِي أَهْلِ مَدْيَنَ تَتْلُو عَلَيْهِمْ آيَاتِنَا وَلَٰكِنَّا كُنَّا مُرْسِلِينَ ﴿٤٦﴾

**47.** ನಾವು (ಮೂಸಾರನ್ನು) ಕರೆದಾಗ ನೀನು ಆ ಪರ್ವತದ ಬದಿಯಲ್ಲಿರಲಿಲ್ಲ. ಆದರೆ ನಿನಗಿಂತ ಮುಂಚೆ ಯಾವ ಮುನ್ನೆಚ್ಚರಿಕೆಗಾರನೂ ಬಂದಿರದ ಒಂದು ಜನತೆಗೆ, ನೀನು ಅವರಿಗೆ ಮುನ್ನೆಚ್ಚರಿಕೆ ನೀಡಲಿಕ್ಕೋಸ್ಕರ ನಿನ್ನ ಪ್ರಭುವಿನಿಂದ ಒಂದು ಕೃಪೆಯೆಂಬಂತೆ (ನಾವು ನಿನ್ನನ್ನು ಕಳುಹಿಸಿದ್ದೇವೆ) - ಅವರು ಉಪದೇಶ ಸ್ವೀಕರಿಸುವಂತಾಗಲಿಕ್ಕೋಸ್ಕರ.

وَمَا كُنْتَ بِجَانِبِ الطُّورِ إِذْ نَادَيْنَا وَلَٰكِنْ رَحْمَةً مِنْ رَبِّكَ لِتُنْذِرَ قَوْمًا مَا أَتَاهُمْ مِنْ نَذِيرٍ مِنْ قَبْلِكَ لَعَلَّهُمْ يَتَذَكَّرُونَ ﴿٤٧﴾

**48.** ಇಲ್ಲವಾದರೆ ಅವರ ಕೃತ್ಯಗಳ ಫಲವಾಗಿ ಅವರ ಮೇಲೆ ಆಪತ್ತೇನಾದರೂ ಬಂದೆರಗಿದರೆ ಅವರು ಹೀಗೆ ಹೇಳುವರು: 'ನಮ್ಮ ಪ್ರಭೂ, ನೀನೇಕೆ ಒಬ್ಬ ಸಂದೇಶವಾಹಕನನ್ನು ನಮ್ಮ ಬಳಿಗೆ ಕಳುಹಿಸಲಿಲ್ಲ? ಹಾಗೆ ಮಾಡಿದ್ದರೆ ನಾವು ನಿನ್ನ ದೃಷ್ಟಾಂತಗಳನ್ನು ಅನುಸರಿಸಿ ವಿಶ್ವಾಸಿಗಳಾಗಿ ಬಿಡುತ್ತಿದ್ದೆವಲ್ಲವೇ?'

وَلَوْلَا أَنْ تُصِيبَهُمْ مُصِيبَةٌ بِمَا قَدَّمَتْ أَيْدِيهِمْ فَيَقُولُوا رَبَّنَا لَوْلَا أَرْسَلْتَ إِلَيْنَا رَسُولًا فَنَتَّبِعَ آيَاتِكَ وَنَكُونَ مِنَ الْمُؤْمِنِينَ ﴿٤٨﴾

**49.** ಆದರೆ ನಮ್ಮ ಕಡೆಯಿಂದಿರುವ ಸತ್ಯ ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಮೂಸಾರಿಗೆ ನೀಡಲ್ಪಟ್ಟಂಥದ್ದು ಈತನಿಗೆ[366] ಏಕೆ ನೀಡಲ್ಪಡಲಿಲ್ಲ?' ಏನು, ಇದಕ್ಕಿಂತ ಮುಂಚೆ ಮೂಸಾರಿಗೆ ನೀಡಲ್ಪಟ್ಟದ್ದನ್ನು ಅವರು ನಿರಾಕರಿಸಲಿಲ್ಲವೇ? ಅವರು ಹೇಳಿದ್ದರು: 'ಇವರು ಪರಸ್ಪರ ಬೆಂಬಲಿಸುವ ಇಬ್ಬರು[366A]

فَلَمَّا جَاءَهُمُ الْحَقُّ مِنْ عِنْدِنَا قَالُوا لَوْلَا أُوتِيَ مِثْلَ مَا أُوتِيَ مُوسَىٰ ۚ أَوَلَمْ يَكْفُرُوا بِمَا أُوتِيَ مُوسَىٰ مِنْ قَبْلُ ۖ قَالُوا سِحْرَانِ

365B. ಮುಹಮ್ಮದ್ ಪೈಗಂಬರರ (ಸ) ಕುರಿತು ಪ್ರವಾದಿ ಮೂಸಾ (ಅ)ರ ಭವಿಷ್ಯವಾಣಿ ಇದ್ದರೂ ಯಹೂದ್ಯರು ಪೈಗಂಬರರನ್ನು ಸ್ವೀಕರಿಸದಿರಲು ಕಾರಣ ಕಾಲದ ದೀರ್ಘವಾದ ಅಂತರವಾಗಿತ್ತು. ಪ್ರವಾದನೆ ಗೈದು ದೀರ್ಘಕಾಲ ಗತಿಸಿದಾಗ ಅವರು ಆ ಪ್ರವಾದನವನ್ನು ಮರೆತುಬಿಟ್ಟರು ಎಂದು ತಾತ್ಪರ್ಯ.

366. ಮುಹಮ್ಮದ್ ಪೈಗಂಬರ್ (ಸ)ರಿಗೆ.

366A. ಮೂಸಾ ಮತ್ತು ಹಾರೂನ್.

ಜಾದೂಗಾರರಾಗಿದ್ದಾರೆ'. ಅವರು ಮತ್ತೂ ಹೇಳಿದ್ದರು: 'ನಾವು ಎಲ್ಲರನ್ನೂ ನಿರಾಕರಿಸುತ್ತೇವೆ.'

تَظٰهَرَا ۗ وَ قَالُوْٓا اِنَّا بِكُلٍّ
كٰفِرُوْنَ ﴿٤٩﴾

50. ಹೇಳು: 'ಮಾರ್ಗದರ್ಶನ ಮಾಡುವುದರಲ್ಲಿ ಅವೆರಡಕ್ಕಿಂತ (ಖುರ್‌ಆನ್ ಮತ್ತು ತೌರಾತಿಗಿಂತ) ಮಿಗಿಲಾದ (ಬೇರೊಂದು) ಗ್ರಂಥವನ್ನು ಅಲ್ಲಾಹನ ಕಡೆಯಿಂದ ನೀವು ತನ್ನಿರಿ. ನೀವು ಸತ್ಯವಂತರೆಂದಾದರೆ ನಾನು ಅದರ ಅನುಸ'ರಣೆ ಮಾಡುವೆನು.'

قُلْ فَاْتُوْا بِكِتٰبٍ مِّنْ عِنْدِ اللّٰهِ هُوَ
اَهْدٰى مِنْهُمَآ اَتَّبِعْهُ اِنْ كُنْتُمْ
صٰدِقِيْنَ ﴿٥٠﴾

51. ಆದರೆ ಅವರು ನಿನಗೆ ಉತ್ತರ ಕೊಡದಿದ್ದರೆ, ಅವರು ತಮ್ಮ ಸ್ವೇಚ್ಛೆಗಳನ್ನು ಮಾತ್ರ ಅನುಸರಿಸುತ್ತಾರೆಂದು ತಿಳಿದುಕೋ. ಅಲ್ಲಾಹನ ಮಾರ್ಗದರ್ಶನವಿಲ್ಲದೆ ತನ್ನ ಸ್ವೇಚ್ಛೆಗಳನ್ನು ಮಾತ್ರ ಅನುಸರಿಸುವವನಿಗಿಂತ ಹಾದಿ ತಪ್ಪಿದವನು ಬೇರೆ ಯಾರಿದ್ದಾನೆ? ಖಂಡಿತವಾಗಿಯೂ ಅಲ್ಲಾಹನು ಅನ್ಯಾಯಗಾರರಿಗೆ ಮಾರ್ಗದರ್ಶನ ನೀಡಲಾರನು.

فَاِنْ لَّمْ يَسْتَجِيْبُوْا لَكَ فَاعْلَمْ
اَنَّمَا يَتَّبِعُوْنَ اَهْوَآءَهُمْ ۗ وَ مَنْ
اَضَلُّ مِمَّنِ اتَّبَعَ هَوٰىهُ بِغَيْرِ هُدًى
مِّنَ اللّٰهِ ۗ اِنَّ اللّٰهَ لَا يَهْدِى الْقَوْمَ
الظّٰلِمِيْنَ ﴿٥١﴾

52. ಅವರು ಬುದ್ಧಿವಾದ ಪಡೆಯಲಿ ಎಂಬ ಉದ್ದೇಶದಿಂದ ನಾವು ಅವರಿಗೆ ಪದೇ ಪದೇ ಸಂದೇಶವನ್ನಿತ್ತಿದ್ದೇವೆ.

وَلَقَدْ وَصَّلْنَا لَهُمُ الْقَوْلَ لَعَلَّهُمْ
يَتَذَكَّرُوْنَ ﴿٥٢﴾

53. ನಾವು ಇದಕ್ಕಿಂತ ಮುಂಚೆ ಯಾರಿಗೆ ಗ್ರಂಥ ನೀಡಿದ್ದೆವೋ ಅವರು[367] ಇದನ್ನು ನಂಬುತ್ತಾರೆ.

اَلَّذِيْنَ اٰتَيْنٰهُمُ الْكِتٰبَ مِنْ قَبْلِهٖ
هُمْ بِهٖ يُؤْمِنُوْنَ ﴿٥٣﴾

54. ಇದನ್ನು (ಖುರ್‌ಆನನ್ನು) ಅವರಿಗೆ ಓದಿ ಹೇಳುವಾಗ ಅವರು ಹೇಳುತ್ತಾರೆ: 'ನಾವು ಇದನ್ನು ನಂಬುತ್ತೇವೆ. ನಿಶ್ಚಯವಾಗಿಯೂ ಅದು ನಮ್ಮ ಪ್ರಭುವಿನ ಕಡೆಯಿಂದಿರುವ ಸತ್ಯವಾಗಿದೆ. ಇದಕ್ಕಿಂತ ಮೊದಲೇ ನಾವು (ಅಲ್ಲಾಹನಿಗೆ) ಶರಣಾದವರಾಗಿದ್ದೇವೆ.'

وَاِذَا يُتْلٰى عَلَيْهِمْ قَالُوْٓا اٰمَنَّا بِهٖٓ
اِنَّهُ الْحَقُّ مِنْ رَّبِّنَآ اِنَّا كُنَّا مِنْ
قَبْلِهٖ مُسْلِمِيْنَ ﴿٥٤﴾

55. ಅವರಿಗೆ ಇಮ್ಮಡಿ ಪ್ರತಿಫಲ ನೀಡಲಾಗುವುದು. ಏಕೆಂದರೆ, ಅವರು ಸ್ಥಿರಚಿತ್ತರಾಗಿದ್ದರು. ಅವರು ಕೆಡುಕನ್ನು ಒಳಿತಿನ ಮೂಲಕ ತಡೆಯುತ್ತಾರೆ ಮತ್ತು ನಾವು ಅವರಿಗೆ ನೀಡಿದವುಗಳಿಂದ (ನಮ್ಮ ಪಥದಲ್ಲಿ) ಖರ್ಚು ಮಾಡುತ್ತಾರೆ.

اُولٰٓئِكَ يُؤْتَوْنَ اَجْرَهُمْ مَّرَّتَيْنِ
بِمَا صَبَرُوْا وَ يَدْرَءُوْنَ بِالْحَسَنَةِ
السَّيِّئَةَ وَمِمَّا رَزَقْنٰهُمْ يُنْفِقُوْنَ ﴿٥٥﴾

367. ಅವರ ಪೈಕಿ ತಮ್ಮ ಗ್ರಂಥಗಳ ಭವಿಷ್ಯನುಡಿಗಳು ಸತ್ಯವೆಂದು ನಂಬುವವರು.





56. ಅವರು ನಿಷ್ಪ್ರಯೋಜಕ ಮಾತನ್ನು ಕೇಳುವಾಗ, ಅದರಿಂದ ಮುಖ ತಿರುಗಿಸಿ ಹೇಳುತ್ತಾರೆ: 'ನಮಗೆ ನಮ್ಮ ಕೆಲಸಗಳಿವೆ. ನಿಮಗೆ ನಿಮ್ಮ ಕೆಲಸಗಳಿವೆ. ನಿಮಗೆ ಸಲಾಂ. ಅವಿವೇಕಿಗಳಾದವರೊಂದಿಗೆ ಸಂಪರ್ಕವಿರಿಸಲು ನಾವು ಇಚ್ಛಿಸುವುದಿಲ್ಲ.'

وَاِذَا سَمِعُوا اللَّغْوَ اَعْرَضُوْا عَنْهُ وَ
قَالُوْا لَنَآ اَعْمَالُنَا وَلَكُمْ اَعْمَالُكُمْ ۫
سَلٰمٌ عَلَيْكُمْ ۫ لَا نَبْتَغِى الْجٰهِلِيْنَ ﴿٥٦﴾

57. (ಎಲೈ ಮುಹಮ್ಮದ್) ದಿಟವಾಗಿಯೂ ನೀನು ಪ್ರೀತಿಸುವವರನ್ನೆಲ್ಲ ನೀನು ಸತ್ಪಥದಲ್ಲಿ ನಡೆಸಲಾರೆ. ಆದರೆ ಅಲ್ಲಾಹನು ತಾನು ಇಚ್ಛಿಸುವವರನ್ನೆಲ್ಲ ಸತ್ಪಥದಲ್ಲಿ ನಡೆಸುತ್ತಾನೆ. ಯಾರು ಸತ್ಪಥವನ್ನು ಅವಲಂಬಿಸುವರೆಂದು ಅವನು ಚೆನ್ನಾಗಿ ಬಲ್ಲನು.

اِنَّكَ لَا تَهْدِيْ مَنْ اَحْبَبْتَ وَ لٰكِنَّ
اللّٰهَ يَهْدِيْ مَنْ يَّشَآءُ ۚ وَ هُوَ اَعْلَمُ
بِالْمُهْتَدِيْنَ ﴿٥٧﴾

58. ಅವರು ಹೇಳುತ್ತಾರೆ: 'ನಿನ್ನೊಂದಿಗೆ (ನೀನು ನಿರ್ದೇಶಿಸುವ) ಮಾರ್ಗದರ್ಶನವನ್ನು ನಾವು ಸ್ವೀಕರಿಸಿದರೆ, ನಾವು ನಮ್ಮ ಊರಿನಿಂದ ಕಿತ್ತೆಸೆಯಲ್ಪಡುವೆವು.' ಏನು, ಸುರಕ್ಷಿತವಾದೊಂದು ಪವಿತ್ರ ಸ್ಥಳವನ್ನು ನಾವು ಅವರಿಗೆ ನೀಡಿಲ್ಲವೇ? ನಮ್ಮ ಕಡೆಯಿಂದಿರುವ ದಾನವಾಗಿ ಎಲ್ಲ ವಸ್ತುಗಳ ಫಲಗಳು ಅಲ್ಲಿಗೆ ತರಲ್ಪಡುತ್ತವೆ. ಆದರೆ ಅವರಲ್ಲಿ ಹೆಚ್ಚಿನವರು (ನಿಜಸಂಗತಿಯನ್ನು) ತಿಳಿಯುವುದಿಲ್ಲ.

وَ قَالُوْٓا اِنْ نَّتَّبِعِ الْهُدٰى مَعَكَ
نُتَخَطَّفْ مِنْ اَرْضِنَا ۗ اَوَلَمْ نُمَكِّنْ
لَّهُمْ حَرَمًا اٰمِنًا يُّجْبٰٓى اِلَيْهِ
ثَمَرٰتُ كُلِّ شَيْءٍ رِّزْقًا مِّنْ لَّدُنَّا
وَلٰكِنَّ اَكْثَرَهُمْ لَا يَعْلَمُوْنَ ﴿٥٨﴾

59. ತಮ್ಮ ಸುಖಾಡಂಬರ ಜೀವಿತದ ಬಗ್ಗೆ ಅಹಂಕಾರದಿಂದ ವರ್ತಿಸಿದ ಅದೆಷ್ಟು ನಾಡಿನವರನ್ನು ನಾವು ನಾಶ ಮಾಡಿಬಿಟ್ಟೆವು? (ನೋಡು) ಅವು ಅವರ ವಾಸಸ್ಥಳಗಳಾಗಿವೆ. ಅವರ ಬಳಿಕ ಅಲ್ಲಿ ಯಾರೂ ವಾಸಿಸಲಿಲ್ಲ. ನಾವೇ (ಅವುಗಳಿಗೆ) ವಾರೀಸುದಾರರಾದೆವು.

وَكَمْ اَهْلَكْنَا مِنْ قَرْيَةٍۭ بَطِرَتْ
مَعِيْشَتَهَا ۚ فَتِلْكَ مَسٰكِنُهُمْ لَمْ
تُسْكَنْ مِّنْۢ بَعْدِهِمْ اِلَّا قَلِيْلًا ۗ وَ
كُنَّا نَحْنُ الْوٰرِثِيْنَ ﴿٥٩﴾

60. ನಿನ್ನ ಪ್ರಭು ಊರುಗಳನ್ನು, ಅವುಗಳ ಕೇಂದ್ರ ಸ್ಥಳಗಳಲ್ಲಿ ನಮ್ಮ ವಚನಗಳನ್ನು ಪಠಿಸುವ ಒಬ್ಬ ಸಂದೇಶ ವಾಹಕನನ್ನು ನಿಯೋಜಿಸಿ ಮುನ್ನೆಚ್ಚರಿಕೆ ನೀಡುವ ತನಕ ನಾಶಪಡಿಸಲಾರ. ಅದರ ನಿವಾಸಿಗಳು ಅತಿಕರ್ಮಿಗಳಾದರೆ ಹೊರತು ನಾವು ಊರುಗಳನ್ನು ನಾಶಗೊಳಿಸುವುದಿಲ್ಲ.

وَمَا كَانَ رَبُّكَ مُهْلِكَ الْقُرٰى
حَتّٰى يَبْعَثَ فِيْٓ اُمِّهَا رَسُوْلًا يَّتْلُوْا
عَلَيْهِمْ اٰيٰتِنَا ۚ وَ مَا كُنَّا مُهْلِكِى
الْقُرٰٓى اِلَّا وَ اَهْلُهَا ظٰلِمُوْنَ ﴿٦٠﴾

**61. ನಿಮಗೆ ನೀಡಲ್ಪಟ್ಟವುಗಳೆಲ್ಲ ಐಹಿಕ ಜೀವಿತದ ತಾತ್ಕಾಲಿಕ ಸುಖೋಪಭೋಗ ಮತ್ತು ಶೋಭೆಯಾಗಿವೆ. ಅಲ್ಲಾಹನ ಬಳಿಯಲ್ಲಿರುವುದಾದರೋ ಅತ್ಯುತ್ತಮ ಹಾಗೂ ಶಾಶ್ವತವಾದುದು. ನೀವು ಚಿಂತನೆ ಮಾಡುವುದಿಲ್ಲವೇ?**

وَمَآ أُوتِيتُم مِّن شَيْءٍ فَمَتَٰعُ ٱلْحَيَوٰةِ ٱلدُّنْيَا وَزِينَتُهَا ۚ وَمَا عِندَ ٱللَّهِ خَيْرٌ وَأَبْقَىٰٓ ۚ أَفَلَا تَعْقِلُونَ ﴿٦١﴾

**62.** (ಪಾರತ್ರಿಕ ಜೀವಿತದ ಬಗ್ಗೆ) **ನಾವು ಉತ್ತಮವಾದ ವಾಗ್ದಾನ ನೀಡಿ ಅದನ್ನು ಗಳಿಸುವ ಒಬ್ಬನು, ನಾವು ಐಹಿಕ ಜೀವಿತದ ಸುಖಸೌಕರ್ಯಗಳನ್ನು ಕೊಟ್ಟು ಅನಂತರ ಪುನರುತ್ಥಾನ ದಿನದಂದು ದೇವಸನ್ನಿಧಿಯಲ್ಲಿ** (ವಿಚಾರಣೆಗೆ) **ಹಾಜರುಪಡಿಸಲ್ಪಡುವವನಿಗೆ ಸಮಾನನೇ?**

أَفَمَن وَعَدْنَٰهُ وَعْدًا حَسَنًا فَهُوَ لَٰقِيهِ كَمَن مَّتَّعْنَٰهُ مَتَٰعَ ٱلْحَيَوٰةِ ٱلدُّنْيَا ثُمَّ هُوَ يَوْمَ ٱلْقِيَٰمَةِ مِنَ ٱلْمُحْضَرِينَ ﴿٦٢﴾

**63. ಅವನು** (ಅಲ್ಲಾಹನು) **ಅವರನ್ನು ಕರೆದು 'ನೀವು ಭಾವಿಸಿಕೊಂಡಿದ್ದ ನನ್ನ ಸಹಭಾಗಿಗಳೆಲ್ಲಿ?' ಎಂದು ಪ್ರಶ್ನಿಸುವ ದಿನ -**

وَيَوْمَ يُنَادِيهِمْ فَيَقُولُ أَيْنَ شُرَكَآءِيَ ٱلَّذِينَ كُنتُمْ تَزْعُمُونَ ﴿٦٣﴾

**64. ಯಾರಿಗೆ** (ನಮ್ಮ ಶಿಕ್ಷೆಯ) **ವಿಧಿವಚನ ಅನ್ವಯಿಸುವುದೋ ಅವರು[368] ಹೇಳುವರು: 'ನಮ್ಮ ಪ್ರಭೂ, ನಮ್ಮಿಂದ ದಾರಿತಪ್ಪಿಸಲ್ಪಟ್ಟವರು ಇವರೇ ಆಗಿದ್ದಾರೆ. ನಾವು ಸ್ವತಃ ದಾರಿ ತಪ್ಪಿದ ಹಾಗೆ ಇವರನ್ನು ಸಹ ನಾವು ದಾರಿತಪ್ಪಿಸಿದೆವು. ನಾವು** (ಈಗ ಅವರನ್ನು ಬಿಟ್ಟು) **ನಿನ್ನ ಕಡೆಗೆ ತಿರುಗುತ್ತೇವೆ. ಇವರು ನಮ್ಮನ್ನು ಆರಾಧಿಸುತ್ತಿರಲಿಲ್ಲ.** (ಬದಲು ತಮ್ಮ ಮನಬಂದಂತೆ ನಡೆಯುವವರಾಗಿದ್ದರು.)

قَالَ ٱلَّذِينَ حَقَّ عَلَيْهِمُ ٱلْقَوْلُ رَبَّنَا هَٰٓؤُلَآءِ ٱلَّذِينَ أَغْوَيْنَآ أَغْوَيْنَٰهُمْ كَمَا غَوَيْنَا ۖ تَبَرَّأْنَآ إِلَيْكَ ۖ مَا كَانُوٓا۟ إِيَّانَا يَعْبُدُونَ ﴿٦٤﴾

**65. 'ನಿಮ್ಮ** (ದೇವ) **ಸಹಭಾಗಿಗಳನ್ನು ಕರೆಯಿರಿ' ಎಂದು ಅವರೊಡನೆ[368A] ಹೇಳಲಾಗುವುದು. ಆಗ ಅವರು ಅವರನ್ನು ಕರೆಯುವರು. ಆದರೆ ಅವರು ಅವರ ಕರೆಗೆ ಉತ್ತರ ಕೊಡಲಾರರು. ಅವರು ಶಿಕ್ಷೆಯನ್ನು ದರ್ಶಿಸುವರು. ಅವರು ಸರಿಯಾದ ಮಾರ್ಗದರ್ಶನವನ್ನು ಪಡೆಯುತ್ತಿದ್ದರೆ** (ಎಷ್ಟು ಚೆನ್ನಾಗಿತ್ತು)**!**

وَقِيلَ ٱدْعُوا۟ شُرَكَآءَكُمْ فَدَعَوْهُمْ فَلَمْ يَسْتَجِيبُوا۟ لَهُمْ وَرَأَوُا۟ ٱلْعَذَابَ ۚ لَوْ أَنَّهُمْ كَانُوا۟ يَهْتَدُونَ ﴿٦٥﴾

368. ಜನರನ್ನು ದಾರಿ ತಪ್ಪಿಸುವ ಅವಿಶ್ವಾಸಿ ನೇತಾರರ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ. ಜನರು ಅವರನ್ನು ಅಂಧವಾಗಿ ಅನುಕರಿಸುತ್ತಾರೆ.

368A. ಇಲ್ಲಿ ಮಿಥ್ಯದೇವರುಗಳನ್ನು ಆರಾಧಿಸುವ ಬಹುದೇವ ವಿಶ್ವಾಸಿಗಳ ಕುರಿತು ಪ್ರಸ್ತಾಪಿಸಲಾಗಿದೆ.





**66. ಆ ದಿನದಂದು ಅವನು** (ಅಲ್ಲಾಹನು) **ಅವರನ್ನು ಕರೆದು ಕೇಳುವನು: 'ಸಂದೇಶವಾಹಕರಿಗೆ ನೀವು ಏನೆಂದು ಉತ್ತರ ಕೊಟ್ಟಿದ್ದಿರಿ?'**

وَيَوْمَ يُنَادِيهِمْ فَيَقُولُ مَاذَآ أَجَبْتُمُ ٱلْمُرْسَلِينَ ﴿٦٦﴾

**67. ಅಂದು ಅವರಿಗೆ ಸಂಗತಿಗಳೆಲ್ಲ ಅಸ್ಪಷ್ಟವಾಗುವುವು. ಆದ್ದರಿಂದ ಪರಸ್ಪರ ಪ್ರಶ್ನಿಸಲು ಅವರಿಗೆ ಸಾಧ್ಯವಾಗಲಾರದು.**

فَعَمِيَتْ عَلَيْهِمُ ٱلْأَنۢبَآءُ يَوْمَئِذٍ فَهُمْ لَا يَتَسَآءَلُونَ ﴿٦٧﴾

**68. ಆದರೆ ಯಾವಾತನು ಪಶ್ಚಾತ್ತಾಪಪಟ್ಟು ವಿಶ್ವಾಸ ಹೊಂದುತ್ತಾನೋ ಮತ್ತು ಸತ್ಕರ್ಮ ನಿರತನಾಗುತ್ತಾನೋ, ಅವನು ಜಯಶಾಲಿಗಳ ಪೈಕಿಯಲ್ಲಿ ಸೇರಿದವನಾಗಬಹುದು.**

فَأَمَّا مَن تَابَ وَءَامَنَ وَعَمِلَ صَٰلِحًا فَعَسَىٰٓ أَن يَكُونَ مِنَ ٱلْمُفْلِحِينَ ﴿٦٨﴾

**69. ನಿನ್ನ ಪ್ರಭು ತಾನಿಚ್ಛಿಸುವಂತೆ ಸೃಷ್ಟಿಸುತ್ತಾನೆ ಮತ್ತು ಆಯ್ಕೆಮಾಡುತ್ತಾನೆ. ಆಯ್ಕೆ ಮಾಡುವ ಹಕ್ಕು ಅವರಿಗಿಲ್ಲ. ಅವರು ಸಹಭಾಗಿ ಮಾಡುವುದರಿಂದೆಲ್ಲ ಅಲ್ಲಾಹನು ಪರಿಶುದ್ಧನೂ ಅತ್ಯುನ್ನತನೂ ಆಗಿದ್ದಾನೆ.**

وَرَبُّكَ يَخْلُقُ مَا يَشَآءُ وَيَخْتَارُ ۗ مَا كَانَ لَهُمُ ٱلْخِيَرَةُ ۚ سُبْحَٰنَ ٱللَّهِ وَتَعَٰلَىٰ عَمَّا يُشْرِكُونَ ﴿٦٩﴾

**70. ಅವರ ಹೃದಯಗಳು ಮುಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೂ ನಿನ್ನ ಪ್ರಭು ಬಲ್ಲನು.**

وَرَبُّكَ يَعْلَمُ مَا تُكِنُّ صُدُورُهُمْ وَمَا يُعْلِنُونَ ﴿٧٠﴾

**71. ಅವನೇ ಅಲ್ಲಾಹನು. ಅವನ ಹೊರತು ಬೇರೆ ದೇವನಿಲ್ಲ. ಆದಿಯಲ್ಲೂ ಅಂತ್ಯದಲ್ಲೂ ಎಲ್ಲ ಸ್ತುತಿ ಸ್ತೋತ್ರಗಳು ಅವನಿಗೆ ಸಲ್ಲುತ್ತವೆ. ತೀರ್ಮಾನವೆಲ್ಲ ಅವನದೇ, ಅವನೆಡೆಗೆ ನೀವು ಮರಳಿಸಲ್ಪಡುವಿರಿ.**

وَهُوَ ٱللَّهُ لَآ إِلَٰهَ إِلَّا هُوَ ۖ لَهُ ٱلْحَمْدُ فِى ٱلْأُولَىٰ وَٱلْءَاخِرَةِ ۖ وَلَهُ ٱلْحُكْمُ وَإِلَيْهِ تُرْجَعُونَ ﴿٧١﴾

**72. ಹೇಳು: 'ನೀವು ಯೋಚಿಸಿ ನೋಡಿದ್ದೀರಾ ? ಪುನರುತ್ಥಾನ ದಿನದ ವರೆಗೆ ಅಲ್ಲಾಹನು ನಿಮ್ಮ ಮೇಲೆ ಇರುಳನ್ನೇ ಮುಂದುವರಿಸಿದರೆ ಅಲ್ಲಾಹನ ಹೊರತು ನಿಮಗೆ ಬೆಳಕನ್ನು ಒದಗಿಸುವ ಬೇರೆ ಯಾವ ದೇವನಿದ್ದಾನೆ? ಏನು ನೀವು ಆಲಿಸುವುದಿಲ್ಲವೇ?'**

قُلْ أَرَءَيْتُمْ إِن جَعَلَ ٱللَّهُ عَلَيْكُمُ ٱلَّيْلَ سَرْمَدًا إِلَىٰ يَوْمِ ٱلْقِيَٰمَةِ مَنْ إِلَٰهٌ غَيْرُ ٱللَّهِ يَأْتِيكُم بِضِيَآءٍ ۖ أَفَلَا تَسْمَعُونَ ﴿٧٢﴾

**73. ಹೇಳು: 'ನೀವು ಯೋಚಿಸಿ ನೋಡಿದ್ದೀರಾ? ಪುನರುತ್ಥಾನ ದಿನದ ವರೆಗೆ ಅಲ್ಲಾಹನು ನಿಮ್ಮ ಮೇಲೆ**

قُلْ أَرَءَيْتُمْ إِن جَعَلَ ٱللَّهُ

ಹಗಲನ್ನು ಮುಂದುವರಿಸಿದರೆ ಅಲ್ಲಾಹನ ಹೊರತು ನಿಮಗೆ ವಿಶ್ರಾಂತಿಯನ್ನು ಪಡೆಯಲನುಕೂಲವಾದ ರಾತ್ರಿಯನ್ನು ಒದಗಿಸುವ ಬೇರೆ ಯಾವ ದೇವನಿದ್ದಾನೆ? ನೀವು ಕಾಣುವುದಿಲ್ಲವೇ?'

عَلَيْكُمُ النَّهَارَ سَرْمَدًا إِلَىٰ يَوْمِ الْقِيَامَةِ مَنْ إِلَٰهٌ غَيْرُ اللَّهِ يَأْتِيكُم بِلَيْلٍ تَسْكُنُونَ فِيهِ ۖ أَفَلَا تُبْصِرُونَ ﴿٧٢﴾

74. ನಿಮ್ಮ ವಿಶ್ರಾಂತಿಗೋಸ್ಕರವೂ ನೀವು ಅಲ್ಲಾಹನ ಅನುಗ್ರಹಗಳನ್ನು ಪಡೆಯಲಿಕ್ಕೋಸ್ಕರವೂ ಅವನಿಗೆ ನೀವು ಕೃತಜ್ಞರಾಗಲಿಕ್ಕೋಸ್ಕರವೂ ಅವನು (ಅಲ್ಲಾಹನು) ತನ್ನ ಕೃಪೆಯಿಂದ ರಾತ್ರಿಯನ್ನೂ ಹಗಲನ್ನೂ ನಿಮಗೋಸ್ಕರ ಸೃಷ್ಟಿಸಿದ್ದಾನೆ.

وَمِن رَّحْمَتِهِ جَعَلَ لَكُمُ اللَّيْلَ وَالنَّهَارَ لِتَسْكُنُوا فِيهِ وَلِتَبْتَغُوا مِن فَضْلِهِ وَلَعَلَّكُمْ تَشْكُرُونَ ﴿٧٣﴾

75. ಆ ದಿನದಂದು ಅವನು ಅವರನ್ನು ಕರೆದು, 'ನೀವು ಭಾವಿಸಿಕೊಂಡಿದ್ದ ನನ್ನ ಸಹಭಾಗಿಗಳು ಎಲ್ಲಿ?' ಎಂದು ಕೇಳುವನು.

وَيَوْمَ يُنَادِيهِمْ فَيَقُولُ أَيْنَ شُرَكَائِيَ الَّذِينَ كُنتُمْ تَزْعُمُونَ ﴿٧٤﴾

76. ಪ್ರತಿಯೊಂದು ಜನಾಂಗದಿಂದ ಒಂದೊಂದು ಸಾಕ್ಷಿಯನ್ನು ನಾವು ಹೊರತಂದು, 'ನಿಮ್ಮ ಪುರಾವೆಯನ್ನು ತನ್ನಿರಿ' ಎಂದು ಹೇಳುವೆವು. ಆಗ ಸತ್ಯವು ಅಲ್ಲಾಹನಿಗೆ ಸೇರಿದ್ದೆಂದು ಅವರಿಗೆ ಮನವರಿಕೆಯಾಗುವುದು. ಅವರ ಸುಳ್ಳು ಸೃಷ್ಟನೆಗಳೆಲ್ಲ ಅವರಿಂದ ದೂರಸರಿಯುವುವು.

وَنَزَعْنَا مِن كُلِّ أُمَّةٍ شَهِيدًا فَقُلْنَا هَاتُوا بُرْهَانَكُمْ فَعَلِمُوا أَنَّ الْحَقَّ لِلَّهِ وَضَلَّ عَنْهُم مَّا كَانُوا يَفْتَرُونَ ﴿٧٥﴾

77. ಖಾರೂನ್ ಮೂಸಾರ ಜನಾಂಗಕ್ಕೆ ಸೇರಿದವನಾಗಿದ್ದನು. ಆದರೆ ಅವನು ಅವರ ಮೇಲೆ ದೌರ್ಜನ್ಯ ತೋರಿಸಿದನು. ನಾವು ಅವನಿಗೆ ಧಾರಾಳ ಸಂಪತ್ತುಗಳನ್ನು ಕೊಟ್ಟಿದ್ದೆವು.[368B] ಅವುಗಳ ಕೀಲಿಗೈಗಳು ಬಲಿಷ್ಠ ಜನರ ಒಂದು ಗುಂಪಿಗೆ ಸಹ ಎತ್ತಲು ದುಸ್ತರವಾಗುವಷ್ಟಿತ್ತು. ಅವನ ಜನರು ಅವನೊಡನೆ ಹೇಳಿದರು: 'ನೀನು ಅಂಹಭಾವ ತೋರಿಸಬೇಡ; ಖಂಡಿತವಾಗಿಯೂ ಅಹಂಭಾವಿಗಳನ್ನು ಅಲ್ಲಾಹನು ಮೆಚ್ಚುವುದಿಲ್ಲ.

إِنَّ قَارُونَ كَانَ مِن قَوْمِ مُوسَىٰ فَبَغَىٰ عَلَيْهِمْ ۖ وَآتَيْنَاهُ مِنَ الْكُنُوزِ مَا إِنَّ مَفَاتِحَهُ لَتَنُوءُ بِالْعُصْبَةِ أُولِي الْقُوَّةِ إِذْ قَالَ لَهُ قَوْمُهُ لَا تَفْرَحْ ۖ إِنَّ اللَّهَ لَا يُحِبُّ الْفَرِحِينَ ﴿٧٦﴾

368B. ಖಾರೂನನ ಸಂಪತ್ತು ಅವನ ಸ್ವಂತದ್ದಾಗಿರಲಿಲ್ಲ. ಅವನು ರಾಜ ಭಂಡಾರದ ಮೇಲಧಿಕಾರಿಯಾಗಿದ್ದನು. (ಹೆಚ್ಚಿನ ವಿವರಣೆಗೆ ತಫ್‌ಸೀರ್ ಸಗೀರ್ ಮತ್ತು ತಫ್‌ಸೀರ್ ಕಬೀರ್ ಓದಿರಿ.)





78. 'ಅಲ್ಲಾಹನು ನಿನಗೆ ನೀಡಿದವುಗಳಿಂದ ಪಾರತ್ರಿಕ ಗೃಹವನ್ನು ನೀನು ಹುಡುಕು. ಐಹಿಕ ಜೀವಿತದ ನಿನ್ನ ಪಾಲನ್ನು ನೀನು ಮರೆಯಬಾರದು. ಅಲ್ಲಾಹನು ನಿನಗೆ ಒಳಿತು ಮಾಡಿದಂತೆ ನೀನು ಸಹ (ಜನರಿಗೆ) ಒಳಿತು ಮಾಡು. ಭೂಮಿಯಲ್ಲಿ ಗಲಭೆಗೊಂದಲವನ್ನು ಸೃಷ್ಟಿಸಲು ಪ್ರಯತ್ನಿಸಬೇಡ. ಖಂಡಿತವಾಗಿಯೂ ಅಲ್ಲಾಹನು ಗೊಂದಲಗಾರರನ್ನು ಪ್ರೀತಿಸುವುದಿಲ್ಲ.'

وَابْتَغِ فِيمَا آتَاكَ اللَّهُ الدَّارَ الْآخِرَةَ ۖ وَلَا تَنسَ نَصِيبَكَ مِنَ الدُّنْيَا ۖ وَأَحْسِن كَمَا أَحْسَنَ اللَّهُ إِلَيْكَ ۖ وَلَا تَبْغِ الْفَسَادَ فِي الْأَرْضِ ۖ إِنَّ اللَّهَ لَا يُحِبُّ الْمُفْسِدِينَ ﴿٧٧﴾

79. ಅವನು ಹೇಳಿದನು: 'ನನಗಿರುವ ಜ್ಞಾನದ ಕಾರಣದಿಂದಲೇ ನನಗೆ ಇದು (ಈ ಸ್ಥಾನ) ನೀಡಲ್ಪಟ್ಟಿದೆ.' ಅವನಿಗೆ ಮುಂಚೆ ಅವನಿಗಿಂತಲೂ ಮಿಗಿಲಾದ ಮತ್ತು ಅವನಿಗಿಂತಲೂ ಐಶ್ವರ್ಯವಂತರಾದ ಪೀಳಿಗೆಗಳನ್ನು ಅಲ್ಲಾಹನು ನಾಶಪಡಿಸಿರುವನೆಂಬುದು ಅವನಿಗೆ ಗೊತ್ತಿಲ್ಲವೇ? ಪಾಪಿಗಳನ್ನು (ಶಿಕ್ಷಿಸುವಾಗ) ಅವರ ಪಾಪಗಳ ಬಗ್ಗೆ ಪ್ರಶ್ನಿಸಲಾಗುವುದಿಲ್ಲ.[368C]

قَالَ إِنَّمَا أُوتِيتُهُ عَلَىٰ عِلْمٍ عِندِي ۚ أَوَلَمْ يَعْلَمْ أَنَّ اللَّهَ قَدْ أَهْلَكَ مِن قَبْلِهِ مِنَ الْقُرُونِ مَنْ هُوَ أَشَدُّ مِنْهُ قُوَّةً وَأَكْثَرُ جَمْعًا ۚ وَلَا يُسْأَلُ عَن ذُنُوبِهِمُ الْمُجْرِمُونَ ﴿٧٨﴾

80. ಹಾಗೆ ಅವನು ಆಡಂಬರದಿಂದ (ಒಮ್ಮೆ) ತನ್ನ ಜನರ ಮುಂದೆ ಪ್ರತ್ಯಕ್ಷನಾದನು. ಆಗ ಇಹಲೋಕದ ಆಶಾಕಾಂಕ್ಷೆಗಳನ್ನಿಟ್ಟುಕೊಂಡವರು, 'ಆಹಾ, ಖಾರೂನ್‌ನಿಗೆ ನೀಡಲ್ಪಟ್ಟಂಥವು ನಮಗೆ ಸಹ ನೀಡಲ್ಪಟ್ಟಿದ್ದರೆ (ಎಷ್ಟು ಚೆನ್ನಾಗಿತ್ತು)! ನಿಜವಾಗಿಯೂ ಅವನು ಸೌಭಾಗ್ಯದ ಒಡೆಯನಾಗಿದ್ದಾನೆ' ಎಂದು ಉದ್ಗರಿಸಿದರು.

فَخَرَجَ عَلَىٰ قَوْمِهِ فِي زِينَتِهِ ۖ قَالَ الَّذِينَ يُرِيدُونَ الْحَيَاةَ الدُّنْيَا يَا لَيْتَ لَنَا مِثْلَ مَا أُوتِيَ قَارُونُ إِنَّهُ لَذُو حَظٍّ عَظِيمٍ ﴿٧٩﴾

81. ಆದರೆ ಜ್ಞಾನಿಗಳು ಹೀಗೆ ಹೇಳಿದರು: 'ನಿಮ್ಮ ಸ್ಥಿತಿ ಶೋಚನೀಯ. ವಿಶ್ವಾಸವುಳ್ಳವರಾಗಿದ್ದು ಸತ್ಕರ್ಮ ಮಾಡುವವರಿಗೆ ಅಲ್ಲಾಹನ ಪ್ರತಿಫಲ ಅತ್ಯುತ್ತಮವಾದುದು. ತಾಳ್ಮೆವಹಿಸುವವರಿಗೆ ಮಾತ್ರವೇ ಅದು ನೀಡಲ್ಪಡುವುದು.'

وَقَالَ الَّذِينَ أُوتُوا الْعِلْمَ وَيْلَكُمْ ثَوَابُ اللَّهِ خَيْرٌ لِّمَنْ آمَنَ وَعَمِلَ صَالِحًا وَلَا يُلَقَّاهَا إِلَّا الصَّابِرُونَ ﴿٨٠﴾

82. ನಾವು ಆ ಮೇಲೆ ಅವನನ್ನೂ ಅವನ ವಾಸಸ್ಥಳವನ್ನೂ ಭೂಮಿಯಲ್ಲಿಹುದುಗಿಸಿಬಿಟ್ಟೆವು. ಆಗ ಅಲ್ಲಾ

فَخَسَفْنَا بِهِ وَبِدَارِهِ الْأَرْضَ فَمَا

368C. ಪಾಪಿಗಳಿಗೆ ಬರುವ ದೈವಿಕ ಶಿಕ್ಷೆ ಸಹಜವಾದುದು - ಲೌಕಿಕ ರಾಜರು ಕೊಡುವ ಶಿಕ್ಷೆಯಂತೆ ವಿಚಾರಣೆ ಮತ್ತು ವಿಧಿ ಇರುವುದಿಲ್ಲ. ಅಪರಾಧಿಯು ಶಿಕ್ಷಾರ್ಹನೆಂದು ದೈವಿಕ ಶಿಕ್ಷೆಯೇ ರುಜುಪಡಿಸುತ್ತದೆ.

ಹನಿಗೆ ವಿರುದ್ಧವಾಗಿ ಅವನಿಗೆ ಸಹಾಯ ಮಾಡಲು ಯಾವುದೇ ಪಕ್ಷವಿರಲಿಲ್ಲ. ಅವನಿಗೆ ಸ್ವಯಂ ರಕ್ಷಣೆ ಹೊಂದಲು ಕೂಡ ಸಾಧ್ಯವಾಗಲಿಲ್ಲ.

كَانَ لَهُ مِنْ فِئَةٍ يَنْصُرُونَهُ مِنْ دُونِ
اللَّهِ وَمَا كَانَ مِنَ الْمُنْتَصِرِينَ ﴿٨١﴾

**83.** ಹಿಂದಿನ ದಿವಸ (ವರೆಗೆ) ಅವನ ಸ್ಥಾನಮಾನವನ್ನು ಪಡೆಯಲು ಆಸೆಪಡುತ್ತಿದ್ದವರು ಪ್ರಭಾತದಲ್ಲಿ ಹೀಗೆ ಹೇಳತೊಡಗಿದರು: 'ನಿನ್ನ ದುರದೃಷ್ಟವೇ! ಅಲ್ಲಾಹನು ತನ್ನ ದಾಸರ ಪೈಕಿ ತಾನು ಬಯಸುವವರಿಗೆ ಆಹಾರವನ್ನು ವೃದ್ಧಿಗೊಳಿಸುತ್ತಾನೆ ಹಾಗೂ ಕಡಿತಗೊಳಿಸುತ್ತಾನೆ. ಅಲ್ಲಾಹನು ನಮ್ಮ ಮೇಲೆ ಔದಾರ್ಯ ತೋರಿಸದಿರುತ್ತಿದ್ದರೆ ಅವನು ನಮ್ಮನ್ನು ಸಹ (ಭೂಮಿಯಲ್ಲಿ) ಹುದುಗಿಸಿಬಿಡುತ್ತಿದ್ದನು. ಹಾ ನಿನ್ನ ದುರದೃಷ್ಟವೇ! ಅವಿಶ್ವಾಸಿ ಎಂದಿಗೂ ಜಯ ಗಳಿಸಲಾರ.

وَأَصْبَحَ الَّذِينَ تَمَنَّوْا مَكَانَهُ
بِالْأَمْسِ يَقُولُونَ وَيْكَأَنَّ اللَّهَ
يَبْسُطُ الرِّزْقَ لِمَنْ يَشَاءُ مِنْ
عِبَادِهِ وَيَقْدِرُ لَوْلَا أَنْ مَنَّ اللَّهُ
عَلَيْنَا لَخَسَفَ بِنَا وَيْكَأَنَّهُ لَا يُفْلِحُ
الْكَافِرُونَ ﴿٨٢﴾

**84.** ಆ ಪಾರತ್ರಿಕ ಗೃಹ, ಅದನ್ನು ಭೂಮಿಯಲ್ಲಿ ಡಾಂಭಿಕತೆಯಿಂದ ವರ್ತಿಸದವರಿಗೂ ಗಲಭೆ ಗೊಂದಲಗಳನ್ನು ಸೃಷ್ಟಿಸದವರಿಗೂ ನಾವು ನೀಡುವೆವು. ಭಯಭಕ್ತಿಯುಳ್ಳವರಿಗೆ ಅಂತ್ಯಫಲ ಅದಾಗಿದೆ.

تِلْكَ الدَّارُ الْآخِرَةُ نَجْعَلُهَا لِلَّذِينَ
لَا يُرِيدُونَ عُلُوًّا فِي الْأَرْضِ وَلَا
فَسَادًا وَالْعَاقِبَةُ لِلْمُتَّقِينَ ﴿٨٣﴾

**85.** ಯಾರಾದರೂ ಒಳಿತನ್ನು ಮಾಡಿದರೆ ಅದಕ್ಕಿಂತ ಉತ್ತಮವಾದ ಪ್ರತಿಫಲ ಅವನಿಗಿದೆ. ಆದರೆ ಯಾರಾದರೂ ಕೆಡುಕು ಮಾಡಿದರೆ, ಅವರು ಮಾಡಿದ ಕೆಡುಕಿಗೆ ಸಮಾನವಾದ ಪ್ರತಿಫಲವನ್ನು ಮಾತ್ರ ಕೊಡಲಾಗುವುದು.

مَنْ جَاءَ بِالْحَسَنَةِ فَلَهُ خَيْرٌ مِنْهَا
وَمَنْ جَاءَ بِالسَّيِّئَةِ فَلَا يُجْزَى الَّذِينَ
عَمِلُوا السَّيِّئَاتِ إِلَّا مَا كَانُوا
يَعْمَلُونَ ﴿٨٤﴾

**86.** ನಿನ್ನ ಮೇಲೆ ಖುರ್‌ಆನಿನ ಅಧ್ಯಾಪನೆಗಳನ್ನು ಕಡ್ಡಾಯಗೊಳಿಸಿದವನು ಖಂಡಿತವಾಗಿಯೂ ನಿನ್ನನ್ನು ಮರಳಬೇಕಾದ ಸ್ಥಳಕ್ಕೆ[369] ಮರಳಿಸುವನು. ಹೇಳು: 'ಮಾರ್ಗದರ್ಶನವನ್ನು ತರುವವನು ಯಾರೆಂದೂ ಸ್ಪಷ್ಟವಾದ ತಪ್ಪೆಸಗುವವನು ಯಾರೆಂದೂ ನನ್ನ ಪ್ರಭು ಚೆನ್ನಾಗಿ ಬಲ್ಲನು.'

إِنَّ الَّذِي فَرَضَ عَلَيْكَ الْقُرْآنَ
لَرَادُّكَ إِلَىٰ مَعَادٍ قُلْ رَبِّي أَعْلَمُ مَنْ
جَاءَ بِالْهُدَىٰ وَمَنْ هُوَ فِي ضَلَالٍ
مُبِينٍ ﴿٨٥﴾

369. ಪವಿತ್ರ ಮಕ್ಕ ಎಂದು ತಾತ್ಪರ್ಯ.





**87.** ಈ ಗ್ರಂಥ ನಿನಗೆ ಅವತೀರ್ಣವಾಗುವುದೆಂದು ನೀನು ನಿರೀಕ್ಷಿಸಿರಲಿಲ್ಲ. ಆದರೆ ನಿನ್ನ ಪ್ರಭುವಿನ ಕಾರುಣ್ಯದಿಂದ ಮಾತ್ರ *ಅದು ಅವತೀರ್ಣಗೊಂಡಿತು.* ಆದ್ದರಿಂದ ನೀನೆಂದಿಗೂ ಅವಿಶ್ವಾಸಿಗಳ ಸಹಾಯಕನಾಗಬಾರದು.

وَمَا كُنْتَ تَرْجُو أَنْ يُلْقَىٰ إِلَيْكَ
الْكِتَابُ إِلَّا رَحْمَةً مِنْ رَبِّكَ فَلَا
تَكُونَنَّ ظَهِيرًا لِلْكَافِرِينَ ﴿٨٦﴾

**88.** ಅಲ್ಲಾಹನ ವಚನಗಳು ನಿನಗೆ ಅವತೀರ್ಣಗೊಂಡ ಬಳಿಕ ಅದರಿಂದ ಯಾರೂ ನಿನ್ನನ್ನು ತಡೆಯದಿರಲಿ. ನೀನು (ಜನರನ್ನು) ನಿನ್ನ ಪ್ರಭುವಿನ ಕಡೆಗೆ ಆಹ್ವಾನಿಸು. ನೀನೆಂದಿಗೂ ಬಹುದೇವಾರಾಧಕರಲ್ಲಿ ಸೇರಿದವನಾಗಬೇಡ.

وَلَا يَصُدُّنَّكَ عَنْ آيَاتِ اللَّهِ بَعْدَ إِذْ
أُنْزِلَتْ إِلَيْكَ وَادْعُ إِلَىٰ رَبِّكَ وَلَا
تَكُونَنَّ مِنَ الْمُشْرِكِينَ ﴿٨٧﴾

**89.** ಅಲ್ಲಾಹನೊಂದಿಗೆ ಬೇರೆ ಯಾವ ದೇವನನ್ನೂ ನೀನು ಕರೆದು ಪ್ರಾರ್ಥಿಸಬಾರದು. ಅವನ ಹೊರತು ಬೇರೆ ದೇವನಿಲ್ಲ. ಅವನ ಹೊರತು ಎಲ್ಲವೂ ನಾಶವಾಗುವುವು.[369A] ನ್ಯಾಯತೀರ್ಮಾನದ ಅಧಿಕಾರ ಅವನಿಗೇ. ಅವನೆಡೆಗೆಯೇ ನೀವೆಲ್ಲರೂ ಮರಳಿಸಲ್ಪಡುವಿರಿ.

وَلَا تَدْعُ مَعَ اللَّهِ إِلَٰهًا آخَرَ لَا إِلَٰهَ
إِلَّا هُوَ كُلُّ شَيْءٍ هَالِكٌ إِلَّا وَجْهَهُ
لَهُ الْحُكْمُ وَإِلَيْهِ تُرْجَعُونَ ﴿٨٨﴾

369A. ಲೌಕಿಕವಾದ ಎಲ್ಲವೂ ನಶ್ವರವೆಂದು ಇದರ ತಾತ್ಪರ್ಯ. ಪಾರತ್ರಿಕ ಅನುಗ್ರಹಗಳಾಗಲಿ ಆಧ್ಯಾತ್ಮಿಕ ಜ್ಞಾನವಾಗಲಿ ಅದರಲ್ಲಿ ಸೇರುವುದಿಲ್ಲ.

سُورَةُ الْعَنْكَبُوتِ مَكِّيَّةٌ وَهِيَ مَعَ الْبَسْمَلَةِ سَبْعُونَ آيَةً وَسَبْعَةُ رُكُوعَاتٍ

# 29. ಅಲ್‌ಅನ್‌ಕಬೂತ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 70 ಆಯತ್‌ಗಳು ಹಾಗೂ 7 ರುಕೂಅ್‌ಗಳು ಇವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللَّهِ الرَّحْمَٰنِ الرَّحِيمِ ﴿١﴾

**2.** ಅಲಿಫ್ ಲಾಂ ಮೀಂ.[370]

الٓمٓ ﴿٢﴾

**3.** 'ನಾವು ನಂಬಿದ್ದೇವೆ' ಎಂದು ಕೇವಲ ಹೇಳಿದ ಕಾರಣದಿಂದ ಜನರನ್ನು ಪರೀಕ್ಷೆಗೆ ಗುರಿಪಡಿಸದೆ ಬಿಟ್ಟುಬಿಡಲಾಗುವುದೆಂದು ಅವರು ಭಾವಿಸಿದ್ದಾರೆಯೇ?

أَحَسِبَ النَّاسُ أَنْ يُتْرَكُوا أَنْ يَقُولُوا آمَنَّا وَهُمْ لَا يُفْتَنُونَ ﴿٣﴾

**4.** ಅವರ ಪೂರ್ವಿಕರನ್ನು ನಾವು ಪರೀಕ್ಷೆಗೊಳಪಡಿಸಿರುವೆವು. ಆದ್ದರಿಂದ ಅಲ್ಲಾಹನು ಖಂಡಿತವಾಗಿಯೂ ಸತ್ಯನುಡಿಯುವವರು ಯಾರೆಂದು ಬಹಿರಂಗಪಡಿಸುವನು. ಹಾಗೆಯೇ ಸುಳ್ಳು ಹೇಳುವವರು ಯಾರೆಂದೂ ಬಹಿರಂಗಪಡಿಸುವನು.

وَلَقَدْ فَتَنَّا الَّذِينَ مِنْ قَبْلِهِمْ فَلَيَعْلَمَنَّ اللَّهُ الَّذِينَ صَدَقُوا وَلَيَعْلَمَنَّ الْكَاذِبِينَ ﴿٤﴾

**5.** ಅಥವಾ ಕೆಡುಕು ಮಾಡಿದವರು ನಮ್ಮಿಂದ (ನಮ್ಮ ಹಿಡಿತದಿಂದ) ತಪ್ಪಿಸಿಕೊಳ್ಳಬಹುದೆಂದು ಭಾವಿಸಿರುವರೇ? ಅವರ ತೀರ್ಮಾನ ಬಲು ಕೆಟ್ಟದ್ದಾಗಿದೆ.

أَمْ حَسِبَ الَّذِينَ يَعْمَلُونَ السَّيِّئَاتِ أَنْ يَسْبِقُونَا سَاءَ مَا يَحْكُمُونَ ﴿٥﴾

**6.** ಅಲ್ಲಾಹನ ಭೇಟಿಯನ್ನು ಯಾರಾದರೂ ಬಯಸುವುದಾದರೆ (ಆತನು ಅದರ ಸಿದ್ಧತೆ ಮಾಡಿಕೊಳ್ಳಲಿ). ಅಲ್ಲಾಹನ ನಿಶ್ಚಿತ ಸಮಯ ಖಂಡಿತವಾಗಿಯೂ ಬರುವುದು. ಅವನು ಎಲ್ಲ ಆಲಿಸುವವನೂ ಸರ್ವಜ್ಞನೂ ಆಗಿದ್ದಾನೆ.

مَنْ كَانَ يَرْجُو لِقَاءَ اللَّهِ فَإِنَّ أَجَلَ اللَّهِ لَآتٍ وَهُوَ السَّمِيعُ الْعَلِيمُ ﴿٦﴾

**7.** ಯಾರಾದರೂ (ಅಲ್ಲಾಹನ ಮಾರ್ಗದಲ್ಲಿ) ಪರಿಶ್ರಮಪಡುವುದಾದರೆ, ಅವನು ತನ್ನ ಸ್ವಂತ ಆತ್ಮದ ಒಳಿತಿಗಾಗಿ ಪರಿಶ್ರಮಪಡುತ್ತಾನೆ. ದಿಟವಾಗಿಯೂ ಅಲ್ಲಾಹನು ಸಕಲ ಲೋಕಗಳಿಂದಲೂ ಸ್ವಾವಲಂಬಿಯಾಗಿದ್ದಾನೆ.

وَمَنْ جَاهَدَ فَإِنَّمَا يُجَاهِدُ لِنَفْسِهِ إِنَّ اللَّهَ لَغَنِيٌّ عَنِ الْعَالَمِينَ ﴿٧﴾

370. ನಾನು ಅಲ್ಲಾಹ್ ಎಲ್ಲ ಬಲ್ಲವನಾಗಿದ್ದೇನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8.** ಯಾರು ವಿಶ್ವಾಸಿಗಳಾಗಿದ್ದು ಸತ್ಕರ್ಮ ನಿರತರಾಗುತ್ತಾರೋ, ಖಂಡಿತವಾಗಿಯೂ ನಾವು ಅವರ ಕೆಡುಕುಗಳನ್ನು ಅವರಿಂದ ನೀಗಿಸುವೆನು. ಅವರ ಕರ್ಮಗಳಿಗೆ ಉತ್ತಮವಾದ ಪ್ರತಿಫಲವನ್ನು ನಾವು ಅವರಿಗೆ ನೀಡುವೆವು.

وَالَّذِينَ آمَنُوا وَعَمِلُوا الصَّالِحَاتِ لَنُكَفِّرَنَّ عَنْهُمْ سَيِّئَاتِهِمْ وَلَنَجْزِيَنَّهُمْ أَحْسَنَ الَّذِي كَانُوا يَعْمَلُونَ ﴿٨﴾

**9.** ತನ್ನ ತಂದೆತಾಯಂದಿರೊಡನೆ ಔದಾರ್ಯದಿಂದ ವರ್ತಿಸಬೇಕೆಂದು ನಾವು ಮನುಷ್ಯನಿಗೆ ಉಪದೇಶಿಸಿದ್ದೇವೆ. ಆದರೆ ನಿನಗೆ ತಿಳುವಳಿಕೆಯಿಲ್ಲದ ಏನನ್ನಾದರೂ ನನಗೆ ಸಹಭಾಗಿ ಮಾಡಲು ಅವರು ನಿನ್ನನ್ನು ಒತ್ತಾಯಿಸುವುದಾದರೆ, ಆಗ (ಆ ವಿಷಯದಲ್ಲಿ) ನೀನು ಅವರಿಗೆ ವಿಧೇಯನಾಗಬಾರದು. ನಿಮ್ಮ ಮರಳಿಕೆ ನನ್ನ ಬಳಿಗೆ ಆಗಿದೆ. ಆಗ ನಿಮ್ಮ ಕರ್ಮಗಳ (ಒಳಿತು, ಕೆಡುಕುಗಳ) ಬಗ್ಗೆ ನಿಮಗೆ ವಿವರಿಸಿಕೊಡುವೆನು.

وَوَصَّيْنَا الْإِنْسَانَ بِوَالِدَيْهِ حُسْنًا وَإِنْ جَاهَدَاكَ لِتُشْرِكَ بِي مَا لَيْسَ لَكَ بِهِ عِلْمٌ فَلَا تُطِعْهُمَا إِلَيَّ مَرْجِعُكُمْ فَأُنَبِّئُكُمْ بِمَا كُنْتُمْ تَعْمَلُونَ ﴿٩﴾

**10.** ಯಾರು ವಿಶ್ವಾಸಿಗಳಾಗಿದ್ದು ಸತ್ಕರ್ಮ ನಿರತರಾಗುತ್ತಾರೋ, ಖಂಡಿತವಾಗಿಯೂ ನಾವು ಅವರನ್ನು ಸಜ್ಜನರಲ್ಲಿ ಸೇರಿಸುವೆವು.

وَالَّذِينَ آمَنُوا وَعَمِلُوا الصَّالِحَاتِ لَنُدْخِلَنَّهُمْ فِي الصَّالِحِينَ ﴿١٠﴾

**11.** ಜನರಲ್ಲಿ ಕೆಲವರು 'ನಾವು ಅಲ್ಲಾಹನನ್ನು ನಂಬುತ್ತೇವೆ' ಎಂದು ಹೇಳುತ್ತಾರೆ. ಆದರೆ ಅಲ್ಲಾಹನ ಮಾರ್ಗದಲ್ಲಿ ಅವರು ಕಷ್ಟ ಅನುಭವಿಸುವಾಗ ಮನುಷ್ಯರ ಪೀಡನೆಯನ್ನು ಅವರು ಅಲ್ಲಾಹನ ಶಿಕ್ಷೆಯೆಂದು ಬಗೆಯುತ್ತಾರೆ. ಇನ್ನು ನಿನ್ನ ಪ್ರಭುವಿನಿಂದ ಏನಾದರೂ ಸಹಾಯ ಬಂದೊದಗಿದರೆ, 'ನಿಜವಾಗಿಯೂ ನಾವು ನಿಮ್ಮೊಂದಿಗಿದ್ದೆವು' ಎಂದು ಅವರು ಹೇಳುವರು. ಏನು, ಸರ್ವಲೋಕಗಳಲ್ಲಿರುವವರ ಹೃದಯಗಳಲ್ಲಿರುವುದನ್ನು ಅಲ್ಲಾಹನು ತಿಳಿಯಲಾರನೇ?

وَمِنَ النَّاسِ مَنْ يَقُولُ آمَنَّا بِاللَّهِ فَإِذَا أُوذِيَ فِي اللَّهِ جَعَلَ فِتْنَةَ النَّاسِ كَعَذَابِ اللَّهِ وَلَئِنْ جَاءَ نَصْرٌ مِنْ رَبِّكَ لَيَقُولُنَّ إِنَّا كُنَّا مَعَكُمْ أَوَلَيْسَ اللَّهُ بِأَعْلَمَ بِمَا فِي صُدُورِ الْعَالَمِينَ ﴿١١﴾

**12.** ಖಂಡಿತವಾಗಿಯೂ ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಬಹಿರಂಗಪಡಿಸುವನು. ಹಾಗೆಯೇ ಕಪಟ ವಿಶ್ವಾಸಿಗಳನ್ನೂ ಬಹಿರಂಗಪಡಿಸುವನು.

وَلَيَعْلَمَنَّ اللَّهُ الَّذِينَ آمَنُوا وَلَيَعْلَمَنَّ الْمُنَافِقِينَ ﴿١٢﴾

**13.** 'ನಮ್ಮನ್ನು ಅನುಸರಿಸಿರಿ; ನಿಮ್ಮ ಪಾಪ ಭಾರವನ್ನು ನಾವು ವಹಿಸಿಕೊಳ್ಳುವೆವು' ಎಂದು ಅವಿಶ್ವಾಸಿಗಳು ಸತ್ಯವಿಶ್ವಾಸಿಗಳೊಡನೆ ಹೇಳುತ್ತಾರೆ. ನಿಜವೇನೆಂದರೆ ಅವರು ಇವರ ಪಾಪದಲ್ಲಿ ಏನನ್ನೂ ಹೊರುವವರಲ್ಲ. ಅವರು ಸುಳ್ಳು ಹೇಳುವವರಾಗಿದ್ದಾರೆ.

وَقَالَ الَّذِينَ كَفَرُوا لِلَّذِينَ آمَنُوا اتَّبِعُوا سَبِيلَنَا وَلْنَحْمِلْ خَطَايَاكُمْ ۖ وَمَا هُمْ بِحَامِلِينَ مِنْ خَطَايَاهُمْ مِنْ شَيْءٍ ۖ إِنَّهُمْ لَكَاذِبُونَ ﴿١٢﴾

**14.** ಅವರು ತಮ್ಮ ಸ್ವಂತ ಭಾರಗಳನ್ನು ಹೊರುವರು. (ಬೇರೆ) ಭಾರಗಳನ್ನು ಸಹ ತಮ್ಮ ಸ್ವಂತ ಭಾರಗಳೊಂದಿಗೆ ಅವರು ಹೊರುವರು. ಅವರ ಸುಳ್ಳು ಸೃಷ್ಟನೆಗಳ ಬಗ್ಗೆ ಪುನರುತ್ಥಾನ ದಿನದಂದು ಅವರು ಪ್ರಶ್ನಿಸಲ್ಪಡುವರು.

وَلَيَحْمِلُنَّ أَثْقَالَهُمْ وَأَثْقَالًا مَعَ أَثْقَالِهِمْ ۖ وَلَيُسْأَلُنَّ يَوْمَ الْقِيَامَةِ عَمَّا كَانُوا يَفْتَرُونَ ﴿١٣﴾

**15.** ನಾವು ನೂಹ್‌ರನ್ನು ಅವರ ಜನರ ಬಳಿಗೆ ಕಳುಹಿಸಿದೆವು. ಅವರು ಅಲ್ಲಿ ಒಂಭೈನೂರ ಐವತ್ತು ವರ್ಷಗಳ ಕಾಲ ವಾಸಿಸಿದರು.[371] ಜನರು ದುಷ್ಕರ್ಮಿ ಗಳಾಗಿದ್ದುದರಿಂದ ಅವರು ಜಳಪ್ರಳಯಕ್ಕೆ ತುತ್ತಾದರು.

وَلَقَدْ أَرْسَلْنَا نُوحًا إِلَىٰ قَوْمِهِ فَلَبِثَ فِيهِمْ أَلْفَ سَنَةٍ إِلَّا خَمْسِينَ عَامًا فَأَخَذَهُمُ الطُّوفَانُ وَهُمْ ظَالِمُونَ ﴿١٤﴾

**16.** ಆದರೆ ನಾವು ಅವರನ್ನೂ (ನೂಹ್‌ರನ್ನೂ) ಅವರೊಂದಿಗೆ ನೌಕೆಯಲ್ಲಿದ್ದವರನ್ನೂ ರಕ್ಷಿಸಿದೆವು. ಸರ್ವಲೋಕಕ್ಕೂ ನಾವು ಅದನ್ನೊಂದು ದೃಷ್ಟಾಂತವಾಗಿ ಮಾಡಿದೆವು.

فَأَنْجَيْنَاهُ وَأَصْحَابَ السَّفِينَةِ وَجَعَلْنَاهَا آيَةً لِلْعَالَمِينَ ﴿١٥﴾

**17.** ಇಬ್‌ರಾಹೀಮ್‌ರನ್ನೂ (ನಾವು ಪ್ರವಾದಿಯಾಗಿ ಕಳುಹಿಸಿದೆವು). ಅವರು ತನ್ನ ಜನರಿಗೆ ಹೇಳಿದ ಸಂದರ್ಭ: 'ಅಲ್ಲಾಹನನ್ನು ಆರಾಧಿಸಿರಿ ಮತ್ತು ಅವನ ಭಯಭಕ್ತಿಯನ್ನಿರಿಸಿರಿ. ನೀವು ಮನವರಿಕೆ ಮಾಡುವಿರಾದರೆ ಅದು ನಿಮಗೆ ಉತ್ತಮ.

وَإِبْرَاهِيمَ إِذْ قَالَ لِقَوْمِهِ اعْبُدُوا اللَّهَ وَاتَّقُوهُ ۖ ذَٰلِكُمْ خَيْرٌ لَكُمْ إِنْ كُنْتُمْ تَعْلَمُونَ ﴿١٦﴾

**18.** 'ನೀವು ಅಲ್ಲಾಹನನ್ನು ಬಿಟ್ಟು ಕೇವಲ ಕೆಲವು ವಿಗ್ರಹಗಳನ್ನು ಮಾತ್ರ ಆರಾಧಿಸುತ್ತಿದ್ದೀರಿ. ಮಾತ್ರವಲ್ಲ, (ಅದಕ್ಕಾಗಿ) ಸುಳ್ಳನ್ನೂ ಸೃಷ್ಟಿಸಿದ್ದೀರಿ. ಅಲ್ಲಾಹನನ್ನು ಬಿಟ್ಟು ನೀವು ಯಾರನ್ನು ಆರಾಧಿಸುತ್ತಿದ್ದೀರೋ, ಅವರು

إِنَّمَا تَعْبُدُونَ مِنْ دُونِ اللَّهِ أَوْثَانًا وَتَخْلُقُونَ إِفْكًا ۚ إِنَّ الَّذِينَ تَعْبُدُونَ مِنْ دُونِ اللَّهِ لَا يَمْلِكُونَ

371. ನೂಹ್‌ರ ಆಯುಷ್ಕಾಲವನ್ನಲ್ಲ, ಅವರ ಪ್ರವಾದಿತ್ವ ಅಥವಾ ಧರ್ಮಶಾಸ್ತ್ರದ ಕಾಲಾವಧಿಯನ್ನು ಇಲ್ಲಿ ಸೂಚಿಸಲಾಗಿದೆ.





ನಿಮಗೆ ಆಹಾರ ಒದಗಿಸಲು ಶಕ್ತರಲ್ಲ. ಆದ್ದರಿಂದ ನೀವು ಅಲ್ಲಾಹನಿಂದ ಆಹಾರವನ್ನು ಬೇಡಿರಿ; ಅವನನ್ನು ಆರಾಧಿಸಿರಿ; ಅವನಿಗೆ ಕೃತಜ್ಞರಾಗಿರಿ. ಅವನ ಬಳಿಗೆಯೇ ನೀವು ಮರಳಿಸಲ್ಪಡುವಿರಿ.

لَكُمْ رِزْقًا فَابْتَغُوا عِنْدَ اللَّهِ الرِّزْقَ وَاعْبُدُوهُ وَاشْكُرُوا لَهُ ۖ إِلَيْهِ تُرْجَعُونَ ﴿١٧﴾

**19.** ನೀವು ಸುಳ್ಳಾಗಿಸುವುದಾದರೆ (ಅದೇನೂ ಹೊಸತಲ್ಲ); ನಿಮಗಿಂತ ಮುಂಚಿನ ಪೀಳಿಗೆಗಳು ಸಹ (ತಮ್ಮ ಪ್ರವಾದಿಗಳನ್ನು) ಸುಳ್ಳಾಗಿಸಿವೆ. ಸಂದೇಶವನ್ನು ಸರಿಯಾದ ರೀತಿಯಲ್ಲಿ ತಲಪಿಸುವುದು ಮಾತ್ರವೇ ಸಂದೇಶವಾಹಕನ ಹೊಣೆಗಾರಿಕೆಯಾಗಿದೆ.

وَإِنْ تُكَذِّبُوا فَقَدْ كَذَّبَ أُمَمٌ مِنْ قَبْلِكُمْ ۖ وَمَا عَلَى الرَّسُولِ إِلَّا الْبَلَاغُ الْمُبِينُ ﴿١٨﴾

**20.** ಅಲ್ಲಾಹನು ಸೃಷ್ಟಿಯನ್ನು ಆರಂಭಿಸಿದ್ದು ಮತ್ತು ಪುನರಾವರ್ತಿಸುತ್ತಿರುವುದು ಹೇಗೆಂದು ಅವರು ಕಾಣುವುದಿಲ್ಲವೇ? ಅದು ಅಲ್ಲಾಹನಿಗೆ ಸುಲಭಕಾರ್ಯವಾಗಿದೆ.

أَوَلَمْ يَرَوْا كَيْفَ يُبْدِئُ اللَّهُ الْخَلْقَ ثُمَّ يُعِيدُهُ ۚ إِنَّ ذَٰلِكَ عَلَى اللَّهِ يَسِيرٌ ﴿١٩﴾

**21.** ಹೇಳು: 'ನೀವು ಭೂಮಿಯಲ್ಲಿ ಸಂಚರಿಸಿ, ಅವನು ಸೃಷ್ಟಿಯನ್ನು ಹೇಗೆ ಆರಂಭಿಸಿದ್ದಾನೆಂದು ನೋಡಿರಿ. ಅನಂತರ ಅಲ್ಲಾಹನು ಮತ್ತೊಂದು ಸೃಷ್ಟಿಯನ್ನು ಸೃಷ್ಟಿಸುವನು.[372] ನಿಸ್ಸಂಶಯವಾಗಿಯೂ ಅಲ್ಲಾಹನು ಸರ್ವ ಸಮರ್ಥನು.'

قُلْ سِيرُوا فِي الْأَرْضِ فَانْظُرُوا كَيْفَ بَدَأَ الْخَلْقَ ۚ ثُمَّ اللَّهُ يُنْشِئُ النَّشْأَةَ الْآخِرَةَ ۚ إِنَّ اللَّهَ عَلَىٰ كُلِّ شَيْءٍ قَدِيرٌ ﴿٢٠﴾

**22.** ಅವನು ತಾನಿಚ್ಛಿಸುವವರನ್ನು ಶಿಕ್ಷಿಸುತ್ತಾನೆ. ತಾನು ಬಯಸುವವರ ಮೇಲೆ ಕರುಣೆದೋರುತ್ತಾನೆ. ನೀವು ಅವನ ಕಡೆಗೆ ಹಿಂತಿರುಗಿಸಲ್ಪಡುವಿರಿ.

يُعَذِّبُ مَنْ يَشَاءُ وَيَرْحَمُ مَنْ يَشَاءُ ۖ وَإِلَيْهِ تُقْلَبُونَ ﴿٢١﴾

**23.** (ಅಲ್ಲಾಹನ ಯೋಜನೆಯನ್ನು) ನೀವು ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ ವಿಫಲಗೊಳಿಸಲಾರಿರಿ. ಅಲ್ಲಾಹನನ್ನು ಬಿಟ್ಟು ನಿಮಗೆ ಸ್ನೇಹಿತ ಅಥವಾ ಸಹಾಯಕನಾಗಿ ಯಾರೂ ಇಲ್ಲ.

وَمَا أَنْتُمْ بِمُعْجِزِينَ فِي الْأَرْضِ وَلَا فِي السَّمَاءِ ۖ وَمَا لَكُمْ مِنْ دُونِ اللَّهِ مِنْ وَلِيٍّ وَلَا نَصِيرٍ ﴿٢٢﴾

372. ಇಲ್ಲಿ 'ಆಖಿರತ್' ಎಂಬ ಪದಕ್ಕೆ ಪರಲೋಕ ಜೀವಿತ ಎಂಬ ಅರ್ಥವಲ್ಲ. ಬದಲು, ಸಮುದಾಯಗಳ ಅಧಃಪತನದ ನಂತರ ಉಂಟಾಗುವ ಪುನಶ್ಚೇತನವನ್ನು ಇಲ್ಲಿ ಸೂಚಿಸಲಾಗಿದೆ. "ನೀವು ಭೂಮಿಯಲ್ಲಿ ಸಂಚರಿಸಿ....ನೋಡಿರಿ" ಎಂಬ ವಚನ ಇದಕ್ಕೆ ಬೆಳಕು ಚೆಲ್ಲುತ್ತದೆ. ಪಾರತ್ರಿಕ ಪುನರುತ್ಥಾನವನ್ನು ಭೂಮಿಯಲ್ಲಿ ಸಂಚರಿಸಿ ತಿಳಿದುಕೊಳ್ಳಲು ಸಾಧ್ಯವಿಲ್ಲವಷ್ಟೆ.

**24. ಅಲ್ಲಾಹನ ದೃಷ್ಟಾಂತಗಳನ್ನೂ ಅವನೊಂದಿಗಿನ ಭೇಟಿಯನ್ನೂ ಅಲ್ಲಗಳೆಯುವವರು ನನ್ನ ಕರುಣೆಯ ಬಗ್ಗೆ ನಿರಾಶೆ ಹೊಂದಿದವರಾಗಿದ್ದಾರೆ. ಅವರಿಗೆ ಕಠೋರ ವಾದ ಶಿಕ್ಷೆಯಿದೆ.**

وَالَّذِينَ كَفَرُوا بِآيَاتِ اللَّهِ وَلِقَائِهِ أُولَٰئِكَ يَئِسُوا مِن رَّحْمَتِي وَأُولَٰئِكَ لَهُمْ عَذَابٌ أَلِيمٌ ﴿٢٣﴾

**25. ಆಗ 'ಅವನನ್ನು ಕೊಲ್ಲಿರಿ ಅಥವಾ ಸುಟ್ಟುಹಾಕಿರಿ' ಎಂದು ಹೇಳುವುದನ್ನು ಬಿಟ್ಟು ಅವರ** (ಇಬ್‌ರಾಹೀಮರ) **ಜನತೆಗೆ ಬೇರೆ ಉತ್ತರವಿರಲಿಲ್ಲ. ಆದರೆ ಅಲ್ಲಾಹನು ಅವರನ್ನು ಬೆಂಕಿಯಿಂದ ರಕ್ಷಿಸಿದನು. ನಂಬುವವರಿಗೆ ಅದರಲ್ಲಿ ನಿಶ್ಚಯವಾಗಿಯೂ ದೃಷ್ಟಾಂತವಿದೆ.**

فَمَا كَانَ جَوَابَ قَوْمِهِ إِلَّا أَن قَالُوا اقْتُلُوهُ أَوْ حَرِّقُوهُ فَأَنجَاهُ اللَّهُ مِنَ النَّارِ ۚ إِنَّ فِي ذَٰلِكَ لَآيَاتٍ لِّقَوْمٍ يُؤْمِنُونَ ﴿٢٤﴾

**26. 'ಅವರು** (ಇಬ್‌ರಾಹೀಂ) **ಹೇಳಿದರು: ಅಲ್ಲಾಹನನ್ನು ಬಿಟ್ಟು ಕೆಲವು ವಿಗ್ರಹಗಳನ್ನು ನೀವು ಮಾಡಿಟ್ಟುಕೊಂಡಿದ್ದೀರಿ. ಐಹಿಕ ಜೀವಿತದಲ್ಲಿ ನಿಮ್ಮೊಳಗಿನ ಸ್ನೇಹ ಬಾಂಧವ್ಯ ಅದಕ್ಕೆ ಕಾರಣ. ಪುನರುತ್ಥಾನ ದಿನದಂದು ನಿಮ್ಮಲ್ಲಿ ಕೆಲವರು ಕೆಲವರನ್ನು ಅಲ್ಲಗಳೆಯುವಿರಿ ಮತ್ತು ನಿಮ್ಮಲ್ಲಿ ಕೆಲವರು ಕೆಲವರನ್ನು ಶಪಿಸುವಿರಿ. ನಿಮ್ಮ ವಾಸ ಸ್ಥಳ ನರಕವಾಗಿರುವುದು. ನಿಮಗೆ ಸಹಾಯಕರಾಗಿ ಯಾರೂ ಇರಲಾರರು.'**

وَقَالَ إِنَّمَا اتَّخَذْتُم مِّن دُونِ اللَّهِ أَوْثَانًا مَّوَدَّةَ بَيْنِكُمْ فِي الْحَيَاةِ الدُّنْيَا ۖ ثُمَّ يَوْمَ الْقِيَامَةِ يَكْفُرُ بَعْضُكُم بِبَعْضٍ وَيَلْعَنُ بَعْضُكُم بَعْضًا وَمَأْوَاكُمُ النَّارُ وَمَا لَكُم مِّن نَّاصِرِينَ ﴿٢٥﴾

**27. ಆಗ ಲೂತ್ ಅವರನ್ನು ನಂಬಿದರು. ಅವರು** (ಇಬ್‌ರಾಹೀಂ) **ಹೇಳಿದರು: 'ನಾನು ಅಲ್ಲಾಹನ ಅಭಯ ಕೋರಿ ವಲಸೆಹೋಗುತ್ತೇನೆ. ದಿಟವಾಗಿಯೂ ಅವನು ಪ್ರತಾಪಶಾಲಿಯೂ ಬುದ್ಧಿವಂತನೂ ಆಗಿದ್ದಾನೆ.'**

فَآمَنَ لَهُ لُوطٌ ۘ وَقَالَ إِنِّي مُهَاجِرٌ إِلَىٰ رَبِّي ۖ إِنَّهُ هُوَ الْعَزِيزُ الْحَكِيمُ ﴿٢٦﴾

**28. ನಾವು ಅವರಿಗೆ** (ಇಬ್‌ರಾಹೀಮರಿಗೆ) **ಇಸ್‌ಹಾಖ್ ಮತ್ತು ಯಅ್‌ಖೂಬ್‌ರನ್ನು ನೀಡಿದೆವು. ಅವರ ಸಂತಾನ ಪರಂಪರೆಯಲ್ಲಿ ನಾವು ಪ್ರವಾದಿತ್ವವನ್ನೂ ಗ್ರಂಥವನ್ನೂ ದಯಪಾಲಿಸಿದೆವು. ನಾವು ಅವರಿಗೆ ಇಹ ಲೋಕದಲ್ಲಿ** (ಅವರ ಸತ್ಕರ್ಮಗಳ) **ಪ್ರತಿಫಲವನ್ನು ಪ್ರದಾನ ಮಾಡಿದೆವು. ಪರಲೋಕದಲ್ಲಿ ಅವರು ಖಂಡಿತವಾಗಿಯೂ ಸಜ್ಜನರಲ್ಲಿ ಸೇರಿದವರಾಗುವರು.**

وَوَهَبْنَا لَهُ إِسْحَاقَ وَيَعْقُوبَ وَجَعَلْنَا فِي ذُرِّيَّتِهِ النُّبُوَّةَ وَالْكِتَابَ وَآتَيْنَاهُ أَجْرَهُ فِي الدُّنْيَا ۖ وَإِنَّهُ فِي الْآخِرَةِ لَمِنَ الصَّالِحِينَ ﴿٢٧﴾





**29. ಲೂತ್‌ರನ್ನೂ** (ನಾವು ಪ್ರವಾದಿಯಾಗಿ ಕಳುಹಿಸಿದೆವು). **ಅವರು ತನ್ನ ಜನತೆಗೆ ಹೀಗೆ ಹೇಳಿದರು: 'ನಿಮಗಿಂತ ಮುಂಚೆ ಲೋಕದಲ್ಲಿ ಯಾರೂ ಮಾಡಿಲ್ಲದಂತಹ ನೀಚಕೃತ್ಯವನ್ನು ನೀವು ಮಾಡುತ್ತಿದ್ದೀರಿ.'**

وَلُوطًا إِذْ قَالَ لِقَوْمِهِ إِنَّكُمْ لَتَأْتُونَ الْفَاحِشَةَ مَا سَبَقَكُم بِهَا مِنْ أَحَدٍ مِّنَ الْعَالَمِينَ ﴿٢٨﴾

**30. 'ನೀವು** (ಕಾಮಾತುರರಾಗಿ) **ಪುರುಷರನ್ನು ಸಮೀಪಿಸುತ್ತೀರಿ;** ( ಕೊಲೆ, ಕೊಳ್ಳೆ ಮಾಡಿ) **ಮಾರ್ಗವನ್ನು ಕಡಿದುಹಾಕುತ್ತೀರಿ; ನಿಮ್ಮ ಸಭೆಗಳಲ್ಲಿ ನೀಚ ಕೃತ್ಯಗಳನ್ನು ಮಾಡುತ್ತೀರಿ ಅಲ್ಲವೇ?' ಆಗ, 'ನೀನು ಸತ್ಯವಂತನೆಂದಾದರೆ ನಮ್ಮ ಮೇಲೆ ಅಲ್ಲಾಹನ ಶಿಕ್ಷೆ ಎರಗುವಂತೆ ಮಾಡು' ಎನ್ನುವುದು ಮಾತ್ರವಾಗಿತ್ತು ಅವರ ಜನತೆಯ ಉತ್ತರ.**

أَئِنَّكُمْ لَتَأْتُونَ الرِّجَالَ وَتَقْطَعُونَ السَّبِيلَ وَتَأْتُونَ فِي نَادِيكُمُ الْمُنكَرَ ۖ فَمَا كَانَ جَوَابَ قَوْمِهِ إِلَّا أَن قَالُوا ائْتِنَا بِعَذَابِ اللَّهِ إِن كُنتَ مِنَ الصَّادِقِينَ ﴿٢٩﴾

**31. ಅವರು ಪ್ರಾರ್ಥಿಸಿದರು: 'ನನ್ನ ಪ್ರಭೂ, ಈ ದುಷ್ಟ ಜನರ ವಿರುದ್ಧ ನೀನು ನನಗೆ ಸಹಾಯ ಮಾಡು.'**

قَالَ رَبِّ انصُرْنِي عَلَى الْقَوْمِ الْمُفْسِدِينَ ﴿٣٠﴾

**32. ನಮ್ಮ ದೂತರು ಇಬ್‌ರಾಹೀಮರ ಬಳಿಗೆ ಶುಭ ವಾರ್ತೆಯನ್ನು ತಂದಾಗ ಹೇಳಿದರು: 'ನಾವು ಈ ನಾಡಿನ ಜನರನ್ನು ನಾಶಪಡಿಸಲಿದ್ದೇವೆ. ನಿಜವಾಗಿಯೂ ಅದರ ಜನರು ದುಷ್ಕರ್ಮಿಗಳಾಗಿದ್ದಾರೆ.'**

وَلَمَّا جَاءَتْ رُسُلُنَا إِبْرَاهِيمَ بِالْبُشْرَىٰ قَالُوا إِنَّا مُهْلِكُو أَهْلِ هَٰذِهِ الْقَرْيَةِ ۖ إِنَّ أَهْلَهَا كَانُوا ظَالِمِينَ ﴿٣١﴾

**33. ಅವರು** (ಇಬ್‌ರಾಹೀಂ) **ಹೇಳಿದರು: 'ಆದರೆ ಲೂತ್ ಅಲ್ಲಿದ್ದಾರೆ.' ಅವರು** (ದೂತರು) **ಹೇಳಿದರು: 'ಅಲ್ಲಿ ಯಾರಿದ್ದಾರೆಂದು ನಮಗೆ ಚೆನ್ನಾಗಿ ಗೊತ್ತಿದೆ. ಹಿಂದೆ ಉಳಿಯುವವರೊಂದಿಗೆ ಸೇರಿದ ಅವರ** (ಲೂತ್‌ರ) **ಪತ್ನಿಯನ್ನು ಹೊರತುಪಡಿಸಿ ಅವರನ್ನೂ ಅವರ ಕುಟುಂಬದ ಎಲ್ಲರನ್ನೂ ನಾವು ರಕ್ಷಿಸುವೆವು.'**

قَالَ إِنَّ فِيهَا لُوطًا ۚ قَالُوا نَحْنُ أَعْلَمُ بِمَن فِيهَا ۖ لَنُنَجِّيَنَّهُ وَأَهْلَهُ إِلَّا امْرَأَتَهُ كَانَتْ مِنَ الْغَابِرِينَ ﴿٣٢﴾

**34. ನಮ್ಮ ದೂತರು ಲೂತ್‌ರ ಬಳಿಗೆ ಬಂದಾಗ ಅವರ ಬಗ್ಗೆ ಅವರು** (ಲೂತ್) **ಚಿಂತಾಕ್ರಾಂತರಾದರು ಮತ್ತು ಅವರ ವಿಚಾರದಲ್ಲಿ ಎದೆಗುಂದಿದರು. ಆಗ ಅವರು**

وَلَمَّا أَن جَاءَتْ رُسُلُنَا لُوطًا سِيءَ بِهِمْ وَضَاقَ بِهِمْ ذَرْعًا وَقَالُوا لَا

(ದೂತರು) ಹೇಳಿದರು: 'ಭಯಪಡಬೇಡಿ, ವ್ಯಥೆಗೊಳ್ಳುವುದೂ ಬೇಡ. ಹಿಂದೆ ಉಳಿಯುವವರೊಂದಿಗೆ ಸೇರಿದ ನಿಮ್ಮ ಪತ್ನಿಯನ್ನು ಬಿಟ್ಟು ನಿಮ್ಮನ್ನೂ ನಿಮ್ಮ ಕುಟುಂಬದವರನ್ನೂ ನಾವು ರಕ್ಷಿಸುವೆವು.

تَخَفْ وَلَا تَحْزَنْ ۗ إِنَّا مُنَجُّوكَ
وَأَهْلَكَ إِلَّا امْرَأَتَكَ كَانَتْ مِنَ
الْغَابِرِينَ ﴿٣٣﴾

35. 'ಈ ಪಟ್ಟಣದ ಜನರ ಮೇಲೆ, ಅವರು ಧಿಕ್ಕಾರಿಗಳಾದ ಕಾರಣ, ಆಕಾಶದಿಂದ ನಾವು ಶಿಕ್ಷೆಯನ್ನು ಇಳಿಸುವೆವು.'

إِنَّا مُنْزِلُونَ عَلَىٰ أَهْلِ هَٰذِهِ
الْقَرْيَةِ رِجْزًا مِنَ السَّمَاءِ بِمَا
كَانُوا يَفْسُقُونَ ﴿٣٤﴾

36. ಚಿಂತನೆ ಮಾಡುವ ಜನರಿಗೋಸ್ಕರ ಒಂದು ಸುಸ್ಪಷ್ಟವಾದ ದೃಷ್ಟಾಂತವನ್ನು ನಾವು ಅಲ್ಲಿ ಉಳಿಯಬಿಟ್ಟಿದ್ದೇವೆ.

وَلَقَدْ تَرَكْنَا مِنْهَا آيَةً بَيِّنَةً لِقَوْمٍ
يَعْقِلُونَ ﴿٣٥﴾

37. ಮದ್‌ಯನಕ್ಕೆ ಅವರ ಸಹೋದರ ಶುಐಬ್‌ರನ್ನು ಸಹ (ನಾವು ಕಳುಹಿಸಿದೆವು). ಅವರು ಹೇಳಿದರು: 'ಎಲೈ ನನ್ನ ಸಮುದಾಯದವರೇ, ನೀವು ಅಲ್ಲಾಹನನ್ನು ಆರಾಧಿಸಿರಿ; ಅಂತ್ಯ ದಿನದ ಬಗ್ಗೆ ಭಯವಿಟ್ಟುಕೊಳ್ಳಿರಿ. ಊರಿನಲ್ಲಿ ಶಾಂತಿ ಭಂಗವನ್ನುಂಟು ಮಾಡುವಂಥ ದುಷ್ಕೃತ್ಯವೆಸಗಬೇಡಿರಿ.'

وَإِلَىٰ مَدْيَنَ أَخَاهُمْ شُعَيْبًا فَقَالَ
يَا قَوْمِ اعْبُدُوا اللَّهَ وَارْجُوا الْيَوْمَ
الْآخِرَ وَلَا تَعْثَوْا فِي الْأَرْضِ
مُفْسِدِينَ ﴿٣٦﴾

38. ಆದರೆ ಅವರು (ಮದ್‌ಯನದ ಜನರು) ಅವರನ್ನು ಸುಳ್ಳಾಗಿಸಿದರು. ಆದ ಕಾರಣ ಒಂದು ಭಯಂಕರ ಭೂಕಂಪಕ್ಕೆ ಅವರು ತುತ್ತಾದರು. ಹಾಗೆ ಅವರು ತಮ್ಮ ಮನೆಗಳಲ್ಲಿ ಅಧೋಮುಖರಾಗಿ ಬಿದ್ದರು.

فَكَذَّبُوهُ فَأَخَذَتْهُمُ الرَّجْفَةُ
فَأَصْبَحُوا فِي دَارِهِمْ جَاثِمِينَ ﴿٣٧﴾

39. ಆದ್ ಮತ್ತು ಸಮೂದ್ ಗೋತ್ರಗಳನ್ನು ಸಹ (ನಾವು ನಾಶ ಮಾಡಿದೆವು). ಅವರ ವಾಸಸ್ಥಳಗಳಿಂದ ಇದಕ್ಕೆ ನಿಮಗೆ ಪುರಾವೆ ಲಭಿಸುತ್ತದೆ. ಅವರು ಸತ್ಯವನ್ನು ಕಾಣುವವರಾಗಿದ್ದರೂ ಅವರ ಕೃತ್ಯಗಳನ್ನು ಶೈತಾನನು ಅವರಿಗೆ ಚಲೋದಾಗಿ ತೋರಿಸಿದನು ಮತ್ತು ಅವರನ್ನು ಹಾದಿಗೆಡಿಸಿದನು.

وَعَادًا وَثَمُودَ وَقَدْ تَبَيَّنَ لَكُمْ
مِنْ مَسَاكِنِهِمْ ۖ وَزَيَّنَ لَهُمُ
الشَّيْطَانُ أَعْمَالَهُمْ فَصَدَّهُمْ
عَنِ السَّبِيلِ وَكَانُوا مُسْتَبْصِرِينَ ﴿٣٨﴾





40. ಖಾರೂನ್, ಫಿರ್‌ಔನ್ ಮತ್ತು ಹಾಮಾನ್‌ನನ್ನು ಸಹ (ನಾವು ನಾಶಮಾಡಿದೆವು). ಮೂಸಾ ಅವರ ಬಳಿಗೆ ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಆಗಮಿಸಿದರು. ಆಗ ಅವರು ಊರಿನಲ್ಲಿ ಅಹಂಕಾರದಿಂದ ವರ್ತಿಸಿದರು. ಆದರೆ ಅವರಿಗೆ ನಮ್ಮಿಂದ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗಲಿಲ್ಲ.

وَقَارُونَ وَفِرْعَوْنَ وَهَامَانَ ۖ
وَلَقَدْ جَاءَهُمْ مُوسَىٰ بِالْبَيِّنَاتِ
فَاسْتَكْبَرُوا فِي الْأَرْضِ وَمَا كَانُوا
سَابِقِينَ ﴿٣٩﴾

41. ಹಾಗೆ ಅವರಲ್ಲಿ ಪ್ರತಿಯೊಬ್ಬನನ್ನೂ ಅವನ ತಪ್ಪಿಗೋಸ್ಕರ ನಾವು ಶಿಕ್ಷಿಸಿದೆವು. ಅವರಲ್ಲಿ ಕೆಲವರ ಮೇಲೆ ನಾವು ಮರಳಿನಿಂದ ಕೂಡಿದ ಬಿರುಗಾಳಿ ಬೀಸುವಂತೆ ಮಾಡಿದೆವು. ಅವರಲ್ಲಿ ಕೆಲವರು ಭೀಕರ ಶಬ್ದಕ್ಕೆ ತುತ್ತಾದರು. ಅವರಲ್ಲಿ ಕೆಲವರನ್ನು ಭೂಮಿ ನುಂಗುವಂತೆ ಮಾಡಿದೆವು. ಅವರಲ್ಲಿ ಕೆಲವರನ್ನು ನೀರಿನಲ್ಲಿ ಮುಳುಗಿಸಿದೆವು. ಅಲ್ಲಾಹನು ಅವರಿಗೆ ಅನ್ಯಾಯವೆಸಗಲಿಲ್ಲ; ಆದರೆ ಅವರೇ ಸ್ವಯಂ ಅನ್ಯಾಯವೆಸಗಿದರು.

فَكُلًّا أَخَذْنَا بِذَنْبِهِ ۖ فَمِنْهُمْ مَنْ
أَرْسَلْنَا عَلَيْهِ حَاصِبًا ۖ وَمِنْهُمْ
مَنْ أَخَذَتْهُ الصَّيْحَةُ ۖ وَمِنْهُمْ مَنْ
خَسَفْنَا بِهِ الْأَرْضَ ۖ وَمِنْهُمْ مَنْ
أَغْرَقْنَا ۚ وَمَا كَانَ اللَّهُ لِيَظْلِمَهُمْ
وَلَٰكِنْ كَانُوا أَنْفُسَهُمْ يَظْلِمُونَ ﴿٤٠﴾

42. ಅಲ್ಲಾಹನನ್ನು ಬಿಟ್ಟು ಅನ್ಯರನ್ನು ತಮ್ಮ ಸಹಾಯಕರನ್ನಾಗಿ ಮಾಡುವವರ ಸ್ಥಿತಿ ಜೇಡನ ಸ್ಥಿತಿಯಂತಿದೆ. ಅದು ಸ್ವಂತ ಒಂದು ಮನೆಯನ್ನು ಮಾಡುತ್ತದೆ. ನಿಜವೇನೆಂದರೆ, ಮನೆಗಳ ಪೈಕಿ ಅತ್ಯಂತ ಬಲಹೀನವಾದುದು ಜೇಡನ ಮನೆಯಾಗಿದೆ. ಅವರು ಮನವರಿಕೆ ಮಾಡುತ್ತಿದ್ದರೆ (ಎಷ್ಟು ಚೆನ್ನಾಗಿತ್ತು)!

مَثَلُ الَّذِينَ اتَّخَذُوا مِنْ دُونِ اللَّهِ
أَوْلِيَاءَ كَمَثَلِ الْعَنْكَبُوتِ اتَّخَذَتْ
بَيْتًا ۖ وَإِنَّ أَوْهَنَ
الْبُيُوتِ لَبَيْتُ الْعَنْكَبُوتِ ۖ
لَوْ كَانُوا يَعْلَمُونَ ﴿٤١﴾

43. ಅಲ್ಲಾಹನನ್ನು ಬಿಟ್ಟು ಅವರು ಏನನ್ನು ಕರೆದು ಪ್ರಾರ್ಥಿಸುತ್ತಾರೆಂದು ಅವನು ಬಲ್ಲನು. ಅವನು ಪ್ರತಾಪಶಾಲಿಯೂ ಬುದ್ಧಿವಂತನೂ ಆಗಿದ್ದಾನೆ.

إِنَّ اللَّهَ يَعْلَمُ مَا يَدْعُونَ مِنْ
دُونِهِ مِنْ شَيْءٍ ۚ وَهُوَ الْعَزِيزُ
الْحَكِيمُ ﴿٤٢﴾

44. ಜನರಿಗೋಸ್ಕರ ನಾವು ಈ ಉಪಮೆಗಳನ್ನು ವಿವರಿಸುತ್ತೇವೆ. ಆದರೆ ಜ್ಞಾನಿಗಳು ಹೊರತು ಇನ್ನಾರೂ ಅವುಗಳನ್ನು ಮನವರಿಕೆ ಮಾಡುವುದಿಲ್ಲ.

وَتِلْكَ الْأَمْثَالُ نَضْرِبُهَا لِلنَّاسِ ۖ
وَمَا يَعْقِلُهَا إِلَّا الْعَالِمُونَ ﴿٤٣﴾

**45.** ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಯಥೋಚಿತವಾಗಿ ಸೃಷ್ಟಿಸಿದ್ದಾನೆ. ವಿಶ್ವಾಸಿಗಳಿಗೆ ಅದರಲ್ಲಿ ನಿಶ್ಚಯವಾಗಿಯೂ ದೃಷ್ಟಾಂತವಿದೆ.

خَلَقَ اللّٰهُ السَّمٰوٰتِ وَ الْاَرْضَ
بِالْحَقِّ ؕ اِنَّ فِیْ ذٰلِكَ لَاٰیَةً
لِّلْمُؤْمِنِیْنَ ﴿۴۴﴾

**46.** ಈ ಗ್ರಂಥದಿಂದ ನಿನಗೆ ದಿವ್ಯ ಸಂದೇಶ ಮೂಲಕ ನೀಡಲ್ಪಟ್ಟುದನ್ನು ನೀನು ಪಠಿಸು. ನಮಾಝನ್ನು ನಿಷ್ಠೆಯಿಂದ ನಿರ್ವಹಿಸು. ಪ್ರಾರ್ಥನೆ ಅಸಭ್ಯತೆಯನ್ನೂ ದುರ್ವರ್ತನೆಯನ್ನೂ ತಡೆಯುತ್ತದೆ. ಅಲ್ಲಾಹನ ಸ್ಮರಣೆ ಅತಿ ಮಹತ್ತರವಾದ ಸದ್ವರ್ತನೆಯಾಗಿದೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಬಲ್ಲನು.

اُتْلُ مَاۤ اُوْحِیَ اِلَیْكَ مِنَ الْكِتٰبِ
وَ اَقِمِ الصَّلٰوةَ ؕ اِنَّ الصَّلٰوةَ تَنْهٰی عَنِ
الْفَحْشَآءِ وَ الْمُنْكَرِ ؕ وَ لَذِكْرُ اللّٰهِ اَكْبَرُ ؕ
وَ اللّٰهُ یَعْلَمُ مَا تَصْنَعُوْنَ ﴿۴۵﴾

**47.** ಗ್ರಂಥದವರೊಡನೆ ಅತ್ಯುತ್ತಮವಾದ ರೀತಿಯಲ್ಲಿ ವಿನಾ ನೀವು ವಾಗ್ವಾದ ಮಾಡಬೇಡಿರಿ. ಆದರೆ ಅವರ ಪೈಕಿ ಅನ್ಯಾಯವಾಗಿ ವರ್ತಿಸುವವರೊಡನೆ ಹೊರತು. ಹೇಳಿರಿ: 'ನಮಗೆ ಅವತೀರ್ಣವಾದುದನ್ನೂ ನಿಮಗೆ ಅವತೀರ್ಣವಾದುದನ್ನೂ ನಾವು ನಂಬುತ್ತೇವೆ. ನಮ್ಮ ದೇವನು ಮತ್ತು ನಿಮ್ಮ ದೇವನು ಒಬ್ಬನೇ ಆಗಿದ್ದಾನೆ. ನಾವು ಅವನಿಗೆ ಶರಣಾಗಿದ್ದೇವೆ.'

وَ لَا تُجَادِلُوْۤا اَهْلَ الْكِتٰبِ اِلَّا بِالَّتِیْ هِیَ
اَحْسَنُ ۖۗ اِلَّا الَّذِیْنَ ظَلَمُوْا مِنْهُمْ
وَ قُوْلُوْۤا اٰمَنَّا بِالَّذِیْۤ اُنْزِلَ اِلَیْنَا وَ
اُنْزِلَ اِلَیْكُمْ وَ اِلٰهُنَا وَ اِلٰهُكُمْ وَاحِدٌ وَّ
نَحْنُ لَهٗ مُسْلِمُوْنَ ﴿۴۶﴾

**48.** ಈ ರೀತಿಯಲ್ಲಿ ಈ ಗ್ರಂಥವನ್ನು ನಾವು ನಿನಗೆ ಅವತೀರ್ಣಗೊಳಿಸಿದ್ದೇವೆ. ನಾವು ಯಾರಿಗೆ ಗ್ರಂಥವನ್ನು (ಅದರ ನಿಜವಾದ ಜ್ಞಾನವನ್ನು) ನೀಡಿರುವೆವೋ ಅವರು ಇದನ್ನು (ಖುರ್‌ಆನನ್ನು) ನಂಬುತ್ತಾರೆ. ಇವರಲ್ಲಿ (ಮಕ್ಕಾ ನಿವಾಸಿಗಳಲ್ಲಿ) ಸಹ ಇದನ್ನು ನಂಬುವ ಕೆಲವರಿದ್ದಾರೆ. ಕೃತಘ್ನರು ಹೊರತು ಬೇರೆ ಯಾರೂ ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುವುದಿಲ್ಲ.

وَ كَذٰلِكَ اَنْزَلْنَاۤ اِلَیْكَ الْكِتٰبَ ؕ
فَالَّذِیْنَ اٰتَیْنٰهُمُ الْكِتٰبَ یُؤْمِنُوْنَ
بِهٖ ۚ وَ مِنْ هٰۤؤُلَآءِ مَنْ یُّؤْمِنُ بِهٖ ؕ وَ مَا
یَجْحَدُ بِاٰیٰتِنَاۤ اِلَّا الْكٰفِرُوْنَ ﴿۴۷﴾

**49.** ಇದಕ್ಕಿಂತ ಮುಂಚೆ ನೀನು ಯಾವ ಗ್ರಂಥವನ್ನಾಗಲಿ ಓದಿಲ್ಲ. ನಿನ್ನ ಬಲಗೈಯಿಂದ ನೀನು ಬರೆಯಲೂ ಇಲ್ಲ. ಹಾಗಿರುತ್ತಿದ್ದರೆ ಸುಳ್ಳುಗಾರರು ಸಂಶಯಪಡುತ್ತಿದ್ದರು.

وَ مَا كُنْتَ تَتْلُوْا مِنْ قَبْلِهٖ مِنْ كِتٰبٍ
وَّ لَا تَخُطُّهٗ بِیَمِیْنِكَ اِذًا لَّارْتَابَ
الْمُبْطِلُوْنَ ﴿۴۸﴾





**50.** ಆದರೆ, ಅದು (ಖುರ್‌ಆನ್) ಜ್ಞಾನ ನೀಡಲ್ಪಟ್ಟವರ ಹೃದಯಗಳಲ್ಲಿರುವ ಸ್ಪಷ್ಟವಾದ ದೃಷ್ಟಾಂತಗಳಿಂದ ತುಂಬಿದೆ. ಅಧರ್ಮಿಗಳು ಹೊರತು ಬೇರೆ ಯಾರೂ ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುವುದಿಲ್ಲ.

بَلْ هُوَ اٰیٰتٌۢ بَیِّنٰتٌ فِیْ صُدُوْرِ الَّذِیْنَ
اُوْتُوا الْعِلْمَ ؕ وَ مَا یَجْحَدُ بِاٰیٰتِنَاۤ اِلَّا
الظّٰلِمُوْنَ ﴿۴۹﴾

**51.** ಅವರು ಹೇಳುತ್ತಾರೆ: 'ಅವನ ಪ್ರಭುವಿನಿಂದ ಅವನಿಗೇಕೆ ದೃಷ್ಟಾಂತಗಳು ಇಳಿಸಲ್ಪಡುವುದಿಲ್ಲ?' ಹೇಳು: 'ದೃಷ್ಟಾಂತಗಳು ಅಲ್ಲಾಹನ ಬಳಿಯಲ್ಲಿವೆ. ನಾನು ಕೇವಲ ಒಬ್ಬ ಸುಸ್ಪಷ್ಟವಾದ ಮುನ್ನೆಚ್ಚರಿಕೆಗಾರ ಮಾತ್ರ.'

وَ قَالُوْا لَوْ لَاۤ اُنْزِلَ عَلَیْهِ اٰیٰتٌ مِّنْ
رَّبِّهٖ ؕ قُلْ اِنَّمَا الْاٰیٰتُ عِنْدَ اللّٰهِ ؕ وَ
اِنَّمَاۤ اَنَا نَذِیْرٌ مُّبِیْنٌ ﴿۵۰﴾

**52.** ನಿನಗೆ ನಾವು ಅವತೀರ್ಣಗೊಳಿಸಿದ, ಅವರಿಗೆ ಪಠಿಸಿ ಹೇಳಲಾಗುವ ಈ ಗ್ರಂಥ ಅವರಿಗೆ ಸಾಕಾಗುವುದಿಲ್ಲವೇನು? ದಿಟವಾಗಿಯೂ ವಿಶ್ವಾಸಿಗಳಿಗೆ ಅದರಲ್ಲಿ ಕರುಣೆ ಮತ್ತು ಉಪದೇಶವಿದೆ.

اَوَ لَمْ یَكْفِهِمْ اَنَّاۤ اَنْزَلْنَا عَلَیْكَ الْكِتٰبَ
یُتْلٰی عَلَیْهِمْ ؕ اِنَّ فِیْ ذٰلِكَ لَرَحْمَةً وَّ
ذِكْرٰی لِقَوْمٍ یُّؤْمِنُوْنَ ﴿۵۱﴾

**53.** ಹೇಳು: 'ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅಲ್ಲಾಹನು ಸಾಕು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅವನು ಬಲ್ಲನು. ಸುಳ್ಳನ್ನು ನಂಬುವವರು ಮತ್ತು ಅಲ್ಲಾಹನನ್ನು ನಂಬದಿರುವವರು ನಷ್ಟಕ್ಕೊಳಗಾದವರಾಗಿದ್ದಾರೆ.'

قُلْ كَفٰی بِاللّٰهِ بَیْنِیْ وَ بَیْنَكُمْ
شَهِیْدًا ۚ یَعْلَمُ مَا فِی السَّمٰوٰتِ وَ
الْاَرْضِ ؕ وَ الَّذِیْنَ اٰمَنُوْا بِالْبَاطِلِ وَ
كَفَرُوْا بِاللّٰهِ ۙ اُولٰٓىِٕكَ هُمُ الْخٰسِرُوْنَ ﴿۵۲﴾

**54.** ಶಿಕ್ಷೆಯ ಬಗ್ಗೆ ಅವರು ನಿನ್ನೊಡನೆ ತ್ವರೆಪಡಿಸುತ್ತಿದ್ದಾರೆ. ನಿಗದಿತವಾದ ಒಂದು ಅವಧಿ ಇಲ್ಲದಿರುತ್ತಿದ್ದರೆ (ಇದಕ್ಕಿಂತ ಮುಂಚಿತವಾಗಿಯೇ) ಅವರ ಮೇಲೆ ಶಿಕ್ಷೆ ಎರಗುತ್ತಿತ್ತು. ಅವರು ಊಹಿಸದಿರುವ ವೇಳೆಯಲ್ಲಿ ಅನಿರೀಕ್ಷಿತವಾಗಿ ಅದು ಅವರ ಮೇಲೆ ಎರಗುವುದು.

وَ یَسْتَعْجِلُوْنَكَ بِالْعَذَابِ ؕ وَ لَوْ لَاۤ اَجَلٌ
مُّسَمًّی لَّجَآءَهُمُ الْعَذَابُ ؕ وَ لَیَاْتِیَنَّهُمْ
بَغْتَةً وَّ هُمْ لَا یَشْعُرُوْنَ ﴿۵۳﴾

**55.** ಶಿಕ್ಷೆಯ ಬಗ್ಗೆ ಅವರು ನಿನ್ನೊಡನೆ ತ್ವರೆಪಡಿಸುತ್ತಿದ್ದಾರೆ. ಆದರೆ ನಿಶ್ಚಯವಾಗಿಯೂ (ಈಗಾಗಲೇ) ನರಕವು ಅವಿಶ್ವಾಸಿಗಳನ್ನು ಸುತ್ತುವರಿದಿದೆ.

یَسْتَعْجِلُوْنَكَ بِالْعَذَابِ ؕ وَ اِنَّ
جَهَنَّمَ لَمُحِیْطَةٌۢ بِالْكٰفِرِیْنَ ﴿۵۴﴾

**56.** ಅವರ ಮೇಲ್ಭಾಗದಿಂದಲೂ ಅವರ ಕಾಲುಗಳ ಅಡಿಭಾಗದಿಂದಲೂ ಶಿಕ್ಷೆಯು ಅವರನ್ನು ಆವರಿಸುವ ದಿನದಂದು, 'ನೀವು ಮಾಡಿದುದಕ್ಕೆ ತಕ್ಕ ಪ್ರತಿಫಲವನ್ನು ಅನುಭವಿಸಿರಿ' ಎಂದು ಅವನು (ಅಲ್ಲಾಹನು) ಹೇಳುವನು.

يَوْمَ يَغْشٰىهُمُ الْعَذَابُ مِنْ فَوْقِهِمْ وَمِنْ تَحْتِ أَرْجُلِهِمْ وَيَقُولُ ذُوقُوا مَا كُنْتُمْ تَعْمَلُونَ ۝٥٦

**57.** ಎಲೈ ನನ್ನ ಭಕ್ತದಾಸರೇ, ದಿಟವಾಗಿಯೂ ನನ್ನ ಭೂಮಿ ವಿಶಾಲವಾಗಿದೆ. ಆದ್ದರಿಂದ ನನ್ನನ್ನು ಮಾತ್ರ ಆರಾಧಿಸಿರಿ.

يٰعِبَادِيَ الَّذِينَ آمَنُوا إِنَّ أَرْضِي وَاسِعَةٌ فَإِيَّايَ فَاعْبُدُونِ ۝٥٧

**58.** ಪ್ರತಿಯೊಂದು ಜೀವಿ ಮರಣವನ್ನು ರುಚಿಸುವುದು. ಅನಂತರ ನಮ್ಮ ಬಳಿಗೆ ನೀವು ಮರಳಿಸಲ್ಪಡುವಿರಿ.

كُلُّ نَفْسٍ ذَائِقَةُ الْمَوْتِ ثُمَّ إِلَيْنَا تُرْجَعُونَ ۝٥٨

**59.** ವಿಶ್ವಾಸಹೊಂದಿ ಸತ್ಕರ್ಮ ನಿರತರಾದವರಿಗೆ ನಾವು ಸ್ವರ್ಗದಲ್ಲಿ ಉನ್ನತವಾದ ಮಹಡಿಗಳ ಮೇಲೆ ವಾಸ್ತವ್ಯವನ್ನು ನೀಡುವೆವು. ಅವುಗಳ ಕೆಳಭಾಗದಲ್ಲಿ ಸರಿತ್ತುಗಳು ಹರಿಯುವುವು. ಅವರು ಅಲ್ಲೇ ನಿತ್ಯ ವಾಸಿಸುವರು. ಸತ್ಕರ್ಮ ಮಾಡುವವರಿಗೆ ವಿಶಿಷ್ಟವಾದ ಪ್ರತಿಫಲ!

وَالَّذِينَ آمَنُوا وَعَمِلُوا الصّٰلِحٰتِ لَنُبَوِّئَنَّهُمْ مِنَ الْجَنَّةِ غُرَفًا تَجْرِي مِنْ تَحْتِهَا الْأَنْهٰرُ خٰلِدِينَ فِيهَا ۚ نِعْمَ أَجْرُ الْعٰمِلِينَ ۝٥٩

**60.** ಅವರು ತಾಳ್ಮೆ ವಹಿಸುವವರೂ ತಮ್ಮ ಪ್ರಭುವಿನ ಮೇಲೆ ಭರವಸೆ ಇಟ್ಟಿರುವವರೂ ಆಗಿದ್ದಾರೆ.

الَّذِينَ صَبَرُوا وَعَلٰى رَبِّهِمْ يَتَوَكَّلُونَ ۝٦٠

**61.** ತಮ್ಮ ಆಹಾರವನ್ನು ಹೊತ್ತು ನಡೆಯದ ಎಷ್ಟೆಲ್ಲ ಜೀವಿಗಳಿವೆ! ಅಲ್ಲಾಹನು ಅವುಗಳಿಗೂ ನಿನಗೂ ಆಹಾರವನ್ನು ದಯಪಾಲಿಸುತ್ತಾನೆ. ಅವನು ಎಲ್ಲ ಆಲಿಸುವವನೂ ಸರ್ವಜ್ಞನೂ ಆಗಿದ್ದಾನೆ.

وَكَأَيِّنْ مِنْ دَابَّةٍ لَا تَحْمِلُ رِزْقَهَا ۖ اللّٰهُ يَرْزُقُهَا وَإِيَّاكُمْ ۚ وَهُوَ السَّمِيعُ الْعَلِيمُ ۝٦١

**62.** 'ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನು ಮತ್ತು ಸೂರ್ಯನನ್ನೂ ಚಂದ್ರನನ್ನೂ ಸೇವೆಗೆ ಏರ್ಪಡಿಸಿದವನು ಯಾರು?' ಎಂದು ನೀನು ಅವರೊಡನೆ ಕೇಳಿದರೆ, 'ಅಲ್ಲಾಹ್' ಎಂದು ಅವರು ಉತ್ತರಿಸುವರು. ಹಾಗಿರುವಾಗ ಅವರು (ಸತ್ಯವನ್ನು ಬಿಟ್ಟು) ಎತ್ತ ತಿರುಗಿಸಲ್ಪಡುವರು?

وَلَئِنْ سَأَلْتَهُمْ مَنْ خَلَقَ السَّمٰوٰتِ وَالْأَرْضَ وَسَخَّرَ الشَّمْسَ وَالْقَمَرَ لَيَقُولُنَّ اللّٰهُ ۖ فَأَنّٰى يُؤْفَكُونَ ۝٦٢





**63.** ಅಲ್ಲಾಹನು ತನ್ನ ದಾಸರ ಪೈಕಿ ತಾನು ಇಚ್ಛಿಸುವವರಿಗೆ ಜೀವನ ಸಾಮಗ್ರಿಗಳನ್ನು ವಿಪುಲವಾಗಿ ನೀಡುತ್ತಾನೆ; (ಹಾಗೆಯೇ) ಕಡಿತವೂ ಮಾಡುತ್ತಾನೆ. ದಿಟವಾಗಿಯೂ ಅಲ್ಲಾಹನಿಗೆ ಎಲ್ಲ ಸಂಗತಿಗಳ ಬಗ್ಗೆ ಪೂರ್ಣ ಜ್ಞಾನವಿದೆ.

اللّٰهُ يَبْسُطُ الرِّزْقَ لِمَنْ يَشَاءُ مِنْ عِبَادِهِ وَيَقْدِرُ لَهُ ۚ إِنَّ اللّٰهَ بِكُلِّ شَيْءٍ عَلِيمٌ ۝٦٣

**64.** 'ಆಕಾಶದಿಂದ ಮಳೆಯನ್ನು ಸುರಿಸಿ ಭೂಮಿಗೆ ಅದರ ನಿರ್ಜೀವಾವಸ್ಥೆಯ ಬಳಿಕ ಪುನರ್ಜೀವವನ್ನು ನೀಡುವವನು ಯಾರು?' ಎಂದು ನೀನು ಅವರೊಡನೆ ಕೇಳಿದರೆ, 'ಅಲ್ಲಾಹ್' ಎಂದು ಅವರು ಉತ್ತರಿಸುವರು. ಹೇಳು: 'ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ.' ಆದರೆ ಅವರಲ್ಲಿ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

وَلَئِنْ سَأَلْتَهُمْ مَنْ نَزَّلَ مِنَ السَّمَاءِ مَاءً فَأَحْيَا بِهِ الْأَرْضَ مِنْ بَعْدِ مَوْتِهَا لَيَقُولُنَّ اللّٰهُ ۚ قُلِ الْحَمْدُ لِلّٰهِ ۚ بَلْ أَكْثَرُهُمْ لَا يَعْقِلُونَ ۝٦٤

**65.** ಈ ಲೋಕದ ಜೀವನ ಕೇವಲ ವಿನೋದ ಮತ್ತು ಕ್ರೀಡೆಯಾಗಿದೆ. ಪರಲೋಕದ ಗೃಹ - ನಿಜವಾದ ಜೀವನ ಅದೇ ಆಗಿದೆ. ಅದನ್ನು ಅವರು ತಿಳಿದಿರುತ್ತಿದ್ದರೆ (ಎಷ್ಟು ಚೆನ್ನಾಗಿತ್ತು)!

وَمَا هٰذِهِ الْحَيٰوةُ الدُّنْيَا إِلَّا لَهْوٌ وَلَعِبٌ ۚ وَإِنَّ الدَّارَ الْآخِرَةَ لَهِيَ الْحَيَوَانُ ۚ لَوْ كَانُوا يَعْلَمُونَ ۝٦٥

**66.** ಅವರು ಒಂದು ಹಡಗನ್ನು ಹತ್ತುವಾಗ ಪ್ರಾಮಾಣಿಕವಾಗಿಯೂ ಬಹು ನಿಷ್ಠೆಯಿಂದಲೂ ಅಲ್ಲಾಹನನ್ನು ಕರೆದು ಪ್ರಾರ್ಥಿಸುತ್ತಾರೆ. ಆದರೆ ಅವನು (ಅಲ್ಲಾಹನು) ಅವರನ್ನು ಸುರಕ್ಷಿತವಾಗಿ ದಡ ಸೇರಿಸಿದರೆ, ಅಗೋ ಅವರು (ಅವನಿಗೆ) ಸಹಭಾಗಿಗಳನ್ನು ಕಲ್ಪಿಸುತ್ತಾರೆ.

فَإِذَا رَكِبُوا فِي الْفُلْكِ دَعَوُا اللّٰهَ مُخْلِصِينَ لَهُ الدِّينَ ۚ فَلَمَّا نَجّٰىهُمْ إِلَى الْبَرِّ إِذَا هُمْ يُشْرِكُونَ ۝٦٦

**67.** ಹಾಗೆ ನಾವು ಅವರಿಗೆ ಅನುಗ್ರಹಿಸಿದ್ದರ ಕುರಿತು ಅವರು ಕೃತಘ್ನತೆ ತೋರಿಸಿ (ಅಲ್ಪಕಾಲ) ಸುಖಾನುಭವ ಪಡೆಯುವರು. ಆದರೆ ಶೀಘ್ರವಾಗಿಯೇ ಅವರು (ಅದರ ಪರಿಣಾಮವನ್ನು) ತಿಳಿಯುವರು.

لِيَكْفُرُوا بِمَا آتَيْنٰهُمْ ۚ وَلِيَتَمَتَّعُوا ۚ فَسَوْفَ يَعْلَمُونَ ۝٦٧

**68.** ಅವರ ಸುತ್ತುಮುತ್ತಲಿಂದೆಲ್ಲ ಮನುಷ್ಯರು ಕಿತ್ತೆಸೆಯಲ್ಪಡುತ್ತಿರುವಾಗ, ಸುರಕ್ಷಿತವಾದೊಂದು ಪುಣ್ಯಕ್ಷೇತ್ರ (ಮಕ್ಕ) ವನ್ನು ನಾವು ಸ್ಥಾಪಿಸಿರುವುದು ಅವರು ಕಾಣುವುದಿ

أَوَلَمْ يَرَوْا أَنَّا جَعَلْنَا حَرَمًا آمِنًا وَيُتَخَطَّفُ النَّاسُ مِنْ حَوْلِهِمْ ۚ

ಲ್ಲವೇ? ಏನು, ಅವರು ಸುಳ್ಳನ್ನು ನಂಬಿ ಅಲ್ಲಾಹನ ಅನುಗ್ರಹವನ್ನು ಅಲ್ಲಗಳೆಯುವರೇ?

أَفَبِالْبَاطِلِ يُؤْمِنُونَ وَبِنِعْمَةِ اللَّهِ
يَكْفُرُونَ ٦٨

**69.** ಅಲ್ಲಾಹನ ಬಗ್ಗೆ ಸುಳ್ಳು ಸೃಷ್ಟನೆ ಮಾಡಿ ಹೇಳುವವನಿಗಿಂತ ಅಥವಾ ತನಗೆ ಲಭಿಸಿದ ಸತ್ಯವನ್ನು ಅಲ್ಲಗಳೆಯುವವನಿಗಿಂತ ದುಷ್ಟನು ಬೇರೆ ಯಾರು? ಅವಿಶ್ವಾಸಿಗಳಿಗೆ ನರಕದಲ್ಲಿ ಒಂದು ವಾಸಸ್ಥಳವಿಲ್ಲವೇ?

وَمَنْ أَظْلَمُ مِمَّنِ افْتَرَىٰ عَلَى اللَّهِ
كَذِبًا أَوْ كَذَّبَ بِالْحَقِّ لَمَّا جَاءَهُ ۚ
أَلَيْسَ فِي جَهَنَّمَ مَثْوًى لِلْكَافِرِينَ ٦٩

**70.** ನಮ್ಮ ಮಾರ್ಗದಲ್ಲಿ ಯಾರು ಅತ್ಯಂತ ಪ್ರಯತ್ನ ಪಡುತ್ತಾರೋ, ಖಂಡಿತವಾಗಿಯೂ ನಾವು ಅವರನ್ನು ನಮ್ಮ ಪಥದಲ್ಲಿ ನಡೆಸುವೆವು. ನಿಶ್ಚಯವಾಗಿಯೂ ಅಲ್ಲಾಹನು ಸತ್ಕರ್ಮಿಗಳ ಜೊತೆಯಲ್ಲಿರುತ್ತಾನೆ.

وَالَّذِينَ جَاهَدُوا فِينَا لَنَهْدِيَنَّهُمْ
سُبُلَنَا ۚ وَإِنَّ اللَّهَ لَمَعَ الْمُحْسِنِينَ ٧٠

سُوْرَةُ الرُّوْمِ مَكِّيَّةٌ وَّهِيَ مَعَ الْبَسْمَلَةِ اِحْدٰى وَّسِتُّوْنَ اٰيَةً وَّسِتَّةُ رُكُوْعَاتٍ

# 30. ಅರ್ರೂಂ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 61 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಅಲಿಫ್ ಲಾಂ ಮೀಂ.**[373]

الٓمّٓ ﴿٢﴾

**3. ರೋಮನರು ಪರಾಜಿತರಾದರು -**

غُلِبَتِ الرُّوْمُ ﴿٣﴾

**4. ಅತಿ ಸಮೀಪವಾದೊಂದು ದೇಶದಲ್ಲಿ. ಅವರು ತಮ್ಮ ಪರಾಭವದ ಬಳಿಕ ವಿಜಯಿಗಳಾಗುವರು -**

فِيْٓ اَدْنَى الْاَرْضِ وَهُمْ مِّنْۢ بَعْدِ غَلَبِهِمْ سَيَغْلِبُوْنَ ﴿٤﴾

**5. ಕೆಲವೇ ವರ್ಷಗಳಲ್ಲಿ. ಮೊದಲು ಮತ್ತು ಅನಂತರ ಅಲ್ಲಾಹನದೇ ಅಧಿಕಾರವಾಗಿದೆ. ಆ ದಿನ ದಂದು ಸತ್ಯ ವಿಶ್ವಾಸಿಗಳು ಹರ್ಷಪುಳಕಿತರಾಗುವರು -**

فِيْ بِضْعِ سِنِيْنَ ۬ؕ لِلّٰهِ الْاَمْرُ مِنْ قَبْلُ وَمِنْۢ بَعْدُ ؕ وَيَوْمَئِذٍ يَّفْرَحُ الْمُؤْمِنُوْنَ ﴿٥﴾

**6. ಅಲ್ಲಾಹನ ಸಹಾಯದಿಂದ. ಅವನು ತಾನಿಚ್ಛಿಸುವವರಿಗೆ ಸಹಾಯಮಾಡುತ್ತಾನೆ. ಅವನು ಪ್ರತಾಪಶಾಲಿಯೂ ಕಾರುಣ್ಯವಂತನೂ ಆಗಿದ್ದಾನೆ.**

بِنَصْرِ اللّٰهِ ؕ يَنْصُرُ مَنْ يَّشَآءُ ؕ وَهُوَ الْعَزِيْزُ الرَّحِيْمُ ﴿٦﴾

**7.** (ಇದು) **ಅಲ್ಲಾಹನ ವಾಗ್ದಾನವಾಗಿದೆ. ಅಲ್ಲಾಹನು ತನ್ನ ವಾಗ್ದಾನವನ್ನು ಮುರಿಯಲಾರನು. ಆದರೆ ಜನ ರಲ್ಲಿ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.**

وَعْدَ اللّٰهِ ؕ لَا يُخْلِفُ اللّٰهُ وَعْدَهٗ وَلٰكِنَّ اَكْثَرَ النَّاسِ لَا يَعْلَمُوْنَ ﴿٧﴾

**8. ಅವರು ಇಹಲೋಕ ಜೀವನದ ಬಾಹ್ಯರೂಪ ವನ್ನು** (ಮಾತ್ರ) **ಬಲ್ಲರು. ಆದರೆ ಪಾರತ್ರಿಕ ಜೀವನದ ಬಗ್ಗೆ ಅವರು ಸಂಪೂರ್ಣ ನಿರ್ಲಕ್ಷ್ಯರು.**

يَعْلَمُوْنَ ظَاهِرًا مِّنَ الْحَيٰوةِ الدُّنْيَا ۖۚ وَهُمْ عَنِ الْاٰخِرَةِ هُمْ غٰفِلُوْنَ ﴿٨﴾

373. ನಾನು ಅಲ್ಲಾಹ್ ಎಲ್ಲ ಬಲ್ಲವನಾಗಿದ್ದೇನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ)





**9. ಅವರು ತಮ್ಮ ಮನಸ್ಸಿನಲ್ಲೇ ಆಲೋಚಿಸು ವುದಿಲ್ಲವೇನು? ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ಯಥೋಚಿತವಾಗಿಯೂ ಒಂದು ನಿಶ್ಚಿತ ಅವಧಿ ಗೋಸ್ಕರವೂ ಹೊರತು ಸೃಷ್ಟಿಸಲಿಲ್ಲ. ಆದರೆ ಜನರಲ್ಲಿ ಹೆಚ್ಚಿನವರು ತಮ್ಮ ಪ್ರಭುವನ್ನು ಭೇಟಿಯಾಗುವ ವಿಚಾರವನ್ನು ನಂಬುವುದಿಲ್ಲ.**

اَوَلَمْ يَتَفَكَّرُوْا فِيْٓ اَنْفُسِهِمْ ۣ مَا خَلَقَ اللّٰهُ السَّمٰوٰتِ وَالْاَرْضَ وَمَا بَيْنَهُمَآ اِلَّا بِالْحَقِّ وَاَجَلٍ مُّسَمًّى ؕ وَاِنَّ كَثِيْرًا مِّنَ النَّاسِ بِلِقَآئِ رَبِّهِمْ لَكٰفِرُوْنَ ﴿٩﴾

**10. ಇವರು ಭೂಮಿಯಲ್ಲಿ ಸಂಚರಿಸಲಿಲ್ಲವೇ? ಆಗ ಪೂರ್ವಿಕರ ಅಂತ್ಯ ಹೇಗಾಯಿತೆಂದು ಇವರಿಗೆ ಕಾಣಬಹು ದಾಗಿತ್ತು. ಅವರು ಇವರಿಗಿಂತ ಬಲಿಷ್ಠರಾಗಿದ್ದರು. ಅವರು ಭೂಮಿಯನ್ನು ಚೆನ್ನಾಗಿ ಹದಗೊಳಿಸಿದ್ದರು** (ಚೆನ್ನಾಗಿ ಕೃಷಿ ಮಾಡಿದ್ದರು). **ಇವರು** (ಭೂಮಿಯನ್ನು) **ಜನಭರಿತರನ್ನಾಗಿ ಮಾಡಿದುದಕ್ಕಿಂತ ಹೆಚ್ಚಾಗಿ ಅವರು ಅದನ್ನು ಜನಭರಿತರ ನ್ನಾಗಿ ಮಾಡಿದ್ದರು. ಅವರ ಪ್ರವಾದಿಗಳು ಅವರ ಬಳಿಗೆ ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಬಂದಿದ್ದರು. ಅಲ್ಲಾಹನು ಅವರಿಗೆ ಅನ್ಯಾಯವನ್ನೇನೂ ಎಸಗಲಿಲ್ಲ. ಆದರೆ ಅವರೇ ತಮಗೆ ಅನ್ಯಾಯವೆಸಗಿದರು.**

اَوَلَمْ يَسِيْرُوْا فِي الْاَرْضِ فَيَنْظُرُوْا كَيْفَ كَانَ عَاقِبَةُ الَّذِيْنَ مِنْ قَبْلِهِمْ ؕ كَانُوْٓا اَشَدَّ مِنْهُمْ قُوَّةً وَّاَثَارُوا الْاَرْضَ وَعَمَرُوْهَآ اَكْثَرَ مِمَّا عَمَرُوْهَا وَجَآءَتْهُمْ رُسُلُهُمْ بِالْبَيِّنٰتِ ؕ فَمَا كَانَ اللّٰهُ لِيَظْلِمَهُمْ وَلٰكِنْ كَانُوْٓا اَنْفُسَهُمْ يَظْلِمُوْنَ ﴿١٠﴾

**11. ಆಮೇಲೆ, ತಪ್ಪೆಸಗಿದವರ ಅಂತ್ಯ ಬಹಳ ಕೆಟ್ಟ ದ್ದಾಯಿತು. ಏಕೆಂದರೆ ಅವರು ಅಲ್ಲಾಹನ ದೃಷ್ಟಾಂತ ಗಳನ್ನು ಸುಳ್ಳಾಗಿಸಿದ್ದರು ಮತ್ತು ಅವುಗಳನ್ನು ಪರಿಹಾಸ್ಯಕ್ಕೆ ಗುರಿಪಡಿಸಿದ್ದರು.**

ثُمَّ كَانَ عَاقِبَةَ الَّذِيْنَ اَسَآءُوا السُّوْٓآٰى اَنْ كَذَّبُوْا بِاٰيٰتِ اللّٰهِ وَكَانُوْا بِهَا يَسْتَهْزِءُوْنَ ﴿١١﴾

**12. ಅಲ್ಲಾಹನು ಸೃಷ್ಟಿಕಾರ್ಯವನ್ನು ಆರಂಭಿಸಿ ಅನಂತರ ಅದನ್ನು ಪುನರಾವರ್ತಿಸುತ್ತಾನೆ. ಆ ಮೇಲೆ ಅವನ ಬಳಿಗೆಯೇ ನೀವು ಮರಳಿಸಲ್ಪಡುವಿರಿ.**

اَللّٰهُ يَبْدَؤُا الْخَلْقَ ثُمَّ يُعِيْدُهٗ ثُمَّ اِلَيْهِ تُرْجَعُوْنَ ﴿١٢﴾

**13. ನಿಶ್ಚಿತ ವೇಳೆಯ ಆ ದಿನದಂದು ಪಾಪಿಗಳು ನಿರಾಶೆ ಹೊಂದುವರು.**

وَيَوْمَ تَقُوْمُ السَّاعَةُ يُبْلِسُ الْمُجْرِمُوْنَ ﴿١٣﴾

**14. ಅವರ** (ಕಲ್ಪಿತ) ದೇವ **ಸಹಭಾಗಿಗಳ ಪೈಕಿ ಅವರಿಗೆ ಶಿಫಾರಸುಗಾರರು ಯಾರೂ ಇರಲಾರರು. ಅವರಾದರೋ** (ಅಂತಹ) **ಸಹಭಾಗಿಗಳನ್ನು ತಿರಸ್ಕರಿಸುವರು.**

وَلَمْ يَكُنْ لَّهُمْ مِّنْ شُرَكَآئِهِمْ شُفَعٰٓؤُا وَكَانُوْا بِشُرَكَآئِهِمْ كٰفِرِيْنَ ﴿١٤﴾

**15.** ನಿಶ್ಚಿತ ವೇಳೆ ಸನ್ನಿಹಿತವಾಗುವ ಆ ದಿನ - ಅಂದು ಅವರು (ಪರಸ್ಪರ) ಬೇರ್ಪಡುವರು.

وَيَوْمَ تَقُوْمُ السَّاعَةُ يَوْمَئِذٍ يَّتَفَرَّقُوْنَ ﴿١٥﴾

**16.** ಆದರೆ ವಿಶ್ವಾಸಹೊಂದಿ ಸತ್ಕರ್ಮ ಮಾಡಿದವರು ಶ್ರೇಷ್ಠವಾದೊಂದು ಉದ್ಯಾನದಲ್ಲಿ ಸಂತೋಷವನ್ನು ಪಡೆಯುವರು.

فَاَمَّا الَّذِيْنَ اٰمَنُوْا وَعَمِلُوا الصّٰلِحٰتِ فَهُمْ فِيْ رَوْضَةٍ يُّحْبَرُوْنَ ﴿١٦﴾

**17.** ಅವಿಶ್ವಾಸಿಯಾಗಿದ್ದು ನಮ್ಮ ದೃಷ್ಟಾಂತಗಳನ್ನೂ ಪರಲೋಕದ ಭೇಟಿಯನ್ನೂ ನಿರಾಕರಿಸುವವರು ಶಿಕ್ಷೆಗೆ ಗುರಿಯಾಗುವರು.

وَاَمَّا الَّذِيْنَ كَفَرُوْا وَكَذَّبُوْا بِاٰيٰتِنَا وَلِقَآئِ الْاٰخِرَةِ فَاُولٰٓئِكَ فِى الْعَذَابِ مُحْضَرُوْنَ ﴿١٧﴾

**18.** ನೀವು ಸಂಧ್ಯಾಕಾಲವನ್ನು ಪ್ರವೇಶಿಸುವಾಗಲೂ ನೀವು ಪ್ರಭಾತದಲ್ಲಿದ್ದರೂ ಅಲ್ಲಾಹನ ಪರಿಶುದ್ಧತೆಯ ಗುಣಗಾನ ಮಾಡಿರಿ.

فَسُبْحٰنَ اللّٰهِ حِيْنَ تُمْسُوْنَ وَحِيْنَ تُصْبِحُوْنَ ﴿١٨﴾

**19.** ಆಕಾಶಗಳಲ್ಲೂ ಭೂಮಿಯಲ್ಲೂ ಸಕಲ ಸ್ತುತಿ ಸ್ತೋತ್ರಗಳು ಅವನಿಗೆ ಸಲ್ಲುತ್ತವೆ. ರಾತ್ರಿಯಲ್ಲಾದರೂ ನೀವು ಮಧ್ಯಾಹ್ನ ಹೊತ್ತಿನಲ್ಲಿದ್ದರೂ (ಸದಾಕಾಲವೂ ಅವನು ಪರಿಶುದ್ಧನೇ).

وَلَهُ الْحَمْدُ فِى السَّمٰوٰتِ وَالْاَرْضِ وَعَشِيًّا وَّحِيْنَ تُظْهِرُوْنَ ﴿١٩﴾

**20.** ಅವನು ನಿರ್ಜೀವಿಗಳಿಂದ ಜೀವಿಗಳನ್ನು ಹೊರಡಿಸುತ್ತಾನೆ. ಜೀವಿಗಳಿಂದ ನಿರ್ಜೀವಿಗಳನ್ನೂ ಹೊರಡಿಸುತ್ತಾನೆ. ಅವನು ಭೂಮಿಯನ್ನು ಅದರ ಮರಣದ ಬಳಿಕ ಜೀವಂತ ಗೊಳಿಸುತ್ತಾನೆ. ಅದೇ ಪ್ರಕಾರ ನಿಮ್ಮನ್ನು ಸಹ ಹೊರತರಲಾಗುವುದು.

يُخْرِجُ الْحَيَّ مِنَ الْمَيِّتِ وَيُخْرِجُ الْمَيِّتَ مِنَ الْحَيِّ وَيُحْيِ الْاَرْضَ بَعْدَ مَوْتِهَا ۚ وَكَذٰلِكَ تُخْرَجُوْنَ ﴿٢٠﴾

**21.** ನಿಮ್ಮನ್ನು ಅವನು ಮಣ್ಣಿನಿಂದ ಸೃಷ್ಟಿಸಿದನು. ಹಾಗೆ ನೀವು ಭೂಮಿಯಲ್ಲಿ ವ್ಯಾಪಿಸುವ ಮನುಷ್ಯರಾಗಿ ಬಿಟ್ಟಿದ್ದೀರಿ. ಇದು ಸಹ ಅವನ ದೃಷ್ಟಾಂತಗಳಲ್ಲಿ ಸೇರುತ್ತದೆ.

وَمِنْ اٰيٰتِهٖٓ اَنْ خَلَقَكُمْ مِّنْ تُرَابٍ ثُمَّ اِذَآ اَنْتُمْ بَشَرٌ تَنْتَشِرُوْنَ ﴿٢١﴾

**22.** ನೀವು ಮನಶ್ಶಾಂತಿ ಪಡೆಯಲಿಕ್ಕೋಸ್ಕರ ನಿಮ್ಮ ವರ್ಗದಿಂದಲೇ ಅವನು ನಿಮಗಾಗಿ ಬಾಳ ಸಂಗಾತಿಗಳನ್ನು ಸೃಷ್ಟಿಸಿದ್ದಾನೆ. ಇದು ಅವನ ದೃಷ್ಟಾಂತಗಳಲ್ಲೊಂದು. ನಿಮ್ಮ ಮಧ್ಯೆ ಅವನು ಪ್ರೀತಿಯನ್ನೂ ಕರುಣೆಯನ್ನೂ ಉಂಟು ಮಾಡಿದನು. ಚಿಂತನಶೀಲರಿಗೆ ಅದರಲ್ಲಿ ನಿಜವಾಗಿಯೂ ದೃಷ್ಟಾಂತಗಳಿವೆ.

وَمِنْ اٰيٰتِهٖٓ اَنْ خَلَقَ لَكُمْ مِّنْ اَنْفُسِكُمْ اَزْوَاجًا لِّتَسْكُنُوْٓا اِلَيْهَا وَجَعَلَ بَيْنَكُمْ مَّوَدَّةً وَّرَحْمَةً ۗ اِنَّ فِيْ ذٰلِكَ لَاٰيٰتٍ لِّقَوْمٍ يَّتَفَكَّرُوْنَ ﴿٢١﴾





**23.** ಆಕಾಶಗಳ ಮತ್ತು ಭೂಮಿಯ ಸೃಷ್ಟಿ ಹಾಗೂ ನಿಮ್ಮ ಭಾಷೆ ಮತ್ತು ವರ್ಣಗಳ ವೈವಿಧ್ಯ - ಇದು ಸಹ ಅವನ ದೃಷ್ಟಾಂತಗಳಲ್ಲಿ ಸೇರಿದೆ. ಜ್ಞಾನಿಗಳಿಗೆ ಅದರಲ್ಲಿ ನಿಜವಾಗಿಯೂ ದೃಷ್ಟಾಂತಗಳಿವೆ.

وَمِنْ اٰيٰتِهٖ خَلْقُ السَّمٰوٰتِ وَالْاَرْضِ وَاخْتِلَافُ اَلْسِنَتِكُمْ وَاَلْوَانِكُمْ ۗ اِنَّ فِيْ ذٰلِكَ لَاٰيٰتٍ لِّلْعٰلِمِيْنَ ﴿٢٢﴾

**24.** ರಾತ್ರಿಯಲ್ಲಿ ಮತ್ತು ಹಗಲಿನಲ್ಲಿ ನಿಮ್ಮ ನಿದ್ರೆ ಮತ್ತು ಅವನ ಅನುಗ್ರಹದಿಂದ ನೀವು ಹುಡುಕುವುದು - ಇದು ಸಹ ಅವನ ದೃಷ್ಟಾಂತಗಳಲ್ಲೊಂದು. (ಗಮನ ಕೊಟ್ಟು) ಆಲಿಸುವವರಿಗೆ ಅದರಲ್ಲಿ ನಿಜವಾಗಿಯೂ ದೃಷ್ಟಾಂತಗಳಿವೆ.

وَمِنْ اٰيٰتِهٖ مَنَامُكُمْ بِالَّيْلِ وَالنَّهَارِ وَابْتِغَآؤُكُمْ مِّنْ فَضْلِهٖ ۗ اِنَّ فِيْ ذٰلِكَ لَاٰيٰتٍ لِّقَوْمٍ يَّسْمَعُوْنَ ﴿٢٣﴾

**25.** ಅವನ ಇನ್ನೊಂದು ದೃಷ್ಟಾಂತ - ನಿಮಗೆ ಭಯ ಮತ್ತು ಭರವಸೆ ಹುಟ್ಟಿಸುವಂತೆ ಅವನು ಮಿಂಚನ್ನು ತೋರಿಸುತ್ತಾನೆ. ಅವನು ಆಕಾಶದಿಂದ ಮಳೆಯನ್ನು ಸುರಿಸಿ, ಆ ಮೂಲಕ ಭೂಮಿಯನ್ನು ಅದರ ಮರಣದ ಬಳಿಕ ಜೀವಂತಗೊಳಿಸುತ್ತಾನೆ. ಮನವರಿಕೆ ಮಾಡುವ ಜನರಿಗೆ ಅದರಲ್ಲಿ ನಿಜವಾಗಿಯೂ ದೃಷ್ಟಾಂತಗಳಿವೆ.

وَمِنْ اٰيٰتِهٖ يُرِيْكُمُ الْبَرْقَ خَوْفًا وَّطَمَعًا وَّيُنَزِّلُ مِنَ السَّمَآءِ مَآءً فَيُحْيٖ بِهِ الْاَرْضَ بَعْدَ مَوْتِهَا ۗ اِنَّ فِيْ ذٰلِكَ لَاٰيٰتٍ لِّقَوْمٍ يَّعْقِلُوْنَ ﴿٢٤﴾

**26.** ಅವನ ಮತ್ತೊಂದು ದೃಷ್ಟಾಂತ - ಆಕಾಶವೂ ಭೂಮಿಯೂ ಅವನ ಆಜ್ಞಾನುಸಾರ ನೆಲೆಗೊಂಡಿರುವುದಾಗಿದೆ. ಆ ಮೇಲೆ ಭೂಮಿಯಿಂದ ನಿಮಗೊಂದು ಕರೆ ನೀಡಿದರೆ ಕೂಡಲೇ ನೀವು ಹೊರಗೆ ಬರುವಿರಿ.

وَمِنْ اٰيٰتِهٖٓ اَنْ تَقُوْمَ السَّمَآءُ وَالْاَرْضُ بِاَمْرِهٖ ۗ ثُمَّ اِذَا دَعَاكُمْ دَعْوَةً ۖۗ مِّنَ الْاَرْضِ ۖ اِذَآ اَنْتُمْ تَخْرُجُوْنَ ﴿٢٥﴾

**27.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನಿಗೆ ಸೇರಿವೆ. ಸಕಲವೂ ಅವನಿಗೆ ವಿಧೇಯವಾಗಿವೆ.

وَلَهٗ مَنْ فِى السَّمٰوٰتِ وَالْاَرْضِ ۗ كُلٌّ لَّهٗ قٰنِتُوْنَ ﴿٢٦﴾

**28.** ಸೃಷ್ಟಿಯನ್ನು ಆರಂಭಿಸುವವನು ಅವನೇ. ಅನಂತರ ಅವನು ಅದನ್ನು ಪುನರಾವರ್ತನೆ ಮಾಡುತ್ತಾನೆ.

وَهُوَ الَّذِيْ يَبْدَؤُا الْخَلْقَ ثُمَّ

يُعِيدُهُۥ وَهُوَ أَهْوَنُ عَلَيْهِ ۚ وَلَهُ
الْمَثَلُ الْأَعْلَىٰ فِي السَّمَاوَاتِ وَالْأَرْضِ ۚ
وَهُوَ الْعَزِيزُ الْحَكِيمُ ﴿٢٨﴾

ಅದು ಅವನಿಗೆ ಸುಲಭವಾಗಿದೆ. ಅಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅವನಿಗೆ ಅತ್ಯುನ್ನತ ಸ್ಥಾನವಿದೆ. ಅವನು ಪ್ರತಾಪಶಾಲಿಯೂ ವಿವೇಕವಂತನೂ ಆಗಿದ್ದಾನೆ.

ضَرَبَ لَكُم مَّثَلًا مِّنْ أَنفُسِكُمْ ۖ
هَل لَّكُم مِّن مَّا مَلَكَتْ أَيْمَانُكُم
مِّن شُرَكَاءَ فِي مَا رَزَقْنَاكُمْ
فَأَنتُمْ فِيهِ سَوَاءٌ تَخَافُونَهُمْ
كَخِيفَتِكُمْ أَنفُسَكُمْ ۚ كَذَٰلِكَ نُفَصِّلُ
الْآيَاتِ لِقَوْمٍ يَعْقِلُونَ ﴿٢٩﴾

**29.** ನಿಮಗೋಸ್ಕರ ನಿಮಗೆಯೇ ಸಂಬಂಧಿಸಿದ ಒಂದು ಉಪಮೆಯನ್ನು ಅವನು (ಅಲ್ಲಾಹನು) ತೋರಿಸುತ್ತಾನೆ. ನಾವು ನಿಮಗೆ ನೀಡಿದ ಸಂಪತ್ತಿನಲ್ಲಿ ನಿಮ್ಮ ಅಧೀನದಲ್ಲಿರುವ (ಗುಲಾಮರಲ್ಲಿ) ಯಾರಾದರೂ ನಿಮಗೆ ಪಾಲುದಾರರಾಗಿದ್ದಾರೆಯೇ? ಹಾಗೆ ನೀವು ಅದರಲ್ಲಿ ಸಮಾನ (ಪಾಲುಗಾರ) ರಾಗಿದ್ದುಕೊಂಡು ನಿಮ್ಮ ಸ್ವಂತ ಜನರಿಗೆ (ಗುಲಾಮರಲ್ಲದವರಿಗೆ) ಭಯಪಡುವ ರೀತಿಯಲ್ಲಿ ಅವರಿಗೆ (ಗುಲಾಮರಿಗೆ) ನೀವು ಭಯಪಡುತ್ತೀರೋ? ಈ ಪ್ರಕಾರದಲ್ಲಿ ಚಿಂತನಶೀಲ ಜನರಿಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಡುತ್ತೇವೆ.[374]

بَلِ اتَّبَعَ الَّذِينَ ظَلَمُوا أَهْوَاءَهُم
بِغَيْرِ عِلْمٍ ۖ فَمَن يَهْدِي مَنْ أَضَلَّ
اللَّهُ ۖ وَمَا لَهُم مِّن نَّاصِرِينَ ﴿٣٠﴾

**30.** ಆದರೆ ಅಧರ್ಮಿಗಳು ತಿಳುವಳಿಕೆಯಿಲ್ಲದೆ ತಮ್ಮ ಸ್ವೇಚ್ಛೆಗಳನ್ನು ಹಿಂಬಾಲಿಸುತ್ತಾರೆ. ಹಾಗಿರುವಾಗ ಯಾರನ್ನು ಅಲ್ಲಾಹನು ಮಾರ್ಗಭ್ರಷ್ಟರೆಂದು ತೀರ್ಮಾನಿಸಿರುತ್ತಾನೋ, ಅವರಿಗೆ ಮಾರ್ಗದರ್ಶನ ನೀಡುವವರು ಯಾರು? ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

فَأَقِمْ وَجْهَكَ لِلدِّينِ حَنِيفًا ۚ فِطْرَتَ
اللَّهِ الَّتِي فَطَرَ النَّاسَ عَلَيْهَا ۚ لَا تَبْدِيلَ

**31.** ಆದ್ದರಿಂದ ನಿಷ್ಠೆಯಿಂದ ನಿನ್ನ ಗಮನವನ್ನೆಲ್ಲ ಧರ್ಮಸೇವೆಗಾಗಿ ಕೇಂದ್ರೀಕರಿಸು. ಇದು ಅಲ್ಲಾಹನಿಂದ ರೂಪೀಕೃತವಾದ ಪ್ರಕೃತಿಯಾಗಿದೆ. ಆ ಪ್ರಕೃತಿಯನುಸಾರ

374. ಇದು ಬಹುದೇವಾರಾಧನೆ (ಶಿರ್ಕ್)ಯನ್ನು ಖಂಡಿಸಿ ವಿವರಿಸುವ ಒಂದು ಉದಾಹರಣೆಯಾಗಿದೆ. ಬಹುದೇವಾರಾಧಕರು ಅಲ್ಲಾಹನನ್ನೂ ಅಲ್ಲಾಹನ ಗುಲಾಮರನ್ನೂ ಆರಾಧಿಸುತ್ತಾರೆ. ಅಲ್ಲಾಹನ ಸೃಷ್ಟಿಗಳ ಮೇಲೆ ಆ ಆರಾಧಿಸಲ್ಪಡುವವರಿಗೆ ಏನೂ ಅಧಿಕಾರವಿಲ್ಲ - ಒಡೆಯನ ಸಂಪತ್ತಿನಲ್ಲಿ ಗುಲಾಮರಿಗೆ ಯಾವ ಅಧಿಕಾರವಾಗಲಿ ಹಕ್ಕಾಗಲಿ ಇಲ್ಲದ ರೀತಿಯಲ್ಲಿ. ಅಂದರೆ ಅಲ್ಲಾಹನು ಕೇಳುತ್ತಾನೆ : 'ನಿಮ್ಮ ಸಂಪತ್ತಿನ ಮೇಲೆ ನಿಮ್ಮ ಗುಲಾಮರಲ್ಲಿ ಯಾರಿಗಾದರೂ ಯಾವ ಹಕ್ಕಾಗಲಿ ಅಧಿಕಾರವಾಗಲಿ ಇದೆಯೇ? ಹಾಗಿರುವಾಗ ನಿಮ್ಮ ಆರಾಧ್ಯರೂ ಮಹಾತ್ಮರುಗಳೂ ಆದ ನನ್ನ ಗುಲಾಮರಿಗೆ ನನ್ನ ಸೃಷ್ಟಿಗಳ ಮೇಲೆ ನಿಯಂತ್ರಣಾಧಿಕಾರ ಇದೆಯೆಂದು ನೀವು ತಿಳಿದುಕೊಳ್ಳುವುದು ಹೇಗೆ ಸರಿಯಾಗುವುದು?' ಇದೇ ಈ ವಚನದ ತಾತ್ಪರ್ಯವಾಗಿದೆ.





لِخَلْقِ اللَّهِ ۚ ذَٰلِكَ الدِّينُ الْقَيِّمُ ۙ
وَلَٰكِنَّ أَكْثَرَ النَّاسِ لَا يَعْلَمُونَ ﴿٣١﴾

ಅವನು ಮನುಷ್ಯರನ್ನು ಸೃಷ್ಟಿಸಿದ್ದಾನೆ. ಅಲ್ಲಾಹನ ಸೃಷ್ಟಿಕಾರ್ಯದಲ್ಲಿ ಏನೂ ಬದಲಾವಣೆ ಇಲ್ಲ. ಅದೇ ಸದಾ ನೆಲೆನಿಲ್ಲುವ ಸತ್ಯ ಧರ್ಮ. ಆದರೆ ಜನರಲ್ಲಿ ಹೆಚ್ಚಿನವರು ಅದನ್ನು ತಿಳಿಯುವುದಿಲ್ಲ.

مُنِيبِينَ إِلَيْهِ وَاتَّقُوهُ وَأَقِيمُوا
الصَّلَاةَ وَلَا تَكُونُوا مِنَ الْمُشْرِكِينَ ﴿٣٢﴾

**32.** ಅವನ ಕಡೆಗೆ ತಿರುಗಿರಿ. ಅವನ ಭಯಭಕ್ತಿಯುಳ್ಳವರಾಗಿರಿ. ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿರಿ. ನೀವು ಬಹುದೇವಾರಾಧಕರಲ್ಲಿ ಸೇರಿದವರಾಗಬೇಡಿರಿ -

مِنَ الَّذِينَ فَرَّقُوا دِينَهُمْ وَكَانُوا
شِيَعًا ۖ كُلُّ حِزْبٍ بِمَا لَدَيْهِمْ
فَرِحُونَ ﴿٣٣﴾

**33.** ತಮ್ಮ ಧರ್ಮವನ್ನು ಭಿನ್ನಭಿನ್ನ ಮಾಡಿ ವಿವಿಧ ಪಕ್ಷಗಳಾಗಿ ಬೇರ್ಪಟ್ಟವರಲ್ಲಿ. ಪ್ರತಿಯೊಂದು ಪಕ್ಷದವರು ತಾವು ಹೊಂದಿರುವುದರ ಬಗ್ಗೆ ಸಂತುಷ್ಟರಾಗಿದ್ದಾರೆ.

وَإِذَا مَسَّ النَّاسَ ضُرٌّ دَعَوْا رَبَّهُم
مُّنِيبِينَ إِلَيْهِ ثُمَّ إِذَا أَذَاقَهُم مِّنْهُ
رَحْمَةً إِذَا فَرِيقٌ مِّنْهُم بِرَبِّهِمْ
يُشْرِكُونَ ﴿٣٤﴾

**34.** ಜನರಿಗೆ ವಿಪತ್ತೇನಾದರೂ ಬಂದೆರಗಿದಾಗ ಅವರು ತಮ್ಮ ಪ್ರಭುವಿನ ಕಡೆಗೆ (ಪಶ್ಚಾತ್ತಾಪಪಟ್ಟು) ತಿರುಗಿ ಅವನನ್ನು ಕರೆದು ಪ್ರಾರ್ಥಿಸುತ್ತಾರೆ. ಅನಂತರ ಅವನು ತನ್ನ ಕೃಪೆಯ ರುಚಿಯನ್ನು ಅವರು ಸವಿಯುವಂತೆ ಮಾಡಿದಾಗ, ಅದೋ ಅವರ ಪೈಕಿ ಒಂದು ಪಂಗಡದವರು ತಮ್ಮ ಪ್ರಭುವಿಗೆ ಸಹಭಾಗಿಗಳನ್ನು ಕಲ್ಪಿಸುತ್ತಾರೆ.

لِيَكْفُرُوا بِمَا آتَيْنَاهُمْ ۚ فَتَمَتَّعُوا ۖ
فَسَوْفَ تَعْلَمُونَ ﴿٣٥﴾

**35.** ತತ್ಪರಿಣಾಮವಾಗಿ ನಾವು ಅವರಿಗೆ ನೀಡಿದ ಅನುಗ್ರಹಕ್ಕೆ ಅವರು ಕೃತಘ್ನತೆ ತೋರಿಸುತ್ತಾರೆ. 'ಆದ್ದರಿಂದ ನೀವು (ಸ್ವಲ್ಪಕಾಲ) ಸುಖವನ್ನು ಅನುಭವಿಸಿರಿ' (ಎಂದು ಅವರೊಡನೆ ಹೇಳಲಾಗುವುದು). **ಆದರೆ** (ನಿಮ್ಮ ಕೃತಘ್ನತೆಯ ಫಲವನ್ನು) **ನೀವು ಬೇಗನೆ ತಿಳಿಯುವಿರಿ.**

أَمْ أَنزَلْنَا عَلَيْهِمْ سُلْطَانًا فَهُوَ
يَتَكَلَّمُ بِمَا كَانُوا بِهِ يُشْرِكُونَ ﴿٣٦﴾

**36.** ಅಲ್ಲಾಹನಿಗೆ ಅವರು ಸಹಭಾಗಿ ಮಾಡುವುದಕ್ಕೆ ಸಂಬಂಧಿಸಿ (ಸಮರ್ಥಿಸಿ) ಮಾತನಾಡುವ ಏನಾದರೂ ಪುರಾವೆಯನ್ನು ನಾವು ಅವರಿಗೆ ಅವತೀರ್ಣಗೊಳಿಸಿದ್ದೇವೆಯೇ?

وَإِذَا أَذَقْنَا النَّاسَ رَحْمَةً فَرِحُوا بِهَا ۖ

**37.** ನಾವು ಕೃಪೆಯ ರುಚಿಯನ್ನು ಜನರು ಸವಿಯುವಂತೆ ಮಾಡಿದಾಗ ಅವರು ಸಂತೋಷ ಪಡುತ್ತಾರೆ. ಆದರೆ

وَإِن تُصِبْهُمْ سَيِّئَةٌ بِمَا قَدَّمَتْ أَيْدِيهِمْ إِذَا هُمْ يَقْنَطُونَ ﴿٣٦﴾

ಅವರ ಕೃತ್ಯಗಳ ಫಲವಾಗಿ ಅವರಿಗೆ ಆಪತ್ತೇನಾದರೂ ಬಂದೆರಗಿದರೆ, ಆಗೋ ಅವರು ನಿರಾಶೆಪಡುತ್ತಾರೆ.

أَوَلَمْ يَرَوْا أَنَّ اللَّهَ يَبْسُطُ الرِّزْقَ لِمَن يَشَاءُ وَيَقْدِرُ ۚ إِنَّ فِي ذَٰلِكَ لَآيَاتٍ لِّقَوْمٍ يُؤْمِنُونَ ﴿٣٧﴾

**38.** ಅವರು ಕಾಣುವುದಿಲ್ಲವೇ? ತಾನಿಚ್ಛಿಸುವವರಿಗೆ ಅಲ್ಲಾಹನು ಆಹಾರವನ್ನು ವೃದ್ಧಿಗೊಳಿಸಿ ಕೊಡುತ್ತಾನೆ ಹಾಗೂ (ತಾನಿಚ್ಛಿಸುವ ಇತರ ಕೆಲವರಿಗೆ ಅದನ್ನು) ಕಡಿತಗೊಳಿಸುತ್ತಾನೆ. ವಿಶ್ವಾಸಿಗಳಿಗೆ ಅದರಲ್ಲಿ ದಿಟವಾಗಿಯೂ ದೃಷ್ಟಾಂತಗಳಿವೆ.

فَآتِ ذَا الْقُرْبَىٰ حَقَّهُ وَالْمِسْكِينَ وَابْنَ السَّبِيلِ ۚ ذَٰلِكَ خَيْرٌ لِّلَّذِينَ يُرِيدُونَ وَجْهَ اللَّهِ ۖ وَأُولَٰئِكَ هُمُ الْمُفْلِحُونَ ﴿٣٨﴾

**39.** ಆದ್ದರಿಂದ, ನಿಕಟ ಬಂಧುಗಳಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಅವರವರ ಹಕ್ಕುಗಳನ್ನು ನೀಡಿರಿ. ಅಲ್ಲಾಹನ ಪ್ರೀತಿಯನ್ನು ಆಶಿಸುವವರಿಗೆ ಅದು ಉತ್ತಮವಾದುದಾಗಿದೆ. ಅವರೇ ವಿಜಯಶಾಲಿಗಳು.

وَمَا آتَيْتُم مِّن رِّبًا لِّيَرْبُوَ فِي أَمْوَالِ النَّاسِ فَلَا يَرْبُو عِندَ اللَّهِ ۖ وَمَا آتَيْتُم مِّن زَكَاةٍ تُرِيدُونَ وَجْهَ اللَّهِ فَأُولَٰئِكَ هُمُ الْمُضْعِفُونَ ﴿٣٩﴾

**40.** ಜನರ ಧನದಲ್ಲಿ ವೃದ್ಧಿಯುಂಟಾಗಲಿಕ್ಕೆ ನೀವು ಬಡ್ಡಿಯಾಗಿ ಕೊಡುವ ಧನವು, ಅದು ಅಲ್ಲಾಹನ ದೃಷ್ಟಿಯಲ್ಲಿ ವೃದ್ಧಿಗೊಳ್ಳುವುದಿಲ್ಲ. ಆದರೆ ಅಲ್ಲಾಹನ ಪ್ರೀತಿಯನ್ನು ಬಯಸಿ ನೀವು ನೀಡುವ ಝಕಾತ್ ಅದನ್ನು ವೃದ್ಧಿಗೊಳಿಸುತ್ತದೆ. ಅಂತಹ ಜನರೇ (ತಮ್ಮ ಧನವನ್ನು) ವೃದ್ಧಿಗೊಳಿಸುವವರು.

اللَّهُ الَّذِي خَلَقَكُمْ ثُمَّ رَزَقَكُمْ ثُمَّ يُمِيتُكُمْ ثُمَّ يُحْيِيكُمْ ۖ هَلْ مِن شُرَكَائِكُم مَّن يَفْعَلُ مِن ذَٰلِكُم مِّن شَيْءٍ ۚ سُبْحَانَهُ وَتَعَالَىٰ عَمَّا يُشْرِكُونَ ﴿٤٠﴾

**41.** ಅಲ್ಲಾಹನೇ ನಿಮ್ಮನ್ನು ಸೃಷ್ಟಿಸಿದನು. ಅನಂತರ ನಿಮಗೆ ಆಹಾರವನ್ನು ದಯಪಾಲಿಸಿದನು. ಆ ಮೇಲೆ ನಿಮ್ಮನ್ನು ಅವನು ಮೃತಪಡಿಸುವನು. ಆ ಬಳಿಕ ನಿಮ್ಮನ್ನು ಅವನು ಜೀವಂತಗೊಳಿಸುವನು. ಇವುಗಳ ಪೈಕಿ ಯಾವುದನ್ನಾದರೂ ಮಾಡುವ ನಿಮ್ಮ (ದೇವ) ಸಹಭಾಗಿಗಳಿದ್ದಾರೆಯೇ? ಅವರು (ಅವನಿಗೆ) ಸಹಭಾಗಿ ಮಾಡುವುದರಿಂದೆಲ್ಲ ಅವನು ಪರಿಶುದ್ಧನೂ ಉನ್ನತನೂ ಆಗಿದ್ದಾನೆ.

ظَهَرَ الْفَسَادُ فِي الْبَرِّ وَالْبَحْرِ بِمَا

**42.** ಮನುಷ್ಯರ ದುಷ್ಕೃತ್ಯಗಳ ಪರಿಣಾಮವಾಗಿ ನೆಲದಲ್ಲೂ ಜಲದಲ್ಲೂ ಗಲಭೆ ಗೊಂದಲ ಗೋಚರಿಸಿದೆ.





كَسَبَتْ أَيْدِي النَّاسِ لِيُذِيقَهُم بَعْضَ الَّذِي عَمِلُوا لَعَلَّهُمْ يَرْجِعُونَ ﴿٤١﴾

ಅವರು ತಮ್ಮ ದುಷ್ಕೃತ್ಯಗಳನ್ನು ತೊರೆಯಲಿಕ್ಕೋಸ್ಕರ, ಅವರ ಕೆಲವು ಕೃತ್ಯಗಳ ಫಲಗಳನ್ನು ಅವರು ಅನುಭವಿಸುವಂತೆ ಅವನು (ಅಲ್ಲಾಹನು) ಮಾಡುತ್ತಾನೆ.

قُلْ سِيرُوا فِي الْأَرْضِ فَانظُرُوا كَيْفَ كَانَ عَاقِبَةُ الَّذِينَ مِن قَبْلُ ۚ كَانَ أَكْثَرُهُم مُّشْرِكِينَ ﴿٤٢﴾

**43.** ಹೇಳು: 'ನೀವು ಭೂಮಿಯಲ್ಲೆಲ್ಲ ಸಂಚರಿಸಿ ನಿಮ್ಮ ಪೂರ್ವಿಕರ ಅಂತ್ಯ ಹೇಗಿತ್ತೆಂದು (ಎಷ್ಟು ಕೆಟ್ಟದ್ದಾಗಿತ್ತೆಂದು) ನೋಡಿರಿ! ಅವರಲ್ಲಿ ಹೆಚ್ಚಿನವರು ಬಹುದೇವಾರಾಧಕರಾಗಿದ್ದರು.'

فَأَقِمْ وَجْهَكَ لِلدِّينِ الْقَيِّمِ مِن قَبْلِ أَن يَأْتِيَ يَوْمٌ لَّا مَرَدَّ لَهُ مِنَ اللَّهِ ۖ يَوْمَئِذٍ يَصَّدَّعُونَ ﴿٤٣﴾

**44.** ಆದ್ದರಿಂದ ಯಾರಿಂದಲೂ ತಡೆಯಲಸಾಧ್ಯವಾದ ಒಂದು ದಿನ ಅಲ್ಲಾಹನಿಂದ ಬರುವುದಕ್ಕೆ ಮುಂಚಿತವಾಗಿ ನಿನ್ನ ಲಕ್ಷ್ಯವನ್ನು ಎಂದೆಂದಿಗೂ ನೆಲೆನಿಲ್ಲುವ ಸತ್ಯಧರ್ಮದ ಕಡೆಗೆ ತಿರುಗಿಸು. ಆ ದಿನದಂದು ಅವರು (ಪರಸ್ಪರ) ಬೇರ್ಪಡುವರು.

مَن كَفَرَ فَعَلَيْهِ كُفْرُهُ ۖ وَمَنْ عَمِلَ صَالِحًا فَلِأَنفُسِهِمْ يَمْهَدُونَ ﴿٤٤﴾

**45.** ಅವಿಶ್ವಾಸಿ ತನ್ನ ಅವಿಶ್ವಾಸದ ದೋಷ ಫಲವನ್ನು ಅನುಭವಿಸುವನು. ಯಾರಾದರೂ ಸತ್ಕರ್ಮವೆಸಗುವರಾದರೆ, ತಮ್ಮ ಆತ್ಮಕ್ಕೋಸ್ಕರವೇ ಅವರು (ಒಳಿತನ್ನು) ಸಿದ್ಧಪಡಿಸಿಡುತ್ತಾರೆ.

لِيَجْزِيَ الَّذِينَ آمَنُوا وَعَمِلُوا الصَّالِحَاتِ مِن فَضْلِهِ ۚ إِنَّهُ لَا يُحِبُّ الْكَافِرِينَ ﴿٤٥﴾

**46.** ಇದು ವಿಶ್ವಾಸಿಗಳಿಗೂ ಸತ್ಕರ್ಮ ನಿರತರಿಗೂ ಅವನು (ಅಲ್ಲಾಹನು) ತನ್ನ ಅನುಗ್ರಹದಿಂದ ಪ್ರತಿಫಲವನ್ನು ನೀಡಲಿಕ್ಕಾಗಿದೆ. ಅವಿಶ್ವಾಸಿಗಳನ್ನು ಅವನು ಪ್ರೀತಿಸುವುದೇ ಇಲ್ಲ.

وَمِنْ آيَاتِهِ أَن يُرْسِلَ الرِّيَاحَ مُبَشِّرَاتٍ وَلِيُذِيقَكُم مِّن رَّحْمَتِهِ وَلِتَجْرِيَ الْفُلْكُ بِأَمْرِهِ وَلِتَبْتَغُوا مِن فَضْلِهِ وَلَعَلَّكُمْ تَشْكُرُونَ ﴿٤٦﴾

**47.** (ಮಳೆಯ ಬಗ್ಗೆ) ಶುಭಸೂಚನೆಯನ್ನು ಅರುಹುತ್ತಾ ಅವನು ಮಾರುತಗಳನ್ನು ಕಳುಹಿಸುವುದು ಅವನ ದೃಷ್ಟಾಂತಗಳಲ್ಲಿ ಸೇರುತ್ತದೆ. ಅವನ ಕೃಪೆಯನ್ನು ನೀವು ರುಚಿಸುವಂತಾಗಲಿಕ್ಕೂ ಅವನ ಆಜ್ಞಾನುಸಾರ ಹಡಗುಗಳು ಸಂಚರಿಸುವಂತಾಗಲಿಕ್ಕೂ ಅವನ ಅನುಗ್ರಹಗಳನ್ನು ನೀವು ಅರಸುವಂತಾಗಲಿಕ್ಕೂ ಹಾಗೂ ನೀವು ಅವನಿಗೆ ಕೃತಜ್ಞತೆ ತೋರಿಸಲಿಕ್ಕಾಗಿಯೂ (ಅವನು ಹಾಗೆ ಮಾಡುತ್ತಾನೆ).

**48.** ನಿಜವಾಗಿಯೂ ನಾವು ನಿನಗಿಂತ ಮುಂಚೆ ಅನೇಕ ಸಂದೇಶವಾಹಕರನ್ನು ಅವರ ಜನರ ಬಳಿಗೆ ಕಳುಹಿಸಿದ್ದೇವೆ. ಹಾಗೆ ಅವರು ಸುಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಅವರ ಬಳಿಗೆ ಬಂದರು. ಅನಂತರ ನಾವು ತಪ್ಪಿತಸ್ಥರನ್ನು ಶಿಕ್ಷಿಸಿದೆವು. ವಿಶ್ವಾಸಿಗಳಿಗೆ ನೆರವೀಯುವುದು ನಮ್ಮ ಹೊಣೆಗಾರಿಕೆಯಾಗಿತ್ತು.

وَلَقَدْ أَرْسَلْنَا مِن قَبْلِكَ رُسُلًا إِلَىٰ قَوْمِهِمْ فَجَاءُوهُم بِالْبَيِّنَاتِ فَانتَقَمْنَا مِنَ الَّذِينَ أَجْرَمُوا ۖ وَكَانَ حَقًّا عَلَيْنَا نَصْرُ الْمُؤْمِنِينَ ﴿٤٧﴾

**49.** ಮಾರುತಗಳು ಬೀಸುವಂತೆ ಮಾಡಿ ಅವುಗಳ ಮೂಲಕ ಮೋಡ ಮೇಲಕ್ಕೆತ್ತಲ್ಪಡುವಂತೆ ಮಾಡುವವನು ಅಲ್ಲಾಹನೇ ಆಗಿದ್ದಾನೆ. ಅನಂತರ ಅವನು ತನ್ನ ಇಚ್ಛಾನುಸಾರ ಅದನ್ನು ಆಕಾಶದಲ್ಲಿ ಹರಡಿಸುತ್ತಾನೆ ಮತ್ತು ಪದರಗಳ ಮೇಲೆ ಪದರಗಳನ್ನಾಗಿ ಇರಿಸುತ್ತಾನೆ. ಆಗ ಅವುಗಳ ಮಧ್ಯದಿಂದ ಮಳೆ ಸುರಿಯುವುದನ್ನು ನೀನು ಕಾಣುವೆ. ಹಾಗೆ ಅವನು ತಾನಿಚ್ಛಿಸುವ ತನ್ನ ದಾಸರ ಮೇಲೆ ಅದನ್ನು ಸುರಿಸುವಾಗ ಅವರು ಅದೋ ಹರ್ಷಭರಿತರಾಗುತ್ತಾರೆ.

اللَّهُ الَّذِي يُرْسِلُ الرِّيَاحَ فَتُثِيرُ سَحَابًا فَيَبْسُطُهُ فِي السَّمَاءِ كَيْفَ يَشَاءُ وَيَجْعَلُهُ كِسَفًا فَتَرَى الْوَدْقَ يَخْرُجُ مِنْ خِلَالِهِ ۖ فَإِذَا أَصَابَ بِهِ مَن يَشَاءُ مِنْ عِبَادِهِ إِذَا هُمْ يَسْتَبْشِرُونَ ﴿٤٨﴾

**50.** ಅದಕ್ಕಿಂತ ಮುಂಚೆ - ಅದನ್ನು ಅವರಿಗೆ ಸುರಿಸಿ ಕೊಡುವುದಕ್ಕೆ ಮುಂಚೆ - ಅವರು ನಿರಾಶೆ ಹೊಂದಿದ್ದರೂ ಕೂಡ.

وَإِن كَانُوا مِن قَبْلِ أَن يُنَزَّلَ عَلَيْهِم مِّن قَبْلِهِ لَمُبْلِسِينَ ﴿٤٩﴾

**51.** ಆದ್ದರಿಂದ ಅಲ್ಲಾಹನ ಕರುಣೆಯ ಗುರುತುಗಳನ್ನು ನೋಡು - ಭೂಮಿಯನ್ನು ಅದರ ಮರಣದ ಬಳಿಕ ಅವನು ಹೇಗೆ ಜೀವಂತಗೊಳಿಸುತ್ತಾನೆ? ದಿಟವಾಗಿಯೂ ಅವನೇ ಮೃತರನ್ನು ಜೀವಂತಗೊಳಿಸುವವನು. ಎಲ್ಲವುಗಳ ಮೇಲೆ ಅವನಿಗೆ ಸರ್ವಾಧಿಕಾರವಿದೆ.

فَانظُرْ إِلَىٰ آثَارِ رَحْمَتِ اللَّهِ كَيْفَ يُحْيِي الْأَرْضَ بَعْدَ مَوْتِهَا ۚ إِنَّ ذَٰلِكَ لَمُحْيِي الْمَوْتَىٰ ۖ وَهُوَ عَلَىٰ كُلِّ شَيْءٍ قَدِيرٌ ﴿٥٠﴾

**52.** ನಾವು (ಬೇರೆ) ಒಂದು ಮಾರುತವನ್ನು ಕಳುಹಿಸಿದಾಗ, ಅದರ ಮೂಲಕ (ಅವರ ಕೃಷಿ ಒಣಗಿ) ಹಳದಿ ಬಣ್ಣಕ್ಕೆ ತಿರುಗಿದ್ದಾಗಿ ಅವರು ಕಂಡರೆ ಖಂಡಿತವಾಗಿಯೂ (ನಮ್ಮ ಅನುಗ್ರಹಗಳನ್ನು) ಅವರು ಅಲ್ಲಗಳೆಯುವರು.

وَلَئِنْ أَرْسَلْنَا رِيحًا فَرَأَوْهُ مُصْفَرًّا لَّظَلُّوا مِن بَعْدِهِ يَكْفُرُونَ ﴿٥١﴾





**53.** ನಿಶ್ಚಯವಾಗಿಯೂ ಮೃತರು ಆಲಿಸುವಂತೆ ನೀನು ಮಾಡಲಾರೆ. ಕಿವುಡರು ನಿನ್ನ ಕರೆಯನ್ನು ಆಲಿಸುವಂತೆ ಯೂ ನೀನು ಮಾಡಲಾರೆ - ಅವರು ಬೆನ್ನು ತಿರುಗಿಸಿ ಹೋಗುತ್ತಿರುವಾಗ.

فَإِنَّكَ لَا تُسْمِعُ الْمَوْتَىٰ وَلَا تُسْمِعُ الصُّمَّ الدُّعَاءَ إِذَا وَلَّوْا مُدْبِرِينَ ﴿٥٢﴾

**54.** ನೀನು ಕುರುಡರನ್ನು, ಅವರ ಮಾರ್ಗ ಭ್ರಂಶತೆಯಿಂದ ತಿರುಗಿಸಿ ಸತ್ಪಥದೆಡೆಗೆ ಕೊಂಡೊಯ್ಯಲಾರೆ. ನಮ್ಮ ದೃಷ್ಟಾಂತಗಳನ್ನು ನಂಬಿಕೊಂಡು ಆಜ್ಞಾನುಸರಣೆ ಮಾಡುವವರಿಗೆ ಮಾತ್ರ ನೀನು ಆಲಿಸುವಂತೆ ಮಾಡಬಲ್ಲೆ.

وَمَا أَنتَ بِهَادِ الْعُمْيِ عَن ضَلَالَتِهِمْ ۖ إِن تُسْمِعُ إِلَّا مَن يُؤْمِنُ بِآيَاتِنَا فَهُم مُّسْلِمُونَ ﴿٥٣﴾

**55.** ನಿಮ್ಮನ್ನು ನಿರ್ಬಲಾವಸ್ಥೆಯಲ್ಲಿ ಸೃಷ್ಟಿಸಿದವನು ಅಲ್ಲಾಹನೇ ಆಗಿದ್ದಾನೆ. ನಿರ್ಬಲಾವಸ್ಥೆಯ ಬಳಿಕ ಅವನು ಶಕ್ತಿಯನ್ನು ನೀಡಿದನು. ಅನಂತರ ಶಕ್ತಿಯ ಬಳಿಕ ಬಲಹೀನತೆಯನ್ನೂ ವೃದ್ಧಾಪ್ಯವನ್ನೂ ಕೊಟ್ಟನು. ತಾನಿಚ್ಛಿಸುವುದನ್ನು ಅವನು ಸೃಷ್ಟಿಸುತ್ತಾನೆ. ಅವನು ಸರ್ವಜ್ಞನೂ ಸರ್ವಶಕ್ತನೂ ಆಗಿದ್ದಾನೆ.

اللَّهُ الَّذِي خَلَقَكُم مِّن ضَعْفٍ ثُمَّ جَعَلَ مِن بَعْدِ ضَعْفٍ قُوَّةً ثُمَّ جَعَلَ مِن بَعْدِ قُوَّةٍ ضَعْفًا وَشَيْبَةً ۚ يَخْلُقُ مَا يَشَاءُ ۖ وَهُوَ الْعَلِيمُ الْقَدِيرُ ﴿٥٤﴾

**56.** ಅಂದು ಆ ನಿಶ್ಚಿತ ವೇಳೆ ಬಂದಾಗ, ತಾವು (ಭೂಮಿಯಲ್ಲಿ) ಅಲ್ಪ ಕಾಲವೇ ವಾಸಿಸಿದ್ದೆಂದು ಅಪರಾಧಿಗಳು ಆಣೆಹಾಕಿ ಹೇಳುವರು. ಈ ರೀತಿ ಅವರು (ಮೊದಲು ಸಹ ಸತ್ಪಥದಿಂದ) ದೂರ ಸರಿಯಲ್ಪಟ್ಟವರಾಗಿದ್ದರು.

وَيَوْمَ تَقُومُ السَّاعَةُ يُقْسِمُ الْمُجْرِمُونَ مَا لَبِثُوا غَيْرَ سَاعَةٍ ۚ كَذَٰلِكَ كَانُوا يُؤْفَكُونَ ﴿٥٥﴾

**57.** ಆದರೆ ಜ್ಞಾನ ಮತ್ತು ಸತ್ಯವಿಶ್ವಾಸ ದಯಪಾಲಿಸಲ್ಪಟ್ಟವರು ಹೇಳುವರು: 'ಅಲ್ಲಾಹನ ಗಣನೆಯಲ್ಲಿ ಪುನರುತ್ಥಾನಕ್ಕಾಗಿ ನಿಶ್ಚಯಿಸಲ್ಪಟ್ಟ ದಿನದ ವರೆಗೆ ನೀವು ಅಲ್ಲಿ ನೆಲೆಸಿದಿರಿ. ಇದು ನಿಜವಾದ ಪುನರುತ್ಥಾನ ದಿನವಾಗಿದೆ. ಆದರೆ ನೀವು ತಿಳುವಳಿಕೆ ಹೊಂದಿದವರಾಗಿಲ್ಲ.'

وَقَالَ الَّذِينَ أُوتُوا الْعِلْمَ وَالْإِيمَانَ لَقَدْ لَبِثْتُمْ فِي كِتَابِ اللَّهِ إِلَىٰ يَوْمِ الْبَعْثِ ۖ فَهَٰذَا يَوْمُ الْبَعْثِ وَلَٰكِنَّكُمْ كُنتُمْ لَا تَعْلَمُونَ ﴿٥٦﴾

**58.** ಆ ದಿನದಂದು ಅಪರಾಧಿಗಳಿಗೆ ತಮ್ಮ ನೆವನಗಳು ಪ್ರಯೋಜನಕ್ಕೆ ಬರಲಾರವು. (ದೇವ ಸನ್ನಿಧಿಯ) ಹೊಸ್ತಿಲನ್ನು ಸಮೀಪಿಸಲು ಕೂಡ ಅವರಿಗೆ ಸಂದರ್ಭ ಸಿಗಲಾರದು.

فَيَوْمَئِذٍ لَّا يَنفَعُ الَّذِينَ ظَلَمُوا مَعْذِرَتُهُمْ وَلَا هُمْ يُسْتَعْتَبُونَ ﴿٥٧﴾

**59.** ನಿಜವಾಗಿಯೂ ನಾವು ಈ ಖುರ್‌ಆನಿನಲ್ಲಿ ಮನುಷ್ಯರಿಗೋಸ್ಕರ ಎಲ್ಲ ವಿಧ ತತ್ವಗಳನ್ನೂ ವಿಶದಪಡಿಸಿದ್ದೇವೆ. ನೀನು ಅವರ ಬಳಿಗೆ ಯಾವುದಾದರೂ ದೃಷ್ಟಾಂತವನ್ನು ತಂದರೆ, 'ನೀವು ಸುಳ್ಳು ಹೇಳುವವರೇ ಆಗಿದ್ದೀರಿ' ಎಂದು ಅವಿಶ್ವಾಸಿಗಳು ಖಂಡಿತವಾಗಿಯೂ ಹೇಳುವರು.

وَلَقَدْ ضَرَبْنَا لِلنَّاسِ فِي هٰذَا الْقُرْاٰنِ مِنْ كُلِّ مَثَلٍ ۗ وَلَئِنْ جِئْتَهُمْ بِاٰيَةٍ لَّيَقُوْلَنَّ الَّذِيْنَ كَفَرُوْٓا اِنْ اَنْتُمْ اِلَّا مُبْطِلُوْنَ ﴿٥٩﴾

**60.** ಅಜ್ಞಾನಿಗಳಾದ ಜನರ ಹೃದಯಗಳಿಗೆ ಇದೇ ಪ್ರಕಾರ ಅಲ್ಲಾಹನು ಮುದ್ರೆ ಹಾಕುತ್ತಾನೆ.

كَذٰلِكَ يَطْبَعُ اللّٰهُ عَلٰى قُلُوْبِ الَّذِيْنَ لَا يَعْلَمُوْنَ ﴿٦٠﴾

**61.** ಆದುದರಿಂದ ನೀನು ತಾಳ್ಮೆ ವಹಿಸು. ಖಂಡಿತವಾಗಿಯೂ ಅಲ್ಲಾಹನ ವಾಗ್ದಾನ ಸತ್ಯವೇ ಆಗಿದೆ. ದೃಢ ನಂಬಿಕೆ ಇಲ್ಲದವರು ನಿನಗೆ ಚಾಂಚಲ್ಯವನ್ನುಂಟುಮಾಡದಿರಲಿ.

فَاصْبِرْ اِنَّ وَعْدَ اللّٰهِ حَقٌّ وَّلَا يَسْتَخِفَّنَّكَ الَّذِيْنَ لَا يُوْقِنُوْنَ ﴿٦١﴾ ع

سُورَةُ لُقْمٰنَ مَكِّيَّةٌ وَّهِيَ مَعَ الْبَسْمَلَةِ خَمْسٌ وَّثَلٰثُوْنَ اٰيَةً وَّاَرْبَعُ رُكُوْعَاتٍ

# 31. ಲುಖ್ಮಾನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 35 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2. ಅಲಿಫ್ ಲಾಂ ಮೀಂ.**[375]

الٓمّٓ (٢)

**3. ಇವು ಜ್ಞಾನ ನಿಧಿಯಾದ ಗ್ರಂಥದ ವಚನಗಳಾಗಿವೆ -**

تِلْكَ اٰيٰتُ الْكِتٰبِ الْحَكِيْمِ (٣)

**4. ಸತ್ಕರ್ಮಿಗಳಿಗೆ ಮಾರ್ಗದರ್ಶನವೂ ಕರುಣೆಯೂ ಆಗಿವೆ.**

هُدًى وَّرَحْمَةً لِّلْمُحْسِنِيْنَ (٤)

**5. ಅವರು ನಮಾಝನ್ನು ನಿಷ್ಠೆಯಿಂದ ನಿರ್ವಹಿಸುವವರೂ ಝಕಾತ್ ನೀಡುವವರೂ ಪರಲೋಕ** (ಜೀವನ)**ದ**[376] **ಬಗ್ಗೆ ದೃಢ ವಿಶ್ವಾಸವುಳ್ಳವರೂ ಆಗಿದ್ದಾರೆ.**

الَّذِيْنَ يُقِيْمُوْنَ الصَّلٰوةَ وَيُؤْتُوْنَ الزَّكٰوةَ وَهُمْ بِالْاٰخِرَةِ هُمْ يُوْقِنُوْنَ (٥)

**6. ಅವರು ತಮ್ಮ ಪ್ರಭುವಿನ ಮಾರ್ಗದರ್ಶನವನ್ನು ಅನುಸರಿಸುವವರಾಗಿದ್ದಾರೆ. ಅವರೇ ವಿಜಯ ಹೊಂದುವವರು.**

اُولٰٓئِكَ عَلٰى هُدًى مِّنْ رَّبِّهِمْ وَاُولٰٓئِكَ هُمُ الْمُفْلِحُوْنَ (٦)

**7. ಏನೂ ಜ್ಞಾನವಿಲ್ಲದೆ ಅಲ್ಲಾಹನ ಮಾರ್ಗದಿಂದ** (ಜನರನ್ನು) **ದಾರಿತಪ್ಪಿಸಲಿಕ್ಕೂ ಅದನ್ನು** (ದೇವ ಮಾರ್ಗವನ್ನು) **ಅಪಹಾಸ್ಯಕ್ಕೀಡುಮಾಡಲಿಕ್ಕೂ ಬೇಕಾಗಿ ಕಟ್ಟುಕತೆಗಳನ್ನು ಕೊಂಡುಕೊಳ್ಳುವ ಕೆಲವರಿದ್ದಾರೆ. ಅವರಿಗೆ ಅಪಮಾನಕರವಾದ ಶಿಕ್ಷೆ ಇದೆ.**

وَمِنَ النَّاسِ مَنْ يَّشْتَرِيْ لَهْوَ الْحَدِيْثِ لِيُضِلَّ عَنْ سَبِيْلِ اللّٰهِ بِغَيْرِ عِلْمٍ ۖۗ وَّيَتَّخِذَهَا هُزُوًا ؕ اُولٰٓئِكَ لَهُمْ عَذَابٌ مُّهِيْنٌ (٧)

375. ನಾನು ಅಲ್ಲಾಹ್ ಎಲ್ಲ ಬಲ್ಲವನಾಗಿದ್ದೇನೆ. (2ನೇ ಅಧ್ಯಾಯ 2ನೇ ವಚನದ ಟಿಪ್ಪಣಿ ನೋಡಿರಿ.)

376. 2ನೇ ಅಧ್ಯಾಯ 5ನೇ ವಚನದ ಟಿಪ್ಪಣಿ ನೋಡಿರಿ.





**8. ಅವನ ಮುಂದೆ ನಮ್ಮ ವಚನಗಳನ್ನು ಪಠಿಸುವಾಗ ಅವನ ಎರಡು ಕಿವಿಗಳೂ ಕಿವುಡಾಗಿರುವಂತೆ, ಅವನು ಅದನ್ನು ಆಲಿಸಲಿಲ್ಲವೆಂಬ ರೀತಿಯಲ್ಲಿ ಅಹಂಭಾವದಿಂದ ಮುಖ ತಿರುಗಿಸುತ್ತಾನೆ. ಆದ್ದರಿಂದ ಅವನಿಗೆ ಯಾತನಾಮಯವಾದ ಶಿಕ್ಷೆಯ ಬಗ್ಗೆ ಮುನ್ನೆಚ್ಚರಿಕೆ ನೀಡು.**

وَاِذَا تُتْلٰى عَلَيْهِ اٰيٰتُنَا وَلّٰى مُسْتَكْبِرًا كَاَنْ لَّمْ يَسْمَعْهَا كَاَنَّ فِيْٓ اُذُنَيْهِ وَقْرًا ۚ فَبَشِّرْهُ بِعَذَابٍ اَلِيْمٍ (٨)

**9. ಯಾರು ವಿಶ್ವಾಸಿಗಳಾಗಿದ್ದು ಸತ್ಕರ್ಮ ನಿರತರಾಗುತ್ತಾರೋ ಅವರಿಗೆ ಖಂಡಿತವಾಗಿಯೂ ಸುಖಾನುಭವದ ಸ್ವರ್ಗೀಯ ತೋಟಗಳಿವೆ.**

اِنَّ الَّذِيْنَ اٰمَنُوْا وَعَمِلُوا الصّٰلِحٰتِ لَهُمْ جَنّٰتُ النَّعِيْمِ (٩)

**10. ಅಲ್ಲೇ ಅವರು ಸ್ಥಿರವಾಸ ಹೂಡುವರು. ಇದು ಅಲ್ಲಾಹನ ಖಚಿತ ವಾಗ್ದಾನವಾಗಿದೆ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.**

خٰلِدِيْنَ فِيْهَا ؕ وَعْدَ اللّٰهِ حَقًّا ؕ وَهُوَ الْعَزِيْزُ الْحَكِيْمُ (١٠)

**11. ನೀವು ಕಾಣುವಂತಹ ಸ್ತಂಭಗಳ ರಹಿತವಾಗಿ ಅವನು ಆಕಾಶಗಳನ್ನು ಸೃಷ್ಟಿಸಿರುತ್ತಾನೆ. ಭೂಮಿ ನಿಮ್ಮೊಂದಿಗೆ ಕಂಪಿಸದಿರಲಿಕ್ಕಾಗಿ ಅವನು ಅದರಲ್ಲಿ ಪರ್ವತಗಳನ್ನು ಇರಿಸಿರುವನು. ಎಲ್ಲ ತರದ ಜೀವಿಗಳನ್ನೂ ಅವನು ಅದರಲ್ಲಿ ಹರಡಿಸಿರುವನು. ನಾವು ಆಕಾಶದಿಂದ ಮಳೆ ಸುರಿಸಿ ಎಲ್ಲ ಉತ್ತಮ ವರ್ಗದ ಸಸ್ಯಗಳು ಬೆಳೆಯುವಂತೆ ಮಾಡಿದೆವು.**

خَلَقَ السَّمٰوٰتِ بِغَيْرِ عَمَدٍ تَرَوْنَهَا وَاَلْقٰى فِى الْاَرْضِ رَوَاسِيَ اَنْ تَمِيْدَ بِكُمْ وَبَثَّ فِيْهَا مِنْ كُلِّ دَآبَّةٍ ؕ وَاَنْزَلْنَا مِنَ السَّمَآءِ مَآءً فَاَنْۢبَتْنَا فِيْهَا مِنْ كُلِّ زَوْجٍ كَرِيْمٍ (١١)

**12. ಇದು ಅಲ್ಲಾಹನ ಸೃಷ್ಟಿಯಾಗಿದೆ. ಅವನನ್ನು ಬಿಟ್ಟು ಇತರರು ಏನನ್ನು ಸೃಷ್ಟಿಸಿರುವರೆಂದು ನೀವು ನನಗೆ ತೋರಿಸಿ ಕೊಡಿರಿ. ಏನೂ ಇಲ್ಲ. ಆದರೆ ತಪ್ಪಿತಸ್ಥರು ಸ್ಪಷ್ಟವಾದ ದುರ್ಮಾರ್ಗದಲ್ಲಿದ್ದಾರೆ.**

هٰذَا خَلْقُ اللّٰهِ فَاَرُوْنِيْ مَاذَا خَلَقَ الَّذِيْنَ مِنْ دُوْنِهٖ ؕ بَلِ الظّٰلِمُوْنَ فِيْ ضَلٰلٍ مُّبِيْنٍ (١٢) ع

**13. ನಾವು ಲುಖ್ಮಾನ್‌ರಿಗೆ ಜ್ಞಾನವನ್ನು ನೀಡಿ, 'ಅಲ್ಲಾಹನಿಗೆ ಕೃತಜ್ಞನಾಗಿರು'** ಎಂದು ಹೇಳಿದೆವು. **ಯಾರು ಕೃತಜ್ಞನಾಗುತ್ತಾನೋ ಅವನು ತನ್ನ ಆತ್ಮದ ಒಳಿತಿಗೋಸ್ಕರವೇ ಕೃತಜ್ಞನಾಗಿರುತ್ತಾನೆ. ಯಾರು ಕೃತಘ್ನನಾಗುತ್ತಾನೋ** (ಅವನು ತಿಳಿದಿರಲಿ) **ಅಲ್ಲಾಹನು ಸ್ವಯಂ ಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.**

وَلَقَدْ اٰتَيْنَا لُقْمٰنَ الْحِكْمَةَ اَنِ اشْكُرْ لِلّٰهِ ؕ وَمَنْ يَّشْكُرْ فَاِنَّمَا يَشْكُرُ لِنَفْسِهٖ ۚ وَمَنْ كَفَرَ فَاِنَّ اللّٰهَ غَنِيٌّ حَمِيْدٌ (١٣)

**14.** ತನ್ನ ಪುತ್ರನಿಗೆ ಉಪದೇಶಿಸುತ್ತಾ ಲುಖ್ಮಾನ್ ನುಡಿದ ಸಂದರ್ಭ: 'ನನ್ನ ಪ್ರಿಯ ಮಗನೇ, ನೀನು ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸಬೇಡ. (ಅಲ್ಲಾಹನಿಗೆ) ಸಹಭಾಗಿಗಳನ್ನು ಕಲ್ಪಿಸುವುದು ಖಂಡಿತವಾಗಿಯೂ ಘೋರ ದುಷ್ಕರ್ಮವಾಗಿದೆ.'

وَإِذْ قَالَ لُقْمَٰنُ لِٱبْنِهِۦ وَهُوَ يَعِظُهُۥ يَٰبُنَيَّ لَا تُشْرِكْ بِٱللَّهِ ۖ إِنَّ ٱلشِّرْكَ لَظُلْمٌ عَظِيمٌ ﴿١٤﴾

**15.** ಮನುಷ್ಯನಿಗೆ ಅವನ ತಂದೆ ತಾಯಂದಿರ ಬಗ್ಗೆ ನಾವು ಆಜ್ಞಾಪಿಸಿದ್ದೇವೆ. ಅವನ ತಾಯಿ ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿಕೊಂಡು ಅವನನ್ನು ಗರ್ಭಹೊರುತ್ತಾಳೆ; ಎರಡು ವರ್ಷಗಳಲ್ಲಿ ಸ್ತನ್ಯಪಾನ ನಿಲ್ಲಿಸುತ್ತಾಳೆ. ನನಗೂ ನಿನ್ನ ಮಾತಾಪಿತರಿಗೂ ನೀನು ಕೃತಜ್ಞನಾಗಿರು. ನನ್ನ ಬಳಿಗೆಯೇ ನಿನ್ನ ಮರಳಿಕೆಯಾಗಿದೆ.

وَوَصَّيْنَا ٱلْإِنسَٰنَ بِوَٰلِدَيْهِ حَمَلَتْهُ أُمُّهُۥ وَهْنًا عَلَىٰ وَهْنٍ وَفِصَٰلُهُۥ فِى عَامَيْنِ أَنِ ٱشْكُرْ لِى وَلِوَٰلِدَيْكَ إِلَىَّ ٱلْمَصِيرُ ﴿١٥﴾

**16.** ನಿನಗೆ ಗೊತ್ತಿಲ್ಲದ ಯಾವುದನ್ನಾದರೂ ನನ್ನೊಂದಿಗೆ ಸೇರಿಸಿ ಆರಾಧಿಸಲು ಅವರು ನಿನ್ನನ್ನು ಒತ್ತಾಯಪಡಿಸಿದರೆ, ಆಗ ನೀನು ಅವರನ್ನು ಅನುಸರಿಸಬಾರದು. ಆದರೆ ಐಹಿಕ ವಿಚಾರಗಳಲ್ಲಿ ನೀನು ಅವರೊಡನೆ ಉತ್ತಮವಾದ ರೀತಿಯಲ್ಲಿ ವರ್ತಿಸು. (ಪಾರಲೌಕಿಕ ವಿಚಾರಗಳಲ್ಲಿ) ನನ್ನ ಕಡೆಗೆ ತಿರುಗಿದವರ ಮಾರ್ಗವನ್ನು ನೀನು ಅನುಸರಿಸು. ಆಮೇಲೆ ನಿಮ್ಮ ಮರಳಿಕೆ ನಮ್ಮ ಕಡೆಗೆಯೇ ಆಗಿದೆ. ನಿಮ್ಮ ಕೃತ್ಯಗಳ ಬಗ್ಗೆ ಆಗ ನಿಮಗೆ ತಿಳಿಸಿಕೊಡಲಾಗುವುದು.

وَإِن جَٰهَدَاكَ عَلَىٰٓ أَن تُشْرِكَ بِى مَا لَيْسَ لَكَ بِهِۦ عِلْمٌ فَلَا تُطِعْهُمَا ۖ وَصَاحِبْهُمَا فِى ٱلدُّنْيَا مَعْرُوفًا ۖ وَٱتَّبِعْ سَبِيلَ مَنْ أَنَابَ إِلَىَّ ۚ ثُمَّ إِلَىَّ مَرْجِعُكُمْ فَأُنَبِّئُكُم بِمَا كُنتُمْ تَعْمَلُونَ ﴿١٦﴾

**17.** (ಲುಖ್ಮಾನ್ ಹೇಳಿದರು:) 'ನನ್ನ ಪ್ರಿಯ ಮಗನೇ, ಅದು (ಮನುಷ್ಯನ ಕರ್ಮ) ಸಾಸಿವೆ ಕಾಳಿನಷ್ಟಾದರೂ ಸರಿ, ಅದು ಒಂದು ಬಂಡೆಯೊಳಗಿದ್ದರೂ ಆಕಾಶಗಳಲ್ಲಿ ಅಥವಾ ಭೂಮಿಯಲ್ಲಿ ಎಲ್ಲಿದ್ದರೂ ಅಲ್ಲಾಹನು ಅದನ್ನು ಹೊರಗೆ ತರುವನು. ದಿಟವಾಗಿಯೂ ಅಲ್ಲಾಹನು ಸೂಕ್ಷ್ಮಾತಿಸೂಕ್ಷ್ಮವನ್ನು ಬಲ್ಲವನೂ ಸರ್ವಜ್ಞನೂ ಆಗಿದ್ದಾನೆ.

يَٰبُنَىَّ إِنَّهَآ إِن تَكُ مِثْقَالَ حَبَّةٍ مِّنْ خَرْدَلٍ فَتَكُن فِى صَخْرَةٍ أَوْ فِى ٱلسَّمَٰوَٰتِ أَوْ فِى ٱلْأَرْضِ يَأْتِ بِهَا ٱللَّهُ ۚ إِنَّ ٱللَّهَ لَطِيفٌ خَبِيرٌ ﴿١٧﴾





**18.** 'ನನ್ನ ಪ್ರಿಯ ಮಗನೇ, ನಮಾಝನ್ನು ನಿಷ್ಠೆಯಿಂದ ನಿರ್ವಹಿಸು. ಒಳಿತನ್ನು ಉಪದೇಶಿಸು. ಕೆಡುಕನ್ನು ನಿರೋಧಿಸು. ನಿನಗೆ ಸಂಕಷ್ಟಗಳು ಬಂದರೆ ಸೈರಿಸಿಕೋ. ಇವೆಲ್ಲ ದೃಢನಿರ್ಧಾರದಿಂದ ಮಾತ್ರ ಸಾಧಿಸಬಲ್ಲ ಕಾರ್ಯಗಳಾಗಿವೆ.

يَٰبُنَىَّ أَقِمِ ٱلصَّلَوٰةَ وَأْمُرْ بِٱلْمَعْرُوفِ وَٱنْهَ عَنِ ٱلْمُنكَرِ وَٱصْبِرْ عَلَىٰ مَآ أَصَابَكَ ۖ إِنَّ ذَٰلِكَ مِنْ عَزْمِ ٱلْأُمُورِ ﴿١٨﴾

**19.** 'ನೀನು ಅಹಂಭಾವದಿಂದ ಜನರ ಮುಂದೆ ಕೆನ್ನೆಗಳನ್ನು ಉಬ್ಬಿಸಬೇಡ. ಬಿಗುಮಾನದಲ್ಲಿ ನೀನು ಭೂಮಿಯ ಮೇಲೆ ನಡೆಯಬೇಡ. ಖಂಡಿತವಾಗಿಯೂ ಅಲ್ಲಾಹನು ದುರಹಂಕಾರಿಯನ್ನೂ ಡಂಭಾಚಾರಿಯನ್ನೂ ಪ್ರೀತಿಸುವುದಿಲ್ಲ.

وَلَا تُصَعِّرْ خَدَّكَ لِلنَّاسِ وَلَا تَمْشِ فِى ٱلْأَرْضِ مَرَحًا ۖ إِنَّ ٱللَّهَ لَا يُحِبُّ كُلَّ مُخْتَالٍ فَخُورٍ ﴿١٩﴾

**20.** 'ನೀನು ಸಾಧಾರಣ ಗತಿಯಲ್ಲಿ ನಡೆ. ನಿನ್ನ ಸ್ವರವನ್ನು ತಗ್ಗಿಸು. ಶಬ್ದಗಳಲ್ಲಿ ಅತಿ ಅಸಹ್ಯವಾದುದು ಕತ್ತೆಯ ಕೂಗು ಆಗಿದೆ.'

وَٱقْصِدْ فِى مَشْيِكَ وَٱغْضُضْ مِن صَوْتِكَ ۚ إِنَّ أَنكَرَ ٱلْأَصْوَٰتِ لَصَوْتُ ٱلْحَمِيرِ ﴿٢٠﴾

**21.** ನೀನು ಕಾಣುವುದಿಲ್ಲವೇ? - ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅಲ್ಲಾಹನು ನಿಮ್ಮ ಪ್ರಯೋಜನಕ್ಕಾಗಿ ಏರ್ಪಡಿಸಿರುವನು. ಅವನ ಬಾಹ್ಯವೂ ಆಂತರಿಕವೂ ಆದ ಅನುಗ್ರಹಗಳನ್ನು ನಿಮಗೆ ಪೂರ್ಣಗೊಳಿಸಿಕೊಟ್ಟಿರುವನು. (ಆದರೂ) ಜನರ ಪೈಕಿ, ಏನೂ ಜ್ಞಾನವಾಗಲಿ, ಮಾರ್ಗದರ್ಶನವಾಗಲಿ, ಪ್ರಕಾಶ ನೀಡುವ ಗ್ರಂಥವಾಗಲಿ ಇಲ್ಲದೆ ಅಲ್ಲಾಹನ ಕುರಿತು ವಾಗ್ವಾದ ಮಾಡುವ ಹಲವರಿದ್ದಾರೆ.

أَلَمْ تَرَوْا۟ أَنَّ ٱللَّهَ سَخَّرَ لَكُم مَّا فِى ٱلسَّمَٰوَٰتِ وَمَا فِى ٱلْأَرْضِ وَأَسْبَغَ عَلَيْكُمْ نِعَمَهُۥ ظَٰهِرَةً وَبَاطِنَةً ۗ وَمِنَ ٱلنَّاسِ مَن يُجَٰدِلُ فِى ٱللَّهِ بِغَيْرِ عِلْمٍ وَلَا هُدًى وَلَا كِتَٰبٍ مُّنِيرٍ ﴿٢١﴾

**22.** 'ಅಲ್ಲಾಹನು ಅವತೀರ್ಣಗೊಳಿಸಿರುವುದನ್ನು ಅನುಸರಿಸಿರಿ' ಎಂದು ಅವರೊಡನೆ ಹೇಳಿದಾಗ ಅವರು, 'ಇಲ್ಲ; ನಮ್ಮ ತಂದೆ ತಾತಂದಿರು ಅನುಸರಿಸಿರುವುದನ್ನೇ ನಾವು ಸಹ ಅನುಸರಿಸುತ್ತೇವೆ' ಎಂದು ಉತ್ತರಿಸುತ್ತಾರೆ. ಏನು, ಶೈತಾನನು ಅವರನ್ನು ನರಕ ಶಿಕ್ಷೆಯೆಡೆಗೆ ಕರೆದರೂ (ಅವರು ಪೂರ್ವಜರನ್ನೇ ಅನುಸರಿಸುವರೇ)?

وَإِذَا قِيلَ لَهُمُ ٱتَّبِعُوا۟ مَآ أَنزَلَ ٱللَّهُ قَالُوا۟ بَلْ نَتَّبِعُ مَا وَجَدْنَا عَلَيْهِ ءَابَآءَنَآ ۚ أَوَلَوْ كَانَ ٱلشَّيْطَٰنُ يَدْعُوهُمْ إِلَىٰ عَذَابِ ٱلسَّعِيرِ ﴿٢٢﴾

**23.** ಯಾರು ಅಲ್ಲಾಹನಿಗೆ (ಸಂಪೂರ್ಣವಾಗಿ) ತನ್ನನ್ನು ಅರ್ಪಿಸಿಕೊಳ್ಳುತ್ತಾನೋ ಮತ್ತು ಸತ್ಕರ್ಮ ಮಾಡುತ್ತಾನೋ, ಖಂಡಿತವಾಗಿಯೂ ಅವನು ಭದ್ರವಾದೊಂದು ಹಿಡಿಯನ್ನು ಹಿಡಿದಂತೆಯೇ ಸರಿ. ಎಲ್ಲ ಕಾರ್ಯಗಳ ಅಂತ್ಯಪರಿಣಾಮ ಅಲ್ಲಾಹನೆಡೆಗೆ ತಿರುಗುತ್ತದೆ.

وَمَنْ يُسْلِمْ وَجْهَهُ إِلَى اللَّهِ وَهُوَ مُحْسِنٌ فَقَدِ اسْتَمْسَكَ بِالْعُرْوَةِ الْوُثْقَىٰ ۗ وَإِلَى اللَّهِ عَاقِبَةُ الْأُمُورِ ﴿٢٢﴾

**24.** ಯಾರಾದರೂ ನಂಬದಿದ್ದರೆ, ಅವನ ಅವಿಶ್ವಾಸ ನಿನ್ನನ್ನು ಚಿಂತಾಕ್ರಾಂತಗೊಳಿಸದಿರಲಿ. ಅವರ ಮರಳಿಕೆ ನಮ್ಮ ಬಳಿಗೆಯೇ ಆಗಿದೆ. ಆಗ ಅವರ ಕೃತ್ಯಗಳ ಬಗ್ಗೆ ನಾವು ಅವರಿಗೆ ವಿವರಿಸಿಕೊಡುವೆವು. ನಿಶ್ಚಯವಾಗಿಯೂ ಹೃದಯಗಳಲ್ಲಿರುವ ಎಲ್ಲವನ್ನೂ ಅಲ್ಲಾಹನು ಬಲ್ಲನು.

وَمَنْ كَفَرَ فَلَا يَحْزُنْكَ كُفْرُهُ ۚ إِلَيْنَا مَرْجِعُهُمْ فَنُنَبِّئُهُمْ بِمَا عَمِلُوا ۚ إِنَّ اللَّهَ عَلِيمٌ بِذَاتِ الصُّدُورِ ﴿٢٣﴾

**25.** ಅಲ್ಪ ಕಾಲ ಸುಖ ಅನುಭವಿಸಲು ನಾವು ಅವರನ್ನು ಬಿಡುವೆವು. ಅನಂತರ ಕಠಿಣವಾದ ಶಿಕ್ಷೆಯೆಡೆಗೆ ನಾವು ಅವರನ್ನು ಎಳೆದೊಯ್ಯುವೆವು.

نُمَتِّعُهُمْ قَلِيلًا ثُمَّ نَضْطَرُّهُمْ إِلَىٰ عَذَابٍ غَلِيظٍ ﴿٢٤﴾

**26.** 'ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನು ಯಾರು?' ಎಂದು ನೀನು ಅವರೊಡನೆ ಕೇಳಿದರೆ, 'ಅಲ್ಲಾಹ್' ಎಂದು ಅವರು ಖಂಡಿತವಾಗಿಯೂ ಹೇಳುವರು. ಹೇಳು: 'ಎಲ್ಲ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ.' ಆದರೆ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

وَلَئِنْ سَأَلْتَهُمْ مَنْ خَلَقَ السَّمَاوَاتِ وَالْأَرْضَ لَيَقُولُنَّ اللَّهُ ۚ قُلِ الْحَمْدُ لِلَّهِ ۚ بَلْ أَكْثَرُهُمْ لَا يَعْلَمُونَ ﴿٢٥﴾

**27.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೆ ಸೇರುತ್ತವೆ. ನಿಶ್ಚಯವಾಗಿಯೂ ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

لِلَّهِ مَا فِي السَّمَاوَاتِ وَالْأَرْضِ ۚ إِنَّ اللَّهَ هُوَ الْغَنِيُّ الْحَمِيدُ ﴿٢٦﴾

**28.** ಭೂಮಿಯಲ್ಲಿರುವ ವೃಕ್ಷಗಳೆಲ್ಲ ಲೇಖನಿಗಳಾದರೂ ಸಮುದ್ರ ಮತ್ತು ಅದರೊಂದಿಗೆ ಏಳು ಸಮುದ್ರಗಳು (ಶಾಯಿಯಾಗಿ) ತುಂಬಿಕೊಂಡರೂ ಅಲ್ಲಾಹನ ವಚನಗಳು (ಬರೆದು) ಮುಗಿಯಲಕ್ಕಿಲ್ಲ. ಖಂಡಿತವಾಗಿಯೂ ಅಲ್ಲಾಹನು ಪ್ರತಾಪವಂತನೂ ಬುದ್ಧಿಶಾಲಿಯೂ ಆಗಿದ್ದಾನೆ.

وَلَوْ أَنَّمَا فِي الْأَرْضِ مِنْ شَجَرَةٍ أَقْلَامٌ وَالْبَحْرُ يَمُدُّهُ مِنْ بَعْدِهِ سَبْعَةُ أَبْحُرٍ مَا نَفِدَتْ كَلِمَاتُ اللَّهِ ۗ إِنَّ اللَّهَ عَزِيزٌ حَكِيمٌ ﴿٢٧﴾





**29.** ನಿಮ್ಮೆಲ್ಲರ ಸೃಷ್ಟಿ ಮತ್ತು ಪುನರುತ್ಥಾನ ಕೇವಲ ಒಬ್ಬನನ್ನು (ಸೃಷ್ಟಿಸಿ ಪುನರುತ್ಥಾನ) ಮಾಡಿದಂತೆ. ನಿಶ್ಚಯವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

مَا خَلْقُكُمْ وَلَا بَعْثُكُمْ إِلَّا كَنَفْسٍ وَاحِدَةٍ ۗ إِنَّ اللَّهَ سَمِيعٌ بَصِيرٌ ﴿٢٨﴾

**30.** ನೀನು ಕಂಡಿಲ್ಲವೇ? - ಅಲ್ಲಾಹನು ರಾತ್ರಿಯನ್ನು ಹಗಲಿನಲ್ಲೂ ಹಗಲನ್ನು ರಾತ್ರಿಯಲ್ಲೂ ಪ್ರವೇಶಗೊಳಿಸುತ್ತಾನೆ. ಸೂರ್ಯನನ್ನೂ ಚಂದ್ರನನ್ನೂ ಕಾರ್ಯನಿರತಗೊಳಿಸಿದ್ದಾನೆ. ಪ್ರತಿಯೊಂದೂ ನಿಶ್ಚಿತ ಅವಧಿಯ ವರೆಗೆ ಚಲಿಸುತ್ತದೆ. ಅಲ್ಲಾಹನು ನಿಮ್ಮ ಕೃತ್ಯಗಳ ಬಗ್ಗೆ ಚೆನ್ನಾಗಿ ತಿಳಿದಿರುತ್ತಾನೆ.

أَلَمْ تَرَ أَنَّ اللَّهَ يُولِجُ اللَّيْلَ فِي النَّهَارِ وَيُولِجُ النَّهَارَ فِي اللَّيْلِ وَسَخَّرَ الشَّمْسَ وَالْقَمَرَ كُلٌّ يَجْرِي إِلَىٰ أَجَلٍ مُسَمًّى وَأَنَّ اللَّهَ بِمَا تَعْمَلُونَ خَبِيرٌ ﴿٢٩﴾

**31.** ಅದೇಕೆಂದರೆ, ಅಲ್ಲಾಹನು ಸತ್ಯಸ್ವರೂಪನು ಮತ್ತು ಅವನ ಹೊರತು ಅವರು ಕರೆದು ಪ್ರಾರ್ಥಿಸುವವುಗಳೆಲ್ಲವೂ ಮಿಥ್ಯೆಯಾಗಿರುವುದರಿಂದಲೂ ಹಾಗೂ ದಿಟವಾಗಿಯೂ ಅಲ್ಲಾಹನು ಸರ್ವೋನ್ನತನೂ ಮಹಾಮಹಿಮನೂ ಆಗಿರುವುದರಿಂದಲೂ.

ذَٰلِكَ بِأَنَّ اللَّهَ هُوَ الْحَقُّ وَأَنَّ مَا يَدْعُونَ مِنْ دُونِهِ الْبَاطِلُ وَأَنَّ اللَّهَ هُوَ الْعَلِيُّ الْكَبِيرُ ﴿٣٠﴾

**32.** ಅಲ್ಲಾಹನ ದೃಷ್ಟಾಂತಗಳಲ್ಲಿ ಕೆಲವನ್ನು ಅವನು ನಿಮಗೆ ತೋರಿಸಿಕೊಡಲಿಕ್ಕೋಸ್ಕರ ಅವನ ಅನುಗ್ರಹ ಸಹಿತ ಸಮುದ್ರದಲ್ಲಿ ಹಡಗುಗಳು ಸಂಚರಿಸುವುದನ್ನು ನೀನು ನೋಡಿಲ್ಲವೆ? ಅತಿಯಾಗಿ ತಾಳ್ಮೆವಹಿಸುವವರಿಗೂ ಕೃತಜ್ಞರಿಗೂ ಇದರಲ್ಲಿ ನಿಶ್ಚಯವಾಗಿಯೂ ದೃಷ್ಟಾಂತಗಳಿವೆ.

أَلَمْ تَرَ أَنَّ الْفُلْكَ تَجْرِي فِي الْبَحْرِ بِنِعْمَتِ اللَّهِ لِيُرِيَكُمْ مِنْ آيَاتِهِ ۚ إِنَّ فِي ذَٰلِكَ لَآيَاتٍ لِكُلِّ صَبَّارٍ شَكُورٍ ﴿٣١﴾

**33.** ಪರ್ವತಗಳಂತಹ ಸಮುದ್ರದ ತೆರೆಗಳು ಅವರನ್ನು ಆವರಿಸುವಾಗ ಅಲ್ಲಾಹನಿಗೆ ಸಂಪೂರ್ಣ ನಿಷ್ಠೆತೋರಿಸಿ ಅವರು ಅವನನ್ನು ಕರೆದು ಪ್ರಾರ್ಥಿಸುತ್ತಾರೆ. ಆದರೆ ಅವರನ್ನು ಅವನು ಸುರಕ್ಷಿತವಾಗಿ ದಡ ಸೇರಿಸಿದರೆ ಅವರಲ್ಲಿ ಕೆಲವರು ಮಾತ್ರ ಸತ್ಪಥವನ್ನು ಅನುಸರಿಸುತ್ತಾರೆ. ಮಹಾವಂಚಕ ಮತ್ತು ಕೃತಘ್ನನ ಹೊರತು ಇನ್ನಾರೂ ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುವುದಿಲ್ಲ.

وَإِذَا غَشِيَهُمْ مَوْجٌ كَالظُّلَلِ دَعَوُا اللَّهَ مُخْلِصِينَ لَهُ الدِّينَ فَلَمَّا نَجَّاهُمْ إِلَى الْبَرِّ فَمِنْهُمْ مُقْتَصِدٌ ۚ وَمَا يَجْحَدُ بِآيَاتِنَا إِلَّا كُلُّ خَتَّارٍ كَفُورٍ ﴿٣٢﴾

**34.** ಎಲೈ ಜನರೇ, ನಿಮ್ಮ ಪ್ರಭುವಿಗೆ ನೀವು ಭಯ ಭಕ್ತಿ ತೋರಿಸಿರಿ. ತಂದೆಯು ಮಗನ ಪ್ರಯೋಜನಕ್ಕಾಗಲಿ ಮಗನು ತಂದೆಯ ಪ್ರಯೋಜನಕ್ಕಾಗಲಿ ಬಾರದಂತಹ ಆ ದಿನದ ಬಗ್ಗೆ ಭಯಪಡಿರಿ. ಅಲ್ಲಾಹನ ವಾಗ್ದಾನ ಸತ್ಯವೇ ಆಗಿದೆ. ಆದ್ದರಿಂದ ಐಹಿಕ ಜೀವನ ನಿಮ್ಮನ್ನು ಮೋಸಗೊಳಿಸದಿರಲಿ. ಮಹಾ ವಂಚಕ (ಶೈತಾನ) ಅಲ್ಲಾಹನ ಬಗ್ಗೆ ನಿಮ್ಮನ್ನು ವಂಚಿಸದಿರಲಿ.

يَٰٓأَيُّهَا ٱلنَّاسُ ٱتَّقُوا۟ رَبَّكُمْ وَٱخْشَوْا۟ يَوْمًا
لَّا يَجْزِى وَالِدٌ عَن وَلَدِهِۦ وَلَا مَوْلُودٌ
هُوَ جَازٍ عَن وَالِدِهِۦ شَيْـًٔا ۚ إِنَّ وَعْدَ
ٱللَّهِ حَقٌّ ۖ فَلَا تَغُرَّنَّكُمُ ٱلْحَيَوٰةُ
ٱلدُّنْيَا وَلَا يَغُرَّنَّكُم بِٱللَّهِ
ٱلْغَرُورُ ٣٣

**35.** ಖಂಡಿತವಾಗಿಯೂ ಅಲ್ಲಾಹನಿಗೆ ಮಾತ್ರ ಆ ನಿಶ್ಚಿತ ಗಳಿಗೆಯ ಬಗ್ಗೆ ಜ್ಞಾನವಿದೆ. ಅವನೇ ಮಳೆ ಸುರಿಯುವಂತೆ ಮಾಡುತ್ತಾನೆ. ಗರ್ಭಾಶಯಗಳಲ್ಲಿ ಏನಿದೆಯೆಂದು ಅವನು ಬಲ್ಲನು. ತಾನು ನಾಳೆ ಏನು ಮಾಡುವೆನೆಂದು ಕೂಡ ಯಾರಿಗೂ ತಿಳಿಯದು. ತಾನು ಯಾವ ಭೂಭಾಗದಲ್ಲಿ ಮೃತಪಡುವೆನೆಂದು ಸಹ ಯಾರಿಗೂ ತಿಳಿಯದು. ನಿಸ್ಸಂದೇಹವಾಗಿಯೂ ಅಲ್ಲಾಹನು ಸರ್ವಜ್ಞನೂ ಸೂಕ್ಷ್ಮಜ್ಞನೂ ಆಗಿದ್ದಾನೆ.

إِنَّ ٱللَّهَ عِندَهُۥ عِلْمُ ٱلسَّاعَةِ وَيُنَزِّلُ
ٱلْغَيْثَ وَيَعْلَمُ مَا فِى ٱلْأَرْحَامِ ۖ وَمَا
تَدْرِى نَفْسٌ مَّاذَا تَكْسِبُ غَدًا ۖ وَمَا
تَدْرِى نَفْسٌۢ بِأَىِّ أَرْضٍ تَمُوتُ ۚ إِنَّ ٱللَّهَ
عَلِيمٌ خَبِيرٌۢ ٣٤

سُوْرَةُ السَّجْدَةِ مَكِّيَّةٌ وَّهِيَ مَعَ الْبَسْمَلَةِ اِحْدٰى وَّثَلٰثُوْنَ اٰيَةً وَّثَلٰثُ رُكُوْعَاتٍ

## 32. ಅಸ್ಸಜ್‌ದಃ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 31 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ (١)

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

الٓمّٓ (٢)

**2. ಅಲಿಫ್ ಲಾಂ ಮೀಂ.**[377]

تَنْزِيْلُ الْكِتٰبِ لَا رَيْبَ فِيْهِ مِنْ رَّبِّ
الْعٰلَمِيْنَ (٣)

**3. ಈ ಗ್ರಂಥ ಅವತೀರ್ಣಗೊಂಡುದು - ಆ ಬಗ್ಗೆ ಸಂದೇಹವೇನೂ ಇಲ್ಲ - ಸರ್ವಲೋಕಗಳ ಪ್ರಭುವಿನಿಂದಾಗಿದೆ.**

اَمْ يَقُوْلُوْنَ افْتَرٰىهُ ۚ بَلْ هُوَ الْحَقُّ
مِنْ رَّبِّكَ لِتُنْذِرَ قَوْمًا مَّآ اَتٰىهُمْ مِّنْ
نَّذِيْرٍ مِّنْ قَبْلِكَ لَعَلَّهُمْ يَهْتَدُوْنَ (٤)

**4. 'ಇದು ಅವನ ಸೃಷ್ಟನೆಯಾಗಿದೆ' ಎಂದು ಅವರು ಹೇಳುತ್ತಾರೆಯೇ? ಅಲ್ಲ, ಇದು ನಿನ್ನ ಪ್ರಭುವಿನಿಂದಿರುವ ಸತ್ಯವಾಗಿದೆ - ನಿನಗಿಂತ ಮುಂಚೆ ಯಾವ ಮುನ್ನೆಚ್ಚರಿಕೆಗಾರನೂ ಬಂದಿರದ ಒಂದು ಜನತೆಗೆ ನೀನು ಮುನ್ನೆಚ್ಚರಿಕೆ ನೀಡಿ ಅವರು ಮಾರ್ಗದರ್ಶನ ಪಡೆಯುವಂತಾಗಲಿಕ್ಕೋಸ್ಕರ.**

اَللّٰهُ الَّذِيْ خَلَقَ السَّمٰوٰتِ وَالْاَرْضَ وَ
مَا بَيْنَهُمَا فِيْ سِتَّةِ اَيَّامٍ ثُمَّ اسْتَوٰى
عَلَى الْعَرْشِ ۗ مَا لَكُمْ مِّنْ دُوْنِهٖ مِنْ
وَّلِيٍّ وَّلَا شَفِيْعٍ ۗ اَفَلَا تَتَذَكَّرُوْنَ (٥)

**5. ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ಆರು ಘಟ್ಟಗಳಲ್ಲಿ**[378] **ಸೃಷ್ಟಿಸಿದವನು ಅಲ್ಲಾಹನಾಗಿದ್ದಾನೆ. ಅನಂತರ ಅವನು ಸಿಂಹಾಸನಾರೂಢನಾದನು. ಅವನನ್ನು ಬಿಟ್ಟು ನಿಮಗೆ ಸಹಾಯಕನಾಗಲಿ ಶಿಫಾರಸುಗಾರನಾಗಲಿ ಯಾರೂ ಇಲ್ಲ. ನೀವು ಚಿಂತನೆ ಮಾಡುವುದಿಲ್ಲವೇ?**

377. ನಾನು ಅಲ್ಲಾಹ್ ಎಲ್ಲ ಬಲ್ಲವನಾಗಿದ್ದೇನೆ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)
378. 7ನೇ ಅಧ್ಯಾಯದ 55ನೇ ವಚನದ ಟಿಪ್ಪಣಿ ನೋಡಿರಿ.





يُدَبِّرُ الْاَمْرَ مِنَ السَّمَآءِ اِلَى الْاَرْضِ
ثُمَّ يَعْرُجُ اِلَيْهِ فِيْ يَوْمٍ كَانَ مِقْدَارُهٗٓ
اَلْفَ سَنَةٍ مِّمَّا تَعُدُّوْنَ (٦)

**6. ಅವನು ಭೂಮಿಯಲ್ಲಿ ತನ್ನ ಆಜ್ಞೆಯನ್ನು ಜಾರಿಗೊಳಿಸಲು ಆಕಾಶದಲ್ಲಿ ಯೋಜನೆ ಮಾಡುತ್ತಾನೆ. ನಂತರ** (ವರ್ತುಲವನ್ನು ಪೂರ್ಣಗೊಳಿಸಿ) **ಅದು ಒಂದು ನಿರ್ಣಯಿಸಲ್ಪಟ್ಟ ದಿನದಂದು ಅವನ ಕಡೆಗೆಯೇ ಮರಳುತ್ತದೆ. ನಿಮ್ಮ ಗಣನೆ ಪ್ರಕಾರ ಅದರ** (ಆ ಕಾಲಘಟ್ಟದ) **ಅವಧಿ ಒಂದು ಸಾವಿರ ವರ್ಷಗಳು.**[379]

ذٰلِكَ عٰلِمُ الْغَيْبِ وَالشَّهَادَةِ الْعَزِيْزُ
الرَّحِيْمُ (٧)

**7. ಅಗೋಚರ - ಗೋಚರವನ್ನು ತಿಳಿದಿರುವವನೂ ಪ್ರತಾಪಶಾಲಿಯೂ ಕಾರುಣ್ಯವಂತನೂ ಅವನೇ ಆಗಿರುವನು.**

الَّذِيْٓ اَحْسَنَ كُلَّ شَيْءٍ خَلَقَهٗ وَبَدَاَ
خَلْقَ الْاِنْسَانِ مِنْ طِيْنٍ (٨)

**8. ಪ್ರತಿಯೊಂದನ್ನೂ ಅವನು ಉತ್ತಮ ತರದಲ್ಲಿ ಸೃಷ್ಟಿಸುತ್ತಾನೆ. ಮನುಷ್ಯನ ಸೃಷ್ಟಿಯನ್ನು ಅವನು ಆವೆ ಮಣ್ಣಿನಿಂದ ಆರಂಭಿಸಿದನು.**

ثُمَّ جَعَلَ نَسْلَهٗ مِنْ سُلٰلَةٍ مِّنْ مَّآءٍ
مَّهِيْنٍ (٩)

**9. ಅನಂತರ ಅವನ** (ಮನುಷ್ಯನ) **ಸಂತಾನ ಪರಂಪರೆಯನ್ನು ಅವನು ತುಚ್ಛವಾದ ದ್ರವದ ಸತ್ವದಿಂದ** (ವೀರ್ಯಾಣುವಿನಿಂದ) **ಸೃಷ್ಟಿಸಿದನು.**

ثُمَّ سَوّٰىهُ وَنَفَخَ فِيْهِ مِنْ رُّوْحِهٖ وَ
جَعَلَ لَكُمُ السَّمْعَ وَالْاَبْصَارَ وَ
الْاَفْـِٕدَةَ ۗ قَلِيْلًا مَّا تَشْكُرُوْنَ (١٠)

**10. ಅನಂತರ ಅವನು ಅವನಿಗೆ ಸರಿಯಾದ ರೂಪಕೊಟ್ಟು ತನ್ನ ಚೇತನದಿಂದ ಅವನಿಗೆ ಜೀವವನ್ನು ಊದಿದನು. ನಿಮಗೆ ಅವನು ಶ್ರವಣಶಕ್ತಿಯನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ನೀಡಿದನು. ಆದರೆ ನೀವು ಕೃತಜ್ಞತೆ ತೋರಿಸುವುದಿಲ್ಲ.**

379. ಭವಿಷ್ಯತ್ಕಾಲದಲ್ಲಿ ಇಸ್ಲಾಮಿಗುಂಟಾಗುವ ಅವನತಿಯ ಕಾಲಘಟ್ಟವನ್ನು ಇಲ್ಲಿ ಸೂಚಿಸಲಾಗಿದೆ. ಪ್ರಥಮದ ಮೂರು ಶತಮಾನಗಳಲ್ಲಿ ಇಸ್ಲಾಂ ಧರ್ಮವು ಪುರೋಗತಿಯನ್ನು ಪಡೆಯಿತು. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಈ ಬಗ್ಗೆ ಹೀಗೆ ಭವಿಷ್ಯ ನುಡಿದಿದ್ದರು: "ನಾನು ಜೀವಿಸಿರುವ ಈ ಶತಮಾನ ಅತ್ಯುತ್ತಮವಾಗಿದೆ. ಆ ಮೇಲೆ ಮುಂದಿನ ಶತಮಾನ, ಆ ಮೇಲೆ ಅದರ ಮುಂದಿನ ಶತಮಾನ." (ಬುಖಾರಿ - ಕಿತುಬುಶ್ಶಹಾದತ್, ತಿರ್ಮಿದಿ).
ಮೂರು ಶತಮಾನಗಳ ಬಳಿಕ ಇಸ್ಲಾಂ ಅವನತಿಗೊಳ್ಳಲು ಪ್ರಾರಂಭವಾಯಿತು. ಒಂದು ಸಾವಿರ ವರ್ಷಗಳಾಗುವಾಗ ಮುಸ್ಲಿಮರು ಇಸ್ಲಾಮಿಕ ಅಧ್ಯಾಪನೆಗಳನ್ನು ಜಾರಿಗೊಳಿಸುವುದರಲ್ಲಿ ಅಸಮರ್ಥರಾಗುವರೆಂದು ಈ ವಚನದಲ್ಲಿ ಸೂಚನೆ ಇದೆ. ಹಾಗೆ ಸಾವಿರ ವರ್ಷಗಳ ಬಳಿಕ ಇಸ್ಲಾಮಿನ ಪುನರುದ್ಧಾರಕ್ಕಾಗಿ ಹಝ್ರತ್ ಪೈಗಂಬರರ ಪ್ರತಿಪುರುಷನಾದ ಓರ್ವ ಮಹಾಪುರುಷರನ್ನು ಅಲ್ಲಾಹನು ನಿಯೋಜಿಸುವನು ಎಂಬುದಾಗಿ ಹಝ್ರತ್ ಪೈಗಂಬರರು ಭವಿಷ್ಯ ನುಡಿದಿದ್ದಾರೆ. ಅವರ ಮೂಲಕ ಇಸ್ಲಾಂ ಪುನಃ ಶಕ್ತಿಗಳಿಸುವುದು. ಆ ಮಹಾಪುರುಷರು (ವಾಗ್ದತ್ತ ಮಸೀಹ್) ಆಗಮಿಸಿರುವರು.

**11.** 'ಏನು, ನಾವು ಭೂಮಿಯಲ್ಲಿ ಮಣ್ಣುಗೂಡಿದ ಬಳಿಕ ಒಂದು ಹೊಸ ಸೃಷ್ಟಿಯಾಗಿ ಮಾರ್ಪಡುತ್ತೇವೆಯೇ?' ಎಂದು ಅವರು ಪ್ರಶ್ನಿಸುತ್ತಾರೆ. ಅಲ್ಲ, ಅವರು ತಮ್ಮ ಪ್ರಭುವನ್ನು ಭೇಟಿಯಾಗುವ ವಿಚಾರವನ್ನು ಅಲ್ಲಗಳೆಯುತ್ತಾರೆ.

وَقَالُوٓا ءَاِذَا ضَلَلْنَا فِى الْاَرْضِ ءَاِنَّا لَفِىْ خَلْقٍ جَدِيْدٍ ۬ؕ بَلْ هُمْ بِلِقَآئِ رَبِّهِمْ كٰفِرُوْنَ ﴿١١﴾

**12.** ಹೇಳು: 'ನಿಮಗೋಸ್ಕರ ನಿಯೋಜಿಸಲ್ಪಟ್ಟ ಮರಣದ ದಿವ್ಯದೂತನು ನಿಮ್ಮ ಪ್ರಾಣವನ್ನು ಹಿಡಿಯುವನು. ಆ ಮೇಲೆ ನಿಮ್ಮ ಪ್ರಭುವಿನ ಬಳಿಗೆ ನೀವು ಮರಳಿಸಲ್ಪಡುವಿರಿ.'

قُلْ يَتَوَفّٰىكُمْ مَّلَكُ الْمَوْتِ الَّذِىْ وُكِّلَ بِكُمْ ثُمَّ اِلٰى رَبِّكُمْ تُرْجَعُوْنَ ﴿١٢﴾

**13.** ಪಾಪಿಗಳು ತಮ್ಮ ಪ್ರಭುವಿನ ಮುಂದೆ ತಲೆತಗ್ಗಿಸಿ ನಿಂತುಕೊಂಡು, 'ನಮ್ಮ ಪ್ರಭೂ (ನೀನು ಮುನ್ನೆಚ್ಚರಿಕೆಯಿತ್ತ ವಿಚಾರಗಳನ್ನು) ನಾವು ಕಂಡೆವು ಹಾಗೂ ಕೇಳಿದೆವು. ಆದ್ದರಿಂದ ನಮ್ಮನ್ನು (ಪೂರ್ವ ಜೀವಿತಕ್ಕೆ) ಹಿಂತಿರುಗಿಸು; ನಾವು ಸತ್ಕರ್ಮ ಮಾಡುವೆವು. ನಮಗೆ ಈಗ ದೃಢ ನಂಬಿಕೆ ಬಂದಿದೆ' ಎಂದು ಹೇಳುವ ಸಂದರ್ಭವನ್ನು ನೀನು ಕಾಣುತ್ತಿದ್ದರೆ!

وَلَوْ تَرٰٓى اِذِ الْمُجْرِمُوْنَ نَاكِسُوْا رُءُوْسِهِمْ عِنْدَ رَبِّهِمْ ؕ رَبَّنَآ اَبْصَرْنَا وَسَمِعْنَا فَارْجِعْنَا نَعْمَلْ صَالِحًا اِنَّا مُوْقِنُوْنَ ﴿١٣﴾

**14.** ನಾವು ಉದ್ದೇಶಿಸಿರುತ್ತಿದ್ದರೆ ಪ್ರತಿಯೊಬ್ಬನಿಗೂ ಮಾರ್ಗದರ್ಶನ ನೀಡುತ್ತಿದ್ದೆವು. ಆದರೆ 'ಜಿನ್ನ್ ಮತ್ತು ಇನ್ಸ್‌ಗಳಿಂದ ನಾನು ನರಕವನ್ನು ತುಂಬಿಸುವೆನು' ಎಂಬ ನನ್ನ ಮಾತು ಈಡೇರಬೇಕಾಗಿದ್ದಿತು.

وَلَوْ شِئْنَا لَاٰتَيْنَا كُلَّ نَفْسٍ هُدٰىهَا وَلٰكِنْ حَقَّ الْقَوْلُ مِنِّىْ لَاَمْلَئَنَّ جَهَنَّمَ مِنَ الْجِنَّةِ وَالنَّاسِ اَجْمَعِيْنَ ﴿١٤﴾

**15.** ಆದ್ದರಿಂದ ನೀವು ನಿಮ್ಮ ಈ ದಿನವನ್ನು ಕಾಣುವುದನ್ನು ಮರೆತುಬಿಟ್ಟ ಕಾರಣದಿಂದ (ಶಿಕ್ಷೆಯನ್ನು) ಅನುಭವಿಸಿರಿ. ನಿಶ್ಚಯವಾಗಿಯೂ ನಾವು (ಸಹ) ನಿಮ್ಮನ್ನು ಮರೆತು ಬಿಟ್ಟಿದ್ದೇವೆ. ನಿಮ್ಮ ದುಷ್ಕೃತ್ಯಗಳ ಪ್ರತಿಫಲವಾಗಿ ದೀರ್ಘಕಾಲೀನ ಶಿಕ್ಷೆಯನ್ನು ಅನುಭವಿಸಿರಿ.

فَذُوْقُوْا بِمَا نَسِيْتُمْ لِقَآءَ يَوْمِكُمْ هٰذَا ۚ اِنَّا نَسِيْنٰكُمْ وَذُوْقُوْا عَذَابَ الْخُلْدِ بِمَا كُنْتُمْ تَعْمَلُوْنَ ﴿١٥﴾

**16.** ನಮ್ಮ ದೃಷ್ಟಾಂತಗಳಲ್ಲಿ ನಂಬಿಕೆಯಿಡುವವರು ಯಾರೆಂದರೆ ಆ ಬಗ್ಗೆ ನೆನಪಿಸುವಾಗ ಸಾಷ್ಟಾಂಗವೆರಗಿ

اِنَّمَا يُؤْمِنُ بِاٰيٰتِنَا الَّذِيْنَ اِذَا





ತಮ್ಮ ಪ್ರಭುವನ್ನು ಸ್ತುತಿಸುವುದರೊಂದಿಗೆ ಅವನ ಪರಿಶುದ್ಧತೆಯ ಪ್ರಕೀರ್ತನೆ ಮಾಡುವವರು ಮತ್ತು ಅಹಂಕಾರ ತೋರಿಸದಿರುವವರು ಮಾತ್ರ.

ذُكِّرُوْا بِهَا خَرُّوْا سُجَّدًا وَّسَبَّحُوْا بِحَمْدِ رَبِّهِمْ وَهُمْ لَا يَسْتَكْبِرُوْنَ ﴿١٦﴾ ۩

**17.** (ದೈವಿಕ ಶಿಕ್ಷೆಯ) ಭಯದಿಂದಲೂ (ದೈವಿಕ ಕಾರುಣ್ಯದ) ಭರವಸೆಯಿಂದಲೂ ತಮ್ಮ ಪ್ರಭುವಿನೊಡನೆ ಪ್ರಾರ್ಥಿಸುತ್ತಾ ಅವರ ಶರೀರದ ಪಾರ್ಶ್ವಗಳು ಶಯ್ಯೆಗಳಿಂದ ಅಗಲುವುವು.[379] ನಾವು ಅವರಿಗೆ ಏನನ್ನು ನೀಡಿದ್ದೇವೋ ಅದರಿಂದ ಅವರು (ದೇವಪಥದಲ್ಲಿ) ಖರ್ಚು ಮಾಡುತ್ತಾರೆ.

تَتَجَافٰى جُنُوْبُهُمْ عَنِ الْمَضَاجِعِ يَدْعُوْنَ رَبَّهُمْ خَوْفًا وَّطَمَعًا ۫ وَّمِمَّا رَزَقْنٰهُمْ يُنْفِقُوْنَ ﴿١٧﴾

**18.** ತಮ್ಮ ಸತ್ಕರ್ಮದ ಫಲವಾಗಿ, ಕಣ್ಣುಗಳಿಗೆ ತಂಪನ್ನೀಯುವ ಏನೆಲ್ಲ ಅನುಗ್ರಹಗಳು ಅವರಿಗೋಸ್ಕರ ಮರೆಮಾಡಿ ಇಡಲಾಗಿದೆಯೆಂಬ ವಿಚಾರ ಯಾರಿಗೂ ತಿಳಿಯದು.

فَلَا تَعْلَمُ نَفْسٌ مَّآ اُخْفِىَ لَهُمْ مِّنْ قُرَّةِ اَعْيُنٍ ۚ جَزَآءًۢ بِمَا كَانُوْا يَعْمَلُوْنَ ﴿١٨﴾

**19.** ಏನು ವಿಶ್ವಾಸಿಯಾದೊಬ್ಬನು ಧಿಕ್ಕಾರಿಯಾದೊಬ್ಬನ ಹಾಗೆ ಆಗುವನೋ? ಅವರು ಸಮಾನರಲ್ಲ.

اَفَمَنْ كَانَ مُؤْمِنًا كَمَنْ كَانَ فَاسِقًا ؕ لَا يَسْتَوٗنَ ﴿١٩﴾

**20.** ಯಾರು ವಿಶ್ವಾಸ ಹೊಂದಿ ಸತ್ಕರ್ಮ ನಿರತರಾಗುತ್ತಾರೋ, ಅವರಿಗೆ ಅವರ ಕರ್ಮಗಳ ಪ್ರತಿಫಲವಾಗಿ, ಸತ್ಕಾರವೆಂಬಂತೆ ಶಾಶ್ವತ ವಾಸಸ್ಥಳವಾದ ಸ್ವರ್ಗೀಯ ತೋಟಗಳು ಲಭಿಸುವುವು.

اَمَّا الَّذِيْنَ اٰمَنُوْا وَعَمِلُوا الصّٰلِحٰتِ فَلَهُمْ جَنّٰتُ الْمَاْوٰى ۫ نُزُلًا بِمَا كَانُوْا يَعْمَلُوْنَ ﴿٢٠﴾

**21.** ಯಾರು ಧಿಕ್ಕಾರಿಗಳಾಗುತ್ತಾರೋ, ಅವರ ವಾಸಸ್ಥಳ ನರಕವಾಗಿದೆ. ಅವರು ಅಲ್ಲಿಂದ ಹೊರಗೆ ಬರಲು ಬಯಸುವಾಗಲೆಲ್ಲ ಅಲ್ಲಿಗೆಯೇ ಅವರನ್ನು ಮರಳಿಸಲಾಗುವುದು. 'ನೀವು ಅಲ್ಲಗಳೆಯುತ್ತಿದ್ದ ನರಕ ಶಿಕ್ಷೆಯನ್ನು ರುಚಿಸಿರಿ' ಎಂದು ಅವರೊಡನೆ ಹೇಳಲಾಗುವುದು.

وَاَمَّا الَّذِيْنَ فَسَقُوْا فَمَاْوٰىهُمُ النَّارُ ؕ كُلَّمَآ اَرَادُوْٓا اَنْ يَّخْرُجُوْا مِنْهَآ اُعِيْدُوْا فِيْهَا وَقِيْلَ لَهُمْ ذُوْقُوْا عَذَابَ النَّارِ الَّذِىْ كُنْتُمْ بِهٖ تُكَذِّبُوْنَ ﴿٢١﴾

379. ರಾತ್ರಿಯ ಕೊನೆಯ ಯಾಮದಲ್ಲಿ ಅವರು ಹಾಸಿಗೆಯಿಂದ ಎದ್ದು ತಹಜ್ಜುದ್ ನಮಾಝ್ ಮಾಡುವವರು ಎಂದು ತಾತ್ಪರ್ಯ. ಪವಿತ್ರ ಖುರ್‌ಆನ್ ವಚನ 3:18, 17:80, 76:27 ನೋಡಿರಿ.

**22.** ದೊಡ್ಡ ಶಿಕ್ಷೆಗೆ ಮುಂಚೆ ಸಣ್ಣ ಶಿಕ್ಷೆಯ ಪೈಕಿ ಕೆಲವನ್ನು ಅವರು ಅನುಭವಿಸುವಂತೆ ನಾವು ಮಾಡುವೆವು-ಅವರು (ಪಶ್ಚಾತ್ತಾಪಪಟ್ಟು) ನಮ್ಮ ಕಡೆಗೆ ಮರಳಲಿಕ್ಕೋಸ್ಕರ.

وَلَنُذِيقَنَّهُمْ مِّنَ الْعَذَابِ الْأَدْنَىٰ دُونَ الْعَذَابِ الْأَكْبَرِ لَعَلَّهُمْ يَرْجِعُونَ ﴿٢٢﴾

**23.** ತನ್ನ ಪ್ರಭುವಿನ ದೃಷ್ಟಾಂತಗಳ ಬಗ್ಗೆ ನೆನಪು ಮಾಡಿಕೊಟ್ಟ ನಂತರವೂ ಅದರಿಂದ ಮುಖ ತಿರುಗಿಸುವವನಿಗಿಂತ ದೊಡ್ಡ ದುಷ್ಕರ್ಮಿ ಬೇರೆ ಯಾರು? ನಾವು ಖಂಡಿತವಾಗಿಯೂ ಅಪರಾಧಿಗಳನ್ನು ಶಿಕ್ಷಿಸುವೆವು.

وَمَنْ أَظْلَمُ مِمَّن ذُكِّرَ بِآيَاتِ رَبِّهِ ثُمَّ أَعْرَضَ عَنْهَا ۚ إِنَّا مِنَ الْمُجْرِمِينَ مُنتَقِمُونَ ﴿٢٣﴾

**24.** ದಿಟವಾಗಿಯೂ ನಾವು ಮೂಸಾರಿಗೆ ಗ್ರಂಥ ನೀಡಿದ್ದೆವು. ಹಾಗೆಯೇ ನೀನು ಸಹ ಅದನ್ನು (ಅಂಥ ಒಂದು ಗ್ರಂಥವನ್ನು) ಪಡೆಯುವ ಬಗ್ಗೆ ಸಂದೇಹಪಡಬೇಡ. ನಾವು ಅದನ್ನು (ಆ ಗ್ರಂಥವನ್ನು) ಇಸ್ರಾಈಲ್ ಸಂತತಿಗಳಿಗೆ ಮಾರ್ಗದರ್ಶನವನ್ನಾಗಿ ಮಾಡಿದ್ದೆವು.

وَلَقَدْ آتَيْنَا مُوسَى الْكِتَابَ فَلَا تَكُن فِي مِرْيَةٍ مِّن لِّقَائِهِ ۖ وَجَعَلْنَاهُ هُدًى لِّبَنِي إِسْرَائِيلَ ﴿٢٤﴾

**25.** ಅವರು ಸ್ಥಿರಚಿತ್ತತೆ ತೋರ್ಪಡಿಸಿದಾಗ ನಮ್ಮ ಆಜ್ಞಾನುಸಾರ ಜನರಿಗೆ ಮಾರ್ಗದರ್ಶನ ಮಾಡುವ (ಆಧ್ಯಾತ್ಮಿಕ) ನೇತಾರರನ್ನು ನಾವು ಅವರಿಂದಲೇ ನಿಯೋಜಿಸಿದೆವು. ಅವರು ನಮ್ಮ ದೃಷ್ಟಾಂತಗಳನ್ನು ದೃಢವಾಗಿ ನಂಬುವವರಾಗಿದ್ದರು.

وَجَعَلْنَا مِنْهُمْ أَئِمَّةً يَهْدُونَ بِأَمْرِنَا لَمَّا صَبَرُوا ۖ وَكَانُوا بِآيَاتِنَا يُوقِنُونَ ﴿٢٥﴾

**26.** ಖಂಡಿತವಾಗಿಯೂ ಪುನರುತ್ಥಾನ ದಿನದಂದು ಅವರ ಭಿನ್ನಾಭಿಪ್ರಾಯದ ಬಗ್ಗೆ ಅವರ ಮಧ್ಯೆ ತೀರ್ಮಾನಿಸುವವನು ನಿನ್ನ ಪ್ರಭುವೇ ಆಗಿದ್ದಾನೆ.

إِنَّ رَبَّكَ هُوَ يَفْصِلُ بَيْنَهُمْ يَوْمَ الْقِيَامَةِ فِيمَا كَانُوا فِيهِ يَخْتَلِفُونَ ﴿٢٦﴾

**27.** ಇವರಿಗಿಂತ ಮುಂಚೆ ಹಲವು ಪೀಳಿಗೆಗಳನ್ನು ನಾವು ನಾಶಪಡಿಸಿದ್ದೇವೆಂಬ ವಿಚಾರ ಇವರಿಗೆ ಮಾರ್ಗದರ್ಶನ ಮಾಡುವುದಿಲ್ಲವೇ? ಅವರ ವಾಸಸ್ಥಳಗಳ ಮಧ್ಯದಲ್ಲೇ ಇವರು ನಡೆದಾಡುತ್ತಿದ್ದಾರೆ. ನಿಸ್ಸಂದೇಹವಾಗಿಯೂ ಅದರಲ್ಲಿ ಹಲವು ದೃಷ್ಟಾಂತಗಳಿವೆ. ಇವರಿಗೇನು ಕೇಳಿಸುವುದಿಲ್ಲವೇ?

أَوَلَمْ يَهْدِ لَهُمْ كَمْ أَهْلَكْنَا مِن قَبْلِهِم مِّنَ الْقُرُونِ يَمْشُونَ فِي مَسَاكِنِهِمْ ۚ إِنَّ فِي ذَٰلِكَ لَآيَاتٍ ۖ أَفَلَا يَسْمَعُونَ ﴿٢٧﴾





**28.** ಬರಡು ಭೂಮಿಯ ಕಡೆಗೆ ನಾವು ಮಳೆ ನೀರನ್ನು ಕೊಂಡೊಯ್ಯುವುದನ್ನು ಅವರು ಕಾಣುವುದಿಲ್ಲವೇ? ಅನಂತರ ಆ ಮೂಲಕ ನಾವು ಕೃಷಿ ಉತ್ಪಾದಿಸುತ್ತೇವೆ. ಅವರ ಜಾನುವಾರುಗಳೂ ಸ್ವತಃ ಅವರೂ ಅದರಿಂದ ತಿನ್ನುತ್ತಾರೆ. ಆದರೂ ಅವರು ಕಾಣುವುದಿಲ್ಲವೇ?

أَوَلَمْ يَرَوْا أَنَّا نَسُوقُ الْمَاءَ إِلَى الْأَرْضِ الْجُرُزِ فَنُخْرِجُ بِهِ زَرْعًا تَأْكُلُ مِنْهُ أَنْعَامُهُمْ وَأَنفُسُهُمْ ۖ أَفَلَا يُبْصِرُونَ ﴿٢٨﴾

**29.** 'ನೀವು ಸತ್ಯವಂತರೆಂದಾದರೆ ಈ ವಿಜಯ ಯಾವಾಗ ಬರುವುದು?' ಎಂದು ಅವರು ಕೇಳುತ್ತಾರೆ.

وَيَقُولُونَ مَتَىٰ هَٰذَا الْفَتْحُ إِن كُنتُمْ صَادِقِينَ ﴿٢٩﴾

**30.** ಹೇಳು: "ಆ ವಿಜಯದ ದಿನದಂದು ಅವಿಶ್ವಾಸಿಗಳಿಗೆ ಅವರ 'ಈಮಾನ್' (ಸತ್ಯವಿಶ್ವಾಸದ ಸ್ವೀಕಾರ) ಪ್ರಯೋಜನಕ್ಕೆ ಬರಲಾರದು. ಅವರಿಗೆ ಕಾಲಾವಕಾಶ ಕೂಡ ಸಿಗಲಾರದು."

قُلْ يَوْمَ الْفَتْحِ لَا يَنفَعُ الَّذِينَ كَفَرُوا إِيمَانُهُمْ وَلَا هُمْ يُنظَرُونَ ﴿٣٠﴾

**31.** ಆದುದರಿಂದ ನೀನು ಅವರಿಂದ ದೂರ ಸರಿದು ನಿರೀಕ್ಷಿಸು. ಅವರು ಸಹ ನಿರೀಕ್ಷಿಸುತ್ತಾರೆ.

فَأَعْرِضْ عَنْهُمْ وَانتَظِرْ إِنَّهُم مُّنتَظِرُونَ ﴿٣١﴾

سُوْرَةُ الْاَحْزَابِ مَدَنِيَّةٌ وَّهِيَ مَعَ الْبَسْمَلَةِ اَرْبَعٌ وَّسَبْعُوْنَ اٰيَةً وَّتِسْعَةُ رُكُوْعَاتٍ

# 33. ಅಲ್‌ಅಹ್‌ಝಾಬ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 74 ಆಯತ್‌ಗಳು ಹಾಗೂ 9 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (1)

**2. ಎಲೈ ಪ್ರವಾದಿ, ಅಲ್ಲಾಹನ ಭಯಭಕ್ತಿ ಇರಿಸಿಕೋ. ಅವಿಶ್ವಾಸಿಗಳನ್ನೂ ಕಪಟ ವಿಶ್ವಾಸಿಗಳನ್ನೂ ಅನುಸರಿಸಬೇಡ. ದಿಟವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.**

يٰۤاَيُّهَا النَّبِيُّ اتَّقِ اللّٰهَ وَلَا تُطِعِ الْكٰفِرِيْنَ وَالْمُنٰفِقِيْنَ ؕ اِنَّ اللّٰهَ كَانَ عَلِيْمًا حَكِيْمًا (2)

**3. ನಿನ್ನ ಪ್ರಭುವಿನಿಂದ ನಿನಗೆ ಅವತೀರ್ಣವಾಗುವುದನ್ನು ಅನುಸರಿಸು. ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.**

وَّاتَّبِعْ مَا يُوْحٰۤى اِلَيْكَ مِنْ رَّبِّكَ ؕ اِنَّ اللّٰهَ كَانَ بِمَا تَعْمَلُوْنَ خَبِيْرًا (3)

**4. ನೀನು ಅಲ್ಲಾಹನ ಮೇಲೆ ಭರವಸೆಯನ್ನಿಡು. ರಕ್ಷಕನಾಗಿ ಅಲ್ಲಾಹನೇ ಸಾಕು.**

وَّتَوَكَّلْ عَلَى اللّٰهِ ؕ وَكَفٰى بِاللّٰهِ وَكِيْلًا (4)

**5. ಅಲ್ಲಾಹನು ಯಾವ ಮನುಷ್ಯನ ಎದೆಯೊಳಗೂ ಎರಡು ಹೃದಯಗಳನ್ನು ಇಟ್ಟಿಲ್ಲ. 'ಳಿಹಾರ್'**[380] **ಮಾಡುವ ನಿಮ್ಮ ಪತ್ನಿಯರನ್ನು ಅವನು ನಿಮ್ಮ** (ನಿಜವಾದ) **ಮಾತೆಯರನ್ನಾಗಿ ಮಾಡಿಲ್ಲ. ನಿಮ್ಮ ದತ್ತು ಪುತ್ರರನ್ನು ನಿಮ್ಮ** (ಸ್ವಂತ) **ಪುತ್ರರನ್ನಾಗಿಯೂ ಮಾಡಿಲ್ಲ. ಇವೆಲ್ಲ ನಿಮ್ಮ ಬಾಯಿ ಮಾತುಗಳು ಮಾತ್ರ. ಆದರೆ ಅಲ್ಲಾಹನು ಸತ್ಯವನ್ನೇ ನುಡಿಯುತ್ತಾನೆ. ಅವನೇ ಸತ್ಪಥದತ್ತ ನಡೆಸುತ್ತಾನೆ.**

مَا جَعَلَ اللّٰهُ لِرَجُلٍ مِّنْ قَلْبَيْنِ فِيْ جَوْفِهٖ ۚ وَمَا جَعَلَ اَزْوَاجَكُمُ الّٰٓـِٔيْ تُظٰهِرُوْنَ مِنْهُنَّ اُمَّهٰتِكُمْ ۚ وَمَا جَعَلَ اَدْعِيَآءَكُمْ اَبْنَآءَكُمْ ؕ ذٰلِكُمْ قَوْلُكُمْ بِاَفْوَاهِكُمْ ؕ وَاللّٰهُ يَقُوْلُ الْحَقَّ وَهُوَ يَهْدِى السَّبِيْلَ (5)

**6. ಅವರನ್ನು** (ದತ್ತುಪುತ್ರರನ್ನು) **ಅವರ ತಂದೆಯಂದಿರ** ಹೆಸರಿನೊಂದಿಗೆ **ಕರೆಯಿರಿ. ಅಲ್ಲಾಹನ**

اُدْعُوْهُمْ لِاٰبَآئِهِمْ هُوَ اَقْسَطُ

380. 'ಳಿಹಾರ್' - ಪತ್ನಿಯನ್ನು ತನ್ನ ತಾಯಿಯೆಂದು ಹೇಳಿ ಅವಳೊಡನೆ ಲೈಂಗಿಕ ಸಂಪರ್ಕವನ್ನು ತೊರೆಯುವುದು. ಇದು ಅರೇಬಿಯಾದಲ್ಲಿ ಅಜ್ಞಾನಕಾಲದ ಒಂದು ಸಂಪ್ರದಾಯವಾಗಿತ್ತು.





**ದೃಷ್ಟಿಯಲ್ಲಿ ಅದು ಹೆಚ್ಚು ನ್ಯಾಯಪೂರ್ಣವಾಗಿದೆ. ಆದರೆ ಅವರ ತಂದೆಯಂದಿರ ಬಗ್ಗೆ ನಿಮಗೆ ತಿಳಿದಿಲ್ಲವಾದರೆ ಧಾರ್ಮಿಕವಾಗಿ ಅವರು ನಿಮ್ಮ ಸಹೋದರರೂ ಮಿತ್ರರೂ ಆಗಿದ್ದಾರೆ. ನಿಮಗೆ** (ಈ ಬಗ್ಗೆ ಮುಂಚೆ) **ತಪ್ಪು ಸಂಭವಿಸಿದ್ದರೆ ನಿಮ್ಮ ಮೇಲೆ ದೋಷಾರೋಪಣೆ ಏನೂ ಇಲ್ಲ. ಆದರೆ ನೀವು ಮನಃಪೂರ್ವಕ ಮಾಡಿದ್ದು** ದೋಷಕರ. **ಅಲ್ಲಾಹನು ಬಹಳ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

عِنْدَ اللّٰهِ ۚ فَاِنْ لَّمْ تَعْلَمُوْۤا اٰبَآءَهُمْ فَاِخْوَانُكُمْ فِى الدِّيْنِ وَمَوَالِيْكُمْ ؕ وَلَيْسَ عَلَيْكُمْ جُنَاحٌ فِيْمَاۤ اَخْطَاْتُمْ بِهٖ ۙ وَلٰكِنْ مَّا تَعَمَّدَتْ قُلُوْبُكُمْ ؕ وَكَانَ اللّٰهُ غَفُوْرًا رَّحِيْمًا (6)

**7. ಪ್ರವಾದಿ ಸತ್ಯವಿಶ್ವಾಸಿಗಳಿಗೆ ಅವರ ಸ್ವಂತ ಜನರಿಗಿಂತ ನಿಕಟವಾಗಿದ್ದಾರೆ. ಅವರ** (ಪ್ರವಾದಿಯ) **ಸಹಧರ್ಮಿಣಿಯರು ಅವರ** (ಸತ್ಯವಿಶ್ವಾಸಿಗಳ) **ಮಾತೆಯಂದಿರೂ ಆಗಿದ್ದಾರೆ. ರಕ್ತ ಸಂಬಂಧವುಳ್ಳ** ವಿಶ್ವಾಸಿಗಳಿಗೆ **ಅಲ್ಲಾಹನ ಗ್ರಂಥ ಪ್ರಕಾರ ಇತರ ವಿಶ್ವಾಸಿಗಳಿಗಿಂತಲೂ ಮುಹಾಜಿರ್‌ಗಳಿಂತಲೂ ಹೆಚ್ಚು ಪ್ರಾಶಸ್ತ್ಯವಿದೆ. ಆದರೆ ನಿಮ್ಮ ಸ್ನೇಹಿತರಿಗೆ ನೀವು ಉಪಕಾರವನ್ನೇನಾದರೂ ಮಾಡುವುದಾದರೆ** ಅದು ಸಮ್ಮತನೀಯ. **ಇದು ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿದೆ.**

اَلنَّبِيُّ اَوْلٰى بِالْمُؤْمِنِيْنَ مِنْ اَنْفُسِهِمْ وَاَزْوَاجُهٗۤ اُمَّهٰتُهُمْ ؕ وَاُولُوا الْاَرْحَامِ بَعْضُهُمْ اَوْلٰى بِبَعْضٍ فِيْ كِتٰبِ اللّٰهِ مِنَ الْمُؤْمِنِيْنَ وَالْمُهٰجِرِيْنَ اِلَّاۤ اَنْ تَفْعَلُوْۤا اِلٰۤى اَوْلِيٰٓئِكُمْ مَّعْرُوْفًا ؕ كَانَ ذٰلِكَ فِى الْكِتٰبِ مَسْطُوْرًا (7)

**8. ನಾವು ಪ್ರವಾದಿಗಳಿಂದ ಅವರ ಒಡಂಬಡಿಕೆಯನ್ನು ಪಡೆದುಕೊಂಡ ಸಂದರ್ಭ** (ಸ್ಮರಿಸು). **ನಿನ್ನಿಂದಲೂ ನೂಹ್, ಇಬ್‌ರಾಹೀಂ, ಮೂಸಾ, ಈಸಬ್ನು ಮರ್ಯಮ್ ಎಂಬಿವರಿಂದಲೂ** (ನಾವು ಒಡಂಬಡಿಕೆ ಪಡೆದುಕೊಂಡ ಸಂದರ್ಭ). **ದೃಢವಾದೊಂದು ಒಡಂಬಡಿಕೆಯನ್ನು ನಾವು ಅವರಿಂದ ಪಡೆದುಕೊಂಡಿದ್ದೆವು.**[381]

وَاِذْ اَخَذْنَا مِنَ النَّبِيّٖنَ مِيْثَاقَهُمْ وَمِنْكَ وَمِنْ نُّوْحٍ وَّاِبْرٰهِيْمَ وَمُوْسٰى وَعِيْسَى ابْنِ مَرْيَمَ ۪ وَاَخَذْنَا مِنْهُمْ مِّيْثَاقًا غَلِيْظًا (8)

**9. ಇದು ಸತ್ಯವಂತರೊಡನೆ ಅವರ ಸತ್ಯತೆಯ ಬಗ್ಗೆ ಅವನು** (ಅಲ್ಲಾಹನು) **ಪ್ರಶ್ನಿಸಲಿಕ್ಕೋಸ್ಕರವಾಗಿದೆ. ಅವಿ**

لِّيَسْـَٔلَ الصّٰدِقِيْنَ عَنْ صِدْقِهِمْ ۚ

381. ಪವಿತ್ರ ಖುರ್‌ಆನಿನ ವಚನ 3:82ರಲ್ಲಿ ಇದನ್ನು ವಿವರಿಸಲಾಗಿದೆ. ಪ್ರತಿಯೊಬ್ಬ ಪ್ರವಾದಿ ಅವರ ನಂತರ ಬರುವ ಪ್ರವಾದಿಯ ಬಗ್ಗೆ ಸುವಾರ್ತೆಯನ್ನು ನೀಡಿ, ತನ್ನ ಸಮುದಾಯದ ಜನರು ಬರಲಿರುವ ಪ್ರವಾದಿಯನ್ನು ನಂಬಿ ಅವರಿಗೆ ನೆರವು ನೀಡಬೇಕೆಂದು ತಾಕೀತು ಮಾಡಿದ್ದಾರೆ. ಇದು ಎಲ್ಲ ಪ್ರವಾದಿಗಳಿಂದ ಪಡೆದ ಒಡಂಬಡಿಕೆಯಾಗಿದೆ. ಆ ಸಂಗತಿಯನ್ನು ಇಲ್ಲಿ ಉದ್ಧರಿಸಿ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರಿಂದಲೂ ಅಂತಹ ಒಡಂಬಡಿಕೆಯನ್ನು ಪಡೆಯಲಾಗಿದೆಯೆಂದು 'ವಮಿನ್‌ಕ' (ನಿನ್ನಿಂದಲೂ) ಎಂದು ಹೇಳಿ ಸ್ಪಷ್ಟಪಡಿಸಲಾಗಿದೆ. ಪೈಗಂಬರ್ (ಸ)ರಿಂದ ಪಡೆದ ಈ ಒಡಂಬಡಿಕೆ, ಅವರ ಸಮುದಾಯದಿಂದ ಇಸ್ಲಾಂ ಧರ್ಮದ ಪುನರುದ್ಧಾರಕ್ಕಾಗಿ ನಿಯೋಜಿಸಲ್ಪಡುವ ವಾಗ್ದತ್ತ ಮಸೀಹ್‌ರಿಗೆ ಸಂಬಂಧಿಸಿದ್ದೆಂಬುದು ಸ್ಪಷ್ಟ. ಈ ಭವಿಷ್ಯನುಡಿ ವಾಗ್ದತ್ತ ಮಹ್‌ದೀ ಮಸೀಹ್ ಹಝ್ರತ್ ಮಿರ್ಝಾ ಗುಲಾಂ ಅಹ್ಮದ್ (ಅಲೈಹಿಸ್ಸಲಾಂ)ರ ಮೂಲಕ ಈಡೇರಿದೆ.

وَاَعَدَّ لِلْكٰفِرِيْنَ عَذَابًا اَلِيْمًا ٩

ಶ್ವಾಸಿಗಳಿಗೆ ಅವನು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದಾನೆ.

يٰۤاَيُّهَا الَّذِيْنَ اٰمَنُوا اذْكُرُوْا نِعْمَةَ اللّٰهِ عَلَيْكُمْ اِذْ جَآءَتْكُمْ جُنُوْدٌ فَاَرْسَلْنَا عَلَيْهِمْ رِيْحًا وَّ جُنُوْدًا لَّمْ تَرَوْهَا ؕ وَ كَانَ اللّٰهُ بِمَا تَعْمَلُوْنَ بَصِيْرًا ١٠

**10.** ಎಲೈ ವಿಶ್ವಾಸಿಗಳೇ, ನಿಮಗೆ ವಿರುದ್ಧವಾಗಿ ಕೆಲವು ಸೈನ್ಯಗಳು ಬಂದ ಸಂದರ್ಭದಲ್ಲಿ ನಿಮಗೆ ಅಲ್ಲಾಹನು ಪ್ರದಾನ ಮಾಡಿದ ಅನುಗ್ರಹವನ್ನು ಸ್ಮರಿಸಿರಿ. ಆಗ ಅವರ ವಿರುದ್ಧವಾಗಿ ಒಂದು ಗಾಳಿಯನ್ನೂ ನಿಮಗೆ ಗೋಚರಿಸದ ಸೈನ್ಯಗಳನ್ನೂ ನಾವು ಕಳುಹಿಸಿದ್ದೆವು.[382] ನಿಮ್ಮ ಕೃತ್ಯ ಗಳನ್ನು ಅಲ್ಲಾಹನು ಚೆನ್ನಾಗಿ ಕಾಣುತ್ತಾನೆ.

اِذْ جَآءُوْكُمْ مِّنْ فَوْقِكُمْ وَ مِنْ اَسْفَلَ مِنْكُمْ وَ اِذْ زَاغَتِ الْاَبْصَارُ وَ بَلَغَتِ الْقُلُوْبُ الْحَنَاجِرَ وَ تَظُنُّوْنَ بِاللّٰهِ الظُّنُوْنَا ١١

**11.** ಅವರು ನಿಮ್ಮನ್ನು ಮೇಲ್ಭಾಗದಿಂದಲೂ ಕೆಳಭಾಗದಿಂದಲೂ ಸುತ್ತುವರಿದು ಬಂದ ಸಂದರ್ಭದಲ್ಲಿ! ಆಗ ನಿಮ್ಮ ಕಣ್ಣುಗಳು ಭಯವಿಹ್ವಲಗೊಂಡಿದ್ದವು; ನಿಮ್ಮ ಹೃದಯಗಳು ಕಂಠ ನಾಳಗಳಿಗೆ ತಲಪಿದ್ದವು; ಅಲ್ಲಾಹನ ಬಗ್ಗೆ ಹಲವು ಭಾವನೆಗಳು ನಿಮ್ಮ ಮನಸ್ಸಿನಲ್ಲಿ ಮೂಡಿದ್ದವು.

هُنَالِكَ ابْتُلِيَ الْمُؤْمِنُوْنَ وَ زُلْزِلُوْا زِلْزَالًا شَدِيْدًا ١٢

**12.** ಅಲ್ಲಿ (ಆ ಸಂದರ್ಭದಲ್ಲಿ) ಸತ್ಯವಿಶ್ವಾಸಿಗಳು ಪರೀಕ್ಷೆಗೊಳಗಾದರು ಮತ್ತು ಬಲವಾದ ಕಂಪನದಿಂದ ಅವರು ಕಂಪಿಸಲ್ಪಟ್ಟರು.

وَ اِذْ يَقُوْلُ الْمُنٰفِقُوْنَ وَ الَّذِيْنَ فِيْ قُلُوْبِهِمْ مَّرَضٌ مَّا وَعَدَنَا اللّٰهُ وَ رَسُوْلُهٗۤ اِلَّا غُرُوْرًا ١٣

**13.** ಆಗ ಕಪಟ ವಿಶ್ವಾಸಿಗಳು ಮತ್ತು ತಮ್ಮ ಹೃದಯ ಗಳಲ್ಲಿ ರೋಗವಿರುವವರು, 'ಅಲ್ಲಾಹನು ಮತ್ತು ಅವನ ಸಂದೇಶವಾಹಕ ನಮಗೆ ಸುಳ್ಳು ವಾಗ್ದಾನವನ್ನು ಮಾತ್ರವೇ ನೀಡಿದರು' ಎಂದು ಹೇಳಿದರು.

وَ اِذْ قَالَتْ طَّآئِفَةٌ مِّنْهُمْ يٰۤاَهْلَ

**14.** 'ಯಸ್ರಿಬ್ (ಮದೀನ) ನಿವಾಸಿಗಳೇ, (ಶತ್ರುಗಳ ವಿರುದ್ಧವಾಗಿ) ನಿಮಗೇನೂ ನೆಲೆಯಿಲ್ಲ. ಆದ್ದರಿಂದ ನೀವು

382. 'ಅಹ್‌ಝಾಬ್' ಯುದ್ಧದ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆ. ಮುಸ್ಲಿಮರು ಕಠಿಣವಾದ ಸತ್ವಪರೀಕ್ಷೆಗೆ ಗುರಿಯಾಗಿದ್ದರು. ವೈರಿಗಳು ಜಯಗಳಿಸುತ್ತಲಿದ್ದರು. ಹಠಾತ್ತಾಗಿ, ರಾತ್ರಿ ಬಿರುಗಾಳಿ ಬೀಸಿತು. ಶಿಬಿರಗಳ ಬೆಂಕಿ ನಂದಿ ಹೋಯಿತು. ಅರಬಿಯರು ಅದನ್ನು ಒಂದು ಅಪಶಕುನವಾಗಿ ಗಣಿಸಿದರು. ಹಾಗೆ ಸೇನಾಧಿಪತಿಗಳು ಅವರ ಗೋತ್ರಗಳೊಂದಿಗೆ ಓಡಿ ಹೋದರು. ಮುಸ್ಲಿಮರು ಆ ಆಕ್ರಮಣದಿಂದ ಆ ರೀತಿಯಲ್ಲಿ ರಕ್ಷಿಸಲ್ಪಟ್ಟರು.





يَثْرِبَ لَا مُقَامَ لَكُمْ فَارْجِعُوْا ۚ وَ يَسْتَاْذِنُ فَرِيْقٌ مِّنْهُمُ النَّبِيَّ يَقُوْلُوْنَ اِنَّ بُيُوْتَنَا عَوْرَةٌ ۛؕ وَ مَا هِيَ بِعَوْرَةٍ ۚۛ اِنْ يُّرِيْدُوْنَ اِلَّا فِرَارًا ١٤

ಮರಳಿರಿ' ಎಂದು ಅವರಲ್ಲಿ ಒಂದು ಪಂಗಡದವರು ಹೇಳಿದ ಸಂದರ್ಭವನ್ನು ಸಹ ಸ್ಮರಿಸು. 'ನಮ್ಮ ಮನೆಗಳು ಅರಕ್ಷಿತಾವಸ್ಥೆಯಲ್ಲಿವೆ' ಎಂದು ಹೇಳಿ ಅವರ ಪೈಕಿ ಒಂದು ಗುಂಪು ಜನರು ಹಿಂತಿರುಗಲು ಪೈಗಂಬರರ ಅನುಮತಿ ಕೂಡ ಕೇಳಿದರು. ವಾಸ್ತವದಲ್ಲಿ ಅವರ ಮನೆ ಗಳು ಅರಕ್ಷಿತಾವಸ್ಥೆಯಲ್ಲಿರಲಿಲ್ಲ. ಅವರು ಕೇವಲ ತಪ್ಪಿಸಿ ಓಡಿಹೋಗಲು ಬಯಸಿದ್ದರು.

وَ لَوْ دُخِلَتْ عَلَيْهِمْ مِّنْ اَقْطَارِهَا ثُمَّ سُئِلُوا الْفِتْنَةَ لَاٰتَوْهَا وَ مَا تَلَبَّثُوْا بِهَاۤ اِلَّا يَسِيْرًا ١٥

**15.** ಅದರ (ಮದೀನದ) ಸುತ್ತಮುತ್ತಲಿಂದ ಅವರು ಆಕ್ರಮಿಸಲ್ಪಟ್ಟು ಧರ್ಮ ಪರಿತ್ಯಾಗಕ್ಕೆ ಅವರೊಡನೆ ಅಗತ್ಯಪಡಿಸಿದ್ದರೆ, ಅವರು ಕೂಡಲೇ ಹಾಗೆಯೇ ಮಾಡು ತ್ತಿದ್ದರು; ಅವರೇನೂ ಹಿಂಜರಿಯುತ್ತಿರಲಿಲ್ಲ.

وَ لَقَدْ كَانُوْا عَاهَدُوا اللّٰهَ مِنْ قَبْلُ لَا يُوَلُّوْنَ الْاَدْبَارَ ؕ وَ كَانَ عَهْدُ اللّٰهِ مَسْـُٔوْلًا ١٦

**16.** ತಾವು (ಯುದ್ಧರಂಗದಿಂದ) ಎಂದಿಗೂ ಹಿಂತಿರುಗಿ ಓಡಲಾರೆವೆಂದು ಇದಕ್ಕೆ ಮುಂಚೆ ಅವರು (ಕಪಟ ವಿಶ್ವಾಸಿಗಳು) ಅಲ್ಲಾಹನೊಡನೆ ಒಡಂಬಡಿಕೆ ಮಾಡಿಕೊಂಡಿದ್ದರು. ಅಲ್ಲಾಹನೊಡನೆ ಮಾಡಿದ ಒಡಂಬಡಿಕೆಯ ಬಗ್ಗೆ ಪ್ರಶ್ನಿಸಲಾಗುವುದು.

قُلْ لَّنْ يَّنْفَعَكُمُ الْفِرَارُ اِنْ فَرَرْتُمْ مِّنَ الْمَوْتِ اَوِ الْقَتْلِ وَ اِذًا لَّا تُمَتَّعُوْنَ اِلَّا قَلِيْلًا ١٧

**17.** ಹೇಳು: 'ಮರಣ ಅಥವಾ ಹತ್ಯೆಗೆ ಭಯಪಟ್ಟು ನೀವು ಓಡಿಹೋದರೆ ಆ ಓಟದಿಂದ ನಿಮಗೇನೂ ಪ್ರಯೋಜನವಾಗದು. ನೀವು ಜೀವನದ ಸುಖವನ್ನೇನೂ ಪಡೆಯಲಾರಿರಿ.'

قُلْ مَنْ ذَا الَّذِيْ يَعْصِمُكُمْ مِّنَ اللّٰهِ اِنْ اَرَادَ بِكُمْ سُوْٓءًا اَوْ اَرَادَ بِكُمْ رَحْمَةً ؕ وَ لَا يَجِدُوْنَ لَهُمْ مِّنْ دُوْنِ اللّٰهِ وَلِيًّا وَّ لَا نَصِيْرًا ١٨

**18.** ಹೇಳು: 'ಅಲ್ಲಾಹನು ನಿಮಗೇನಾದರೂ ದೋಷವನ್ನುಂಟುಮಾಡಲು ಬಯಸಿದರೆ ಅದರಿಂದ ನಿಮ್ಮನ್ನು ರಕ್ಷಿಸುವವನು ಯಾರು? ಅಥವಾ ಅವನು ನಿಮ್ಮ ಮೇಲೆ ಕರುಣೆಯೇನಾದರೂ ತೋರಿಸಲು ಬಯಸಿದರೆ (ಅದನ್ನು ಯಾರು ತಡೆಯಬಲ್ಲನು)? ಅಲ್ಲಾಹನ ಹೊರತು ಯಾವ ಮಿತ್ರನನ್ನಾಗಲಿ ಸಹಾಯಕನನ್ನಾಗಲಿ ಅವರು ಪಡೆಯಲಾರರು.

**19.** ನಿಮ್ಮ ಪೈಕಿ (ಇತರರನ್ನು ಯುದ್ಧದಿಂದ) ತಡೆಯುವವರನ್ನೂ ತಮ್ಮ ಸಹೋದರರೊಡನೆ (ನೀವು ಯುದ್ಧಕ್ಕೆ ಹೋಗದೆ) 'ನಮ್ಮ ಬಳಿಗೆ ಬನ್ನಿರಿ' ಎಂದು ಹೇಳುವವರನ್ನೂ ಅಲ್ಲಾಹನು ಚೆನ್ನಾಗಿ ಬಲ್ಲನು. ಅವರೆಂದಿಗೂ ಯುದ್ಧ ಮಾಡಲಾರರು.

قَدْ يَعْلَمُ اللّٰهُ الْمُعَوِّقِيْنَ مِنْكُمْ وَالْقَآئِلِيْنَ لِاِخْوَانِهِمْ هَلُمَّ اِلَيْنَا ۚ وَلَا يَاْتُوْنَ الْبَاْسَ اِلَّا قَلِيْلًا ﴿١٩﴾

**20.** ನಿಮ್ಮ ವಿಚಾರದಲ್ಲಿ ಅವರು ಜಿಪುಣರಾಗಿದ್ದಾರೆ. (ನಿಮ್ಮ ಒಳಿತಾಗಲೆಂದು ಅವರೆಂದಿಗೂ ಬಯಸಲಾರರು.) ಆದರೆ ಭಯದ ಸಂದರ್ಭ ಬಂದರೆ ಮೃತ್ಯುದಾಡೆಯಲ್ಲಿ ಸಿಲುಕಿದವನ ಕಣ್ಣುಗಳು ಮೂರ್ಛಾವಸ್ಥೆಯಲ್ಲಿ ತಿರುಗುವಂತೆ ನಿನ್ನ ಕಡೆಗೆ ಅವರು ನೋಡುತ್ತಿರುವುದಾಗಿ ನೀನು ಕಾಣುವೆ. ಆದರೆ ಭಯದ ಸಂದರ್ಭ ಕಳೆದರೆ ಸಂಪತ್ತಿನ ಅತ್ಯಾಶೆ ನಿಮಿತ್ತ ಹರಿತವಾದ ನಾಲಗೆಗಳಿಂದ ಅವರು ನಿಮ್ಮನ್ನು ನಿಂದಿಸುವರು. ಅವರು ವಿಶ್ವಾಸಿಗಳಲ್ಲ. ಆದ್ದರಿಂದ ಅವರ ಕರ್ಮಗಳನ್ನು ಅಲ್ಲಾಹನು ನಿಷ್ಫಲಗೊಳಿಸಿದ್ದಾನೆ. ಅಲ್ಲಾಹನಿಗೆ ಅದು ಸುಲಭ ಕಾರ್ಯವಾಗಿದೆ.

اَشِحَّةً عَلَيْكُمْ ۖۚ فَاِذَا جَآءَ الْخَوْفُ رَاَيْتَهُمْ يَنْظُرُوْنَ اِلَيْكَ تَدُوْرُ اَعْيُنُهُمْ كَالَّذِيْ يُغْشٰى عَلَيْهِ مِنَ الْمَوْتِ ۚ فَاِذَا ذَهَبَ الْخَوْفُ سَلَقُوْكُمْ بِاَلْسِنَةٍ حِدَادٍ اَشِحَّةً عَلَى الْخَيْرِ ۗ اُولٰٓئِكَ لَمْ يُؤْمِنُوْا فَاَحْبَطَ اللّٰهُ اَعْمَالَهُمْ ۗ وَكَانَ ذٰلِكَ عَلَى اللّٰهِ يَسِيْرًا ﴿٢٠﴾

**21.** ಆ (ಶತ್ರು) ಸೇನೆಗಳು ಹೋಗಲಿಲ್ಲವೆಂದು ಅವರು ಭಾವಿಸುತ್ತಾರೆ. ಆ ಸೈನ್ಯಗಳು ಪುನಃ ಬಂದರೆ, ಮರಳುಗಾಡಿನ ಅರಬರೊಂದಿಗೆ ಸೇರಿಕೊಂಡು ಅಲೆಮಾರಿ ಜೀವನ ನಡೆಸಲು ಅವರು ಇಚ್ಛಿಸುತ್ತಾರೆ. ಅವರು (ಅಲ್ಲಿಂದ) ನಿಮ್ಮ ಬಗ್ಗೆ ಕೇಳಿ ತಿಳಿದುಕೊಳ್ಳುವರು. ಅವರು ನಿಮ್ಮ ಜೊತೆಯಲ್ಲಿರುತ್ತಿದ್ದರೆ ಕೂಡ ಅವರು ಯುದ್ಧ ಮಾಡುತ್ತಿರಲಿಲ್ಲ.

يَحْسَبُوْنَ الْاَحْزَابَ لَمْ يَذْهَبُوْا ۚ وَاِنْ يَّاْتِ الْاَحْزَابُ يَوَدُّوْا لَوْ اَنَّهُمْ بَادُوْنَ فِي الْاَعْرَابِ يَسْاَلُوْنَ عَنْ اَنْۢبَآئِكُمْ ۗ وَلَوْ كَانُوْا فِيْكُمْ مَّا قٰتَلُوْٓا اِلَّا قَلِيْلًا ﴿٢١﴾

**22.** ನಿಸ್ಸಂದೇಹವಾಗಿಯೂ ನಿಮಗೆ ಅಲ್ಲಾಹನ ಸಂದೇಶವಾಹಕನಲ್ಲಿ ಒಂದು ಉತ್ತಮವಾದ ಮಾದರಿ ಇದೆ - ಅಲ್ಲಾಹ್ ಮತ್ತು ಅಂತ್ಯದಿನದ (ಭೇಟಿಯ)ಬಗ್ಗೆ ನಿರೀಕ್ಷೆಯಿರುವವರಿಗೆ ಹಾಗೂ ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುವವರಿಗೆ.

لَقَدْ كَانَ لَكُمْ فِيْ رَسُوْلِ اللّٰهِ اُسْوَةٌ حَسَنَةٌ لِّمَنْ كَانَ يَرْجُوا اللّٰهَ وَالْيَوْمَ الْاٰخِرَ وَذَكَرَ اللّٰهَ كَثِيْرًا ﴿٢٢﴾





**23.** ಸತ್ಯ ವಿಶ್ವಾಸಿಗಳು ಆ (ಶತ್ರು) ಸೈನ್ಯವನ್ನು ಕಂಡಾಗ, 'ಇದು ಅಲ್ಲಾಹ್ ಮತ್ತು ಅವನ ಸಂದೇಶವಾಹಕ ನಮಗೆ ವಾಗ್ದಾನ ಮಾಡಿದುದಾಗಿದೆ. ಅಲ್ಲಾಹ್ ಮತ್ತು ಅವನ ಸಂದೇಶವಾಹಕ ಸತ್ಯವನ್ನೇ ನುಡಿದಿದ್ದಾರೆ' ಎಂದು ಹೇಳಿದರು. ಅದು (ಆ ಘಟನೆ) ಅವರ ವಿಶ್ವಾಸವನ್ನೂ ವಿಧೇಯತೆಯನ್ನೂ ವೃದ್ಧಿಗೊಳಿಸಿತು.

وَلَمَّا رَاَ الْمُؤْمِنُوْنَ الْاَحْزَابَ ۙ قَالُوْا هٰذَا مَا وَعَدَنَا اللّٰهُ وَرَسُوْلُهٗ وَصَدَقَ اللّٰهُ وَرَسُوْلُهٗ ۫ وَمَا زَادَهُمْ اِلَّآ اِيْمَانًا وَّتَسْلِيْمًا ﴿٢٣﴾

**24.** ಅಲ್ಲಾಹನೊಡನೆ ತಾವು ಮಾಡಿದ ಒಡಂಬಡಿಕೆಯನ್ನು ಪಾಲಿಸಿದ ಕೆಲವರು ಆ ಸತ್ಯವಿಶ್ವಾಸಿಗಳ ಪೈಕಿಯಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಪ್ರತಿಜ್ಞೆಯನ್ನು ಈಡೇರಿಸಿದ್ದಾರೆ. ಇನ್ನು ಕೆಲವರು (ಅದಕ್ಕೋಸ್ಕರ) ಸಂದರ್ಭವನ್ನು ಕಾಯುತ್ತಿದ್ದಾರೆ. ಅವರು ತುಸು ಮಾತ್ರವಾದರೂ ಬದಲಾಗಲಿಲ್ಲ.

مِنَ الْمُؤْمِنِيْنَ رِجَالٌ صَدَقُوْا مَا عَاهَدُوا اللّٰهَ عَلَيْهِ ۚ فَمِنْهُمْ مَّنْ قَضٰى نَحْبَهٗ وَمِنْهُمْ مَّنْ يَّنْتَظِرُ ۖ وَمَا بَدَّلُوْا تَبْدِيْلًا ﴿٢٤﴾

**25.** (ಇದು) ಅಲ್ಲಾಹನು ಸತ್ಯವಂತರಿಗೆ ಅವರ ಸತ್ಯತೆಗೆ ಪ್ರತಿಫಲವನ್ನು ನೀಡಲಿಕ್ಕೂ ಕಪಟ ವಿಶ್ವಾಸಿಗಳನ್ನು ಅವನು ಬಯಸಿದರೆ ಶಿಕ್ಷಿಸಲಿಕ್ಕೆ ಅಥವಾ ಅವರ ಮೇಲೆ ಕರುಣೆ ತೋರಿಸಲಿಕ್ಕೂ ಆಗಿದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

لِّيَجْزِيَ اللّٰهُ الصّٰدِقِيْنَ بِصِدْقِهِمْ وَيُعَذِّبَ الْمُنٰفِقِيْنَ اِنْ شَآءَ اَوْ يَتُوْبَ عَلَيْهِمْ ۗ اِنَّ اللّٰهَ كَانَ غَفُوْرًا رَّحِيْمًا ﴿٢٥﴾

**26.** ಅವಿಶ್ವಾಸಿಗಳನ್ನು ಅವರ ಕೋಪದೊಂದಿಗೆಯೇ ಅಲ್ಲಾಹನು ಮರಳಿಸಿದನು. ಅವರು ಒಳಿತನ್ನೇನೂ ಗಳಿಸಲಿಲ್ಲ. ಯುದ್ಧದಲ್ಲಿ ವಿಶ್ವಾಸಿಗಳಿಗೆ ಅಲ್ಲಾಹನು ಸಾಕು. ಅಲ್ಲಾಹನು ಶಕ್ತಿವಂತನೂ ಪ್ರತಾಪಶಾಲಿಯೂ ಆಗಿದ್ದಾನೆ.

وَرَدَّ اللّٰهُ الَّذِيْنَ كَفَرُوْا بِغَيْظِهِمْ لَمْ يَنَالُوْا خَيْرًا ۗ وَكَفَى اللّٰهُ الْمُؤْمِنِيْنَ الْقِتَالَ ۗ وَكَانَ اللّٰهُ قَوِيًّا عَزِيْزًا ﴿٢٦﴾

**27.** ಗ್ರಂಥದವರ ಪೈಕಿ ಅವರಿಗೆ (ಶತ್ರು ಸೈನ್ಯಕ್ಕೆ) ಸಹಾಯ ನೀಡಿದವರನ್ನು ಅವರ ಕೋಟೆಗಳಿಂದ ಅವನು ಇಳಿಸಿಬಿಟ್ಟು ಅವರ ಹೃದಯಗಳಲ್ಲಿ ಭಯವನ್ನು ಹುಟ್ಟಿಸಿದನು. (ಅವರಲ್ಲಿ) ಕೆಲವರನ್ನು ನೀವು ಹತ್ಯೆ ಮಾಡಿದಿರಿ; ಕೆಲವರನ್ನು ಸೆರೆಹಿಡಿದಿರಿ.

وَاَنْزَلَ الَّذِيْنَ ظَاهَرُوْهُمْ مِّنْ اَهْلِ الْكِتٰبِ مِنْ صَيَاصِيْهِمْ وَقَذَفَ فِيْ قُلُوْبِهِمُ الرُّعْبَ فَرِيْقًا تَقْتُلُوْنَ وَتَاْسِرُوْنَ فَرِيْقًا ﴿٢٧﴾

**28.** ಅವರ ಭೂಪ್ರದೇಶ, ಮನೆಗಳು, ಸಂಪತ್ತುಗಳಿಗೂ ಮತ್ತು (ಇಷ್ಟರ ತನಕ) ನೀವು ಕಾಲೂರದ ಭೂಪ್ರದೇಶಕ್ಕೂ[383] ಅವನು ನಿಮ್ಮನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿದನು. ಅಲ್ಲಾಹನಿಗೆ ಎಲ್ಲವುಗಳ ಮೇಲೆ ಸರ್ವಾಧಿಕಾರವಿದೆ.

وَأَوْرَثَكُمْ أَرْضَهُمْ وَدِيَارَهُمْ وَأَمْوَالَهُمْ وَأَرْضًا لَّمْ تَطَئُوهَا ۚ وَكَانَ اللَّهُ عَلَىٰ كُلِّ شَيْءٍ قَدِيرًا ﴿٢٧﴾

**29.** ಎಲೈ ಪ್ರವಾದಿ, ನಿನ್ನ ಪತ್ನಿಯರೊಡನೆ ಹೇಳು: 'ನೀವು ಐಹಿಕ ಜೀವನವನ್ನೂ ಅದರ ಆಡಂಭರವನ್ನೂ ಬಯಸುವಿರಾದರೆ ಬನ್ನಿರಿ, ನಾನು ನಿಮಗೇನಾದರೂ ಪರಿಹಾರಧನ ನೀಡಿ ಯಥೋಚಿತವಾದ ರೀತಿಯಲ್ಲಿ ನಿಮ್ಮನ್ನು ಬಿಟ್ಟು ಬಿಡುವೆನು.

يَا أَيُّهَا النَّبِيُّ قُل لِّأَزْوَاجِكَ إِن كُنتُنَّ تُرِدْنَ الْحَيَاةَ الدُّنْيَا وَزِينَتَهَا فَتَعَالَيْنَ أُمَتِّعْكُنَّ وَأُسَرِّحْكُنَّ سَرَاحًا جَمِيلًا ﴿٢٨﴾

**30.** 'ಆದರೆ ನೀವು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಪರಲೋಕದ ಗೃಹವನ್ನೂ ಬಯಸುವಿರಾದರೆ, ನಿಮ್ಮ ಪೈಕಿ ಸತ್ಕರ್ಮಿಗಳಿಗೆ ಅಲ್ಲಾಹನು ಮಹತ್ವದ ಪ್ರತಿಫಲವನ್ನು ಸಿದ್ಧಪಡಿಸಿಟ್ಟಿದ್ದಾನೆ.'

وَإِن كُنتُنَّ تُرِدْنَ اللَّهَ وَرَسُولَهُ وَالدَّارَ الْآخِرَةَ فَإِنَّ اللَّهَ أَعَدَّ لِلْمُحْسِنَاتِ مِنكُنَّ أَجْرًا عَظِيمًا ﴿٢٩﴾

**31.** ಪ್ರವಾದಿಯ ಪತ್ನಿಯರೇ, ನಿಮ್ಮಲ್ಲಿ ಯಾರಾದರೂ ಪ್ರತ್ಯಕ್ಷವಾದ ನೀಚಕೃತ್ಯವನ್ನೇನಾದರೂ ಮಾಡಿದರೆ ಆಕೆಗೆ ಇಮ್ಮಡಿ ಶಿಕ್ಷೆಯಿದೆ. ಅದು ಅಲ್ಲಾಹನಿಗೆ ಸುಲಭ ಕಾರ್ಯವಾಗಿದೆ.

يَا نِسَاءَ النَّبِيِّ مَن يَأْتِ مِنكُنَّ بِفَاحِشَةٍ مُّبَيِّنَةٍ يُضَاعَفْ لَهَا الْعَذَابُ ضِعْفَيْنِ ۚ وَكَانَ ذَٰلِكَ عَلَى اللَّهِ يَسِيرًا ﴿٣٠﴾

**32.** ಆದರೆ ನಿಮ್ಮ ಪೈಕಿ ಯಾರಾದರೂ ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ವಿಧೇಯವಾಗಿದ್ದುಕೊಂಡು ಸತ್ಕರ್ಮ ಮಾಡಿದರೆ, ನಾವು ಆಕೆಗೆ ಇಮ್ಮಡಿ ಪ್ರತಿಫಲ ನೀಡುವೆವು. ಆಕೆಗೆ ನಾವು ಗೌರವಾರ್ಹ ಜೀವನ ಸಾಮಗ್ರಿಯನ್ನು ಸಿದ್ಧಪಡಿಸಿಟ್ಟಿದ್ದೇವೆ.

وَمَن يَقْنُتْ مِنكُنَّ لِلَّهِ وَرَسُولِهِ وَتَعْمَلْ صَالِحًا نُّؤْتِهَا أَجْرَهَا مَرَّتَيْنِ وَأَعْتَدْنَا لَهَا رِزْقًا كَرِيمًا ﴿٣١﴾

383. ಅಂದರೆ ಖೈಬರ್ ಪ್ರದೇಶ. ಇದು ಮಹತ್ತಾದೊಂದು ಭವಿಷ್ಯವಾಣಿಯಾಗಿದೆ. 'ಅಹ್‌ಝಾಬ್' ಯುದ್ಧ ಖೈಬರ್ ಘಟನೆಗೆ ಮುಂಚೆ ಹಾಗೂ ಹುದೈಬಿಯಾ ಒಪ್ಪಂದದ ನಂತರ ಸಂಭವಿಸಿತು. ಆ ಭೂಭಾಗ ಮುಸ್ಲಿಮರ ಸ್ವಾಧೀನಕ್ಕೆ ಬರುವುದೆಂದು ಇಲ್ಲಿ ಭವಿಷ್ಯ ನುಡಿಯಲಾಗಿದೆ. ಅದು ಹಾಗೆಯೇ ಈಡೇರಿತು.





**33.** ಎಲೈ ಪ್ರವಾದಿಯ ಪತ್ನಿಯರೇ, ನೀವು ಭಯಭಕ್ತಿಯುಳ್ಳವರಾದರೆ (ತಿಳಿದುಕೊಳ್ಳಿರಿ) ನೀವು ಅನ್ಯ ಸ್ತ್ರೀಯರಂತಲ್ಲ. ಆದ್ದರಿಂದ ನೀವು ಬಹಳ ಮೃದುಲವಾಗಿ ಮಾತನಾಡಬಾರದು. ಏಕೆಂದರೆ, ಹೃದಯದಲ್ಲಿ ರೋಗವುಳ್ಳವರು ನಿಮ್ಮ ಮೇಲೆ ದುರಾಶೆ ಹೊಂದುವರು. ನೀವು (ಯಾವಾಗಲೂ ಜನರೊಡನೆ) ಯುಕ್ತವಾದ ಮಾತನ್ನಾಡಿರಿ.

يَا نِسَاءَ النَّبِيِّ لَسْتُنَّ كَأَحَدٍ مِّنَ النِّسَاءِ ۚ إِنِ اتَّقَيْتُنَّ فَلَا تَخْضَعْنَ بِالْقَوْلِ فَيَطْمَعَ الَّذِي فِي قَلْبِهِ مَرَضٌ وَقُلْنَ قَوْلًا مَّعْرُوفًا ﴿٣٢﴾

**34.** ನೀವು ನಿಮ್ಮ ಮನೆಗಳಲ್ಲಿ (ಘನತೆಯಿಂದ) ಇದ್ದುಕೊಳ್ಳಿರಿ. ಹಳೆಯ ಅಜ್ಞಾನ ಕಾಲದ ಶೃಂಗಾರದ ರೀತಿಯಲ್ಲಿ ನೀವು ಶೃಂಗಾರ ಮಾಡಬೇಡಿರಿ. ನೀವು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿರಿ, ಝಕಾತ್ ನೀಡಿರಿ, ಅಲ್ಲಾಹ್ ಮತ್ತು ಅವನ ಸಂದೇಶವಾಹಕನಿಗೆ ವಿಧೇಯರಾಗಿರಿ. ಎಲೈ (ಪ್ರವಾದಿಯ) ಮನೆಯವರೇ, ನಿಮ್ಮಿಂದ ಎಲ್ಲ ಮಾಲಿನ್ಯವನ್ನು ನೀಗಿಸಿ ನಿಮ್ಮನ್ನು ಪರಿಶುದ್ಧಗೊಳಿಸಲು ಅಲ್ಲಾಹನು ಬಯಸುತ್ತಾನೆ.

وَقَرْنَ فِي بُيُوتِكُنَّ وَلَا تَبَرَّجْنَ تَبَرُّجَ الْجَاهِلِيَّةِ الْأُولَىٰ ۖ وَأَقِمْنَ الصَّلَاةَ وَآتِينَ الزَّكَاةَ وَأَطِعْنَ اللَّهَ وَرَسُولَهُ ۚ إِنَّمَا يُرِيدُ اللَّهُ لِيُذْهِبَ عَنكُمُ الرِّجْسَ أَهْلَ الْبَيْتِ وَيُطَهِّرَكُمْ تَطْهِيرًا ﴿٣٣﴾

**35.** ನಿಮ್ಮ ಮನೆಗಳಲ್ಲಿ ವಾಚಿಸಲ್ಪಡುವ ಅಲ್ಲಾಹನ ವಚನಗಳನ್ನೂ ಜ್ಞಾನವನ್ನೂ ಸ್ಮರಿಸಿರಿ. ನಿಸ್ಸಂದೇಹವಾಗಿಯೂ ಅಲ್ಲಾಹನು ಸೂಕ್ಷ್ಮಜ್ಞನೂ ಸರ್ವಜ್ಞನೂ ಆಗಿದ್ದಾರೆ.

وَاذْكُرْنَ مَا يُتْلَىٰ فِي بُيُوتِكُنَّ مِنْ آيَاتِ اللَّهِ وَالْحِكْمَةِ ۚ إِنَّ اللَّهَ كَانَ لَطِيفًا خَبِيرًا ﴿٣٤﴾

**36.** ನಿಶ್ಚಯವಾಗಿಯೂ (ಅಲ್ಲಾಹನಿಗೆ) ಶರಣಾಗುವ ಪುರುಷರೂ ಶರಣಾಗುವ ಸ್ತ್ರೀಯರೂ ಸತ್ಯವಿಶ್ವಾಸಿಗಳೂ ಸತ್ಯವಿಶ್ವಾಸಿನಿಯರೂ (ಅಲ್ಲಾಹನಿಗೆ) ವಿಧೇಯರಾಗುವ ಪುರುಷರೂ ವಿಧೇಯರಾಗುವ ಸ್ತ್ರೀಯರೂ ಸತ್ಯವಂತರೂ ಸತ್ಯವತಿಯರೂ ತಾಳ್ಮೆ ವಹಿಸುವ ಪುರುಷರೂ ತಾಳ್ಮೆವಹಿಸುವ ಸ್ತ್ರೀಯರೂ ವಿನಯವಂತರಾದ ಪುರುಷರೂ ವಿನಯವಂತರಾದ ಸ್ತ್ರೀಯರೂ ದಾನಧರ್ಮ ಮಾಡುವ ಪುರುಷರೂ ದಾನಧರ್ಮಮಾಡುವ ಸ್ತ್ರೀಯರೂ ವ್ರತಾನುಷ್ಠಾನ ಮಾಡುವ ಪುರುಷರೂ ವ್ರತಾನುಷ್ಠಾನ ಮಾಡುವ ಸ್ತ್ರೀಯರೂ ತಮ್ಮ ಚಾರಿತ್ರವನ್ನು ರಕ್ಷಿಸುವ ಪುರುಷರೂ ಚಾರಿತ್ರವನ್ನು

إِنَّ الْمُسْلِمِينَ وَالْمُسْلِمَاتِ وَالْمُؤْمِنِينَ وَالْمُؤْمِنَاتِ وَالْقَانِتِينَ وَالْقَانِتَاتِ وَالصَّادِقِينَ وَالصَّادِقَاتِ وَالصَّابِرِينَ وَالصَّابِرَاتِ وَالْخَاشِعِينَ وَالْخَاشِعَاتِ وَالْمُتَصَدِّقِينَ وَالْمُتَصَدِّقَاتِ وَالصَّائِمِينَ وَالصَّائِمَاتِ وَالْحَافِظِينَ فُرُوجَهُمْ وَالْحَافِظَاتِ وَالذَّاكِرِينَ اللَّهَ كَثِيرًا وَالذَّاكِرَاتِ أَعَدَّ اللَّهُ

لَهُم مَّغْفِرَةً وَأَجْرًا عَظِيمًا ﴿٣٥﴾

**ರಕ್ಷಿಸುವ ಸ್ತ್ರೀಯರೂ ಅಲ್ಲಾಹನನ್ನು ಅಧಿಕವಾಗಿ ಸ್ಮರಿಸುವ ಪುರುಷರೂ ಅಧಿಕವಾಗಿ ಸ್ಮರಿಸುವ ಸ್ತ್ರೀಯರೂ- ಇವರೆಲ್ಲರಿಗೂ ಅಲ್ಲಾಹನು ಕ್ಷಮಾದಾನವನ್ನೂ ಮಹತ್ವದ ಪ್ರತಿಫಲವನ್ನೂ ಸಿದ್ಧಪಡಿಸಿಟ್ಟಿದ್ದಾನೆ.**

وَمَا كَانَ لِمُؤْمِنٍ وَلَا مُؤْمِنَةٍ إِذَا قَضَى اللَّهُ وَرَسُولُهُ أَمْرًا أَن يَكُونَ لَهُمُ الْخِيَرَةُ مِنْ أَمْرِهِمْ ۗ وَمَن يَعْصِ اللَّهَ وَرَسُولَهُ فَقَدْ ضَلَّ ضَلَالًا مُّبِينًا ﴿٣٦﴾

**37. ಅಲ್ಲಾಹ್ ಮತ್ತು ಅವನ ಸಂದೇಶವಾಹಕ ಯಾವುದಾದರೊಂದು ಸಂಗತಿಯನ್ನು ತೀರ್ಮಾನಿಸಿದರೆ** (ಆಮೇಲೆ) **ಸತ್ಯವಿಶ್ವಾಸಿಯಾದ ಪುರುಷನಿಗಾಗಲಿ ಸ್ತ್ರೀಗಾಗಲಿ ತಮ್ಮ ವಿಚಾರದಲ್ಲಿ ಇಷ್ಟಾನುಸಾರ ವರ್ತಿಸುವುದು ಸಲ್ಲದು. ಯಾರಾದರೂ ಅಲ್ಲಾಹ್ ಮತ್ತು ಅವನ ಸಂದೇಶವಾಹಕನೊಡನೆ ಅವಿಧೇಯತೆ ತೋರಿಸಿದರೆ ಖಂಡಿತವಾಗಿಯೂ ಅವನು ಸ್ಪಷ್ಟವಾದ ದುರ್ಮಾರ್ಗದಲ್ಲಿ ನಡೆಯುವವನಾಗುತ್ತಾನೆ.**

وَإِذْ تَقُولُ لِلَّذِي أَنْعَمَ اللَّهُ عَلَيْهِ وَأَنْعَمْتَ عَلَيْهِ أَمْسِكْ عَلَيْكَ زَوْجَكَ وَاتَّقِ اللَّهَ وَتُخْفِي فِي نَفْسِكَ مَا اللَّهُ مُبْدِيهِ وَتَخْشَى النَّاسَ وَاللَّهُ أَحَقُّ أَن تَخْشَاهُ ۖ فَلَمَّا قَضَىٰ زَيْدٌ مِّنْهَا وَطَرًا زَوَّجْنَاكَهَا لِكَيْ لَا يَكُونَ عَلَى الْمُؤْمِنِينَ حَرَجٌ فِي أَزْوَاجِ أَدْعِيَائِهِمْ إِذَا قَضَوْا مِنْهُنَّ وَطَرًا ۚ وَكَانَ أَمْرُ اللَّهِ مَفْعُولًا ﴿٣٧﴾

**38. ಅಲ್ಲಾಹನು ಅನುಗ್ರಹಿಸಿದ ಮತ್ತು ನೀನು ಔದಾರ್ಯ ತೋರಿಸಿದ ಒಬ್ಬನೊಡನೆ,**[384] **'ನಿನ್ನ ಪತ್ನಿಯನ್ನು ನೀನು ಇರಿಸಿಕೋ ಹಾಗೂ ಅಲ್ಲಾಹನಿಗೆ ಭಯಭಕ್ತಿಯನ್ನು ತೋರಿಸು' ಎಂದು ನೀನು ಹೇಳಿದ ಸಂದರ್ಭ** (ಜ್ಞಾಪಿಸು). **ಅಲ್ಲಾಹನು ಬಹಿರಂಗಗೊಳಿಸಲಿದ್ದುದನ್ನು ನೀನು ನಿನ್ನ ಹೃದಯದಲ್ಲಿ ರಹಸ್ಯವಾಗಿಟ್ಟಿದ್ದೆ**[385] **ಮತ್ತು ನೀನು ಮನುಷ್ಯರಿಗೆ ಭಯಪಡುತ್ತಿದ್ದೆ. ಆದರೆ ಅಲ್ಲಾಹನಿಗೆ ಭಯಪಡಬೇಕಾದುದು ನಿನ್ನ ಹೊಣೆಗಾರಿಕೆಯಾಗಿದೆ. ಝೈದ್ ಆಕೆಗೆ ಸಂಬಂಧಿಸಿದ ಅಪೇಕ್ಷೆಯನ್ನು ಪೂರೈಸಿದಾಗ** (ವಿವಾಹ ವಿಚ್ಛೇದನ ಮಾಡಿದಾಗ) **ನಾವು ಆಕೆಯನ್ನು ನಿನಗೆ ವಿವಾಹ ಮಾಡಿಸಿ ಕೊಟ್ಟೆವು. ಇದು ತಮ್ಮ ದತ್ತು ಪುತ್ರರ ಪತ್ನಿಯಂದಿರ ವಿಚಾರದಲ್ಲಿ - ಅವರು** (ಆ ದತ್ತು ಪುತ್ರರು) **ಅವರಿಂದ**

384. ಇದು ಹಝ್ರತ್ ಝೈದ್ ಬಿನ್ ಹಾರಿಸ್ (ರ)ರ ಕುರಿತು ಹೇಳಿದ್ದಾಗಿದೆ.

385. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರವರು ಝೈನಬ್‌ರನ್ನು ವಿವಾಹವಾಗಲು ಬಯಸಿದ್ದರೆಂದೂ (ನಊದುಬಿಲ್ಲಾಹ್) ಹಾಗೂ ಅದನ್ನು ಮನಸ್ಸಿನಲ್ಲೇ ಗುಪ್ತವಾಗಿರಿಸಿದ್ದರೆಂದೂ ಕೆಲವು ಖುರ್‌ಆನ್ ವ್ಯಾಖ್ಯಾನಗಾರರು ಬರೆದಿರುತ್ತಾರೆ. ಆದರೆ ಇದು ಶುದ್ಧ ತಪ್ಪು. "ನೀನು ನಿನ್ನ ಹೃದಯದಲ್ಲಿ ರಹಸ್ಯವಾಗಿಟ್ಟಿದ್ದೆ" ಎಂಬುದರ ತಾತ್ಪರ್ಯವೇನೆಂದರೆ, ಝೈದ್-ಝೈನಬ್ ಸಂಬಂಧ ಮುಂದುವರಿಯಲಾರದೆಂದು ಪೈಗಂಬರರಿಗೆ ಮನದಟ್ಟಾಗಿತ್ತು. ಹಾಗಿದ್ದೂ ಅದನ್ನು ತೋರ್ಪಡಿಸದೆ, 'ಒಬ್ಬ ಕುಲೀನ ಸ್ತ್ರೀಯ ವಿವಾಹ ಒಬ್ಬ ಗುಲಾಮನೊಡನೆ ಮಾಡಿಸಿ ಪೈಗಂಬರರು ಒಳಿತು ಮಾಡಲಿಲ್ಲ; ಬದಲಾಗಿ, ಕುಟುಂಬ ಕಲಹಕ್ಕೆ ನಾಂದಿಹಾಕಿದರು' ಎಂದು ಜನರು ಆಡಿಕೊಳ್ಳುವರೆಂದು ಭಯಪಟ್ಟು ಪ್ರವಾದಿವರ್ಯರು ಆ ಸಂಬಂಧವನ್ನು ಮುಂದುವರಿಸಿಕೊಂಡು ಹೋಗುವಂತೆ ಪ್ರಾಮಾಣಿಕವಾಗಿಯೇ ಝೈದ್‌ರನ್ನು ಉಪದೇಶಿಸಿದ್ದರು. ಅದನ್ನೇ ಇಲ್ಲಿ ಸೂಚಿಸಲಾಗಿದೆ.





(ತಮ್ಮ ಪತ್ನಿಯರಿಂದ) **ತಮ್ಮ ಅಪೇಕ್ಷೆಯನ್ನು ಪೂರೈಸಿದರೆ** (ಅಂದರೆ ಅವರನ್ನು ವಿವಾಹ ವಿಚ್ಛೇದನ ಮಾಡಿದರೆ, ಆ ಸ್ತ್ರೀಯರನ್ನು ವಿವಾಹವಾಗುವ ವಿಚಾರದಲ್ಲಿ) **- ಸತ್ಯವಿಶ್ವಾಸಿಗಳಿಗೆ ತಡೆಯುಂಟಾಗದಿರಲಿಕ್ಕೋಸ್ಕರವಾಗಿದೆ. ಅಲ್ಲಾಹನ ಆಜ್ಞೆ ಈಡೇರಲೇ ಬೇಕಾಗಿದೆ.**

مَّا كَانَ عَلَى النَّبِيِّ مِنْ حَرَجٍ فِيمَا فَرَضَ اللَّهُ لَهُ ۖ سُنَّةَ اللَّهِ فِي الَّذِينَ خَلَوْا مِن قَبْلُ ۚ وَكَانَ أَمْرُ اللَّهِ قَدَرًا مَّقْدُورًا ﴿٣٨﴾

**39. ಅಲ್ಲಾಹನು ಪ್ರವಾದಿಗೆ ನಿರ್ದೇಶಿಸಿದ ಯಾವುದೇ ಕಾರ್ಯವನ್ನು ಅವರು** (ಪ್ರವಾದಿ) **ನಿರ್ವಹಿಸಿದರೆ ಅದರಲ್ಲಿ ತಪ್ಪೇನಿಲ್ಲ. ಹಿಂದೆ ಗತಿಸಿದವರಲ್ಲಿ ಅಲ್ಲಾಹನು ತೋರಿಸಿದ ಕ್ರಮ ಇದೇ ಆಗಿತ್ತು. ಅಲ್ಲಾಹನ ಆಜ್ಞೆಯು ಈಡೇರಲು ನಿಶ್ಚಯಿಸಲ್ಪಟ್ಟದ್ದೇ ಆಗಿದೆ.**

الَّذِينَ يُبَلِّغُونَ رِسَالَاتِ اللَّهِ وَيَخْشَوْنَهُ وَلَا يَخْشَوْنَ أَحَدًا إِلَّا اللَّهَ ۗ وَكَفَىٰ بِاللَّهِ حَسِيبًا ﴿٣٩﴾

**40. ಅವರು ಅಲ್ಲಾಹನ ಸಂದೇಶಗಳನ್ನು ತಲಪಿಸುವವರೂ ಅವನಿಗೆ ಭಯಪಡುವವರೂ ಅಲ್ಲಾಹನ ಹೊರತು ಬೇರೆ ಯಾರಿಗೂ ಭಯಪಡದವರೂ ಆಗಿದ್ದರು. ಲೆಕ್ಕತೆಗೆಯುವವನಾಗಿ ಅಲ್ಲಾಹನು ಸಾಕು.**

مَّا كَانَ مُحَمَّدٌ أَبَا أَحَدٍ مِّن رِّجَالِكُمْ وَلَٰكِن رَّسُولَ اللَّهِ وَخَاتَمَ النَّبِيِّينَ ۗ وَكَانَ اللَّهُ بِكُلِّ شَيْءٍ عَلِيمًا ﴿٤٠﴾

**41. ಮುಹಮ್ಮದ್ ನಿಮ್ಮ ಪೈಕಿ ಯಾವನೇ ಪುರುಷನ ಪಿತ ಅಲ್ಲ. ಆದರೆ ಅವರು ಅಲ್ಲಾಹನ ಸಂದೇಶವಾಹಕರೂ ಪ್ರವಾದಿಗಳ ಮುದ್ರೆಯೂ ಆಗಿದ್ದಾರೆ.**[386] **ಎಲ್ಲ ವಿಚಾರಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.**

386. ಮುಹಮ್ಮದ್ ಪೈಗಂಬರ್ (ಸ)ರ ಸಾಕ್ಷ್ಯ ಮುದ್ರೆ ಎಲ್ಲ ಪ್ರವಾದಿಗಳ ಪ್ರವಾದಿತ್ವಕ್ಕೆ ಪುರಾವೆಯಾಗಿದೆ. ಪೂರ್ವಿಕರಾದ ಎಲ್ಲ ಪ್ರವಾದಿಗಳ ಸತ್ಯತೆಗೆ ಪೈಗಂಬರರು ಸಾಕ್ಷಿಯಾಗಿದ್ದಾರೆ. ಅದೇ ಪ್ರಕಾರ ಅವರ ಬಳಿಕ ಅವರ ಸಾಕ್ಷ್ಯ ಮುದ್ರೆಯೊಂದಿಗೆ ಮಾತ್ರವೇ ಒಬ್ಬ ವ್ಯಕ್ತಿಗೆ ಪ್ರವಾದಿ ಪದವಿಗೇರಲು ಸಾಧ್ಯ. ಅಂದರೆ, ಅವರ ಆಧ್ಯಾತ್ಮಿಕ ಶಿಷ್ಯತ್ವ ಪಡೆದು ಮತ್ತು ಅವರ ಶರೀಅತಿಗೆ ಪರಿಪೂರ್ಣವಾಗಿ ವಿಧೇಯನಾಗಿದ್ದುಕೊಂಡು ಹೊರತು ಯಾರಿಗೂ ಪ್ರವಾದಿ ಸ್ಥಾನ ಲಭಿಸಲಾರದು. ಹಾಗೆ ಆ ಸ್ಥಾನಗಳಿಸಿದ ವ್ಯಕ್ತಿ 'ಉಮ್ಮತೀ ನಬಿ' ಆಗುವರು. ಹಝ್ರತ್ ಮುಹಮ್ಮದ್ ಪೈಗಂಬರ್ (ಸ)ರವರ ನಂತರ ಯಾವ ಪ್ರವಾದಿಯೂ ಬರಲಾರರೆಂದು ಹೇಳುವ ಪಂಗಡದವರು ಖುರ್‌ಆನಿನಿಂದ ಈ ಒಂದೇ ಒಂದು ವಚನವನ್ನು ಆಧಾರವಾಗಿ ಉದ್ಧರಿಸುತ್ತಾರೆ. 'ಖಾತಮುನ್ನಬಿಯ್ಯೀನ್' ಎಂಬ ಪದಕ್ಕೆ 'ಅಂತಿಮ ಪ್ರವಾದಿ' ಅಥವಾ 'ಪ್ರವಾದಿತ್ವದ ಸಮಾಪ್ತಕ' ಎಂದು ಅವರು ಅರ್ಥ ಹೇಳುತ್ತಾರೆ. ಆದರೆ ಈ ಅರ್ಥ ಪವಿತ್ರ ಖುರ್‌ಆನಿನ ಈ ವಚನಕ್ಕೆ ಯಾವ ರೀತಿಯಲ್ಲೂ ಸರಿ ಹೊಂದುವುದಿಲ್ಲ. "ಖಾತಂ" ಎಂಬ ಪದಕ್ಕೆ ಅರಬಿ ಭಾಷೆಯಲ್ಲಿ ಅಂತಿಮ ಎಂಬ ಅರ್ಥವಿಲ್ಲ. ಖುರ್‌ಆನಿನ ಮೇಲಿನ ವಚನದಲ್ಲಿ "ಖಾತಂ" ಎಂಬ ಪದವನ್ನು "ಅನ್ನಬಿಯ್ಯೀನ್" ಎಂಬ ಬಹುವಚನ (ಸಮೂಹ ನಾಮ) ಪದದೊಂದಿಗೆ ಸೇರಿಸಿ ಪ್ರಯೋಗಿಸಲಾಗಿದೆ. ಅರಬಿ ಭಾಷೆಯಲ್ಲಿ ಈ ರೀತಿ ಪ್ರಯೋಗಿಸಿದಲ್ಲೆಲ್ಲ ಆ ಸಮೂಹದಲ್ಲಿ ಶ್ರೇಷ್ಠ ಎಂದು ಮಾತ್ರ ಅರ್ಥ. ಉದಾಹರಣೆಗೆ, ಖಾತಮುಲ್ ಔಲಿಯಾ (ಔಲಿಯಾಗಳಲ್ಲಿ ಶ್ರೇಷ್ಠ), ಖಾತಮುಲ್ ಮುಹಾಜಿರೀನ್ (ಹಿಜ್‌ರತ್ ಮಾಡಿದವರಲ್ಲಿ ಶ್ರೇಷ್ಠ), ಖಾತಮುಲ್ ಮುಫಸ್ಸಿರೀನ್ (ವ್ಯಾಖ್ಯಾನಗಾರರಲ್ಲಿ ಶ್ರೇಷ್ಠ), ಖಾತಮುಲ್ ಮುಹದ್ದಿಸೀನ್ (ಹದೀಸ್ ಪಂಡಿತರಲ್ಲಿ ಶ್ರೇಷ್ಠ), ಖಾತಮುಶ್ಶುಅರಾಅ್ (ಕವಿಗಳಲ್ಲಿ ಶ್ರೇಷ್ಠ) ಇತ್ಯಾದಿ.

**42.** ಎಲ್ಲೈ ವಿಶ್ವಾಸಿಗಳೇ, ನೀವು ಅಲ್ಲಾಹನನ್ನು ಅಧಿಕವಾಗಿ ಸ್ಮರಿಸುತ್ತಲೇ ಇರಿ.

يَا أَيُّهَا الَّذِينَ آمَنُوا اذْكُرُوا اللَّهَ ذِكْرًا كَثِيرًا ﴿٤١﴾

**43.** ಪ್ರಭಾತದಲ್ಲೂ ಪ್ರದೋಷದಲ್ಲೂ ಅವನ ಪರಿಶುದ್ಧತೆಯ ಪ್ರಕೀರ್ತನೆ ಮಾಡಿರಿ.

وَسَبِّحُوهُ بُكْرَةً وَأَصِيلًا ﴿٤٢﴾

**44.** ಅವನೇ ನಿಮ್ಮ ಮೇಲೆ ಅನುಗ್ರಹಗಳನ್ನು ವರ್ಷಿಸುತ್ತಾನೆ. ಅವನ ದೂತರು ಸಹ (ನಿಮಗಾಗಿ ಪ್ರಾರ್ಥಿಸುತ್ತಾರೆ) - ಅಂಧಕಾರಗಳಿಂದೆಲ್ಲ ನಿಮ್ಮನ್ನು ಹೊರಗೆ ತಂದು ಪ್ರಕಾಶದೆಡೆಗೆ ಕೊಂಡೊಯ್ಯಲಿಕ್ಕಾಗಿ. ಅವನು ಸತ್ಯ ವಿಶ್ವಾಸಿಗಳ ಮೇಲೆ ಅಪಾರವಾದ ಕರುಣೆ ತೋರಿಸುತ್ತಾನೆ.

هُوَ الَّذِي يُصَلِّي عَلَيْكُمْ وَمَلَائِكَتُهُ لِيُخْرِجَكُم مِّنَ الظُّلُمَاتِ إِلَى النُّورِ ۚ وَكَانَ بِالْمُؤْمِنِينَ رَحِيمًا ﴿٤٣﴾

**45.** ಅವನನ್ನು ಅವರು ಭೇಟಿಯಾಗುವ ದಿನದಂದು 'ಸಲಾಂ' (ಶಾಂತಿ) ಹಾರೈಕೆಯೊಂದಿಗೆ ಸ್ವಾಗತಿಸಲ್ಪಡುವರು. ಅವನು ಅವರಿಗೋಸ್ಕರ ಗೌರವಾರ್ಹವಾದ ಪ್ರತಿಫಲವನ್ನು ಸಿದ್ಧಪಡಿಸಿಟ್ಟಿರುವನು.

تَحِيَّتُهُمْ يَوْمَ يَلْقَوْنَهُ سَلَامٌ ۚ وَأَعَدَّ لَهُمْ أَجْرًا كَرِيمًا ﴿٤٤﴾

**46.** ಎಲ್ಲೈ ಪ್ರವಾದಿ, ನಾವು ನಿನ್ನನ್ನು ಓರ್ವ ಸಾಕ್ಷಿಯಾಗಿಯೂ ಸುವಾರ್ತೆ ಅರುಹುವವನಾಗಿಯೂ ಮುನ್ನೆಚ್ಚರಿಕೆ ನೀಡುವವನಾಗಿಯೂ ನಿಯೋಜಿಸಿದ್ದೇವೆ.

يَا أَيُّهَا النَّبِيُّ إِنَّا أَرْسَلْنَاكَ شَاهِدًا وَمُبَشِّرًا وَنَذِيرًا ﴿٤٥﴾

**47.** ಅಲ್ಲಾಹನ ಆಜ್ಞೆಯನುಸಾರ ಅವನೆಡೆಗೆ ಆಹ್ವಾನಿಸುವವನಾಗಿಯೂ ಪ್ರಕಾಶಮಾನವಾದ ದೀಪವನ್ನಾಗಿಯೂ (ನಿನ್ನನ್ನು ಕಳುಹಿಸಲಾಗಿದೆ).

وَدَاعِيًا إِلَى اللَّهِ بِإِذْنِهِ وَسِرَاجًا مُّنِيرًا ﴿٤٦﴾

**48.** ಸತ್ಯವಿಶ್ವಾಸಿಗಳಿಗೆ ಅಲ್ಲಾಹನಿಂದ ಮಹತ್ವದ ಅನುಗ್ರಹ ಲಭಿಸುವುದೆಂದು ಅವರಿಗೆ ನೀನು ಸುವಾರ್ತೆಯನ್ನು ತಿಳಿಸು.

وَبَشِّرِ الْمُؤْمِنِينَ بِأَنَّ لَهُم مِّنَ اللَّهِ فَضْلًا كَبِيرًا ﴿٤٧﴾

**49.** ಅವಿಶ್ವಾಸಿಗಳನ್ನೂ ಕಪಟವಿಶ್ವಾಸಿಗಳನ್ನೂ ಹಿಂಬಾಲಿಸಬೇಡ. ಅವರ ಕಿರುಕುಳಗಳನ್ನು ನಿರ್ಲಕ್ಷ್ಯ ಮಾಡು. ಅಲ್ಲಾಹನ ಮೇಲೆ ಭರವಸೆಯನ್ನಿಡು. ರಕ್ಷಕನಾಗಿ ಅಲ್ಲಾಹನು ಸಾಕು.

وَلَا تُطِعِ الْكَافِرِينَ وَالْمُنَافِقِينَ وَدَعْ أَذَاهُمْ وَتَوَكَّلْ عَلَى اللَّهِ ۚ وَكَفَىٰ بِاللَّهِ وَكِيلًا ﴿٤٨﴾





**50.** ಎಲ್ಲೈ ಸತ್ಯವಿಶ್ವಾಸಿಗಳೇ, ನೀವು ಸತ್ಯವಿಶ್ವಾಸಿನಿಯರನ್ನು ವಿವಾಹವಾಗಿ, ಅನಂತರ ಅವರನ್ನು ಸ್ಪರ್ಶಿಸುವ ಮೊದಲೇ ವಿವಾಹ ವಿಚ್ಛೇದನ ಮಾಡಿದರೆ, ನೀವು ಎಣಿಕೆ ಮಾಡುವ ಇದ್ದತ್ (ನಿರೀಕ್ಷೆಯ ಅವಧಿ) ಪಾಲಿಸುವಂತೆ ಅವರನ್ನು ಒತ್ತಾಯಿಸಲು ನಿಮಗೆ ಹಕ್ಕಿಲ್ಲ. ಆದ್ದರಿಂದ ನೀವು ಅವರಿಗೆ ಏನಾದರೂ ಜೀವನಾಧಾರವನ್ನು ನೀಡಿ ಉತ್ತಮವಾದ ರೀತಿಯಲ್ಲಿ ಅವರನ್ನು ಬಿಡುಗಡೆಮಾಡಿರಿ.

يَا أَيُّهَا الَّذِينَ آمَنُوا إِذَا نَكَحْتُمُ الْمُؤْمِنَاتِ ثُمَّ طَلَّقْتُمُوهُنَّ مِن قَبْلِ أَن تَمَسُّوهُنَّ فَمَا لَكُمْ عَلَيْهِنَّ مِنْ عِدَّةٍ تَعْتَدُّونَهَا ۖ فَمَتِّعُوهُنَّ وَسَرِّحُوهُنَّ سَرَاحًا جَمِيلًا ﴿٤٩﴾

**51.** ಎಲ್ಲೈ ಪ್ರವಾದಿ, ನೀನು ವಿವಾಹ ಮೌಲ್ಯ ನೀಡಿದ ನಿನ್ನ ಪತ್ನಿಯರನ್ನು ನಿನಗೆ ಧರ್ಮಬದ್ಧಗೊಳಿಸಿದ್ದೇವೆ ಹಾಗೂ ಅಲ್ಲಾಹನು ನಿನಗೆ ಯುದ್ಧದ ಗಳಿಕೆಯಾಗಿ ನೀಡಿದುದರಲ್ಲಿ ನಿನ್ನ ಅಧೀನಕ್ಕೆ ಒಳಗಾದ ಸ್ತ್ರೀಯರನ್ನೂ ನಿನ್ನೊಂದಿಗೆ ವಲಸೆ ಬಂದ ನಿನ್ನ ಪಿತೃ ಸಹೋದರ ಪುತ್ರಿಯರನ್ನೂ ನಿನ್ನ ಪಿತೃ ಸಹೋದರಿ ಪುತ್ರಿಯರನ್ನೂ ನಿನ್ನ ಮಾತೃ ಸಹೋದರ ಪುತ್ರಿಯರನ್ನೂ ನಿನ್ನ ಮಾತೃ ಸಹೋದರಿ ಪುತ್ರಿಯರನ್ನೂ (ನಿನಗೆ ವಿವಾಹವಾಗಲು ಅನುಮತಿ ನೀಡಿದ್ದೇವೆ). ಓರ್ವ ಸತ್ಯವಿಶ್ವಾಸಿನಿ ತನ್ನನ್ನು ಪ್ರವಾದಿಗೆ 'ಹಿಬಾ'[387] ಆಗಿ ಅರ್ಪಿಸಿದಾಗ ಪ್ರವಾದಿ ಆಕೆಯನ್ನು ವಿವಾಹವಾಗಲು ಬಯಸಿದರೆ ಆಕೆಯನ್ನೂ (ಧರ್ಮಬದ್ಧಗೊಳಿಸಲಾಗಿದೆ). ಇದು ಇತರ ಸತ್ಯವಿಶ್ವಾಸಿಗಳಿಗೆ ಇಲ್ಲದ ನಿನಗೆ ಮಾತ್ರವಿರುವ ಒಂದು ಅನುಮತಿಯಾಗಿದೆ. ಅವರ ಪತ್ನಿಯರ ಬಗ್ಗೆ ಮತ್ತು ಅವರ ದಾಸಿಯರ ಬಗ್ಗೆ ಅವರ (ಸತ್ಯವಿಶ್ವಾಸಿಗಳ) ಮೇಲೆ ನಾವು ವಿಧಿಸಿದ ಹೊಣೆಗಾರಿಕೆಯೇನೆಂದು ನಾವು ತಿಳಿಯಪಡಿಸಿದ್ದೇವೆ. ಇದು ನಿನಗೆ (ನಿನ್ನ ಕಾರ್ಯನಿರ್ವಹಣೆಯಲ್ಲಿ) ಅಡಚಣೆ ಯೇನೂ ಉಂಟಾಗದಿರಲಿಕ್ಕಾಗಿದೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

يَا أَيُّهَا النَّبِيُّ إِنَّا أَحْلَلْنَا لَكَ أَزْوَاجَكَ اللَّاتِي آتَيْتَ أُجُورَهُنَّ وَمَا مَلَكَتْ يَمِينُكَ مِمَّا أَفَاءَ اللَّهُ عَلَيْكَ وَبَنَاتِ عَمِّكَ وَبَنَاتِ عَمَّاتِكَ وَبَنَاتِ خَالِكَ وَبَنَاتِ خَالَاتِكَ اللَّاتِي هَاجَرْنَ مَعَكَ وَامْرَأَةً مُّؤْمِنَةً إِن وَهَبَتْ نَفْسَهَا لِلنَّبِيِّ إِنْ أَرَادَ النَّبِيُّ أَن يَسْتَنكِحَهَا خَالِصَةً لَّكَ مِن دُونِ الْمُؤْمِنِينَ ۗ قَدْ عَلِمْنَا مَا فَرَضْنَا عَلَيْهِمْ فِي أَزْوَاجِهِمْ وَمَا مَلَكَتْ أَيْمَانُهُمْ لِكَيْلَا يَكُونَ عَلَيْكَ حَرَجٌ ۗ وَكَانَ اللَّهُ غَفُورًا رَّحِيمًا ﴿٥٠﴾

**52.** ಅವರ ಪೈಕಿ ನೀನು ಇಚ್ಛಿಸುವವರನ್ನು ಬಿಟ್ಟು ಬಿಡಬಹುದು. ನೀನು ಇಚ್ಛಿಸುವವರನ್ನು ನಿನ್ನ ಕಡೆಗೆ

تُرْجِي مَن تَشَاءُ مِنْهُنَّ وَتُؤْوِي إِلَيْكَ

387. ಹಿಬಾ=ದಾನ, ಕೊಡುಗೆ, ಇನಾಮು.

ಹತ್ತಿರಗೊಳಿಸಲೂಬಹುದು. ನೀನು ಬೇರ್ಪಡಿಸಿದವರ ಪೈಕಿ ಯಾರನ್ನಾದರೂ ನೀನು (ಮರಳಿ ಪಡೆಯಲು) ಇಚ್ಛಿಸಿದರೆ (ಅದರಲ್ಲೂ) ನಿನ್ನ ಮೇಲೆ ತಪ್ಪೇನಿಲ್ಲ. ಅವರ ಕಣ್ಣುಗಳು ತಂಪಾಗಲಿಕ್ಕೂ ಅವರು ವ್ಯಾಕುಲಪಡದಿರಲಿಕ್ಕೂ ಅವರಿಗೆ ನೀನು ನೀಡುವುದರಲ್ಲಿ ಅವರೆಲ್ಲರೂ ತೃಪ್ತಿಹೊಂದಲಿಕ್ಕೂ ಇದು ಅತ್ಯುತ್ತಮ ಮಾರ್ಗವಾಗಿದೆ. ನಿಮ್ಮ ಹೃದಯಗಳಲ್ಲಿರುವುದನ್ನು ಅಲ್ಲಾಹನು ತಿಳಿಯುತ್ತಾನೆ. ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿದ್ದಾನೆ.

مَنْ تَشَاءُ ۚ وَمَنِ ابْتَغَيْتَ مِمَّنْ عَزَلْتَ فَلَا جُنَاحَ عَلَيْكَ ۚ ذَٰلِكَ أَدْنَىٰ أَنْ تَقَرَّ أَعْيُنُهُنَّ وَلَا يَحْزَنَّ وَيَرْضَيْنَ بِمَا آتَيْتَهُنَّ كُلُّهُنَّ ۚ وَاللَّهُ يَعْلَمُ مَا فِي قُلُوبِكُمْ ۚ وَكَانَ اللَّهُ عَلِيمًا حَلِيمًا ﴿٥١﴾

**53.** ಇದರ ಬಳಿಕ (ಹೆಚ್ಚಿನ) ಸ್ತ್ರೀಯರನ್ನು ವಿವಾಹವಾಗುವುದು ಅಥವಾ ಇವರ ಬದಲು ಬೇರೆಯವರನ್ನು ಪತ್ನಿಯರನ್ನಾಗಿ ಮಾಡಿಕೊಳ್ಳುವುದು ನಿನಗೆ ಅನುಮತಿಸಲ್ಪಟ್ಟಿಲ್ಲ - ಅವರ ಸದ್ಗುಣ ನಿನ್ನನ್ನು ಆಕರ್ಷಿಸಿದರೂ ಸರಿ. ಆದರೆ ನಿನ್ನ ಬಲಗೈಯ ಅಧೀನದಲ್ಲಿರುವವರು (ಯುದ್ಧಕೈದಿಗಳು) ಇದಕ್ಕೆ ಹೊರತಾಗಿರುವರು. ಅಲ್ಲಾಹನು ಎಲ್ಲ ವಿಚಾರಗಳ ಮೇಲ್ನೋಟಗಾರನಾಗಿದ್ದಾನೆ.

لَا يَحِلُّ لَكَ النِّسَاءُ مِنْ بَعْدُ وَلَا أَنْ تَبَدَّلَ بِهِنَّ مِنْ أَزْوَاجٍ وَلَوْ أَعْجَبَكَ حُسْنُهُنَّ إِلَّا مَا مَلَكَتْ يَمِينُكَ ۗ وَكَانَ اللَّهُ عَلَىٰ كُلِّ شَيْءٍ رَقِيبًا ﴿٥٢﴾

**54.** ಎಲೈ ವಿಶ್ವಾಸಿಗಳೇ, ಪ್ರವಾದಿಯ ಗೃಹಗಳಲ್ಲಿ ಊಟಕ್ಕೆ ಆಮಂತ್ರಿಸಲ್ಪಟ್ಟು ನಿಮಗೆ ಅನುಮತಿ ಲಭಿಸಿದರೆ ಹೊರತು ನೀವು ಪ್ರವೇಶಿಸಬಾರದು. (ಬೇಗನೇ ಹೋಗಿ) ನೀವು ಕಾಯುತ್ತಾ ಇರಲೂ ಬಾರದು. ಆದರೆ ನೀವು ಆಹ್ವಾನಿಸಲ್ಪಟ್ಟರೆ ಪ್ರವೇಶಿಸಿರಿ. ಆಹಾರ ಉಂಡ ಬಳಿಕ ನೀವು ಮಾತನಾಡಲು ಆರಂಭಿಸಿ ಕಾಲಹರಣ ಮಾಡದೆ ಹೊರಟುಹೋಗಿರಿ. ಖಂಡಿತವಾಗಿಯೂ ಅದು ಪೈಗಂಬರರಿಗೆ ತೊಂದರೆಯನ್ನುಂಟು ಮಾಡುತ್ತದೆ. ಆಗ ಅವರು ನಿಮ್ಮೊಡನೆ (ಅದನ್ನು ಹೇಳಲು) ಸಂಕೋಚಪಡುವರು. ಆದರೆ ಸತ್ಯವನ್ನು ಹೇಳಲು ಅಲ್ಲಾಹನು ಸಂಕೋಚಪಡುವುದಿಲ್ಲ. ನೀವು ಅವರೊಡನೆ (ಪೈಗಂಬರರ ಪತ್ನಿಯರೊಡನೆ) ಏನನ್ನಾದರೂ ಕೇಳುವುದಾದರೆ ಪರದೆಯ ಹಿಂದಿನಿಂದ ಕೇಳಿರಿ. ಅದು ನಿಮ್ಮ ಹೃದಯಗಳಿಗೂ ಅವರ ಹೃದಯಗಳಿಗೂ ಅತಿ ಪರಿಶುದ್ಧವಾದ ಮಾರ್ಗವಾಗಿದೆ. ಅಲ್ಲಾಹನ ಸಂದೇಶವಾಹಕನನ್ನು ನೀವು

يَا أَيُّهَا الَّذِينَ آمَنُوا لَا تَدْخُلُوا بُيُوتَ النَّبِيِّ إِلَّا أَنْ يُؤْذَنَ لَكُمْ إِلَىٰ طَعَامٍ غَيْرَ نَاظِرِينَ إِنَاهُ وَلَٰكِنْ إِذَا دُعِيتُمْ فَادْخُلُوا فَإِذَا طَعِمْتُمْ فَانْتَشِرُوا وَلَا مُسْتَأْنِسِينَ لِحَدِيثٍ ۚ إِنَّ ذَٰلِكُمْ كَانَ يُؤْذِي النَّبِيَّ فَيَسْتَحْيِي مِنْكُمْ ۖ وَاللَّهُ لَا يَسْتَحْيِي مِنَ الْحَقِّ ۚ وَإِذَا سَأَلْتُمُوهُنَّ مَتَاعًا فَاسْأَلُوهُنَّ مِنْ وَرَاءِ حِجَابٍ ۚ ذَٰلِكُمْ أَطْهَرُ لِقُلُوبِكُمْ وَقُلُوبِهِنَّ ۚ وَمَا كَانَ لَكُمْ أَنْ تُؤْذُوا





ತೊಂದರೆಗೊಳಪಡಿಸಬಾರದು. ಅವರ ಬಳಿಕ ಅವರ ಪತ್ನಿಯಂದಿರನ್ನು ನೀವೆಂದಿಗೂ ವಿವಾಹವಾಗಬಾರದು. ಖಂಡಿತವಾಗಿಯೂ ಅದು ಅಲ್ಲಾಹನ ದೃಷ್ಟಿಯಲ್ಲಿ ಮಹಾಪಾಪವಾಗಿದೆ.

رَسُولَ اللَّهِ وَلَا أَنْ تَنْكِحُوا أَزْوَاجَهُ مِنْ بَعْدِهِ أَبَدًا ۚ إِنَّ ذَٰلِكُمْ كَانَ عِنْدَ اللَّهِ عَظِيمًا ﴿٥٣﴾

**55.** ನೀವು ಯಾವುದೇ ವಿಚಾರವನ್ನು ಬಹಿರಂಗಪಡಿಸಿದರೂ ಬಚ್ಚಿಟ್ಟರೂ (ತಿಳಿದುಕೊಳ್ಳಿರಿ) ಅಲ್ಲಾಹನು ಎಲ್ಲ ವಿಚಾರಗಳ ಬಗ್ಗೆ ಚೆನ್ನಾಗಿ ಬಲ್ಲವನಾಗಿದ್ದಾನೆ.

إِنْ تُبْدُوا شَيْئًا أَوْ تُخْفُوهُ فَإِنَّ اللَّهَ كَانَ بِكُلِّ شَيْءٍ عَلِيمًا ﴿٥٤﴾

**56.** ತಮ್ಮ ತಂದೆಯಂದಿರು, ತಮ್ಮ ಪುತ್ರರು, ತಮ್ಮ ಸಹೋದರರು, ತಮ್ಮ ಸಹೋದರರ ಪುತ್ರರು, ತಮ್ಮ ಸಹೋದರಿಯರ ಪುತ್ರರು, ತಮ್ಮ ಸ್ವಂತ ಸ್ತ್ರೀಯರು ಮತ್ತು ತಮ್ಮ ಬಲಗೈಯ ಅಧೀನದಲ್ಲಿರುವವರು - ಇವರ ವಿಷಯದಲ್ಲಿ (ಅಂದರೆ ಅವರ ಮುಂದೆ ಪರದೆ ಆಚರಿಸದಿದ್ದರೆ) ಅವರ ಮೇಲೆ (ಪೈಗಂಬರರ ಪತ್ನಿಯರ ಮೇಲೆ) ತಪ್ಪೇನಿಲ್ಲ. ನೀವು ಅಲ್ಲಾಹನಿಗೆ ಭಯಪಡಿರಿ. ಅಲ್ಲಾಹನು ದಿಟವಾಗಿಯೂ ಎಲ್ಲ ವಿಚಾರಗಳಿಗೂ ಸಾಕ್ಷಿಯಾಗಿ ದ್ದಾನೆ.

لَا جُنَاحَ عَلَيْهِنَّ فِي آبَائِهِنَّ وَلَا أَبْنَائِهِنَّ وَلَا إِخْوَانِهِنَّ وَلَا أَبْنَاءِ إِخْوَانِهِنَّ وَلَا أَبْنَاءِ أَخَوَاتِهِنَّ وَلَا نِسَائِهِنَّ وَلَا مَا مَلَكَتْ أَيْمَانُهُنَّ ۗ وَاتَّقِينَ اللَّهَ ۚ إِنَّ اللَّهَ كَانَ عَلَىٰ كُلِّ شَيْءٍ شَهِيدًا ﴿٥٥﴾

**57.** ನಿಶ್ಚಯವಾಗಿಯೂ ಅಲ್ಲಾಹ್ ಮತ್ತು ಅವನ ದೂತರು ಪ್ರವಾದಿಗೆ ಅನುಗ್ರಹಗಳನ್ನು ಬಯಸುತ್ತಾರೆ. ಎಲೈ ವಿಶ್ವಾಸಿಗಳೇ, ಅವರಿಗೆ ಅನುಗ್ರಹವೂ ಶಾಂತಿಯೂ ದೊರೆಯಲಿಕ್ಕೋಸ್ಕರ ನೀವು ಸಹ ಪ್ರಾರ್ಥಿಸಿರಿ.

إِنَّ اللَّهَ وَمَلَائِكَتَهُ يُصَلُّونَ عَلَى النَّبِيِّ ۚ يَا أَيُّهَا الَّذِينَ آمَنُوا صَلُّوا عَلَيْهِ وَسَلِّمُوا تَسْلِيمًا ﴿٥٦﴾

**58.** ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ಯಾರು ತೊಂದರೆಕೊಡುತ್ತಾರೋ, ನಿಶ್ಚಯವಾಗಿಯೂ ಅವರನ್ನು ಅಲ್ಲಾಹನು ಇಹದಲ್ಲೂ ಪರದಲ್ಲೂ ಶಪಿಸಿದ್ದಾನೆ. ಅವರಿಗೆ ಅಪಮಾನಕರವಾದ ಶಿಕ್ಷೆಯನ್ನು ಅವನು ಸಿದ್ಧಪಡಿಸಿಟ್ಟಿದ್ದಾನೆ.

إِنَّ الَّذِينَ يُؤْذُونَ اللَّهَ وَرَسُولَهُ لَعَنَهُمُ اللَّهُ فِي الدُّنْيَا وَالْآخِرَةِ وَأَعَدَّ لَهُمْ عَذَابًا مُهِينًا ﴿٥٧﴾

**59.** ಸತ್ಯವಿಶ್ವಾಸಿಗಳನ್ನೂ ಸತ್ಯವಿಶ್ವಾಸಿನಿಯರನ್ನೂ, ಅವರು ಯಾವುದೇ ತಪ್ಪನ್ನು ಮಾಡದಿರುವಾಗ (ಅವರನ್ನು) ತೊಂದರೆಗೊಳಪಡಿಸುವವರು, ದಿಟವಾಗಿಯೂ ಅಂಥವರು ಸುಳ್ಳನ್ನೂ ಸ್ಪಷ್ಟವಾದ ಪಾಪವನ್ನೂ ಹೊತ್ತುಕೊಂಡಿರುವರು.

وَالَّذِينَ يُؤْذُونَ الْمُؤْمِنِينَ وَالْمُؤْمِنَاتِ بِغَيْرِ مَا اكْتَسَبُوا فَقَدِ احْتَمَلُوا بُهْتَانًا وَإِثْمًا مُبِينًا ﴿٥٨﴾

**60.** ಎಲೈ ಪ್ರವಾದಿ, ನಿನ್ನ ಪತ್ನಿಯರೊಂದಿಗೂ ಪುತ್ರಿಯರೊಂದಿಗೂ ಸತ್ಯವಿಶ್ವಾಸಿಗಳ ಸ್ತ್ರೀಯರೊಂದಿಗೂ (ಅವರು ಹೊರಗೆ ಹೋಗುವಾಗ) ಅವರ ಮೇಲು ಹೊದಿಕೆಗಳನ್ನು ತಮ್ಮ ಶರೀರಗಳ ಮೇಲೆ ಹೊದ್ದುಕೊಳ್ಳಲಿಕ್ಕೆ ಹೇಳು. ಅದು ಅವರು ಗುರುತಿಸಲ್ಪಡಲು ಮತ್ತು ಪೀಡಿಸಲ್ಪಡದಿರಲು ಉಪಯುಕ್ತವಾಗಿದೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

يَٰٓأَيُّهَا ٱلنَّبِىُّ قُل لِّأَزْوَٰجِكَ وَبَنَاتِكَ وَنِسَآءِ ٱلْمُؤْمِنِينَ يُدْنِينَ عَلَيْهِنَّ مِن جَلَٰبِيبِهِنَّ ۚ ذَٰلِكَ أَدْنَىٰٓ أَن يُعْرَفْنَ فَلَا يُؤْذَيْنَ ۗ وَكَانَ ٱللَّهُ غَفُورًا رَّحِيمًا ﴿٦٠﴾

**61.** ಕಪಟ ವಿಶ್ವಾಸಿಗಳೂ ಹೃದಯಗಳಲ್ಲಿ ರೋಗವಿರುವವರೂ ಮದೀನದಲ್ಲಿ ಸುಳ್ಳುವಾರ್ತೆಗಳನ್ನು ಹರಡುವವರೂ ತಮ್ಮ ವರ್ತನೆಗಳನ್ನು ನಿಲ್ಲಿಸದಿದ್ದರೆ ಅವರ ವಿರುದ್ಧ ನಾವು ನಿನ್ನನ್ನು ಸಿದ್ಧಗೊಳಿಸುವೆವು. ಅನಂತರ ನಿನ್ನ ನೆರೆಹೊರೆಯವರಾಗಿ ಅವರೆಂದಿಗೂ ಅಲ್ಲಿ (ಮದೀನದಲ್ಲಿ) ವಾಸಮಾಡಲಾರರು.

لَّئِن لَّمْ يَنتَهِ ٱلْمُنَٰفِقُونَ وَٱلَّذِينَ فِى قُلُوبِهِم مَّرَضٌ وَٱلْمُرْجِفُونَ فِى ٱلْمَدِينَةِ لَنُغْرِيَنَّكَ بِهِمْ ثُمَّ لَا يُجَاوِرُونَكَ فِيهَآ إِلَّا قَلِيلًا ﴿٦١﴾

**62.** ಅವರು ಶಪಿಸಲ್ಪಟ್ಟವರು. ಅವರನ್ನು ಕಂಡಲ್ಲಿ ಹಿಡಿದು ಕೊಂದುಹಾಕಬೇಕಾಗಿದೆ.

مَّلْعُونِينَ ۖ أَيْنَمَا ثُقِفُوٓا۟ أُخِذُوا۟ وَقُتِّلُوا۟ تَقْتِيلًا ﴿٦٢﴾

**63.** ಮುಂಚೆ ಗತಿಸಿದವರಿಗೆ ಸಂಬಂಧಿಸಿ ಇದು ಅಲ್ಲಾಹನ ಕ್ರಮವಾಗಿದೆ. ಅಲ್ಲಾಹನ ಕ್ರಮದಲ್ಲಿ ನೀನು ಯಾವ ಬದಲಾವಣೆಯನ್ನೂ ಕಾಣಲಾರೆ.

سُنَّةَ ٱللَّهِ فِى ٱلَّذِينَ خَلَوْا۟ مِن قَبْلُ ۖ وَلَن تَجِدَ لِسُنَّةِ ٱللَّهِ تَبْدِيلًا ﴿٦٣﴾

**64.** ಆ ನಿಗದಿತ ವೇಳೆಯ ಕುರಿತು ಜನರು ನಿನ್ನೊಡನೆ ಕೇಳುತ್ತಾರೆ. 'ಅದರ ಜ್ಞಾನ ಅಲ್ಲಾಹನ ಬಳಿ ಮಾತ್ರವೇ ಇದೆ' ಎಂದು ಹೇಳು. ಆ ನಿಗದಿತ ವೇಳೆ ಬಹಳ ಸಮೀಪವಾಗಿರಲೂಬಹುದು ಎಂಬುದರ ಕುರಿತು ನಿನಗೆ ಹೇಗೆ ತಿಳಿದೀತು?

يَسْـَٔلُكَ ٱلنَّاسُ عَنِ ٱلسَّاعَةِ ۖ قُلْ إِنَّمَا عِلْمُهَا عِندَ ٱللَّهِ ۚ وَمَا يُدْرِيكَ لَعَلَّ ٱلسَّاعَةَ تَكُونُ قَرِيبًا ﴿٦٤﴾

**65.** ನಿಸ್ಸಂದೇಹವಾಗಿಯೂ ಅಲ್ಲಾಹನು ಅವಿಶ್ವಾಸಿಗಳನ್ನು ಶಪಿಸಿದ್ದಾನೆ. ಅವರಿಗೋಸ್ಕರ ಅವನು ಜ್ವಲಿಸುವ ಅಗ್ನಿಯನ್ನು ಸಿದ್ಧಗೊಳಿಸಿಟ್ಟಿದ್ದಾನೆ.

إِنَّ ٱللَّهَ لَعَنَ ٱلْكَٰفِرِينَ وَأَعَدَّ لَهُمْ سَعِيرًا ﴿٦٥﴾

**66.** ಅವರು ಅಲ್ಲೇ ವಾಸಿಸುವರು. ಅವರಿಗೆ ಅಲ್ಲಿ ಯಾವ ಮಿತ್ರನೂ ಯಾವ ಸಹಾಯಕನೂ ಇರಲಿಕ್ಕಿಲ್ಲ.

خَٰلِدِينَ فِيهَآ أَبَدًا ۖ لَّا يَجِدُونَ وَلِيًّا وَلَا نَصِيرًا ﴿٦٦﴾





**67.** ಅವರ ಮುಖಂಡರು ಅಗ್ನಿಯಲ್ಲಿ ಹೊರಳಿಸಲ್ಪಡುವಾಗ ಅವರು, 'ಅಕಟಾ, ನಾವು ಅಲ್ಲಾಹನನ್ನೂ (ಅವನ) ಸಂದೇಶವಾಹಕನನ್ನೂ ಅನುಸರಿಸಿರುತ್ತಿದ್ದರೆ!' ಎಂದು ಪ್ರಲಾಪಿಸುವರು.

يَوْمَ تُقَلَّبُ وُجُوهُهُمْ فِى ٱلنَّارِ يَقُولُونَ يَٰلَيْتَنَآ أَطَعْنَا ٱللَّهَ وَأَطَعْنَا ٱلرَّسُولَا۠ ﴿٦٧﴾

**68.** ಅವರು (ಜನ ಸಾಮಾನ್ಯರು) ಹೇಳುವರು: 'ನಮ್ಮ ಪ್ರಭೂ, ನಮ್ಮ ಮುಖಂಡರನ್ನೂ ನಮ್ಮ ಹಿರಿಯರನ್ನೂ ನಾವು ಹಿಂಬಾಲಿಸಿಬಿಟ್ಟೆವು. ಹಾಗೆ ಅವರು ನಮ್ಮನ್ನು ದಾರಿಗೆಡಿಸಿದರು.

وَقَالُوا۟ رَبَّنَآ إِنَّآ أَطَعْنَا سَادَتَنَا وَكُبَرَآءَنَا فَأَضَلُّونَا ٱلسَّبِيلَا۠ ﴿٦٨﴾

**69.** 'ನಮ್ಮ ಪ್ರಭೂ, ಅವರಿಗೆ ನೀನು ಇಮ್ಮಡಿ ಶಿಕ್ಷೆ ಕೊಟ್ಟು ದೊಡ್ಡ ಶಾಪಕ್ಕೆ ಅವರನ್ನು ಗುರಿಪಡಿಸು.'

رَبَّنَآ ءَاتِهِمْ ضِعْفَيْنِ مِنَ ٱلْعَذَابِ وَٱلْعَنْهُمْ لَعْنًا كَبِيرًا ﴿٦٩﴾

**70.** ಸತ್ಯವಿಶ್ವಾಸಿಗಳೇ, ಮೂಸಾರನ್ನು ಪೀಡಿಸಿದವರಂತೆ ನೀವು ಆಗಬಾರದು. ಅವರ ಆಪಾದನೆಯಿಂದಾದರೋ ಅಲ್ಲಾಹನು ಅವರನ್ನು (ಮೂಸಾರನ್ನು) ಮುಕ್ತಗೊಳಿಸಿದ್ದಾನೆ. ಅಲ್ಲಾಹನ ದೃಷ್ಟಿಯಲ್ಲಿ ಅವರು ಗೌರವಾನ್ವಿತರಾಗಿದ್ದರು.

يَٰٓأَيُّهَا ٱلَّذِينَ ءَامَنُوا۟ لَا تَكُونُوا۟ كَٱلَّذِينَ ءَاذَوْا۟ مُوسَىٰ فَبَرَّأَهُ ٱللَّهُ مِمَّا قَالُوا۟ ۚ وَكَانَ عِندَ ٱللَّهِ وَجِيهًا ﴿٧٠﴾

**71.** ಎಲೈ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನ ಭಯಭಕ್ತಿ ಇರಿಸಿಕೊಳ್ಳಿರಿ; ಋಜುವಾದ ಮಾತನ್ನಾಡಿರಿ.

يَٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ وَقُولُوا۟ قَوْلًا سَدِيدًا ﴿٧١﴾

**72.** (ಹಾಗೆ ಮಾಡಿದರೆ) ಅವನು ನಿಮ್ಮ ಕೃತ್ಯಗಳನ್ನು ನಿಮಗೆ ಉತ್ತಮಗೊಳಿಸುವನು ಮತ್ತು ನಿಮ್ಮ ಪಾಪಗಳನ್ನು ನಿಮಗೆ ಕ್ಷಮಿಸುವನು. ಯಾರು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಅನುಸರಿಸುತ್ತಾನೋ ಅವನು ಖಂಡಿತವಾಗಿಯೂ ಯಶಸ್ಸುಗಳಿಸುವನು.

يُصْلِحْ لَكُمْ أَعْمَٰلَكُمْ وَيَغْفِرْ لَكُمْ ذُنُوبَكُمْ ۗ وَمَن يُطِعِ ٱللَّهَ وَرَسُولَهُۥ فَقَدْ فَازَ فَوْزًا عَظِيمًا ﴿٧٢﴾

**73.** ನಾವು ಈ ಅಮಾನತನ್ನು[388] ಆಕಾಶಗಳ, ಭೂಮಿಯ ಮತ್ತು ಪರ್ವತಗಳ ಮುಂದೆ ಇರಿಸಿದೆವು. ಆದರೆ ಅದನ್ನು ವಹಿಸಿಕೊಳ್ಳಲು ಅವುಗಳು ಒಪ್ಪದೆ ಭಯಭೀತಗೊಂಡವು. ಆದರೆ ಮನುಷ್ಯನು ಅದನ್ನು

إِنَّا عَرَضْنَا ٱلْأَمَانَةَ عَلَى ٱلسَّمَٰوَٰتِ وَٱلْأَرْضِ وَٱلْجِبَالِ فَأَبَيْنَ أَن

388. ಶರೀಅತ್ ಅಥವಾ ದೈವಿಕ ನಿಯಮ ಸಂಹಿತೆ.

يَّحْمِلْنَهَا وَ اَشْفَقْنَ مِنْهَا وَ حَمَلَهَا الْاِنْسَانُ ؕ اِنَّهٗ كَانَ ظَلُوْمًا جَهُوْلًا ﴿۷۲﴾

**ವಹಿಸಿಕೊಂಡನು. ದಿಟವಾಗಿಯೂ ಅವನು** (ತನಗೆಯೇ) **ಅನ್ಯಾಯವೆಸಗುವವನೂ ಪರಿಣಾಮವನ್ನು ನಿರ್ಲಕ್ಷ್ಯ ಮಾಡುವವನೂ ಆಗಿದ್ದಾನೆ.**

لِّيُعَذِّبَ اللّٰهُ الْمُنٰفِقِيْنَ وَ الْمُنٰفِقٰتِ وَ الْمُشْرِكِيْنَ وَ الْمُشْرِكٰتِ وَ يَتُوْبَ اللّٰهُ عَلَى الْمُؤْمِنِيْنَ وَ الْمُؤْمِنٰتِ ؕ وَ كَانَ اللّٰهُ غَفُوْرًا رَّحِيْمًا ﴿۷۳﴾

ع

**74. ತತ್ಫಲವಾಗಿ ಅಲ್ಲಾಹನು ಕಪಟ ವಿಶ್ವಾಸಿಗಳನ್ನೂ ಕಪಟ ವಿಶ್ವಾಸಿನಿಯರನ್ನೂ ಬಹುದೇವಾರಾಧಕರಾದ ಪುರುಷರನ್ನೂ ಬಹುದೇವಾರಾಧಕರಾದ ಸ್ತ್ರೀಯರನ್ನೂ ಶಿಕ್ಷಿಸುವನು. ಸತ್ಯ ವಿಶ್ವಾಸಿಗಳ ಮತ್ತು ಸತ್ಯವಿಶ್ವಾಸಿನಿಯರ ಕಡೆಗೆ ಅಲ್ಲಾಹನು ಕರುಣೆಯಿಂದ ತಿರುಗುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

سُورَةُ سَبَإٍ مَّكِّيَّةٌ وَّهِيَ مَعَ الْبَسْمَلَةِ خَمْسٌ وَّخَمْسُوْنَ اٰيَةً وَّسِتَّةُ رُكُوْعَاتٍ

## 34. ಸಬಅ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 55 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲವೂ ಯಾರಿಗೆ ಸೇರುತ್ತವೆಯೋ ಆ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು. ಪರಲೋಕದಲ್ಲೂ ಅವನಿಗೆಯೇ ಸರ್ವಸ್ತುತಿಸ್ತೋತ್ರಗಳು. ಅವನು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.**

اَلْحَمْدُ لِلّٰهِ الَّذِيْ لَهٗ مَا فِي السَّمٰوٰتِ وَمَا فِي الْاَرْضِ وَلَهُ الْحَمْدُ فِي الْاٰخِرَةِ ؕ وَهُوَ الْحَكِيْمُ الْخَبِيْرُ ②

**3. ಭೂಮಿಯೊಳಗೆ ಪ್ರವೇಶಿಸುವ ಹಾಗೂ ಅದರಿಂದ ಹೊರಗೆ ಹೋಗುವ ಮತ್ತು ಆಕಾಶದಿಂದ ಇಳಿಯುವ ಹಾಗೂ ಅಲ್ಲಿಗೆ ಮೇಲೇರಿ ಹೋಗುವ ಎಲ್ಲವುಗಳ ಬಗ್ಗೆ ಅವನು ತಿಳಿಯುತ್ತಾನೆ. ಅವನು ಕಾರುಣ್ಯವಂತನೂ ಅತ್ಯಂತ ಕ್ಷಮಾಶೀಲನೂ ಆಗಿದ್ದಾನೆ.**

يَعْلَمُ مَا يَلِجُ فِي الْاَرْضِ وَمَا يَخْرُجُ مِنْهَا وَمَا يَنْزِلُ مِنَ السَّمَآءِ وَمَا يَعْرُجُ فِيْهَا ؕ وَهُوَ الرَّحِيْمُ الْغَفُوْرُ ③

**4. 'ಆ** (ನಾಶದ) **ಘಳಿಗೆ ನಮಗೆ ಬರಲಾರದು' ಎಂದು ಅವಿಶ್ವಾಸಿಗಳು ಹೇಳುತ್ತಾರೆ. ನೀನು ಹೇಳು: 'ಹಾಗಲ್ಲ; ನನ್ನ ಪ್ರಭುವಿನಾಣೆ, ಅದು ಖಂಡಿತವಾಗಿಯೂ ನಿಮಗೆ ಬರುವುದು.'** (ಅವನು) **ಅಗೋಚರವಾದುದನ್ನು ಬಲ್ಲವನಾಗಿದ್ದಾನೆ. ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಒಂದು ಅಣುವಿನಷ್ಟಾದರೂ ಸರಿ, ಅವನಿಂದ ಅದು ಗೋಪ್ಯವಾಗಿರುವುದಿಲ್ಲ; ಅದಕ್ಕಿಂತ ಚಿಕ್ಕದಾದರೂ ದೊಡ್ಡದಾದರೂ ಕೂಡ. ಅವೆಲ್ಲವೂ ಸ್ಪಷ್ಟವಾದೊಂದು ಗ್ರಂಥದಲ್ಲಿ ದಾಖಲಿಸಲ್ಪಟ್ಟಿವೆ.**

وَقَالَ الَّذِيْنَ كَفَرُوْا لَا تَاْتِيْنَا السَّاعَةُ ؕ قُلْ بَلٰى وَرَبِّيْ لَتَاْتِيَنَّكُمْ ۙ عٰلِمِ الْغَيْبِ ۚ لَا يَعْزُبُ عَنْهُ مِثْقَالُ ذَرَّةٍ فِي السَّمٰوٰتِ وَلَا فِي الْاَرْضِ وَلَآ اَصْغَرُ مِنْ ذٰلِكَ وَلَآ اَكْبَرُ اِلَّا فِيْ كِتٰبٍ مُّبِيْنٍ ③





**5. ಅದು, ವಿಶ್ವಾಸಹೊಂದಿ ಸತ್ಕರ್ಮ ಮಾಡುವವರಿಗೆ ಅವನು ಪ್ರತಿಫಲ ನೀಡಲಿಕ್ಕೋಸ್ಕರವಾಗಿದೆ. ಅವರಿಗೆ ಕ್ಷಮಾದಾನವೂ ಗೌರವಾರ್ಹ ಆಹಾರವೂ ಲಭಿಸುವುವು.**

لِّيَجْزِيَ الَّذِيْنَ اٰمَنُوْا وَعَمِلُوا الصّٰلِحٰتِ ؕ اُولٰٓئِكَ لَهُمْ مَّغْفِرَةٌ وَّرِزْقٌ كَرِيْمٌ ④

**6.** (ನಮ್ಮ ಯೋಜನೆಗಳನ್ನು) **ನಿಷ್ಫಲಗೊಳಿಸುವ ಉದ್ದೇಶದಿಂದ ನಮ್ಮ ದೃಷ್ಟಾಂತಗಳಿಗೆ ವಿರುದ್ಧವಾಗಿ ಹೆಣಗಾಡುವವರಿಗೆ ಅವರ ಪಾಪಕೃತ್ಯ ನಿಮಿತ್ತ ಯಾತನಾಮಯವಾದ ಶಿಕ್ಷೆಯೂ ಇದೆ.**

وَالَّذِيْنَ سَعَوْ فِيْٓ اٰيٰتِنَا مُعٰجِزِيْنَ اُولٰٓئِكَ لَهُمْ عَذَابٌ مِّنْ رِّجْزٍ اَلِيْمٌ ⑤

**7. ನಿನಗೆ ನಿನ್ನ ಪ್ರಭುವಿನಿಂದ ಅವತೀರ್ಣವಾದುದು ಸತ್ಯವೆಂದೂ ಅದು ಪ್ರತಾಪಶಾಲಿಯೂ ಸ್ತುತ್ಯರ್ಹನೂ ಆದ ಅಲ್ಲಾಹನ ಪಥದೆಡೆಗೆ ಮಾರ್ಗದರ್ಶನ ಮಾಡುತ್ತದೆಂದೂ ಜ್ಞಾನ ನೀಡಲ್ಪಟ್ಟವರು ಮನಗಾಣುತ್ತಾರೆ.**

وَيَرَى الَّذِيْنَ اُوْتُوا الْعِلْمَ الَّذِيْٓ اُنْزِلَ اِلَيْكَ مِنْ رَّبِّكَ هُوَ الْحَقَّ ۙ وَيَهْدِيْٓ اِلٰى صِرَاطِ الْعَزِيْزِ الْحَمِيْدِ ⑥

**8. 'ನೀವು** (ಮರಣದ ಬಳಿಕ) **ಛಿನ್ನಭಿನ್ನವಾದರೆ, ಖಂಡಿತವಾಗಿಯೂ ನೀವೊಂದು ಹೊಸ ಸೃಷ್ಟಿಯಾಗಿ ಎಬ್ಬಿಸಲ್ಪಡುವಿರೆಂದು ನಿಮ್ಮೊಡನೆ ಹೇಳುವ ಓರ್ವನನ್ನು ನಿಮಗೆ ನಾವು ತೋರಿಸಲೇ?' ಎಂದು ಅವಿಶ್ವಾಸಿಗಳು** (ಪರಿಹಾಸ್ಯವಾಗಿ ಪರಸ್ಪರ) **ಹೇಳುತ್ತಾರೆ.**

وَقَالَ الَّذِيْنَ كَفَرُوْا هَلْ نَدُلُّكُمْ عَلٰى رَجُلٍ يُّنَبِّئُكُمْ اِذَا مُزِّقْتُمْ كُلَّ مُمَزَّقٍ ۙ اِنَّكُمْ لَفِيْ خَلْقٍ جَدِيْدٍ ⑦

**9. 'ಅವನು ಅಲ್ಲಾಹನ ನಾಮದಲ್ಲಿ ಸುಳ್ಳು ಸೃಷ್ಟಿಸಿ ಮಾಡಿ ಹೇಳುತ್ತಾನೆಯೇ? ಅಥವಾ ಅವನಿಗೆ ಮತಿಭ್ರಮೆ ಇದೆಯೇ?'** (ಎಂದು ಸಹ ಆ ಅವಿಶ್ವಾಸಿಗಳು ಕೇಳುತ್ತಾರೆ). **ಹಾಗಲ್ಲ; ಆದರೆ ಯಾರಿಗೆ ಪರಲೋಕದ ಬಗ್ಗೆ ವಿಶ್ವಾಸವಿಲ್ಲವೋ ಅವರು ಶಿಕ್ಷೆಗೆ ಗುರಿಯಾದವರೂ ದಾರಿತಪ್ಪಿ ಬಹಳ ದೂರ ಸಾಗಿದವರೂ ಆಗಿದ್ದಾರೆ.**

اَفْتَرٰى عَلَى اللّٰهِ كَذِبًا اَمْ بِهٖ جِنَّةٌ ؕ بَلِ الَّذِيْنَ لَا يُؤْمِنُوْنَ بِالْاٰخِرَةِ فِي الْعَذَابِ وَالضَّلٰلِ الْبَعِيْدِ ⑧

**10. ಆಕಾಶ ಮತ್ತು ಭೂಮಿಯಲ್ಲಿ ಅವರ ಮುಂದೆ ಮತ್ತು ಹಿಂದೆ ಇರುವುದನ್ನೆಲ್ಲ ಅವರು ಕಾಣುವುದಿಲ್ಲವೇ? ನಾವು ಬಯಸಿದರೆ ಭೂಮಿ ಅವರನ್ನು ನುಂಗಿಬಿಡುವಂತೆ ಅಥವಾ ಆಕಾಶದಿಂದ ಅವರ ಮೇಲೆ ವಿಪತ್ತು ಎರಗುವಂತೆ ಮಾಡುವೆವು. ಪಶ್ಚಾತ್ತಾಪಪಟ್ಟು ಮರಳುವ ಪ್ರತಿಯೊಬ್ಬ ದಾಸನಿಗೆ ನಿಸ್ಸಂದೇಹವಾಗಿಯೂ ಅದರಲ್ಲಿ ದೃಷ್ಟಾಂತವಿದೆ.**

اَفَلَمْ يَرَوْا اِلٰى مَا بَيْنَ اَيْدِيْهِمْ وَمَا خَلْفَهُمْ مِّنَ السَّمَآءِ وَالْاَرْضِ ؕ اِنْ نَّشَاْ نَخْسِفْ بِهِمُ الْاَرْضَ اَوْ نُسْقِطْ عَلَيْهِمْ كِسَفًا مِّنَ السَّمَآءِ ؕ اِنَّ فِيْ ذٰلِكَ لَاٰيَةً لِّكُلِّ عَبْدٍ مُّنِيْبٍ ⑨ ع

11. ದಿಟವಾಗಿಯೂ ನಾವು ದಾವೂದ್‌ರಿಗೆ ನಮ್ಮ ಕಡೆಯಿಂದ ಅನುಗ್ರಹವನ್ನು ಪ್ರದಾನ ಮಾಡಿದ್ದೇವೆ. ಎಲೈ ಪರ್ವತಗಳೇ[389] ವಿನಮ್ರತೆಯಿಂದ ನನ್ನ ಕಡೆಗೆ ಬಾಗಿರಿ. ಎಲೈ ಪಕ್ಷಿಗಳೇ,[390] ನೀವು ಸಹ (ಹಾಗೆಯೇ ಮಾಡಿರಿ). ನಾವು ಅವರಿಗೆ (ದಾವೂದ್‌ರಿಗೆ) ಉಕ್ಕನ್ನು ಮೃದುಗೊಳಿಸಿಕೊಟ್ಟೆವು.

وَلَقَدْ آتَيْنَا دَاوُودَ مِنَّا فَضْلًا ۖ يَا جِبَالُ أَوِّبِي مَعَهُ وَالطَّيْرَ ۖ وَأَلَنَّا لَهُ الْحَدِيدَ ﴿١١﴾

12. (ಅವರೊಡನೆ ಹೇಳಲಾಯಿತು:) 'ಪೂರ್ಣ ಅಳತೆಯ ಕವಚಗಳನ್ನು ರಚಿಸಿರಿ. (ಅವುಗಳಿಗೆ) ತಕ್ಕ ಗಾತ್ರದ ಕುಣಿಕೆಗಳನ್ನೂ ಮಾಡಿರಿ. ಸತ್ಕರ್ಮಗೈಯಿರಿ. ನಿಮ್ಮ ಕೃತ್ಯಗಳನ್ನೆಲ್ಲ ನಾನು ಚೆನ್ನಾಗಿ ಕಾಣುತ್ತೇನೆ.'

أَنِ اعْمَلْ سَابِغَاتٍ وَقَدِّرْ فِي السَّرْدِ ۖ وَاعْمَلُوا صَالِحًا ۖ إِنِّي بِمَا تَعْمَلُونَ بَصِيرٌ ﴿١٢﴾

13. ಸುಲೈಮಾನ್‌ರಿಗೆ ನಾವು ಗಾಳಿಯನ್ನು ಅಧೀನಗೊಳಿಸಿ ಕೊಟ್ಟೆವು. ಅದರ ಹೋಗುವ ಮತ್ತು ಬರುವ ಸಂಚಾರ ದೂರ ಒಂದೊಂದು ಮಾಸ ಕಾಲಾವಧಿಯಷ್ಟಾಗಿದೆ.[391] ಅವರಿಗೋಸ್ಕರ ನಾವು ಕರಗಿದ ತಾಮ್ರದ ಚಿಲುಮೆಯನ್ನು ಹರಿಸಿದೆವು. ಅವರ ಪ್ರಭುವಿನ ಆಜ್ಞಾನುಸಾರ ಅವರಿಗೋಸ್ಕರ ಕೆಲಸ ಮಾಡುವ ಕೆಲವು ಜಿನ್ನ್‌ಗಳನ್ನು (ಕುಶಲಕರ್ಮಿಗಳನ್ನು) ನಾವು ಅವರ ಅಧೀನಗೊಳಪಡಿಸಿದೆವು. ಅವರ ಪೈಕಿ ಯಾರಾದರೂ ನಮ್ಮ ಆಜ್ಞೆಗೆ ಮೀರಿ ವರ್ತಿಸಿದರೆ ಜ್ವಲಿಸುವ ಅಗ್ನಿಯ ಶಿಕ್ಷೆಯನ್ನು ಅವನು ಸವಿಯುವಂತೆ ಮಾಡುವೆವು.

وَلِسُلَيْمَانَ الرِّيحَ غُدُوُّهَا شَهْرٌ وَرَوَاحُهَا شَهْرٌ ۖ وَأَسَلْنَا لَهُ عَيْنَ الْقِطْرِ ۖ وَمِنَ الْجِنِّ مَنْ يَعْمَلُ بَيْنَ يَدَيْهِ بِإِذْنِ رَبِّهِ ۖ وَمَنْ يَزِغْ مِنْهُمْ عَنْ أَمْرِنَا نُذِقْهُ مِنْ عَذَابِ السَّعِيرِ ﴿١٣﴾

14. ಆ ಜಿನ್ನ್‌ಗಳು ಅವರಿಗೋಸ್ಕರ ಅವರು (ಸುಲೈಮಾನ್) ಇಚ್ಛಿಸುವ ಆರಾಧನಾಲಯಗಳನ್ನೂ ಆಕೃತಿಗಳನ್ನೂ ಜಲಾಶಯಗಳಂತಹ ಬೋಗುಣಿಗಳನ್ನೂ ಸ್ಥಿರಗೊಳಿಸಲಾದ ಅಡುಗೆ ಪಾತ್ರೆಗಳನ್ನೂ ನಿರ್ಮಿಸುತ್ತಿದ್ದರು. (ನಾವು ಹೇಳಿದೆವು:) 'ದಾವೂದ್ ಕುಟುಂಬವೇ, ನೀವು ಕೃತಜ್ಞತೆಯಿಂದ ವರ್ತಿಸಿರಿ.' ಆದರೆ ನನ್ನ ದಾಸರ ಪೈಕಿ ಕೃತಜ್ಞರು ಬಹಳ ವಿರಳ.

يَعْمَلُونَ لَهُ مَا يَشَاءُ مِنْ مَحَارِيبَ وَتَمَاثِيلَ وَجِفَانٍ كَالْجَوَابِ وَقُدُورٍ رَاسِيَاتٍ ۚ اعْمَلُوا آلَ دَاوُودَ شُكْرًا ۚ وَقَلِيلٌ مِنْ عِبَادِيَ الشَّكُورُ ﴿١٤﴾

389. ಪರ್ವತ ನಿವಾಸಿಗಳು ಎಂದು ತಾತ್ಪರ್ಯ.

390. ಆಧ್ಯಾತ್ಮಿಕ ಉನ್ನತಿಯನ್ನು ಪಡೆದ ಪರಿಶುದ್ಧರು.

391. ಪ್ರವಾದಿ ಸುಲೈಮಾನ್ (ಅ)ರ ಕಾಲದ ಹಾಯಿ ಹಡಗಿನ ಸಂಚಾರದ ಕುರಿತು ಇಲ್ಲಿ ಸೂಚಿಸಲಾಗಿದೆ.





15. ಹಾಗೆ ಅವರಿಗೆ (ಸುಲೈಮಾನರಿಗೆ) ನಾವು ಮರಣವನ್ನು ವಿಧಿಸಿದಾಗ, ಅವರ ಮರಣದ ಕುರಿತು ಅವರಿಗೆ (ಜನರಿಗೆ) ಸುಳಿವು ನೀಡಿದ್ದು ಅವರ (ಸುಲೈಮಾನರ) ಅಧಿಕಾರ ದಂಡವನ್ನು ಕೊರೆದು ತಿನ್ನುತ್ತಿದ್ದ ಭೂಮಿಯ ಒಂದು ಕೀಟ[392] ಹೊರತು ಬೇರೇನೂ ಆಗಿರಲಿಲ್ಲ. ಹಾಗೆ ಅದು (ಸುಲೈಮಾನರ ಆಡಳಿತೆ) ಪತನಗೊಂಡಾಗ, ತಮಗೆ ಪರೋಕ್ಷ ಸಂಗತಿಗಳು ತಿಳಿದಿರುತ್ತಿದ್ದರೆ ಅಪಮಾನಕರವಾದ ಈ ಶಿಕ್ಷೆಯನ್ನು ಅನುಭವಿಸಬೇಕಾಗುತ್ತಿರಲಿಲ್ಲವೆಂಬ ವಿಚಾರ ಜಿನ್ನುಗಳಿಗೆ ಸ್ಪಷ್ಟವಾಯಿತು.

فَلَمَّا قَضَيْنَا عَلَيْهِ الْمَوْتَ مَا دَلَّهُمْ عَلَىٰ مَوْتِهِ إِلَّا دَابَّةُ الْأَرْضِ تَأْكُلُ مِنْسَأَتَهُ ۖ فَلَمَّا خَرَّ تَبَيَّنَتِ الْجِنُّ أَنْ لَوْ كَانُوا يَعْلَمُونَ الْغَيْبَ مَا لَبِثُوا فِي الْعَذَابِ الْمُهِينِ ﴿١٥﴾

16. ನಿಸ್ಸಂದೇಹವಾಗಿಯೂ ಸಬಅ್ ಸಮುದಾಯದ ಜನರಿಗೆ ಅವರ ವಾಸಸ್ಥಳದಲ್ಲಿ ಒಂದು ದೃಷ್ಟಾಂತವಿತ್ತು - ಬಲಭಾಗದಲ್ಲಿ ಮತ್ತು ಎಡಭಾಗದಲ್ಲಿ ಎರಡು ತೋಟಗಳು. (ನಾವು ಅವರೊಡನೆ ಹೇಳಿದೆವು:) 'ನಿಮ್ಮ ಪ್ರಭು ನಿಮಗೆ ಏನನ್ನು ಒದಗಿಸಿದ್ದಾನೋ ಅದರಿಂದ ತಿನ್ನಿರಿ ಹಾಗೂ ಅವನಿಗೆ ಕೃತಜ್ಞರಾಗಿರಿ. (ನಿಮ್ಮದು) ಒಂದು ಉತ್ತಮವಾದ ಭೂಪ್ರದೇಶವಾಗಿದೆ. ಅತ್ಯಂತ ಕ್ಷಮಾಶೀಲನಾದ ಒಬ್ಬ ಪ್ರಭು ಸಹ (ನಿಮಗಿದ್ದಾನೆ).'

لَقَدْ كَانَ لِسَبَإٍ فِي مَسْكَنِهِمْ آيَةٌ ۖ جَنَّتَانِ عَنْ يَمِينٍ وَشِمَالٍ ۖ كُلُوا مِنْ رِزْقِ رَبِّكُمْ وَاشْكُرُوا لَهُ ۚ بَلْدَةٌ طَيِّبَةٌ وَرَبٌّ غَفُورٌ ﴿١٦﴾

17. ಆದರೆ ಅವರು ವಿಮುಖರಾದರು. ಆದ್ದರಿಂದ ವಿನಾಶಕಾರಿಯಾದೊಂದು ಪ್ರವಾಹವನ್ನು ನಾವು ಅವರ ಮೇಲೆ ಕಳುಹಿಸಿದೆವು. ಅವರ ಎರಡು ತೋಟಗಳನ್ನು ಕಹಿ ಹಣ್ಣುಗಳು, ಮುಳ್ಳು ಗಿಡಮರಗಳು ಮತ್ತು ಕೆಲವು ಬೋರಿ ಮರಗಳು ಇರುವ ಎರಡು ತೋಟಗಳಾಗಿ ಮಾರ್ಪಡಿಸಿದೆವು.

فَأَعْرَضُوا فَأَرْسَلْنَا عَلَيْهِمْ سَيْلَ الْعَرِمِ وَبَدَّلْنَاهُمْ بِجَنَّتَيْهِمْ جَنَّتَيْنِ ذَوَاتَيْ أُكُلٍ خَمْطٍ وَأَثْلٍ وَشَيْءٍ مِنْ سِدْرٍ قَلِيلٍ ﴿١٧﴾

392. دَابَّةُ الْأَرْضِ (ದಾಬ್ಬತುಲ್ ಅರ್ಳ್) = ಭೂಮಿಯ ಕೀಟ. ಇಲ್ಲಿ ಇದರ ತಾತ್ಪರ್ಯ ಪ್ರವಾದಿ ಸುಲೈಮಾನ್ (ಅ)ರ ಮರಣದ ಬಳಿಕ ಅಧಿಕಾರಕ್ಕೆ ಬಂದ ಅವರ ಮಗ ರಹ್‌ಬಯಾಂ ಆಗಿದ್ದಾನೆ. ಅವನು ಭೌತಿಕತೆಯಲ್ಲಿ ಮುಳುಗಿದ ಸುಖಲೋಲುಪನೂ ರಾಜ್ಯಾಡಳಿತೆಗೆ ಅನರ್ಹನೂ ಆಗಿದ್ದನು. ಆ ಕಾರಣದಿಂದ ಆಡಳಿತೆ ಹದಗೆಟ್ಟಿತು; ಗುಡ್ಡಗಾಡು ಪ್ರದೇಶದ ಜನರು ದಂಗೆಯೆದ್ದರು. ಆ ಬಳಿಕ ಸಾಮ್ರಾಜ್ಯ ಎರಡಾಗಿ ವಿಭಜಿಸಿಲ್ಪಟ್ಟಿತು. ಬೈಬಲ್ ಹಳೆಯ ಒಡಂಬಡಿಕೆ ೧ ಅರಸುಗಳು 12ನೇ ಅಧ್ಯಾಯದಲ್ಲಿ ಈ ಬಗ್ಗೆ ವಿವರಣೆ ಇದೆ. ಮನುಷ್ಯನ ಬಗ್ಗೆ "ದಾಬತ್" ಎಂಬ ಪ್ರಯೋಗ ಖುರ್‌ಆನಿನ ಬೇರೆಡೆಗಳಲ್ಲೂ ಕಾಣಬಹುದು.

**18.** ಅವರ ಕೃತಘ್ನತೆಯ ನಿಮಿತ್ತ ನಾವು ಅವರಿಗೆ ಈ ಪ್ರತಿಫಲವನ್ನು ಕೊಟ್ಟೆವು. ಕೃತಘ್ನರಿಗೆ ಹೊರತು ನಾವು (ಈ ರೀತಿಯ) ಪ್ರತಿಫಲವನ್ನು ನೀಡುವುದಿಲ್ಲ.

ذٰلِكَ جَزَيْنٰهُمْ بِمَا كَفَرُوْا ۚ وَهَلْ نُجٰزِيْٓ اِلَّا الْكَفُوْرَ ﴿١٨﴾

**19.** ಅವರಿಗೂ ನಾವು ಅನುಗ್ರಹಿಸಿದ ಪಟ್ಟಣಗಳಿಗೂ ಮಧ್ಯೆ ಎದ್ದು ಕಾಣುವಂತಹ (ಬೇರೆ ಕೆಲವು) ಪಟ್ಟಣಗಳನ್ನು ನಾವು ನೆಲೆಗೊಳಿಸಿದೆವು. ಆ ಪಟ್ಟಣಗಳ ಮಧ್ಯೆ ಸುಗಮ ಸಂಚಾರದ ಹಂತಗಳನ್ನು ನಾವು ವ್ಯವಸ್ಥೆಗೊಳಿಸಿದೆವು. 'ನೀವು ಅಲ್ಲಿ ರಾತ್ರಿ-ಹಗಲು ನಿರ್ಭೀತಿಯಿಂದ ಸಂಚರಿಸಿರಿ' (ಎಂದು ನಾವು ಹೇಳಿದೆವು).

وَجَعَلْنَا بَيْنَهُمْ وَبَيْنَ الْقُرَى الَّتِيْ بٰرَكْنَا فِيْهَا قُرًى ظَاهِرَةً وَّقَدَّرْنَا فِيْهَا السَّيْرَ ۚ سِيْرُوْا فِيْهَا لَيَالِيَ وَاَيَّامًا اٰمِنِيْنَ ﴿١٩﴾

**20.** ಆದರೆ ಅವರು ಹೇಳಿದರು: 'ನಮ್ಮ ಪ್ರಭೂ, ನಮ್ಮ ಸಂಚಾರದ (ಹಂತಗಳ) ಮಧ್ಯೆ ಇರುವ ದೂರವನ್ನು ನೀನು ಹೆಚ್ಚುಮಾಡು.'[393] ಹಾಗೆ ಅವರು ತಮಗೆಯೇ ಅನ್ಯಾಯವೆಸಗಿದರು. ಆದ್ದರಿಂದ ಅವರನ್ನು ನಾವು ಗತ ಕಾಲದ ಕಥೆಯಾಗಿ ಮಾಡಿಬಿಟ್ಟೆವು. ಅವರನ್ನು ನಾವು ಸಂಪೂರ್ಣವಾಗಿಯೂ ಛಿನ್ನಭಿನ್ನ ಮಾಡಿದೆವು. ಖಂಡಿತವಾಗಿಯೂ ಅದರಲ್ಲಿ ತಾಳ್ಮೆ ವಹಿಸುವವರಿಗೂ ಕೃತಜ್ಞರಿಗೂ ದೃಷ್ಟಾಂತಗಳಿವೆ.

فَقَالُوْا رَبَّنَا بٰعِدْ بَيْنَ اَسْفَارِنَا وَظَلَمُوْٓا اَنْفُسَهُمْ فَجَعَلْنٰهُمْ اَحَادِيْثَ وَمَزَّقْنٰهُمْ كُلَّ مُمَزَّقٍ ۚ اِنَّ فِيْ ذٰلِكَ لَاٰيٰتٍ لِّكُلِّ صَبَّارٍ شَكُوْرٍ ﴿٢٠﴾

**21.** ಇಬ್‌ಲೀಸನು (ಅವರ ಬಗ್ಗೆ) ತನ್ನ ಊಹೆ ಸರಿಯೆಂದು ಕಂಡನು. ಹಾಗೆ ಅವರು ಅವನನ್ನು ಅನುಸರಿಸಿದರು - ಸತ್ಯವಿಶ್ವಾಸಿಗಳ ಒಂದು ಪಂಗಡ ಹೊರತು.

وَلَقَدْ صَدَّقَ عَلَيْهِمْ اِبْلِيْسُ ظَنَّهٗ فَاتَّبَعُوْهُ اِلَّا فَرِيْقًا مِّنَ الْمُؤْمِنِيْنَ ﴿٢١﴾

**22.** ಅವನಿಗೆ ಅವರ (ವಿಶ್ವಾಸಿಗಳ) ಮೇಲೆ ಅಧಿಕಾರವೇನೂ ಇಲ್ಲ. ಆದರೆ ಪರಲೋಕದ ಬಗ್ಗೆ ನಂಬಿಕೆಯುಳ್ಳವರನ್ನು ಅದರ ಬಗ್ಗೆ ಸಂಶಯಪಡುವವರಿಂದ ನಾವು ವಿಂಗಡಿಸಿ ತಿಳಿಯಲಿಕ್ಕಾಗಿ (ಹೀಗೆ ಮಾಡಿದೆವು). ನಿನ್ನ ಪ್ರಭು ಸರ್ವ ವಸ್ತುಗಳ ಮೇಲ್ನೋಟಗಾರನಾಗಿದ್ದಾನೆ.

وَمَا كَانَ لَهٗ عَلَيْهِمْ مِّنْ سُلْطٰنٍ اِلَّا لِنَعْلَمَ مَنْ يُّؤْمِنُ بِالْاٰخِرَةِ مِمَّنْ هُوَ مِنْهَا فِيْ شَكٍّ ۗ وَرَبُّكَ عَلٰى كُلِّ شَيْءٍ حَفِيْظٌ ﴿٢٢﴾

393. ಇದು ಸಬಅ್ ಗೋತ್ರದವರು ತಮ್ಮ ಬಾಯಿಯಿಂದಲೇ ಹೇಳಿದ ಮಾತಾಗಿರಬೇಕೆಂದಿಲ್ಲ. ಅವರ ವರ್ತನೆಯಿಂದ ಹಾಗೆ ಸಂಭವಿಸಿತು. ಅಂದರೆ, ಅವರು ಅಲ್ಲಾಹನ ದೃಷ್ಟಾಂತಗಳನ್ನು ಅಲ್ಲಗಳೆಯುತ್ತಲೂ ಪ್ರವಾದಿಗಳನ್ನು ನಿರಾಕರಿಸುತ್ತಲೂ ಇದ್ದ ಕಾರಣ ಅವರ ಪಟ್ಟಣಗಳು ದೇವಶಿಕ್ಷೆಗೆ ಗುರಿಯಾಗಿ ನಿರ್ನಾಮವಾದವು. ಹಾಗೆ ಅವರಿಗೆ ಸಂಚಾರದ ಹಂತಗಳ ಅಂತರ ಹೆಚ್ಚಾಯಿತು ಮತ್ತು ಅವರ ಪ್ರಯಾಣ ಅಸುರಕ್ಷಿತವಾಯಿತು.





**23.** ಹೇಳು: 'ಅಲ್ಲಾಹನ ಹೊರತು (ದೇವರುಗಳೆಂದು) ನೀವು ತಿಳಿದುಕೊಂಡಿರುವವರನ್ನು ಕರೆದುಕೊಳ್ಳಿರಿ. ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಅಣುಮಾತ್ರದಷ್ಟನ್ನಾದರೂ ಅವರು ನಿಯಂತ್ರಿಸುವುದಿಲ್ಲ. ಎರಡರಲ್ಲೂ ಅವರಿಗೆ ಪಾಲುಗಾರಿಕೆಯೂ ಇಲ್ಲ. ಅವನಿಗೆ (ಅಲ್ಲಾಹನಿಗೆ) ಅವರ ಪೈಕಿ ಯಾರೂ ಸಹಾಯಕನಾಗಿಯೂ ಇಲ್ಲ.'

قُلِ ادْعُوا الَّذِيْنَ زَعَمْتُمْ مِّنْ دُوْنِ اللّٰهِ ۚ لَا يَمْلِكُوْنَ مِثْقَالَ ذَرَّةٍ فِى السَّمٰوٰتِ وَلَا فِى الْاَرْضِ وَمَا لَهُمْ فِيْهِمَا مِنْ شِرْكٍ وَّمَا لَهٗ مِنْهُمْ مِّنْ ظَهِيْرٍ ﴿٢٣﴾

**24.** ಅವನು ಯಾರಿಗೋಸ್ಕರ (ಶಿಫಾರಸು ಮಾಡಲು) ಅನುಮತಿ ನೀಡುತ್ತಾನೋ, ಆತನಿಗೆ ಹೊರತು ಅವನ ಸನ್ನಿಧಿಯಲ್ಲಿ ಶಿಫಾರಸು ಪ್ರಯೋಜನವಾಗಲಾರದು. ಹಾಗೆ ಅವರ ಹೃದಯಗಳು ಭಯಭೀತಿಯಿಂದ ಮುಕ್ತಗೊಂಡರೆ, 'ನಿಮ್ಮ ಪ್ರಭು ಏನು ಹೇಳಿದ್ದು?' ಎಂದು ಅವರು ಕೇಳುವರು. 'ಸತ್ಯವನ್ನು' ಎಂದು ಅವರು (ಪ್ರವಾದಿಗಳು) ಹೇಳುವರು. ಅವನು ಸರ್ವೋನ್ನತನೂ ಶ್ರೇಷ್ಠನೂ ಆಗಿದ್ದಾನೆ.

وَلَا تَنْفَعُ الشَّفَاعَةُ عِنْدَهٗٓ اِلَّا لِمَنْ اَذِنَ لَهٗ ۚ حَتّٰىٓ اِذَا فُزِّعَ عَنْ قُلُوْبِهِمْ قَالُوْا مَاذَا ۙ قَالَ رَبُّكُمْ ۚ قَالُوا الْحَقَّ ۚ وَهُوَ الْعَلِيُّ الْكَبِيْرُ ﴿٢٤﴾

**25.** ಕೇಳು: 'ನಿಮಗೆ ಆಕಾಶಗಳಿಂದಲೂ ಭೂಮಿಯಿಂದಲೂ ಆಹಾರ ಸಾಮಗ್ರಿ ನೀಡುವವನಾರು?' ಹೇಳು: 'ಅಲ್ಲಾಹನೇ. ಖಂಡಿತವಾಗಿಯೂ ಸತ್ಪಥದಲ್ಲಿ ಅಥವಾ ಸ್ಪಷ್ಟವಾದ ತಪ್ಪು ಹಾದಿಯಲ್ಲಿ ಒಂದೋ ನಾವಿದ್ದೇವೆ ಅಥವಾ ನೀವಿದ್ದೀರಿ.'

قُلْ مَنْ يَّرْزُقُكُمْ مِّنَ السَّمٰوٰتِ وَالْاَرْضِ ۚ قُلِ اللّٰهُ ۙ وَاِنَّآ اَوْ اِيَّاكُمْ لَعَلٰى هُدًى اَوْ فِيْ ضَلٰلٍ مُّبِيْنٍ ﴿٢٥﴾

**26.** ಹೇಳು: 'ನಮ್ಮ ಪಾಪದ ಬಗ್ಗೆ ನೀವು ಪ್ರಶ್ನಿಸಲ್ಪಡಲಾರಿರಿ. ನಿಮ್ಮ ಕೃತ್ಯಗಳ ಬಗ್ಗೆ ನಾವು ಸಹ ಪ್ರಶ್ನಿಸಲ್ಪಡಲಾರೆವು.'

قُلْ لَّا تُسْـَٔلُوْنَ عَمَّآ اَجْرَمْنَا وَلَا نُسْـَٔلُ عَمَّا تَعْمَلُوْنَ ﴿٢٦﴾

**27.** ಹೇಳು: 'ನಮ್ಮ ಪ್ರಭು ನಮ್ಮನ್ನೆಲ್ಲ ಒಟ್ಟುಗೂಡಿಸುವನು. ಅನಂತರ ನಮ್ಮ ಮಧ್ಯೆ ಸತ್ಯದ ಆಧಾರದಲ್ಲಿ ತೀರ್ಮಾನಿಸುವನು. ಅವನು ಸರ್ವಜ್ಞನಾದ ನ್ಯಾಯಾಧಿಪತಿಯಾಗಿದ್ದಾನೆ.'

قُلْ يَجْمَعُ بَيْنَنَا رَبُّنَا ثُمَّ يَفْتَحُ بَيْنَنَا بِالْحَقِّ ۗ وَهُوَ الْفَتَّاحُ الْعَلِيْمُ ﴿٢٧﴾

**28.** ಹೇಳು: 'ಅವನಿಗೆ (ಅಲ್ಲಾಹನಿಗೆ) ನೀವು ಕಲ್ಪಿಸಿದ ಸಹಭಾಗಿಗಳನ್ನು ನನಗೆ ತೋರಿಸಿಕೊಡಿರಿ. ಇಲ್ಲ. (ನಿಮ್ಮಿಂದ ಅದು ಸಾಧ್ಯವಿಲ್ಲ.) ಅವನೇ ಅಲ್ಲಾಹನು - ಪ್ರತಾಪವಂತನೂ ಬುದ್ಧಿಶಾಲಿಯೂ.'

قُلْ اَرُوْنِيَ الَّذِيْنَ اَلْحَقْتُمْ بِهٖ شُرَكَآءَ كَلَّا ۗ بَلْ هُوَ اللّٰهُ الْعَزِيْزُ الْحَكِيْمُ ﴿٢٨﴾

**29.** ನಾವು ನಿನ್ನನ್ನು ಸಕಲ ಮನುಷ್ಯರಿಗೆ ಶುಭವಾರ್ತೆ ನೀಡುವವನಾಗಿಯೂ ಮುನ್ನೆಚ್ಚರಿಕೆಗಾರನಾಗಿಯೂ ಕಳುಹಿಸಿದ್ದೇವೆ. ಆದರೆ ಹೆಚ್ಚಿನ ಜನರು ಮನವರಿಕೆ ಮಾಡುವುದಿಲ್ಲ.

وَمَآ أَرْسَلْنَٰكَ إِلَّا كَآفَّةً لِّلنَّاسِ بَشِيرًا وَنَذِيرًا وَلَٰكِنَّ أَكْثَرَ ٱلنَّاسِ لَا يَعْلَمُونَ ٢٨

**30.** 'ನೀವು ಸತ್ಯವಂತರೆಂದಾದರೆ, ಈ ವಾಗ್ದಾನ ಯಾವಾಗ (ಈಡೇರುವುದು)?' ಎಂದು ಅವರು ಕೇಳುತ್ತಾರೆ.

وَيَقُولُونَ مَتَىٰ هَٰذَا ٱلْوَعْدُ إِن كُنتُمْ صَٰدِقِينَ ٢٩

**31.** ಹೇಳು: 'ನಿಮಗೆ ಒಂದು ನಿಶ್ಚಿತ ದಿನದ ವಾಗ್ದಾನವಿದೆ. ಅದರಿಂದ ನೀವು ಒಂದು ಕ್ಷಣವಾದರೂ ಹಿಂದೆ ಉಳಿಯಲಾರಿರಿ. ಅದನ್ನು ದಾಟಿ ಒಂದು ಕ್ಷಣವಾದರೂ ಮುಂದೆ ಹೋಗಲಾರಿರಿ.'

قُل لَّكُم مِّيعَادُ يَوْمٍ لَّا تَسْتَـْٔخِرُونَ عَنْهُ سَاعَةً وَلَا تَسْتَقْدِمُونَ ٣٠

**32.** 'ನಾವು ಈ ಖುರ್‌ಆನನ್ನಾಗಲಿ ಇದಕ್ಕಿಂತ ಮುಂಚೆ ಇರುವುದನ್ನಾಗಲಿ ಎಂದಿಗೂ ನಂಬುವುದಿಲ್ಲ' ಎಂದು ಅವಿಶ್ವಾಸಿಗಳು ಹೇಳುತ್ತಾರೆ. ಅಧರ್ಮಿಗಳು ಪರಸ್ಪರ ದೋಷಾರೋಪಣೆ ಮಾಡುತ್ತಾ ತಮ್ಮ ಪ್ರಭುವಿನ ಮುಂದೆ ನಿಲ್ಲಿಸಲ್ಪಡುವ ಸಂದರ್ಭವನ್ನು ನೀನು ಕಾಣುವಿಯಾದರೆ! (ಆಗ) 'ನೀವು ಇಲ್ಲದಿರುತ್ತಿದ್ದರೆ ನಾವು ನಂಬುತ್ತಿದ್ದೆವು' ಎಂದು ಬಲಹೀನರೆಂದು ಗಣಿಸಲ್ಪಟ್ಟವರು (ಹಿಂಬಾಲಕರು) ಅಹಂಕಾರಿಗಳೊಡನೆ (ಮುಖಂಡರೊಡನೆ) ಹೇಳುವರು.

وَقَالَ ٱلَّذِينَ كَفَرُوا۟ لَن نُّؤْمِنَ بِهَٰذَا ٱلْقُرْءَانِ وَلَا بِٱلَّذِى بَيْنَ يَدَيْهِ ۗ وَلَوْ تَرَىٰٓ إِذِ ٱلظَّٰلِمُونَ مَوْقُوفُونَ عِندَ رَبِّهِمْ يَرْجِعُ بَعْضُهُمْ إِلَىٰ بَعْضٍ ٱلْقَوْلَ يَقُولُ ٱلَّذِينَ ٱسْتُضْعِفُوا۟ لِلَّذِينَ ٱسْتَكْبَرُوا۟ لَوْلَآ أَنتُمْ لَكُنَّا مُؤْمِنِينَ ٣١

**33.** (ಆಗ) ಬಲಹೀನರೆಂದು ಗಣಿಸಲ್ಪಟ್ಟವರೊಡನೆ ಅಹಂಕಾರಿಗಳು ಹೇಳುವರು: 'ಮಾರ್ಗದರ್ಶನ ನಿಮಗೆ ಬಂದ ಬಳಿಕ ಅದರಿಂದ ನಿಮ್ಮನ್ನು ತಡೆದುದು ನಾವೋ? ಅಲ್ಲ, ನೀವೇ ತಪ್ಪಿತಸ್ಥರು.'

قَالَ ٱلَّذِينَ ٱسْتَكْبَرُوا۟ لِلَّذِينَ ٱسْتُضْعِفُوٓا۟ أَنَحْنُ صَدَدْنَٰكُمْ عَنِ ٱلْهُدَىٰ بَعْدَ إِذْ جَآءَكُم ۖ بَلْ كُنتُم مُّجْرِمِينَ ٣٢

**34.** ಬಲಹೀನರೆಂದು ಗಣಿಸಲ್ಪಟ್ಟವರು ಅಹಂಕಾರಿಗಳೊಡನೆ, 'ಅಲ್ಲ; ಅಲ್ಲಾಹನನ್ನು ನಾವು ನಿರಾಕರಿಸಬೇಕೆಂದೂ ಅವನಿಗೆ ಸರಿಸಾಟಿಗಳನ್ನು ಕಲ್ಪಿಸಬೇಕೆಂದೂ ನೀವು ನಮಗೆ ಆದೇಶಿಸುತ್ತಾ ರಾತ್ರಿ ಹಗಲು ನೀವು

وَقَالَ ٱلَّذِينَ ٱسْتُضْعِفُوا۟ لِلَّذِينَ ٱسْتَكْبَرُوا۟ بَلْ مَكْرُ ٱلَّيْلِ وَٱلنَّهَارِ إِذْ تَأْمُرُونَنَآ أَن نَّكْفُرَ بِٱللَّهِ وَ





ಕುತಂತ್ರ ಹೂಡಿದಿರಿ' ಎಂದು ಹೇಳುವರು. ಶಿಕ್ಷೆಯನ್ನು ಕಂಡರೆ ಅವರು ತಮ್ಮ ದುಃಖವನ್ನು ಅಡಗಿಸಿಡುವರು. ಅವಿಶ್ವಾಸಿಗಳ ಕೊರಳುಗಳಿಗೆ ನಾವು ಸಂಕೋಲೆಯನ್ನು ತೊಡಿಸುವೆವು. ಅವರ ಕೃತ್ಯಗಳಿಗೆ ತಕ್ಕುದಾದ ಪ್ರತಿಫಲವನ್ನು ಹೊರತು ಅವರಿಗೆ ಬೇರೇನು ನೀಡಲಾಗುವುದು?

نَجْعَلَ لَهُۥٓ أَندَادًا ۚ وَأَسَرُّوا۟ ٱلنَّدَامَةَ لَمَّا رَأَوُا۟ ٱلْعَذَابَ ۚ وَجَعَلْنَا ٱلْأَغْلَٰلَ فِىٓ أَعْنَاقِ ٱلَّذِينَ كَفَرُوا۟ ۚ هَلْ يُجْزَوْنَ إِلَّا مَا كَانُوا۟ يَعْمَلُونَ ٣٣

**35.** ಯಾವುದೇ ನಾಡಿಗೆ ನಾವು ಮುನ್ನೆಚ್ಚರಿಕೆಗಾರನನ್ನು ಕಳುಹಿಸಿದಾಗ ಅಲ್ಲಿಯ ಸುಖಲೋಲುಪರಾದ ಐಶ್ವರ್ಯವಂತರು, 'ನೀವು ಯಾವ ಉದ್ದೇಶಾರ್ಥ ಕಳುಹಿಸಲ್ಪಟ್ಟಿದ್ದೀರೋ ಅದನ್ನು ನಾವು ನಿರಾಕರಿಸುತ್ತೇವೆ' ಎಂದು ಹೇಳದೆ ಇರಲಿಲ್ಲ.

وَمَآ أَرْسَلْنَا فِى قَرْيَةٍ مِّن نَّذِيرٍ إِلَّا قَالَ مُتْرَفُوهَآ إِنَّا بِمَآ أُرْسِلْتُم بِهِۦ كَٰفِرُونَ ٣٤

**36.** 'ನಮಗೆ ಹೆಚ್ಚು ಸಂಪತ್ತು ಮತ್ತು ಸಂತಾನಗಳಿವೆ. ನಾವು ಶಿಕ್ಷೆಗೆ ಗುರಿಯಾಗಲಾರೆವು' ಎಂದು ಸಹ ಅವರು ಹೇಳಿದರು.

وَقَالُوا۟ نَحْنُ أَكْثَرُ أَمْوَٰلًا وَأَوْلَٰدًا ۚ وَمَا نَحْنُ بِمُعَذَّبِينَ ٣٥

**37.** ಹೇಳು: 'ನಿಶ್ಚಯವಾಗಿಯೂ ನನ್ನ ಪ್ರಭು ತಾನು ಇಚ್ಛಿಸುವವನಿಗೆ ಆಹಾರವನ್ನು ಹೆಚ್ಚಿಸಿ ಕೊಡುತ್ತಾನೆ; ಕಡಿತವೂ ಮಾಡುತ್ತಾನೆ. ಆದರೆ ಹೆಚ್ಚಿನ ಜನರು ಮನವರಿಕೆ ಮಾಡುವುದಿಲ್ಲ.'

قُلْ إِنَّ رَبِّى يَبْسُطُ ٱلرِّزْقَ لِمَن يَشَآءُ وَيَقْدِرُ وَلَٰكِنَّ أَكْثَرَ ٱلنَّاسِ لَا يَعْلَمُونَ ٣٦

**38.** ನಿಮ್ಮ ಸಂಪತ್ತುಗಳಾಗಲಿ ನಿಮ್ಮ ಸಂತಾನಗಳಾಗಲಿ ಪದವಿಯಲ್ಲಿ ನಿಮ್ಮನ್ನು ನಮ್ಮ ಬಳಿಗೆ ಸಮೀಪಗೊಳಿಸಲಾರವು. ಆದರೆ ಯಾರು ವಿಶ್ವಾಸ ಹೊಂದಿ ಸತ್ಕರ್ಮ ನಿರತರಾಗಿರುತ್ತಾರೋ, ಅವರ ಕರ್ಮಗಳಿಗೋಸ್ಕರ ಅವರಿಗೆ ಇಮ್ಮಡಿ ಪ್ರತಿಫಲವಿದೆ. ಅವರು ಉನ್ನತವಾದ ಮಹಲುಗಳಲ್ಲಿ ಶಾಂತಿಚಿತ್ತರಾಗಿ ವಾಸಿಸುವರು.

وَمَآ أَمْوَٰلُكُمْ وَلَآ أَوْلَٰدُكُم بِٱلَّتِى تُقَرِّبُكُمْ عِندَنَا زُلْفَىٰٓ إِلَّا مَنْ ءَامَنَ وَعَمِلَ صَٰلِحًا فَأُو۟لَٰٓئِكَ لَهُمْ جَزَآءُ ٱلضِّعْفِ بِمَا عَمِلُوا۟ وَهُمْ فِى ٱلْغُرُفَٰتِ ءَامِنُونَ ٣٧

**39.** ನಮ್ಮ ದೃಷ್ಟಾಂತಗಳ ವಿಚಾರದಲ್ಲಿ ನಮ್ಮನ್ನು ಪರಾಜಿತಗೊಳಿಸಲು ಯಾರು ಪ್ರಯತ್ನಿಸುತ್ತಾರೋ, ಅವರನ್ನು ಶಿಕ್ಷೆಯ ಮುಂದೆ ಹಾಜರುಪಡಿಸಲಾಗುವುದು.

وَٱلَّذِينَ يَسْعَوْنَ فِىٓ ءَايَٰتِنَا مُعَٰجِزِينَ أُو۟لَٰٓئِكَ فِى ٱلْعَذَابِ مُحْضَرُونَ ٣٨

**40.** ಹೇಳು: 'ನಿಶ್ಚಯವಾಗಿಯೂ ನನ್ನ ಪ್ರಭು ತನ್ನ ದಾಸರಲ್ಲಿ ತಾನಿಚ್ಛಿಸುವವರಿಗೆ ಆಹಾರವನ್ನು ವೃದ್ಧಿಗೊಳಿಸುತ್ತಾನೆ. ಹಾಗೆಯೇ ಕಡಿತವೂ ಮಾಡುತ್ತಾನೆ. ನೀವು ಏನನ್ನಾದರೂ (ಅಲ್ಲಾಹನ ಮಾರ್ಗದಲ್ಲಿ) ವ್ಯಯಮಾಡಿದರೆ ಅವನು ಅದಕ್ಕೆ ಪ್ರತಿಫಲ ನೀಡುವನು. ಅವನು ಅನ್ನದಾತರಲ್ಲಿ ಅತ್ಯುತ್ತಮನು.'

قُلْ إِنَّ رَبِّي يَبْسُطُ الرِّزْقَ لِمَن يَشَاءُ مِنْ عِبَادِهِ وَيَقْدِرُ لَهُ ۚ وَمَا أَنفَقْتُم مِّن شَيْءٍ فَهُوَ يُخْلِفُهُ ۖ وَهُوَ خَيْرُ الرَّازِقِينَ ﴿٤٠﴾

**41.** ಅವರೆಲ್ಲರನ್ನೂ ಅವನು ಒಂದುಗೂಡಿಸುವ ದಿನ! ಅಂದು ಅವನು ದೇವದೂತರೊಡನೆ 'ಏನು, ಇವರು ನಿಮ್ಮನ್ನು ಆರಾಧಿಸುತ್ತಿದ್ದರೇ?' ಎಂದು ಕೇಳುವನು.

وَيَوْمَ يَحْشُرُهُمْ جَمِيعًا ثُمَّ يَقُولُ لِلْمَلَائِكَةِ أَهَٰؤُلَاءِ إِيَّاكُمْ كَانُوا يَعْبُدُونَ ﴿٤١﴾

**42.** ಅವರು (ದೇವದೂತರು), 'ನೀನು ಪರಿಶುದ್ಧನಾಗಿರುವೆ. ಅವರ ವಿರುದ್ಧ ನೀನೇ ನಮ್ಮ ರಕ್ಷಕ. ಅವರಾದರೋ ಜಿನ್ನುಗಳನ್ನು ಆರಾಧಿಸುತ್ತಿದ್ದರು. ಅವರಲ್ಲಿ ಹೆಚ್ಚಿನವರು ಅವರಲ್ಲಿ (ಜಿನ್ನುಗಳಲ್ಲಿ) ನಂಬಿಕೆಯುಳ್ಳವರಾಗಿದ್ದಾರೆ' ಎಂದು ಹೇಳುವರು.

قَالُوا سُبْحَانَكَ أَنتَ وَلِيُّنَا مِن دُونِهِم ۖ بَلْ كَانُوا يَعْبُدُونَ الْجِنَّ ۖ أَكْثَرُهُم بِهِم مُّؤْمِنُونَ ﴿٤٢﴾

**43.** 'ಇಂದು ನಿಮಗೆ ಪರಸ್ಪರ ಉಪಕಾರ ಅಥವಾ ಉಪದ್ರ ಮಾಡಲಿಕ್ಕೆ ಸಾಧ್ಯವಿಲ್ಲ.' (ಎಂದು ಅವರೊಡನೆ ಹೇಳಲಾಗುವುದು.) ದುಷ್ಕರ್ಮಿಗಳೊಡನೆ ನಾವು ಹೇಳುವೆವು: 'ನೀವು ಅಲ್ಲಗಳೆಯುತ್ತಿದ್ದ ನರಕಶಿಕ್ಷೆಯನ್ನು ಅನುಭವಿಸಿರಿ.'

فَالْيَوْمَ لَا يَمْلِكُ بَعْضُكُمْ لِبَعْضٍ نَّفْعًا وَلَا ضَرًّا وَنَقُولُ لِلَّذِينَ ظَلَمُوا ذُوقُوا عَذَابَ النَّارِ الَّتِي كُنتُم بِهَا تُكَذِّبُونَ ﴿٤٣﴾

**44.** ನಮ್ಮ ಸುಸ್ಪಷ್ಟವಾದ ದೃಷ್ಟಾಂತಗಳು ಅವರಿಗೆ ವಿವರಿಸಿ ಹೇಳಲ್ಪಡುವಾಗ ಅವರು, 'ನಿಮ್ಮ ತಂದೆ ತಾತಂದಿರು ಏನನ್ನು ಆರಾಧಿಸುತ್ತಿದ್ದರೋ ಅದರಿಂದ ನಿಮ್ಮನ್ನು ವಿಮುಖಗೊಳಿಸುವ ಒಬ್ಬ ಮನುಷ್ಯ ಇವನಾಗಿದ್ದಾನೆ.' ಎಂದು ಹೇಳುತ್ತಾರೆ. 'ಇದೊಂದು ಸುಳ್ಳು ಸೃಜನೆ ಮಾತ್ರವಾಗಿದೆ' ಎಂದು ಸಹ ಅವರು ಹೇಳುತ್ತಾರೆ. ತಮ್ಮ ಬಳಿಗೆ ಸತ್ಯದ ಆಗಮನವಾದಾಗ ಆ ಬಗ್ಗೆ ಅವಿಶ್ವಾಸಿಗಳು, 'ಇದು ಸುಸ್ಪಷ್ಟವಾದ ಮೋಸ ಹೊರತು ಬೇರೇನೂ ಅಲ್ಲ' ಎಂದು ಸಹ ಹೇಳುತ್ತಾರೆ.

وَإِذَا تُتْلَىٰ عَلَيْهِمْ آيَاتُنَا بَيِّنَاتٍ قَالُوا مَا هَٰذَا إِلَّا رَجُلٌ يُرِيدُ أَن يَصُدَّكُمْ عَمَّا كَانَ يَعْبُدُ آبَاؤُكُمْ وَقَالُوا مَا هَٰذَا إِلَّا إِفْكٌ مُّفْتَرًى ۚ وَقَالَ الَّذِينَ كَفَرُوا لِلْحَقِّ لَمَّا جَاءَهُمْ إِنْ هَٰذَا إِلَّا سِحْرٌ مُّبِينٌ ﴿٤٤﴾





**45.** ಅವರು ಕಲಿಯುವಂತಹ ಒಂದು ಗ್ರಂಥವನ್ನಾಗಲಿ ನಾವು ಅವರಿಗೆ ನೀಡಿಲ್ಲ. ನಿನಗಿಂತ ಮುಂಚೆ ಅವರ ಬಳಿಗೆ ಒಬ್ಬ ಮುನ್ನೆಚ್ಚರಿಕೆಗಾರನನ್ನಾಗಲಿ ನಾವು ಕಳುಹಿಸಲಿಲ್ಲ.

وَمَا آتَيْنَاهُم مِّن كُتُبٍ يَدْرُسُونَهَا ۖ وَمَا أَرْسَلْنَا إِلَيْهِمْ قَبْلَكَ مِن نَّذِيرٍ ﴿٤٥﴾

**46.** ಅವರಿಗಿಂತ ಮುಂಚೆ ಇದ್ದವರು ಸಹ (ಸತ್ಯವನ್ನು) ಅಲ್ಲಗಳೆದಿದ್ದಾರೆ. ಅವರಿಗೆ ನಾವು ನೀಡಿದುದರ ಹತ್ತನೆಯ ಒಂದಂಶವನ್ನಾದರೂ ಇವರು ಪಡೆಯಲಿಲ್ಲ. ಆದರೂ ಅವರು ನನ್ನ ಸಂದೇಶವಾಹಕರನ್ನು ಸುಳ್ಳಾಗಿಸಿದರು. ಆಗ ನನ್ನನ್ನು ನಿರಾಕರಿಸಿದುದರ ಪರಿಣಾಮ ಹೇಗಿತ್ತು? (ನೋಡಿರಿ.)

وَكَذَّبَ الَّذِينَ مِن قَبْلِهِمْ وَمَا بَلَغُوا مِعْشَارَ مَا آتَيْنَاهُمْ فَكَذَّبُوا رُسُلِي ۖ فَكَيْفَ كَانَ نَكِيرِ ﴿٤٦﴾

**47.** ಹೇಳು: 'ನಾನು ನಿಮಗೆ ಒಂದು ವಿಚಾರವನ್ನು ಮಾತ್ರ ಉಪದೇಶಿಸುತ್ತೇನೆ : ನೀವು ಅಲ್ಲಾಹನ ಮುಂದೆ ಇಬ್ಬಿಬ್ಬರಾಗಿ ಅಥವಾ ಒಬ್ಬೊಬ್ಬರಾಗಿ ಎದ್ದು ನಿಂತು ಚಿಂತನೆ ಮಾಡಿರಿ. (ಆಗ ನಿಮಗೆ ಮನವರಿಕೆಯಾಗಬಹುದು)- ನಿಮ್ಮ ಸಂಗಡಿಗನಿಗೆ ಚಿತ್ತಭ್ರಮೆ ಇಲ್ಲವೆಂದು. ನಿಮಗೆ ಬಂದೆರಗಲಿರುವ ಒಂದು ಕಠಿಣ ಶಿಕ್ಷೆಯ ಬಗ್ಗೆ ಅವನು ಮುನ್ನೆಚ್ಚರಿಕೆ ನೀಡುವವನು ಮಾತ್ರವಾಗಿದ್ದಾನೆ.'

قُلْ إِنَّمَا أَعِظُكُم بِوَاحِدَةٍ ۖ أَن تَقُومُوا لِلَّهِ مَثْنَىٰ وَفُرَادَىٰ ثُمَّ تَتَفَكَّرُوا ۚ مَا بِصَاحِبِكُم مِّن جِنَّةٍ ۚ إِنْ هُوَ إِلَّا نَذِيرٌ لَّكُم بَيْنَ يَدَيْ عَذَابٍ شَدِيدٍ ﴿٤٧﴾

**48.** ಹೇಳು: 'ನಾನು ನಿಮ್ಮೊಡನೆ ಏನಾದರೂ ಪ್ರತಿಫಲವನ್ನು ಕೇಳಿದ್ದರೆ ಅದು ನಿಮಗೆಯೇ ಇರಲಿ. ನನ್ನ ಪ್ರತಿಫಲ ಕೇವಲ ಅಲ್ಲಾಹನ ಬಳಿಯಲ್ಲಿದೆ. ಅವನು ಎಲ್ಲ ವಿಚಾರಗಳಲ್ಲೂ ಸಾಕ್ಷಿಯಾಗಿದ್ದಾನೆ.'

قُلْ مَا سَأَلْتُكُم مِّنْ أَجْرٍ فَهُوَ لَكُمْ ۖ إِنْ أَجْرِيَ إِلَّا عَلَى اللَّهِ ۖ وَهُوَ عَلَىٰ كُلِّ شَيْءٍ شَهِيدٌ ﴿٤٨﴾

**49.** ಹೇಳು: 'ನಿಸ್ಸಂದೇಹವಾಗಿಯೂ ನನ್ನ ಪ್ರಭು ಸತ್ಯದ ಮೂಲಕ (ಅಸತ್ಯವನ್ನು) ಒಗೆಯುತ್ತಾನೆ. (ಆಗ ಅದು ನುಚ್ಚುನೂರಾಗುವುದು). ಅವನು ಪರೋಕ್ಷ ಸಂಗತಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.'

قُلْ إِنَّ رَبِّي يَقْذِفُ بِالْحَقِّ عَلَّامُ الْغُيُوبِ ﴿٤٩﴾

**50.** ಹೇಳು: 'ಸತ್ಯವು ಆಗಮಿಸಿದೆ. ಅಸತ್ಯವು ಏನನ್ನೂ ಉಂಟುಮಾಡಲಾರದು ಹಾಗೂ ಪುನರಾವರ್ತನೆಯ ಶಕ್ತಿಯೂ (ಅದಕ್ಕೆ) ಇಲ್ಲ.'

قُلْ جَاءَ الْحَقُّ وَمَا يُبْدِئُ الْبَاطِلُ وَمَا يُعِيدُ ﴿٥٠﴾

قُلْ إِن ضَلَلْتُ فَإِنَّمَآ أَضِلُّ عَلَىٰ
نَفْسِى ۖ وَإِنِ ٱهْتَدَيْتُ فَبِمَا يُوحِىٓ
إِلَىَّ رَبِّىٓ ۚ إِنَّهُۥ سَمِيعٌ قَرِيبٌ ﴿٥١﴾

**51. ಹೇಳು: 'ನಾನು ದಾರಿತಪ್ಪಿದರೆ, ನನಗೆ ದೋಷಕರವಾಗಿಯೇ ನಾನು ದಾರಿ ತಪ್ಪುತ್ತೇನೆ. ನಾನು ಸರಿಯಾದ ಮಾರ್ಗವನ್ನು ಪಡೆದರೆ, ಅದು ನನ್ನ ಪ್ರಭು ನನಗೆ ಅವತೀರ್ಣಗೊಳಿಸಿದ ಸಂದೇಶದ ಕಾರಣದಿಂದಲೇ ಆಗಿದೆ. ನಿಶ್ಚಯವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಸಮೀಪದಲ್ಲಿರುವವನೂ ಆಗಿದ್ದಾನೆ.'**

وَلَوْ تَرَىٰٓ إِذْ فَزِعُوا۟ فَلَا فَوْتَ وَ
أُخِذُوا۟ مِن مَّكَانٍ قَرِيبٍ ﴿٥٢﴾

**52. ಅವರು ಭಯಭೀತರಾಗುವ ಸಂದರ್ಭವನ್ನು ನೀನು ಕಾಣುತ್ತಿದ್ದರೆ! ಆಗ ಅವರಿಗೆ ಪಾರಾಗಲಿಕ್ಕೆ ಸಾಧ್ಯವಿಲ್ಲ. ಹತ್ತಿರದ ಸ್ಥಳದಿಂದ ಅವರು ಹಿಡಿಯಲ್ಪಡುವರು.**

وَقَالُوٓا۟ ءَامَنَّا بِهِۦ وَأَنَّىٰ لَهُمُ ٱلتَّنَاوُشُ
مِن مَّكَانٍۭ بَعِيدٍ ﴿٥٣﴾

**53.** (ಆಗ) **ಅವರು, 'ನಾವು ಅದನ್ನು ನಂಬುತ್ತೇವೆ' ಎಂದು ಹೇಳುವರು. ಆದರೆ ಅಷ್ಟು ದೂರದಿಂದ ಅವರು ಅದನ್ನು** (ನಂಬಿಕೆಯನ್ನು) **ಹೇಗೆ ಗಳಿಸುವರು?**

وَقَدْ كَفَرُوا۟ بِهِۦ مِن قَبْلُ ۖ وَ
يَقْذِفُونَ بِٱلْغَيْبِ مِن مَّكَانٍۭ
بَعِيدٍ ﴿٥٤﴾

**54. ಮುಂಚೆ ಅವರು ದೂರದಿಂದಲೇ ಊಹಾಪೋಹಗಳನ್ನು ಮಾಡುತ್ತಾ ಅದನ್ನು ನಿರಾಕರಿಸಿರಲಿಲ್ಲವೇ?**

وَحِيلَ بَيْنَهُمْ وَبَيْنَ مَا يَشْتَهُونَ كَمَا
فُعِلَ بِأَشْيَاعِهِم مِّن قَبْلُ ۚ إِنَّهُمْ
كَانُوا۟ فِى شَكٍّ مُّرِيبٍۭ ﴿٥٥﴾

**55. ಇದಕ್ಕಿಂತ ಮುಂಚೆ ಅವರ ಹಾಗೆ ಇರುವ ಇತರರೊಡನೆ ಮಾಡಿದಂತೆ, ಅವರಿಗೆ ಮತ್ತು ಅವರು ಬಯಸುವುದಕ್ಕೆ ಮಧ್ಯೆ ಒಂದು ತಡೆ ಇರಿಸಲಾಗುವುದು. ನಿಶ್ಚಯವಾಗಿಯೂ ಅವರು ಅಸ್ವಸ್ಥಕರವಾದ ಸಂಶಯದಲ್ಲಿ ಸಿಲುಕಿದ್ದರು.**

سُوْرَةُ فَاطِرٍ مَكِّيَّةٌ وَّهِيَ مَعَ الْبَسْمَلَةِ سِتٌّ وَّاَرْبَعُوْنَ اٰيَةً وَّخَمْسَةُ رُكُوْعَاتٍ

## 35. ಫಾತಿರ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 46 ಆಯತ್‌ಗಳು ಹಾಗೂ 5 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

اَلْحَمْدُ لِلّٰهِ فَاطِرِ السَّمٰوٰتِ وَ الْاَرْضِ جَاعِلِ الْمَلٰٓئِكَةِ رُسُلًا اُولِيْٓ اَجْنِحَةٍ مَّثْنٰى وَ ثُلٰثَ وَ رُبٰعَ ؕ يَزِيْدُ فِي الْخَلْقِ مَا يَشَآءُ ؕ اِنَّ اللّٰهَ عَلٰى كُلِّ شَيْءٍ قَدِيْرٌ ②

2. ಎಲ್ಲ ಸ್ತುತಿಸ್ತೋತ್ರಗಳು ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತ ಹಾಗೂ ಎರಡೆರಡು, ಮೂರು ಮೂರು, ನಾಲ್ಕು ನಾಲ್ಕು ರೆಕ್ಕೆಗಳುಳ್ಳ ಮಲಕ್‌ಗಳನ್ನು (ದೇವದೂತರನ್ನು) ಸಂದೇಶವಾಹಕರನ್ನಾಗಿ ನಿಯೋಜಿಸಿದ ಅಲ್ಲಾಹನಿಗೆ ಸಲ್ಲುತ್ತವೆ. ತಾನಿಚ್ಛಿಸುವುದನ್ನು ಅವನು (ತನ್ನ) ಸೃಷ್ಟಿಯಲ್ಲಿ ಸೇರಿಸುತ್ತಾನೆ. ನಿಶ್ಚಯವಾಗಿಯೂ ಅವನು ಎಲ್ಲ ವಿಚಾರಗಳಲ್ಲೂ ಸರ್ವಶಕ್ತನಾಗಿದ್ದಾನೆ.

مَا يَفْتَحِ اللّٰهُ لِلنَّاسِ مِنْ رَّحْمَةٍ فَلَا مُمْسِكَ لَهَا ۚ وَ مَا يُمْسِكْ ۙ فَلَا مُرْسِلَ لَهٗ مِنْۢ بَعْدِهٖ ؕ وَ هُوَ الْعَزِيْزُ الْحَكِيْمُ ③

3. ಅಲ್ಲಾಹನು ಮನುಷ್ಯರಿಗೆ (ತನ್ನ) ಕಾರುಣ್ಯದಿಂದ ಏನನ್ನಾದರೂ ಅನುಗ್ರಹಿಸಿದರೆ ಅದನ್ನು ತಡೆಯುವವನು ಯಾರೂ ಇಲ್ಲ. ಹಾಗೆಯೇ ಅವನು (ಅಲ್ಲಾಹನು) ಏನನ್ನಾದರೂ ತಡೆದಿಟ್ಟರೆ ಆ ಬಳಿಕ ಅದನ್ನು ಬಿಡುಗಡೆ ಮಾಡುವವನು ಸಹ ಯಾರೂ ಇಲ್ಲ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

يٰٓاَيُّهَا النَّاسُ اذْكُرُوْا نِعْمَتَ اللّٰهِ عَلَيْكُمْ ؕ هَلْ مِنْ خَالِقٍ غَيْرُ اللّٰهِ يَرْزُقُكُمْ مِّنَ السَّمَآءِ وَ الْاَرْضِ ؕ لَآ اِلٰهَ اِلَّا هُوَ ۫ۖ فَاَنّٰى تُؤْفَكُوْنَ ④

4. ಎಲೈ ಮನುಷ್ಯರೇ, ನಿಮ್ಮ ಮೇಲಿರುವ ಅಲ್ಲಾಹನ ಅನುಗ್ರಹವನ್ನು ಸ್ಮರಿಸಿರಿ. ಅಲ್ಲಾಹನ ಹೊರತು ಆಕಾಶದಿಂದಾಗಲಿ ಭೂಮಿಯಿಂದಾಗಲಿ ನಿಮಗೆ ಆಹಾರವನ್ನು ಒದಗಿಸುವ ಬೇರೆ ಯಾವನಾದರೂ ಸೃಷ್ಟಿಕರ್ತ ಇದ್ದಾನೆಯೇ? ಅವನ ಹೊರತು ಆರಾಧನೆಗೆ ಅರ್ಹನಾಗಿ ಯಾರೂ ಇಲ್ಲ. ಮತ್ತೆ ನೀವು ಎಲ್ಲಿಗೆ ದಾರಿ ತಪ್ಪಿ ಹೋಗುವಿರಿ?





وَ اِنْ يُّكَذِّبُوْكَ فَقَدْ كُذِّبَتْ رُسُلٌ مِّنْ قَبْلِكَ ؕ وَ اِلَى اللّٰهِ تُرْجَعُ الْاُمُوْرُ ⑤

5. ಅವರು ನಿನ್ನನ್ನು ಸುಳ್ಳಾಗಿಸಿದರೆ, ದಿಟವಾಗಿಯೂ (ದೇವನ) ಸಂದೇಶವಾಹಕರು ನಿನಗಿಂತ ಮುಂಚೆ ಸಹ ಸುಳ್ಳಾಗಿಸಲ್ಪಟ್ಟಿದ್ದಾರೆ. ಎಲ್ಲ ವಿಚಾರಗಳು (ತೀರ್ಮಾನಕ್ಕಾಗಿ) ಅಲ್ಲಾಹನೆಡೆಗೆ ಮರಳಿಸಲ್ಪಡುತ್ತವೆ.

يٰٓاَيُّهَا النَّاسُ اِنَّ وَعْدَ اللّٰهِ حَقٌّ فَلَا تَغُرَّنَّكُمُ الْحَيٰوةُ الدُّنْيَا ٚ وَ لَا يَغُرَّنَّكُمْ بِاللّٰهِ الْغَرُوْرُ ⑥

6. ಎಲೈ ಮನುಷ್ಯರೇ, ಖಂಡಿತವಾಗಿಯೂ ಅಲ್ಲಾಹನ ವಾಗ್ದಾನ ಸತ್ಯವಾದುದು. ಆದ್ದರಿಂದ ಇಹಲೋಕದ ಜೀವನ ನಿಮ್ಮನ್ನು ಮೋಸಗೊಳಿಸದಿರಲಿ. ಆ ವಂಚಕ (ಶೈತಾನ) ಸಹ ಅಲ್ಲಾಹನ ವಿಚಾರದಲ್ಲಿ ನಿಮ್ಮನ್ನು ಮೋಸಗೊಳಿಸದಿರಲಿ.

اِنَّ الشَّيْطٰنَ لَكُمْ عَدُوٌّ فَاتَّخِذُوْهُ عَدُوًّا ؕ اِنَّمَا يَدْعُوْا حِزْبَهٗ لِيَكُوْنُوْا مِنْ اَصْحٰبِ السَّعِيْرِ ⑦

7. ನಿಸ್ಸಂದೇಹವಾಗಿಯೂ ಶೈತಾನನು ನಿಮ್ಮ ವೈರಿಯಾಗಿದ್ದಾನೆ. ಆದ್ದರಿಂದ ನೀವು ಅವನನ್ನು ವೈರಿಯಾಗಿಯೇ ಗಣಿಸಿರಿ. ಅವನು ತನ್ನ ಸಂಗಡಿರನ್ನು ಕರೆಯುವುದು ಅವರು ಜ್ವಲಿಸುವ ಅಗ್ನಿಯ ನಿವಾಸಿಗಳಾಗಲಿಕ್ಕೆ ಮಾತ್ರವಾಗಿದೆ.

اَلَّذِيْنَ كَفَرُوْا لَهُمْ عَذَابٌ شَدِيْدٌ ؕ۬ وَ الَّذِيْنَ اٰمَنُوْا وَ عَمِلُوا الصّٰلِحٰتِ لَهُمْ مَّغْفِرَةٌ وَّ اَجْرٌ كَبِيْرٌ ⑧

8. ಯಾರು ಅವಿಶ್ವಾಸಿಗಳಾಗುತ್ತಾರೋ ಅವರಿಗೆ ಕಠೋರವಾದ ಶಿಕ್ಷೆಯಿದೆ. ಯಾರು ವಿಶ್ವಾಸಿಗಳಾಗಿದ್ದು ಸತ್ಕರ್ಮ ನಿರತರಾಗುತ್ತಾರೋ ಅವರಿಗೆ ಕ್ಷಮಾದಾನ ಮತ್ತು ಶ್ರೇಷ್ಠವಾದ ಪ್ರತಿಫಲವಿದೆ.

اَفَمَنْ زُيِّنَ لَهٗ سُوْٓءُ عَمَلِهٖ فَرَاٰهُ حَسَنًا ؕ فَاِنَّ اللّٰهَ يُضِلُّ مَنْ يَّشَآءُ وَ يَهْدِيْ مَنْ يَّشَآءُ ۫ۖ فَلَا تَذْهَبْ نَفْسُكَ عَلَيْهِمْ حَسَرٰتٍ ؕ اِنَّ اللّٰهَ عَلِيْمٌۢ بِمَا يَصْنَعُوْنَ ⑨

9. ತನ್ನ ದುಷ್ಕೃತ್ಯ ತನಗೆ ಚಲೋದಾಗಿ ಕಾಣಿಸಲ್ಪಟ್ಟ ಕಾರಣದಿಂದ ತಾನು ಅದನ್ನು ಒಳ್ಳೆಯದೆಂದು ಒಬ್ಬನು ಬಗೆದರೆ *ವಿಶ್ವಾಸಹೊಂದಿ ಸತ್ಕರ್ಮ ನಿರತನಾದವನ ಹಾಗೆ ಆಗುವನೇ?* ಖಂಡಿತವಾಗಿಯೂ ಅಲ್ಲಾಹನು ತಾನಿಚ್ಛಿಸುವವನನ್ನು ಪಥಭ್ರಷ್ಟಗೊಳಿಸುತ್ತಾನೆ; ತಾನಿಚ್ಛಿಸುವವನಿಗೆ ಸತ್ಪಥ ದರ್ಶನವನ್ನು ಮಾಡುತ್ತಾನೆ. ಆದ್ದರಿಂದ ಅವರ ಬಗ್ಗೆ ವ್ಯಾಕುಲಪಟ್ಟು ನಿನ್ನ ಜೀವವನ್ನು ನೀನು ಹಾನಿಗೊಳಿಸಬೇಡ. ನಿಸ್ಸಂದೇಹವಾಗಿಯೂ ಅವರ ಕೃತ್ಯಗಳ ಬಗ್ಗೆ ಅಲ್ಲಾಹನು ಬಲ್ಲವನಾಗಿದ್ದಾನೆ.

وَ اللّٰهُ الَّذِيْٓ اَرْسَلَ الرِّيٰحَ فَتُثِيْرُ

10. ಮಾರುತಗಳನ್ನು ಬೀಸುವಂತೆ ಮಾಡುವವನು ಅಲ್ಲಾಹನಾಗಿದ್ದಾನೆ. ಅವು ಮೋಡಗಳನ್ನು ಮೇಲೆ

ತ್ತುತ್ತವೆ. ಅನಂತರ ನಾವು ಅವುಗಳನ್ನು ನಿರ್ಜೀವ ಭೂಪ್ರದೇಶದೆಡೆಗೆ ಕೊಂಡೊಯ್ಯುತ್ತೇವೆ. ಅನಂತರ ನಾವು ಆ ಮೂಲಕ ನಿರ್ಜೀವವಗೊಂಡ ಭೂಪ್ರದೇಶವನ್ನು ಜೀವಂತಗೊಳಿಸುತ್ತೇವೆ. ಇದೇ ಪ್ರಕಾರ ಪುನರುತ್ಥಾನ ಸಹ ಆಗಿದೆ.

سَحَابًا فَسُقْنٰهُ اِلٰى بَلَدٍ مَّيِّتٍ فَاَحْيَيْنَا بِهِ الْاَرْضَ بَعْدَ مَوْتِهَا ۚ كَذٰلِكَ النُّشُوْرُ ﴿١٠﴾

11. ಯಾವನು ಗೌರವವನ್ನು ಬಯಸುತ್ತಾನೋ, (ಅವನು ತಿಳಿದುಕೊಳ್ಳಲಿ) ಎಲ್ಲ ಗೌರವಗಳು ಅಲ್ಲಾಹನಿಗೆ ಸಲ್ಲುತ್ತವೆ. ಪರಿಶುದ್ಧ ವಚನಗಳು ಅವನೆಡೆಗೆ ಏರುತ್ತವೆ. ಸತ್ಕರ್ಮವು ಅವನನ್ನು (ಮನುಷ್ಯನನ್ನು) ಮೇಲಕ್ಕೆತ್ತುತ್ತದೆ. ಯಾರು ದುಷ್ಟ ತಂತ್ರಗಳನ್ನು ಹೂಡುತ್ತಾರೋ ಅವರಿಗೆ ಕಠೋರ ಶಿಕ್ಷೆ ಇದೆ. ಅವರ ಕುತಂತ್ರಗಳು ನಿಷ್ಫಲಗೊಳ್ಳುವುವು.

مَنْ كَانَ يُرِيْدُ الْعِزَّةَ فَلِلّٰهِ الْعِزَّةُ جَمِيْعًا ۗ اِلَيْهِ يَصْعَدُ الْكَلِمُ الطَّيِّبُ وَالْعَمَلُ الصَّالِحُ يَرْفَعُهٗ ۗ وَالَّذِيْنَ يَمْكُرُوْنَ السَّيِّاٰتِ لَهُمْ عَذَابٌ شَدِيْدٌ ۗ وَمَكْرُ اُولٰٓئِكَ هُوَ يَبُوْرُ ﴿١١﴾

12. ಅಲ್ಲಾಹನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದನು. ಅನಂತರ ವೀರ್ಯಾಣುವಿನಿಂದ. ಅನಂತರ ನಿಮ್ಮನ್ನು ಜೋಡಿಗಳನ್ನಾಗಿ ಮಾಡಿದನು. ಅವನು (ಅಲ್ಲಾಹನು) ತಿಳಿಯದೆ ಯಾವ ಸ್ತ್ರೀಯಾಗಲಿ ಗರ್ಭಧರಿಸುವುದಿಲ್ಲ; ಪ್ರಸವಿಸುವುದೂ ಇಲ್ಲ. ಒಂದು ಗ್ರಂಥದಲ್ಲಿ ದಾಖಲಿಸಲ್ಪಡದೆ ಒಬ್ಬ ದೀರ್ಘಾಯುಷ್ಯವಂತನಿಗೆ ದೀರ್ಘಾಯುಷ್ಯ ನೀಡಲಾಗುವುದಿಲ್ಲ, ಹಾಗೆಯೇ ಅವನ ಆಯುಷ್ಯ ಕಡಿತಗೊಳಿಸಲ್ಪಡುವುದೂ ಇಲ್ಲ. ನಿಸ್ಸಂದೇಹವಾಗಿಯೂ ಅದು ಅಲ್ಲಾಹನಿಗೆ ಸುಲಭವಾದುದಾಗಿದೆ.

وَاللّٰهُ خَلَقَكُمْ مِّنْ تُرَابٍ ثُمَّ مِنْ نُّطْفَةٍ ثُمَّ جَعَلَكُمْ اَزْوَاجًا ۗ وَمَا تَحْمِلُ مِنْ اُنْثٰى وَلَا تَضَعُ اِلَّا بِعِلْمِهٖ ۗ وَمَا يُعَمَّرُ مِنْ مُّعَمَّرٍ وَّلَا يُنْقَصُ مِنْ عُمُرِهٖٓ اِلَّا فِيْ كِتٰبٍ ۗ اِنَّ ذٰلِكَ عَلَى اللّٰهِ يَسِيْرٌ ﴿١٢﴾

13. ಎರಡು ಸಮುದ್ರಗಳು ಸಮಾನವಾಗಿರುವುದಿಲ್ಲ. ಒಂದು ರುಚಿಕರವೂ ಸಿಹಿಯೂ ಕುಡಿಯಲು ಸ್ವಾದಿಷ್ಟವೂ ಆದುದು. ಇನ್ನೊಂದು ಉಪ್ಪುಪ್ಪು ಮತ್ತು ಕಹಿಯಾದುದು. ಪ್ರತಿಯೊಂದರಿಂದ ನೀವು ತಾಜಾ (ಮೀನಿನ) ಮಾಂಸವನ್ನು ತಿನ್ನುತ್ತೀರಿ. ಹಾಗೆಯೇ ನೀವು ಧರಿಸುವ ಆಭರಣ (ಮುತ್ತು)ಗಳನ್ನು ಹೊರಗೆ ತೆಗೆಯುತ್ತೀರಿ. (ತೆರೆಗಳನ್ನು) ಸೀಳುತ್ತಿರುವ ಹಡಗುಗಳನ್ನು ಅದರಲ್ಲಿ ನೀನು ಕಾಣುತ್ತಿ. ಅದು ನೀವು ಅವನ ಅನುಗ್ರಹವನ್ನು ಅರಸಲಿಕ್ಕೋಸ್ಕರ ಹಾಗೂ ಕೃತಜ್ಞರಾಗಲಿಕ್ಕೋಸ್ಕರವಾಗಿದೆ.

وَمَا يَسْتَوِى الْبَحْرٰنِ ۖ هٰذَا عَذْبٌ فُرَاتٌ سَآئِغٌ شَرَابُهٗ وَهٰذَا مِلْحٌ اُجَاجٌ ۗ وَمِنْ كُلٍّ تَاْكُلُوْنَ لَحْمًا طَرِيًّا وَّتَسْتَخْرِجُوْنَ حِلْيَةً تَلْبَسُوْنَهَا ۚ وَتَرَى الْفُلْكَ فِيْهِ مَوَاخِرَ لِتَبْتَغُوْا مِنْ فَضْلِهٖ وَلَعَلَّكُمْ تَشْكُرُوْنَ ﴿١٣﴾





14. ಅವನು ರಾತ್ರಿಯನ್ನು ಹಗಲಿನಲ್ಲಿ ಲೀನಗೊಳಿಸುತ್ತಾನೆ. ಹಗಲನ್ನು ರಾತ್ರಿಯಲ್ಲೂ ಲೀನಗೊಳಿಸುತ್ತಾನೆ. ಅವನು ಸೂರ್ಯನನ್ನೂ ಚಂದ್ರನನ್ನೂ ಕಾರ್ಯನಿರತಗೊಳಿಸಿರುತ್ತಾನೆ. ಪ್ರತಿಯೊಂದು ನಿಶ್ಚಿತ ಪಥದಲ್ಲಿ ನಿಗದಿತ ಅವಧಿ ವರೆಗೆ ಸಂಚರಿಸುತ್ತದೆ. ಆ ಅಲ್ಲಾಹನೇ ನಿಮ್ಮ ಪ್ರಭು. ಆಧಿಪತ್ಯವೆಲ್ಲ ಅವನದೇ. ಅವನನ್ನು ಬಿಟ್ಟು ನೀವು ಯಾರನ್ನು ಕರೆದು ಪ್ರಾರ್ಥಿಸುತ್ತೀರೋ ಅವರಿಗೆ ತುಸುಮಾತ್ರವಾದರೂ ಒಡೆತನವಿಲ್ಲ.

يُوْلِجُ الَّيْلَ فِى النَّهَارِ وَيُوْلِجُ النَّهَارَ فِى الَّيْلِ ۙ وَسَخَّرَ الشَّمْسَ وَالْقَمَرَ ۖ كُلٌّ يَّجْرِيْ لِاَجَلٍ مُّسَمًّى ۗ ذٰلِكُمُ اللّٰهُ رَبُّكُمْ لَهُ الْمُلْكُ ۗ وَالَّذِيْنَ تَدْعُوْنَ مِنْ دُوْنِهٖ مَا يَمْلِكُوْنَ مِنْ قِطْمِيْرٍ ﴿١٤﴾

15. ನೀವು ಅವರನ್ನು ಕರೆದರೆ ನಿಮ್ಮ ಕರೆಯನ್ನು ಅವರು ಆಲಿಸಲಾರರು. (ಒಂದು ವೇಳೆ) ಅವರು ಆಲಿಸಿದರೆ ಕೂಡ ನಿಮಗೆ ಅವರು ಉತ್ತರಿಸಲಾರರು. ನೀವು (ಅವರನ್ನು ಅಲ್ಲಾಹನಿಗೆ) ಸಹಭಾಗಿ ಮಾಡಿದುದನ್ನು ಪುನರುತ್ಥಾನ ದಿನದಂದು ಅವರು ಅಲ್ಲಗಳೆಯುವರು. ಸರ್ವವನ್ನೂ ಬಲ್ಲವನಾದ ಅಲ್ಲಾಹನ ಹಾಗೆ ಬೇರೆ ಯಾರೂ ನಿನಗೆ ವಿಚಾರವನ್ನು ತಿಳಿಯಪಡಿಸಲಿಕ್ಕಿಲ್ಲ.

اِنْ تَدْعُوْهُمْ لَا يَسْمَعُوْا دُعَآءَكُمْ ۚ وَلَوْ سَمِعُوْا مَا اسْتَجَابُوْا لَكُمْ ۗ وَيَوْمَ الْقِيٰمَةِ يَكْفُرُوْنَ بِشِرْكِكُمْ ۗ وَلَا يُنَبِّئُكَ مِثْلُ خَبِيْرٍ ﴿١٥﴾

16. ಎಲೈ ಮನುಷ್ಯರೇ, ನೀವು ಅಲ್ಲಾಹನನ್ನು ಆಶ್ರಯಿಸಿಕೊಂಡವರಾಗಿರುವಿರಿ. ಅಲ್ಲಾಹನಾದರೋ ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

يٰٓاَيُّهَا النَّاسُ اَنْتُمُ الْفُقَرَآءُ اِلَى اللّٰهِ ۚ وَاللّٰهُ هُوَ الْغَنِيُّ الْحَمِيْدُ ﴿١٦﴾

17. ಅವನು ಇಚ್ಛಿಸಿದರೆ ನಿಮ್ಮನ್ನು ನಾಶಪಡಿಸಿ (ಬದಲಿಗೆ) ಒಂದು ಹೊಸ ಸೃಷ್ಟಿಯನ್ನು ತರಬಲ್ಲನು.

اِنْ يَّشَاْ يُذْهِبْكُمْ وَيَاْتِ بِخَلْقٍ جَدِيْدٍ ﴿١٧﴾

18. ಅಲ್ಲಾಹನಿಗೆ ಅದು ಪ್ರಯಾಸಕರವೇನೂ ಅಲ್ಲ.

وَمَا ذٰلِكَ عَلَى اللّٰهِ بِعَزِيْزٍ ﴿١٨﴾

19. ಭಾರವಹಿಸುವ ಯಾವುದೇ ಆತ್ಮವೂ ಇನ್ನೊಂದರ ಭಾರವನ್ನು ವಹಿಸಲಾರದು. ಹೆಚ್ಚು ಭಾರ ಹೊತ್ತ ಆತ್ಮ ಅದರ ಭಾರವನ್ನು ಹೊರಲಿಕ್ಕಾಗಿ ಮತ್ತೊಂದನ್ನು ಕರೆದರೆ ಅದರಿಂದ ಹೊರಲಿಕ್ಕೆ ಎಂದಿಗೂ ಸಾಧ್ಯವಿಲ್ಲ-ನಿಕಟ ಸಂಬಂಧಿಯಾಗಿದ್ದರೂ ಕೂಡ. ಯಾರು ಏಕಾಂತದಲ್ಲೂ ಅಲ್ಲಾಹನಿಗೆ ಭಯಪಡುತ್ತಾರೋ ಮತ್ತು ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೋ ಅವರಿಗೆ

وَلَا تَزِرُ وَازِرَةٌ وِّزْرَ اُخْرٰى ۗ وَاِنْ تَدْعُ مُثْقَلَةٌ اِلٰى حِمْلِهَا لَا يُحْمَلْ مِنْهُ شَيْءٌ وَّلَوْ كَانَ ذَا قُرْبٰى ۗ اِنَّمَا تُنْذِرُ

ಮಾತ್ರ ನೀನು ಮುನ್ನೆಚ್ಚರಿಕೆ ನೀಡಬಲ್ಲೆ. ಯಾರಾದರೂ ಪರಿಶುದ್ಧತೆಯನ್ನು ಗಳಿಸಿದರೆ, ಅವನ ಸ್ವಂತ ಒಳಿತಿಗಾಗಿಯೇ ಪರಿಶುದ್ಧತೆಯನ್ನು ಗಳಿಸುತ್ತಾನೆ. (ಎಲ್ಲರ) ಮರಳಿಕೆ ಅಲ್ಲಾಹನ ಬಳಿಗೆಯೇ ಆಗಿದೆ.

الَّذِيْنَ يَخْشَوْنَ رَبَّهُمْ بِالْغَيْبِ
وَاَقَامُوا الصَّلٰوةَ ؕ وَمَنْ تَزَكّٰى فَاِنَّمَا
يَتَزَكّٰى لِنَفْسِهٖ ؕ وَاِلَى اللّٰهِ الْمَصِيْرُ ﴿١٩﴾

20. ಕುರುಡನೂ ಕಣ್ಣುಕಾಣಿಸುವವನೂ ಸಮಾನರಲ್ಲ.

وَمَا يَسْتَوِى الْاَعْمٰى وَالْبَصِيْرُ ۙ﴿٢٠﴾

21. (ಹಾಗೆಯೇ) ಕತ್ತಲೆ ಮತ್ತು ಬೆಳಕು ಸಮಾನವಲ್ಲ.

وَلَا الظُّلُمٰتُ وَلَا النُّوْرُ ۙ﴿٢١﴾

22. (ಹಾಗೆಯೇ) ನೆರಳು ಮತ್ತು ಬಿಸಿಲು ಸಮಾನವಲ್ಲ.

وَلَا الظِّلُّ وَلَا الْحَرُوْرُ ۚ﴿٢٢﴾

23. ಬದುಕಿರುವವರು ಮತ್ತು ಮೃತಪಟ್ಟವರು ಕೂಡ ಸಮಾನರಲ್ಲ. ಅಲ್ಲಾಹನು ತಾನಿಚ್ಛಿಸುವವರಿಗೆ ಕೇಳಿಸುವಂತೆ ಮಾಡುತ್ತಾನೆ. ಸಮಾಧಿಯೊಳಗಿರುವವರಿಗೆ ಕೇಳಿಸುವಂತೆ ಮಾಡಲು ನಿನ್ನಿಂದ ಸಾಧ್ಯವಿಲ್ಲ.

وَمَا يَسْتَوِى الْاَحْيَآءُ وَلَا الْاَمْوَاتُ ؕ
اِنَّ اللّٰهَ يُسْمِعُ مَنْ يَّشَآءُ ۚ وَمَآ اَنْتَ
بِمُسْمِعٍ مَّنْ فِى الْقُبُوْرِ ﴿٢٣﴾

24. ನೀನು ಕೇವಲ ಒಬ್ಬ ಮುನ್ನೆಚ್ಚರಿಕೆಗಾರನಾಗಿರುವೆ.

اِنْ اَنْتَ اِلَّا نَذِيْرٌ ﴿٢٤﴾

25. ದಿಟವಾಗಿಯೂ ನಾವು ನಿನ್ನನ್ನು ಸತ್ಯದೊಂದಿಗೆ ಶುಭ ಸಮಾಚಾರ ಅರುಹುವವನಾಗಿಯೂ ಮುನ್ನೆಚ್ಚರಿಕೆ ನೀಡುವವನಾಗಿಯೂ ಕಳುಹಿಸಿದ್ದೇವೆ. ಓರ್ವ ಮುನ್ನೆಚ್ಚರಿಕೆಗಾರನು ಬಂದಿರದ ಯಾವುದೇ ಜನಾಂಗವಿಲ್ಲ.

اِنَّآ اَرْسَلْنٰكَ بِالْحَقِّ بَشِيْرًا وَّنَذِيْرًا ؕ
وَاِنْ مِّنْ اُمَّةٍ اِلَّا خَلَا فِيْهَا نَذِيْرٌ ﴿٢٥﴾

26. ನಿನ್ನನ್ನು ಅವರು ಸುಳ್ಳುಗಾರನೆಂದು ಗಣಿಸಿದರೆ, ಅವರ ಪೂರ್ವಜರು ಸಹ (ತಮಗೆ ಕಳುಹಿಸಲ್ಪಟ್ಟ) ಪ್ರವಾದಿಗಳನ್ನು ಸುಳ್ಳಾಗಿಸಿದ್ದಾರೆ. ಅವರ ಪ್ರವಾದಿಗಳು ಸುಸ್ಪಷ್ಟವಾದ ದೃಷ್ಟಾಂತಗಳು, ದೈವಿಕ ಅಧ್ಯಾಪನಗಳು ಮತ್ತು ಪ್ರಕಾಶ ಬೀರುವ ಗ್ರಂಥಗಳ ಸಹಿತ ಅವರ ಬಳಿಕ ಆಗಮಿಸಿದ್ದರು.

وَاِنْ يُّكَذِّبُوْكَ فَقَدْ كَذَّبَ الَّذِيْنَ مِنْ
قَبْلِهِمْ ۚ جَآءَتْهُمْ رُسُلُهُمْ بِالْبَيِّنٰتِ
وَبِالزُّبُرِ وَبِالْكِتٰبِ الْمُنِيْرِ ﴿٢٦﴾





27. ಅನಂತರ ನಾವು ಅವಿಶ್ವಾಸಿಗಳನ್ನು ಹಿಡಿದೆವು. ನನ್ನನ್ನು ನಿರಾಕರಿಸಿದ ಪರಿಣಾಮ ಹೇಗಿತ್ತು?

ثُمَّ اَخَذْتُ الَّذِيْنَ كَفَرُوْا فَكَيْفَ
كَانَ نَكِيْرِ ﴿٢٧﴾ ع

28. ನೀನು ಕಾಣುವುದಿಲ್ಲವೇ? - ಅಲ್ಲಾಹನು ಆಕಾಶದಿಂದ ಮಳೆಯನ್ನು ಸುರಿಸುತ್ತಾನೆ. ಅನಂತರ ಆ ಮೂಲಕ ನಾವು ವಿವಿಧ ವರ್ಣಗಳ ಹಣ್ಣು ಹಂಪಲುಗಳನ್ನು ಸೃಷ್ಟಿಸುತ್ತೇವೆ. ಪರ್ವತಗಳ ಪೈಕಿ ಕೆಲವು ಬಿಳಿ, ಕೆಂಪು ಮತ್ತು ವಿವಿಧ ಛಾಯೆಗಳಿಂದ ಕೂಡಿರುತ್ತವೆ. ಇನ್ನು ಕೆಲವು ಕಡು ಕಪ್ಪಾಗಿಯೂ ಇರುತ್ತವೆ.

اَلَمْ تَرَ اَنَّ اللّٰهَ اَنْزَلَ مِنَ السَّمَآءِ مَآءً ۚ
فَاَخْرَجْنَا بِهٖ ثَمَرٰتٍ مُّخْتَلِفًا اَلْوَانُهَا ؕ
وَمِنَ الْجِبَالِ جُدَدٌۢ بِيْضٌ وَّحُمْرٌ
مُّخْتَلِفٌ اَلْوَانُهَا وَغَرَابِيْبُ سُوْدٌ ﴿٢٨﴾

29. ಇದೇ ರೀತಿ ಮನುಷ್ಯರಲ್ಲೂ ಜಂತುಗಳಲ್ಲೂ ಜಾನುವಾರುಗಳಲ್ಲೂ ಹಲವು ವರ್ಣಗಳಿವೆ. ಅವನ ದಾಸರ ಪೈಕಿ ಜ್ಞಾನವುಳ್ಳವರು ಮಾತ್ರ ಅಲ್ಲಾಹನಿಗೆ ಭಯಪಡುತ್ತಾರೆ. ನಿಶ್ಚಯವಾಗಿಯೂ ಅಲ್ಲಾಹನು ಪ್ರತಾಪಶಾಲಿಯೂ ಅತ್ಯಂತ ಕ್ಷಮಾಶೀಲನೂ ಆಗಿದ್ದಾನೆ.

وَمِنَ النَّاسِ وَالدَّوَآبِّ وَالْاَنْعَامِ
مُخْتَلِفٌ اَلْوَانُهٗ كَذٰلِكَ ؕ اِنَّمَا
يَخْشَى اللّٰهَ مِنْ عِبَادِهِ الْعُلَمٰٓؤُا ؕ
اِنَّ اللّٰهَ عَزِيْزٌ غَفُوْرٌ ﴿٢٩﴾

30. ನಿಶ್ಚಯವಾಗಿಯೂ ಯಾರು ಅಲ್ಲಾಹನ ಗ್ರಂಥವನ್ನು ಪಠಿಸುತ್ತಾರೋ, ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೋ ಮತ್ತು ನಾವು ಏನನ್ನು ಒದಗಿಸಿದ್ದೇವೋ ಅದರಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ ವ್ಯಯಿಸುತ್ತಾರೋ ಅವರು (ಮಾತ್ರ) ಎಂದಿಗೂ ನಿಷ್ಫಲವಾಗದ ವ್ಯಾಪಾರದ ಭರವಸೆಯಲ್ಲಿರುತ್ತಾರೆ -

اِنَّ الَّذِيْنَ يَتْلُوْنَ كِتٰبَ اللّٰهِ وَ
اَقَامُوا الصَّلٰوةَ وَاَنْفَقُوْا مِمَّا
رَزَقْنٰهُمْ سِرًّا وَّعَلَانِيَةً يَّرْجُوْنَ
تِجَارَةً لَّنْ تَبُوْرَ ۙ﴿٣٠﴾

31. ಅವನು ಅವರಿಗೆ ಪೂರ್ಣವಾದ ಪ್ರತಿಫಲವನ್ನು ನೀಡುವನೆಂದು. ಅಷ್ಟೇ ಅಲ್ಲ, ತನ್ನ ಅನುಗ್ರಹದಿಂದ ಇನ್ನೂ ಹೆಚ್ಚಿಸಿಕೊಡುವನೆಂದು. ಖಂಡಿತವಾಗಿಯೂ ಅವನು ಅತಿಯಾಗಿ ಕ್ಷಮಿಸುವವನೂ (ಸತ್ಕರ್ಮಗಳನ್ನು) ಮೆಚ್ಚುವವನೂ ಆಗಿದ್ದಾನೆ.

لِيُوَفِّيَهُمْ اُجُوْرَهُمْ وَيَزِيْدَهُمْ مِّنْ
فَضْلِهٖ ؕ اِنَّهٗ غَفُوْرٌ شَكُوْرٌ ﴿٣١﴾

**32.** ನಾವು ನಿನಗೆ ದಿವ್ಯ ಸಂದೇಶವಾಗಿ ನೀಡಿದ ಗ್ರಂಥ ಸತ್ಯವಾದುದೇ ಆಗಿದೆ. ಅದಕ್ಕಿಂತ ಮೊದಲಿನ ಗ್ರಂಥಗಳನ್ನು ಸಹ ಅದು ದೃಢೀಕರಿಸುತ್ತದೆ. ನಿಶ್ಚಯವಾಗಿಯೂ ಅಲ್ಲಾಹನು ತನ್ನ ದಾಸರ ಬಗ್ಗೆ ಚೆನ್ನಾಗಿ ಬಲ್ಲವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

وَالَّذِيْٓ اَوْحَيْنَآ اِلَيْكَ مِنَ الْكِتٰبِ هُوَ الْحَقُّ مُصَدِّقًا لِّمَا بَيْنَ يَدَيْهِ ۭ اِنَّ اللّٰهَ بِعِبَادِهٖ لَخَبِيْرٌۢ بَصِيْرٌ ﴿٣٢﴾

**33.** ಆ ಬಳಿಕ ನಮ್ಮ ದಾಸರ ಪೈಕಿ ನಾವು ಆಯ್ಕೆ ಮಾಡಿದವರನ್ನು ಗ್ರಂಥದ ವಾರೀಸುದಾರರನ್ನಾಗಿ ಮಾಡಿದೆವು. ಅವರಲ್ಲಿ ಕೆಲವರು ತಮ್ಮ ಮೇಲೆಯೇ ಅತಿರೇಕವಾಗಿ ವರ್ತಿಸುತ್ತಾರೆ. ಕೆಲವರು ಮಧ್ಯಮಾರ್ಗವನ್ನು ಅವಲಂಬಿಸುತ್ತಾರೆ. ಇನ್ನು ಕೆಲವರು ಅಲ್ಲಾಹನ ಸಂಪ್ರೀತಿ ಮೂಲಕ ಸತ್ಕೃತ್ಯಗಳಲ್ಲಿ (ಇತರರನ್ನು) ಮೀರಿಸುತ್ತಾರೆ. ಅದೇ ಬಲು ದೊಡ್ಡ ಅನುಗ್ರಹವಾಗಿದೆ.

ثُمَّ اَوْرَثْنَا الْكِتٰبَ الَّذِيْنَ اصْطَفَيْنَا مِنْ عِبَادِنَا ۚ فَمِنْهُمْ ظَالِمٌ لِّنَفْسِهٖ ۚ وَمِنْهُمْ مُّقْتَصِدٌ ۚ وَمِنْهُمْ سَابِقٌۢ بِالْخَيْرٰتِ بِاِذْنِ اللّٰهِ ۭ ذٰلِكَ هُوَ الْفَضْلُ الْكَبِيْرُ ﴿٣٣﴾

**34.** (ಅವರಿಗೆ ಪ್ರತಿಫಲ) ಶಾಶ್ವತವಾಸಕ್ಕಿರುವ ಸ್ವರ್ಗೀಯ ತೋಟಗಳಾಗಿವೆ. ಅವರು ಅವುಗಳಲ್ಲಿ ಪ್ರವೇಶಿಸುವರು. ಅವರನ್ನು ಅಲ್ಲಿ ಸ್ವರ್ಣಕಂಕಣಗಳಿಂದಲೂ ಮುತ್ತುಗಳಿಂದಲೂ ಅಲಂಕರಿಸಲಾಗುವುದು.[394] ಅಲ್ಲಿ ಅವರ ಉಡುಪು ರೇಶ್ಮೆಯದ್ದಾಗಿರುವುದು.

جَنّٰتُ عَدْنٍ يَّدْخُلُوْنَهَا يُحَلَّوْنَ فِيْهَا مِنْ اَسَاوِرَ مِنْ ذَهَبٍ وَّلُؤْلُؤًا ۚ وَلِبَاسُهُمْ فِيْهَا حَرِيْرٌ ﴿٣٤﴾

**35.** ಅವರು ಹೀಗೆ ಹೇಳುವರು: 'ನಮ್ಮಿಂದ ವ್ಯಥೆಯನ್ನು ದೂರಗೊಳಿಸಿದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು. ನಿಶ್ಚಯವಾಗಿಯೂ ನಮ್ಮ ಪ್ರಭು ಅತ್ಯಂತ ಕ್ಷಮಾಶೀಲನೂ (ಸತ್ಕರ್ಮಗಳನ್ನು) ಮೆಚ್ಚುವವನೂ ಆಗಿದ್ದಾನೆ.

وَقَالُوا الْحَمْدُ لِلّٰهِ الَّذِيْٓ اَذْهَبَ عَنَّا الْحَزَنَ ۭ اِنَّ رَبَّنَا لَغَفُوْرٌ شَكُوْرُ ﴿٣٥﴾

**36.** 'ಅವನು ತನ್ನ ಅನುಗ್ರಹದಿಂದ ಶಾಶ್ವತವಾದ ವಾಸಸ್ಥಳದಲ್ಲಿ ನಮ್ಮನ್ನು ನೆಲೆಯೂರಿಸಿದನು. ಇಲ್ಲಿ ನಮ್ಮನ್ನು ಯಾವುದೇ ಸಂಕಷ್ಟ ಸ್ಪರ್ಶಿಸಲಾರದು. ಯಾವುದೇ ದಣಿವು ಕೂಡ ನಮಗೆ ಇಲ್ಲಿ ತಟ್ಟಲಾರದು.'

الَّذِيْٓ اَحَلَّنَا دَارَ الْمُقَامَةِ مِنْ فَضْلِهٖ ۚ لَا يَمَسُّنَا فِيْهَا نَصَبٌ وَّلَا يَمَسُّنَا فِيْهَا لُغُوْبٌ ﴿٣٦﴾

394. ಇವು ಅಲಂಕಾರೋಕ್ತಿಗಳಾಗಿವೆ. ಭೌಮಿಕ ವಸ್ತುಗಳೇನೂ ಪರಲೋಕದಲ್ಲಿಲ್ಲ. ಇವುಗಳಿಗೆ ಸಮಾನವಾದ ಆಧ್ಯಾತ್ಮಿಕ ಅನುಗ್ರಹಗಳು ಅಲ್ಲಿ ದೊರಕುವುವು ಎಂದು ತಾತ್ಪರ್ಯ.





**37.** ಆದರೆ ಯಾರು ಅವಿಶ್ವಾಸಿಗಳಾಗಿರುತ್ತಾರೋ ಅವರಿಗೆ ನರಕದ ಅಗ್ನಿ ಇದೆ. ಅವರು ಸಾಯುವಂತಾಗಲು ಮರಣವನ್ನು ಅವರಿಗೆ ವಿಧಿಸಲಾಗುವುದಿಲ್ಲ. ಅದರ ಶಿಕ್ಷೆಯನ್ನು ಅವರಿಗೆ ಲಘೂಕರಿಸಲಾಗುವುದೂ ಇಲ್ಲ. ಹೀಗೆ ನಾವು ಎಲ್ಲ ಕೃತಘ್ನರಿಗೆ ಪ್ರತಿಫಲ ನೀಡುತ್ತೇವೆ.

وَالَّذِيْنَ كَفَرُوْا لَهُمْ نَارُ جَهَنَّمَ ۚ لَا يُقْضٰى عَلَيْهِمْ فَيَمُوْتُوْا وَلَا يُخَفَّفُ عَنْهُمْ مِّنْ عَذَابِهَا ۭ كَذٰلِكَ نَجْزِيْ كُلَّ كَفُوْرٍ ﴿٣٧﴾

**38.** ಅವರು ಅಲ್ಲಿ ಸಹಾಯಕ್ಕಾಗಿ ಹೀಗೆ ಆರ್ತನಾದ ಮಾಡುವರು: 'ನಮ್ಮ ಪ್ರಭೂ, ನಮ್ಮನ್ನು ಹೊರಗೆ ತೆಗಿ. ನಾವು ಮೊದಲು ಮಾಡಿದುದಕ್ಕಿಂತ ಭಿನ್ನವಾದ ಉತ್ತಮವಾದ ಕೃತ್ಯಗಳನ್ನು ಮಾಡುವೆವು.' (ಆಗ ಅವರೊಡನೆ ಹೀಗೆ ಹೇಳಲಾಗುವುದು:) 'ಚಿಂತನ ಮಾಡುವವರಿಗೆ ಚಿಂತಿಸಲು ಸಾಕಾಗುವಷ್ಟು ದೀರ್ಘಾಯುಷ್ಯವನ್ನು ನಾವು ನಿಮಗೆ ನೀಡಿರಲಿಲ್ಲವೇ? ನಿಮ್ಮ ಬಳಿಗೆ ಓರ್ವ ಮುನ್ನೆಚ್ಚರಿಕೆಗಾರನ ಆಗಮನವೂ ಆಗಿತ್ತು. ಆದ್ದರಿಂದ (ಶಿಕ್ಷೆಯನ್ನು) ಅನುಭವಿಸಿರಿ. ಅನ್ಯಾಯಗಾರರಿಗೆ ಸಹಾಯಕನಾಗಿ ಯಾರೂ ಇಲ್ಲ.'

وَهُمْ يَصْطَرِخُوْنَ فِيْهَا ۚ رَبَّنَآ اَخْرِجْنَا نَعْمَلْ صَالِحًا غَيْرَ الَّذِيْ كُنَّا نَعْمَلُ ۭ اَوَلَمْ نُعَمِّرْكُمْ مَّا يَتَذَكَّرُ فِيْهِ مَنْ تَذَكَّرَ وَجَآءَكُمُ النَّذِيْرُ ۭ فَذُوْقُوْا فَمَا لِلظّٰلِمِيْنَ مِنْ نَّصِيْرٍ ﴿٣٨﴾

**39.** ನಿಶ್ಚಯವಾಗಿಯೂ ಅಲ್ಲಾಹನು ಆಕಾಶಗಳ ಮತ್ತು ಭೂಮಿಯ ರಹಸ್ಯಗಳನ್ನು ಬಲ್ಲನು. ನಿಶ್ಚಯವಾಗಿಯೂ ಹೃದಯಗಳಲ್ಲಿ ಇರುವುದನ್ನು ಸಹ ಅವನು ಚೆನ್ನಾಗಿ ಬಲ್ಲನು.

اِنَّ اللّٰهَ عٰلِمُ غَيْبِ السَّمٰوٰتِ وَالْاَرْضِ ۭ اِنَّهٗ عَلِيْمٌۢ بِذَاتِ الصُّدُوْرِ ﴿٣٩﴾

**40.** ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳನ್ನಾಗಿ ಮಾಡಿದವನು ಅವನೇ. ಯಾರು ನಿರಾಕರಿಸುತ್ತಾನೋ ಅವನು ತನ್ನ ನಿರಾಕರಣೆಯ ಫಲವನ್ನು ಅನುಭವಿಸುವನು. ಅವಿಶ್ವಾಸಿಗಳಿಗೆ ಅವರ ಅವಿಶ್ವಾಸ ತಮ್ಮ ಪ್ರಭುವಿನ ಬಳಿ ಕೋಪವನ್ನೇ ಹೊರತು ಇನ್ನೇನನ್ನೂ ಹೆಚ್ಚಿಸುವುದಿಲ್ಲ. ಅವಿಶ್ವಾಸಿಗಳಿಗೆ ಅವರ ವಿಶ್ವಾಸ ಹಾನಿಯನ್ನೇ ಹೆಚ್ಚುಗೊಳಿಸುತ್ತದೆ.

هُوَ الَّذِيْ جَعَلَكُمْ خَلٰۗىِٕفَ فِي الْاَرْضِ ۭ فَمَنْ كَفَرَ فَعَلَيْهِ كُفْرُهٗ ۭ وَلَا يَزِيْدُ الْكٰفِرِيْنَ كُفْرُهُمْ عِنْدَ رَبِّهِمْ اِلَّا مَقْتًا ۚ وَلَا يَزِيْدُ الْكٰفِرِيْنَ كُفْرُهُمْ اِلَّا خَسَارًا ﴿٤٠﴾

**41.** ಹೇಳು: 'ಅಲ್ಲಾಹನನ್ನು ಬಿಟ್ಟು ನೀವು ಕರೆದು ಪ್ರಾರ್ಥಿಸುವ ನಿಮ್ಮ (ದೇವ) ಸಹಭಾಗಿಗಳನ್ನು ನೀವು

قُلْ اَرَءَيْتُمْ شُرَكَآءَكُمُ الَّذِيْنَ تَدْعُوْنَ

ಕಂಡಿದ್ದೀರೋ? ಭೂಮಿಯಿಂದ ಏನನ್ನು ಅವರು ಸೃಷ್ಟಿಸಿರುವರೆಂಬುದನ್ನು ನನಗೆ ತೋರಿಸಿ ಕೊಡಿರಿ. ಅಥವಾ ಆಕಾಶಗಳ ಸೃಷ್ಟಿಯಲ್ಲಿ ಅವರಿಗೆ ಸಹಭಾಗಿತ್ವವಿದೆಯೇ? ಅಥವಾ ಅವರಿಗೆ ನಾವೊಂದು ಗ್ರಂಥವನ್ನು ನೀಡಿದ್ದು ಅದರ ಸಾಕ್ಷ್ಯಾಧಾರ ಅವರಿಗಿದೆಯೇ?' ಇಲ್ಲ, ಈ ಅಧರ್ಮಿಗಳು ಪರಸ್ಪರ ವಂಚನೆ ಹೊರತು (ಬೇರೇನನ್ನೂ) ವಾಗ್ದಾನ ಮಾಡುವುದಿಲ್ಲ.

مِّن دُونِ اللَّهِ أَرُونِي مَاذَا خَلَقُوا مِنَ الْأَرْضِ أَمْ لَهُمْ شِرْكٌ فِي السَّمَاوَاتِ أَمْ آتَيْنَاهُمْ كِتَابًا فَهُمْ عَلَىٰ بَيِّنَتٍ مِّنْهُ ۚ بَلْ إِن يَعِدُ الظَّالِمُونَ بَعْضُهُم بَعْضًا إِلَّا غُرُورًا ﴿٤٠﴾

42. ನಿಸ್ಸಂದೇಹವಾಗಿಯೂ ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಅವು ಸ್ಥಾನಪಲ್ಲಟಗೊಳ್ಳದಂತೆ ಹಿಡಿದಿರಿಸುತ್ತಾನೆ. ಒಂದು ವೇಳೆ ಅವು ಸ್ಥಾನಪಲ್ಲಟಗೊಂಡರೆ ಅವನ ಹೊರತು ಅವುಗಳನ್ನು ಹಿಡಿದು ನಿಲ್ಲಿಸುವವನು ಯಾರೂ ಇಲ್ಲ. ನಿಶ್ಚಯವಾಗಿಯೂ ಅವನು ಸಹನಶೀಲನೂ ಅತಿಹೆಚ್ಚು ಕ್ಷಮಿಸುವವನೂ ಆಗಿದ್ದಾನೆ.

إِنَّ اللَّهَ يُمْسِكُ السَّمَاوَاتِ وَالْأَرْضَ أَن تَزُولَا ۚ وَلَئِن زَالَتَا إِنْ أَمْسَكَهُمَا مِنْ أَحَدٍ مِّن بَعْدِهِ ۚ إِنَّهُ كَانَ حَلِيمًا غَفُورًا ﴿٤١﴾

43. ತಮ್ಮ ಬಳಿಗೆ ಓರ್ವ (ದೈವಿಕ) ಮುನ್ನೆಚ್ಚರಿಕೆಗಾರನು ಬಂದರೆ, ಬೇರೆ ಯಾವುದೇ ಜನರಿಗಿಂತ ಉತ್ತಮವಾದ ರೀತಿಯಲ್ಲಿ ತಾವು ಆ ಮಾರ್ಗದರ್ಶನವನ್ನು ಅನುಸರಿಸುವೆವು ಎಂದು ಅವರು ಅಲ್ಲಾಹನ ನಾಮದಲ್ಲಿ ದೃಢ ಪ್ರತಿಜ್ಞೆ ಮಾಡಿದರು. ಆದರೆ ಅವರ ಬಳಿಗೆ ಒಬ್ಬ ಮುನ್ನೆಚ್ಚರಿಕೆಗಾರ ಬಂದಾಗ ಅದು ಅವರ ವಿದ್ವೇಷವನ್ನು ವೃದ್ಧಿಗೊಳಿಸಿತು -

وَأَقْسَمُوا بِاللَّهِ جَهْدَ أَيْمَانِهِمْ لَئِن جَاءَهُمْ نَذِيرٌ لَّيَكُونُنَّ أَهْدَىٰ مِنْ إِحْدَى الْأُمَمِ ۖ فَلَمَّا جَاءَهُمْ نَذِيرٌ مَّا زَادَهُمْ إِلَّا نُفُورًا ﴿٤٢﴾

44. ಭೂಮಿಯಲ್ಲಿ ಅಹಂಕಾರವನ್ನು ತೋರ್ಪಡಿಸುತ್ತಾ, ಕುತಂತ್ರ ಹೂಡುತ್ತಾ. ಆದರೆ ಕುತಂತ್ರ ಅವರನ್ನೇ ಸುತ್ತುವರಿಯುತ್ತದೆ. ಪೂರ್ವಜರೊಡನಿದ್ದ (ಅಲ್ಲಾಹನ) ವರ್ತನೆಯ ಹೊರತು ಬೇರೇನನ್ನಾದರೂ ಅವರು ನಿರೀಕ್ಷಿಸುತ್ತಾರೋ? ಆದರೆ ಅಲ್ಲಾಹನ ವರ್ತನೆಯಲ್ಲಿ ನೀನು ಯಾವುದೇ ಬದಲಾವಣೆಯನ್ನು ಕಾಣಲಾರೆ. ಅಲ್ಲಾಹನ ವರ್ತನೆಯಲ್ಲಿ ನೀನು ಯಾವುದೇ ವ್ಯತ್ಯಾಸವನ್ನೂ ಕಾಣಲಾರೆ.

اسْتِكْبَارًا فِي الْأَرْضِ وَمَكْرَ السَّيِّئِ ۚ وَلَا يَحِيقُ الْمَكْرُ السَّيِّئُ إِلَّا بِأَهْلِهِ ۚ فَهَلْ يَنظُرُونَ إِلَّا سُنَّتَ الْأَوَّلِينَ ۚ فَلَن تَجِدَ لِسُنَّتِ اللَّهِ تَبْدِيلًا ۖ وَلَن تَجِدَ لِسُنَّتِ اللَّهِ تَحْوِيلًا ﴿٤٣﴾





45. ಇವರು ಭೂಮಿಯಲ್ಲಿ ಸಂಚರಿಸಿ ಇವರ ಪೂರ್ವಜರ ಅಂತ್ಯ ಹೇಗಾಗಿತ್ತೆಂದು ಕಾಣಲಿಲ್ಲವೇ? ಅವರಾದರೋ ಇವರಿಗಿಂತ ಹೆಚ್ಚು ಬಲಿಷ್ಠರಾಗಿದ್ದರು. ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಇರುವ ಯಾವುದೇ ವಸ್ತುವಿಗೆ ಅಲ್ಲಾಹನನ್ನು (ಅವನ ಯೋಜನೆಯನ್ನು) ಸೋಲಿಸಲು ಸಾಧ್ಯವಿಲ್ಲ. ನಿಶ್ಚಯವಾಗಿಯೂ ಅವನು ಸರ್ವಜ್ಞನೂ ಸರ್ವಶಕ್ತನೂ ಆಗಿದ್ದಾನೆ.

أَوَلَمْ يَسِيرُوا فِي الْأَرْضِ فَيَنظُرُوا كَيْفَ كَانَ عَاقِبَةُ الَّذِينَ مِن قَبْلِهِمْ وَكَانُوا أَشَدَّ مِنْهُمْ قُوَّةً ۚ وَمَا كَانَ اللَّهُ لِيُعْجِزَهُ مِن شَيْءٍ فِي السَّمَاوَاتِ وَلَا فِي الْأَرْضِ ۚ إِنَّهُ كَانَ عَلِيمًا قَدِيرًا ﴿٤٤﴾

46. ಮನುಷ್ಯರು ಮಾಡಿದ ಪಾಪಗಳಿಗೆ ಅಲ್ಲಾಹನು ಅವರನ್ನು ಶಿಕ್ಷಿಸಿರುತ್ತಿದ್ದರೆ ಅದರ (ಭೂಮಿಯ) ಮೇಲೆ ಯಾವುದೇ ಜೀವಿಯನ್ನು ಅವನು ಬಾಕಿಯುಳಿಸುತ್ತಿರಲಿಲ್ಲ. ಆದರೆ ಒಂದು ನಿಗದಿತ ಸಮಯದ ವರೆಗೆ ಅವನು ಅವರಿಗೆ ಕಾಲಾವಕಾಶ ನೀಡುತ್ತಾನೆ. ಹಾಗೆ ಅವರ ಸಮಯ ಬಂದುಬಿಟ್ಟರೆ, ಅಲ್ಲಾಹನು ತನ್ನ ದಾಸರನ್ನು ಚೆನ್ನಾಗಿ ವೀಕ್ಷಿಸುತ್ತಿದ್ದಾನೆ (ಎಂದು ಅವರು ಮನಗಾಣುವರು).

وَلَوْ يُؤَاخِذُ اللَّهُ النَّاسَ بِمَا كَسَبُوا مَا تَرَكَ عَلَىٰ ظَهْرِهَا مِن دَابَّةٍ وَلَٰكِن يُؤَخِّرُهُمْ إِلَىٰ أَجَلٍ مُّسَمًّى ۖ فَإِذَا جَاءَ أَجَلُهُمْ فَإِنَّ اللَّهَ كَانَ بِعِبَادِهِ بَصِيرًا ﴿٤٥﴾

سُوْرَةُ يٰسٓ مَكِّيَّةٌ وَّهِيَ مَعَ الْبَسْمَلَةِ اَرْبَعٌ وَّثَمَانُوْنَ اٰيَةً وَّخَمْسَةُ رُكُوْعَاتٍ

# 36. ಯಾಸೀನ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 84 ಆಯತ್‌ಗಳು ಹಾಗೂ 5 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

يٰسٓ ②

**2. ಯಾ ಸೀನ್.**[395]

وَالْقُرْاٰنِ الْحَكِيْمِ ③

**3. ಜ್ಞಾನನಿಧಿಯಾದ ಖುರ್‌ಆನಿನಾಣೆ -**

اِنَّكَ لَمِنَ الْمُرْسَلِيْنَ ④

**4. ನೀನು ಸಂದೇಶವಾಹಕರ ಪೈಕಿ ಓರ್ವನಾಗಿರುವೆ;**

عَلٰى صِرَاطٍ مُّسْتَقِيْمٍ ⑤

**5.** (ನೀನು) **ಸತ್ಪಥದಲ್ಲಿರುವೆ.**

تَنْزِيْلَ الْعَزِيْزِ الرَّحِيْمِ ⑥

**6.** (ಇದು) **ಪ್ರತಾಪಶಾಲಿಯೂ ಕಾರುಣ್ಯನಿಧಿಯೂ ಆದವನಿಂದ ಅವತೀರ್ಣಗೊಂಡದ್ದಾಗಿದೆ -**

لِتُنْذِرَ قَوْمًا مَّآ اُنْذِرَ اٰبَآؤُهُمْ فَهُمْ غٰفِلُوْنَ ⑦

**7. ನೀನು ಒಂದು ಜನಾಂಗಕ್ಕೆ ಮುನ್ನೆಚ್ಚರಿಕೆ ನೀಡಲಿಕ್ಕೋಸ್ಕರ - ಅವರ ತಂದೆತಾತಂದಿರಿಗೆ ಮುನ್ನೆಚ್ಚರಿಕೆ ನೀಡಲಾಗಿಲ್ಲ. ಆದ್ದರಿಂದ ಅವರು ನಿರ್ಲಕ್ಷ್ಯರಾಗಿದ್ದರು.**

لَقَدْ حَقَّ الْقَوْلُ عَلٰٓى اَكْثَرِهِمْ فَهُمْ لَا يُؤْمِنُوْنَ ⑧

**8. ನಿಶ್ಚಯವಾಗಿಯೂ ನಮ್ಮ ವಚನ ಅವರಲ್ಲಿ ಹೆಚ್ಚಿನವರ ಬಗ್ಗೆ ಸತ್ಯವಾಗಿ ಈಡೇರಿದೆ. ಆದ್ದರಿಂದ ಅವರು ನಂಬುವುದಿಲ್ಲ.**[395A]

395. 'ಯಾಸೀನ್' 'ಯಾ ಸಯ್ಯಿದ್' ಎಂಬುದರ ಸಂಕ್ಷಿಪ್ತ ರೂಪವಾಗಿದೆ. ಅದರ ಅರ್ಥ 'ಎಲೈ ಶ್ರೇಷ್ಠ ನೇತಾರ' ಎಂದಾಗಿದೆ. ಮುಂದಿನ ವಚನಗಳು ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ಶ್ರೇಷ್ಠ ನೇತಾರ ಎಂಬುದಕ್ಕೆ ಪುರಾವೆ ನೀಡುತ್ತವೆ.

395A. ಇದೇ ಅಧ್ಯಾಯದ "ಹಾ ಮನುಷ್ಯರ ದುರದೃಷ್ಟವೇ! ಅವರ ಅಪಹಾಸ್ಯಕ್ಕೆ ಗುರಿಯಾಗದೆ ಯಾವ ಪ್ರವಾದಿಯೂ ಅವರ ಬಳಿಗೆ ಬರುವುದಿಲ್ಲ " ಎಂಬ 31ನೇ ವಚನವನ್ನು ಇಲ್ಲಿ ಸೂಚಿಸಲಾಗಿದೆ.





اِنَّا جَعَلْنَا فِيْٓ اَعْنَاقِهِمْ اَغْلٰلًا فَهِيَ اِلَى الْاَذْقَانِ فَهُمْ مُّقْمَحُوْنَ ⑨

**9. ಅವರ ಕುತ್ತಿಗೆಗಳಿಗೆ ನಾವು ಕೊರಳಪಟ್ಟಿಗಳನ್ನು ತೊಡಿಸಿದ್ದೇವೆ.**[395B] **ಅವು ಅವರ ಗಲ್ಲಗಳ ವರೆಗೆ ತಲಪುತ್ತವೆ. ಆದ್ದರಿಂದ ಅವರ ತಲೆಗಳು ಹಿಂದಕ್ಕೆ ಎಳೆಯಲ್ಪಟ್ಟಿವೆ.**

وَجَعَلْنَا مِنْۢ بَيْنِ اَيْدِيْهِمْ سَدًّا وَّمِنْ خَلْفِهِمْ سَدًّا فَاَغْشَيْنٰهُمْ فَهُمْ لَا يُبْصِرُوْنَ ⑩

**10. ನಾವು ಅವರ ಮುಂದುಗಡೆ ಒಂದು ತಡೆಯನ್ನಿರಿಸಿದ್ದೇವೆ. ಅವರ ಹಿಂದುಗಡೆ ಸಹ ಒಂದು ತಡೆಯನ್ನಿರಿಸಿದ್ದೇವೆ.**[395C] **ಹಾಗೆ ನಾವು ಅವರನ್ನು ಮುಚ್ಚಿಬಿಟ್ಟಿದ್ದೇವೆ.**[395D] **ಆದ್ದರಿಂದ ಅವರು ಏನನ್ನೂ ಕಾಣಲಾರರು.**

وَسَوَآءٌ عَلَيْهِمْ ءَاَنْذَرْتَهُمْ اَمْ لَمْ تُنْذِرْهُمْ لَا يُؤْمِنُوْنَ ⑪

**11. ನೀನು ಅವರಿಗೆ ಮುನ್ನೆಚ್ಚರಿಕೆ ನೀಡಿದರೂ ನೀಡದಿದ್ದರೂ ಅವರಿಗೆ ಅದು ಸಮಾನ; ಅವರು ನಂಬಲಾರರು.**

اِنَّمَا تُنْذِرُ مَنِ اتَّبَعَ الذِّكْرَ وَخَشِيَ الرَّحْمٰنَ بِالْغَيْبِ ۚ فَبَشِّرْهُ بِمَغْفِرَةٍ وَّاَجْرٍ كَرِيْمٍ ⑫

**12. ಯಾವನು ದಿವ್ಯೋಪದೇಶವನ್ನು ಅನುಸರಿಸುತ್ತಾನೋ ಮತ್ತು ಏಕಾಂತದಲ್ಲಿ ಕೂಡ ದಯಾವಂತನಿಗೆ** (ಅಲ್ಲಾಹನಿಗೆ) **ಭಯಪಡುತ್ತಾನೋ ಅವನಿಗೆ ಮಾತ್ರ ನೀನು** (ಸರಿಯಾದ) **ಮುನ್ನೆಚ್ಚರಿಕೆಯನ್ನು ನೀಡಬಲ್ಲೆ. ಆದ್ದರಿಂದ ಅವನಿಗೆ ಕ್ಷಮೆ ಮತ್ತು ಶ್ರೇಷ್ಠತಮ ಪ್ರತಿಫಲದ ಬಗ್ಗೆ ಶುಭವಾರ್ತೆ ತಿಳಿಸು.**

اِنَّا نَحْنُ نُحْيِ الْمَوْتٰى وَنَكْتُبُ مَا قَدَّمُوْا وَاٰثَارَهُمْ ۭ وَكُلَّ شَيْءٍ اَحْصَيْنٰهُ فِيْٓ اِمَامٍ مُّبِيْنٍ ⑬ ع ١٨

**13. ನಿಶ್ಚಯವಾಗಿಯೂ ಮೃತಪಟ್ಟವರನ್ನು ನಾವೇ ಜೀವಂತಗೊಳಿಸುತ್ತೇವೆ. ಅವರು ಮುಂದೆ ಕಳುಹಿಸಿದುದನ್ನೂ ಹಿಂದೆ ಬಿಟ್ಟು ಹೋದುದನ್ನೂ ನಾವು ದಾಖಲಿಸುತ್ತೇವೆ. ಸರ್ವವನ್ನೂ ನಾವೊಂದು ಸ್ಪಷ್ಟವಾದ ಪುಸ್ತಕದಲ್ಲಿ ದಾಖಲೆಪಡಿಸಿದ್ದೇವೆ.**

395B. ಜನರ ಕೆಲವು ಅಂಧ ವಿಶ್ವಾಸಗಳನ್ನೂ ಅನಾಚಾರಗಳನ್ನೂ ಇಲ್ಲಿ ಸೂಚಿಸಲಾಗಿದೆ. ಆ ಕಾರಣದಿಂದ ಸರಿಯಾಗಿ ಚಿಂತನೆಮಾಡಿ ಸತ್ಯವೇನೆಂದು ಮನಗಾಣಲಿಕ್ಕೆ ಅವರಿಗೆ ಸಾಧ್ಯವಾಗುವುದಿಲ್ಲ.

395C. ಪತ್ನಿ ಮಕ್ಕಳಿಂದಲೂ ಕುಟುಂಬದ ಬಾಂಧವರಿಂದಲೂ ಸುತ್ತುಮುತ್ತಲಿಂದಲೂ ಉಂಟಾಗುವ ಒತ್ತಡ ಎಂದು ತಾತ್ಪರ್ಯ.

395D. ಇದರ ಅರ್ಥ ಅವರು ಸತ್ಪಥದಲ್ಲಿ ಆಗುವುದಕ್ಕೆ ಅಲ್ಲಾಹನು ತಡೆಯೊಡ್ಡಿದನು ಎಂದಲ್ಲ. ಬದಲು, ಅವರು ತಮ್ಮ ಸ್ವಂತ ಕರ್ಮದೋಷದಿಂದ, ಸತ್ಪಥಗಳಿಸುವುದಕ್ಕೆ ತಮ್ಮನ್ನು ಸ್ವಯಂ ಅನರ್ಹಗೊಳಿಸಿದ್ದಾರೆ ಎಂದಾಗಿದೆ. ಕರ್ಮಕ್ಕೆ ತಕ್ಕ ಫಲ ನೀಡುವವನು ಅಲ್ಲಾಹನಾದ್ದರಿಂದ ಆ ಕರ್ಮಗಳನ್ನು ಸಹ ಅಲ್ಲಾಹನು ತನ್ನೊಂದಿಗೆ ಸೇರಿಸಿ ಹೇಳಿದ್ದಾನೆ. ಇದು ಖುರ್‌ಆನಿನ ಒಂದು ನಿರೂಪಣ ಶೈಲಿಯಾಗಿದೆ.

**14.** ಒಂದು ಊರಿನವರ ಬಳಿಗೆ ದೇವ ಸಂದೇಶ ವಾಹಕರು ಆಗಮಿಸಿದ್ದ ಸಂಭವವನ್ನು ಉದಾಹರಣಾರ್ಥ ನೀನು ಅವರಿಗೆ ವಿವರಿಸಿಕೊಡು.

وَاضْرِبْ لَهُمْ مَّثَلًا اَصْحٰبَ الْقَرْيَةِ ۘ اِذْ جَآءَهَا الْمُرْسَلُوْنَ ۚ ﴿١٣﴾

**15.** ಅವರ ಬಳಿಗೆ ನಾವು ಇಬ್ಬರು ಸಂದೇಶವಾಹಕರನ್ನು ಕಳುಹಿಸಿದಾಗ ಅವರಿಬ್ಬರನ್ನೂ ಅವರು ಸುಳ್ಳಾಗಿಸಿದರು. ಆದ್ದರಿಂದ ಮೂರನೆಯವನ ಮೂಲಕ ನಾವು (ಅವರನ್ನು) ಬಲಪಡಿಸಿದೆವು. 'ನಾವು ನಿಮ್ಮ ಬಳಿಗೆ ದಿಟವಾಗಿಯೂ ಸಂದೇಶವಾಹಕರಾಗಿ ಬಂದಿದ್ದೇವೆ' ಎಂದು ಅವರು (ಮೂವರೂ) ಹೇಳಿದರು.

اِذْ اَرْسَلْنَآ اِلَيْهِمُ اثْنَيْنِ فَكَذَّبُوْهُمَا فَعَزَّزْنَا بِثَالِثٍ فَقَالُوْٓا اِنَّآ اِلَيْكُمْ مُّرْسَلُوْنَ ﴿١٤﴾

**16.** (ಆಗ) ಅವರು (ಊರಿನವರು) ಹೇಳಿದರು: 'ನೀವು ನಮ್ಮ ಹಾಗೆಯೇ ಮನುಷ್ಯರು. ದಯಾವಂತನು (ಅಲ್ಲಾಹನು) ಏನನ್ನೂ ಅವತೀರ್ಣಗೊಳಿಸಿಲ್ಲ; ನೀವು ಸುಳ್ಳು ಹೇಳುತ್ತಿದ್ದೀರಿ.'

قَالُوْا مَآ اَنْتُمْ اِلَّا بَشَرٌ مِّثْلُنَا ۙ وَمَآ اَنْزَلَ الرَّحْمٰنُ مِنْ شَيْءٍ ۙ اِنْ اَنْتُمْ اِلَّا تَكْذِبُوْنَ ﴿١٥﴾

**17.** ಅವರು (ಸಂದೇಶವಾಹಕರು) ಹೇಳಿದರು: 'ನಾವು ನಿಮ್ಮ ಬಳಿಗೆ ಕಳುಹಿಸಲ್ಪಟ್ಟ (ಅಲ್ಲಾಹನ) ಸಂದೇಶವಾಹಕರೆಂದು ನಮ್ಮ ಪ್ರಭು ಬಲ್ಲನು.

قَالُوْا رَبُّنَا يَعْلَمُ اِنَّآ اِلَيْكُمْ لَمُرْسَلُوْنَ ﴿١٦﴾

**18.** 'ಸಂದೇಶವನ್ನು ಸ್ಪಷ್ಟಪಡಿಸಿ ತಲಪಿಸುವುದೇ ನಮ್ಮ ಹೊಣೆಗಾರಿಕೆಯಾಗಿದೆ.'

وَمَا عَلَيْنَآ اِلَّا الْبَلٰغُ الْمُبِيْنُ ﴿١٧﴾

**19.** ಅವರು (ಊರಿನವರು) ಹೇಳಿದರು: 'ನಾವು ನಿಮ್ಮಿಂದ ಅಪಶಕುನವನ್ನು ಕಾಣುತ್ತಿದ್ದೇವೆ. ನೀವು (ನಿಮ್ಮ ಉಪದೇಶವನ್ನು) ನಿಲ್ಲಿಸದಿದ್ದರೆ ನಾವು ನಿಮ್ಮನ್ನು ಕಲ್ಲೆಸೆದು ಕೊಲ್ಲುವೆವು. ಒಂದು ಯಾತನಾಮಯವಾದ ಶಿಕ್ಷೆಯನ್ನು ನೀವು ನಮ್ಮ ಕೈಯಿಂದ ಅನುಭವಿಸುವಿರಿ.'

قَالُوْٓا اِنَّا تَطَيَّرْنَا بِكُمْ ۚ لَئِنْ لَّمْ تَنْتَهُوْا لَنَرْجُمَنَّكُمْ وَلَيَمَسَّنَّكُمْ مِّنَّا عَذَابٌ اَلِيْمٌ ﴿١٨﴾

**20.** (ಆಗ) ಅವರು ಉತ್ತರಿಸಿದರು: 'ನಿಮ್ಮ ಅಪಶಕುನ ನಿಮ್ಮೊಂದಿಗೆಯೇ ಇದೆ. ನಿಮಗೆ ಉಪದೇಶ ನೀಡಿದುದಕ್ಕಾಗಿ (ನೀವು ಹೀಗೆ ಹೇಳುತ್ತಿದ್ದೀರಾ)? ನೀವಾದರೋ ಎಲ್ಲ ಹದ್ದುಬಸ್ತುಗಳನ್ನೂ ಮೀರಿದ ಜನರಾಗಿದ್ದೀರಿ.'

قَالُوْا طَآئِرُكُمْ مَّعَكُمْ ۗ اَئِنْ ذُكِّرْتُمْ ۗ بَلْ اَنْتُمْ قَوْمٌ مُّسْرِفُوْنَ ﴿١٩﴾





**21.** ಆ ಪಟ್ಟಣದ ಅತಿ ದೂರದ ಕಡೆಯಿಂದ ಒಬ್ಬ ಮನುಷ್ಯ ಓಡಿಕೊಂಡು ಬಂದನು. ಅವನು ಹೇಳಿದನು: 'ಎಲೈ ನನ್ನ ಜನರೇ, ನೀವು ಸಂದೇಶವಾಹಕರನ್ನು ಅನುಸರಿಸಿರಿ.

وَجَآءَ مِنْ اَقْصَا الْمَدِيْنَةِ رَجُلٌ يَّسْعٰى قَالَ يٰقَوْمِ اتَّبِعُوا الْمُرْسَلِيْنَ ﴿٢٠﴾

**22.** 'ನಿಮ್ಮಿಂದ ಯಾವುದೇ ಪ್ರತಿಫಲವನ್ನು ಬಯಸದ ಅವರನ್ನು ನೀವು ಅನುಸರಿಸಿರಿ. ಅವರಾದರೋ ಸತ್ಪಥವನ್ನು ಗಳಿಸಿದವರಾಗಿದ್ದಾರೆ.

اتَّبِعُوْا مَنْ لَّا يَسْـَٔلُكُمْ اَجْرًا وَّهُمْ مُّهْتَدُوْنَ ﴿٢١﴾

**23.** 'ನನ್ನನ್ನು ಸೃಷ್ಟಿಸಿದವನನ್ನು ಆರಾಧಿಸದಿರಲಿಕ್ಕೆ ನನಗೇನಾಗಿದೆ? ಅವನ ಬಳಿಗೆಯೇ ನೀವು ಮರಳಿಸಲ್ಪಡುವಿರಿ.

وَمَا لِيَ لَآ اَعْبُدُ الَّذِيْ فَطَرَنِيْ وَاِلَيْهِ تُرْجَعُوْنَ ﴿٢٢﴾

**24.** 'ಅವನನ್ನು ಬಿಟ್ಟು ಬೇರೆ ದೇವರುಗಳನ್ನು ನಾನು ಸ್ವೀಕರಿಸಬೇಕೇ? ಆ ದಯಾವಂತನು ನನಗೇನಾದರೂ ಹಾನಿಮಾಡಲು ಬಯಸಿದರೆ ಅವರ ಶಿಫಾರಸು ನನಗೇನೂ ಪ್ರಯೋಜನವಾಗಲಾರದು. ಅವರು ನನ್ನನ್ನು ರಕ್ಷಿಸಲಿಕ್ಕೆ ಕೂಡ ಶಕ್ತರಲ್ಲ.

ءَاَتَّخِذُ مِنْ دُوْنِهٖٓ اٰلِهَةً اِنْ يُّرِدْنِ الرَّحْمٰنُ بِضُرٍّ لَّا تُغْنِ عَنِّيْ شَفَاعَتُهُمْ شَيْـًٔا وَّلَا يُنْقِذُوْنِ ﴿٢٣﴾

**25.** 'ಹಾಗೆ ಮಾಡಿದರೆ ನಾನು ಖಂಡಿತವಾಗಿಯೂ ದೊಡ್ಡ ತಪ್ಪು ಮಾಡಿದವನಾಗುವೆನು.

اِنِّيْٓ اِذًا لَّفِيْ ضَلٰلٍ مُّبِيْنٍ ﴿٢٤﴾

**26.** 'ನಾನು ನಿಮ್ಮ ಪ್ರಭುವನ್ನು ನಂಬುತ್ತೇನೆ. ಆದ್ದರಿಂದ ನೀವು ನನ್ನ ಮಾತನ್ನು ಆಲಿಸಿರಿ.'

اِنِّيْٓ اٰمَنْتُ بِرَبِّكُمْ فَاسْمَعُوْنِ ﴿٢٥﴾

**27.** 'ಸ್ವರ್ಗದಲ್ಲಿ ಪ್ರವೇಶಿಸು' ಎಂದು (ಆತನೊಡನೆ) ಹೇಳಲಾಯಿತು. ಆತನು ಹೇಳಿದನು: 'ಅಕಟಾ, ನನ್ನ ಜನರು ತಿಳಿದಿರುತ್ತಿದ್ದರೆ ! -

قِيْلَ ادْخُلِ الْجَنَّةَ ۗ قَالَ يٰلَيْتَ قَوْمِيْ يَعْلَمُوْنَ ﴿٢٦﴾

**28.** 'ನನ್ನ ಪ್ರಭು ಹೇಗೆ ನನ್ನನ್ನು (ದಯಾದೃಷ್ಟಿಯಿಂದ) ಕ್ಷಮಿಸಿ ಗೌರವಾನ್ವಿತರಲ್ಲಿ ಒಬ್ಬನನ್ನಾಗಿ ಮಾಡಿದನು! (ಎಂಬುದನ್ನು).'

بِمَا غَفَرَ لِيْ رَبِّيْ وَجَعَلَنِيْ مِنَ الْمُكْرَمِيْنَ ﴿٢٧﴾

**29.** ಆತನ ಬಳಿಕ ಆತನ ಜನರ ಮೇಲೆ ಆಕಾಶದಿಂದ ಒಂದು ಸೈನ್ಯವನ್ನು ನಾವು ಇಳಿಸಲಿಲ್ಲ. ಹಾಗೆ ನಾವು ಇಳಿಸುವುದೂ ಇಲ್ಲ.

وَمَآ اَنْزَلْنَا عَلٰى قَوْمِهٖ مِنْ بَعْدِهٖ مِنْ جُنْدٍ مِّنَ السَّمَآءِ وَمَا كُنَّا مُنْزِلِيْنَ ﴿٢٨﴾

**30.** ಅದು ಒಂದು ಸ್ಫೋಟವಾಗಿತ್ತು. ಆಗ ಅವರೆಲ್ಲ ನಿರ್ನಾಮವಾದರು.

إِنْ كَانَتْ إِلَّا صَيْحَةً وَّاحِدَةً فَإِذَا هُمْ خَامِدُوْنَ ﴿٣٠﴾

**31.** ಹಾ ಮನುಷ್ಯರ ದುರದೃಷ್ಟವೇ! ಅವರ ಅಪಹಾಸ್ಯಕ್ಕೆ ಗುರಿಯಾಗದೆ ಯಾವ ಪ್ರವಾದಿಯೂ ಅವರ ಬಳಿಗೆ ಬರುವುದಿಲ್ಲ!

يٰحَسْرَةً عَلَى الْعِبَادِ ۚ مَا يَأْتِيْهِمْ مِّنْ رَّسُوْلٍ إِلَّا كَانُوْا بِهٖ يَسْتَهْزِءُوْنَ ﴿٣١﴾

**32.** ಇವರು ಕಾಣಲಿಲ್ಲವೇ?- ಇವರಿಗೆ ಮುಂಚೆ ಎಷ್ಟೆಲ್ಲ ಪೀಳಿಗೆಗಳನ್ನು ನಾವು ನಾಶಪಡಿಸಿದೆವು. ಅವರು ಇವರ ಬಳಿಗೆ ಮರಳುವುದೂ ಇಲ್ಲ.

أَلَمْ يَرَوْا كَمْ أَهْلَكْنَا قَبْلَهُمْ مِّنَ الْقُرُوْنِ أَنَّهُمْ إِلَيْهِمْ لَا يَرْجِعُوْنَ ﴿٣٢﴾

**33.** ಅವರೆಲ್ಲರೂ ಒಟ್ಟಾಗಿ ನಮ್ಮ ಮುಂದೆ ಹಾಜರುಗೊಳಿಸಲ್ಪಡುವವರಾಗಿದ್ದಾರೆ.

وَإِنْ كُلٌّ لَّمَّا جَمِيْعٌ لَّدَيْنَا مُحْضَرُوْنَ ﴿٣٣﴾

**34.** ನಿರ್ಜೀವವಾದ ಭೂಪ್ರದೇಶ ಅವರಿಗೊಂದು ದೃಷ್ಟಾಂತವಾಗಿದೆ. ನಾವು ಅದನ್ನು ಜೀವಂತಗೊಳಿಸಿ ಅದರಿಂದ ಧಾನ್ಯಗಳನ್ನು ಹೊರಡಿಸುತ್ತೇವೆ. ಹಾಗೆ ಅದರಿಂದ ಅವರು ತಿನ್ನುತ್ತಾರೆ.

وَاٰيَةٌ لَّهُمُ الْأَرْضُ الْمَيْتَةُ ۚ أَحْيَيْنٰهَا وَأَخْرَجْنَا مِنْهَا حَبًّا فَمِنْهُ يَأْكُلُوْنَ ﴿٣٤﴾

**35.** ಅದರಲ್ಲಿ ಖರ್ಜೂರ ಮತ್ತು ದ್ರಾಕ್ಷೆಯ ತೋಟಗಳು ಸಹ ಬೆಳೆಯುವಂತೆ ನಾವು ಮಾಡಿದ್ದೇವೆ. ನೀರಿನ ಚಿಲುಮೆ ಉಕ್ಕಿ ಹರಿಯುವಂತೆಯೂ ಮಾಡಿದ್ದೇವೆ -

وَجَعَلْنَا فِيْهَا جَنّٰتٍ مِّنْ نَّخِيْلٍ وَّأَعْنَابٍ وَّفَجَّرْنَا فِيْهَا مِنَ الْعُيُوْنِ ﴿٣٥﴾

**36.** ಅವುಗಳ ಹಣ್ಣುಗಳಿಂದ ಅವರು ತಿನ್ನಲಿಕ್ಕೋಸ್ಕರ. ಅದು ಅವರ ಕೈಗಳು ಮಾಡಿದುದಲ್ಲ. ಹಾಗಿದ್ದೂ ಕೂಡ ಅವರು ಕೃತಜ್ಞತೆ ತೋರಿಸುವುದಿಲ್ಲವೇ?

لِيَأْكُلُوْا مِنْ ثَمَرِهٖ ۙ وَمَا عَمِلَتْهُ أَيْدِيْهِمْ ۚ أَفَلَا يَشْكُرُوْنَ ﴿٣٦﴾

**37.** ಭೂಮಿ ಉತ್ಪಾದಿಸುವುದರಲ್ಲಿಯೂ ಜನರಲ್ಲಿಯೂ ಅವರು ತಿಳಿಯದಿರುವುದರಲ್ಲಿಯೂ ಎಲ್ಲ ಜೋಡಿಗಳನ್ನು ಸೃಷ್ಟಿಸಿದವನು ಪವಿತ್ರನು.

سُبْحٰنَ الَّذِيْ خَلَقَ الْأَزْوَاجَ كُلَّهَا مِمَّا تُنْۢبِتُ الْأَرْضُ وَمِنْ أَنْفُسِهِمْ وَمِمَّا لَا يَعْلَمُوْنَ ﴿٣٧﴾





**38.** ರಾತ್ರಿ ಸಹ ಅವರಿಗೊಂದು ದೃಷ್ಟಾಂತ. ಅದರಿಂದ ನಾವು ಹಗಲನ್ನು ನೀಗಿಸುತ್ತೇವೆ. ಆಗ ಅವರು ಅದೋ ಅಂಧಕಾರದಲ್ಲಾಗುತ್ತಾರೆ.

وَاٰيَةٌ لَّهُمُ الَّيْلُ ۚ نَسْلَخُ مِنْهُ النَّهَارَ فَإِذَا هُمْ مُّظْلِمُوْنَ ﴿٣٨﴾

**39.** ಸೂರ್ಯ ಅದರ ನಿಶ್ಚಿತ ಗುರಿಯೆಡೆಗೆ ಚಲಿಸುತ್ತದೆ. ಅದು ಪ್ರತಾಪಶಾಲಿಯೂ ಸರ್ವಜ್ಞನೂ ಆದವನ ವಿಧಿ ಪ್ರಕಾರವಾಗಿದೆ.

وَالشَّمْسُ تَجْرِيْ لِمُسْتَقَرٍّ لَّهَا ۚ ذٰلِكَ تَقْدِيْرُ الْعَزِيْزِ الْعَلِيْمِ ﴿٣٩﴾

**40.** ಚಂದ್ರನಿಗೆ ನಾವು ಕೆಲವು ಹಂತಗಳನ್ನು ನಿರ್ಣಯಿಸಿದ್ದೇವೆ. ಹಾಗೆ ಅದು (ಕೊನೆಗೆ) ಖರ್ಜೂರ ಮರದ ಹಳೆಯ ಕೊಂಬೆಯಂತಾಗುತ್ತದೆ.

وَالْقَمَرَ قَدَّرْنٰهُ مَنَازِلَ حَتّٰى عَادَ كَالْعُرْجُوْنِ الْقَدِيْمِ ﴿٤٠﴾

**41.** ಸೂರ್ಯನು ಚಂದ್ರನನ್ನು ತಲಪುವುದು ಅಸಾಧ್ಯ. ರಾತ್ರಿಯು ಹಗಲನ್ನು ಸಹ ಹಿಂದೆ ಹಾಕಲಾರದು. ಎಲ್ಲವೂ ನಿರ್ದಿಷ್ಟ ಪಥದಲ್ಲಿ ಸಂಚರಿಸುತ್ತವೆ.

لَا الشَّمْسُ يَنْۢبَغِيْ لَهَآ أَنْ تُدْرِكَ الْقَمَرَ وَلَا الَّيْلُ سَابِقُ النَّهَارِ ۚ وَكُلٌّ فِيْ فَلَكٍ يَّسْبَحُوْنَ ﴿٤١﴾

**42.** ಅವರ ಸಂತತಿಗಳನ್ನು, ತುಂಬಿದ ಹಡಗಿನಲ್ಲಿ ನಾವು ಹೇರಿಕೊಂಡುದು ಸಹ ಅವರಿಗೊಂದು ದೃಷ್ಟಾಂತವಾಗಿದೆ.

وَاٰيَةٌ لَّهُمْ أَنَّا حَمَلْنَا ذُرِّيَّتَهُمْ فِي الْفُلْكِ الْمَشْحُوْنِ ﴿٤٢﴾

**43.** ಅಂತಹ (ಬೇರೆ) ವಾಹನಗಳನ್ನು ಸಹ ಅವರಿಗಾಗಿ ನಾವು ಸೃಷ್ಟಿಸಿದ್ದೇವೆ - ಅವುಗಳಲ್ಲಿ ಅವರು ಸಂಚರಿಸುವರು.

وَخَلَقْنَا لَهُمْ مِّنْ مِّثْلِهٖ مَا يَرْكَبُوْنَ ﴿٤٣﴾

**44.** ನಾವು ಇಚ್ಛಿಸಿದರೆ ಅವರನ್ನು ನಾವು ಮುಳುಗಿಸಿಬಿಡಬಲ್ಲೆವು. ಆಗ ಅವರ ಸಹಾಯಕ್ಕೆ ಯಾರೂ ಇರಲಿಕ್ಕಿಲ್ಲ. ಅವರು ರಕ್ಷಿಸಲ್ಪಡಲಿಕ್ಕೂ ಇಲ್ಲ-

وَإِنْ نَّشَأْ نُغْرِقْهُمْ فَلَا صَرِيْخَ لَهُمْ وَلَا هُمْ يُنْقَذُوْنَ ﴿٤٤﴾

**45.** ನಮ್ಮಿಂದ ಒಂದು ಕೃಪೆಯಾಗಿ ಮತ್ತು ಒಂದು ನಿರ್ದಿಷ್ಟ ಕಾಲದ ವರೆಗೆ ಜೀವನದ ಸುಖವನ್ನು ಅನುಭವಿಸಲಿಕ್ಕಾಗಿ ಹೊರತು.

إِلَّا رَحْمَةً مِّنَّا وَمَتَاعًا إِلٰى حِيْنٍ ﴿٤٥﴾

**46.** 'ನಿಮ್ಮ ಮೇಲೆ ಕರುಣೆ ತೋರಿಸಲ್ಪಡಲಿಕ್ಕಾಗಿ ನೀವು ನಿಮ್ಮ ಮುಂದೆ ಮತ್ತು ಹಿಂದೆ ಇರುವುದರ ಬಗ್ಗೆ

وَإِذَا قِيْلَ لَهُمُ اتَّقُوْا مَا بَيْنَ أَيْدِيْكُمْ

ಜಾಗರೂಕರಾಗಿರಿ' ಎಂದು ಅವರೊಡನೆ ಹೇಳಿದಾಗ (ಅವರದನ್ನು ಗಮನಿಸುವುದಿಲ್ಲ).

وَمَا خَلْفَكُمْ لَعَلَّكُمْ تُرْحَمُونَ ﴿٤٥﴾

47. ಅವರ ಪ್ರಭುವಿನ ದೃಷ್ಟಾಂತಗಳ ಪೈಕಿ ಯಾವುದೇ ದೃಷ್ಟಾಂತ ಅವರ ಬಳಿಗೆ ಬಂದರೂ ಅವರು ಅದರಿಂದ ಮುಖ ತಿರುಗಿಸದೆ ಇರುವುದಿಲ್ಲ.

وَمَا تَأْتِيهِم مِّنْ آيَةٍ مِّنْ آيَاتِ رَبِّهِمْ إِلَّا كَانُوا عَنْهَا مُعْرِضِينَ ﴿٤٦﴾

48. 'ಅಲ್ಲಾಹನು ನಿಮಗೆ ಏನನ್ನು ನೀಡಿದ್ದಾನೋ ಅದರಿಂದ ಖರ್ಚುಮಾಡಿರಿ' ಎಂದು ಅವರೊಡನೆ ಹೇಳಲಾದಾಗ ವಿಶ್ವಾಸಿಗಳೊಡನೆ ಅವಿಶ್ವಾಸಿಗಳು, 'ಅಲ್ಲಾಹನು ಬಯಸಿದ್ದರೆ ಸ್ವತಃ ತಾನೇ ಯಾರಿಗೆ ಆಹಾರ ನೀಡುತ್ತಿದ್ದನೋ ಅಂಥವನಿಗೆ ನಾವು ಆಹಾರ ನೀಡಬೇಕೇ? ನೀವು ಸ್ಪಷ್ಟವಾದ ತಪ್ಪಿನಲ್ಲಿದ್ದೀರಿ' ಎಂದು ಹೇಳುತ್ತಾರೆ.

وَإِذَا قِيلَ لَهُمْ أَنفِقُوا مِمَّا رَزَقَكُمُ اللَّهُ قَالَ الَّذِينَ كَفَرُوا لِلَّذِينَ آمَنُوا أَنُطْعِمُ مَن لَّوْ يَشَاءُ اللَّهُ أَطْعَمَهُ إِنْ أَنتُمْ إِلَّا فِي ضَلَالٍ مُّبِينٍ ﴿٤٧﴾

49. 'ನೀವು ಸತ್ಯವಂತರೆಂದಾದರೆ ಈ ವಾಗ್ದಾನ ಯಾವಾಗ (ಈಡೇರುವುದು)?' ಎಂದು ಸಹ ಅವರು (ಅವಿಶ್ವಾಸಿಗಳು) ಕೇಳುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ﴿٤٨﴾

50. ಒಂದು ಭಯಾನಕ ಶಬ್ದವನ್ನಲ್ಲದೆ ಬೇರೇನನ್ನೂ ಅವರು ನಿರೀಕ್ಷಿಸುವುದಿಲ್ಲ. ಅವರು ವಾಗ್ವಾದ ಮಾಡುತ್ತಿರುವಾಗ ಅದು ಅವರನ್ನು ಸೆರೆಹಿಡಿಯುವುದು.

مَا يَنظُرُونَ إِلَّا صَيْحَةً وَاحِدَةً تَأْخُذُهُمْ وَهُمْ يَخِصِّمُونَ ﴿٤٩﴾

51. ಆಗ ಅವರಿಗೆ ಮೃತ್ಯುಪತ್ರ ಮಾಡಲು ಸಾಧ್ಯವಿಲ್ಲ. ಅವರ ಕುಟುಂಬದ ಬಳಿಗೆ ತೆರಳಲಿಕ್ಕೂ ಅವರಿಗೆ ಸಾಧ್ಯವಿಲ್ಲ.

فَلَا يَسْتَطِيعُونَ تَوْصِيَةً وَلَا إِلَىٰ أَهْلِهِمْ يَرْجِعُونَ ﴿٥٠﴾

52. ಕಹಳೆ ಊದಲ್ಪಡುವುದು. ಆಗ ಅಗೋ ಅವರು ಸಮಾಧಿಗಳಿಂದ (ಎದ್ದು) ತಮ್ಮ ಪ್ರಭುವಿನ ಬಳಿಗೆ ತ್ವರಿತವಾಗಿ ಧಾವಿಸುವರು.

وَنُفِخَ فِي الصُّورِ فَإِذَا هُم مِّنَ الْأَجْدَاثِ إِلَىٰ رَبِّهِمْ يَنسِلُونَ ﴿٥١﴾

53. ಅವರು ಹೀಗೆ ಹೇಳುವರು: 'ಹಾ ನಮ್ಮ ದುರದೃಷ್ಟವೇ! ನಮ್ಮ ಗೋರಿಗಳಿಂದ ನಮ್ಮನ್ನು ಎಬ್ಬಿಸಿದ್ದು ಯಾರು? ಇದು ದಯಾವಂತನಾದ ಅಲ್ಲಾಹನ ವಾಗ್ದಾನವೇ ಆಗಿದೆ. ದೇವಸಂದೇಶವಾಹಕರು

قَالُوا يَا وَيْلَنَا مَن بَعَثَنَا مِن مَّرْقَدِنَا ۜ هَٰذَا مَا وَعَدَ الرَّحْمَٰنُ وَصَدَقَ





ನುಡಿದದ್ದು ಸತ್ಯ ಸಂಗತಿಯೇ ಆಗಿದೆ.'

الْمُرْسَلُونَ ﴿٥٢﴾

54. ಅದೊಂದು ಸ್ಫೋಟ ಮಾತ್ರ. ಆಗ ಅದೋ ಅವರು ನಮ್ಮ ಮುಂದೆ ಹಾಜರುಗೊಳಿಸಲ್ಪಡುವರು.

إِن كَانَتْ إِلَّا صَيْحَةً وَاحِدَةً فَإِذَا هُمْ جَمِيعٌ لَّدَيْنَا مُحْضَرُونَ ﴿٥٣﴾

55. ಅಂದು ಯಾರಿಗೂ ಅನ್ಯಾಯವಾಗದು. ನಿಮ್ಮ ಕೃತ್ಯಗಳಿಗೆ ಹೊರತು ನಿಮಗೆ ಪ್ರತಿಫಲವನ್ನು ಸಹ ನೀಡಲಾಗದು.

فَالْيَوْمَ لَا تُظْلَمُ نَفْسٌ شَيْئًا وَلَا تُجْزَوْنَ إِلَّا مَا كُنتُمْ تَعْمَلُونَ ﴿٥٤﴾

56. ನಿಶ್ಚಯವಾಗಿಯೂ ಸ್ವರ್ಗವಾಸಿಗಳು ಅಂದು ತಮ್ಮ ಕಾಯಕದಲ್ಲಿ (ದೇವಸ್ಮರಣೆಯಲ್ಲಿ) ಆನಂದಾತಿರೇಕದಿಂದ ಇರುವರು.

إِنَّ أَصْحَابَ الْجَنَّةِ الْيَوْمَ فِي شُغُلٍ فَاكِهُونَ ﴿٥٥﴾

57. ಅವರು ಮತ್ತು ಅವರ ಸಂಗಾತಿಗಳು ನೆರಳಿನಲ್ಲಿ (ಇರಿಸಿರುವ) ಸುಖಾಸನಗಳಲ್ಲಿ ಪವಡಿಸುವರು.

هُمْ وَأَزْوَاجُهُمْ فِي ظِلَالٍ عَلَى الْأَرَائِكِ مُتَّكِئُونَ ﴿٥٦﴾

58. ಅವರಿಗೆ ಅಲ್ಲಿ ಹಣ್ಣುಹಂಪಲುಗಳಿವೆ. ಅವರಿಗೆ ಬೇಕಾದುದೆಲ್ಲ ಅಲ್ಲಿ ಅವರಿಗೆ ಸಿಗುವುದು.

لَهُمْ فِيهَا فَاكِهَةٌ وَلَهُم مَّا يَدَّعُونَ ﴿٥٧﴾

59. '(ನಿಮಗೆ) ಶಾಂತಿ' (ಎಂದು ಅವರೊಡನೆ ಹೇಳಲ್ಪಡುವುದು) - ಕಾರುಣ್ಯವಂತನಾದ ಪ್ರಭುವಿನಿಂದ (ಶುಭಕೋರುವ) ಮಾತು.

سَلَامٌ قَوْلًا مِّن رَّبٍّ رَّحِيمٍ ﴿٥٨﴾

60. (ಅಲ್ಲಾಹನು ಹೇಳುವನು:) 'ಎಲೈ ಅಪರಾಧಿಗಳೇ, ಈ ದಿನ ನೀವು (ಸಜ್ಜನರಿಂದ) ಬೇರ್ಪಟ್ಟು ನಿಲ್ಲಿರಿ.

وَامْتَازُوا الْيَوْمَ أَيُّهَا الْمُجْرِمُونَ ﴿٥٩﴾

61. 'ಎಲೈ ಆದಂ ಸಂತತಿಗಳೇ, ನಾನು ನಿಮಗೆ ಹೀಗೆ ಆಜ್ಞಾಪಿಸಿರಲಿಲ್ಲವೇ: ನೀವು ಶೈತಾನನನ್ನು ಆರಾಧಿಸಬೇಡಿರಿ, ಖಂಡಿತವಾಗಿಯೂ ಅವನು ನಿಮ್ಮ ಬಹಿರಂಗ ಶತ್ರುವಾಗಿದ್ದಾನೆ ಎಂದು?

أَلَمْ أَعْهَدْ إِلَيْكُمْ يَا بَنِي آدَمَ أَن لَّا تَعْبُدُوا الشَّيْطَانَ ۖ إِنَّهُ لَكُمْ عَدُوٌّ مُّبِينٌ ﴿٦٠﴾

62. 'ಹಾಗೂ ನನ್ನನ್ನೇ ಆರಾಧಿಸಿರಿ, ಇದು ಸತ್ಪಥವಾಗಿದೆ ಎಂದು?

وَأَنِ اعْبُدُونِي ۚ هَٰذَا صِرَاطٌ مُّسْتَقِيمٌ ﴿٦١﴾

وَلَقَدْ أَضَلَّ مِنْكُمْ جِبِلًّا كَثِيْرًا ۖ أَفَلَمْ تَكُوْنُوْا تَعْقِلُوْنَ ﴿٦٣﴾

**63.** 'ನಿಮ್ಮ ಪೈಕಿ ಅನೇಕ ಮಂದಿಯನ್ನು ಅವನು ಮಾರ್ಗಭ್ರಂಶಗೊಳಿಸಿದ್ದಾನೆ. ಆದರೂ ನೀವು ಯೋಚಿಸಿಲ್ಲವೇ?

هٰذِهٖ جَهَنَّمُ الَّتِيْ كُنْتُمْ تُوْعَدُوْنَ ﴿٦٤﴾

**64.** 'ನಿಮಗೆ ಮುನ್ನೆಚ್ಚರಿಕೆ ನೀಡಲ್ಪಟ್ಟ ನರಕ ಇದೇ ಆಗಿದೆ.

اِصْلَوْهَا الْيَوْمَ بِمَا كُنْتُمْ تَكْفُرُوْنَ ﴿٦٥﴾

**65.** 'ನೀವು ಅವಿಶ್ವಾಸಿಗಳಾಗಿದ್ದ ಕಾರಣದಿಂದ ಈ ದಿನ ನೀವು ಅದರಲ್ಲಿ ಪ್ರವೇಶಿಸಿರಿ.'

اَلْيَوْمَ نَخْتِمُ عَلٰٓى اَفْوَاهِهِمْ وَ تُكَلِّمُنَآ اَيْدِيْهِمْ وَ تَشْهَدُ اَرْجُلُهُمْ بِمَا كَانُوْا يَكْسِبُوْنَ ﴿٦٦﴾

**66.** ಅಂದು ನಾವು ಅವರ ಬಾಯಿಗಳಿಗೆ ಮುದ್ರೆ ಹಾಕುವೆವು. ಅವರ ಕೈಗಳು ನಮ್ಮೊಡನೆ ಮಾತನಾಡುವುವು. ಅವರ ಕೃತ್ಯಗಳ ಬಗ್ಗೆ ಅವರ ಕಾಲುಗಳು ಸಾಕ್ಷಿ ನೀಡುವುವು.

وَلَوْ نَشَآءُ لَطَمَسْنَا عَلٰٓى اَعْيُنِهِمْ فَاسْتَبَقُوا الصِّرَاطَ فَاَنّٰى يُبْصِرُوْنَ ﴿٦٧﴾

**67.** ನಾವು ಉದ್ದೇಶಿಸಿದ್ದರೆ ಅವರ ಕಣ್ಣುಗಳನ್ನು ಕುರುಡು ಮಾಡುತ್ತಿದ್ದೆವು. ಅವರು ಅದೇ ದಾರಿಯಲ್ಲಿ ಮುಂದೆ ಹೋಗುತ್ತಿದ್ದರು. ಆಗ (ಸತ್ಪಥವನ್ನು) ಅವರು ಹೇಗೆ ಕಾಣಬಲ್ಲರು?

وَلَوْ نَشَآءُ لَمَسَخْنٰهُمْ عَلٰى مَكَانَتِهِمْ فَمَا اسْتَطَاعُوْا مُضِيًّا وَّلَا يَرْجِعُوْنَ ﴿٦٨﴾

**68.** ನಾವು ಇಚ್ಛಿಸಿದ್ದರೆ ಅವರು ಇದ್ದಲ್ಲಿಂದಲೇ ಅವರ ಸ್ವರೂಪವನ್ನು ನಾವು ಬದಲಾಯಿಸಿಬಿಡುತ್ತಿದ್ದೆವು. ಆಗ ಅವರಿಗೆ ಮುಂದೆ ಹೋಗಲಿಕ್ಕೂ ಹಿಂದೆ ಬರಲಿಕ್ಕೂ ಸಾಧ್ಯವಾಗದು.

وَمَنْ نُّعَمِّرْهُ نُنَكِّسْهُ فِى الْخَلْقِ ۖ اَفَلَا يَعْقِلُوْنَ ﴿٦٩﴾

**69.** ಯಾವನಿಗೆ ನಾವು ದೀರ್ಘಾಯುಷ್ಯ ನೀಡುತ್ತೇವೋ, ಅವನ ಪ್ರಕೃತಿಯಲ್ಲಿ ದೌರ್ಬಲ್ಯ ಉಂಟಾಗುವಂತೆ ಮಾಡುತ್ತೇವೆ. ಅವರೇನು ಮನವರಿಕೆ ಮಾಡುವುದಿಲ್ಲವೇ?

وَمَا عَلَّمْنٰهُ الشِّعْرَ وَمَا يَنْۢبَغِيْ لَهٗ ۖ اِنْ هُوَ اِلَّا ذِكْرٌ وَّ قُرْاٰنٌ مُّبِيْنٌ ﴿٧٠﴾

**70.** ನಾವು ಅವರಿಗೆ (ಮುಹಮ್ಮದ್ ಪೈಗಂಬರರಿಗೆ) ಕಾವ್ಯ ಹೇಳಲು ಕಲಿಸಲಿಲ್ಲ. ಅದು ಅವರಿಗೆ ಶೋಭೆಯೂ ಅಲ್ಲ. ಇದು (ಖುರ್‌ಆನ್) ಒಂದು ಉದ್ಬೋಧಕ ಮತ್ತು ಪದೇ ಪದೇ ಓದಲ್ಪಡುವ ಗ್ರಂಥವಾಗಿದೆ. ಅದು (ಸಂಗತಿಗಳನ್ನು) ಸ್ಪಷ್ಟಪಡಿಸುವಂಥದ್ದೂ ಆಗಿದೆ -





لِّيُنْذِرَ مَنْ كَانَ حَيًّا وَّيَحِقَّ الْقَوْلُ عَلَى الْكٰفِرِيْنَ ﴿٧١﴾

**71.** ಜೀವಂತವಾಗಿರುವವರಿಗೆ ಮುನ್ನೆಚ್ಚರಿಕೆ ನೀಡಲಿಕ್ಕಾಗಿ ಮತ್ತು ಅವಿಶ್ವಾಸಿಗಳ ಮೇಲೆ (ಅಲ್ಲಾಹನ) ವಚನ ಈಡೇರಲಿಕ್ಕಾಗಿ.

اَوَلَمْ يَرَوْا اَنَّا خَلَقْنَا لَهُمْ مِّمَّا عَمِلَتْ اَيْدِيْنَآ اَنْعَامًا فَهُمْ لَهَا مٰلِكُوْنَ ﴿٧٢﴾

**72.** ಅವರು ಕಾಣುವುದಿಲ್ಲವೇ? ನಾವು ನಮ್ಮ ಕೈಗಳಿಂದಲೇ ಅವರಿಗೆ ಜಾನುವಾರುಗಳನ್ನು ಸೃಷ್ಟಿಸಿದೆವು. ಹಾಗೆ ಅವರು ಅವುಗಳ ಮಾಲಿಕರಾದರು.

وَ ذَلَّلْنٰهَا لَهُمْ فَمِنْهَا رَكُوْبُهُمْ وَ مِنْهَا يَاْكُلُوْنَ ﴿٧٣﴾

**73.** ಅವುಗಳನ್ನು ನಾವು ಅವರಿಗೆ ಅಧೀನಪಡಿಸಿದೆವು. ಅವುಗಳಲ್ಲಿ ಕೆಲವನ್ನು ಅವರು ಸವಾರಿಗೋಸ್ಕರ ಮತ್ತು ಕೆಲವನ್ನು ಆಹಾರಕ್ಕೋಸ್ಕರ ಉಪಯೋಗಿಸುತ್ತಾರೆ.

وَ لَهُمْ فِيْهَا مَنَافِعُ وَ مَشَارِبُ ۖ اَفَلَا يَشْكُرُوْنَ ﴿٧٤﴾

**74.** ಅವರಿಗೆ ಅವುಗಳಿಂದ (ಬೇರೆಯೂ) ಪ್ರಯೋಜನಗಳಿವೆ; ಪಾನೀಯಗಳೂ ಇವೆ. ಆದರೂ ಅವರು ಕೃತಜ್ಞತೆ ತೋರಿಸುವುದಿಲ್ಲವೇ?

وَاتَّخَذُوْا مِنْ دُوْنِ اللّٰهِ اٰلِهَةً لَّعَلَّهُمْ يُنْصَرُوْنَ ﴿٧٥﴾

**75.** ತಮ್ಮ ಸಹಾಯಾರ್ಥ ಅಲ್ಲಾಹನ ಹೊರತು (ಬೇರೆ) ದೇವರುಗಳನ್ನು ಅವರು ಕಲ್ಪಿಸಿಕೊಂಡಿದ್ದಾರೆ.

لَا يَسْتَطِيْعُوْنَ نَصْرَهُمْ ۙ وَ هُمْ لَهُمْ جُنْدٌ مُّحْضَرُوْنَ ﴿٧٦﴾

**76.** ಅವರು (ಕಲ್ಪಿತ ದೇವರುಗಳು) ಇವರಿಗೆ ನೆರವು ನೀಡಲು ಸಮರ್ಥರಲ್ಲ. ಅವರಾದರೋ (ಅಲ್ಲಾಹನ ಮುಂದೆ) ಇವರ ಜೊತೆಯಲ್ಲಿ ಹಾಜರುಗೊಳಿಸಲ್ಪಡುವರು.

فَلَا يَحْزُنْكَ قَوْلُهُمْ ۘ اِنَّا نَعْلَمُ مَا يُسِرُّوْنَ وَ مَا يُعْلِنُوْنَ ﴿٧٧﴾

**77.** ಆದ್ದರಿಂದ ಅವರ ಮಾತುಗಳು ನಿನ್ನನ್ನು ವ್ಯಥೆಗೊಳಿಸದಿರಲಿ. ಅವರು ಬಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೂ ನಿಶ್ಚಯವಾಗಿಯೂ ನಾವು ಬಲ್ಲೆವು.

اَوَلَمْ يَرَ الْاِنْسَانُ اَنَّا خَلَقْنٰهُ مِنْ نُّطْفَةٍ فَاِذَا هُوَ خَصِيْمٌ مُّبِيْنٌ ﴿٧٨﴾

**78.** ನಾವು ಅವನನ್ನು (ಕೇವಲ) ಒಂದು ವೀರ್ಯಾಣುವಿನಿಂದ ಸೃಷ್ಟಿಸಿರುವೆವೆಂದು ಮನುಷ್ಯನಿಗೆ ಗೊತ್ತಿಲ್ಲವೇ? ಈಗ ಅದೋ ಅವನು ದೊಡ್ಡ ಜಗಳಗಂಟಿಯಾಗಿಬಿಟ್ಟಿದ್ದಾನೆ!

وَضَرَبَ لَنَا مَثَلًا وَّ نَسِيَ خَلْقَهٗ ۖ قَالَ

**79.** ನಮ್ಮ ಬಗ್ಗೆ ಅವನು ಹೋಲಿಕೆಗಳನ್ನು ಕೊಡುತ್ತಾನೆ ಹಾಗೂ ತಾನು ಸೃಷ್ಟಿಸಲ್ಪಟ್ಟ ಬಗ್ಗೆ ಅವನು

ಮರೆತುಬಿಡುತ್ತಾನೆ. ಅಸ್ಥಿಗಳು ನಾಶಗೊಂಡ ಬಳಿಕ ಅದನ್ನು ಪುನರುಜ್ಜೀವನಗೊಳಿಸುವವನು ಯಾರೆಂದು ಅವನು ಕೇಳುತ್ತಾನೆ.

مَنْ يُّحْيِ الْعِظَامَ وَهِيَ رَمِيْمٌ ﴿٧٩﴾

**80.** ಹೇಳು: ಅವರನ್ನು ಮೊದಲು ಯಾರು ಸೃಷ್ಟಿಸಿರುವನೋ ಅವನೇ ಅವರನ್ನು ಪುನರುಜ್ಜೀವನಗೊಳಿಸುವವನು. ಅವನು ಎಲ್ಲ ಸೃಷ್ಟಿಗಳ ಬಗ್ಗೆ ಚೆನ್ನಾಗಿ ಬಲ್ಲವನಾಗಿದ್ದಾನೆ.

قُلْ يُحْيِيْهَا الَّذِيْٓ اَنْشَاَهَآ اَوَّلَ مَرَّةٍ ۭ وَهُوَ بِكُلِّ خَلْقٍ عَلِيْمُ ﴿٨٠﴾

**81.** ಅವನೇ ಹಸಿರು ಮರದಿಂದ ನಿಮಗೆ ಅಗ್ನಿಯನ್ನು ಒದಗಿಸಿದವನು. ಆಗ ಅದರಿಂದ ನೀವು ಬೆಂಕಿ ಉರಿಸಿಕೊಳ್ಳುತ್ತೀರಿ.

الَّذِيْ جَعَلَ لَكُمْ مِّنَ الشَّجَرِ الْاَخْضَرِ نَارًا فَاِذَآ اَنْتُمْ مِّنْهُ تُوْقِدُوْنَ ﴿٨١﴾

**82.** ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನು ಅವರಂಥ ಸೃಷ್ಟಿಗಳನ್ನು ಸೃಷ್ಟಿಸಲು ಸಮರ್ಥನಲ್ಲವೇ? ಹೌದು, ಅವನು ಸರ್ವಜ್ಞನಾದ ಸೃಷ್ಟಿಕರ್ತನಾಗಿದ್ದಾನೆ.

اَوَلَيْسَ الَّذِيْ خَلَقَ السَّمٰوٰتِ وَالْاَرْضَ بِقٰدِرٍ عَلٰٓي اَنْ يَّخْلُقَ مِثْلَهُمْ ڲ بَلٰى ۤ وَهُوَ الْخَلّٰقُ الْعَلِيْمُ ﴿٨٢﴾

**83.** ನಿಸ್ಸಂದೇಹವಾಗಿಯೂ, ಅವನು ಒಂದು ವಸ್ತುವನ್ನು ಬಯಸಿದರೆ 'ಆಗು' ಎಂದು ಮಾತ್ರ ಅವನು ಆದೇಶಿಸಿದಾಗ ಅದು ಆಗುತ್ತದೆ.

اِنَّمَآ اَمْرُهٗٓ اِذَآ اَرَادَ شَيْـــًٔا اَنْ يَّقُوْلَ لَهٗ كُنْ فَيَكُوْنُ ﴿٨٣﴾

**84.** ಆದುದರಿಂದ, ಸಕಲ ವಸ್ತುಗಳ ಮೇಲಿನ ಆಧಿಪತ್ಯ ಯಾರ ಕೈಯಲ್ಲಿದೆಯೋ ಅವನೇ ಪರಿಶುದ್ಧನು. ನೀವೆಲ್ಲರೂ ಅವನ ಬಳಿಗೆಯೇ ಮರಳಿಸಲ್ಪಡುವಿರಿ.

فَسُبْحٰنَ الَّذِيْ بِيَدِهٖ مَلَكُوْتُ كُلِّ شَيْءٍ وَّاِلَيْهِ تُرْجَعُوْنَ ﴿٨٤﴾

سُورَةُ الصّٰفّٰتِ مَكِّيَّةٌ وَهِيَ مِائَةٌ وَّاثْنَتَانِ وَثَمَانُونَ آيَةً وَخَمْسَةُ رُكُوعَاتٍ

# 37. ಅಸ್ಸಾಫ್ಫಾತ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 183 ಆಯತ್‌ಗಳು ಹಾಗೂ 5 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಸಾಲುಸಾಲಾಗಿ ನಿಂತುಕೊಳ್ಳುವವರ ಆಣೆ -**

وَالصّٰٓفّٰتِ صَفًّا ②

**3. ಅವರು** (ಶತ್ರುಗಳನ್ನು) **ಶಕ್ತಿಯುತವಾಗಿ ಹೊಡೆದೋಡಿಸುವವರೂ**

فَالزّٰجِرٰتِ زَجْرًا ③

**4.** (ಖುರ್‌ಆನನ್ನು) **ಉದ್ಬೋಧಕವನ್ನಾಗಿ ಓದಿ ಹೇಳುವವರೂ ಆಗಿದ್ದಾರೆ.**

فَالتّٰلِيٰتِ ذِكْرًا ④

**5. ದಿಟವಾಗಿಯೂ ನಿಮ್ಮ ದೇವನು ಏಕನು.**

اِنَّ اِلٰهَكُمْ لَوَاحِدٌ ⑤

**6.** (ಅವನು) **ಆಕಾಶಗಳು, ಭೂಮಿ ಮತ್ತು ಅವುಗಳ ಮಧ್ಯೆ ಇರುವ ಎಲ್ಲವುಗಳ ಪ್ರಭು. ಉದಯ ಸ್ಥಾನಗಳ ಪ್ರಭು ಸಹ** (ಅವನೇ).

رَبُّ السَّمٰوٰتِ وَالْاَرْضِ وَمَا بَيْنَهُمَا وَرَبُّ الْمَشَارِقِ ⑥

**7.** (ಭೂಮಿಗೆ) **ಅತಿ ಸಮೀಪದಲ್ಲಿರುವ ಆಕಾಶವನ್ನು ನಾವು ನಕ್ಷತ್ರಗಳ ಶೋಭೆಯಿಂದ ಶೃಂಗರಿಸಿದ್ದೇವೆ.**

اِنَّا زَيَّنَّا السَّمَآءَ الدُّنْيَا بِزِيْنَةِ ۨالْكَوَاكِبِ ⑦

**8. ಹಾಗೂ ಧಿಕ್ಕಾರಿ ಶೈತಾನ್‌ಗಳಿಂದೆಲ್ಲ ಅದನ್ನು ಸುರಕ್ಷಿತವಾಗಿರಿಸಿದ್ದೇವೆ.**

وَحِفْظًا مِّنْ كُلِّ شَيْطٰنٍ مَّارِدٍ ⑧

**9.** (ದೇವದೂತರ) **ಉನ್ನತ ಸಭೆಯ** ಮಾತುಗಳನ್ನು **ಅವರು** (ಶೈತಾನ್‌ಗಳು) **ಆಲಿಸಿ ಗ್ರಹಿಸಿಕೊಳ್ಳಲಾರರು. ಎಲ್ಲ ಕಡೆಗಳಿಂದಲೂ ಅವರನ್ನು ಹೊಡೆದೋಡಿಸ ಲಾಗುವುದು.**

لَا يَسَّمَّعُوْنَ اِلَى الْمَلَاِ الْاَعْلٰى وَيُقْذَفُوْنَ مِنْ كُلِّ جَانِبٍ ⑨





**10. ಅವರಿಗೆ ಶಾಶ್ವತವಾದ ಶಿಕ್ಷೆ ಇದೆ.**

دُحُوْرًا وَّلَهُمْ عَذَابٌ وَّاصِبٌ ⑩

**11. ಆದರೆ ಯಾವನಾದರೂ** (ಏನನ್ನಾದರೂ) **ಕದ್ದು ಎಗರಿಸಿಕೊಂಡು ಹೋದರೆ[396] ಅವನನ್ನು ಒಂದು ಅಗ್ನಿಜ್ವಾಲೆ ಬೆನ್ನಟ್ಟುವುದು.**

اِلَّا مَنْ خَطِفَ الْخَطْفَةَ فَاَتْبَعَهٗ شِهَابٌ ثَاقِبٌ ⑪

**12. ಅವರೊಡನೆ ಕೇಳು: '**(ಸೃಷ್ಟಿಕಾರ್ಯದಲ್ಲಿ) **ಅವರನ್ನು ಸೃಷ್ಟಿಸುವುದು ಕಠಿಣವೋ ಅಥವಾ ನಾವು ಸೃಷ್ಟಿಸಿದ** ಬೇರೆ **ಸೃಷ್ಟಿಗಳನ್ನೋ?' ದಿಟವಾಗಿಯೂ ನಾವು ಅವರನ್ನು ಅಂಟಿಕೊಳ್ಳುವ ಆವೆಮಣ್ಣಿನಿಂದ ಸೃಷ್ಟಿಸಿದ್ದೇವೆ.**

فَاسْتَفْتِهِمْ اَهُمْ اَشَدُّ خَلْقًا اَمْ مَّنْ خَلَقْنَا ؕ اِنَّا خَلَقْنٰهُمْ مِّنْ طِيْنٍ لَّازِبٍ ⑫

**13. ನೀನಾದರೋ ಅಚ್ಚರಿಗೊಳ್ಳುತ್ತಿ; ಅವರು ಅಪಹಾಸ್ಯಮಾಡುತ್ತಾರೆ.**

بَلْ عَجِبْتَ وَيَسْخَرُوْنَ ⑬

**14. ಅವರಿಗೆ ಉಪದೇಶಿಸಿದರೆ ಅವರು ಅದನ್ನು ಗಮನಿಸುವುದಿಲ್ಲ.**

وَاِذَا ذُكِّرُوْا لَا يَذْكُرُوْنَ ⑭

**15. ಅವರು ಯಾವುದೇ ದೃಷ್ಟಾಂತವನ್ನು ಕಂಡರೂ ಪರಿಹಾಸ್ಯಮಾಡುತ್ತಾರೆ.**

وَاِذَا رَاَوْا اٰيَةً يَّسْتَسْخِرُوْنَ ⑮

**16. ಅವರು ಹೇಳುತ್ತಾರೆ: 'ಇದು ಸ್ಪಷ್ಟವಾದ ಜಾಲ ವಿದ್ಯೆ ಹೊರತು ಬೇರೇನೂ ಅಲ್ಲ.**

وَقَالُوْٓا اِنْ هٰذَآ اِلَّا سِحْرٌ مُّبِيْنٌ ⑯

**17. 'ಏನು! ನಾವು ಮೃತಪಟ್ಟು ಮಣ್ಣು ಮತ್ತು ಅಸ್ಥಿಗಳಾಗಿ ರೂಪಾಂತರಗೊಂಡರೆ,** (ಪುನಃ) **ನಾವು ಎಬ್ಬಿಸಲ್ಪಡುವೆವೋ?**

ءَاِذَا مِتْنَا وَكُنَّا تُرَابًا وَّعِظَامًا ءَاِنَّا لَمَبْعُوْثُوْنَ ⑰

**18. 'ಪೂರ್ವಜರಾದ ನಮ್ಮ ತಂದೆತಾತಂದಿರು ಸಹ** (ಎಬ್ಬಿಸಲ್ಪಡುವರೋ)?'

اَوَاٰبَآؤُنَا الْاَوَّلُوْنَ ⑱

396. ಜನರನ್ನು ಮೋಸಗೊಳಿಸುವ ಉದ್ದೇಶದಿಂದ ದೇವವಚನದ ಯಾವುದಾದರೂ ಭಾಗವನ್ನು ದುರ್ವ್ಯಾಖ್ಯಾನ ಮಾಡಲು ಎತ್ತಿಕೊಂಡರೆ ಎಂದು ತಾತ್ಪರ್ಯ.

**19.** ಹೇಳು: 'ಹೌದು (ಆಗ) ನೀವು ಅಪಮಾನಿತರಾಗುವಿರಿ'.

قُلْ نَعَمْ وَأَنتُمْ دَاخِرُونَ ﴿١٩﴾

**20.** ಅದು ಕಠೋರವಾದೊಂದು ಕರೆಯಾಗಿರುವುದು. ಆಗ ಅದೋ ಅವರು (ನಾನಾಕಡೆಗಳಿಂದ) ನೋಡತೊಡಗುವರು.

فَإِنَّمَا هِيَ زَجْرَةٌ وَاحِدَةٌ فَإِذَا هُمْ يَنظُرُونَ ﴿٢٠﴾

**21.** ಹಾಗೂ 'ಅಕಟಾ, ನಮ್ಮ ದುರದೃಷ್ಟವೇ! ಇದು ಪ್ರತಿಫಲ ನೀಡಲಾಗುವ ದಿನವಾಗಿದೆ' ಎಂದು ಅವರು ಹೇಳುವರು.

وَقَالُوا يَا وَيْلَنَا هَٰذَا يَوْمُ الدِّينِ ﴿٢١﴾

**22.** 'ಇದು ನೀವು ಅಲ್ಲಗಳೆಯುತ್ತಿದ್ದ ಅಂತಿಮ ತೀರ್ಮಾನದ ದಿನವಾಗಿದೆ' (ಎಂದು ಅವರೊಡನೆ ಹೇಳಲಾಗುವುದು).

هَٰذَا يَوْمُ الْفَصْلِ الَّذِي كُنتُم بِهِ تُكَذِّبُونَ ﴿٢٢﴾

**23, 24.** (ದೇವದೂತರೊಡನೆ ಹೀಗೆ ಹೇಳಲಾಗುವುದು:) 'ತಪ್ಪಿತಸ್ಥರನ್ನೂ ಅವರ ಸಂಗಡಿಗರನ್ನೂ ಒಟ್ಟುಗೂಡಿಸಿರಿ ಹಾಗೂ ಅಲ್ಲಾಹನ ಹೊರತು ಅವರು ಏನನ್ನು ಆರಾಧಿಸುತ್ತಿದ್ದರೋ (ಅವುಗಳನ್ನು ಸಹ). ಅನಂತರ ಅವರನ್ನು ಅಗ್ನಿಯ ಮಾರ್ಗದೆಡೆಗೆ ಕೊಂಡೊಯ್ಯಿರಿ.

احْشُرُوا الَّذِينَ ظَلَمُوا وَأَزْوَاجَهُمْ وَمَا كَانُوا يَعْبُدُونَ ﴿٢٣﴾

مِن دُونِ اللَّهِ فَاهْدُوهُمْ إِلَىٰ صِرَاطِ الْجَحِيمِ ﴿٢٤﴾

**25.** 'ಅವರನ್ನು ನಿಲ್ಲಿಸಿರಿ; ಏಕೆಂದರೆ ಅವರ ವಿಚಾರಣೆ ಮಾಡಲಿಕ್ಕಿದೆ.'

وَقِفُوهُمْ ۖ إِنَّهُم مَّسْئُولُونَ ﴿٢٥﴾

**26.** (ಅವರೊಂದಿಗೆ ಪ್ರಶ್ನಿಸಲಾಗುವುದು:) 'ನಿಮಗೇನಾಗಿದೆ? ನೀವು ಪರಸ್ಪರ ಸಹಾಯ ಮಾಡುವುದಿಲ್ಲವಲ್ಲಾ?'

مَا لَكُمْ لَا تَنَاصَرُونَ ﴿٢٦﴾

**27.** ವಾಸ್ತವಿಕವಾಗಿ, ಅವರು ಅಂದು ಸಂಪೂರ್ಣವಾಗಿಯೂ ಶರಣಾಗುವರು.

بَلْ هُمُ الْيَوْمَ مُسْتَسْلِمُونَ ﴿٢٧﴾

**28.** ಅವರು ಪರಸ್ಪರ ಸಂವಾದ ಮಾಡುತ್ತಾ ಎದುರುಗೊಳ್ಳುವರು.

وَأَقْبَلَ بَعْضُهُمْ عَلَىٰ بَعْضٍ يَتَسَاءَلُونَ ﴿٢٨﴾





**29.** ಅವರು (ಹಿಂಬಾಲಕರು ಮುಖಂಡರೊಡನೆ) ಹೇಳುವರು: 'ನೀವು ನಮ್ಮ ಬಳಿಗೆ ಬಲಪಾರ್ಶ್ವದಿಂದ[396A] ಬರುತ್ತಿದ್ದೀರಲ್ಲವೇ?'

قَالُوا إِنَّكُمْ كُنتُمْ تَأْتُونَنَا عَنِ الْيَمِينِ ﴿٢٩﴾

**30.** (ಆಗ) ಅವರು (ಮುಖಂಡರು) ಉತ್ತರಿಸುವರು: 'ಹಾಗಲ್ಲ, ನೀವೇ ಸತ್ಯವಿಶ್ವಾಸಿಗಳಾಗಿರಲಿಲ್ಲ.

قَالُوا بَل لَّمْ تَكُونُوا مُؤْمِنِينَ ﴿٣٠﴾

**31.** 'ನಮಗೆ ನಿಮ್ಮ ಮೇಲೆ ಏನೂ ಅಧಿಕಾರವಿರಲಿಲ್ಲ. ನೀವೇ ಹದ್ದುಮೀರಿ ವರ್ತಿಸಿದ್ದೀರಿ.

وَمَا كَانَ لَنَا عَلَيْكُم مِّن سُلْطَانٍ ۖ بَلْ كُنتُمْ قَوْمًا طَاغِينَ ﴿٣١﴾

**32.** 'ಹಾಗೆ ನಮ್ಮ ಬಗ್ಗೆ ನಮ್ಮ ಪ್ರಭುವಿನ ಮಾತು ಈಡೇರಿದೆ. ನಾವು ಶಿಕ್ಷೆಯನ್ನು ಅನುಭವಿಸಬೇಕಾಗಿದೆ.

فَحَقَّ عَلَيْنَا قَوْلُ رَبِّنَا ۖ إِنَّا لَذَائِقُونَ ﴿٣٢﴾

**33.** 'ನಾವು ನಿಮ್ಮನ್ನು ದಾರಿತಪ್ಪಿಸಿದೆವು. ವಾಸ್ತವದಲ್ಲಿ ನಾವೇ ದಾರಿತಪ್ಪಿದವರಾಗಿದ್ದೆವು.'

فَأَغْوَيْنَاكُمْ إِنَّا كُنَّا غَاوِينَ ﴿٣٣﴾

**34.** ಖಂಡಿತವಾಗಿಯೂ ಆ ದಿನದಂದು ಶಿಕ್ಷೆಯಲ್ಲಿ ಅವರೆಲ್ಲರೂ ಪಾಲು ಹೊಂದುವರು.

فَإِنَّهُمْ يَوْمَئِذٍ فِي الْعَذَابِ مُشْتَرِكُونَ ﴿٣٤﴾

**35.** ನಿಶ್ಚಯವಾಗಿಯೂ ನಾವು ಅಪರಾಧಿಗಳೊಡನೆ ಹಾಗೆಯೇ ವರ್ತಿಸುತ್ತೇವೆ.

إِنَّا كَذَٰلِكَ نَفْعَلُ بِالْمُجْرِمِينَ ﴿٣٥﴾

**36.** 'ಅಲ್ಲಾಹನ ಹೊರತು ಬೇರೆ ದೇವನಿಲ್ಲ' ಎಂದು ಅವರೊಡನೆ ಹೇಳಿದಾಗ ಅವರು ಅಹಂಕಾರದಿಂದ ಮುಖ ತಿರುಗಿಸುತ್ತಿದ್ದರು.

إِنَّهُمْ كَانُوا إِذَا قِيلَ لَهُمْ لَا إِلَٰهَ إِلَّا اللَّهُ يَسْتَكْبِرُونَ ﴿٣٦﴾

**37.** 'ಓರ್ವ ಹುಚ್ಚ ಕವಿಗೋಸ್ಕರ ನಾವು ನಮ್ಮ ದೇವರುಗಳನ್ನು ಬಿಟ್ಟು ಬಿಡಬೇಕೇ?' ಎಂದು ಅವರು ಕೇಳುತ್ತಿದ್ದರು.

وَيَقُولُونَ أَئِنَّا لَتَارِكُو آلِهَتِنَا لِشَاعِرٍ مَّجْنُونٍ ﴿٣٧﴾

**38.** ವಾಸ್ತವವೇನೆಂದರೆ, ಅವರು (ಮುಹಮ್ಮದ್ ಪೈಗಂಬರ್) ಸತ್ಯವನ್ನು ತಂದಿದ್ದಾರೆ ಮತ್ತು ಎಲ್ಲ ಪ್ರವಾದಿಗಳ ಸತ್ಯತೆಯನ್ನು ದೃಢೀಕರಿಸಿದ್ದಾರೆ.

بَلْ جَاءَ بِالْحَقِّ وَصَدَّقَ الْمُرْسَلِينَ ﴿٣٨﴾

396A. ಅಂದರೆ ಧರ್ಮದ ಮುಖವಾಡ ಹಾಕಿಕೊಂಡು.

**39. ನೀವು ಖಂಡಿತವಾಗಿಯೂ ಯಾತನಾಮಯವಾದ ಶಿಕ್ಷೆಯನ್ನು ಅನುಭವಿಸಲೇಬೇಕು.** إِنَّكُمْ لَذَائِقُوا الْعَذَابِ الْأَلِيمِ ﴿٣٩﴾

**40. ನಿಮ್ಮ ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನು ಮಾತ್ರ ನಿಮಗೆ ನೀಡಲಾಗುವುದು.** وَمَا تُجْزَوْنَ إِلَّا مَا كُنتُمْ تَعْمَلُونَ ﴿٤٠﴾

**41.** (ಆದರೆ) **ಅಲ್ಲಾಹನ ಆಯ್ದ ನಿಷ್ಠಾವಂತ ದಾಸರು** (ಆ ಶಿಕ್ಷೆಯಿಂದ) **ಹೊರತಾಗಿರುತ್ತಾರೆ.** إِلَّا عِبَادَ اللَّهِ الْمُخْلَصِينَ ﴿٤١﴾

**42. ಅವರಿಗೆ ನಿಶ್ಚಿತ ಆಹಾರ ಲಭಿಸುವುದು.** أُولَٰئِكَ لَهُمْ رِزْقٌ مَّعْلُومٌ ﴿٤٢﴾

**43. ಅಂದರೆ ಹಣ್ಣುಹಂಪಲುಗಳು. ಹಾಗೂ ಅವರು ಆದರಿಸಲ್ಪಡುವರು -** فَوَاكِهُ ۖ وَهُم مُّكْرَمُونَ ﴿٤٣﴾

**44. ಅನುಗ್ರಹ ಭರಿತ ಸ್ವರ್ಗೀಯ ಉದ್ಯಾನಗಳಲ್ಲಿ;** فِي جَنَّاتِ النَّعِيمِ ﴿٤٤﴾

**45. ಸಿಂಹಾಸನಗಳಲ್ಲಿ ಎದಿರು ಬದಿರಾಗಿ** ಕುಳಿತುಕೊಂಡವರಾಗಿ. عَلَىٰ سُرُرٍ مُّتَقَابِلِينَ ﴿٤٥﴾

**46. ಉಕ್ಕಿ ಹರಿಯುವ ಚಿಲುಮೆಯ ಪಾನೀಯದಿಂದ ತುಂಬಿದ ಪಾತ್ರೆಗಳು ಅವರ ಸುತ್ತಲೂ ಒಯ್ಯಲ್ಪಡುವುವು.** يُطَافُ عَلَيْهِم بِكَأْسٍ مِّن مَّعِينٍ ﴿٤٦﴾

**47.** ಫಳಫಳಿಸುವ **ಬೆಳ್ಳಗಿರುವಂಥದ್ದು; ಕುಡಿಯುವವರಿಗೆ ರುಚಿಕರವಾದದ್ದು.** بَيْضَاءَ لَذَّةٍ لِّلشَّارِبِينَ ﴿٤٧﴾

**48. ಅದರಿಂದ ತಲೆಸಿಡಿತ ಉಂಟಾಗಲಾರದು. ಅವರು ಅದರಿಂದ ಮತ್ತರೂ ಆಗಲಾರರು.** لَا فِيهَا غَوْلٌ وَلَا هُمْ عَنْهَا يُنزَفُونَ ﴿٤٨﴾

**49. ಅವರ ಬಳಿಯಲ್ಲಿ ದೃಷ್ಟಿ ಕೆಳಗೆ ಹಾಕಿದ** (ಚಾರಿತ್ರ್ಯವತಿಗಳಾದ) **ವಿಶಾಲವಾದ ನಯನಗಳಿಂದ ಕೂಡಿದ ಸುಂದರಿಯರಿರುವರು.** وَعِندَهُمْ قَاصِرَاتُ الطَّرْفِ عِينٌ ﴿٤٩﴾

**50. ಸುರಕ್ಷಿತವಾಗಿರಿಸಿದ ತತ್ತಿಗಳಂತೆ ಅವರು ಇರುವರು.** كَأَنَّهُنَّ بَيْضٌ مَّكْنُونٌ ﴿٥٠﴾

**51. ಆಗ ಅವರು ಪರಸ್ಪರ ಪ್ರಶ್ನಿಸಿಕೊಂಡು ಮಾತುಕತೆ ನಡೆಸುವರು.** فَأَقْبَلَ بَعْضُهُمْ عَلَىٰ بَعْضٍ يَتَسَاءَلُونَ ﴿٥١﴾





**52. ಅವರ ಪೈಕಿ ಒಬ್ಬನು ಹೇಳುವನು: "ನನಗೊಬ್ಬ ಸಂಗಡಿಗನಿದ್ದನು.** قَالَ قَائِلٌ مِّنْهُمْ إِنِّي كَانَ لِي قَرِينٌ ﴿٥٢﴾

**53. "ಅವನು** (ನನ್ನೊಡನೆ) **ಕೇಳುತ್ತಿದ್ದನು: 'ನೀನು** (ಪರಲೋಕದ ಬಗ್ಗೆ) **ಅದು ಸತ್ಯವೆಂದು ನಂಬಿದವರ ಪೈಕಿಯವನೋ?'** يَقُولُ أَإِنَّكَ لَمِنَ الْمُصَدِّقِينَ ﴿٥٣﴾

**54. 'ನಾವು ಮೃತಪಟ್ಟು ಮಣ್ಣು ಮತ್ತು ಅಸ್ಥಿಗಳಾಗಿ ರೂಪಾಂತರಗೊಂಡ ಬಳಿಕ ನಮಗೆ ಪ್ರತಿಫಲ ನೀಡಲಾಗುವುದೇ?'** أَإِذَا مِتْنَا وَكُنَّا تُرَابًا وَعِظَامًا أَإِنَّا لَمَدِينُونَ ﴿٥٤﴾

**55. ಆತನು** (ಆ ಸ್ವರ್ಗವಾಸಿ ತನ್ನೊಂದಿಗೆ ಇರುವವರೊಡನೆ) **ಕೇಳುವನು: 'ನೀವು** (ಆ ಅವಿಶ್ವಾಸಿಯನ್ನು) **ನೋಡಲು ಇಚ್ಛಿಸುತ್ತೀರೋ?'** قَالَ هَلْ أَنتُم مُّطَّلِعُونَ ﴿٥٥﴾

**56. ಹಾಗೆ ಆತನು ನೋಡುವಾಗ ಅವನನ್ನು ನರಕದ ಮಧ್ಯದಲ್ಲಿ ಕಾಣುವನು.** فَاطَّلَعَ فَرَآهُ فِي سَوَاءِ الْجَحِيمِ ﴿٥٦﴾

**57. ಆತನು** (ಸ್ವರ್ಗವಾಸಿ, ನರಕವಾಸಿಯೊಡನೆ) **ಹೇಳುವನು: 'ಅಲ್ಲಾಹನಾಣೆ, ನೀನು ನನ್ನನ್ನು ನಾಶಪಡಿಸಿಬಿಡುತ್ತಿದ್ದೆ.'** قَالَ تَاللَّهِ إِن كِدتَّ لَتُرْدِينِ ﴿٥٧﴾

**58. 'ನನ್ನ ಪ್ರಭುವಿನ ಅನುಗ್ರಹ ಇಲ್ಲದಿರುತ್ತಿದ್ದರೆ ನಾನು** (ಅಪರಾಧಿಗಳಾಗಿ ಅವನ ಮುಂದೆ) **ಹಾಜರುಗೊಳಿಸಲ್ಪಡುವವರಲ್ಲಿ ಸೇರುತ್ತಿದ್ದೆ.** وَلَوْلَا نِعْمَةُ رَبِّي لَكُنتُ مِنَ الْمُحْضَرِينَ ﴿٥٨﴾

**59. 'ನಾವು** (ಪುನಃ) **ಮೃತಪಡಲಿಕ್ಕೆ ಇಲ್ಲವಷ್ಟೇ?** أَفَمَا نَحْنُ بِمَيِّتِينَ ﴿٥٩﴾

**60. 'ನಮ್ಮ ಮೊದಲಿನ ಮರಣದ ಹೊರತು. ನಾವು ಶಿಕ್ಷೆಗೆ ಗುರಿಯಾಗಲಿಕ್ಕೂ ಇಲ್ಲ.'** إِلَّا مَوْتَتَنَا الْأُولَىٰ وَمَا نَحْنُ بِمُعَذَّبِينَ ﴿٦٠﴾

**61. ನಿಶ್ಚಯವಾಗಿಯೂ ಇದೊಂದು ಮಹಾ ವಿಜಯವಾಗಿದೆ.** إِنَّ هَٰذَا لَهُوَ الْفَوْزُ الْعَظِيمُ ﴿٦١﴾

**62. ಇಂಥ ಸ್ಥಾನವನ್ನು ಗಳಿಸಲಿಕ್ಕಾಗಿ ಸತ್ಕರ್ಮಿಗಳು ಪ್ರಯತ್ನಿಸಬೇಕಾಗಿದೆ.** لِمِثْلِ هَٰذَا فَلْيَعْمَلِ الْعَامِلُونَ ﴿٦٢﴾

63. ಏನು ಸತ್ಕಾರವಾಗಿ ಅದು ಉತ್ತಮವೋ ಅಥವಾ ನರಕದ ವೃಕ್ಷವೋ?

أَذَٰلِكَ خَيْرٌ نُّزُلًا أَمْ شَجَرَةُ الزَّقُّومِ ﴿٦٢﴾

64. ನಿಶ್ಚಯವಾಗಿಯೂ ನಾವು ಅದನ್ನು ದುಷ್ಕರ್ಮಿಗಳಿಗೆ ಒಂದು ಪರೀಕ್ಷೆಯಾಗಿ ಮಾಡಿದ್ದೇವೆ.

إِنَّا جَعَلْنَاهَا فِتْنَةً لِّلظَّالِمِينَ ﴿٦٣﴾

65. ಅದು ನರಕದ ತಳಭಾಗದಿಂದ ಮೊಳಕೆ ಯೊಡೆಯುವ ಒಂದು ವೃಕ್ಷವಾಗಿದೆ.

إِنَّهَا شَجَرَةٌ تَخْرُجُ فِي أَصْلِ الْجَحِيمِ ﴿٦٤﴾

66. ಅದರ ಫಲಗಳು ಶೈತಾನ್‌ಗಳ (ಸರ್ಪಗಳ) ತಲೆಗಳಂತಿರುತ್ತವೆ.

طَلْعُهَا كَأَنَّهُ رُءُوسُ الشَّيَاطِينِ ﴿٦٥﴾

67. ಅವರು ಅದರಿಂದ ತಿಂದು ಹಾಗೆ ಹೊಟ್ಟೆ ತುಂಬಿಸಿಕೊಳ್ಳುವರು.

فَإِنَّهُمْ لَآكِلُونَ مِنْهَا فَمَالِئُونَ مِنْهَا الْبُطُونَ ﴿٦٦﴾

68. ಆ ಮೇಲೆ ಅದರೊಂದಿಗೆ ಅವರಿಗೆ ಕುದಿಯುವ ನೀರಿನ ಒಂದು ಮಿಶ್ರಣ ಸಹ (ಕುಡಿಯಲಿಕ್ಕೆ) ಇದೆ.

ثُمَّ إِنَّ لَهُمْ عَلَيْهَا لَشَوْبًا مِّنْ حَمِيمٍ ﴿٦٧﴾

69. ಅನಂತರ ಅವರ ಮರಳಿಕೆ ನರಕದ ಕಡೆಗೆಯೇ ಆಗಿದೆ.

ثُمَّ إِنَّ مَرْجِعَهُمْ لَإِلَى الْجَحِيمِ ﴿٦٨﴾

70. ತಮ್ಮ ತಂದೆತಾತಂದಿರು ತಪ್ಪು ಹಾದಿ ಯಲ್ಲಿರುವುದನ್ನು ಅವರು ಕಂಡರು.

إِنَّهُمْ أَلْفَوْا آبَاءَهُمْ ضَالِّينَ ﴿٦٩﴾

71. ಅವರು ಸಹ ಅವರ ಹೆಜ್ಜೆ ಗುರುತುಗಳಲ್ಲೇ ತ್ವರಿತವಾಗಿ ಮುಂದೆ ಹೋದರು.

فَهُمْ عَلَىٰ آثَارِهِمْ يُهْرَعُونَ ﴿٧٠﴾

72. ಇವರಿಗಿಂತ ಮುಂಚೆ ಪೂರ್ವಿಕರಲ್ಲಿ ಹೆಚ್ಚಿನವರು ದಾರಿತಪ್ಪಿ ಹೋಗಿದ್ದಾರೆ.

وَلَقَدْ ضَلَّ قَبْلَهُمْ أَكْثَرُ الْأَوَّلِينَ ﴿٧١﴾

73. ಅವರೆಡೆಯಲ್ಲಿ ನಾವು ಮುನ್ನೆಚ್ಚರಿಕೆಗಾರರನ್ನು ಕಳುಹಿಸಿದ್ದೆವು.

وَلَقَدْ أَرْسَلْنَا فِيهِم مُّنذِرِينَ ﴿٧٢﴾

74. ಹಾಗೆ, ಆ ಮುನ್ನೆಚ್ಚರಿಕೆ ನೀಡಲ್ಪಟ್ಟವರ ಅಂತ್ಯ ಹೇಗಾಯಿತೆಂದು ನೋಡು -

فَانظُرْ كَيْفَ كَانَ عَاقِبَةُ الْمُنذَرِينَ ﴿٧٣﴾





75. ಅಲ್ಲಾಹನ ನಿಷ್ಠಾವಂತ ದಾಸರ ಹೊರತು.

إِلَّا عِبَادَ اللَّهِ الْمُخْلَصِينَ ﴿٧٤﴾

76. ನೂಹ್ ನಮ್ಮನ್ನು ಕರೆದು ಪ್ರಾರ್ಥಿಸಿದ್ದರು. ಆಗ ನಾವು ಎಷ್ಟು ಉತ್ತಮವಾದ ರೀತಿಯಲ್ಲಿ ಉತ್ತರ ಕೊಟ್ಟಿದ್ದೆವು!

وَلَقَدْ نَادَانَا نُوحٌ فَلَنِعْمَ الْمُجِيبُونَ ﴿٧٥﴾

77. ನಾವು ಅವರನ್ನೂ ಅವರ ಕುಟುಂಬವನ್ನೂ ದೊಡ್ಡ ಸಂಕಷ್ಟದಿಂದ ಪಾರುಮಾಡಿದೆವು.

وَنَجَّيْنَاهُ وَأَهْلَهُ مِنَ الْكَرْبِ الْعَظِيمِ ﴿٧٦﴾

78. ಅವರ ಪೀಳಿಗೆಯನ್ನು ಮಾತ್ರವೇ ನಾವು ಬಾಕಿಯುಳಿಸಿದೆವು.

وَجَعَلْنَا ذُرِّيَّتَهُ هُمُ الْبَاقِينَ ﴿٧٧﴾

79. ಅವರ ಅನಂತರದವರಲ್ಲಿ ಸಹ ಅವರ ಉತ್ತಮವಾದ ಸ್ಮರಣೆ ನೆಲೆಯೂರುವಂತೆ ಮಾಡಿದೆವು.

وَتَرَكْنَا عَلَيْهِ فِي الْآخِرِينَ ﴿٧٨﴾

80. ನೂಹ್‌ರ ಮೇಲೆ ಶಾಂತಿಯಿರಲಿ- ಸರ್ವ ಲೋಕಗಳಲ್ಲೂ.

سَلَامٌ عَلَىٰ نُوحٍ فِي الْعَالَمِينَ ﴿٧٩﴾

81. ನಾವು ಸಜ್ಜನರಿಗೆ ಪ್ರತಿಫಲ ನೀಡುವುದು ಇದೇ ರೀತಿಯಲ್ಲಾಗಿದೆ.

إِنَّا كَذَٰلِكَ نَجْزِي الْمُحْسِنِينَ ﴿٨٠﴾

82. ನಿಸ್ಸಂದೇಹವಾಗಿಯೂ ಅವರು ಸತ್ಯವಿಶ್ವಾಸಿ ಗಳಾದ ನಮ್ಮ ದಾಸರ ಪೈಕಿ ಒಬ್ಬರಾಗಿದ್ದರು.

إِنَّهُ مِنْ عِبَادِنَا الْمُؤْمِنِينَ ﴿٨١﴾

83. ಇತರರನ್ನಾದರೋ ನಾವು ಮುಳುಗಿಸಿ ಬಿಟ್ಟಿದ್ದೆವು.

ثُمَّ أَغْرَقْنَا الْآخَرِينَ ﴿٨٢﴾

84. ಇಬ್‌ರಾಹೀಂ ಸಹ ಅವರ (ನೂಹ್‌ರ) ಪಕ್ಷದವರೇ ಆಗಿದ್ದರು.

وَإِنَّ مِن شِيعَتِهِ لَإِبْرَاهِيمَ ﴿٨٣﴾

85. ಅವರು ತನ್ನ ಪ್ರಭುವಿನ ಬಳಿಗೆ ವಿನಮ್ರ ಹೃದಯದೊಂದಿಗೆ ಬಂದಿದ್ದ ಸಂದರ್ಭದಲ್ಲಿ,

إِذْ جَاءَ رَبَّهُ بِقَلْبٍ سَلِيمٍ ﴿٨٤﴾

86. ಅವರು ತನ್ನ ತಂದೆಯೊಡನೆ ಮತ್ತು ತನ್ನ ಜನರೊಡನೆ (ಹೀಗೆ) ಕೇಳಿದಾಗ: 'ನೀವು ಏನನ್ನು ಆರಾಧಿಸುತ್ತಿದ್ದೀರಿ?

إِذْ قَالَ لِأَبِيهِ وَقَوْمِهِ مَاذَا تَعْبُدُونَ ﴿٨٥﴾

أَئِفْكًا آلِهَةً دُونَ اللَّهِ تُرِيدُونَ ﴿٨٧﴾

**87.** 'ನೀವು ಅಲ್ಲಾಹನನ್ನು ಬಿಟ್ಟು ಅಸತ್ಯವನ್ನು ದೇವರುಗಳಾಗಿ ಬಯಸುತ್ತಿರೇನು?

فَمَا ظَنُّكُمْ بِرَبِّ الْعَالَمِينَ ﴿٨٨﴾

**88.** 'ಹಾಗಾದರೆ ಸರ್ವಲೋಕಗಳ ಪ್ರಭುವಿನ ಬಗ್ಗೆ ನಿಮ್ಮ ಭಾವನೆ ಏನು?'

فَنَظَرَ نَظْرَةً فِي النُّجُومِ ﴿٨٩﴾

**89.** ಅನಂತರ ಅವರು (ಇಬ್‌ರಾಹೀಂ) ನಕ್ಷತ್ರಗಳ ಕಡೆಗೆ ದೃಷ್ಟಿಬೀರಿದರು.

فَقَالَ إِنِّي سَقِيمٌ ﴿٩٠﴾

**90.** ಮತ್ತೆ ಹೇಳಿದರು: 'ನಿಜವಾಗಿಯೂ ನಾನು ಅಸ್ವಸ್ಥನಾಗಿರುವೆನು.'

فَتَوَلَّوْا عَنْهُ مُدْبِرِينَ ﴿٩١﴾

**91.** ಆಗ ಅವರು (ಜನರು) ಅವರನ್ನು ಬಿಟ್ಟು ಬೆನ್ನು ತಿರುಗಿಸಿ ಹೋದರು.

فَرَاغَ إِلَىٰ آلِهَتِهِمْ فَقَالَ أَلَا تَأْكُلُونَ ﴿٩٢﴾

**92.** ಆ ಬಳಿಕ ಅವರು (ಇಬ್‌ರಾಹೀಂ) ರಹಸ್ಯವಾಗಿ ಅವರ (ಜನರ) ದೇವರುಗಳ ಬಳಿಗೆ ಹೋಗಿ ಕೇಳಿದರು: 'ನೀವು ತಿನ್ನುವುದಿಲ್ಲವೇ?

مَا لَكُمْ لَا تَنْطِقُونَ ﴿٩٣﴾

**93.** 'ನಿಮಗೇನಾಗಿದೆ; ನೀವು ಮಾತನಾಡುವುದಿಲ್ಲ ವೇಕೆ?'

فَرَاغَ عَلَيْهِمْ ضَرْبًا بِالْيَمِينِ ﴿٩٤﴾

**94.** ಅನಂತರ ಅವರು (ಇಬ್‌ರಾಹೀಂ) ಹಠಾತ್ತಾಗಿ ತನ್ನ ಬಲಗೈಯಿಂದ ಅವುಗಳ ಮೇಲೆ ಪ್ರಹಾರ ಮಾಡಲು ತೊಡಗಿದರು.

فَأَقْبَلُوا إِلَيْهِ يَزِفُّونَ ﴿٩٥﴾

**95.** ಆಗ ಅವರು (ಜನರು) ಅವರ ಬಳಿಗೆ ಓಡಿಬಂದರು.

قَالَ أَتَعْبُدُونَ مَا تَنْحِتُونَ ﴿٩٦﴾

**96.** ಅವರು (ಇಬ್‌ರಾಹೀಂ) ಕೇಳಿದರು: 'ನೀವೇ ಕೆತ್ತಿ ರಚಿಸಿದವುಗಳನ್ನು ನೀವು ಆರಾಧಿಸುತ್ತಿದ್ದೀರಾ?

وَاللَّهُ خَلَقَكُمْ وَمَا تَعْمَلُونَ ﴿٩٧﴾

**97.** 'ವಾಸ್ತವದಲ್ಲಿ, ನಿಮ್ಮನ್ನೂ ನಿಮ್ಮ ಕೈಗೆಲಸ ಗಳನ್ನೂ ಅಲ್ಲಾಹನೇ ಸೃಷ್ಟಿಸಿದ್ದಾನೆ.'





قَالُوا ابْنُوا لَهُ بُنْيَانًا فَأَلْقُوهُ فِي الْجَحِيمِ ﴿٩٨﴾

**98.** ಅವರು (ಜನರು) ಹೇಳಿದರು: 'ಇವನಿಗೊಂದು ಅಗ್ನಿ ಕುಂಡವನ್ನು ಸಿದ್ಧಪಡಿಸಿರಿ. ಆ ಬಳಿಕ ಉರಿಯುತ್ತಿರುವ ಬೆಂಕಿಗೆ ಅವನನ್ನು ಎಸೆಯಿರಿ.'

فَأَرَادُوا بِهِ كَيْدًا فَجَعَلْنَاهُمُ الْأَسْفَلِينَ ﴿٩٩﴾

**99.** ಹಾಗೆ ಅವರು ಅವರ (ಇಬ್‌ರಾಹೀಮರ) ವಿರುದ್ಧ ಒಂದು ಷಡ್ಯಂತ್ರ ಹೂಡಲು ಯತ್ನಿಸಿದರು. ಆದರೆ ನಾವು ಅವರನ್ನು (ವಿರೋಧಿಗಳನ್ನು) ಅತ್ಯಂತ ನಿಂದಿತರನ್ನಾಗಿ ಮಾಡಿದೆವು.

وَقَالَ إِنِّي ذَاهِبٌ إِلَىٰ رَبِّي سَيَهْدِينِ ﴿١٠٠﴾

**100.** ಅವರು (ಇಬ್‌ರಾಹೀಂ) ಹೇಳಿದರು: 'ನಾನು ನನ್ನ ಪ್ರಭುವಿನ ಬಳಿಗೆ ಹೋಗುತ್ತೇನೆ. ಅವನು ನನಗೆ ಮಾರ್ಗದರ್ಶನ ನೀಡುವನು.'

رَبِّ هَبْ لِي مِنَ الصَّالِحِينَ ﴿١٠١﴾

**101.** (ಅವರು ಪ್ರಾರ್ಥಿಸಿದರು:) 'ನನ್ನ ಪ್ರಭೂ, ನೀನು ನನಗೆ ಸಾತ್ವಿಕರ ಪೈಕಿಯ *ಸಂತಾನವನ್ನು* ದಯಪಾಲಿಸು.'

فَبَشَّرْنَاهُ بِغُلَامٍ حَلِيمٍ ﴿١٠٢﴾

**102.** ಆಗ ಸಹನಶೀಲನಾದ ಒಬ್ಬ ಪುತ್ರನ ಬಗ್ಗೆ ನಾವು ಅವರಿಗೆ ಶುಭವಾರ್ತೆ ನೀಡಿದೆವು.

فَلَمَّا بَلَغَ مَعَهُ السَّعْيَ قَالَ يَا بُنَيَّ إِنِّي أَرَىٰ فِي الْمَنَامِ أَنِّي أَذْبَحُكَ فَانْظُرْ مَاذَا تَرَىٰ ۚ قَالَ يَا أَبَتِ افْعَلْ مَا تُؤْمَرُ ۖ سَتَجِدُنِي إِنْ شَاءَ اللَّهُ مِنَ الصَّابِرِينَ ﴿١٠٣﴾

**103.** ಹಾಗೆ ಅವನು (ಆ ಪುತ್ರ) ಅವರ ಜೊತೆಯಲ್ಲಿ ನಡೆದಾಡುವ ಪ್ರಾಯಕ್ಕೆ ಬಂದಾಗ ಅವರು ಹೇಳಿದರು: 'ನನ್ನ ಪ್ರೀತಿಯ ಪುತ್ರಾ, ನಾನು ನಿನ್ನನ್ನು ವಧಿಸುವುದಾಗಿ ಕನಸಿನಲ್ಲಿ ಕಂಡಿದ್ದೇನೆ. ಆದ್ದರಿಂದ ನೀನು ಯೋಚಿಸಿ ನೋಡು; ಆ ಬಗ್ಗೆ ನಿನ್ನ ಅಭಿಪ್ರಾಯವೇನು?' ಆಗ ಅವನು ಹೇಳಿದನು: 'ನನ್ನ ತಂದೆಯೇ, ನಿಮಗೆ ಆಜ್ಞಾಪಿಸಲಾದಂತೆ ನೀವು ವರ್ತಿಸಿರಿ. ದೇವನಿಚ್ಛಿಸಿದರೆ ನನ್ನನ್ನು ನೀವು ಸ್ಥೈರಿಸಿಕೊಳ್ಳುವವನಾಗಿ ಕಾಣುವಿರಿ.'[396B.]

396B. ಈ ಸ್ವಪ್ನ ದೈವಿಕವೆಂದು ಪುತ್ರ ಇಸ್ಮಾಈಲ್ ಮನಗಂಡಿದ್ದರು. ಆದ್ದರಿಂದಲೇ ಸ್ವಯಂ ವಧಿಸಲ್ಪಡಲಿಕ್ಕೆ ಅವರು ಸಿದ್ಧರಾದುದು. ವಾಸ್ತವದಲ್ಲಿ ಪ್ರವಾದಿ ಇಬ್‌ರಾಹೀಂ (ಅಲೈಹಿಸ್ಸಲಾಂ) ಕಂಡ ಸ್ವಪ್ನದ ನಿಜವಾದ ಅರ್ಥ ತನ್ನ ಏಕ ಮಾತ್ರ ಪುತ್ರನಾದ ಇಸ್ಮಾಈಲನ್ನು ನಿರ್ಜನವಾದ ಮಕ್ಕ ಪ್ರದೇಶದಲ್ಲಿ ನಿಸ್ಸಹಾಯವಸ್ಥೆಯಲ್ಲಿ ಬಿಟ್ಟು ಬಿಡುವುದಾಗಿತ್ತು. ಆ ಪರಿಸ್ಥಿತಿಯನ್ನು ನೋಡುವಾಗ ಅದು ವಧಿಸುವುದಕ್ಕೆ ತುಲ್ಯವಾಗಿತ್ತೆಂದು ಕಾಣಬಹುದು. ದೇವೇಚ್ಛೆ ಅದಾಗಿತ್ತೆಂದು ತಿಳಿದುಕೊಂಡ ಹಝ್ರತ್ ಇಬ್‌ರಾಹೀಂ (ಅ) ಅದನ್ನು ಮೊದಲೇ ಮಾಡಿದ್ದರು. ಆದರೂ ಅವರಿಗೆ ಪರಿಪೂರ್ಣ ಮನಸ್ಸಮಾಧಾನವಾಗಲಿಲ್ಲ. ಆದ್ದರಿಂದ ಮಗನು ಪ್ರಾಪ್ತ ವಯಸ್ಕನಾದಾಗ ಆತನೊಡನೆ ಅಭಿಪ್ರಾಯ ಕೇಳಿ ಸ್ವಪ್ನವನ್ನು ಬಾಹ್ಯಾರ್ಥದಲ್ಲೇ ಈಡೇರಿಸಲು ಅವರು ತೀರ್ಮಾನಿಸಿದರು. ಏನೂ ಹಿಂಜರಿಯದೆ ಮಗನು ಅದಕ್ಕೆ ಒಪ್ಪಿದನು. ಹಾಗೆ ಮಹತ್ತರವಾದ ಆ ತ್ಯಾಗಕ್ಕೆ ಅವರೀರ್ವರೂ

فَلَمَّآ أَسْلَمَا وَتَلَّهُۥ لِلْجَبِينِ ﴿١٠٣﴾

**104.** ಹಾಗೆ ಅವರೀರ್ವರೂ (ಅಲ್ಲಾಹನ ಆದೇಶಕ್ಕೆ) ವಿಧೇಯರಾದರು. ಅವರು (ಇಬ್‌ರಾಹೀಂ) ಅವನನ್ನು ಅಧೋಮುಖವಾಗಿ ಮಲಗಿಸಿದರು.

وَنَادَيْنَٰهُ أَن يَٰٓإِبْرَٰهِيمُ ﴿١٠٤﴾

**105.** ಆಗ ನಾವು ಅವರನ್ನು ಕರೆದೆವು: 'ಎಲೈ ಇಬ್‌ರಾಹೀಂ,

قَدْ صَدَّقْتَ ٱلرُّءْيَآ ۚ إِنَّا كَذَٰلِكَ نَجْزِى ٱلْمُحْسِنِينَ ﴿١٠٥﴾

**106.** 'ನೀನು ನಿಶ್ಚಯವಾಗಿಯೂ ಕನಸನ್ನು ಸಾಕಾರಗೊಳಿಸಿದ್ದೀ.' ನಾವು ಈ ರೀತಿಯಾಗಿ ಸತ್ಕರ್ಮಿಗಳಿಗೆ ಪ್ರತಿಫಲ ನೀಡುತ್ತೇವೆ.

إِنَّ هَٰذَا لَهُوَ ٱلْبَلَٰٓؤُا۟ ٱلْمُبِينُ ﴿١٠٦﴾

**107.** ದಿಟವಾಗಿಯೂ ಅದೊಂದು ದೊಡ್ಡ ಪರೀಕ್ಷೆಯಾಗಿತ್ತು.

وَفَدَيْنَٰهُ بِذِبْحٍ عَظِيمٍ ﴿١٠٧﴾

**108.** ನಾವು ಆತನನ್ನು (ಮಗನನ್ನು) ಮಹತ್ವಪೂರ್ಣವಾದ (ಬೇರೆ) ಒಂದು ಬಲಿದಾನಕ್ಕೋಸ್ಕರ ರಕ್ಷಿಸಿದೆವು.

وَتَرَكْنَا عَلَيْهِ فِى ٱلْءَاخِرِينَ ﴿١٠٨﴾

**109.** ಅನಂತರದ ಪೀಳಿಗೆಗಳಲ್ಲಿ ಅವರ ಕುರಿತು ಉತ್ತಮ ಸ್ಮರಣೆಯನ್ನು ನಾವು ಬಾಕಿಯುಳಿಸಿದೆವು.

سَلَٰمٌ عَلَىٰٓ إِبْرَٰهِيمَ ﴿١٠٩﴾

**110.** ಇಬ್‌ರಾಹೀಮರ ಮೇಲೆ ಶಾಂತಿ ಇರಲಿ.

كَذَٰلِكَ نَجْزِى ٱلْمُحْسِنِينَ ﴿١١٠﴾

**111.** ಈ ರೀತಿಯಾಗಿ ಸತ್ಕರ್ಮಿಗಳಿಗೆ ನಾವು ಪ್ರತಿಫಲ ನೀಡುತ್ತೇವೆ.

إِنَّهُۥ مِنْ عِبَادِنَا ٱلْمُؤْمِنِينَ ﴿١١١﴾

**112.** ದಿಟವಾಗಿಯೂ ಅವರು ನಮ್ಮ ವಿಶ್ವಾಸಿಗಳಾದ ಭಕ್ತದಾಸರಲ್ಲಿ ಓರ್ವರಾಗಿದ್ದಾರೆ.

وَبَشَّرْنَٰهُ بِإِسْحَٰقَ نَبِيًّا مِّنَ ٱلصَّٰلِحِينَ ﴿١١٢﴾

**113.** ನಾವು ಅವರಿಗೆ ಇಸ್‌ಹಾಖರ ಕುರಿತು ಸಹ ಶುಭವಾರ್ತೆಯನ್ನು ತಿಳಿಸಿದೆವು. ಅವರು ಧರ್ಮನಿಷ್ಠರಾದ ಓರ್ವ ಪ್ರವಾದಿಯಾಗಿದ್ದರು.

ಸಂಪೂರ್ಣವಾಗಿ ಸಿದ್ಧರಾದರು. ಆ ಸಂದರ್ಭದಲ್ಲಿ- 'ಸ್ವಪ್ನವು ಅದರ ಸರಿಯಾದ ಅರ್ಥದಲ್ಲಿ ಮುಂಚೆಯೇ ಈಡೇರಿದೆ; ಬಾಹ್ಯವಾದ ಅರ್ಥದಲ್ಲಿ ಈಡೇರಿಸಬೇಕಾದ ಅಗತ್ಯವಿಲ್ಲ' ಎಂದು ದೇವನು ಅರುಹಿದನು. ಹಾಗೆ ಇಬ್‌ರಾಹೀಂ (ಅ)ರಿಗೆ ಮನಸ್ಸಮಾಧಾನವಾಯಿತು.





وَبَٰرَكْنَا عَلَيْهِ وَعَلَىٰٓ إِسْحَٰقَ ۚ وَمِن ذُرِّيَّتِهِمَا مُحْسِنٌ وَظَالِمٌ لِّنَفْسِهِۦ مُبِينٌ ﴿١١٣﴾

**114.** ಅವರಿಗೂ ಇಸ್‌ಹಾಖರಿಗೂ ನಾವು ಅನುಗ್ರಹಗಳನ್ನು ದಯಪಾಲಿಸಿದ್ದೇವೆ. ಅವರೀರ್ವರ ಸಂತತಿಗಳಲ್ಲಿ ಸಜ್ಜನರೂ ಇದ್ದಾರೆ; ತಮ್ಮ ಮೇಲೆಯೇ ಬಹಿರಂಗವಾಗಿ ಅನ್ಯಾಯವೆಸಗುವವರೂ ಇದ್ದಾರೆ.

وَلَقَدْ مَنَنَّا عَلَىٰ مُوسَىٰ وَهَٰرُونَ ﴿١١٤﴾

**115.** ನಾವು ಮೂಸಾ ಮತ್ತು ಹಾರೂನ್‌ರಿಗೂ ಅನುಗ್ರಹಗಳನ್ನು ದಯಪಾಲಿಸಿದೆವು.

وَنَجَّيْنَٰهُمَا وَقَوْمَهُمَا مِنَ ٱلْكَرْبِ ٱلْعَظِيمِ ﴿١١٥﴾

**116.** ನಾವು ಅವರಿಬ್ಬರನ್ನೂ ಅವರ ಜನರನ್ನೂ ದೊಡ್ಡ ದುಃಖದಿಂದ ಪಾರುಮಾಡಿದೆವು.

وَنَصَرْنَٰهُمْ فَكَانُوا۟ هُمُ ٱلْغَٰلِبِينَ ﴿١١٦﴾

**117.** ನಾವು ಅವರಿಗೆ ನೆರವು ನೀಡಿದೆವು. ಅವರೇ ವಿಜಯಿಗಳಾದರು.

وَءَاتَيْنَٰهُمَا ٱلْكِتَٰبَ ٱلْمُسْتَبِينَ ﴿١١٧﴾

**118.** ನಾವು ಅವರಿಗೆ ಸ್ಪಷ್ಟವಾದೊಂದು ಗ್ರಂಥವನ್ನು ನೀಡಿದೆವು.

وَهَدَيْنَٰهُمَا ٱلصِّرَٰطَ ٱلْمُسْتَقِيمَ ﴿١١٨﴾

**119.** ಅವರಿಬ್ಬರಿಗೂ ನಾವು ಸತ್ಪಥವನ್ನು ತೋರಿಸಿಕೊಟ್ಟೆವು.

وَتَرَكْنَا عَلَيْهِمَا فِى ٱلْءَاخِرِينَ ﴿١١٩﴾

**120.** ಅನಂತರದ ಪೀಳಿಗೆಗಳಲ್ಲಿ ಅವರ ಕುರಿತು ಉತ್ತಮ ಸ್ಮರಣೆಯನ್ನು ನಾವು ಬಾಕಿಯುಳಿಸಿದೆವು.

سَلَٰمٌ عَلَىٰ مُوسَىٰ وَهَٰرُونَ ﴿١٢٠﴾

**121.** ಮೂಸಾ ಮತ್ತು ಹಾರೂನರ ಮೇಲೆ ಶಾಂತಿ ಇರಲಿ.

إِنَّا كَذَٰلِكَ نَجْزِى ٱلْمُحْسِنِينَ ﴿١٢١﴾

**122.** ನಿಶ್ಚಯವಾಗಿಯೂ ನಾವು ಈ ರೀತಿಯಲ್ಲಿ ಸತ್ಕರ್ಮಿಗಳಿಗೆ ಪ್ರತಿಫಲ ನೀಡುತ್ತೇವೆ.

إِنَّهُمَا مِنْ عِبَادِنَا ٱلْمُؤْمِنِينَ ﴿١٢٢﴾

**123.** ಅವರಿಬ್ಬರೂ ನಮ್ಮ ವಿಶ್ವಾಸಿಗಳಾದ ಭಕ್ತದಾಸರಾಗಿದ್ದರು.

وَإِنَّ إِلْيَاسَ لَمِنَ ٱلْمُرْسَلِينَ ﴿١٢٣﴾

**124.** ದಿಟವಾಗಿಯೂ ಇಲ್ಯಾಸ್ ಸಹ ನಮ್ಮ ಸಂದೇಶವಾಹಕರ ಪೈಕಿ ಒಬ್ಬರಾಗಿದ್ದರು.

125. ಅವರು ತಮ್ಮ ಜನರೊಡನೆ ಹೇಳಿದ ಸಂದರ್ಭ: 'ನೀವು (ಅಲ್ಲಾಹನ) ಭಯಭಕ್ತಿ ಹೊಂದಿಲ್ಲವೇ?

إِذْ قَالَ لِقَوْمِهِۦٓ أَلَا تَتَّقُونَ ﴿١٢٥﴾

126. 'ನೀವು ಬಅ್‌ಲ್ ವಿಗ್ರಹವನ್ನು ಕರೆದು ಪ್ರಾರ್ಥಿಸಿಕೊಂಡು ಸೃಷ್ಟಿಕರ್ತರಲ್ಲಿ ಅತ್ಯುತ್ತಮನಾದವನನ್ನು ಬಿಟ್ಟುಬಿಡುತ್ತೀರಾ?

أَتَدْعُونَ بَعْلًا وَتَذَرُونَ أَحْسَنَ ٱلْخَٰلِقِينَ ﴿١٢٦﴾

127. 'ಅಲ್ಲಾಹನು ನಿಮ್ಮ ಪ್ರಭುವೂ ನಿಮ್ಮ ಪೂರ್ವಜರಾದ ತಂದೆತಾತಂದಿರ ಪ್ರಭುವೂ ಆಗಿದ್ದಾನೆ.'

ٱللَّهَ رَبَّكُمْ وَرَبَّ ءَابَآئِكُمُ ٱلْأَوَّلِينَ ﴿١٢٧﴾

128. ಆದರೆ ಅವರು (ಜನರು) ಅವರನ್ನು ಸುಳ್ಳಾಗಿಸಿದರು. ಆದ್ದರಿಂದ ಅವರನ್ನು ನಿಶ್ಚಯವಾಗಿಯೂ (ವಿಚಾರಣೆಗೋಸ್ಕರ ಅಲ್ಲಾಹನ ಮುಂದೆ) ಹಾಜರು ಪಡಿಸಲಾಗುವುದು -

فَكَذَّبُوهُ فَإِنَّهُمْ لَمُحْضَرُونَ ﴿١٢٨﴾

129. ಅಲ್ಲಾಹನ ವರಿಷ್ಠ ಭಕ್ತದಾಸರನ್ನು ಹೊರತು ಪಡಿಸಿ.

إِلَّا عِبَادَ ٱللَّهِ ٱلْمُخْلَصِينَ ﴿١٢٩﴾

130. ಅನಂತರದ ಪೀಳಿಗೆಗಳಲ್ಲಿ ಅವರ ಕುರಿತು ಉತ್ತಮ ಸ್ಮರಣೆಯನ್ನು ನಾವು ಬಾಕಿಯುಳಿಸಿದೆವು.

وَتَرَكْنَا عَلَيْهِ فِى ٱلْءَاخِرِينَ ﴿١٣٠﴾

131. ಇಲ್ಯಾಸೀನ್‌ರ ಮೇಲೆ ಶಾಂತಿ ಇರಲಿ.

سَلَٰمٌ عَلَىٰٓ إِلْ يَاسِينَ ﴿١٣١﴾

132. ಈ ರೀತಿಯಲ್ಲಿ ನಾವು ಸತ್ಕರ್ಮಿಗಳಿಗೆ ಪ್ರತಿಫಲ ನೀಡುತ್ತೇವೆ.

إِنَّا كَذَٰلِكَ نَجْزِى ٱلْمُحْسِنِينَ ﴿١٣٢﴾

133. ದಿಟವಾಗಿಯೂ ಅವರು ನಮ್ಮ ವಿಶ್ವಾಸಿಗಳಾದ ಭಕ್ತದಾಸರಲ್ಲಿ ಒಬ್ಬರಾಗಿದ್ದರು.

إِنَّهُۥ مِنْ عِبَادِنَا ٱلْمُؤْمِنِينَ ﴿١٣٣﴾

134. ನಿಸ್ಸಂದೇಹವಾಗಿಯೂ ಲೂತ್ ಸಹ ನಮ್ಮ ಸಂದೇಶವಾಹಕರ ಪೈಕಿ ಒಬ್ಬರಾಗಿದ್ದರು.

وَإِنَّ لُوطًا لَّمِنَ ٱلْمُرْسَلِينَ ﴿١٣٤﴾

135. ನಾವು ಅವರನ್ನೂ ಅವರ ಕುಟುಂಬದವರೆಲ್ಲರನ್ನೂ ಪಾರುಮಾಡಿದ ಸಂದರ್ಭ -

إِذْ نَجَّيْنَٰهُ وَأَهْلَهُۥٓ أَجْمَعِينَ ﴿١٣٥﴾



ಭಾಗ 23 ಅಸ್ಸಾಫ್ಫಾತ್ ಅಧ್ಯಾಯ 37

136. ಹಿಂದಕ್ಕೆ ಸರಿದು ನಿಂತವರೊಂದಿಗೆ ಸೇರಿದ ಒಬ್ಬ ಮುದಿ ಹೆಂಗಸು ಹೊರತು.

إِلَّا عَجُوزًا فِى ٱلْغَٰبِرِينَ ﴿١٣٦﴾

137. ಅನಂತರ ನಾವು ಇತರರನ್ನು ಸಂಪೂರ್ಣವಾಗಿ ನಾಶಪಡಿಸಿದೆವು.

ثُمَّ دَمَّرْنَا ٱلْءَاخَرِينَ ﴿١٣٧﴾

138. ನೀವು ಅವರ ಪ್ರದೇಶಗಳ ಮೂಲಕ ಬೆಳಗಿನ ಹೊತ್ತು ದಾಟಿಹೋಗುತ್ತೀರಿ;

وَإِنَّكُمْ لَتَمُرُّونَ عَلَيْهِم مُّصْبِحِينَ ﴿١٣٨﴾

139. ರಾತ್ರಿ ಹೊತ್ತಿನಲ್ಲಿ ಕೂಡ. ಹಾಗಿದ್ದರೂ ನೀವೇಕೆ ಚಿಂತನೆಮಾಡುವುದಿಲ್ಲ?

وَبِٱلَّيْلِ ۗ أَفَلَا تَعْقِلُونَ ﴿١٣٩﴾

140. ದಿಟವಾಗಿಯೂ ಯೂನುಸ್ ಸಹ ಸಂದೇಶವಾಹಕರಲ್ಲಿ ಒಬ್ಬರಾಗಿದ್ದರು.

وَإِنَّ يُونُسَ لَمِنَ ٱلْمُرْسَلِينَ ﴿١٤٠﴾

141. ತುಂಬಿದ ಒಂದು ಹಡಗಿನೆಡೆಗೆ ಅವರು ಓಡಿ ಹೋದಾಗ,

إِذْ أَبَقَ إِلَى ٱلْفُلْكِ ٱلْمَشْحُونِ ﴿١٤١﴾

142. ಅವರು (ಇತರ ಪ್ರಯಾಣಿಕರೊಂದಿಗೆ) ಚೀಟಿ ಎತ್ತುವುದರಲ್ಲಿ ಸೇರಿದರು. ಆಗ ಅವರು ಹೊರ ಹಾಕಲ್ಪಟ್ಟರು.

فَسَاهَمَ فَكَانَ مِنَ ٱلْمُدْحَضِينَ ﴿١٤٢﴾

143. ಹಾಗೆ ಅವರು ಸ್ವಯಂ ದೂಷಿಸುತ್ತಿರುವಾಗ ಒಂದು ದೊಡ್ಡ ಮೀನು ಅವರನ್ನು ನುಂಗಿತು.

فَٱلْتَقَمَهُ ٱلْحُوتُ وَهُوَ مُلِيمٌ ﴿١٤٣﴾

144. ಆಗ ಅವರು ಅಲ್ಲಾಹನ ಪರಿಶುದ್ಧತೆಯನ್ನು ಕೊಂಡಾಡುವವರು ಅಲ್ಲವಾಗಿರುತ್ತಿದ್ದರೆ,

فَلَوْلَآ أَنَّهُۥ كَانَ مِنَ ٱلْمُسَبِّحِينَ ﴿١٤٤﴾

145. ಪುನರುತ್ಥಾನ ದಿನದ ವರೆಗೆ ಅವರು ಅದರ ಹೊಟ್ಟೆಯಲ್ಲೇ ಕಳೆಯಬೇಕಾಗುತ್ತಿತ್ತು.

لَلَبِثَ فِى بَطْنِهِۦٓ إِلَىٰ يَوْمِ يُبْعَثُونَ ﴿١٤٥﴾

146. ಅನಂತರ ಅವರು ಅಸ್ವಸ್ಥರಾಗಿದ್ದ ಸ್ಥಿತಿಯಲ್ಲಿ ಅವರನ್ನು ನಾವು (ಸಮುದ್ರ ತೀರದ) ಮರುಭೂಮಿಯಲ್ಲಿ ಎಸೆದೆವು.

فَنَبَذْنَٰهُ بِٱلْعَرَآءِ وَهُوَ سَقِيمٌ ﴿١٤٦﴾

147. ಅವರ ಸಮೀಪದಲ್ಲೇ ಒಂದು ಕುಂಬಳಕಾಯಿ ಬಳ್ಳಿ ಬೆಳೆಯುವಂತೆ ನಾವು ಮಾಡಿದೆವು.

وَأَنۢبَتْنَا عَلَيْهِ شَجَرَةً مِّن يَقْطِينٍ ﴿١٤٧﴾

وَأَرْسَلْنَاهُ إِلَىٰ مِائَةِ أَلْفٍ أَوْ يَزِيدُونَ

**148.** ನಾವು ಅವರನ್ನು ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚು ಜನರ ಬಳಿಗೆ (ಸಂದೇಶವಾಹಕನಾಗಿ) ಕಳುಹಿಸಿದ್ದೆವು.

فَآمَنُوا فَمَتَّعْنَاهُمْ إِلَىٰ حِينٍ

**149.** ಅವರು ಸತ್ಯವಿಶ್ವಾಸಿಗಳಾದರು. ಆದುದರಿಂದ ಒಂದು ನಿಶ್ಚಿತ ಕಾಲದ ವರೆಗೆ ಅವರಿಗೆ ನಾವು ಜೀವನಾಧಾರ ಒದಗಿಸಿಕೊಟ್ಟೆವು.

فَاسْتَفْتِهِمْ أَلِرَبِّكَ الْبَنَاتُ وَلَهُمُ الْبَنُونَ

**150.** ಈಗ ನೀನು ಅವರೊಡನೆ (ಮಕ್ಕದ ಅವಿಶ್ವಾಸಿಗಳೊಡನೆ) ಕೇಳು: ನಿನ್ನ ಪ್ರಭುವಿಗೆ ಹೆಣ್ಮಕ್ಕಳೂ ಅವರಿಗೆ ಗಂಡು ಮಕ್ಕಳೂ ಇರುವರೇನು?

أَمْ خَلَقْنَا الْمَلَائِكَةَ إِنَاثًا وَهُمْ شَاهِدُونَ

**151.** ಅಥವಾ ಅವರ ಸಾನ್ನಿಧ್ಯದಲ್ಲಿ ನಾವು ದೇವದೂತರನ್ನು (ಮಲಕುಗಳನ್ನು) ಹೆಣ್ಣುಗಳಾಗಿ ಸೃಷ್ಟಿಸಿದ್ದೇವೆಯೇ?

أَلَا إِنَّهُمْ مِنْ إِفْكِهِمْ لَيَقُولُونَ

**152.** ತಿಳಿಯಿರಿ, ಇದು ಅವರ ಕಪೋಲ ಕಲ್ಪಿತ ವಾಗಿದೆ - ಅವರು ಹೇಳುತ್ತಾರೆ:

وَلَدَ اللَّهُ وَإِنَّهُمْ لَكَاذِبُونَ

**153.** 'ಅಲ್ಲಾಹನಿಗೆ ಪುತ್ರನಿದ್ದಾನೆ' (ಎಂದು). ನಿಶ್ಚಯವಾಗಿಯೂ ಅವರು ಸುಳ್ಳುಹೇಳು ವವರಾಗಿದ್ದಾರೆ.

أَصْطَفَى الْبَنَاتِ عَلَى الْبَنِينَ

**154.** ಏನು, ಅವನು ಗಂಡುಮಕ್ಕಳಿಗಿಂತ ಹೆಣ್ಮಕ್ಕಳಿಗೆ ಪ್ರಾಶಸ್ತ್ಯ ನೀಡಿ ಅವರನ್ನು ಆಯ್ಕೆ ಮಾಡಿದ್ದಾನೋ?

مَا لَكُمْ كَيْفَ تَحْكُمُونَ

**155.** ನಿಮಗೇನಾಗಿದೆ? ಇದೆಂಥ ನಿಮ್ಮ ತೀರ್ಮಾನ?

أَفَلَا تَذَكَّرُونَ

**156.** ನೀವು ಮನವರಿಕೆ ಮಾಡುವುದಿಲ್ಲವೇ?

أَمْ لَكُمْ سُلْطَانٌ مُبِينٌ

**157.** ಅಥವಾ ನಿಮ್ಮ ಬಳಿ ಸ್ಪಷ್ಟವಾದ ಆಧಾರ ವೇನಾದರೂ ಇದೆಯೇ?

فَأْتُوا بِكِتَابِكُمْ إِنْ كُنْتُمْ صَادِقِينَ

**158.** ಹಾಗಿದ್ದರೆ, ನೀವು ಸತ್ಯವಂತರೆಂದಾದರೆ, ನಿಮ್ಮ ಗ್ರಂಥವನ್ನು ತನ್ನಿರಿ.





وَجَعَلُوا بَيْنَهُ وَبَيْنَ الْجِنَّةِ نَسَبًا ۚ وَلَقَدْ عَلِمَتِ الْجِنَّةُ إِنَّهُمْ لَمُحْضَرُونَ

**159.** ಅವರು ಅವನ (ಅಲ್ಲಾಹನ) ಮತ್ತು ಜಿನ್ನುಗಳ ಮಧ್ಯೆ ಒಂದು ರಕ್ತ ಸಂಬಂಧವಿದೆಯೆಂದು ಹೇಳುತ್ತಾರೆ. ಆದರೆ (ವಿಚಾರಣೆಗೋಸ್ಕರ ದೇವಸನ್ನಿಧಿಯಲ್ಲಿ) ತಾವು ಹಾಜರುಗೊಳಿಸಲ್ಪಡುವೆವು ಎಂದು ಜಿನ್ನುಗಳಿಗೆ ಚೆನ್ನಾಗಿ ಗೊತ್ತಿದೆ.

سُبْحَانَ اللَّهِ عَمَّا يَصِفُونَ

**160.** ಅಲ್ಲಾಹನು ಪವಿತ್ರನು; ಅವರ ಆರೋಪ ಗಳಿಂದೆಲ್ಲ ಮುಕ್ತನು.

إِلَّا عِبَادَ اللَّهِ الْمُخْلَصِينَ

**161.** ಅಲ್ಲಾಹನ ನಿಷ್ಠಾವಂತ ಭಕ್ತದಾಸರು ಹಾಗೆ ಮಾಡುವುದರಿಂದ ಹೊರತಾಗಿದ್ದಾರೆ.

فَإِنَّكُمْ وَمَا تَعْبُدُونَ

**162.** ಖಂಡಿತವಾಗಿಯೂ ನೀವು ಮತ್ತು ನಿಮ್ಮ ಆರಾಧ್ಯರು -

مَا أَنْتُمْ عَلَيْهِ بِفَاتِنِينَ

**163.** ನಿಮ್ಮ ಪೈಕಿ ಯಾರೂ ಅವನ (ಅಲ್ಲಾಹನ) ವಿರುದ್ಧವಾಗಿ (ಯಾರನ್ನೂ) ದಾರಿತಪ್ಪಿಸಲು ಶಕ್ತರಲ್ಲ.

إِلَّا مَنْ هُوَ صَالِ الْجَحِيمِ

**164.** ನರಕಾಗ್ನಿಗೆ ಗುರಿಯಾಗುವವನನ್ನು ಹೊರತು.

وَمَا مِنَّا إِلَّا لَهُ مَقَامٌ مَعْلُومٌ

**165.** (ಅವರು ಹೇಳುತ್ತಾರೆ:)[396C] 'ನಮ್ಮ ಪೈಕಿ ಪ್ರತಿ ಯೊಬ್ಬರಿಗೆ ಒಂದು ನಿಶ್ಚಿತ ಸ್ಥಾನವಿದೆ.

وَإِنَّا لَنَحْنُ الصَّافُّونَ

**166.** 'ನಿಶ್ಚಯವಾಗಿಯೂ ನಾವೆಲ್ಲರೂ ಸಾಲು ಸಾಲಾಗಿ ನಿಂತಿರುವೆವು.

وَإِنَّا لَنَحْنُ الْمُسَبِّحُونَ

**167.** 'ಅಲ್ಲಾಹನ ಪರಿಶುದ್ಧತೆಯನ್ನು ಕೊಂಡಾಡು ವವರು ನಾವೇ ಆಗಿದ್ದೇವೆ.'

وَإِنْ كَانُوا لَيَقُولُونَ

**168.** ಅವರು (ಮಕ್ಕ ನಿವಾಸಿಗಳು) ಹೀಗೆ ಹೇಳುತ್ತಿದ್ದರು:

لَوْ أَنَّ عِنْدَنَا ذِكْرًا مِنَ الْأَوَّلِينَ

**169.** 'ಪೂರ್ವಿಕ ಜನರಿಗಿದ್ದ (ಅಂತಹ) ಒಂದು ಗ್ರಂಥ ನಮ್ಮ ಬಳಿ ಇರುತ್ತಿದ್ದರೆ,

396C. 'ಅವರು' ಎಂದರೆ ಮುಹಮ್ಮದ್ ಪೈಗಂಬರ (ಸ) ರ ಶಿಷ್ಯರೆಂದೂ ದೇವದೂತರೆಂದೂ ವ್ಯಾಖ್ಯಾನಿಸಲಾಗುತ್ತದೆ.

**170. 'ನಾವು ಅಲ್ಲಾಹನ ನಿಷ್ಠಾವಂತ ದಾಸರಾಗುತ್ತಿದ್ದೆವು.'**

لَكُنَّا عِبَادَ اللّٰهِ الْمُخْلَصِيْنَ ﴿١٦٩﴾

**171. ಹಾಗಿದ್ದರೂ,** (ಈ ಖುರ್‌ಆನ್ ಅವರ ಬಳಿಗೆ ಬಂದಾಗ) **ಅವರು ಅದನ್ನು ನಂಬಲಿಲ್ಲ. ಅದನ್ನು** (ಅದರ ಪರಿಣಾಮವನ್ನು) **ಅವರು ಶೀಘ್ರದಲ್ಲೇ ತಿಳಿಯುವರು.**

فَكَفَرُوْا بِهٖ فَسَوْفَ يَعْلَمُوْنَ ﴿١٧٠﴾

**172. ನಮ್ಮ ಭಕ್ತದಾಸರಾದ ಸಂದೇಶವಾಹಕರ ಬಗ್ಗೆ ನಮ್ಮ ತೀರ್ಮಾನ ಮೊದಲೇ ವಿಧಿಸಲ್ಪಟ್ಟಿದೆ.**

وَلَقَدْ سَبَقَتْ كَلِمَتُنَا لِعِبَادِنَا الْمُرْسَلِيْنَ ﴿١٧١﴾

**173. ಖಂಡಿತವಾಗಿಯೂ ಅವರಿಗೆ ನೆರವು ನೀಡಲಾಗುವುದು.**

اِنَّهُمْ لَهُمُ الْمَنْصُوْرُوْنَ ﴿١٧٢﴾

**174. ನಿಶ್ಚಯವಾಗಿಯೂ ನಮ್ಮ ಸೈನ್ಯವೇ ವಿಜಯಿಯಾಗುವುದು.**

وَاِنَّ جُنْدَنَا لَهُمُ الْغٰلِبُوْنَ ﴿١٧٣﴾

**175. ಆದ್ದರಿಂದ ಒಂದು ಕಾಲಾವಧಿಯ ವರೆಗೆ ನೀನು ಅವರನ್ನು ಬಿಟ್ಟುನಿಲ್ಲು.**

فَتَوَلَّ عَنْهُمْ حَتّٰى حِيْنٍ ﴿١٧٤﴾

**176. ನೀನು ಅವರನ್ನು ವೀಕ್ಷಿಸುತ್ತಾ ಇರು.** (ಅವರ ನಿರಾಕರಣೆಯ ಫಲವನ್ನು) **ಅವರು ಕಾಣುವರು.**

وَّاَبْصِرْهُمْ فَسَوْفَ يُبْصِرُوْنَ ﴿١٧٥﴾

**177. ಏನು, ನಮ್ಮ ಶಿಕ್ಷೆಗೆ ಅವರು ತ್ವರೆಪಡಿಸುತ್ತಾರೋ?**

اَفَبِعَذَابِنَا يَسْتَعْجِلُوْنَ ﴿١٧٦﴾

**178. ಆದರೆ ಅದು** (ಶಿಕ್ಷೆ) **ಅವರ ಅಂಗಳದಲ್ಲಿ ಬಂದೆರಗುವಾಗ ಅದು ಮುನ್ನೆಚ್ಚರಿಕೆ ನೀಡಲ್ಪಟ್ಟವರಿಗೆ ಕೆಟ್ಟ ಮುಂಜಾನೆಯಾಗಿರಬಹುದು.**

فَاِذَا نَزَلَ بِسَاحَتِهِمْ فَسَآءَ صَبَاحُ الْمُنْذَرِيْنَ ﴿١٧٧﴾

**179. ಆದ್ದರಿಂದ ಒಂದು ಕಾಲಾವಧಿಯ ವರೆಗೆ ಅವರಿಂದ ನೀನು ಅಗಲಿ ನಿಲ್ಲು.**

وَتَوَلَّ عَنْهُمْ حَتّٰى حِيْنٍ ﴿١٧٨﴾

**180. ನೀನು ಅವರನ್ನು ವೀಕ್ಷಿಸುತ್ತಾ ಇರು.** (ಅವರ ನಿರಾಕರಣೆಯ ಫಲವನ್ನು) **ಅವರು ಕಾಣುವರು.**

وَّاَبْصِرْ فَسَوْفَ يُبْصِرُوْنَ ﴿١٧٩﴾

**181. ನಿನ್ನ ಪ್ರಭು, ಪ್ರತಾಪಶಾಲಿಯಾದ ಪ್ರಭು, ಅವರ ಆರೋಪಗಳಿಂದೆಲ್ಲ ಅವನು ಪರಿಶುದ್ಧನು.**

سُبْحٰنَ رَبِّكَ رَبِّ الْعِزَّةِ عَمَّا يَصِفُوْنَ ﴿١٨٠﴾





**182. ಸಂದೇಶವಾಹಕರೆಲ್ಲರ ಮೇಲೆ ಶಾಂತಿ ಇರಲಿ.**

وَسَلٰمٌ عَلَى الْمُرْسَلِيْنَ ﴿١٨١﴾

**183. ಸರ್ವಲೋಕಗಳ ಪ್ರಭುವಾದ ಅಲ್ಲಾಹನಿಗೆ ಸರ್ವಸ್ತುತಿಸ್ತೋತ್ರಗಳು ಸಲ್ಲುತ್ತವೆ.**

وَالْحَمْدُ لِلّٰهِ رَبِّ الْعٰلَمِيْنَ ﴿١٨٢﴾

سُورَةُ صٓ مَكِّيَّةٌ وَّهِيَ مَعَ الْبَسْمَلَةِ تِسْعٌ وَّثَمَانُوْنَ اٰيَةً وَّخَمْسَةُ رُكُوْعَاتٍ

## 38. ಸಾದ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 89 ಆಯತ್‌ಗಳು ಹಾಗೂ 5 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಸಾದ್.[397] ಉಪದೇಶಗಳಿಂದ ತುಂಬಿಕೊಂಡಿರುವ ಖುರ್‌ಆನಿನ ಆಣೆ.**

صٓ وَالْقُرْاٰنِ ذِی الذِّكْرِ ②

**3. ಆದರೆ ಅವಿಶ್ವಾಸಿಗಳು ದುರಭಿಮಾನದಲ್ಲೂ ಶತ್ರುತ್ವದಲ್ಲೂ ಮುಳುಗಿದ್ದಾರೆ.**

بَلِ الَّذِيْنَ كَفَرُوْا فِيْ عِزَّةٍ وَّ شِقَاقٍ ③

**4. ಇವರಿಗಿಂತ ಮುಂಚೆ ಎಷ್ಟೆಲ್ಲ ಪೀಳಿಗೆಗಳನ್ನು ನಾವು ನಾಶಪಡಿಸಿದೆವು! ಆಗ ಅವರು ಸಹಾಯಕ್ಕಾಗಿ ಮೊರೆಯಿಟ್ಟರು. ಆದರೆ ಅದು ಅವರು ಪಾರಾಗುವ ಸಂದರ್ಭವಾಗಿರಲಿಲ್ಲ.**

كَمْ اَهْلَكْنَا مِنْ قَبْلِهِمْ مِّنْ قَرْنٍ فَنَادَوْا وَّلَاتَ حِيْنَ مَنَاصٍ ④

**5. ಅವರಿಂದಲೇ ಅವರಿಗೊಬ್ಬ ಮುನ್ನೆಚ್ಚರಿಕೆ ನೀಡುವಾತನು ಬಂದುದಕ್ಕೆ ಅವರು ಅಚ್ಚರಿಗೊಳ್ಳುತ್ತಾರೆ. ಅವಿಶ್ವಾಸಿಗಳು ಹೇಳುತ್ತಾರೆ: 'ಇವನೊಬ್ಬ ಸುಳ್ಳುಗಾರನಾದ ಜಾದೂಗಾರ.**

وَعَجِبُوْٓا اَنْ جَآءَهُمْ مُّنْذِرٌ مِّنْهُمْ ؗ وَقَالَ الْكٰفِرُوْنَ هٰذَا سٰحِرٌ كَذَّابٌ ⑤

**6. 'ಇವನು ದೇವರುಗಳನ್ನೆಲ್ಲ** (ಒಟ್ಟು ಸೇರಿಸಿ) **ಒಬ್ಬ ದೇವನನ್ನಾಗಿ ಮಾಡಿಬಿಟ್ಟಿರುವನೇ? ನಿಜವಾಗಿಯೂ ಇದೊಂದು ಆಶ್ಚರ್ಯಕರವಾದ ಸಂಗತಿಯಾಗಿದೆ.'**

اَجَعَلَ الْاٰلِهَةَ اِلٰهًا وَّاحِدًا ۚۖ اِنَّ هٰذَا لَشَيْءٌ عُجَابٌ ⑥

**7. ಅವರ ಪೈಕಿಯ ನೇತಾರರು** (ಜನರೊಡನೆ)**: 'ನೀವು ಹೋಗಿರಿ. ನಿಮ್ಮ ದೇವರುಗಳ ವಿಚಾರದಲ್ಲಿ ಸ್ಥಿರಚಿತ್ತರಾಗಿರಿ. ಖಂಡಿತವಾಗಿಯೂ ಇದೊಂದು ಸಂಚು ಆಗಿದೆ' ಎಂದು ಹೇಳುತ್ತಾ ಹೊರಟುಹೋದರು.**

وَانْطَلَقَ الْمَلَاُ مِنْهُمْ اَنِ امْشُوْا وَاصْبِرُوْا عَلٰٓى اٰلِهَتِكُمْ ۚۖ اِنَّ هٰذَا لَشَيْءٌ يُّرَادُ ⑦

397. ಸಾದ್ (ಸಾದಿಖ್) = ಸತ್ಯವಂತ. ಈ ಖುರ್‌ಆನನ್ನು ಅವತೀರ್ಣ ಗೊಳಿಸಿದವನು ಸತ್ಯವಂತನಾದ ಅಲ್ಲಾಹನು ಎಂದು ತಾತ್ಪರ್ಯ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8. 'ಇದನ್ನು ನಾವು ಇತರ ಯಾವುದೇ ಧರ್ಮದಲ್ಲಿ ಕೇಳಿಲ್ಲ. ಇದು ಬರೇ ಸುಳ್ಳು ಸೃಷ್ಟನೆಯಾಗಿದೆ.**

مَا سَمِعْنَا بِهٰذَا فِي الْمِلَّةِ الْاٰخِرَةِ ۚۖ اِنْ هٰذَآ اِلَّا اخْتِلَاقٌ ⑧

**9. 'ನಮ್ಮ ಪೈಕಿ ಉಪದೇಶ ಅವತೀರ್ಣವಾದುದು ಇವನಿಗೇನು?'** (ಎಂದು ಸಹ ಅವರು ಕೇಳುತ್ತಾರೆ.) **ವಾಸ್ತವದಲ್ಲಿ ಅವರು ನನ್ನ ಉಪದೇಶದ ಬಗ್ಗೆ ಸಂಶಯಗ್ರಸ್ತರಾಗಿದ್ದಾರೆ. ನಿಜವೇನೆಂದರೆ ಅವರು ನನ್ನ ಶಿಕ್ಷೆಯ ರುಚಿಯನ್ನು ಅನುಭವಿಸಲಿಲ್ಲ.**

ءَاُنْزِلَ عَلَيْهِ الذِّكْرُ مِنْۢ بَيْنِنَا ؕ بَلْ هُمْ فِيْ شَكٍّ مِّنْ ذِكْرِيْ ۚ بَلْ لَّمَّا يَذُوْقُوْا عَذَابِ ⑨

**10. ಪ್ರತಾಪಶಾಲಿಯೂ ಅತಿ ಉದಾರಿಯೂ ಆಗಿರುವ ನಿನ್ನ ಪ್ರಭುವಿನ ಕರುಣೆಯ ಭಂಡಾರಗಳು ಅವರ ಬಳಿಯಲ್ಲಿವೆಯೇನು?**

اَمْ عِنْدَهُمْ خَزَآئِنُ رَحْمَةِ رَبِّكَ الْعَزِيْزِ الْوَهَّابِ ⑩

**11. ಅಥವಾ ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವುದರ ಆಧಿಪತ್ಯ ಅವರಿಗಿದೆಯೇ? ಹಾಗಿದ್ದರೆ ತಮ್ಮೆಲ್ಲ ಮಾರ್ಗೋಪಾಯಗಳಿಂದ ಅವರು ಮೇಲೇರಲು ಪ್ರಯತ್ನಿಸಲಿ.**

اَمْ لَهُمْ مُّلْكُ السَّمٰوٰتِ وَالْاَرْضِ وَمَا بَيْنَهُمَا ۟ فَلْيَرْتَقُوْا فِي الْاَسْبَابِ ⑪

**12. ಒಕ್ಕೂಟಕ್ಕೆ ಸೇರಿದ, ಸೋಲಿಸಲ್ಪಡುವ ಒಂದು ಸೈನ್ಯ ಅಲ್ಲಿದೆ.[397A]**

جُنْدٌ مَّا هُنَالِكَ مَهْزُوْمٌ مِّنَ الْاَحْزَابِ ⑫

**13. ಅವರಿಗಿಂತ ಮುಂಚೆ ಕೂಡ ನೂಹ್‌ರ ಜನಾಂಗದವರು, ಆದ್ ಗೋತ್ರದವರು ಮತ್ತು ಬಲಿಷ್ಠ ರಾಜನಾದ ಫಿರ್‌ಔನ್ ಸಹ** (ಪ್ರವಾದಿಗಳನ್ನು) **ಸುಳ್ಳಾಗಿಸಿದ್ದಾರೆ.**

كَذَّبَتْ قَبْلَهُمْ قَوْمُ نُوْحٍ وَّعَادٌ وَّفِرْعَوْنُ ذُو الْاَوْتَادِ ⑬

**14. ಸಮೂದ್ ಗೋತ್ರವೂ ಲೂತ್‌ರ ಜನರೂ ಐಕತ್‌ನವರೂ** (ಪ್ರವಾದಿಗಳನ್ನು ಸುಳ್ಳಾಗಿಸಿದರು) **- ಇವರೆಲ್ಲರೂ ಒಕ್ಕೂಟಕ್ಕೆ ಸೇರಿದವರಾಗಿದ್ದರು.**

وَثَمُوْدُ وَقَوْمُ لُوْطٍ وَّاَصْحٰبُ لْئَيْكَةِ ؕ اُولٰٓئِكَ الْاَحْزَابُ ⑭

**15.** (ಅವರ ಪೈಕಿ) **ಯಾರೂ ಪ್ರವಾದಿಗಳನ್ನು ಸುಳ್ಳಾಗಿಸದಿರಲಿಲ್ಲ. ಆಗ ನನ್ನ ಶಿಕ್ಷೆ** (ಅವರಿಗೆ) **ಅನಿವಾರ್ಯವಾಯಿತು.**

اِنْ كُلٌّ اِلَّا كَذَّبَ الرُّسُلَ فَحَقَّ عِقَابِ ⑮

397A. ಅಹ್‌ಝಾಬ್ ಯುದ್ಧದ ಬಗ್ಗೆ ಇಲ್ಲಿ ಭವಿಷ್ಯನುಡಿಯಲ್ಪಟ್ಟಿದೆ.

**16.** ಒಂದು ಭಯಾನಕ ಶಬ್ದವನ್ನಲ್ಲದೆ ಈ ಜನರು ಬೇರೇನನ್ನೂ ನಿರೀಕ್ಷಿಸುವುದಿಲ್ಲ. ಅದಕ್ಕೆ ಕಾಲಾವಕಾಶ ಇರಲಾರದು.

وَمَا يَنظُرُ هَٰؤُلَاءِ إِلَّا صَيْحَةً وَاحِدَةً مَّا لَهَا مِن فَوَاقٍ ﴿١٦﴾

**17.** 'ನಮ್ಮ ಪ್ರಭೂ, ವಿಚಾರಣೆಯ ದಿನಕ್ಕಿಂತ ಮುಂಚಿತವಾಗಿ ನಮ್ಮ (ಶಿಕ್ಷೆಯ) ಪಾಲನ್ನು ನೀನು ನಮಗೆ ಬೇಗ ಕೊಟ್ಟುಬಿಡು' ಎಂದು ಅವರು ಹೇಳುತ್ತಾರೆ.

وَقَالُوا رَبَّنَا عَجِّل لَّنَا قِطَّنَا قَبْلَ يَوْمِ الْحِسَابِ ﴿١٧﴾

**18.** ಅವರು ಹೇಳುವುದನ್ನು ನೀನು ಸೈರಿಸಿಕೋ. ಶಕ್ತಿಶಾಲಿಯಾದ ನಮ್ಮ ಭಕ್ತದಾಸ ದಾವೂದ್‌ರನ್ನು ಜ್ಞಾಪಿಸು. ಅವರು ಸದಾ (ಅಲ್ಲಾಹನ ಕಡೆಗೆ) ಬಾಗುವವರಾಗಿದ್ದರು.

اصْبِرْ عَلَىٰ مَا يَقُولُونَ وَاذْكُرْ عَبْدَنَا دَاوُودَ ذَا الْأَيْدِ ۖ إِنَّهُ أَوَّابٌ ﴿١٨﴾

**19.** ಅವರೊಂದಿಗೆ ಸಂಜೆ ಮತ್ತು ಮುಂಜಾನೆ (ನಮ್ಮ) ಸ್ತುತಿಕೀರ್ತನೆ ಮಾಡುವಂತೆ ಪರ್ವತ ನಿವಾಸಿಗಳನ್ನು ಅವರಿಗೆ (ದಾವೂದ್‌ರಿಗೆ) ನಾವು ಅಧೀನಗೊಳಿಸಿದ್ದೆವು.

إِنَّا سَخَّرْنَا الْجِبَالَ مَعَهُ يُسَبِّحْنَ بِالْعَشِيِّ وَالْإِشْرَاقِ ﴿١٩﴾

**20.** ಗುಂಪು ಸೇರುತ್ತಿದ್ದ ಪಕ್ಷಿಗಳನ್ನು ಸಹ. [397B] ಅವರೆಲ್ಲರೂ ಅವರಿಗೆ ವಿಧೇಯರಾಗಿದ್ದರು.

وَالطَّيْرَ مَحْشُورَةً ۖ كُلٌّ لَّهُ أَوَّابٌ ﴿٢٠﴾

**21.** ನಾವು ಅವರ ಆಡಳಿತೆಯನ್ನು ಸುಶಕ್ತಗೊಳಿಸಿದೆವು. ಅವರಿಗೆ ನಾವು ಜ್ಞಾನವನ್ನೂ ತೀರ್ಮಾನದ ವಾಕ್ಚಾತುರ್ಯವನ್ನೂ ದಯಪಾಲಿಸಿದ್ದೆವು.

وَشَدَدْنَا مُلْكَهُ وَآتَيْنَاهُ الْحِكْمَةَ وَفَصْلَ الْخِطَابِ ﴿٢١﴾

**22.** ಅವರ ಆರಾಧನಾ ಕೋಣೆಯ ಗೋಡೆ ಹಾರಿ ಬಂದ ಆ ವಿವಾದಿಗಳ ವೃತ್ತಾಂತ ನಿನಗೆ ಗೊತ್ತಿದೆಯೇ?

وَهَلْ أَتَاكَ نَبَأُ الْخَصْمِ إِذْ تَسَوَّرُوا الْمِحْرَابَ ﴿٢٢﴾

**23.** ಅವರು ದಾವೂದ್‌ರ ಬಳಿಗೆ ಬಂದಾಗ ಅವರು (ದಾವೂದ್) ಹೆದರಿದರು. ಅವರು ಹೇಳಿದರು: 'ಭಯಪಡಬೇಡಿರಿ. ನಮಗಿಬ್ಬರಿಗೆ ಪರಸ್ಪರ ತಕರಾರಿದೆ. ಒಬ್ಬನಿಂದ ಇನ್ನೊಬ್ಬನಿಗೆ ಅನ್ಯಾಯವಾಗಿದೆ. ಆದ್ದರಿಂದ ನಮ್ಮ ಮಧ್ಯೆ ನ್ಯಾಯಯುತವಾದ ತೀರ್ಮಾನ ವಿಧಿಸಿರಿ,

إِذْ دَخَلُوا عَلَىٰ دَاوُودَ فَفَزِعَ مِنْهُمْ ۖ قَالُوا لَا تَخَفْ ۖ خَصْمَانِ بَغَىٰ بَعْضُنَا

397B. ಆಧ್ಯಾತ್ಮಿಕತೆಯ ಉನ್ನತಿಯಲ್ಲಿ ವಿಹರಿಸುವ ಸಾತ್ವಿಕರು ಎಂದು ತಾತ್ಪರ್ಯ.





ಅನ್ಯಾಯವೆಸಗದಿರಿ, ಹಾಗೂ ನಮಗೆ ಸರಿಯಾದ ಮಾರ್ಗವನ್ನು ತೋರಿಸಿರಿ.'

عَلَىٰ بَعْضٍ فَاحْكُم بَيْنَنَا بِالْحَقِّ وَلَا تُشْطِطْ وَاهْدِنَا إِلَىٰ سَوَاءِ الصِّرَاطِ ﴿٢٣﴾

**24.** (ಅವರಲ್ಲೊಬ್ಬ ಹೇಳಿದನು:) "ಇವನು ನನ್ನ ಸಹೋದರ. ಇವನಿಗೆ ತೊಂಬತ್ತೊಂಭತ್ತು ಹೆಣ್ಣು ಕುರಿಗಳಿವೆ. ನನಗಿರುವುದು ಕೇವಲ ಒಂದು ಹೆಣ್ಣು ಕುರಿ. ಆದರೂ 'ಅದನ್ನು ನನಗೆ ಕೊಡು' ಎಂದು ಅವನು ಹೇಳುತ್ತಾನೆ. ಮಾತುಗಾರಿಕೆಯಲ್ಲಿ ಇವನು ನನ್ನನ್ನು ಸೋಲಿಸಿದ್ದಾನೆ."

إِنَّ هَٰذَا أَخِي لَهُ تِسْعٌ وَتِسْعُونَ نَعْجَةً وَلِيَ نَعْجَةٌ وَاحِدَةٌ فَقَالَ أَكْفِلْنِيهَا وَعَزَّنِي فِي الْخِطَابِ ﴿٢٤﴾

**25.** ಅವರು (ದಾವೂದ್) ಹೇಳಿದರು: 'ತನ್ನ ಬಳಿಯಲ್ಲಿ ತನ್ನದೇ ಆದ ಹೆಣ್ಣು ಕುರಿಗಳಿರುವಾಗ ಅವನು ನಿನ್ನ ಕುರಿಯನ್ನೂ ಕೇಳಿ ನಿನಗೆ ಅನ್ಯಾಯವೆಸಗಿದ್ದಾನೆ. ಸಹಬಾಳ್ವೆ ನಡೆಸುವ ಹೆಚ್ಚಿನವರು ಒಬ್ಬರಿಗೊಬ್ಬರು ಅನ್ಯಾಯಮಾಡುತ್ತಾರೆ - ದೇವವಿಶ್ವಾಸಿಗಳಾಗಿದ್ದು ಸತ್ಕರ್ಮ ನಿರತರಾಗಿರುವವರ ಹೊರತು. ಅಂತಹವರು ಬಲು ವಿರಳ.' ನಾವು ಅವರನ್ನು (ದಾವೂದ್‌ರನ್ನು) ಪರೀಕ್ಷೆಗೊಳಪಡಿಸಿದ್ದೇವೆಂದು ಅವರು (ದಾವೂದ್) ಮನಗಂಡರು. ಆದ್ದರಿಂದ ಅವರು ತನ್ನ ಪ್ರಭುವಿನ ಕ್ಷಮೆ ಯಾಚಿಸಿದರು; ವಿಧೇಯತೆಯಿಂದ ನೆಲಕ್ಕೆ ಬಿದ್ದರು ಹಾಗೂ ಅಲ್ಲಾಹನ ಕಡೆಗೆ ತಿರುಗಿದರು.

قَالَ لَقَدْ ظَلَمَكَ بِسُؤَالِ نَعْجَتِكَ إِلَىٰ نِعَاجِهِ ۖ وَإِنَّ كَثِيرًا مِّنَ الْخُلَطَاءِ لَيَبْغِي بَعْضُهُمْ عَلَىٰ بَعْضٍ إِلَّا الَّذِينَ آمَنُوا وَعَمِلُوا الصَّالِحَاتِ وَقَلِيلٌ مَّا هُمْ ۗ وَظَنَّ دَاوُودُ أَنَّمَا فَتَنَّاهُ فَاسْتَغْفَرَ رَبَّهُ وَخَرَّ رَاكِعًا وَأَنَابَ ۩ ﴿٢٥﴾

**26.** ಆದ್ದರಿಂದ ಆ ಬಗ್ಗೆ ನಾವು ಅವರನ್ನು ಕ್ಷಮಿಸಿದೆವು. ಅವರಿಗೆ ನಮ್ಮ ಸನ್ನಿಧಿಯಲ್ಲಿ ನಿಕಟವಾದ ಸ್ಥಾನವೂ ಉತ್ತಮ ವಾಸಸ್ಥಳವೂ ಇದೆ.

فَغَفَرْنَا لَهُ ذَٰلِكَ ۖ وَإِنَّ لَهُ عِندَنَا لَزُلْفَىٰ وَحُسْنَ مَآبٍ ﴿٢٦﴾

**27.** (ನಾವು ಅವರೊಡನೆ ಹೇಳಿದೆವು :) 'ಎಲೈ ದಾವೂದ್ ನಾವು ನಿನ್ನನ್ನು ಭೂಮಿಯಲ್ಲಿ ಪ್ರತಿನಿಧಿಯನ್ನಾಗಿ ಮಾಡಿದ್ದೇವೆ. ಆದ್ದರಿಂದ ನೀನು ಜನರೆಡೆಯಲ್ಲಿ ನ್ಯಾಯಯುತವಾಗಿ ತೀರ್ಮಾನಮಾಡು. ನೀನು ಸ್ವೇಚ್ಛೆಯಿಂದ ವರ್ತಿಸಬಾರದು; ಅದು ನಿನ್ನನ್ನು ಅಲ್ಲಾಹನ ಮಾರ್ಗದಿಂದ ಅಗಲಿಸುವುದು.' ಯಾರು ಅಲ್ಲಾಹನ ಮಾರ್ಗ

يَا دَاوُودُ إِنَّا جَعَلْنَاكَ خَلِيفَةً فِي الْأَرْضِ فَاحْكُم بَيْنَ النَّاسِ بِالْحَقِّ وَلَا تَتَّبِعِ الْهَوَىٰ فَيُضِلَّكَ عَن سَبِيلِ اللَّهِ ۚ إِنَّ الَّذِينَ يَضِلُّونَ عَن سَبِيلِ اللَّهِ لَهُمْ

ದಿಂದ ವ್ಯತಿಕ್ರಮಿಸಿ ಹೋಗುತ್ತಾರೋ, ಖಚಿತವಾಗಿಯೂ ಅವರಿಗೆ ಕಠೋರ ಶಿಕ್ಷೆ ಇದೆ. ಏಕೆಂದರೆ ಅವರು ವಿಚಾರಣೆ ದಿನವನ್ನು ಮರೆತು ಬಿಟ್ಟಿದ್ದಾರೆ.

عَذَابٌ شَدِيدٌۢ بِمَا نَسُوا يَوْمَ الْحِسَابِ ۝٢٧

28. ಆಕಾಶವನ್ನೂ ಭೂಮಿಯನ್ನೂ ಅವುಗಳ ಮಧ್ಯೆ ಇರುವ ಎಲ್ಲವನ್ನೂ ನಾವು ನಿಷ್ಪ್ರಯೋಜಕವಾಗಿ ಸೃಷ್ಟಿಸಿಲ್ಲ. ಅದು ಅವಿಶ್ವಾಸಿಗಳ ಭಾವನೆಯಾಗಿದೆ. ಅವಿಶ್ವಾಸಿಗಳಿಗೆ ನರಕ ನಿಮಿತ್ತ ದೊಡ್ಡ ನಾಶವಿದೆ.

وَمَا خَلَقْنَا السَّمَآءَ وَالْاَرْضَ وَمَا بَيْنَهُمَا بَاطِلًا ۚ ذٰلِكَ ظَنُّ الَّذِيْنَ كَفَرُوْا ۚ فَوَيْلٌ لِّلَّذِيْنَ كَفَرُوْا مِنَ النَّارِ ۝٢٨

29. ವಿಶ್ವಾಸ ಹೊಂದಿ ಸತ್ಕರ್ಮ ನಿರತರಾದವರನ್ನು ಭೂಮಿಯಲ್ಲಿ ಗಲಭೆ ಗೊಂದಲಗಳನ್ನು ಸೃಷ್ಟಿಸುವವರಿಗೆ ಸಮಾನವಾಗಿ ನಾವು ಮಾಡುವೆವೋ? ಸತ್ಕರ್ಮಿಗಳನ್ನು ದುಷ್ಕರ್ಮಿಗಳಂತೆ ನಾವು ಪರಿಗಣಿಸುವೆವೋ?

اَمْ نَجْعَلُ الَّذِيْنَ اٰمَنُوْا وَعَمِلُوا الصّٰلِحٰتِ كَالْمُفْسِدِيْنَ فِي الْاَرْضِ ۫ اَمْ نَجْعَلُ الْمُتَّقِيْنَ كَالْفُجَّارِ ۝٢٩

30. (ಇದು) ನಾವು ನಿನಗೆ ಅವತೀರ್ಣಗೊಳಿಸಿದ ಅನುಗ್ರಹದಾಯಕ ಗ್ರಂಥವಾಗಿದೆ - ಅವರು ಇದರ ವಚನಗಳ ಬಗ್ಗೆ ಚಿಂತನೆ ಮಾಡಲಿಕ್ಕೂ ವಿವೇಕಶಾಲಿಗಳು ಲಕ್ಷ್ಯಗೊಡಲಿಕ್ಕೂ.

كِتٰبٌ اَنْزَلْنٰهُ اِلَيْكَ مُبٰرَكٌ لِّيَدَّبَّرُوْٓا اٰيٰتِهٖ وَلِيَتَذَكَّرَ اُولُوا الْاَلْبَابِ ۝٣٠

31. ನಾವು ದಾವೂದ್‌ರಿಗೆ ಸುಲೈಮಾನರನ್ನು ದಯಪಾಲಿಸಿದೆವು. ಅವರು ಶ್ರೇಷ್ಠ ದಾಸರಾಗಿದ್ದರು. ಅವರು ಸದಾ (ದೇವರ ಕಡೆಗೆ) ಬಾಗುವವರಾಗಿದ್ದರು.

وَوَهَبْنَا لِدَاوٗدَ سُلَيْمٰنَ ۚ نِعْمَ الْعَبْدُ ۚ اِنَّهٗٓ اَوَّابٌ ۝٣١

32. ಬಹಳ ಶೀಘ್ರವಾಗಿ ಓಡುವ ಉತ್ತಮ ತಳಿಯ ಕುದುರೆಗಳನ್ನು ಸಂಜೆ ಹೊತ್ತು ಅವರ ಮುಂದೆ ತರಲಾದಾಗ,

اِذْ عُرِضَ عَلَيْهِ بِالْعَشِيِّ الصّٰفِنٰتُ الْجِيَادُ ۝٣٢

33. ಅವರು ಹೇಳಿದರು: 'ನಾನು ಉತ್ತಮ ವಸ್ತುಗಳನ್ನು ಪ್ರೀತಿಸುವುದನ್ನು ಇಷ್ಟಪಡುತ್ತೇನೆ. ಏಕೆಂದರೆ ಅವು ನನ್ನ ಪ್ರಭುವಿನ ಸ್ಮರಣೆಯನ್ನು ಹುಟ್ಟಿಸುತ್ತದೆ.' ಅನಂತರ ಅವು ಪರದೆಯ ಹಿಂದೆ ಮರೆಯಾದಾಗ,

فَقَالَ اِنِّيْٓ اَحْبَبْتُ حُبَّ الْخَيْرِ عَنْ ذِكْرِ رَبِّيْ ۚ حَتّٰى تَوَارَتْ بِالْحِجَابِ ۝٣٣

34. (ಅವರು ಹೇಳಿದರು:) 'ಅವುಗಳನ್ನು ಮರಳಿ





ನನ್ನ ಬಳಿಗೆ ತನ್ನಿರಿ.' ಆ ಮೇಲೆ ಅವರು ಅವುಗಳ ಕಾಲುಗಳನ್ನೂ ಕೊರಳುಗಳನ್ನೂ (ಪ್ರೀತಿಯಿಂದ) ಸವರತೊಡಗಿದರು.

رُدُّوْهَا عَلَيَّ ۚ فَطَفِقَ مَسْحًا بِالسُّوْقِ وَالْاَعْنَاقِ ۝٣٤

35. ನಾವು ಸುಲೈಮಾನ್‌ರನ್ನು ಪರೀಕ್ಷೆ ಗೊಳಪಡಿಸಿದೆವು. ಅವರ ಸಿಂಹಾಸನದಲ್ಲಿ (ಆಧ್ಯಾತ್ಮಿಕ ಚೈತನ್ಯ ವಿಲ್ಲದ) ಒಂದು ಶರೀರವನ್ನು ನಾವು ಇರಿಸಿದೆವು.[397C] ಅವರು (ಕರುಣೆಯನ್ನು ಕೋರಿ) ನಮ್ಮ ಕಡೆಗೆ ತಿರುಗಿದರು.

وَلَقَدْ فَتَنَّا سُلَيْمٰنَ وَاَلْقَيْنَا عَلٰى كُرْسِيِّهٖ جَسَدًا ثُمَّ اَنَابَ ۝٣٥

36. ಅವರು ಪ್ರಾರ್ಥಿಸಿದರು: 'ನನ್ನ ಪ್ರಭೂ, ನನ್ನನ್ನು ಕ್ಷಮಿಸು. ನನ್ನ ನಂತರ ಯಾರಿಗೂ ಉತ್ತರಾಧಿಕಾರವಾಗಿ ಒದಗಲಾರದಂತಹ ಆಧಿಪತ್ಯವನ್ನು[397D] ನೀನು ನನಗೆ ದಯಪಾಲಿಸು. ನಿಸ್ಸಂದೇಹವಾಗಿಯೂ ನೀನೇ ಮಹಾ ದಾನಿಯಾಗಿರುವೆ.'

قَالَ رَبِّ اغْفِرْ لِيْ وَهَبْ لِيْ مُلْكًا لَّا يَنْۢبَغِيْ لِاَحَدٍ مِّنْۢ بَعْدِيْ ۚ اِنَّكَ اَنْتَ الْوَهَّابُ ۝٣٦

37. ನಾವು ಅವರಿಗೆ ಮಾರುತವನ್ನು ಅಧೀನ ಪಡಿಸಿದೆವು. ಅವರ ಆಜ್ಞೆಯಂತೆ ಅವರು ಬಯಸುವ ದಿಕ್ಕಿಗೆ ಆ ಮಾರುತ ಮಂದ ಮಂದವಾಗಿ ಬೀಸುತ್ತಿತ್ತು.[397E]

فَسَخَّرْنَا لَهُ الرِّيْحَ تَجْرِيْ بِاَمْرِهٖ رُخَآءً حَيْثُ اَصَابَ ۝٣٧

38. ಬಂಡುಕೋರರನ್ನೂ[398] ವಾಸ್ತುಶಿಲ್ಪಿಗಳನ್ನೂ ತಜ್ಞ ಮುಳುಗುಗಾರರನ್ನೂ (ನಾವು ಅವರಿಗೆ ಅಧೀನಗೊಳಿಸಿದೆವು).

وَالشَّيٰطِيْنَ كُلَّ بَنَّآءٍ وَّغَوَّاصٍ ۝٣٨

397C. ಪ್ರವಾದಿ ಸುಲೈಮಾನ್ (ಅಲೈಹಿಸ್ಸಲಾಂ)ರ ಮಗನ ಬಗ್ಗೆ ಇಲ್ಲಿ ಸೂಚಿಸಲಾಗಿದೆ. ಅವನು ಭೌತಿಕತೆಯಲ್ಲಿ ಮುಳುಗಿದ್ದು ಆಧ್ಯಾತ್ಮಿಕತೆಯ ಗಂಧಗಾಳಿ ತಟ್ಟದವನಾಗಿದ್ದನು. ಆ ಮಗನು ಉತ್ತರಾಧಿಕಾರಿಯಾಗುವನೆಂದು ಅಲ್ಲಾಹನು ಮೊದಲೇ ಪ್ರವಾದಿ ಸುಲೈಮಾನರಿಗೆ ದಿವ್ಯದರ್ಶನದಲ್ಲಿ ತೋರಿಸಿದ್ದನು. ಈ ವಚನದಲ್ಲಿ "ನಾವು ಇರಿಸಿದೆವು" ಎಂಬುದರ ತಾತ್ಪರ್ಯ "ನಾವು ಇರಿಸಲು ತೀರ್ಮಾನಿಸಿದ್ದೇವೆ" ಎಂದಾಗಿದೆ.

397D. ಇಲ್ಲಿ 'ಮುಲ್ಕ್' (ಆಧಿಪತ್ಯ) ಎಂದು ಹೇಳಿದುದರ ತಾತ್ಪರ್ಯ ಪ್ರವಾದಿತ್ವ (ಆಧ್ಯಾತ್ಮಿಕ ಆಧಿಪತ್ಯ) ಆಗಿದೆ. ಇದು ನಂತರದವರಿಗೆ ದೇವಾನುಗ್ರಹವಾಗಿ ಲಭಿಸುತ್ತದೆ. ತಂದೆಯಿಂದ ಉತ್ತರಾಧಿಕಾರವಾಗಿ ಸಿಗುವುದಿಲ್ಲ. ಆದ್ದರಿಂದಲೇ ಪ್ರವಾದಿ ಸುಲೈಮಾನ್ (ಅ) ಅಲ್ಲಾಹನೊಡನೆ, ತನಗೆ ಆಧ್ಯಾತ್ಮಿಕಾನುಗ್ರಹಗಳನ್ನು ವೃದ್ಧಿಗೊಳಿಸಿಕೊಡಲು ಪ್ರಾರ್ಥಿಸಿದ್ದರು. ಅಂದರೆ, ಸಂತಾನಗಳ ಕೈಯಿಂದ ನಷ್ಟವಾಗಿ ಹೋಗುವ ಭೌತಿಕಾನುಗ್ರಹಗಳನ್ನು ತಾನು ಆಶಿಸುವುದಿಲ್ಲವೆಂದು ತಾತ್ಪರ್ಯ.

397E. ಗಾಳಿಯ ಪ್ರಯೋಜನ ಪಡೆದುಕೊಂಡು ಅವರ ಅಧೀನದಲ್ಲಿದ್ದ ಹಾಯಿ ಹಡಗುಗಳು ಸಂಚರಿಸುತ್ತಿದ್ದವು ಎಂದರ್ಥ. ಹಾಗೆ ಅವರ ರಾಜ್ಯ ಇತರ ರಾಜ್ಯಗಳೊಂದಿಗೆ ವಾಣಿಜ್ಯ ಸಂಬಂಧವನ್ನು ಸ್ಥಾಪಿಸಿ ಅದು ಕ್ರಮೇಣ ಪ್ರಗತಿ ಹೊಂದಿತು.

398. 21ನೇ ಅಧ್ಯಾಯದ 83ನೇ ವಚನದ ಟಿಪ್ಪಣಿ ನೋಡಿರಿ.

وَآخَرِينَ مُقَرَّنِينَ فِي الْأَصْفَادِ ﴿٣٨﴾

**39.** **ಸಂಕೋಲೆಗಳಲ್ಲಿ ಬಂಧಿತರಾದ ಬೇರೆ ಕೆಲವರನ್ನೂ**[399] (ನಾವು ಅವರಿಗೆ ಅಧೀನಗೊಳಿಸಿದೆವು).

هَٰذَا عَطَاؤُنَا فَامْنُنْ أَوْ أَمْسِكْ بِغَيْرِ حِسَابٍ ﴿٣٩﴾

**40.** **ಇದು ನಮ್ಮ ಅನುಗ್ರಹವಾಗಿದೆ. ಆದ್ದರಿಂದ ನೀನು ಅವರನ್ನು ಉದಾರತೆಯಿಂದ ಮುಕ್ತಗೊಳಿಸು ಅಥವಾ ಲೆಕ್ಕವೇನೂ ಮಾಡದೆ ತಡೆದಿರಿಸಿಕೋ.**

وَإِنَّ لَهُ عِنْدَنَا لَزُلْفَىٰ وَحُسْنَ مَآبٍ ﴿٤٠﴾

**41.** **ದಿಟವಾಗಿಯೂ ಅವರಿಗೆ** (ಸುಲೈಮಾನ್‌ರಿಗೆ) **ನಮ್ಮ ಬಳಿಯಲ್ಲಿ ನಿಕಟವಾದ ಸ್ಥಾನವೂ ಶ್ರೇಷ್ಠವಾದ ವಾಸಸ್ಥಳವೂ ಇದೆ.**

وَاذْكُرْ عَبْدَنَا أَيُّوبَ إِذْ نَادَىٰ رَبَّهُ أَنِّي مَسَّنِيَ الشَّيْطَانُ بِنُصْبٍ وَعَذَابٍ ﴿٤١﴾

**42.** **ನಮ್ಮ ಭಕ್ತದಾಸ ಅಯ್ಯೂಬ್‌ರನ್ನು ಸಹ ಜ್ಞಾಪಿಸು. 'ಶೈತಾನ್ ನನ್ನನ್ನು ಕಷ್ಟ ಮತ್ತು ಹಿಂಸೆಗೆ ಗುರಿಪಡಿಸಿದ್ದಾನೆ' ಎಂದು ಅವರು ತನ್ನ ಪ್ರಭುವನ್ನು ಕರೆದು ಪ್ರಾರ್ಥಿಸಿದಾಗ,**

ارْكُضْ بِرِجْلِكَ ۖ هَٰذَا مُغْتَسَلٌ بَارِدٌ وَشَرَابٌ ﴿٤٢﴾

**43.** ನಾವು ಹೇಳಿದೆವು : '(ನಿನ್ನ ಸವಾರಿ ಮೃಗವನ್ನು) **ಹಿಮ್ಮಡಿಯಿಂದ ಒದೆ. ಇಲ್ಲಿ** (ಸಮೀಪದಲ್ಲೇ) **ಸ್ನಾನ ಮಾಡಲಿಕ್ಕೂ ಕುಡಿಯಲಿಕ್ಕೂ ಯೋಗ್ಯವಾದ ತಂಪು ನೀರಿದೆ.'**

وَوَهَبْنَا لَهُ أَهْلَهُ وَمِثْلَهُمْ مَعَهُمْ رَحْمَةً مِنَّا وَذِكْرَىٰ لِأُولِي الْأَلْبَابِ ﴿٤٣﴾

**44.** **ನಾವು ಅವರಿಗೆ ಅವರ ಕುಟುಂಬದವರನ್ನೂ ಅವರೊಂದಿಗೆ ಅವರಂತಹ ಬೇರೆ ಕೆಲವರನ್ನೂ ನಮ್ಮ ಕೃಪೆಯಾಗಿಯೂ ವಿವೇಕಶಾಲಿಗಳಿಗೆ ಉಪದೇಶವಾಗಿಯೂ ದಯಪಾಲಿಸಿದೆವು.**

وَخُذْ بِيَدِكَ ضِغْثًا فَاضْرِبْ بِهِ وَلَا تَحْنَثْ ۗ إِنَّا وَجَدْنَاهُ صَابِرًا ۚ نِعْمَ الْعَبْدُ ۖ إِنَّهُ أَوَّابٌ ﴿٤٤﴾

**45.** (ನಾವು ಅವರೊಡನೆ ಹೇಳಿದೆವು:) **'ನಿನ್ನ ಕೈಯಲ್ಲಿ ಮರದ ಕೊಂಬೆಯನ್ನು ಹಿಡಿದುಕೊಂಡು** (ನಿನ್ನ ಸವಾರಿ ಮೃಗವನ್ನು) **ಅದರಿಂದ ಹೊಡೆ. ಸತ್ಯವನ್ನು ಕೈಬಿಡಬೇಡ.' ನಿಜವಾಗಿಯೂ ಅವರನ್ನು ನಾವು ಸ್ಥಿರಚಿತ್ತರಾಗಿ ಕಂಡೆವು. ಅವರು ಶ್ರೇಷ್ಠ ಭಕ್ತದಾಸರಾಗಿದ್ದರು. ಅವರು ಯಾವಾಗಲೂ** (ಅಲ್ಲಾಹನ ಕಡೆಗೆ) **ಬಾಗುವವರಾಗಿದ್ದರು.**

399.ಯುದ್ಧ ಕೈದಿಗಳು.





وَاذْكُرْ عِبَادَنَا إِبْرَاهِيمَ وَإِسْحَاقَ وَيَعْقُوبَ أُولِي الْأَيْدِي وَالْأَبْصَارِ ﴿٤٥﴾

**46.** **ಶಕ್ತಿ ಸಾಮರ್ಥ್ಯವುಳ್ಳವರೂ ದೂರದೃಷ್ಟಿಯುಳ್ಳವರೂ ಆದ ನಮ್ಮ ಭಕ್ತದಾಸರಾದ ಇಬ್‌ರಾಹೀಂ, ಇಸ್‌ಹಾಖ್, ಯಅ್‌ಖೂಬ್ ಎಂಬವರನ್ನು ಸಹ ಜ್ಞಾಪಿಸು.**

إِنَّا أَخْلَصْنَاهُمْ بِخَالِصَةٍ ذِكْرَى الدَّارِ ﴿٤٦﴾

**47.** **ಪಾರತ್ರಿಕ ಜೀವನದ ಬಗ್ಗೆ ನೆನಪು ಹುಟ್ಟಿಸುವ ಒಂದು ವಿಶಿಷ್ಟ ಉದ್ದೇಶಕ್ಕಾಗಿ ನಾವು ಅವರನ್ನು ಆಯ್ಕೆ ಮಾಡಿದ್ದೇವೆ.**

وَإِنَّهُمْ عِنْدَنَا لَمِنَ الْمُصْطَفَيْنَ الْأَخْيَارِ ﴿٤٧﴾

**48.** **ನಿಜವಾಗಿಯೂ ಅವರು ನಮ್ಮ ಬಳಿಯಲ್ಲಿ ಆರಿಸಲ್ಪಟ್ಟವರೂ ಉತ್ತಮರೂ ಆಗಿದ್ದರು.**

وَاذْكُرْ إِسْمَاعِيلَ وَالْيَسَعَ وَذَا الْكِفْلِ ۖ وَكُلٌّ مِنَ الْأَخْيَارِ ﴿٤٨﴾

**49.** **ಇಸ್ಮಾಈಲ್, ಅಲ್‌ಯಸಅ್, ದುಲ್‌ಕಿಫ್ಲ್ ಎಂಬಿವರನ್ನೂ ಜ್ಞಾಪಿಸು. ಅವರೆಲ್ಲರೂ ಉತ್ತಮರಾಗಿದ್ದರು.**

هَٰذَا ذِكْرٌ ۚ وَإِنَّ لِلْمُتَّقِينَ لَحُسْنَ مَآبٍ ﴿٤٩﴾

**50.** **ಇದೊಂದು ಉದ್ಬೋಧಕವಾಗಿದೆ. ಸದ್ಧರ್ಮಿಗಳಿಗೆ ಖಂಡಿತವಾಗಿಯೂ ಶ್ರೇಷ್ಠವಾದ ಆಶ್ರಯಸ್ಥಾನವಿದೆ.**

جَنَّاتِ عَدْنٍ مُفَتَّحَةً لَهُمُ الْأَبْوَابُ ﴿٥٠﴾

**51.** **ಶಾಶ್ವತ ವಾಸದ ಆರಾಮಧಾಮ.** (ಅವುಗಳ) **ಹೊರಬಾಗಿಲುಗಳು ಅವರಿಗೋಸ್ಕರ ತೆರೆದಿರಿಸಲ್ಪಟ್ಟಿವೆ.**

مُتَّكِئِينَ فِيهَا يَدْعُونَ فِيهَا بِفَاكِهَةٍ كَثِيرَةٍ وَشَرَابٍ ﴿٥١﴾

**52.** **ಅಲ್ಲಿ ಅವರು** ಸುಖಾಸನಗಳಲ್ಲಿ **ಒರಗಿ ಕುಳಿತುಕೊಂಡು** (ತಮಗಿಷ್ಟ ಬಂದಾಗೆಲ್ಲ) **ಧಾರಾಳ ಹಣ್ಣುಹಂಪಲುಗಳನ್ನೂ ಪಾನೀಯಗಳನ್ನೂ ತರಿಸುವರು.**

وَعِنْدَهُمْ قَاصِرَاتُ الطَّرْفِ أَتْرَابٌ ﴿٥٢﴾

**53.** **ಅವರ ಬಳಿಯಲ್ಲಿ ಅಧೋದೃಷ್ಟಿಯ** (ಚಾರಿತ್ರ್ಯವತಿಯರಾದ) **ಸಮವಯಸ್ಕರಾದ** ಸ್ತ್ರೀಯರು **ಇರುವರು.**

هَٰذَا مَا تُوعَدُونَ لِيَوْمِ الْحِسَابِ ﴿٥٣﴾

**54.** **ಇದು ವಿಚಾರಣಾ ದಿನಕ್ಕಾಗಿ ನಿಮಗೆ ನೀಡಲಾದ ವಾಗ್ದಾನವಾಗಿದೆ.**

إِنَّ هَٰذَا لَرِزْقُنَا مَا لَهُ مِنْ نَفَادٍ ﴿٥٤﴾

**55.** **ನಿಶ್ಚಯವಾಗಿಯೂ ಇದು ನಮ್ಮ ಕೊಡುಗೆಯಾಗಿದೆ. ಇದಕ್ಕೆ ಅಂತ್ಯವಿಲ್ಲ.**

**56.** ಇದು (ಸತ್ಯವಿಶ್ವಾಸಿಗಳಿಗೋಸ್ಕರವಾಗಿದೆ). **ಆದರೆ ದುಷ್ಕರ್ಮಿಗಳಿಗೆ ಬಲು ಕೆಟ್ಟ ವಾಸಸ್ಥಳವಿದೆ.**

هٰذَا ۖ وَإِنَّ لِلطَّٰغِينَ لَشَرَّ مَـَٔابٍ ﴿٥٦﴾

**57. ನರಕ! ಅಲ್ಲಿ ಅವರು ಉರಿಯುವರು. ಎಂತಹ ಕೆಟ್ಟ ಆಶ್ರಯಧಾಮ!**

جَهَنَّمَ يَصْلَوْنَهَا ۖ فَبِئْسَ الْمِهَادُ ﴿٥٧﴾

**58.** ಇದು (ಅವರಿಗೆ ದೊರಕಲಿಕ್ಕಿರುವುದು). **ಆದ್ದರಿಂದ ಅವರು ಅದರ ರುಚಿಯನ್ನು ಸವಿಯಲಿ. ಕುದಿಯುವ ದ್ರವ ಮತ್ತು ಅತಿ ತಣ್ಣಗಿನ ಮತ್ತು ದುರ್ವಾಸನೆಯಿಂದ ಕೂಡಿದ ಪಾನೀಯ.**

هٰذَا فَلْيَذُوقُوهُ حَمِيمٌ وَغَسَّاقٌ ﴿٥٨﴾

**59. ಇದೇ ರೀತಿಯ ಬೇರೆಯೂ ಹಲವು ತರ ಶಿಕ್ಷೆಗಳು.**

وَءَاخَرُ مِن شَكْلِهِۦٓ أَزْوَٰجٌ ﴿٥٩﴾

**60.** (ನರಕವಾಸಿಗಳಾದ ಒಂದು ಗುಂಪು ಮತ್ತೊಂದು ಗುಂಪಿನೊಡನೆ ಹೇಳುವುದು:) **'ಇದು ನಿಮ್ಮೊಂದಿಗೆ ಮುಂದಾಲೋಚನೆ ಇಲ್ಲದೆ ಧಾವಿಸಿದ** (ನಿಮ್ಮ) **ಸೈನ್ಯ ವಾಗಿದೆ. ಅವರಿಗೆ ಸ್ವಾಗತವಿಲ್ಲ. ಅವರು ಅಗ್ನಿಯಲ್ಲಿ ಉರಿಯುವರು.'**

هٰذَا فَوْجٌ مُّقْتَحِمٌ مَّعَكُمْ ۖ لَا مَرْحَبًۢا بِهِمْ ۚ إِنَّهُمْ صَالُوا النَّارِ ﴿٦٠﴾

**61. ಅವರು** (ನರಕವಾಸಿಗಳ ಇನ್ನೊಂದು ಗುಂಪು) **ಹೇಳುವರು: 'ಅಲ್ಲ, ಅದು ನೀವು. ನಿಮಗೆ ಸ್ವಾಗತವಿಲ್ಲ. ನಮ್ಮನ್ನು ಇದಕ್ಕೆ ಗುರಿಪಡಿಸಿದವರು ನೀವು. ಇದೆಂಥ ನಿಕೃಷ್ಟ ವಿಶ್ರಾಮ ಧಾಮ!'**

قَالُوا بَلْ أَنتُمْ لَا مَرْحَبًۢا بِكُمْ ۖ أَنتُمْ قَدَّمْتُمُوهُ لَنَا ۖ فَبِئْسَ الْقَرَارُ ﴿٦١﴾

**62. ಅವರು ಹೇಳುವರು: 'ನಮ್ಮ ಪ್ರಭೂ, ನಮ್ಮನ್ನು ಈ ಶಿಕ್ಷೆಗೆ ಯಾರು ಗುರಿಪಡಿಸಿದನೋ, ಅವನಿಗೆ ನೀನು ಇಮ್ಮಡಿ ಶಿಕ್ಷೆಯನ್ನು ಕೊಡು.'**

قَالُوا رَبَّنَا مَن قَدَّمَ لَنَا هٰذَا فَزِدْهُ عَذَابًا ضِعْفًا فِي النَّارِ ﴿٦٢﴾

**63. ಅವರು** (ನರಕವಾಸಿಗಳು ಪರಸ್ಪರ ಹೇಳುವರು:) **'ನಮಗೇನಾಗಿದೆ? ಯಾರನ್ನು ನಾವು ದುರ್ಜನರೆಂದು ಗಣಿಸಿದ್ದೆವೋ ಅವರನ್ನು ನಾವಿಲ್ಲಿ ಕಾಣುವುದಿಲ್ಲವಲ್ಲ?**

وَقَالُوا مَا لَنَا لَا نَرَىٰ رِجَالًا كُنَّا نَعُدُّهُم مِّنَ الْأَشْرَارِ ﴿٦٣﴾





**64. 'ನಾವು ಅವರನ್ನು** (ಲೋಕದಲ್ಲಿ ಅನ್ಯಾಯ ವಾಗಿ) **ಪರಿಹಾಸ್ಯಮಾಡಿಬಿಟ್ಟೆವೋ? ಅಥವಾ ನಮ್ಮ ದೃಷ್ಟಿಗೆ ಅವರು ಬೀಳಲಿಲ್ಲವೋ?'**

أَتَّخَذْنَٰهُمْ سِخْرِيًّا أَمْ زَاغَتْ عَنْهُمُ الْأَبْصَارُ ﴿٦٤﴾

**65. ನರಕವಾಸಿಗಳು ಪರಸ್ಪರ ಜಗಳಾಡುವರೆಂಬುದು ಖಂಡಿತವಾಗಿಯೂ ಸತ್ಯವೇ ಆಗಿದೆ.**

إِنَّ ذَٰلِكَ لَحَقٌّ تَخَاصُمُ أَهْلِ النَّارِ ﴿٦٥﴾

**66. ಹೇಳು: 'ನಾನು ಕೇವಲ ಒಬ್ಬ ಮುನ್ನೆಚ್ಚರಿಕೆ ನೀಡುವವನು. ಏಕನೂ ಪರಮಾಧಿಕಾರಿಯೂ ಆಗಿರುವ ಅಲ್ಲಾಹನ ಹೊರತು ಬೇರೆ ದೇವನಿಲ್ಲ.**

قُلْ إِنَّمَا أَنَا مُنذِرٌ ۖ وَمَا مِنْ إِلَٰهٍ إِلَّا اللَّهُ الْوَاحِدُ الْقَهَّارُ ﴿٦٦﴾

**67. '**(ಅವನು) **ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯೆ ಇರುವ ಎಲ್ಲವುಗಳ ಪ್ರಭು. ಅವನು ಪ್ರತಾಪಶಾಲಿಯೂ ಕ್ಷಮಾಶೀಲನೂ ಆಗಿದ್ದಾನೆ.'**

رَبُّ السَّمَاوَاتِ وَالْأَرْضِ وَمَا بَيْنَهُمَا الْعَزِيزُ الْغَفَّارُ ﴿٦٧﴾

**68. ಹೇಳು: 'ಇದೊಂದು ಅತಿ ಪ್ರಾಮುಖ್ಯ ಸಮಾಚಾರವಾಗಿದೆ.**

قُلْ هُوَ نَبَأٌ عَظِيمٌ ﴿٦٨﴾

**69. 'ಅದರಿಂದ ನೀವು ಮುಖ ತಿರುಗಿಸುತ್ತೀರಿ.**

أَنتُمْ عَنْهُ مُعْرِضُونَ ﴿٦٩﴾

**70. 'ಉನ್ನತ ಶ್ರೇಣಿಯ ದೇವದೂತರು ಚರ್ಚೆ ನಡೆಸುತ್ತಿದ್ದುದರ ಬಗ್ಗೆ ನನಗೇನೂ ಅರಿವಿಲ್ಲ.**

مَا كَانَ لِيَ مِنْ عِلْمٍ بِالْمَلَإِ الْأَعْلَىٰ إِذْ يَخْتَصِمُونَ ﴿٧٠﴾

**71. 'ನಾನು ಕೇವಲ ಒಬ್ಬ ಮುನ್ನೆಚ್ಚರಿಕೆ ನೀಡುವವನು ಎಂಬ ವಿಚಾರವನ್ನು ಮಾತ್ರ ನನಗೆ ದಿವ್ಯ ಸಂದೇಶ ಮೂಲಕ ತಿಳಿಸಲಾಗಿದೆ.'**

إِن يُوحَىٰ إِلَيَّ إِلَّا أَنَّمَا أَنَا نَذِيرٌ مُّبِينٌ ﴿٧١﴾

**72. ನಿನ್ನ ಪ್ರಭು ದೇವದೂತರೊಡನೆ ಹೀಗೆ ಹೇಳಿದಾಗ: 'ನಾನು ಆವೆಮಣ್ಣಿನಿಂದ ಮನುಷ್ಯನನ್ನು ಸೃಷ್ಟಿಸಲಿದ್ದೇನೆ.**

إِذْ قَالَ رَبُّكَ لِلْمَلَائِكَةِ إِنِّي خَالِقٌ بَشَرًا مِّن طِينٍ ﴿٧٢﴾

**73. 'ಹಾಗೆ ನಾನು ಅವನನ್ನು ಪರಿಪೂರ್ಣಗೊಳಿಸಿ ನನ್ನ ಸಂದೇಶವಾಣಿಯನ್ನು ಅವನೊಳಗೆ ಊದಿದಾಗ**[399A] **ನೀವು** (ಎಲ್ಲರೂ) **ಆಜ್ಞಾನುಸರಣೆ ಮಾಡುತ್ತಾ ಅವನಿಗೆ ವಿಧೇಯರಾಗಿರಿ.'**[399B]

فَإِذَا سَوَّيْتُهُ وَنَفَخْتُ فِيهِ مِن رُّوحِي فَقَعُوا لَهُ سَاجِدِينَ ﴿٧٣﴾

399A. 15:30 ರ ಟಿಪ್ಪಣಿ (ಕ್ರಮಾಂಕ 308) ನೋಡಿರಿ.
399B. 2:35 ರ ಟಿಪ್ಪಣಿ ನೋಡಿರಿ.

فَسَجَدَ الْمَلٰٓئِكَةُ كُلُّهُمْ اَجْمَعُوْنَ ﴿٧٣﴾

**74. ಆಗ ದೇವದೂತರೆಲ್ಲರೂ ಒಟ್ಟಾಗಿ ಆಜ್ಞಾನು ಸರಣೆ ಮಾಡುತ್ತಾ** ವಿಧೇಯರಾದರು.

اِلَّآ اِبْلِيْسَ ؕ اِسْتَكْبَرَ وَكَانَ مِنَ الْكٰفِرِيْنَ ﴿٧٤﴾

**75. ಆದರೆ ಇಬ್‌ಲೀಸ್** ವಿಧೇಯತೆ ತೋರಿಸಲಿಲ್ಲ. **ಅವನು ಅಹಂಭಾವ ತೋರಿಸಿದನು. ಅವನು ಅವಿಶ್ವಾಸಿಗಳ ಪೈಕಿಯವನಾಗಿದ್ದನು.**

قَالَ يٰٓاِبْلِيْسُ مَا مَنَعَكَ اَنْ تَسْجُدَ لِمَا خَلَقْتُ بِيَدَيَّ ؕ اَسْتَكْبَرْتَ اَمْ كُنْتَ مِنَ الْعَالِيْنَ ﴿٧٥﴾

**76.** ಅಲ್ಲಾಹ್ **ಹೇಳಿದನು: 'ಎಲೈ ಇಬ್‌ಲೀಸ್, ನನ್ನ ಎರಡು ಕೈಗಳಿಂದಲೂ ನಾನು ಸೃಷ್ಟಿಸಿರುವುದರ ಆಜ್ಞಾನು ಸರಣೆ ಮಾಡದಂತೆ ನಿನ್ನನ್ನು ತಡೆದುದಾದರೂ ಏನು? ನೀನು ಅಹಂಭಾವಿಯಾಗಿ ಬಿಟ್ಟೆಯಾ? ಅಥವಾ ನೀನು ಬಲುದೊಡ್ಡವನೆಂದು ಭಾವಿಸಿದೆಯಾ?'**

قَالَ اَنَا خَيْرٌ مِّنْهُ ؕ خَلَقْتَنِيْ مِنْ نَّارٍ وَّخَلَقْتَهٗ مِنْ طِيْنٍ ﴿٧٦﴾

**77. ಅವನು** (ಇಬ್‌ಲೀಸ್) **ಹೇಳಿದನು: 'ನಾನು ಅವನಿಗಿಂತ ಶ್ರೇಷ್ಠ. ನೀನು ನನ್ನನ್ನು ಅಗ್ನಿಯಿಂದ ಸೃಷ್ಟಿಸಿರುವೆ ಹಾಗೂ ಅವನನ್ನು ಆವೆಮಣ್ಣಿನಿಂದ ಸೃಷ್ಟಿಸಿರುವೆ.'**

قَالَ فَاخْرُجْ مِنْهَا فَاِنَّكَ رَجِيْمٌ ﴿٧٧﴾

**78.** ಅಲ್ಲಾಹ್ **ಹೇಳಿದನು: 'ಇಲ್ಲಿಂದ ಹೊರಗೆ ಹೋಗು, ನೀನು ತಿರಸ್ಕರಿಸಲ್ಪಟ್ಟವ.**

وَّاِنَّ عَلَيْكَ لَعْنَتِيْٓ اِلٰى يَوْمِ الدِّيْنِ ﴿٧٨﴾

**79. 'ಖಂಡಿತವಾಗಿಯೂ ವಿಧಿ ನಿರ್ಣಾಯಕ ದಿನದ ವರೆಗೆ ನಿನ್ನ ಮೇಲೆ ನನ್ನ ಶಾಪವಿದೆ.'**

قَالَ رَبِّ فَاَنْظِرْنِيْٓ اِلٰى يَوْمِ يُبْعَثُوْنَ ﴿٧٩﴾

**80. ಅವನು** (ಇಬ್‌ಲೀಸ್) **ಹೇಳಿದನು: 'ಹಾಗಾದರೆ ನನ್ನ ಪ್ರಭೂ, ಅವರು** (ಮನುಷ್ಯರು) **ಪುನರುತ್ಥಾನಗೊಳಿಸಲ್ಪಡುವ ದಿನದ ವರೆಗೆ ನನಗೆ ಕಾಲಾವಕಾಶ ನೀಡು.'**

قَالَ فَاِنَّكَ مِنَ الْمُنْظَرِيْنَ ﴿٨٠﴾

**81.** ಅಲ್ಲಾಹ್ **ಹೇಳಿದನು: 'ಖಂಡಿತವಾಗಿಯೂ ನೀನು ಕಾಲಾವಕಾಶ ನೀಡಲ್ಪಟ್ಟವರಲ್ಲಿ ಸೇರಿರುವೆ -**

اِلٰى يَوْمِ الْوَقْتِ الْمَعْلُوْمِ ﴿٨١﴾

**82. 'ಗೊತ್ತುಪಡಿಸಲಾದ ಕಾಲದ ವರೆಗೆ.'**

قَالَ فَبِعِزَّتِكَ لَاُغْوِيَنَّهُمْ اَجْمَعِيْنَ ﴿٨٢﴾

**83. ಅವನು** (ಇಬ್‌ಲೀಸ್) **ಹೇಳಿದನು: 'ನಿನ್ನ ಪ್ರತಾಪ ದಾಣೆ, ಖಂಡಿತವಾಗಿಯೂ ನಾನು ಅವರನ್ನೆಲ್ಲ ದಾರಿತಪ್ಪಿ ಸುವೆನು -**





اِلَّا عِبَادَكَ مِنْهُمُ الْمُخْلَصِيْنَ ﴿٨٣﴾

**84. 'ಅವರ ಪೈಕಿ ನಿನ್ನ ನಿಷ್ಠಾವಂತ ಭಕ್ತದಾಸರನ್ನು ಹೊರತುಪಡಿಸಿ.'**

قَالَ فَالْحَقُّ ؗ وَالْحَقَّ اَقُوْلُ ﴿٨٤﴾

**85.** ಅಲ್ಲಾಹ್ **ಹೇಳಿದನು: 'ಇದೇ ಸತ್ಯ; ನಾನು ಸತ್ಯವನ್ನೇ ಹೇಳುತ್ತೇನೆ -**

لَاَمْلَئَنَّ جَهَنَّمَ مِنْكَ وَمِمَّنْ تَبِعَكَ مِنْهُمْ اَجْمَعِيْنَ ﴿٨٥﴾

**86. 'ಖಂಡಿತವಾಗಿಯೂ ನಾನು ನಿನ್ನಿಂದಲೂ ನಿನ್ನನ್ನು ಹಿಂಬಾಲಿಸುವ ಎಲ್ಲರಿಂದಲೂ ನರಕವನ್ನು ತುಂಬಿಸುವೆನು.'**

قُلْ مَآ اَسْـَٔلُكُمْ عَلَيْهِ مِنْ اَجْرٍ وَّمَآ اَنَا مِنَ الْمُتَكَلِّفِيْنَ ﴿٨٦﴾

**87.** (ಎಲೈ ಪ್ರವಾದಿ) **ಹೇಳು: 'ಇದಕ್ಕೆ** (ಈ ಸಂದೇಶ ನಿಮಗೆ ತಲಪಿಸಿದ್ದಕ್ಕೆ) **ನಾನು ನಿಮ್ಮಿಂದ ಪ್ರತಿಫಲವನ್ನೇನೂ ಕೇಳುವುದಿಲ್ಲ. ನಾನು ಸೋಗುಗಾರರಲ್ಲಿ ಸೇರಿದವ ನೂ ಅಲ್ಲ.**

اِنْ هُوَ اِلَّا ذِكْرٌ لِّلْعٰلَمِيْنَ ﴿٨٧﴾

**88. 'ಇದು ಸರ್ವಲೋಕಕ್ಕಿರುವ ಒಂದು ಉಪದೇಶವೇ ಆಗಿದೆ.**

وَلَتَعْلَمُنَّ نَبَاَهٗ بَعْدَ حِيْنٍ ﴿٨٨﴾

**89. 'ಸ್ವಲ್ಪ ಕಾಲದ ಬಳಿಕ ಇದರ ವಾಸ್ತವಿಕತೆ ಖಂಡಿತವಾಗಿಯೂ ನಿಮಗೆ ಮನವರಿಕೆಯಾಗುವುದು.'**

سُوْرَةُ الزُّمَرِ مَكِّيَّةٌ وَّهِيَ مَعَ الْبَسْمَلَةِ سِتٌّ وَّسَبْعُوْنَ اٰيَةً وَّثَمَانِيَةُ رُكُوْعَاتٍ

## 39. ಅಝ್ಝುಮರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 76 ಆಯತ್‌ಗಳು ಹಾಗೂ 8 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಪ್ರತಾಪವಂತನೂ ವಿವೇಕಶಾಲಿಯೂ ಆದ ಅಲ್ಲಾಹನಿಂದ ಈ ಗ್ರಂಥ ಅವತೀರ್ಣವಾಗಿದೆ.**

تَنْزِيْلُ الْكِتٰبِ مِنَ اللّٰهِ الْعَزِيْزِ الْحَكِيْمِ ﴿٢﴾

**3. ದಿಟವಾಗಿಯೂ ನಾವು ನಿನಗೆ ಈ ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿದ್ದೇವೆ. ಆದುದರಿಂದ ನೀನು ಅಲ್ಲಾಹನನ್ನು ಆರಾಧಿಸು - ಸಂಪೂರ್ಣವಾಗಿ ಅವನಿಗೆ ವಿಧೇಯತೆಯನ್ನು ತೋರಿಸುತ್ತಾ.**

اِنَّآ اَنْزَلْنَآ اِلَيْكَ الْكِتٰبَ بِالْحَقِّ فَاعْبُدِ اللّٰهَ مُخْلِصًا لَّهُ الدِّيْنَ ﴿٣﴾

**4. ಆಲಿಸಿರಿ; ಪ್ರಾಮಾಣಿಕವಾದ ವಿಧೇಯತೆ ಅಲ್ಲಾಹನಿಗೆ ಮಾತ್ರ ಸಲ್ಲುತ್ತದೆ. ಅಲ್ಲಾಹನ ಹೊರತು ಇತರರನ್ನೂ ಮಿತ್ರರನ್ನಾಗಿ** (ಸಂರಕ್ಷರನ್ನಾಗಿ) **ಮಾಡಿಕೊಂಡವರು** (ಹೇಳುತ್ತಾರೆ:) **'ಅವರು ನಮ್ಮನ್ನು ಅಲ್ಲಾಹನಿಗೆ ಹೆಚ್ಚು ನಿಕಟಗೊಳಿಸಲಿಕ್ಕಾಗಿ ಮಾತ್ರವೇ ನಾವು ಅವರನ್ನು ಆರಾಧಿಸುತ್ತಿರುವುದು.'**[400] **ಖಚಿತವಾಗಿಯೂ ಅವರ ಭಿನ್ನಾಭಿಪ್ರಾಯದ ಬಗ್ಗೆ ಅಲ್ಲಾಹನು ತೀರ್ಮಾನಿಸುವನು. ಕೃತಘ್ನನಾದ ಸುಳ್ಳುಗಾರನಿಗೆ ಅಲ್ಲಾಹನು ಖಂಡಿತವಾಗಿಯೂ ಮಾರ್ಗದರ್ಶನ ಮಾಡಲಾರನು.**

اَلَا لِلّٰهِ الدِّيْنُ الْخَالِصُ ؕ وَالَّذِيْنَ اتَّخَذُوْا مِنْ دُوْنِهٖٓ اَوْلِيَآءَ ۘ مَا نَعْبُدُهُمْ اِلَّا لِيُقَرِّبُوْنَآ اِلَى اللّٰهِ زُلْفٰى ؕ اِنَّ اللّٰهَ يَحْكُمُ بَيْنَهُمْ فِيْ مَا هُمْ فِيْهِ يَخْتَلِفُوْنَ ؕ اِنَّ اللّٰهَ لَا يَهْدِيْ مَنْ هُوَ كٰذِبٌ كَفَّارٌ ﴿٣﴾

**5. ಒಬ್ಬ ಪುತ್ರನನ್ನಿರಿಸಿಕೊಳ್ಳಬೇಕೆಂದು ಅಲ್ಲಾಹನು ಬಯಸಿದ್ದರೆ ಅವನ ಸೃಷ್ಟಿಗಳಿಂದ ತನ್ನ ಇಚ್ಛೆಯಂತೆ**

لَوْ اَرَادَ اللّٰهُ اَنْ يَّتَّخِذَ وَلَدًا لَّاصْطَفٰى

400. ತಮ್ಮನ್ನು ಅಲ್ಲಾಹನಿಗೆ ನಿಕಟಗೊಳಿಸಲಿಕ್ಕಾಗಿ ಮಾತ್ರವೇ ಆ ಮಿಥ್ಯಾದೈವಗಳನ್ನು ಆರಾಧಿಸುವುದೆಂದು ತಾತ್ಪರ್ಯ. ಪೂರ್ವಿಕರಾದ ಬಹುದೇವಾರಾಧಕರಂತೆ ಮುಸ್ಲಿಮರ ಪೈಕಿ ದಾರಿತಪ್ಪಿದವರು ಇದೇ ತಂತ್ರವನ್ನು ಪ್ರಯೋಗಿಸಿ ಶಿರ್ಕ್ ಮಾಡುತ್ತಾರೆ. ಗತಿಸಿಹೋದ ಮಹಾತ್ಮರುಗಳನ್ನು ಕರೆದು ಪ್ರಾರ್ಥಿಸುವುದು, ಅವರಿಗೆ ಹರಕೆ ಕೊಡುವುದು ಇತ್ಯಾದಿ ಇಂತಹ ಶಿರ್ಕ್‌ನಲ್ಲಿ ಸೇರುತ್ತವೆ.





**ಅವನು ಆಯ್ಕೆ ಮಾಡುತ್ತಿದ್ದನು. ಅವನು ಪರಿಶುದ್ಧನು. ಅವನು ಏಕನೂ ಸರ್ವೋನ್ನತನೂ ಆದ ಅಲ್ಲಾಹನು.**

مِمَّا يَخْلُقُ مَا يَشَآءُ ۙ سُبْحٰنَهٗ ؕ هُوَ اللّٰهُ الْوَاحِدُ الْقَهَّارُ ﴿٥﴾

**6. ಅವನು ಆಕಾಶಗಳನ್ನೂ ಭೂಮಿಯನ್ನೂ ಯಥೋಚಿತವಾಗಿ ಸೃಷ್ಟಿಸಿದ್ದಾನೆ. ರಾತ್ರಿಯನ್ನು ಹಗಲಿನ ಮೇಲೆ ಆವರಿಸುವಂತೆಯೂ ಹಗಲು ರಾತ್ರಿಯ ಮೇಲೆ ಆವರಿಸುವಂತೆಯೂ ಅವನು ಮಾಡುತ್ತಾನೆ. ಸೂರ್ಯನನ್ನೂ ಚಂದ್ರನನ್ನೂ ಅವನು ಕಾರ್ಯನಿರತಗೊಳಿಸಿರುತ್ತಾನೆ. ಪ್ರತಿಯೊಂದು ನಿಶ್ಚಿತ ಪಥದಲ್ಲಿ ನಿಗದಿತ ಅವಧಿ ವರೆಗೆ ಚಲಿಸುತ್ತದೆ. ಆಲಿಸಿರಿ, ಅವನು ಪ್ರತಾಪಶಾಲಿಯೂ ಕ್ಷಮಾಶೀಲನೂ ಆಗಿದ್ದಾನೆ.**

خَلَقَ السَّمٰوٰتِ وَالْاَرْضَ بِالْحَقِّ ۚ يُكَوِّرُ الَّيْلَ عَلَى النَّهَارِ وَيُكَوِّرُ النَّهَارَ عَلَى الَّيْلِ وَسَخَّرَ الشَّمْسَ وَالْقَمَرَ ؕ كُلٌّ يَّجْرِيْ لِاَجَلٍ مُّسَمًّى ؕ اَلَا هُوَ الْعَزِيْزُ الْغَفَّارُ ﴿٦﴾

**7. ಅವನು ನಿಮ್ಮನ್ನು ಏಕ ಜೀವಾಳದಿಂದ ಸೃಷ್ಟಿಸಿರುವನು. ಅನಂತರ ಅದರಿಂದ ಅದರ ಜೋಡಿಯನ್ನುಂಟು ಮಾಡಿದನು. ಅವನು ನಿಮಗೆ ಎಂಟು ಜಾತಿಯ ಜಾನುವಾರುಗಳನ್ನು ಜೋಡಿಗಳಾಗಿ ದಯಪಾಲಿಸಿದನು. ಒಂದು ಸೃಷ್ಟಿಯ ಬಳಿಕ ಮತ್ತೊಂದು ಸೃಷ್ಟಿಯಾಗಿ ಮೂರು ಬಗೆಯ ಕತ್ತಲೆ ಹಂತಗಳಿಂದ ನಿಮ್ಮ ತಾಯಂದಿರ ಗರ್ಭಾಶಯಗಳಲ್ಲಿ ಅವನು ನಿಮ್ಮನ್ನು ಸೃಷ್ಟಿಸಿದ್ದಾನೆ. ಅವನೇ ನಿಮ್ಮ ಪ್ರಭುವಾದ ಅಲ್ಲಾಹ್. ಆಧಿಪತ್ಯ ಅವನಿಗಿದೆ. ಅವನ ಹೊರತು ಬೇರೆ ದೇವನಿಲ್ಲ. ಹಾಗಿರುವಾಗ ನಿಮ್ಮನ್ನೆತ್ತ ತಿರುಗಿಸಲಾಗುವುದು?**

خَلَقَكُمْ مِّنْ نَّفْسٍ وَّاحِدَةٍ ثُمَّ جَعَلَ مِنْهَا زَوْجَهَا وَاَنْزَلَ لَكُمْ مِّنَ الْاَنْعَامِ ثَمٰنِيَةَ اَزْوَاجٍ ؕ يَخْلُقُكُمْ فِيْ بُطُوْنِ اُمَّهٰتِكُمْ خَلْقًا مِّنْ بَعْدِ خَلْقٍ فِيْ ظُلُمٰتٍ ثَلٰثٍ ؕ ذٰلِكُمُ اللّٰهُ رَبُّكُمْ لَهُ الْمُلْكُ ؕ لَآ اِلٰهَ اِلَّا هُوَ ۚ فَاَنّٰى تُصْرَفُوْنَ ﴿٦﴾

**8. ನೀವು ಕೃತಘ್ನರಾಗುವುದಾದರೆ** (ತಿಳಿದುಕೊಳ್ಳಿರಿ) **ಅಲ್ಲಾಹನು ನಿಮ್ಮ ಆಶ್ರಯದಲ್ಲಿಲ್ಲದ ಸ್ವಯಂಪೂರ್ಣನಾಗಿದ್ದಾನೆ. ಅವನು ತನ್ನ ದಾಸರ ಕೃತಘ್ನತೆಯನ್ನು ಇಷ್ಟಪಡುವುದಿಲ್ಲ. ನೀವು ಕೃತಜ್ಞತೆ ಸೂಚಿಸಿದರೆ ನಿಮಗೆ ಅದನ್ನು ಅವನು ಇಷ್ಟಪಡುತ್ತಾನೆ. ಭಾರ ಹೊರುವ ಯಾವೊಬ್ಬನೇ ಆಗಲಿ ಇನ್ನೊಬ್ಬನ ಭಾರವನ್ನು ಹೊರಲಾರ. ಆ ಬಳಿಕ ನಿಮ್ಮ ಪ್ರಭುವಿನ ಬಳಿಗೆ ನಿಮ್ಮ ಮರಳಿಕೆಯಾಗಿದೆ. ಆಗ ನಿಮ್ಮ ಕೃತ್ಯಗಳ ಬಗ್ಗೆ ನಿಮಗೆ ವಿವರಿಸಿ ಕೊಡಲಾಗುವುದು. ನಿಮ್ಮ ಹೃದಯಗಳೊಳಗೆ ಬಚ್ಚಿಡಲಾದ ವಿಚಾರಗಳನ್ನೆಲ್ಲ ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.**

اِنْ تَكْفُرُوْا فَاِنَّ اللّٰهَ غَنِيٌّ عَنْكُمْ ۟ وَلَا يَرْضٰى لِعِبَادِهِ الْكُفْرَ ۚ وَاِنْ تَشْكُرُوْا يَرْضَهُ لَكُمْ ؕ وَلَا تَزِرُ وَازِرَةٌ وِّزْرَ اُخْرٰى ؕ ثُمَّ اِلٰى رَبِّكُمْ مَّرْجِعُكُمْ فَيُنَبِّئُكُمْ بِمَا كُنْتُمْ تَعْمَلُوْنَ ؕ اِنَّهٗ عَلِيْمٌۢ بِذَاتِ الصُّدُوْرِ ﴿٧﴾

**9.** ಮನುಷ್ಯನು ಯಾವುದಾದರೂ ಸಂಕಷ್ಟಕ್ಕೆ ಗುರಿಯಾದರೆ ಅವನು ತನ್ನ ಪ್ರಭುವಿನ ಕಡೆಗೆ (ಪಶ್ಚಾತ್ತಾಪಪಟ್ಟು) ಮರಳಿ ಅವನನ್ನು ಕರೆದು ಪ್ರಾರ್ಥಿಸುತ್ತಾನೆ. ಅನಂತರ ಅವನು (ಅಲ್ಲಾಹ್) ತನ್ನಿಂದ ಏನಾದರೂ ಅನುಗ್ರಹವನ್ನು ಅವನಿಗೆ ದಯಪಾಲಿಸಿದರೆ ಮುಂಚೆ ಅವನು ಯಾವುದಕ್ಕೋಸ್ಕರ ಪ್ರಾರ್ಥಿಸುತ್ತಿದ್ದನೋ ಅದನ್ನು ಅವನು ಮರೆತು ಬಿಡುತ್ತಾನೆ. ಅವನು ಅಲ್ಲಾಹನಿಗೆ ಸರಿಸಾಟಿಗಳನ್ನು ನಿಶ್ಚಯಿಸುತ್ತಾನೆ - ಅವನ (ಅಲ್ಲಾಹನ) ಪಥದಿಂದ (ಜನರನ್ನು) ದಾರಿತಪ್ಪಿಸಲಿಕ್ಕಾಗಿ. ಹೇಳು: 'ನೀನು ನಿನ್ನ ಅವಿಶ್ವಾಸದಲ್ಲಿ ಸ್ವಲ್ಪ ಕಾಲ ಸುಖ ಅನುಭವಿಸಿಕೋ. ದಿಟವಾಗಿಯೂ ನೀನು ನರಕವಾಸಿಗಳ ಪೈಕಿಯಲ್ಲಿ ಸೇರುತ್ತಿ.'

وَإِذَا مَسَّ الْإِنسَانَ ضُرٌّ دَعَا رَبَّهُ مُنِيبًا إِلَيْهِ ثُمَّ إِذَا خَوَّلَهُ نِعْمَةً مِّنْهُ نَسِيَ مَا كَانَ يَدْعُو إِلَيْهِ مِن قَبْلُ وَجَعَلَ لِلَّهِ أَندَادًا لِّيُضِلَّ عَن سَبِيلِهِ ۚ قُلْ تَمَتَّعْ بِكُفْرِكَ قَلِيلًا ۖ إِنَّكَ مِنْ أَصْحَابِ النَّارِ ﴿٩﴾

**10.** ಏನು, ಪರಲೋಕದ ಬಗ್ಗೆ ಭಯಪಟ್ಟು ಮತ್ತು ತನ್ನ ಪ್ರಭುವಿನ ಕೃಪೆಯ ಭರವಸೆಯಿಂದ ರಾತ್ರಿಯ ಜಾವಗಳಲ್ಲಿ ಸಾಷ್ಟಾಂಗವೆರಗಿಯೂ ನಿಂತುಕೊಂಡೂ (ಅಲ್ಲಾಹನೊಡನೆ) ಅರ್ಪಣಭಾವದಿಂದ ಪ್ರಾರ್ಥಿಸುವವನು ಜ್ಞಾನಿಯಲ್ಲವೇ? ಹೇಳು: 'ಜ್ಞಾನಿಗಳೂ ಅಜ್ಞಾನಿಗಳೂ ಸಮಾನರೇ?' ನಿಶ್ಚಯವಾಗಿಯೂ ವಿವೇಕಶಾಲಿಗಳು ಮಾತ್ರವೇ ಉಪದೇಶವನ್ನು ಮನವರಿಕೆ ಮಾಡುತ್ತಾರೆ.

أَمَّنْ هُوَ قَانِتٌ آنَاءَ اللَّيْلِ سَاجِدًا وَقَائِمًا يَحْذَرُ الْآخِرَةَ وَيَرْجُو رَحْمَةَ رَبِّهِ ۗ قُلْ هَلْ يَسْتَوِي الَّذِينَ يَعْلَمُونَ وَالَّذِينَ لَا يَعْلَمُونَ ۗ إِنَّمَا يَتَذَكَّرُ أُولُو الْأَلْبَابِ ﴿١٠﴾

**11.** (ನನ್ನ ಸಂದೇಶವಾಗಿ ಅವರೊಡನೆ) ಹೇಳು: 'ಸತ್ಯ ವಿಶ್ವಾಸಿಗಳಾದ ನನ್ನ ದಾಸರೇ, ನೀವು ನಿಮ್ಮ ಪ್ರಭುವಿನ ಭಯವಿರಿಸಿಕೊಳ್ಳಿರಿ. ಈ ಲೋಕದಲ್ಲಿ ಸತ್ಕರ್ಮಮಾಡುವವನಿಗೆ ಉತ್ತಮವಾದ ಪ್ರತಿಫಲವಿದೆ. ಅಲ್ಲಾಹನ ಭೂಮಿ ವಿಶಾಲವಾಗಿದೆ. ದಿಟವಾಗಿಯೂ ತಾಳ್ಮೆವಹಿಸುವವರಿಗೆ ಅಗಣಿತವಾದ ಪ್ರತಿಫಲ ಲಭ್ಯವಾಗುವುದು.'

قُلْ يَا عِبَادِ الَّذِينَ آمَنُوا اتَّقُوا رَبَّكُمْ ۚ لِلَّذِينَ أَحْسَنُوا فِي هَٰذِهِ الدُّنْيَا حَسَنَةٌ ۗ وَأَرْضُ اللَّهِ وَاسِعَةٌ ۗ إِنَّمَا يُوَفَّى الصَّابِرُونَ أَجْرَهُم بِغَيْرِ حِسَابٍ ﴿١١﴾

**12.** ಹೇಳು: 'ಸಂಪೂರ್ಣವಾಗಿ ಅಲ್ಲಾಹನಿಗೆ ವಿಧೇಯತೆಯನ್ನು ತೋರಿಸುತ್ತಾ ಅವನನ್ನು ಮಾತ್ರ ಆರಾಧಿಸಲು ನಾನು ಆಜ್ಞಾಪಿಸಲ್ಪಟ್ಟಿದ್ದೇನೆ.

قُلْ إِنِّي أُمِرْتُ أَنْ أَعْبُدَ اللَّهَ مُخْلِصًا لَّهُ الدِّينَ ﴿١٢﴾





**13.** 'ಮುಸ್ಲಿಮರಲ್ಲಿ ನಾನು ಪ್ರಥಮನಾಗಬೇಕೆಂದು ಸಹ ನನ್ನೊಡನೆ ಆಜ್ಞಾಪಿಸಲಾಗಿದೆ.'

وَأُمِرْتُ لِأَنْ أَكُونَ أَوَّلَ الْمُسْلِمِينَ ﴿١٣﴾

**14.** ಹೇಳು: 'ನಾನು ನನ್ನ ಪ್ರಭುವಿಗೆ ಅವಿಧೇಯನಾದರೆ ಘೋರವಾದೊಂದು ದಿನದ ಶಿಕ್ಷೆಯ ಬಗ್ಗೆ ಭಯಪಡುತ್ತೇನೆ.'

قُلْ إِنِّي أَخَافُ إِنْ عَصَيْتُ رَبِّي عَذَابَ يَوْمٍ عَظِيمٍ ﴿١٤﴾

**15.** ಹೇಳು: 'ನಾನು ನನ್ನ ಧರ್ಮದಲ್ಲಿ ಅಲ್ಲಾಹನಿಗೆ ಸಂಪೂರ್ಣವಾದ ವಿಧೇಯತೆಯನ್ನು ತೋರಿಸುತ್ತಾ ಅವನನ್ನು ಆರಾಧಿಸುತ್ತೇನೆ.

قُلِ اللَّهَ أَعْبُدُ مُخْلِصًا لَّهُ دِينِي ﴿١٥﴾

**16.** '(ನಿಮ್ಮ ಬಗ್ಗೆ ಹೇಳುವುದಾದರೆ) ಅಲ್ಲಾಹನ ಹೊರತು ನಿಮಗೆ ಇಚ್ಛೆ ಇರುವವರನ್ನು ನೀವು ಆರಾಧಿಸಬಹುದು.' ಹೇಳು : 'ತಮ್ಮ ಆತ್ಮಗಳನ್ನೂ ತಮ್ಮ ಕುಟುಂಬವನ್ನೂ ಪುನರುತ್ಥಾನ ದಿನದಂದು ನಾಶಕ್ಕೊಳಪಡಿಸುವವರೇ ನಿಜವಾಗಿಯೂ ನಾಶಕ್ಕೊಳಗಾದವರು.' ಜಾಗ್ರತೆ! ಖಚಿತವಾಗಿಯೂ ಅದು ಮಹಾ ನಾಶವಾಗಿದೆ.

فَاعْبُدُوا مَا شِئْتُم مِّن دُونِهِ ۗ قُلْ إِنَّ الْخَاسِرِينَ الَّذِينَ خَسِرُوا أَنفُسَهُمْ وَأَهْلِيهِمْ يَوْمَ الْقِيَامَةِ ۗ أَلَا ذَٰلِكَ هُوَ الْخُسْرَانُ الْمُبِينُ ﴿١٦﴾

**17.** ಅವರ ಮೇಲ್ಭಾಗದಲ್ಲಿ ಅಗ್ನಿಯ ಆಚ್ಛಾದನೆ ಇರುವುದು. ಅವರ ಕೆಳಭಾಗದಲ್ಲಿ ಸಹ (ಅಂತಹದೇ) ಆಚ್ಛಾದನೆ ಇರುವುದು. ತನ್ನ ದಾಸರನ್ನು ಅಲ್ಲಾಹನು ಹೆದರಿಸುವ ಶಿಕ್ಷೆ ಇದೇ ಆಗಿದೆ. ಆದ್ದರಿಂದ ಎಲೈ ನನ್ನ ದಾಸರೇ, ನನ್ನ ಭಯಭಕ್ತಿಯನ್ನೇ ಹೊಂದಿರಿ.

لَهُم مِّن فَوْقِهِمْ ظُلَلٌ مِّنَ النَّارِ وَمِن تَحْتِهِمْ ظُلَلٌ ۚ ذَٰلِكَ يُخَوِّفُ اللَّهُ بِهِ عِبَادَهُ ۚ يَا عِبَادِ فَاتَّقُونِ ﴿١٧﴾

**18.** ಯಾರು ಮಿಥ್ಯದೇವರುಗಳ ಆರಾಧನೆಯಿಂದ ಅಗಲಿಕೊಂಡು ಅಲ್ಲಾಹನ ಕಡೆಗೆ ವಾಲುತ್ತಾರೋ ಅವರಿಗೆ ಶುಭವಾರ್ತೆ ಇದೆ. ಆದ್ದರಿಂದ ನನ್ನ ಭಕ್ತದಾಸರಿಗೆ ಶುಭವಾರ್ತೆಯನ್ನು ತಿಳಿಸು.

وَالَّذِينَ اجْتَنَبُوا الطَّاغُوتَ أَن يَعْبُدُوهَا وَأَنَابُوا إِلَى اللَّهِ لَهُمُ الْبُشْرَىٰ ۚ فَبَشِّرْ عِبَادِ ﴿١٨﴾

**19.** ಮಾತುಗಳನ್ನು ಲಕ್ಷ್ಯಗೊಟ್ಟು ಆಲಿಸಿ ಅದರಲ್ಲಿ ಉತ್ತಮವಾದುದನ್ನು ಅವರು ಅನುಸರಿಸುವವರಾಗಿದ್ದಾರೆ. ಅಲ್ಲಾಹನ ಮಾರ್ಗದರ್ಶನ ಪಡೆದವರು ಅವರೇ ಆಗಿದ್ದಾರೆ. ಅವರೇ ವಿವೇಕಶಾಲಿಗಳು.

الَّذِينَ يَسْتَمِعُونَ الْقَوْلَ فَيَتَّبِعُونَ أَحْسَنَهُ ۚ أُولَٰئِكَ الَّذِينَ هَدَاهُمُ اللَّهُ ۖ وَأُولَٰئِكَ هُمْ أُولُو الْأَلْبَابِ ﴿١٩﴾

**20.** ಯಾರ ಬಗ್ಗೆ ಶಿಕ್ಷೆಯ ವಚನ ಈಡೇರಿದೆಯೋ ಅವನು *ರಕ್ಷೆಹೊಂದಲು ಅರ್ಹನೇನು?* ನರಕದಲ್ಲಿರುವವನನ್ನು ನೀನು ರಕ್ಷಿಸಬಲ್ಲೆಯಾ?

أَفَمَنْ حَقَّ عَلَيْهِ كَلِمَةُ الْعَذَابِ أَفَأَنْتَ تُنْقِذُ مَنْ فِي النَّارِ ﴿٢٠﴾

**21.** ಆದರೆ ತಮ್ಮ ಪ್ರಭುವಿನ ಭಯಭಕ್ತಿ ಇರಿಸಿಕೊಂಡವರಿಗೆ ಉಪ್ಪರಿಗೆಗಳ ಮೇಲೆ ಉಪ್ಪರಿಗೆಗಳಿರುವ ಭವನಗಳಿವೆ. ಅವುಗಳ ಕೆಳಭಾಗದಲ್ಲಿ ಸರಿತ್ತುಗಳು ಹರಿಯುತ್ತವೆ. ಇದು ಅಲ್ಲಾಹನ ವಾಗ್ದಾನವಾಗಿದೆ. ಅಲ್ಲಾಹನು ವಾಗ್ದಾನವನ್ನು ಉಲ್ಲಂಘಿಸುವವನಲ್ಲ.

لَٰكِنِ الَّذِينَ اتَّقَوْا رَبَّهُمْ لَهُمْ غُرَفٌ مِنْ فَوْقِهَا غُرَفٌ مَبْنِيَّةٌ تَجْرِي مِنْ تَحْتِهَا الْأَنْهَارُ وَعْدَ اللَّهِ لَا يُخْلِفُ اللَّهُ الْمِيعَادَ ﴿٢١﴾

**22.** ನೀನು ಕಾಣುವುದಿಲ್ಲವೇ? - ಅಲ್ಲಾಹನು ಆಕಾಶದಿಂದ ಮಳೆಯನ್ನು ಸುರಿಸುತ್ತಾನೆ ಮತ್ತು ಅದನ್ನು ಭೂಮಿಯಲ್ಲಿ ಹೊಳೆಗಳಾಗಿ ಹರಿಸುತ್ತಾನೆ. ಅನಂತರ ಆ ಮೂಲಕ ಹಲವು ಬಣ್ಣದ ಪೈರು ಪಚ್ಚೆ ಬೆಳೆಯುವಂತೆ ಮಾಡುತ್ತಾನೆ. ಅನಂತರ ಅವು ಒಣಗಿ ಹಳದಿ ಬಣ್ಣಕ್ಕೆ ತಿರುಗುವುದನ್ನು ನೀನು ಕಾಣುತ್ತಿ. ಆ ಬಳಿಕ ಅವುಗಳನ್ನು ಚೂರುಚೂರಾಗಿ ಕತ್ತರಿಸಿದ ಹುಲ್ಲುಕಡ್ಡಿಗಳಾಗಿ ಮಾಡಿಬಿಡುತ್ತಾನೆ. ನಿಸ್ಸಂದೇಹವಾಗಿಯೂ ಅದರಲ್ಲಿ ವಿವೇಕಶಾಲಿಗಳಿಗೆ ಒಂದು ಪಾಠವಿದೆ.

أَلَمْ تَرَ أَنَّ اللَّهَ أَنْزَلَ مِنَ السَّمَاءِ مَاءً فَسَلَكَهُ يَنَابِيعَ فِي الْأَرْضِ ثُمَّ يُخْرِجُ بِهِ زَرْعًا مُخْتَلِفًا أَلْوَانُهُ ثُمَّ يَهِيجُ فَتَرَاهُ مُصْفَرًّا ثُمَّ يَجْعَلُهُ حُطَامًا إِنَّ فِي ذَٰلِكَ لَذِكْرَىٰ لِأُولِي الْأَلْبَابِ ﴿٢٢﴾

**23.** ಏನು, ಯಾರ ಹೃದಯವನ್ನು ಅಲ್ಲಾಹನು ಇಸ್ಲಾಮಿಗೋಸ್ಕರ ತೆರೆದುಕೊಟ್ಟು, ಹಾಗೆ ಆತನು ತನ್ನ ಪ್ರಭುವಿನ ಪ್ರಕಾಶದಿಂದ ಮುನ್ನಡೆಸಲ್ಪಡುತ್ತಾನೋ, ಆತನು *ಅವಿಶ್ವಾಸವೆಂಬ ಅಂಧಕಾರದಲ್ಲಿ ಪರದಾಡುವವನಿಗೆ ಸಮಾನನೇ?* ಆದ್ದರಿಂದ ಅಲ್ಲಾಹನ ಸ್ಮರಣೆಯಿಂದ ಪರಾಙ್ಮುಖರಾಗುವ ಕಠಿಣ ಹೃದಯಿಗಳಿಗೆ ಮಹಾ ನಾಶ. ಅವರು ಸ್ಪಷ್ಟವಾಗಿಯೂ ದಾರಿತಪ್ಪಿದವರು.

أَفَمَنْ شَرَحَ اللَّهُ صَدْرَهُ لِلْإِسْلَامِ فَهُوَ عَلَىٰ نُورٍ مِنْ رَبِّهِ فَوَيْلٌ لِلْقَاسِيَةِ قُلُوبُهُمْ مِنْ ذِكْرِ اللَّهِ أُولَٰئِكَ فِي ضَلَالٍ مُبِينٍ ﴿٢٣﴾

**24.** ಅಲ್ಲಾಹನು ಅತ್ಯುತ್ತಮವಾದ ಸಂದೇಶವನ್ನು ಗ್ರಂಥರೂಪದಲ್ಲಿ ಅವತೀರ್ಣಗೊಳಿಸಿರುವನು. (ಅದರ ವಚನಗಳು) ಹೋಲಿಕೆ ಇರುವಂಥವೂ (ವಿವಿಧ ರೀತಿಯಲ್ಲಿ) ಪುನರಾವರ್ತಿಸಲ್ಪಡುವಂಥವೂ ಆಗಿವೆ. ತಮ್ಮ ಪ್ರಭುವಿನ ಭಯವುಳ್ಳವರ ಚರ್ಮಗಳಿಗೆ ಆ ಮೂಲಕ ರೋಮಾಂಚನವುಂಟಾಗುತ್ತದೆ. ಅನಂತರ ಅವರ

اللَّهُ نَزَّلَ أَحْسَنَ الْحَدِيثِ كِتَابًا مُتَشَابِهًا مَثَانِيَ تَقْشَعِرُّ مِنْهُ جُلُودُ الَّذِينَ يَخْشَوْنَ رَبَّهُمْ ثُمَّ تَلِينُ جُلُودُهُمْ وَ





ಚರ್ಮಗಳು ಮತ್ತು ಹೃದಯಗಳು ಮೃದುವಾಗಿ ಅಲ್ಲಾಹನ ಸ್ಮರಣೆಯ ಕಡೆಗೆ ವಾಲುತ್ತವೆ. ಅದು ಅಲ್ಲಾಹನ ಮಾರ್ಗದರ್ಶನವಾಗಿದೆ. ಅದರ ಮೂಲಕ ತಾನಿಚ್ಛಿಸುವವನಿಗೆ ಅವನು ಸತ್ಪಥ ದರ್ಶನ ಮಾಡುತ್ತಾನೆ. ಅಲ್ಲಾಹನು ಯಾರ ಬಗ್ಗೆ ದಾರಿತಪ್ಪಿದವನೆಂದು ತೀರ್ಮಾನಿಸುತ್ತಾನೋ ಅವನಿಗೆ ಬೇರೆ ಮಾರ್ಗದರ್ಶಕನಿಲ್ಲ.

قُلُوبُهُمْ إِلَىٰ ذِكْرِ اللَّهِ ذَٰلِكَ هُدَى اللَّهِ يَهْدِي بِهِ مَنْ يَشَاءُ وَمَنْ يُضْلِلِ اللَّهُ فَمَا لَهُ مِنْ هَادٍ ﴿٢٤﴾

**25.** ಯಾರು ಪುನರುತ್ಥಾನ ದಿನದಂದು ಕಠಿಣವಾದ ಶಿಕ್ಷೆಯನ್ನು ತನ್ನ ಮುಖದಿಂದ ತಡೆಯಲು ಪ್ರಯತ್ನಿಸುತ್ತಾನೋ ಅವನು *ಸುಗಮವಾಗಿ ಸ್ವರ್ಗದಲ್ಲಿ ಪ್ರವೇಶಿಸುವವನ ಹಾಗೆ ಆಗುವನೋ?* ಅಧರ್ಮಿಗಳೊಡನೆ (ಅಂದು) 'ನಿಮ್ಮ ಕೃತ್ಯದ ಫಲವನ್ನು ಅನುಭವಿಸಿರಿ' ಎಂದು ಹೇಳಲಾಗುವುದು.

أَفَمَنْ يَتَّقِي بِوَجْهِهِ سُوءَ الْعَذَابِ يَوْمَ الْقِيَامَةِ وَقِيلَ لِلظَّالِمِينَ ذُوقُوا مَا كُنْتُمْ تَكْسِبُونَ ﴿٢٥﴾

**26.** ಇವರ ಪೂರ್ವಿಕರು *ಸಹ* (ನಮ್ಮ ಸಂದೇಶವಾಹಕರನ್ನು) ಸುಳ್ಳಾಗಿಸಿದ್ದರು. ಆದ್ದರಿಂದ ಅವರು ಗ್ರಹಿಸದ ಕಡೆಯಿಂದ ಶಿಕ್ಷೆ ಅವರ ಮೇಲೆ ಬಂದೆರಗಿತು.

كَذَّبَ الَّذِينَ مِنْ قَبْلِهِمْ فَأَتَاهُمُ الْعَذَابُ مِنْ حَيْثُ لَا يَشْعُرُونَ ﴿٢٦﴾

**27.** ಹಾಗೆ ಅಲ್ಲಾಹನು ಅವರನ್ನು ಇಹಲೋಕದಲ್ಲಿ ಅಪಮಾನಿತರಾಗುವಂತೆ ಮಾಡಿದನು. ಪರಲೋಕದ ಶಿಕ್ಷೆಯಾದರೋ ಅತಿ ಕಠೋರ. ಅವರು ಅದನ್ನು ತಿಳಿದಿರುತ್ತಿದ್ದರೆ!

فَأَذَاقَهُمُ اللَّهُ الْخِزْيَ فِي الْحَيَاةِ الدُّنْيَا وَلَعَذَابُ الْآخِرَةِ أَكْبَرُ لَوْ كَانُوا يَعْلَمُونَ ﴿٢٧﴾

**28.** ಜನರು ಮನದಟ್ಟು ಮಾಡಿಕೊಳ್ಳಲಿಕ್ಕೋಸ್ಕರ ನಾವು ಈ ಖುರ್‌ಆನಿನಲ್ಲಿ ಅವರಿಗೆ ಎಲ್ಲ ತರದ ಸಾಮ್ಯತೆಗಳನ್ನು ನಿರೂಪಿಸಿದ್ದೇವೆ.

وَلَقَدْ ضَرَبْنَا لِلنَّاسِ فِي هَٰذَا الْقُرْآنِ مِنْ كُلِّ مَثَلٍ لَعَلَّهُمْ يَتَذَكَّرُونَ ﴿٢٨﴾

**29.** ಅವರು ಭಯಭಕ್ತಿ ಹೊಂದಲಿಕ್ಕೋಸ್ಕರ ನಾವು ಖುರ್‌ಆನನ್ನು (ಸ್ಪಷ್ಟವಾದ) ಅರಬಿ ಭಾಷೆಯಲ್ಲಿ ವಕ್ರೋಕ್ತಿ ರಹಿತವಾಗಿ *ಅವತೀರ್ಣಗೊಳಿಸಿದ್ದೇವೆ.*

قُرْآنًا عَرَبِيًّا غَيْرَ ذِي عِوَجٍ لَعَلَّهُمْ يَتَّقُونَ ﴿٢٩﴾

**30.** ಅಲ್ಲಾಹನು ಒಂದು ಸಾಮತಿಯನ್ನು ಕೊಡುತ್ತಾನೆ. ಪರಸ್ಪರ ಜಗಳಾಡುವ ಅನೇಕ ಪಾಲುಗಾರರ ಒಡೆತನದಲ್ಲಿರುವ ಒಬ್ಬ (ಗುಲಾಮ) ಮನುಷ್ಯ. ಒಬ್ಬನದೇ

ضَرَبَ اللَّهُ مَثَلًا رَجُلًا فِيهِ شُرَكَاءُ مُتَشَاكِسُونَ وَرَجُلًا سَلَمًا لِرَجُلٍ هَلْ

ಸಂಪೂರ್ಣ ಒಡೆತನದಲ್ಲಿರುವ ಮತ್ತೊಬ್ಬ (ಗುಲಾಮ) ಮನುಷ್ಯ. ಇವರಿಬ್ಬರ ಸ್ಥಿತಿ ಒಂದೇ ರೀತಿಯಾಗಿರುತ್ತದೆಯೇ? ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ. ಆದರೆ ಅವರಲ್ಲಿ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

يَسْتَوِيٰنِ مَثَلًا ۚ اَلْحَمْدُ لِلّٰهِ ۚ بَلْ اَكْثَرُهُمْ لَا يَعْلَمُوْنَ ﴿۲۹﴾

**31.** ನೀನು ಖಂಡಿತವಾಗಿಯೂ ಮೃತಪಡುವೆ. ಅವರು (ಸಹ) ಖಂಡಿತವಾಗಿಯೂ ಮೃತಪಡುವರು.

اِنَّكَ مَيِّتٌ وَّاِنَّهُمْ مَّيِّتُوْنَ ﴿۳۰﴾

**32.** ಅನಂತರ ಪುನರುತ್ಥಾನ ದಿನದಂದು ನಿಮ್ಮ ಪ್ರಭುವಿನ ಮುಂದೆ ನೀವು ಪರಸ್ಪರ ವಾಗ್ವಾದ ಮಾಡುವಿರಿ.

ثُمَّ اِنَّكُمْ يَوْمَ الْقِيٰمَةِ عِنْدَ رَبِّكُمْ تَخْتَصِمُوْنَ ﴿۳۱﴾

**33.** ಅಲ್ಲಾಹನ ನಾಮದಲ್ಲಿ ಸುಳ್ಳು ಹೇಳುವ ಮತ್ತು ತನ್ನ ಬಳಿಗೆ ಸತ್ಯ ಬಂದಾಗ ಅದನ್ನು ಸುಳ್ಳಾಗಿಸುವವನಿಗಿಂತ ಅಧರ್ಮಿ ಇನ್ನಾರಿದ್ದಾರೆ? ಏನು ಅವಿಶ್ವಾಸಿಗಳಿಗೆ ವಾಸಸ್ಥಳ ನರಕದಲ್ಲಲ್ಲವೇ?

فَمَنْ اَظْلَمُ مِمَّنْ كَذَبَ عَلَى اللّٰهِ وَكَذَّبَ بِالصِّدْقِ اِذْ جَآءَهٗ ۚ اَلَيْسَ فِيْ جَهَنَّمَ مَثْوًى لِّلْكٰفِرِيْنَ ﴿۳۲﴾

**34.** ಸತ್ಯವನ್ನು ತಂದವನು ಮತ್ತು ಅದನ್ನು ಸತ್ಯವೆಂದು ದೃಢೀಕರಿಸಿದವನು - ಅಂತಹವರೇ ಭಯಭಕ್ತಿಯುಳ್ಳವರು.

وَالَّذِيْ جَآءَ بِالصِّدْقِ وَصَدَّقَ بِهٖٓ اُولٰٓئِكَ هُمُ الْمُتَّقُوْنَ ﴿۳۳﴾

**35.** ಅವರಿಗೆ ತಾವಿಚ್ಛಿಸುವುದೆಲ್ಲ ತಮ್ಮ ಪ್ರಭುವಿನ ಬಳಿ ಲಭಿಸುವುವು. ಅದು ಸತ್ಕರ್ಮಿಗಳಿಗಿರುವ ಪ್ರತಿಫಲವಾಗಿದೆ.

لَهُمْ مَّا يَشَآءُوْنَ عِنْدَ رَبِّهِمْ ۚ ذٰلِكَ جَزٰٓؤُا الْمُحْسِنِيْنَ ﴿۳۴﴾

**36.** ಹಾಗೆ ಅಲ್ಲಾಹನು ಅವರ ಕೃತ್ಯಗಳ ಕೆಡುಕನ್ನು ನಿವಾರಿಸುವನು ಹಾಗೂ ಅವರ ಸತ್ಕೃತ್ಯಗಳಿಗೆ ತಕ್ಕುದಾದ ಪ್ರತಿಫಲವನ್ನು ದಯಪಾಲಿಸುವನು.

لِيُكَفِّرَ اللّٰهُ عَنْهُمْ اَسْوَاَ الَّذِيْ عَمِلُوْا وَيَجْزِيَهُمْ اَجْرَهُمْ بِاَحْسَنِ الَّذِيْ كَانُوْا يَعْمَلُوْنَ ﴿۳۵﴾

**37.** ಏನು, ಅಲ್ಲಾಹನು ತನ್ನ ಭಕ್ತದಾಸರಿಗೆ ಸಾಕಾಗಲಾರನೇ? ಹಾಗಿದ್ದರೂ ಅವರು ಅವನನ್ನು ಬಿಟ್ಟು

اَلَيْسَ اللّٰهُ بِكَافٍ عَبْدَهٗ ۚ وَ





ಇತರರಿಂದ ನಿಮ್ಮನ್ನು ಹೆದರಿಸುತ್ತಾರೆ. ಅಲ್ಲಾಹನು ಯಾರ ಬಗ್ಗೆ ದಾರಿತಪ್ಪಿದವನೆಂದು ತೀರ್ಮಾನಿಸುತ್ತಾನೋ ಅವನಿಗೆ ಮಾರ್ಗದರ್ಶಕನಾಗಿ ಯಾರೂ ಇಲ್ಲ.

يُخَوِّفُوْنَكَ بِالَّذِيْنَ مِنْ دُوْنِهٖ ۚ وَمَنْ يُّضْلِلِ اللّٰهُ فَمَا لَهٗ مِنْ هَادٍ ﴿۳۶﴾

**38.** ಯಾರಿಗೆ ಅಲ್ಲಾಹನು ಮಾರ್ಗದರ್ಶನ ಮಾಡುತ್ತಾನೋ, ಅವನ ದಾರಿತಪ್ಪಿಸಲು ಯಾರಿಗೂ ಅಸಾಧ್ಯ. ಏನು, ಅಲ್ಲಾಹನು ಪ್ರತಾಪಶಾಲಿಯೂ ಶಿಕ್ಷಾಕ್ರಮ ಕೈಗೊಳ್ಳುವ ಪ್ರಭುವೂ ಅಲ್ಲವೇ?

وَمَنْ يَّهْدِ اللّٰهُ فَمَا لَهٗ مِنْ مُّضِلٍّ ۗ اَلَيْسَ اللّٰهُ بِعَزِيْزٍ ذِي انْتِقَامٍ ﴿۳۷﴾

**39.** 'ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದ್ದು ಯಾರು?' ಎಂದು ನೀನು ಅವರೊಡನೆ ಕೇಳಿದರೆ, 'ಅಲ್ಲಾಹ್' ಎಂದು ಅವರು ಖಂಡಿತವಾಗಿಯೂ ಹೇಳುವರು. ನೀನು ಹೇಳು: 'ಅಲ್ಲಾಹನ ಹೊರತು ನೀವು ಕರೆದು ಪ್ರಾರ್ಥಿಸುವ ಆರಾಧ್ಯರ ಕುರಿತು ನೀವು ಯೋಚಿಸಿದ್ದೀರಾ? ಅಲ್ಲಾಹನು ನನಗೇನಾದರೂ ದೋಷವನ್ನುಂಟುಮಾಡಬೇಕೆಂದು ಬಯಸಿದರೆ ಅವರು, ಅವನುಂಟುಮಾಡಿದ ದೋಷವನ್ನು ನಿವಾರಿಸಲು ಶಕ್ತರೇ? ಅಥವಾ ಅವನು ನನ್ನ ಮೇಲೇನಾದರೂ ಕರುಣೆ ತೋರಿಸಲು ಬಯಸಿದರೆ ಅವರು ಅವನ ಕರುಣೆಯನ್ನು ತಡೆಯಬಲ್ಲರೇ?' ಹೇಳು: 'ನನಗೆ ಅಲ್ಲಾಹನು ಸಾಕು, ಭರವಸೆಯನ್ನಿಡುವವರು ಅವನ ಮೇಲೆ ಭರವಸೆಯನ್ನಿಡುತ್ತಾರೆ.'

وَلَئِنْ سَاَلْتَهُمْ مَّنْ خَلَقَ السَّمٰوٰتِ وَالْاَرْضَ لَيَقُوْلُنَّ اللّٰهُ ۚ قُلْ اَفَرَءَيْتُمْ مَّا تَدْعُوْنَ مِنْ دُوْنِ اللّٰهِ اِنْ اَرَادَنِيَ اللّٰهُ بِضُرٍّ هَلْ هُنَّ كٰشِفٰتُ ضُرِّهٖٓ اَوْ اَرَادَنِيْ بِرَحْمَةٍ هَلْ هُنَّ مُمْسِكٰتُ رَحْمَتِهٖ ۚ قُلْ حَسْبِيَ اللّٰهُ ۚ عَلَيْهِ يَتَوَكَّلُ الْمُتَوَكِّلُوْنَ ﴿۳۸﴾

**40.** ಹೇಳು: 'ಎಲೈ ನನ್ನ ಜನರೇ, ನೀವು ನಿಮ್ಮ ಕೈಲಾದಷ್ಟು ಕಾರ್ಯಶೀಲರಾಗಿರಿ. ನಾನು (ಸಹ) ನನ್ನ ಕೈಲಾದಷ್ಟು ಕಾರ್ಯಶೀಲನಾಗುತ್ತೇನೆ. ನಿಮಗೆ ಬೇಗನೆ ಮನವರಿಕೆಯಾಗುವುದು -

قُلْ يٰقَوْمِ اعْمَلُوْا عَلٰى مَكَانَتِكُمْ اِنِّيْ عَامِلٌ ۚ فَسَوْفَ تَعْلَمُوْنَ ﴿۳۹﴾

**41.** 'ಅಪಮಾನಕರವಾದ ಶಿಕ್ಷೆ ಯಾರಿಗೆ ಬಂದೆರಗುವುದೆಂದು ಹಾಗೂ ಸ್ಥಾಯಿಯಾದ ಶಿಕ್ಷೆ ಯಾರಿಗೆ ಬಂದೆರಗುವುದೆಂದು.'

مَنْ يَّاْتِيْهِ عَذَابٌ يُّخْزِيْهِ وَيَحِلُّ عَلَيْهِ عَذَابٌ مُّقِيْمٌ ﴿۴۰﴾

**42.** ದಿಟವಾಗಿಯೂ ನಾವು ನಿನಗೆ ಈ ಗ್ರಂಥವನ್ನು ಮನುಷ್ಯರ ಒಳಿತಿಗಾಗಿ ಸತ್ಯದೊಂದಿಗೆ ಅವತೀರ್ಣಗೊಳಿ

اِنَّآ اَنْزَلْنَا عَلَيْكَ الْكِتٰبَ لِلنَّاسِ

بِالْحَقِّ ۚ فَمَنِ اهْتَدٰى فَلِنَفْسِهٖ ۚ وَمَنْ ضَلَّ فَاِنَّمَا يَضِلُّ عَلَيْهَا ۚ وَمَآ اَنْتَ عَلَيْهِمْ بِوَكِيْلٍ ﴿٤١﴾

ಸಿದ್ದೇವೆ. ಯಾರು ಸತ್ಪಥವನ್ನು ಪಡೆಯುತ್ತಾನೋ ಅದು ಅವನ ಸ್ವಂತ ಆತ್ಮದ ಒಳಿತಿಗೋಸ್ಕರವಾಗಿದೆ. ಯಾರಾದರೂ ದಾರಿತಪ್ಪಿದರೆ ಅದರ ದೋಷಕ್ಕಾಗಿಯೇ ದಾರಿ ತಪ್ಪುತ್ತಾನೆ. ನೀನು ಅವರ ಸಂರಕ್ಷಕನಲ್ಲ.

اَللّٰهُ يَتَوَفَّى الْاَنْفُسَ حِيْنَ مَوْتِهَا وَالَّتِيْ لَمْ تَمُتْ فِيْ مَنَامِهَا ۚ فَيُمْسِكُ الَّتِيْ قَضٰى عَلَيْهَا الْمَوْتَ وَيُرْسِلُ الْاُخْرٰٓى اِلٰٓى اَجَلٍ مُّسَمًّى ۗ اِنَّ فِيْ ذٰلِكَ لَاٰيٰتٍ لِّقَوْمٍ يَّتَفَكَّرُوْنَ ﴿٤٢﴾

**42.** ಅಲ್ಲಾಹನು ಜೀವಿಗಳ ಪ್ರಾಣಗಳನ್ನು ಅವುಗಳ ಮರಣ ಸಮಯದಲ್ಲಿ ಹರಣ ಮಾಡುತ್ತಾನೆ ಹಾಗೂ ಮರಣವಾಗದ ಜೀವಿಗಳ ಪ್ರಾಣಗಳನ್ನು ಅವುಗಳ ನಿದ್ರಾವಸ್ಥೆಯಲ್ಲೂ. ಯಾರಿಗೆ ಅವನು ಮರಣವನ್ನು ವಿಧಿಸುತ್ತಾನೋ ಅವರ ಪ್ರಾಣಗಳನ್ನು ಅವನು ಹಿಡಿದಿಟ್ಟುಕೊಳ್ಳುತ್ತಾನೆ. ಉಳಿದವುಗಳನ್ನು ಅವನು ಒಂದು ನಿಗದಿತ ಕಾಲದ ವರೆಗೆ ಮರಳಿ ಕಳುಹಿಸುತ್ತಾನೆ. ನಿಸ್ಸಂದೇಹವಾಗಿಯೂ ಚಿಂತನಶೀಲರಿಗೆ ಇದರಲ್ಲಿ ದೃಷ್ಟಾಂತಗಳಿವೆ.

اَمِ اتَّخَذُوْا مِنْ دُوْنِ اللّٰهِ شُفَعَآءَ ۗ قُلْ اَوَلَوْ كَانُوْا لَا يَمْلِكُوْنَ شَيْـًٔا وَّلَا يَعْقِلُوْنَ ﴿٤٣﴾

**44.** ಅವರು ಅಲ್ಲಾಹನನ್ನು ಬಿಟ್ಟು ಶಿಫಾರಸುಗಾರರನ್ನು ಮಾಡಿಕೊಂಡಿರುವರೇನು? ಕೇಳು: 'ಅವರಿಗೆ ಯಾವುದೇ ವಸ್ತುವಿನ ಮೇಲೆ ಏನೂ ಅಧಿಕಾರವಿಲ್ಲದಿದ್ದರೂ ಏನೂ ಬುದ್ಧಿಶಕ್ತಿ ಇಲ್ಲದಿದ್ದರೂ (ಅವರನ್ನು ನೀವು ಶಿಫಾರಸುಗಾರರನ್ನಾಗಿ ಮಾಡಿಕೊಂಡಿದ್ದೀರಾ)?'

قُلْ لِّلّٰهِ الشَّفَاعَةُ جَمِيْعًا ۗ لَهٗ مُلْكُ السَّمٰوٰتِ وَالْاَرْضِ ۗ ثُمَّ اِلَيْهِ تُرْجَعُوْنَ ﴿٤٤﴾

**45.** ಹೇಳು: 'ಶಿಫಾರಸುಗಳೆಲ್ಲ ಅಲ್ಲಾಹನ ಅಧೀನಕ್ಕೊಳಗಾಗಿವೆ. ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅವನಿಗೆ ಸೇರಿದೆ. ಮತ್ತೆ ನೀವು ಅವನ ಕಡೆಗೆಯೇ ಮರಳಿಸಲ್ಪಡುವಿರಿ.'

وَاِذَا ذُكِرَ اللّٰهُ وَحْدَهُ اشْمَاَزَّتْ قُلُوْبُ الَّذِيْنَ لَا يُؤْمِنُوْنَ بِالْاٰخِرَةِ ۚ وَاِذَا ذُكِرَ الَّذِيْنَ مِنْ دُوْنِهٖٓ اِذَا هُمْ يَسْتَبْشِرُوْنَ ﴿٤٥﴾

**46.** ಏಕನಾದ ಅಲ್ಲಾಹನ ಬಗ್ಗೆ ಪ್ರಸ್ತಾಪಿಸಲ್ಪಡುವಾಗ ಪರಲೋಕದ ಕುರಿತು ವಿಶ್ವಾಸವಿಲ್ಲದವರ ಹೃದಯಗಳು ಅಸಹ್ಯತೆಯಿಂದ ಸಂಕೋಚಗೊಳ್ಳುತ್ತವೆ. ಅವನ (ಅಲ್ಲಾಹನ) ಹೊರತಾಗಿರುವವರ ಬಗ್ಗೆ ಪ್ರಸ್ತಾಪಿಸಲ್ಪಡುವಾಗ ಅವರು ಅಗೋ ಸಂತೋಷಪಡುತ್ತಾರೆ.

قُلِ اللّٰهُمَّ فَاطِرَ السَّمٰوٰتِ وَالْاَرْضِ

**47.** ಹೇಳು: 'ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನೂ ಅಗೋಚರ ಗೋಚರ ವಿಚಾರಗಳನ್ನು ಬಲ್ಲ





عٰلِمَ الْغَيْبِ وَالشَّهَادَةِ اَنْتَ تَحْكُمُ بَيْنَ عِبَادِكَ فِيْ مَا كَانُوْا فِيْهِ يَخْتَلِفُوْنَ ﴿٤٦﴾

ವನೂ ಆದ ಅಲ್ಲಾಹನೇ, ನಿನ್ನ ದಾಸರ ಮಧ್ಯೆ ಅವರು ಪರಸ್ಪರ ಭಿನ್ನಾಭಿಪ್ರಾಯ ಹೊಂದಿರುವ ವಿಷಯಗಳಲ್ಲಿ ನೀನು ಮಾತ್ರ ತೀರ್ಮಾನ ಮಾಡಬಲ್ಲೆ.'

وَلَوْ اَنَّ لِلَّذِيْنَ ظَلَمُوْا مَا فِي الْاَرْضِ جَمِيْعًا وَّمِثْلَهٗ مَعَهٗ لَافْتَدَوْا بِهٖ مِنْ سُوْٓءِ الْعَذَابِ يَوْمَ الْقِيٰمَةِ ۚ وَبَدَا لَهُمْ مِّنَ اللّٰهِ مَا لَمْ يَكُوْنُوْا يَحْتَسِبُوْنَ ﴿٤٧﴾

**48.** ದುಷ್ಕರ್ಮಿಗಳು ಈ ಭೂಮಿಯಲ್ಲಿರುವ ಎಲ್ಲವನ್ನು ಹೊಂದಿದ್ದರೂ ಮತ್ತು ಅದರಷ್ಟೇ ಬೇರೆ ಇದ್ದರೂ ಅವರು ಪುನರುತ್ಥಾನ ದಿನದ ಕಠಿಣ ಶಿಕ್ಷೆಯಿಂದ ಪಾರಾಗಲು ಅವನ್ನೆಲ್ಲ ಪ್ರಾಯಶ್ಚಿತ್ತವಾಗಿ ನೀಡಲು ಬಯಸುವರು. ಆದರೆ ಅವರು ನಿರೀಕ್ಷಿಸದೆ ಇದ್ದುದು ಅಲ್ಲಾಹನ ಕಡೆಯಿಂದ ಅವರಿಗೆ ಪ್ರಕಟವಾಗುವುದು.

وَبَدَا لَهُمْ سَيِّاٰتُ مَا كَسَبُوْا وَحَاقَ بِهِمْ مَّا كَانُوْا بِهٖ يَسْتَهْزِءُوْنَ ﴿٤٨﴾

**49.** ಅವರ ಕೃತ್ಯಗಳ ದುಷ್ಫಲಗಳು ಅವರಿಗೆ ಗೋಚರಿಸುವುವು. ಅವರು ಏನನ್ನು ಪರಿಹಾಸ್ಯ ಮಾಡುತ್ತಿದ್ದರೋ ಅದು (ಆ ಶಿಕ್ಷೆ) ಅವರನ್ನು ಸುತ್ತುವರಿಯುವುದು.

فَاِذَا مَسَّ الْاِنْسَانَ ضُرٌّ دَعَانَا ۡ ثُمَّ اِذَا خَوَّلْنٰهُ نِعْمَةً مِّنَّا ۙ قَالَ اِنَّمَآ اُوْتِيْتُهٗ عَلٰى عِلْمٍ ۗ بَلْ هِيَ فِتْنَةٌ وَّلٰكِنَّ اَكْثَرَهُمْ لَا يَعْلَمُوْنَ ﴿٤٩﴾

**50.** ಮನುಷ್ಯನಿಗೇನಾದರೂ ಸಂಕಷ್ಟ ಸ್ಪರ್ಶಿಸಿದರೆ ಅವನು ನಮಗೆ ಮೊರೆಯಿಡುತ್ತಾನೆ. ಆದರೆ ನಮ್ಮ ಕಡೆಯಿಂದ ಏನಾದರೂ ಅನುಗ್ರಹವನ್ನು ನಾವು ನೀಡಿದರೆ, (ತನ್ನ ಸ್ವಂತ) ಜ್ಞಾನದ ಕಾರಣದಿಂದಲೇ ಇದು ನನಗೆ ದೊರಕಿದೆಯೆಂದು ಹೇಳುತ್ತಾನೆ. ಇದೊಂದು ಪರೀಕ್ಷೆಯಾಗಿದೆ; ಆದರೆ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

قَدْ قَالَهَا الَّذِيْنَ مِنْ قَبْلِهِمْ فَمَآ اَغْنٰى عَنْهُمْ مَّا كَانُوْا يَكْسِبُوْنَ ﴿٥٠﴾

**51.** ಇವರ ಪೂರ್ವಿಕರು ಹೀಗೆಯೇ ಹೇಳುತ್ತಿದ್ದರು. ಆದರೆ ಅವರು ಸಂಪಾದಿಸಿದ್ದು ಅವರ ಪ್ರಯೋಜನಕ್ಕೆ ಬರಲಿಲ್ಲ.

فَاَصَابَهُمْ سَيِّاٰتُ مَا كَسَبُوْا ۗ وَالَّذِيْنَ ظَلَمُوْا مِنْ هٰٓؤُلَآءِ سَيُصِيْبُهُمْ سَيِّاٰتُ مَا كَسَبُوْا ۙ وَمَا هُمْ بِمُعْجِزِيْنَ ﴿٥١﴾

**52.** ಆಗ ಅವರ ಕೃತ್ಯಗಳ ದುಷ್ಫಲಗಳಿಗೆ ಅವರು ಗುರಿಯಾದರು. (ಹಾಗೆಯೇ) ಇವರ ಪೈಕಿ ದುಷ್ಕರ್ಮಿಗಳು ಅವರ ಕೃತ್ಯಗಳ ದುಷ್ಫಲಗಳಿಗೆ ತುತ್ತಾಗುವರು. ಅಲ್ಲಾಹನ ಯೋಜನೆಯನ್ನು ಅವರು ಪರಾಜಯಗೊಳಿಸಲಾರರು.

أَوَلَمْ يَعْلَمُوٓا۟ أَنَّ ٱللَّهَ يَبْسُطُ ٱلرِّزْقَ
لِمَن يَشَآءُ وَيَقْدِرُ ۚ إِنَّ فِى ذَٰلِكَ
لَءَايَٰتٍ لِّقَوْمٍ يُؤْمِنُونَ ﴿٥٢﴾

**53. ಅಲ್ಲಾಹನು ತಾನಿಚ್ಛಿಸುವವರಿಗೆ ಆಹಾರವನ್ನು ಅಧಿಕಗೊಳಿಸುತ್ತಾನೆಂದೂ** (ತಾನಿಚ್ಛಿಸುವವರಿಗೆ ಅದನ್ನು) **ಮೊಟಕುಗೊಳಿಸುತ್ತಾನೆಂದೂ ಅವರಿಗೆ ಗೊತ್ತಿಲ್ಲವೇ? ದಿಟವಾಗಿಯೂ ಇದರಲ್ಲಿ ವಿಶ್ವಾಸಿಗಳಿಗೆ ದೃಷ್ಟಾಂತ ಗಳಿವೆ.**

قُلْ يَٰعِبَادِىَ ٱلَّذِينَ أَسْرَفُوا۟ عَلَىٰٓ
أَنفُسِهِمْ لَا تَقْنَطُوا۟ مِن رَّحْمَةِ ٱللَّهِ ۚ
إِنَّ ٱللَّهَ يَغْفِرُ ٱلذُّنُوبَ جَمِيعًا ۚ
إِنَّهُۥ هُوَ ٱلْغَفُورُ ٱلرَّحِيمُ ﴿٥٣﴾

**54.** (ನನ್ನ ಸಂದೇಶವಾಗಿ ಅವರೊಡನೆ) **ಹೇಳು: "ತಮ್ಮ ಸ್ವಂತ ಆತ್ಮಕ್ಕೆ ದ್ರೋಹವೆಸಗಿದ ನನ್ನ ದಾಸರೇ, ಅಲ್ಲಾಹನ ಕೃಪೆಯ ಬಗ್ಗೆ ನೀವು ನಿರಾಶೆಪಡಬೇಡಿರಿ. ಖಂಡಿತವಾಗಿಯೂ ಅಲ್ಲಾಹನು ನಿಮ್ಮ ಎಲ್ಲ ಅಪರಾಧ ಗಳನ್ನೂ ಕ್ಷಮಿಸುವನು. ನಿಶ್ಚಯವಾಗಿಯೂ ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

وَأَنِيبُوٓا۟ إِلَىٰ رَبِّكُمْ وَأَسْلِمُوا۟ لَهُۥ مِن
قَبْلِ أَن يَأْتِيَكُمُ ٱلْعَذَابُ ثُمَّ لَا
تُنصَرُونَ ﴿٥٤﴾

**55. "ಶಿಕ್ಷೆ ಬಂದೆರಗುವುದಕ್ಕಿಂತ ಮುಂಚಿತವಾಗಿ ನಿಮ್ಮ ಪ್ರಭುವಿನ ಕಡೆಗೆ ಮರಳಿರಿ ಮತ್ತು ಅವನಿಗೆ ಶರಣಾಗಿ ಜೀವಿಸಿರಿ.** (ಶಿಕ್ಷೆ ಬಂದೆರಗಿದರೆ) **ಆ ಬಳಿಕ ನಿಮಗೆ ಸಹಾಯಸಿಗಲಾರದು.**

وَٱتَّبِعُوٓا۟ أَحْسَنَ مَآ أُنزِلَ إِلَيْكُم مِّن
رَّبِّكُم مِّن قَبْلِ أَن يَأْتِيَكُمُ ٱلْعَذَابُ
بَغْتَةً وَأَنتُمْ لَا تَشْعُرُونَ ﴿٥٥﴾

**56. "ನೀವು ನಿರೀಕ್ಷಿಸದೆ ಇರುವಾಗ, ಹಠಾತ್ತಾಗಿ ನಿಮಗೆ ಶಿಕ್ಷೆ ಬಂದೆರಗುವುದಕ್ಕಿಂತ ಮುಂಚಿತವಾಗಿ, ನಿಮ್ಮ ಪ್ರಭುವಿನಿಂದ ಅವತೀರ್ಣವಾದ ಅತ್ಯುತ್ತಮ** ಉಪದೇಶ ವನ್ನು **ನೀವು ಅನುಸರಿಸಿರಿ.**

أَن تَقُولَ نَفْسٌ يَٰحَسْرَتَىٰ عَلَىٰ مَا فَرَّطتُ
فِى جَنۢبِ ٱللَّهِ وَإِن كُنتُ لَمِنَ
ٱلسَّٰخِرِينَ ﴿٥٦﴾

**57. " 'ಹಾ ದುರದೃಷ್ಟವೇ, ಅಲ್ಲಾಹನಿಗೆ ಸಂಬಂಧಿ ಸಿದ ಕರ್ತವ್ಯ ನಿರ್ವಹಣೆಯನ್ನು ನಾನು ಅಲಕ್ಷ್ಯಮಾಡಿದೆ. ನಾನು ಪರಿಹಾಸ್ಯಮಾಡುವವರಲ್ಲಿ ಸೇರಿಬಿಟ್ಟಿದ್ದೆ' ಎಂದು ಯಾವುದೇ ಆತ್ಮ ಪ್ರಲಾಪಿಸದಿರಲಿಕ್ಕೋಸ್ಕರ.**

أَوْ تَقُولَ لَوْ أَنَّ ٱللَّهَ هَدَىٰنِى لَكُنتُ
مِنَ ٱلْمُتَّقِينَ ﴿٥٧﴾

**58. "ಅಥವಾ, 'ಅಲ್ಲಾಹನು ನನ್ನನ್ನು ಸತ್ಪಥದಲ್ಲಿ ನಡೆಸಿದ್ದರೆ ಖಂಡಿತವಾಗಿಯೂ ನಾನು ಸದ್ಧರ್ಮಿಗಳಲ್ಲಿ ಸೇರಿದವನಾಗುತ್ತಿದ್ದೆ' ಎಂದು ಹೇಳದಿರಲಿಕ್ಕಾಗಿ.**

أَوْ تَقُولَ حِينَ تَرَى ٱلْعَذَابَ لَوْ أَنَّ

**59. "ಅಥವಾ ಅದು** (ಆತ್ಮ ಶಿಕ್ಷೆಯನ್ನು) **ಕಂಡಾಗ 'ಹಾ ನನಗೆ** (ಹಿಂದಿನ ಜೀವನಕ್ಕೆ) **ಒಮ್ಮೆ ಮರಳಿ ಹೋಗ**





لِى كَرَّةً فَأَكُونَ مِنَ ٱلْمُحْسِنِينَ ﴿٥٨﴾

**ಲಿಕ್ಕೆ ಅವಕಾಶ ಸಿಕ್ಕಿದ್ದರೆ ನಾನು ಸತ್ಕರ್ಮಿಗಳಲ್ಲಿ ಸೇರು ತ್ತಿದ್ದೆ!' ಎಂದು ಹೇಳದಿರಲಿಕ್ಕಾಗಿ."**

بَلَىٰ قَدْ جَآءَتْكَ ءَايَٰتِى فَكَذَّبْتَ بِهَا وَ
ٱسْتَكْبَرْتَ وَكُنتَ مِنَ ٱلْكَٰفِرِينَ ﴿٥٩﴾

**60.** (ಅಲ್ಲಾಹನು ಉತ್ತರಿಸುವನು:) **'ಹಾಗಾಗದು, ನನ್ನ ದೃಷ್ಟಾಂತಗಳು ನಿನ್ನ ಬಳಿಗೆ ಬಂದಿದ್ದವು. ಅವು ಗಳನ್ನು ನೀನು ಸುಳ್ಳಾಗಿಸಿದ್ದೆ; ಅಹಂಭಾವ ತೋರಿಸಿದ್ದೆ. ನೀನು ಅವಿಶ್ವಾಸಿಗಳಲ್ಲಿ ಸೇರಿದವನಾಗಿದ್ದೆ.'**

وَيَوْمَ ٱلْقِيَٰمَةِ تَرَى ٱلَّذِينَ كَذَبُوا۟
عَلَى ٱللَّهِ وُجُوهُهُم مُّسْوَدَّةٌ ۚ أَلَيْسَ
فِى جَهَنَّمَ مَثْوًى لِّلْمُتَكَبِّرِينَ ﴿٦٠﴾

**61. ಅಲ್ಲಾಹನ ಬಗ್ಗೆ ಸುಳ್ಳುಹೇಳಿದವರನ್ನು, ಪುನರು ತ್ಥಾನ ದಿನದಂದು ಅವರ ಮುಖಗಳು ಕಪ್ಪಿಟ್ಟಿರುವುದಾಗಿ ನೀನು ಕಾಣುವೆ. ಏನು, ಅಹಂಕಾರಿಗಳ ವಾಸಸ್ಥಳ ನರಕದ ಲ್ಲಲ್ಲವೇ?**

وَيُنَجِّى ٱللَّهُ ٱلَّذِينَ ٱتَّقَوْا۟
بِمَفَازَتِهِمْ لَا يَمَسُّهُمُ ٱلسُّوٓءُ وَلَا
هُمْ يَحْزَنُونَ ﴿٦١﴾

**62. ಸದ್ಧರ್ಮಿಗಳನ್ನು ಅಲ್ಲಾಹನು ಸಂರಕ್ಷಿಸಿ ಅವರ ನ್ನು ವಿಜಯದೆಡೆಗೆ ಕೊಂಡೊಯ್ಯುವನು. ಕೆಡುಕು ಅವರನ್ನು ಸ್ಪರ್ಶಿಸದು. ಅವರು ವ್ಯಥೆಪಡಲಾರರು.**

ٱللَّهُ خَٰلِقُ كُلِّ شَىْءٍ ۖ وَهُوَ عَلَىٰ كُلِّ
شَىْءٍ وَكِيلٌ ﴿٦٢﴾

**63. ಅಲ್ಲಾಹನು ಸರ್ವ ವಸ್ತುಗಳ ಸೃಷ್ಟಿಕರ್ತನು. ಸಕಲ ವಸ್ತುಗಳ ಸಂರಕ್ಷಕನೂ ಅವನೇ.**

لَّهُۥ مَقَالِيدُ ٱلسَّمَٰوَٰتِ وَٱلْأَرْضِ ۗ
وَٱلَّذِينَ كَفَرُوا۟ بِـَٔايَٰتِ ٱللَّهِ
أُو۟لَٰٓئِكَ هُمُ ٱلْخَٰسِرُونَ ﴿٦٣﴾

**64. ಆಕಾಶಗಳ ಮತ್ತು ಭೂಮಿಯ ಕೀಲಿಗೈಗಳು ಅವನದ್ದಾಗಿವೆ. ಯಾರು ಅಲ್ಲಾಹನ ದೃಷ್ಟಾಂತಗಳನ್ನು ನಂಬುವುದಿಲ್ಲವೋ, ಅವರೇ ನಷ್ಟಹೊಂದಿದವರು.**

قُلْ أَفَغَيْرَ ٱللَّهِ تَأْمُرُوٓنِّىٓ أَعْبُدُ
أَيُّهَا ٱلْجَٰهِلُونَ ﴿٦٤﴾

**65. ಹೇಳು: 'ಎಲೈ ಅಜ್ಞಾನಿಗಳೇ, ಅಲ್ಲಾಹೇತರರನ್ನು ಆರಾಧಿಸಬೇಕೆಂದೋ ನೀವು ನನಗೆ ಆದೇಶಿಸುವುದು?'**

وَلَقَدْ أُوحِىَ إِلَيْكَ وَإِلَى ٱلَّذِينَ مِن
قَبْلِكَ لَئِنْ أَشْرَكْتَ لَيَحْبَطَنَّ عَمَلُكَ
وَلَتَكُونَنَّ مِنَ ٱلْخَٰسِرِينَ ﴿٦٥﴾

**66. ನಿಜವಾಗಿಯೂ ನಿನಗೂ ನಿನ್ನ ಪೂರ್ವಿಕರಿಗೂ** (ಹೀಗೆ) **ದಿವ್ಯ ಸಂದೇಶ ನೀಡಲ್ಪಟ್ಟಿದೆ: 'ನೀನು** (ಅಲ್ಲಾಹ ನಿಗೆ) **ಸಹಭಾಗಿಗಳನ್ನು ಕಲ್ಪಿಸಿದರೆ, ನಿನ್ನ ಕರ್ಮಗಳೆಲ್ಲ ವ್ಯರ್ಥವಾಗುವುವು ಮತ್ತು ನೀನು ನಷ್ಟಹೊಂದಿದವರಲ್ಲಿ ಸೇರಿದವನಾಗುವೆ.'**

**67.** ಅಂತೂ, ನೀನು ಅಲ್ಲಾಹನನ್ನು ಮಾತ್ರ ಆರಾಧಿಸಿ ಕೃತಜ್ಞತೆ ತೋರಿಸುವವರಲ್ಲಿ ಸೇರು.

بَلِ اللّٰهَ فَاعْبُدْ وَكُنْ مِّنَ الشّٰكِرِيْنَ ٦٦

**68.** ಅಲ್ಲಾಹನನ್ನು ಗೌರವಿಸಬೇಕಾದ ರೀತಿಯಲ್ಲಿ ಅವರು ಗೌರವಿಸಲಿಲ್ಲ. ಪುನರುತ್ಥಾನ ದಿನದಂದು ಭೂಮಿಯಿಡೀ ಅವನ ಹಿಡಿತದಲ್ಲಿರುವುದು. ಆಕಾಶಗಳು ಅವನ ಬಲಗೈಯಿಂದ ಸುರುಳಿ ಸುತ್ತಲ್ಪಟ್ಟಿರುವುವು. ಅವರು ಸಹಭಾಗಿಗಳನ್ನು ಕಲ್ಪಿಸುವುದರಿಂದೆಲ್ಲ ಅವನು ಪರಿಶುದ್ಧನೂ ಮಹೋನ್ನತನೂ ಆಗಿದ್ದಾನೆ.

وَمَا قَدَرُوا اللّٰهَ حَقَّ قَدْرِهٖ ۖ وَالْاَرْضُ جَمِيْعًا قَبْضَتُهٗ يَوْمَ الْقِيٰمَةِ وَالسَّمٰوٰتُ مَطْوِيّٰتٌۢ بِيَمِيْنِهٖ ؕ سُبْحٰنَهٗ وَتَعٰلٰى عَمَّا يُشْرِكُوْنَ ٦٧

**69.** ಕಹಳೆ ಊದಲ್ಪಡುವುದು. ಆಗ ಅಲ್ಲಾಹನು ಇಚ್ಛಿಸಿದವರನ್ನು ಹೊರತುಪಡಿಸಿ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವವರು (ಎಲ್ಲರೂ) ಮೂರ್ಛಿತರಾಗಿ ಬೀಳುವರು. ಪುನಃ ಅದು ಊದಲ್ಪಡುವುದು. ಆಗ ಅದೋ ಅವರು ಎದ್ದುನಿಂತು ನೋಡುತ್ತಾ ಇರುವರು.

وَنُفِخَ فِى الصُّوْرِ فَصَعِقَ مَنْ فِى السَّمٰوٰتِ وَمَنْ فِى الْاَرْضِ اِلَّا مَنْ شَآءَ اللّٰهُ ؕ ثُمَّ نُفِخَ فِيْهِ اُخْرٰى فَاِذَا هُمْ قِيَامٌ يَّنْظُرُوْنَ ٦٨

**70.** ಭೂಮಿ ಅದರ ಪ್ರಭುವಿನ ಪ್ರಕಾಶದಿಂದ ಬೆಳಗುವುದು. ಗ್ರಂಥವನ್ನು ಅವರ ಮುಂದೆ ಇಡಲಾಗುವುದು. ಪ್ರವಾದಿಗಳನ್ನೂ ಸಾಕ್ಷಿಗಳನ್ನೂ ಕರೆತರಲಾಗುವುದು. ಅವರ ಮಧ್ಯೆ ನ್ಯಾಯಯುತವಾಗಿ ತೀರ್ಮಾನಿಸಲಾಗುವುದು. ಅವರಿಗೆ ಅನ್ಯಾಯ ವೆಸಗಲಾಗದು.

وَاَشْرَقَتِ الْاَرْضُ بِنُوْرِ رَبِّهَا وَوُضِعَ الْكِتٰبُ وَجِاۡىۡٓءَ بِالنَّبِيّٖنَ وَالشُّهَدَآءِ وَقُضِىَ بَيْنَهُمْ بِالْحَقِّ وَهُمْ لَا يُظْلَمُوْنَ ٦٩

**71.** ಪ್ರತಿಯೊಂದು ಆತ್ಮಕ್ಕೂ ಅದರ ಕರ್ಮಕ್ಕೆ ತಕ್ಕ ಪ್ರತಿಫಲ ಪೂರ್ಣವಾಗಿಯೂ ನೀಡಲಾಗುವುದು. ಅವರ ಕೃತ್ಯಗಳ ಕುರಿತು ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.

وَوُفِّيَتْ كُلُّ نَفْسٍ مَّا عَمِلَتْ وَهُوَ اَعْلَمُ بِمَا يَفْعَلُوْنَ ٧٠ ع

**72.** ಅವಿಶ್ವಾಸಿಗಳನ್ನು ಗುಂಪುಗುಂಪಾಗಿ ನರಕದೆಡೆಗೆ ಕೊಂಡೊಯ್ಯಲಾಗುವುದು. ಹಾಗೆ ಅವರು ಅಲ್ಲಿಗೆ ತಲಪಿದರೆ ಅದರ ಬಾಗಿಲುಗಳು ತೆರೆಯಲ್ಪಡು ವುವು. ಅದರ ಕಾವಲುಗಾರರು ಅವರೊಡನೆ, 'ನಿಮ್ಮ ಪ್ರಭುವಿನ ದೃಷ್ಟಾಂತಗಳನ್ನು ನಿಮಗೆ ವಿವರಿಸಿಕೊಡುವ ಮತ್ತು ಈ ದಿನವನ್ನು ನೀವು ಸಂಧಿಸುವಿರೆಂದು ನಿಮಗೆ

وَسِيْقَ الَّذِيْنَ كَفَرُوْٓا اِلٰى جَهَنَّمَ زُمَرًا ؕ حَتّٰٓى اِذَا جَآءُوْهَا فُتِحَتْ اَبْوَابُهَا وَقَالَ لَهُمْ خَزَنَتُهَآ اَلَمْ يَاْتِكُمْ رُسُلٌ مِّنْكُمْ يَتْلُوْنَ عَلَيْكُمْ





ಮುನ್ನೆಚ್ಚರಿಕೆ ನೀಡುವ ನಿಮ್ಮ ಪೈಕಿಯ ಸಂದೇಶ ವಾಹಕರು ನಿಮ್ಮ ಬಳಿಗೆ ಆಗಮಿಸಿರಲಿಲ್ಲವೇ? ಎಂದು ಕೇಳುವರು. ಆಗ ಅವರು, 'ಹೌದು (ಆಗಮಿಸಿದ್ದರು) ಆದರೆ ಶಿಕ್ಷೆಗೆ ಸಂಬಂಧಿಸಿದ ವಚನ ಅವಿಶ್ವಾಸಿಗಳ ಮೇಲೆ ಈಡೇರಬೇಕಾಗಿತ್ತಲ್ಲವೇ?' ಎಂದು ಉತ್ತರಿಸುವರು.

اٰيٰتِ رَبِّكُمْ وَيُنْذِرُوْنَكُمْ لِقَآءَ يَوْمِكُمْ هٰذَا ؕ قَالُوْا بَلٰى وَلٰكِنْ حَقَّتْ كَلِمَةُ الْعَذَابِ عَلَى الْكٰفِرِيْنَ ٧١

**73.** ಆಗ, 'ನರಕದ ಬಾಗಿಲುಗಳೊಳಗೆ ಪ್ರವೇಶಿಸಿರಿ. ಅಲ್ಲೇ ವಾಸಿಸಿರಿ' ಎಂದು ಹೇಳಲಾಗುವುದು. ದುರಹಂಕಾರಿಗಳ ವಾಸಸ್ಥಳ ಅದೆಷ್ಟು ನಿಕೃಷ್ಟ!

قِيْلَ ادْخُلُوْٓا اَبْوَابَ جَهَنَّمَ خٰلِدِيْنَ فِيْهَا ۚ فَبِئْسَ مَثْوَى الْمُتَكَبِّرِيْنَ ٧٢

**74.** ತಮ್ಮ ಪ್ರಭುವಿನ ಭಯಭಕ್ತಿಯಿರಿಸಿ ಕೊಂಡವರನ್ನು ಗುಂಪು ಗುಂಪಾಗಿ ಸ್ವರ್ಗದ ಕಡೆಗೆ ಕೊಂಡೊಯ್ಯಲಾಗುವುದು.ಆಗ ಅದರ ಬಾಗಿಲುಗಳು ತೆರೆಯಲ್ಪಡುವುವು. ಅದರ ಕಾವಲುಗಾರರು, ನಿಮ್ಮ ಮೇಲೆ ಶಾಂತಿಯಿರಲಿ. ನೀವು ಸಂತೋಷಪಡಿರಿ. ಶಾಶ್ವತವಾದ ವಾಸಕ್ಕಾಗಿ ಇದರೊಳಗೆ ಪ್ರವೇಶಿಸಿರಿ ಎಂದು ಹೇಳುವರು.

وَسِيْقَ الَّذِيْنَ اتَّقَوْا رَبَّهُمْ اِلَى الْجَنَّةِ زُمَرًا ؕ حَتّٰٓى اِذَا جَآءُوْهَا وَفُتِحَتْ اَبْوَابُهَا وَقَالَ لَهُمْ خَزَنَتُهَا سَلٰمٌ عَلَيْكُمْ طِبْتُمْ فَادْخُلُوْهَا خٰلِدِيْنَ ٧٣

**75.** ಅವರು, 'ತನ್ನ ವಾಗ್ದಾನವನ್ನು ಈಡೇರಿಸಿ ಕೊಟ್ಟ ಹಾಗೂ ನಮ್ಮನ್ನು ಈ ಸ್ಥಳದ ವಾರೀಸು ದಾರರನ್ನಾಗಿ ಮಾಡಿದ, ಸ್ವರ್ಗದಲ್ಲಿ ನಾವು ಇಚ್ಛಿಸುವ ಸ್ಥಳದಲ್ಲಿ ವಾಸಹೂಡಲು ನಮಗೆ ಅವಕಾಶ ಮಾಡಿಕೊಟ್ಟ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು' ಎಂದು ಹೇಳುವರು. ಸತ್ಕರ್ಮಿಗಳಿಗಿರುವ ಪ್ರತಿಫಲ ಅದೆಷ್ಟು ಉತ್ಕೃಷ್ಟ!

وَقَالُوا الْحَمْدُ لِلّٰهِ الَّذِىْ صَدَقَنَا وَعْدَهٗ وَاَوْرَثَنَا الْاَرْضَ نَتَبَوَّاُ مِنَ الْجَنَّةِ حَيْثُ نَشَآءُ ۚ فَنِعْمَ اَجْرُ الْعٰمِلِيْنَ ٧٤

**76.** ತಮ್ಮ ಪ್ರಭುವಿನ ಮಹತ್ವವನ್ನು ಕೊಂಡಾಡುತ್ತಾ ಅವನ ಪರಿಶುದ್ಧತೆಯನ್ನು ಹಾಡಿಹೊಗಳುವ ದೇವದೂತರು (ಅಲ್ಲಾಹನ) ಸಿಂಹಾಸನವನ್ನು ಸುತ್ತುವರಿದಿರುವುದನ್ನು ನೀನು ಕಾಣುವೆ. ಅವರ (ಮನುಷ್ಯರ) ಮಧ್ಯೆ ನ್ಯಾಯಯುತವಾಗಿ ತೀರ್ಮಾನಿಸಲಾಗುವುದು. ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಸಲ್ಲುತ್ತವೆ ಎಂದು ಹೇಳಲಾಗುವುದು.

وَتَرَى الْمَلٰٓئِكَةَ حَآفِّيْنَ مِنْ حَوْلِ الْعَرْشِ يُسَبِّحُوْنَ بِحَمْدِ رَبِّهِمْ ۚ وَقُضِىَ بَيْنَهُمْ بِالْحَقِّ وَقِيْلَ الْحَمْدُ لِلّٰهِ رَبِّ الْعٰلَمِيْنَ ٧٥ ع

سُورَةُ الْمُؤْمِنِ مَكِّيَّةٌ وَهِيَ مَعَ الْبَسْمَلَةِ سِتٌّ وَثَمَانُونَ آيَةً وَتِسْعُ رُكُوعَاتٍ

# 40. ಅಲ್‌ಮುಅ್‌ಮಿನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 86 ಆಯತ್‌ಗಳು ಹಾಗೂ 9 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಹಾ ಮೀಂ.**[401]

حٰمٓ ﴿٢﴾

**3. ಪ್ರತಾಪಶಾಲಿಯೂ ಸರ್ವಜ್ಞನೂ ಆದ ಅಲ್ಲಾಹನಿಂದ ಈ ಗ್ರಂಥ ಅವತೀರ್ಣಗೊಂಡಿದೆ.**

تَنْزِيْلُ الْكِتٰبِ مِنَ اللّٰهِ الْعَزِيْزِ الْعَلِيْمِ ﴿٣﴾

**4.** (ಅವನು) **ಪಾಪವನ್ನು ಕ್ಷಮಿಸುವವನೂ ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಕಠಿಣವಾಗಿ ಶಿಕ್ಷಿಸುವವನೂ ಔದಾರ್ಯವಂತನೂ ಆಗಿದ್ದಾನೆ. ಅವನ ಹೊರತು ಬೇರೆ ಆರಾಧ್ಯನಿಲ್ಲ. ಕೊನೆಯ ಮರಳಿಕೆ ಅವನ ಬಳಿಗೆಯೇ ಆಗಿದೆ.**

غَافِرِ الذَّنْبِ وَقَابِلِ التَّوْبِ شَدِيْدِ الْعِقَابِ ۙ ذِي الطَّوْلِ ۭ لَآ اِلٰهَ اِلَّا هُوَ ۭ اِلَيْهِ الْمَصِيْرُ ﴿٤﴾

**5. ಅವಿಶ್ವಾಸಿಗಳ ಹೊರತು ಬೇರೆ ಯಾರೂ ಅಲ್ಲಾಹನ ದೃಷ್ಟಾಂತಗಳ ಬಗ್ಗೆ ವಾಗ್ವಾದ ಮಾಡುವುದಿಲ್ಲ. ಆದ್ದರಿಂದ ನಾಡಿನಲ್ಲೆಲ್ಲೂ ಇರುವ ಅವರ ತಿರುಗಾಟ ನಿನ್ನನ್ನು ಮೋಸಗೊಳಿಸದಿರಲಿ.**

مَا يُجَادِلُ فِيْٓ اٰيٰتِ اللّٰهِ اِلَّا الَّذِيْنَ كَفَرُوْا فَلَا يَغْرُرْكَ تَقَلُّبُهُمْ فِي الْبِلَادِ ﴿٥﴾

**6. ಇವರಿಗಿಂತ ಮುಂಚೆ ನೂಹ್‌ರ ಜನತೆ ಮತ್ತು ಅವರ ಬಳಿಕ ಬೇರೆ ಹಲವು ಪಂಗಡಗಳು** (ನಮ್ಮ ದೃಷ್ಟಾಂತಗಳನ್ನು) **ಸುಳ್ಳಾಗಿಸಿವೆ. ಪ್ರತಿಯೊಂದು ಜನಾಂಗದವರು ತಮ್ಮ ಪ್ರವಾದಿಯನ್ನು ಸೆರೆಹಿಡಿಯಲು**

كَذَّبَتْ قَبْلَهُمْ قَوْمُ نُوْحٍ وَّالْاَحْزَابُ مِنْۢ بَعْدِهِمْ ۠ وَهَمَّتْ كُلُّ

401. ಹಾ=ಹಮೀದ್ (ಸ್ತುತ್ಯರ್ಹನು). ಮೀಂ=ಮಜೀದ್ (ಮಹಾಮಹಿಮನು). ಖುರ್‌ಆನನ್ನು ಅವತೀರ್ಣಗೊಳಿಸಿದ ಅಲ್ಲಾಹನು ಸ್ತುತ್ಯರ್ಹನೂ ಮಹಾಮಹಿಮನೂ ಆಗಿದ್ದಾನೆಂದು ಈ ಅಧ್ಯಾಯದ ಸಾರಾಂಶ ರುಜುಪಡಿಸುತ್ತದೆ ಎಂದರ್ಥ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**ಪ್ರಯತ್ನಿಸಿದರು. ಅವರು ಸುಳ್ಳು ವಾಗ್ವಾದ ಮಾಡುತ್ತಾ ಆ ಮೂಲಕ ಸತ್ಯವನ್ನು ಹಿಮ್ಮೆಟ್ಟಿಸಲು ಶ್ರಮಿಸಿದರು. ಆದ್ದರಿಂದ ನಾನು ಅವರನ್ನು ಸೆರೆಹಿಡಿದೆನು. ನನ್ನ ಶಿಕ್ಷೆ ಅದೆಷ್ಟು ಕಠೋರ!**

اُمَّةٍۢ بِرَسُوْلِهِمْ لِيَاْخُذُوْهُ وَجٰدَلُوْا بِالْبَاطِلِ لِيُدْحِضُوْا بِهِ الْحَقَّ فَاَخَذْتُهُمْ ۣ فَكَيْفَ كَانَ عِقَابِ ﴿٦﴾

**7. ಅವಿಶ್ವಾಸಿಗಳ ಕುರಿತು, ಅವರು ನರಕವಾಸಿಗಳು ಎಂಬ ನಿನ್ನ ಪ್ರಭುವಿನ ವಚನ ಆ ರೀತಿ ಸತ್ಯವಾಗಿ ಸಾಬೀತಾಯಿತು.**

وَكَذٰلِكَ حَقَّتْ كَلِمَتُ رَبِّكَ عَلَى الَّذِيْنَ كَفَرُوْٓا اَنَّهُمْ اَصْحٰبُ النَّارِ ﴿٧﴾

**8. ಸಿಂಹಾಸನವನ್ನು ಹೊತ್ತುಕೊಂಡಿರುವವರು ಮತ್ತು ಅದರ ಸುತ್ತುಮುತ್ತಲಿರುವವರು ತಮ್ಮ ಪ್ರಭುವಿನ ಸ್ತುತಿಕೀರ್ತನೆ ಮಾಡುತ್ತಾರೆ, ಅವನ ಮೇಲೆ ವಿಶ್ವಾಸವಿಡುತ್ತಾರೆ ಮತ್ತು ಸತ್ಯವಿಶ್ವಾಸಿಗಳ ಪಾಪವಿಮುಕ್ತಿಗೋಸ್ಕರ** (ಹೀಗೆ) **ಪ್ರಾರ್ಥಿಸುತ್ತಾರೆ: 'ನಮ್ಮ ಪ್ರಭೂ, ಕೃಪೆ ಮತ್ತು ಜ್ಞಾನದಿಂದ ನೀನು ಸರ್ವ ವಸ್ತುಗಳಲ್ಲೂ ವ್ಯಾಪಿಸಿರುವೆ. ಆದ್ದರಿಂದ ಪಶ್ಚಾತ್ತಾಪಪಟ್ಟುಕೊಂಡು ನಿನ್ನ ಪಥವನ್ನು ಅನುಸರಿಸುವವರಿಗೆ ನೀನು ಕ್ಷಮೆ ನೀಡು. ನರಕದ ಶಿಕ್ಷೆಯಿಂದ ನೀನು ಅವರನ್ನು ಕಾಪಾಡು.**

اَلَّذِيْنَ يَحْمِلُوْنَ الْعَرْشَ وَمَنْ حَوْلَهٗ يُسَبِّحُوْنَ بِحَمْدِ رَبِّهِمْ وَيُؤْمِنُوْنَ بِهٖ وَيَسْتَغْفِرُوْنَ لِلَّذِيْنَ اٰمَنُوْا ۚ رَبَّنَا وَسِعْتَ كُلَّ شَيْءٍ رَّحْمَةً وَّعِلْمًا فَاغْفِرْ لِلَّذِيْنَ تَابُوْا وَاتَّبَعُوْا سَبِيْلَكَ وَقِهِمْ عَذَابَ الْجَحِيْمِ ﴿٨﴾

**9. 'ನಮ್ಮ ಪ್ರಭೂ, ನೀನು ಅವರಿಗೆ ವಾಗ್ದಾನವಿತ್ತ ಶಾಶ್ವತ ವಾಸಸ್ಥಳವಾದ ಸ್ವರ್ಗದಲ್ಲಿ ನೀನು ಅವರಿಗೆ ಪ್ರವೇಶನೀಡು. ಅವರ ತಂದೆತಾತಂದಿರಲ್ಲಿ, ಜೀವನ ಸಂಗಾತಿಗಳಲ್ಲಿ ಮತ್ತು ಸಂತಾನಗಳಲ್ಲಿ ಸತ್ಕರ್ಮಿಗಳಿಗೆ ಸಹ** (ನೀನು ಸ್ವರ್ಗದಲ್ಲಿ ಪ್ರವೇಶನೀಡು). **ನಿಸ್ಸಂಶಯವಾಗಿಯೂ ನೀನು ಪ್ರತಾಪವಂತನೂ ವಿವೇಕಶಾಲಿಯೂ ಆಗಿರುವೆ.**

رَبَّنَا وَاَدْخِلْهُمْ جَنّٰتِ عَدْنِ ۨ الَّتِيْ وَعَدْتَّهُمْ وَمَنْ صَلَحَ مِنْ اٰبَآئِهِمْ وَاَزْوَاجِهِمْ وَذُرِّيّٰتِهِمْ ۭ اِنَّكَ اَنْتَ الْعَزِيْزُ الْحَكِيْمُ ﴿٩﴾

**10. 'ಕೆಡುಕುಗಳಿಂದ ನೀನು ಅವರನ್ನು ಪಾರುಮಾಡು. ಆ ದಿನದಂದು ನೀನು ಯಾರನ್ನು ಕೆಡುಕುಗಳಿಂದ ಪಾರುಮಾಡುತ್ತೀಯೋ ಖಚಿತವಾಗಿಯೂ ನೀನು ಅವನಿಗೆ ದಯೆದೋರಿದಂತೆಯೇ ಸರಿ. ಅದೇ ಮಹಾ ಯಶಸ್ಸು.'**

وَقِهِمُ السَّيِّاٰتِ ۭ وَمَنْ تَقِ السَّيِّاٰتِ يَوْمَئِذٍ فَقَدْ رَحِمْتَهٗ ۭ وَذٰلِكَ هُوَ الْفَوْزُ الْعَظِيْمُ ﴿١٠﴾

إِنَّ الَّذِينَ كَفَرُوا يُنَادَوْنَ لَمَقْتُ اللَّهِ أَكْبَرُ مِن مَّقْتِكُمْ أَنفُسَكُمْ إِذْ تُدْعَوْنَ إِلَى الْإِيمَانِ فَتَكْفُرُونَ ﴿١١﴾

**11.** ಖಂಡಿತವಾಗಿಯೂ ಅವಿಶ್ವಾಸಿಗಳನ್ನು ಕರೆದು (ಹೀಗೆ) ಹೇಳಲಾಗುವುದು: 'ನಿಮ್ಮನ್ನು ಸತ್ಯವಿಶ್ವಾಸದೆಡೆಗೆ ಆಹ್ವಾನಿಸಿ ನೀವು ಅದನ್ನು ನಿರಾಕರಿಸಿದಾಗ ಅಲ್ಲಾಹನಿಗೆ ಉಂಟಾದ ಕೋಪ ನಿಮಗೆ ಪರಸ್ಪರವಿರುವ ಕೋಪಕ್ಕಿಂತ ಬಹಳ ಹೆಚ್ಚಾಗಿದೆ.'

قَالُوا رَبَّنَا أَمَتَّنَا اثْنَتَيْنِ وَأَحْيَيْتَنَا اثْنَتَيْنِ فَاعْتَرَفْنَا بِذُنُوبِنَا فَهَلْ إِلَىٰ خُرُوجٍ مِّن سَبِيلٍ ﴿١٢﴾

**12.** ಅವರು ಹೇಳುವರು: 'ನಮ್ಮ ಪ್ರಭೂ, ನೀನು ನಮ್ಮನ್ನು ಎರಡು ಸಲ ಮರಣಪಡಿಸಿದೆ; ಎರಡು ಸಲ ಜೀವಂತಗೊಳಿಸಿದೆ. ನಾವು ನಮ್ಮ ಪಾಪಗಳನ್ನು ಒಪ್ಪಿಕೊಳ್ಳುತ್ತೇವೆ. (ಈಗ ಇದರಿಂದ) ಬಿಡುಗಡೆ ಹೊಂದುವ ಮಾರ್ಗವೇನಾದರೂ ಇದೆಯೇ?'

ذَٰلِكُم بِأَنَّهُ إِذَا دُعِيَ اللَّهُ وَحْدَهُ كَفَرْتُمْ ۖ وَإِن يُشْرَكْ بِهِ تُؤْمِنُوا ۚ فَالْحُكْمُ لِلَّهِ الْعَلِيِّ الْكَبِيرِ ﴿١٣﴾

**13.** ಇದೇಕೆಂದರೆ, ಅಲ್ಲಾಹನು ಏಕನೆಂದು ಘೋಷಿಸಲ್ಪಟ್ಟಾಗ ನೀವು ನಿರಾಕರಿಸಿದಿರಿ ಮತ್ತು ಅವನಿಗೆ ಸಹಭಾಗಿಗಳಿದ್ದಾರೆಂದು (ಹೇಳಲ್ಪಟ್ಟಾಗ) ನೀವು (ಅದನ್ನು) ನಂಬಿದಿರಿ. ಆದ್ದರಿಂದ ಅತ್ಯುನ್ನತನೂ ಮಹತ್ವವುಳ್ಳವನೂ ಆದ ಅಲ್ಲಾಹನಿಗೆ ತೀರ್ಮಾನ ಮಾಡುವ ಅಧಿಕಾರವಿದೆ.

هُوَ الَّذِي يُرِيكُمْ آيَاتِهِ وَيُنَزِّلُ لَكُم مِّنَ السَّمَاءِ رِزْقًا ۚ وَمَا يَتَذَكَّرُ إِلَّا مَن يُنِيبُ ﴿١٤﴾

**14.** ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸಿ ಕೊಡುವವನು ಮತ್ತು ಆಕಾಶದಿಂದ ನಿಮಗೆ ಆಹಾರವನ್ನು ಇಳಿಸಿಕೊಡುವವನು ಅವನೇ ಆಗಿದ್ದಾನೆ. ಆದರೆ (ದೇವನೆಡೆಗೆ) ತಿರುಗುವವನ ಹೊರತು ಬೇರೆ ಯಾರೂ ಲಕ್ಷ್ಯಗೊಡುವುದಿಲ್ಲ.

فَادْعُوا اللَّهَ مُخْلِصِينَ لَهُ الدِّينَ وَلَوْ كَرِهَ الْكَافِرُونَ ﴿١٥﴾

**15.** ಆದ್ದರಿಂದ ಪ್ರಾಮಾಣಿಕವಾದ ವಿಧೇಯತೆಯನ್ನು ಅಲ್ಲಾಹನಿಗೆ ಮಾತ್ರ ಅರ್ಪಿಸುತ್ತಾ ಅವನನ್ನು ಕರೆದು ಪ್ರಾರ್ಥಿಸಿರಿ. ಅವಿಶ್ವಾಸಿಗಳು ಅದನ್ನು ಇಷ್ಟಪಡದಿದ್ದರೂ ಸರಿ.

رَفِيعُ الدَّرَجَاتِ ذُو الْعَرْشِ يُلْقِي الرُّوحَ مِنْ أَمْرِهِ عَلَىٰ مَن يَشَاءُ مِنْ عِبَادِهِ لِيُنذِرَ يَوْمَ التَّلَاقِ ﴿١٦﴾

**16.** ಸ್ಥಾನಗಳನ್ನು ಮೇಲೆತ್ತುವವನು; ಸಿಂಹಾಸನದ ಅಧಿಪತಿ. ಅವನು ತನ್ನ ಆಜ್ಞೆಯ ಪ್ರಕಾರ ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ತನ್ನ ದಿವ್ಯ ವಚನವನ್ನು ಅವತೀರ್ಣಗೊಳಿಸುತ್ತಾನೆ - ಪರಸ್ಪರ ಸಂದಿಸುವ ದಿನದ ಬಗ್ಗೆ ಅವನು ಮುನ್ನೆಚ್ಚರಿಕೆ ನೀಡುವ ಉದ್ದೇಶದಿಂದ.





يَوْمَ هُم بَارِزُونَ ۖ لَا يَخْفَىٰ عَلَى اللَّهِ مِنْهُمْ شَيْءٌ ۚ لِّمَنِ الْمُلْكُ الْيَوْمَ ۖ لِلَّهِ الْوَاحِدِ الْقَهَّارِ ﴿١٧﴾

**17.** (ಅವರೆಲ್ಲರೂ) ಹೊರಗೆ ಬರುವ ದಿನದಂದು, ಅವರಿಗೆ ಸಂಬಂಧಿಸಿದ ಯಾವುದೇ ವಿಚಾರ ಅಲ್ಲಾಹನಿಂದ ಮರೆಯಾಗಿರದು. ಆ ದಿನ ಆಧಿಪತ್ಯ ಯಾರಿಗಿದೆ? ಏಕನೂ ಸರ್ವಾಧಿಪತಿಯೂ ಆದ ಅಲ್ಲಾಹನಿಗೆ.

الْيَوْمَ تُجْزَىٰ كُلُّ نَفْسٍ بِمَا كَسَبَتْ ۚ لَا ظُلْمَ الْيَوْمَ ۚ إِنَّ اللَّهَ سَرِيعُ الْحِسَابِ ﴿١٨﴾

**18.** ಅಂದು ಪ್ರತಿಯೊಂದು ಆತ್ಮಕ್ಕೆ ಅದರ ಕರ್ಮಕ್ಕೆ ತಕ್ಕ ಪ್ರತಿಫಲ ಲಭಿಸುವುದು. ಅಂದು ಅನ್ಯಾಯವೇನೂ ಆಗಲಾರದು. ನಿಶ್ಚಯವಾಗಿಯೂ ಅಲ್ಲಾಹನು ತ್ವರಿತವಾಗಿ ವಿಚಾರಣೆ ನಡೆಸುವವನಾಗಿದ್ದಾನೆ.

وَأَنذِرْهُمْ يَوْمَ الْآزِفَةِ إِذِ الْقُلُوبُ لَدَى الْحَنَاجِرِ كَاظِمِينَ ۚ مَا لِلظَّالِمِينَ مِنْ حَمِيمٍ وَلَا شَفِيعٍ يُطَاعُ ﴿١٩﴾

**19.** ಸಮೀಪಿಸುತ್ತಿರುವ ಒಂದು ವಿಪತ್ತಿನ ದಿನದ ಬಗ್ಗೆ ನೀನು ಅವರಿಗೆ ಮುನ್ನೆಚ್ಚರಿಕೆ ನೀಡು. ಆ ಸಂದರ್ಭದಲ್ಲಿ, ಅವರು ತಮ್ಮ ದುಃಖವನ್ನು ಅದುಮಿಡಲು ಪ್ರಯತ್ನಿಸುವಾಗ ಅವರ ಹೃದಯಗಳು ಗಂಟಲುಗಳನ್ನು ತಲಪುವುವು. ದುಷ್ಕರ್ಮಿಗಳಿಗೆ ಅಂದು ಮಿತ್ರನಾಗಿ ಯಾರೂ ಇರಲಿಕ್ಕಿಲ್ಲ. ಅಂಗೀಕಾರಾರ್ಹ ಶಿಫಾರಸುಗಾರನೂ ಇರಲಾರ.

يَعْلَمُ خَائِنَةَ الْأَعْيُنِ وَمَا تُخْفِي الصُّدُورُ ﴿٢٠﴾

**20.** ಕಣ್ಣುಗಳ ಮೋಸವನ್ನೂ ಹೃದಯಗಳ ಅಡಗಿಸುವಿಕೆಯನ್ನೂ ಅವನು ಅರಿಯುವನು.

وَاللَّهُ يَقْضِي بِالْحَقِّ ۖ وَالَّذِينَ يَدْعُونَ مِن دُونِهِ لَا يَقْضُونَ بِشَيْءٍ ۗ إِنَّ اللَّهَ هُوَ السَّمِيعُ الْبَصِيرُ ﴿٢١﴾

**21.** ಅಲ್ಲಾಹನು ನ್ಯಾಯಯುತವಾಗಿ ತೀರ್ಮಾನಿಸುವನು. ಆದರೆ ಅವನ ಹೊರತು ಕರೆದು ಪ್ರಾರ್ಥಿಸಲ್ಪಡುವವರು ಏನನ್ನೂ ತೀರ್ಮಾನಿಸಲು ಶಕ್ತರಲ್ಲ. ದಿಟವಾಗಿಯೂ ಅಲ್ಲಾಹನು ಸರ್ವವನ್ನು ಆಲಿಸುವವನೂ ಕಾಣುವವನೂ ಆಗಿದ್ದಾನೆ.

أَوَلَمْ يَسِيرُوا فِي الْأَرْضِ فَيَنظُرُوا كَيْفَ كَانَ عَاقِبَةُ الَّذِينَ كَانُوا مِن قَبْلِهِمْ ۚ كَانُوا هُمْ أَشَدَّ مِنْهُمْ قُوَّةً وَآثَارًا فِي الْأَرْضِ فَأَخَذَهُمُ اللَّهُ بِذُنُوبِهِمْ وَمَا كَانَ لَهُم مِّنَ اللَّهِ مِن وَاقٍ ﴿٢٢﴾

**22.** ಅವರು ಭೂಮಿಯಲ್ಲಿ ಸಂಚರಿಸಿ ಇವರ ಪೂರ್ವಿಕರ ಅಂತ್ಯ ಹೇಗಾಯಿತೆಂದು ನೋಡಿಲ್ಲವೇನು? ಅವರು ಕುರುಹುಗಳನ್ನು ಭೂಮಿಯಲ್ಲಿ ಬಿಟ್ಟುಹೋಗುವುದರಲ್ಲೂ ಇವರಿಗಿಂತ ಮಿಗಿಲಾಗಿದ್ದರು. ಆದರೆ ಅವರ ಪಾಪಗಳಿಗೋಸ್ಕರ ಅಲ್ಲಾಹನು ಅವರನ್ನು ಹಿಡಿದನು. ಅಲ್ಲಾಹನಿಂದ ಅವರನ್ನು ರಕ್ಷಿಸುವವನು ಯಾರೂ ಇರಲಿಲ್ಲ.

**23.** ಅದೇಕೆಂದರೆ, ತಮ್ಮ ಪ್ರವಾದಿಗಳು ಅವರ ಬಳಿಗೆ ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಬಂದಾಗ ಅವರು ಧಿಕ್ಕರಿಸಿದ್ದರು. ಹಾಗೆ ಅಲ್ಲಾಹನು ಅವರನ್ನು ಹಿಡಿದನು. ನಿಸ್ಸಂಶಯವಾಗಿಯೂ ಅಲ್ಲಾಹನು ಶಕ್ತಿಶಾಲಿಯೂ ಕಠಿಣವಾಗಿ ಶಿಕ್ಷಿಸುವವನೂ ಆಗಿದ್ದಾನೆ.

ذٰلِكَ بِاَنَّهُمْ كَانَتْ تَّاْتِيْهِمْ رُسُلُهُمْ بِالْبَيِّنٰتِ فَكَفَرُوْا فَاَخَذَهُمُ اللّٰهُ ؕ اِنَّهٗ قَوِيٌّ شَدِيْدُ الْعِقَابِ ﴿۲۲﴾

**24.** ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳು ಮತ್ತು ಸ್ಪಷ್ಟವಾದ ಸಾಕ್ಷ್ಯಾಧಾರಗಳೊಂದಿಗೆ ಕಳುಹಿಸಿದ್ದೇವು -

وَلَقَدْ اَرْسَلْنَا مُوْسٰى بِاٰيٰتِنَا وَسُلْطٰنٍ مُّبِيْنٍ ﴿۲۳﴾

**25.** ಫಿರ್‌ಔನ್, ಹಾಮಾನ್ ಮತ್ತು ಖಾರೂನ್ ಬಳಿಗೆ. ಆದರೆ ಅವರು, '(ಇವನು) ಸುಳ್ಳುಗಾರನಾದ ಒಬ್ಬ ಜಾದೂಗಾರನಾಗಿದ್ದಾನೆ' ಎಂದು ಹೇಳಿದರು.

اِلٰى فِرْعَوْنَ وَهَامٰنَ وَقَارُوْنَ فَقَالُوْا سٰحِرٌ كَذَّابٌ ﴿۲۴﴾

**26.** ಹಾಗೆ ಅವರು (ಮೂಸಾ) ನಮ್ಮಿಂದ ಸತ್ಯ *ಸಂದೇಶ*ದೊಂದಿಗೆ ಅವರ ಬಳಿಗೆ ಬಂದಾಗ ಅವರು, 'ಅವನನ್ನು ನಂಬಿದವರ ಗಂಡು ಮಕ್ಕಳನ್ನು ಕೊಂದು ಹಾಕಿರಿ ಮತ್ತು ಅವರ ಸ್ತ್ರೀಯರನ್ನು ಬದುಕಲು ಬಿಡಿರಿ' ಎಂದು ಹೇಳಿದರು. ಆದರೆ ಅವಿಶ್ವಾಸಿಗಳ ಯೋಜನೆ ನಿಷ್ಫಲವೇ ಆಗುತ್ತದೆ.

فَلَمَّا جَآءَهُمْ بِالْحَقِّ مِنْ عِنْدِنَا قَالُوا اقْتُلُوْۤا اَبْنَآءَ الَّذِيْنَ اٰمَنُوْا مَعَهٗ وَاسْتَحْيُوْا نِسَآءَهُمْ ؕ وَمَا كَيْدُ الْكٰفِرِيْنَ اِلَّا فِيْ ضَلٰلٍ ﴿۲۵﴾

**27.** ಫಿರ್‌ಔನ್ ಹೇಳಿದನು: 'ನನ್ನನ್ನು ಬಿಡಿ; ನಾನು ಮೂಸಾನನ್ನು ಕೊಲ್ಲುತ್ತೇನೆ. ಅವನು ತನ್ನ ಪ್ರಭುವನ್ನು ಕರೆದುಕೊಳ್ಳಲಿ. ಅವನು ನಿಮ್ಮ ಮತ ಪರಿವರ್ತನೆ ಮಾಡುವನು ಅಥವಾ ನಾಡಿನಲ್ಲೆಲ್ಲ ಅಶಾಂತಿ ಹರಡುವವನು ಎಂದು ನಾನು ಭಯಪಡುತ್ತೇನೆ.'

وَقَالَ فِرْعَوْنُ ذَرُوْنِيْۤ اَقْتُلْ مُوْسٰى وَلْيَدْعُ رَبَّهٗ ۚ اِنِّيْۤ اَخَافُ اَنْ يُّبَدِّلَ دِيْنَكُمْ اَوْ اَنْ يُّظْهِرَ فِي الْاَرْضِ الْفَسَادَ ﴿۲۶﴾

**28.** ಮೂಸಾ ಹೇಳಿದರು: 'ವಿಚಾರಣೆಯ ದಿನವನ್ನು ನಂಬದ ಎಲ್ಲ ದುರಂಹಕಾರಿಗಳಿಂದ ರಕ್ಷೆ ಹೊಂದಲಿಕ್ಕೋಸ್ಕರ ನನ್ನ ಮತ್ತು ನಿನ್ನ ಪ್ರಭುವಿನ ಅಭಯವನ್ನು ನಾನು ಕೋರುತ್ತೇನೆ.'

وَقَالَ مُوْسٰۤى اِنِّيْ عُذْتُ بِرَبِّيْ وَرَبِّكُمْ مِّنْ كُلِّ مُتَكَبِّرٍ لَّا يُؤْمِنُ بِيَوْمِ الْحِسَابِ ﴿۲۷﴾

**29.** ಫಿರ್‌ಔನನ ಜನರ ಪೈಕಿ ತನ್ನ ವಿಶ್ವಾಸವನ್ನು ಗೋಪ್ಯವಾಗಿರಿಸಿದ್ದ, ವಿಶ್ವಾಸಿಯಾದ ಓರ್ವ ವ್ಯಕ್ತಿ

وَقَالَ رَجُلٌ مُّؤْمِنٌ ۖۗ مِّنْ اٰلِ فِرْعَوْنَ يَكْتُمُ اِيْمَانَهٗۤ اَتَقْتُلُوْنَ رَجُلًا اَنْ





ಹೇಳಿದನು: "ನಿನ್ನ ಪ್ರಭುವಿನಿಂದ ಸ್ಪಷ್ಟವಾದ ಸಾಕ್ಷ್ಯಾಧಾರಗಳನ್ನು ತಂದಿದ್ದು 'ಅಲ್ಲಾಹನು ನನ್ನ ಪ್ರಭು' ಎಂದು ಹೇಳಿದ ಕಾರಣದಿಂದ ನೀನೊಬ್ಬ ವ್ಯಕ್ತಿಯನ್ನು ಕೊಲ್ಲುವೆಯಾ? ಆತನು ಒಬ್ಬ ಸುಳ್ಳುಗಾರನಾಗಿದ್ದರೆ ಆತನ ಸುಳ್ಳಿನ ಪಾಪ ಆತನಿಗೆಯೇ ಇರುವುದು. ಆದರೆ ಆತನು ಸತ್ಯವಂತನೆಂದಾದರೆ ಆತನು ಮುನ್ನೆಚ್ಚರಿಕೆ ನೀಡುವ ವಿಚಾರಗಳಲ್ಲಿ ಕೆಲವು ನಿನ್ನ ಮೇಲೆ ಎರಗುವುವು. ಖಂಡಿತವಾಗಿಯೂ ಅಲ್ಲಾಹನು ಹದ್ದುಮೀರಿ ವರ್ತಿಸುವವನಿಗೂ ಸುಳ್ಳುಗಾರನಿಗೂ ಮಾರ್ಗದರ್ಶನ ಮಾಡಲಾರ.

يَّقُوْلَ رَبِّيَ اللّٰهُ وَقَدْ جَآءَكُمْ بِالْبَيِّنٰتِ مِنْ رَّبِّكُمْ ؕ وَاِنْ يَّكُ كَاذِبًا فَعَلَيْهِ كَذِبُهٗ ۚ وَاِنْ يَّكُ صَادِقًا يُّصِبْكُمْ بَعْضُ الَّذِيْ يَعِدُكُمْ ؕ اِنَّ اللّٰهَ لَا يَهْدِيْ مَنْ هُوَ مُسْرِفٌ كَذَّابٌ ﴿۲۸﴾

**30.** "ಎಲೈ ನನ್ನ ಜನರೇ, ನೀವು ರಾಜ್ಯದಲ್ಲಿ ಪ್ರಬಲರಾಗಿದ್ದು ಇಂದು ನಿಮಗೆ ಆಧಿಪತ್ಯವಿದೆ. ಆದರೆ ಅಲ್ಲಾಹನ ಶಿಕ್ಷೆ ನಮ್ಮ ಮೇಲೆ ಬಂದೆರಗುವಾಗ ನಮಗೆ ನೆರವು ನೀಡುವವರ್‍ಯಾರು?" ಫಿರ್‌ಔನ್ ಹೇಳಿದನು: 'ನನಗೆ ಸರಿಯೆಂದು ಕಂಡದ್ದನ್ನು ಮಾತ್ರವೇ ನಾನು ನಿಮಗೆ ತೋರಿಸಿಕೊಡುತ್ತೇನೆ. ನಾನು ನಿಮ್ಮನ್ನು ಋಜುತ್ವದ ಮಾರ್ಗದಲ್ಲೇ ನಡೆಸುತ್ತೇನೆ.'

يٰقَوْمِ لَكُمُ الْمُلْكُ الْيَوْمَ ظٰهِرِيْنَ فِي الْاَرْضِ ۫ فَمَنْ يَّنْصُرُنَا مِنْۢ بَاْسِ اللّٰهِ اِنْ جَآءَنَا ؕ قَالَ فِرْعَوْنُ مَاۤ اُرِيْكُمْ اِلَّا مَاۤ اَرٰى وَمَاۤ اَهْدِيْكُمْ اِلَّا سَبِيْلَ الرَّشَادِ ﴿۲۹﴾

**31.** ಆ ವಿಶ್ವಾಸಿಯಾದ ವ್ಯಕ್ತಿ (ಪುನಃ) ಹೇಳಿದನು: "ಎಲೈ ನನ್ನ ಜನರೇ, ಆ (ಪೂರ್ವಿಕ) ಸಮುದಾಯಗಳಿಗೆ ಬಂದಂತಹ (ಶಿಕ್ಷೆಯ) ದಿನ ನಿಮಗೆ ಬರುವುದೋ ಎಂದು ನಾನು ಭಯಪಡುತ್ತೇನೆ.

وَقَالَ الَّذِيْۤ اٰمَنَ يٰقَوْمِ اِنِّيْۤ اَخَافُ عَلَيْكُمْ مِّثْلَ يَوْمِ الْاَحْزَابِ ﴿۳۰﴾

**32.** "(ಅಂದರೆ) ನೂಹ್, ಆದ್, ಸಮೂದ್ ಇವರ ಜನರಿಗೂ ಅವರ ನಂತರದವರಿಗೂ ಬಂದಂಥದ್ದು. ಅಲ್ಲಾಹನು ತನ್ನ ದಾಸರಿಗೆ ಏನೇ ಅನ್ಯಾಯಮಾಡಲು ಬಯಸುವುದಿಲ್ಲ.

مِثْلَ دَاْبِ قَوْمِ نُوْحٍ وَّعَادٍ وَّثَمُوْدَ وَالَّذِيْنَ مِنْۢ بَعْدِهِمْ ؕ وَمَا اللّٰهُ يُرِيْدُ ظُلْمًا لِّلْعِبَادِ ﴿۳۱﴾

**33.** "ನನ್ನ ಜನರೇ, ಗೋಳಾಡುತ್ತಾ ಪರಸ್ಪರ ಸಹಾಯಕ್ಕಾಗಿ ಕರೆಯುವ ದಿನವನ್ನು ನಾನು ನಿಮ್ಮ ಬಗ್ಗೆ ಭಯಪಡುತ್ತೇನೆ.

وَيٰقَوْمِ اِنِّيْۤ اَخَافُ عَلَيْكُمْ يَوْمَ التَّنَادِ ﴿۳۲﴾

34. "ಅಂದು ನೀವು ಬೆನ್ನು ಹಾಕಿ ಓಡಿಹೋಗುವಿರಿ. ಆ ದಿನ ನಿಮಗೆ ಅಲ್ಲಾಹನ ವಿರುದ್ಧ ರಕ್ಷಕನಾಗಿ ಯಾರೂ ಇರಲಿಕ್ಕಿಲ್ಲ. ದಾರಿತಪ್ಪಿದವನೆಂದು ಯಾರ ಬಗ್ಗೆ ಅಲ್ಲಾಹನು ತೀರ್ಮಾನಿಸುತ್ತಾನೋ ಅವನಿಗೆ ಮಾರ್ಗದರ್ಶಕನಾಗಿ ಯಾರೂ ಇಲ್ಲ.

يَوْمَ تُوَلُّوْنَ مُدْبِرِيْنَ ۚ مَا لَكُمْ مِّنَ اللّٰهِ مِنْ عَاصِمٍ ۚ وَمَنْ يُّضْلِلِ اللّٰهُ فَمَا لَهٗ مِنْ هَادٍ ﴿٣٣﴾

35. "ಇದಕ್ಕಿಂತ ಮುಂಚೆ ಯೂಸುಫ್ ನಿಮ್ಮ ಬಳಿಗೆ ಸ್ಪಷ್ಟವಾದ ಸಾಕ್ಷ್ಯಾಧಾರಗಳ ಸಹಿತ ಬಂದಿದ್ದರು. ಆದರೆ ಅವರು ನಿಮ್ಮ ಬಳಿಗೆ ತಂದಿದ್ದರ ಬಗ್ಗೆ ನೀವು ಸಂಶಯ ತಾಳಿದಿರಿ. ಅವರು ಮರಣಹೊಂದಿದಾಗ, 'ಅಲ್ಲಾಹನು ಅವರ ಅನಂತರ ಎಂದಿಗೂ ಒಬ್ಬ ಸಂದೇಶ ವಾಹಕನನ್ನು ಕಳುಹಿಸಲಾರ' ಎಂದು ಹೇಳಿದಿರಿ. ಹೀಗೆ ಹದ್ದು ಮೀರಿ ವರ್ತಿಸುವವರು ಮತ್ತು ಸಂಶಯ ಪಡುವವರು ದಾರಿತಪ್ಪಿದವರೆಂದು ಅಲ್ಲಾಹನು ತೀರ್ಮಾನಿಸುತ್ತಾನೆ.

وَلَقَدْ جَآءَكُمْ يُوْسُفُ مِنْ قَبْلُ بِالْبَيِّنٰتِ فَمَا زِلْتُمْ فِيْ شَكٍّ مِّمَّا جَآءَكُمْ بِهٖ ۚ حَتّٰٓى اِذَا هَلَكَ قُلْتُمْ لَنْ يَّبْعَثَ اللّٰهُ مِنْ بَعْدِهٖ رَسُوْلًا ۚ كَذٰلِكَ يُضِلُّ اللّٰهُ مَنْ هُوَ مُسْرِفٌ مُّرْتَابُ ﴿٣٤﴾

36. "ಅವರು ತಮ್ಮೊಡನೆ ಯಾವುದೇ ಸಾಕ್ಷ್ಯಾಧಾರವಿಲ್ಲದಿದ್ದರೂ ಅಲ್ಲಾಹನ ದೃಷ್ಟಾಂತಗಳ ವಿಚಾರದಲ್ಲಿ ವಾಗ್ವಾದ ಮಾಡುವವರಾಗಿದ್ದಾರೆ. ಅಲ್ಲಾಹನ ಮತ್ತು ಸತ್ಯವಿಶ್ವಾಸಿಗಳ ದೃಷ್ಟಿಯಲ್ಲಿ ಇದು ಬಲು ಕೆಟ್ಟದ್ದಾಗಿದೆ. ಹೀಗೆ ಅಹಂಕಾರಿ ಮತ್ತು ಸ್ವೇಚ್ಛಾಚಾರಿಯಾದ ಪ್ರತಿಯೊಬ್ಬನ ಹೃದಯದ ಮೇಲೆ ಅಲ್ಲಾಹನು ಮುದ್ರೆ ಹಾಕುತ್ತಾನೆ."

اِلَّذِيْنَ يُجَادِلُوْنَ فِيْٓ اٰيٰتِ اللّٰهِ بِغَيْرِ سُلْطٰنٍ اَتٰىهُمْ ۚ كَبُرَ مَقْتًا عِنْدَ اللّٰهِ وَعِنْدَ الَّذِيْنَ اٰمَنُوْا ۚ كَذٰلِكَ يَطْبَعُ اللّٰهُ عَلٰى كُلِّ قَلْبِ مُتَكَبِّرٍ جَبَّارٍ ﴿٣٥﴾

37. ಫಿರ್‌ಔನ್ ಹೇಳಿದನು: 'ಎಲೈ ಹಾಮಾನ್, ನನಗೋಸ್ಕರ ಒಂದು ಉನ್ನತವಾದ ಕಟ್ಟಡ (ಗೋಪುರ)ವನ್ನು ನಿರ್ಮಿಸು. ಆ ಮೂಲಕ ನಾನು ಗುರಿ ತಲಪುವಂತಾಗಲಿ -

وَقَالَ فِرْعَوْنُ يٰهَامٰنُ ابْنِ لِيْ صَرْحًا لَّعَلِّيْٓ اَبْلُغُ الْاَسْبَابَ ﴿٣٦﴾

38. '(ಅಂದರೆ) ಆಕಾಶಕ್ಕೆ ಇರುವ ಮಾರ್ಗವನ್ನು. ಹಾಗೆ ನಾನು ಮೂಸಾನ ದೇವನನ್ನು ಒಮ್ಮೆ ನೋಡಿಬಿಡುತ್ತೇನೆ. ಖಂಡಿತವಾಗಿಯೂ ಅವನು ಸುಳ್ಳುಗಾರನೆಂದು ನಾನು ಭಾವಿಸುತ್ತೇನೆ.' ಹೀಗೆ ಫಿರ್‌ಔನನಿಗೆ ತನ್ನ ದುಷ್ಕೃತ್ಯ ಸುಂದರವಾಗಿ ಕಂಡಿತು ಹಾಗೂ ಅವನು (ಸತ್)

اَسْبَابَ السَّمٰوٰتِ فَاَطَّلِعَ اِلٰٓى اِلٰهِ مُوْسٰى وَاِنِّيْ لَاَظُنُّهٗ كَاذِبًا ۚ وَكَذٰلِكَ زُيِّنَ لِفِرْعَوْنَ سُوْٓءُ عَمَلِهٖ وَصُدَّ عَنِ





ಪಥದಿಂದ ವಿಮುಖನಾದನು. ಫಿರ್‌ಔನನ ಯೋಜನೆ ನಾಶದಲ್ಲಿ ಕೊನೆಗೊಂಡಿತು.

السَّبِيْلِ ۚ وَمَا كَيْدُ فِرْعَوْنَ اِلَّا فِيْ تَبَابٍ ﴿٣٧﴾

39. ಆ ವಿಶ್ವಾಸಿಯಾದ ವ್ಯಕ್ತಿ ಹೇಳಿದನು: 'ನನ್ನ ಜನರೇ, ನನ್ನನ್ನು ಅನುಸರಿಸಿರಿ. ನಾನು ನಿಮ್ಮನ್ನು ಋಜುವಾದ ಮಾರ್ಗದತ್ತ ಕೊಂಡೊಯ್ಯುವೆನು.

وَقَالَ الَّذِيْٓ اٰمَنَ يٰقَوْمِ اتَّبِعُوْنِ اَهْدِكُمْ سَبِيْلَ الرَّشَادِ ﴿٣٨﴾

40. 'ಎಲೈ ಜನರೇ, ಇಹಲೋಕ ಜೀವನ ತಾತ್ಕಾಲಿಕವಾದ ಸುಖಾನುಭವ ಮಾತ್ರವಾಗಿದೆ. ಪರಲೋಕವೇ ಶಾಶ್ವತ ಜೀವನದ ನೆಲೆಯಾಗಿದೆ.

يٰقَوْمِ اِنَّمَا هٰذِهِ الْحَيٰوةُ الدُّنْيَا مَتَاعٌ ۡ وَّاِنَّ الْاٰخِرَةَ هِيَ دَارُ الْقَرَارِ ﴿٣٩﴾

41. 'ದುಷ್ಕರ್ಮವೆಸಗಿದ ವ್ಯಕ್ತಿಗೆ ತತ್ತುಲ್ಯವಾದ ಶಿಕ್ಷೆ ಮಾತ್ರವಿದೆ. ಯಾರಾದರೂ - ಗಂಡಾಗಲಿ, ಹೆಣ್ಣಾಗಲಿ - ಸತ್ಯವಿಶ್ವಾಸಿಯಾಗಿದ್ದು ಸತ್ಕರ್ಮ ನಿರತರಾದರೆ ಅವರು ಸ್ವರ್ಗದಲ್ಲಿ ಪ್ರವೇಶಿಸುವರು. ಅಲ್ಲಿ ಅವರಿಗೆ ಅಗಣಿತ ಅನುಗ್ರಹಗಳನ್ನು ನೀಡಲಾಗುವುದು.

مَنْ عَمِلَ سَيِّئَةً فَلَا يُجْزٰٓى اِلَّا مِثْلَهَا ۚ وَمَنْ عَمِلَ صَالِحًا مِّنْ ذَكَرٍ اَوْ اُنْثٰى وَهُوَ مُؤْمِنٌ فَاُولٰٓئِكَ يَدْخُلُوْنَ الْجَنَّةَ يُرْزَقُوْنَ فِيْهَا بِغَيْرِ حِسَابٍ ﴿٤٠﴾

42. 'ಎಲೈ ಜನರೇ, ಇದೇನು ಆಶ್ಚರ್ಯ! ನಾನು ನಿಮ್ಮನ್ನು ಮೋಕ್ಷದೆಡೆಗೆ ಆಹ್ವಾನಿಸುತ್ತೇನೆ. ನೀವು ನನ್ನನ್ನು ನರಕದೆಡೆಗೆ ಆಹ್ವಾನಿಸುತ್ತೀರಿ.'

وَيٰقَوْمِ مَا لِيْٓ اَدْعُوْكُمْ اِلَى النَّجٰوةِ وَتَدْعُوْنَنِيْٓ اِلَى النَّارِ ﴿٤١﴾

43. 'ನಾನು ಅಲ್ಲಾಹನನ್ನು ನಂಬದಿರಲಿಕ್ಕೂ ನನಗೆ ಅರಿವಿಲ್ಲದವುಗಳನ್ನು ಅವನಿಗೆ ಸಹಭಾಗಿಯಾಗಿ ಕಲ್ಪಿಸಲಿಕ್ಕೂ ನೀವು ನನ್ನನ್ನು ಕರೆಯುತ್ತೀರಿ. (ಆದರೆ) ನಾನು ನಿಮ್ಮನ್ನು ಪ್ರತಾಪಶಾಲಿಯೂ ಕ್ಷಮಾಶೀಲನೂ ಆದವನ (ಅಲ್ಲಾಹನ) ಕಡೆಗೆ ಕರೆಯುತ್ತೇನೆ.'

تَدْعُوْنَنِيْ لِاَكْفُرَ بِاللّٰهِ وَاُشْرِكَ بِهٖ مَا لَيْسَ لِيْ بِهٖ عِلْمٌ ۡ وَّاَنَا اَدْعُوْكُمْ اِلَى الْعَزِيْزِ الْغَفَّارِ ﴿٤٢﴾

44. 'ನೀವು ನನ್ನನ್ನು ಯಾವುದರ ಕಡೆಗೆ ಕರೆಯುತ್ತೀರೋ, ಅದಕ್ಕೆ ನಿಸ್ಸಂದೇಹವಾಗಿಯೂ ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಕರೆದು ಪ್ರಾರ್ಥಿಸಲ್ಪಡುವ ಅರ್ಹತೆಯೇನೂ ಇಲ್ಲ. ನಿಶ್ಚಯವಾಗಿಯೂ ನಮ್ಮೆಲ್ಲರ ಮರಳಿಕೆ ಅಲ್ಲಾಹನ ಕಡೆಗೇ ಆಗಿದೆ. ಅತಿಕ್ರಮವೆಸಗುವವರು ಖಂಡಿತವಾಗಿಯೂ ನರಕದವರಾಗಿದ್ದಾರೆ.

لَا جَرَمَ اَنَّمَا تَدْعُوْنَنِيْٓ اِلَيْهِ لَيْسَ لَهٗ دَعْوَةٌ فِي الدُّنْيَا وَلَا فِي الْاٰخِرَةِ وَاَنَّ مَرَدَّنَآ اِلَى اللّٰهِ وَاَنَّ الْمُسْرِفِيْنَ هُمْ اَصْحٰبُ النَّارِ ﴿٤٣﴾

**45.** 'ಆದ್ದರಿಂದ ನಾನು ನಿಮಗೆ ಹೇಳಿದುದರ ಬಗ್ಗೆ ನೀವು ಶೀಘ್ರದಲ್ಲೇ ಜ್ಞಾಪಿಸುವಿರಿ. ನಾನು ನನ್ನ ವಿಚಾರವನ್ನು ಅಲ್ಲಾಹನಿಗೆ ಅರ್ಪಿಸುತ್ತೇನೆ. ಖಚಿತವಾಗಿಯೂ ಅಲ್ಲಾಹನು ತನ್ನ ದಾಸರನ್ನು ಚೆನ್ನಾಗಿ ನೋಡುತ್ತಾನೆ.'

فَسَتَذْكُرُونَ مَآ أَقُولُ لَكُمْ ۚ وَأُفَوِّضُ
أَمْرِيٓ إِلَى ٱللَّهِ ۚ إِنَّ ٱللَّهَ بَصِيرٌۢ
بِٱلْعِبَادِ ﴿٤٤﴾

**46.** ಹಾಗೆ ಅವರು ಹೂಡಿದ ಷಡ್ಯಂತ್ರದ ದುಷ್ಪರಿಣಾಮಗಳಿಂದ ಅಲ್ಲಾಹನು ಆತನನ್ನು ರಕ್ಷಿಸಿದನು. ಫಿರ್‌ಔನನ ಜನರನ್ನು ಯಾತನಾಮಯವಾದ ಶಿಕ್ಷೆ ಆವರಿಸಿತು -

فَوَقَىٰهُ ٱللَّهُ سَيِّـَٔاتِ مَا مَكَرُوا۟ ۖ وَحَاقَ
بِـَٔالِ فِرْعَوْنَ سُوٓءُ ٱلْعَذَابِ ﴿٤٥﴾

**47.** ನರಕ. ಹಗಲು ಮತ್ತು ರಾತ್ರಿ ಅವರನ್ನು ಅದರ ಮುಂದೆ ಒಡ್ಡಲಾಗುವುದು. ಆ ದಿನದಂದು ನಿಗದಿತ ಸಮಯ ಬಂದಾಗ, 'ಫಿರ್‌ಔನನ ಜನರನ್ನು ಅತ್ಯಂತ ಕಠೋರವಾದ ಶಿಕ್ಷೆಗೆ ಗುರಿಪಡಿಸಿರಿ' (ಎಂದು ದೇವದೂತರೊಡನೆ ಹೇಳಲಾಗುವುದು).

ٱلنَّارُ يُعْرَضُونَ عَلَيْهَا غُدُوًّا وَ
عَشِيًّا ۖ وَيَوْمَ تَقُومُ ٱلسَّاعَةُ
أَدْخِلُوٓا۟ ءَالَ فِرْعَوْنَ أَشَدَّ ٱلْعَذَابِ ﴿٤٦﴾

**48.** ಅವರು ನರಕದಲ್ಲಿ ಪರಸ್ಪರ ವಾಗ್ವಾದ ಮಾಡುತ್ತಾ, ಬಲಹೀನರು ಅಹಂಭಾವಿಗಳೊಡನೆ, 'ನಿಸ್ಸಂದೇಹವಾಗಿಯೂ ನಾವು ನಿಮ್ಮ ಹಿಂಬಾಲಕರಾಗಿದ್ದೆವು. ಆದ್ದರಿಂದ ನರಕ ಶಿಕ್ಷೆಯಿಂದ ಒಂದಂಶವನ್ನಾದರೂ ನೀವು ನಮ್ಮಿಂದ ನಿವಾರಿಸುವಿರೋ?' ಎಂದು ಕೇಳುವರು.

وَإِذْ يَتَحَآجُّونَ فِى ٱلنَّارِ فَيَقُولُ
ٱلضُّعَفَٰٓؤُا۟ لِلَّذِينَ ٱسْتَكْبَرُوٓا۟ إِنَّا كُنَّا
لَكُمْ تَبَعًا فَهَلْ أَنتُم مُّغْنُونَ عَنَّا
نَصِيبًا مِّنَ ٱلنَّارِ ﴿٤٧﴾

**49.** ಆಗ ಅಹಂಭಾವಿಗಳು, 'ನಾವೆಲ್ಲರೂ ಇದರಲ್ಲೇ ಇದ್ದೇವೆ. ಅಲ್ಲಾಹನು (ತನ್ನ) ದಾಸರ ಮಧ್ಯೆ ತೀರ್ಮಾನ ಮಾಡಿ ಆಗಿದೆ' ಎಂದು ಹೇಳುವರು.

قَالَ ٱلَّذِينَ ٱسْتَكْبَرُوٓا۟ إِنَّا كُلٌّ فِيهَآ
إِنَّ ٱللَّهَ قَدْ حَكَمَ بَيْنَ ٱلْعِبَادِ ﴿٤٨﴾

**50.** ನರಕದ ಬೆಂಕಿಯಲ್ಲಿರುವವರು ನರಕದ ಕಾವಲುಗಾರರೊಡನೆ, 'ನಮ್ಮ ಶಿಕ್ಷೆಯನ್ನು ಒಂದು ದಿನ (ಆದರೂ) ಕಡಿಮೆಗೊಳಿಸಲಿಕ್ಕೆ ನೀವು ನಿಮ್ಮ ಪ್ರಭುವಿನೊಡನೆ ಪ್ರಾರ್ಥಿಸಿರಿ' ಎಂದು ಹೇಳುವರು.

وَقَالَ ٱلَّذِينَ فِى ٱلنَّارِ لِخَزَنَةِ جَهَنَّمَ
ٱدْعُوا۟ رَبَّكُمْ يُخَفِّفْ عَنَّا يَوْمًا مِّنَ
ٱلْعَذَابِ ﴿٤٩﴾





**51.** ಆಗ ಅವರು, 'ನಿಮ್ಮ ಸಂದೇಶವಾಹಕರು ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ನಿಮ್ಮ ಬಳಿಗೆ ಬಂದಿರಲಿಲ್ಲವೇ?' ಎಂದು ಕೇಳುವರು. ಅವರು 'ಹೌದು' ಎಂದು ಉತ್ತರಿಸುವರು. 'ಹಾಗಾದರೆ ನೀವೇ ಪ್ರಾರ್ಥಿಸಿಕೊಳ್ಳಿರಿ' ಎಂದು ಅವರು (ಕಾವಲುಗಾರರು) ಮಾರ್ನುಡಿಯುವರು. ಆದರೆ ಅವಿಶ್ವಾಸಿಗಳ ಪ್ರಾರ್ಥನೆ ನಿಷ್ಫಲ.

قَالُوٓا۟ أَوَلَمْ تَكُ تَأْتِيكُمْ رُسُلُكُم
بِٱلْبَيِّنَٰتِ ۖ قَالُوا۟ بَلَىٰ ۚ قَالُوا۟ فَٱدْعُوا۟ ۗ
وَمَا دُعَٰٓؤُا۟ ٱلْكَٰفِرِينَ إِلَّا فِى ضَلَٰلٍ ﴿٥٠﴾

**52.** ಖಂಡಿತವಾಗಿಯೂ ನಾವು ನಮ್ಮ ಸಂದೇಶವಾಹಕರಿಗೂ ಸತ್ಯವಿಶ್ವಾಸಿಗಳಿಗೂ ಈ ಲೋಕದಲ್ಲೂ ಸಾಕ್ಷಿಗಳು ಎದ್ದುನಿಲ್ಲುವ ದಿನದಂದೂ ಸಹಾಯ ಮಾಡುವೆವು.

إِنَّا لَنَنصُرُ رُسُلَنَا وَٱلَّذِينَ ءَامَنُوا۟
فِى ٱلْحَيَوٰةِ ٱلدُّنْيَا وَيَوْمَ يَقُومُ
ٱلْأَشْهَٰدُ ﴿٥١﴾

**53.** ಅಧರ್ಮಿಗಳಿಗೆ ತಮ್ಮ ಕ್ಷಮಾಯಾಚನೆ ನಿರುಪಯುಕ್ತವಾಗುವ ದಿನ. ಅವರಿಗೆ ಶಾಪವಿದೆ. ಕೆಟ್ಟವಾಸಸ್ಥಳವೂ ಅವರಿಗಿದೆ.

يَوْمَ لَا يَنفَعُ ٱلظَّٰلِمِينَ مَعْذِرَتُهُمْ ۖ
وَلَهُمُ ٱللَّعْنَةُ وَلَهُمْ سُوٓءُ ٱلدَّارِ ﴿٥٢﴾

**54.** ದಿಟವಾಗಿಯೂ ನಾವು ಮೂಸಾರಿಗೆ ಮಾರ್ಗದರ್ಶನ ನೀಡಿದ್ದೆವು. ಇಸ್ರಾಈಲ್ ಸಂತತಿಗಳನ್ನು ನಾವು ಆ ಗ್ರಂಥದ (ತೌರಾತಿನ) ವಾರೀಸುದಾರರನ್ನಾಗಿಯೂ ಮಾಡಿದೆವು.

وَلَقَدْ ءَاتَيْنَا مُوسَى ٱلْهُدَىٰ وَأَوْرَثْنَا
بَنِىٓ إِسْرَٰٓءِيلَ ٱلْكِتَٰبَ ﴿٥٣﴾

**55.** ಅದು ವಿವೇಕಶಾಲಿಗಳಿಗೆ ಮಾರ್ಗದರ್ಶಕವೂ ಉದ್ಬೋಧಕವೂ ಆಗಿತ್ತು.

هُدًى وَذِكْرَىٰ لِأُو۟لِى ٱلْأَلْبَٰبِ ﴿٥٤﴾

**56.** ನೀನು ತಾಳ್ಮೆವಹಿಸು. ನಿಸ್ಸಂಶಯವಾಗಿಯೂ ಅಲ್ಲಾಹನ ವಾಗ್ದಾನ ಸತ್ಯವಾದುದು. ನಿನ್ನ ಬಲಹೀನತೆಯ ಬಗ್ಗೆ ಕ್ಷಮೆಯಾಚಿಸು. ಸಂಜೆ ಮತ್ತು ಮುಂಜಾವ ನಿನ್ನ ಪ್ರಭುವಿನ ಸ್ತುತಿ ಕೀರ್ತನೆ ಮಾಡುವುದರೊಂದಿಗೆ ಅವನ ಪರಿಶುದ್ಧತೆಯನ್ನು ಕೊಂಡಾಡು.

فَٱصْبِرْ إِنَّ وَعْدَ ٱللَّهِ حَقٌّ وَٱسْتَغْفِرْ
لِذَنۢبِكَ وَسَبِّحْ بِحَمْدِ رَبِّكَ
بِٱلْعَشِىِّ وَٱلْإِبْكَٰرِ ﴿٥٥﴾

**57.** ಯಾರು ಅಲ್ಲಾಹನ ದೃಷ್ಟಾಂತಗಳ ಬಗ್ಗೆ (ಅಲ್ಲಾಹನಿಂದ) ತಮಗೆ ಲಭಿಸಿದ ಯಾವುದೇ ಸಾಕ್ಷ್ಯಾಧಾರವಿಲ್ಲದೆ ವಾಗ್ವಾದ ಮಾಡುತ್ತಾರೋ, ಅವರ ಹೃದಯಗಳಲ್ಲಿ ದೊಡ್ಡಸ್ತಿಕೆ ಹೊರತು ಬೇರೇನೂ ಇಲ್ಲ. ವಾಸ್ತವದಲ್ಲಿ ಅವರು ಅದನ್ನು (ಆ ಹಿರಿಮೆಯನ್ನು) ಗಳಿಸಲಾರರು.

إِنَّ ٱلَّذِينَ يُجَٰدِلُونَ فِىٓ ءَايَٰتِ ٱللَّهِ
بِغَيْرِ سُلْطَٰنٍ أَتَىٰهُمْ ۙ إِن فِى
صُدُورِهِمْ إِلَّا كِبْرٌ مَّا هُم بِبَٰلِغِيهِ ۚ

ಆದ್ದರಿಂದ ನೀನು ಅಲ್ಲಾಹನ ಅಭಯಯಾಚನೆ ಮಾಡು. ನಿಶ್ಚಯವಾಗಿಯೂ ಅವನು ಸರ್ವವನ್ನು ಆಲಿಸುವವನೂ ಸರ್ವವನ್ನು ನೋಡುವವನೂ ಆಗಿದ್ದಾನೆ.

فَاسْتَعِذْ بِاللّٰهِ ۚ اِنَّهٗ هُوَ السَّمِيْعُ الْبَصِيْرُ ﴿٥٧﴾

58. ನಿಸ್ಸಂದೇಹವಾಗಿಯೂ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸುವುದು ಮನುಷ್ಯನನ್ನು ಸೃಷ್ಟಿಸುವುದಕ್ಕಿಂತ ಮಹತ್ತರವಾದುದು. ಆದರೆ ಹೆಚ್ಚಿನ ಜನರು ಮನಗಾಣುವುದಿಲ್ಲ.

لَخَلْقُ السَّمٰوٰتِ وَالْاَرْضِ اَكْبَرُ مِنْ خَلْقِ النَّاسِ وَلٰكِنَّ اَكْثَرَ النَّاسِ لَا يَعْلَمُوْنَ ﴿٥٨﴾

59. ಕುರುಡ ಮತ್ತು ದೃಷ್ಟಿಯುಳ್ಳವನು ಸಮಾನರಲ್ಲ. ಹಾಗೆಯೇ, ವಿಶ್ವಾಸ ಹೊಂದಿ ಸತ್ಕರ್ಮ ನಿರತರಾದವರು ಕುಕರ್ಮಿಗಳಿಗೆ ಸಮಾನರಲ್ಲ. ಆದರೆ ನೀವು ಆಲೋಚಿಸುವುದಿಲ್ಲ.

وَمَا يَسْتَوِي الْاَعْمٰى وَالْبَصِيْرُ ۙ وَالَّذِيْنَ اٰمَنُوْا وَعَمِلُوا الصّٰلِحٰتِ وَلَا الْمُسِيْٓءُ ۚ قَلِيْلًا مَّا تَتَذَكَّرُوْنَ ﴿٥٩﴾

60. ನಿಶ್ಚಯವಾಗಿಯೂ ಆ ವೇಳೆ ಬರುವುದು. ಅದರಲ್ಲೇನೂ ಸಂಶಯವಿಲ್ಲ. ಆದರೆ ಜನರಲ್ಲಿ ಹೆಚ್ಚಿನವರು ನಂಬುವುದಿಲ್ಲ.

اِنَّ السَّاعَةَ لَاٰتِيَةٌ لَّا رَيْبَ فِيْهَا وَلٰكِنَّ اَكْثَرَ النَّاسِ لَا يُؤْمِنُوْنَ ﴿٦٠﴾

61. ನಿಮ್ಮ ಪ್ರಭು ಹೇಳುತ್ತಾನೆ: 'ನನ್ನೊಡನೆ ಪ್ರಾರ್ಥಿಸಿರಿ. ನಾನು ನಿಮಗೆ ಉತ್ತರ ನೀಡುವೆನು. ಆದರೆ ಯಾರು ನನ್ನನ್ನು ಆರಾಧಿಸುವುದನ್ನು ಬಿಟ್ಟು ಅಹಂಭಾವ ತೋರಿಸುತ್ತಾರೋ ಅವರು ಅವಮಾನಿತರಾಗಿ ನರಕವನ್ನು ಪ್ರವೇಶಿಸುವರು.'

وَقَالَ رَبُّكُمُ ادْعُوْنِيْٓ اَسْتَجِبْ لَكُمْ ۚ اِنَّ الَّذِيْنَ يَسْتَكْبِرُوْنَ عَنْ عِبَادَتِيْ سَيَدْخُلُوْنَ جَهَنَّمَ دٰخِرِيْنَ ﴿٦١﴾

62. ರಾತ್ರಿಯನ್ನು ನಿಮಗೆ ವಿಶ್ರಾಂತಿಗೋಸ್ಕರ ಮಾಡಿದವನು ಮತ್ತು ಹಗಲನ್ನು ಪ್ರಕಾಶಪೂರ್ಣವಾಗಿ ಮಾಡಿದವನು ಅಲ್ಲಾಹನೇ ಆಗಿದ್ದಾನೆ. ದಿಟವಾಗಿಯೂ ಅಲ್ಲಾಹನು ಮನುಷ್ಯರಿಗೆ ಔದಾರ್ಯ ತೋರಿಸುವವನಾಗಿದ್ದಾನೆ. ಆದರೆ ಮನುಷ್ಯರಲ್ಲಿ ಹೆಚ್ಚಿನವರು ಕೃತಜ್ಞತೆ ತೋರಿಸುವುದಿಲ್ಲ.

اَللّٰهُ الَّذِيْ جَعَلَ لَكُمُ الَّيْلَ لِتَسْكُنُوْا فِيْهِ وَالنَّهَارَ مُبْصِرًا ۚ اِنَّ اللّٰهَ لَذُوْ فَضْلٍ عَلَى النَّاسِ وَلٰكِنَّ اَكْثَرَ النَّاسِ لَا يَشْكُرُوْنَ ﴿٦٢﴾

63. ಅವನೇ ನಿಮ್ಮ ಪ್ರಭುವಾದ ಅಲ್ಲಾಹನು. ಸರ್ವ ವಸ್ತುಗಳ ಸೃಷ್ಟಿಕರ್ತ. ಅವನ ಹೊರತು ಬೇರೆ ಆರಾಧ್ಯನಿಲ್ಲ. ಹಾಗಿರುವಾಗ ನೀವು ಹೇಗೆ ತಿರುಗಿಸಲ್ಪಡುವಿರಿ?

ذٰلِكُمُ اللّٰهُ رَبُّكُمْ خَالِقُ كُلِّ شَيْءٍ ۘ لَآ اِلٰهَ اِلَّا هُوَ ۙ فَاَنّٰى تُؤْفَكُوْنَ ﴿٦٣﴾





64. ಅಲ್ಲಾಹನ ದೃಷ್ಟಾಂತಗಳನ್ನು ನಿರಾಕರಿಸುವವರು ಇದೇ ರೀತಿಯಲ್ಲಿ (ಬುದ್ಧಿಶೂನ್ಯ ವಿಚಾರದೆಡೆಗೆ) ತಿರುಗಿಸಲ್ಪಡುತ್ತಾರೆ.

كَذٰلِكَ يُؤْفَكُ الَّذِيْنَ كَانُوْا بِاٰيٰتِ اللّٰهِ يَجْحَدُوْنَ ﴿٦٤﴾

65. ಭೂಮಿಯನ್ನು ನಿಮಗೋಸ್ಕರ ವಾಸಸ್ಥಳವನ್ನಾಗಿಯೂ ಆಕಾಶವನ್ನು (ನಿಮ್ಮ ಸುರಕ್ಷೆಗಾಗಿ) ಮೇಲ್ಛಪ್ಪರವನ್ನಾಗಿಯೂ ಮಾಡಿದವನು ಅಲ್ಲಾಹನೇ ಆಗಿದ್ದಾನೆ. ಅವನು ನಿಮ್ಮ ರೂಪವನ್ನು ಅತ್ಯಂತ ಸುಂದರಗೊಳಿಸಿದ್ದಾನೆ; ಶುದ್ಧವಾದ ಆಹಾರವನ್ನು ನಿಮಗೆ ದಯಪಾಲಿಸಿದ್ದಾನೆ; ಅವನೇ ನಿಮ್ಮ ಪ್ರಭುವಾದ ಅಲ್ಲಾಹನು. ಹಾಗೆ, ಸಕಲಲೋಕಗಳ ಪ್ರಭುವಾದ ಅಲ್ಲಾಹನು ಅನುಗ್ರಹಪೂರ್ಣನಾಗಿದ್ದಾನೆ.

اَللّٰهُ الَّذِيْ جَعَلَ لَكُمُ الْاَرْضَ قَرَارًا وَّالسَّمَآءَ بِنَآءً وَّصَوَّرَكُمْ فَاَحْسَنَ صُوَرَكُمْ وَرَزَقَكُمْ مِّنَ الطَّيِّبٰتِ ۚ ذٰلِكُمُ اللّٰهُ رَبُّكُمْ ۚ فَتَبٰرَكَ اللّٰهُ رَبُّ الْعٰلَمِيْنَ ﴿٦٥﴾

66. ಅವನು ಸದಾ ಜೀವಂತನು. ಅವನ ಹೊರತು ಬೇರೆ ಆರಾಧ್ಯನಿಲ್ಲ. ಆದ್ದರಿಂದ ಪ್ರಾಮಾಣಿಕವಾದ ಧರ್ಮನಿಷ್ಠೆಯಿಂದ ಅವನನ್ನು ಪ್ರಾರ್ಥಿಸಿರಿ. ಸಕಲ ಲೋಕಗಳ ಪ್ರಭುವಾದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು ಸಲ್ಲುತ್ತವೆ.

هُوَ الْحَيُّ لَآ اِلٰهَ اِلَّا هُوَ فَادْعُوْهُ مُخْلِصِيْنَ لَهُ الدِّيْنَ ۗ اَلْحَمْدُ لِلّٰهِ رَبِّ الْعٰلَمِيْنَ ﴿٦٦﴾

67. ಹೇಳು: 'ನನಗೆ ನನ್ನ ಪ್ರಭುವಿನಿಂದ ಸುಸ್ಪಷ್ಟವಾದ ದೃಷ್ಟಾಂತಗಳು ಲಭಿಸಿದ್ದು, ಅಲ್ಲಾಹನ ಹೊರತು ನೀವು ಕರೆದು ಪ್ರಾರ್ಥಿಸುವವರನ್ನು ಆರಾಧಿಸುವುದು ನನಗೆ ನಿಷಿದ್ಧಗೊಳಿಸಲಾಗಿದೆ. ಹಾಗೂ ಸಕಲ ಲೋಕಗಳ ಪ್ರಭುವಿಗೆ ಶರಣಾಗಲಿಕ್ಕೆ ನನಗೆ ಆಜ್ಞಾಪಿಸಲಾಗಿದೆ.'

قُلْ اِنِّيْ نُهِيْتُ اَنْ اَعْبُدَ الَّذِيْنَ تَدْعُوْنَ مِنْ دُوْنِ اللّٰهِ لَمَّا جَآءَنِيَ الْبَيِّنٰتُ مِنْ رَّبِّيْ ۫ وَاُمِرْتُ اَنْ اُسْلِمَ لِرَبِّ الْعٰلَمِيْنَ ﴿٦٧﴾

68. ನಿಮ್ಮನ್ನು ಮಣ್ಣಿನಿಂದ, ಅನಂತರ ವೀರ್ಯಾಣುವಿನಿಂದ, ಅನಂತರ ಅಂಟಿ ಹಿಡಿಯುವ ವಸ್ತುವಿನಿಂದ ಸೃಷ್ಟಿಸಿ ಆ ಬಳಿಕ ಶಿಶುವಾಗಿ ನಿಮ್ಮನ್ನು ಹೊರತಂದವನು ಅವನೇ ಆಗಿದ್ದಾನೆ. ಆ ಮೇಲೆ ನೀವು ಬೆಳೆದು ಪೂರ್ಣಶಕ್ತಿ ಪಡೆಯುತ್ತೀರಿ. ತದನಂತರ ನೀವು ವೃದ್ಧಾಪ್ಯವನ್ನು ಹೊಂದುತ್ತೀರಿ. - ಅದಕ್ಕಿಂತ ಮುಂಚೆ ಮರಣಹೊಂದುವವರು ಸಹ ನಿಮ್ಮಲ್ಲಿದ್ದಾರೆ - (ಇದು) ನೀವು ಒಂದು ನಿಗದಿತ ಅವಧಿಯನ್ನು ತಲಪಲಿಕ್ಕೋಸ್ಕರ ಹಾಗೂ ನೀವು ಜ್ಞಾನಗಳಿಸಲಿಕ್ಕೋಸ್ಕರವಾಗಿದೆ.

هُوَ الَّذِيْ خَلَقَكُمْ مِّنْ تُرَابٍ ثُمَّ مِنْ نُّطْفَةٍ ثُمَّ مِنْ عَلَقَةٍ ثُمَّ يُخْرِجُكُمْ طِفْلًا ثُمَّ لِتَبْلُغُوْٓا اَشُدَّكُمْ ثُمَّ لِتَكُوْنُوْا شُيُوْخًا ۚ وَمِنْكُمْ مَّنْ يُّتَوَفّٰى مِنْ قَبْلُ وَلِتَبْلُغُوْٓا اَجَلًا مُّسَمًّى وَّلَعَلَّكُمْ تَعْقِلُوْنَ ﴿٦٨﴾

**69.** ಅವನೇ ಜೀವನೀಡುವವನು ಮತ್ತು ಅವನೇ ಮರಣಗೊಳಿಸುವವನು. ಅವನು ಏನನ್ನಾದರೂ ತೀರ್ಮಾನಿಸಿದರೆ, ಅದಕ್ಕೆ "ಆಗು" ಎಂದು ಮಾತ್ರ ಆದೇಶಿಸುತ್ತಾನೆ. ಆಗ ಅದು ಆಗುತ್ತದೆ.

هُوَ الَّذِي يُحْيِي وَيُمِيتُ ۚ فَإِذَا قَضَىٰ أَمْرًا فَإِنَّمَا يَقُولُ لَهُ كُن فَيَكُونُ ﴿٦٩﴾

**70.** ಅಲ್ಲಾಹನ ದೃಷ್ಟಾಂತಗಳ ಕುರಿತು ವಾಗ್ವಾದ ಮಾಡುವವರನ್ನು ನೀನು ಕಂಡಿಲ್ಲವೇ? - ಅವರು ಹೇಗೆ (ಸತ್ಯದ ಕಡೆಯಿಂದ) ವ್ಯತಿಕ್ರಮಿಸುತ್ತಾರೆ.

أَلَمْ تَرَ إِلَى الَّذِينَ يُجَادِلُونَ فِي آيَاتِ اللَّهِ ۚ أَنَّىٰ يُصْرَفُونَ ﴿٧٠﴾

**71.** ಅವರು ಗ್ರಂಥವನ್ನೂ ನಮ್ಮ ಸಂದೇಶವಾಹಕರೊಂದಿಗೆ ನಾವು ಕಳುಹಿಸಿದುದನ್ನೂ ಸುಳ್ಳಾಗಿಸುತ್ತಾರೆ. ಆದರೆ ಬೇಗನೆ ಅವರು (ಅದರ ದುಷ್ಪರಿಣಾಮವನ್ನು) ಮನಗಾಣುವರು -

الَّذِينَ كَذَّبُوا بِالْكِتَابِ وَبِمَا أَرْسَلْنَا بِهِ رُسُلَنَا ۖ فَسَوْفَ يَعْلَمُونَ ﴿٧١﴾

**72.** ಕಬ್ಬಿಣದ ಪಟ್ಟಿಗಳನ್ನೂ ಸಂಕೋಲೆಗಳನ್ನೂ ಅವರ ಕೊರಳುಗಳಿಗೆ ತೊಡಿಸಲಾಗುವುದು. ಅವರನ್ನು ಎಳೆದೊಯ್ಯಲಾಗುವುದು -

إِذِ الْأَغْلَالُ فِي أَعْنَاقِهِمْ وَالسَّلَاسِلُ يُسْحَبُونَ ﴿٧٢﴾

**73.** ಕುದಿಯುತ್ತಿರುವ ನೀರಿನೊಳಗೆ. ಅನಂತರ ಬೆಂಕಿಯಲ್ಲಿ ಅವರು ಉರಿಯಲ್ಪಡುವರು.

فِي الْحَمِيمِ ثُمَّ فِي النَّارِ يُسْجَرُونَ ﴿٧٣﴾

**74.** ಆ ಬಳಿಕ ಅವರೊಡನೆ ಹೀಗೆ ಕೇಳಲಾಗುವುದು: 'ನಿಮ್ಮ (ದೇವ) ಸಹಭಾಗಿಗಳು ಎಲ್ಲಿ? -

ثُمَّ قِيلَ لَهُمْ أَيْنَ مَا كُنتُمْ تُشْرِكُونَ ﴿٧٤﴾

**75.** 'ಅಲ್ಲಾಹನನ್ನು ಬಿಟ್ಟು?' ಆಗ ಅವರು ಉತ್ತರಿಸುವರು: 'ಅವರು ನಮ್ಮಿಂದ ಕಣ್ಮರೆಯಾಗಿದ್ದಾರೆ. ಅಲ್ಲ, ಇದಕ್ಕಿಂತ ಮುಂಚೆ ನಾವು ಏನನ್ನೂ ಕರೆದು ಪ್ರಾರ್ಥಿಸಲಿಲ್ಲ.' ಈ ರೀತಿಯಲ್ಲಿ ಅಲ್ಲಾಹನು ಅವಿಶ್ವಾಸಿಗಳನ್ನು ಗಾಬರಿಗೊಳಿಸುತ್ತಾನೆ.

مِن دُونِ اللَّهِ ۖ قَالُوا ضَلُّوا عَنَّا بَل لَّمْ نَكُن نَّدْعُو مِن قَبْلُ شَيْئًا ۚ كَذَٰلِكَ يُضِلُّ اللَّهُ الْكَافِرِينَ ﴿٧٥﴾

**76.** (ಅವರೊಡನೆ ಹೇಳಲಾಗುವುದು:) 'ಇದು ಯಾಕೆಂದರೆ, ನೀವು ಭೂಮಿಯಲ್ಲಿ ಅನುಚಿತವಾಗಿ ಮೋಜು ಮಾಡುತ್ತಿದ್ದಿರಿ ಹಾಗೂ ದುರಹಂಕಾರದಿಂದ ವರ್ತಿಸುತ್ತಿದ್ದಿರಿ.

ذَٰلِكُم بِمَا كُنتُمْ تَفْرَحُونَ فِي الْأَرْضِ بِغَيْرِ الْحَقِّ وَبِمَا كُنتُمْ تَمْرَحُونَ ﴿٧٦﴾





**77.** '(ಆದ್ದರಿಂದ) ನೀವು ನರಕದ ಬಾಗಿಲುಗಳನ್ನು ಪ್ರವೇಶಿಸಿ ಅಲ್ಲೇ ಇದ್ದುಕೊಳ್ಳಿರಿ. ದುರಹಂಕಾರಿಗಳ ವಾಸಸ್ಥಳ ಬಲು ಕೆಟ್ಟದ್ದಾಗಿದೆ.'

ادْخُلُوا أَبْوَابَ جَهَنَّمَ خَالِدِينَ فِيهَا ۖ فَبِئْسَ مَثْوَى الْمُتَكَبِّرِينَ ﴿٧٧﴾

**78.** ನೀನು ತಾಳ್ಮೆ ವಹಿಸು. ಖಂಡಿತವಾಗಿಯೂ ಅಲ್ಲಾಹನ ವಾಗ್ದಾನ ಸತ್ಯವೇ ಆಗಿದೆ. ಒಂದು ವೇಳೆ ಅವರಿಗೆ ನಾವು ನೀಡಿದ ಮುನ್ನೆಚ್ಚರಿಕೆಯಲ್ಲಿ ಕೆಲವನ್ನು (ನಿನ್ನ ಜೀವಿತದಲ್ಲೇ) ನಿನಗೆ ತೋರಿಸಿಕೊಡುವೆವು ಅಥವಾ (ಅದರ ಈಡೇರಿಕೆಗೆ ಮುಂಚಿತವಾಗಿಯೇ) ನಾವು ನಿನ್ನನ್ನು ಮೃತಪಡಿಸುವೆವು. (ಹೇಗಿದ್ದರೂ) ನಮ್ಮ ಬಳಿಗೆಯೇ ಅವರ ಮರಳಿಕೆಯಾಗಿದೆ.

فَاصْبِرْ إِنَّ وَعْدَ اللَّهِ حَقٌّ ۚ فَإِمَّا نُرِيَنَّكَ بَعْضَ الَّذِي نَعِدُهُمْ أَوْ نَتَوَفَّيَنَّكَ فَإِلَيْنَا يُرْجَعُونَ ﴿٧٨﴾

**79.** ನಿನಗಿಂತ ಮುಂಚೆ ಸಹ ನಾವು ಎಷ್ಟೋ ಸಂದೇಶವಾಹಕರನ್ನು ಕಳುಹಿಸಿದ್ದೇವೆ. ಅವರಲ್ಲಿ ಕೆಲವರ ಕುರಿತು ನಾವು ನಿನಗೆ ತಿಳಿಸಿದ್ದೇವೆ; ಕೆಲವರ ಕುರಿತು ನಾವು ನಿನಗೆ ತಿಳಿಸಿಲ್ಲ. ಅಲ್ಲಾಹನ ಅನುಮತಿಯಿಲ್ಲದೆ ಯಾವನೇ ಸಂದೇಶವಾಹಕನಿಗೆ ಯಾವುದೇ ದೃಷ್ಟಾಂತವನ್ನು ತರಲು ಸಾಧ್ಯವಿಲ್ಲ. ಅಲ್ಲಾಹನ ಆಜ್ಞೆ ಬಂದಾಗ ಸಂಗತಿಗಳು ನ್ಯಾಯಯುತವಾಗಿ ತೀರ್ಮಾನಿಸಲ್ಪಡುತ್ತವೆ. ಆಗ ಸತ್ಯವನ್ನು ಸುಳ್ಳುಮಾಡುವವರು ಹಾನಿಗೊಳಗಾಗುತ್ತಾರೆ.

وَلَقَدْ أَرْسَلْنَا رُسُلًا مِّن قَبْلِكَ مِنْهُم مَّن قَصَصْنَا عَلَيْكَ وَمِنْهُم مَّن لَّمْ نَقْصُصْ عَلَيْكَ ۗ وَمَا كَانَ لِرَسُولٍ أَن يَأْتِيَ بِآيَةٍ إِلَّا بِإِذْنِ اللَّهِ ۚ فَإِذَا جَاءَ أَمْرُ اللَّهِ قُضِيَ بِالْحَقِّ وَخَسِرَ هُنَالِكَ الْمُبْطِلُونَ ﴿٧٩﴾

**80.** ನಿಮಗೆ ಜಾನುವಾರುಗಳನ್ನು ಸೃಷ್ಟಿಸಿ ಕೊಟ್ಟವನು ಅಲ್ಲಾಹನೇ ಆಗಿದ್ದಾನೆ - ಅವುಗಳಲ್ಲಿ ಕೆಲವನ್ನು ನೀವು ಸವಾರಿಗೆ ಮತ್ತು ಕೆಲವನ್ನು ನೀವು ಆಹಾರಕ್ಕಾಗಿ ಉಪಯೋಗಿಸಲಿಕ್ಕೋಸ್ಕರ.

اللَّهُ الَّذِي جَعَلَ لَكُمُ الْأَنْعَامَ لِتَرْكَبُوا مِنْهَا وَمِنْهَا تَأْكُلُونَ ﴿٨٠﴾

**81.** ಅವುಗಳಿಂದ ನಿಮಗೆ (ಬೇರೆಯೂ) ಪ್ರಯೋಜನಗಳಿವೆ. ಅವುಗಳ ಮೇಲೆ (ಭಾರ ಹೇರಿಸಿಕೊಂಡು) ನಿಮ್ಮ ಹೃದಯಗಳ ಇಚ್ಛೆಯನ್ನು ಪೂರೈಸಲಿಕ್ಕಾಗಿಯೂ. ಅವುಗಳ ಮೇಲೂ ನೌಕೆಗಳಲ್ಲೂ ನೀವು ಸಾಗಿಸಲ್ಪಡುತ್ತೀರಿ.

وَلَكُمْ فِيهَا مَنَافِعُ وَلِتَبْلُغُوا عَلَيْهَا حَاجَةً فِي صُدُورِكُمْ وَعَلَيْهَا وَعَلَى الْفُلْكِ تُحْمَلُونَ ﴿٨١﴾

وَيُرِيكُمْ ءَايَٰتِهِۦ فَأَىَّ ءَايَٰتِ ٱللَّهِ
تُنكِرُونَ ﴿٨١﴾

**82.** ಅವನು ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸುತ್ತಾನೆ. ಹಾಗಿರುವಾಗ ಅಲ್ಲಾಹನ ಯಾವ ದೃಷ್ಟಾಂತವನ್ನು ನೀವು ಅಲ್ಲಗಳೆಯುತ್ತೀರಿ?

أَفَلَمْ يَسِيرُوا۟ فِى ٱلْأَرْضِ فَيَنظُرُوا۟
كَيْفَ كَانَ عَٰقِبَةُ ٱلَّذِينَ مِن
قَبْلِهِمْ ۚ كَانُوٓا۟ أَكْثَرَ مِنْهُمْ وَأَشَدَّ
قُوَّةً وَءَاثَارًا فِى ٱلْأَرْضِ فَمَآ أَغْنَىٰ
عَنْهُم مَّا كَانُوا۟ يَكْسِبُونَ ﴿٨٢﴾

**83.** ಏನು, ಅವರು ಭೂಮಿಯಲ್ಲಿ ಸಂಚರಿಸಿ ಅವರ ಪೂರ್ವಿಕರ ಅಂತ್ಯ ಹೇಗಾಯಿತೆಂದು ಕಂಡಿಲ್ಲವೇ? ಅವರ ಸಂಖ್ಯಾಬಲ ಇವರಿಗಿಂತ ಹೆಚ್ಚಿತ್ತು. ಶಕ್ತಿಯಲ್ಲಿ ಮತ್ತು ಭೂಮಿಯ ಮೇಲೆ ಬಿಟ್ಟು ಹೋದ ಸ್ಮಾರಕಗಳಲ್ಲಿ ಅವರು ಮಿಗಿಲೆನಿಸಿದ್ದರು. ಆದರೆ ಅವರ ಸಂಪಾದನೆ ಅವರ ಪ್ರಯೋಜನಕ್ಕೆ ಬರಲಿಲ್ಲ.

فَلَمَّا جَآءَتْهُمْ رُسُلُهُم بِٱلْبَيِّنَٰتِ
فَرِحُوا۟ بِمَا عِندَهُم مِّنَ ٱلْعِلْمِ وَ
حَاقَ بِهِم مَّا كَانُوا۟ بِهِۦ يَسْتَهْزِءُونَ ﴿٨٣﴾

**84.** ಅವರ ಪ್ರವಾದಿಗಳು ಸುಸ್ಪಷ್ಟವಾದ ದೃಷ್ಟಾಂತಗಳ ಸಹಿತ ಅವರ ಬಳಿಗೆ ಬಂದಾಗಲೆಲ್ಲ ಅವರು ತಮಗಿದ್ದ ಜ್ಞಾನದ ಬಗ್ಗೆ ದುರಹಂಕಾರ ತೋರಿಸಿದರು. ಅವರು ಅಪಹಾಸ್ಯ ಮಾಡುತ್ತಿದ್ದುದು (ಶಿಕ್ಷೆ) ಅವರನ್ನು ಸುತ್ತುವರಿಯಿತು.

فَلَمَّا رَأَوْا۟ بَأْسَنَا قَالُوٓا۟ ءَامَنَّا بِٱللَّهِ
وَحْدَهُۥ وَكَفَرْنَا بِمَا كُنَّا بِهِۦ
مُشْرِكِينَ ﴿٨٤﴾

**85.** ಹಾಗೆ ಅವರು ನಮ್ಮ ಶಿಕ್ಷೆಯನ್ನು ಕಂಡಾಗ, 'ನಾವು ಏಕನಾದ ಅಲ್ಲಾಹನನ್ನು ನಂಬುತ್ತೇವೆ. ಅವನಿಗೆ ಕಲ್ಪಿಸುತ್ತಿದ್ದ ಸಹಭಾಗಿಗಳನ್ನು ನಾವು ನಿರಾಕರಿಸುತ್ತೇವೆ' ಎಂದು ಹೇಳಿದರು.

فَلَمْ يَكُ يَنفَعُهُمْ إِيمَٰنُهُمْ لَمَّا
رَأَوْا۟ بَأْسَنَا ۖ سُنَّتَ ٱللَّهِ ٱلَّتِى
قَدْ خَلَتْ فِى عِبَادِهِۦ ۖ وَخَسِرَ
هُنَالِكَ ٱلْكَٰفِرُونَ ﴿٨٥﴾ ع

**86.** ಆದರೆ, ನಮ್ಮ ಶಿಕ್ಷೆಯನ್ನು ಅವರು ಕಂಡಾಗ ಅವರು ತೋರ್ಪಡಿಸುವ ವಿಶ್ವಾಸ ಅವರಿಗೆ ಉಪಯುಕ್ತವಾಗಲಾರದು. ಇದು, ಅಲ್ಲಾಹನು ತನ್ನ ದಾಸರೊಡನೆ ಸದಾಕಾಲ ತೋರಿಸುವ ಕ್ರಮವಾಗಿದೆ. ಆಗ ಅವಿಶ್ವಾಸಿಗಳೆಲ್ಲ ನಾಶವಾದರು.

سُوْرَةُ حٰمٓ السَّجْدَةِ مَكِّيَّةٌ وَّهِيَ مَعَ الْبَسْمَلَةِ خَمْسٌ وَّخَمْسُوْنَ اٰيَةً وَّسِتَّةُ رُكُوْعَاتٍ

# 41. ಹಾ ಮೀಂ ಅಸ್ಸಜ್‌ದಃ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 55 ಆಯತ್‌ಗಳು ಹಾಗೂ 6 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

حٰمٓ ②

**2. ಹಾ ಮೀಂ.**[402]

تَنْزِيْلٌ مِّنَ الرَّحْمٰنِ الرَّحِيْمِ ③

**3. ದಯಾವಂತನೂ ಕಾರುಣ್ಯನಿಧಿಯೂ ಆದವನಿಂದ** (ಇದು) **ಅವತೀರ್ಣಗೊಂಡಿದೆ.**

كِتٰبٌ فُصِّلَتْ اٰيٰتُهٗ قُرْاٰنًا عَرَبِيًّا لِّقَوْمٍ يَّعْلَمُوْنَ ④

**4. ಇದು ವಚನಗಳು ಚೆನ್ನಾಗಿ ವಿವರಿಸಲ್ಪಟ್ಟಿರುವ ಒಂದು ಗ್ರಂಥವಾಗಿದೆ.** (ಇದು) **ಅತ್ಯಧಿಕವಾಗಿ ಓದಲ್ಪಡುವಂಥದ್ದೂ ಸ್ಪಷ್ಟವಾಗಿ ನಿರೂಪಿಸಲ್ಪಡುವ ಭಾಷೆಯಿಂದ ಕೂಡಿದ್ದೂ ಜ್ಞಾನವುಳ್ಳವರಿಗೋಸ್ಕರವೂ ಆಗಿದೆ.**

بَشِيْرًا وَّ نَذِيْرًا ۚ فَاَعْرَضَ اَكْثَرُهُمْ فَهُمْ لَا يَسْمَعُوْنَ ⑤

**5.** (ಇದು) **ಶುಭವಾರ್ತೆಯನ್ನೂ ಮುನ್ನೆಚ್ಚರಿಕೆಯನ್ನೂ ನೀಡುವಂಥದ್ದಾಗಿದೆ. ಆದರೆ ಅವರಲ್ಲಿ ಹೆಚ್ಚಿನವರು ವಿಮುಖರಾಗುತ್ತಾರೆ; ಅವರು ಕಿವಿಗೊಡುವುದಿಲ್ಲ.**

وَ قَالُوْا قُلُوْبُنَا فِيْٓ اَكِنَّةٍ مِّمَّا تَدْعُوْنَآ اِلَيْهِ وَفِيْٓ اٰذَانِنَا وَقْرٌ وَّ مِنْۢ بَيْنِنَا وَ بَيْنِكَ حِجَابٌ فَاعْمَلْ اِنَّنَا عٰمِلُوْنَ ⑥

**6. ಅವರು ಹೀಗೆ ಹೇಳುತ್ತಾರೆ: 'ನೀನು ಯಾವುದರ ಕಡೆಗೆ ನಮ್ಮನ್ನು ಕರೆಯುತ್ತೀಯೋ** *ಅದನ್ನು ಮನವರಿಕೆ ಮಾಡದಂತೆ* **ನಮ್ಮ ಹೃದಯಗಳು ಆಚ್ಛಾದಿಸಲ್ಪಟ್ಟಿವೆ. ನಮ್ಮ ಕಿವಿಗಳಿಗೆ ಕಿವುಡಿದೆ. ನಮ್ಮ ಮತ್ತು ನಿನ್ನ ಮಧ್ಯೆ ಒಂದು ಪರದೆ ಇದೆ. ಆದುದರಿಂದ ನಿನ್ನ ಕೆಲಸ ನೀನು ಮಾಡು. ನಮ್ಮ ಕೆಲಸ ನಾವು ಸಹ ಮಾಡುತ್ತೇವೆ.'**

402. ಹಾ=ಹಮೀದ್ (ಸ್ತುತ್ಯರ್ಹನು). ಮೀಂ=ಮಜೀದ್ (ಮಹಾಮಹಿಮನು). (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





قُلْ اِنَّمَآ اَنَا بَشَرٌ مِّثْلُكُمْ يُوْحٰٓى اِلَيَّ اَنَّمَآ اِلٰهُكُمْ اِلٰهٌ وَّاحِدٌ فَاسْتَقِيْمُوْٓا اِلَيْهِ وَ اسْتَغْفِرُوْهُ ۗ وَ وَيْلٌ لِّلْمُشْرِكِيْنَ ⑦

**7. ಹೇಳು: 'ನಾನು ಕೇವಲ ನಿಮ್ಮಂಥ ಒಬ್ಬ ಮನುಷ್ಯನಾಗಿದ್ದೇನೆ. ನಿಮ್ಮ ದೇವನು ಏಕನಾದ ದೇವನೆಂದು ನನಗೆ ದಿವ್ಯ ಸಂದೇಶ ನೀಡಲಾಗಿದೆ. ಆದ್ದರಿಂದ ನೀವು ಅವನ ಕಡೆಗೆ ಹೋಗುವ ನೇರವಾದ ಪಥದಲ್ಲಿ ಚಲಿಸಿರಿ ಮತ್ತು ಅವನ ಕ್ಷಮೆಯನ್ನು ಯಾಚಿಸಿರಿ.' ಬಹುದೇವಾರಾಧಕರಿಗೆ ನಾಶವಿದೆ.**

الَّذِيْنَ لَا يُؤْتُوْنَ الزَّكٰوةَ وَ هُمْ بِالْاٰخِرَةِ هُمْ كٰفِرُوْنَ ⑧

**8. ಅವರು ಝಕಾತ್ ನೀಡದವರೂ ಪರಲೋಕವನ್ನು ಅಲ್ಲಗಳೆಯುವವರೂ ಆಗಿದ್ದಾರೆ.**

اِنَّ الَّذِيْنَ اٰمَنُوْا وَ عَمِلُوا الصّٰلِحٰتِ لَهُمْ اَجْرٌ غَيْرُ مَمْنُوْنٍ ⑨

**9. ಯಾರು ವಿಶ್ವಾಸ ಹೊಂದಿ ಸತ್ಕರ್ಮನಿರತರಾಗಿರುತ್ತಾರೋ, ಖಂಡಿತವಾಗಿಯೂ ಅವರಿಗೆ ಅಂತ್ಯಗೊಳ್ಳದ ಪ್ರತಿಫಲ ಲಭಿಸುವುದು.**

قُلْ اَئِنَّكُمْ لَتَكْفُرُوْنَ بِالَّذِيْ خَلَقَ الْاَرْضَ فِيْ يَوْمَيْنِ وَ تَجْعَلُوْنَ لَهٗٓ اَنْدَادًا ۗ ذٰلِكَ رَبُّ الْعٰلَمِيْنَ ⑩

**10. ಹೇಳು: 'ಭೂಮಿಯನ್ನು ಎರಡು ಘಟ್ಟಗಳಲ್ಲಿ ಸೃಷ್ಟಿಸಿದವನನ್ನು ನೀವು ನಂಬುವುದಿಲ್ಲವೇ? ಅವನಿಗೆ ನೀವು ಸರಿಸಾಟಿಗಳನ್ನು ಕಲ್ಪಿಸುತ್ತೀರಾ? ಅವನಾದರೋ ಸಕಲ ಲೋಕಗಳ ಪ್ರಭುವಾಗಿದ್ದಾನೆ.'**

وَ جَعَلَ فِيْهَا رَوَاسِيَ مِنْ فَوْقِهَا وَ بٰرَكَ فِيْهَا وَ قَدَّرَ فِيْهَآ اَقْوَاتَهَا فِيْٓ اَرْبَعَةِ اَيَّامٍ ۗ سَوَآءً لِّلسَّآئِلِيْنَ ⑪

**11. ಅವನು ಅದರ** (ಭೂಮಿಯ) **ಮೇಲೆ ಪರ್ವತಗಳನ್ನು ಉಂಟು ಮಾಡಿದ್ದಾನೆ; ಅದರಲ್ಲಿ ಸಮೃದ್ಧಿಯನ್ನು ಅನುಗ್ರಹಿಸಿದ್ದಾನೆ. ಅವನು ಅದರಲ್ಲಿ ನಾಲ್ಕು ಘಟ್ಟಗಳಲ್ಲಿ ಅದರ ಉತ್ಪನ್ನಗಳನ್ನು ಅಪೇಕ್ಷಕರಿಗೆ ತಕ್ಕ ಪ್ರಮಾಣದಲ್ಲಿ ಒದಗಿಸಿದ್ದಾನೆ.**

ثُمَّ اسْتَوٰٓى اِلَى السَّمَآءِ وَ هِيَ دُخَانٌ فَقَالَ لَهَا وَ لِلْاَرْضِ ائْتِيَا طَوْعًا اَوْ كَرْهًا ۗ قَالَتَآ اَتَيْنَا طَآئِعِيْنَ ⑫

**12. ಅನಂತರ ಅವನು ಆಕಾಶದ ಕಡೆಗೆ ಗಮನಿಸಿದನು. ಆಗ ಅದು** (ಒಂದು ರೀತಿಯ) **ಹೊಗೆಯಂತಿತ್ತು. ಅದರೊಡನೆ ಮತ್ತು ಭೂಮಿಯೊಡನೆ ಅವನು, 'ನೀವಿಬ್ಬರೂ ಇಷ್ಟವಿದ್ದರೂ ಇಷ್ಟವಿಲ್ಲದಿದ್ದರೂ** (ನನ್ನನ್ನು ಅನುಸರಿಸಲಿಕ್ಕೋಸ್ಕರ) **ಬನ್ನಿರಿ' ಎಂದು ಹೇಳಿದನು. ಆಗ ಅವೆರಡೂ 'ನಾವಿದೋ ಇಷ್ಟದಿಂದಲೇ** (ನಿನ್ನನ್ನು ಅನುಸರಿಸಲು) **ಬಂದಿದ್ದೇವೆ' ಎಂದು ಹೇಳಿದವು.**

**13.** ಹಾಗೆ ಅವನು ಅವುಗಳನ್ನು ಏಳು ಆಕಾಶಗಳನ್ನಾಗಿ ಎರಡು ಘಟ್ಟಗಳಲ್ಲಿ ಪೂರ್ಣಗೊಳಿಸಿದನು. ಪ್ರತಿಯೊಂದು ಆಕಾಶಕ್ಕೂ ಅದರ ಕರ್ತವ್ಯವನ್ನು ಅವನು ಅರುಹಿದನು. ಅತ್ಯಂತ ಕೆಳಗಿನ ಆಕಾಶವನ್ನು ಸಂರಕ್ಷಣೆಗೋಸ್ಕರ ಮತ್ತು (ಪ್ರಕಾಶಕ್ಕೋಸ್ಕರ) ಅವನು ದೀಪಗಳಿಂದ ಅಲಂಕರಿಸಿದನು. ಇದು ಪ್ರತಾಪಶಾಲಿಯೂ ಸರ್ವಜ್ಞನೂ ಆದವನ ಯೋಜನೆಯಾಗಿದೆ.

فَقَضٰىهُنَّ سَبْعَ سَمٰوٰتٍ فِيْ يَوْمَيْنِ وَ اَوْحٰى فِيْ كُلِّ سَمَآءٍ اَمْرَهَا ؕ وَ زَيَّنَّا السَّمَآءَ الدُّنْيَا بِمَصَابِيْحَ ۖۗ وَ حِفْظًا ؕ ذٰلِكَ تَقْدِيْرُ الْعَزِيْزِ الْعَلِيْمِ ﴿١٢﴾

**14.** ಅವರು ವಿಮುಖರಾದರೆ, 'ಆದ್ ಮತ್ತು ಸಮೂದ್ ಗೋತ್ರಗಳ ಮೇಲೆ ಎರಗಿದ ಶಿಕ್ಷೆಯಂತಹ ನಾಶಕರವಾದ ಒಂದು ಶಿಕ್ಷೆಯ ಬಗ್ಗೆ ನಾನು ನಿಮಗೆ ಮುನ್ನೆಚ್ಚರಿಕೆ ನೀಡುತ್ತೇನೆ' ಎಂದು ಹೇಳು.

فَاِنْ اَعْرَضُوْا فَقُلْ اَنْذَرْتُكُمْ صٰعِقَةً مِّثْلَ صٰعِقَةِ عَادٍ وَّ ثَمُوْدَ ﴿١٣﴾

**15.** 'ಅಲ್ಲಾಹನ ಹೊರತು ಬೇರೆ ಯಾರನ್ನೂ ಆರಾಧಿಸಬೇಡಿರಿ' (ಎಂಬ ಸಂದೇಶದೊಂದಿಗೆ) ಅವರ ಮುಂದಿನಿಂದಲೂ ಹಿಂದಿನಿಂದಲೂ ಸಂದೇಶವಾಹಕರು ಅವರ ಬಳಿಗೆ ಬಂದಾಗ ಅವರು, 'ನಮ್ಮ ಪ್ರಭು ಹಾಗೆ ಬಯಸಿದ್ದರೆ, ಅವನು ಖಂಡಿತವಾಗಿಯೂ ದೇವದೂತರನ್ನು (ಮಲಾಯಿಕ್) ಕಳುಹಿಸುತ್ತಿದ್ದನು. ಆದ್ದರಿಂದ ನೀವು ಯಾವ ಸಂದೇಶವನ್ನು ತಂದಿದ್ದೀರೋ ಅದನ್ನು ನಾವು ನಿರಾಕರಿಸುತ್ತೇವೆ' ಎಂದು ಹೇಳಿದರು.

اِذْ جَآءَتْهُمُ الرُّسُلُ مِنْۢ بَيْنِ اَيْدِيْهِمْ وَ مِنْ خَلْفِهِمْ اَلَّا تَعْبُدُوْۤا اِلَّا اللّٰهَ ؕ قَالُوْا لَوْ شَآءَ رَبُّنَا لَاَنْزَلَ مَلٰٓئِكَةً فَاِنَّا بِمَاۤ اُرْسِلْتُمْ بِهٖ كٰفِرُوْنَ ﴿١٤﴾

**16.** ಆದ್ ಗೋತ್ರದವರು ಭೂಮಿಯ ಮೇಲೆ ಅನ್ಯಾಯವಾಗಿ ದುರಂಹಕಾರದಿಂದ ವರ್ತಿಸಿದರು. 'ಶಕ್ತಿಯಲ್ಲಿ ನಮಗಿಂತ ಮಿಗಿಲಾದವರು ಯಾರು?' ಎಂದು ಅವರು ಹೇಳಿದರು. ಅವರನ್ನು ಸೃಷ್ಟಿಸಿದ ಅಲ್ಲಾಹನು ಶಕ್ತಿಯಲ್ಲಿ ಅವರಿಗಿಂತ ಮಿಗಿಲಾದವನೆಂದು ಅವರು ಕಾಣುವುದಿಲ್ಲವೇ? ಆದರೂ ಅವರು ನಮ್ಮ ದೃಷ್ಟಾಂತಗಳನ್ನು ಅಲ್ಲಗಳೆಯುತ್ತಲೇ ಇದ್ದರು.

فَاَمَّا عَادٌ فَاسْتَكْبَرُوْا فِي الْاَرْضِ بِغَيْرِ الْحَقِّ وَ قَالُوْا مَنْ اَشَدُّ مِنَّا قُوَّةً ؕ اَوَ لَمْ يَرَوْا اَنَّ اللّٰهَ الَّذِيْ خَلَقَهُمْ هُوَ اَشَدُّ مِنْهُمْ قُوَّةً ؕ وَ كَانُوْا بِاٰيٰتِنَا يَجْحَدُوْنَ ﴿١٥﴾

**17.** ಆದ್ದರಿಂದ, ಐಹಿಕ ಜೀವಿತದಲ್ಲಿ ಅಪಮಾನಕರವಾದ ಶಿಕ್ಷೆಯನ್ನು ಅವರು ಅನುಭವಿಸುವಂತಾಗಲು ಕೆಲವು ದುರ್ದಿನಗಳ ಕಾಲ ಒಂದು ಬಿರು

فَاَرْسَلْنَا عَلَيْهِمْ رِيْحًا صَرْصَرًا فِيْۤ اَيَّامٍ نَّحِسَاتٍ لِّنُذِيْقَهُمْ عَذَابَ





ಗಾಳಿ ಅವರ ಮೇಲೆ ಬೀಸುವಂತೆ ನಾವು ಮಾಡಿದೆವು. ಪರಲೋಕದ ಶಿಕ್ಷೆ ಹೆಚ್ಚು ಅಪಮಾನಕರವಾದುದು. ಅವರಿಗೆ ನೆರವೇನೂ ದೊರಕಲಾರದು.

الْخِزْيِ فِي الْحَيٰوةِ الدُّنْيَا ؕ وَ لَعَذَابُ الْاٰخِرَةِ اَخْزٰى وَ هُمْ لَا يُنْصَرُوْنَ ﴿١٦﴾

**18.** ಸಮೂದ್ ಗೋತ್ರಕ್ಕೂ ನಾವು ಮಾರ್ಗದರ್ಶನ ನೀಡಿದ್ದೆವು. ಆದರೆ ಅವರು ಸತ್ಪಥಕ್ಕಿಂತ ಅಂಧತ್ವವನ್ನು ಇಷ್ಟಪಟ್ಟರು. ಆದ್ದರಿಂದ, ಅವರ ದುಷ್ಕೃತ್ಯ ನಿಮಿತ್ತ ಅವರು ಅಪಮಾನಕರವಾದ ಶಿಕ್ಷೆಗೆ ತುತ್ತಾದರು.

وَ اَمَّا ثَمُوْدُ فَهَدَيْنٰهُمْ فَاسْتَحَبُّوا الْعَمٰى عَلَى الْهُدٰى فَاَخَذَتْهُمْ صٰعِقَةُ الْعَذَابِ الْهُوْنِ بِمَا كَانُوْا يَكْسِبُوْنَ ﴿١٧﴾

**19.** ಸತ್ಯವಿಶ್ವಾಸಿಗಳನ್ನೂ ಭಯಭಕ್ತಿ ಹೊಂದಿದವರನ್ನೂ ನಾವು ಕಾಪಾಡಿದೆವು.

وَ نَجَّيْنَا الَّذِيْنَ اٰمَنُوْا وَ كَانُوْا يَتَّقُوْنَ ﴿١٨﴾

**20.** ಆ ದಿನದಂದು ಅಲ್ಲಾಹನ ವಿರೋಧಿಗಳನ್ನು ಒಟ್ಟಾಗಿ ಸೇರಿಸಿ ನರಕದೆಡೆಗೆ ಸಾಗಿಸಿ ವಿವಿಧ ಶ್ರೇಣಿಗಳಲ್ಲಿ ವಿಂಗಡಿಸಲಾಗುವುದು.

وَ يَوْمَ يُحْشَرُ اَعْدَآءُ اللّٰهِ اِلَى النَّارِ فَهُمْ يُوْزَعُوْنَ ﴿١٩﴾

**21.** ಹಾಗೆ ಅವರು ಅದರ ಸಮೀಪಕ್ಕೆ ತಲಪಿದರೆ, ಅವರ ಕಿವಿಗಳೂ ಅವರ ಕಣ್ಣುಗಳೂ ಅವರ ಚರ್ಮಗಳೂ ಅವರ ಕೃತ್ಯಗಳ ಬಗ್ಗೆ ಅವರ ವಿರುದ್ಧ ಸಾಕ್ಷಿ ನುಡಿಯುವುವು.

حَتّٰۤى اِذَا مَا جَآءُوْهَا شَهِدَ عَلَيْهِمْ سَمْعُهُمْ وَ اَبْصَارُهُمْ وَ جُلُوْدُهُمْ بِمَا كَانُوْا يَعْمَلُوْنَ ﴿٢٠﴾

**22.** ಅವರು ತಮ್ಮ ಚರ್ಮಗಳೊಡನೆ, 'ನೀವೇಕೆ ನಮ್ಮ ವಿರುದ್ಧ ಸಾಕ್ಷಿ ಹೇಳಿದ್ದು?' ಎಂದು ಕೇಳುವರು. ಆಗ ಅವು ಹೇಳುವುವು: 'ಸರ್ವವಸ್ತುಗಳನ್ನೂ ಮಾತನಾಡಿಸಿದ ಅಲ್ಲಾಹನು ನಮ್ಮನ್ನು ಸಹ ಮಾತನಾಡಿಸಿದನು. ನಿಮ್ಮನ್ನು ಪ್ರಥಮದಲ್ಲಿ ಸೃಷ್ಟಿಸಿದವನು ಅವನೇ. ಅವನ ಬಳಿಗೆಯೇ ನೀವು ಮರಳಿಸಲ್ಪಡುವಿರಿ.'

وَ قَالُوْا لِجُلُوْدِهِمْ لِمَ شَهِدْتُّمْ عَلَيْنَا ؕ قَالُوْۤا اَنْطَقَنَا اللّٰهُ الَّذِيْۤ اَنْطَقَ كُلَّ شَيْءٍ وَّ هُوَ خَلَقَكُمْ اَوَّلَ مَرَّةٍ وَّ اِلَيْهِ تُرْجَعُوْنَ ﴿٢١﴾

**23.** ನಿಮ್ಮ ಕಿವಿಗಳಾಗಲಿ ನಿಮ್ಮ ಕಣ್ಣುಗಳಾಗಲಿ ನಿಮ್ಮ ಚರ್ಮಗಳಾಗಲಿ ನಿಮ್ಮ ವಿರುದ್ಧ ಸಾಕ್ಷ್ಯ ನೀಡದಿರಲಿಕ್ಕಾಗಿ ನೀವು ನಿಮ್ಮ ಚಪಲತೆಯನ್ನು ಅಡಗಿಸಿರ

وَ مَا كُنْتُمْ تَسْتَتِرُوْنَ اَنْ يَّشْهَدَ عَلَيْكُمْ سَمْعُكُمْ وَ لَاۤ اَبْصَارُكُمْ وَ

لَا جُلُوْدُكُمْ وَلٰكِنْ ظَنَنْتُمْ اَنَّ اللّٰهَ لَا يَعْلَمُ كَثِيْرًا مِّمَّا تَعْمَلُوْنَ ﴿۲۲﴾

ಲಿಲ್ಲ. ಬದಲು, ನಿಮ್ಮ ಕೃತ್ಯಗಳಲ್ಲಿ ಹೆಚ್ಚಿನವುಗಳ ಬಗ್ಗೆ ಅಲ್ಲಾಹನು (ಕೂಡ) ತಿಳಿಯುವುದಿಲ್ಲವೆಂದು ನೀವು ಭಾವಿಸಿದಿರಿ.

وَذٰلِكُمْ ظَنُّكُمُ الَّذِيْ ظَنَنْتُمْ بِرَبِّكُمْ اَرْدٰىكُمْ فَاَصْبَحْتُمْ مِّنَ الْخٰسِرِيْنَ ﴿۲۳﴾

**24.** ನಿಮ್ಮ ಪ್ರಭುವಿನ ಬಗ್ಗೆ ನಿಮ್ಮ ಭಾವನೆ ಅದಾಗಿತ್ತು. ಅದು ನಿಮ್ಮನ್ನು ನಾಶಗೊಳಿಸಿತು. ಆದ್ದರಿಂದ ನೀವು ನಷ್ಟಹೊಂದಿದವರ ಪೈಕಿಯಲ್ಲಿ ಸೇರಿದಿರಿ.

فَاِنْ يَّصْبِرُوْا فَالنَّارُ مَثْوًى لَّهُمْ وَاِنْ يَّسْتَعْتِبُوْا فَمَا هُمْ مِّنَ الْمُعْتَبِيْنَ ﴿۲۴﴾

**25.** ಈಗ ಅವರು ಸಹಿಸಬಲ್ಲವರಾದರೆ ನರಕವು ಅವರ ವಾಸಸ್ಥಳವಾಗಿದೆ. ಅವರು ಕ್ಷಮೆ ಯಾಚಿಸುವುದಾದರೆ (ಈಗ) ಅವರು ಕ್ಷಮಿಸಲ್ಪಡುವವರಲ್ಲಿ ಸೇರುವುದಿಲ್ಲ.

وَقَيَّضْنَا لَهُمْ قُرَنَآءَ فَزَيَّنُوْا لَهُمْ مَّا بَيْنَ اَيْدِيْهِمْ وَمَا خَلْفَهُمْ وَحَقَّ عَلَيْهِمُ الْقَوْلُ فِيْٓ اُمَمٍ قَدْ خَلَتْ مِنْ قَبْلِهِمْ مِّنَ الْجِنِّ وَالْاِنْسِ اِنَّهُمْ كَانُوْا خٰسِرِيْنَ ﴿۲۵﴾

**26.** ಅವರಿಗೆ ನಾವು ಕೆಲವು ಸಂಗಡಿಗರನ್ನು ಒದಗಿಸಿ ಕೊಟ್ಟಿದ್ದೆವು. ಅವರ ಮುಂದೆ ಇರುವುದನ್ನೂ ಹಿಂದೆ ಇರುವುದನ್ನೂ ಆ ಸಂಗಡಿಗರು ಅವರಿಗೆ ಸುಂದರವಾಗಿ ತೋರಿಸಿದರು. ಆದ್ದರಿಂದ ಅವರಿಗಿಂತ ಮುಂಚೆ ಗತಿಸಿದ ಪ್ರತಿಷ್ಠಿತರ ಮತ್ತು ಸಾಮಾನ್ಯರ ಸಮುದಾಯಗಳ ವಿರುದ್ಧ ವಚನ ಈಡೇರಿದಂತೆ ಇವರ ವಿರುದ್ಧ ಸಹ (ಈಡೇರಿತು). ದಿಟವಾಗಿಯೂ ಅವರು ನಷ್ಟಕ್ಕೀಡಾದವರಾಗಿದ್ದರು.

وَقَالَ الَّذِيْنَ كَفَرُوْا لَا تَسْمَعُوْا لِهٰذَا الْقُرْاٰنِ وَالْغَوْا فِيْهِ لَعَلَّكُمْ تَغْلِبُوْنَ ﴿۲۶﴾

**27.** ಅವಿಶ್ವಾಸಿಗಳು, 'ಈ ಖುರ್‌ಆನಿಗೆ ನೀವು ಕಿವಿಗೊಡಬೇಡಿರಿ. ನೀವು ಯಶಸ್ಸು ಗಳಿಸಬೇಕಾದರೆ (ಅದು ಓದಲ್ಪಡುವ ಸಂದರ್ಭದಲ್ಲಿ) ಗುಲ್ಲೆಬ್ಬಿಸಿರಿ' ಎಂದು ಹೇಳುತ್ತಾರೆ.

فَلَنُذِيْقَنَّ الَّذِيْنَ كَفَرُوْا عَذَابًا شَدِيْدًا وَّلَنَجْزِيَنَّهُمْ اَسْوَاَ الَّذِيْ كَانُوْا يَعْمَلُوْنَ ﴿۲۷﴾

**28.** ಆದುದರಿಂದ ಖಂಡಿತವಾಗಿಯೂ ಅವಿಶ್ವಾಸಿಗಳು ಕಠಿಣವಾದ ಶಿಕ್ಷೆಯನ್ನು ಅನುಭವಿಸುವಂತೆ ನಾವು ಮಾಡುವೆವು. ನಾವು ಅವರ ದುಷ್ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನೂ ನೀಡುವೆವು.

ذٰلِكَ جَزَآءُ اَعْدَآءِ اللّٰهِ النَّارُ لَهُمْ

**29.** ಅಲ್ಲಾಹನ ಶತ್ರುಗಳಿಗಿರುವ ಪ್ರತಿಫಲ ಅದೇ ಆಗಿದೆ - ನರಕ. ಅವರು ನಮ್ಮ ದೃಷ್ಟಾಂತಗಳನ್ನು





فِيْهَا دَارُ الْخُلْدِ جَزَآءً بِمَا كَانُوْا بِاٰيٰتِنَا يَجْحَدُوْنَ ﴿۲۸﴾

ಅಲ್ಲಗಳೆದುದರ ಫಲವಾಗಿ ಅವರಿಗೆ ಅಲ್ಲಿ (ನರಕದಲ್ಲಿ) ದೀರ್ಘಕಾಲ ವಾಸದ ಬೀಡು ಇರುವುದು.

وَقَالَ الَّذِيْنَ كَفَرُوْا رَبَّنَآ اَرِنَا الَّذَيْنِ اَضَلّٰنَا مِنَ الْجِنِّ وَالْاِنْسِ نَجْعَلْهُمَا تَحْتَ اَقْدَامِنَا لِيَكُوْنَا مِنَ الْاَسْفَلِيْنَ ﴿۲۹﴾

**30.** ಅವಿಶ್ವಾಸಿಗಳು ಹೇಳುವರು: 'ನಮ್ಮ ಪ್ರಭೂ, ನಮ್ಮನ್ನು ದಾರಿಗೆಡಿಸಿದ ಜಿನ್ನ್ ಮತ್ತು ಇನ್ಸ್ ಎರಡು ಪಂಗಡದವರನ್ನೂ ನೀನು ನಮಗೆ ತೋರಿಸಿಕೊಡು. ಅವರು ಅತ್ಯಂತ ಹೀನೈಸಲ್ಪಟ್ಟವರಾಗಲಿಕ್ಕಾಗಿ ನಾವು ಅವರನ್ನು ನಮ್ಮ ಪಾದಗಳಡಿಯಲ್ಲಿ ಹಾಕಿ ತುಳಿಯುವೆವು.'

اِنَّ الَّذِيْنَ قَالُوْا رَبُّنَا اللّٰهُ ثُمَّ اسْتَقَامُوْا تَتَنَزَّلُ عَلَيْهِمُ الْمَلٰٓئِكَةُ اَلَّا تَخَافُوْا وَلَا تَحْزَنُوْا وَاَبْشِرُوْا بِالْجَنَّةِ الَّتِيْ كُنْتُمْ تُوْعَدُوْنَ ﴿۳۰﴾

**31.** ಯಾರು 'ಅಲ್ಲಾಹನು ನಮ್ಮ ಪ್ರಭು' ಎಂದು ಹೇಳುತ್ತಾರೋ ಮತ್ತು ಸ್ಥಿರಚಿತ್ತರಾಗಿರುತ್ತಾರೋ ಅವರ ಬಳಿಗೆ ದೇವದೂತರು ಇಳಿದು ಬಂದು ಹೇಳುವರು : 'ನೀವು ಭಯಪಡಬೇಡಿರಿ. ವ್ಯಥೆಗೊಳ್ಳುವುದೂ ಬೇಡ. ನಿಮಗೆ ವಾಗ್ದಾನ ಮಾಡಲಾದ ಸ್ವರ್ಗದ ಬಗ್ಗೆ ನೀವು ಸಂತೋಷಪಡಿರಿ.

نَحْنُ اَوْلِيٰٓؤُكُمْ فِي الْحَيٰوةِ الدُّنْيَا وَفِي الْاٰخِرَةِ وَلَكُمْ فِيْهَا مَا تَشْتَهِيْٓ اَنْفُسُكُمْ وَلَكُمْ فِيْهَا مَا تَدَّعُوْنَ ﴿۳۱﴾

**32.** 'ಇಹಲೋಕದಲ್ಲೂ ಪರಲೋಕದಲ್ಲೂ ನಾವು ನಿಮ್ಮ ಮಿತ್ರರಾಗಿದ್ದೇವೆ. ನಿಮ್ಮ ಮನಸ್ಸು ಬಯಸುವುದೆಲ್ಲ ನಿಮಗೆ ಅಲ್ಲಿ ದೊರಕುವುದು. ನೀವು ಕೇಳುವುದೆಲ್ಲ ನಿಮಗೆ ಅಲ್ಲಿ ಲಭಿಸುವುದು.

نُزُلًا مِّنْ غَفُوْرٍ رَّحِيْمٍ ﴿۳۲﴾

**33.** 'ಅದು ಕ್ಷಮಾಶೀಲನೂ ಕಾರುಣ್ಯನಿಧಿಯೂ ಆದವನಿಂದ ಒಂದು ಸತ್ಕಾರವಾಗಿದೆ.'

وَمَنْ اَحْسَنُ قَوْلًا مِّمَّنْ دَعَآ اِلَى اللّٰهِ وَعَمِلَ صَالِحًا وَّقَالَ اِنَّنِيْ مِنَ الْمُسْلِمِيْنَ ﴿۳۳﴾

**34.** ಅಲ್ಲಾಹನೆಡೆಗೆ (ಜನರನ್ನು) ಆಹ್ವಾನಿಸುವ ಸತ್ಕರ್ಮ ನಿರತರಾಗಿರುವ ಹಾಗೂ 'ನಾನು ಖಂಡಿತವಾಗಿಯೂ ಮುಸ್ಲಿಮರ ಪೈಕಿಯವನಾಗಿದ್ದೇನೆ' ಎಂದು ಹೇಳುವವನಿಗಿಂತ ಉತ್ತಮ ಮಾತನ್ನಾಡುವವನು ಯಾರಿದ್ದಾನೆ?

**35.** ಒಳಿತು ಮತ್ತು ಕೆಡುಕು ಸಮಾನವಲ್ಲ. ಅತಿ ಉತ್ತಮವಾದ ಒಳಿತಿನ ಮೂಲಕ ನೀನು ಕೆಡುಕನ್ನು ತಡೆ. ಆಗ ನಿನ್ನ ಮತ್ತು ಅವನ ಮಧ್ಯೆ ಇರುವ ವಿರೋಧ ನೀಗಿ ಅವನು ನಿನ್ನ ಆಪ್ತಮಿತ್ರನಾಗುತ್ತಾನೆ.

وَلَا تَسْتَوِي الْحَسَنَةُ وَلَا السَّيِّئَةُ ۚ ادْفَعْ بِالَّتِي هِيَ أَحْسَنُ فَإِذَا الَّذِي بَيْنَكَ وَبَيْنَهُ عَدَاوَةٌ كَأَنَّهُ وَلِيٌّ حَمِيمٌ ﴿٣٥﴾

**36.** ಆದರೆ ತಾಳ್ಮೆವಹಿಸುವವರಿಗೆ ಹೊರತು ಅದು ಸಿದ್ಧಿಸದು - ಒಳಿತಿನ ಬಹ್ವಂಶವನ್ನು ಪಡೆದವರಿಗಲ್ಲದೆ ಅದು ಪ್ರಾಪ್ತವಾಗುವುದಿಲ್ಲ.

وَمَا يُلَقَّاهَا إِلَّا الَّذِينَ صَبَرُوا وَمَا يُلَقَّاهَا إِلَّا ذُو حَظٍّ عَظِيمٍ ﴿٣٦﴾

**37.** ಶೈತಾನನ ದುಷ್ಪ್ರೇರಣೆಗೆ ನೀನು ಗುರಿಯಾಗುವ ಸಂದರ್ಭದಲ್ಲಿ ಅಲ್ಲಾಹನ ಅಭಯವನ್ನು ಕೋರು. ನಿಶ್ಚಯವಾಗಿಯೂ ಅವನು ಸರ್ವವನ್ನು ಆಲಿಸುವವನೂ ಸರ್ವವನ್ನು ಬಲ್ಲವನೂ ಆಗಿದ್ದಾನೆ.

وَإِمَّا يَنْزَغَنَّكَ مِنَ الشَّيْطَانِ نَزْغٌ فَاسْتَعِذْ بِاللَّهِ ۖ إِنَّهُ هُوَ السَّمِيعُ الْعَلِيمُ ﴿٣٧﴾

**38.** ರಾತ್ರಿ-ಹಗಲು ಮತ್ತು ಸೂರ್ಯ-ಚಂದ್ರ ಇವು ಅವನ (ಅಲ್ಲಾಹನ) ದೃಷ್ಟಾಂತಗಳಲ್ಲಿ ಸೇರುತ್ತವೆ. ನೀವು ಸೂರ್ಯನಿಗಾಗಲಿ ಚಂದ್ರನಿಗಾಗಲಿ ಸಾಷ್ಟಾಂಗ ಪ್ರಣಾಮ ಮಾಡಬೇಡಿರಿ. ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ನೀವು ಸಾಷ್ಟಾಂಗವೆರಗಿರಿ - ನೀವು (ನಿಜವಾಗಿಯೂ) ಅವನನ್ನೇ ಆರಾಧಿಸುವುದಾದರೆ.

وَمِنْ آيَاتِهِ اللَّيْلُ وَالنَّهَارُ وَالشَّمْسُ وَالْقَمَرُ ۚ لَا تَسْجُدُوا لِلشَّمْسِ وَلَا لِلْقَمَرِ وَاسْجُدُوا لِلَّهِ الَّذِي خَلَقَهُنَّ إِنْ كُنْتُمْ إِيَّاهُ تَعْبُدُونَ ﴿٣٨﴾

**39.** ಅವರು ಅಹಂಭಾವ ತೋರಿಸುವುದಾದರೆ (ಅದು ಅವರ ಕೆಡುಕಿಗೇ ಆಗಿದೆ). ನಿನ್ನ ಪ್ರಭುವಿನ ಜೊತೆಗಿರುವವರು (ದೇವ ಸಾಮೀಪ್ಯ ಪಡೆದವರು) ರಾತ್ರಿ-ಹಗಲು ಅವನನ್ನು ಕೊಂಡಾಡುತ್ತಾರೆ. ಅವರು ದಣಿಯುವುದಿಲ್ಲ.

فَإِنِ اسْتَكْبَرُوا فَالَّذِينَ عِنْدَ رَبِّكَ يُسَبِّحُونَ لَهُ بِاللَّيْلِ وَالنَّهَارِ وَهُمْ لَا يَسْأَمُونَ ۩ ﴿٣٩﴾

**40.** ಇದು ಸಹ ಅವನ ದೃಷ್ಟಾಂತಗಳಲ್ಲಿ ಸೇರುತ್ತದೆ: ನೀನು ಭೂಮಿಯನ್ನು ಶುಷ್ಕವಾಗಿ ಕಾಣುತ್ತಿ. ನಾವು ಅದರ ಮೇಲೆ ಮಳೆ ಸುರಿಸಿದರೆ, ಅದು ಚೈತನ್ಯ ಹೊಂದಿ ಬೆಳೆಯುತ್ತದೆ.[403] ಅದಕ್ಕೆ ಜೀವಕೊಡುವವನು ಖಂಡಿತವಾಗಿಯೂ ಮೃತ ಪಟ್ಟವರನ್ನು ಸಹ ಬದುಕಿಸುವವನು. ನಿಶ್ಚಯವಾಗಿಯೂ ಸರ್ವ ವಿಚಾರಗಳಲ್ಲೂ ಅವನಿಗೆ ಸಾಮರ್ಥ್ಯವಿದೆ.

وَمِنْ آيَاتِهِ أَنَّكَ تَرَى الْأَرْضَ خَاشِعَةً فَإِذَا أَنْزَلْنَا عَلَيْهَا الْمَاءَ اهْتَزَّتْ وَرَبَتْ ۚ إِنَّ الَّذِي أَحْيَاهَا لَمُحْيِي الْمَوْتَىٰ ۚ إِنَّهُ عَلَىٰ كُلِّ شَيْءٍ قَدِيرٌ ﴿٤٠﴾

403. ಅದರಲ್ಲಿ ಪೈರು ಪಚ್ಚೆ, ಸಸ್ಯ ಲತಾದಿಗಳು ಬೆಳೆಯುತ್ತವೆ ಎಂದು ತಾತ್ಪರ್ಯ.





**41.** ಯಾರು ನಮ್ಮ ದೃಷ್ಟಾಂತಗಳ ಬಗ್ಗೆ ತಿರಿಚಿ ಹೇಳುತ್ತಾರೋ ಅವರು ನಮ್ಮಿಂದ ಮರೆಯಾಗಿರುವುದಿಲ್ಲ. ನರಕಾಗ್ನಿಯಲ್ಲಿ ಬೀಳುವವನು ಉತ್ತಮನೋ ಅಥವಾ ಪುನರುತ್ಥಾನ ದಿನದಂದು ಸುರಕ್ಷಿತವಾಗಿ ಬರುವವನೋ? ನಿಮ್ಮ ಇಚ್ಛೆಯಂತೆ ವರ್ತಿಸಿರಿ. ಖಂಡಿತವಾಗಿಯೂ ನಿಮ್ಮ ಕೃತ್ಯಗಳನ್ನೆಲ್ಲ ಅವನು ಕಾಣುತ್ತಾನೆ.

إِنَّ الَّذِينَ يُلْحِدُونَ فِي آيَاتِنَا لَا يَخْفَوْنَ عَلَيْنَا ۗ أَفَمَنْ يُلْقَىٰ فِي النَّارِ خَيْرٌ أَمْ مَنْ يَأْتِي آمِنًا يَوْمَ الْقِيَامَةِ ۚ اعْمَلُوا مَا شِئْتُمْ ۖ إِنَّهُ بِمَا تَعْمَلُونَ بَصِيرٌ ﴿٤١﴾

**42.** ಈ ಉದ್ಬೋಧಕ (ಖುರ್‌ಆನ್) ಅವರ ಬಳಿಗೆ ಬಂದಾಗ ಅದರ ಬಗ್ಗೆ ಅವಿಶ್ವಾಸ ಹೊಂದಿದವರು ನಷ್ಟ ಹೊಂದಿದವರಾಗಿದ್ದಾರೆ. ಅದು ನಿಶ್ಚಯವಾಗಿಯೂ ಮಹತ್ತಾದೊಂದು ಗ್ರಂಥವಾಗಿದೆ.

إِنَّ الَّذِينَ كَفَرُوا بِالذِّكْرِ لَمَّا جَاءَهُمْ ۖ وَإِنَّهُ لَكِتَابٌ عَزِيزٌ ﴿٤٢﴾

**43.** ಅಸತ್ಯ ಅದರ ಮುಂದಿನಿಂದಾಗಲಿ ಅದರ ಹಿಂದಿನಿಂದಾಗಲಿ ಅದನ್ನು ಸಮೀಪಿಸಲಾರದು. ಅದು ವಿವೇಕಶಾಲಿಯೂ ಸ್ತುತ್ಯರ್ಹನೂ ಆದವನಿಂದ ಅವತೀರ್ಣಗೊಂಡದ್ದಾಗಿದೆ.

لَا يَأْتِيهِ الْبَاطِلُ مِنْ بَيْنِ يَدَيْهِ وَلَا مِنْ خَلْفِهِ ۖ تَنْزِيلٌ مِنْ حَكِيمٍ حَمِيدٍ ﴿٤٣﴾

**44.** ನಿನಗಿಂತ ಮುಂಚೆ ಬಂದ ಸಂದೇಶವಾಹಕರೊಡನೆ ಹೇಳಿದ್ದು ಹೊರತು ಬೇರೇನನ್ನೂ ನಿನ್ನೊಡನೆ ಹೇಳಲಾಗಿಲ್ಲ. ನಿಶ್ಚಯವಾಗಿಯೂ ನಿನ್ನ ಪ್ರಭು ಕ್ಷಮಾದಾನದ ಯಜಮಾನನೂ ಯಾತನಾಮಯವಾದ ಶಿಕ್ಷೆಯ ಒಡೆಯನೂ ಆಗಿದ್ದಾನೆ.

مَا يُقَالُ لَكَ إِلَّا مَا قَدْ قِيلَ لِلرُّسُلِ مِنْ قَبْلِكَ ۚ إِنَّ رَبَّكَ لَذُو مَغْفِرَةٍ وَذُو عِقَابٍ أَلِيمٍ ﴿٤٤﴾

**45.** ನಾವು ಈ ಖುರ್‌ಆನನ್ನು (ಅರಬಿಯೇತರ) ಅನ್ಯಭಾಷೆಯಲ್ಲಿ ಅವತೀರ್ಣಗೊಳಿಸಿದ್ದರೆ, 'ಇದರ ಸೂಕ್ತಗಳೇಕೆ ಚೆನ್ನಾಗಿ ವಿಶದೀಕರಿಸಲ್ಪಟ್ಟಿಲ್ಲ? ಏನು, (ಗ್ರಂಥ) ಪರಭಾಷೆಯಲ್ಲಿ ಮತ್ತು ಪ್ರವಾದಿ ಅರಬಿಯನೇ?' ಎಂದು ಅವರು ಕೇಳುತ್ತಿದ್ದರು. ಹೇಳು: 'ಇದು ವಿಶ್ವಾಸಿಗಳಿಗೆ ಮಾರ್ಗದರ್ಶಕ ಮತ್ತು ರೋಗ ನಿವಾರಕವಾಗಿದೆ.' ಆದರೆ ಯಾರು ಅದನ್ನು ನಂಬುವುದಿಲ್ಲವೋ, ಅವರ ಕಿವಿಗಳಲ್ಲಿ ಕಿವುಡು ಇದೆ. ಅದರ ನಿಜರೂಪ ಅವರ ಕಣ್ಣಿಗೆ ಮರೆಯಾಗಿದೆ. ಅವರು ಬಹುದೂರದಿಂದ ಕರೆಯಲ್ಪಡುವವರಂತೆ ಇದ್ದಾರೆ.

وَلَوْ جَعَلْنَاهُ قُرْآنًا أَعْجَمِيًّا لَقَالُوا لَوْلَا فُصِّلَتْ آيَاتُهُ ۖ أَأَعْجَمِيٌّ وَعَرَبِيٌّ ۗ قُلْ هُوَ لِلَّذِينَ آمَنُوا هُدًى وَشِفَاءٌ ۖ وَالَّذِينَ لَا يُؤْمِنُونَ فِي آذَانِهِمْ وَقْرٌ وَهُوَ عَلَيْهِمْ عَمًى ۚ أُولَٰئِكَ يُنَادَوْنَ مِنْ مَكَانٍ بَعِيدٍ ﴿٤٥﴾

**46.** ನಾವು ಮೂಸಾರಿಗೆ ಗ್ರಂಥ ನೀಡಿದೆವು. ಆದರೆ ಅದರ ಕುರಿತು ಭಿನ್ನಾಭಿಪ್ರಾಯ ಉಂಟಾಯಿತು. ನಿನ್ನ ಪ್ರಭುವಿನಿಂದ ಮುಂಚೆಯೇ ನಿರ್ಣಯಿಸಲ್ಪಟ್ಟ ಒಂದು ವಚನ ಇಲ್ಲದಿರುತ್ತಿದ್ದರೆ ಅವರ ಮಧ್ಯೆ (ಆ ವಿಚಾರ) ಇತ್ಯರ್ಥವಾಗುತ್ತಿತ್ತು. ಖಚಿತವಾಗಿಯೂ ಅವರು ಆ ಬಗ್ಗೆ ಅಶಾಂತಕರವಾದ ಸಂಶಯದಲ್ಲಿದ್ದಾರೆ.

وَلَقَدْ آتَيْنَا مُوسَى الْكِتَابَ فَاخْتُلِفَ فِيهِ ۗ وَلَوْلَا كَلِمَةٌ سَبَقَتْ مِن رَّبِّكَ لَقُضِيَ بَيْنَهُمْ ۚ وَإِنَّهُمْ لَفِي شَكٍّ مِّنْهُ مُرِيبٍ ﴿٤٦﴾

**47.** ಯಾರಾದರೂ ಸತ್ಕಾರ್ಯ ಮಾಡಿದರೆ ಅದರ ಒಳಿತು ಅವನಿಗೆಯೇ ಇದೆ. ಯಾರಾದರೂ ದುಷ್ಕೃತ್ಯಗೆಯ್ದರೆ ಅದರ ಕೆಡುಕು ಸಹ ಅವನಿಗೆಯೇ. ನಿನ್ನ ಪ್ರಭು (ತನ್ನ) ದಾಸರಿಗೆ ಎಂದಿಗೂ ಅನ್ಯಾಯವೆಸಗಲಾರ.

مَّنْ عَمِلَ صَالِحًا فَلِنَفْسِهِ ۖ وَمَنْ أَسَاءَ فَعَلَيْهَا ۗ وَمَا رَبُّكَ بِظَلَّامٍ لِّلْعَبِيدِ ﴿٤٧﴾

**48.** ಪುನರುತ್ಥಾನದ ವೇಳೆಯ ಬಗ್ಗೆ ಜ್ಞಾನ ಅವನಿಗೆಯೇ ಮರಳಿಸಲ್ಪಡುತ್ತದೆ.[404] ಅವನಿಗೆ ತಿಳಿಯದೆ ಯಾವುದೇ ಹಣ್ಣು ಕೋಶದಿಂದ ಹೊರಬರುವುದಿಲ್ಲ. ಯಾವಳೇ ಹೆಣ್ಣು ಗರ್ಭಧರಿಸುವುದಿಲ್ಲ ಹಾಗೂ ಹೆರುವುದಿಲ್ಲ. ಅವನು ಅವರನ್ನು ಕರೆದು "ನನ್ನ 'ಸಹಭಾಗಿಗಳು' ಎಲ್ಲಿದ್ದಾರೆ?" ಎಂದು ಆ ದಿನ ಕೇಳಿದಾಗ ಅವರು, 'ನಮ್ಮಲ್ಲಿ ಯಾರೂ (ಅದಕ್ಕೆ) ಸಾಕ್ಷಿಯಾಗಿಲ್ಲವೆಂದು ನಾವು ನಿನಗೆ ತಿಳಿಸಿಕೊಳ್ಳುತ್ತೇವೆ' ಎಂದು ಹೇಳುವರು.

إِلَيْهِ يُرَدُّ عِلْمُ السَّاعَةِ ۚ وَمَا تَخْرُجُ مِن ثَمَرَاتٍ مِّنْ أَكْمَامِهَا وَمَا تَحْمِلُ مِنْ أُنثَىٰ وَلَا تَضَعُ إِلَّا بِعِلْمِهِ ۚ وَيَوْمَ يُنَادِيهِمْ أَيْنَ شُرَكَائِي قَالُوا آذَنَّاكَ مَا مِنَّا مِن شَهِيدٍ ﴿٤٨﴾

**49.** ಅವರು ಮುಂಚೆ ಕರೆದು ಪ್ರಾರ್ಥಿಸುತ್ತಿದ್ದುದೆಲ್ಲ ಆಗ ಅವರಿಂದ ಕಣ್ಮರೆಯಾಗುವುವು. ತಮಗೆ ಯಾವುದೇ ರಕ್ಷಾಮಾರ್ಗವಿಲ್ಲವೆಂದು ಅವರು ಮನಗಾಣುವರು.

وَضَلَّ عَنْهُم مَّا كَانُوا يَدْعُونَ مِن قَبْلُ ۖ وَظَنُّوا مَا لَهُم مِّن مَّحِيصٍ ﴿٤٩﴾

**50.** ಒಳಿತಿಗೋಸ್ಕರ ಪ್ರಾರ್ಥಿಸುವುದರಲ್ಲಿ ಮನುಷ್ಯನು ದಣಿಯುವುದಿಲ್ಲ. ಆದರೆ ಅವನಿಗೆ ಕೆಡುಕು ತಟ್ಟುವುದಾದರೆ ನಿರಾಶೆಹೊಂದಿ ಭರವಸೆಯನ್ನೆಲ್ಲ ಬಿಟ್ಟುಬಿಡುತ್ತಾನೆ.

لَّا يَسْأَمُ الْإِنسَانُ مِن دُعَاءِ الْخَيْرِ وَإِن مَّسَّهُ الشَّرُّ فَيَئُوسٌ قَنُوطٌ ﴿٥٠﴾

**51.** ಅವನು ಒಂದು ವಿಪತ್ತಿಗೆ ತುತ್ತಾದ ಬಳಿಕ ನಮ್ಮ

وَلَئِنْ أَذَقْنَاهُ رَحْمَةً مِّنَّا مِن بَعْدِ

404. ಅಂದರೆ, ಅದರ ತಿಳುವಳಿಕೆ ಅವನಿಗೆ ಮಾತ್ರ ಇದೆ.





ಕೃಪೆಯ ರುಚಿಯನ್ನು ಅವನು ಸವಿಯುವಂತೆ ನಾವು ಮಾಡಿದರೆ ಖಂಡಿತವಾಗಿಯೂ ಅವನು, 'ಇದು ನನಗೆ ಸಲ್ಲಬೇಕಾದುದೇ ಆಗಿದೆ; ಅಂತ್ಯದಿನ ಬರುವುದೆಂದು ನಾನು ಭಾವಿಸುವುದಿಲ್ಲ, ಅಥವಾ ನಾನು ನನ್ನ ಪ್ರಭುವಿನ ಬಳಿಗೆ ಮರಳಿಸಲ್ಪಟ್ಟರೆ ನನಗೆ ಅವನ ಬಳಿ ಅತ್ಯುತ್ತಮ ಅನುಗ್ರಹಗಳು ಲಭಿಸುವುವು' ಎಂದು ಹೇಳುತ್ತಾನೆ. ಆಗ ನಾವು ಅವಿಶ್ವಾಸಿಗಳ ಕೃತ್ಯಗಳನ್ನೆಲ್ಲ ಅವರಿಗೆ ವಿವರಿಸಿಕೊಡುವೆವು. ಕಠಿಣವಾದ ಶಿಕ್ಷೆಯನ್ನು ಅವರು ಅನುಭವಿಸುವಂತೆಯೂ ಮಾಡುವೆವು.

ضَرَّاءَ مَسَّتْهُ لَيَقُولَنَّ هَٰذَا لِي وَمَا أَظُنُّ السَّاعَةَ قَائِمَةً وَلَئِن رُّجِعْتُ إِلَىٰ رَبِّي إِنَّ لِي عِندَهُ لَلْحُسْنَىٰ ۚ فَلَنُنَبِّئَنَّ الَّذِينَ كَفَرُوا بِمَا عَمِلُوا وَلَنُذِيقَنَّهُم مِّنْ عَذَابٍ غَلِيظٍ ﴿٥١﴾

**52.** ನಾವು ಮನುಷ್ಯನಿಗೆ ಏನಾದರೂ ಅನುಗ್ರಹವನ್ನು ದಯಪಾಲಿಸಿದರೆ ಅವನು (ನಮ್ಮಿಂದ) ಮುಖ ತಿರುಗಿಸಿ ಸ್ವೇಚ್ಛೆಯಿಂದ ಅಗಲಿ ಹೋಗುತ್ತಾನೆ. ಆದರೆ ಅವನನ್ನು ಕೆಡುಕೇನಾದರೂ ಸ್ಪರ್ಶಿಸಿದರೆ, ಅದೋ ಅವನು ದೀರ್ಘವಾದ ಪ್ರಾರ್ಥನೆಗೆ ತೊಡಗುತ್ತಾನೆ.

وَإِذَا أَنْعَمْنَا عَلَى الْإِنسَانِ أَعْرَضَ وَنَأَىٰ بِجَانِبِهِ وَإِذَا مَسَّهُ الشَّرُّ فَذُو دُعَاءٍ عَرِيضٍ ﴿٥٢﴾

**53.** ಹೇಳು: 'ನೀವು ಯೋಚಿಸಿ ನೋಡಿದ್ದೀರಾ - ಇದು ಅಲ್ಲಾಹನಿಂದಾಗಿದ್ದು ನೀವು ಅದನ್ನು ನಿರಾಕರಿಸುವುದಾದರೆ, ಸತ್ಯದಿಂದ ಬಹಳ ದೂರ ಓಡಿಹೋಗುವವನಿಗಿಂತ ದಾರಿತಪ್ಪಿದವನು ಬೇರೆ ಯಾರಿದ್ದಾನೆ?'

قُلْ أَرَأَيْتُمْ إِن كَانَ مِنْ عِندِ اللَّهِ ثُمَّ كَفَرْتُم بِهِ مَنْ أَضَلُّ مِمَّنْ هُوَ فِي شِقَاقٍ بَعِيدٍ ﴿٥٣﴾

54. ಇದು (ಈ ಖುರ್‌ಆನ್) ಸತ್ಯವಾದುದೆಂದು ಸ್ಪಷ್ಟವಾಗಿ ಮನವರಿಕೆಯಾಗುವಂತೆ ನಮ್ಮ ದೃಷ್ಟಾಂತಗಳನ್ನು ದಿಗಂತದಲ್ಲೂ ಸ್ವತಃ ಅವರಿಗೂ ನಾವು ಬೇಗನೆ ತೋರಿಸಿ ಕೊಡುವೆವು. ನಿನ್ನ ಪ್ರಭು ಎಲ್ಲ ಸಂಗತಿಗಳಿಗೂ ಸಾಕ್ಷಿಯಾಗಿರುವುದು (ಅವರಿಗೆ) ಸಾಲದೇ?

سَنُرِيهِمْ آيَاتِنَا فِي الْآفَاقِ وَفِي أَنفُسِهِمْ حَتَّىٰ يَتَبَيَّنَ لَهُمْ أَنَّهُ الْحَقُّ ۗ أَوَلَمْ يَكْفِ بِرَبِّكَ أَنَّهُ عَلَىٰ كُلِّ شَيْءٍ شَهِيدٌ ﴿٥٤﴾

**55.** ತಿಳಿದುಕೊಳ್ಳಿರಿ, ತಮ್ಮ ಪ್ರಭುವನ್ನು ಭೇಟಿಯಾಗುವ ಬಗ್ಗೆ ಅವರು ಸಂಶಯಗ್ರಸ್ತರೇ ಆಗಿದ್ದಾರೆ. ತಿಳಿದುಕೊಳ್ಳಿರಿ, ಅವನು ಎಲ್ಲವನ್ನೂ ಸುತ್ತುವರಿಯುವವನಾಗಿದ್ದಾನೆ.

أَلَا إِنَّهُمْ فِي مِرْيَةٍ مِّن لِّقَاءِ رَبِّهِمْ ۗ أَلَا إِنَّهُ بِكُلِّ شَيْءٍ مُّحِيطٌ ﴿٥٥﴾

سُوْرَةُ الشُّوْرٰى مَكِّيَّةٌ وَّهِيَ مَعَ الْبَسْمَلَةِ اَرْبَعٌ وَّخَمْسُوْنَ اٰيَةً وَّخَمْسَةُ رُكُوْعَاتٍ

# 42. ಅಶ್ಶೂರಾ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 54 ಆಯತ್‌ಗಳು ಹಾಗೂ 5 ರುಕೂಅ್‌ಗಳು ಇವೆ.

**1.** **ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2.** **ಹಾ ಮೀಂ.**[404]

حٰمٓ (٢)

**3.** **ಐನ್ ಸೀನ್ ಖಾಫ್.**[405]

عٓسٓقٓ (٣)

**4.** **ಈ ರೀತಿಯಾಗಿ, ಪ್ರತಾಪವಂತನೂ ವಿವೇಕಶಾಲಿಯೂ ಆದ ಅಲ್ಲಾಹನು, ನಿನ್ನ ಪೂರ್ವಿಕರಿಗೆ ಸಂದೇಶ ಅರುಹಿದಂತೆ ನಿನಗೆ ಸಹ ಸಂದೇಶ ಅರುಹುತ್ತಾನೆ.**

كَذٰلِكَ يُوْحِيْٓ اِلَيْكَ وَاِلَى الَّذِيْنَ مِنْ قَبْلِكَ ۙ اللّٰهُ الْعَزِيْزُ الْحَكِيْمُ (٤)

**5.** **ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವ ಎಲ್ಲವೂ ಅವನದ್ದಾಗಿವೆ. ಅವನು ಸರ್ವೋನ್ನತನೂ ಮಹಾಮಹಿಮನೂ ಆಗಿದ್ದಾನೆ.**

لَهٗ مَا فِي السَّمٰوٰتِ وَمَا فِي الْاَرْضِ ۭ وَهُوَ الْعَلِيُّ الْعَظِيْمُ (٥)

**6.** **ಆಕಾಶಗಳು ಅವುಗಳ ಮೇಲ್ಭಾಗದಿಂದ ಬಿರುಕು ಬಿಡಲು ಕಾಲ ಸನ್ನಿಹಿತವಾಗಿದೆ. ದೇವದೂತರು ತಮ್ಮ ಪ್ರಭುವಿನ ಸ್ತುತಿಕೀರ್ತನೆ ಮಾಡುವುದರೊಂದಿಗೆ ಅವನ ಪರಿಶುದ್ಧತೆಯನ್ನು ಕೊಂಡಾಡುತ್ತಾ ಭೂಮಿಯಲ್ಲಿರುವವರ ಪಾಪ ವಿಮುಕ್ತಿಗೋಸ್ಕರ ಪ್ರಾರ್ಥಿಸುತ್ತಿದ್ದಾರೆ. ತಿಳಿದುಕೊಳ್ಳಿರಿ, ದಿಟವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

تَكَادُ السَّمٰوٰتُ يَتَفَطَّرْنَ مِنْ فَوْقِهِنَّ وَالْمَلٰۗىِٕكَةُ يُسَبِّحُوْنَ بِحَمْدِ رَبِّهِمْ وَيَسْتَغْفِرُوْنَ لِمَنْ فِي الْاَرْضِ ۭ اَلَآ اِنَّ اللّٰهَ هُوَ الْغَفُوْرُ الرَّحِيْمُ (٦)

404. ಹಾ=ಹಮೀದ್ (ಸ್ತುತ್ಯರ್ಹನು). ಮೀಂ =ಮಜೀದ್ (ಮಹಾಮಹಿಮನು).

405. ಐನ್=ಅಲೀಂ (ಸರ್ವಜ್ಞನು). ಸೀನ್=ಸಮೀಅ್ (ಸರ್ವವನ್ನು ಆಲಿಸುವವನು). ಖಾಫ್=ಖದೀರ್ (ಸರ್ವಶಕ್ತನು). ಈ ಎಲ್ಲ ವಿಶೇಷಗುಣಗಳುಳ್ಳ ಅಲ್ಲಾಹನು ಈ ಖುರ್‌ಆನನ್ನು ಅವತೀರ್ಣಗೊಳಿಸಿದ್ದಾನೆ ಎಂದು ತಾತ್ಪರ್ಯ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**7.** **ಯಾರು ಅವನನ್ನು** (ಅಲ್ಲಾಹನನ್ನು) **ಬಿಟ್ಟು ಇತರರನ್ನು ತಮ್ಮ ರಕ್ಷಕರನ್ನಾಗಿ ಮಾಡಿಕೊಳ್ಳುತ್ತಾರೋ, ಅವರನ್ನು ಅಲ್ಲಾಹನು ವೀಕ್ಷಿಸುತ್ತಾ ಇರುತ್ತಾನೆ. ನೀನು ಅವರ ಮೇಲ್ನೋಟಗಾರನಲ್ಲ.**

وَالَّذِيْنَ اتَّخَذُوْا مِنْ دُوْنِهٖٓ اَوْلِيَاۗءَ اللّٰهُ حَفِيْظٌ عَلَيْهِمْ ڮ وَمَآ اَنْتَ عَلَيْهِمْ بِوَكِيْلٍ (٧)

**8.** **ಇದೇ ರೀತಿ, ಅರಬಿ ಭಾಷೆಯಲ್ಲಿರುವ ಖುರ್‌ಆನನ್ನು ನಾವು ನಿನಗೆ ಅವತೀರ್ಣಗೊಳಿಸಿದ್ದೇವೆ - ಮಾತೃನಗರ** (ಮಕ್ಕ)[406] **ಮತ್ತು ಅದರ ಸುತ್ತುಮುತ್ತಲಿನಲ್ಲಿರುವವರಿಗೆ ನೀನು ಮುನ್ನೆಚ್ಚರಿಕೆ ನೀಡಲಿಕ್ಕೋಸ್ಕರ ಹಾಗೂ ನಿಸ್ಸಂಶಯವಾಗಿ ಎಲ್ಲರನ್ನೂ ಒಟ್ಟುಗೂಡಿಸಲಾಗುವ ದಿನದ ಕುರಿತು ನೀನು ಮುನ್ನೆಚ್ಚರಿಕೆ ನೀಡಲಿಕ್ಕೋಸ್ಕರ.** (ಅಂದು) **ಒಂದು ಪಕ್ಷದವರು ಸ್ವರ್ಗದಲ್ಲೂ ಇನ್ನೊಂದು ಪಕ್ಷದವರು ಜ್ವಲಿಸುವ ನರಕದಲ್ಲೂ ಇರುವರು.**

وَكَذٰلِكَ اَوْحَيْنَآ اِلَيْكَ قُرْاٰنًا عَرَبِيًّا لِّتُنْذِرَ اُمَّ الْقُرٰى وَمَنْ حَوْلَهَا وَتُنْذِرَ يَوْمَ الْجَمْعِ لَا رَيْبَ فِيْهِ ۭ فَرِيْقٌ فِي الْجَنَّةِ وَفَرِيْقٌ فِي السَّعِيْرِ (٨)

**9.** **ಅಲ್ಲಾಹನು ಇಚ್ಛಿಸಿದ್ದರೆ ಅವರನ್ನೆಲ್ಲ ಅವನು ಒಂದೇ ಸಮುದಾಯವನ್ನಾಗಿ ಮಾಡುತ್ತಿದ್ದನು. ಆದರೆ ತಾನು ಇಷ್ಟಪಡುವವರನ್ನು ಅವನು ತನ್ನ ಕೃಪೆಯೊಳಗೆ ಸೇರಿಸಿಕೊಳ್ಳುತ್ತಾನೆ. ದುಷ್ಕರ್ಮಿಗಳಿಗೆ ರಕ್ಷಕನಾಗಿ ಮತ್ತು ಸಹಾಯಕನಾಗಿ ಯಾರೂ ಇಲ್ಲ.**

وَلَوْ شَاۗءَ اللّٰهُ لَجَعَلَهُمْ اُمَّةً وَّاحِدَةً وَّلٰكِنْ يُّدْخِلُ مَنْ يَّشَاۗءُ فِيْ رَحْمَتِهٖ ۭ وَالظّٰلِمُوْنَ مَا لَهُمْ مِّنْ وَّلِيٍّ وَّلَا نَصِيْرٍ (٩)

**10.** **ಅಲ್ಲಾಹನನ್ನು ಬಿಟ್ಟು ಅವರು** (ತಮಗೋಸ್ಕರ) **ಬೇರೆ ರಕ್ಷಕರನ್ನು ಮಾಡಿಕೊಂಡಿದ್ದಾರೋ? ಆದರೆ ಅಲ್ಲಾಹನೇ** (ನಿಜವಾದ) **ರಕ್ಷಕನು. ಅವನು ಮೃತರನ್ನು ಬದುಕಿಸುತ್ತಾನೆ. ಅವನಿಗೆ ಸರ್ವಸಾಮರ್ಥ್ಯವಿದೆ.**

اَمِ اتَّخَذُوْا مِنْ دُوْنِهٖٓ اَوْلِيَاۗءَ ۚ فَاللّٰهُ هُوَ الْوَلِيُّ وَهُوَ يُـحْيِ الْمَوْتٰى ۡ وَهُوَ عَلٰي كُلِّ شَيْءٍ قَدِيْرٌ (١٠)

**11.** **ಯಾವುದೇ ವಿಚಾರದಲ್ಲಿ ನೀವು ಭಿನ್ನಾಭಿಪ್ರಾಯ ಹೊಂದಿದರೆ ಅದರ ತೀರ್ಮಾನ ಅಲ್ಲಾಹನಲ್ಲಿದೆ.** (ಹೇಳು:) **'ಅವನೇ ನನ್ನ ಪ್ರಭುವಾದ ಅಲ್ಲಾಹನು. ಅವನ ಮೇಲೆ ನಾನು ಭರವಸೆಯನ್ನಿಡುತ್ತೇನೆ. ಅವನೆಡೆಗೆಯೇ ನಾನು** (ಸದಾ) **ಬಾಗುತ್ತೇನೆ.'**

وَمَا اخْتَلَفْتُمْ فِيْهِ مِنْ شَيْءٍ فَحُكْمُهٗٓ اِلَى اللّٰهِ ۭ ذٰلِكُمُ اللّٰهُ رَبِّيْ عَلَيْهِ تَوَكَّلْتُ ڰ وَاِلَيْهِ اُنِيْبُ (١١)

**12.** (ಅವನು) **ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನು. ನಿಮ್ಮ ವರ್ಗದಿಂದಲೇ ಅವನು ನಿಮಗೆ**

فَاطِرُ السَّمٰوٰتِ وَالْاَرْضِ ۭ جَعَلَ لَكُمْ مِّنْ

406. ಉಮ್ಮುಲ್ ಖುರಾ=ಮಾತೃನಗರ (ಮಕ್ಕ). ನಾಗರಿಕ ಮನುಷ್ಯನ ಪ್ರಥಮ ವಾಸಸ್ಥಳ.

ಜೋಡಿಗಳನ್ನು ಸೃಷ್ಟಿಸಿದ್ದಾನೆ. ಜಾನುವಾರುಗಳಿಂದಲೂ (ಅದರ) ಜೋಡಿಗಳನ್ನು ಅವನು ಸೃಷ್ಟಿಸಿದ್ದಾನೆ. ಆ ಮೂಲಕ ಅವನು ನಿಮ್ಮ ಸಂಖ್ಯೆಯನ್ನು ವೃದ್ಧಿಗೊಳಿಸುತ್ತಾನೆ. ಅವನಿಗೆ ಸಮಾನವಾಗಿ ಏನೂ ಇಲ್ಲ. ಅವನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.

أَنفُسِكُمْ أَزْوَاجًا وَمِنَ الْأَنْعَامِ أَزْوَاجًا ۖ
يَذْرَؤُكُمْ فِيهِ ۚ لَيْسَ كَمِثْلِهِ شَيْءٌ ۖ وَهُوَ
السَّمِيعُ الْبَصِيرُ ﴿١٢﴾

13. ಆಕಾಶಗಳ ಮತ್ತು ಭೂಮಿಯ ಕೀಲಿಗೈಗಳು ಅವನದ್ದಾಗಿವೆ. ಅವನು ತಾನು ಇಚ್ಛಿಸುವವರಿಗೆ ಆಹಾರವನ್ನು ವೃದ್ಧಿಗೊಳಿಸುತ್ತಾನೆ ಹಾಗೂ (ತಾನಿಚ್ಛಿಸುವವರಿಗೆ) ಮೊಟಕುಗೊಳಿಸುತ್ತಾನೆ. ದಿಟವಾಗಿಯೂ ಅವನು ಎಲ್ಲ ವಿಚಾರಗಳನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.

لَهُ مَقَالِيدُ السَّمَاوَاتِ وَالْأَرْضِ ۖ يَبْسُطُ
الرِّزْقَ لِمَن يَشَاءُ وَيَقْدِرُ ۚ إِنَّهُ بِكُلِّ شَيْءٍ
عَلِيمٌ ﴿١٣﴾

14. ನಾವು ನೂಹ್‌ರಿಗೆ ಆದೇಶಿಸಿದ, ನಿನಗೆ ಸಂದೇಶವಾಗಿ ನೀಡಿದ, ಇಬ್‌ರಾಹೀಂ, ಮೂಸಾ, ಈಸಾ ಎಂಬಿವರಿಗೆ ಆದೇಶಿಸಿದ ಅದೇ ವಿಚಾರಗಳು ನಿಮಗೆ ಧರ್ಮವಾಗಿ ನಿಶ್ಚಯಿಸಲ್ಪಟ್ಟಿವೆ. (ನಾವು ಹೇಳಿದೆವು:) 'ನೀವು ನಿಮ್ಮ ಧರ್ಮವನ್ನು ಸ್ಥಿರಗೊಳಿಸಿರಿ; ಅದರಲ್ಲಿ ನೀವು ಭಿನ್ನಾಭಿಪ್ರಾಯಹೊಂದಬೇಡಿರಿ.' ಬಹುದೇವಾರಾಧಕರನ್ನು ನೀನು ಯಾವುದರ ಕಡೆಗೆ ಆಹ್ವಾನಿಸುತ್ತೀಯೋ ಅದು ಅವರಿಗೆ ಬಹಳ ಪ್ರಯಾಸಕರವಾಗಿದೆ. ಅಲ್ಲಾಹನು ತಾನು ಇಚ್ಛಿಸುವವರನ್ನು ತನಗೋಸ್ಕರ ಆಯ್ಕೆ ಮಾಡುತ್ತಾನೆ. ಅವನೆಡೆಗೆ ಬಾಗುವವನನ್ನು ಅವನು ತನ್ನ ಕಡೆಗೆ ಮಾರ್ಗದರ್ಶನ ಮಾಡುತ್ತಾನೆ.

شَرَعَ لَكُم مِّنَ الدِّينِ مَا وَصَّىٰ بِهِ نُوحًا وَ
الَّذِي أَوْحَيْنَا إِلَيْكَ وَمَا وَصَّيْنَا بِهِ
إِبْرَاهِيمَ وَمُوسَىٰ وَعِيسَىٰ ۖ أَنْ أَقِيمُوا
الدِّينَ وَلَا تَتَفَرَّقُوا فِيهِ ۚ كَبُرَ عَلَى
الْمُشْرِكِينَ مَا تَدْعُوهُمْ إِلَيْهِ ۚ اللَّهُ
يَجْتَبِي إِلَيْهِ مَن يَشَاءُ وَيَهْدِي إِلَيْهِ
مَن يُنِيبُ ﴿١٤﴾

15. ತಮಗೆ ಜ್ಞಾನ ಲಭಿಸಿದ ಬಳಿಕ ತಮ್ಮೊಳಗಿನ ಪೈಪೋಟಿ ನಿಮಿತ್ತವಲ್ಲದೆ ಅವರು ಭಿನ್ನಮತ ಹೊಂದಿರಲಿಲ್ಲ. ಒಂದು ನಿಶ್ಚಿತ ಕಾಲಾವಧಿಯ ವರೆಗಿನ, ಮುಂಚೆಯೇ ನಿರ್ಣಯಿಸಲ್ಪಟ್ಟ ಒಂದು ವಚನ ನಿನ್ನ ಪ್ರಭುವಿನಿಂದ ಇಲ್ಲದಿರುತ್ತಿದ್ದರೆ (ಆ ವಿಚಾರ ಈಗಲೇ) ತೀರ್ಮಾನಿಸಲ್ಪಡುತ್ತಿತ್ತು. ಅವರ ನಂತರ ದೈವಿಕ ಗ್ರಂಥದ ವಾರೀಸುದಾರರು ಆ ಬಗ್ಗೆ ಕಳವಳಕರವಾದ ಸಂಶಯದಲ್ಲಿದ್ದಾರೆ.

وَمَا تَفَرَّقُوا إِلَّا مِن بَعْدِ مَا جَاءَهُمُ
الْعِلْمُ بَغْيًا بَيْنَهُمْ ۚ وَلَوْلَا كَلِمَةٌ
سَبَقَتْ مِن رَّبِّكَ إِلَىٰ أَجَلٍ مُّسَمًّى لَّقُضِيَ
بَيْنَهُمْ ۚ وَإِنَّ الَّذِينَ أُورِثُوا الْكِتَابَ مِن
بَعْدِهِمْ لَفِي شَكٍّ مِّنْهُ مُرِيبٍ ﴿١٥﴾





16. ಇದರೆಡೆಗೆ (ಈ ಅಧ್ಯಾಪನದ ಕಡೆಗೆ ಜನರನ್ನು) ನೀನು ಆಹ್ವಾನಿಸು. ನಿನಗೆ ಆಜ್ಞಾಪಿಸಿದ ಪ್ರಕಾರ ನೀನು ಋಜುಮಾರ್ಗದಲ್ಲಿ ಸ್ಥಿರವಾಗಿರು. ಅವರ ಕೆಟ್ಟ ಮನೋಭಿಲಾಷೆಗಳನ್ನು ನೀನು ಹಿಂಬಾಲಿಸಬೇಡ. ನೀನು ಹೇಳು: 'ಅಲ್ಲಾಹನು ನನಗೆ ಅವತೀರ್ಣಗೊಳಿಸಿದ ಗ್ರಂಥದಲ್ಲಿ ನಾನು ನಂಬಿಕೆಯುಳ್ಳವನಾಗಿದ್ದೇನೆ ಹಾಗೂ ನಿಮ್ಮ ಮಧ್ಯೆ ನ್ಯಾಯಯುತವಾಗಿ ತೀರ್ಮಾನ ಮಾಡಲಿಕ್ಕೆ ನಾನು ಆಜ್ಞಾಪಿಸಲ್ಪಟ್ಟಿದ್ದೇನೆ. ಅಲ್ಲಾಹನು ನಮ್ಮ ಮತ್ತು ನಿಮ್ಮ ಪ್ರಭುವಾಗಿದ್ದಾನೆ. ನಮಗೆ ನಮ್ಮ ಕರ್ಮಫಲವಿದೆ. ನಿಮಗೆ ನಿಮ್ಮ ಕರ್ಮಫಲವಿದೆ. ನಮ್ಮ ನಿಮ್ಮೊಳಗೆ ಜಗಳವಿಲ್ಲ. ಅಲ್ಲಾಹನು ನಮ್ಮನ್ನೆಲ್ಲ ಒಟ್ಟುಗೂಡಿಸುವನು. ಅವನೆಡೆಗೆಯೇ (ನಮ್ಮೆಲ್ಲರ) ಮರಳಿಕೆಯಾಗಿದೆ.'

فَلِذَٰلِكَ فَادْعُ ۖ وَاسْتَقِمْ كَمَا أُمِرْتَ ۖ
وَلَا تَتَّبِعْ أَهْوَاءَهُمْ ۖ وَقُلْ آمَنتُ بِمَا
أَنزَلَ اللَّهُ مِن كِتَابٍ ۖ وَأُمِرْتُ لِأَعْدِلَ
بَيْنَكُمُ ۖ اللَّهُ رَبُّنَا وَرَبُّكُمْ ۖ لَنَا أَعْمَالُنَا وَ
لَكُمْ أَعْمَالُكُمْ ۖ لَا حُجَّةَ بَيْنَنَا وَبَيْنَكُمُ ۖ
اللَّهُ يَجْمَعُ بَيْنَنَا ۖ وَإِلَيْهِ الْمَصِيرُ ﴿١٦﴾

17. ಅಲ್ಲಾಹನಿಗೆ (ಅಲ್ಲಾಹನ ಕರೆಗೆ) ಉತ್ತರ ನೀಡಲಾದ ಬಳಿಕ ಅವನ ಬಗ್ಗೆ ಯಾರು ವಾಗ್ವಾದ ಮಾಡುತ್ತಾರೋ ಅವರ ವಾಗ್ವಾದ ಅವರ ಪ್ರಭುವಿನ ಬಳಿಯಲ್ಲಿ ನಿರರ್ಥಕ. ಅವರ ಮೇಲೆ (ಅಲ್ಲಾಹನ) ಕ್ರೋಧವಿದೆ. ಅವರಿಗೆ ಕಠಿಣ ಶಿಕ್ಷೆಯೂ ಇದೆ.

وَالَّذِينَ يُحَاجُّونَ فِي اللَّهِ مِن بَعْدِ مَا
اسْتُجِيبَ لَهُ حُجَّتُهُمْ دَاحِضَةٌ عِندَ
رَبِّهِمْ وَعَلَيْهِمْ غَضَبٌ وَلَهُمْ عَذَابٌ
شَدِيدٌ ﴿١٧﴾

18. ಸತ್ಯದೊಂದಿಗೆ ಈ ಗ್ರಂಥವನ್ನು ಹಾಗೂ (ನ್ಯಾಯದ) ತಕ್ಕಡಿಯನ್ನು ಇಳಿಸಿದವನು ಅಲ್ಲಾಹನೇ. ಆ ನಿಗದಿತ ವೇಳೆ ಬೇಗನೆ ಬರಲೂಬಹುದೆಂದು ನಿನಗೆ ಹೇಗೆ ತಿಳಿಯುವುದು?

اللَّهُ الَّذِي أَنزَلَ الْكِتَابَ بِالْحَقِّ وَ
الْمِيزَانَ ۗ وَمَا يُدْرِيكَ لَعَلَّ السَّاعَةَ
قَرِيبٌ ﴿١٨﴾

19. ಅದರ (ಆ ನಿಗದಿತ ವೇಳೆಯ) ಬಗ್ಗೆ ವಿಶ್ವಾಸವಿಲ್ಲದವರು ಅದಕ್ಕೆ ತ್ವರೆ ಮಾಡುತ್ತಾರೆ. ಅದನ್ನು ಯಾರು ನಂಬುತ್ತಾರೋ ಅವರು ಆ ಬಗ್ಗೆ ಭಯಪಡುತ್ತಾರೆ. ಅದು ಸತ್ಯವೆಂದು ಅವರಿಗೆ ಗೊತ್ತಿದೆ. ತಿಳಿದುಕೊಳ್ಳಿರಿ, ಆ ನಿಗದಿತ ವೇಳೆಯ ಬಗ್ಗೆ ಯಾರು ವಾಗ್ವಾದ ಮಾಡುತ್ತಾರೋ ಅವರು ಹಾದಿ ತಪ್ಪಿ ಬಹಳ ದೂರ ಹೋದವರು.

يَسْتَعْجِلُ بِهَا الَّذِينَ لَا يُؤْمِنُونَ بِهَا ۖ
وَالَّذِينَ آمَنُوا مُشْفِقُونَ مِنْهَا ۖ وَ
يَعْلَمُونَ أَنَّهَا الْحَقُّ ۗ أَلَا إِنَّ الَّذِينَ
يُمَارُونَ فِي السَّاعَةِ لَفِي ضَلَالٍ بَعِيدٍ ﴿١٩﴾

اَللّٰهُ لَطِيْفٌۢ بِعِبَادِهٖ يَرْزُقُ مَنْ يَّشَآءُ ۚ وَهُوَ الْقَوِيُّ الْعَزِيْزُ ۝٢٠

**20.** ಅಲ್ಲಾಹನು ತನ್ನ ದಾಸರಿಗೆ ಅತ್ಯಂತ ದಯಾಮಯನಾಗಿದ್ದಾನೆ. ತಾನು ಇಚ್ಛಿಸುವವರಿಗೆ ಅವನು ಆಹಾರವನ್ನು ಒದಗಿಸುತ್ತಾನೆ. ಅವನು ಶಕ್ತಿಶಾಲಿಯೂ ಪ್ರತಾಪವಂತನೂ ಆಗಿದ್ದಾನೆ.

مَنْ كَانَ يُرِيْدُ حَرْثَ الْاٰخِرَةِ نَزِدْ لَهٗ فِيْ حَرْثِهٖ ۚ وَمَنْ كَانَ يُرِيْدُ حَرْثَ الدُّنْيَا نُؤْتِهٖ مِنْهَا وَمَا لَهٗ فِي الْاٰخِرَةِ مِنْ نَّصِيْبٍ ۝٢١

**21.** ಪರಲೋಕದ ಬೆಳೆಯನ್ನು ಯಾರು ಆಶಿಸುತ್ತಾನೋ, ಅವನ ಬೆಳೆಯನ್ನು ನಾವು ವೃದ್ಧಿಗೊಳಿಸುತ್ತೇವೆ. ಯಾರು ಇಹಲೋಕದ ಬೆಳೆಯನ್ನು ಆಶಿಸುತ್ತಾನೋ, ಅವನಿಗೆ ಅದನ್ನು ನಾವು ನೀಡುತ್ತೇವೆ. ಆದರೆ ಪರಲೋಕದಲ್ಲಿ ಅವನಿಗೇನೂ ಪಾಲು ಸಿಗಲಾರದು.

اَمْ لَهُمْ شُرَكٰٓؤُا شَرَعُوْا لَهُمْ مِّنَ الدِّيْنِ مَا لَمْ يَاْذَنْۢ بِهِ اللّٰهُ ۚ وَلَوْلَا كَلِمَةُ الْفَصْلِ لَقُضِيَ بَيْنَهُمْ ۚ وَاِنَّ الظّٰلِمِيْنَ لَهُمْ عَذَابٌ اَلِيْمٌ ۝٢٢

**22.** ಏನು, ಅಲ್ಲಾಹನು ಅನುಮತಿಸದಿದ್ದ ಏನನ್ನಾದರೂ ಧರ್ಮದಲ್ಲಿ ಅವರಿಗೆ ನ್ಯಾಯಬದ್ಧಗೊಳಿಸಿದ ಯಾರಾದರೂ (ದೇವ) ಸಹಭಾಗಿಗಳು ಅವರಿಗಿದ್ದಾರೆಯೇ? ತೀರ್ಮಾನದ ವಚನ ಇಲ್ಲದಿರುತ್ತಿದ್ದರೆ ಅವರ ಮಧ್ಯೆ (ಈಗಲೇ) ಇತ್ಯರ್ಥವಾಗುತ್ತಿತ್ತು. ಖಚಿತವಾಗಿಯೂ ದುಷ್ಕರ್ಮಿಗಳಿಗೆ ಕಠೋರ ಶಿಕ್ಷೆ ಇದೆ.

تَرَى الظّٰلِمِيْنَ مُشْفِقِيْنَ مِمَّا كَسَبُوْا وَهُوَ وَاقِعٌۢ بِهِمْ ۚ وَالَّذِيْنَ اٰمَنُوْا وَعَمِلُوا الصّٰلِحٰتِ فِيْ رَوْضٰتِ الْجَنّٰتِ ۚ لَهُمْ مَّا يَشَآءُوْنَ عِنْدَ رَبِّهِمْ ۚ ذٰلِكَ هُوَ الْفَضْلُ الْكَبِيْرُ ۝٢٣

**23.** ದುಷ್ಕರ್ಮಿಗಳು ತಮ್ಮ ದುಷ್ಕೃತ್ಯ ನಿಮಿತ್ತ ಭಯಭೀತರಾಗಿರುವುದನ್ನು ನೀನು ಕಾಣುವೆ. (ಆ ಶಿಕ್ಷೆ) ಅವರ ಮೇಲೆ ಬಂದೆರಗುವುದು. ಆದರೆ, ಯಾರು ವಿಶ್ವಾಸ ಹೊಂದಿ ಸತ್ಕರ್ಮ ನಿರತರಾಗಿರುತ್ತಾರೋ ಅವರು ಸ್ವರ್ಗೀಯ ತೋಟಗಳ ಉದ್ಯಾನಗಳಲ್ಲಿ ಇರುವರು. ತಾವು ಇಚ್ಛಿಸುವುದೆಲ್ಲವೂ ಅವರಿಗೆ ತಮ್ಮ ಪ್ರಭುವಿನ ಬಳಿಯಲ್ಲಿ ಸಿಗುವುದು. ಅದು ಬಲುದೊಡ್ಡ ಅನುಗ್ರಹವಾಗಿದೆ.

ذٰلِكَ الَّذِيْ يُبَشِّرُ اللّٰهُ عِبَادَهُ الَّذِيْنَ اٰمَنُوْا وَعَمِلُوا الصّٰلِحٰتِ ۚ قُلْ لَّآ اَسْـَٔلُكُمْ عَلَيْهِ اَجْرًا اِلَّا الْمَوَدَّةَ فِي الْقُرْبٰى ۚ وَمَنْ يَّقْتَرِفْ حَسَنَةً نَّزِدْ لَهٗ فِيْهَا حُسْنًا ۚ اِنَّ

**24.** ಇದು, ವಿಶ್ವಾಸ ಹೊಂದಿ ಸತ್ಕರ್ಮನಿರತರಾದ ತನ್ನ ದಾಸರಿಗೆ ಅಲ್ಲಾಹನು ನೀಡುವ ಶುಭವಾರ್ತೆಯಾಗಿದೆ. ಹೇಳು: 'ನಾನು ಅದಕ್ಕೆ ನಿಮ್ಮಿಂದ ನಿಕಟ ಸಂಬಂಧಿಕರ ಮಧ್ಯದಲ್ಲಿರುವ (ಪ್ರೀತಿಯಂತಹ) ಪ್ರೀತಿಯನ್ನು ಹೊರತು ಬೇರೆ ಪ್ರತಿಫಲವನ್ನೇನೂ ಕೇಳುವುದಿಲ್ಲ.' ಯಾರಾದರೂ ಒಂದು ಸತ್ಕಾರ್ಯವನ್ನು ಮಾಡಿದರೆ ಅದರಲ್ಲಿ ನಾವು ಅವನಿಗೆ ಒಳಿತನ್ನು ವೃದ್ಧಿಗೊಳಿಸು





اللّٰهَ غَفُوْرٌ شَكُوْرٌ ۝٢٤

ತ್ತೇವೆ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ (ಸತ್ಕಾರ್ಯವನ್ನು) ಮೆಚ್ಚುವವನೂ ಆಗಿದ್ದಾನೆ.

اَمْ يَقُوْلُوْنَ افْتَرٰى عَلَى اللّٰهِ كَذِبًا ۚ فَاِنْ يَّشَاِ اللّٰهُ يَخْتِمْ عَلٰى قَلْبِكَ ۚ وَيَمْحُ اللّٰهُ الْبَاطِلَ وَيُحِقُّ الْحَقَّ بِكَلِمٰتِهٖ ۚ اِنَّهٗ عَلِيْمٌۢ بِذَاتِ الصُّدُوْرِ ۝٢٥

**25.** ಏನು, 'ಅವನು (ಮುಹಮ್ಮದ್ ಪೈಗಂಬರ್) ಅಲ್ಲಾಹನ ಕುರಿತು ಸುಳ್ಳು ಸೃಷ್ಟನೆ ಮಾಡಿ ಹೇಳುತ್ತಾನೆ' ಎಂದು ಅವರು ಹೇಳುತ್ತಾರೋ? ಹಾಗಿದ್ದರೆ, ಅಲ್ಲಾಹನು ಇಚ್ಛಿಸಿದ್ದರೆ ನಿನ್ನ ಹೃದಯದ ಮೇಲೆ ಅವನು ಮುದ್ರೆ ಹಾಕುತ್ತಿದ್ದನು. ಬದಲಿಗೆ, ಅಲ್ಲಾಹನು ಅಸತ್ಯವನ್ನು ತೊಡೆದು ಹಾಕಿ ತನ್ನ ವಚನ ಮೂಲಕ ಸತ್ಯವನ್ನು ನೆಲೆಗೊಳಿಸುವನು. ದಿಟವಾಗಿಯೂ ಹೃದಯಗಳೊಳಗೆ ಏನಿದೆಯೆಂದು ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.

وَهُوَ الَّذِيْ يَقْبَلُ التَّوْبَةَ عَنْ عِبَادِهٖ وَيَعْفُوْا عَنِ السَّيِّاٰتِ وَيَعْلَمُ مَا تَفْعَلُوْنَ ۝٢٦

**26.** ಅವನು ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಪಾಪಗಳನ್ನು ಕ್ಷಮಿಸುವವನೂ ಆಗಿದ್ದಾನೆ. ನಿಮ್ಮ ಕೃತ್ಯಗಳನ್ನೆಲ್ಲ ಅವನು ಬಲ್ಲವನಾಗಿದ್ದಾನೆ.

وَيَسْتَجِيْبُ الَّذِيْنَ اٰمَنُوْا وَعَمِلُوا الصّٰلِحٰتِ وَيَزِيْدُهُمْ مِّنْ فَضْلِهٖ ۚ وَالْكٰفِرُوْنَ لَهُمْ عَذَابٌ شَدِيْدٌ ۝٢٧

**27.** ವಿಶ್ವಾಸಹೊಂದಿ ಸತ್ಕರ್ಮ ನಿರತರಾದವರ ಪ್ರಾರ್ಥನೆಗಳನ್ನು ಅವನು ಸ್ವೀಕರಿಸಿ ಅವರಿಗೆ ತನ್ನ ಅನುಗ್ರಹಗಳನ್ನು ಹೆಚ್ಚು ಹೆಚ್ಚು ದಯಪಾಲಿಸುತ್ತಾನೆ. ಅವಿಶ್ವಾಸಿಗಳಿಗಾದರೋ ಕಠೋರವಾದ ಶಿಕ್ಷೆ ಕಾದಿದೆ.

وَلَوْ بَسَطَ اللّٰهُ الرِّزْقَ لِعِبَادِهٖ لَبَغَوْا فِي الْاَرْضِ وَلٰكِنْ يُّنَزِّلُ بِقَدَرٍ مَّا يَشَآءُ ۚ اِنَّهٗ بِعِبَادِهٖ خَبِيْرٌۢ بَصِيْرٌ ۝٢٨

**28.** ಅಲ್ಲಾಹನು ತನ್ನ ದಾಸರಿಗೆ ಆಹಾರವನ್ನು ಸಮೃದ್ಧವಾಗಿ ನೀಡಿದ್ದರೆ ಅವರು ಭೂಮಿಯಲ್ಲಿ ಅತಿರೇಕವಾಗಿ ವರ್ತಿಸುತ್ತಿದ್ದರು. ಆದರೆ ತನ್ನ ಇಚ್ಛೆಯಂತೆ, (ಸರಿಯಾದ) ಅಳತೆಗನುಸಾರವಾಗಿ ಅವನು ಅದನ್ನು ಒದಗಿಸುತ್ತಾನೆ. ದಿಟವಾಗಿಯೂ ಅವನು ತನ್ನ ದಾಸರ ಬಗ್ಗೆ ಎಲ್ಲವನ್ನು ಅರಿಯುವವನೂ ಎಲ್ಲವನ್ನು ನೋಡುವವನೂ ಆಗಿದ್ದಾನೆ.

وَهُوَ الَّذِيْ يُنَزِّلُ الْغَيْثَ مِنْۢ بَعْدِ مَا قَنَطُوْا وَيَنْشُرُ رَحْمَتَهٗ ۚ وَهُوَ الْوَلِيُّ الْحَمِيْدُ ۝٢٩

**29.** ಅವರು ನಿರಾಶೆ ಹೊಂದಿದ ಬಳಿಕ ಮಳೆಯನ್ನು ಸುರಿಸುವವನೂ ತನ್ನ ಕಾರುಣ್ಯವನ್ನು ಹರಡುವವನೂ ಅವನೇ ಆಗಿದ್ದಾನೆ. ಅವನು ರಕ್ಷಕನೂ ಸ್ತುತ್ಯರ್ಹನೂ ಆಗಿದ್ದಾನೆ.

**30.** ಆಕಾಶಗಳ ಮತ್ತು ಭೂಮಿಯ ಸೃಷ್ಟಿ ಹಾಗೂ ಅವೆರಡರಲ್ಲೂ ಅವನು ವ್ಯಾಪಿಸುವಂತೆ ಮಾಡಿರುವ ಜೀವಿಗಳು ಅವನ ದೃಷ್ಟಾಂತಗಳಲ್ಲಿ ಸೇರುತ್ತವೆ. ತಾನು ಇಚ್ಛಿಸುವಾಗ ಅವುಗಳನ್ನೆಲ್ಲ ಒಟ್ಟುಸೇರಿಸುವ ಶಕ್ತಿ ಅವನಿಗಿದೆ.

وَمِنْ ءَايَٰتِهِۦ خَلْقُ ٱلسَّمَٰوَٰتِ وَٱلْأَرْضِ وَمَا بَثَّ فِيهِمَا مِن دَآبَّةٍ ۚ وَهُوَ عَلَىٰ جَمْعِهِمْ إِذَا يَشَآءُ قَدِيرٌ ﴿٣٠﴾

**31.** ನಿಮ್ಮ ಕೃತ್ಯಗಳ ನಿಮಿತ್ತವಾಗಿಯೇ ನಿಮ್ಮ ಮೇಲೆ ವಿಪತ್ತು ಬಂದೆರಗುತ್ತದೆ. ಆದರೆ ಹೆಚ್ಚಿನ ನಿಮ್ಮ ಪಾಪಗಳನ್ನು ಅವನು ಕ್ಷಮಿಸುತ್ತಾನೆ.

وَمَآ أَصَٰبَكُم مِّن مُّصِيبَةٍ فَبِمَا كَسَبَتْ أَيْدِيكُمْ وَيَعْفُوا۟ عَن كَثِيرٍ ﴿٣١﴾

**32.** ಭೂಮಿಯಲ್ಲಿ ಅಲ್ಲಾಹನ ಯೋಜನೆಯನ್ನು ನೀವು ನಿಷ್ಫಲಗೊಳಿಸಲಾರಿರಿ. ಅಲ್ಲಾಹನನ್ನು ಬಿಟ್ಟು ರಕ್ಷಕ ಅಥವಾ ಸಹಾಯಕ ಯಾರೂ ಇಲ್ಲ.

وَمَآ أَنتُم بِمُعْجِزِينَ فِى ٱلْأَرْضِ ۖ وَمَا لَكُم مِّن دُونِ ٱللَّهِ مِن وَلِىٍّ وَلَا نَصِيرٍ ﴿٣٢﴾

**33.** ಸಮುದ್ರದಲ್ಲಿ ಸಂಚರಿಸುವ ಪರ್ವತಗಳಂತಹ ಹಡಗುಗಳೂ ಅವನ ದೃಷ್ಟಾಂತಗಳಲ್ಲಿ ಸೇರುತ್ತವೆ.

وَمِنْ ءَايَٰتِهِ ٱلْجَوَارِ فِى ٱلْبَحْرِ كَٱلْأَعْلَٰمِ ﴿٣٣﴾

**34.** ತಾನಿಚ್ಛಿಸಿದರೆ ಮಾರುತವನ್ನು ಅವನು ಸ್ತಬ್ಧಗೊಳಿಸುವನು. ಅದರ ಪರಿಣಾಮವಾಗಿ (ಹಡಗುಗಳು) ಸಮುದ್ರದಲ್ಲಿ ನಿಶ್ಚಲಗೊಳ್ಳುವುವು. ನಿಸ್ಸಂದೇಹವಾಗಿಯೂ ಅತ್ಯಂತ ತಾಳ್ಮೆ ವಹಿಸುವವರಿಗೂ ಅತಿಯಾಗಿ ಕೃತಜ್ಞತೆ ತೋರಿಸುವವರಿಗೂ ಅದರಲ್ಲಿ ದೃಷ್ಟಾಂತ ಗಳಿವೆ.

إِن يَشَأْ يُسْكِنِ ٱلرِّيحَ فَيَظْلَلْنَ رَوَاكِدَ عَلَىٰ ظَهْرِهِۦٓ ۚ إِنَّ فِى ذَٰلِكَ لَءَايَٰتٍ لِّكُلِّ صَبَّارٍ شَكُورٍ ﴿٣٤﴾

**35.** ಅಥವಾ ಅವರ ಕೃತ್ಯಗಳ ನಿಮಿತ್ತ ಅವನು ಅವುಗಳನ್ನು ನಾಶಪಡಿಸಬಲ್ಲನು. ಆದರೆ ಅವನು ಹೆಚ್ಚಿನ ಅವರ ಪಾಪಗಳನ್ನು ಕ್ಷಮಿಸುತ್ತಾನೆ.

أَوْ يُوبِقْهُنَّ بِمَا كَسَبُوا۟ وَيَعْفُ عَن كَثِيرٍ ﴿٣٥﴾

**36.** ನಮ್ಮ ದೃಷ್ಟಾಂತಗಳ ಬಗ್ಗೆ ವಾಗ್ವಾದ ಮಾಡುವವರಿಗೆ ಯಾವುದೇ ರಕ್ಷಾಮಾರ್ಗವಿಲ್ಲವೆಂದು ಮನಗಾಣಿಸಲಿಕ್ಕೆ ಸಹ (ಅವರನ್ನು ನಾಶಪಡಿಸಲಾಗುತ್ತದೆ).

وَيَعْلَمَ ٱلَّذِينَ يُجَٰدِلُونَ فِىٓ ءَايَٰتِنَا مَا لَهُم مِّن مَّحِيصٍ ﴿٣٦﴾

**37.** ನಿಮಗೆ ನೀಡಲ್ಪಟ್ಟದ್ದು ಇಹಲೋಕ ಜೀವನದ ತಾತ್ಕಾಲಿಕ ಸೌಕರ್ಯ ಮಾತ್ರವಾಗಿದೆ. ಆದರೆ

فَمَآ أُوتِيتُم مِّن شَىْءٍ فَمَتَٰعُ ٱلْحَيَوٰةِ





ವಿಶ್ವಾಸಹೊಂದಿ ತಮ್ಮ ಭರವಸೆಯನ್ನೆಲ್ಲ ಅಲ್ಲಾಹನ ಮೇಲಿಟ್ಟುಕೊಂಡಿರುವವರಿಗೆ ಅಲ್ಲಾಹನ ಬಳಿಯಲ್ಲಿರುವಂಥದ್ದು ಅತ್ಯುತ್ತಮವೂ ಶಾಶ್ವತವೂ ಆಗಿದೆ.

ٱلدُّنْيَا ۖ وَمَا عِندَ ٱللَّهِ خَيْرٌ وَأَبْقَىٰ لِلَّذِينَ ءَامَنُوا۟ وَعَلَىٰ رَبِّهِمْ يَتَوَكَّلُونَ ﴿٣٧﴾

**38.** ಅವರು ಮಹಾ ಪಾಪಗಳನ್ನು ಮತ್ತು ದುಷ್ಕೃತ್ಯಗಳನ್ನು ತ್ಯಜಿಸುವವರೂ ಕೋಪ ಬಂದಾಗ (ತಡೆದು) ಕ್ಷಮೆ ನೀಡುವವರೂ ಆಗಿದ್ದಾರೆ.

وَٱلَّذِينَ يَجْتَنِبُونَ كَبَٰٓئِرَ ٱلْإِثْمِ وَٱلْفَوَٰحِشَ وَإِذَا مَا غَضِبُوا۟ هُمْ يَغْفِرُونَ ﴿٣٨﴾

**39.** ತಮ್ಮ ಪ್ರಭುವಿನ ಕರೆಗೆ ಅವರು ಓಗೊಡುತ್ತಾರೆ; ನಮಾಝನ್ನು ನಿಷ್ಠೆಯಿಂದ ನಿರ್ವಹಿಸುತ್ತಾರೆ; ಪರಸ್ಪರ ಸಮಾಲೋಚನೆ ಮಾಡಿ ತಮ್ಮ ಕಾರ್ಯಗಳನ್ನು ತೀರ್ಮಾನಿಸುತ್ತಾರೆ ಮತ್ತು ನಾವು ಅವರಿಗೆ ದಯಪಾಲಿಸಿದವುಗಳಿಂದ ವೆಚ್ಚಮಾಡುತ್ತಾರೆ.

وَٱلَّذِينَ ٱسْتَجَابُوا۟ لِرَبِّهِمْ وَأَقَامُوا۟ ٱلصَّلَوٰةَ وَأَمْرُهُمْ شُورَىٰ بَيْنَهُمْ وَمِمَّا رَزَقْنَٰهُمْ يُنفِقُونَ ﴿٣٩﴾

**40.** ತಮ್ಮ ಮೇಲೇನಾದರೂ ಅಕ್ರಮವೆಸಗಲ್ಪಟ್ಟರೆ ಅವರು ಪ್ರತಿರೋಧಿಸುತ್ತಾರೆ.

وَٱلَّذِينَ إِذَآ أَصَابَهُمُ ٱلْبَغْىُ هُمْ يَنتَصِرُونَ ﴿٤٠﴾

**41.** ಕೆಡುಕಿಗಿರುವ ಪ್ರತಿಫಲ ಅದಕ್ಕೆ ಸಮಾನವಾದ ಕೆಡುಕಾಗಿದೆ. ಆದರೆ ಯಾರಾದರೂ ಕ್ಷಮೆ ನೀಡಿದರೆ (ಮತ್ತು ಅದರ ಪರಿಣಾಮವಾಗಿ) ಒಳಿತುಂಟಾದರೆ ಅದರ ಪ್ರತಿಫಲ ಅವನಿಗೆ ಅಲ್ಲಾಹನಿಂದ ಲಭಿಸುವುದು. ದಿಟವಾಗಿಯೂ ಅವನು ದುಷ್ಕರ್ಮಿಗಳನ್ನು ಪ್ರೀತಿಸುವುದಿಲ್ಲ.

وَجَزَٰٓؤُا۟ سَيِّئَةٍ سَيِّئَةٌ مِّثْلُهَا ۖ فَمَنْ عَفَا وَأَصْلَحَ فَأَجْرُهُۥ عَلَى ٱللَّهِ ۚ إِنَّهُۥ لَا يُحِبُّ ٱلظَّٰلِمِينَ ﴿٤١﴾

**42.** ತಮ್ಮ ಮೇಲೆ ದೌರ್ಜನ್ಯವೆಸಗಲ್ಪಟ್ಟ ಬಳಿಕ ಯಾರಾದರೂ ನ್ಯಾಯೋಚಿತವಾಗಿ ಪ್ರತಿಕಾರ ಮಾಡಿದರೆ ಅದು ಆಕ್ಷೇಪಾರ್ಹವಲ್ಲ.

وَلَمَنِ ٱنتَصَرَ بَعْدَ ظُلْمِهِۦ فَأُو۟لَٰٓئِكَ مَا عَلَيْهِم مِّن سَبِيلٍ ﴿٤٢﴾

**43.** ಜನರನ್ನು ದೌರ್ಜನ್ಯಕ್ಕೀಡುಮಾಡಿ ನಾಡಿನಲ್ಲೆಲ್ಲ ಅನ್ಯಾಯ ಮತ್ತು ಅಕ್ರಮದಿಂದ ವರ್ತಿಸುವುದೇ ಆಕ್ಷೇಪಾರ್ಹವಾಗಿದೆ. ಅವರಿಗೆ ಯಾತನಾಮಯವಾದ ಶಿಕ್ಷೆ ಕಾದಿದೆ.

إِنَّمَا ٱلسَّبِيلُ عَلَى ٱلَّذِينَ يَظْلِمُونَ ٱلنَّاسَ وَيَبْغُونَ فِى ٱلْأَرْضِ بِغَيْرِ ٱلْحَقِّ ۚ أُو۟لَٰٓئِكَ لَهُمْ عَذَابٌ أَلِيمٌ ﴿٤٣﴾

**44.** ಯಾರಾದರೂ ತಾಳ್ಮೆ ವಹಿಸಿದರೆ ಮತ್ತು ಕ್ಷಮಿಸಿದರೆ, ನಿಸ್ಸಂದೇಹವಾಗಿಯೂ ಅದೊಂದು ದೃಢ ನಿರ್ಧಾರವೇ ಆಗಿದೆ.

وَلَمَن صَبَرَ وَغَفَرَ إِنَّ ذَٰلِكَ لَمِنْ عَزْمِ ٱلْأُمُورِ ﴿٤٤﴾

**45.** ಅಲ್ಲಾಹನು ಯಾರನ್ನಾದರೂ ದುಷ್ಕರ್ಮಿಯೆಂದು ತೀರ್ಮಾನಿಸಿದರೆ, ಆ ಮೇಲೆ ಅವನಿಗೆ ರಕ್ಷಕನಾಗಿ ಯಾರೂ ಇಲ್ಲ. ದುಷ್ಕರ್ಮಿಗಳು ಶಿಕ್ಷೆಯನ್ನು ಕಾಣುವಾಗ, 'ಇಲ್ಲಿಂದ ಹಿಂತಿರುಗಿ ಹೋಗುವ ಮಾರ್ಗವೇನಾದರೂ ಇದೆಯೇ?' ಎಂದು ಅವರು ಕೇಳುವುದನ್ನು ನೀನು ಕಾಣುವೆ.

وَمَن يُضْلِلِ اللَّهُ فَمَا لَهُ مِن وَلِيٍّ مِّن بَعْدِهِ ۗ وَتَرَى الظَّالِمِينَ لَمَّا رَأَوُا الْعَذَابَ يَقُولُونَ هَلْ إِلَىٰ مَرَدٍّ مِّن سَبِيلٍ ﴿٤٤﴾

**46.** ಅವಮಾನದಿಂದ ತಲೆತಗ್ಗಿಸಿ ಕೀಳ್ನೋಟ ಬೀರುವ ಸ್ಥಿತಿಯಲ್ಲಿ ಅವರನ್ನು ಅದರ (ನರಕಾಗ್ನಿಯ) ಮುಂದೆ ತರಲಾಗುವುದನ್ನು ನೀನು ಕಾಣುವೆ. ವಿಶ್ವಾಸಿಗಳು ಹೇಳುವರು: 'ತಮ್ಮನ್ನೂ ತಮ್ಮ ಕುಟುಂಬಗಳನ್ನೂ ನಾಶಪಡಿಸಿದವರೇ ಪುನರುತ್ಥಾನ ದಿನದಂದು ನಿಜವಾಗಿಯೂ ನಷ್ಟಹೊಂದಿದವರು.' ತಿಳಿದುಕೊಳ್ಳಿರಿ, ಖಂಡಿತವಾಗಿಯೂ ದುಷ್ಕರ್ಮಿಗಳು ದೀರ್ಘವಾದ ಶಿಕ್ಷೆಯಲ್ಲಿ ಕಳೆಯುವರು.

وَتَرَاهُمْ يُعْرَضُونَ عَلَيْهَا خَاشِعِينَ مِنَ الذُّلِّ يَنظُرُونَ مِن طَرْفٍ خَفِيٍّ ۗ وَقَالَ الَّذِينَ آمَنُوا إِنَّ الْخَاسِرِينَ الَّذِينَ خَسِرُوا أَنفُسَهُمْ وَأَهْلِيهِمْ يَوْمَ الْقِيَامَةِ ۗ أَلَا إِنَّ الظَّالِمِينَ فِي عَذَابٍ مُّقِيمٍ ﴿٤٥﴾

**47.** ಅವರಿಗೆ ಅಲ್ಲಾಹನ ಹೊರತು ಸಹಾಯ ನೀಡಬಲ್ಲ ರಕ್ಷಕರು ಯಾರೂ ಇರಲಾರರು. ಅಲ್ಲಾಹನು ಯಾರನ್ನು ದಾರಿತಪ್ಪಿದವನೆಂದು ತೀರ್ಮಾನಿಸುತ್ತಾನೋ ಅವನಿಗೆ ಬೇರೆ ಮಾರ್ಗವೇನೂ ಇಲ್ಲ.

وَمَا كَانَ لَهُم مِّنْ أَوْلِيَاءَ يَنصُرُونَهُم مِّن دُونِ اللَّهِ ۗ وَمَن يُضْلِلِ اللَّهُ فَمَا لَهُ مِن سَبِيلٍ ﴿٤٦﴾

**48.** ರದ್ದುಗೊಳಿಸಲಾಗದ ಒಂದು ದಿನ ಅಲ್ಲಾಹನಿಂದ ಬರುವುದಕ್ಕೆ ಮುಂಚಿತವಾಗಿ ನಿಮ್ಮ ಪ್ರಭುವಿನ ಕರೆಗೆ ನೀವು ಓಗೊಡಿರಿ. ಅಂದು ನಿಮಗೆ ಯಾವುದೇ ಆಶ್ರಯಸ್ಥಾನ ಇರಲಾರದು. (ತಪ್ಪನ್ನು) ನಿರಾಕರಿಸಲಿಕ್ಕೆ ಕೂಡ ಯಾವ ಸಾಧ್ಯತೆಯೂ ಇರಲಾರದು.

اسْتَجِيبُوا لِرَبِّكُم مِّن قَبْلِ أَن يَأْتِيَ يَوْمٌ لَّا مَرَدَّ لَهُ مِنَ اللَّهِ ۚ مَا لَكُم مِّن مَّلْجَإٍ يَوْمَئِذٍ وَمَا لَكُم مِّن نَّكِيرٍ ﴿٤٧﴾

**49.** ಇನ್ನು ಅವರು ವಿಮುಖರಾಗಿ ಹೋಗುವುದಾದರೆ, ನಾವು ನಿನ್ನನ್ನು ಅವರ ಕಾವಲುಗಾರನಾಗಿ ನೇಮಿಸಿಲ್ಲ. ಸಂದೇಶವನ್ನು ತಲಪಿಸುವುದು ಮಾತ್ರವೇ ನಿನ್ನ ಕರ್ತವ್ಯ. ನಾವು ಮನುಷ್ಯನಿಗೆ ನಮ್ಮ ಕರುಣೆಯ ಸವಿಯುಣ್ಣಿಸಿದರೆ, ಅವನು ಸಂತೋಷಭರಿತನಾಗುತ್ತಾನೆ. ಆದರೆ ಅವರ ಕೃತ್ಯ ನಿಮಿತ್ತ ಅವರ ಮೇಲೆ ವಿಪತ್ತು ಬಂದೆರಗಿದರೆ, ಅದೋ ಮನುಷ್ಯನು ಕೃತಘ್ನನಾಗುತ್ತಾನೆ.

فَإِنْ أَعْرَضُوا فَمَا أَرْسَلْنَاكَ عَلَيْهِمْ حَفِيظًا ۖ إِنْ عَلَيْكَ إِلَّا الْبَلَاغُ ۗ وَإِنَّا إِذَا أَذَقْنَا الْإِنسَانَ مِنَّا رَحْمَةً فَرِحَ بِهَا ۖ وَإِن تُصِبْهُمْ سَيِّئَةٌ بِمَا قَدَّمَتْ أَيْدِيهِمْ فَإِنَّ الْإِنسَانَ كَفُورٌ ﴿٤٨﴾





**50.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನದ್ದಾಗಿದೆ. ತಾನಿಚ್ಛಿಸುವುದನ್ನು ಅವನು ಸೃಷ್ಟಿಸುತ್ತಾನೆ. ತಾನಿಚ್ಛಿಸುವವರಿಗೆ ಅವನು ಪುತ್ರಿಯರನ್ನು ದಯಪಾಲಿಸುತ್ತಾನೆ. ಹಾಗೆಯೇ ತಾನಿಚ್ಛಿಸುವವರಿಗೆ ಅವನು ಪುತ್ರರನ್ನೂ ದಯಪಾಲಿಸುತ್ತಾನೆ.

لِّلَّهِ مُلْكُ السَّمَاوَاتِ وَالْأَرْضِ ۚ يَخْلُقُ مَا يَشَاءُ ۚ يَهَبُ لِمَن يَشَاءُ إِنَاثًا وَيَهَبُ لِمَن يَشَاءُ الذُّكُورَ ﴿٤٩﴾

**51.** ಅಥವಾ ಅವನು ಗಂಡು ಹೆಣ್ಣು ಎರಡನ್ನೂ ಅವರಿಗೆ ದಯಪಾಲಿಸುತ್ತಾನೆ. ತಾನಿಚ್ಛಿಸುವವರನ್ನು ಅವನು ಬಂಜೆಯರನ್ನಾಗಿಯೂ ಮಾಡುತ್ತಾನೆ. ನಿಸ್ಸಂದೇಹವಾಗಿಯೂ ಅವನು ಸರ್ವಜ್ಞನೂ ಶಕ್ತಿಶಾಲಿಯೂ ಆಗಿದ್ದಾನೆ.

أَوْ يُزَوِّجُهُمْ ذُكْرَانًا وَإِنَاثًا ۖ وَيَجْعَلُ مَن يَشَاءُ عَقِيمًا ۚ إِنَّهُ عَلِيمٌ قَدِيرٌ ﴿٥٠﴾

**52.** ವಹ್ಯ್ (ದೈವೀ ಪ್ರಕಾಶನ) ಮೂಲಕ ಅಥವಾ ತೆರೆಯ ಮರೆಯಿಂದ ಅಥವಾ ತನ್ನ ಆಜ್ಞಾನುಸಾರ ತಾನಿಚ್ಛಿಸುವ ಸಂದೇಶವನ್ನು ನೀಡುವಂತೆ ಒಬ್ಬ ಸಂದೇಶವಾಹಕನನ್ನು ಕಳುಹಿಸುವ ಮೂಲಕ ಹೊರತು ಒಬ್ಬ ಮನುಷ್ಯನೊಡನೆ ಅಲ್ಲಾಹನು ಮಾತನಾಡುವುದಿಲ್ಲ. ದಿಟವಾಗಿಯೂ ಅವನು ಸರ್ವೋನ್ನತನೂ ವಿವೇಕಶಾಲಿಯೂ ಆಗಿದ್ದಾನೆ.

وَمَا كَانَ لِبَشَرٍ أَن يُكَلِّمَهُ اللَّهُ إِلَّا وَحْيًا أَوْ مِن وَرَاءِ حِجَابٍ أَوْ يُرْسِلَ رَسُولًا فَيُوحِيَ بِإِذْنِهِ مَا يَشَاءُ ۚ إِنَّهُ عَلِيٌّ حَكِيمٌ ﴿٥١﴾

**53.** ಅದೇ ರೀತಿ ಒಂದು ಮಹಾದಿವ್ಯ ಸಂದೇಶವನ್ನು ನಮ್ಮ ಆಜ್ಞೆಯನುಸಾರ ನಾವು ನಿನಗೆ ಅವತೀರ್ಣಗೊಳಿಸಿದ್ದೇವೆ. ಗ್ರಂಥ ಯಾವುದೆಂದಾಗಲಿ ಸತ್ಯವಿಶ್ವಾಸವೇನೆಂದಾಗಲಿ ನಿನಗೆ ಗೊತ್ತಿರಲಿಲ್ಲ. ಆದರೆ, ನಾವು ಇದನ್ನು (ಈ ಸಂದೇಶವನ್ನು) ಒಂದು ಪ್ರಕಾಶವನ್ನಾಗಿ ಮಾಡಿದ್ದೇವೆ. ಅದರ ಮೂಲಕ ನಮ್ಮ ದಾಸರ ಪೈಕಿ ನಾವಿಚ್ಛಿಸುವವರಿಗೆ ಮಾರ್ಗದರ್ಶನ ಮಾಡುತ್ತೇವೆ. ನಿಸ್ಸಂಶಯವಾಗಿಯೂ ನೀನು (ಮನುಷ್ಯರನ್ನು) ಸತ್ಪಥದೆಡೆಗೆ ಮುನ್ನಡೆಸುತ್ತಿ -

وَكَذَٰلِكَ أَوْحَيْنَا إِلَيْكَ رُوحًا مِّنْ أَمْرِنَا ۚ مَا كُنتَ تَدْرِي مَا الْكِتَابُ وَلَا الْإِيمَانُ وَلَٰكِن جَعَلْنَاهُ نُورًا نَّهْدِي بِهِ مَن نَّشَاءُ مِنْ عِبَادِنَا ۚ وَإِنَّكَ لَتَهْدِي إِلَىٰ صِرَاطٍ مُّسْتَقِيمٍ ﴿٥٢﴾

**54.** (ಅಂದರೆ) ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವುಗಳ ಅಧಿಪತಿಯಾದ ಅಲ್ಲಾಹನ ಮಾರ್ಗದಲ್ಲಿ. ತಿಳಿದುಕೊಳ್ಳಿರಿ, ಎಲ್ಲವೂ ಅಲ್ಲಾಹನೆಡೆಗೆ ಮರಳುತ್ತವೆ.

صِرَاطِ اللَّهِ الَّذِي لَهُ مَا فِي السَّمَاوَاتِ وَمَا فِي الْأَرْضِ ۗ أَلَا إِلَى اللَّهِ تَصِيرُ الْأُمُورُ ﴿٥٣﴾

سُوْرَةُ الزُّخْرُفِ مَكِّيَّةٌ وَّهِيَ مَعَ الْبَسْمَلَةِ تِسْعُوْنَ اٰيَةً وَّسَبْعَةُ رُكُوْعَاتٍ

## 43. ಅಝ್ಝುಖ್‌ರುಫ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 90 ಆಯತ್‌ಗಳು ಹಾಗೂ 7 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

حٰمٓ ②

**2. ಹಾ ಮೀಂ.**[407]

وَالْكِتٰبِ الْمُبِيْنِ ③

**3. ಈ ಸುವ್ಯಕ್ತ ಗ್ರಂಥದಾಣೆ.**

اِنَّا جَعَلْنٰهُ قُرْءٰنًا عَرَبِيًّا لَّعَلَّكُمْ تَعْقِلُوْنَ ④

**4. ನೀವು ಮನವರಿಕೆ ಮಾಡಲಿಕ್ಕೋಸ್ಕರ ನಾವು ಇದನ್ನು ಸ್ಪಷ್ಟವಾಗಿ ವಿವರಿಸುವ** (ಅರಬಿ) **ಭಾಷೆಯಲ್ಲಿ ಖುರ್‌ಆನ್** (ಪದೇ ಪದೇ ಓದಲ್ಪಡುವ ಗ್ರಂಥ) **ಆಗಿ ಮಾಡಿರುವೆವು.**

وَاِنَّهٗ فِيْٓ اُمِّ الْكِتٰبِ لَدَيْنَا لَعَلِيٌّ حَكِيْمٌ ⑤

**5. ಇದು ನಮ್ಮ ಬಳಿಯಲ್ಲಿರುವ ಮೂಲ ಗ್ರಂಥದಲ್ಲಿರುವಂಥದ್ದೂ ಸರ್ವೋನ್ನತವೂ ಜ್ಞಾನ ಪೂರ್ಣವೂ ಆಗಿದೆ.**

اَفَنَضْرِبُ عَنْكُمُ الذِّكْرَ صَفْحًا اَنْ كُنْتُمْ قَوْمًا مُّسْرِفِيْنَ ⑥

**6. ಏನು, ನೀವು ಹದ್ದುಮೀರಿ ವರ್ತಿಸುವವರೆಂಬ ಕಾರಣಕ್ಕಾಗಿ ನಿಮಗೆ ಉಪದೇಶ ನೀಡುವುದರಿಂದ ನಾವು ನಿರ್ಲಕ್ಷ್ಯರಾಗುವೆವೋ?**

وَكَمْ اَرْسَلْنَا مِنْ نَّبِيٍّ فِي الْاَوَّلِيْنَ ⑦

**7. ಪೂರ್ವಿಕರಲ್ಲಿ ಎಷ್ಟೆಲ್ಲ ಪ್ರವಾದಿಗಳನ್ನು ನಾವು ಕಳುಹಿಸಿದ್ದೆವು!**

وَمَا يَاْتِيْهِمْ مِّنْ نَّبِيٍّ اِلَّا كَانُوْا بِهٖ يَسْتَهْزِءُوْنَ ⑧

**8. ಆದರೆ ಅವರ ಅಪಹಾಸ್ಯಕ್ಕೆ ಗುರಿಯಾಗದೆ ಯಾವ ಪ್ರವಾದಿಯೂ ಅವರ ಬಳಿಗೆ ಬಂದಿಲ್ಲ.**

407. ಹಾ=ಹಮೀದ್ (ಸ್ತುತ್ಯರ್ಹನು). ಮೀಂ=ಮಜೀದ್ (ಮಹಾಮಹಿಮನು). (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





فَاَهْلَكْنَآ اَشَدَّ مِنْهُمْ بَطْشًا وَّمَضٰى مَثَلُ الْاَوَّلِيْنَ ⑨

**9. ಹಿಡಿತದಲ್ಲಿ ಇವರಿಗಿಂತಲೂ ಹೆಚ್ಚು ಬಲಿಷ್ಠರಾಗಿದ್ದ** ಅವರನ್ನು **ನಾವು ನಾಶಪಡಿಸಿದೆವು. ಆ ಪೂರ್ವಿಕರ ನಿದರ್ಶನ ಇವರ ಮುಂದೆ ಇದೆ.**

وَلَئِنْ سَاَلْتَهُمْ مَّنْ خَلَقَ السَّمٰوٰتِ وَالْاَرْضَ لَيَقُوْلُنَّ خَلَقَهُنَّ الْعَزِيْزُ الْعَلِيْمُ ⑩

**10. 'ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದ್ದು ಯಾರು?' ಎಂದು ನೀನು ಅವರೊಡನೆ ಕೇಳಿದರೆ, 'ಪ್ರತಾಪಶಾಲಿಯೂ ಸರ್ವಜ್ಞನೂ ಆದವನು ಅವುಗಳನ್ನು ಸೃಷ್ಟಿಸಿದ್ದಾನೆ' ಎಂದು ಅವರು ಖಂಡಿತವಾಗಿಯೂ ಹೇಳುವರು.**

الَّذِيْ جَعَلَ لَكُمُ الْاَرْضَ مَهْدًا وَّجَعَلَ لَكُمْ فِيْهَا سُبُلًا لَّعَلَّكُمْ تَهْتَدُوْنَ ⑪

**11. ಅವನು ಭೂಮಿಯನ್ನು ನಿಮಗೆ ಒಂದು ತೊಟ್ಟಿಲನ್ನಾಗಿ ಮಾಡಿದ್ದಾನೆ. ನೀವು ಸರಿಯಾದ ದಾರಿಯಲ್ಲಿ ನಡೆಸಲ್ಪಡಲಿಕ್ಕಾಗಿ ಅದರಲ್ಲಿ ಮಾರ್ಗಗಳನ್ನೂ ಮಾಡಿದ್ದಾನೆ.**

وَالَّذِيْ نَزَّلَ مِنَ السَّمَآءِ مَآءًۢ بِقَدَرٍ فَاَنْشَرْنَا بِهٖ بَلْدَةً مَّيْتًا كَذٰلِكَ تُخْرَجُوْنَ ⑫

**12. ಅವನು ನಿಶ್ಚಿತ ಪ್ರಮಾಣದಲ್ಲಿ ಆಕಾಶದಿಂದ ಮಳೆಯನ್ನು ಸುರಿಸುತ್ತಾನೆ. ಆ ಮೂಲಕ ನಿರ್ಜೀವ ನೆಲವನ್ನು ನಾವು ಜೀವಂತಗೊಳಿಸುತ್ತೇವೆ. ಅದೇ ಪ್ರಕಾರ ನಿಮ್ಮನ್ನು ಸಹ** (ಪುನರುಜ್ಜೀವನಗೊಳಿಸಿ) **ಹೊರಡಿಸಲಾಗುವುದು.**

وَالَّذِيْ خَلَقَ الْاَزْوَاجَ كُلَّهَا وَجَعَلَ لَكُمْ مِّنَ الْفُلْكِ وَالْاَنْعَامِ مَا تَرْكَبُوْنَ ⑬

**13. ಅವನು ಎಲ್ಲ ಜೋಡಿಗಳನ್ನೂ ಸೃಷ್ಟಿಸಿದವನು. ನಿಮ್ಮ ಸಂಚಾರಕ್ಕೋಸ್ಕರ ಅವನು ಹಡಗುಗಳನ್ನೂ ಚತುಷ್ಪಾದಿಗಳನ್ನೂ ಸೃಷ್ಟಿಸಿರುವನು -**

لِتَسْتَوٗا عَلٰى ظُهُوْرِهٖ ثُمَّ تَذْكُرُوْا نِعْمَةَ رَبِّكُمْ اِذَا اسْتَوَيْتُمْ عَلَيْهِ وَتَقُوْلُوْا سُبْحٰنَ الَّذِيْ سَخَّرَ لَنَا هٰذَا وَمَا كُنَّا لَهٗ مُقْرِنِيْنَ ⑭

**14. ನೀವು ಅವುಗಳ ಬೆನ್ನ ಮೇಲೆ ಭದ್ರವಾಗಿ ಕುಳಿತುಕೊಳ್ಳಲಿಕ್ಕೋಸ್ಕರ. ನೀವು ಅದರ ಮೇಲೆ ಭದ್ರವಾಗಿ ಕುಳಿತುಕೊಂಡಾಗ ನಿಮ್ಮ ಪ್ರಭುವಿನ ಅನುಗ್ರಹವನ್ನು ಸ್ಮರಿಸಿಕೊಂಡು ಹೀಗೆ ಉದ್ಗರಿಸುವಿರಿ: 'ಇದನ್ನು ನಮಗೆ ಅಧೀನಕ್ಕೊಳಪಡಿಸಿದವನು ಪರಿಶುದ್ಧನು, ನಮಗೆ** (ಸ್ವತಃ) **ಅದನ್ನು ಅಂಕೆಯಲ್ಲಿಡುವರೆ ಸಾಮರ್ಥ್ಯವಿರಲಿಲ್ಲ-**

وَاِنَّآ اِلٰى رَبِّنَا لَمُنْقَلِبُوْنَ ⑮

**15. 'ಖಂಡಿತವಾಗಿಯೂ ನಾವು ನಮ್ಮ ಪ್ರಭುವಿನ ಬಳಿಗೆ ಮರಳುವವರಾಗಿದ್ದೇವೆ.'**

وَجَعَلُوْا لَهٗ مِنْ عِبَادِهٖ جُزْءًا ؕ اِنَّ الْاِنْسَانَ لَكَفُوْرٌ مُّبِيْنٌ ﴿١٦﴾

**16. ಅವರು ಅವನ** (ಅಲ್ಲಾಹನ) **ದಾಸರಲ್ಲಿ ಕೆಲವರನ್ನು ಅವನ ಅಂಶವೆಂದು** (ವಂಶಜರೆಂದು) **ತಿಳಿದುಕೊಂಡಿರುತ್ತಾರೆ. ನಿಜವಾಗಿಯೂ ಮನುಷ್ಯನು ಮಹಾ ಕೃತಘ್ನನಾಗಿದ್ದಾನೆ.**

اَمِ اتَّخَذَ مِمَّا يَخْلُقُ بَنٰتٍ وَّ اَصْفٰىكُمْ بِالْبَنِيْنَ ﴿١٧﴾

**17.** ಏನು, ಅವನು ತನ್ನ ಸೃಷ್ಟಿಗಳಲ್ಲಿ ಪುತ್ರಿ ಯರನ್ನು ತನಗಿರಿಸಿಕೊಂಡು ನಿಮಗೆ ಪುತ್ರರನ್ನು ಕೊಟ್ಟು ಗೌರವಿಸಿದ್ದಾನೆಯೇ?

وَ اِذَا بُشِّرَ اَحَدُهُمْ بِمَا ضَرَبَ لِلرَّحْمٰنِ مَثَلًا ظَلَّ وَجْهُهٗ مُسْوَدًّا وَّ هُوَ كَظِيْمٌ ﴿١٨﴾

**18. ಅವರಲ್ಲೊಬ್ಬನಿಗೆ, ತಾನು ದಯಾವಂತನಾದ** ಅಲ್ಲಾಹನಿಗೆ **ಕಲ್ಪಿಸಿದುದಕ್ಕೆ ತುಲ್ಯವಾದುದರ ಬಗ್ಗೆ ಸಮಾಚಾರ ತಲಪಿಸಿದಾಗ** (ತನಗೊಂದು ಹೆಣ್ಣು ಮಗು ಹುಟ್ಟಿದೆಯೆಂದು ತಿಳಿಸಿದಾಗ) **ಅವನ ಮುಖ ಕಪ್ಪಿಡುತ್ತದೆ. ಅವನು ಸಿಡಿಮಿಡಿಗೊಳ್ಳುತ್ತಾನೆ.**

اَوَ مَنْ يُّنَشَّؤُا فِي الْحِلْيَةِ وَ هُوَ فِي الْخِصَامِ غَيْرُ مُبِيْنٍ ﴿١٩﴾

**19. ಆಭರಣಗಳಲ್ಲಿ ಪೋಷಿಸಲ್ಪಡುವ ಮತ್ತು ವಾಗ್ವಾದದಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಲಾಗದವರನ್ನೋ** (ಅವರು ಅಲ್ಲಾಹನ ಸಂತಾನಗಳೆಂದು ಕಲ್ಪಿಸುವುದು)**?**

وَ جَعَلُوا الْمَلٰٓئِكَةَ الَّذِيْنَ هُمْ عِبٰدُ الرَّحْمٰنِ اِنَاثًا ؕ اَشَهِدُوْا خَلْقَهُمْ ؕ سَتُكْتَبُ شَهَادَتُهُمْ وَ يُسْـَٔلُوْنَ ﴿٢٠﴾

**20.** ದಯಾವಂತನ (ಅಲ್ಲಾಹನ) **ಸೇವಕರಾದ ದೇವದೂತರನ್ನು ಸಹ ಇವರು ಸ್ತ್ರೀಯರೆಂದು ಕಲ್ಪಿಸುತ್ತಾರೆ. ಏನು, ಅವರನ್ನು ಸೃಷ್ಟಿಸುವಾಗ ಇವರು ಹಾಜರಿದ್ದರೇ? ಇವರ ಸಾಕ್ಷ್ಯ ದಾಖಲಿಸಲ್ಪಡುವುದು ಮತ್ತು ಆ ಬಗ್ಗೆ ಇವರೊಡನೆ ಪ್ರಶ್ನಿಸಲಾಗುವುದು.**

وَقَالُوْا لَوْ شَآءَ الرَّحْمٰنُ مَا عَبَدْنٰهُمْ ؕ مَا لَهُمْ بِذٰلِكَ مِنْ عِلْمٍ ۗ اِنْ هُمْ اِلَّا يَخْرُصُوْنَ ﴿٢١﴾

**21. 'ದಯಾವಂತನಾದವನು** (ಅಲ್ಲಾಹನು) **ಉದ್ದೇಶಿದ್ದರೆ ನಾವು ಅವರನ್ನು** (ದೇವದೂತರನ್ನು) **ಆರಾಧಿಸುತ್ತಿರಲಿಲ್ಲ' ಎಂದು ಅವರು ಹೇಳುತ್ತಾರೆ. ಅವರಿಗೆ ಆ ಬಗ್ಗೆ ಏನೂ ತಿಳುವಳಿಕೆ ಇಲ್ಲ. ಅವರು ಕೇವಲ ಊಹಿಸಿ ಹೇಳುತ್ತಾರೆ.**

اَمْ اٰتَيْنٰهُمْ كِتٰبًا مِّنْ قَبْلِهٖ فَهُمْ بِهٖ مُسْتَمْسِكُوْنَ ﴿٢٢﴾

**22.** ಏನು, ಇದಕ್ಕೆ ಮೊದಲು ನಾವು ಅವರಿಗೊಂದು ಗ್ರಂಥವನ್ನು ನೀಡಿದ್ದು, ಅವರು ಅದನ್ನು ಭದ್ರವಾಗಿ ಹಿಡಿದುಕೊಂಡಿದ್ದಾರೋ?





بَلْ قَالُوْٓا اِنَّا وَجَدْنَآ اٰبَآءَنَا عَلٰٓى اُمَّةٍ وَّ اِنَّا عَلٰٓى اٰثٰرِهِمْ مُّهْتَدُوْنَ ﴿٢٣﴾

**23. ಹಾಗಲ್ಲ, 'ನಮ್ಮ ತಂದೆತಾತಂದಿರು ಒಂದು ಮಾರ್ಗದಲ್ಲಿ ನಡೆಯುತ್ತಿರುವುದನ್ನು ನಾವು ಕಂಡಿದ್ದೇವೆ. ನಾವು ಸಹ ಅವರ ಹೆಜ್ಜೆಗಳನ್ನೇ ಹಿಂಬಾಲಿಸುತ್ತೇವೆ' ಎಂದು ಅವರು ಹೇಳುತ್ತಾರೆ.**

وَ كَذٰلِكَ مَآ اَرْسَلْنَا مِنْ قَبْلِكَ فِيْ قَرْيَةٍ مِّنْ نَّذِيْرٍ اِلَّا قَالَ مُتْرَفُوْهَآ ۙ اِنَّا وَجَدْنَآ اٰبَآءَنَا عَلٰٓى اُمَّةٍ وَّ اِنَّا عَلٰٓى اٰثٰرِهِمْ مُّقْتَدُوْنَ ﴿٢٤﴾

**24. ಇದೇ ಪ್ರಕಾರ, ನಿನಗಿಂತ ಮುಂಚೆ ಯಾವ್ಯಾವ ನಾಡಿನಲ್ಲಿ ನಾವು ಮುನ್ನೆಚ್ಚರಿಕೆಗಾರರನ್ನು ಕಳುಹಿಸಿದ್ದೆವೋ, ಅಲ್ಲಿಯ ಸುಖಲೋಲುಪರು ಸಹ, 'ನಮ್ಮ ತಂದೆತಾತಂದಿರು ಒಂದು ಮಾರ್ಗದಲ್ಲಿ ನಡೆಯುತ್ತಿರುವುದನ್ನು ನಾವು ಕಂಡಿದ್ದೇವೆ; ನಾವು ಸಹ ಅವರ ಹೆಜ್ಜೆಗಳನ್ನೇ ಹಿಂಬಾಲಿಸುತ್ತೇವೆ' ಎಂದು ಹೇಳಿದ್ದರು.**

قٰلَ اَوَلَوْ جِئْتُكُمْ بِاَهْدٰى مِمَّا وَجَدْتُّمْ عَلَيْهِ اٰبَآءَكُمْ ؕ قَالُوْٓا اِنَّا بِمَآ اُرْسِلْتُمْ بِهٖ كٰفِرُوْنَ ﴿٢٥﴾

**25.** ಆಗ ಅವರ ಸಂದೇಶವಾಹಕ **ಹೇಳಿದರು: 'ನಿಮ್ಮ ತಂದೆ ತಾತಂದಿರು ಯಾವ ಮಾರ್ಗದಲ್ಲಿ ನಡೆಯುವುದನ್ನು ನೀವು ಕಂಡಿದ್ದೀರೋ, ಅದಕ್ಕಿಂತ ಉತ್ತಮವಾದ ಮಾರ್ಗದರ್ಶನವನ್ನು ನಾನು ನಿಮಗೆ ನೀಡಿದರೆ ಕೂಡ** ನೀವು ಸ್ವೀಕರಿಸಲಾರಿರಾ? **ಅವರು ಉತ್ತರಿಸಿದರು : 'ನೀವು ಯಾವುದೇ ಸಂದೇಶ ತಂದಿದ್ದರೂ ನಾವು ಅದನ್ನು ನಿರಾಕರಿಸುತ್ತೇವೆ.'**

فَانْتَقَمْنَا مِنْهُمْ فَانْظُرْ كَيْفَ كَانَ عَاقِبَةُ الْمُكَذِّبِيْنَ ﴿٢٦﴾

**26. ಆದುದರಿಂದ ನಾವು ಅವರ ಮೇಲೆ ಪ್ರತಿಕಾರ ತೀರಿಸಿದೆವು. ಹಾಗೆ,** ಪ್ರವಾದಿಗಳನ್ನು **ಸುಳ್ಳು ಮಾಡಿದವರ ಅಂತ್ಯ ಹೇಗಾಯಿತೆಂದು ನೋಡು.**

وَ اِذْ قَالَ اِبْرٰهِيْمُ لِاَبِيْهِ وَ قَوْمِهٖٓ اِنَّنِيْ بَرَآءٌ مِّمَّا تَعْبُدُوْنَ ﴿٢٧﴾

**27. ಇಬ್‌ರಾಹೀಂ ತನ್ನ ತಂದೆ ಮತ್ತು ತನ್ನ ಜನರೊಡನೆ ಹೇಳಿದ ಸಂದರ್ಭ** (ಜ್ಞಾಪಿಸು)**: 'ನೀವು ಏನನ್ನು ಆರಾಧಿಸುತ್ತಿದ್ದೀರೋ ಅದನ್ನು ನಾನು ತೀರಾ ಒಪ್ಪುವುದಿಲ್ಲ.**

اِلَّا الَّذِيْ فَطَرَنِيْ فَاِنَّهٗ سَيَهْدِيْنِ ﴿٢٨﴾

**28. 'ನನ್ನನ್ನು ಸೃಷ್ಟಿದವನನ್ನು ಹೊರತು** (ನಾನು ಆರಾಧಿಸುವುದಿಲ್ಲ)**. ಖಂಡಿತವಾಗಿಯೂ ಅವನು ನನಗೆ ಮಾರ್ಗದರ್ಶನ ಮಾಡುವನು.'**

وَ جَعَلَهَا كَلِمَةًۢ بَاقِيَةً فِيْ عَقِبِهٖ

**29. ಅವರು** (ಇಬ್‌ರಾಹೀಂ) **ಅದನ್ನು** (ಆ ಅಧ್ಯಾಪನೆಯನ್ನು) **ತನ್ನ ಸಂತತಿ ಪರಂಪರೆಯಲ್ಲಿ ಶಾಶ್ವತವಾಗಿ**

ಬಾಕಿಯುಳಿಯುವ ಒಂದು (ಆಪ್ತ) ವಚನವನ್ನಾಗಿ ಮಾಡಿರುವರು - ಅವರು ಸತ್ಪಥದೆಡೆಗೆ ತಿರುಗಲಿಕ್ಕೋಸ್ಕರ.

لَعَلَّهُمْ يَرْجِعُوْنَ ﴿٢٩﴾

**30.** ಆದರೂ ಸತ್ಯ ಮತ್ತು ಸುಸ್ಪಷ್ಟವಾಗಿ (ಸಂದೇಶವನ್ನು) ವಿವರಿಸಿಕೊಡುವ ಓರ್ವ ಸಂದೇಶವಾಹಕ ಇವರ ಬಳಿಗೆ ಬರುವ ತನಕ ನಾನು ಇವರಿಗೂ ಇವರ ಪೂರ್ವಜರಿಗೂ ತಾತ್ಕಾಲಿಕ ಸುಖವನ್ನು ನೀಡಿದೆನು.

بَلْ مَتَّعْتُ هٰؤُلَآءِ وَ اٰبَآءَهُمْ حَتّٰى جَآءَهُمُ الْحَقُّ وَرَسُوْلٌ مُّبِيْنٌ ﴿٣٠﴾

**31.** ಆದರೆ ಸತ್ಯ ಅವರ ಬಳಿಗೆ ಬಂದಾಗ ಅವರು, 'ಇದೊಂದು ಮೋಸಗಾರಿಕೆ; ನಾವು ಇದನ್ನು ನಿರಾಕರಿಸುತ್ತೇವೆ' ಎಂದು ಹೇಳಿದರು.

وَلَمَّا جَآءَهُمُ الْحَقُّ قَالُوْا هٰذَا سِحْرٌ وَّ اِنَّا بِهٖ كٰفِرُوْنَ ﴿٣١﴾

**32.** 'ಈ ಎರಡು ಪಟ್ಟಣಗಳಲ್ಲಿರುವ ಯಾರಾದರೊಬ್ಬ ಗಣ್ಯ ಪುರುಷನಿಗೆ ಈ ಖುರ್‌ಆನ್ ಏಕೆ ಅವತೀರ್ಣಗೊಳ್ಳಲಿಲ್ಲ?'[408] ಎಂದೂ ಅವರು ಕೇಳುತ್ತಾರೆ.

وَقَالُوْا لَوْلَا نُزِّلَ هٰذَا الْقُرْاٰنُ عَلٰى رَجُلٍ مِّنَ الْقَرْيَتَيْنِ عَظِيْمٍ ﴿٣٢﴾

**33.** ನಿನ್ನ ಪ್ರಭುವಿನ ಕೃಪೆಯನ್ನು ಹಂಚಿಕೊಡುವವರು ಅವರೇನು? ಐಹಿತ ಜೀವಿತದಲ್ಲಿ ಅವರ ಜೀವನೋಪಾಯವನ್ನು ಹಂಚಿಕೊಟ್ಟದ್ದು ನಾವೇ. ನಾವು ಅವರಲ್ಲಿ ಕೆಲವರನ್ನು ಬೇರೆ ಕೆಲವರಿಗಿಂತ ಪದವಿಯಲ್ಲಿ ಉನ್ನತಿಗೇರಿಸಿದ್ದೇವೆ - ಅವರಲ್ಲಿ ಕೆಲವರು ಕೆಲವರನ್ನು ಅಧೀನದಲ್ಲಿರಿಸಿಕೊಳ್ಳಲಿಕ್ಕೋಸ್ಕರ. ಅವರು ಏನನ್ನು ಶೇಖರಿಸಿಟ್ಟಿರುವರೋ, ಅದಕ್ಕಿಂತೆಲ್ಲ ನಿನ್ನ ಪ್ರಭುವಿನ ಕೃಪೆ ಉತ್ತಮವಾದುದು.

اَهُمْ يَقْسِمُوْنَ رَحْمَتَ رَبِّكَ ؕ نَحْنُ قَسَمْنَا بَيْنَهُمْ مَّعِيْشَتَهُمْ فِي الْحَيٰوةِ الدُّنْيَا وَ رَفَعْنَا بَعْضَهُمْ فَوْقَ بَعْضٍ دَرَجٰتٍ لِّيَتَّخِذَ بَعْضُهُمْ بَعْضًا سُخْرِيًّا ؕ وَ رَحْمَتُ رَبِّكَ خَيْرٌ مِّمَّا يَجْمَعُوْنَ ﴿٣٣﴾

**34.** ಮನುಷ್ಯರೆಲ್ಲರೂ ಒಂದೇ ಸಮುದಾಯದವರಾಗಿ ಬಿಡುವರು ಎಂದಿಲ್ಲದಿರುತ್ತಿದ್ದರೆ ದಯಾವಂತನಾದ ಅಲ್ಲಾಹನನ್ನು ನಿರಾಕರಿಸುವವರಿಗೆ - ಅವರ ಮನೆಗಳಿಗೆ - ಬೆಳ್ಳಿಯ ಮೇಲ್ಛಾವಣಿಗಳನ್ನೂ ಮೇಲಕ್ಕೆ ಹತ್ತಿಹೋಗಲಿಕ್ಕೆ (ಬೆಳ್ಳಿಯ) ಏಣಿಗಳನ್ನೂ ನಾವು ಕೊಡುತ್ತಿದ್ದೆವು.

وَلَوْلَاۤ اَنْ يَّكُوْنَ النَّاسُ اُمَّةً وَّاحِدَةً لَّجَعَلْنَا لِمَنْ يَّكْفُرُ بِالرَّحْمٰنِ لِبُيُوْتِهِمْ سُقُفًا مِّنْ فِضَّةٍ وَّ مَعَارِجَ عَلَيْهَا يَظْهَرُوْنَ ﴿٣٤﴾

408. ಅವರ ಅಭಿಪ್ರಾಯ ಪ್ರಕಾರ ದೈವಿಕ ಸಂದೇಶ, ಗಣ್ಯ ವ್ಯಕ್ತಿಯೆಂದು ಎಣಿಸಲ್ಪಡುವ ನಾಯಕರಲ್ಲಿ ಯಾರಿಗಾದರೂ ಅವತೀರ್ಣವಾಗಬೇಕಿತ್ತು. ಮಕ್ಕ, ತಾಇಫ್ ಮುಂತಾದ ಪಟ್ಟಣಗಳಲ್ಲಿ ಅಂತಹ ದೊಡ್ಡ ಮನುಷ್ಯರಿರುವಾಗ, ಸ್ಥಾನ ಮಾನವಿಲ್ಲದ ಮುಹಮ್ಮದ್‌ನಿಗೆ ಅದು ಹೇಗೆ ಲಭಿಸೀತು? ಇದು ಅವರ ಪ್ರಶ್ನೆಯಾಗಿತ್ತು. ಇಂತಹ ಆಕ್ಷೇಪಗಳು ಪೂರ್ವಿಕ ಪ್ರವಾದಿಗಳ ಬಗ್ಗೆ ಸಹ ಇದ್ದವು. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಆಧ್ಯಾತ್ಮಿಕ ಶಿಷ್ಯನೂ ವಾಗ್ದತ್ತ ಮಸೀಹರೂ ಆದ ಹಝ್ರತ್ ಮಿರ್ಝಾ ಗುಲಾಂ ಅಹ್ಮದ್ (ಅಲೈಹಿಸ್ಸಲಾಂ)ರ ವಿರುದ್ಧವಾಗಿಯೂ ಇಂತಹ ಆಕ್ಷೇಪಗಳು ಎತ್ತಲ್ಪಡುತ್ತವೆ.





**35.** (ಅದೇ ಪ್ರಕಾರ) ಅವರ ಮನೆಗಳಿಗೆ (ಬೆಳ್ಳಿಯ) ಬಾಗಿಲುಗಳನ್ನೂ ಅವರು ಪವಡಿಸುವ (ಬೆಳ್ಳಿಯ) ಮಂಚಗಳನ್ನೂ (ನಾವು ಅವರಿಗೆ ಒದಗಿಸುತ್ತಿದ್ದೆವು).

وَ لِبُيُوْتِهِمْ اَبْوَابًا وَّ سُرُرًا عَلَيْهَا يَتَّكِـُٔوْنَ ﴿٣٥﴾

**36.** ಬಂಗಾರದಿಂದಲೂ ಅಲಂಕರಿಸುತ್ತಿದ್ದೆವು. ಆದರೆ ಇವೆಲ್ಲ ಐಹಿಕ ಜೀವನದ (ಅಲ್ಪಕಾಲಿಕ) ವೈಭವಗಳು ಮಾತ್ರ. ಪರಲೋಕ ಸೌಭಾಗ್ಯ ನಿನ್ನ ಪ್ರಭುವಿನ ಬಳಿ ಸಜ್ಜನರಿಗೆ ಇದೆ.

وَزُخْرُفًا ؕ وَاِنْ كُلُّ ذٰلِكَ لَمَّا مَتَاعُ الْحَيٰوةِ الدُّنْيَا ؕ وَالْاٰخِرَةُ عِنْدَ رَبِّكَ لِلْمُتَّقِيْنَ ﴿٣٦﴾

**37.** ದಯಾವಂತನ (ಅಲ್ಲಾಹನ) ಸ್ಮರಣೆಯಿಂದ ಯಾರು ವಿಮುಖನಾಗುತ್ತಾನೋ, ಅವನಿಗೆ ನಾವು ಒಬ್ಬ ಶೈತಾನನ್ನು ನಿಯುಕ್ತಗೊಳಿಸಿ ಅವನ ಸಂಗಡಿಗನನ್ನಾಗಿ ಮಾಡುತ್ತೇವೆ.

وَمَنْ يَّعْشُ عَنْ ذِكْرِ الرَّحْمٰنِ نُقَيِّضْ لَهٗ شَيْطٰنًا فَهُوَ لَهٗ قَرِيْنٌ ﴿٣٧﴾

**38.** ಖಂಡಿತವಾಗಿಯೂ ಅವರು (ಈ ಶೈತಾನ್‌ಗಳು) ಅವರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ. ಆದರೆ, ತಾವು ಸನ್ಮಾರ್ಗದಲ್ಲಿ ಚಲಿಸುವವರೆಂದು ಅವರು ಭಾವಿಸುತ್ತಾರೆ.

وَاِنَّهُمْ لَيَصُدُّوْنَهُمْ عَنِ السَّبِيْلِ وَ يَحْسَبُوْنَ اَنَّهُمْ مُّهْتَدُوْنَ ﴿٣٨﴾

**39.** ಹಾಗೆ, ಅವನು (ಅಂತಹ ಓರ್ವನು) ನಮ್ಮ ಬಳಿಗೆ ಬಂದಾಗ ಅವನು (ಶೈತಾನನೊಡನೆ) ಹೇಳುವನು: 'ಅಕಟಾ! ನನಗೂ ನಿನಗೂ ಮಧ್ಯೆ ಪೂರ್ವ ಮತ್ತು ಪಶ್ಚಿಮದಷ್ಟು ದೂರವಿದ್ದರೆ ಎಷ್ಟು ಚೆನ್ನಾಗಿತ್ತು!' ಹಾಗಿರುವಾಗ ಅವನು ಎಂತಹ ದುಷ್ಟ ಸಂಗಡಿಗನು!

حَتّٰۤى اِذَا جَآءَنَا قَالَ يٰلَيْتَ بَيْنِيْ وَ بَيْنَكَ بُعْدَ الْمَشْرِقَيْنِ فَبِئْسَ الْقَرِيْنُ ﴿٣٩﴾

**40.** (ಅಲ್ಲಾಹ್ ಹೇಳುವನು:) 'ನೀವು ಅಕ್ರಮವಾಗಿ ವರ್ತಿಸಿರುವುದರಿಂದ, ನೀವು ಶಿಕ್ಷೆಯಲ್ಲಿ ಸಹಭಾಗಿಗಳೆಂಬ ವಿಚಾರ ಇಂದು ನಿಮಗೆ ಯಾವ ಪ್ರಯೋಜನಕ್ಕೂ ಬರುವುದಿಲ್ಲ.'

وَلَنْ يَّنْفَعَكُمُ الْيَوْمَ اِذْ ظَّلَمْتُمْ اَنَّكُمْ فِي الْعَذَابِ مُشْتَرِكُوْنَ ﴿٤٠﴾

**41.** ಏನು, ಕಿವುಡರಿಗೆ ಕೇಳಿಸುವಂತೆ ಮಾಡಲು ಅಥವಾ ಕುರುಡರಿಗೆ ಮತ್ತು ಸ್ಪಷ್ಟವಾಗಿಯೂ ತಪ್ಪು ಹಾದಿಯಲ್ಲಿರುವವರಿಗೆ ಸತ್ಪಥ ದರ್ಶನ ಮಾಡಲು ನಿನ್ನಿಂದ ಸಾಧ್ಯವೇ?

اَفَاَنْتَ تُسْمِعُ الصُّمَّ اَوْ تَهْدِى الْعُمْيَ وَمَنْ كَانَ فِيْ ضَلٰلٍ مُّبِيْنٍ ﴿٤١﴾

**42.** ನಾವು ನಿನ್ನನ್ನು (ಮರಣ ಮೂಲಕ ಈ ಲೋಕದಿಂದ) ಕೊಂಡೊಯ್ದರೆ ಕೂಡ ನಾವು ಅವರಿಗೆ ಪ್ರತಿಕಾರ ಮಾಡುವೆವು.

فَإِمَّا نَذْهَبَنَّ بِكَ فَإِنَّا مِنْهُم مُّنتَقِمُونَ ﴿٤٢﴾

**43.** ಅಥವಾ ಅವರಿಗೆ ನಾವು ಮುನ್ನೆಚ್ಚರಿಕೆ ನೀಡಿದುದನ್ನು (ಶಿಕ್ಷೆಯನ್ನು) ನಿನ್ನ ಜೀವಮಾನದಲ್ಲೇ ನಾವು ನಿನಗೆ ತೋರಿಸಿಕೊಡುವೆವು. ಹೇಗಿದ್ದರೂ ಅವರ ಮೇಲೆ ನಮಗೆ ಪೂರ್ಣ ಸಾಮರ್ಥ್ಯವಿದೆ.

أَوْ نُرِيَنَّكَ الَّذِي وَعَدْنَاهُمْ فَإِنَّا عَلَيْهِم مُّقْتَدِرُونَ ﴿٤٣﴾

**44.** ಆದ್ದರಿಂದ ನಿನಗೆ ಅವತೀರ್ಣವಾದುದನ್ನು ನೀನು ಬಿಗಿಯಾಗಿ ಹಿಡಿದುಕೋ; ಖಂಡಿತವಾಗಿಯೂ ನೀನು ಸತ್ಪಥದಲ್ಲಿರುವೆ.

فَاسْتَمْسِكْ بِالَّذِي أُوحِيَ إِلَيْكَ ۖ إِنَّكَ عَلَىٰ صِرَاطٍ مُّسْتَقِيمٍ ﴿٤٤﴾

**45.** ನಿಶ್ಚಯವಾಗಿಯೂ ಇದು (ಈ ಖುರ್ ಆನ್) ನಿನಗೂ ನಿನ್ನ ಜನತೆಗೂ ಒಂದು ಉದ್ಬೋಧಕವಾಗಿದೆ. ಖಂಡಿತವಾಗಿಯೂ ನಿಮ್ಮನ್ನು ವಿಚಾರಣೆಗೊಳಪಡಿಸಲಾಗುವುದು.

وَإِنَّهُ لَذِكْرٌ لَّكَ وَلِقَوْمِكَ ۖ وَسَوْفَ تُسْأَلُونَ ﴿٤٥﴾

**46.** ದಯಾವಂತನ (ಅಲ್ಲಾಹನ) ಹೊರತು ಬೇರೆ ಯಾವುದಾದರೂ ದೇವರುಗಳು ಆರಾಧಿಸಲ್ಪಡುವಂತೆ ನಾವು ಮಾಡಿದ್ದೇವೋ? ಎಂದು ನಿನಗಿಂತ ಮುಂಚೆ ಆಗಮಿಸಿದ ಸಂದೇಶವಾಹಕರೊಡನೆ[408A] ನೀನು ಕೇಳು.

وَاسْأَلْ مَنْ أَرْسَلْنَا مِن قَبْلِكَ مِن رُّسُلِنَا أَجَعَلْنَا مِن دُونِ الرَّحْمَٰنِ آلِهَةً يُعْبَدُونَ ﴿٤٦﴾

**47.** ಫಿರ್‌ಔನ್ ಮತ್ತು ಅವನ (ಅಧೀನದಲ್ಲಿದ್ದ) ಮುಖಂಡರ ಬಳಿಗೆ ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳ ಸಹಿತ ಕಳುಹಿಸಿದ್ದೆವು. 'ನಾನು ನಿಜವಾಗಿಯೂ ಸಕಲ ಲೋಕಗಳ ಪ್ರಭುವಿನ ಸಂದೇಶವಾಹಕನಾಗಿದ್ದೇನೆ' ಎಂದು ಅವರು ಹೇಳಿದರು.

وَلَقَدْ أَرْسَلْنَا مُوسَىٰ بِآيَاتِنَا إِلَىٰ فِرْعَوْنَ وَمَلَئِهِ فَقَالَ إِنِّي رَسُولُ رَبِّ الْعَالَمِينَ ﴿٤٧﴾

**48.** ಹಾಗೆ ಅವರು (ಮೂಸಾ) ನಮ್ಮ ದೃಷ್ಟಾಂತಗಳ ಸಹಿತ ಅವರ ಬಳಿಗೆ ಆಗಮಿಸಿದಾಗ, ಅಗೋ ಅವರು ಅವುಗಳನ್ನು ಅಪಹಾಸ್ಯ ಮಾಡಿದರು.

فَلَمَّا جَاءَهُم بِآيَاتِنَا إِذَا هُم مِّنْهَا يَضْحَكُونَ ﴿٤٨﴾

**49.** ನಾವು ಅವರಿಗೆ ತೋರಿಸಿದ ಪ್ರತಿಯೊಂದು

وَمَا نُرِيهِم مِّنْ آيَةٍ إِلَّا هِيَ أَكْبَرُ مِنْ

408A. ಅರ್ಥಾತ್ ಅವರ ಜನರೊಡನೆ.





ದೃಷ್ಟಾಂತ ಅದಕ್ಕಿಂತ ಮುಂಚಿನ ದೃಷ್ಟಾಂತಕ್ಕಿಂತ ಮಿಗಿಲಾಗಿತ್ತು. ಅವರು ನಮ್ಮ ಕಡೆಗೆ ತಿರುಗಲಿಕ್ಕೋಸ್ಕರ ನಾವು ಅವರನ್ನು ಶಿಕ್ಷೆಗೆ ಗುರಿಪಡಿಸಿದೆವು.

أُخْتِهَا ۖ وَأَخَذْنَاهُم بِالْعَذَابِ لَعَلَّهُمْ يَرْجِعُونَ ﴿٤٩﴾

**50.** ಅವರು ಹೇಳಿದರು: 'ಎಲೈ ಜಾದೂಗಾರನೇ, ನಿನ್ನ ಪ್ರಭು ನಿನ್ನೊಡನೆ ಮಾಡಿದ ಕರಾರು ಪ್ರಕಾರ ನೀನು ನಮಗೋಸ್ಕರ ಪ್ರಾರ್ಥಿಸು. ಆಗ ನಾವು ಖಂಡಿತವಾಗಿಯೂ ಮಾರ್ಗದರ್ಶನವನ್ನು ಸ್ವೀಕರಿಸುವೆವು.'

وَقَالُوا يَا أَيُّهَ السَّاحِرُ ادْعُ لَنَا رَبَّكَ بِمَا عَهِدَ عِندَكَ ۖ إِنَّنَا لَمُهْتَدُونَ ﴿٥٠﴾

**51.** ಆದರೆ ಅವರಿಂದ ನಾವು ಶಿಕ್ಷೆಯನ್ನು ನೀಗಿಸಿದಾಗ, ಅದೋ ಅವರು ವಚನಭಂಗ ಮಾಡಿದರು.

فَلَمَّا كَشَفْنَا عَنْهُمُ الْعَذَابَ إِذَا هُمْ يَنكُثُونَ ﴿٥١﴾

**52.** 'ಫಿರ್‌ಔನ್ ತನ್ನ ಕೋಮಿನವರನ್ನು ಕರೆದು ಹೇಳಿದನು: 'ನನ್ನ ಜನರೇ, ಈಜಿಪ್ಟಿನ ಆಧಿಪತ್ಯ ನನಗೆ ಸೇರಿದ್ದಲ್ಲವೇ? ಈ ನದಿಗಳು ಹರಿಯುತ್ತಿರುವುದು ನನ್ನ ಅಧೀನದಲ್ಲಲ್ಲವೇ? (ಇವನ್ನೆಲ್ಲ) ನೀವೇನು ಕಾಣುವುದಿಲ್ಲವೇ?

وَنَادَىٰ فِرْعَوْنُ فِي قَوْمِهِ قَالَ يَا قَوْمِ أَلَيْسَ لِي مُلْكُ مِصْرَ وَهَٰذِهِ الْأَنْهَارُ تَجْرِي مِن تَحْتِي ۖ أَفَلَا تُبْصِرُونَ ﴿٥٢﴾

**53.** 'ಅಷ್ಟೇ ಅಲ್ಲ, ಹೀನನೂ ಸ್ಪಷ್ಟವಾಗಿ ಮಾತನಾಡಲಾಗದವನೂ ಆದ ಇವನಿಗಿಂತ ನಾನೇ ಉತ್ತಮನಾಗಿದ್ದೇನೆ.

أَمْ أَنَا خَيْرٌ مِّنْ هَٰذَا الَّذِي هُوَ مَهِينٌ وَلَا يَكَادُ يُبِينُ ﴿٥٣﴾

**54.** '(ಇವನು ಸತ್ಯವಂತನೆಂದಾದರೆ) ಇವನಿಗೆ ಸ್ವರ್ಣ ಕಂಕಣಗಳೇಕೆ ನೀಡಲ್ಪಟ್ಟಿಲ್ಲ? ಅಥವಾ ಇವನ ಸಂಗಡ ದಿವ್ಯದೂತರೇಕೆ ನಡೆದಾಡುವುದಿಲ್ಲ?'

فَلَوْلَا أُلْقِيَ عَلَيْهِ أَسْوِرَةٌ مِّن ذَهَبٍ أَوْ جَاءَ مَعَهُ الْمَلَائِكَةُ مُقْتَرِنِينَ ﴿٥٤﴾

**55.** ಹಾಗೆ ಅವನು (ಫಿರ್‌ಔನ್) ತನ್ನ ಜನರನ್ನು ಮರುಳುಗೊಳಿಸಿದನು. ಆಗ ಅವರು ಅವನನ್ನು ಅನುಸರಿಸಿದರು. ನಿಸ್ಸಂದೇಹವಾಗಿಯೂ ಅವರು ಧಿಕ್ಕಾರಿ ಜನರಾಗಿದ್ದರು.

فَاسْتَخَفَّ قَوْمَهُ فَأَطَاعُوهُ ۚ إِنَّهُمْ كَانُوا قَوْمًا فَاسِقِينَ ﴿٥٥﴾

**56.** ಹಾಗೆ ಅವರು ನಮ್ಮನ್ನು ಕೋಪೋದ್ರಿಕ್ತರನ್ನಾಗಿ ಮಾಡಿದಾಗ ನಾವು ಅವರ ಮೇಲೆ ಪ್ರತಿಕಾರವೆಸಗಿದೆವು. ನಾವು ಅವರೆಲ್ಲರನ್ನೂ ಮುಳುಗಿಸಿ ಬಿಟ್ಟೆವು.

فَلَمَّا آسَفُونَا انتَقَمْنَا مِنْهُمْ فَأَغْرَقْنَاهُمْ أَجْمَعِينَ ﴿٥٦﴾

**57.** ಹಾಗೆ ನಾವು ಅವರನ್ನು ಹಳೆಯ ಕಥೆಯನ್ನಾಗಿಯೂ ಮುಂದಿನ ಪೀಳಿಗೆಗಳಿಗೆ ನಿದರ್ಶನವನ್ನಾಗಿಯೂ ಮಾಡಿದೆವು.

فَجَعَلْنٰهُمْ سَلَفًا وَّمَثَلًا لِّلْاٰخِرِيْنَ ﴿٥٧﴾

**58.** ಮರ್ಯಮರ ಪುತ್ರನ ಸಂಭವವನ್ನು ಒಂದು ಉಪಮಾನವಾಗಿ ಪ್ರಸ್ತಾಪಿಸುವಾಗ, ಅದೋ ನಿನ್ನ ಜನರು ಆ ಬಗ್ಗೆ ಕೂಗಾಡುತ್ತಾರೆ.

وَلَمَّا ضُرِبَ ابْنُ مَرْيَمَ مَثَلًا اِذَا قَوْمُكَ مِنْهُ يَصِدُّوْنَ ﴿٥٨﴾

**59.** 'ಯಾರು ಮಿಗಿಲು - ನಮ್ಮ ದೇವತೆಗಳೋ ಅಥವಾ ಆತನೋ?' ಎಂದು ಅವರು ಕೇಳುತ್ತಾರೆ. ನಿನ್ನೊಡನೆ ವಾಗ್ವಾದ ಮಾಡಲಿಕ್ಕೋಸ್ಕರ ಮಾತ್ರ ಹೊರತು ಅವರು ಅದನ್ನು ಪ್ರಸ್ತಾಪಿಸುವುದಿಲ್ಲ. ನಿಜವಾಗಿಯೂ ಅವರು ಜಗಳಗಂಟರೇ ಆಗಿದ್ದಾರೆ.

وَقَالُوْٓا ءَاٰلِهَتُنَا خَيْرٌ اَمْ هُوَ ؕ مَا ضَرَبُوْهُ لَكَ اِلَّا جَدَلًا ؕ بَلْ هُمْ قَوْمٌ خَصِمُوْنَ ﴿٥٩﴾

**60.** (ವಾಸ್ತವದಲ್ಲಿ) ಅವರು (ಈಸಾ) ಕೇವಲ ನಮ್ಮೊಬ್ಬ ದಾಸರಾಗಿದ್ದರು. ಅವರಿಗೆ ನಾವು ಅನುಗ್ರಹ ದಯಪಾಲಿಸಿ ಇಸ್ರಾಈಲ್ ಸಂತತಿಗಳಿಗೆ ಅವರನ್ನು ಒಂದು ಮಾದರಿಯನ್ನಾಗಿ ಮಾಡಿದೆವು.

اِنْ هُوَ اِلَّا عَبْدٌ اَنْعَمْنَا عَلَيْهِ وَجَعَلْنٰهُ مَثَلًا لِّبَنِيْٓ اِسْرَآءِيْلَ ﴿٦٠﴾

**61.** ನಾವು ಬಯಸಿದ್ದರೆ, ನಿಮ್ಮ ಪೈಕಿಯಿಂದಲೇ ನಾವು ದೇವದೂತರನ್ನು ಮಾಡುತ್ತಿದ್ದೆವು. ಅವರು ಭೂಮಿಯಲ್ಲಿ ನಿಮ್ಮ ಸ್ಥಾನವನ್ನು ತುಂಬುತ್ತಿದ್ದರು.

وَلَوْ نَشَآءُ لَجَعَلْنَا مِنْكُمْ مَّلٰٓئِكَةً فِى الْاَرْضِ يَخْلُفُوْنَ ﴿٦١﴾

**62.** ದಿಟವಾಗಿಯೂ ಇದು (ಈ ಖುರ್‌ಆನ್) ಆ ನಿಗದಿತ ವೇಳೆಯ ಬಗ್ಗೆ ಅರಿವು ನೀಡುತ್ತದೆ. ಆ ಬಗ್ಗೆ ನಿಮಗೆ ಸಂಶಯ ಬೇಡ. ನೀವು ನನ್ನನ್ನು ಅನುಸರಿಸಿರಿ. ಇದೇ ಸರಿಯಾದ ಮಾರ್ಗವಾಗಿದೆ.

وَاِنَّهٗ لَعِلْمٌ لِّلسَّاعَةِ فَلَا تَمْتَرُنَّ بِهَا وَاتَّبِعُوْنِ ؕ هٰذَا صِرَاطٌ مُّسْتَقِيْمٌ ﴿٦٢﴾

**63.** ಶೈತಾನ ನಿಮ್ಮನ್ನು (ಸತ್ಪಥದಿಂದ) ತಡೆಯದಿರಲಿ. ಖಂಡಿತವಾಗಿಯೂ ಅವನು ನಿಮ್ಮ ಬಹಿರಂಗ ಶತ್ರುವಾಗಿದ್ದಾನೆ.

وَلَا يَصُدَّنَّكُمُ الشَّيْطٰنُ ۚ اِنَّهٗ لَكُمْ عَدُوٌّ مُّبِيْنٌ ﴿٦٣﴾

**64.** ಈಸಾ ಸುಸ್ಪಷ್ಟವಾದ ಸಾಕ್ಷ್ಯಾಧಾರಗಳೊಂದಿಗೆ ಬಂದು ಹೇಳಿದರು: 'ನಾನು ನಿಮ್ಮ ಬಳಿಗೆ ಜ್ಞಾನಾಮೃತದೊಂದಿಗೆ ಬಂದಿರುವೆನು. ನೀವು ಭಿನ್ನಾಭಿಪ್ರಾಯ

وَلَمَّا جَآءَ عِيْسٰى بِالْبَيِّنٰتِ قَالَ قَدْ جِئْتُكُمْ بِالْحِكْمَةِ وَلِاُبَيِّنَ لَكُمْ بَعْضَ الَّذِيْ





ಹೊಂದಿರುವ ಕೆಲವು ವಿಚಾರಗಳ ಬಗ್ಗೆ ಸ್ಪಷ್ಟಪಡಿಸಲಿಕ್ಕೆ ಸಹ. ಆದ್ದರಿಂದ ನೀವು ಅಲ್ಲಾಹನಿಗೆ ಭಯಭಕ್ತಿ ತೋರಿಸಿರಿ ಮತ್ತು ನನ್ನನ್ನು ಅನುಸರಿಸಿರಿ.

تَخْتَلِفُوْنَ فِيْهِ ۚ فَاتَّقُوا اللّٰهَ وَاَطِيْعُوْنِ ﴿٦٤﴾

**65.** 'ನಿಸ್ಸಂದೇಹವಾಗಿಯೂ ಅಲ್ಲಾಹನು ನನ್ನ ಮತ್ತು ನಿಮ್ಮ ಪ್ರಭುವಾಗಿದ್ದಾನೆ. ಆದ್ದರಿಂದ ನೀವು ಅವನನ್ನು ಆರಾಧಿಸಿರಿ. ಇದೇ ಸತ್ಪಥವಾಗಿದೆ.'

اِنَّ اللّٰهَ هُوَ رَبِّيْ وَرَبُّكُمْ فَاعْبُدُوْهُ ؕ هٰذَا صِرَاطٌ مُّسْتَقِيْمٌ ﴿٦٥﴾

**66.** ಆದರೆ ಅವರ ಪಕ್ಷಗಳು ಪರಸ್ಪರ ಮತಭೇದ ಹೊಂದಿದವು. ಆದ್ದರಿಂದ ಯಾತನಾಮಯವಾದ ದಿನದ ಶಿಕ್ಷೆ ಮೂಲಕ ದುಷ್ಕರ್ಮಿಗಳಿಗೆ ನಾಶವಿದೆ.

فَاخْتَلَفَ الْاَحْزَابُ مِنْۢ بَيْنِهِمْ ۚ فَوَيْلٌ لِّلَّذِيْنَ ظَلَمُوْا مِنْ عَذَابِ يَوْمٍ اَلِيْمٍ ﴿٦٦﴾

**67.** ಹಠಾತ್ತಾಗಿ ಬರುವ ಆ ನಿಗದಿತ ವೇಳೆಯನ್ನು ಅವರು ನಿರೀಕ್ಷಿಸುತ್ತಿದ್ದಾರೆ. ಆದರೆ ಅದನ್ನು ಅವರು ಮನವರಿಕೆ ಮಾಡುವುದಿಲ್ಲ.

هَلْ يَنْظُرُوْنَ اِلَّا السَّاعَةَ اَنْ تَاْتِيَهُمْ بَغْتَةً وَّهُمْ لَا يَشْعُرُوْنَ ﴿٦٧﴾

**68.** ಅಂದು ಮಿತ್ರರು ಪರಸ್ಪರ ಶತ್ರುಗಳಾಗುವರು- ಸದ್ಧರ್ಮಿಗಳು ಹೊರತು.

اَلْاَخِلَّآءُ يَوْمَئِذٍۢ بَعْضُهُمْ لِبَعْضٍ عَدُوٌّ اِلَّا الْمُتَّقِيْنَ ﴿٦٨﴾

**69.** (ಅಂದು ಅಲ್ಲಾಹನು ಅವರೊಡನೆ ಹೇಳುವನು:) 'ಎಲೈ ನನ್ನ ಭಕ್ತದಾಸರೇ, ಇಂದು ನಿಮಗೆ ಭಯ ವೇನೂ ಇಲ್ಲ; ನಿಮಗೆ ವ್ಯಥೆಯೂ ಇಲ್ಲ.

يٰعِبَادِ لَا خَوْفٌ عَلَيْكُمُ الْيَوْمَ وَلَآ اَنْتُمْ تَحْزَنُوْنَ ﴿٦٩﴾

**70.** 'ನಮ್ಮ ದೃಷ್ಟಾಂತಗಳನ್ನು ನಂಬಿ ಶರಣಾಗಿರುವವರು,

اَلَّذِيْنَ اٰمَنُوْا بِاٰيٰتِنَا وَكَانُوْا مُسْلِمِيْنَ ﴿٧٠﴾

**71.** 'ನೀವು ಮತ್ತು ನಿಮ್ಮ ಬಾಳಸಂಗಾತಿಗಳು ಆಹ್ಲಾದ ಭರಿತರಾಗಿ ಸ್ವರ್ಗದಲ್ಲಿ ಪ್ರವೇಶಿಸಿರಿ.'

اُدْخُلُوا الْجَنَّةَ اَنْتُمْ وَاَزْوَاجُكُمْ تُحْبَرُوْنَ ﴿٧١﴾

**72.** ಅವರ ಬಳಿಗೆ - ಸುತ್ತುಮುತ್ತಲೆಲ್ಲ - (ಆಹಾರ ಪಾನೀಯ ಭರಿತವಾದ) ಬಂಗಾರದ ಬಟ್ಟಲುಗಳೂ ಪಾನಪಾತ್ರೆಗಳೂ ಒಯ್ಯಲ್ಪಡುವುವು. ಅವರ ಮನಸ್ಸುಗಳು ಆಶಿಸುವ ಮತ್ತು ಕಣ್ಣುಗಳಿಗೆ ಆನಂದವನ್ನುಂಟುಮಾಡುವ ವಸ್ತುಗಳು ಅವರಿಗೆ ಅಲ್ಲಿರುವುವು.

يُطَافُ عَلَيْهِمْ بِصِحَافٍ مِّنْ ذَهَبٍ وَّاَكْوَابٍ ۚ وَفِيْهَا مَا تَشْتَهِيْهِ الْاَنْفُسُ وَتَلَذُّ الْاَعْيُنُ ۚ وَاَنْتُمْ فِيْهَا

(ಅವರೊಡನೆ ಹೇಳಲಾಗುವುದು:) **'ಇಲ್ಲೇ ನೀವು ಸ್ಥಿರವಾಸ ಹೂಡುವಿರಿ.**

خٰلِدُوْنَ ﴿٧١﴾

**73.** **'ನಿಮ್ಮ** (ಸತ್) **ಕೃತ್ಯಗಳ ಪ್ರತಿಫಲವಾಗಿ ನಿಮ್ಮನ್ನು ವಾರೀಸುದಾರರನ್ನಾಗಿ ಮಾಡಲಾದ ಸ್ವರ್ಗ ಇದೇ ಆಗಿದೆ.**

وَتِلْكَ الْجَنَّةُ الَّتِيْٓ اُوْرِثْتُمُوْهَا بِمَا كُنْتُمْ تَعْمَلُوْنَ ﴿٧٢﴾

**74.** **'ಅಲ್ಲಿ ನಿಮಗೆ ಧಾರಾಳ ಹಣ್ಣು ಹಂಪಲುಗಳಿವೆ. ಅದರಿಂದ ನೀವು ತಿನ್ನುವಿರಿ.'**

لَكُمْ فِيْهَا فَاكِهَةٌ كَثِيْرَةٌ مِّنْهَا تَاْكُلُوْنَ ﴿٧٣﴾

**75.** **ಖಂಡಿತವಾಗಿಯೂ ಅಪರಾಧಿಗಳು ನರಕ ಶಿಕ್ಷೆಯಲ್ಲಿ ದೀರ್ಘಕಾಲ ಕಳೆಯುವರು.**

اِنَّ الْمُجْرِمِيْنَ فِيْ عَذَابِ جَهَنَّمَ خٰلِدُوْنَ ﴿٧٤﴾

**76.** **ಅದನ್ನು ಅವರಿಗೆ ಲಘೂಕರಿಸಲಾಗದು. ಅವರು ಅಲ್ಲಿ ನಿರಾಶೆ ಹೊಂದುವರು.**

لَا يُفَتَّرُ عَنْهُمْ وَهُمْ فِيْهِ مُبْلِسُوْنَ ﴿٧٥﴾

**77.** **ನಾವು ಅವರಿಗೇನೂ ಅನ್ಯಾಯವೆಸಗಲಿಲ್ಲ; ಅವರು ಸ್ವತಃ ಅನ್ಯಾಯವೆಸಗಿದರು.**

وَمَا ظَلَمْنٰهُمْ وَلٰكِنْ كَانُوْا هُمُ الظّٰلِمِيْنَ ﴿٧٦﴾

**78.** **'ಎಲೈ ಮಾಲಿಕ್** (ನರಕದ ಮೇಲ್ವಿಚಾರಕ), **ನಿನ್ನ ಪ್ರಭು ನಮ್ಮನ್ನು ಮುಗಿಸಿಬಿಡಲಿ' ಎಂದು ಅವರು ಮೊರೆಯಿಡುವರು. ಆಗ ಆತನು, 'ನೀವು ಇಲ್ಲೇ ಇದ್ದುಕೊಳ್ಳಬೇಕಾಗಿದೆ' ಎಂದು ಹೇಳುವನು.**

وَنَادَوْا يٰمٰلِكُ لِيَقْضِ عَلَيْنَا رَبُّكَ ۭ قَالَ اِنَّكُمْ مّٰكِثُوْنَ ﴿٧٧﴾

**79.** (ಅಲ್ಲಾಹನು ಹೇಳುವನು:) **'ನಾವು ನಿಮ್ಮ ಬಳಿಗೆ ಸತ್ಯವನ್ನು ತಂದೆವು. ಆದರೆ ಬಹುಸಂಖ್ಯಾತರಾದ ನೀವು ಸತ್ಯವನ್ನು ವಿರೋಧಿಸುವವರಾಗಿದ್ದಿರಿ.'**

لَقَدْ جِئْنٰكُمْ بِالْحَقِّ وَلٰكِنَّ اَكْثَرَكُمْ لِلْحَقِّ كٰرِهُوْنَ ﴿٧٨﴾

**80.** **ಏನು, ಅವರು ಯಾವುದಾದರೂ ವಿಚಾರದ ಬಗ್ಗೆ ದೃಢ ನಿರ್ಧಾರ ಮಾಡಿರುವರೇ? ಹಾಗಿದ್ದರೆ ನಾವು ಸಹ ದೃಢ ನಿರ್ಧಾರ ಮಾಡಿರುತ್ತೇವೆ.**[409]

اَمْ اَبْرَمُوْٓا اَمْرًا فَاِنَّا مُبْرِمُوْنَ ﴿٧٩﴾

409. ಮಕ್ಕದವರು ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರನ್ನು ಹತ್ಯೆ ಮಾಡಲಿಕ್ಕೂ ಅವರ ಸಂಘಟನೆಯನ್ನು ನಿರ್ಮೂಲನ ಮಾಡಲಿಕ್ಕೂ ತೀರ್ಮಾನಿಸಿದ್ದರು. ಅದರ ವಿರುದ್ಧವಾಗಿ ಅವರನ್ನು ಪರಾಜಿತರನ್ನಾಗಿ ಮಾಡಲಾಗುವುದೆಂದೂ ಪೈಗಂಬರರನ್ನು ಮತ್ತು ಇಸ್ಲಾಂ ಧರ್ಮವನ್ನು ರಕ್ಷಿಸಲಾಗುವುದೆಂದೂ ಅಲ್ಲಾಹನು ದೃಢ ನಿರ್ಧಾರ ಮಾಡಿದನು. ಕೊನೆಗೆ ಶತ್ರುಗಳು ಸೋತು ಅಲ್ಲಾಹನ ತೀರ್ಮಾನ ಈಡೇರಿತು.





**81.** **ಅವರ ರಹಸ್ಯಗಳನ್ನೂ ಅವರ ಗೂಢಾಲೋಚನೆಗಳನ್ನೂ ನಾವು ಆಲಿಸುವುದಿಲ್ಲವೆಂದು ಅವರು ಭಾವಿಸಿಕೊಂಡಿರುವರೇನು? ಆದರೆ ನಮ್ಮ ದೂತರು ಅವರ ಬಳಿಯಲ್ಲಿದ್ದುಕೊಂಡು** (ಎಲ್ಲವನ್ನೂ) **ಬರೆದು ದಾಖಲಿಸುತ್ತಾರೆ.**

اَمْ يَحْسَبُوْنَ اَنَّا لَا نَسْمَعُ سِرَّهُمْ وَنَجْوٰىهُمْ ۭ بَلٰى وَرُسُلُنَا لَدَيْهِمْ يَكْتُبُوْنَ ﴿٨٠﴾

**82.** **ಹೇಳು: 'ದಯಾವಂತನಾದವನಿಗೆ** (ಅಲ್ಲಾಹನಿಗೆ) **ಒಬ್ಬ ಪುತ್ರನಿರುತ್ತಿದ್ದರೆ, ಆರಾಧಕರಲ್ಲಿ ಮೊತ್ತ ಮೊದಲಿಗನು ನಾನಾಗುತ್ತಿದ್ದೆ.'**

قُلْ اِنْ كَانَ لِلرَّحْمٰنِ وَلَدٌ ڰ فَاَنَا اَوَّلُ الْعٰبِدِيْنَ ﴿٨١﴾

**83.** (ಅಲ್ಲಾಹನು) **ಪವಿತ್ರನು. ಆಕಾಶಗಳ ಮತ್ತು ಭೂಮಿಯ ಪ್ರಭುವೂ ಸಿಂಹಾಸನದ ಪ್ರಭುವೂ ಆದ ಅವನು ಅವರ ಆರೋಪಗಳಿಂದೆಲ್ಲ ಮುಕ್ತನು.**

سُبْحٰنَ رَبِّ السَّمٰوٰتِ وَالْاَرْضِ رَبِّ الْعَرْشِ عَمَّا يَصِفُوْنَ ﴿٨٢﴾

**84.** **ಆದ್ದರಿಂದ ಅವರಿಗೆ ಮುನ್ನೆಚ್ಚರಿಕೆಯಿತ್ತ ದಿನವನ್ನು ಅವರು ಕಾಣುವ ವರೆಗೆ ನಿರರ್ಥಕ ಮಾತುಕತೆಗಳಲ್ಲಿ ನಿರತರಾಗಲಿಕ್ಕೂ ವಿನೋದವಾಡಲಿಕ್ಕೂ ಅವರನ್ನು ಬಿಟ್ಟುಬಿಡು.**

فَذَرْهُمْ يَخُوْضُوْا وَيَلْعَبُوْا حَتّٰى يُلٰقُوْا يَوْمَهُمُ الَّذِيْ يُوْعَدُوْنَ ﴿٨٣﴾

**85.** **ಆಕಾಶದಲ್ಲೂ ಅವನೇ ದೇವನು; ಭೂಮಿಯಲ್ಲೂ ಅವನೇ ದೇವನು. ಅವನು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.**

وَهُوَ الَّذِيْ فِي السَّمَاۗءِ اِلٰهٌ وَّفِي الْاَرْضِ اِلٰهٌ ۭ وَهُوَ الْحَكِيْمُ الْعَلِيْمُ ﴿٨٤﴾

**86.** **ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಅಧಿಪತಿಯಾದವನು** (ಅಲ್ಲಾಹನು) **ಅನುಗ್ರಹಪೂರ್ಣನು. ಅಂತ್ಯದಿನದ ಬಗ್ಗೆ ಅವನು ಬಲ್ಲನು. ಅವನ ಬಳಿಗೆ ನೀವು ಹಿಂತಿರುಗಿಸಲ್ಪಡುವಿರಿ.**

وَتَبٰرَكَ الَّذِيْ لَهٗ مُلْكُ السَّمٰوٰتِ وَالْاَرْضِ وَمَا بَيْنَهُمَا ۚ وَعِنْدَهٗ عِلْمُ السَّاعَةِ ۚ وَاِلَيْهِ تُرْجَعُوْنَ ﴿٨٥﴾

**87.** **ಅವನನ್ನು** (ಅಲ್ಲಾಹನನ್ನು) **ಬಿಟ್ಟು ಯಾರನ್ನು ಅವರು ಕರೆದು ಪ್ರಾರ್ಥಿಸುತ್ತಾರೋ, ಅವರಿಗೆ ಶಿಫಾರಸು ಮಾಡುವ ಅಧಿಕಾರವಿಲ್ಲ. ಆದರೆ ಸತ್ಯಕ್ಕೆ ಸಾಕ್ಷಿಯಾಗಿರುವವನಿಗೆ**[409A] ಶಿಫಾರಸು ಮಾಡುವ ಅಧಿಕಾರವಿದೆ.

وَلَا يَمْلِكُ الَّذِيْنَ يَدْعُوْنَ مِنْ دُوْنِهِ الشَّفَاعَةَ اِلَّا مَنْ شَهِدَ بِالْحَقِّ وَهُمْ يَعْلَمُوْنَ ﴿٨٦﴾

409A. ಅಂದರೆ, ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ). ಶಿಫಾರಸು ಮಾಡುವ ಅಧಿಕಾರ ಮುಹಮ್ಮದ್ ಪೈಗಂಬರ(ಸ)ರಿಗೆ ಮಾತ್ರವಿರುವುದೆಂದು ಈ ವಚನದಿಂದ ಸಾಬೀತಾಗುತ್ತದೆ.

وَلَئِنْ سَأَلْتَهُمْ مَّنْ خَلَقَهُمْ لَيَقُوْلُنَّ اللّٰهُ فَاَنّٰى يُؤْفَكُوْنَ ﴿٨٧﴾

**88. ಅವರನ್ನು ಸೃಷ್ಟಿಸಿದ್ದು ಯಾರೆಂದು ನೀನು ಅವರೊಡನೆ ಕೇಳಿದರೆ, 'ಅಲ್ಲಾಹ್' ಎಂದು ಅವರು ಖಂಡಿತವಾಗಿಯೂ ಹೇಳುವರು. ಮತ್ತೆ ಅವರು ಹೇಗೆ ಪರಾಙ್ಮುಖರಾಗುವರು?**

وَقِيْلِهٖ يٰرَبِّ اِنَّ هٰٓؤُلَآءِ قَوْمٌ لَّا يُؤْمِنُوْنَ ﴿٨٨﴾

**89. 'ಎಲೈ ನನ್ನ ಪ್ರಭೂ, ಈ ಜನರು ಸತ್ಯವನ್ನು ನಂಬುವುದಿಲ್ಲ' ಎಂಬ ಅವರ** (ಪ್ರವಾದಿಯ) **ಅಳಲಿಗೆ ನಾವು ಸಾಕ್ಷಿ.**

فَاصْفَحْ عَنْهُمْ وَقُلْ سَلٰمٌ ۚ فَسَوْفَ يَعْلَمُوْنَ ﴿٨٩﴾

**90.** (ನಾವು ಉತ್ತರಿಸಿದೆವು:) **"ಅವರಿಂದ ವಿಮುಖನಾಗು ಮತ್ತು 'ಶಾಂತಿ' ಎಂದು ಮಾತ್ರ ಹೇಳು. ಅವರು ಬೇಗನೆ ಮನವರಿಕೆ ಮಾಡುವರು."**

سُورَةُ الدُّخَانِ مَكِّيَّةٌ وَهِيَ مَعَ الْبَسْمَلَةِ سِتُّونَ اٰيَةً وَثَلٰثُ رُكُوعَاتٍ

# 44. ಅದ್ದುಖಾನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 60 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2. ಹಾ ಮೀಂ.**[410]

حٰمٓ (٢)

**3. ಈ ಸುವ್ಯಕ್ತ ಗ್ರಂಥದಾಣೆ.**

وَالْكِتٰبِ الْمُبِيْنِ (٣)

**4. ದಿಟವಾಗಿಯೂ ನಾವು ಇದನ್ನು ಒಂದು ಅನುಗ್ರಹಕರವಾದ ರಾತ್ರಿಯಲ್ಲಿ**[411] **ಅವತೀರ್ಣಗೊಳಿಸಿದ್ದೇವೆ. ನಾವು** (ಕೆಡುಕುಗಳ ವಿರುದ್ಧವಾಗಿ) **ಸದಾ ಮುನ್ನೆಚ್ಚರಿಕೆ ನೀಡುತ್ತಲೇ ಇರುವವರಾಗಿದ್ದೇವೆ.**

اِنَّآ اَنْزَلْنٰهُ فِيْ لَيْلَةٍ مُّبٰرَكَةٍ اِنَّا كُنَّا مُنْذِرِيْنَ (٤)

**5. ಅದರಲ್ಲಿ ವಿವೇಕಪೂರ್ಣವಾದ ಎಲ್ಲ ವಿಚಾರಗಳು ಇತ್ಯರ್ಥಗೊಳಿಸಲ್ಪಡುತ್ತವೆ -**

فِيْهَا يُفْرَقُ كُلُّ اَمْرٍ حَكِيْمٍ (٥)

**6. ನಮ್ಮ ಆಜ್ಞೆಯ ಮೂಲಕ. ನಿಶ್ಚಯವಾಗಿಯೂ ನಾವು ಸಂದೇಶವಾಹಕರನ್ನು ಸದಾ ಕಳುಹಿಸುತ್ತಲೇ ಇರುತ್ತೇವೆ -**

اَمْرًا مِّنْ عِنْدِنَا ؕ اِنَّا كُنَّا مُرْسِلِيْنَ (٦)

**7. ನಿನ್ನ ಪ್ರಭುವಿನ ಕೃಪೆಯೆಂಬಂತೆ. ನಿಸ್ಸಂಶಯವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಎಲ್ಲ ಬಲ್ಲವನೂ ಆಗಿದ್ದಾನೆ -**

رَحْمَةً مِّنْ رَّبِّكَ ؕ اِنَّهٗ هُوَ السَّمِيْعُ الْعَلِيْمُ (٧)

410. ಹಾ=ಹಮೀದ್ (ಸ್ತುತ್ಯರ್ಹನು). ಮೀಂ = ಮಜೀದ್ (ಮಹಾಮಹಿಮನು). (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)

411. ಇಲ್ಲಿ "ರಾತ್ರಿ" ಎಂಬುದರ ತಾತ್ಪರ್ಯ ಪ್ರವಾದಿಯ ಆಗಮನ ಕಾಲವಾಗಿದೆ. ಆಧ್ಯಾತ್ಮಿಕ ಅಂಧಕಾರ ವ್ಯಾಪಿಸುವಾಗ ಪ್ರವಾದಿಗಳು ಬರುತ್ತಾರೆ. ಅವರು ಬಂದು ಜನರಿಗೆ ಸರಿಯಾದ ದಾರಿಯನ್ನು ತೋರಿಸುತ್ತಾರೆ. ಆದ್ದರಿಂದ ಅದು ಅನುಗ್ರಹೀತ ಕಾಲವೂ ಆಗಿದೆ. ಪ್ರವಾದಿ ಆದಂ (ಅಲೈಹಿಸ್ಸಲಾಂ)ರ ಕಾಲ ಮೊದಲ್ಗೊಂಡು ಇಂತಹ ಘಟ್ಟಗಳು ಬರುತ್ತಲಿವೆ. ಮುಂದೆ ಸಹ ಲೋಕಾಂತ್ಯದ ವರೆಗೆ ಈ ಕ್ರಮ ಮುಂದುವರಿಯುವುದು.





**8. ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಪ್ರಭು - ನೀವು ನಂಬುವವರಾದರೆ!**

رَبِّ السَّمٰوٰتِ وَالْاَرْضِ وَمَا بَيْنَهُمَا ۘ اِنْ كُنْتُمْ مُّوْقِنِيْنَ (٨)

**9. ಅವನ ಹೊರತು ಬೇರೆ ಆರಾಧ್ಯನಿಲ್ಲ. ಅವನು ಜೀವಂತಗೊಳಿಸುತ್ತಾನೆ ಹಾಗೂ ಮೃತಪಡಿಸುತ್ತಾನೆ. ಅವನು ನಿಮ್ಮ ಪ್ರಭುವೂ ನಿಮ್ಮ ತಂದೆ ತಾತಂದಿರ ಪ್ರಭುವೂ ಆಗಿದ್ದಾನೆ.**

لَآ اِلٰهَ اِلَّا هُوَ يُحْيٖ وَيُمِيْتُ ؕ رَبُّكُمْ وَرَبُّ اٰبَآئِكُمُ الْاَوَّلِيْنَ (٩)

**10. ಆದರೆ ಅವರು ಸಂಶಯಗ್ರಸ್ತರಾಗಿ ಆಟವಾಡುತ್ತಾರೆ.**

بَلْ هُمْ فِيْ شَكٍّ يَّلْعَبُوْنَ (١٠)

**11. ಆಕಾಶವು ದಟ್ಟವಾದ ಹೊಗೆಯಿಂದ**[412] **ಆವರಿಸಲ್ಪಡುವ ಒಂದು ದಿನವನ್ನು ನೀನು ನಿರೀಕ್ಷಿಸು.**

فَارْتَقِبْ يَوْمَ تَاْتِي السَّمَآءُ بِدُخَانٍ مُّبِيْنٍ (١١)

**12. ಅದು ಜನರ ಮೇಲೆ ಕರಿಛಾಯೆಯನ್ನು ಹರಡುವುದು. ಇದೊಂದು ಯಾತನಾಮಯವಾದ ಶಿಕ್ಷೆಯಾಗಿದೆ.**

يَّغْشَى النَّاسَ ؕ هٰذَا عَذَابٌ اَلِيْمٌ (١٢)

**13.** (ಆಗ ಜನರು ಮೊರೆಯಿಡುವರು:) **'ನಮ್ಮ ಪ್ರಭೂ, ನಮ್ಮಿಂದ ಈ ಶಿಕ್ಷೆಯನ್ನು ಹೋಗಲಾಡಿಸು. ನಿಜವಾಗಿಯೂ ನಾವು ಸತ್ಯವಿಶ್ವಾಸಿಗಳಾಗಿದ್ದೇವೆ.'**

رَبَّنَا اكْشِفْ عَنَّا الْعَذَابَ اِنَّا مُؤْمِنُوْنَ (١٣)

**14. ಆ ದಿನ ಉಪದೇಶ ಸ್ವೀಕರಿಸುವ** (ವಿಶ್ವಾಸ ಹೊಂದುವ) **ಭಾಗ್ಯ ಅವರಿಗೆ ಹೇಗೆ ಲಭಿಸುವುದು? ಅವರಿಗೆ ಎಲ್ಲ ಸಂಗತಿಗಳನ್ನೂ ಸ್ಪಷ್ಟವಾಗಿ ವಿವರಿಸುವ ಸಂದೇಶವಾಹಕನ ಆಗಮನ ಮೊದಲೇ ಆಗಿದೆಯಲ್ಲವೇ?**

اَنّٰى لَهُمُ الذِّكْرٰى وَقَدْ جَآءَهُمْ رَسُوْلٌ مُّبِيْنٌ (١٤)

**15. ಆತನಿಂದ ಅವರು ಮುಖ ತಿರುಗಿಸಿದರು ಮತ್ತು** 'ಇವನೊಬ್ಬ **ಶಿಕ್ಷಣ ನೀಡಲ್ಪಟ್ಟ ಹುಚ್ಚ' ಎಂದು ಹೇಳಿದರು.**

ثُمَّ تَوَلَّوْا عَنْهُ وَقَالُوْا مُعَلَّمٌ مَّجْنُوْنٌ (١٥)

412. ಆಟಂ ಬಾಂಬ್, ಹೈಡ್ರೋಜನ್ ಬಾಂಬ್‌ಗಳ ಬಗ್ಗೆ ಇಲ್ಲಿ ಸೂಚಿಸಲಾಗಿದೆ. ಅವುಗಳ ಸ್ಫೋಟದಿಂದ ಅಂತರಿಕ್ಷ ಧೂಮಮಯವಾಗುತ್ತದೆ.

**16.** ನಾವು ಅಲ್ಪಕಾಲಕ್ಕೆ ಶಿಕ್ಷೆಯನ್ನು ದೂರ ಮಾಡುವೆವು. (ಆದರೆ) ಖಂಡಿತವಾಗಿಯೂ ನೀವು ಹಿಂದಿನಂತೆಯೇ ಮಾಡುವಿರಿ.

إِنَّا كَاشِفُوا الْعَذَابِ قَلِيلًا إِنَّكُمْ عَائِدُونَ ﴿١٦﴾

**17.** ನಾವು (ನಿಮ್ಮನ್ನು) ಬಲಿಷ್ಠವಾದ ಹಿಡಿತದಿಂದ ಹಿಡಿಯುವ ದಿನದಂದು, ಖಂಡಿತವಾಗಿಯೂ ನಾವು ಪ್ರತಿಕಾರವೆಸಗುವೆವು.

يَوْمَ نَبْطِشُ الْبَطْشَةَ الْكُبْرَىٰ ۚ إِنَّا مُنْتَقِمُونَ ﴿١٧﴾

**18.** ಇವರಿಗಿಂತ ಮುಂಚೆ ನಾವು ಫಿರ್‌ಔನನ ಕೋಮನ್ನು ಪರೀಕ್ಷಿಸಿದ್ದೆವು. ಅವರ ಬಳಿಗೆ ಓರ್ವ ಗೌರವಾನ್ವಿತ ಸಂದೇಶವಾಹಕ ಬಂದಿದ್ದರು.

وَلَقَدْ فَتَنَّا قَبْلَهُمْ قَوْمَ فِرْعَوْنَ وَجَاءَهُمْ رَسُولٌ كَرِيمٌ ﴿١٨﴾

**19.** (ಆ ಸಂದೇಶವಾಹಕ ಹೇಳಿದರು:) 'ಅಲ್ಲಾಹನ ದಾಸರನ್ನು ನನಗೆ ಒಪ್ಪಿಸಿರಿ. ನಿಸ್ಸಂದೇಹವಾಗಿಯೂ ನಾನು ನಿಮಗೋಸ್ಕರ ವಿಶ್ವಸ್ತನಾದ ಓರ್ವ ಸಂದೇಶವಾಹಕನಾಗಿದ್ದೇನೆ.

أَنْ أَدُّوا إِلَيَّ عِبَادَ اللَّهِ ۖ إِنِّي لَكُمْ رَسُولٌ أَمِينٌ ﴿١٩﴾

**20.** 'ಅಲ್ಲಾಹನಿಗಿಂತ ಮಿಗಿಲಾಗಲು ನೀವು ಪ್ರಯತ್ನಿಸಬೇಡಿರಿ. ನಿಜವಾಗಿಯೂ ನಾನು ನಿಮಗೆ ಸ್ಪಷ್ಟವಾದೊಂದು ಸಾಕ್ಷ್ಯಾಧಾರವನ್ನು ತರಲಿದ್ದೇನೆ.

وَأَنْ لَا تَعْلُوا عَلَى اللَّهِ ۖ إِنِّي آتِيكُمْ بِسُلْطَانٍ مُبِينٍ ﴿٢٠﴾

**21.** 'ನೀವು ನನ್ನನ್ನು ಕಲ್ಲೆಸೆದು ಕೊಲ್ಲದಿರಲಿಕ್ಕಾಗಿ ನನ್ನ ಮತ್ತು ನಿಮ್ಮ ಪ್ರಭುವಿನ (ಅಲ್ಲಾಹನ) ಆಶ್ರಯವನ್ನು ನಾನು ಕೋರುತ್ತೇನೆ.

وَإِنِّي عُذْتُ بِرَبِّي وَرَبِّكُمْ أَنْ تَرْجُمُونِ ﴿٢١﴾

**22.** 'ನೀವು ನನ್ನನ್ನು ನಂಬುವುದಿಲ್ಲವಾದರೆ ನನ್ನನ್ನು ನನ್ನಷ್ಟಕ್ಕೆ ಬಿಟ್ಟುಬಿಡಿರಿ.'

وَإِنْ لَمْ تُؤْمِنُوا لِي فَاعْتَزِلُونِ ﴿٢٢﴾

**23.** ಅನಂತರ ಅವರು ತನ್ನ ಪ್ರಭುವನ್ನು ಕರೆದು, 'ದಿಟವಾಗಿಯೂ ಇವರು ಪಾಪಿಗಳಾದ ಜನರಾಗಿದ್ದಾರೆ' ಎಂದು ಹೇಳಿದರು.

فَدَعَا رَبَّهُ أَنَّ هَٰؤُلَاءِ قَوْمٌ مُجْرِمُونَ ﴿٢٣﴾

**24.** (ಅಲ್ಲಾಹನು ಹೇಳಿದನು:) 'ನನ್ನ ದಾಸರೊಂದಿಗೆ ರಾತ್ರಿ ಹೊತ್ತಿನಲ್ಲಿ ಹೊರಟು ಹೋಗು. ನೀವು ಖಂಡಿತವಾಗಿಯೂ (ಶತ್ರುಗಳಿಂದ) ಬೆನ್ನಟ್ಟಲ್ಪಡುವಿರಿ.

فَأَسْرِ بِعِبَادِي لَيْلًا إِنَّكُمْ مُتَّبَعُونَ ﴿٢٤﴾





**25.** 'ಸಮುದ್ರವನ್ನು ಅದು ಇಳಿತದಿಂದ ಶಾಂತವಾಗಿರುವ ಸಂದರ್ಭದಲ್ಲಿ ದಾಟಿಹೋಗಿರಿ. ಖಂಡಿತವಾಗಿಯೂ ಅವರು (ಫಿರ್‌ಔನನ ಜನರು) ಮುಳುಗಿಸಲ್ಪಡುವ ಸೈನ್ಯ.'

وَاتْرُكِ الْبَحْرَ رَهْوًا ۖ إِنَّهُمْ جُنْدٌ مُغْرَقُونَ ﴿٢٥﴾

**26.** ಎಷ್ಟೆಲ್ಲ ಉದ್ಯಾನಗಳನ್ನೂ ಚಿಲುಮೆಗಳನ್ನೂ ಅವರು ತೊರೆದು ಹೋದರು!

كَمْ تَرَكُوا مِنْ جَنَّاتٍ وَعُيُونٍ ﴿٢٦﴾

**27.** ಎಷ್ಟೆಲ್ಲ ಕೃಷಿ ಪ್ರದೇಶಗಳನ್ನೂ ರಮ್ಯ ಅರಮನೆಗಳನ್ನೂ!

وَزُرُوعٍ وَمَقَامٍ كَرِيمٍ ﴿٢٧﴾

**28.** ಯಾವೆಲ್ಲ ಸುಖ ಸೌಕರ್ಯಗಳನ್ನು ಅವರು ಅನುಭವಿಸಿ ಆನಂದಿಸುತ್ತಿದ್ದರು!

وَنَعْمَةٍ كَانُوا فِيهَا فَكِهِينَ ﴿٢٨﴾

**29.** ಆ ರೀತಿ (ಅದು ವಿಧಿಯಾಗಿತ್ತು!). ಮತ್ತೆ ಬೇರೊಂದು ಜನತೆಯನ್ನು ನಾವು ಅವುಗಳ ವಾರೀಸುದಾರರನ್ನಾಗಿ ಮಾಡಿದೆವು.[413]

كَذَٰلِكَ ۖ وَأَوْرَثْنَاهَا قَوْمًا آخَرِينَ ﴿٢٩﴾

**30.** ಆಗ ಆಕಾಶ ಮತ್ತು ಭೂಮಿ ಅವರಿಗೋಸ್ಕರ ಅಳಲಿಲ್ಲ. ಅವರಿಗೆ ಕಾಲಾವಕಾಶ ನೀಡಲ್ಪಡಲೂ ಇಲ್ಲ.

فَمَا بَكَتْ عَلَيْهِمُ السَّمَاءُ وَالْأَرْضُ وَمَا كَانُوا مُنْظَرِينَ ﴿٣٠﴾

**31.** ಇಸ್ರಾಈಲ್ ಸಂತತಿಗಳನ್ನು ನಾವು ಅಪಮಾನಕರವಾದ ದೌರ್ಜನ್ಯಗಳಿಂದ ಪಾರು ಮಾಡಿದೆವು-

وَلَقَدْ نَجَّيْنَا بَنِي إِسْرَائِيلَ مِنَ الْعَذَابِ الْمُهِينِ ﴿٣١﴾

**32.** ಫಿರ್‌ಔನ್‌ನಿಂದ. ನಿಜವಾಗಿಯೂ ಅವನು ದುರಂಹಕಾರಿಯೂ ಹದ್ದುಮೀರಿ ವರ್ತಿಸುವವರಲ್ಲಿ ಸೇರಿದವನೂ ಆಗಿದ್ದನು.

مِنْ فِرْعَوْنَ ۚ إِنَّهُ كَانَ عَالِيًا مِنَ الْمُسْرِفِينَ ﴿٣٢﴾

**33.** ನಾವು (ಅವರ ಯೋಗ್ಯತೆಯನ್ನು) ಅರಿತುಕೊಂಡು ಅವರನ್ನು(ಅಂದಿನ) ಎಲ್ಲ ಜನರಲ್ಲಿ ಉತ್ಕೃಷ್ಟರನ್ನಾಗಿ ಆಯ್ಕೆಮಾಡಿದೆವು.

وَلَقَدِ اخْتَرْنَاهُمْ عَلَىٰ عِلْمٍ عَلَى الْعَالَمِينَ ﴿٣٣﴾

**34.** ಸ್ಪಷ್ಟವಾದ ಪರೀಕ್ಷೆಗಳಿಂದ ಕೂಡಿದ ಕೆಲವು ದೃಷ್ಟಾಂತಗಳನ್ನು ನಾವು ಅವರಿಗೆ ನೀಡಿದೆವು.

وَآتَيْنَاهُمْ مِنَ الْآيَاتِ مَا فِيهِ بَلَاءٌ مُبِينٌ ﴿٣٤﴾

413. ಅವುಗಳಿಗೆ ಹೋಲುವ ಅನುಗ್ರಹಗಳನ್ನು ಆ ಬಳಿಕ ಇಸ್ರಾಈಲ್ ಜನತೆಗೆ ನೀಡಲಾಯಿತೆಂದು ತಾತ್ಪರ್ಯ.

**35.** ದಿಟವಾಗಿಯೂ ಈ ಜನರು (ಅವಿಶ್ವಾಸಿಗಳು) ಹೇಳುತ್ತಾರೆ:

إِنَّ هَٰٓؤُلَآءِ لَيَقُولُونَ ﴿٣٥﴾

**36.** 'ಇದು ನಮ್ಮ ಪ್ರಥಮದ ಒಂದೇ ಒಂದು ಮರಣವಾಗಿದೆ. ನಾವು ಪುನರುಜ್ಜೀವನಗೊಳಿಸಲ್ಪಡಲಾರೆವು.

إِنْ هِيَ إِلَّا مَوْتَتُنَا ٱلْأُولَىٰ وَمَا نَحْنُ بِمُنشَرِينَ ﴿٣٦﴾

**37.** 'ನೀವು ಸತ್ಯವಂತರೆಂದಾದರೆ ನಮ್ಮ ತಂದೆ ತಾತಂದಿರನ್ನು ನೀವು (ಪುನಃ ಜೀವಂತಗೊಳಿಸಿ) ಕರೆ ತನ್ನಿರಿ.'

فَأْتُوا۟ بِـَٔابَآئِنَآ إِن كُنتُمْ صَٰدِقِينَ ﴿٣٧﴾

**38.** ಉತ್ತಮರು ಯಾರು - ಇವರೋ, 'ತುಬ್ಬಅ್'ದ ಜನರೋ ಅಥವಾ ಅವರ ಪೂರ್ವಿಕರೋ? ಅವರು ಪಾಪಿಗಳಾಗಿದ್ದುದರಿಂದ ಅವರನ್ನೆಲ್ಲ ನಾವು ನಾಶಪಡಿಸಿದ್ದೆವು.

أَهُمْ خَيْرٌ أَمْ قَوْمُ تُبَّعٍ وَٱلَّذِينَ مِن قَبْلِهِمْ ۚ أَهْلَكْنَٰهُمْ ۖ إِنَّهُمْ كَانُوا۟ مُجْرِمِينَ ﴿٣٨﴾

**39.** ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ನಾವು ವಿನೋದಕ್ಕಾಗಿ ಸೃಷ್ಟಿಸಲಿಲ್ಲ.

وَمَا خَلَقْنَا ٱلسَّمَٰوَٰتِ وَٱلْأَرْضَ وَمَا بَيْنَهُمَا لَٰعِبِينَ ﴿٣٩﴾

**40.** ಯಥೋಚಿತವಾಗಿ ಹೊರತು ನಾವು ಅವುಗಳನ್ನು ಸೃಷ್ಟಿಸಿಲ್ಲ; ಆದರೆ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

مَا خَلَقْنَٰهُمَآ إِلَّا بِٱلْحَقِّ وَلَٰكِنَّ أَكْثَرَهُمْ لَا يَعْلَمُونَ ﴿٤٠﴾

**41.** ನಿಶ್ಚಯವಾಗಿಯೂ ತೀರ್ಮಾನದ ದಿನ ಅವರೆಲ್ಲರಿಗೂ ನಿಗದಿಪಡಿಸಿದ ವೇಳೆಯಾಗಿದೆ.

إِنَّ يَوْمَ ٱلْفَصْلِ مِيقَٰتُهُمْ أَجْمَعِينَ ﴿٤١﴾

**42.** ಅಂದು ಒಬ್ಬ ಮಿತ್ರನು ಇನ್ನೊಬ್ಬ ಮಿತ್ರನ ಪ್ರಯೋಜನಕ್ಕೆ ಸಿಗಲಾರ. ಅವರಿಗೆ ನೆರವೇನೂ ದೊರಕದು -

يَوْمَ لَا يُغْنِى مَوْلًى عَن مَّوْلًى شَيْـًٔا وَلَا هُمْ يُنصَرُونَ ﴿٤٢﴾

**43.** ಅಲ್ಲಾಹನ ಕರುಣೆಗೆ ಪಾತ್ರರಾದವರನ್ನು ಹೊರತು. ದಿಟವಾಗಿಯೂ ಅವನು ಪ್ರತಾಪಶಾಲಿಯೂ ದಯಾವಂತನೂ ಆಗಿದ್ದಾನೆ.

إِلَّا مَن رَّحِمَ ٱللَّهُ ۚ إِنَّهُۥ هُوَ ٱلْعَزِيزُ ٱلرَّحِيمُ ﴿٤٣﴾

**44.** ನಿಶ್ಚಯವಾಗಿಯೂ 'ಝುಕ್ಕೂಮ್' ವೃಕ್ಷ.

إِنَّ شَجَرَتَ ٱلزَّقُّومِ ﴿٤٤﴾





**45.** ಪಾಪಿಗಳ ಆಹಾರವಾಗಿದೆ.

طَعَامُ ٱلْأَثِيمِ ﴿٤٥﴾

**46.** ಕರಗಿಸಿದ ತಾಮ್ರದಂತೆ (ಅವರ) ಹೊಟ್ಟೆಯೊಳಗೆ ಅದು ಕುದಿಯುವುದು -

كَٱلْمُهْلِ يَغْلِى فِى ٱلْبُطُونِ ﴿٤٦﴾

**47.** ಬಿಸಿನೀರು ಕುದಿಯುವಂತೆ.

كَغَلْىِ ٱلْحَمِيمِ ﴿٤٧﴾

**48.** (ನರಕ ಕಿಂಕರರಿಗೆ ನಾವು ಆಜ್ಞಾಪಿಸುವೆವು:) 'ಅವನನ್ನು ಹಿಡಿಯಿರಿ, ಜ್ವಲಿಸುವ ಅಗ್ನಿಯ ಮಧ್ಯಕ್ಕೆ ಅವನನ್ನು ಎಳೆದೊಯ್ಯಿರಿ.

خُذُوهُ فَٱعْتِلُوهُ إِلَىٰ سَوَآءِ ٱلْجَحِيمِ ﴿٤٨﴾

**49.** 'ಅನಂತರ ಕುದಿಯುವ ನೀರನ್ನು ತಲೆಗೆ ಹೊಯ್ಯುವ ಶಿಕ್ಷೆ ಅವನಿಗೆ ನೀಡಿರಿ.'

ثُمَّ صُبُّوا۟ فَوْقَ رَأْسِهِۦ مِنْ عَذَابِ ٱلْحَمِيمِ ﴿٤٩﴾

**50.** (ಅವನೊಡನೆ ಹೇಳಲಾಗುವುದು:) 'ರುಚಿ ನೋಡು. ನೀನು ಪ್ರತಾಪಶಾಲಿಯೂ ಗೌರವಾನ್ವಿತನೂ ಆಗಿರುವೆ ಎಂದು ನೀನು ಭಾವಿಸಿದ್ದಿಯಲ್ಲವೇ?

ذُقْ إِنَّكَ أَنتَ ٱلْعَزِيزُ ٱلْكَرِيمُ ﴿٥٠﴾

**51.** 'ನೀವು ಸಂದೇಹಪಡುತ್ತಿದ್ದುದು ಇದೇ (ಶಿಕ್ಷೆ) ಆಗಿದೆ.'

إِنَّ هَٰذَا مَا كُنتُم بِهِۦ تَمْتَرُونَ ﴿٥١﴾

**52.** (ಅಲ್ಲಾಹನ) ಭಯಭಕ್ತಿಯುಳ್ಳವರು ಸುರಕ್ಷಿತವಾದೊಂದು ಸ್ಥಳದಲ್ಲಿ ಇರುವರು.

إِنَّ ٱلْمُتَّقِينَ فِى مَقَامٍ أَمِينٍ ﴿٥٢﴾

**53.** ಸ್ವರ್ಗೀಯ ಉದ್ಯಾನಗಳು ಮತ್ತು ಚಿಲುಮೆಗಳ ಮಧ್ಯ ದಲ್ಲಿ.

فِى جَنَّٰتٍ وَعُيُونٍ ﴿٥٣﴾

**54.** ಅವರು ತೆಳು ರೇಷ್ಮೆ ಮತ್ತು ದಪ್ಪ ಜರತಾರಿ ಉಡುಪುಗಳನ್ನು ಧರಿಸಿ ಪರಸ್ಪರ ಅಭಿಮುಖವಾಗಿ ಕುಳಿತುಕೊಳ್ಳುವರು.

يَلْبَسُونَ مِن سُندُسٍ وَإِسْتَبْرَقٍ مُّتَقَٰبِلِينَ ﴿٥٤﴾

**55.** ಅದೇ ರೀತಿ (ಆಗುವುದು). ವಿಶಾಲಾಕ್ಷಿಗಳಾದ ಸುಂದರಿಯರನ್ನು ನಾವು ಅವರಿಗೆ ಸಂಗಾತಿಗಳನ್ನಾಗಿ ಮಾಡುವೆವು.

كَذَٰلِكَ وَزَوَّجْنَٰهُم بِحُورٍ عِينٍ ﴿٥٥﴾

**56.** ಅಲ್ಲಿ ಅವರು ಸುರಕ್ಷಿತರಾಗಿದ್ದುಕೊಂಡು ಎಲ್ಲ ತರದ ಹಣ್ಣು ಹಂಪಲುಗಳನ್ನು ತರಿಸಿಕೊಳ್ಳುವರು.

يَدْعُونَ فِيهَا بِكُلِّ فَٰكِهَةٍ ءَامِنِينَ ﴿٥٦﴾

| | |
|---|---|
| **57. ಪ್ರಥಮದ ಮರಣ ಹೊರತು ಅಲ್ಲಿ ಅವರು ಬೇರೆ ಮರಣವನ್ನು ಹೊಂದಲಾರರು. ಜ್ವಲಿಸುವ ಅಗ್ನಿ ಶಿಕ್ಷೆಯಿಂದ ಅವನು** (ಅಲ್ಲಾಹನು) **ಅವರನ್ನು ಪಾರು ಮಾಡುವನು.** | لَا يَذُوقُونَ فِيهَا الْمَوْتَ إِلَّا الْمَوْتَةَ الْأُولَىٰ ۖ وَوَقَاهُمْ عَذَابَ الْجَحِيمِ ﴿٥٦﴾ |
| **58.** (ಇವೆಲ್ಲ) **ನಿನ್ನ ಪ್ರಭುವಿನ ಅನುಗ್ರಹದಿಂದ. ಅದೇ ಮಹಾ ವಿಜಯವಾಗಿದೆ.** | فَضْلًا مِّن رَّبِّكَ ۚ ذَٰلِكَ هُوَ الْفَوْزُ الْعَظِيمُ ﴿٥٧﴾ |
| **59. ಅವರು ಗಮನಿಸಲಿಕ್ಕೋಸ್ಕರ ನಾವು ಇದನ್ನು** (ಖುರ್‌ಆನನ್ನು) **ನಿನ್ನ ಭಾಷೆಯಲ್ಲಿ ಸುಲಭಗೊಳಿಸಿರುವೆವು.** | فَإِنَّمَا يَسَّرْنَاهُ بِلِسَانِكَ لَعَلَّهُمْ يَتَذَكَّرُونَ ﴿٥٨﴾ |
| **60. ಆದ್ದರಿಂದ ನೀನು ನಿರೀಕ್ಷಿಸು; ಅವರು ಸಹ ನಿರೀಕ್ಷಿಸುತ್ತಿದ್ದಾರೆ.** | فَارْتَقِبْ إِنَّهُم مُّرْتَقِبُونَ ﴿٥٩﴾ |

سُوْرَةُ الْجَاثِيَةِ مَكِّيَّةٌ وَّهِيَ مَعَ الْبَسْمَلَةِ ثَمَانٍ وَّثَلٰثُوْنَ اٰيَةً وَّاَرْبَعَةُ رُكُوْعَاتٍ

# 45. ಅಲ್‌ಜಾಸಿಯಃ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 38 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಹಾ ಮೀಂ.**[414]

حٰمٓ ﴿٢﴾

**3. ಪ್ರತಾಪವಂತನೂ ವಿವೇಕಶಾಲಿಯೂ ಆದ ಅಲ್ಲಾಹನಿಂದ ಈ ಗ್ರಂಥ ಅವತೀರ್ಣವಾಗಿದೆ.**

تَنْزِيْلُ الْكِتٰبِ مِنَ اللّٰهِ الْعَزِيْزِ الْحَكِيْمِ ﴿٣﴾

**4. ನಿಶ್ಚಯವಾಗಿಯೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಸತ್ಯವಿಶ್ವಾಸಿಗಳಿಗೆ ದೃಷ್ಟಾಂತಗಳಿವೆ.**

اِنَّ فِي السَّمٰوٰتِ وَالْاَرْضِ لَاٰيٰتٍ لِّلْمُؤْمِنِيْنَ ﴿٤﴾

**5. ನಿಮ್ಮನ್ನು ಸೃಷ್ಟಿಸಿದುದರಲ್ಲಿಯೂ** (ಭೂಮಿಯಲ್ಲಿ) **ಅವನು ಹರಡಿರುವ ಎಲ್ಲ ಜೀವಜಾಲಗಳಲ್ಲಿಯೂ ದೃಢವಿಶ್ವಾಸವುಳ್ಳವರಿಗೆ ದೃಷ್ಟಾಂತಗಳಿವೆ.**

وَفِيْ خَلْقِكُمْ وَمَا يَبُثُّ مِنْ دَآبَّةٍ اٰيٰتٌ لِّقَوْمٍ يُّوْقِنُوْنَ ﴿٥﴾

**6. ರಾತ್ರಿ ಮತ್ತು ಹಗಲಿನ ಪರ್ಯಾಯ ಕ್ರಮದಲ್ಲೂ ಅಲ್ಲಾಹನು ಆಕಾಶದಿಂದ ಇಳಿಸುವ ಆಹಾರ ಮೂಲಕ ಅವನು ಭೂಮಿಯನ್ನು ಅದರ ನಿರ್ಜೀವಾವಸ್ಥೆಯ ನಂತರ ಸಜೀವಗೊಳಿಸುವುದರಲ್ಲೂ ಮಾರುತಗಳ ಬದಲಾವಣೆಯಲ್ಲೂ ಚಿಂತನೆ ಮಾಡುವ ಜನರಿಗೆ ದೃಷ್ಟಾಂತಗಳಿವೆ.**

وَاخْتِلَافِ الَّيْلِ وَالنَّهَارِ وَمَآ اَنْزَلَ اللّٰهُ مِنَ السَّمَآءِ مِنْ رِّزْقٍ فَاَحْيَا بِهِ الْاَرْضَ بَعْدَ مَوْتِهَا وَتَصْرِيْفِ الرِّيٰحِ اٰيٰتٌ لِّقَوْمٍ يَّعْقِلُوْنَ ﴿٦﴾

**7. ಇವೆಲ್ಲ ಅಲ್ಲಾಹನ ದೃಷ್ಟಾಂತಗಳಾಗಿವೆ. ಅವುಗಳನ್ನು ನಾವು ಯಥಾವತ್ತಾಗಿ ನಿನಗೆ ವಿವರಿಸಿ ಕೊಡುತ್ತೇವೆ. ಅಲ್ಲಾಹನ ವಚನಗಳ ಮತ್ತು ಅವನ ದೃಷ್ಟಾಂತಗಳ ಬಳಿಕ ಅವರು ಬೇರೇನನ್ನು ನಂಬುತ್ತಾರೆ?**

تِلْكَ اٰيٰتُ اللّٰهِ نَتْلُوْهَا عَلَيْكَ بِالْحَقِّ ۚ فَبِاَيِّ حَدِيْثٍ بَعْدَ اللّٰهِ وَاٰيٰتِهٖ يُؤْمِنُوْنَ ﴿٧﴾

414. ಹಾ=ಹಮೀದ್ (ಸ್ತುತ್ಯರ್ಹನು). ಮೀಂ=ಮಜೀದ್ (ಮಹಾಮಹಿಮನು). (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8. ಪ್ರತಿಯೋರ್ವ ಪಾಪಿಷ್ಠನಾದ ಸುಳ್ಳುಗಾರನಿಗೆ ನಾಶ.**

وَيْلٌ لِّكُلِّ اَفَّاكٍ اَثِيْمٍ ﴿٨﴾

**9. ತನಗೆ ವಿವರಿಸಿಕೊಡುವ ಅಲ್ಲಾಹನ ದೃಷ್ಟಾಂತಗಳನ್ನು ಅವನು ಆಲಿಸುತ್ತಾನೆ. ಅನಂತರ, ಅವನು ಅದನ್ನು ಆಲಿಸಲೇ ಇಲ್ಲವೆಂಬಂತೆ ಅಹಂಭಾವದಿಂದ** (ತನ್ನ ಅವಿಶ್ವಾಸದಲ್ಲಿ) **ದೃಢವಾಗಿ ನಿಲ್ಲುತ್ತಾನೆ. ಆದ್ದರಿಂದ ಯಾತನಾಮಯ ಶಿಕ್ಷೆಯ ಕುರಿತು ಅವನಿಗೆ ಮುನ್ನೆಚ್ಚರಿಕೆ ನೀಡು.**

يَّسْمَعُ اٰيٰتِ اللّٰهِ تُتْلٰى عَلَيْهِ ثُمَّ يُصِرُّ مُسْتَكْبِرًا كَاَنْ لَّمْ يَسْمَعْهَا ۚ فَبَشِّرْهُ بِعَذَابٍ اَلِيْمٍ ﴿٩﴾

**10. ಅವನು ನಮ್ಮ ದೃಷ್ಟಾಂತಗಳಲ್ಲಿ ಏನನ್ನಾದರೂ ತಿಳಿದರೆ ಅದನ್ನು ಅಪಹಾಸ್ಯಮಾಡುತ್ತಾನೆ. ಅಂತಹ ಜನರಿಗೆ ಅಪಮಾನಕರವಾದ ಶಿಕ್ಷೆ ಕಾದಿದೆ.**

وَاِذَا عَلِمَ مِنْ اٰيٰتِنَا شَيْـًٔا اتَّخَذَهَا هُزُوًا ۚ اُولٰٓئِكَ لَهُمْ عَذَابٌ مُّهِيْنٌ ﴿١٠﴾

**11. ಅವರ ಮುಂದೆ ನರಕವಿದೆ. ಅವರು ಸಂಪಾದಿಸಿದ್ದೇನೂ ಅವರಿಗೆ ಪ್ರಯೋಜನವಾಗಲಿಕ್ಕಿಲ್ಲ. ಅಲ್ಲಾಹನ ಹೊರತು ಅವರು ಯಾರನ್ನು ರಕ್ಷಕರನ್ನಾಗಿ ಮಾಡಿದ್ದಾರೋ ಅವರು ಸಹ** (ಅವರಿಗೆ ಪ್ರಯೋಜನಕ್ಕೆ ಬರಲಿಕ್ಕಿಲ್ಲ). **ಅವರಿಗೆ ಕಠೋರವಾದ ಶಿಕ್ಷೆ ಇದೆ.**

مِنْ وَّرَآئِهِمْ جَهَنَّمُ ۚ وَلَا يُغْنِيْ عَنْهُمْ مَّا كَسَبُوْا شَيْـًٔا وَّلَا مَا اتَّخَذُوْا مِنْ دُوْنِ اللّٰهِ اَوْلِيَآءَ ۚ وَلَهُمْ عَذَابٌ عَظِيْمٌ ﴿١١﴾

**12. ಇದು ಮಾರ್ಗದರ್ಶನವಾಗಿದೆ. ತಮ್ಮ ಪ್ರಭುವಿನ ದೃಷ್ಟಾಂತಗಳನ್ನು ಅಲ್ಲಗಳೆಯುವವರಿಗೆ ಯಾತನಾಮಯವಾದ ಶಿಕ್ಷೆಯಿದೆ.**

هٰذَا هُدًى ۚ وَالَّذِيْنَ كَفَرُوْا بِاٰيٰتِ رَبِّهِمْ لَهُمْ عَذَابٌ مِّنْ رِّجْزٍ اَلِيْمٌ ﴿١٢﴾ ع

**13. ನಿಮಗೋಸ್ಕರ ಸಮುದ್ರವನ್ನು ನಿಯಂತ್ರಿಸಿದವನು ಅಲ್ಲಾಹನೇ ಆಗಿದ್ದಾನೆ - ಅವನ ಆಜ್ಞೆ ಪ್ರಕಾರ ಅದರಲ್ಲಿ ಹಡಗುಗಳು ಸಂಚರಿಸಲಿಕ್ಕಾಗಿ, ನೀವು ಅವನ ಅನುಗ್ರಹಗಳನ್ನು ಅರಸಲಿಕ್ಕಾಗಿ ಮತ್ತು ನೀವು ಕೃತಜ್ಞತೆ ಸೂಚಿಸಲಿಕ್ಕಾಗಿ.**

اَللّٰهُ الَّذِيْ سَخَّرَ لَكُمُ الْبَحْرَ لِتَجْرِيَ الْفُلْكُ فِيْهِ بِاَمْرِهٖ وَلِتَبْتَغُوْا مِنْ فَضْلِهٖ وَلَعَلَّكُمْ تَشْكُرُوْنَ ﴿١٣﴾

**14. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ತನ್ನ ವತಿಯಿಂದ ಅವನು ನಿಮಗೋಸ್ಕರ ಕಾರ್ಯನಿರತಗೊಳಿಸಿರುವನು. ಖಚಿತವಾಗಿಯೂ ಚಿಂತನಶೀಲರಿಗೆ ಅದರಲ್ಲಿ ದೃಷ್ಟಾಂತಗಳಿವೆ.**

وَسَخَّرَ لَكُمْ مَّا فِي السَّمٰوٰتِ وَمَا فِي الْاَرْضِ جَمِيْعًا مِّنْهُ ۚ اِنَّ فِيْ ذٰلِكَ لَاٰيٰتٍ لِّقَوْمٍ يَّتَفَكَّرُوْنَ ﴿١٤﴾

**15.** ಸತ್ಯವಿಶ್ವಾಸಿಗಳೊಡನೆ ಹೇಳು - ಅಲ್ಲಾಹನ (ವಾಗ್ದಾನದ) ದಿನಗಳ ಪ್ರತೀಕ್ಷೆಯಿಲ್ಲದವರನ್ನು ಅವರು ಕ್ಷಮಿಸಲಿ; ತತ್ಫಲವಾಗಿ ಯಾವುದೇ ಕೋಮಿನವರ ಕೃತ್ಯಗಳಿಗೆ ಅವನು (ಅಲ್ಲಾಹನು) ಪ್ರತಿಫಲ ನೀಡಲಿಕ್ಕೋಸ್ಕರ.

قُلْ لِّلَّذِيْنَ اٰمَنُوْا يَغْفِرُوْا لِلَّذِيْنَ لَا يَرْجُوْنَ اَيَّامَ اللّٰهِ لِيَجْزِيَ قَوْمًا بِمَا كَانُوْا يَكْسِبُوْنَ ۝١٥

**16.** ಯಾರು ಒಳಿತು ಮಾಡುತ್ತಾನೋ ಅದು ಅವನಿಗೋಸ್ಕರವೇ ಆಗಿದೆ. ಯಾರಾದರೂ ಕೆಡುಕು ಮಾಡಿದರೆ ಅದರ ದೋಷ ಅವನಿಗೇ ಆಗಿದೆ. ಅನಂತರ ನಿಮ್ಮೆಲ್ಲರನ್ನೂ ನಿಮ್ಮ ಪ್ರಭುವಿನ ಕಡೆಗೆ ಮರಳಿ ಕೊಂಡೊಯ್ಯಲಾಗುವುದು.

مَنْ عَمِلَ صَالِحًا فَلِنَفْسِهٖ ۚ وَمَنْ اَسَاۤءَ فَعَلَيْهَا ۖ ثُمَّ اِلٰى رَبِّكُمْ تُرْجَعُوْنَ ۝١٦

**17.** ನಿಜವಾಗಿಯೂ ನಾವು ಇಸ್ರಾಈಲ್ ಸಂತತಿಗಳಿಗೆ ಗ್ರಂಥವನ್ನೂ ಪ್ರಭುತ್ವವನ್ನೂ ಪ್ರವಾದಿತ್ವವನ್ನೂ ದಯಪಾಲಿಸಿದ್ದೆವು. ಅವರಿಗೆ ನಾವು (ಉತ್ತಮ ಹಾಗೂ) ಪರಿಶುದ್ಧ ಆಹಾರ ಸಾಮಗ್ರಿಗಳನ್ನೂ ನೀಡಿದ್ದೆವು. ಹಾಗೂ (ಅವರ ಕಾಲದ) ಎಲ್ಲ ಜನರಿಗಿಂತ ಅವರನ್ನು ಉತ್ಕೃಷ್ಟರನ್ನಾಗಿ ಮಾಡಿದ್ದೆವು.

وَلَقَدْ اٰتَيْنَا بَنِيْۤ اِسْرَاۤءِيْلَ الْكِتٰبَ وَالْحُكْمَ وَالنُّبُوَّةَ وَرَزَقْنٰهُمْ مِّنَ الطَّيِّبٰتِ وَفَضَّلْنٰهُمْ عَلَى الْعٰلَمِيْنَ ۝١٧

**18.** ನಾವು ಅವರಿಗೆ ಧರ್ಮಶಾಸನದ ಸ್ಪಷ್ಟವಾದ ನಿರ್ದೇಶನಗಳನ್ನು ನೀಡಿದ್ದೆವು. ಅವರ ಬಳಿಗೆ ಯಥಾರ್ಥ ಜ್ಞಾನದ ಆಗಮನವಾದ ಬಳಿಕ ಅವರು ಪರಸ್ಪರ ಪೈಪೋಟಿಯಿಂದ ಹೊರತು ಭಿನ್ನಾಭಿಪ್ರಾಯ ಹೊಂದಲಿಲ್ಲ. ಖಂಡಿತವಾಗಿಯೂ ನಿನ್ನ ಪ್ರಭು ಅವರ ಮಧ್ಯೆ ಪುನರುತ್ಥಾನ ದಿನದಂದು ಅವರ ಮತಭೇಧದ ಬಗ್ಗೆ ತೀರ್ಮಾನಿಸುವನು.

وَاٰتَيْنٰهُمْ بَيِّنٰتٍ مِّنَ الْاَمْرِ ۚ فَمَا اخْتَلَفُوْۤا اِلَّا مِنْۢ بَعْدِ مَا جَاۤءَهُمُ الْعِلْمُ ۙ بَغْيًۢا بَيْنَهُمْ ۚ اِنَّ رَبَّكَ يَقْضِيْ بَيْنَهُمْ يَوْمَ الْقِيٰمَةِ فِيْمَا كَانُوْا فِيْهِ يَخْتَلِفُوْنَ ۝١٨

**19.** ಅನಂತರ ನಾವು ನಿನ್ನನ್ನು ಧರ್ಮಶಾಸ್ತ್ರದ ಮಾರ್ಗದಲ್ಲಿ ನೆಲೆಗೊಳಿಸಿದೆವು. ಆದ್ದರಿಂದ ನೀನು ಅದನ್ನು ಅನುಸರಿಸು. ಅಜ್ಞಾನಿಗಳ ಸ್ವೇಚ್ಛಾಚಾರಗಳನ್ನು ನೀನು ಅನುಸರಿಸಬೇಡ.

ثُمَّ جَعَلْنٰكَ عَلٰى شَرِيْعَةٍ مِّنَ الْاَمْرِ فَاتَّبِعْهَا وَلَا تَتَّبِعْ اَهْوَاۤءَ الَّذِيْنَ لَا يَعْلَمُوْنَ ۝١٩

**20.** ಖಂಡಿತವಾಗಿಯೂ ಅವರು ಅಲ್ಲಾಹನ ವಿರುದ್ಧವಾಗಿ ನಿನಗೇನೂ ಪ್ರಯೋಜನಕ್ಕೆ ಬರಲಿಕ್ಕಿಲ್ಲ. ದುಷ್ಕರ್ಮಿಗಳಲ್ಲಿ ಕೆಲವರು ಬೇರೆ ಕೆಲವರ ಮಿತ್ರರಾಗಿದ್ದಾರೆ. ಆದರೆ ಅಲ್ಲಾಹನು ಸತ್ಕರ್ಮಿಗಳ ಮಿತ್ರನಾಗಿದ್ದಾನೆ.

اِنَّهُمْ لَنْ يُّغْنُوْا عَنْكَ مِنَ اللّٰهِ شَيْـًٔا ۗ وَاِنَّ الظّٰلِمِيْنَ بَعْضُهُمْ اَوْلِيَاۤءُ بَعْضٍ ۚ وَاللّٰهُ وَلِيُّ الْمُتَّقِيْنَ ۝٢٠





**21.** ಇದು (ಈ ಗ್ರಂಥ) ಮನುಷ್ಯರಿಗೆ ಸ್ಪಷ್ಟವಾದ ಸಾಕ್ಷ್ಯಾಧಾರಗಳನ್ನು ಒಳಗೊಂಡಿದೆ. ದೃಢವಿಶ್ವಾಸಿಗಳಿಗೆ ಇದು ಮಾರ್ಗದರ್ಶನವೂ ಕರುಣೆಯೂ ಆಗಿದೆ.

هٰذَا بَصَاۤئِرُ لِلنَّاسِ وَهُدًى وَّرَحْمَةٌ لِّقَوْمٍ يُّوْقِنُوْنَ ۝٢١

**22.** ಏನು, ದುಷ್ಕರ್ಮಿಗಳನ್ನು, ವಿಶ್ವಾಸಿ ಗಳಾಗಿದ್ದು ಸತ್ಕರ್ಮ ನಿರತರಾದವರ ಹಾಗೆ - ಅವರ ಜೀವನ ಮತ್ತು ಮರಣವನ್ನು ಸಹ ಸಮಾನವಾಗಿ ನಾವು ಮಾಡುವೆವು ಎಂದು ಅವರು ಭಾವಿಸಿದ್ದಾರೋ? ಅವರ ತೀರ್ಮಾನ ಬಹಳ ಕೆಟ್ಟದ್ದಾಗಿದೆ.

اَمْ حَسِبَ الَّذِيْنَ اجْتَرَحُوا السَّيِّاٰتِ اَنْ نَّجْعَلَهُمْ كَالَّذِيْنَ اٰمَنُوْا وَعَمِلُوا الصّٰلِحٰتِ ۙ سَوَاۤءً مَّحْيَاهُمْ وَمَمَاتُهُمْ ۗ سَاۤءَ مَا يَحْكُمُوْنَ ۝٢٢

**23.** ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಯಥೋಚಿತವಾಗಿ ಸೃಷ್ಟಿಸಿದ್ದಾನೆ. ತತ್ಫಲವಾಗಿ ಪ್ರತಿಯೊಬ್ಬನಿಗೆ ತನ್ನ ಕರ್ಮಾನುಸಾರ ಪ್ರತಿಫಲ ನೀಡಲ್ಪಡುವುದು. ಅವರಿಗೆ ಅನ್ಯಾಯವೇನೂ ಎಸಗಲ್ಪಡದು.

وَخَلَقَ اللّٰهُ السَّمٰوٰتِ وَالْاَرْضَ بِالْحَقِّ وَلِتُجْزٰى كُلُّ نَفْسٍۢ بِمَا كَسَبَتْ وَهُمْ لَا يُظْلَمُوْنَ ۝٢٣

**24.** ಯಾರು ತನ್ನ ಸ್ವೇಚ್ಛೆಯನ್ನು ದೈವವನ್ನಾಗಿ ಮಾಡಿಕೊಂಡಿರುವವನೋ, ಯಾರನ್ನು ಅಲ್ಲಾಹನು ತನ್ನ ಜ್ಞಾನದಿಂದ ದಾರಿತಪ್ಪಿದವನೆಂದು ತೀರ್ಮಾನಿಸಿರುವನೋ, ಯಾರ ಕಿವಿಗಳಿಗೂ ಹೃದಯಕ್ಕೂ ಮುದ್ರೆ ಹಾಕಲಾಗಿದೆಯೋ, ಯಾರ ಕಣ್ಣಿನ ಮೇಲೆ ಪರದೆ ಇದೆಯೋ, ಅಂತಹವನನ್ನು ನೀನು ನೋಡಿದ್ದೀಯಾ? ಅಲ್ಲಾಹನ ಬಳಿಕ ಅವನನ್ನು ಸರಿದಾರಿಗೆ ತರುವವರು ಬೇರೆ ಯಾರು? ನೀವು ಮನವರಿಕೆ ಮಾಡುವುದಿಲ್ಲವೇ?

اَفَرَءَيْتَ مَنِ اتَّخَذَ اِلٰهَهٗ هَوٰىهُ وَاَضَلَّهُ اللّٰهُ عَلٰى عِلْمٍ وَّخَتَمَ عَلٰى سَمْعِهٖ وَقَلْبِهٖ وَجَعَلَ عَلٰى بَصَرِهٖ غِشٰوَةً ۗ فَمَنْ يَّهْدِيْهِ مِنْۢ بَعْدِ اللّٰهِ ۗ اَفَلَا تَذَكَّرُوْنَ ۝٢٤

**25.** ಅವರು ಹೇಳುತ್ತಾರೆ: 'ನಮಗೆ ಇಹಲೋಕ ಜೀವನದ ಹೊರತು ಬೇರೇನೂ ಇಲ್ಲ. (ಇಲ್ಲಿ) ನಾವು ಸಾಯುತ್ತೇವೆ, ನಾವು ಬದುಕುತ್ತೇವೆ. ನಮ್ಮನ್ನು ಕಾಲವಲ್ಲದೆ ಬೇರೇನೂ ನಾಶಪಡಿಸುವುದಿಲ್ಲ.' ಆದರೆ ಅವರಿಗೆ ಆ ಬಗ್ಗೆ ತಿಳುವಳಿಕೆಯೇನೂ ಇಲ್ಲ. ಅವರು ಕೇವಲ ಊಹಿಸಿಕೊಳ್ಳುತ್ತಾರೆ, ಅಷ್ಟೇ.

وَقَالُوْا مَا هِيَ اِلَّا حَيَاتُنَا الدُّنْيَا نَمُوْتُ وَنَحْيَا وَمَا يُهْلِكُنَاۤ اِلَّا الدَّهْرُ ۚ وَمَا لَهُمْ بِذٰلِكَ مِنْ عِلْمٍ ۚ اِنْ هُمْ اِلَّا يَظُنُّوْنَ ۝٢٥

**26.** ನಮ್ಮ ಸ್ಪಷ್ಟವಾದ ದೃಷ್ಟಾಂತಗಳನ್ನು ಅವರಿಗೆ ವಿವರಿಸಿ ಹೇಳುವಾಗ ಅವರ ವಾದ 'ನೀವು ಸತ್ಯವಂತರೆಂದಾದರೆ ನಮ್ಮ ತಂದೆ ತಾತಂದಿರನ್ನು (ಬದುಕಿಸಿ) ತನ್ನಿರಿ' ಎಂದು ಹೇಳುವುದು ಮಾತ್ರವಾಗಿದೆ.

وَإِذَا تُتْلَىٰ عَلَيْهِمْ آيَاتُنَا بَيِّنَاتٍ مَا كَانَ
حُجَّتَهُمْ إِلَّا أَنْ قَالُوا ائْتُوا بِآبَائِنَا
إِنْ كُنْتُمْ صَادِقِينَ ﴿٢٦﴾

**27.** ಹೇಳು: 'ಅಲ್ಲಾಹನೇ ನಿಮಗೆ ಜೀವ ಕೊಡುತ್ತಾನೆ. ಅನಂತರ ಮರಣಗೊಳಿಸುತ್ತಾನೆ. ಆ ಬಳಿಕ ಪುನರುತ್ಥಾನ ದಿನದಂದು ನಿಮ್ಮನ್ನು ಒಟ್ಟಿಗೆ ಸೇರಿಸುತ್ತಾನೆ. ಆ ಬಗ್ಗೆ ಸಂಶಯವೇನೂ ಇಲ್ಲ. ಆದರೆ ಹೆಚ್ಚಿನ ಜನರು (ಈ ನಿಜಾಂಶವನ್ನು) ಅರಿತವರಲ್ಲ.'

قُلِ اللَّهُ يُحْيِيكُمْ ثُمَّ يُمِيتُكُمْ ثُمَّ
يَجْمَعُكُمْ إِلَىٰ يَوْمِ الْقِيَامَةِ لَا رَيْبَ فِيهِ
وَلَٰكِنَّ أَكْثَرَ النَّاسِ لَا يَعْلَمُونَ ﴿٢٧﴾

**28.** ಆಕಾಶಗಳ ಮತ್ತು ಭೂಮಿಯ ಪ್ರಭುತ್ವ ಅಲ್ಲಾಹನಿಗಿದೆ. ಆ ನಿಶ್ಚಿತ ಸಮಯ ಬರುವ ದಿನ, ಅಂದು ಅಸತ್ಯದ ಹಿಂಬಾಲಕರು ನಷ್ಟಹೊಂದುವರು.

وَلِلَّهِ مُلْكُ السَّمَاوَاتِ وَالْأَرْضِ ۚ وَيَوْمَ
تَقُومُ السَّاعَةُ يَوْمَئِذٍ يَخْسَرُ
الْمُبْطِلُونَ ﴿٢٨﴾

**29.** ಪ್ರತಿಯೊಂದು ಜನಾಂಗದವರನ್ನು ಮೊಣಕಾಲೂರಿ ನೀನು ಕಾಣುವೆ. ಪ್ರತಿಯೊಂದು ಜನಾಂಗದವರನ್ನು ಅವರ (ಕರ್ಮಫಲವನ್ನು ದಾಖಲಿಸಿದ) ಗ್ರಂಥಗಳೆಡೆಗೆ ಕರೆಯಲಾಗುವುದು. ಅವರೊಡನೆ ಹೀಗೆ ಹೇಳಲಾಗುವುದು: 'ನಿಮ್ಮ ಕೃತ್ಯಗಳ ಪ್ರತಿಫಲವನ್ನು ಇಂದು ನಿಮಗೆ ನೀಡಲಾಗುವುದು.

وَتَرَىٰ كُلَّ أُمَّةٍ جَاثِيَةً ۚ كُلُّ أُمَّةٍ تُدْعَىٰ
إِلَىٰ كِتَابِهَا الْيَوْمَ تُجْزَوْنَ مَا كُنْتُمْ
تَعْمَلُونَ ﴿٢٩﴾

**30.** 'ಇದು ನಮ್ಮ ಗ್ರಂಥವಾಗಿದೆ. ಇದು ನಿಮ್ಮ ವಿರುದ್ಧ ಸತ್ಯವನ್ನೇ ನುಡಿಯುತ್ತದೆ. ನಿಮ್ಮ ಕೃತ್ಯಗಳನ್ನೆಲ್ಲ ನಾವು ಬರೆದು ದಾಖಲಿಸಿಟ್ಟಿದ್ದೇವೆ.'

هَٰذَا كِتَابُنَا يَنْطِقُ عَلَيْكُمْ بِالْحَقِّ ۚ إِنَّا
كُنَّا نَسْتَنْسِخُ مَا كُنْتُمْ تَعْمَلُونَ ﴿٣٠﴾

**31.** ಯಾರು ಸತ್ಯವಿಶ್ವಾಸಹೊಂದಿದ್ದರೋ ಹಾಗೂ ಸತ್ಕರ್ಮ ನಿರತರಾಗಿದ್ದರೋ, ಅವರ ಪ್ರಭು ಅವರಿಗೆ ತನ್ನ ಕೃಪೆಯೊಳಗೆ ಪ್ರವೇಶನೀಡುವನು. ಅದೇ ಸ್ಪಷ್ಟವಾದ ಯಶಸ್ಸು.

فَأَمَّا الَّذِينَ آمَنُوا وَعَمِلُوا الصَّالِحَاتِ
فَيُدْخِلُهُمْ رَبُّهُمْ فِي رَحْمَتِهِ ۚ ذَٰلِكَ هُوَ
الْفَوْزُ الْمُبِينُ ﴿٣١﴾

**32.** ಆದರೆ ಅವಿಶ್ವಾಸಿಗಳೊಡನೆ (ಹೀಗೆ ಹೇಳಲಾಗುವುದು:) "ನನ್ನ ದೃಷ್ಟಾಂತಗಳನ್ನು ನಿಮಗೆ ವಿವರಿಸಿ

وَأَمَّا الَّذِينَ كَفَرُوا أَفَلَمْ تَكُنْ آيَاتِي





ಹೇಳಲಾಗಿರಲಿಲ್ಲವೇ? ಆಗ ನೀವು ಅಹಂಭಾವದಿಂದ ವರ್ತಿಸಿದಿರಿ ಹಾಗೂ ತಪ್ಪಿತಸ್ಥ ಜನರಾಗಿದ್ದಿರಿ.

تُتْلَىٰ عَلَيْكُمْ فَاسْتَكْبَرْتُمْ وَكُنْتُمْ قَوْمًا
مُجْرِمِينَ ﴿٣٢﴾

**33.** "ಅಲ್ಲಾಹನ ವಾಗ್ದಾನ ಸತ್ಯವಾದುದು. ಅಂತ್ಯವೇಳೆಯ ಬಗ್ಗೆ ಸಂಶಯವೇನೂ ಇಲ್ಲ ಎಂದು ಹೇಳಲ್ಪಟ್ಟಾಗ, 'ಅಂತ್ಯವೇಳೆ ಏನೆಂದು ನಮಗೆ ತಿಳಿಯದು. ಅದು ಬರೇ ಊಹೆ ಎಂದು ನಾವು ತಿಳಿದಿದ್ದೇವೆ. ನಾವು (ಆ ಬಗ್ಗೆ) ದೃಢವಿಶ್ವಾಸವುಳ್ಳವರಲ್ಲ' ಎಂದು ನೀವು ಹೇಳಿದಿರಿ."

وَإِذَا قِيلَ إِنَّ وَعْدَ اللَّهِ حَقٌّ وَالسَّاعَةُ
لَا رَيْبَ فِيهَا قُلْتُمْ مَا نَدْرِي مَا
السَّاعَةُ إِنْ نَظُنُّ إِلَّا ظَنًّا وَمَا نَحْنُ
بِمُسْتَيْقِنِينَ ﴿٣٣﴾

**34.** ಅವರ ಕೃತ್ಯಗಳ ದುಷ್ಫಲಗಳು ಅವರಿಗೆ ಗೋಚರವಾಗುವುವು. ಅವರು ಏನನ್ನು ಪರಿಹಾಸ್ಯ ಮಾಡುತ್ತಿದ್ದರೋ ಅದು ಅವರನ್ನು ಸುತ್ತುವರಿಯುವುದು.

وَبَدَا لَهُمْ سَيِّئَاتُ مَا عَمِلُوا وَحَاقَ
بِهِمْ مَا كَانُوا بِهِ يَسْتَهْزِئُونَ ﴿٣٤﴾

**35.** ಅವರೊಡನೆ ಹೇಳಲಾಗುವುದು: 'ಇಂದಿನ ನಿಮ್ಮ ಈ ಭೇಟಿಯನ್ನು ನೀವು ಮರೆತು ಬಿಟ್ಟ ಹಾಗೆಯೇ ಈ ದಿನ ನಾವು ನಿಮ್ಮನ್ನು ಮರೆತು ಬಿಡುತ್ತೇವೆ. ನಿಮ್ಮ ವಾಸಸ್ಥಳ ನರಕವಾಗಿದೆ. ನಿಮಗೆ ಸಹಾಯಕರಾಗಿ ಯಾರೂ ಇಲ್ಲ.

وَقِيلَ الْيَوْمَ نَنْسَاكُمْ كَمَا نَسِيتُمْ
لِقَاءَ يَوْمِكُمْ هَٰذَا وَمَأْوَاكُمُ النَّارُ
وَمَا لَكُمْ مِنْ نَاصِرِينَ ﴿٣٥﴾

**36.** 'ಇದು, ಅಲ್ಲಾಹನ ದೃಷ್ಟಾಂತಗಳನ್ನು ನೀವು ಅಪಹಾಸ್ಯಕ್ಕೀಡುಮಾಡಿದ್ದರಿಂದಲೂ ಲೌಕಿಕ ಜೀವನ ನಿಮ್ಮನ್ನು ಮೋಸಗೊಳಿಸಿದ್ದರಿಂದಲೂ ಆಗಿದೆ.' ಆದ್ದರಿಂದ ಅಂದು ಅದರಿಂದ ಅವರನ್ನು ಹೊರತೆಗೆಯಲಾಗದು. ಅವರಿಗೆ (ದಯಾಭಿಕ್ಷೆಯ) ಕೋರಿಕೆಗೆ ಸಂದರ್ಭವೂ ಲಭಿಸದು.

ذَٰلِكُمْ بِأَنَّكُمُ اتَّخَذْتُمْ آيَاتِ اللَّهِ هُزُوًا
وَغَرَّتْكُمُ الْحَيَاةُ الدُّنْيَا ۚ فَالْيَوْمَ
لَا يُخْرَجُونَ مِنْهَا وَلَا هُمْ يُسْتَعْتَبُونَ ﴿٣٦﴾

**37.** ಎಲ್ಲ ಸ್ತುತಿಸ್ತೋತ್ರಗಳು ಆಕಾಶಗಳ ಪ್ರಭುವೂ ಭೂಮಿಯ ಪ್ರಭುವೂ ಸಕಲ ಲೋಕಗಳ ಪ್ರಭುವೂ ಆದ ಅಲ್ಲಾಹನಿಗೆ ಸಲ್ಲುತ್ತವೆ.

فَلِلَّهِ الْحَمْدُ رَبِّ السَّمَاوَاتِ وَرَبِّ
الْأَرْضِ رَبِّ الْعَالَمِينَ ﴿٣٧﴾

**38.** ಆಕಾಶಗಳಲ್ಲೂ ಭೂಮಿಯಲ್ಲೂ ಹಿರಿಮೆ ಅವನದ್ದೇ ಆಗಿದೆ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

وَلَهُ الْكِبْرِيَاءُ فِي السَّمَاوَاتِ وَالْأَرْضِ ۖ
وَهُوَ الْعَزِيزُ الْحَكِيمُ ﴿٣٨﴾

سُوْرَةُ الْاَحْقَافِ مَكِّيَّةٌ وَّهِيَ مَعَ الْبَسْمَلَةِ سِتٌّ وَّثَلٰثُوْنَ اٰيَةً وَّاَرْبَعَةُ رُكُوْعَاتٍ

# 46. ಅಲ್‌ಅಹ್‌ಖಾಫ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 36 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಹಾ ಮೀಂ.**[415]

الجزء

حٰمٓ ②

**3. ಪ್ರತಾಪವಂತನೂ ವಿವೇಕಶಾಲಿಯೂ ಆದ ಅಲ್ಲಾಹನಿಂದ ಈ ಗ್ರಂಥ ಅವತೀರ್ಣವಾಗಿದೆ.**

تَنْزِيْلُ الْكِتٰبِ مِنَ اللّٰهِ الْعَزِيْزِ الْحَكِيْمِ ③

**4. ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ನಾವು ಯಥೋಚಿತವಾಗಿ ಮತ್ತು ನಿಗದಿತ ಅವಧಿಗಾಗಿ ಹೊರತು ಸೃಷ್ಟಿಸಿಲ್ಲ. ಆದರೆ ತಮಗೆ ಮುನ್ನೆಚ್ಚರಿಕೆ ನೀಡಲಾದ ವಿಚಾರಗಳಿಂದ ಅವಿಶ್ವಾಸಿಗಳು ವಿಮುಖರಾಗುತ್ತಾರೆ.**

مَا خَلَقْنَا السَّمٰوٰتِ وَ الْاَرْضَ وَ مَا بَيْنَهُمَآ اِلَّا بِالْحَقِّ وَ اَجَلٍ مُّسَمًّى ؕ وَالَّذِيْنَ كَفَرُوْا عَمَّآ اُنْذِرُوْا مُعْرِضُوْنَ ④

**5. ಹೇಳು: 'ನೀವು ಅಲ್ಲಾಹನನ್ನು ಬಿಟ್ಟು ಆರಾಧಿಸುವವುಗಳ ಬಗ್ಗೆ ಯೋಚಿಸಿ ನೋಡಿದ್ದೀರಾ? ಭೂಮಿಯಲ್ಲಿ ಅವರು ಏನನ್ನು ಸೃಷ್ಟಿಸಿದ್ದಾರೆ? ಅಥವಾ ಆಕಾಶಗಳ ಸೃಷ್ಟಿ ಕಾರ್ಯದಲ್ಲಿ ಅವರದೇನಾದರೂ ಸಹಭಾಗಿತ್ವ ಇದೆಯೇ? - ನನಗೆ ತೋರಿಸಿ ಕೊಡಿರಿ. ನೀವು ಸತ್ಯವಂತರೆಂದಾದರೆ** (ಅದಕ್ಕೆ ಆಧಾರವಾಗಿ) **ಇದಕ್ಕಿಂತ ಮುಂಚೆ ಅವತೀರ್ಣವಾದೊಂದು ಗ್ರಂಥವನ್ನಾಗಲಿ ಜ್ಞಾನದ ಸುಳಿವನ್ನಾಗಲಿ ತನ್ನಿರಿ.**

قُلْ اَرَءَيْتُمْ مَّا تَدْعُوْنَ مِنْ دُوْنِ اللّٰهِ اَرُوْنِيْ مَاذَا خَلَقُوْا مِنَ الْاَرْضِ اَمْ لَهُمْ شِرْكٌ فِي السَّمٰوٰتِ ؕ اِيْتُوْنِيْ بِكِتٰبٍ مِّنْ قَبْلِ هٰذَآ اَوْ اَثٰرَةٍ مِّنْ عِلْمٍ اِنْ كُنْتُمْ صٰدِقِيْنَ ⑤

415. ಹಾ=ಹಮೀದ್ (ಸ್ತುತ್ಯರ್ಹನು). ಮೀಂ=ಮಜೀದ್ (ಮಹಾಮಹಿಮನು). (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**6. ಅಲ್ಲಾಹನನ್ನು ಬಿಟ್ಟು, ಅಂತ್ಯದಿನದ ವರೆಗೆ ತಮಗೆ ಉತ್ತರ ನೀಡದವರನ್ನು ಕರೆದು ಪ್ರಾರ್ಥಿಸುವವರಿಗಿಂತ ಹಾದಿಗೆಟ್ಟವರು ಬೇರೆ ಯಾರಿದ್ದಾರೆ? ಅವರು** (ಹಾಗೆ ಪ್ರಾರ್ಥಿಸಲ್ಪಡುವವರು) **ಇವರ ಪ್ರಾರ್ಥನೆಯ ಬಗ್ಗೆ ಏನೂ ತಿಳಿಯದವರಾಗಿದ್ದಾರೆ.**

وَ مَنْ اَضَلُّ مِمَّنْ يَّدْعُوْا مِنْ دُوْنِ اللّٰهِ مَنْ لَّا يَسْتَجِيْبُ لَهٗٓ اِلٰى يَوْمِ الْقِيٰمَةِ وَهُمْ عَنْ دُعَآئِهِمْ غٰفِلُوْنَ ⑥

**7. ಮನುಷ್ಯರು** (ಪುನರುತ್ಥಾನ ದಿನದಂದು) **ಒಟ್ಟಿಗೆ ಸೇರಿಸಲ್ಪಟ್ಟಾಗ ಅವರು** (ಆ ಆರಾಧಿಸಲ್ಪಡುವವರು) **ಇವರ ಶತ್ರುಗಳಾಗುವರು. ಇವರ ಆರಾಧನೆಯನ್ನು ಅವರು ಅಲ್ಲಗಳೆಯುವರು.**

وَاِذَا حُشِرَ النَّاسُ كَانُوْا لَهُمْ اَعْدَآءً وَّ كَانُوْا بِعِبَادَتِهِمْ كٰفِرِيْنَ ⑦

**8. ನಮ್ಮ ಸ್ಪಷ್ಟವಾದ ದೃಷ್ಟಾಂತಗಳ ಕುರಿತು ಅವರಿಗೆ ವಿವರಿಸುವಾಗ, ಅವರ ಬಳಿಗೆ ಬಂದ ಸತ್ಯವನ್ನು, 'ಇದು ಸ್ಪಷ್ಟವಾಗಿಯೂ ಇಂದ್ರಜಾಲವಾಗಿದೆ' ಎಂದು ಅವಿಶ್ವಾಸಿಗಳು ಹೇಳುತ್ತಾರೆ.**

وَاِذَا تُتْلٰى عَلَيْهِمْ اٰيٰتُنَا بَيِّنٰتٍ قَالَ الَّذِيْنَ كَفَرُوْا لِلْحَقِّ لَمَّا جَآءَهُمْ ۙ هٰذَا سِحْرٌ مُّبِيْنٌ ⑧

**9. ಅಥವಾ, 'ಅದು ಅವನ ಸುಳ್ಳು ಸೃಷ್ಟನೆ' ಎಂದು ಅವರು ಹೇಳುತ್ತಾರೆಯೇ? ಹೇಳು: 'ಅದು ನನ್ನ ಸುಳ್ಳು ಸೃಜನೆಯೆಂದಾದರೆ ಅಲ್ಲಾಹನ ಶಿಕ್ಷೆಯಿಂದ ನನ್ನನ್ನು ಕಾಪಾಡಲು ನಿಮಗೆ ಸಾಧ್ಯವೇ ಇಲ್ಲ. ನೀವು ಆಡುವ ನಿರರ್ಥಕ ಮಾತುಗಳ ಬಗ್ಗೆ ಅವನು ಚೆನ್ನಾಗಿ ಬಲ್ಲನು. ನನಗೆ ಮತ್ತು ನಿಮಗೆ ಮಧ್ಯೆ ಸಾಕ್ಷಿಯಾಗಿ ಅವನು ಸಾಕು. ಅವನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.'**

اَمْ يَقُوْلُوْنَ افْتَرٰىهُ ؕ قُلْ اِنِ افْتَرَيْتُهٗ فَلَا تَمْلِكُوْنَ لِيْ مِنَ اللّٰهِ شَيْـًٔا ؕ هُوَ اَعْلَمُ بِمَا تُفِيْضُوْنَ فِيْهِ ؕ كَفٰى بِهٖ شَهِيْدًاۢ بَيْنِيْ وَبَيْنَكُمْ ؕ وَهُوَ الْغَفُوْرُ الرَّحِيْمُ ⑨

**10. ಹೇಳು: 'ನಾನೊಬ್ಬ ಹೊಸ ಸಂದೇಶವಾಹಕನೇನೂ ಅಲ್ಲ.** (ಅಲ್ಲಾಹನು ಈ ಜೀವನದಲ್ಲಿ) **ನನ್ನೊಡನೆ ಮತ್ತು ನಿಮ್ಮೊಡನೆ ಹೇಗೆ ವರ್ತಿಸುವನೆಂದು ನನಗೆ ತಿಳಿಯದು. ನನಗೆ ಲಭಿಸುವ ದಿವ್ಯ ಸಂದೇಶವನ್ನೇ ನಾನು ಅನುವರ್ತಿಸುತ್ತೇನೆ. ನಾನು ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನು ಮಾತ್ರವಾಗಿದ್ದೇನೆ.'**

قُلْ مَا كُنْتُ بِدْعًا مِّنَ الرُّسُلِ وَ مَآ اَدْرِيْ مَا يُفْعَلُ بِيْ وَلَا بِكُمْ ؕ اِنْ اَتَّبِعُ اِلَّا مَا يُوْحٰٓى اِلَيَّ وَ مَآ اَنَا اِلَّا نَذِيْرٌ مُّبِيْنٌ ⑩

**11. ಹೇಳು: 'ನೀವು ಯೋಚಿಸಿ ನೋಡಿದ್ದೀರಾ? ಇದು** (ಖುರ್‌ಆನ್) **ಅಲ್ಲಾಹನಿಂದ ಅವತೀರ್ಣವಾಗಿದ್ದು**

قُلْ اَرَءَيْتُمْ اِنْ كَانَ مِنْ عِنْدِ اللّٰهِ وَكَفَرْتُمْ بِهٖ وَشَهِدَ شَاهِدٌ مِّنْ بَنِيْٓ

ನೀವು ಅದನ್ನು ಅಲ್ಲಗಳೆದರೆ (ನಿಮ್ಮ ಸ್ಥಿತಿ ಎಷ್ಟು ದೌರ್ಭಾಗ್ಯಕರ)? ಆದರೆ ಇಸ್ರಾಈಲ್ ಸಂತತಿಗಳ ಪೈಕಿ ಓರ್ವ ಸಾಕ್ಷಿ[416] ತನಗೆ ಸದೃಶನಾದ ಓರ್ವನ ಆಗಮನದ ಬಗ್ಗೆ ಸಾಕ್ಷಿ ಹೇಳಿ ವಿಶ್ವಾಸ ಹೊಂದಿರುವನು.[417] ಆದರೆ ನೀವು ಅಹಂಕಾರ ತೋರಿಸಿದಿರಿ.' ದುಷ್ಕರ್ಮಿಗಳಾದ ಜನರಿಗೆ ಅಲ್ಲಾಹನು ಸತ್ಪಥದರ್ಶನ ಮಾಡುವುದಿಲ್ಲ.

اِسْرَآءِيْلَ عَلٰى مِثْلِهٖ فَاٰمَنَ وَاسْتَكْبَرْتُمْ ؕ اِنَّ اللّٰهَ لَا يَهْدِى الْقَوْمَ الظّٰلِمِيْنَ ﴿١١﴾

12. ಅವಿಶ್ವಾಸಿಗಳು ವಿಶ್ವಾಸಿಗಳ ಬಗ್ಗೆ, 'ಅದು (ಖುರ್‌ಆನ್) ಉತ್ತಮವಾಗಿರುತ್ತಿದ್ದರೆ ಅದನ್ನು ಗಳಿಸುವುದರಲ್ಲಿ ಅವರು ನಮಗಿಂತ ಮುಂದಾಗುತ್ತಿರಲಿಲ್ಲ' ಎಂದು ಹೇಳುತ್ತಾರೆ. ಇದರ ಮೂಲಕ ಅವರು ಮಾರ್ಗದರ್ಶನ ಪಡೆಯದಿದ್ದುದರಿಂದ 'ಇದೊಂದು ಹಳೆಯ ಸುಳ್ಳು' ಎಂದು ಅವರು ಹೇಳುತ್ತಾರೆ.

وَقَالَ الَّذِيْنَ كَفَرُوْا لِلَّذِيْنَ اٰمَنُوْا لَوْ كَانَ خَيْرًا مَّا سَبَقُوْنَاۤ اِلَيْهِ ؕ وَاِذْ لَمْ يَهْتَدُوْا بِهٖ فَسَيَقُوْلُوْنَ هٰذَاۤ اِفْكٌ قَدِيْمٌ ﴿١٢﴾

13. ಇದಕ್ಕಿಂತ ಮುಂಚೆ ಮಾರ್ಗದರ್ಶಕ ಹಾಗೂ ಕಾರುಣ್ಯವಾಗಿ ಮೂಸಾರವರ ಗ್ರಂಥವಿತ್ತು. ಇದು (ಅದನ್ನು) ದೃಢಪಡಿಸುವ, ಸ್ಪಷ್ಟವಾಗಿ ವಿವರಿಸುವ (ಅರಬಿ) ಭಾಷೆಯಲ್ಲಿರುವ ಒಂದು ಗ್ರಂಥವಾಗಿದೆ. (ಇದು) ದುಷ್ಕರ್ಮಿಗಳಿಗೆ ಮುನ್ನೆಚ್ಚರಿಕೆ ನೀಡಲಿಕ್ಕೆ ಮತ್ತು ಸತ್ಕರ್ಮಿಗಳಿಗೆ ಶುಭವಾರ್ತೆ ನೀಡಲಿಕ್ಕೆ (ಅವತೀರ್ಣವಾಗಿದೆ).

وَمِنْ قَبْلِهٖ كِتٰبُ مُوْسٰۤى اِمَامًا وَّرَحْمَةً ؕ وَهٰذَا كِتٰبٌ مُّصَدِّقٌ لِّسَانًا عَرَبِيًّا لِّيُنْذِرَ الَّذِيْنَ ظَلَمُوْا ۖۗ وَبُشْرٰى لِلْمُحْسِنِيْنَ ﴿١٣﴾

14. 'ಅಲ್ಲಾಹನು ನಮ್ಮ ಪ್ರಭು' ಎಂದು ಹೇಳಿ ಸ್ಥಿರಚಿತ್ತರಾಗಿರುವವರಿಗೆ ಖಚಿತವಾಗಿಯೂ ಏನೂ ಭಯವಿಲ್ಲ. ಅವರು ವ್ಯಥೆಗೀಡಾಗುವುದಿಲ್ಲ.

اِنَّ الَّذِيْنَ قَالُوْا رَبُّنَا اللّٰهُ ثُمَّ اسْتَقَامُوْا فَلَا خَوْفٌ عَلَيْهِمْ وَلَا هُمْ يَحْزَنُوْنَ ﴿١٤﴾

15. ಅವರು ಸ್ವರ್ಗದ ನಿವಾಸಿಗಳಾಗಿದ್ದಾರೆ. ಅವರು ಅಲ್ಲೇ ನೆಲೆಯೂರುವರು. ಅದು ಅವರು ಮಾಡಿದ ಸತ್ಕಾರ್ಯದ ಪ್ರತಿಫಲವಾಗಿದೆ.

اُولٰٓئِكَ اَصْحٰبُ الْجَنَّةِ خٰلِدِيْنَ فِيْهَا ۚ جَزَآءًۢ بِمَا كَانُوْا يَعْمَلُوْنَ ﴿١٥﴾

416. ಪ್ರವಾದಿ ಮೂಸಾ (ಅಲೈಹಿಸ್ಸಲಾಂ).

417. ಪ್ರವಾದಿ ಮೂಸಾ(ಅ) ರಿಗೆ ಸದೃಶನಾದ ಓರ್ವ ಪ್ರವಾದಿಯ ಆಗಮನದ ಕುರಿತು ಬೈಬಲ್‌ನಲ್ಲಿ ಭವಿಷ್ಯೋಕ್ತಿ ಇದೆ. (ಧರ್ಮೋಪದೇಶ ಕಾಂಡ 18:18)





16. ಮನುಷ್ಯನು ತನ್ನ ತಂದೆತಾಯಂದಿರಿಗೆ ಒಳಿತು ಮಾಡಬೇಕೆಂದು ನಾವು ಆಜ್ಞಾಪಿಸಿದ್ದೇವೆ. ಅವನ ತಾಯಿ ಕಷ್ಟ ಅನುಭವಿಸಿ ಅವನನ್ನು ಗರ್ಭಹೊತ್ತಳು ಹಾಗೂ ಕಷ್ಟ ಸಹಿಸಿ ಹೆತ್ತಳು. ಅವನ ಗರ್ಭಧಾರಣೆ ಮತ್ತು ಹಾಲೂಡಿಸುವ ಕಾಲಾವಧಿ (ಕನಿಷ್ಠ) ಮೂವತ್ತು ತಿಂಗಳುಗಳಾಗಿವೆ. ಹಾಗೆ ಅವನು ಪ್ರಾಪ್ತ ವಯಸ್ಕನಾಗಿ ನಲ್ವತ್ತು ವರ್ಷಕ್ಕೆ ತಲಪಿದಾಗ ಅವನು 'ನನ್ನ ಪ್ರಭೂ, ನೀನು ನನಗೆ ಮತ್ತು ನನ್ನ ಮಾತಾಪಿತರಿಗೆ ನೀಡಿದ ಅನುಗ್ರಹಗಳಿಗೆ ಕೃತಜ್ಞತೆ ಸೂಚಿಸಲಿಕ್ಕೂ ನೀನು ಇಷ್ಟಪಡುವ ಸತ್ಕರ್ಮಗಳನ್ನು ಮಾಡಲಿಕ್ಕೂ ನನಗೆ ಶಕ್ತಿಯನ್ನು ದಯಪಾಲಿಸು. ನನಗೋಸ್ಕರ ನನ್ನ ಸಂತತಿಗಳನ್ನು ಧರ್ಮನಿಷ್ಠರನ್ನಾಗಿ ಮಾಡು. ನಾನು ನಿನ್ನ ಕಡೆಗೆ ತಿರುಗುತ್ತೇನೆ. ನಾನು ನಿನಗೆ ಶರಣಾಗುವವರೊಂದಿಗೆ ಸೇರಿದ್ದೇನೆ' ಎಂದು ಪ್ರಾರ್ಥಿಸುತ್ತಾನೆ.

وَوَصَّيْنَا الْاِنْسَانَ بِوَالِدَيْهِ اِحْسٰنًا ؕ حَمَلَتْهُ اُمُّهٗ كُرْهًا وَّوَضَعَتْهُ كُرْهًا ؕ وَحَمْلُهٗ وَفِصٰلُهٗ ثَلٰثُوْنَ شَهْرًا ؕ حَتّٰۤى اِذَا بَلَغَ اَشُدَّهٗ وَبَلَغَ اَرْبَعِيْنَ سَنَةً ۙ قَالَ رَبِّ اَوْزِعْنِیْۤ اَنْ اَشْكُرَ نِعْمَتَكَ الَّتِیْۤ اَنْعَمْتَ عَلَیَّ وَعَلٰى وَالِدَیَّ وَاَنْ اَعْمَلَ صَالِحًا تَرْضٰىهُ وَاَصْلِحْ لِیْ فِیْ ذُرِّیَّتِیْ ۚؕ اِنِّیْ تُبْتُ اِلَیْكَ وَاِنِّیْ مِنَ الْمُسْلِمِیْنَ ﴿١٦﴾

17. ಅಂತಹ ಜನರಿಂದ, ಅವರು ಮಾಡಿದ ಸತ್ಕರ್ಮಗಳನ್ನು ನಾವು ಸ್ವೀಕರಿಸುತ್ತೇವೆ ಹಾಗೂ ಅವರ ದುಷ್ಕರ್ಮಗಳನ್ನು ನಾವು ನಿರ್ಲಕ್ಷಿಸುತ್ತೇವೆ. (ಅವರು) ಸ್ವರ್ಗದ ನಿವಾಸಿಗಳಲ್ಲಿ ಸೇರುತ್ತಾರೆ. ಇದು ಅವರಿಗೆ ನೀಡಲಾದ ಸತ್ಯವಾದ ವಾಗ್ದಾನದ ಈಡೇರಿಕೆಯಾಗಿದೆ.

اُولٰٓئِكَ الَّذِيْنَ نَتَقَبَّلُ عَنْهُمْ اَحْسَنَ مَا عَمِلُوْا وَنَتَجَاوَزُ عَنْ سَيِّاٰتِهِمْ فِيْۤ اَصْحٰبِ الْجَنَّةِ ؕ وَعْدَ الصِّدْقِ الَّذِيْ كَانُوْا يُوْعَدُوْنَ ﴿١٧﴾

18. 'ಛೀ, ನನಗೆ ನಿಮ್ಮ ಮೇಲೆ ಸಿಟ್ಟು ಬರುತ್ತದೆ. ಮರಣಾನಂತರ ನಾನು ಪುನಃ ಎಬ್ಬಿಸಲ್ಪಡುವೆನೆಂದು ಹೇಳಿ ನೀವು ನನ್ನನ್ನು ಬೆದರಿಸುತ್ತೀರೋ? ನನಗಿಂತ ಮುಂಚೆ ಎಷ್ಟೋ ಪೀಳಿಗೆಗಳು ಗತಿಸಿವೆಯಲ್ಲವೇ? (ಅವರ್‍ಯಾರೂ ಪುನಃ ಎಬ್ಬಿಸಲ್ಪಡಲಿಲ್ಲ)' ಎಂದು ತನ್ನ ಮಾತಾಪಿತರೊಡನೆ ಹೇಳುವವನೂ (ಇದ್ದಾನೆ). ಅವರೀರ್ವರೂ ಅಲ್ಲಾಹನ ಸಹಾಯವನ್ನು ಬೇಡುತ್ತಾರೆ. (ಅವರು ಮಗನೊಡನೆ ಹೇಳುತ್ತಾರೆ:) 'ನಿನ್ನ ದೌರ್ಭಾಗ್ಯ! ನೀನು ನಂಬು; ಅಲ್ಲಾಹನ ವಾಗ್ದಾನ ಸತ್ಯವೇ ಆಗಿದೆ.' ಆಗ ಅವನು, 'ಇದು ಪೂರ್ವಿಕರ ಕಟ್ಟುಕಥೆ ಹೊರತು ಬೇರೇನೂ ಅಲ್ಲ' ಎಂದು ಹೇಳುತ್ತಾನೆ.

وَالَّذِيْ قَالَ لِوَالِدَيْهِ اُفٍّ لَّكُمَاۤ اَتَعِدٰنِنِیْۤ اَنْ اُخْرَجَ وَقَدْ خَلَتِ الْقُرُوْنُ مِنْ قَبْلِیْ ۚ وَهُمَا يَسْتَغِيْثٰنِ اللّٰهَ وَيْلَكَ اٰمِنْ ۖۗ اِنَّ وَعْدَ اللّٰهِ حَقٌّ ۚۖ فَيَقُوْلُ مَا هٰذَاۤ اِلَّاۤ اَسَاطِيْرُ الْاَوَّلِيْنَ ﴿١٨﴾

**19.** ಅಂತಹವರು ತಮಗಿಂತ ಮುಂಚೆ ಗತಿಸಿದ ಜಿನ್ನ್ ಮತ್ತು ಇನ್ಸ್ ವರ್ಗಗಳಲ್ಲಿ ಶಿಕ್ಷೆಗೆ ಗುರಿಯಾದ ಸಮುದಾಯಗಳಲ್ಲಿ ಸೇರಿದವರಾಗಿದ್ದಾರೆ. ನಿಜವಾಗಿಯೂ ಅವರು ನಷ್ಟಹೊಂದಿದವರಾಗಿದ್ದರು.

أُولَٰٓئِكَ الَّذِيْنَ حَقَّ عَلَيْهِمُ الْقَوْلُ
فِيْٓ أُمَمٍ قَدْ خَلَتْ مِنْ قَبْلِهِمْ مِّنَ
الْجِنِّ وَالْإِنْسِ ۚ إِنَّهُمْ كَانُوْا خٰسِرِيْنَ ۝١٩

**20.** ಎಲ್ಲರಿಗೂ ಅವರ ಕರ್ಮಗಳಿಗೆ ತಕ್ಕ ಪದವಿಗಳಿವೆ. (ಇದು) ಅವರ ಕೃತ್ಯಗಳಿಗೆ ಸರಿಯಾದ ಪ್ರತಿಫಲವನ್ನು ನೀಡಲಿಕ್ಕಾಗಿದೆ. ಅವರಿಗೆ ಏನೂ ಅನ್ಯಾಯವಾಗದು.

وَلِكُلٍّ دَرَجٰتٌ مِّمَّا عَمِلُوْا ۚ
وَلِيُوَفِّيَهُمْ أَعْمَالَهُمْ وَهُمْ لَا
يُظْلَمُوْنَ ۝٢٠

**21.** ಅವಿಶ್ವಾಸಿಗಳನ್ನು ನರಕದ ಮುಂದೆ ತರುವ ದಿನದಂದು (ಅವರೊಡನೆ ಹೇಳಲಾಗುವುದು:) 'ನೀವು ಐಹಿಕ ಜೀವನದಲ್ಲಿ ನಿಮ್ಮ ಉತ್ತಮ ವಸ್ತುಗಳನ್ನೆಲ್ಲ ಉಪಯೋಗಿಸಿ ಮುಗಿಸಿ ಬಿಟ್ಟು, ಅದರಿಂದ (ಪೂರ್ಣ) ಸುಖ ಅನುಭವಿಸಿದಿರಿ. ಆದ್ದರಿಂದ ನೀವು ಭೂಮಿಯಲ್ಲಿ ಅನ್ಯಾಯವಾಗಿ, ಅಹಂಕಾರಿಗಳಾಗಿಯೂ ಅವಿಧೇಯರಾಗಿಯೂ ವರ್ತಿಸಿದುದರ ಫಲವಾಗಿ ಇಂದು ನಿಮಗೆ ಅಪಮಾನಕರವಾದ ಶಿಕ್ಷೆ ನೀಡಲಾಗುವುದು.'

وَيَوْمَ يُعْرَضُ الَّذِيْنَ كَفَرُوْا عَلَى
النَّارِ ۚ أَذْهَبْتُمْ طَيِّبٰتِكُمْ فِيْ
حَيَاتِكُمُ الدُّنْيَا وَاسْتَمْتَعْتُمْ بِهَا ۚ
فَالْيَوْمَ تُجْزَوْنَ عَذَابَ الْهُوْنِ بِمَا
كُنْتُمْ تَسْتَكْبِرُوْنَ فِي الْأَرْضِ بِغَيْرِ
الْحَقِّ وَبِمَا كُنْتُمْ تَفْسُقُوْنَ ۝٢١

**22.** ಆದ್‌ನ ಸಹೋದರನ[417] ಬಗ್ಗೆ ಜ್ಞಾಪಿಸು. ಅವರು ತನ್ನ ಜನರಿಗೆ ಆ ಮರಳ ದಿಣ್ಣೆಗಳ ಮೇಲಿನಿಂದ ಮುನ್ನೆಚ್ಚರಿಕೆ ನೀಡಿದ ಸಂದರ್ಭ. ಅವರಿಗಿಂತ ಮುಂಚೆ ಮತ್ತು ಅವರ ನಂತರ ಸಹ ಮುನ್ನೆಚ್ಚರಿಕೆ ನೀಡುವವರು (ಬಂದು) ಗತಿಸಿ ಹೋಗಿದ್ದರು. (ಅವರು ಹೀಗೆ ಹೇಳಿದರು:) 'ನೀವು ಅಲ್ಲಾಹನನ್ನು ಬಿಟ್ಟು ಬೇರೆ ಯಾರನ್ನೂ ಆರಾಧಿಸಬಾರದು. ಭಯಂಕರವಾದೊಂದು ದಿನದ ಶಿಕ್ಷೆ ನಿಮ್ಮ ಮೇಲೆ ಎರಗುವುದರ ಬಗ್ಗೆ ನಾನು ನಿಜವಾಗಿಯೂ ಭಯಪಡುತ್ತೇನೆ.'

وَاذْكُرْ أَخَا عَادٍ ۖ إِذْ أَنْذَرَ قَوْمَهُ
بِالْأَحْقَافِ وَقَدْ خَلَتِ النُّذُرُ مِنْ
بَيْنِ يَدَيْهِ وَمِنْ خَلْفِهٖٓ أَلَّا تَعْبُدُوْٓا
إِلَّا اللّٰهَ ۖ إِنِّيْٓ أَخَافُ عَلَيْكُمْ عَذَابَ
يَوْمٍ عَظِيْمٍ ۝٢٢

**23.** ಅವರು (ಜನರು) ಹೇಳಿದರು: 'ನಮ್ಮ ದೇವರುಗಳಿಂದ ನಮ್ಮನ್ನು ಅಗಲಿಸಲಿಕ್ಕೋಸ್ಕರ ನೀನು ನಮ್ಮ ಬಳಿಗೆ ಬಂದಿದ್ದೀಯಾ? ನೀನು ಸತ್ಯವಂತನೆಂದಾ

قَالُوْٓا أَجِئْتَنَا لِتَأْفِكَنَا عَنْ اٰلِهَتِنَا ۚ
فَأْتِنَا بِمَا تَعِدُنَآ إِنْ كُنْتَ مِنَ

417. ಆದ್‌ನ ಸಹೋದರ = ಪ್ರವಾದಿ ಹೂದ್.





ದರೆ ನೀನು ನಮ್ಮನ್ನು ಹೆದರಿಸುವಂಥದ್ದನ್ನು (ಶಿಕ್ಷೆಯನ್ನು) ನಮಗೆ ತಂದುಬಿಡು.'

الصّٰدِقِيْنَ ۝٢٣

**24.** ಅವರು (ಉತ್ತರವಾಗಿ) ಹೇಳಿದರು: 'ಖಂಡಿತವಾಗಿಯೂ (ಆ ಬಗ್ಗೆ) ಅರಿವು ಅಲ್ಲಾಹನಿಗೆ ಮಾತ್ರವಿದೆ. ಯಾವ ಸಂದೇಶದೊಂದಿಗೆ ನಾನು ಕಳುಹಿಸಲ್ಪಟ್ಟಿರುವೆನೋ ಅದನ್ನೇ ನಾನು ನಿಮಗೆ ತಲಪಿಸುತ್ತಿದ್ದೇನೆ. ಆದರೆ ನಾನು ನಿಮ್ಮನ್ನು (ಬರೇ) ಮೂರ್ಖ ಜನರಾಗಿ ಕಾಣುತ್ತಿದ್ದೇನೆ.'

قَالَ إِنَّمَا الْعِلْمُ عِنْدَ اللّٰهِ ۖ وَأُبَلِّغُكُمْ مَّآ
أُرْسِلْتُ بِهٖ وَلٰكِنِّيْٓ أَرٰىكُمْ قَوْمًا
تَجْهَلُوْنَ ۝٢٤

**25.** ಹಾಗೆ ಅದು (ಆ ಶಿಕ್ಷೆ) ಒಂದು ಮೇಘದ ರೂಪದಲ್ಲಿ ಅವರ ಕಣಿವೆಗಳ ಕಡೆಗೆ ಬರುವುದನ್ನು ಕಂಡಾಗ ಅವರು ಹೇಳಿದರು: 'ಇದು ನಮಗೆ ಮಳೆಯನ್ನು ತರುವ ಒಂದು ಮೇಘವಾಗಿದೆ.' (ಆಗ ನಾವು ಹೇಳಿದೆವು:) 'ಅಲ್ಲ, ಇದು ನೀವು ಯಾವುದನ್ನು ತ್ವರೆಪಡಿಸಿದಿರೋ ಅದೇ ಆಗಿದೆ. ಬಿರುಗಾಳಿ - ಅದರಲ್ಲಿ ಯಾತನಾಮಯವಾದ ಶಿಕ್ಷೆ ಇದೆ.

فَلَمَّا رَأَوْهُ عَارِضًا مُّسْتَقْبِلَ أَوْدِيَتِهِمْ ۙ
قَالُوْا هٰذَا عَارِضٌ مُّمْطِرُنَا ۚ بَلْ هُوَ
مَا اسْتَعْجَلْتُمْ بِهٖ ۖ رِيْحٌ فِيْهَا عَذَابٌ
أَلِيْمٌ ۝٢٥

**26.** 'ಅದರ ಪ್ರಭುವಿನ ಆಣತಿಯಂತೆ ಅದು ಸರ್ವನಾಶ ಮಾಡುವುದು.' ಹಾಗೆ ಅವರ ವಾಸಸ್ಥಳಗಳ ಹೊರತು ಬೇರೇನೂ ಕಾಣಿಸದಂತೆ ಅವರ ಸ್ಥಿತಿಯಾಯಿತು. ಈ ರೀತಿಯಾಗಿ ನಾವು ಅಪರಾಧಿ ಜನರಿಗೆ ಪ್ರತಿಫಲ ನೀಡುತ್ತೇವೆ.

تُدَمِّرُ كُلَّ شَيْءٍ ۢ بِأَمْرِ رَبِّهَا فَأَصْبَحُوْا
لَا يُرٰىٓ إِلَّا مَسٰكِنُهُمْ ۚ كَذٰلِكَ نَجْزِي
الْقَوْمَ الْمُجْرِمِيْنَ ۝٢٦

**27.** ನಿಮಗೆ ಪ್ರದಾನ ಮಾಡದಿದ್ದ ಅನೇಕ ಸಾಮರ್ಥ್ಯಗಳನ್ನು ನಾವು ಅವರಿಗೆ ಪ್ರದಾನ ಮಾಡಿದ್ದೆವು. ಅವರಿಗೆ ಕಿವಿಗಳನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ನಾವು ನೀಡಿದ್ದೆವು. ಆದರೆ ಅಲ್ಲಾಹನ ದೃಷ್ಟಾಂತಗಳನ್ನು ಅವರು ನಿರಾಕರಿಸಿದಾಗ ಅವರ ಕಿವಿಗಳೂ ಕಣ್ಣುಗಳೂ ಹೃದಯಗಳೂ ಅವರಿಗೆ ನಿಷ್ಪ್ರಯೋಜಕವಾದವು. ಅವರು ಅಪಹಾಸ್ಯ ಮಾಡುತ್ತಿದ್ದ ಶಿಕ್ಷೆ ಅವರನ್ನು ಸುತ್ತುವರಿಯಿತು.

وَلَقَدْ مَكَّنّٰهُمْ فِيْمَآ إِنْ مَّكَّنّٰكُمْ فِيْهِ
وَجَعَلْنَا لَهُمْ سَمْعًا وَّأَبْصَارًا وَّأَفْئِدَةً ۖ
فَمَآ أَغْنٰى عَنْهُمْ سَمْعُهُمْ وَلَآ أَبْصَارُهُمْ
وَلَآ أَفْئِدَتُهُمْ مِّنْ شَيْءٍ إِذْ كَانُوْا
يَجْحَدُوْنَ ۙ بِاٰيٰتِ اللّٰهِ وَحَاقَ بِهِمْ مَّا
كَانُوْا بِهٖ يَسْتَهْزِءُوْنَ ۝٢٧

**28.** ನಿಮ್ಮ ಸುತ್ತುಮುತ್ತಲಿನ ನಾಡುಗಳನ್ನು ನಾವು ನಾಶಪಡಿಸಿದ್ದೇವೆ. ಅವರು (ನಮ್ಮ ಕಡೆಗೆ) ತಿರುಗಲಿಕ್ಕೋಸ್ಕರ ದೃಷ್ಟಾಂತಗಳನ್ನು ನಾವು ವಿವಿಧ ರೀತಿಯಲ್ಲಿ ವಿವರಿಸಿಕೊಟ್ಟಿದ್ದೇವು.

وَلَقَدْ أَهْلَكْنَا مَا حَوْلَكُم مِّنَ الْقُرَىٰ وَ
صَرَّفْنَا الْآيَاتِ لَعَلَّهُمْ يَرْجِعُونَ ﴿٢٨﴾

**29.** ಅವರು ಅಲ್ಲಾಹನನ್ನು ಬಿಟ್ಟು ಯಾರ ಸಾಮೀಪ್ಯವನ್ನು ಅರಸುತ್ತಾ ದೇವರುಗಳನ್ನಾಗಿ ಮಾಡಿಕೊಂಡಿದ್ದರೋ ಅವರು (ಆ ದೇವರುಗಳು) ಆಗ ಅವರಿಗೇಕೆ ನೆರವಾಗಲಿಲ್ಲ? ಇಲ್ಲ, ಅವರು ಅವರಿಂದ ಕಣ್ಮರೆಯಾಗಿದ್ದರು. ಅದು ಅವರ ಸುಳ್ಳುನುಡಿ ಮತ್ತು ಸುಳ್ಳು ಸೃಜನೆಯ ಫಲವಾಗಿದೆ.

فَلَوْلَا نَصَرَهُمُ الَّذِينَ اتَّخَذُوا مِن
دُونِ اللَّهِ قُرْبَانًا آلِهَةً ۖ بَلْ ضَلُّوا
عَنْهُمْ ۚ وَذَٰلِكَ إِفْكُهُمْ وَمَا كَانُوا
يَفْتَرُونَ ﴿٢٩﴾

**30.** ಜಿನ್ನುಗಳ[418] ಪೈಕಿ ಒಂದು ತಂಡವನ್ನು ಖುರ್‌ಆನ್ ಆಲಿಸಲಿಕ್ಕಾಗಿ ನಿನ್ನ ಬಳಿಗೆ ನಾವು ತಿರುಗಿಸಿದ ಸಂದರ್ಭ. ಹಾಗೆ ಅವರು ಅದಕ್ಕೆ (ಖುರ್‌ಆನ್ ಆಲಿಸಲಿಕ್ಕೆ) ಹಾಜರಾದಾಗ ಅವರು (ಪರಸ್ಪರ) ಹೇಳಿದರು: 'ನಿಶ್ಶಬ್ದರಾಗಿ ಆಲಿಸಿರಿ.' ಅದು ಮುಕ್ತಾಯವಾದಾಗ, ತಮ್ಮ ಜನರ ಬಳಿಗೆ ಮುನ್ನೆಚ್ಚರಿಕೆ ನೀಡುವವರಾಗಿ ಅವರು ಮರಳಿ ಹೋದರು.

وَإِذْ صَرَفْنَا إِلَيْكَ نَفَرًا مِّنَ الْجِنِّ
يَسْتَمِعُونَ الْقُرْآنَ ۖ فَلَمَّا حَضَرُوهُ
قَالُوا أَنصِتُوا ۖ فَلَمَّا قُضِيَ وَلَّوْا إِلَىٰ
قَوْمِهِم مُّنذِرِينَ ﴿٣٠﴾

**31.** ಅವರು ಹೇಳಿದರು: 'ಎಲೈ ನಮ್ಮ ಜನರೇ, ಮೂಸಾರ ಬಳಿಕ ಅವತೀರ್ಣಗೊಂಡ ಒಂದು ಗ್ರಂಥವನ್ನು ನಾವು ಆಲಿಸಿದೆವು. ಅದು ಅದಕ್ಕಿಂತ ಮುಂಚೆ ಇದ್ದುದನ್ನು ದೃಢೀಕರಿಸುತ್ತದೆ. ಅದು ಸತ್ಯದೆಡೆಗೆ ಮತ್ತು ಸತ್ಪಥದೆಡೆಗೆ ಮಾರ್ಗದರ್ಶನ ಮಾಡುತ್ತದೆ.

قَالُوا يَا قَوْمَنَا إِنَّا سَمِعْنَا كِتَابًا أُنزِلَ مِن
بَعْدِ مُوسَىٰ مُصَدِّقًا لِّمَا بَيْنَ يَدَيْهِ
يَهْدِي إِلَى الْحَقِّ وَإِلَىٰ طَرِيقٍ مُّسْتَقِيمٍ ﴿٣١﴾

**32.** 'ಎಲೈ ನಮ್ಮ ಜನರೇ, ಅಲ್ಲಾಹನ ಕಡೆಗೆ ಕರೆಯುವವನಿಗೆ ನೀವು ಓಗೊಡಿರಿ ಮತ್ತು ಅವನನ್ನು ನಂಬಿರಿ. ಅವನು (ಅಲ್ಲಾಹನು) ನಿಮ್ಮ ಪಾಪಗಳನ್ನು ಕ್ಷಮಿಸುವನು ಹಾಗೂ ಯಾತನಾಮಯವಾದ ಶಿಕ್ಷೆಯಿಂದ ನಿಮ್ಮನ್ನು ಪಾರುಮಾಡುವನು.'

يَا قَوْمَنَا أَجِيبُوا دَاعِيَ اللَّهِ وَآمِنُوا بِهِ
يَغْفِرْ لَكُم مِّن ذُنُوبِكُمْ وَيُجِرْكُم مِّنْ
عَذَابٍ أَلِيمٍ ﴿٣٢﴾

418. ಯಹೂದಿಯರ ಒಂದು ತಂಡದ ಬಗ್ಗೆ ಇಲ್ಲಿ ಜಿನ್ನುಗಳೆಂದು ಪ್ರಸ್ತಾಪಿಸಲಾಗಿದೆ. ಮುಹಮ್ಮದ್ ಪೈಗಂಬರರ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಬಗ್ಗೆ ತಿಳಿದು ಅವರನ್ನು ಕಾಣಲು ಗೋಪ್ಯವಾಗಿ ಅವರು ಬಂದಿದ್ದರು. ಅವರು ಇರಾಖಿನ 'ನಸೀಬೈನ್' ರಾಜ್ಯದವರಾಗಿದ್ದರು. ತಮ್ಮ ಜನರು ಮತ್ತು ಅರಬಿಯರು ಪರಸ್ಪರ ವೈರಿಗಳಾಗದಿರಲಿಕ್ಕೆ ಪೈಗಂಬರರೊಡನೆ ಅವರು ಗುಪ್ತವಾಗಿ ಭೇಟಿಮಾಡಿದ್ದರು. (ಫತಹುಲ್ ಬಯಾನ್ ಸಂಪುಟ 8 ಪುಟ 355)





**33.** ಅಲ್ಲಾಹನೆಡೆಗೆ ಆಹ್ವಾನಿಸುವವನ ಕರೆಗೆ ಯಾರು ಓಗೊಡುವುದಿಲ್ಲವೋ ಅವನಿಗೆ ಭೂಮಿಯಲ್ಲಿ (ಅಲ್ಲಾಹನ ಯೋಜನೆಗಳನ್ನು) ಪರಾಜಯಗೊಳಿಸಲು ಸಾಧ್ಯವಿಲ್ಲ. ಅಲ್ಲಾಹನನ್ನು ಬಿಟ್ಟು ಅವನಿಗೆ ರಕ್ಷಕರಾಗಿ ಯಾರೂ ಇರಲಾರರು. ಅವರು ಸ್ಪಷ್ಟವಾಗಿಯೂ ಹಾದಿಗೆಟ್ಟವರು.

وَمَن لَّا يُجِبْ دَاعِيَ اللَّهِ فَلَيْسَ بِمُعْجِزٍ
فِي الْأَرْضِ وَلَيْسَ لَهُ مِن دُونِهِ أَوْلِيَاءُ ۚ
أُولَٰئِكَ فِي ضَلَالٍ مُّبِينٍ ﴿٣٣﴾

**34.** ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನೂ ಅವುಗಳ ಸೃಷ್ಟಿಕಾರ್ಯದಲ್ಲಿ ಆಯಾಸಗೊಳ್ಳದವನೂ ಆದ ಅಲ್ಲಾಹನು ಮೃತರಾದವರನ್ನು ಜೀವಂತಗೊಳಿಸಲು ಶಕ್ತನೆಂದು ಅವರು ಮನಗಾಣುವುದಿಲ್ಲವೇ? ಹೌದು, ಖಂಡಿತವಾಗಿಯೂ ಅವನಿಗೆ ಸರ್ವಸಾಮರ್ಥ್ಯವಿದೆ.

أَوَلَمْ يَرَوْا أَنَّ اللَّهَ الَّذِي خَلَقَ
السَّمَاوَاتِ وَالْأَرْضَ وَلَمْ يَعْيَ بِخَلْقِهِنَّ
بِقَادِرٍ عَلَىٰ أَن يُحْيِيَ الْمَوْتَىٰ ۚ بَلَىٰ إِنَّهُ
عَلَىٰ كُلِّ شَيْءٍ قَدِيرٌ ﴿٣٤﴾

**35.** ಅವಿಶ್ವಾಸಿಗಳನ್ನು ನರಕದ ಮುಂದೆ ತರಲಾಗುವ ದಿನದಂದು (ಅವರೊಡನೆ ಕೇಳಲಾಗುವುದು:) 'ಇದು ಸತ್ಯವಲ್ಲವೇ?' ಅವರು ಉತ್ತರಿಸುವರು: 'ಹೌದು ನಮ್ಮ ಪ್ರಭುವಿನಾಣೆ.' ಅವನು (ಅಲ್ಲಾಹನು) ಹೇಳುವನು: 'ನೀವು ನಿರಾಕರಿಸಿದ ಕಾರಣವಾಗಿ ಶಿಕ್ಷೆಯನ್ನು ಅನುಭವಿಸಿರಿ.'

وَيَوْمَ يُعْرَضُ الَّذِينَ كَفَرُوا عَلَى النَّارِ
أَلَيْسَ هَٰذَا بِالْحَقِّ ۖ قَالُوا بَلَىٰ وَ
رَبِّنَا ۚ قَالَ فَذُوقُوا الْعَذَابَ بِمَا
كُنتُمْ تَكْفُرُونَ ﴿٣٥﴾

**36.** ದೃಢ ಸಂಕಲ್ಪಹೊಂದಿದ (ದೇವ) ಸಂದೇಶವಾಹಕರು ತಾಳ್ಮೆವಹಿಸಿದಂತೆ ನೀನು ಸಹ ತಾಳ್ಮೆವಹಿಸು. ಅವರ ಬಗ್ಗೆ ನೀನು ತ್ವರೆ ಮಾಡಬೇಡ. ಅವರಿಗೆ ಮುನ್ನೆಚ್ಚರಿಕೆ ನೀಡಲ್ಪಡುವುದನ್ನು (ಶಿಕ್ಷೆಯನ್ನು) ಅವರು ಕಾಣುವ ದಿನದಂದು ಒಂದು ಹಗಲಿನ ಅಲ್ಪ ಸಮಯವನ್ನು ಮಾತ್ರ ಕಳೆದಂತೆ ಅವರಿಗೆ ಭಾಸವಾಗುವುದು. ಒಂದು ಮುನ್ನೆಚ್ಚರಿಕೆ ಇದೋ ನೀಡಲಾಗಿದೆ. ಅವಿಧೇಯ ಜನರು ಹೊರತು ಇನ್ನಾರು ನಾಶಕ್ಕೀಡಾಗುತ್ತಾರೆ?

فَاصْبِرْ كَمَا صَبَرَ أُولُو الْعَزْمِ مِنَ
الرُّسُلِ وَلَا تَسْتَعْجِل لَّهُمْ ۚ كَأَنَّهُمْ يَوْمَ
يَرَوْنَ مَا يُوعَدُونَ لَمْ يَلْبَثُوا إِلَّا
سَاعَةً مِّن نَّهَارٍ ۚ بَلَاغٌ ۚ فَهَلْ يُهْلَكُ
إِلَّا الْقَوْمُ الْفَاسِقُونَ ﴿٣٦﴾

سُورَةُ مُحَمَّدٍ مَدَنِيَّةٌ وَّهِيَ مَعَ الْبَسْمَلَةِ تِسْعٌ وَّثَلٰثُوْنَ اٰيَةً وَّاَرْبَعُ رُكُوْعَاتٍ

# 47. ಮುಹಮ್ಮದ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 39 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

2. ಯಾರು ಅವಿಶ್ವಾಸಹೊಂದಿ ಅಲ್ಲಾಹನ ಮಾರ್ಗದಿಂದ ಜನರನ್ನು ತಡೆಯುತ್ತಾರೋ ಅವರ ಕೃತ್ಯ ಗಳನ್ನು ಅವನು ವ್ಯರ್ಥಗೊಳಿಸುತ್ತಾನೆ.

اَلَّذِيْنَ كَفَرُوْا وَصَدُّوْا عَنْ سَبِيْلِ اللّٰهِ اَضَلَّ اَعْمَالَهُمْ ②

3. ಯಾರು ವಿಶ್ವಾಸ ಹೊಂದಿ ಸತ್ಕರ್ಮ ನಿರತ ರಾಗಿರುತ್ತಾರೋ ಹಾಗೂ ಮುಹಮ್ಮದ್‌ರಿಗೆ ಅವತೀರ್ಣವಾದ, ಅವರ ಪ್ರಭುವಿನಿಂದ ಬಂದ ಸತ್ಯವನ್ನು ನಂಬುತ್ತಾರೋ, ಅವರ ಪಾಪಗಳನ್ನು ಅವನು ಅವರಿಂದ ನೀಗಿಸುತ್ತಾನೆ ಹಾಗೂ ಅವರ ಸ್ಥಿತಿಯನ್ನು ಉತ್ತಮ ಗೊಳಿಸುತ್ತಾನೆ.

وَالَّذِيْنَ اٰمَنُوْا وَعَمِلُوا الصّٰلِحٰتِ وَاٰمَنُوْا بِمَا نُزِّلَ عَلٰى مُحَمَّدٍ وَّهُوَ الْحَقُّ مِنْ رَّبِّهِمْ ۙ كَفَّرَ عَنْهُمْ سَيِّاٰتِهِمْ وَاَصْلَحَ بَالَهُمْ ③

4. ಅವಿಶ್ವಾಸಿಗಳು ಅಸತ್ಯವನ್ನು ಅನುಸರಿಸುತ್ತಾರೆ ಹಾಗೂ ವಿಶ್ವಾಸಿಗಳು ತಮ್ಮ ಪ್ರಭುವಿನಿಂದ ಬಂದ ಸತ್ಯವನ್ನು ಅನುಸರಿಸುತ್ತಾರೆ ಎಂಬುದೇ ಅದಕ್ಕೆ ಕಾರಣ. ಈ ರೀತಿಯಾಗಿ ಅಲ್ಲಾಹನು ಮನುಷ್ಯರಿಗೆ ಅವರ ಸ್ಥಿತಿಗಳನ್ನು ವಿವರಿಸಿಕೊಡುತ್ತಾನೆ.

ذٰلِكَ بِاَنَّ الَّذِيْنَ كَفَرُوا اتَّبَعُوا الْبَاطِلَ وَاَنَّ الَّذِيْنَ اٰمَنُوا اتَّبَعُوا الْحَقَّ مِنْ رَّبِّهِمْ ۭ كَذٰلِكَ يَضْرِبُ اللّٰهُ لِلنَّاسِ اَمْثَالَهُمْ ④

5. ಅವಿಶ್ವಾಸಿಗಳನ್ನು (ಯುದ್ಧರಂಗದಲ್ಲಿ) ನೀವು ಸಂಧಿಸಿದರೆ (ಅವರ) ಕಂಠಗಳನ್ನು ಕಡಿಯಿರಿ.[419] ನೀವು ಅವರನ್ನು ಸದೆಬಡಿದು ಸೋಲಿಸಿದರೆ ಬಿಗಿಯಾದ ಬಂಧನದಲ್ಲಿಡಿರಿ. ಅನಂತರ ಒಂದೋ ಅವರೊಂದಿಗೆ (ಯುದ್ಧಕೈದಿಗಳೊಂದಿಗೆ) ಔದಾರ್ಯದಿಂದ ವರ್ತಿಸಿರಿ ಅಥವಾ ಅವರಿಂದ ಪರಿಹಾರಧನವನ್ನು ಪಡೆಯಿರಿ. ಯುದ್ಧದಲ್ಲಿ ಆಯುಧ ಕೆಳಗಿಡುವ ತನಕ ಆಜ್ಞೆ ಇದಾಗಿದೆ. ಅಲ್ಲಾಹನು ಬಯಸಿದ್ದರೆ ಅವನೇ ಅವರಿಗೆ ತಕ್ಕ ಶಾಸ್ತಿ ಮಾಡುತ್ತಿದ್ದನು. ಆದರೆ ನಿಮ್ಮಲ್ಲಿ ಕೆಲವರನ್ನು ಕೆಲವರ ಮೂಲಕ ಪರೀಕ್ಷಿಸಲಿಕ್ಕೆ (ಅವನು ಬಯಸಿದ್ದಾನೆ). ಅಲ್ಲಾಹನ ಮಾರ್ಗದಲ್ಲಿ ಯಾರು ಹತರಾಗುತ್ತಾರೋ ಅವರ ಕರ್ಮಗಳನ್ನು ಅವನು ಎಂದಿಗೂ ನಿಷ್ಫಲಗೊಳಿಸಲಾರ.

فَاِذَا لَقِيْتُمُ الَّذِيْنَ كَفَرُوْا فَضَرْبَ الرِّقَابِ ۭ حَتّٰٓى اِذَآ اَثْخَنْتُمُوْهُمْ فَشُدُّوا الْوَثَاقَ ۤ فَاِمَّا مَنًّۢا بَعْدُ وَاِمَّا فِدَاۗءً حَتّٰى تَضَعَ الْحَرْبُ اَوْزَارَهَا ڔ ذٰلِكَ ڔ وَلَوْ يَشَاۗءُ اللّٰهُ لَانْتَصَرَ مِنْهُمْ وَلٰكِنْ لِّيَبْلُوَا۟ بَعْضَكُمْ بِبَعْضٍ ۭ وَالَّذِيْنَ قُتِلُوْا فِيْ سَبِيْلِ اللّٰهِ فَلَنْ يُّضِلَّ اَعْمَالَهُمْ ⑤

419. ಇಸ್ಲಾಂ ಬೋಧಿಸುವ ದಯೆಯ ಕಾರಣದಿಂದ ಮುಸ್ಲಿಮರು ಒಂದು ವೇಳೆ ಯುದ್ಧರಂಗದಲ್ಲಿ ದಾಕ್ಷಿಣ್ಯ ತೋರಿಸುವರೆ ಎಡೆಯಾಗಬಹುದು. ಆದರೆ ಅದರ ಅಗತ್ಯವಿಲ್ಲ. ಯುದ್ಧ ನೀತಿಯ ಪ್ರಕಾರ ಶತ್ರುಗಳನ್ನು ಸಂಪೂರ್ಣವಾಗಿ ಸೋಲಿಸುವುದು ಅನಿವಾರ್ಯವಾಗಿದೆ.





6. ಅವನು ಅವರಿಗೆ ಮಾರ್ಗದರ್ಶನ ನೀಡುವನು ಹಾಗೂ ಅವರ ಸ್ಥಿತಿಯನ್ನು ಉತ್ತಮಗೊಳಿಸುವನು.

سَيَهْدِيْهِمْ وَيُصْلِحُ بَالَهُمْ ⑥

7. ಅವರಿಗೆ (ಮೊದಲೇ) ತಿಳಿಸಲಾದ ಅಲಂಕೃತ ಸ್ವರ್ಗದಲ್ಲಿ ಅವನು ಅವರಿಗೆ ಪ್ರವೇಶ ಕೊಡುವನು.

وَيُدْخِلُهُمُ الْجَنَّةَ عَرَّفَهَا لَهُمْ ⑦

8. ಎಲೈ ವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ನೆರವಾದರೆ[420] ಅವನು ನಿಮಗೆ ನೆರವಾಗುವವನು ಮತ್ತು ನಿಮ್ಮ ಪಾದಗಳನ್ನು ಭದ್ರಪಡಿಸುವನು.

يٰٓاَيُّهَا الَّذِيْنَ اٰمَنُوْٓا اِنْ تَنْصُرُوا اللّٰهَ يَنْصُرْكُمْ وَيُثَبِّتْ اَقْدَامَكُمْ ⑧

9. ಅವಿಶ್ವಾಸಿಗಳಿಗೆ ಸರ್ವನಾಶ. ಅವರ ಕೃತ್ಯ ಗಳನ್ನು ಅವನು (ಅಲ್ಲಾಹನು) ನಿಷ್ಫಲಗೊಳಿಸುವನು.

وَالَّذِيْنَ كَفَرُوْا فَتَعْسًا لَّهُمْ وَاَضَلَّ اَعْمَالَهُمْ ⑨

10. ಇದು ಅಲ್ಲಾಹನು ಅವತೀರ್ಣಗೊಳಿಸಿದುದನ್ನು ಅವರು ದ್ವೇಷಿಸಿದ ಕಾರಣದಿಂದಾಗಿದೆ. ಹಾಗೆ ಅವನು ಅವರ ಕೃತ್ಯಗಳನ್ನು ವ್ಯರ್ಥಗೊಳಿಸಿದನು.

ذٰلِكَ بِاَنَّهُمْ كَرِهُوْا مَآ اَنْزَلَ اللّٰهُ فَاَحْبَطَ اَعْمَالَهُمْ ⑩

11. ಅವರು ಭೂಮಿಯಲ್ಲೆಲ್ಲ ಸಂಚರಿಸಿ ಅವರ ಹಿಂದಿನವರ ಅಂತ್ಯ ಹೇಗಾಯಿತೆಂದು ನೋಡಿಲ್ಲವೇ? ಅಲ್ಲಾಹನು ಅವರನ್ನು (ಸಂಪೂರ್ಣವಾಗಿ) ನಾಶಗೊಳಿಸಿರುವನು. ಅವಿಶ್ವಾಸಿಗಳಿಗೆ ಹಾಗೆಯೇ ಆಗುವುದು.

اَفَلَمْ يَسِيْرُوْا فِي الْاَرْضِ فَيَنْظُرُوْا كَيْفَ كَانَ عَاقِبَةُ الَّذِيْنَ مِنْ قَبْلِهِمْ ۭ دَمَّرَ اللّٰهُ عَلَيْهِمْ ۡ وَلِلْكٰفِرِيْنَ اَمْثَالُهَا ⑪

420. ಅಲ್ಲಾಹನ ಮಾರ್ಗದಲ್ಲಿ ನೀಡುವ ನೆರವು ಎಂದು ತಾತ್ಪರ್ಯ.

**12.** ಅದಕ್ಕೆ ಕಾರಣವೇನೆಂದರೆ ಅಲ್ಲಾಹನು ವಿಶ್ವಾಸಿಗಳ ರಕ್ಷಕನಾಗಿದ್ದಾನೆ. ಅವಿಶ್ವಾಸಿಗಳ ಬಗ್ಗೆ ಹೇಳುವುದಾದರೆ, ಅವರಿಗೆ ರಕ್ಷಕನಾಗಿ ಯಾರೂ ಇಲ್ಲ.

ذٰلِكَ بِاَنَّ اللّٰهَ مَوْلَى الَّذِيْنَ اٰمَنُوْا وَ
اَنَّ الْكٰفِرِيْنَ لَا مَوْلٰى لَهُمْ ﴿۱۱﴾

**13.** ಯಾರು ವಿಶ್ವಾಸಹೊಂದಿ ಸತ್ಕರ್ಮ ನಿರತರಾಗಿರುತ್ತಾರೋ ಅವರಿಗೆ ಖಂಡಿತವಾಗಿಯೂ ಅಲ್ಲಾಹನು, ಕೆಳಬದಿಯಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶನೀಡುವವನು. ಅವಿಶ್ವಾಸಿಗಳು (ಇಹಲೋಕದಲ್ಲಿ) ಸುಖಾನುಭವ ಪಡೆದು ಜಾನುವಾರುಗಳು ತಿನ್ನುವಂತೆ ತಿನ್ನುತ್ತಾರೆ. ಅವರ ವಾಸಸ್ಥಳ ನರಕ ವಾಗಿದೆ.

اِنَّ اللّٰهَ يُدْخِلُ الَّذِيْنَ اٰمَنُوْا وَ
عَمِلُوا الصّٰلِحٰتِ جَنّٰتٍ تَجْرِيْ مِنْ
تَحْتِهَا الْاَنْهٰرُ ؕ وَ الَّذِيْنَ كَفَرُوْا
يَتَمَتَّعُوْنَ وَ يَاْكُلُوْنَ كَمَا تَاْكُلُ
الْاَنْعَامُ وَ النَّارُ مَثْوًى لَّهُمْ ﴿۱۲﴾

**14.** ನಿನ್ನನ್ನು ಉಚ್ಚಾಟನೆ ಮಾಡಿದ ಊರಿನವರಿಗಿಂತ ಪ್ರಬಲರಾದ ಎಷ್ಟೆಲ್ಲ ಊರಿನವರನ್ನು ನಾವು ನಾಶಪಡಿಸಿದೆವು! ಅವರಿಗೆ ಸಹಾಯಕನಾಗಿ ಯಾರೂ ಇರಲಿಲ್ಲ.

وَ كَاَيِّنْ مِّنْ قَرْيَةٍ هِيَ اَشَدُّ قُوَّةً مِّنْ
قَرْيَتِكَ الَّتِيْۤ اَخْرَجَتْكَ ۚ اَهْلَكْنٰهُمْ
فَلَا نَاصِرَ لَهُمْ ﴿۱۳﴾

**15.** ತನ್ನ ಪ್ರಭುವಿನಿಂದ ಲಭಿಸಿದ ಸ್ಪಷ್ಟವಾದ ಆಧಾರಗಳನ್ನು ಅವಲಂಬಿಸಿರುವ ವ್ಯಕ್ತಿ, ತಮ್ಮ ದುಷ್ಕೃತ್ಯಗಳು ತಮಗೆ ಸುಂದರವಾಗಿ ಗೋಚರವಾಗಿ ತಮ್ಮ ಸ್ವೇಚ್ಛೆಗಳನ್ನು ಹಿಂಬಾಲಿಸುವವರಿಗೆ ಸಮಾನನಾಗುವನೋ?

اَفَمَنْ كَانَ عَلٰى بَيِّنَةٍ مِّنْ رَّبِّهٖ كَمَنْ
زُيِّنَ لَهٗ سُوْٓءُ عَمَلِهٖ وَ اتَّبَعُوْۤا
اَهْوَآءَهُمْ ﴿۱۴﴾

**16.** ಸದ್ಧರ್ಮಿಗಳಿಗೆ ಅಲ್ಲಾಹನು ವಾಗ್ದಾನ ಮಾಡಿದ ಸ್ವರ್ಗದ ವರ್ಣನೆ: ಅಲ್ಲಿ ಮಲಿನಗೊಳ್ಳದ ನೀರಿನ ನದಿಗಳಿವೆ; ರುಚಿಗೆಡದ ಹಾಲಿನ ನದಿಗಳಿವೆ; ಪಾನ ಮಾಡುವವರಿಗೆ ಸ್ವಾದಿಷ್ಟವಾದ ಮದ್ಯದ ನದಿಗಳಿವೆ; ಶುದ್ಧವಾದ ಜೇನಿನ ನದಿಗಳಿವೆ. ಅವರಿಗೆ ಅಲ್ಲಿ ಎಲ್ಲ ವಿಧ ಹಣ್ಣುಹಂಪಲುಗಳು ದೊರಕುವುವು. ತಮ್ಮ ಪ್ರಭುವಿನಿಂದ ಪಾಪವಿಮುಕ್ತಿ ಸಹ ಸಿದ್ಧಿಸುವುದು. *ಈ ಅನುಗ್ರಹಗಳನ್ನು ಹೊಂದುವವರು* ನರಕದಲ್ಲಿ ದೀರ್ಘ ಕಾಲ ವಾಸಮಾಡುವವರಿಗೆ ಸಮಾನರೇನು? ಅವರಿಗೆ (ನರಕವಾಸಿಗಳಿಗೆ) ಕುದಿಯುವ ನೀರನ್ನು ಕುಡಿಸಲಾಗುವುದು. ಆಗ ಅದು ಅವರ ಕರುಳುಗಳನ್ನು ಹರಿದು ಹಾಕುವುದು.

مَثَلُ الْجَنَّةِ الَّتِيْ وُعِدَ الْمُتَّقُوْنَ ؕ فِيْهَاۤ
اَنْهٰرٌ مِّنْ مَّآءٍ غَيْرِ اٰسِنٍ ۚ وَ اَنْهٰرٌ مِّنْ
لَّبَنٍ لَّمْ يَتَغَيَّرْ طَعْمُهٗ ۚ وَ اَنْهٰرٌ مِّنْ
خَمْرٍ لَّذَّةٍ لِّلشّٰرِبِيْنَ ۚ۬ وَ اَنْهٰرٌ مِّنْ
عَسَلٍ مُّصَفًّى ؕ وَ لَهُمْ فِيْهَا مِنْ كُلِّ
الثَّمَرٰتِ وَ مَغْفِرَةٌ مِّنْ رَّبِّهِمْ ؕ كَمَنْ هُوَ
خَالِدٌ فِي النَّارِ وَ سُقُوْا مَآءً حَمِيْمًا
فَقَطَّعَ اَمْعَآءَهُمْ ﴿۱۵﴾





**17.** ಅವರ ಪೈಕಿ ಕೆಲವರು ನಿನ್ನ ಮಾತುಗಳನ್ನು ಆಲಿಸುತ್ತಾರೆ. ನಿನ್ನ ಸನ್ನಿಧಿಯಿಂದ ಅವರು ಹೊರಗೆ ಹೋದರೆ ಜ್ಞಾನಿಗಳಾದ ಜನರೊಡನೆ ಅವರು, 'ಸ್ವಲ್ಪ ಮುಂಚೆ ಅವರು ಏನು ಹೇಳಿದರು?' ಎಂದು ಕೇಳುತ್ತಾರೆ. ಅವರ ಹೃದಯಗಳಿಗೆ ಅಲ್ಲಾಹನು ಮುದ್ರೆ ಹಾಕಿದ್ದಾನೆ. ಅವರು ಸ್ವೇಚ್ಛಾಚಾರಿಗಳಾಗಿದ್ದಾರೆ.

وَ مِنْهُمْ مَّنْ يَّسْتَمِعُ اِلَيْكَ ۚ حَتّٰۤى اِذَا
خَرَجُوْا مِنْ عِنْدِكَ قَالُوْا لِلَّذِيْنَ اُوْتُوا
الْعِلْمَ مَاذَا قَالَ اٰنِفًا ۫ اُولٰٓئِكَ الَّذِيْنَ
طَبَعَ اللّٰهُ عَلٰى قُلُوْبِهِمْ وَ اتَّبَعُوْۤا
اَهْوَآءَهُمْ ﴿۱۶﴾

**18.** ಆದರೆ ಯಾರು ಸತ್ಪಥದಲ್ಲಿ ನಡೆಯುತ್ತಾರೋ, ಅವರಿಗೆ ಅವನು (ಅಲ್ಲಾಹನು) ಸತ್ಪ್ರಜ್ಞೆಯನ್ನು ವೃದ್ಧಿಗೊಳಿಸುತ್ತಾನೆ ಹಾಗೂ ಅವರಿಗೆ ಸಜ್ಜನಿಕೆಯನ್ನು ದಯಪಾಲಿಸುತ್ತಾನೆ.

وَ الَّذِيْنَ اهْتَدَوْا زَادَهُمْ هُدًى وَّ
اٰتٰىهُمْ تَقْوٰىهُمْ ﴿۱۷﴾

**19.** ಹಠಾತ್ತಾಗಿ ಬರುವ ಆ ನಿಶ್ಚಿತ ವೇಳೆಯನ್ನು ಹೊರತು ಬೇರೇನನ್ನೂ ಅವರು ನಿರೀಕ್ಷಿಸುವುದಿಲ್ಲ. ಅದರ ಲಕ್ಷಣಗಳು ಗೋಚರಿಸಲಾರಂಭಿಸಿವೆ. ಹಾಗಿರುವಾಗ, ಅದು ಅವರ (ಅವಿಶ್ವಾಸಿಗಳ) ಮೇಲೆ ಬಂದೆರಗಿದರೆ ಅವರಿಗಿರುವ ಮುನ್ನೆಚ್ಚರಿಕೆ ಅವರಿಗೆ ಹೇಗೆ ಉಪಯುಕ್ತವಾಗುವುದು?

فَهَلْ يَنْظُرُوْنَ اِلَّا السَّاعَةَ اَنْ تَاْتِيَهُمْ
بَغْتَةً ۚ فَقَدْ جَآءَ اَشْرَاطُهَا ۚ فَاَنّٰى لَهُمْ
اِذَا جَآءَتْهُمْ ذِكْرٰىهُمْ ﴿۱۸﴾

**20.** ಆದ್ದರಿಂದ ತಿಳಿದುಕೋ, ಅಲ್ಲಾಹನ ಹೊರತು ಬೇರೆ ಆರಾಧ್ಯನಿಲ್ಲ. ನೀನು ನಿನ್ನ ಕುಂದುಕೊರತೆಗಾಗಿ ಹಾಗೂ ಸತ್ಯವಿಶ್ವಾಸಿಗಳಾದ ಪುರುಷರಿಗಾಗಿಯೂ ಸ್ತ್ರೀಯರಿಗಾಗಿಯೂ ಕ್ಷಮೆ ಯಾಚಿಸು. ನಿಮ್ಮ ತಿರುಗಾಟದ ಸ್ಥಳವನ್ನೂ ನಿಮ್ಮ ವಾಸಸ್ಥಳವನ್ನೂ ಅಲ್ಲಾಹನು ಬಲ್ಲನು.

فَاعْلَمْ اَنَّهٗ لَاۤ اِلٰهَ اِلَّا اللّٰهُ وَ اسْتَغْفِرْ
لِذَنْۢبِكَ وَ لِلْمُؤْمِنِيْنَ وَ الْمُؤْمِنٰتِ ؕ
وَاللّٰهُ يَعْلَمُ مُتَقَلَّبَكُمْ وَ مَثْوٰىكُمْ ﴿۱۹﴾

**21.** ವಿಶ್ವಾಸಿಗಳು ಹೇಳುತ್ತಾರೆ: '(ಯುದ್ಧದ ಬಗ್ಗೆ) ಒಂದು ಅಧ್ಯಾಯ ಏಕೆ ಅವತೀರ್ಣಗೊಳ್ಳುವುದಿಲ್ಲ?'[421] ಆದರೆ, ನಿಖರವಾದ ಆಜ್ಞೆಗಳಿಂದ ಕೂಡಿದ ಒಂದು ಅಧ್ಯಾಯ ಅವತೀರ್ಣಗೊಂಡು ಅದರಲ್ಲಿ ಯುದ್ಧದ ಬಗ್ಗೆ ಪ್ರಸ್ತಾಪಿಸಿಲ್ಪಟ್ಟರೆ, ಮರಣದ ಛಾಯೆಯಿಂದ ಆವರಿಸಲ್ಪಟ್ಟವನು ದಿಟ್ಟಿಸಿ ನೋಡುವಂತೆ, ಹೃದಯಗಳಲ್ಲಿ ರೋಗವಿರುವವರು ನಿನ್ನ ಕಡೆಗೆ ನೋಡು ವುದನ್ನು ನೀನು ಕಾಣುವೆ.[422] ಆದ್ದರಿಂದ ವಿನಾಶಕ್ಕೆ ಅವರು ಗುರಿಯಾಗುತ್ತಾರೆ.

وَ يَقُوْلُ الَّذِيْنَ اٰمَنُوْا لَوْ لَا نُزِّلَتْ
سُوْرَةٌ ۚ فَاِذَاۤ اُنْزِلَتْ سُوْرَةٌ مُّحْكَمَةٌ وَّ
ذُكِرَ فِيْهَا الْقِتَالُ ۙ رَاَيْتَ الَّذِيْنَ فِيْ
قُلُوْبِهِمْ مَّرَضٌ يَّنْظُرُوْنَ اِلَيْكَ نَظَرَ
الْمَغْشِيِّ عَلَيْهِ مِنَ الْمَوْتِ ؕ فَاَوْلٰى
لَهُمْ ﴿۲۰﴾

421 ದೇವಾಜ್ಞೆಯನ್ನು ಪಾಲಿಸಲು ಸತ್ಯವಿಶ್ವಾಸಿಗಳು ಸದಾ ಉತ್ಸಾಹದಿಂದಿರುತ್ತಾರೆ. ಹೊಸ ಹೊಸ ದೇವಾಜ್ಞೆಗಳನ್ನು ಅವರು ನಿರೀಕ್ಷಿಸುತ್ತಾ ಇರುತ್ತಾರೆ.

22. ವಿಧೇಯತೆ ಮತ್ತು ನ್ಯಾಯೋಚಿತ ಮಾತು ಅವರಿಗೆ ಉತ್ತಮವಾಗಿತ್ತು. (ಯುದ್ಧದ) ವಿಚಾರ ತೀರ್ಮಾನವಾದಾಗ, ಅವರು ಅಲ್ಲಾಹನಿಗೆ ನಿಷ್ಠರಾಗುತ್ತಿದ್ದರೆ ಅದು ಅವರಿಗೆ ಒಳ್ಳೆಯದಿತ್ತು.

طَاعَةٌ وَّقَوْلٌ مَّعْرُوْفٌ فَاِذَا عَزَمَ الْاَمْرُ فَلَوْ صَدَقُوا اللّٰهَ لَكَانَ خَيْرًا لَّهُمْ ﴿٢٢﴾

23. ಇನ್ನು, ನೀವು ಪರಾಙ್ಮುಖರಾದರೆ ನೀವು ಭೂಮಿಯಲ್ಲಿ ಗಲಭೆ ಸೃಷ್ಟಿಸುವವರಂತೆಯೂ ಕೌಟುಂಬಿಕ ಸಂಬಂಧಗಳನ್ನು ಮುರಿಯುವವರಂತೆಯೂ ಆಗುವುದಿಲ್ಲವೇನು?

فَهَلْ عَسَيْتُمْ اِنْ تَوَلَّيْتُمْ اَنْ تُفْسِدُوْا فِي الْاَرْضِ وَتُقَطِّعُوْٓا اَرْحَامَكُمْ ﴿٢٣﴾

24. ಅಂತಹವರು ಅಲ್ಲಾಹನ ಶಾಪಕ್ಕೆ ಗುರಿಯಾದವರು. ಅವನು ಅವರನ್ನು ಕಿವುಡರನ್ನಾಗಿ ಮಾಡಿದ್ದಾನೆ. ಅವರ ಕಣ್ಣುಗಳನ್ನು ಕುರುಡುಗೊಳಿಸಿದ್ದಾನೆ.

اُولٰٓئِكَ الَّذِيْنَ لَعَنَهُمُ اللّٰهُ فَاَصَمَّهُمْ وَاَعْمٰٓى اَبْصَارَهُمْ ﴿٢٤﴾

25. ಅವರು ಈ ಖುರ್‌ಆನಿನ ಬಗ್ಗೆ ಚಿಂತನೆ ಮಾಡುವುದಿಲ್ಲವೇ? ಅಥವಾ ಅವರ ಹೃದಯಗಳಿಗೆ ಬೀಗ ಜಡಿಯಲ್ಪಟ್ಟಿವೆಯೇ?

اَفَلَا يَتَدَبَّرُوْنَ الْقُرْاٰنَ اَمْ عَلٰى قُلُوْبٍ اَقْفَالُهَا ﴿٢٥﴾

26. ಸತ್ಪಥ ದರ್ಶನ ಸ್ಪಷ್ಟಗೊಂಡ ಬಳಿಕ ಯಾರು ಬೆನ್ನು ತಿರುಗಿಸಿ ಹೋಗುತ್ತಾರೋ ಅವರಿಗೆ (ಅವರ ಕೃತ್ಯಗಳನ್ನು) ಶೈತಾನನು ಸುಂದರಗೊಳಿಸಿ ತೋರಿಸುತ್ತಾನೆ ಹಾಗೂ ಸುಳ್ಳು ಭರವಸೆಗಳನ್ನು ನೀಡುತ್ತಾನೆ.

اِنَّ الَّذِيْنَ ارْتَدُّوْا عَلٰٓى اَدْبَارِهِمْ مِّنْۢ بَعْدِ مَا تَبَيَّنَ لَهُمُ الْهُدَى الشَّيْطٰنُ سَوَّلَ لَهُمْ وَاَمْلٰى لَهُمْ ﴿٢٦﴾

27. ಅದಕ್ಕೆ ಕಾರಣ, ಅಲ್ಲಾಹನು ಅವತೀರ್ಣಗೊಳಿಸಿದುದನ್ನು ದ್ವೇಷಿಸುವವರೊಡನೆ (ಅವಿಶ್ವಾಸಿಗಳಾದ ಶತ್ರುಗಳೊಡನೆ) 'ಕೆಲವು ವಿಚಾರಗಳಲ್ಲಿ ನಾವು ನಿಮ್ಮನ್ನು ಅನುಸರಿಸುತ್ತೇವೆ' ಎಂದು ಅವರು (ಕಪಟ ವಿಶ್ವಾಸಿಗಳು) ಹೇಳಿದುದಾಗಿದೆ. ಅಲ್ಲಾಹನು ಅವರ ರಹಸ್ಯ ಮಾತುಕತೆಗಳನ್ನು ಬಲ್ಲವನಾಗಿದ್ದಾನೆ.

ذٰلِكَ بِاَنَّهُمْ قَالُوْا لِلَّذِيْنَ كَرِهُوْا مَا نَزَّلَ اللّٰهُ سَنُطِيْعُكُمْ فِيْ بَعْضِ الْاَمْرِ وَاللّٰهُ يَعْلَمُ اِسْرَارَهُمْ ﴿٢٧﴾

28. ಅವರ ಮುಖ ಮತ್ತು ಬೆನ್ನಿನ ಮೇಲೆ ಹೊಡೆಯುತ್ತಾ ದೇವದೂತರು ಅವರ ಜೀವಹರಣ ಮಾಡುವಾಗ ಅವರ ಸ್ಥಿತಿ ಹೇಗಿರುವುದು?

فَكَيْفَ اِذَا تَوَفَّتْهُمُ الْمَلٰٓئِكَةُ يَضْرِبُوْنَ وُجُوْهَهُمْ وَاَدْبَارَهُمْ ﴿٢٨﴾

422. ಶತ್ರುಗಳೊಡನೆ ಯುದ್ಧಮಾಡುವ ಆಜ್ಞೆ ಸತ್ಯವಿಶ್ವಾಸಿಗಳಿಗೆ ಸಂತೋಷವನ್ನುಂಟುಮಾಡುವುದಾದರೂ ಕಪಟವಿಶ್ವಾಸಿಗಳಿಗೆ ವ್ಯಥೆಯನ್ನುಂಟುಮಾಡುತ್ತದೆ. ಅದನ್ನು ಅವರು ಮರಣಗಂಟೆಯಂತೆ ಭಾವಿಸುತ್ತಾರೆ.





29. ಅಲ್ಲಾಹನಿಗೆ ಅಪ್ರಿಯವಾದುದನ್ನು ಅವರು ಹಿಂಬಾಲಿಸಿದರು ಮತ್ತು ಅವನಿಗೆ ಪ್ರಿಯವಾದುದನ್ನು ಅವರು ದ್ವೇಷಿಸಿದರು ಎಂಬುದೇ ಅದಕ್ಕೆ ಕಾರಣ. ತತ್ಪರಿಣಾಮವಾಗಿ ಅವನು ಅವರ ಕರ್ಮಗಳನ್ನು ನಿಷ್ಫಲಗೊಳಿಸಿದನು.

ذٰلِكَ بِاَنَّهُمُ اتَّبَعُوْا مَآ اَسْخَطَ اللّٰهَ وَكَرِهُوْا رِضْوَانَهٗ فَاَحْبَطَ اَعْمَالَهُمْ ﴿٢٩﴾

30. ತಮ್ಮ ಅಂತರಂಗದಲ್ಲಿರುವ ವಿದ್ವೇಷವನ್ನು ಅಲ್ಲಾಹನು ಬಹಿರಂಗಗೊಳಿಸಲಾರನೆಂದು ಹೃದಯಗಳಲ್ಲಿ ರೋಗವುಳ್ಳವರು ಭಾವಿಸುತ್ತಾರೇನು?

اَمْ حَسِبَ الَّذِيْنَ فِيْ قُلُوْبِهِمْ مَّرَضٌ اَنْ لَّنْ يُّخْرِجَ اللّٰهُ اَضْغَانَهُمْ ﴿٣٠﴾

31. ನಾವು ಬಯಸಿದ್ದರೆ ಅವರನ್ನು ನಾವು ನಿನಗೆ ತೋರಿಸಿಕೊಡುತ್ತಿದ್ದೆವು. ಆಗ ಅವರ ಕುರುಹುಗಳಿಂದ ನೀನು ಅವರನ್ನು ಗುರುತಿಸುತ್ತಿದ್ದೆ. ಖಂಡಿತವಾಗಿಯೂ ಅವರ ಮಾತಿನ ಧಾಟಿಯಿಂದ ನೀನು ಅವರನ್ನು ಗುರುತಿಸಬಲ್ಲೆ. ಅಲ್ಲಾಹನು ನಿಮ್ಮ ಕೃತ್ಯಗಳನ್ನು ಬಲ್ಲವನಾಗಿದ್ದಾನೆ.

وَلَوْ نَشَآءُ لَاَرَيْنٰكَهُمْ فَلَعَرَفْتَهُمْ بِسِيْمٰهُمْ وَلَتَعْرِفَنَّهُمْ فِيْ لَحْنِ الْقَوْلِ وَاللّٰهُ يَعْلَمُ اَعْمَالَكُمْ ﴿٣١﴾

32. ನಿಮ್ಮ ಪೈಕಿ (ಅಲ್ಲಾಹನ ಮಾರ್ಗದಲ್ಲಿ) ಪರಿಶ್ರಮ ಪಡುವವರನ್ನೂ ಸ್ಥಿರಚಿತ್ತತೆಯುಳ್ಳವರನ್ನೂ (ಇತರರಿಂದ) ವಿಂಗಡಿಸಿ ತಿಳಿದು ನಿಮ್ಮ ನಿಜವಾದ ಸ್ಥಿತಿಯನ್ನು ಮನವರಿಕೆಮಾಡುವ ವರೆಗೆ ನಾವು ನಿಮ್ಮನ್ನು ಪರೀಕ್ಷಿಸುವೆವು.

وَلَنَبْلُوَنَّكُمْ حَتّٰى نَعْلَمَ الْمُجٰهِدِيْنَ مِنْكُمْ وَالصّٰبِرِيْنَ وَنَبْلُوَا۟ اَخْبَارَكُمْ ﴿٣٢﴾

33. ಯಾರು ಅವಿಶ್ವಾಸಿಗಳಾಗಿದ್ದು ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುತ್ತಾರೋ ಹಾಗೂ ಅವರಿಗೆ ಮಾರ್ಗದರ್ಶನ ಸ್ಪಷ್ಟಗೊಂಡ ಬಳಿಕವೂ (ದೇವ) ಸಂದೇಶವಾಹಕನನ್ನು ವಿರೋಧಿಸುತ್ತಾರೋ, ಅವರು ಅಲ್ಲಾಹನಿಗೆ ಅಲ್ಪಮಾತ್ರವಾದರೂ ಹಾನಿಯುಂಟುಮಾಡಲಾರರು. ಅವನು (ಅಲ್ಲಾಹನು) ಅವರ ಕೃತ್ಯಗಳನ್ನು ನಿಷ್ಫಲಗೊಳಿಸುವನು.

اِنَّ الَّذِيْنَ كَفَرُوْا وَصَدُّوْا عَنْ سَبِيْلِ اللّٰهِ وَشَآقُّوا الرَّسُوْلَ مِنْۢ بَعْدِ مَا تَبَيَّنَ لَهُمُ الْهُدٰى لَنْ يَّضُرُّوا اللّٰهَ شَيْئًا وَسَيُحْبِطُ اَعْمَالَهُمْ ﴿٣٣﴾

34. ಎಲೈ ವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ವಿಧೇಯರಾಗಿರಿ; ಪ್ರವಾದಿಗೂ ವಿಧೇಯರಾಗಿರಿ. ನಿಮ್ಮ ಕರ್ಮಗಳನ್ನು ನೀವು ನಿಷ್ಫಲಗೊಳಿಸಬೇಡಿರಿ.

يٰٓاَيُّهَا الَّذِيْنَ اٰمَنُوْٓا اَطِيْعُوا اللّٰهَ وَاَطِيْعُوا الرَّسُوْلَ وَلَا تُبْطِلُوْٓا اَعْمَالَكُمْ ﴿٣٤﴾

**35. ಯಾರು ಅವಿಶ್ವಾಸಿಗಳಾಗಿದ್ದು ಅಲ್ಲಾಹನ ಮಾರ್ಗದಿಂದ** (ಜನರನ್ನು) **ತಡೆಯುತ್ತಾರೋ ಹಾಗೂ ಅವಿಶ್ವಾಸಿಗಳಾಗಿಯೇ ಮರಣವನ್ನಪ್ಪುತ್ತಾರೋ, ಅವರನ್ನು ಅಲ್ಲಾಹನು ಖಂಡಿತವಾಗಿಯೂ ಕ್ಷಮಿಸ ಲಾರನು.**

إِنَّ الَّذِيْنَ كَفَرُوْا وَ صَدُّوْا عَنْ سَبِيْلِ
اللّٰهِ ثُمَّ مَاتُوْا وَ هُمْ كُفَّارٌ فَلَنْ يَّغْفِرَ
اللّٰهُ لَهُمْ ﴿٣٥﴾

**36. ನೀವು ಆಲಸಿಗರಾಗಬೇಡಿರಿ. ತತ್ಫಲವಾಗಿ ನೀವು** (ಶತ್ರುಗಳನ್ನು) **ಸಂಧಾನಕ್ಕೆ ಆಹ್ವಾನಿಸಬಹುದು.**[423] **ನೀವೇ ಮೇಲುಗೈ ಸಾಧಿಸುವಿರಿ. ಅಲ್ಲಾಹನು ನಿಮ್ಮೊಂದಿ ಗಿದ್ದಾನೆ. ನಿಮ್ಮ ಶ್ರಮಫಲವನ್ನು ಅವನು ನಿಮಗೆಂದಿಗೂ ಕಡಿತಗೊಳಿಸಲಿಕ್ಕಿಲ್ಲ.**

فَلَا تَهِنُوْا وَ تَدْعُوْۤا اِلَى السَّلْمِ ۖۗ وَ
اَنْتُمُ الْاَعْلَوْنَ ۖۗ وَ اللّٰهُ مَعَكُمْ وَ لَنْ
يَّتِرَكُمْ اَعْمَالَكُمْ ﴿٣٦﴾

**37. ಐಹಿಕ ಜೀವಿತ ಕ್ರೀಡೆಯೂ ವಿನೋದವೂ ಆಗಿದೆ. ನೀವು ವಿಶ್ವಾಸ ಹೊಂದಿ ಭಯಭಕ್ತಿಯುಳ್ಳವ ರಾದರೆ ಅವನು** (ಅಲ್ಲಾಹನು) **ನಿಮಗೆ ನಿಮ್ಮ ಪ್ರತಿಫಲ ವನ್ನು ನೀಡುವನು. ನಿಮ್ಮ ಸಂಪತ್ತನ್ನು ಅವನು** (ತನ ಗೋಸ್ಕರ) **ಕೇಳುವುದಿಲ್ಲ.**[424]

اِنَّمَا الْحَيٰوةُ الدُّنْيَا لَعِبٌ وَّ لَهْوٌ ؕ وَ اِنْ
تُؤْمِنُوْا وَ تَتَّقُوْا يُؤْتِكُمْ اُجُوْرَكُمْ وَ
لَا يَسْـَٔلْكُمْ اَمْوَالَكُمْ ﴿٣٧﴾

**38. ಅವನು ನಿಮ್ಮೊಡನೆ ಅದನ್ನು** (ಸಂಪತ್ತನ್ನು) **ಕೇಳಿ ನಿಮ್ಮ ಮೇಲೆ ಒತ್ತಾಯ ಹೇರಿದರೆ ನೀವು ಜಿಪುಣ ರಾಗುವಿರಿ ಹಾಗೂ ಅವನು ನಿಮ್ಮ ದ್ವೇಷವನ್ನು ಬಹಿರಂಗ ಗೊಳಿಸುವನು.**

اِنْ يَّسْـَٔلْكُمُوْهَا فَيُحْفِكُمْ تَبْخَلُوْا وَ
يُخْرِجْ اَضْغَانَكُمْ ﴿٣٨﴾

**39. ತಿಳಿದುಕೊಳ್ಳಿರಿ, ನೀವು ಅಲ್ಲಾಹನ ಮಾರ್ಗ ದಲ್ಲಿ ವ್ಯಯಮಾಡಲು ಆಹ್ವಾನಿಸಲ್ಪಟ್ಟವರಾಗಿದ್ದೀರಿ. ನಿಮ್ಮ ಪೈಕಿ ಜಿಪುಣತೆ ತೋರಿಸುವ ಕೆಲವರಿದ್ದಾರೆ. ಯಾವ ನಾದರೂ ಜಿಪುಣತೆ ತೋರಿಸಿದರೆ ಆ ಜಿಪುಣತೆಯ** ದೋಷ ಫಲ **ಅವನಿಗೆಯೇ. ಅಲ್ಲಾಹನು ಸ್ವಯಂಪೂರ್ಣನಾಗಿ ದ್ದಾನೆ; ನೀವು ಅವಲಂಬಿತರಾಗಿದ್ದೀರಿ. ನೀವು ವಿಮುಖ ರಾದರೆ, ಅವನು ನಿಮ್ಮ ಬದಲಿಗೆ ಬೇರೆ ಜನತೆಯನ್ನು ತರು ವನು. ಅವರು ನಿಮ್ಮಂತೆ ಆಗಲಾರರು.**

هٰۤاَنْتُمْ هٰۤؤُلَآءِ تُدْعَوْنَ لِتُنْفِقُوْا فِيْ
سَبِيْلِ اللّٰهِ ۚ فَمِنْكُمْ مَّنْ يَّبْخَلُ ۚ وَ مَنْ
يَّبْخَلْ فَاِنَّمَا يَبْخَلُ عَنْ نَّفْسِهٖ ؕ وَ اللّٰهُ
الْغَنِيُّ وَ اَنْتُمُ الْفُقَرَآءُ ۚ وَ اِنْ تَتَوَلَّوْا
يَسْتَبْدِلْ قَوْمًا غَيْرَكُمْ ۙ ثُمَّ لَا
يَكُوْنُوْۤا اَمْثَالَكُمْ ﴿٣٩﴾

423. ಇಸ್ಲಾಂ ಶಾಂತಿಯ ಪಾಠವನ್ನು ನೀಡುತ್ತದೆ. ಆದರೆ ಯುದ್ಧ ಘೋಷಣೆಯ ಬಳಿಕ ಅಂಜುಬುರುಕುತನ ಹಾಗೂ ಉದಾಸೀನತೆಯ ಕಾರಣದಿಂದ ಶತ್ರುಗಳನ್ನು ಸಂಧಾನಕ್ಕೆ ಕರೆಯುವುದನ್ನು ಅದು ಒಪ್ಪುವುದಿಲ್ಲ. ಅದನ್ನು ಇಲ್ಲಿ ಸೂಚಿಸಲಾಗಿದೆ. ಆದರೆ ಶತ್ರುಗಳು ಸಂಧಾನಕ್ಕೆ ಸಿದ್ಧರಾದರೆ ಅದನ್ನು ಒಪ್ಪಬೇಕೆಂದು ಖುರ್‌ಆನ್ (8:62) ಕಲಿಸುತ್ತದೆ.

424. ಧರ್ಮಕಾರ್ಯದಲ್ಲಿ ನೀವು ವ್ಯಯಮಾಡುವ ಸಂಪತ್ತು ನಿಮ್ಮ ಒಳಿತಿಗೋಸ್ಕರವೇ ಆಗಿದೆ ಎಂದು ತಾತ್ಪರ್ಯ.

سُوْرَةُ الْفَتْحِ مَدَنِيَّةٌ وَّهِيَ مَعَ الْبَسْمَلَةِ ثَلٰثُوْنَ اٰيَةً وَّاَرْبَعُ رُكُوْعَاتٍ

# 48. ಅಲ್‌ಫತ್‌ಹ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 30 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ﴿١﴾

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

اِنَّا فَتَحْنَا لَكَ فَتْحًا مُّبِيْنًا ﴿١﴾

2. ನಿಜವಾಗಿಯೂ ನಾವು ನಿನಗೆ ವಿಜಯವನ್ನು ನೀಡಿರುವೆವು - ಸ್ಪಷ್ಟವಾದೊಂದು ವಿಜಯ.

لِّيَغْفِرَ لَكَ اللّٰهُ مَا تَقَدَّمَ مِنْ ذَنْۢبِكَ وَمَا تَاَخَّرَ وَيُتِمَّ نِعْمَتَهٗ عَلَيْكَ وَيَهْدِيَكَ صِرَاطًا مُّسْتَقِيْمًا ﴿٢﴾

3. ನಿನ್ನ ಹಿಂದಿನ ಮತ್ತು ಮುಂದಿನ ಕುಂದು ಕೊರತೆಗಳನ್ನು ಅಲ್ಲಾಹನು ನಿನ್ನಿಂದ ಮರೆಮಾಚಲಿಕ್ಕೂ ನಿನ್ನ ಮೇಲೆ ಅವನ ಅನುಗ್ರಹಗಳನ್ನು ಪೂರ್ಣಗೊಳಿಸಲಿಕ್ಕೂ ನಿನ್ನನ್ನು ಸತ್ಪಥದಲ್ಲಿ ನಡೆಸಲಿಕ್ಕೂ;

وَّيَنْصُرَكَ اللّٰهُ نَصْرًا عَزِيْزًا ﴿٣﴾

4. ಅಲ್ಲಾಹನು ನಿನಗೆ ಮಹತ್ವದ ಸಹಾಯದಿಂದ ನೆರವಾಗಲಿಕ್ಕೂ ಬೇಕಾಗಿ.

هُوَ الَّذِيْۤ اَنْزَلَ السَّكِيْنَةَ فِيْ قُلُوْبِ الْمُؤْمِنِيْنَ لِيَزْدَادُوْۤا اِيْمَانًا مَّعَ اِيْمَانِهِمْ ؕ وَلِلّٰهِ جُنُوْدُ السَّمٰوٰتِ وَالْاَرْضِ ؕ وَكَانَ اللّٰهُ عَلِيْمًا حَكِيْمًا ﴿٤﴾

5. ವಿಶ್ವಾಸಿಗಳ ಹೃದಯಗಳಲ್ಲಿ ನೆಮ್ಮದಿಯನ್ನು ಮೂಡಿಸಿ, ಅವರ ವಿಶ್ವಾಸಕ್ಕೆ ಇನ್ನೂ ಹೆಚ್ಚಿನ ದೃಢತೆಯನ್ನು ನೀಡಿದವನು ಅವನೇ ಆಗಿದ್ದಾನೆ. ಆಕಾಶ ಗಳಲ್ಲಿ ಮತ್ತು ಭೂಮಿಯಲ್ಲಿರುವ ಸೈನ್ಯಗಳೆಲ್ಲ ಅಲ್ಲಾ ಹನದೇ ಆಗಿವೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿ ಯೂ ಆಗಿದ್ದಾನೆ.

لِّيُدْخِلَ الْمُؤْمِنِيْنَ وَالْمُؤْمِنٰتِ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا وَيُكَفِّرَ عَنْهُمْ سَيِّاٰتِهِمْ ؕ وَكَانَ ذٰلِكَ عِنْدَ اللّٰهِ فَوْزًا عَظِيْمًا ﴿٥﴾

6. (ಇದು) ಅವನು ವಿಶ್ವಾಸಿಗಳಾದ ಪುರುಷರಿಗೂ ವಿಶ್ವಾಸಿಗಳಾದ ಸ್ತ್ರೀಯರಿಗೂ ಕೆಳಬದಿಯಲ್ಲಿ ಹೊಳೆಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶ ನೀಡಲಿಕ್ಕೂ - ಅವರು ಅಲ್ಲೇ ವಾಸಿಸುವರು - ಅವರಿಂದ ಅವರ ಕೆಡುಕುಗಳನ್ನು ನೀಗಿಸಲಿಕ್ಕೂ ಬೇಕಾಗಿ. ಅದು ಅಲ್ಲಾಹನ ದೃಷ್ಟಿಯಲ್ಲಿ ಮಹಾ ವಿಜಯವಾಗಿದೆ.





وَّيُعَذِّبَ الْمُنٰفِقِيْنَ وَالْمُنٰفِقٰتِ وَالْمُشْرِكِيْنَ وَالْمُشْرِكٰتِ الظَّآنِّيْنَ بِاللّٰهِ ظَنَّ السَّوْءِ ؕ عَلَيْهِمْ دَآئِرَةُ السَّوْءِ ۚ وَغَضِبَ اللّٰهُ عَلَيْهِمْ وَلَعَنَهُمْ وَاَعَدَّ لَهُمْ جَهَنَّمَ ؕ وَسَآءَتْ مَصِيْرًا ﴿٦﴾

7. (ಇದು) ಅಲ್ಲಾಹನ ಬಗ್ಗೆ ಕೆಟ್ಟ ಭಾವನೆಗಳನ್ನು ಇಟ್ಟುಕೊಂಡಿರುವ ಕಪಟ ವಿಶ್ವಾಸಿಗಳನ್ನೂ ಕಪಟ ವಿಶ್ವಾಸಿನಿಯರನ್ನೂ ಬಹುದೇವಾರಾಧಕರಾದ ಪುರುಷರನ್ನೂ ಸ್ತ್ರೀಯರನ್ನೂ ಅವನು ಶಿಕ್ಷೆಗೆ ಗುರಿ ಪಡಿಸಲಿಕ್ಕೂ ಬೇಕಾಗಿ. ಅವರ ಮೇಲೆ ವಿಪತ್ತಿನ ವಿಷಚಕ್ರ ವಿದೆ. ಅಲ್ಲಾಹನ ಕ್ರೋಧವೂ ಅವರ ಮೇಲಿದೆ. ಅವನು ಅವರನ್ನು ಶಪಿಸಿದ್ದಾನೆ; ಅವರಿಗೆ ನರಕವನ್ನು ಸಿದ್ಧಪಡಿಸಿಟ್ಟಿದ್ದಾನೆ. (ಅದು) ಬಲುಕೆಟ್ಟ ಗಮ್ಯಸ್ಥಾನವಾಗಿದೆ.

وَلِلّٰهِ جُنُوْدُ السَّمٰوٰتِ وَالْاَرْضِ ؕ وَكَانَ اللّٰهُ عَزِيْزًا حَكِيْمًا ﴿٧﴾

8. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಸೈನ್ಯಗಳೆಲ್ಲ ಅಲ್ಲಾಹನದೇ ಆಗಿವೆ. ಅಲ್ಲಾಹನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

اِنَّاۤ اَرْسَلْنٰكَ شَاهِدًا وَّمُبَشِّرًا وَّنَذِيْرًا ﴿٨﴾

9. ನಿಶ್ಚಯವಾಗಿಯೂ ನಾವು ನಿನ್ನನ್ನು ಸಾಕ್ಷಿಯಾಗಿಯೂ ಶುಭವಾರ್ತೆ ಅರುಹುವವನಾಗಿಯೂ ಮುನ್ನೆಚ್ಚರಿಕೆ ನೀಡುವವನಾಗಿಯೂ ಕಳುಹಿಸಿದ್ದೇವೆ.

لِّتُؤْمِنُوْا بِاللّٰهِ وَرَسُوْلِهٖ وَتُعَزِّرُوْهُ وَتُوَقِّرُوْهُ ؕ وَتُسَبِّحُوْهُ بُكْرَةً وَّاَصِيْلًا ﴿٩﴾

10. ನೀವು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ನಂಬಲಿಕ್ಕಾಗಿ ಹಾಗೂ ಆತನಿಗೆ ನೆರವಾಗಲಿಕ್ಕಾಗಿ ಮತ್ತು ಆತನನ್ನು ಗೌರವಿಸಲಿಕ್ಕಾಗಿ. ಹಾಗೆಯೇ ನೀವು ಅವನನ್ನು (ಅಲ್ಲಾಹನನ್ನು) ಬೆಳಿಗ್ಗೆ ಮತ್ತು ಸಂಜೆ ವೇಳೆಗಳಲ್ಲಿ ಪ್ರಕೀರ್ತನೆ ಮಾಡಲಿಕ್ಕಾಗಿ.

اِنَّ الَّذِيْنَ يُبَايِعُوْنَكَ اِنَّمَا يُبَايِعُوْنَ اللّٰهَ ؕ يَدُ اللّٰهِ فَوْقَ اَيْدِيْهِمْ ۚ فَمَنْ نَّكَثَ فَاِنَّمَا يَنْكُثُ عَلٰى نَفْسِهٖ ۚ وَمَنْ اَوْفٰى بِمَا عٰهَدَ عَلَيْهُ اللّٰهَ فَسَيُؤْتِيْهِ اَجْرًا عَظِيْمًا ﴿١٠﴾

11. ನಿನ್ನೊಡನೆ ನಿಷ್ಠೆಯ ಪ್ರತಿಜ್ಞೆಯನ್ನು (ಬೈಅತ್) ಮಾಡುವವರು ನಿಜವಾಗಿಯೂ ಅಲ್ಲಾಹನೊಡನೆಯೇ ನಿಷ್ಠೆಯ ಪ್ರತಿಜ್ಞೆ ಮಾಡುತ್ತಾರೆ. ಅವರ ಕೈಗಳ ಮೇಲೆ ಅಲ್ಲಾಹನ ಕೈಯಿದೆ. ಆದ್ದರಿಂದ, ಯಾರಾದರೂ (ಆ ಪ್ರತಿಜ್ಞೆಯನ್ನು) ಮುರಿದರೆ, ತನ್ನ ಹಾನಿಗಾಗಿಯೇ ಅದನ್ನು ಮುರಿಯುತ್ತಾನೆ. ಯಾರು ಅಲ್ಲಾಹನೊಡನೆ ಮಾಡಿದ ಒಪ್ಪಂದವನ್ನು ಪಾಲಿಸುತ್ತಾನೋ ಅವನಿಗೆ ಅಲ್ಲಾಹನು ಮಹತ್ವದ ಪ್ರತಿಫಲವನ್ನು ದಯಪಾಲಿಸುತ್ತಾನೆ.

سَيَقُولُ لَكَ الْمُخَلَّفُونَ مِنَ الْأَعْرَابِ
شَغَلَتْنَا أَمْوَالُنَا وَأَهْلُونَا فَاسْتَغْفِرْ لَنَا ۚ
يَقُولُونَ بِأَلْسِنَتِهِمْ مَا لَيْسَ فِي
قُلُوبِهِمْ ۚ قُلْ فَمَنْ يَمْلِكُ لَكُمْ مِنَ
اللَّهِ شَيْئًا إِنْ أَرَادَ بِكُمْ ضَرًّا أَوْ
أَرَادَ بِكُمْ نَفْعًا ۚ بَلْ كَانَ اللَّهُ بِمَا
تَعْمَلُونَ خَبِيرًا ﴿١١﴾

**12.** **ಮರಳಗಾಡು ಅರಬಿಗಳಲ್ಲಿ ಹಿಂದೆ ಉಳಿದು ಬಿಟ್ಟವರು ನಿನ್ನೊಡನೆ ಹೇಳುವರು: 'ನಮ್ಮ ಸಂಪತ್ತು ಮತ್ತು ನಮ್ಮ ಕುಟುಂಬಗಳು ನಮ್ಮನ್ನು ಬಿಡುವು ರಹಿತ ಕಾರ್ಯನಿರತರನ್ನಾಗಿ ಮಾಡಿದವು. ಆದ್ದರಿಂದ ನೀವು ನಮ್ಮ ಕ್ಷಮಾಪಣೆಗಾಗಿ ಪ್ರಾರ್ಥಿಸಬೇಕು.' ತಮ್ಮ ಹೃದಯಗಳಲ್ಲಿ ಇಲ್ಲದ ವಿಚಾರವನ್ನು ಅವರು ತಮ್ಮ ನಾಲಗೆಯಿಂದ ಹೇಳುತ್ತಾರೆ. ಹೇಳು: 'ಅಲ್ಲಾಹನು ನಿಮಗೆ ಏನಾದರೂ ಕೆಡುಕನ್ನು ಉದ್ದೇಶಿಸಿದರೆ ಅಥವಾ ಏನಾದರೂ ಒಳಿತನ್ನು ಉದ್ದೇಶಿಸಿದರೆ ಅವನ ವಿರುದ್ಧ ವಾಗಿ ವರ್ತಿಸಲು ಯಾರಿಗೆ ತಾನೆ ಸಾಧ್ಯ? ಆದರೆ ನಿಮ್ಮ ಕೃತ್ಯಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.**

بَلْ ظَنَنْتُمْ أَنْ لَنْ يَنْقَلِبَ الرَّسُولُ
وَالْمُؤْمِنُونَ إِلَىٰ أَهْلِيهِمْ أَبَدًا وَزُيِّنَ
ذَٰلِكَ فِي قُلُوبِكُمْ وَظَنَنْتُمْ ظَنَّ
السَّوْءِ وَكُنْتُمْ قَوْمًا بُورًا ﴿١٢﴾

**13.** **'ಪ್ರವಾದಿ ಮತ್ತು ಸತ್ಯವಿಶ್ವಾಸಿಗಳು ತಮ್ಮ ಕುಟುಂಬಗಳ ಬಳಿಗೆ ಎಂದಿಗೂ ಹಿಂತಿರುಗಿ ಬರಲಾರ ರೆಂದು ನೀವು ಭಾವಿಸಿದಿರಿ. ಅದು** (ಆ ಭಾವನೆ) **ನಿಮ್ಮ ಹೃದಯಗಳನ್ನು ಆಕರ್ಷಿಸಿತು. ನೀವು ಅತಿ ಕೆಟ್ಟದಾಗಿ ಯೋಚಿಸುತ್ತಿದ್ದಿರಿ. ನೀವು ನಾಶಕ್ಕೀಡಾಗುವ ಜನರಾಗಿ ದ್ದೀರಿ.'**

وَمَنْ لَمْ يُؤْمِنْ بِاللَّهِ وَرَسُولِهِ فَإِنَّا
أَعْتَدْنَا لِلْكَافِرِينَ سَعِيرًا ﴿١٣﴾

**14.** **ಯಾರು ಅಲ್ಲಾಹನನ್ನೂ ಅವನ ಸಂದೇಶ ವಾಹಕನನ್ನೂ ನಂಬುವುದಿಲ್ಲವೋ, ನಾವು ನಿಶ್ಚಯ ವಾಗಿಯೂ ಅವಿಶ್ವಾಸಿಗಳಿಗೆ ಪ್ರಜ್ವಲಿಸುವ ಅಗ್ನಿಯನ್ನು ಸಿದ್ಧಗೊಳಿಸಿಟ್ಟಿದ್ದೇವೆ** (ಎಂದು ತಿಳಿದುಕೊಳ್ಳಲಿ).

وَلِلَّهِ مُلْكُ السَّمَاوَاتِ وَالْأَرْضِ ۚ يَغْفِرُ
لِمَنْ يَشَاءُ وَيُعَذِّبُ مَنْ يَشَاءُ ۚ وَ
كَانَ اللَّهُ غَفُورًا رَحِيمًا ﴿١٤﴾

**15.** **ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅಲ್ಲಾಹನಿಗೆ ಸೇರಿದೆ. ತಾನಿಚ್ಛಿಸುವವರಿಗೆ ಅವನು ಕ್ಷಮೆ ನೀಡುತ್ತಾನೆ; ತಾನಿಚ್ಛಿಸುವವರಿಗೆ ಅವನು ಶಿಕ್ಷೆಯನ್ನೂ ಕೊಡುತ್ತಾನೆ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.**

سَيَقُولُ الْمُخَلَّفُونَ إِذَا انْطَلَقْتُمْ إِلَىٰ
مَغَانِمَ لِتَأْخُذُوهَا ذَرُونَا نَتَّبِعْكُمْ ۖ
يُرِيدُونَ أَنْ يُبَدِّلُوا كَلَامَ اللَّهِ ۚ قُلْ

**16.** **ಯುದ್ಧದಲ್ಲಿ ಗಳಿಸಲಾದ ಸಂಪತ್ತಿನಲ್ಲಿ ಪಾಲು ಪಡೆಯಲು ನೀವು ಹೋಗುವಾಗ,** (ಯುದ್ಧಕ್ಕೆ ಹೋಗದೆ) **ಹಿಂದೆ ಉಳಿದು ಬಿಟ್ಟವರು, 'ನಿಮ್ಮನ್ನು ಹಿಂಬಾಲಿಸಲು ನಮ್ಮನ್ನು ಬಿಡಿರಿ' ಎಂದು ಹೇಳುವರು. ಅಲ್ಲಾಹನ**





لَنْ تَتَّبِعُونَا كَذَٰلِكُمْ قَالَ اللَّهُ مِنْ
قَبْلُ ۖ فَسَيَقُولُونَ بَلْ تَحْسُدُونَنَا ۚ بَلْ
كَانُوا لَا يَفْقَهُونَ إِلَّا قَلِيلًا ﴿١٥﴾

**ತೀರ್ಮಾನವನ್ನು ಬದಲಾಯಿಸಲು ಅವರು ಬಯಸುತ್ತಾರೆ. ಹೇಳು: 'ನೀವು ನಮ್ಮನ್ನೆಂದೂ ಹಿಂಬಾಲಿಸಲಾರಿರಿ. ಅಲ್ಲಾಹನು ಮುಂಚೆಯೇ ಹಾಗೆ ಹೇಳಿದ್ದಾನೆ.' ಆಗ ಅವರು ಹೇಳುವರು: 'ಹಾಗಲ್ಲ, ನೀವು ನಮ್ಮ ಬಗ್ಗೆ ಮತ್ಸರ ಪಡುತ್ತೀರಿ.' ಆದರೆ ವಾಸ್ತವವೇನೆಂದರೆ ಅವರು ಏನನ್ನೂ ಮನವರಿಕೆ ಮಾಡುವುದಿಲ್ಲ.**

قُلْ لِلْمُخَلَّفِينَ مِنَ الْأَعْرَابِ سَتُدْعَوْنَ
إِلَىٰ قَوْمٍ أُولِي بَأْسٍ شَدِيدٍ تُقَاتِلُونَهُمْ أَوْ
يُسْلِمُونَ ۖ فَإِنْ تُطِيعُوا يُؤْتِكُمُ اللَّهُ
أَجْرًا حَسَنًا ۖ وَإِنْ تَتَوَلَّوْا كَمَا
تَوَلَّيْتُمْ مِنْ قَبْلُ يُعَذِّبْكُمْ عَذَابًا
أَلِيمًا ﴿١٦﴾

**17.** **ಮರಳಗಾಡು ಅರಬಿಗಳ ಪೈಕಿ ಹಿಂದೆ ಉಳಿದು ಬಿಟ್ಟವರೊಡನೆ ಹೇಳು: 'ಮಹಾ ಪರಾಕ್ರಮ ಶಾಲಿಗಳಾದ ಒಂದು ಜನಾಂಗದವರ ವಿರುದ್ಧ ಹೋರಾ ಡಲು ನಿಮ್ಮನ್ನು ಕರೆಯಲಾಗುವುದು. ಅವರು ಶರಣಾಗತ ರಾಗುವ ವರೆಗೆ ನೀವು ಅವರೊಡನೆ ಹೋರಾಡಬೇಕಾಗಿದೆ. ನೀವು** (ಆಜ್ಞೆಯನ್ನು) **ಅನುಸರಿಸಿದರೆ ಅಲ್ಲಾಹನು ನಿಮಗೆ ಉತ್ತಮ ಪ್ರತಿಫಲ ನೀಡುವನು. ಆದರೆ ನೀವು ಮುಂಚೆ ಬೆನ್ನು ತಿರುಗಿಸಿದಂತೆ ಬೆನ್ನು ತಿರುಗಿಸಿದರೆ ಅವನು ನಿಮ್ಮನ್ನು ಯಾತನಾಮಯವಾದ ಶಿಕ್ಷೆಗೆ ಗುರಿಪಡಿಸುವನು.'**

لَيْسَ عَلَى الْأَعْمَىٰ حَرَجٌ وَلَا عَلَى
الْأَعْرَجِ حَرَجٌ وَلَا عَلَى الْمَرِيضِ حَرَجٌ ۗ
وَمَنْ يُطِعِ اللَّهَ وَرَسُولَهُ يُدْخِلْهُ
جَنَّاتٍ تَجْرِي مِنْ تَحْتِهَا الْأَنْهَارُ ۖ وَ
مَنْ يَتَوَلَّ يُعَذِّبْهُ عَذَابًا أَلِيمًا ﴿١٧﴾

**18.** (ಆದರೆ ಯುದ್ಧಕ್ಕೆ ಹೋಗದಿದ್ದರೆ) **ಕುರುಡನ ಮೇಲೆ ದೋಷವಿಲ್ಲ; ಕುಂಟನ ಮೇಲೆ ದೋಷವಿಲ್ಲ; ರೋಗಿಯ ಮೇಲೂ ದೋಷವಿಲ್ಲ. ಆದರೆ ಯಾವ ನಾದರೂ ಅಲ್ಲಾಹನನ್ನೂ ಅವನ ಪ್ರವಾದಿಯನ್ನೂ ಅನು ಸರಿಸಿದರೆ, ಕೆಳಬದಿಯಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀ ಯ ತೋಟಗಳಲ್ಲಿ ಆತನಿಗೆ ಅವನು** (ಅಲ್ಲಾಹನು) **ಪ್ರವೇಶನೀಡುವನು. ಆದರೆ ಯಾರಾದರೂ ಬೆನ್ನು ತಿರುಗಿಸಿ ಹೋದರೆ ಅವನು ಅಂತಹವನಿಗೆ ಯಾತನಾಮಯವಾದ ಶಿಕ್ಷೆ ನೀಡುವನು.**

لَقَدْ رَضِيَ اللَّهُ عَنِ الْمُؤْمِنِينَ إِذْ
يُبَايِعُونَكَ تَحْتَ الشَّجَرَةِ فَعَلِمَ
مَا فِي قُلُوبِهِمْ فَأَنْزَلَ السَّكِينَةَ

**19.** **ಆ ವೃಕ್ಷದ ಕೆಳಗೆ ಸತ್ಯವಿಶ್ವಾಸಿಗಳು ನಿನ್ನೊ ಡನೆ ನಿಷ್ಠೆಯ ಪ್ರತಿಜ್ಞೆ ಮಾಡಿದಾಗ**[425] **ಅಲ್ಲಾಹನು ಅವರ ಬಗ್ಗೆ ಸಂಪ್ರೀತನಾಗಿದ್ದನು. ಅವರ ಹೃದಯಾಂತರಾಳದಲ್ಲಿ ಏನು ಇತ್ತೆಂದು ಅವನಿಗೆ ತಿಳಿದಿತ್ತು. ಹಾಗೆ ಅವನು ಅವರಿಗೆ ಮನಶ್ಶಾಂತಿ ಪ್ರದಾನ ಮಾಡಿದನು. ಶೀಘ್ರದಲ್ಲೇ ಒಂದು**

425. ಹುದೈಬಿಯಾ ಎಂಬಲ್ಲಿ ಮಾಡಿದ ಬೈಅತ್.

**ವಿಜಯವನ್ನೂ ಅವರಿಗೆ ಪ್ರತಿಫಲವಾಗಿ ನೀಡಿದನು.**[426]

عَلَيْهِمْ وَ اٰثَابَهُمْ فَتْحًا قَرِيْبًا ﴿١٩﴾

**20.** (ಯುದ್ಧದ ಸಂದರ್ಭದಲ್ಲಿ ಶತ್ರುಗಳಿಂದ) **ಅವರು ವಶಪಡಿಸಿಕೊಳ್ಳುವ ಧಾರಾಳ ಸಂಪತ್ತನ್ನೂ** (ಅವನು ಅವರಿಗೆ ನೀಡಿದನು). **ಅಲ್ಲಾಹನು ಪ್ರತಾಪ ವಂತನೂ ವಿವೇಕಶಾಲಿಯೂ ಆಗಿದ್ದಾನೆ.**

وَّمَغَانِمَ كَثِيْرَةً يَّاْخُذُوْنَهَا ؕ وَ
كَانَ اللّٰهُ عَزِيْزًا حَكِيْمًا ﴿٢٠﴾

**21. ನೀವು ಗಳಿಸಲಿರುವ ವಿಪುಲವಾದ ಸಮರಾರ್ಜಿತ ಸಂಪತ್ತನ್ನು ಅಲ್ಲಾಹನು ನಿಮಗೆ ವಾಗ್ದಾನ ಮಾಡಿದ್ದಾನೆ. ಹಾಗೆ ಇದನ್ನು ಅವನು ನಿಮಗೆ ಮುಂಚಿತವಾಗಿಯೇ ನೀಡಿ**[427] **ಜನರ ಕೈಗಳನ್ನು ನಿಮ್ಮಿಂದ ಅವನು ತಡೆದಿಟ್ಟಿರುವನು.**[428] **ಇದು ಸತ್ಯವಿಶ್ವಾಸಿಗಳಿಗೆ ಒಂದು ದೃಷ್ಟಾಂತವಾಗಲಿಕ್ಕೆ ಹಾಗೂ ನಿಮ್ಮನ್ನು ಸತ್ಪಥದಲ್ಲಿ ನಡೆಸಲಿಕ್ಕೆ ಆಗಿದೆ.**

وَعَدَكُمُ اللّٰهُ مَغَانِمَ كَثِيْرَةً
تَاْخُذُوْنَهَا فَعَجَّلَ لَكُمْ هٰذِهٖ وَ
كَفَّ اَيْدِيَ النَّاسِ عَنْكُمْ ۚ وَلِتَكُوْنَ اٰيَةً
لِّلْمُؤْمِنِيْنَ وَ يَهْدِيَكُمْ صِرَاطًا
مُّسْتَقِيْمًا ﴿٢١﴾

**22. ನಿಮಗೆ ಇಷ್ಟರ ತನಕ ಸಾಧಿಸಲಾಗದ ಮತ್ತೊಂದು ವಿಜಯವನ್ನೂ** (ಅವನು ನಿಮಗೆ ವಾಗ್ದಾನ ಮಾಡಿದ್ದಾನೆ.)[429] **ಅಲ್ಲಾಹನು ಅದನ್ನು ತೀರ್ಮಾನಿಸಿ ಬಿಟ್ಟಿದ್ದಾನೆ. ಅಲ್ಲಾಹನು** (ತಾನು ಉದ್ದೇಶಿಸುವ) **ಎಲ್ಲ ವಿಚಾರಗಳಲ್ಲಿ ಸರ್ವಸಾಮರ್ಥ್ಯವುಳ್ಳವನಾಗಿದ್ದಾನೆ.**

وَّاُخْرٰى لَمْ تَقْدِرُوْا عَلَيْهَا قَدْ اَحَاطَ
اللّٰهُ بِهَا ؕ وَكَانَ اللّٰهُ عَلٰى كُلِّ شَيْءٍ
قَدِيْرًا ﴿٢٢﴾

**23. ಅವಿಶ್ವಾಸಿಗಳು ನಿಮ್ಮೊಡನೆ ಯುದ್ಧ ಮಾಡಿರುತ್ತಿದ್ದರೆ ಅವರು ಬೆನ್ನು ತಿರುಗಿಸಿ ಓಡಿ ಹೋಗುತ್ತಿದ್ದರು.**[430] **ಆ ಬಳಿಕ ಅವರು ರಕ್ಷಕನಾಗಿ ಅಥವಾ ಸಹಾಯನಾಗಿ ಯಾರನ್ನೂ ಕಾಣಲಾರರು.**

وَلَوْ قٰتَلَكُمُ الَّذِيْنَ كَفَرُوْا لَوَلَّوُا
الْاَدْبَارَ ثُمَّ لَا يَجِدُوْنَ وَلِيًّا وَّ لَا
نَصِيْرًا ﴿٢٣﴾

**24. ಇದು ಮೊದಲೇ ರೂಢಿಯಲ್ಲಿದ್ದ ಅಲ್ಲಾ ಹನ ಕ್ರಮವಾಗಿದೆ. ಅಲ್ಲಾಹನ ರೂಢಮೂಲ ಕ್ರಮದಲ್ಲಿ ಎಂದಿಗೂ ನೀನು ಯಾವುದೇ ಬದಲಾವಣೆಯನ್ನು ಕಾಣಲಾರೆ.**

سُنَّةَ اللّٰهِ الَّتِيْ قَدْ خَلَتْ مِنْ قَبْلُ ۚ وَ
لَنْ تَجِدَ لِسُنَّةِ اللّٰهِ تَبْدِيْلًا ﴿٢٤﴾

426. ಖೈಬರ್ ವಿಜಯ.
427. ಖೈಬರ್‌ನ ಸಂಪತ್ತು.
428 ಹುದೈಬಿಯಾದ ಕುರಿತು ಪ್ರಸ್ತಾಪ.
429 ಖೈಬರ್ ವಿಜಯದ ಬಳಿಕ ಸಿದ್ಧಿಸಲಿದ್ದ ಮತ್ತೊಂದು ಮಹತ್ತರ ವಿಜಯದ ಬಗ್ಗೆ ಸೂಚನೆ.
430. ಹುದೈಬಿಯಾ ಸಂಧಾನದ ಬಗ್ಗೆ ಇಲ್ಲಿ ಸೂಚಿಸಲಾಗಿದೆ.





**25. ನಿಮಗೆ ಅವರ ಮೇಲೆ** (ಶತ್ರುಗಳ ಮೇಲೆ) **ವಿಜಯವನ್ನು ನೀಡಿದ ಬಳಿಕ ಮಕ್ಕ ಕಣಿವೆಯಲ್ಲಿ ಅವರ ಕೈಗಳನ್ನು ನಿಮ್ಮಿಂದಲೂ ನಿಮ್ಮ ಕೈಗಳನ್ನು ಅವರಿಂದಲೂ ತಡೆದಿಟ್ಟವನು ಅವನೇ** (ಅಲ್ಲಾಹನೇ) **ಆಗಿದ್ದಾನೆ. ನಿಮ್ಮ ಕೃತ್ಯಗಳನ್ನೆಲ್ಲ ಅಲ್ಲಾಹನು ಕಾಣುತ್ತಾನೆ.**

وَ هُوَ الَّذِيْ كَفَّ اَيْدِيَهُمْ عَنْكُمْ وَ
اَيْدِيَكُمْ عَنْهُمْ بِبَطْنِ مَكَّةَ مِنْ بَعْدِ اَنْ
اَظْفَرَكُمْ عَلَيْهِمْ ؕ وَ كَانَ اللّٰهُ بِمَا
تَعْمَلُوْنَ بَصِيْرًا ﴿٢٥﴾

**26. ಅವರೇ ಅವಿಶ್ವಾಸಿಗಳೂ ಪವಿತ್ರ ಮಸೀದಿಯಿಂದ ನಿಮ್ಮನ್ನು ತಡೆದವರೂ ಬಲಿಯರ್ಪಿಸುವ ಮೃಗಗಳು ಬಲಿಸ್ಥಳಕ್ಕೆ ತಲಪದಂತೆ ಅಡ್ಡಿಪಡಿಸಿದವರೂ. ನಿಮಗೆ ತಿಳಿಯದ ವಿಶ್ವಾಸಿಗಳಾದ ಕೆಲವು ಪುರುಷರೂ ಸ್ತ್ರೀಯರೂ** (ಮಕ್ಕದಲ್ಲಿ) **ಇಲ್ಲದಿರುತ್ತಿದ್ದರೆ - ಅಂದರೆ, ನಿಮಗೆ ತಿಳಿಯದೆ ಅವರನ್ನು ನೀವು ತುಳಿದುಬಿಟ್ಟು, ಅವರ ಕಾರಣದಿಂದ ನಿಮಗೆ ದೋಷವುಂಟಾಗುವ ಅಪಾಯ ಇಲ್ಲದಿರುತ್ತಿದ್ದರೆ** ಅವನು ನಿಮಗೆ ಯುದ್ಧ ಮಾಡುವ ಅನುಮತಿ ನೀಡುತ್ತಿದ್ದನು. (ಆದರೆ ಅವನು ಹಾಗೆ ಮಾಡಲಿಲ್ಲ.) **ಇದು ಅಲ್ಲಾಹನು ತಾನಿಚ್ಛಿಸುವವರನ್ನು ತನ್ನ ಕೃಪೆಯೊಳಗೆ ಸೇರಿಸಿಕೊಳ್ಳಲಿಕ್ಕಾಗಿದೆ. ಅವರು** (ಆ ವಿಶ್ವಾಸಿಗಳೂ ವಿಶ್ವಾಸಿನಿಯರೂ ಅವಿಶ್ವಾಸಿಗಳಿಂದ) **ಬೇರ್ಪಟ್ಟಿದ್ದರೆ ಅವರಲ್ಲಿ ಅವಿಶ್ವಾಸಿಗಳನ್ನು ನಾವು ಯಾತನಾಮಯವಾದ ಶಿಕ್ಷೆಗೆ ಗುರಿಪಡಿಸುತ್ತಿದ್ದೆವು.**

هُمُ الَّذِيْنَ كَفَرُوْا وَ صَدُّوْكُمْ عَنِ
الْمَسْجِدِ الْحَرَامِ وَالْهَدْيَ مَعْكُوْفًا
اَنْ يَّبْلُغَ مَحِلَّهٗ ؕ وَ لَوْ لَا رِجَالٌ
مُّؤْمِنُوْنَ وَ نِسَآءٌ مُّؤْمِنٰتٌ لَّمْ
تَعْلَمُوْهُمْ اَنْ تَطَـُٔوْهُمْ فَتُصِيْبَكُمْ
مِّنْهُمْ مَّعَرَّةٌ ۢ بِغَيْرِ عِلْمٍ ۚ لِيُدْخِلَ
اللّٰهُ فِيْ رَحْمَتِهٖ مَنْ يَّشَآءُ ۚ لَوْ تَزَيَّلُوْا
لَعَذَّبْنَا الَّذِيْنَ كَفَرُوْا مِنْهُمْ عَذَابًا
اَلِيْمًا ﴿٢٦﴾

**27. ಅವಿಶ್ವಾಸಿಗಳು ತಮ್ಮ ಹೃದಯಗಳಲ್ಲಿ ದ್ವೇಷವನ್ನು-ಅಜ್ಞಾನ ಕಾಲದ ದ್ವೇಷವನ್ನು- ಹೊಂದಿದ್ದಾಗ, ಅಲ್ಲಾಹನು ತನ್ನ ಸಂದೇಶವಾಹಕನಿಗೂ ಸತ್ಯ ವಿಶ್ವಾಸಿಗಳಿಗೂ ತನ್ನ ಕಡೆಯಿಂದ ಮನಶ್ಶಾಂತಿಯನ್ನು ದಯಪಾಲಿಸಿದನು. ಹಾಗೂ ಧರ್ಮಶೀಲತೆಯ ವಚನಕ್ಕೆ ಅವರನ್ನು ಬದ್ಧರನ್ನಾಗಿ ಮಾಡಿದನು. ಅವರು ಅದರ ಹಕ್ಕುದಾರರೂ ಅದಕ್ಕೆ ಅರ್ಹರೂ ಆಗಿದ್ದರು. ಅಲ್ಲಾಹನು ಎಲ್ಲ ವಿಚಾರಗಳನ್ನು ಪೂರ್ಣವಾಗಿ ಬಲ್ಲವನಾಗಿದ್ದಾನೆ.**

اِذْ جَعَلَ الَّذِيْنَ كَفَرُوْا فِيْ قُلُوْبِهِمُ
الْحَمِيَّةَ حَمِيَّةَ الْجَاهِلِيَّةِ فَاَنْزَلَ
اللّٰهُ سَكِيْنَتَهٗ عَلٰى رَسُوْلِهٖ وَ عَلَى
الْمُؤْمِنِيْنَ وَاَلْزَمَهُمْ كَلِمَةَ التَّقْوٰى
وَكَانُوْا اَحَقَّ بِهَا وَاَهْلَهَا ؕ وَ كَانَ
اللّٰهُ بِكُلِّ شَيْءٍ عَلِيْمًا ﴿٢٧﴾ ع

**28. ಅಲ್ಲಾಹನಿಚ್ಛಿಸಿದರೆ ಖಂಡಿತವಾಗಿಯೂ ನೀವು ಶಾಂತಚಿತ್ತರಾಗಿಯೂ ತಲೆಮುಂಡನ ಮಾಡಿದ ಅಥವಾ ತಲೆಗೂದಲು ಕತ್ತರಿಸಿದ ಸ್ಥಿತಿಯಲ್ಲಿಯೂ ಪವಿತ್ರ**

لَقَدْ صَدَقَ اللّٰهُ رَسُوْلَهُ الرُّءْيَا بِالْحَقِّ ۚ
لَتَدْخُلُنَّ الْمَسْجِدَ الْحَرَامَ اِنْ شَآءَ

**ಮಸೀದಿಯನ್ನು ನಿರ್ಭಯವಾಗಿ ಪ್ರವೇಶಿಸುವಿರಿ ಎಂಬ ಆ ಸ್ವಪ್ನವನ್ನು ಅಲ್ಲಾಹನು ತನ್ನ ಸಂದೇಶವಾಹಕನಿಗೆ ಯಥಾ ಪ್ರಕಾರ ಈಡೇರಿಸಿಕೊಟ್ಟಿರುವನು. ನೀವು ತಿಳಿಯದಿದ್ದುದನ್ನು ಅವನು ತಿಳಿದಿರುವನು. ಹಾಗೆ ಅವನು ಅದಲ್ಲದೆ ಶೀಘ್ರದಲ್ಲೇ ಮತ್ತೊಂದು ವಿಜಯವನ್ನು ಸಹ ನಿಮಗೆ ಪ್ರದಾನ ಮಾಡಿದನು.**

اللّٰهُ اٰمِنِيْنَ ۙ مُحَلِّقِيْنَ رُءُوْسَكُمْ وَ مُقَصِّرِيْنَ ۙ لَا تَخَافُوْنَ ؕ فَعَلِمَ مَا لَمْ تَعْلَمُوْا فَجَعَلَ مِنْ دُوْنِ ذٰلِكَ فَتْحًا قَرِيْبًا ﴿۲۸﴾

**29. ಮಾರ್ಗದರ್ಶನ ಮತ್ತು ಸತ್ಯಧರ್ಮದೊಂದಿಗೆ - ಪ್ರತಿಯೊಂದು ಧರ್ಮದ ಮೇಲೆ ವಿಜಯ ಸಾಧಿಸಲು - ತನ್ನ ಸಂದೇಶವಾಹಕನನ್ನು ಕಳುಹಿಸಿದವನು ಅವನೇ** (ಅಲ್ಲಾಹನೇ) **ಆಗಿದ್ದಾನೆ. ಸಾಕ್ಷಿಯಾಗಿ ಅಲ್ಲಾಹನು ಸಾಕು.**

هُوَ الَّذِيْۤ اَرْسَلَ رَسُوْلَهٗ بِالْهُدٰى وَ دِيْنِ الْحَقِّ لِيُظْهِرَهٗ عَلَى الدِّيْنِ كُلِّهٖ ؕ وَ كَفٰى بِاللّٰهِ شَهِيْدًا ﴿۲۹﴾

**30. ಮುಹಮ್ಮದ್ ಅಲ್ಲಾಹನ ಸಂದೇಶವಾಹಕ. ಅವರೊಂದಿಗಿರುವವರು ಅವಿಶ್ವಾಸಿಗಳ ವಿರುದ್ಧ ಕಠಿಣರೂ ಪರಸ್ಪರ ದಯಾರ್ದ್ರರೂ ಆಗಿದ್ದಾರೆ. ನಮನ ಮಾಡುವವರಾಗಿಯೂ ಸಾಷ್ಟಾಂಗವೆರಗುವವರಾಗಿಯೂ ನೀನು ಅವರನ್ನು ಕಾಣುವೆ. ಅವರು ಅಲ್ಲಾಹನ ಅನುಗ್ರಹವನ್ನೂ ಪ್ರೀತಿಯನ್ನೂ ಬೇಡುತ್ತಾರೆ. ಸಾಷ್ಟಾಂಗ ಪ್ರಣಾಮದ ಪರಿಣಾಮವಾಗಿ ಅವರ ಮುಖಗಳಲ್ಲಿ ಅವರ ಲಕ್ಷಣಗಳಿವೆ. ಇದು ತೌರಾತಿನಲ್ಲಿ ಅವರ ಬಗೆಗಿನ ವರ್ಣನೆಯಾಗಿದೆ. ಇಂಜೀಲ್‌ನಲ್ಲಿ ಅವರ ಕುರಿತು ಒಂದು ಗದ್ದೆಗೆ ಹೋಲಿಸಿ ವರ್ಣಿಸಲಾಗಿದೆ. ಅದರಲ್ಲಿ ಬೀಜ ಮೊಳಕೆಯೊಡೆದು ಬರುತ್ತದೆ. ಅನಂತರ ಅದು ಬಲಗೊಳ್ಳುತ್ತದೆ. ಅನಂತರ ಅದು ಕೊಬ್ಬಿ ಅದರ ಕಾಂಡದ ಮೇಲೆ ಭದ್ರಗೊಂಡು ಕೃಷಿಕರಿಗೆ ಸಂತೋಷವನ್ನು ನೀಡುತ್ತದೆ.** (ಸತ್ಯವಿಶ್ವಾಸಿಗಳು ಅಭಿವೃದ್ಧಿಗೊಂಡು ಈ ಸ್ಥಿತಿಯನ್ನು ಪಡೆದರೆ) **ಅದರ ಪರಿಣಾಮವಾಗಿ ಅವರ ನಿಮಿತ್ತ ಅವಿಶ್ವಾಸಿಗಳಿಗೆ ಅವನು** (ಅಲ್ಲಾಹನು) **ಕೋಪ**

مُحَمَّدٌ رَّسُوْلُ اللّٰهِ ؕ وَ الَّذِيْنَ مَعَهٗۤ اَشِدَّآءُ عَلَى الْكُفَّارِ رُحَمَآءُ بَيْنَهُمْ تَرٰىهُمْ رُكَّعًا سُجَّدًا يَّبْتَغُوْنَ فَضْلًا مِّنَ اللّٰهِ وَ رِضْوَانًا ؗ سِيْمَاهُمْ فِيْ وُجُوْهِهِمْ مِّنْ اَثَرِ السُّجُوْدِ ؕ ذٰلِكَ مَثَلُهُمْ فِي التَّوْرٰىةِ ۚۖۛ وَ مَثَلُهُمْ فِي الْاِنْجِيْلِ ۚ۟ۛ كَزَرْعٍ اَخْرَجَ شَطْــَٔهٗ فَاٰزَرَهٗ فَاسْتَغْلَظَ فَاسْتَوٰى عَلٰى سُوْقِهٖ يُعْجِبُ الزُّرَّاعَ لِيَغِيْظَ بِهِمُ الْكُفَّارَ ؕ





**ಹುಟ್ಟಿಸುತ್ತಾನೆ.[430A] ಅವರಲ್ಲಿ ಸತ್ಯವಿಶ್ವಾಸಿಗಳಾಗಿದ್ದು ಸತ್ಕರ್ಮನಿರತರಿಗೆ ಅಲ್ಲಾಹನು ಪಾಪ ವಿಮುಕ್ತಿಯನ್ನೂ ಮಹತ್ವದ ಪ್ರತಿಫಲವನ್ನೂ ವಾಗ್ದಾನ ಮಾಡಿದ್ದಾನೆ.**

وَعَدَ اللّٰهُ الَّذِيْنَ اٰمَنُوْا وَ عَمِلُوا الصّٰلِحٰتِ مِنْهُمْ مَّغْفِرَةً وَّ اَجْرًا عَظِيْمًا ﴿۳۰﴾

430A. ಈ ವಚನದಲ್ಲಿ ಮುಸ್ಲಿಂ ಸಮುದಾಯದ ಎರಡು ಘಟ್ಟಗಳ ಎರಡು ವಿಧ ಬೆಳವಣಿಗೆಯ ಬಗ್ಗೆ ವಿವರಿಸಲಾಗಿದೆ. ತೌರಾತಿನ ವಿವರಣೆ ಪ್ರಕಾರದ ಅದರ ಪ್ರಥಮ ಘಟ್ಟದ ಅಭಿವೃದ್ಧಿ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮತ್ತು ಅವರ ಶಿಷ್ಯಂದಿರ ಕಾಲದಲ್ಲಿ ಆರಂಭಿಸಿತು.
ಇಂಜೀಲಿನ ವಿವರಣೆ ಪ್ರಕಾರದ ಅದರ ಎರಡನೆ ಘಟ್ಟದ ಪ್ರಗತಿ ಪ್ರವಾದಿ ಈಸಾ (ಅಲೈಹಿಸ್ಸಲಾಂ)ರಿಗೆ ಸದೃಶರಾದ, ಈ ಸಮುದಾಯಕ್ಕೆ ವಾಗ್ದಾನ ನೀಡಲ್ಪಟ್ಟ ಮಹ್‌ದೀ ಮಸೀಹ್ (ಅಲೈಹಿಸ್ಸಲಾಂ) ಮೂಲಕ ಮತ್ತು ಅವರ ಸಂಘಟನೆಯಾದ ಅಹ್ಮದಿಯಾ ಜಮಾಅತ್ ಮೂಲಕ ಪ್ರಾರಂಭವಾಯಿತು. ಈ ವಚನದಲ್ಲಿ ಹೇಳಿದ ಪ್ರಕಾರವೇ ಕ್ರಮೇಣವಾಗಿ ಅದು ಬೆಳೆದು ಬಲಯುತವಾಗಿದೆ. ಈಗ ಶತ್ರುಗಳಿಗೆ ಕಿತ್ತೆಸೆಯಲು ಅಸಾಧ್ಯವಾದ ರೀತಿಯಲ್ಲಿ ಅದು ಬಲಿಷ್ಠವಾದ ವೃಕ್ಷವಾಗಿ ಬಿಟ್ಟಿದೆ. ಅದರ ಬೆಳವಣಿಗೆಯನ್ನು ಕಂಡು ಅಸೂಯೆಗೊಂಡ ವೈರಿಗಳು ಅದನ್ನು ನಾಶಪಡಿಸಲಿಕ್ಕಾಗಿ ತಮ್ಮ ಶಕ್ತಿಯನ್ನೆಲ್ಲ ಪ್ರಯೋಗಿಸುತ್ತಾರೆ.

سُورَةُ الْحُجُرَاتِ مَدَنِيَّةٌ وَّهِيَ مَعَ الْبَسْمَلَةِ تِسْعَ عَشَرَةَ اٰيَةً وَّرُكُوْعَانِ

# 49. ಅಲ್ ಹುಜುರಾತ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 19 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

**2.** ಎಲೈ ವಿಶ್ವಾಸಿಗಳೇ, ನೀವು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ಮೀರಿ ಮುನ್ನಡೆಯಬೇಡಿರಿ. ಅಲ್ಲಾಹನಿಗೆ ಭಯಭಕ್ತಿ ತೋರಿಸಿರಿ. ದಿಟವಾಗಿಯೂ ಅಲ್ಲಾಹನು ಎಲ್ಲವನ್ನು ಆಲಿಸುವವನೂ ಸರ್ವಜ್ಞನೂ ಆಗಿದ್ದಾನೆ.

يٰٓاَيُّهَا الَّذِيْنَ اٰمَنُوْا لَا تُقَدِّمُوْا بَيْنَ
يَدَيِ اللّٰهِ وَرَسُوْلِهٖ وَاتَّقُوا اللّٰهَ ؕ اِنَّ
اللّٰهَ سَمِيْعٌ عَلِيْمٌ ②

**3.** ಎಲೈ ವಿಶ್ವಾಸಿಗಳೇ, ಪ್ರವಾದಿಯ ಧ್ವನಿಗಿಂತ ಉಚ್ಚವಾಗಿ ನಿಮ್ಮ ಧ್ವನಿಯನ್ನು ಎತ್ತಬೇಡಿರಿ. ನೀವು ಪರಸ್ಪರ ಉಚ್ಚ ಸ್ವರದಲ್ಲಿ ಮಾತನಾಡುವಂತೆ ಅವರೊಂದಿಗೆ (ಪ್ರವಾದಿಯೊಂದಿಗೆ) ನೀವು ಏರುಧ್ವನಿಯಲ್ಲಿ ಮಾತನಾಡಬಾರದು - ನಿಮಗೆ ಗ್ರಾಹ್ಯವಾಗದೆಯೇ ನಿಮ್ಮ ಕರ್ಮಗಳೆಲ್ಲ ವ್ಯರ್ಥವಾಗದಿರಲಿಕ್ಕಾಗಿ.

يٰٓاَيُّهَا الَّذِيْنَ اٰمَنُوْا لَا تَرْفَعُوْٓا
اَصْوَاتَكُمْ فَوْقَ صَوْتِ النَّبِيِّ وَلَا
تَجْهَرُوْا لَهٗ بِالْقَوْلِ كَجَهْرِ بَعْضِكُمْ
لِبَعْضٍ اَنْ تَحْبَطَ اَعْمَالُكُمْ وَاَنْتُمْ
لَا تَشْعُرُوْنَ ③

**4.** ಅಲ್ಲಾಹನ ಪ್ರವಾದಿಯ ಮುಂದೆ ಯಾರು ಸ್ವರವನ್ನು ತಗ್ಗಿಸುತ್ತಾರೋ, ಅವರ ಹೃದಯಗಳನ್ನು ಭಯಭಕ್ತಿಗೋಸ್ಕರ ಅಲ್ಲಾಹನು ಪರೀಕ್ಷಿಸಿಗೊಳಪಡಿಸಿರುತ್ತಾನೆ. ಅವರಿಗೆ ಪಾಪವಿಮುಕ್ತಿ ಹಾಗೂ ಮಹತ್ವದ ಪ್ರತಿಫಲವಿದೆ.

اِنَّ الَّذِيْنَ يَغُضُّوْنَ اَصْوَاتَهُمْ عِنْدَ رَسُوْلِ
اللّٰهِ اُولٰٓئِكَ الَّذِيْنَ امْتَحَنَ اللّٰهُ
قُلُوْبَهُمْ لِلتَّقْوٰى ؕ لَهُمْ مَّغْفِرَةٌ وَّاَجْرٌ
عَظِيْمٌ ④

**5.** (ನೀನು ವಾಸಿಸುವ) ಮನೆಗಳ ಹೊರಗೆ ದೂರದಿಂದ ಉಚ್ಚಸ್ವರದಲ್ಲಿ ನಿನ್ನನ್ನು ಕರೆಯುವವರಲ್ಲಿ ಹೆಚ್ಚಿನವರು ಅವಿವೇಕಿಗಳಾಗಿದ್ದಾರೆ.

اِنَّ الَّذِيْنَ يُنَادُوْنَكَ مِنْ وَّرَآءِ
الْحُجُرٰتِ اَكْثَرُهُمْ لَا يَعْقِلُوْنَ ⑤





**6.** ನೀನು ಅವರ ಬಳಿಗೆ ಹೊರಟು ಬರುವ ತನಕ ಅವರು ತಾಳ್ಮೆಯಿಂದ ಕಾಯುತ್ತಿದ್ದರೆ ಅದು ಅವರಿಗೆ ಒಳ್ಳೆಯದಾಗಿತ್ತು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَلَوْ اَنَّهُمْ صَبَرُوْا حَتّٰى تَخْرُجَ اِلَيْهِمْ
لَكَانَ خَيْرًا لَّهُمْ ؕ وَاللّٰهُ غَفُوْرٌ رَّحِيْمٌ ⑥

**7.** ಎಲೈ ವಿಶ್ವಾಸಿಗಳೇ, ದುರ್ಮಾರ್ಗಿಯಾದ ಯಾವನಾದರೂ ನಿಮ್ಮ ಬಳಿಗೆ ಯಾವುದಾದರೂ ಸುದ್ದಿಯನ್ನು ತಂದರೆ, ನೀವು ಅದರ (ವಾಸ್ತವಿಕತೆಯ) ಬಗ್ಗೆ ಪೂರ್ಣ ತನಿಖೆ ಮಾಡಿರಿ. ಇಲ್ಲವಾದರೆ ನೀವು ಅಜ್ಞಾನದಿಂದ ಒಂದು ಕೋಮಿಗೆ ಹಾನಿಯುಂಟುಮಾಡಿ ಅನಂತರ ನಿಮ್ಮ ಕೃತ್ಯಕ್ಕೆ ನೀವು ಪಶ್ಚಾತ್ತಾಪಪಡಬೇಕಾದೀತು.

يٰٓاَيُّهَا الَّذِيْنَ اٰمَنُوْٓا اِنْ جَآءَكُمْ
فَاسِقٌۢ بِنَبَاٍ فَتَبَيَّنُوْٓا اَنْ تُصِيْبُوْا قَوْمًاۢ
بِجَهَالَةٍ فَتُصْبِحُوْا عَلٰى مَا فَعَلْتُمْ
نٰدِمِيْنَ ⑦

**8.** ತಿಳಿದುಕೊಳ್ಳಿರಿ, ಅಲ್ಲಾಹನ ಸಂದೇಶವಾಹಕ ನಿಮ್ಮ ಬಳಿಯಲ್ಲಿದ್ದಾರೆ. ಹೆಚ್ಚಿನ ವಿಚಾರಗಳಲ್ಲಿ ಅವರು ನಿಮ್ಮ ಇಚ್ಛೆಯಂತೆ ವರ್ತಿಸಿರುತ್ತಿದ್ದರೆ ನೀವು ಖಂಡಿತವಾಗಿಯೂ ಹಾನಿಗೀಡಾಗುತ್ತಿದ್ದಿರಿ. ಆದರೆ ಅಲ್ಲಾಹನು ಸತ್ಯವಿಶ್ವಾಸವನ್ನು ನಿಮಗೆ ಪ್ರಿಯಗೊಳಿಸಿ ನಿಮ್ಮ ಹೃದಯಗಳಿಗೆ ಅದನ್ನು ಆಕರ್ಷಕವಾಗಿ ಮಾಡಿರುವನು. ಅವಿಶ್ವಾಸವನ್ನೂ ದುರ್ಮಾರ್ಗವನ್ನೂ ಧಿಕ್ಕಾರವನ್ನೂ ನೀವು ದ್ವೇಷಿಸುವಂತೆಯೂ ಅವನು ಮಾಡಿರುವನು. ಅಂಥವರೇ ನೇರವಾದ ಮಾರ್ಗವನ್ನು ಪಡೆದವರು.

وَاعْلَمُوْٓا اَنَّ فِيْكُمْ رَسُوْلَ اللّٰهِ ؕ
لَوْ يُطِيْعُكُمْ فِيْ كَثِيْرٍ مِّنَ الْاَمْرِ لَعَنِتُّمْ
وَلٰكِنَّ اللّٰهَ حَبَّبَ اِلَيْكُمُ الْاِيْمَانَ وَ
زَيَّنَهٗ فِيْ قُلُوْبِكُمْ وَكَرَّهَ اِلَيْكُمُ
الْكُفْرَ وَالْفُسُوْقَ وَالْعِصْيَانَ ؕ اُولٰٓئِكَ
هُمُ الرّٰشِدُوْنَ ⑧

**9.** ಇದು ಅಲ್ಲಾಹನ ಅನುಗ್ರಹ ಮತ್ತು ವರದಾನವಾಗಿದೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

فَضْلًا مِّنَ اللّٰهِ وَنِعْمَةً ؕ وَاللّٰهُ عَلِيْمٌ
حَكِيْمٌ ⑨

**10.** ಸತ್ಯವಿಶ್ವಾಸಿಗಳ ಪೈಕಿ ಎರಡು ಗುಂಪುಗಳು ಪರಸ್ಪರ ಹೋರಾಟಕ್ಕಿಳಿದರೆ, ನೀವು ಅವರ ಮಧ್ಯೆ ಸಂಧಾನವೇರ್ಪಡಿಸಿರಿ. ಆ ಬಳಿಕ ಅವರಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಆಕ್ರಮಣವೆಸಗಿದರೆ, ಅಲ್ಲಾಹನ ಆಜ್ಞೆಯ ಕಡೆಗೆ ಅವರು ಮರಳುವ ತನಕ ಅವರ ವಿರುದ್ಧ ಹೋರಾಡಿರಿ. ಅನಂತರ, ಆ ಗುಂಪು ಮರಳಿದರೆ

وَاِنْ طَآئِفَتٰنِ مِنَ الْمُؤْمِنِيْنَ اقْتَتَلُوْا
فَاَصْلِحُوْا بَيْنَهُمَا ۚ فَاِنْۢ بَغَتْ اِحْدٰىهُمَا
عَلَى الْاُخْرٰى فَقَاتِلُوا الَّتِيْ تَبْغِيْ
حَتّٰى تَفِيْٓءَ اِلٰٓى اَمْرِ اللّٰهِ ۚ فَاِنْ فَآءَتْ

ಅವರ ಮಧ್ಯೆ ನ್ಯಾಯಯುತವಾಗಿ ಸಂಧಾನ ಮಾಡಿಸಿರಿ ಹಾಗೂ ನ್ಯಾಯೋಚಿತವಾಗಿ ವರ್ತಿಸಿರಿ. ನಿಶ್ಚಯವಾಗಿಯೂ ಅಲ್ಲಾಹನು ನ್ಯಾಯವಂತರನ್ನು ಪ್ರೀತಿಸುತ್ತಾನೆ.[431]

فَأَصْلِحُوا بَيْنَهُمَا بِالْعَدْلِ وَأَقْسِطُوا ۖ إِنَّ اللَّهَ يُحِبُّ الْمُقْسِطِينَ ٩

**11.** ಸತ್ಯ ವಿಶ್ವಾಸಿಗಳು (ಪರಸ್ಪರ) ಸಹೋದರರು. ಆದ್ದರಿಂದ ನಿಮ್ಮ ಸಹೋದರರ ಮಧ್ಯೆ ರಾಜಿ ಮಾಡಿಸಿರಿ. ನಿಮ್ಮ ಮೇಲೆ ಕೃಪೆ ಬೀರಲ್ಪಡಲಿಕ್ಕೋಸ್ಕರ ಅಲ್ಲಾಹನಿಗೆ ಭಯಭಕ್ತಿ ತೋರಿಸಿರಿ.

إِنَّمَا الْمُؤْمِنُونَ إِخْوَةٌ فَأَصْلِحُوا بَيْنَ أَخَوَيْكُمْ ۚ وَاتَّقُوا اللَّهَ لَعَلَّكُمْ تُرْحَمُونَ ١٠

**12.** ಎಲೈ ವಿಶ್ವಾಸಿಗಳೇ, ಒಂದು ಜನಾಂಗ ಇನ್ನೊಂದು ಜನಾಂಗವನ್ನು ಪರಿಹಾಸ ಮಾಡದಿರಲಿ. (ಒಂದು ವೇಳೆ) ಅವರು (ಪರಿಹಾಸಕ್ಕೀಡಾದವರು) ಇವರಿಗಿಂತ (ಪರಿಹಾಸ ಮಾಡುವವರಿಗಿಂತ) ಉತ್ತಮರಾಗಿರಬಹುದು. ಸ್ತ್ರೀಯರು (ಬೇರೆ) ಸ್ತ್ರೀಯರನ್ನೂ ಅಪಹಾಸ್ಯ ಮಾಡದಿರಲಿ. (ಒಂದು ವೇಳೆ) ಅವರು ಇವರಿಗಿಂತ ಉತ್ತಮರಾಗಿರಬಹುದು. ನೀವು ನಿಮ್ಮದೇ ಜನರ ಮೇಲೆ ದೋಷಾರೋಪಣೆ ಮಾಡಬೇಡಿರಿ. ನೀವು ಪರಸ್ಪರ ವಿಕೃತ ನಾಮದಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಹೊಂದಿದ ಬಳಿಕ ಅಪಕೀರ್ತಿಗೆ ಈಡಾಗುವುದು (ನಿಜವಾಗಿಯೂ) ಕೆಟ್ಟದ್ದಾಗಿದೆ. ಯಾರು ಪಶ್ಚಾತ್ತಾಪಪಡುವುದಿಲ್ಲವೋ ಅವರೇ ಅಧರ್ಮಿಗಳು.

يَا أَيُّهَا الَّذِينَ آمَنُوا لَا يَسْخَرْ قَوْمٌ مِّن قَوْمٍ عَسَىٰ أَن يَكُونُوا خَيْرًا مِّنْهُمْ وَلَا نِسَاءٌ مِّن نِّسَاءٍ عَسَىٰ أَن يَكُنَّ خَيْرًا مِّنْهُنَّ ۖ وَلَا تَلْمِزُوا أَنفُسَكُمْ وَلَا تَنَابَزُوا بِالْأَلْقَابِ ۖ بِئْسَ الِاسْمُ الْفُسُوقُ بَعْدَ الْإِيمَانِ ۚ وَمَن لَّمْ يَتُبْ فَأُولَٰئِكَ هُمُ الظَّالِمُونَ ١١

**13.** ಎಲೈ ವಿಶ್ವಾಸಿಗಳೇ, ಮಿತಿಮೀರಿ ಸಂಶಯಪಡುವುದರಿಂದ ನೀವು ದೂರವಿರಿ. ನಿಶ್ಚಯವಾಗಿಯೂ ಕೆಲವು ಸಂಶಯಗಳು ಪಾಪಕರವಾಗಿವೆ. ನೀವು ಪರಸ್ಪರ

يَا أَيُّهَا الَّذِينَ آمَنُوا اجْتَنِبُوا كَثِيرًا مِّنَ الظَّنِّ إِنَّ بَعْضَ الظَّنِّ إِثْمٌ ۖ وَلَا

431 ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಶಾಂತಿ ಸ್ಥಾಪಿಸಲಿಕ್ಕೆ ಒಂದು ಸಂಯುಕ್ತ ರಾಷ್ಟ್ರ ಸಂಸ್ಥೆ ಇರಬೇಕೆಂದೂ ಅದಕ್ಕೆ ಸೈನಿಕ ಬಲ ಅಗತ್ಯವೆಂದೂ ಈ ವಚನ ಸೂಚಿಸುತ್ತದೆ.
ಈ ವಚನದಲ್ಲಿ 'ವಿಶ್ವಾಸಿಗಳ ಪೈಕಿ ಎರಡು ಗುಂಪುಗಳು' ಎಂದು ಹೇಳಿರುವುದರಿಂದ ಈ ಅಧ್ಯಾಪನೆ ಅವರಿಗೆ ಮಾತ್ರವೆಂದು ಭಾವಿಸಬಾರದು. ಖುರ್‌ಆನಿನ ಬೋಧನೆಯೆಂಬ ಸ್ಥಿತಿಯಲ್ಲಿ ಈ ಸಂಬೋಧನೆ ಪ್ರಥಮವಾಗಿ ಸತ್ಯವಿಶ್ವಾಸಿಗಳೊಡನೆಯಾದರೂ ತಾತ್ವಿಕವಾಗಿ ಈ ನಿರ್ದೇಶನ ಇಡೀ ಮಾನವ ಕುಲದ ಮಾರ್ಗದರ್ಶನಕ್ಕೋಸ್ಕರವಾಗಿದೆ.
"ನ್ಯಾಯಯುತವಾಗಿ ಸಂಧಾನ ಮಾಡಿಸಿರಿ ಹಾಗೂ ನ್ಯಾಯೋಚಿತವಾಗಿ ವರ್ತಿಸಿರಿ" ಎಂಬ ವಚನ ವಿಶೇಷ ಗಮನಾರ್ಹವಾಗಿದೆ. ರಾಷ್ಟ್ರಗಳ ಮಧ್ಯೆ ಇರುವ ತರ್ಕವನ್ನು ಬಗೆಹರಿಸುವಾಗ ಸಂಪೂರ್ಣವಾಗಿಯೂ ನ್ಯಾಯನೀತಿಯನ್ನು ಪಾಲಿಸಬೇಕಾಗಿದೆ; ಹಾಗೂ ಆ ಕಾರ್ಯದಲ್ಲಿ ನಿರತರಾಗುವ ರಾಷ್ಟ್ರಗಳಿಗೆ ಸ್ವಾರ್ಥ ಅಭಿಲಾಷೆ ಇರಬಾರದೆಂದು ಇದು ಬೋಧಿಸುತ್ತದೆ.





ಗೂಢಾಚಾರಿಕೆ ಮಾಡಬೇಡಿರಿ; (ಪರಸ್ಪರ) ಬೆನ್ನ ಹಿಂದೆ ದೂಷಿಸಬೇಡಿರಿ. ತನ್ನ ಮೃತ ಸಹೋದರನ ಮಾಂಸವನ್ನು ತಿನ್ನಲು ನಿಮ್ಮಲ್ಲಿ ಯಾರಾದರೂ ಇಷ್ಟಪಡುವನೇ? ಖಂಡಿತವಾಗಿಯೂ ನೀವು ಅದನ್ನು ಅಸಹ್ಯತೆಯಿಂದ ಕಾಣುವಿರಿ. ನೀವು ಅಲ್ಲಾಹನಿಗೆ ಭಯಭಕ್ತಿಯನ್ನು ತೋರಿಸಿರಿ. ದಿಟವಾಗಿಯೂ ಅಲ್ಲಾಹನು ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

تَجَسَّسُوا وَلَا يَغْتَب بَّعْضُكُم بَعْضًا ۚ أَيُحِبُّ أَحَدُكُمْ أَن يَأْكُلَ لَحْمَ أَخِيهِ مَيْتًا فَكَرِهْتُمُوهُ ۚ وَاتَّقُوا اللَّهَ ۚ إِنَّ اللَّهَ تَوَّابٌ رَّحِيمٌ ١٢

**14.** ಎಲೈ ಮನುಷ್ಯರೇ, ನಾವು ನಿಮ್ಮನ್ನು ಗಂಡು ಮತ್ತು ಹೆಣ್ಣಿನಿಂದ ಸೃಷ್ಟಿಸಿದೆವು. ನೀವು ಪರಸ್ಪರ ಗುರುತಿಸಲ್ಪಡಲಿಕ್ಕಾಗಿ ನಿಮ್ಮನ್ನು ಕುಲಗಳನ್ನಾಗಿಯೂ ಗೋತ್ರಗಳನ್ನಾಗಿಯೂ ಮಾಡಿರುವೆವು. ನಿಮ್ಮ ಪೈಕಿ ಹೆಚ್ಚು ಸಾತ್ವಿಕನಾರೋ ಖಂಡಿತವಾಗಿಯೂ ಆತನೇ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ಗೌರವಾರ್ಹನು. ದಿಟವಾಗಿಯೂ ಅಲ್ಲಾಹನು ಸರ್ವಜ್ಞನೂ ಎಲ್ಲ ಅರಿತವನೂ ಆಗಿದ್ದಾನೆ.

يَا أَيُّهَا النَّاسُ إِنَّا خَلَقْنَاكُم مِّن ذَكَرٍ وَأُنثَىٰ وَجَعَلْنَاكُمْ شُعُوبًا وَقَبَائِلَ لِتَعَارَفُوا ۚ إِنَّ أَكْرَمَكُمْ عِندَ اللَّهِ أَتْقَاكُمْ ۚ إِنَّ اللَّهَ عَلِيمٌ خَبِيرٌ ١٣

**15.** 'ನಾವು ವಿಶ್ವಾಸಹೊಂದಿದ್ದೇವೆ' ಎಂದು ಆ ಮರಳಗಾಡು ಅರಬಿಯರು ಹೇಳುತ್ತಾರೆ. ಹೇಳು: "(ವಾಸ್ತವದಲ್ಲಿ) ನೀವು ವಿಶ್ವಾಸ ಹೊಂದಲಿಲ್ಲ, ಆದರೆ 'ನಾವು ಮುಸ್ಲಿಮರಾಗಿದ್ದೇವೆ' ಎಂದು ನೀವು ಹೇಳಬಹುದು. ನಿಮ್ಮ ಹೃದಯಗಳೊಳಗೆ (ಇದುವರೆಗೆ) ಸತ್ಯವಿಶ್ವಾಸ ಪ್ರವೇಶಿಸಲಿಲ್ಲ." ನೀವು ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ವಿಧೇಯರಾದರೆ ನಿಮ್ಮ ಕರ್ಮಗಳಿಂದ ಏನನ್ನೂ ನಿಮಗೆ ಅವನು ಕಡಿಮೆಗೊಳಿಸಲಾರನು. ದಿಟವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

قَالَتِ الْأَعْرَابُ آمَنَّا ۖ قُل لَّمْ تُؤْمِنُوا وَلَٰكِن قُولُوا أَسْلَمْنَا وَلَمَّا يَدْخُلِ الْإِيمَانُ فِي قُلُوبِكُمْ ۖ وَإِن تُطِيعُوا اللَّهَ وَرَسُولَهُ لَا يَلِتْكُم مِّنْ أَعْمَالِكُمْ شَيْئًا ۚ إِنَّ اللَّهَ غَفُورٌ رَّحِيمٌ ١٤

**16.** ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ನಂಬುವವರೂ ಅನಂತರ ಸಂಶಯಪಡದವರೂ ತಮ್ಮ ಸಂಪತ್ತು ಮತ್ತು ಶರೀರದಿಂದ ಅಲ್ಲಾಹನ ಮಾರ್ಗದಲ್ಲಿ ಹೋರಾಡುವವರೂ ಮಾತ್ರವೇ ಸತ್ಯವಿಶ್ವಾಸಿಗಳು. ಅವರೇ ಸತ್ಯವಂತರು.

إِنَّمَا الْمُؤْمِنُونَ الَّذِينَ آمَنُوا بِاللَّهِ وَرَسُولِهِ ثُمَّ لَمْ يَرْتَابُوا وَجَاهَدُوا بِأَمْوَالِهِمْ وَأَنفُسِهِمْ فِي سَبِيلِ اللَّهِ ۚ أُولَٰئِكَ هُمُ الصَّادِقُونَ ١٥

**17.** ಹೇಳು: 'ನಿಮ್ಮ ಧರ್ಮದ ಕುರಿತು ನೀವು ಅಲ್ಲಾಹನಿಗೆ ಕಲಿಸಿಕೊಡುತ್ತೀರೇನು? ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದನ್ನೆಲ್ಲ ಅಲ್ಲಾಹನು ಬಲ್ಲನು. ಅಲ್ಲಾಹನು ಎಲ್ಲ ವಿಚಾರಗಳನ್ನು ಸಂಪೂರ್ಣವಾಗಿ ತಿಳಿದವನಾಗಿದ್ದಾನೆ.'

قُلْ أَتُعَلِّمُونَ اللَّهَ بِدِينِكُمْ ۚ وَاللَّهُ
يَعْلَمُ مَا فِي السَّمَاوَاتِ وَمَا فِي الْأَرْضِ ۚ
وَاللَّهُ بِكُلِّ شَيْءٍ عَلِيمٌ ﴿١٦﴾

**18.** ಅವರು ಇಸ್ಲಾಂ ಧರ್ಮ ಸ್ವೀಕರಿಸಿ ನಿನಗೆ ಉಪಕಾರ ಮಾಡಿದ್ದಾರೆಂದು ಭಾವಿಸುತ್ತಾರೆ. ಹೇಳು: 'ನಿಮ್ಮ ಇಸ್ಲಾಂ ಸ್ವೀಕಾರದಿಂದ ನನಗೆ ಉಪಕಾರ ಮಾಡಿದ್ದೀರೆಂದು ನೀವು ಭಾವಿಸಬೇಡಿರಿ. ಬದಲಾಗಿ, ನೀವು ಸತ್ಯವಂತರೆಂದಾದರೆ, ನಿಮಗೆ ಸತ್ಯವಿಶ್ವಾಸದ ಮಾರ್ಗದರ್ಶನದ ಮೂಲಕ ಅಲ್ಲಾಹನೇ ನಿಮಗೆ ಉಪಕಾರ ಮಾಡಿದ್ದಾನೆ.'

يَمُنُّونَ عَلَيْكَ أَنْ أَسْلَمُوا ۖ قُلْ لَا تَمُنُّوا
عَلَيَّ إِسْلَامَكُمْ ۖ بَلِ اللَّهُ يَمُنُّ عَلَيْكُمْ
أَنْ هَدَاكُمْ لِلْإِيمَانِ إِنْ كُنْتُمْ
صَادِقِينَ ﴿١٧﴾

**19.** ನಿಸ್ಸಂದೇಹವಾಗಿಯೂ ಅಲ್ಲಾಹನು ಆಕಾಶಗಳ ಮತ್ತು ಭೂಮಿಯ ರಹಸ್ಯಗಳನ್ನೆಲ್ಲ ಬಲ್ಲನು. ನಿಮ್ಮ ಕೃತ್ಯಗಳನ್ನೆಲ್ಲ ಅಲ್ಲಾಹನು ಕಾಣುತ್ತಾನೆ.

إِنَّ اللَّهَ يَعْلَمُ غَيْبَ السَّمَاوَاتِ وَالْأَرْضِ ۚ
وَاللَّهُ بَصِيرٌ بِمَا تَعْمَلُونَ ﴿١٨﴾

سُوْرَةُ قٓ مَكِّيَّةٌ وَّهِيَ مَعَ الْبَسْمَلَةِ سِتٌّ وَّاَرْبَعُوْنَ اٰيَةً وَّثَلٰثُ رُكُوْعَاتٍ

# 50. ಖಾಫ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 46 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ۝١

**2. ಖಾಫ್**[432] **ಮಹಿಮೆಯುಳ್ಳ ಖುರ್‌ಆನಿನಾಣೆ.** (ನೀನು ಅಲ್ಲಾಹನ ಸಂದೇಶವಾಹಕನಾಗಿರುವೆ.)

قٓ ۚ وَالْقُرْاٰنِ الْمَجِيْدِ ۝٢

**3. ಅವರ ಪೈಕಿಯಿಂದಲೇ ಒಬ್ಬ ಮುನ್ನೆಚ್ಚರಿಕೆಗಾರನು ಅವರ ಬಳಿಗೆ ಆಗಮಿಸಿರುವುದರಿಂದ ಅವರು ಅಚ್ಚರಿಗೊಳ್ಳುತ್ತಾರೆ. ಅವಿಶ್ವಾಸಿಗಳು ಹೇಳುತ್ತಾರೆ: 'ಇದು ವಿಚಿತ್ರವಾದೊಂದು ಸಂಗತಿಯಾಗಿದೆ.**

بَلْ عَجِبُوْٓا اَنْ جَآءَهُمْ مُّنْذِرٌ مِّنْهُمْ فَقَالَ الْكٰفِرُوْنَ هٰذَا شَيْءٌ عَجِيْبٌ ۝٣

**4. 'ನಾವು ಮೃತಪಟ್ಟು ಮಣ್ಣುಪಾಲಾದರೆ** ಪುನಃ ನಮ್ಮನ್ನು ಬದುಕಿಸಲಾಗುವುದೇ? **ಈ ಮರಳಿಕೆ** (ಅಸಂಭನೀಯವಾದ) **ದೂರದ ಮಾತಾಗಿದೆ.'**

ءَاِذَا مِتْنَا وَكُنَّا تُرَابًا ۚ ذٰلِكَ رَجْعٌ ۢ بَعِيْدٌ ۝٤

**5. ಅವರಿಂದ ಭೂಮಿ ಏನನ್ನು ಕಡಿತಗೊಳಿಸುತ್ತದೆಂಬುದನ್ನು ನಾವು ಬಲ್ಲೆವು.** (ಎಲ್ಲವನ್ನೂ) **ಸುರಕ್ಷಿತವಾಗಿಡುವ ಒಂದು ಗ್ರಂಥ ನಮ್ಮ ಬಳಿಯಲ್ಲಿದೆ.**

قَدْ عَلِمْنَا مَا تَنْقُصُ الْاَرْضُ مِنْهُمْ ۚ وَعِنْدَنَا كِتٰبٌ حَفِيْظٌ ۝٥

**6. ವಾಸ್ತವದಲ್ಲಿ, ಸತ್ಯವು ಅವರ ಬಳಿಗೆ ಬಂದಾಗ ಅವರು ಅದನ್ನು ಸುಳ್ಳಾಗಿಸಿದರು. ಆಗ ಅವರು ಗೊಂದಲದ ಸ್ಥಿತಿಯಲ್ಲಿ ಸಿಲುಕಿದರು.**

بَلْ كَذَّبُوْا بِالْحَقِّ لَمَّا جَآءَهُمْ فَهُمْ فِيْٓ اَمْرٍ مَّرِيْجٍ ۝٦

**7. ಅವರ ಮೇಲ್ಭಾಗದಲ್ಲಿರುವ ಆಕಾಶವನ್ನು ಅವರು ನೋಡಿಲ್ಲವೇ? ನಾವು ಅದನ್ನು ಹೇಗೆ ಸೃಷ್ಟಿಸಿದೆವು; ಹೇಗೆ ಅಲಂಕರಿಸಿದೆವು; ಅದರಲ್ಲಿ ನ್ಯೂನತೆಗಳೇನೂ ಇಲ್ಲ.**

اَفَلَمْ يَنْظُرُوْٓا اِلَى السَّمَآءِ فَوْقَهُمْ كَيْفَ بَنَيْنٰهَا وَزَيَّنّٰهَا وَمَا لَهَا مِنْ فُرُوْجٍ ۝٧

432. ಖಾಫ್ = ಖಾದಿರ್ (ಸರ್ವಶಕ್ತನು). ಸರ್ವಶಕ್ತನಾದ ಅಲ್ಲಾಹನು ಈ ಅಧ್ಯಾಯವನ್ನು ಅವತೀರ್ಣಗೊಳಿಸಿದ್ದಾನೆಂದು ತಾತ್ಪರ್ಯ. (2ನೇ ಅಧ್ಯಾಯದ 2ನೇ ವಚನದ ಟಿಪ್ಪಣಿ ನೋಡಿರಿ.)





**8. ಭೂಮಿಯನ್ನೂ** (ಅವರು ನೋಡಿಲ್ಲವೇ)? **ನಾವು ಅದನ್ನು ವಿಶಾಲಗೊಳಿಸಿ ಸ್ಥಿರವಾದ ಪರ್ವತಗಳನ್ನು ಅದರಲ್ಲಿ ಇರಿಸಿದ್ದೇವೆ. ನಾವು ಅದರಲ್ಲಿ ಎಲ್ಲ ಜಾತಿಯ ಸುಂದರವಾದ ವೃಕ್ಷಲತಾದಿಗಳು ಬೆಳೆಯುವಂತೆ ಮಾಡಿರುವೆವು -**

وَالْاَرْضَ مَدَدْنٰهَا وَاَلْقَيْنَا فِيْهَا رَوَاسِيَ وَاَنْۢبَتْنَا فِيْهَا مِنْ كُلِّ زَوْجٍۢ بَهِيْجٍ ۝٨

**9.** (ಅಲ್ಲಾಹನೆಡೆಗೆ) **ತಿರುಗುವ ಪ್ರತಿಯೊಬ್ಬ ಭಕ್ತ ದಾಸನಿಗೆ ಜ್ಞಾನೋದಯವುಂಟುಮಾಡಲಿಕ್ಕೆ ಮತ್ತು ಉಪದೇಶ ನೀಡಲಿಕ್ಕೋಸ್ಕರ.**

تَبْصِرَةً وَّذِكْرٰى لِكُلِّ عَبْدٍ مُّنِيْبٍ ۝٩

**10. ಆಕಾಶದಿಂದ ಅನುಗ್ರಹಕರವಾದ ಜಲವನ್ನು ನಾವು ಸುರಿಸುತ್ತೇವೆ. ಆ ಮೂಲಕ ನಾವು ತೋಟಗಳನ್ನು ಬೆಳೆಯಿಸುತ್ತೇವೆ ಹಾಗೂ ಕೊಯ್ಯಲ್ಪಡುವ ದವಸಧಾನ್ಯಗಳನ್ನು ಸಹ.**

وَنَزَّلْنَا مِنَ السَّمَآءِ مَآءً مُّبٰرَكًا فَاَنْۢبَتْنَا بِهٖ جَنّٰتٍ وَّحَبَّ الْحَصِيْدِ ۝١٠

**11. ಒತ್ತೊತ್ತಾದ ಗೊಂಚಲುಗಳಿಂದ ಕೂಡಿದ ಎತ್ತರವಾದ ಖರ್ಜೂರದ ಮರಗಳನ್ನೂ** (ನಾವು ಬೆಳೆಯಿಸುತ್ತೇವೆ).

وَالنَّخْلَ بٰسِقٰتٍ لَّهَا طَلْعٌ نَّضِيْدٌ ۝١١

**12.** (ನಮ್ಮ) **ದಾಸರಿಗೆ ಆಹಾರವಾಗಿ** (ಇವನ್ನೆಲ್ಲ ನಾವು ಸೃಷ್ಟಿಸಿದೆವು). **ಅದರ** (ಜಲ) **ಮೂಲಕ ನಾವು ನಿರ್ಜೀವ ಭೂಪ್ರದೇಶಗಳನ್ನು ಸಜೀವಗೊಳಿಸಿದೆವು. ಪುನರುತ್ಥಾನ ಸಹ ಇದೇ ಪ್ರಕಾರವಾಗಿದೆ.**

رِّزْقًا لِّلْعِبَادِ ۙ وَاَحْيَيْنَا بِهٖ بَلْدَةً مَّيْتًا ۗ كَذٰلِكَ الْخُرُوْجُ ۝١٢

**13. ಇವರಿಗಿಂತ ಮುಂಚೆ ನೂಹ್‌ರ ಜನತೆಯೂ ಬಾವಿಯ ಜನರೂ**[433] **ಸಮೂದ್ ಜನಾಂಗದವರೂ** (ಸತ್ಯವನ್ನು) **ಸುಳ್ಳಾಗಿಸಿದರು.**

كَذَّبَتْ قَبْلَهُمْ قَوْمُ نُوْحٍ وَّاَصْحٰبُ الرَّسِّ وَثَمُوْدُ ۝١٣

**14. ಹಾಗೆಯೇ ಆದ್, ಫಿರ್‌ಔನ್ ಮತ್ತು ಲೂತ್‌ರ ಸಹೋದರರು ಸಹ.**

وَعَادٌ وَّفِرْعَوْنُ وَاِخْوَانُ لُوْطٍ ۝١٤

**15. ಕಾನನ ನಿವಾಸಿಗಳೂ ತುಬ್ಬಅ್ ಜನಾಂಗದವರೂ ಎಲ್ಲರೂ ಸಂದೇಶವಾಹಕರನ್ನು ಸುಳ್ಳಾಗಿಸಿದರು. ತತ್ಫಲವಾಗಿ ನನ್ನ ಶಿಕ್ಷೆಯ ಮುನ್ನೆಚ್ಚರಿಕೆ ಸತ್ಯವಾಗಿ ಪರಿಣಮಿಸಿತು.**

وَّاَصْحٰبُ الْاَيْكَةِ وَقَوْمُ تُبَّعٍ ۭ كُلٌّ كَذَّبَ الرُّسُلَ فَحَقَّ وَعِيْدِ ۝١٥

433. ಒಂದು ಪ್ರಾಚೀನ ಅರಬಿ ಗೋತ್ರ.

**16.** ಏನು, ಮೊದಲಿನ ಸೃಷ್ಟಿಕಾರ್ಯದಿಂದ ನಾವು ದಣಿದಿದ್ದೇವೆಯೇ? ಇಲ್ಲ, ಆದರೆ ಅವರು ಹೊಸ ಸೃಷ್ಟಿಯ ಬಗ್ಗೆ ಸಂಶಯಗ್ರಸ್ತರಾಗಿದ್ದಾರೆ.

أَفَعَيِينَا بِالْخَلْقِ الْأَوَّلِ ۚ بَلْ هُمْ فِي لَبْسٍ مِّنْ خَلْقٍ جَدِيدٍ ﴿١٦﴾

**17.** ದಿಟವಾಗಿಯೂ ನಾವೇ ಮನುಷ್ಯನನ್ನು ಸೃಷ್ಟಿಸಿರುವೆವು. ಅವನ ಮನಸ್ಸು ಅವನಿಗೇನನ್ನು ಪಿಸು ಗುಟ್ಟುತ್ತದೆಂಬುದನ್ನು ನಾವು ಬಲ್ಲೆವು. ಅವನ ಜೀವನಾಡಿ ಗಿಂತ ನಾವು ಅವನಿಗೆ ಹೆಚ್ಚು ಸಮೀಪದಲ್ಲಿದ್ದೇವೆ.

وَلَقَدْ خَلَقْنَا الْإِنسَانَ وَنَعْلَمُ مَا تُوَسْوِسُ بِهِ نَفْسُهُ ۖ وَنَحْنُ أَقْرَبُ إِلَيْهِ مِنْ حَبْلِ الْوَرِيدِ ﴿١٧﴾

**18.** ಬಲಭಾಗದಲ್ಲೂ ಎಡಭಾಗದಲ್ಲೂ ಕುಳಿತು ಕೊಂಡು (ಮನುಷ್ಯನ ಕೃತ್ಯಗಳನ್ನು) ದಾಖಲೆ ಮಾಡುವ ಈರ್ವರು (ದೇವದೂತರು) ದಾಖಲೆಮಾಡುತ್ತಿರುವಾಗ,

إِذْ يَتَلَقَّى الْمُتَلَقِّيَانِ عَنِ الْيَمِينِ وَعَنِ الشِّمَالِ قَعِيدٌ ﴿١٨﴾

**19.** ಸಿದ್ಧವಾಗಿರುವ ಓರ್ವ ಮೇಲ್ನೋಟಗಾರ (ದೇವದೂತ) ಅವನ ಬಳಿಯಲ್ಲಿರುವ ಸ್ಥಿತಿಯಲ್ಲಿ ಹೊರತು ಅವನು ಒಂದು ಮಾತನ್ನಾಗಲಿ ಆಡುವುದಿಲ್ಲ.

مَّا يَلْفِظُ مِن قَوْلٍ إِلَّا لَدَيْهِ رَقِيبٌ عَتِيدٌ ﴿١٩﴾

**20.** ಮರಣಯಾತನೆ ದಿಟವಾಗಿಯೂ ಬಂದೇ ಬಿಡುವುದು. 'ಯಾವುದರಿಂದ ನೀನು ಓಡಿಹೋಗಲು ಪ್ರಯತ್ನಿಸುತ್ತಿದ್ದೆಯೋ, ಅದೇ ಇದು' (ಎಂದು ಅವನೊಡನೆ ಹೇಳಲಾಗುವುದು).

وَجَاءَتْ سَكْرَةُ الْمَوْتِ بِالْحَقِّ ۖ ذَٰلِكَ مَا كُنتَ مِنْهُ تَحِيدُ ﴿٢٠﴾

**21.** ಕಹಳೆ ಊದಲ್ಪಡುವುದು: 'ಮುನ್ನೆಚ್ಚರಿಕೆ ನೀಡಲ್ಪಟ್ಟ ದಿನ ಇದೇ ಆಗಿದೆ.'

وَنُفِخَ فِي الصُّورِ ۚ ذَٰلِكَ يَوْمُ الْوَعِيدِ ﴿٢١﴾

**22.** ಪ್ರತಿಯೊಂದು ಆತ್ಮವೂ ಬರುವುದು - ಅದರೊಂದಿಗೆ ಮುನ್ನಡೆಸುವ ಒಬ್ಬ ದೇವದೂತನೂ ಸಾಕ್ಷಿಯಾಗಿರುವ ಇನ್ನೊಬ್ಬ ದೇವದೂತನೂ ಇರುವರು.

وَجَاءَتْ كُلُّ نَفْسٍ مَّعَهَا سَائِقٌ وَشَهِيدٌ ﴿٢٢﴾

**23.** (ಅವನೊಡನೆ ಹೇಳಲಾಗುವುದು:) 'ಈ ಬಗ್ಗೆ ನೀನು ನಿರ್ಲಕ್ಷ್ಯದಿಂದಿದ್ದೆ. ಈಗ ನಾವು ನಿನ್ನ ಪರದೆಯನ್ನು ನಿನ್ನಿಂದ ಸರಿಸಿದ್ದೇವೆ. ಆದ್ದರಿಂದ ಈ ದಿನ ನಿನ್ನ ದೃಷ್ಟಿ ತೀಕ್ಷ್ಣವಾಗಿದೆ.'

لَّقَدْ كُنتَ فِي غَفْلَةٍ مِّنْ هَٰذَا فَكَشَفْنَا عَنكَ غِطَاءَكَ فَبَصَرُكَ الْيَوْمَ حَدِيدٌ ﴿٢٣﴾





**24.** 'ಇದು ನನ್ನ ಬಳಿ ಸಿದ್ಧವಿರುವ ದಾಖಲೆ ಆಗಿದೆ' ಎಂದು ಅವನ ಸಂಗಡಿಗ (ದೇವದೂತ) ಹೇಳುವನು.

وَقَالَ قَرِينُهُ هَٰذَا مَا لَدَيَّ عَتِيدٌ ﴿٢٤﴾

**25.** (ನಾವು ಹೇಳುವೆವು:) 'ಪ್ರತಿಯೋರ್ವ (ಸತ್ಯದ) ವಿರೋಧಿಯಾದ ಧಿಕ್ಕಾರಿಯನ್ನು ನೀವೀರ್ವರೂ ಸೇರಿ ನರಕಕ್ಕೆ ಹಾಕಿರಿ.

أَلْقِيَا فِي جَهَنَّمَ كُلَّ كَفَّارٍ عَنِيدٍ ﴿٢٥﴾

**26.** 'ಒಳಿತನ್ನು ತಡೆಯುವವನನ್ನು, ಅತಿರೇಕವಾಗಿ ವರ್ತಿಸುವವನನ್ನು ಮತ್ತು ಸಂಶಯಪಡುವವನನ್ನು.

مَّنَّاعٍ لِّلْخَيْرِ مُعْتَدٍ مُّرِيبٍ ﴿٢٦﴾

**27.** 'ಅವನು ಅಲ್ಲಾಹನ ಜೊತೆಗೆ ಬೇರೆಯೂ ಆರಾಧ್ಯನನ್ನು ಕಲ್ಪಿಸುತ್ತಾನೆ. ಆದ್ದರಿಂದ ನೀವಿಬ್ಬರೂ ಅವನನ್ನು ಘೋರವಾದ ಶಿಕ್ಷೆಗೆ ಗುರಿಪಡಿಸಿರಿ.'

الَّذِي جَعَلَ مَعَ اللَّهِ إِلَٰهًا آخَرَ فَأَلْقِيَاهُ فِي الْعَذَابِ الشَّدِيدِ ﴿٢٧﴾

**28.** ಅವನ ಜೊತೆಗಾರ (ಶೈತಾನ್) ಹೇಳುವನು: 'ನಮ್ಮ ಪ್ರಭೂ, ಅವನನ್ನು ನಾನು ದಾರಿತಪ್ಪಿಸಿಲ್ಲ, ಅವನೇ ಹಾದಿತಪ್ಪಿ ಬಹಳದೂರ ಹೋಗಿ ಬಿಟ್ಟಿದ್ದಾನೆ.'

قَالَ قَرِينُهُ رَبَّنَا مَا أَطْغَيْتُهُ وَلَٰكِن كَانَ فِي ضَلَالٍ بَعِيدٍ ﴿٢٨﴾

**29.** ಅವನು (ಅಲ್ಲಾಹನು) ಹೇಳುವನು: 'ನನ್ನ ಮುಂದೆ ನೀವು ಜಗಳಾಡಬೇಡಿರಿ. ನಿಮಗೆ ನಾನು ಮುಂಚಿತವಾಗಿಯೇ ಮುನ್ನೆಚ್ಚರಿಕೆ ನೀಡಿದ್ದೇನೆ.'

قَالَ لَا تَخْتَصِمُوا لَدَيَّ وَقَدْ قَدَّمْتُ إِلَيْكُم بِالْوَعِيدِ ﴿٢٩﴾

**30.** 'ನನ್ನ ಸಮ್ಮುಖದಲ್ಲಿ ಮಾತು ಬದಲಾಯಿಸಲ್ಪಡದು. (ನನ್ನ) ದಾಸರಿಗೆ ನಾನೇನೂ ಅನ್ಯಾಯ ಮಾಡಲಾರೆ.'

مَا يُبَدَّلُ الْقَوْلُ لَدَيَّ وَمَا أَنَا بِظَلَّامٍ لِّلْعَبِيدِ ﴿٣٠﴾

**31.** 'ನೀನು ತುಂಬಿ ಹೋಗಿರುವಿಯೋ?' ಎಂದು ನಾವು ನರಕದೊಡನೆ ಕೇಳುವ ದಿನದಂದು, 'ಇನ್ನೂ ಇದೆಯೇ?' ಎಂದು ಅದು ಮರು ಪ್ರಶ್ನಿಸುವುದು.

يَوْمَ نَقُولُ لِجَهَنَّمَ هَلِ امْتَلَأْتِ وَتَقُولُ هَلْ مِن مَّزِيدٍ ﴿٣١﴾

**32.** (ಅಂದು) ಭಯಭಕ್ತಿಹೊಂದಿದವರಿಗೆ ಸ್ವರ್ಗವನ್ನು ಸಮೀಪಕ್ಕೆ ತರಲಾಗುವುದು; ದೂರ ಮಾಡಲಾಗುವುದಿಲ್ಲ.

وَأُزْلِفَتِ الْجَنَّةُ لِلْمُتَّقِينَ غَيْرَ بَعِيدٍ ﴿٣٢﴾

**33.** (ಅವರೊಡನೆ ಹೇಳಲಾಗುವುದು:) **'ಇದು ನಿಮಗೆ ವಾಗ್ದಾನ ಮಾಡಲಾದುದೇ ಆಗಿದೆ -** (ಅಲ್ಲಾಹನ ಕಡೆಗೆ) **ತಿರುಗುವ ಹಾಗೂ** (ತನ್ನ ವರ್ತನೆಗಳ ಬಗ್ಗೆ) **ಜಾಗರೂಕತೆ ವಹಿಸುವ ಪ್ರತಿಯೊಬ್ಬನಿಗೆ;**

هَٰذَا مَا تُوعَدُونَ لِكُلِّ أَوَّابٍ حَفِيظٍ ٣٢

**34. 'ಏಕಾಂತದಲ್ಲಿ ದಯಾವಂತನಾದ** ಅಲ್ಲಾಹನಿಗೆ **ಭಯಪಡುವ ಹಾಗೂ** (ಅವನ ಕಡೆಗೆ) **ಪಶ್ಚಾತ್ತಾಪದ ಹೃದಯದಿಂದ ಮರಳುವವನಿಗೆ.**

مَّنْ خَشِيَ الرَّحْمَٰنَ بِالْغَيْبِ وَجَاءَ بِقَلْبٍ مُّنِيبٍ ٣٣

**35. 'ಶಾಂತಿಯಿಂದ ಅದರೊಳಗೆ ಪ್ರವೇಶಿಸಿರಿ. ಇದು ಶಾಶ್ವತ ವಾಸದ ದಿನವಾಗಿದೆ.'**

ادْخُلُوهَا بِسَلَامٍ ۖ ذَٰلِكَ يَوْمُ الْخُلُودِ ٣٤

**36. ಅವರಿಗೆ ಅಲ್ಲಿ ತಾವು ಇಚ್ಛಿಸುವುದೆಲ್ಲ ಲಭ್ಯ. ನಮ್ಮ ಬಳಿ ಇನ್ನೂ ಹೆಚ್ಚು ಇದೆ.**

لَهُم مَّا يَشَاءُونَ فِيهَا وَلَدَيْنَا مَزِيدٌ ٣٥

**37. ಇವರಿಗಿಂತ ಮುಂಚೆ ಇವರಿಗಿಂತ ಶಕ್ತಿಶಾಲಿಗಳಾದ ಎಷ್ಟೆಲ್ಲ ಪೀಳಿಗೆಗಳನ್ನು ನಾವು ನಾಶಮಾಡಿದೆವು!** (ಶಿಕ್ಷೆ ಬಂದೆರಗಿದಾಗ) **ಅವರು ಊರಿನಲ್ಲೆಲ್ಲ ಓಡಾಡಿದರು.** (ಅವರಿಗೆ) **ಏನಾದರೂ ಆಶ್ರಯಸ್ಥಾನವಿತ್ತೇ?**

وَكَمْ أَهْلَكْنَا قَبْلَهُم مِّن قَرْنٍ هُمْ أَشَدُّ مِنْهُم بَطْشًا فَنَقَّبُوا فِي الْبِلَادِ هَلْ مِن مَّحِيصٍ ٣٦

**38. ಹೃದಯವುಳ್ಳವನಿಗೆ ಅಥವಾ ಕಿವಿಗೊಟ್ಟು ಕೇಳುವವನಿಗೆ ಇದರಲ್ಲಿ ನಿಶ್ಚಯವಾಗಿಯೂ ಉಪದೇಶವಿದೆ.**

إِنَّ فِي ذَٰلِكَ لَذِكْرَىٰ لِمَن كَانَ لَهُ قَلْبٌ أَوْ أَلْقَى السَّمْعَ وَهُوَ شَهِيدٌ ٣٧

**39. ದಿಟವಾಗಿಯೂ ನಾವು ಆಕಾಶಗಳನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಎಲ್ಲವನ್ನೂ ಆರು ಹಂತಗಳಲ್ಲಿ ಸೃಷ್ಟಿಸಿದೆವು; ನಮಗೆ ಆಯಾಸವೇನೂ ಆಗಲಿಲ್ಲ.**

وَلَقَدْ خَلَقْنَا السَّمَاوَاتِ وَالْأَرْضَ وَمَا بَيْنَهُمَا فِي سِتَّةِ أَيَّامٍ وَمَا مَسَّنَا مِن لُّغُوبٍ ٣٨

**40. ಅವರು ಹೇಳುವುದರ ಬಗ್ಗೆ ನೀನು ತಾಳ್ಮೆ ವಹಿಸು. ಸೂರ್ಯೋದಯಕ್ಕೂ ಸೂರ್ಯಾಸ್ತಮಾನಕ್ಕೂ ಮುಂಚಿತವಾಗಿ ನಿನ್ನ ಪ್ರಭುವಿನ ಸ್ತುತಿಕೀರ್ತನೆ ಮಾಡಿ ಅವನ ಮಹತ್ವವನ್ನು ಕೊಂಡಾಡು.**

فَاصْبِرْ عَلَىٰ مَا يَقُولُونَ وَسَبِّحْ بِحَمْدِ رَبِّكَ قَبْلَ طُلُوعِ الشَّمْسِ وَقَبْلَ الْغُرُوبِ ٣٩





**41. ರಾತ್ರಿಯ ಸಮಯದಲ್ಲೂ ಸಾಷ್ಟಾಂಗ ಪ್ರಣಾಮ ಮಾಡಿದ ಬಳಿಕವೂ ಅವನ ಸ್ತುತಿ ಕೀರ್ತನೆ ಮಾಡು.**

وَمِنَ اللَّيْلِ فَسَبِّحْهُ وَأَدْبَارَ السُّجُودِ ٤٠

**42. ಗಮನವಿಟ್ಟು ಕೇಳು, ಕರೆಯುವಾತನು ಸಮೀಪದ ಒಂದು ಸ್ಥಳದಿಂದ ಕರೆಯುವ ದಿನ -**

وَاسْتَمِعْ يَوْمَ يُنَادِ الْمُنَادِ مِن مَّكَانٍ قَرِيبٍ ٤١

**43. ಅವರು ಸ್ಫೋಟವನ್ನು ದಿಟವಾಗಿಯೂ ಆಲಿಸುವ ದಿನ; ಅದು** (ಗೋರಿಗಳಿಂದ) **ಹೊರಗೆ ಬರುವ ದಿನವಾಗಿದೆ.**

يَوْمَ يَسْمَعُونَ الصَّيْحَةَ بِالْحَقِّ ۚ ذَٰلِكَ يَوْمُ الْخُرُوجِ ٤٢

**44. ಬದುಕಿಸುವವರೂ ಸಾಯಿಸುವವರೂ ನಾವೇ ಆಗಿದ್ದೇವೆ.** (ಕೊನೆಯ) **ಮರಳಿಕೆ ನಮ್ಮ ಬಳಿಗೆಯೇ ಆಗಿದೆ.**

إِنَّا نَحْنُ نُحْيِي وَنُمِيتُ وَإِلَيْنَا الْمَصِيرُ ٤٣

**45. ಅಂದು ಭೂಮಿ ಅವರ ಮೇಲಿಂದ ಬಿರುಕು ಬಿಡುವುದು ಹಾಗೂ ಅವರು ತ್ವರಿತವಾಗಿ ಹೊರಬರುವರು. ಅದು ನಮಗೆ ಸುಲಭವಾಗಿರುವ ಒಂದು ಒಟ್ಟುಗೂಡಿಸುವಿಕೆಯಾಗಿದೆ.**

يَوْمَ تَشَقَّقُ الْأَرْضُ عَنْهُمْ سِرَاعًا ۚ ذَٰلِكَ حَشْرٌ عَلَيْنَا يَسِيرٌ ٤٤

**46. ಅವರು ಹೇಳುವುದನ್ನು ನಾವು ಚೆನ್ನಾಗಿ ಬಲ್ಲೆವು. ನೀನು ಅವರ ಮೇಲೆ** (ಯಾವುದೇ ರೀತಿಯಲ್ಲಿ) **ಬಲಾತ್ಕಾರ ಮಾಡುವವನಲ್ಲ. ಆದ್ದರಿಂದ ನನ್ನ ಮುನ್ನೆಚ್ಚರಿಕೆಯ ಬಗ್ಗೆ ಭಯಪಡುವವನಿಗೆ ನೀನು ಖುರ್‌ಆನ್ ಮೂಲಕ ಉಪದೇಶ ನೀಡು.**

نَحْنُ أَعْلَمُ بِمَا يَقُولُونَ ۖ وَمَا أَنتَ عَلَيْهِم بِجَبَّارٍ ۖ فَذَكِّرْ بِالْقُرْآنِ مَن يَخَافُ وَعِيدِ ٤٥

سُوْرَةُ الذّٰرِيٰتِ مَكِّيَّةٌ وَّهِيَ مَعَ الْبَسْمَلَةِ اِحْدٰى سِتُّوْنَ اٰيَةً وَّثَلٰثُ رُكُوْعَاتٍ

# 51. ಅದ್ದಾರಿಯಾತ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 61 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ತೀವ್ರವಾಗಿ ಚದುರಿಸುವವರ ಆಣೆ;**

وَالذّٰرِيٰتِ ذَرْوًا ﴿٢﴾

**3. ಮತ್ತು ಘನವಾದ ಭಾರವನ್ನು ಹೊತ್ತೊಯ್ಯುವವರ;**

فَالْحٰمِلٰتِ وِقْرًا ﴿٣﴾

**4. ಮತ್ತೆ, ನಿರಾಯಾಸವಾಗಿ ಗಮಿಸುವವರ,**

فَالْجٰرِيٰتِ يُسْرًا ﴿٤﴾

**5. ಹಾಗೂ ಮಹತ್ತರವಾದ ಆಜ್ಞೆಗಳನ್ನು ಬಿತ್ತರಿಸುವವರ** ಆಣೆ.

فَالْمُقَسِّمٰتِ اَمْرًا ﴿٥﴾

**6. ಖಂಡಿತವಾಗಿಯೂ ನಿಮಗೆ ವಾಗ್ದಾನ ಮಾಡಲ್ಪಟ್ಟದ್ದು ಸತ್ಯವೇ ಆಗಿದೆ.**

اِنَّمَا تُوْعَدُوْنَ لَصَادِقٌ ﴿٦﴾

**7. ನ್ಯಾಯ ನಿರ್ಣಯ ಖಂಡಿತವಾಗಿಯೂ ಆಗುವುದು.**

وَّاِنَّ الدِّيْنَ لَوَاقِعٌ ﴿٧﴾

**8. ಪಥಗಳಿಂದ ತುಂಬಿದ ಆಕಾಶದ ಆಣೆ.**

وَالسَّمَآءِ ذَاتِ الْحُبُكِ ﴿٨﴾

**9. ನಿಜವಾಗಿಯೂ ನೀವು ಭಿನ್ನಾಭಿಪ್ರಾಯವುಳ್ಳವರಾಗಿದ್ದೀರಿ.**

اِنَّكُمْ لَفِيْ قَوْلٍ مُّخْتَلِفٍ ﴿٩﴾

**10. ವಿಮುಖನಾಗಲು ವಿಧಿಸಲ್ಪಟ್ಟವನೇ ಅದರಿಂದ ವಿಮುಖನಾಗುತ್ತಾನೆ.**

يُّؤْفَكُ عَنْهُ مَنْ اُفِكَ ﴿١٠﴾

**11. ಊಹೆಕಟ್ಟುವವರು ನಾಶವಾದರು.**

قُتِلَ الْخَرّٰصُوْنَ ﴿١١﴾





**12. ಅವರು ನಿರ್ಲಕ್ಷ್ಯದಲ್ಲಿ ಮುಳುಗಿದವರಾಗಿದ್ದಾರೆ.**

الَّذِيْنَ هُمْ فِيْ غَمْرَةٍ سَاهُوْنَ ﴿١٢﴾

**13. 'ತೀರ್ಪು ನೀಡಲ್ಪಡುವ ದಿನ ಯಾವಾಗ?' ಎಂದು ಅವರು ಕೇಳುತ್ತಾರೆ.**

يَسْـَٔلُوْنَ اَيَّانَ يَوْمُ الدِّيْنِ ﴿١٣﴾

**14. ಅವರು ಅಗ್ನಿಯಲ್ಲಿ ಯಾತನೆಗೀಡಾಗುವ ದಿನವೇ ಅದಾಗಿದೆ.**

يَوْمَ هُمْ عَلَى النَّارِ يُفْتَنُوْنَ ﴿١٤﴾

**15. 'ನಿಮ್ಮ ದುಷ್ಕೃತ್ಯದ ಫಲವನ್ನು ಅನುಭವಿಸಿರಿ; ನೀವು ಏನನ್ನು ತ್ವರೆಪಡಿಸುತ್ತಿದ್ದಿರೋ ಅದೇ ಇದು** (ಎಂದು ಅವರೊಡನೆ ಹೇಳಲಾಗುವುದು).

ذُوْقُوْا فِتْنَتَكُمْ ؕ هٰذَا الَّذِيْ كُنْتُمْ بِهٖ تَسْتَعْجِلُوْنَ ﴿١٥﴾

**16. ಭಯಭಕ್ತಿ ಹೊಂದಿದವರು ಸ್ವರ್ಗೀಯ ತೋಟಗಳು ಮತ್ತು ನೀರ ಚಿಲುಮೆಗಳಿರುವಲ್ಲಿ ವಾಸಿಸುವರು -**

اِنَّ الْمُتَّقِيْنَ فِيْ جَنّٰتٍ وَّعُيُوْنٍ ﴿١٦﴾

**17. ಅವರ ಪ್ರಭು ಅವರಿಗೆ ನೀಡುವ ಅನುಗ್ರಹಗಳನ್ನು ಸ್ವೀಕರಿಸುತ್ತಾ. ಏಕೆಂದರೆ ಅದಕ್ಕಿಂತ ಮುಂಚೆ ಅವರು ಸತ್ಕರ್ಮಿಗಳಾಗಿದ್ದರು.**

اٰخِذِيْنَ مَآ اٰتٰهُمْ رَبُّهُمْ ؕ اِنَّهُمْ كَانُوْا قَبْلَ ذٰلِكَ مُحْسِنِيْنَ ﴿١٧﴾

**18. ರಾತ್ರಿಯಲ್ಲಿ ಅಲ್ಪ ಸಮಯ ಮಾತ್ರ ಅವರು ನಿದ್ರಿಸುತ್ತಿದ್ದರು.**

كَانُوْا قَلِيْلًا مِّنَ الَّيْلِ مَا يَهْجَعُوْنَ ﴿١٨﴾

**19. ನಸುಕಿನಲ್ಲಿ ಅವರು ಪಾಪವಿಮುಕ್ತಿ ಗೋಸ್ಕರ ಪ್ರಾರ್ಥಿಸುತ್ತಿದ್ದರು.**

وَبِالْاَسْحَارِ هُمْ يَسْتَغْفِرُوْنَ ﴿١٩﴾

**20. ಅವರ ಸಂಪತ್ತಿನಲ್ಲಿ ಯಾಚಿಸುವವರಿಗೂ ದರಿದ್ರರಿಗೂ[434] ಪಾಲು ಇತ್ತು.**

وَفِيْٓ اَمْوَالِهِمْ حَقٌّ لِّلسَّآئِلِ وَالْمَحْرُوْمِ ﴿٢٠﴾

**21. ಸುದೃಢ ವಿಶ್ವಾಸಿಗಳಿಗೆ ಭೂಮಿಯಲ್ಲಿ ಅನೇಕ ದೃಷ್ಟಾಂತಗಳಿವೆ.**

وَفِي الْاَرْضِ اٰيٰتٌ لِّلْمُوْقِنِيْنَ ﴿٢١﴾

**22.** (ಅದೇ ಪ್ರಕಾರ) **ಸ್ವತಃ ನಿಮ್ಮಲ್ಲಿಯೂ** (ದೃಷ್ಟಾಂತಗಳಿವೆ). ನೀವೇನು ಮನಗಾಣುವುದಿಲ್ಲವೇ?

وَفِيْٓ اَنْفُسِكُمْ ؕ اَفَلَا تُبْصِرُوْنَ ﴿٢٢﴾

434. "ಮಹ್‌ರೂಂ" ಅಂದರೆ ದರಿದ್ರ, ವಿವಂಚಿತ, ತಡೆಯಲ್ಪಟ್ಟವ, ಅಸಮರ್ಥ ಇತ್ಯಾದಿ. ಸ್ವಾಭಿಮಾನ ನಿಮಿತ್ತ ಸಹಾಯಾರ್ಥನೆ ಮಾಡಲು ಸಾಧ್ಯವಾಗದವನು. ಮೃಗ, ಪಕ್ಷಿ ಮುಂತಾದವುಗಳು ಸಹ ಇದರಲ್ಲಿ ಸೇರುತ್ತವೆ.

**23.** ಆಕಾಶದಲ್ಲಿ ನಿಮಗೆ ಆಹಾರವಿದೆ. (ಅಷ್ಟೇ ಅಲ್ಲ) ನಿಮಗೆ ವಾಗ್ದಾನ ಮಾಡಿದ್ದು ಸಹ ಇದೆ.

وَفِي السَّمَاءِ رِزْقُكُمْ وَمَا تُوعَدُونَ ﴿٢٢﴾

**24.** ಆಕಾಶ ಮತ್ತು ಭೂಮಿಯ ಪ್ರಭುವಿನಾಣೆ - ನೀವು ಮಾತನಾಡುತ್ತಿರುವುದು ಸತ್ಯವಾಗಿರುವಂತೆ ಇದು ಸಹ ಸತ್ಯವಾಗಿದೆ.

فَوَرَبِّ السَّمَاءِ وَالْأَرْضِ إِنَّهُ لَحَقٌّ مِّثْلَ مَا أَنَّكُمْ تَنطِقُونَ ﴿٢٣﴾

**25.** ಇಬ್‌ರಾಹೀಮರ ಗೌರವಾನ್ವಿತ ಅತಿಥಿಗಳ ವೃತ್ತಾಂತ ನಿನಗೆ ತಲಪಿರುವುದೇ?

هَلْ أَتَاكَ حَدِيثُ ضَيْفِ إِبْرَاهِيمَ الْمُكْرَمِينَ ﴿٢٤﴾

**26.** ಅವರು (ಅತಿಥಿಗಳು) ಅವರ (ಇಬ್‌ರಾ ಹೀಮರ) ಬಳಿಗೆ ಬಂದು 'ಶಾಂತಿ' ಹಾರೈಸಿದಾಗ, ಅವರು (ಇಬ್‌ರಾಹೀಂ) ಸಹ 'ಶಾಂತಿ' ಹಾರೈಸಿದರು. ಅವರು ಅಪರಿಚಿತರಾಗಿದ್ದರು.

إِذْ دَخَلُوا عَلَيْهِ فَقَالُوا سَلَامًا ۖ قَالَ سَلَامٌ قَوْمٌ مُّنكَرُونَ ﴿٢٥﴾

**27.** ಅವರು (ಇಬ್‌ರಾಹೀಂ) ಮೆಲುವಾಗಿ ತನ್ನ ಕುಟುಂಬದ ಬಳಿಗೆ ಹೋಗಿ ಒಂದು ದಷ್ಟಪುಷ್ಟವಾದ ಕರುವನ್ನು (ಪಾಕಗೊಳಿಸಿ) ತಂದರು.

فَرَاغَ إِلَىٰ أَهْلِهِ فَجَاءَ بِعِجْلٍ سَمِينٍ ﴿٢٦﴾

**28.** ಅದನ್ನು ಅವರ ಮುಂದಿಟ್ಟರು. (ಅವರು ಅದನ್ನು ತಿನ್ನದಿರುವಾಗ) 'ನೀವೇನು ತಿನ್ನುವುದಿಲ್ಲವೇ?' ಎಂದು ಅವರು (ಇಬ್‌ರಾಹೀಂ) ಕೇಳಿದರು.

فَقَرَّبَهُ إِلَيْهِمْ قَالَ أَلَا تَأْكُلُونَ ﴿٢٧﴾

**29.** ಅವರ (ಅತಿಥಿಗಳ) ಬಗ್ಗೆ ಅವರಿಗೆ (ಇಬ್‌ರಾಹೀಮರಿಗೆ) ಭಯವಾಯಿತು. 'ಭಯಪಡ ಬೇಡಿರಿ' ಎಂದು ಅವರು ಹೇಳಿದರು. ಓರ್ವ ಜ್ಞಾನಿಯಾದ ಪುತ್ರನ (ಜನನದ) ಬಗ್ಗೆ ಅವರು ಶುಭವಾರ್ತೆಯನ್ನು ಅರುಹಿದರು.

فَأَوْجَسَ مِنْهُمْ خِيفَةً ۖ قَالُوا لَا تَخَفْ ۖ وَبَشَّرُوهُ بِغُلَامٍ عَلِيمٍ ﴿٢٨﴾

**30.** ಆಗ ಅವರ ಪತ್ನಿ ಪ್ರಲಾಪಿಸುತ್ತಾ ಮುಖದ ಮೇಲೆ ಬಡಿದುಕೊಂಡು ಬಂದು ಹೇಳಿದಳು: 'ನಾನೋರ್ವ ಮುದಿ ಬಂಜೆಯಲ್ಲವೇ?'

فَأَقْبَلَتِ امْرَأَتُهُ فِي صَرَّةٍ فَصَكَّتْ وَجْهَهَا وَقَالَتْ عَجُوزٌ عَقِيمٌ ﴿٢٩﴾

**31.** ಅವರು ಹೇಳಿದರು: 'ಅದು ಹಾಗೆಯೇ (ಆಗುವುದು). ಇದು ನಿನ್ನ ಪ್ರಭು ಹೇಳಿದ್ದು. ದಿಟ

قَالُوا كَذَٰلِكِ قَالَ رَبُّكِ ۖ إِنَّهُ هُوَ





ವಾಗಿಯೂ ಅವನು ವಿವೇಕಶಾಲಿಯೂ ಸರ್ವಜ್ಞನೂ ಆಗಿದ್ದಾನೆ.'

الْحَكِيمُ الْعَلِيمُ ﴿٣٠﴾

**32.** ಅವರು (ಇಬ್‌ರಾಹೀಂ) ಕೇಳಿದರು: 'ಎಲ್ಲೈ ಸಂದೇಶವಾಹಕರೇ, ನಿಮ್ಮ ದೌತ್ಯ ಕಾರ್ಯವೇನು?'

قَالَ فَمَا خَطْبُكُمْ أَيُّهَا الْمُرْسَلُونَ ﴿٣١﴾

**33.** ಅವರು ಹೇಳಿದರು: 'ಪಾಪಿಗಳಾದ ಜನರ ಬಳಿಗೆ ನಮ್ಮನ್ನು ಕಳುಹಿಸಲಾಗಿದೆ -

قَالُوا إِنَّا أُرْسِلْنَا إِلَىٰ قَوْمٍ مُّجْرِمِينَ ﴿٣٢﴾

**34.** 'ಅವರ ಮೇಲೆ ಆವೆಮಣ್ಣಿನ ಕಲ್ಲುಗಳನ್ನು ಸುರಿಸಲಿಕ್ಕೆ -

لِنُرْسِلَ عَلَيْهِمْ حِجَارَةً مِّن طِينٍ ﴿٣٣﴾

**35.** 'ಹದ್ದು ಮೀರಿ ವರ್ತಿಸಿದವರಿಗಾಗಿ ನಿನ್ನ ಪ್ರಭುವಿನಿಂದ ಗುರುತಿಸಲ್ಪಟ್ಟ ಕಲ್ಲುಗಳು.'

مُّسَوَّمَةً عِندَ رَبِّكَ لِلْمُسْرِفِينَ ﴿٣٤﴾

**36.** ಅಲ್ಲಿದ್ದ ಸತ್ಯವಿಶ್ವಾಸಿಗಳನ್ನು (ಆ ಊರಿನಿಂದ) ನಾವು ಹೊರಗೆ ಕಳುಹಿಸಿದೆವು.

فَأَخْرَجْنَا مَن كَانَ فِيهَا مِنَ الْمُؤْمِنِينَ ﴿٣٥﴾

**37.** ಅಲ್ಲಿ ನಾವು ಒಂದರ ಹೊರತು (ಅಲ್ಲಾಹನನ್ನು) ಅನುಸರಿಸುವವರ ಬೇರೆ ಯಾವ ಮನೆಯನ್ನೂ ಕಾಣಲಿಲ್ಲ.

فَمَا وَجَدْنَا فِيهَا غَيْرَ بَيْتٍ مِّنَ الْمُسْلِمِينَ ﴿٣٦﴾

**38.** ಯಾತನಾಮಯವಾದ ಶಿಕ್ಷೆಗೆ ಹೆದರುವವರಿಗೆ ನಾವು ಅಲ್ಲಿ ಒಂದು ದೃಷ್ಟಾಂತವನ್ನು ಬಾಕಿಯಿರಿಸಿದೆವು.

وَتَرَكْنَا فِيهَا آيَةً لِّلَّذِينَ يَخَافُونَ الْعَذَابَ الْأَلِيمَ ﴿٣٧﴾

**39.** ಸ್ಪಷ್ಟವಾದ ಸಾಕ್ಷ್ಯಾಧಾರ ಸಹಿತ ನಾವು ಮೂಸಾರನ್ನು ಫಿರ್‌ಔನನ ಬಳಿಗೆ ಕಳುಹಿಸಿದಾಗ ಅಲ್ಲಿ ಸಹ (ಒಂದು ದೃಷ್ಟಾಂತವನ್ನು ಬಾಕಿಯುಳಿಸಿದ್ದೇವೆ).

وَفِي مُوسَىٰ إِذْ أَرْسَلْنَاهُ إِلَىٰ فِرْعَوْنَ بِسُلْطَانٍ مُّبِينٍ ﴿٣٨﴾

**40.** ಅವನು ತನ್ನ ಅಧಿಕಾರಿಗಳೊಂದಿಗೆ ಮುಖ ತಿರುಗಿಸಿದ್ದನು. ಅವನು ಹೇಳಿದನು: 'ಇವನೊಬ್ಬ ಜಾದೂ ಗಾರ ಅಥವಾ ಹುಚ್ಚನಾಗಿದ್ದಾನೆ.'

فَتَوَلَّىٰ بِرُكْنِهِ وَقَالَ سَاحِرٌ أَوْ مَجْنُونٌ ﴿٣٩﴾

**41.** ಹಾಗೆ ನಾವು ಅವನನ್ನೂ ಅವನ ಸೈನ್ಯವನ್ನೂ ಸೆರೆಹಿಡಿದು ಸಮುದ್ರಕ್ಕೆ ಎಸೆದೆವು. ಅವನು ನಿಂದಾರ್ಹ ನಾಗಿದ್ದನು.

فَأَخَذْنَاهُ وَجُنُودَهُ فَنَبَذْنَاهُمْ فِي الْيَمِّ وَهُوَ مُلِيمٌ ﴿٤٠﴾

**42.** ನಾವು ಆದ್ ಗೋತ್ರದ ವಿರುದ್ಧವಾಗಿ ವಿನಾಶಕಾರಿಯಾದ ಬಿರುಗಾಳಿಯನ್ನು ಕಳುಹಿಸಿದಾಗ ಅದರಲ್ಲೂ (ಒಂದು ದೃಷ್ಟಾಂತವಿತ್ತು).

وَفِي عَادٍ إِذْ أَرْسَلْنَا عَلَيْهِمُ الرِّيحَ الْعَقِيمَ ﴿٤٢﴾

**43.** ಅದರ ಸ್ಪರ್ಶಕ್ಕೆ ಗುರಿಯಾದ ಯಾವುದೇ ವಸ್ತುವನ್ನಾಗಲಿ ಅದು ಕೊಳೆತ ಎಲುಬಿನಂತೆ ಮಾಡದೆ ಬಿಡಲಿಲ್ಲ.

مَا تَذَرُ مِنْ شَيْءٍ أَتَتْ عَلَيْهِ إِلَّا جَعَلَتْهُ كَالرَّمِيمِ ﴿٤٣﴾

**44.** 'ನೀವು ಸ್ವಲ್ಪಕಾಲ ಸುಖ ಅನುಭವಿಸಿ ಕೊಳ್ಳಿರಿ' ಎಂದು ಸಮೂದ್ ಗೋತ್ರದೊಡನೆ ಹೇಳಿದಾಗ ಅದರಲ್ಲೂ (ಒಂದು ದೃಷ್ಟಾಂತವಿತ್ತು).

وَفِي ثَمُودَ إِذْ قِيلَ لَهُمْ تَمَتَّعُوا حَتَّىٰ حِينٍ ﴿٤٤﴾

**45.** ಅವರು ತಮ್ಮ ಪ್ರಭುವಿನ ಆಜ್ಞೆಯನ್ನು ಧಿಕ್ಕರಿಸಿದ್ದರು. ಅವರು ನೋಡುತ್ತಿದ್ದಂತೆಯೇ ಆ ಭಯಂಕರವಾದ ಶಿಕ್ಷೆಗೆ ಅವರು ಗುರಿಯಾದರು.

فَعَتَوْا عَنْ أَمْرِ رَبِّهِمْ فَأَخَذَتْهُمُ الصَّاعِقَةُ وَهُمْ يَنْظُرُونَ ﴿٤٥﴾

**46.** ಆಗ ಅವರಿಗೆ ಮೇಲೇಳಲು ಸಾಧ್ಯವಾಗಲಿಲ್ಲ; ಯಾವ ಸಹಾಯವೂ ಅವರಿಗೆ ದೊರಕಲಿಲ್ಲ.

فَمَا اسْتَطَاعُوا مِنْ قِيَامٍ وَمَا كَانُوا مُنْتَصِرِينَ ﴿٤٦﴾

**47.** ಅದಕ್ಕಿಂತ ಮುಂಚೆ ನೂಹ್‌ರ ಜನತೆಯನ್ನೂ (ನಾವು ಶಿಕ್ಷೆಗೆ ಗುರಿಪಡಿಸಿದ್ದೆವು). ಅವರು ಅವಿಧೇಯ ಜನರಾಗಿದ್ದರು.

وَقَوْمَ نُوحٍ مِنْ قَبْلُ إِنَّهُمْ كَانُوا قَوْمًا فَاسِقِينَ ﴿٤٧﴾

**48.** ನಾವು ನಮ್ಮ ಶಕ್ತಿಸಾಮರ್ಥ್ಯದಿಂದ ಆಕಾಶ ವನ್ನು ನಿರ್ಮಿಸಿದ್ದೇವೆ. ನಮಗೆ ಅದನ್ನು ವಿಸ್ತಾರ ಗೊಳಿಸುವ ಶಕ್ತಿ ಇದೆ.

وَالسَّمَاءَ بَنَيْنَاهَا بِأَيْدٍ وَإِنَّا لَمُوسِعُونَ ﴿٤٨﴾

**49.** ನಾವು ಭೂಮಿಯನ್ನು ಹರವಿದ್ದೇವೆ. ಎಷ್ಟು ಚೆನ್ನಾಗಿ ನಾವು ಅದನ್ನು ಮಾಡಿದ್ದೇವೆ!

وَالْأَرْضَ فَرَشْنَاهَا فَنِعْمَ الْمَاهِدُونَ ﴿٤٩﴾

**50.** ಎಲ್ಲವನ್ನೂ ನಾವು ಜೋಡಿಯಾಗಿ ಸೃಷ್ಟಿಸಿದ್ದೇವೆ - ನೀವು ಚಿಂತನೆ ಮಾಡಲಿಕ್ಕೋಸ್ಕರ.

وَمِنْ كُلِّ شَيْءٍ خَلَقْنَا زَوْجَيْنِ لَعَلَّكُمْ تَذَكَّرُونَ ﴿٥٠﴾

**51.** ಆದ್ದರಿಂದ, ನೀವು ಅಲ್ಲಾಹನ ಬಳಿಗೆ ಓಡಿ ಕೊಂಡು ಹೋಗಿರಿ. (ನೀನು ಹೇಳು:) 'ದಿಟವಾಗಿಯೂ ನಾನು ಅವನಿಂದ ನಿಮ್ಮ ಬಳಿಗೆ ಬಂದ ಒಬ್ಬ ಸ್ಪಷ್ಟ ಮುನ್ನೆಚ್ಚರಿಕೆ ಗಾರನಾಗಿದ್ದೇನೆ.

فَفِرُّوا إِلَى اللَّهِ إِنِّي لَكُمْ مِنْهُ نَذِيرٌ مُبِينٌ ﴿٥١﴾





**52.** 'ಅಲ್ಲಾಹನ ಜೊತೆಗೆ ಬೇರೆ ಯಾವ ಆರಾಧ್ಯನನ್ನೂ ನೀವು ಕಲ್ಪಿಸಬೇಡಿರಿ. ನಿಜವಾಗಿಯೂ ನಾನು ಅವನಿಂದ ನಿಮ್ಮ ಬಳಿಗೆ ಬಂದ ಒಬ್ಬ ಸ್ಪಷ್ಟ ಮುನ್ನೆಚ್ಚರಿಕೆಗಾರನಾಗಿದ್ದೇನೆ.'

وَلَا تَجْعَلُوا مَعَ اللَّهِ إِلَٰهًا آخَرَ إِنِّي لَكُمْ مِنْهُ نَذِيرٌ مُبِينٌ ﴿٥٢﴾

**53.** ಇದೇ ಪ್ರಕಾರ 'ಇವನೊಬ್ಬ ಜಾದೂಗಾರ ಅಥವಾ ಇವನೊಬ್ಬ ಹುಚ್ಚ' ಎಂದು ಕರೆಯಲ್ಪಡದೆ ಅವರ ಪೂರ್ವಿಕರ ಬಳಿಗೆ ಯಾವ ಸಂದೇಶವಾಹಕನೂ ಬರಲಿಲ್ಲ.

كَذَٰلِكَ مَا أَتَى الَّذِينَ مِنْ قَبْلِهِمْ مِنْ رَسُولٍ إِلَّا قَالُوا سَاحِرٌ أَوْ مَجْنُونٌ ﴿٥٣﴾

**54.** ಏನು, ಅವರು ಅದನ್ನು ಪರಸ್ಪರ ಉಯಿಲು ಮಾಡಿಕೊಂಡಿದ್ದಾರೆಯೇ? ಅಲ್ಲ, ಅವರು ಅತಿರೇಕವಾಗಿ ವರ್ತಿಸುವ ಜನರಾಗಿದ್ದಾರೆ.

أَتَوَاصَوْا بِهِ بَلْ هُمْ قَوْمٌ طَاغُونَ ﴿٥٤﴾

**55.** ಆದ್ದರಿಂದ ನೀನು ಅವರನ್ನು ಬಿಟ್ಟು ದೂರವಾಗು; ನಿನ್ನ ಮೇಲೆ ದೋಷಾರೋಪಣೆ ಏನೂ ಇರಲಾರದು.

فَتَوَلَّ عَنْهُمْ فَمَا أَنْتَ بِمَلُومٍ ﴿٥٥﴾

**56.** ನೀನು ಉಪದೇಶಿಸುತ್ತಾ ಇರು. ಖಂಡಿತ ವಾಗಿಯೂ ಉಪದೇಶ ಸತ್ಯವಿಶ್ವಾಸಿಗಳಿಗೆ ಪ್ರಯೋಜನ ಕಾರಿಯಾಗಿದೆ.

وَذَكِّرْ فَإِنَّ الذِّكْرَىٰ تَنْفَعُ الْمُؤْمِنِينَ ﴿٥٦﴾

**57.** ನನ್ನನ್ನು ಆರಾಧಿಸಲಿಕ್ಕೋಸ್ಕರ ಹೊರತು ನಾನು ಜಿನ್ನ್ ಮತ್ತು ಇನ್ಸ್ ವರ್ಗಗಳನ್ನು ಸೃಷ್ಟಿಸಲಿಲ್ಲ.

وَمَا خَلَقْتُ الْجِنَّ وَالْإِنْسَ إِلَّا لِيَعْبُدُونِ ﴿٥٧﴾

**58.** ನಾನು ಅವರಿಂದ ಆಹಾರವನ್ನೇನೂ ಬಯ ಸುವುದಿಲ್ಲ. ಹಾಗೆಯೇ ಅವರು ನನಗೆ ಯಾವುದೇ ಜೀವ ನಾಧಾರ ನೀಡಬೇಕೆಂದೂ ನಾನು ಬಯಸುವುದಿಲ್ಲ.

مَا أُرِيدُ مِنْهُمْ مِنْ رِزْقٍ وَمَا أُرِيدُ أَنْ يُطْعِمُونِ ﴿٥٨﴾

**59.** ನಿಸ್ಸಂಶಯವಾಗಿಯೂ ಅಲ್ಲಾಹನೇ ಎಲ್ಲರಿಗೂ ಆಹಾರ ನೀಡುವವನೂ ಶಕ್ತಿಶಾಲಿಯೂ ಬಲಿಷ್ಠನೂ ಆಗಿದ್ದಾನೆ.

إِنَّ اللَّهَ هُوَ الرَّزَّاقُ ذُو الْقُوَّةِ الْمَتِينُ ﴿٥٩﴾

**60.** ದುಷ್ಕರ್ಮಿಗಳಿಗೆ ತಮ್ಮ (ಹಿಂದಿನ) ಜೊತೆ ಗಾರರಿಗೆ ದೊರೆತಂಥ ಕರ್ಮಫಲದ ಪಾಲಿದೆ. ಆದ್ದರಿಂದ (ಆ ಪಾಲಿಗೋಸ್ಕರ) ಅವರು ನನ್ನನ್ನು ತ್ವರೆಪಡಿಸದಿರಲಿ.

فَإِنَّ لِلَّذِينَ ظَلَمُوا ذَنُوبًا مِثْلَ ذَنُوبِ أَصْحَابِهِمْ فَلَا يَسْتَعْجِلُونِ ﴿٦٠﴾

**61.** ಯಾವ ದಿನದ ಬಗ್ಗೆ ಮುನ್ನೆಚ್ಚರಿಕೆ ನೀಡ ಲಾಗಿದೆಯೋ ಆ ದಿನದಂದು ಅವಿಶ್ವಾಸಿಗಳಿಗೆ ಮಹಾ ನಾಶವಿದೆ.

فَوَيْلٌ لِلَّذِينَ كَفَرُوا مِنْ يَوْمِهِمُ الَّذِي يُوعَدُونَ ﴿٦١﴾

سُوْرَةُ الطُّوْرِ مَكِّيَّةٌ وَّهِيَ مَعَ الْبَسْمَلَةِ خَمْسُوْنَ اٰيَةً وَّرُكُوْعَانِ

# 52. ಅತ್ತೂರ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 50 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ۝١

**2. ತೂರ್** (ಪರ್ವತ) **ಆಣೆ.**[436]

وَالطُّوْرِ ۝٢

**3,4. ತೆರೆದಿಡಲಾದ ಚರ್ಮಕಾಗದದಲ್ಲಿ ಬರೆಯಲ್ಪಟ್ಟ ಗ್ರಂಥದಾಣೆ.**[437]

وَكِتٰبٍ مَّسْطُوْرٍ ۝٣

فِيْ رَقٍّ مَّنْشُوْرٍ ۝٤

**5. ಜನನಿಬಿಡವಾದ ಗೃಹದಾಣೆ.**[438]

وَّالْبَيْتِ الْمَعْمُوْرِ ۝٥

**6. ಉನ್ನತವಾದ ಚಾವಣಿಯಾಣೆ.**[439]

وَالسَّقْفِ الْمَرْفُوْعِ ۝٦

**7. ಉಕ್ಕೇರುವ ಸಾಗರದಾಣೆ.**

وَالْبَحْرِ الْمَسْجُوْرِ ۝٧

**8. ಖಂಡಿತವಾಗಿಯೂ ನಿನ್ನ ಪ್ರಭುವಿನ ಶಿಕ್ಷೆ ಬಂದೇ ತೀರುವುದು.**

اِنَّ عَذَابَ رَبِّكَ لَوَاقِعٌ ۝٨

**9. ಅದನ್ನು ನಿವಾರಿಸುವವನು ಯಾರೂ ಇಲ್ಲ.**

مَّا لَهٗ مِنْ دَافِعٍ ۝٩

**10. ಆ ದಿನದಂದು ಮುಗಿಲು ತೀವ್ರವಾಗಿ ಹೊಯ್ದಾಡುವುದು.**

يَّوْمَ تَمُوْرُ السَّمَآءُ مَوْرًا ۝١٠

436. ಇದು ಸೀನಾಯ್ ಪರ್ವತದ ಬಗ್ಗೆ ಸೂಚನೆಯಾಗಿದೆ. ಪ್ರವಾದಿ ಮೂಸಾ(ಅಲೈಹಿಸ್ಸಲಾಂ)ರಿಗೆ ಪ್ರಥಮವಾಗಿ ದೈವೀಪ್ರಕಾಶನವಾದುದು ಸೀನಾಯ್ ಪರ್ವತದಲ್ಲಾಗಿತ್ತು. ಅಲ್ಲೇ ಅವರಿಗೆ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಆಗಮನದ ಬಗ್ಗೆ ಶುಭವಾರ್ತೆ ಸಹ ಲಭ್ಯವಾಯಿತು.

437. ಖುರ್‌ಆನನ್ನು ಮೊತ್ತ ಮೊದಲಿಗೆ ಚರ್ಮಕಾಗದದಲ್ಲಿ ಬರೆಯಲಾಗಿತ್ತು.

438. ಕಅ್ಬ.

439. ಆಕಾಶ.





**11. ಪರ್ವತಗಳು ಶೀಘ್ರಗತಿಯಲ್ಲಿ ಚಲಿಸುವುವು.**

وَّتَسِيْرُ الْجِبَالُ سَيْرًا ۝١١

**12. ಆ ದಿನದಂದು ಸತ್ಯವಿರೋಧಿಗಳಿಗೆ ಮಹಾ ನಾಶ ಕಾದಿದೆ.**

فَوَيْلٌ يَّوْمَئِذٍ لِّلْمُكَذِّبِيْنَ ۝١٢

**13. ಅವರು ನಿಷ್ಪ್ರಯೋಜಕ ಮಾತುಕತೆಗಳಲ್ಲಿ ನಿರತರಾಗಿ ವಿನೋದಿಸುವವರಾಗಿದ್ದಾರೆ.**

الَّذِيْنَ هُمْ فِيْ خَوْضٍ يَّلْعَبُوْنَ ۝١٣

**14. ಅವರನ್ನು ನರಕಾಗ್ನಿಯೆಡೆಗೆ ಬಲವಾಗಿ ತಳ್ಳಿಕೊಂಡು ಹೋಗುವ ದಿನದಂದು,**

يَوْمَ يُدَعُّوْنَ اِلٰى نَارِ جَهَنَّمَ دَعًّا ۝١٤

**15.** (ಅವರೊಡನೆ ಹೇಳಲಾಗುವುದು:) **'ಇದು ನೀವು ಸುಳ್ಳೆಂದು ಹೇಳುತ್ತಿದ್ದ ನರಕವಾಗಿದೆ.'**

هٰذِهِ النَّارُ الَّتِيْ كُنْتُمْ بِهَا تُكَذِّبُوْنَ ۝١٥

**16. 'ಏನು ಇದು ಜಾದೂ ವಿದ್ಯೆಯೇ? ಅಥವಾ** (ನಿಜವಾಗಿಯೂ ಇದು ಏನೆಂದು) **ನಿಮಗೆ ಕಾಣುವುದಿಲ್ಲವೇ?**

اَفَسِحْرٌ هٰذَآ اَمْ اَنْتُمْ لَا تُبْصِرُوْنَ ۝١٦

**17. 'ನೀವು ಅದರಲ್ಲಿ ಪ್ರವೇಶಿಸಿ ಸುಟ್ಟು ಹೋಗಿರಿ. ನೀವು ಸೈರಿಸಿಕೊಂಡರೂ ಸೈರಿಸಿಕೊಳ್ಳದಿದ್ದರೂ ನಿಮಗೆ ಅದು ಸಮಾನವಾಗಿದೆ. ನಿಮ್ಮ ಕೃತ್ಯಕ್ಕೆ ತಕ್ಕುದಾದ ಶಿಕ್ಷೆಯನ್ನು ಮಾತ್ರ ನಿಮಗೆ ನೀಡಲಾಗುವುದು.'**

اِصْلَوْهَا فَاصْبِرُوْٓا اَوْ لَا تَصْبِرُوْا ۚ سَوَآءٌ عَلَيْكُمْ ۭ اِنَّمَا تُجْزَوْنَ مَا كُنْتُمْ تَعْمَلُوْنَ ۝١٧

**18. ಖಂಡಿತವಾಗಿಯೂ ಭಯಭಕ್ತಿ ಹೊಂದಿದವರು ಸ್ವರ್ಗೀಯ ತೋಟಗಳಲ್ಲೂ ಸುಖಾನುಭೂತಿಯಲ್ಲೂ ಇರುವರು.**

اِنَّ الْمُتَّقِيْنَ فِيْ جَنّٰتٍ وَّنَعِيْمٍ ۝١٨

**19. ತಮ್ಮ ಪ್ರಭು ತಮಗೆ ದಯಪಾಲಿಸಿರುವುದನ್ನು ಅವರು ಅನುಭೋಗಿಸುತ್ತಾರೆ. ಅವರ ಪ್ರಭು ಅವರನ್ನು ನರಕ ಶಿಕ್ಷೆಯಿಂದ ಪಾರುಮಾಡಿದ್ದಾನೆ.**

فٰكِهِيْنَ بِمَآ اٰتٰىهُمْ رَبُّهُمْ ۚ وَوَقٰىهُمْ رَبُّهُمْ عَذَابَ الْجَحِيْمِ ۝١٩

**20. 'ನಿಮ್ಮ ಸತ್ಕರ್ಮಗಳ ಫಲವಾಗಿ ನೀವು ಸಂತೋಷಭರಿತರಾಗಿದ್ದುಕೊಂಡು ತಿನ್ನಿರಿ ಹಾಗೂ ಕುಡಿಯಿರಿ' ಎಂದು ಅವರೊಡನೆ ಹೇಳಲಾಗುವುದು.**

كُلُوْا وَاشْرَبُوْا هَنِيْۤـًٔا بِمَا كُنْتُمْ تَعْمَلُوْنَ ۝٢٠

**21.** ಸಾಲಾಗಿ ಇರಿಸಲಾದ ಮಂಚಗಳಲ್ಲಿ (ದಿಂಬುಗಳಿಗೆ) ಒರಗಿ ಅವರು ಕುಳಿತುಕೊಳ್ಳುವರು. ವಿಶಾಲವಾದ ಕಣ್ಣುಗಳುಳ್ಳ ಸುಂದರಿಯರನ್ನು ನಾವು ಅವರಿಗೆ ಜೋಡಿಗಳನ್ನಾಗಿ ಮಾಡುವೆವು.

مُتَّكِـِٔيْنَ عَلٰى سُرُرٍ مَّصْفُوْفَةٍ ۚ وَ زَوَّجْنٰهُمْ بِحُوْرٍ عِيْنٍ ﴿٢١﴾

**22.** ಯಾರು ಸತ್ಯವಿಶ್ವಾಸಿಗಳಾಗಿರುತ್ತಾರೋ ಹಾಗೂ ಯಾರ ಮಕ್ಕಳು ವಿಶ್ವಾಸಕ್ಕೆ ಸಂಬಂಧಿಸಿದಂತೆ ಅವರನ್ನು ಹಿಂಬಾಲಿಸುತ್ತಾರೋ, ಅವರ ಜೊತೆಯಲ್ಲಿ ಅವರ ಮಕ್ಕಳನ್ನು ಸಹ ನಾವು ಸೇರಿಸುವೆವು. ಅವರ ಸತ್ಕಾರ್ಯಕ್ಕೆ ತಕ್ಕುದಾದ ಪ್ರತಿಫಲದಲ್ಲಿ ನಾವೇನೂ ಕಮ್ಮಿ ಮಾಡಲಿಕ್ಕಿಲ್ಲ. ಪ್ರತಿಯೊಬ್ಬ ವ್ಯಕ್ತಿ ತನ್ನ ಕರ್ಮದೊಂದಿಗೆ ಜೋಡಿಸಲ್ಪಟ್ಟಿದ್ದಾನೆ.

وَالَّذِيْنَ اٰمَنُوْا وَاتَّبَعَتْهُمْ ذُرِّيَّتُهُمْ بِاِيْمَانٍ اَلْحَقْنَا بِهِمْ ذُرِّيَّتَهُمْ وَمَآ اَلَتْنٰهُمْ مِّنْ عَمَلِهِمْ مِّنْ شَيْءٍ ۚ كُلُّ امْرِئٍۢ بِمَا كَسَبَ رَهِيْنٌ ﴿٢٢﴾

**23.** ಅವರು ಆಶಿಸುವ ಹಣ್ಣುಹಂಪಲುಗಳನ್ನೂ ಮಾಂಸವನ್ನೂ ನಾವು ಅವರಿಗೆ (ವಿಪುಲವಾಗಿ) ಒದಗಿಸುವೆವು.

وَ اَمْدَدْنٰهُمْ بِفَاكِهَةٍ وَّ لَحْمٍ مِّمَّا يَشْتَهُوْنَ ﴿٢٣﴾

**24.** ಅಲ್ಲಿ (ಪಾನೀಯ ಭರಿತ) ಪಾತ್ರೆಗೋಸ್ಕರ ಅವರು ಮೇಲಾಡುವರು.[440] ಅಲ್ಲಿ ವ್ಯರ್ಥ ಮಾತಾಗಲಿ ದೋಷಾರೋಪಣೆಯಾಗಲಿ ಇರಲಾರದು.

يَتَنَازَعُوْنَ فِيْهَا كَاْسًا لَّا لَغْوٌ فِيْهَا وَلَا تَاْثِيْمٌ ﴿٢٤﴾

**25.** ಅವರ ಬಳಿಯಲ್ಲಿ ಅವರ ಸ್ವಂತ ಯುವ ಪರಿಚಾರಕರು (ಸೇವೆಗೆ ಸಿದ್ಧರಾಗಿ) ಸುತ್ತುತ್ತಲಿರುವರು. ಸುರಕ್ಷಿತವಾಗಿರಿಸಿದ ಮುತ್ತುಗಳಂತೆ ಅವರು ಇರುವರು.

وَيَطُوْفُ عَلَيْهِمْ غِلْمَانٌ لَّهُمْ كَاَنَّهُمْ لُؤْلُؤٌ مَّكْنُوْنٌ ﴿٢٥﴾

**26.** ಅವರು ಪರಸ್ಪರ ಕುಶಲ ಸಂಭಾಷಣೆ ನಡೆಸುವರು.

وَ اَقْبَلَ بَعْضُهُمْ عَلٰى بَعْضٍ يَّتَسَآءَلُوْنَ ﴿٢٦﴾

**27.** ಅವರು ಹೇಳುವರು : 'ನಾವು ಇದಕ್ಕೆ ಮುಂಚೆ (ಪೂರ್ವಲೋಕದಲ್ಲಿ) ನಮ್ಮ ಕುಟುಂಬದೊಂದಿಗೆ ಇದ್ದಾಗ ಭಯಭೀತರಾಗಿದ್ದೆವು.[441]

قَالُوْٓا اِنَّا كُنَّا قَبْلُ فِيْٓ اَهْلِنَا مُشْفِقِيْنَ ﴿٢٧﴾

440. ದೇವಾಸುರಾಗವೆಂಬ ಪಾನೀಯ ಭರಿತ ಪಾತ್ರೆ.

441. ಸತ್ಯವಿಶ್ವಾಸಿಗಳಿಗೆ ಭೂಲೋಕದಲ್ಲಿ ಅವಿಶ್ವಾಸಿಗಳ ಬೆದರಿಕೆಯಿಂದ ಕೆಲವು ಸಲ ಭಯಭೀತಿ ಉಂಟಾಗುತ್ತದೆ. ಆದರೆ ಪರಲೋಕದಲ್ಲಿ ಅವರಿಗೆ ಎಲ್ಲಾ ವಿಧ ಅನುಗ್ರಹ ಮತ್ತು ನೆಮ್ಮದಿ ಲಭಿಸುವುದು ಎಂದು ತಾತ್ಪರ್ಯ.





**28.** 'ಆದರೆ ಅಲ್ಲಾಹನು ನಮ್ಮ ಮೇಲೆ ಕರುಣೆ ತೋರಿದ್ದಾನೆ ಹಾಗೂ ನರಕಾಗ್ನಿಯ ಶಿಕ್ಷೆಯಿಂದ ಅವನು ನಮ್ಮನ್ನು ಪಾರುಮಾಡಿದ್ದಾನೆ.

فَمَنَّ اللّٰهُ عَلَيْنَا وَ وَقٰىنَا عَذَابَ السَّمُوْمِ ﴿٢٨﴾

**29.** 'ಮೊದಲಿನಿಂದಲೂ ನಾವು ಅವನನ್ನು ಕರೆದು ಪ್ರಾರ್ಥಿಸುತ್ತಿದ್ದೆವು. ನಿಶ್ಚಯವಾಗಿಯೂ ಅವನು ಅತಿ ಉದಾರಿಯೂ ಕಾರುಣ್ಯನಿಧಿಯೂ ಆಗಿದ್ದಾನೆ.'

اِنَّا كُنَّا مِنْ قَبْلُ نَدْعُوْهُ ۚ اِنَّهٗ هُوَ الْبَرُّ الرَّحِيْمُ ﴿٢٩﴾ ع

**30.** ಆದ್ದರಿಂದ (ಎಲೈ ಪ್ರವಾದಿ) ನೀನು ಅವರಿಗೆ ಉಪದೇಶ ನೀಡು. ನಿನ್ನ ಪ್ರಭುವಿನ ಅನುಗ್ರಹದಿಂದ ನೀನೊಬ್ಬ ಕಣಿ ಹೇಳುವವ ಅಥವಾ ಹುಚ್ಚನಲ್ಲ.

فَذَكِّرْ فَمَآ اَنْتَ بِنِعْمَتِ رَبِّكَ بِكَاهِنٍ وَّلَا مَجْنُوْنٍ ﴿٣٠﴾

**31.** ಅಥವಾ (ನಿನ್ನ ಬಗ್ಗೆ) ಅವರು: 'ಅವನು ಒಬ್ಬ ಕವಿ; ಅವನು ಕಾಲದ ದುರ್ವಿಧಿಗೆ ತುತ್ತಾಗುವುದನ್ನು ನಾವು ಕಾಯುತ್ತಿದ್ದೇವೆ' ಎಂದು ಹೇಳುತ್ತಾರೇನು?

اَمْ يَقُوْلُوْنَ شَاعِرٌ نَّتَرَبَّصُ بِهٖ رَيْبَ الْمَنُوْنِ ﴿٣١﴾

**32.** ಹೇಳು: 'ನೀವು ಕಾಯುತ್ತಿರಿ. ನಿಮ್ಮ ಜೊತೆಯಲ್ಲಿ ನಾನು ಸಹ ಕಾಯುತ್ತಿರುವವರಲ್ಲಿ ಸೇರುತ್ತೇನೆ.'

قُلْ تَرَبَّصُوْا فَاِنِّيْ مَعَكُمْ مِّنَ الْمُتَرَبِّصِيْنَ ﴿٣٢﴾

**33.** ಏನು, ಅವರ ಬುದ್ಧಿ ಅವರಿಗೆ ಇದನ್ನು ಪ್ರೇರೇಪಿಸುತ್ತದೆಯೇ? ಅಥವಾ ಅವರು ದುಷ್ಕರ್ಮಿಗಳಾದ ಜನರೇ?

اَمْ تَاْمُرُهُمْ اَحْلَامُهُمْ بِهٰذَآ اَمْ هُمْ قَوْمٌ طَاغُوْنَ ﴿٣٣﴾

**34.** ಅಥವಾ 'ಅದನ್ನು ಅವನೇ ಸ್ವಯಂ ಸೃಷ್ಟನೆ ಮಾಡಿರುವನು' ಎಂದು ಅವರು ಹೇಳುತ್ತಾರೆಯೇ? ವಾಸ್ತವವೇನೆಂದರೆ, ಅವರು (ದೈವೀ ಪ್ರಕಾಶನವನ್ನು) ನಂಬುವುದಿಲ್ಲ.

اَمْ يَقُوْلُوْنَ تَقَوَّلَهٗ ۚ بَلْ لَّا يُؤْمِنُوْنَ ﴿٣٤﴾

**35.** ಅವರು ಸತ್ಯಸಂಧರಾಗಿದ್ದರೆ ಇದರಂತಹ ಒಂದು ವಚನವನ್ನು ಅವರು ತರಲಿ.

فَلْيَاْتُوْا بِحَدِيْثٍ مِّثْلِهٖٓ اِنْ كَانُوْا صٰدِقِيْنَ ﴿٣٥﴾

**36.** ಏನು, ಅವರು ಶೂನ್ಯದಿಂದ ಸೃಷ್ಟಿ ಹೊಂದಿರುವರೇ? ಅಥವಾ ಅವರೇ ಸ್ವಯಂ ಸೃಷ್ಟಿ ಕರ್ತರೇ?

اَمْ خُلِقُوْا مِنْ غَيْرِ شَيْءٍ اَمْ هُمُ الْخٰلِقُوْنَ ﴿٣٦﴾

أَمْ خَلَقُوا السَّمَٰوَٰتِ وَالْأَرْضَ ۚ بَل لَّا يُوقِنُونَ ﴿٣٧﴾

**37.** ಏನು, ಅವರು ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿರುವರೇ? ಇಲ್ಲ; ಆದರೆ ಅವರು ನಂಬುವವರೇ ಅಲ್ಲ.

أَمْ عِندَهُمْ خَزَآئِنُ رَبِّكَ أَمْ هُمُ الْمُصَيْطِرُونَ ﴿٣٨﴾

**38.** ಏನು, ನಿನ್ನ ಪ್ರಭುವಿನ ಖಜಾನೆಗಳು ಅವರ ಬಳಿಯಲ್ಲಿವೆಯೇ? ಅಥವಾ ಅವರು (ಅವುಗಳ) ಸಂರಕ್ಷಕರೇನು?

أَمْ لَهُمْ سُلَّمٌ يَسْتَمِعُونَ فِيهِ ۖ فَلْيَأْتِ مُسْتَمِعُهُم بِسُلْطَٰنٍ مُّبِينٍ ﴿٣٩﴾

**39.** ಏನು, (ಆಕಾಶಕ್ಕೇರಲು) ಅವರ ಬಳಿ ಏಣಿ ಇದೆಯೇ? - ಅದರ ಮೂಲಕ (ಮೇಲೇರಿ) ಅವರು ಆಲಿಸಲಿಕ್ಕೆ. ಹಾಗಿದ್ದರೆ ಅವರ ಪೈಕಿ ಆಲಿಸುವವರು ಸ್ಪಷ್ಟವಾದೊಂದು ಸಾಕ್ಷ್ಯಾಧಾರವನ್ನು ತರಲಿ.

أَمْ لَهُ الْبَنَٰتُ وَلَكُمُ الْبَنُونَ ﴿٤٠﴾

**40.** ಅವನಿಗೆ (ಅಲ್ಲಾಹನಿಗೆ) ಪುತ್ರಿಯರೂ ನಿಮಗೆ ಪುತ್ರರೂ ಇರುವರೇನು?

أَمْ تَسْـَٔلُهُمْ أَجْرًا فَهُم مِّن مَّغْرَمٍ مُّثْقَلُونَ ﴿٤١﴾

**41.** ನೀನು ಅವರಿಂದ ಪ್ರತಿಫಲವನ್ನೇನಾದರೂ ಕೇಳುತ್ತಿಯೇನು? ಹಾಗೆ ಅವರು ಋಣಭಾರದಿಂದ ಕುಸಿದಿರುವರೇ?

أَمْ عِندَهُمُ الْغَيْبُ فَهُمْ يَكْتُبُونَ ﴿٤٢﴾

**42.** ಏನು, ಅವರಿಗೆ ಪರೋಕ್ಷ ಜ್ಞಾನವಿದೆಯೇ? ಹಾಗೆ ಅದನ್ನು ಅವರು ಬರೆದಿಡುತ್ತಾರೇನು?

أَمْ يُرِيدُونَ كَيْدًا ۖ فَالَّذِينَ كَفَرُوا هُمُ الْمَكِيدُونَ ﴿٤٣﴾

**43.** ಏನು ಅವರು ಷಡ್ಯಂತ್ರ ಹೂಡಬಯಸುತ್ತಾರೆಯೇ? ಆದರೆ, ಅವಿಶ್ವಾಸಿಗಳೇ ಷಡ್ಯಂತ್ರಕ್ಕೆ ತುತ್ತಾಗುತ್ತಾರೆ.

أَمْ لَهُمْ إِلَٰهٌ غَيْرُ اللَّهِ ۚ سُبْحَٰنَ اللَّهِ عَمَّا يُشْرِكُونَ ﴿٤٤﴾

**44.** ಏನು, ಅಲ್ಲಾಹನ ಹೊರತು ಅವರಿಗೆ ಬೇರೆ ದೇವನಿದ್ದಾನೆಯೇ? ಅವರು ಸಹಭಾಗಿತ್ವ ಕಲ್ಪಿಸುವುದರಿಂದೆಲ್ಲ ಅಲ್ಲಾಹನು ಪರಿಶುದ್ಧನಾಗಿದ್ದಾನೆ.

وَإِن يَرَوْا كِسْفًا مِّنَ السَّمَآءِ سَاقِطًا يَقُولُوا سَحَابٌ مَّرْكُومٌ ﴿٤٥﴾

**45.** ಆಕಾಶದಿಂದ ಒಂದು ತುಂಡು ಬೀಳುವುದನ್ನು ಅವರು ಕಂಡರೂ, 'ಅದೇನೋ ದಟ್ಟವಾದ ಮೋಡ' ಎಂದು ಅವರು ಹೇಳುವರು.





فَذَرْهُمْ حَتَّىٰ يُلَٰقُوا يَوْمَهُمُ الَّذِي فِيهِ يُصْعَقُونَ ﴿٤٦﴾

**46.** ಆದ್ದರಿಂದ, ಅವರು (ಶಿಕ್ಷೆಗೆ ಗುರಿಯಾಗಿ) ಮೂರ್ಛೆ ಹೋಗುವ ತಮ್ಮ ದುರ್ದಿನವನ್ನು ಕಾಣುವವರೆಗೆ ಅವರನ್ನು ಅವರ ಪಾಡಿಗೆ ಬಿಟ್ಟುಬಿಡು.

يَوْمَ لَا يُغْنِي عَنْهُمْ كَيْدُهُمْ شَيْـًٔا وَلَا هُمْ يُنصَرُونَ ﴿٤٧﴾

**47.** ಅಂದು ಅವರ ಕುತಂತ್ರಗಳೇನೂ ಅವರ ಪ್ರಯೋಜನಕ್ಕೆ ಬರಲಾರವು. ಅವರಿಗೆ ಯಾವ ನೆರವೂ ಸಿಗಲಾರದು.

وَإِنَّ لِلَّذِينَ ظَلَمُوا عَذَابًا دُونَ ذَٰلِكَ وَلَٰكِنَّ أَكْثَرَهُمْ لَا يَعْلَمُونَ ﴿٤٨﴾

**48.** ಖಂಡಿತವಾಗಿಯೂ ದುಷ್ಕರ್ಮಿಗಳಿಗೆ ಅದಲ್ಲದೆ ಬೇರೆಯೂ ಶಿಕ್ಷೆಯಿದೆ. ಆದರೆ ಹೆಚ್ಚಿನವರು ಮನವರಿಕೆ ಮಾಡುವುದಿಲ್ಲ.

وَاصْبِرْ لِحُكْمِ رَبِّكَ فَإِنَّكَ بِأَعْيُنِنَا ۖ وَسَبِّحْ بِحَمْدِ رَبِّكَ حِينَ تَقُومُ ﴿٤٩﴾

**49.** ಆದ್ದರಿಂದ ನಿನ್ನ ಪ್ರಭುವಿನ ತೀರ್ಪಿಗೋಸ್ಕರ ನೀನು ತಾಳ್ಮೆಯಿಂದ ನಿರೀಕ್ಷಿಸು. ಏಕೆಂದರೆ ನೀನು ನಮ್ಮ ಕಣ್ಣಮುಂದೆಯೇ ಇರುವಿ. ನೀನು ಎದ್ದು ನಿಲ್ಲುವಾಗ ನಿನ್ನ ಪ್ರಭುವಿನ ಸ್ತುತಿ ಕೀರ್ತನೆ ಮಾಡುತ್ತಾ ಅವನ ಪರಿಶುದ್ಧತೆಯನ್ನು ಕೊಂಡಾಡು.

وَمِنَ الَّيْلِ فَسَبِّحْهُ وَإِدْبَٰرَ النُّجُومِ ﴿٥٠﴾ ع

**50.** ರಾತ್ರಿಯ ಹೊತ್ತಿನಲ್ಲೂ ನಕ್ಷತ್ರಗಳು ಅಸ್ತಮಿಸುವ ವೇಳೆಯಲ್ಲೂ ಅವನ ಪಾವಿತ್ರ್ಯವನ್ನು ಸ್ತುತಿಸು.

سُوْرَةُ النَّجْمِ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّسِتُّوْنَ اٰيَةً وَّثَلٰثَةُ رُكُوْعَاتٍ

## 53. ಅನ್ನಜ್ಮ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 63 ಆಯತ್‌ಗಳು ಹಾಗೂ 3 ರುಕೂಉ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ﴿١﴾

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

وَالنَّجْمِ اِذَا هَوٰى ﴿٢﴾

**2. ನಕ್ಷತ್ರದಾಣೆ.**[442] **ಅದು** (ಆಧ್ಯಾತ್ಮಿಕ ದೃಷ್ಟಿಯಲ್ಲಿ) **ಕೆಳಗೆ ಬರುವಾಗ,**

مَا ضَلَّ صَاحِبُكُمْ وَمَا غَوٰى ﴿٣﴾

**3. ನಿಮ್ಮ ಸಂಗಡಿಗ ತಪ್ಪು ಮಾಡಿಲ್ಲ; ಪಥ ಭ್ರಷ್ಟನೂ ಅಲ್ಲ.**[443]

وَمَا يَنْطِقُ عَنِ الْهَوٰى ﴿٤﴾

**4. ಅವರು ತನ್ನ ಇಚ್ಛೆಯಂತೆ ಮಾತನಾಡುವುದಿಲ್ಲ.**

اِنْ هُوَ اِلَّا وَحْيٌ يُّوْحٰى ﴿٥﴾

**5. ಇದು ಅವತೀರ್ಣಗೊಳಿಸಲ್ಪಟ್ಟ ದಿವ್ಯ ಸಂದೇಶ ಹೊರತು ಬೇರೇನೂ ಅಲ್ಲ.**

عَلَّمَهٗ شَدِيْدُ الْقُوٰى ﴿٦﴾

**6. ಮಹಾ ಶಕ್ತಿಶಾಲಿಯಾದವನು** (ಅಲ್ಲಾಹನು) **ಅದನ್ನು ಅವರಿಗೆ ಕಲಿಸಿದನು.**

ذُوْ مِرَّةٍ ۚ فَاسْتَوٰى ﴿٧﴾

**7. ಅವನು ವಿವಿಧ ರೂಪದಲ್ಲಿ ಪದೇ ಪದೇ ಪ್ರಕಟವಾಗುವ ಶಕ್ತಿಯ ಪ್ರಭುವಾಗಿದ್ದಾನೆ. ಹಾಗೆ ಅವನು** (ತನ್ನ ಆಧಿಪತ್ಯದ ಸಿಂಹಾಸನದ ಮೇಲೆ) **ಆಸೀನನಾದನು.**

442. ಇಲ್ಲಿ 'ಸುರಯ್ಯಾ' (ಕೃತ್ತಿಕ) ನಕ್ಷತ್ರದ ಬಗ್ಗೆ ಸೂಚನೆ ಇದೆ. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ನುಡಿದಿರುವ ಒಂದು ಭವಿಷ್ಯವಾಣಿ ಹೀಗಿದೆ: "ಸತ್ಯವಿಶ್ವಾಸ ಸುರಯ್ಯಾ ನಕ್ಷತ್ರದೆಡೆಗೆ ಮೇಲೇರಿ ಹೋದರೂ ಫಾರಸೀ ವಂಶಜನಾದ ಓರ್ವ ಮಹಾಪುರುಷ ಅದನ್ನು ಅಲ್ಲಿಂದ ವಾಪಾಸು ತರುವರು." (ಬುಖಾರಿ-ತಫ್ಸೀರ್ ಸೂರತುಲ್ ಜುಮುಅ)

443. ಆ ವಾಗ್ದತ್ತ ಮಹಾಪುರುಷನ ಆಗಮನವಾದಾಗ, ಮುಹಮ್ಮದ್ ಪೈಗಂಬರ್ (ಸ)ರ ಎಲ್ಲ ಭವಿಷ್ಯವಾಣಿಗಳೂ ಅಧ್ಯಾಪನೆಗಳೂ ಸತ್ಯ ಮತ್ತು ಪರಿಪೂರ್ಣವೆಂದು ಸುಸ್ಪಷ್ಟವಾಗುವುವು.





وَهُوَ بِالْاُفُقِ الْاَعْلٰى ﴿٨﴾

**8. ಅವರು** (ಪ್ರವಾದಿ) **ಅತ್ಯುನ್ನತವಾದ ಕ್ಷಿತಿಜದಲ್ಲಿರುವಾಗ** (ಅಲ್ಲಾಹನು ತನ್ನ ವಚನವನ್ನು ಅವರಿಗೆ ಅವತೀರ್ಣಗೊಳಿಸಿದನು).

ثُمَّ دَنَا فَتَدَلّٰى ﴿٩﴾

**9. ಅನಂತರ ಅವರು ಮೇಲೇರಿ** (ಅಲ್ಲಾಹನೆಡೆಗೆ) **ಹೆಚ್ಚು ಸಮೀಪವಾದರು. ಆ ಬಳಿಕ ಅವರು** (ಮಾನವ ಕುಲದ ಬಳಿಗೆ) **ಇಳಿದರು.**

فَكَانَ قَابَ قَوْسَيْنِ اَوْ اَدْنٰى ﴿١٠﴾

**10. ಹಾಗೆ** ಅಲ್ಲಾಹನಿಗೆ **ಅವರು** (ಪ್ರವಾದಿ) **ಎರಡು ಬಿಲ್ಲುಗಳಿಗೆ ಒಂದೇ ದಾರದಂತೆ ಅಥವಾ ಅದಕ್ಕಿಂತಲೂ ಸಮೀಪವಾದರು.**

فَاَوْحٰٓى اِلٰى عَبْدِهٖ مَآ اَوْحٰى ﴿١١﴾

**11. ತಾನು ಅವತೀರ್ಣಗೊಳಿಸಬೇಕಾದುದನ್ನೇ ಅವನು ತನ್ನ ದಾಸನಿಗೆ ಅವತೀರ್ಣಗೊಳಿಸಿದನು.**

مَا كَذَبَ الْفُؤَادُ مَا رَاٰى ﴿١٢﴾

**12. ತಾನು ಕಂಡದ್ದನ್ನು** (ಪ್ರವಾದಿಯ) **ಹೃದಯ ಸುಳ್ಳಾಗಿಸಲಿಲ್ಲ.**

اَفَتُمٰرُوْنَهٗ عَلٰى مَا يَرٰى ﴿١٣﴾

**13. ಹಾಗಿರುವಾಗ ಅವರು ಏನನ್ನು ಕಂಡಿದ್ದರೋ ಆ ಬಗ್ಗೆ ನೀವು ಅವರೊಡನೆ ವಾಗ್ವಾದ ಮಾಡುತ್ತೀರೋ?**

وَلَقَدْ رَاٰهُ نَزْلَةً اُخْرٰى ﴿١٤﴾

**14. ಅವರು ಅವನನ್ನು** (ಅಲ್ಲಾಹನನ್ನು) **ಮತ್ತೊಮ್ಮೆ ಸಹ ಕಂಡಿದ್ದಾರೆ -**

عِنْدَ سِدْرَةِ الْمُنْتَهٰى ﴿١٥﴾

**15. 'ಸಿದ್‌ರತುಲ್ ಮುನ್ತಹಾ'ದ** [444] **ಸಮೀಪ;**

عِنْدَهَا جَنَّةُ الْمَاْوٰى ﴿١٦﴾

**16. ಅದರ ಸಮೀಪ ಶಾಶ್ವತ ವಾಸದ ಸ್ವರ್ಗವಿದೆ-**

اِذْ يَغْشَى السِّدْرَةَ مَا يَغْشٰى ﴿١٧﴾

**17. ಆವರಣವು** (ಅಂದರೆ ಅಲ್ಲಾಹನ ಮಹಿಮೆ) **ಆ ಬೋರಿ ವೃಕ್ಷವನ್ನು ಆವರಿಸಿಕೊಂಡಿದ್ದಾಗ** (ಅದು ಸಂಭವಿಸಿತು).

444. ಅತ್ಯುನ್ನತಿಯಲ್ಲಿರುವ ಬೋರಿ ವೃಕ್ಷ ಎಂದು ಶಬ್ದಾರ್ಥ. ಇದು ಅರ್ಥಗರ್ಭಿತವಾದೊಂದು ಉಪಮಾಲಂಕಾರ ಪ್ರಯೋಗವಾಗಿದೆ. ಬೋರಿ ವೃಕ್ಷದ ಎಲೆ ಒಂದು ವಿಷ ನಿವಾರಕ ಔಷಧವಾಗಿದೆ. ಆದ್ದರಿಂದಲೇ ಮೃತ ಶರೀರಕ್ಕೆ ಸ್ನಾನ ಮಾಡಿಸುವಾಗ ಈ ಎಲೆಯನ್ನು ಹಾಕಿ ಕುದಿಸಿದ ನೀರನ್ನು ಉಪಯೋಗಿಸುತ್ತಾರೆ. ಮೃತ ಶರೀರ ಕೊಳೆತು ಹೋಗದಂತೆ ಇದು ತಡೆಯುತ್ತದೆ. ಬೋರಿ ವೃಕ್ಷದ ಸಮೀಪ ಮುಹಮ್ಮದ್ ಪೈಗಂಬರ್ (ಸ) ರಿಗೆ ಅಲ್ಲಾಹನ ದರ್ಶನವಾಯಿತು ಎಂದು ಮೇಲಿನ ವಚನದಲ್ಲಿ ಹೇಳಿರುವುದರ ತಾತ್ಪರ್ಯವೇನೆಂದರೆ, ಮುಹಮ್ಮದ್ ಪೈಗಂಬರ್ (ಸ)ರಿಗೆ ಅವತೀರ್ಣವಾದ ಧರ್ಮೋಪದೇಶಗಳು ಎಂದೆಂದಿಗೂ ಚ್ಯುತಿಗೊಳ್ಳದೆ ಸುರಕ್ಷಿತವಾಗಿರುವುವು ಎಂದಾಗಿದೆ.

**18.** (ಪ್ರವಾದಿಯ) ದೃಷ್ಟಿ ವ್ಯತಿಕ್ರಮಿಸಲಿಲ್ಲ; ಅತಿಕ್ರಮಿಸಲೂ ಇಲ್ಲ.

مَا زَاغَ الْبَصَرُ وَمَا طَغٰى ﴿١٨﴾

**19.** ದಿಟವಾಗಿಯೂ ಅವರು ತನ್ನ ಪ್ರಭುವಿನ ಅತಿ ಮಹತ್ವದ ಹಲವು ದೃಷ್ಟಾಂತಗಳನ್ನು ಕಂಡರು.

لَقَدْ رَاٰى مِنْ اٰيٰتِ رَبِّهِ الْكُبْرٰى ﴿١٩﴾

**20.** ಇನ್ನು ಲಾತ್ ಮತ್ತು ಉಝ್ಝಾ[445] ಕುರಿತು ನೀವು ಚಿಂತಿಸಿದ್ದೀರಾ?

اَفَرَءَيْتُمُ اللّٰتَ وَالْعُزّٰى ﴿٢٠﴾

**21.** ಹಾಗೂ ಮನಾತ್[445] ಎಂಬ ಮೂರನೆಯದನ್ನು?

وَمَنٰوةَ الثَّالِثَةَ الْاُخْرٰى ﴿٢١﴾

**22.** ಏನು, ನಿಮಗೆ ಪುತ್ರರು ಮತ್ತು ಅವನಿಗೆ (ಅಲ್ಲಾಹನಿಗೆ) ಪುತ್ರಿಯರೇ?

اَلَكُمُ الذَّكَرُ وَلَهُ الْاُنْثٰى ﴿٢٢﴾

**23.** ಹಾಗಿದ್ದರೆ ನಿಜವಾಗಿಯೂ ಅದೊಂದು ಅನ್ಯಾಯದ ವಿಂಗಡನೆಯಾಗಿದೆ.

تِلْكَ اِذًا قِسْمَةٌ ضِيْزٰى ﴿٢٣﴾

**24.** ಇವು ನೀವು ಮತ್ತು ನಿಮ್ಮ ಪೂರ್ವಜರು ಹೆಸರಿಸಿದ ಕೆಲವು ನಾಮಗಳು ಮಾತ್ರ ಆಗಿವೆ. ಅವುಗಳ ಬಗ್ಗೆ ಯಾವುದೇ ಸಾಕ್ಷ್ಯಾಧಾರವನ್ನು ಅಲ್ಲಾಹನು ಅವತೀರ್ಣಗೊಳಿಸಿಲ್ಲ. ಊಹಾಪೋಹಗಳನ್ನು ಮತ್ತು ಸ್ವೇಚ್ಛೆಗಳನ್ನು ಮಾತ್ರ ಅವರು ಅನುಸರಿಸುತ್ತಾರೆ. ಆದರೆ ಅವರಿಗೆ ತಮ್ಮ ಪ್ರಭುವಿನಿಂದ ಈಗಾಗಲೇ ಮಾರ್ಗದರ್ಶನ ಬಂದಿರುತ್ತದೆ.

اِنْ هِيَ اِلَّآ اَسْمَآءٌ سَمَّيْتُمُوْهَآ اَنْتُمْ وَاٰبَآؤُكُمْ مَّآ اَنْزَلَ اللّٰهُ بِهَا مِنْ سُلْطٰنٍ ؕ اِنْ يَّتَّبِعُوْنَ اِلَّا الظَّنَّ وَمَا تَهْوَى الْاَنْفُسُ ۚ وَلَقَدْ جَآءَهُمْ مِّنْ رَّبِّهِمُ الْهُدٰى ﴿٢٤﴾

**25.** ಏನು, ತಾನು ಇಚ್ಛಿಸುವುದೆಲ್ಲ ಮನುಷ್ಯನಿಗೆ ದೊರಕುವುದೇ?

اَمْ لِلْاِنْسَانِ مَا تَمَنّٰى ﴿٢٥﴾

**26.** (ಇಲ್ಲ,) ಆದರೆ ಅಂತ್ಯವೂ ಆದಿಯೂ ಅಲ್ಲಾಹನಿಗೇ ಸೇರಿವೆ.

فَلِلّٰهِ الْاٰخِرَةُ وَالْاُوْلٰى ﴿٢٦﴾ ع

**27.** ಆಕಾಶಗಳಲ್ಲಿ ಎಷ್ಟೆಲ್ಲ ದೇವದೂತರಿದ್ದಾರೆ! ಆದರೆ ಅಲ್ಲಾಹನು ಅನುಮತಿ ನೀಡಿದ ಬಳಿಕ ಹೊರತು ಅವನು ಉದ್ದೇಶಿಸುವ ಮತ್ತು ಮೆಚ್ಚುವವರಿಗೋಸ್ಕರ

وَكَمْ مِّنْ مَّلَكٍ فِی السَّمٰوٰتِ لَا تُغْنِيْ

445. ಮಕ್ಕದ ಖುರೈಶಿ ಗೋತ್ರದ ಆರಾಧ್ಯ ವಿಗ್ರಹಗಳು.





ಅಲ್ಲದೆ (ಮತ್ಯಾರಿಗೂ) ಅವರ ಶಿಫಾರಸು ಪ್ರಯೋಜನವಾಗಲಾರದು.

شَفَاعَتُهُمْ شَيْـًٔا اِلَّا مِنْۢ بَعْدِ اَنْ يَّاْذَنَ اللّٰهُ لِمَنْ يَّشَآءُ وَيَرْضٰى ﴿٢٧﴾

**28.** ಪರಲೋಕದಲ್ಲಿ ನಂಬಿಕೆ ಇಲ್ಲದವರು ಸ್ತ್ರೀ ನಾಮಗಳಿಂದ ದೇವದೂತರನ್ನು ಹೆಸರಿಸುತ್ತಾರೆ.

اِنَّ الَّذِيْنَ لَا يُؤْمِنُوْنَ بِالْاٰخِرَةِ لَيُسَمُّوْنَ الْمَلٰٓئِكَةَ تَسْمِيَةَ الْاُنْثٰى ﴿٢٨﴾

**29.** ಆ ಬಗ್ಗೆ ಅವರಿಗೇನೂ ತಿಳುವಳಿಕೆ ಇಲ್ಲ. ಅವರು ಊಹಾಪೋಹಗಳನ್ನು ಮಾತ್ರ ಹಿಂಬಾಲಿಸುತ್ತಾರೆ. ಸತ್ಯಕ್ಕೆ ವಿರುದ್ಧವಾಗಿ ಊಹಾಪೋಹಗಳು ಏನೂ ಪ್ರಯೋಜನವಾಗಲಿಕ್ಕಿಲ್ಲ.

وَمَا لَهُمْ بِهٖ مِنْ عِلْمٍ ؕ اِنْ يَّتَّبِعُوْنَ اِلَّا الظَّنَّ ۚ وَاِنَّ الظَّنَّ لَا يُغْنِيْ مِنَ الْحَقِّ شَيْـًٔا ﴿٢٩﴾

**30.** ಆದುದರಿಂದ ನಮ್ಮ ಸ್ಮರಣೆಯಿಂದ ವಿಮುಖನಾಗಿರುವ ಹಾಗೂ ಕೇವಲ ಐಹಿಕ ಜೀವನದ ಗಳಿಕೆಗಳನ್ನು ಮಾತ್ರ ಅರಸುವವನಿಂದ ನೀನು ಮುಖ ತಿರುಗಿಸು.

فَاَعْرِضْ عَنْ مَّنْ تَوَلّٰى ۙ عَنْ ذِكْرِنَا وَلَمْ يُرِدْ اِلَّا الْحَيٰوةَ الدُّنْيَا ﴿٣٠﴾

**31.** ಅದು ಅವರ ಜ್ಞಾನದ ಮೇರೆಯಾಗಿದೆ. ಯಾರು ಅವನ (ಅಲ್ಲಾಹನ) ಪಥದಿಂದ ದೂರ ಸರಿಯುತ್ತಾನೋ, ಆತನ ಬಗ್ಗೆ ನಿನ್ನ ಪ್ರಭು ಚೆನ್ನಾಗಿ ಬಲ್ಲವನಾಗಿದ್ದಾನೆ. ಯಾರು ಮಾರ್ಗದರ್ಶನವನ್ನು ಅನುಸರಿಸುತ್ತಾನೋ ಆತನ ಬಗ್ಗೆ ಸಹ ಅವನು (ಅಲ್ಲಾಹನು) ಚೆನ್ನಾಗಿ ಬಲ್ಲನು.

ذٰلِكَ مَبْلَغُهُمْ مِّنَ الْعِلْمِ ؕ اِنَّ رَبَّكَ هُوَ اَعْلَمُ بِمَنْ ضَلَّ عَنْ سَبِيْلِهٖ ۙ وَهُوَ اَعْلَمُ بِمَنِ اهْتَدٰى ﴿٣١﴾

**32.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೆ ಸೇರಿವೆ. ತತ್ಫಲವಾಗಿ ದುಷ್ಕರ್ಮಿಗಳಿಗೆ ಅವರ ದುಷ್ಕೃತ್ಯಗಳ ಪ್ರತಿಫಲವನ್ನು ಅವನು ಕೊಡುವನು. ಹಾಗೆಯೇ ಸತ್ಕರ್ಮಿಗಳಿಗೆ ಅತ್ಯುತ್ತಮವಾದ ಪ್ರತಿಫಲವನ್ನು ಸಹ ನೀಡುವನು.

وَلِلّٰهِ مَا فِی السَّمٰوٰتِ وَمَا فِی الْاَرْضِ ۙ لِيَجْزِيَ الَّذِيْنَ اَسَآءُوْا بِمَا عَمِلُوْا وَيَجْزِيَ الَّذِيْنَ اَحْسَنُوْا بِالْحُسْنٰى ﴿٣٢﴾

**33.** ಅವರು ಮಹಾಪಾಪಗಳಿಂದ ಮತ್ತು ಅಶ್ಲೀಲ ವರ್ತನೆಗಳಿಂದ ದೂರಸರಿಯುವವರಾಗಿದ್ದಾರೆ. ಆದರೆ ಸಣ್ಣ ಪುಟ್ಟ ಲೋಪದೋಷಗಳು *ಅವರಿಂದ ಉಂಟಾಗಿ ಅವರು ಕ್ಷಮೆಯಾಚಿಸಿದರೆ* ಖಂಡಿತವಾಗಿಯೂ ನಿನ್ನ ಪ್ರಭು ಕ್ಷಮೆ ನೀಡುವುದರಲ್ಲಿ ಬಹಳ ಉದಾರಿಯಾಗಿದ್ದಾನೆ.

اَلَّذِيْنَ يَجْتَنِبُوْنَ كَبٰٓئِرَ الْاِثْمِ وَالْفَوَاحِشَ اِلَّا اللَّمَمَ ؕ اِنَّ رَبَّكَ وَاسِعُ

ಅವನು ನಿಮ್ಮನ್ನು ಭೂಮಿಯಿಂದ ಸೃಷ್ಟಿಸಿದಾಗಲೂ ನೀವು ನಿಮ್ಮ ತಾಯಂದಿರ ಗರ್ಭಾಶಯಗಳಲ್ಲಿ ಭ್ರೂಣಾವಸ್ಥೆಯಲ್ಲಿದ್ದಾಗಲೂ ನಿಮ್ಮ ಬಗ್ಗೆ ಚೆನ್ನಾಗಿ ಬಲ್ಲನು. ಆದ್ದರಿಂದ ನೀವು ನಿಮ್ಮ ಬಗ್ಗೆ ಪರಿಶುದ್ಧರೆಂದು ಭಾವಿಸಬೇಡಿರಿ. (ನಿಜವಾದ) ಸದ್ಧರ್ಮಿ ಯಾರೆಂದು ಅವನಿಗೆ ಚೆನ್ನಾಗಿ ಗೊತ್ತು.

الْمَغْفِرَةِ ۚ هُوَ أَعْلَمُ بِكُمْ إِذْ أَنْشَأَكُمْ مِنَ الْأَرْضِ وَإِذْ أَنْتُمْ أَجِنَّةٌ فِي بُطُونِ أُمَّهَاتِكُمْ ۖ فَلَا تُزَكُّوا أَنْفُسَكُمْ ۖ هُوَ أَعْلَمُ بِمَنِ اتَّقَىٰ ﴿٣٣﴾

34. ನೀನು ಕಂಡಿದ್ದೀಯಾ - ಪರಾಙ್ಮುಖನಾಗುವವನನ್ನು?

أَفَرَأَيْتَ الَّذِي تَوَلَّىٰ ﴿٣٤﴾

35. ಕಡಿಮೆ ಕೊಡುವವನನ್ನು ಮತ್ತು ಕೊಡಲು ಇಷ್ಟವಿಲ್ಲದವನನ್ನು?

وَأَعْطَىٰ قَلِيلًا وَأَكْدَىٰ ﴿٣٥﴾

36. ಏನು, ಅವನಿಗೆ ಅಗೋಚರ ಸಂಗತಿಗಳ ಬಗ್ಗೆ ಜ್ಞಾನವಿದೆಯೇ? ಹಾಗೆ ಅವನು (ತನ್ನ ಅಂತ್ಯದ ಬಗ್ಗೆ) ಕಾಣಬಲ್ಲನೇನು?

أَعِنْدَهُ عِلْمُ الْغَيْبِ فَهُوَ يَرَىٰ ﴿٣٦﴾

37. ಮೂಸಾರ ಗ್ರಂಥದಲ್ಲಿರುವುದರ ಕುರಿತು ಅವನಿಗೆ ತಿಳಿಸಲಾಗಿಲ್ಲವೇ?

أَمْ لَمْ يُنَبَّأْ بِمَا فِي صُحُفِ مُوسَىٰ ﴿٣٧﴾

38. ಹಾಗೆಯೇ ಆಜ್ಞಾಪಾಲಕನಾದ ಇಬ್ರಾಹೀಮರ (ಗ್ರಂಥದಲ್ಲಿರುವುದರ) ಬಗ್ಗೆ ಸಹ -

وَإِبْرَاهِيمَ الَّذِي وَفَّىٰ ﴿٣٨﴾

39. (ಅದೇನೆಂದರೆ) ಭಾರ ಹೊರುವ ಯಾವೊಬ್ಬನೇ ಆಗಲಿ ಇನ್ನೊಬ್ಬನ ಭಾರ ಹೊರುವುದಿಲ್ಲ;

أَلَّا تَزِرُ وَازِرَةٌ وِزْرَ أُخْرَىٰ ﴿٣٩﴾

40. ಮತ್ತು ತಾನು ಯಾವುದಕ್ಕೆ ಪ್ರಯತ್ನಿಸುತ್ತಾನೋ ಮನುಷ್ಯನಿಗೆ ಅದರ ಹೊರತು ಬೇರೇನೂ ಲಭಿಸಲಾರದು.

وَأَنْ لَيْسَ لِلْإِنْسَانِ إِلَّا مَا سَعَىٰ ﴿٤٠﴾

41. ಹಾಗೂ ಅವನ ಪರಿಶ್ರಮದ ಫಲವನ್ನು ಅವನು ಖಂಡಿತವಾಗಿಯೂ ಆ ಬಳಿಕ ಕಾಣುವನು.

وَأَنَّ سَعْيَهُ سَوْفَ يُرَىٰ ﴿٤١﴾

42. ಅನಂತರ ಸಂಪೂರ್ಣವಾದ ಪ್ರತಿಫಲವನ್ನು ಅವನಿಗೆ ನೀಡಲಾಗುವುದು.

ثُمَّ يُجْزَاهُ الْجَزَاءَ الْأَوْفَىٰ ﴿٤٢﴾





43. ಕೊನೆಗೆ ಎಲ್ಲವೂ ನಿನ್ನ ಪ್ರಭುವಿನ ಬಳಿಗೆ ಬಂದು ಸೇರುವುವು.

وَأَنَّ إِلَىٰ رَبِّكَ الْمُنْتَهَىٰ ﴿٤٣﴾

44. ನಗುವಂತೆಯೂ ಅಳುವಂತೆಯೂ ಮಾಡುವವನು ಅವನೇ ಆಗಿದ್ದಾನೆ.

وَأَنَّهُ هُوَ أَضْحَكَ وَأَبْكَىٰ ﴿٤٤﴾

45. ಸಾಯಿಸುವವನೂ ಬದುಕಿಸುವವನೂ ಅವನೇ.

وَأَنَّهُ هُوَ أَمَاتَ وَأَحْيَا ﴿٤٥﴾

46. ಅವನೇ ಗಂಡು - ಹೆಣ್ಣು ಜೋಡಿಗಳನ್ನು ಸೃಷ್ಟಿಸುವವನು -

وَأَنَّهُ خَلَقَ الزَّوْجَيْنِ الذَّكَرَ وَالْأُنْثَىٰ ﴿٤٦﴾

47. ವೀರ್ಯಾಣುವಿನಿಂದ - ಅದು (ಗರ್ಭಾಶಯದಲ್ಲಿ) ಸ್ರವಿಸಲ್ಪಡುವಾಗ.

مِنْ نُطْفَةٍ إِذَا تُمْنَىٰ ﴿٤٧﴾

48. ಪುನರುತ್ಥಾನಗೊಳಿಸುವುದು ಸಹ ಅವನೇ.

وَأَنَّ عَلَيْهِ النَّشْأَةَ الْأُخْرَىٰ ﴿٤٨﴾

49. ಐಶ್ವರ್ಯ ನೀಡುವವನೂ ಸಂತೃಪ್ತಿ ದಯಪಾಲಿಸುವವನೂ ಅವನೇ.

وَأَنَّهُ هُوَ أَغْنَىٰ وَأَقْنَىٰ ﴿٤٩﴾

50. 'ಶಿಅ್‌ರಾ'[446] (ನಕ್ಷತ್ರ)ದ ಪ್ರಭುವೂ ಅವನೇ.

وَأَنَّهُ هُوَ رَبُّ الشِّعْرَىٰ ﴿٥٠﴾

51. ಪ್ರಥಮದ ಆದ್ (ಸಮುದಾಯದ) ಮೊದಲ ಗೋತ್ರವನ್ನು ಅವನು ನಾಶಗೊಳಿಸಿದನು;

وَأَنَّهُ أَهْلَكَ عَادًا الْأُولَىٰ ﴿٥١﴾

52. ಸಮೂದ್ ಗೋತ್ರವನ್ನು ಸಹ. (ಅವರ ಪೈಕಿ) ಯಾರನ್ನೂ ಅವನು ಬಾಕಿಯುಳಿಸಲಿಲ್ಲ.

وَثَمُودَ فَمَا أَبْقَىٰ ﴿٥٢﴾

53. ಅದಕ್ಕಿಂತ ಮುಂಚೆ ನೂಹ್‌ರ ಜನರನ್ನೂ (ಅವನು ನಾಶಗೊಳಿಸಿದನು). ಅವರು ಮಹಾ ದುಷ್ಕರ್ಮಿಗಳೂ ಧಿಕ್ಕಾರಿಗಳೂ ಆಗಿದ್ದರು.

وَقَوْمَ نُوحٍ مِنْ قَبْلُ ۖ إِنَّهُمْ كَانُوا هُمْ أَظْلَمَ وَأَطْغَىٰ ﴿٥٣﴾

54. ಅಡಿಮೇಲಾದ (ಲೂತ್‌ರ) ಪಟ್ಟಣವನ್ನೂ ಅವನು ಕೆಡವಿ ಬಿಟ್ಟನು.

وَالْمُؤْتَفِكَةَ أَهْوَىٰ ﴿٥٤﴾

446. ಶಿಅ್‌ರಾ = Sirius. ಅಜ್ಞಾನ ಕಾಲದಲ್ಲಿ ಅರಬರಿಂದ ಆರಾಧಿಸಲ್ಪಡುತ್ತಿದ್ದ ಒಂದು ನಕ್ಷತ್ರದ ಹೆಸರು.

فَغَشّٰىهَا مَا غَشّٰى ﴿٥٥﴾

**55. ಆಗ ಅದನ್ನು** (ಆ ಪಟ್ಟಣವನ್ನು) **ಆವರಿಸ ಬೇಕಾದುದು ಆವರಿಸಿತು.**

فَبِاَيِّ اٰلَآءِ رَبِّكَ تَتَمَارٰى ﴿٥٦﴾

**56.** (ಎಲೈ ಮಾನವಾ,) **ನಿನ್ನ ಪ್ರಭುವಿನ ಯಾವ ಅನುಗ್ರಹದ ಬಗ್ಗೆ ನಿನಗೆ ಸಂಶಯವಿದೆ?**

هٰذَا نَذِيْرٌ مِّنَ النُّذُرِ الْاُوْلٰى ﴿٥٧﴾

**57. ಇವರು** (ಪ್ರವಾದಿ) **ಪೂರ್ವಿಕ ಮುನ್ನೆಚ್ಚರಿಕೆ ಗಾರರಂಥ ಓರ್ವ ಮುನ್ನೆಚ್ಚರಿಕೆಗಾರ ಆಗಿದ್ದಾರೆ.**

اَزِفَتِ الْاٰزِفَةُ ﴿٥٨﴾

**58. ಸಮೀಪಿಸಬೇಕಾದುದು** (ಶಿಕ್ಷೆ) **ಸಮೀಪಿಸಿದೆ.**

لَيْسَ لَهَا مِنْ دُوْنِ اللّٰهِ كَاشِفَةٌ ﴿٥٩﴾

**59. ಅಲ್ಲಾಹನ ಹೊರತು ಅದನ್ನು ತೊಲಗಿಸು ವವನು ಯಾರೂ ಇಲ್ಲ.**

اَفَمِنْ هٰذَا الْحَدِيْثِ تَعْجَبُوْنَ ﴿٦٠﴾

**60. ಏನು, ಈ ಮಾತಿನಿಂದ ನಿಮಗೆ ಆಶ್ಚರ್ಯ ವಾಗಿದೆಯೇ?**

وَتَضْحَكُوْنَ وَلَا تَبْكُوْنَ ﴿٦١﴾

**61. ನೀವು ನಗುತ್ತೀರಿ; ಅಳುವುದಿಲ್ಲ!**

وَاَنْتُمْ سَامِدُوْنَ ﴿٦٢﴾

**62. ನೀವು ಅಹಂಭಾವ ತೋರಿಸುವವರೂ ಆಗಿದ್ದೀರಿ.**

فَاسْجُدُوْا لِلّٰهِ وَاعْبُدُوْا ﴿٦٣﴾ ۩

**63. ನೀವು ಅಲ್ಲಾಹನಿಗೆ ಸಾಷ್ಟಾಂಗವೆರಗಿರಿ ಮತ್ತು** (ಅವನನ್ನು) **ಆರಾಧಿಸಿರಿ.**

سُوْرَةُ الْقَمَرِ مَكِّيَّةٌ وَّهِيَ مَعَ الْبَسْمَلَةِ سِتٌّ وَّخَمْسُوْنَ اٰيَةً وَّثَلٰثَةُ رُكُوْعَاتٍ

# 54. ಅಲ್‌ಖಮರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 56 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (1)

**2. ಆ ನಿಶ್ಚಿತ ಸಮಯ ಸನ್ನಿಹಿತವಾಯಿತು; ಚಂದ್ರ ಸೀಳಲ್ಪಟ್ಟಿತು.**[447]

اِقْتَرَبَتِ السَّاعَةُ وَانْشَقَّ الْقَمَرُ (2)

**3. ಅವರು ಯಾವ ದೃಷ್ಟಾಂತ ಕಂಡರೂ ಮುಖ ತಿರುಗಿಸಿ, 'ಇದು ಪೂರ್ವಕಾಲದಿಂದಲೇ ರೂಢಿಯಲ್ಲಿರುವ ಒಂದು ಜಾದೂ ವಿದ್ಯೆಯಾಗಿದೆ' ಎಂದು ಹೇಳುವರು.**

وَاِنْ يَّرَوْا اٰيَةً يُّعْرِضُوْا وَيَقُوْلُوْا سِحْرٌ مُّسْتَمِرٌّ (3)

**4. ಅವರು ಸುಳ್ಳಾಗಿಸಿದರು ಹಾಗೂ ಸ್ವೇಚ್ಛೆಯಿಂದ ವರ್ತಿಸಿದರು. ಆದರೆ** (ಅಲ್ಲಾಹನ) **ಪ್ರತಿಯೊಂದು ವಿಧಿ ನಿರ್ದಿಷ್ಟ ಸಮಯದಲ್ಲಿ ಈಡೇರುವುದು.**

وَكَذَّبُوْا وَاتَّبَعُوْٓا اَهْوَآءَهُمْ وَكُلُّ اَمْرٍ مُّسْتَقِرٌّ (4)

**5. ಕಟ್ಟೆಚ್ಚರಿಕೆಯಿಂದ ಕೂಡಿದ ಭವಿಷ್ಯ ವಾಣಿಗಳು ಇಷ್ಟರಲ್ಲಿಯೇ ಅವರಿಗೆ ತಲಪಿವೆ.**

وَلَقَدْ جَآءَهُمْ مِّنَ الْاَنْۢبَآءِ مَا فِيْهِ مُزْدَجَرٌ (5)

**6. ಸಂಪೂರ್ಣ ಜ್ಞಾನನಿರ್ಭರವಾದುದು. ಆದರೆ ಆ ಮುನ್ನೆಚ್ಚರಿಕೆಗಳು ಅವರಿಗೆ ಉಪಯುಕ್ತವಾಗಲಿಲ್ಲ.**

حِكْمَةٌ ۢ بَالِغَةٌ فَمَا تُغْنِ النُّذُرُ (6)

**7. ಆದ್ದರಿಂದ ನೀನು ಅವರಿಂದ ಮುಖ ತಿರುಗಿಸು. ಕರೆಯುವ ಒಬ್ಬನು ಅವರಿಗೆ ಇಷ್ಟವಿಲ್ಲದೆಡೆಗೆ** (ಅವರನ್ನು) **ಕರೆಯುವ ದಿನ -**

فَتَوَلَّ عَنْهُمْ ۘ يَوْمَ يَدْعُ الدَّاعِ اِلٰى شَيْءٍ نُّكُرٍ (7)

447. ಚಂದ್ರ, ಅಂದಿನ ಅರಬಿ ರಾಜವಂಶದ ಲಾಂಛನವಾಗಿತ್ತು. "ಆ ನಿಶ್ಚಿತ ಸಮಯ (ಸಾಅತ್) ಸನ್ನಿಹಿತವಾಯಿತು; ಚಂದ್ರ ಸೀಳಲ್ಪಟ್ಟಿತು" ಅಂದರೆ ಇಸ್ಲಾಮಿನ ವಿಜಯವೂ ಅಂದಿನ ಅರಬಿ ರಾಜವಂಶದ ಅವನತಿಯೂ ಉಂಟಾಗುವ ಕಾಲ ಸಮೀಪವಾಯಿತು ಎಂದರ್ಥ.





**8. ಅವರ ದೃಷ್ಟಿಗಳು ತಗ್ಗಿಸಲ್ಪಟ್ಟ ಸ್ಥಿತಿಯಲ್ಲಿರುವುವು. ಚದರಿಹೋದ ಮಿಡಿತೆಗಳಂತೆ ಅವರು ಗೋರಿಗಳಿಂದ ಹೊರಗೆ ಬರುವರು -**

خُشَّعًا اَبْصَارُهُمْ يَخْرُجُوْنَ مِنَ الْاَجْدَاثِ كَاَنَّهُمْ جَرَادٌ مُّنْتَشِرٌ (8)

**9. ಕರೆಯುವವನತ್ತ ಧಾವಿಸುತ್ತಾ. 'ಇದು ಕಠೋರವಾದೊಂದು ದಿನವಾಗಿದೆ' ಎಂದು ಅವಿಶ್ವಾಸಿಗಳು ಹೇಳುವರು.**

مُّهْطِعِيْنَ اِلَى الدَّاعِ ۗ يَقُوْلُ الْكٰفِرُوْنَ هٰذَا يَوْمٌ عَسِرٌ (9)

**10. ಇವರಿಗಿಂತ ಮುಂಚೆ ನೂಹ್‌ರ ಜನತೆ** (ಸತ್ಯವನ್ನು) **ತಿರಸ್ಕರಿಸಿದ್ದರು. ಅವರು ನಮ್ಮ ದಾಸನನ್ನು ಸುಳ್ಳಾಗಿಸಿ, 'ಇವನೊಬ್ಬ ಹುಚ್ಚ, ತಿರಸ್ಕರಿಸಲ್ಪಟ್ಟವನು' ಎಂದು ಹೇಳಿದರು.**

كَذَّبَتْ قَبْلَهُمْ قَوْمُ نُوْحٍ فَكَذَّبُوْا عَبْدَنَا وَقَالُوْا مَجْنُوْنٌ وَّازْدُجِرَ (10)

**11. ಆದ್ದರಿಂದ ಅವರು** (ನೂಹ್) **ತನ್ನ ಪ್ರಭುವನ್ನು ಕರೆದು, 'ನಾನು ಸೋತಿದ್ದೇನೆ; ನನಗೆ ನೆರವಾಗು' ಎಂದು ಪ್ರಾರ್ಥಿಸಿದರು.**

فَدَعَا رَبَّهٗٓ اَنِّيْ مَغْلُوْبٌ فَانْتَصِرْ (11)

**12. ಆಗ ರಭಸದಿಂದ ಸುರಿಯುವ ಮಳೆಯೊಂದಿಗೆ ನಾವು ಆಕಾಶದ ಕವಾಟಗಳನ್ನು ತೆರೆದೆವು.**

فَفَتَحْنَآ اَبْوَابَ السَّمَآءِ بِمَآءٍ مُّنْهَمِرٍ (12)

**13. 'ಭೂಮಿಯೊಳಗಿಂದ ನೀರಿನ ಒರತೆಗಳು ಹರಿಯುವಂತೆಯೂ ನಾವು ಮಾಡಿದೆವು. ಆಗ ಆ ವಿಧಿಸಲ್ಪಟ್ಟ ಕಾರ್ಯಕ್ಕೋಸ್ಕರ** (ಆಕಾಶದ) **ನೀರು** (ಭೂಮಿಯ ನೀರಿನೊಂದಿಗೆ) **ಒಟ್ಟು ಸೇರಿತು.**

وَّفَجَّرْنَا الْاَرْضَ عُيُوْنًا فَالْتَقَى الْمَآءُ عَلٰٓى اَمْرٍ قَدْ قُدِرَ (13)

**14. ಹಲಗೆ ಮತ್ತು ಮೊಳೆಗಳಿಂದ** (ನಿರ್ಮಿತವಾದ ನೌಕೆ ಮೂಲಕ) **ನಾವು ಅವರನ್ನು**[448] **ಕೊಂಡೊಯ್ದೆವು.**

وَحَمَلْنٰهُ عَلٰى ذَاتِ اَلْوَاحٍ وَّدُسُرٍ (14)

**15. ಜನರಿಂದ ತಿರಸ್ಕರಿಸಲ್ಪಟ್ಟವನಿಗೆ** (ನೂಹ್‌ರಿಗೆ) **ಒಂದು ಪ್ರತಿಫಲವೆಂಬಂತೆ ಅದು** (ಆ ನೌಕೆ) **ನಮ್ಮ ಮೇಲ್ನೋಟದಲ್ಲಿ ಚಲಿಸುತ್ತಿತ್ತು.**

تَجْرِيْ بِاَعْيُنِنَا ۚ جَزَآءً لِّمَنْ كَانَ كُفِرَ (15)

**16. ನಾವು ಅದನ್ನು** (ನಂತರದ ಪೀಳಿಗೆಗಳಿಗೆ) **ಒಂದು ದೃಷ್ಟಾಂತವಾಗಿ ಮಾಡಿರುವೆವು. ಆದರೆ ಉಪದೇಶವನ್ನು ಗ್ರಾಹ್ಯಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ تَّرَكْنٰهَآ اٰيَةً فَهَلْ مِنْ مُّدَّكِرٍ (16)

448. ಪ್ರವಾದಿ ನೂಹ್‌ರನ್ನು.

**17. ಆಗ ನನ್ನ ಶಿಕ್ಷೆ ಮತ್ತು ಮುನ್ನೆಚ್ಚರಿಕೆ ಹೇಗಿತ್ತು?** (ಅದೆಷ್ಟು ಭಯಾನಕವಾಗಿತ್ತು?)

فَكَيْفَ كَانَ عَذَابِي وَنُذُرِ ﴿١٦﴾

**18. ದಿಟವಾಗಿಯೂ ನಾವು ಖುರ್‌ಆನನ್ನು** (ಮನವರಿಕೆ ಮಾಡಲಿಕ್ಕೆ ಮತ್ತು) **ನೆನಪಿಟ್ಟುಕೊಳ್ಳಲಿಕ್ಕೆ ಸುಲಭಗೊಳಿಸಿದ್ದೇವೆ. ಆದರೆ ಉಪದೇಶವನ್ನು ಗ್ರಾಹ್ಯ ಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ يَسَّرْنَا الْقُرْآنَ لِلذِّكْرِ فَهَلْ مِن مُّدَّكِرٍ ﴿١٧﴾

**19. ಆದ್** (ಗೋತ್ರದವರು ಸತ್ಯವನ್ನು) **ಸುಳ್ಳಾಗಿಸಿದರು. ಆಗ ನನ್ನ ಶಿಕ್ಷೆ ಮತ್ತು ಮುನ್ನೆಚ್ಚರಿಕೆ ಹೇಗಿತ್ತು?**

كَذَّبَتْ عَادٌ فَكَيْفَ كَانَ عَذَابِي وَنُذُرِ ﴿١٨﴾

**20. ದೀರ್ಘವಾದ ದುರ್ದೆಶೆಯ ಒಂದು ದಿನದಂದು ನಾವು ಅವರ ಮೇಲೆ ಬಿರುಗಾಳಿ ಬೀಸುವಂತೆ ಮಾಡಿದೆವು.**

إِنَّا أَرْسَلْنَا عَلَيْهِمْ رِيحًا صَرْصَرًا فِي يَوْمِ نَحْسٍ مُّسْتَمِرٍّ ﴿١٩﴾

**21. ಬೇರು ಕೀಳಲ್ಪಟ್ಟ ಖರ್ಜೂರದ ಮರಗಳಂತೆ ಅದು ಜನರನ್ನು ಕಿತ್ತೆಸೆಯಿತು.**

تَنزِعُ النَّاسَ كَأَنَّهُمْ أَعْجَازُ نَخْلٍ مُّنقَعِرٍ ﴿٢٠﴾

**22. ಆಗ ನನ್ನ ಶಿಕ್ಷೆ ಮತ್ತು ಮುನ್ನೆಚ್ಚರಿಕೆ ಹೇಗಿತ್ತು?**

فَكَيْفَ كَانَ عَذَابِي وَنُذُرِ ﴿٢١﴾

**23. ದಿಟವಾಗಿಯೂ ನಾವು ಖುರ್‌ಆನನ್ನು** (ಮನವರಿಕೆ ಮಾಡಲಿಕ್ಕೆ ಮತ್ತು) **ನೆನಪಿಟ್ಟುಕೊಳ್ಳಲಿಕ್ಕೆ ಸುಲಭಗೊಳಿಸಿದ್ದೇವೆ. ಆದರೆ ಉಪದೇಶವನ್ನು ಗ್ರಾಹ್ಯ ಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ يَسَّرْنَا الْقُرْآنَ لِلذِّكْرِ فَهَلْ مِن مُّدَّكِرٍ ﴿٢٢﴾

**24. ಸಮೂದ್** (ಗೋತ್ರ) **ಮುನ್ನೆಚ್ಚರಿಕೆ ಗಾರರನ್ನು ಸುಳ್ಳಾಗಿಸಿತು.**

كَذَّبَتْ ثَمُودُ بِالنُّذُرِ ﴿٢٣﴾

**25. ಅವರು ಹೇಳಿದರು: 'ನಮ್ಮ ಪೈಕಿಯ ಏಕಾಂಗಿಯಾದ ಒಬ್ಬ ಮನುಷ್ಯನನ್ನು ನಾವು ಅನುಸರಿಸಬೇಕೇನು? ಆಗ ನಿಜವಾಗಿಯೂ ನಾವು ಹಾದಿ ತಪ್ಪಿದವರೂ ಹುಚ್ಚುತನ ಬಾಧಿಸಿದವರೂ ಆಗುವೆವು.**

فَقَالُوا أَبَشَرًا مِّنَّا وَاحِدًا نَّتَّبِعُهُ إِنَّا إِذًا لَّفِي ضَلَالٍ وَسُعُرٍ ﴿٢٤﴾



ಭಾಗ 27 ಅಲ್‌ಖಮರ್ ಅಧ್ಯಾಯ 54

**26. 'ನಮ್ಮ ಮಧ್ಯೆ ಅವನಿಗೆ** (ಮಾತ್ರ) **ದೈವಿಕ ಸಂದೇಶ ನೀಡಲ್ಪಟ್ಟಿದೆಯೇನು? ಇಲ್ಲ, ಅವನು ಅಹಂಭಾವಿಯಾದ ಮಹಾ ಸುಳ್ಳುಗಾರನಾಗಿದ್ದಾನೆ.'**

أَأُلْقِيَ الذِّكْرُ عَلَيْهِ مِن بَيْنِنَا بَلْ هُوَ كَذَّابٌ أَشِرٌ ﴿٢٥﴾

**27.** (ನಾವು ಹೇಳಿದೆವು:) **'ಅಹಂಭಾವಿಯಾದ ಮಹಾ ಸುಳ್ಳುಗಾರ ಯಾರೆಂದು ನಾಳೆ ಅವರಿಗೆ ತಿಳಿಯುವುದು.**

سَيَعْلَمُونَ غَدًا مَّنِ الْكَذَّابُ الْأَشِرُ ﴿٢٦﴾

**28. 'ಅವರನ್ನು ಪರೀಕ್ಷಿಸಲಿಕ್ಕೋಸ್ಕರ ನಾವು ಒಂದು ಹೆಣ್ಣು ಒಂಟೆಯನ್ನು ಕಳುಹಿಸುವೆವು. ಆದ್ದರಿಂದ** (ಎಲೈ ಸಾಲಿಹ್) **ನೀನು ಅವರನ್ನು ನಿರೀಕ್ಷಿಸುತ್ತಿರು ಮತ್ತು ತಾಳ್ಮೆ ವಹಿಸು.'**

إِنَّا مُرْسِلُو النَّاقَةِ فِتْنَةً لَّهُمْ فَارْتَقِبْهُمْ وَاصْطَبِرْ ﴿٢٧﴾

**29. 'ನೀರು** (ನಿನ್ನ ಮತ್ತು) **ಅವರ ಮಧ್ಯೆ ಹಂಚಲಾಗಿದೆ ಎಂದು ಅವರೊಡನೆ ಹೇಳು. ಆಯಾಯ ಪಾನದ ಸಮಯದಲ್ಲಿ ಅವರವರು ಹಾಜರಿರಬೇಕು.'**

وَنَبِّئْهُمْ أَنَّ الْمَاءَ قِسْمَةٌ بَيْنَهُمْ كُلُّ شِرْبٍ مُّحْتَضَرٌ ﴿٢٨﴾

**30. ಆಗ ಅವರು ತಮ್ಮ ಸರದಾರನನ್ನು ಕರೆದರು. ಅವನು** (ಒಂಟೆಯನ್ನು) **ಹಿಡಿದು ಅದರ ಮೊಣಕಾಲಿನ ಸ್ನಾಯುರಜ್ಜುಗಳನ್ನು ಕಡಿದು ಹಾಕಿದನು.**

فَنَادَوْا صَاحِبَهُمْ فَتَعَاطَىٰ فَعَقَرَ ﴿٢٩﴾

**31. ಆಗ ನನ್ನ ಶಿಕ್ಷೆ ಮತ್ತು ಮುನ್ನೆಚ್ಚರಿಕೆ ಹೇಗಿತ್ತು?**

فَكَيْفَ كَانَ عَذَابِي وَنُذُرِ ﴿٣٠﴾

**32. ನಾವು ಅವರ ಮೇಲೆ ಒಂದೇ ಒಂದು ಘನಸ್ಫೋಟ** (ಶಿಕ್ಷೆ) **ಇಳಿಸಿದೆವು. ತತ್ಫಲವಾಗಿ ಅವರು ತುಳಿಯಲ್ಪಟ್ಟ ಕೂಳೆಯಂತೆ ಆದರು.**

إِنَّا أَرْسَلْنَا عَلَيْهِمْ صَيْحَةً وَاحِدَةً فَكَانُوا كَهَشِيمِ الْمُحْتَظِرِ ﴿٣١﴾

**33. ದಿಟವಾಗಿಯೂ ನಾವು ಖುರ್‌ಆನನ್ನು** (ಮನವರಿಕೆ ಮಾಡಲಿಕ್ಕೆ ಮತ್ತು) **ನೆನಪಿಟ್ಟುಕೊಳ್ಳಲಿಕ್ಕೆ ಸುಲಭಗೊಳಿಸಿದ್ದೇವೆ. ಆದರೆ ಉಪದೇಶವನ್ನು ಗ್ರಾಹ್ಯ ಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ يَسَّرْنَا الْقُرْآنَ لِلذِّكْرِ فَهَلْ مِن مُّدَّكِرٍ ﴿٣٢﴾

**34. ಲೂತ್‌ರ ಜನರು ಮುನ್ನೆಚ್ಚರಿಕೆಗಾರರನ್ನು ಸುಳ್ಳಾಗಿಸಿದರು.**

كَذَّبَتْ قَوْمُ لُوطٍ بِالنُّذُرِ ﴿٣٣﴾

**35.** **ನಾವು ಅವರ ಮೇಲೆ ಹರಳು ಕಲ್ಲುಗಳಿಂದ ಕೂಡಿದ ಬಿರುಗಾಳಿ ಬೀಸುವಂತೆ ಮಾಡಿದೆವು- ಲೂತ್‌ರ ಕುಟುಂಬವನ್ನು ಅದರಿಂದ ಹೊರತು ಪಡಿಸಿದೆವು. ರಾತ್ರಿಯ ಕೊನೆಯ ಜಾವದಲ್ಲಿ ನಾವು ಅವರನ್ನು ಪಾರು ಮಾಡಿದೆವು.**

إِنَّا أَرْسَلْنَا عَلَيْهِمْ حَاصِبًا إِلَّا آلَ لُوطٍ نَّجَّيْنَاهُم بِسَحَرٍ ﴿٣٤﴾

**36.** **ಅದು ನಮ್ಮಿಂದಿರುವ ಒಂದು ಅನುಗ್ರಹ ವಾಗಿತ್ತು. ಹೀಗೆ ನಾವು ಕೃತಜ್ಞನಾಗಿರುವವನಿಗೆ ಪ್ರತಿಫಲ ನೀಡುತ್ತೇವೆ.**

نِّعْمَةً مِّنْ عِندِنَا ۚ كَذَٰلِكَ نَجْزِي مَن شَكَرَ ﴿٣٥﴾

**37.** **ಅವರು** (ಲೂತ್) **ನಮ್ಮ ಶಿಕ್ಷೆಯ ಬಗ್ಗೆ ಅವರಿಗೆ** (ಜನರಿಗೆ) **ಮುನ್ನೆಚ್ಚರಿಕೆ ಕೊಟ್ಟಿದ್ದರು. ಆದರೆ ಅವರು ಮುನ್ನೆಚ್ಚರಿಕೆಯ ಕುರಿತು ಸಂದೇಹಪಟ್ಟರು.**

وَلَقَدْ أَنذَرَهُم بَطْشَتَنَا فَتَمَارَوْا بِالنُّذُرِ ﴿٣٦﴾

**38.** **ಅವರು** (ವಂಚನೆಯಿಂದ) **ಅವರನ್ನು** (ಲೂತ್‌ರನ್ನು) **ಅತಿಥಿಗಳಿಂದ ಅಗಲಿಸಲು ಯತ್ನಿಸಿದರು. ಆಗ ನಾವು ಅವರ ಕಣ್ಣುಗಳನ್ನು ಕುರುಡುಗೊಳಿಸಿದೆವು. 'ನನ್ನ ಶಿಕ್ಷೆ ಮತ್ತು ನನ್ನ ಮುನ್ನೆಚ್ಚರಿಕೆಯನ್ನು ಸವಿಯಿರಿ'** (ಎಂದು ಅವರೊಡನೆ ಹೇಳಲಾಯಿತು).

وَلَقَدْ رَاوَدُوهُ عَن ضَيْفِهِ فَطَمَسْنَا أَعْيُنَهُمْ فَذُوقُوا عَذَابِي وَنُذُرِ ﴿٣٧﴾

**39.** **ಅವರಿಗೆ ನಿಶ್ಚಯಪಡಿಸಲಾದ ಶಿಕ್ಷೆ ಮುಂಜಾನೆ ಅವರ ಮೇಲೆರಗಿತು.**

وَلَقَدْ صَبَّحَهُم بُكْرَةً عَذَابٌ مُّسْتَقِرٌّ ﴿٣٨﴾

**40.** **'ನೀವು ನನ್ನ ಶಿಕ್ಷೆಯನ್ನೂ ನನ್ನ ಮುನ್ನೆಚ್ಚರಿಕೆಯನ್ನೂ ಸವಿಯಿರಿ'** (ಎಂದು ಅವರೊಡನೆ ಹೇಳಲಾಯಿತು).

فَذُوقُوا عَذَابِي وَنُذُرِ ﴿٣٩﴾

**41.** **ದಿಟವಾಗಿಯೂ ನಾವು ಖುರ್‌ಆನನ್ನು** (ಮನವರಿಕೆ ಮಾಡಲಿಕ್ಕೆ ಮತ್ತು) **ನೆನಪಿಟ್ಟುಕೊಳ್ಳಲಿಕ್ಕೆ ಸುಲಭಗೊಳಿಸಿದ್ದೇವೆ. ಆದರೆ ಉಪದೇಶವನ್ನು ಗ್ರಾಹ್ಯ ಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ يَسَّرْنَا الْقُرْآنَ لِلذِّكْرِ فَهَلْ مِن مُّدَّكِرٍ ﴿٤٠﴾

**42.** **ಫಿರ್‌ಔನನ ಜನರ ಬಳಿಗೆ ಸಹ ಮುನ್ನೆಚ್ಚರಿಕೆಗಾರರು ಬಂದಿದ್ದರು.**

وَلَقَدْ جَاءَ آلَ فِرْعَوْنَ النُّذُرُ ﴿٤١﴾





**43.** **ಅವರು ನಮ್ಮ ಎಲ್ಲ ದೃಷ್ಟಾಂತಗಳನ್ನೂ ಸುಳ್ಳಾಗಿಸಿದರು. ಆದ್ದರಿಂದ ಒಬ್ಬ ಪ್ರತಾಪವಂತ ಹಾಗೂ ಸರ್ವಶಕ್ತನು ಹಿಡಿಯುವಂತೆ ನಾವು ಅವರನ್ನು ಹಿಡಿದು** ಶಿಕ್ಷಿಸಿದೆವು.

كَذَّبُوا بِآيَاتِنَا كُلِّهَا فَأَخَذْنَاهُمْ أَخْذَ عَزِيزٍ مُّقْتَدِرٍ ﴿٤٢﴾

**44.** **ನಿಮ್ಮ** (ಕಾಲದ) **ಅವಿಶ್ವಾಸಿಗಳು ಅವರಿಗಿಂತ ಮಿಗಿಲೇನು? ಅಥವಾ ದಿವ್ಯ ಗ್ರಂಥಗಳಲ್ಲಿ ನಿಮಗೆ** (ಶಿಕ್ಷೆಯಿಂದ) **ವಿನಾಯತಿಯೇನಾದರೂ ಇದೆಯೇ?**

أَكُفَّارُكُمْ خَيْرٌ مِّنْ أُولَٰئِكُمْ أَمْ لَكُم بَرَاءَةٌ فِي الزُّبُرِ ﴿٤٣﴾

**45.** **ಅಥವಾ 'ನಾವು ಜಯಶಾಲಿಯಾಗುವ ಪಂಗಡ' ಎಂದು ಅವರು ಹೇಳುತ್ತಾರೇನು?**

أَمْ يَقُولُونَ نَحْنُ جَمِيعٌ مُّنتَصِرٌ ﴿٤٤﴾

**46.** **ಆದರೆ, ಆ ಪಂಗಡದವರು ಶೀಘ್ರದಲ್ಲೇ ಪರಾಜಯಗೊಳ್ಳುವರು; ಅವರು ಬೆನ್ನುಹಾಕಿ ಓಡುವರು.**

سَيُهْزَمُ الْجَمْعُ وَيُوَلُّونَ الدُّبُرَ ﴿٤٥﴾

**47.** **ಅದು ಅವರಿಗೆ ನಿರ್ದಿಷ್ಟಪಡಿಸಿದ ಸಮಯ ವಾಗಿದೆ. ಆ ಘಳಿಗೆ ಅತ್ಯಂತ ಆಪತ್ಕರ ಹಾಗೂ ಅತಿ ಕಹಿಯಾಗಿ ಇರುವುದು.**

بَلِ السَّاعَةُ مَوْعِدُهُمْ وَالسَّاعَةُ أَدْهَىٰ وَأَمَرُّ ﴿٤٦﴾

**48.** **ಖಂಡಿತವಾಗಿಯೂ ಪಾಪಿಗಳು ಮಾರ್ಗ ಭ್ರಂಶತೆಯಲ್ಲಿ ಮತ್ತು ಹುಚ್ಚುತನದಲ್ಲಿರುತ್ತಾರೆ.**

إِنَّ الْمُجْرِمِينَ فِي ضَلَالٍ وَسُعُرٍ ﴿٤٧﴾

**49.** **ಆ ದಿನದಂದು ಅವರನ್ನು ತಮ್ಮ ಮುಖಂಡರ ಜೊತೆಗೆ ನರಕಕ್ಕೆ ಎಳೆದೊಯ್ಯಲಾಗುವುದು. 'ನರಕದ ಸ್ಪರ್ಶವನ್ನು ಸವಿಯಿರಿ'** (ಎಂದು ಅವರೊಡನೆ ಹೇಳಲಾಗುವುದು).

يَوْمَ يُسْحَبُونَ فِي النَّارِ عَلَىٰ وُجُوهِهِمْ ذُوقُوا مَسَّ سَقَرَ ﴿٤٨﴾

**50.** **ನಾವು ಪ್ರತಿಯೊಂದನ್ನೂ ನಿರ್ದಿಷ್ಟ ಅಳತೆಯನುಸಾರ ಸೃಷ್ಟಿಸಿದ್ದೇವೆ.**

إِنَّا كُلَّ شَيْءٍ خَلَقْنَاهُ بِقَدَرٍ ﴿٤٩﴾

**51.** **ನಮ್ಮ ಆಜ್ಞೆ ಕಣ್ಣೆವೆಯಿಕ್ಕುವಂತೆ ಕ್ಷಣ ಮಾತ್ರದಲ್ಲಿ ನೆರವೇರುತ್ತದೆ.**

وَمَا أَمْرُنَا إِلَّا وَاحِدَةٌ كَلَمْحٍ بِالْبَصَرِ ﴿٥٠﴾

**52.** **ದಿಟವಾಗಿಯೂ ನಾವು ನಿಮ್ಮಂಥವರನ್ನು** (ಮುಂಚೆ ಸಹ) **ನಾಶಪಡಿಸಿದ್ದೇವೆ. ಆದರೆ ಉಪದೇಶವನ್ನು ಗ್ರಾಹ್ಯಮಾಡುವ ಯಾವನಾದರೂ ಇದ್ದಾನೆಯೇ?**

وَلَقَدْ أَهْلَكْنَا أَشْيَاعَكُمْ فَهَلْ مِن مُّدَّكِرٍ ﴿٥١﴾

وَكُلُّ شَيْءٍ فَعَلُوْهُ فِي الزُّبُرِ ﴿٥٢﴾

53. ಅವರ ಎಲ್ಲ ಕೃತ್ಯಗಳು ಗ್ರಂಥಗಳಲ್ಲಿ ದಾಖಲಿಸಲ್ಪಟ್ಟಿವೆ.

وَكُلُّ صَغِيْرٍ وَّكَبِيْرٍ مُّسْتَطَرٌ ﴿٥٣﴾

54. ಚಿಕ್ಕದೂ ದೊಡ್ಡದೂ ಆದ ಎಲ್ಲವೂ ಬರೆಯಲ್ಪಟ್ಟಿವೆ.

اِنَّ الْمُتَّقِيْنَ فِيْ جَنّٰتٍ وَّنَهَرٍ ﴿٥٤﴾

55. ನಿಶ್ಚಯವಾಗಿಯೂ ಸಜ್ಜನರು ಸ್ವರ್ಗೀಯ ತೋಟಗಳಲ್ಲೂ ನದೀತಟಗಳಲ್ಲೂ ಇರುವರು -

فِيْ مَقْعَدِ صِدْقٍ عِنْدَ مَلِيْكٍ مُّقْتَدِرٍ ﴿٥٥﴾

56. ಸತ್ಯದ ಆಸನದಲ್ಲಿ, ಸರ್ವಶಕ್ತನಾದ ರಾಜನ ಸಮೀಪದಲ್ಲಿ.

سُورَةُ الرَّحْمٰنِ مَكِّيَّةٌ وَّهِيَ مَعَ الْبَسْمَلَةِ تِسْعٌ وَّسَبْعُوْنَ اٰيَةً وَّثَلٰثُ رُكُوْعَاتٍ

# 55. ಅರ್ರಹ್ಮಾನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 79 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** بِسْمِ اللّٰهِ الرَّحْمٰنِ الرَّحِيْمِ ①

**2. ಆ ಪರಮ ದಯಾವಂತನು,** اَلرَّحْمٰنُ ②

**3. ಖುರ್‌ಆನನ್ನು ಕಲಿಸಿದನು;** عَلَّمَ الْقُرْاٰنَ ③

**4. ಮನುಷ್ಯನನ್ನು ಸೃಷ್ಟಿಸಿದನು;** خَلَقَ الْاِنْسَانَ ④

**5. ಅವನಿಗೆ ವಿಶದೀಕರಿಸಿ ಮಾತನಾಡಲು ಕಲಿಸಿದನು.** عَلَّمَهُ الْبَيَانَ ⑤

**6. ಸೂರ್ಯ ಮತ್ತು ಚಂದ್ರ ನಿರ್ದಿಷ್ಟ ಗಣನೆ ಯಂತೆ ಚಲಿಸುತ್ತವೆ.** اَلشَّمْسُ وَالْقَمَرُ بِحُسْبَانٍ ⑥

**7. ಲತೆಗಳೂ ವೃಕ್ಷಗಳೂ ಅವನ ಇಚ್ಛೆಗೆ ಮಣಿಯುತ್ತವೆ.** وَّالنَّجْمُ وَالشَّجَرُ يَسْجُدٰنِ ⑦

**8. ಆಕಾಶವನ್ನು ಅವನು ಉನ್ನತಗೊಳಿಸಿದನು ಮತ್ತು** (ನ್ಯಾಯದ) **ತಕ್ಕಡಿಯನ್ನು ಸ್ಥಾಪಿಸಿದನು -** وَالسَّمَآءَ رَفَعَهَا وَوَضَعَ الْمِيْزَانَ ⑧

**9. ನೀವು** (ನ್ಯಾಯದ) **ತಕ್ಕಡಿಯಲ್ಲಿ ಕ್ರಮ ಮೀರ ಬಾರದೆಂದು.** اَلَّا تَطْغَوْا فِي الْمِيْزَانِ ⑨

**10. ನೀವು ನ್ಯಾಯಯುತವಾಗಿ ತೂಕಮಾಡಿರಿ. ನೀವು ಅಳತೆಯಲ್ಲಿ ಕಡಿಮೆ ಮಾಡಬಾರದು.** وَاَقِيْمُوا الْوَزْنَ بِالْقِسْطِ وَلَا تُخْسِرُوا الْمِيْزَانَ ⑩

**11. ಭೂಮಿಯನ್ನು ಅವನು ಎಲ್ಲ ಸೃಷ್ಟಿ ಜಾಲಗಳಿಗೋಸ್ಕರ ವ್ಯವಸ್ಥೆಗೊಳಿಸಿರುವನು.** وَالْاَرْضَ وَضَعَهَا لِلْاَنَامِ ⑪





**12. ಅಲ್ಲಿ ಎಲ್ಲ ವಿಧ ಹಣ್ಣು ಹಂಪಲುಗಳೂ ಕೋಶಗಳಿಂದ ಕೂಡಿದ ಫಲಗಳುಳ್ಳ ಖರ್ಜೂರದ ಮರಗಳೂ ಇವೆ.** فِيْهَا فَاكِهَةٌ وَّالنَّخْلُ ذَاتُ الْاَكْمَامِ ⑫

**13. ಹೊಟ್ಟುಗಳಿಂದ ಕೂಡಿದ ಧಾನ್ಯಗಳೂ ಸುಗಂಧಯುಕ್ತ ಸಸ್ಯಲತಾದಿಗಳೂ ಇವೆ.** وَالْحَبُّ ذُو الْعَصْفِ وَالرَّيْحَانُ ⑬

**14. ಹಾಗಿರುವಾಗ** (ಎಲೈ ಇನ್ಸ್ ಮತ್ತು ಜಿನ್ನ್ ಸಮೂಹಗಳೇ,) **ನಿಮ್ಮ ಪ್ರಭುವಿನ ಯಾವ ಅನುಗ್ರಹ ಗಳನ್ನು ನೀವು ಅಲ್ಲಗಳೆಯುವಿರಿ?** فَبِاَيِّ اٰلَآءِ رَبِّكُمَا تُكَذِّبٰنِ ⑭

**15. ಅವನು ಮನುಷ್ಯನನ್ನು ಮಡಕೆಯ ಹಾಗೆ ನಾದಿಸುವ ಒಣ ಆವೆ ಮಣ್ಣಿನಿಂದ ಸೃಷ್ಟಿಸಿದನು.** خَلَقَ الْاِنْسَانَ مِنْ صَلْصَالٍ كَالْفَخَّارِ ⑮

**16. ಮತ್ತು ಜಿನ್ನುಗಳನ್ನು ಅಗ್ನಿಜ್ವಾಲೆಯಿಂದ ಸೃಷ್ಟಿಸಿದನು.** وَخَلَقَ الْجَآنَّ مِنْ مَّارِجٍ مِّنْ نَّارٍ ⑯

**17. ಹಾಗಿರುವಾಗ, ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?** فَبِاَيِّ اٰلَآءِ رَبِّكُمَا تُكَذِّبٰنِ ⑰

**18. ಎರಡು ಪೂರ್ವಗಳ ಮತ್ತು ಎರಡು ಪಶ್ಚಿಮಗಳ ಪ್ರಭು!**[449] رَبُّ الْمَشْرِقَيْنِ وَرَبُّ الْمَغْرِبَيْنِ ⑱

**19. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?** فَبِاَيِّ اٰلَآءِ رَبِّكُمَا تُكَذِّبٰنِ ⑲

**20. ಅವನು ಎರಡು ಸಮುದ್ರಗಳನ್ನು** (ಮುಂದೊಮ್ಮೆ) **ಅವು ಸಂಗಮಿಸುವಂತೆ ಸೃಷ್ಟಿಸಿರು ವನು.**[449A] مَرَجَ الْبَحْرَيْنِ يَلْتَقِيٰنِ ⑳

**21.** (ಈಗ) **ಅವುಗಳ ಮಧ್ಯೆ ತಡೆ ಇದೆ.** (ಆದ್ದರಿಂದ) **ಅವು ಪರಸ್ಪರ ಅತಿಕ್ರಮಿಸಲಾರವು.** بَيْنَهُمَا بَرْزَخٌ لَّا يَبْغِيٰنِ ㉑

449. ಭೂಮಿಯು ಗೋಳಾಕೃತಿಯಲ್ಲಿದೆಯೆಂದು ಈ ವಚನ ಸೂಚಿಸುತ್ತದೆ. ಎರಡು ಗೋಳಾರ್ಧಗಳಿಗೆ ಎರಡು ಪೂರ್ವಗಳು ಮತ್ತು ಎರಡು ಪಶ್ಚಿಮಗಳು ಇರುತ್ತವೆ.

449A. 'ಎರಡು ಸಮುದ್ರಗಳು' ಎಂದರೆ ಕೆಂಪು ಸಮುದ್ರ ಮತ್ತು ಮೆಡಿಟರೇನಿಯನ್ ಸಮುದ್ರ. ಅಥವಾ ಅಟ್ಲಾಂಟಿಕ್ ಸಮುದ್ರ ಮತ್ತು ಫೆಸಿಫಿಕ್ ಸಮುದ್ರ. ಮೊದಲಿನ ಎರಡು ಸಮುದ್ರಗಳನ್ನು ಜೋಡಿಸುವ ಸುಯೇಜ್ ಕಾಲುವೆ ಮತ್ತು ಎರಡನೆಯ ಎರಡು ಸಮುದ್ರಗಳನ್ನು ಜೋಡಿಸುವ ಪನಾಮ ಕಾಲುವೆ ನಿರ್ಮಾಣಗೊಂಡು 1300 ವರ್ಷಗಳ ಮೊದಲು ಖುರ್‌ಆನಿನಲ್ಲಿ ಹೇಳಿದ ಭವಿಷ್ಯನುಡಿ ನೆರವೇರಿತು.

**22.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٢٢﴾

**23.** ಅವೆರಡರಿಂದಲೂ ಮುತ್ತುಗಳೂ ಹವಳಗಳೂ ಹೊರತೆಗೆಯಲ್ಪಡುತ್ತವೆ.

يَخْرُجُ مِنْهُمَا اللُّؤْلُؤُ وَالْمَرْجَانُ ﴿٢٣﴾

**24.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٢٤﴾

**25.** ಸಮುದ್ರದಲ್ಲಿ ಚಲಿಸುವ ಪರ್ವತಗಳಂಥ ಹಡಗುಗಳು ಅವನದ್ದಾಗಿವೆ.

وَلَهُ الْجَوَارِ الْمُنْشَئٰتُ فِي الْبَحْرِ كَالْاَعْلَامِ ﴿٢٥﴾

**26.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٢٦﴾

**27.** ಅಲ್ಲಿ (ಭೂಮಿಯಲ್ಲಿ) ಇರುವುದೆಲ್ಲವೂ ನಶ್ವರ.

كُلُّ مَنْ عَلَيْهَا فَانٍ ﴿٢٧﴾

**28.** ಆದರೆ, ಪ್ರತಾಪಶಾಲಿಯೂ ಅತ್ಯಂತ ಆದರಣೀಯನೂ ಆದ ನಿನ್ನ ಪ್ರಭುವಿನ ವದನ (ಉದ್ದೇಶಿತ ಕಾರ್ಯಗಳು) ಮಾತ್ರ ಬಾಕಿ ಯುಳಿಯುವುದು.

وَّيَبْقٰى وَجْهُ رَبِّكَ ذُو الْجَلٰلِ وَالْاِكْرَامِ ﴿٢٨﴾

**29.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٢٩﴾

**30.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲರೂ ಅವನೊಡನೆ ಬೇಡುತ್ತಾರೆ. ಅವನು ಪ್ರತಿಯೊಂದು ಕ್ಷಣದಲ್ಲಿ ವಿವಿಧ ರೀತಿಯಲ್ಲಿ ತನ್ನ ಮಹಿಮೆಯನ್ನು ತೋರ್ಪಡಿಸುತ್ತಾನೆ.

يَسْـَٔلُهٗ مَنْ فِي السَّمٰوٰتِ وَالْاَرْضِ ۭ كُلَّ يَوْمٍ هُوَ فِيْ شَاْنٍ ﴿٣٠﴾

**31.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٣١﴾

**32.** ಓ ಎರಡು ಮಹಾಶಕ್ತಿಗಳೇ, ನಾವು ಬೇಗನೇ ನಿಮ್ಮ ಬಗ್ಗೆ ಗಮನಹರಿಸುವೆವು.

سَنَفْرُغُ لَكُمْ اَيُّهَ الثَّقَلٰنِ ﴿٣٢﴾





**33.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٣٣﴾

**34.** ಎಲೈ ಜಿನ್ನ್ ಮತ್ತು ಇನ್ಸ್ ಸಮೂಹಗಳೇ, ಆಕಾಶಗಳ ಮತ್ತು ಭೂಮಿಯ ಎಲ್ಲೆಗಳನ್ನು ಮೀರಿ ಹೋಗಲು ನಿಮಗೆ ಸಾಧ್ಯವಿದ್ದರೆ ಮೀರಿ ಹೋಗಿರಿ. ಆದರೆ ಪ್ರಬಲ ವಿಧಾಯಕ ಶಕ್ತಿ ವಿನಾ ನೀವು ದಾಟಿ ಹೋಗಲಾರಿರಿ.

يٰمَعْشَرَ الْجِنِّ وَالْاِنْسِ اِنِ اسْتَطَعْتُمْ اَنْ تَنْفُذُوْا مِنْ اَقْطَارِ السَّمٰوٰتِ وَالْاَرْضِ فَانْفُذُوْا ۭ لَا تَنْفُذُوْنَ اِلَّا بِسُلْطٰنٍ ﴿٣٤﴾

**35.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٣٥﴾

**36.** ನಿಮ್ಮ ಮೇಲೆ ಅಗ್ನಿಜ್ವಾಲೆಯನ್ನೂ ಧೂಮವನ್ನೂ ಕಳುಹಿಸಲಾಗುವುದು. ನಿಮಗೆ ಸ್ವಯಂ ರಕ್ಷಣೆ ಸಾಧ್ಯವಾಗದು.

يُرْسَلُ عَلَيْكُمَا شُوَاظٌ مِّنْ نَّارٍ ۥ وَّنُحَاسٌ فَلَا تَنْتَصِرٰنِ ﴿٣٦﴾

**37.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٣٧﴾

**38.** ಹಾಗೆ ಆಕಾಶ ಸೀಳಲ್ಪಟ್ಟು ಅದು ಕೆಂಪು ತೊಗಲಿನಂತೆ ಮಾರ್ಪಡುವಾಗ (ಅದು ಆ ನಿಶ್ಚಯಿಸಲ್ಪಟ್ಟ ಘಳಿಗೆಯಾಗಿರುವುದು).

فَاِذَا انْشَقَّتِ السَّمَاۗءُ فَكَانَتْ وَرْدَةً كَالدِّهَانِ ﴿٣٨﴾

**39.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٣٩﴾

**40.** ಅಂದು ಇನ್ಸ್ ಮತ್ತು ಜಿನ್ನ್‌ಗಳೊಡನೆ ಅವರ ಪಾಪದ ಬಗ್ಗೆ ಪ್ರಶ್ನಿಸಲಾಗುವುದಿಲ್ಲ.

فَيَوْمَىِٕذٍ لَّا يُسْـَٔلُ عَنْ ذَنْۢبِهٖٓ اِنْسٌ وَّلَا جَاۗنٌّ ﴿٤٠﴾

**41.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِاَيِّ اٰلَآءِ رَبِّكُمَا تُكَذِّبٰنِ ﴿٤١﴾

**42.** ಪಾಪಿಗಳು ಅವರ ಚಿಹ್ನೆಗಳಿಂದ ಗುರುತಿಸಲ್ಪಡುವರು. ಮುಂಜುಟ್ಟು ಮತ್ತು ಕಾಲುಗಳಿಂದ ಅವರು ಹಿಡಿಯಲ್ಪಡುವರು.

يُعْرَفُ الْمُجْرِمُوْنَ بِسِيْمٰهُمْ فَيُؤْخَذُ بِالنَّوَاصِيْ وَالْاَقْدَامِ ﴿٤٢﴾

فَبِأَيِّ آلَاءِ رَبِّكُمَا تُكَذِّبَانِ ﴿٤٢﴾

**43.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

هَٰذِهِ جَهَنَّمُ الَّتِي يُكَذِّبُ بِهَا الْمُجْرِمُونَ ﴿٤٣﴾

**44.** ಪಾಪಿಗಳು ಸುಳ್ಳೆಂದು ಹೇಳುತ್ತಿದ್ದ ನರಕ ಇದೇ ಆಗಿದೆ.

يَطُوفُونَ بَيْنَهَا وَبَيْنَ حَمِيمٍ آنٍ ﴿٤٤﴾

**45.** ಅವರು ಅದರ ಮತ್ತು ಭಯಂಕರವಾಗಿ ಕುದಿಯುತ್ತಿರುವ ನೀರಿನ ಮಧ್ಯೆ ಸುತ್ತುತ್ತಿರುವರು.

فَبِأَيِّ آلَاءِ رَبِّكُمَا تُكَذِّبَانِ ﴿٤٥﴾

**46.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

وَلِمَنْ خَافَ مَقَامَ رَبِّهِ جَنَّتَانِ ﴿٤٦﴾

**47.** ತನ್ನ ಪ್ರಭುವಿನ ಮಹೋನ್ನತ ಸ್ಥಾನದ ಬಗ್ಗೆ ಭಯಪಡುವವನಿಗೆ ಎರಡು ಸ್ವರ್ಗಗಳಿವೆ.

فَبِأَيِّ آلَاءِ رَبِّكُمَا تُكَذِّبَانِ ﴿٤٧﴾

**48.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

ذَوَاتَا أَفْنَانٍ ﴿٤٨﴾

**49.** ಅವೆರಡರಲ್ಲೂ ಅನೇಕ ಶಾಖೆಗಳಿವೆ.

فَبِأَيِّ آلَاءِ رَبِّكُمَا تُكَذِّبَانِ ﴿٤٩﴾

**50.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فِيهِمَا عَيْنَانِ تَجْرِيَانِ ﴿٥٠﴾

**51.** ಅವೆರಡರಲ್ಲೂ ಎರಡು ಝರಿಗಳು ಪ್ರವಹಿಸುತ್ತವೆ.

فَبِأَيِّ آلَاءِ رَبِّكُمَا تُكَذِّبَانِ ﴿٥١﴾

**52.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فِيهِمَا مِنْ كُلِّ فَاكِهَةٍ زَوْجَانِ ﴿٥٢﴾

**53.** ಅವೆರಡರಲ್ಲೂ ಎಲ್ಲ ವಿಧ ಹಣ್ಣು ಹಂಪಲುಗಳು ಜೋಡಿಗಳಾಗಿರುತ್ತವೆ.

فَبِأَيِّ آلَاءِ رَبِّكُمَا تُكَذِّبَانِ ﴿٥٣﴾

**54.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

مُتَّكِئِينَ عَلَىٰ فُرُشٍ بَطَائِنُهَا مِنْ





إِسْتَبْرَقٍ ۚ وَجَنَى الْجَنَّتَيْنِ دَانٍ ﴿٥٤﴾

**55.** ಒಳಮೈ ದಪ್ಪವಿರುವ ರೇಶ್ಮೆಯ ರತ್ನಗಂಬಳಿಗಳ ಮೇಲೆ ಅವರು (ದಿಂಬುಗಳಿಗೆ) ಒರಗಿ ಕುಳಿತುಕೊಳ್ಳುವರು. ಎರಡೂ ಸ್ವರ್ಗಗಳ ಪಕ್ವವಾದ ಹಣ್ಣುಗಳು ಅವರ ಕೈಗೆಟಕುವಂತಿರುವುವು.

فَبِأَيِّ آلَاءِ رَبِّكُمَا تُكَذِّبَانِ ﴿٥٥﴾

**56.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فِيهِنَّ قَاصِرَاتُ الطَّرْفِ لَمْ يَطْمِثْهُنَّ إِنْسٌ قَبْلَهُمْ وَلَا جَانٌّ ﴿٥٦﴾

**57.** ಅಲ್ಲಿ, ಇವರಿಗಿಂತ ಮುಂಚೆ ಇನ್ಸ್ ಆಗಲಿ ಜಿನ್ನ್ ಆಗಲಿ, ಸ್ಪರ್ಶಿಸಿಲ್ಲದ, ತಗ್ಗಿಸಿದ ದೃಷ್ಟಿಯವರು (ತರುಣಿಯರು) ಇರುವರು.

فَبِأَيِّ آلَاءِ رَبِّكُمَا تُكَذِّبَانِ ﴿٥٧﴾

**58.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

كَأَنَّهُنَّ الْيَاقُوتُ وَالْمَرْجَانُ ﴿٥٨﴾

**59.** ಅವರು ಮಾಣಿಕ್ಯ ಮತ್ತು ಮುತ್ತುಗಳಂತೆ ಇರುವರು.

فَبِأَيِّ آلَاءِ رَبِّكُمَا تُكَذِّبَانِ ﴿٥٩﴾

**60.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

هَلْ جَزَاءُ الْإِحْسَانِ إِلَّا الْإِحْسَانُ ﴿٦٠﴾

**61.** ಸತ್ಕರ್ಮಕ್ಕೆ ಸತ್ಫಲವಲ್ಲದೆ ಬೇರೇನಾದರೂ ಪ್ರತಿಫಲವಿದೆಯೇ?

فَبِأَيِّ آلَاءِ رَبِّكُمَا تُكَذِّبَانِ ﴿٦١﴾

**62.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

وَمِنْ دُونِهِمَا جَنَّتَانِ ﴿٦٢﴾

**63.** ಇವೆರಡು ಮಾತ್ರವಲ್ಲ, ಬೇರೆಯೂ ಎರಡು ಸ್ವರ್ಗಗಳಿವೆ.

فَبِأَيِّ آلَاءِ رَبِّكُمَا تُكَذِّبَانِ ﴿٦٣﴾

**64.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

مُدْهَامَّتَانِ ﴿٦٤﴾

**65.** ಅವೆರಡೂ ಹಚ್ಚ ಹಸಿರು ಆಗಿರುವುವು.

فَبِأَيِّ آلَاءِ رَبِّكُمَا تُكَذِّبَانِ ﴿٦٥﴾

**66.** ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فِيهِمَا عَيْنَانِ نَضَّاخَتَانِ ﴿٦٦﴾

**67.** ಅಲ್ಲಿ ಚಿಮ್ಮುತ್ತಿರುವ ಎರಡು ಚಿಲುಮೆಗಳೂ ಇರುವುವು.

68. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٦٨﴾

69. ಅಲ್ಲಿ ಎಲ್ಲ ತರದ ಹಣ್ಣುಹಂಪಲುಗಳೂ ಖರ್ಜೂರಗಳೂ ದಾಳಿಂಬೆ ಹಣ್ಣುಗಳೂ ಇರುವುವು.

فِيهِمَا فَاكِهَةٌ وَنَخْلٌ وَرُمَّانٌ ﴿٦٩﴾

70. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٧٠﴾

71. ಅಲ್ಲಿ ಉತ್ಕೃಷ್ಟರಾದ ಸುಂದರಿಯರಿದ್ದಾರೆ.

فِيهِنَّ خَيْرَاتٌ حِسَانٌ ﴿٧١﴾

72. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٧٢﴾

73. ಡೇರೆಗಳಲ್ಲಿ ಸುರಕ್ಷಿತವಾಗಿರಿಸಲ್ಪಟ್ಟ ಸುಂದರ ಕಣ್ಣುಗಳಿರುವ ತರುಣಿಯರು.

حُورٌ مَقْصُورَاتٌ فِي الْخِيَامِ ﴿٧٣﴾

74. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٧٤﴾

75. ಇವರಿಗೆ ಮುಂಚೆ ಇನ್ಸ್ ಆಗಲಿ ಜಿನ್ನ್ ಆಗಲಿ ಅವರನ್ನು ಸ್ಪರ್ಶಿಸಿಲ್ಲ.

لَمْ يَطْمِثْهُنَّ إِنْسٌ قَبْلَهُمْ وَلَا جَانٌّ ﴿٧٥﴾

76. ನಿಮ್ಮ ಪ್ರಭುವಿನ ಯಾವ ಅನುಗ್ರಹಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٧٦﴾

77. ಅವರು (ಸ್ವರ್ಗವಾಸಿಗಳು) ಹಸಿರು ರತ್ನಗಂಬಳಿಗಳ ಮತ್ತು ಸುಂದರವಾದ ಸುಪ್ಪತ್ತಿಗೆಗಳ ಮೇಲೆ ಒರಗಿಕೊಂಡು ಕುಳಿತುಕೊಳ್ಳುವರು.

مُتَّكِئِينَ عَلَىٰ رَفْرَفٍ خُضْرٍ وَعَبْقَرِيٍّ حِسَانٍ ﴿٧٧﴾

78. ನಿಮ್ಮ ಪ್ರಭುವಿನ ಯಾವ ಅನುಗ್ರಹ ಗಳನ್ನು ನೀವು ಅಲ್ಲಗಳೆಯುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٧٨﴾

79. ಪ್ರತಾಪಶಾಲಿಯೂ ಗೌರವಾರ್ಹನೂ ಆದ ನಿನ್ನ ಪ್ರಭುವಿನ ನಾಮ ಅತ್ಯಧಿಕ ಅನುಗ್ರಹಪೂರ್ಣವಾಗಿದೆ.

تَبَارَكَ اسْمُ رَبِّكَ ذِي الْجَلَالِ وَالْإِكْرَامِ ﴿٧٩﴾

سُوْرَةُ الْوَاقِعَةِ مَكِّيَّةٌ وَّهِيَ مَعَ الْبَسْمَلَةِ سَبْعٌ وَّتِسْعُوْنَ اٰيَةً وَّثَلٰثُ رُكُوْعَاتٍ

## 56. ಅಲ್‌ವಾಖಿಅಃ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 97 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2. ಆ ಘಟನೆ ಘಟಿಸುವಾಗ -**

إِذَا وَقَعَتِ الْوَاقِعَةُ (٢)

**3. ಅದರ ಸಂಭಾವ್ಯತೆಯನ್ನು ಯಾರಿಂದಲೂ ಅಲ್ಲಗಳೆಯಲಾಗದು.**

لَيْسَ لِوَقْعَتِهَا كَاذِبَةٌ (٣)

**4.** (ಆ ಘಟನೆ ಕೆಲವರನ್ನು) **ಕೆಳಗಿಳಿಸುವುದು;** (ಕೆಲವರನ್ನು) **ಮೇಲೆತ್ತುವುದು.**[450]

خَافِضَةٌ رَّافِعَةٌ (٤)

**5. ಆಗ ಭೂಮಿ ತೀವ್ರವಾಗಿ ಕಂಪಿಸುವುದು;**

إِذَا رُجَّتِ الْأَرْضُ رَجًّا (٥)

**6. ಪರ್ವತಗಳು ಪುಡಿಪುಡಿಗೊಳಿಸಲ್ಪಡುವುವು;**

وَّبُسَّتِ الْجِبَالُ بَسًّا (٦)

**7. ಅನಂತರ ಅವು ಹಾರಾಡುವ ಧೂಳೀಕಣಗಳಾಗುವುವು;**

فَكَانَتْ هَبَاءً مُّنْبَثًّا (٧)

**8. ಹಾಗೂ ನೀವು ಮೂರು ಗುಂಪುಗಳಾಗಿ ವಿಂಗಡಿಸಲ್ಪಡುವಿರಿ.**

وَّكُنْتُمْ أَزْوَاجًا ثَلٰثَةً (٨)

**9. ಬಲಪಕ್ಷದವರು. ಬಲಪಕ್ಷದವರು ಎಂತಹ** ಅದೃಷ್ಟಶಾಲಿಗಳು.

فَأَصْحٰبُ الْمَيْمَنَةِ ۙ مَا أَصْحٰبُ الْمَيْمَنَةِ (٩)

450. ವಿಶ್ವಾಸಿಗಳು ಮತ್ತು ಅವಿಶ್ವಾಸಿಗಳ ಮಧ್ಯೆ ಆ ಸಂಭವವು ತೀರ್ಮಾನವನ್ನುಂಟುಮಾಡುವುದು. ಅವಿಶ್ವಾಸಿಗಳು ಎಷ್ಟು ಪ್ರಯತ್ನಪಟ್ಟರೂ ಆ ಘಟನೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲ. ಅದು ಘಟಿಸುವಾಗ ಅವಿಶ್ವಾಸಿಗಳನ್ನು ಕೆಳಗಿಳಿಸುವುದು ಮತ್ತು ವಿಶ್ವಾಸಿಗಳನ್ನು ಮೇಲಕ್ಕೆತ್ತುವುದು. ಅಂದರೆ, ಜಯಶಾಲಿಗಳಾಗಿರುವ ಅವಿಶ್ವಾಸಿಗಳು ಅಂದು ಪರಾಜಿತರಾಗುವರು. ಪರಾಜಿತರಾಗಿ ಕಾಣಲ್ಪಡುವ ವಿಶ್ವಾಸಿಗಳು ಅಂದು ಜಯಶಾಲಿಗಳಾಗುವರು.





**10. ಎಡಪಕ್ಷದವರು. ಎಡಪಕ್ಷದವರು ಎಂತಹ** ದುರದೃಷ್ಟಶಾಲಿಗಳು.

وَأَصْحٰبُ الْمَشْـَٔمَةِ ۙ مَا أَصْحٰبُ الْمَشْـَٔمَةِ (١٠)

**11.** (ಮೂರನೆಯ ಗುಂಪು) **ಮುಂಚೂಣಿಯವರದು.** (ಅವರು) **ಮುಂಚೂಣಿಯಲ್ಲೇ ಇರುವರು.**

وَالسّٰبِقُوْنَ السّٰبِقُوْنَ (١١)

**12. ಅವರೇ** (ದೇವ) **ಸಾಮೀಪ್ಯವನ್ನು ಪಡೆದವರು.**

أُولٰٓئِكَ الْمُقَرَّبُوْنَ (١٢)

**13.** (ಅವರು) **ಅನುಗ್ರಹದಾಯಕವಾದ ಸ್ವರ್ಗೀಯ ತೋಟಗಳಲ್ಲಿ** (ವಾಸಿಸುವರು).

فِيْ جَنّٰتِ النَّعِيْمِ (١٣)

**14. ಪೂರ್ವ ಕಾಲದವರ ಪೈಕಿ ಒಂದು ದೊಡ್ಡ ಗುಂಪು;**

ثُلَّةٌ مِّنَ الْأَوَّلِيْنَ (١٤)

**15. ಹಾಗೂ ಕೊನೆಯ ಕಾಲದವರ ಪೈಕಿ ಒಂದು ಸಣ್ಣ ಗುಂಪು.**

وَقَلِيْلٌ مِّنَ الْاٰخِرِيْنَ (١٥)

**16.** (ಅವರು) **ರತ್ನ ಖಚಿತವಾದ ಮಂಚಗಳ ಮೇಲೆ,**

عَلٰى سُرُرٍ مَّوْضُوْنَةٍ (١٦)

**17. ಪರಸ್ಪರ ಎದುರು ಬದಿರಾಗಿ ಅವುಗಳಲ್ಲಿ** (ದಿಂಬುಗಳಿಗೆ) **ಒರಗಿ ಕುಳಿತುಕೊಳ್ಳುವರು.**

مُّتَّكِـِٔيْنَ عَلَيْهَا مُتَقٰبِلِيْنَ (١٧)

**18. ಚಿರಬಾಲಕರು ಅವರ ಸಮೀಪ** (ಸೇವೆಗೆ ಸಿದ್ಧರಾಗಿ) **ಸುತ್ತುತ್ತಲಿರುವರು -**

يَطُوْفُ عَلَيْهِمْ وِلْدَانٌ مُّخَلَّدُوْنَ (١٨)

**19. ಶುದ್ಧಜಲ ತುಂಬಿದ ಪಾನಪಾತ್ರೆಗಳನ್ನೂ ಹೂಜಿಗಳನ್ನೂ ಬಟ್ಟಲುಗಳನ್ನೂ ಹಿಡಿದುಕೊಂಡು.**

بِأَكْوَابٍ وَّأَبَارِيْقَ ۙ وَكَأْسٍ مِّنْ مَّعِيْنٍ (١٩)

**20. ಅದರಿಂದಾಗಿ ಅವರು ತಲೆನೋವನ್ನು ಹೊಂದಲಾರರು; ಉನ್ಮತ್ತರೂ ಆಗಲಾರರು.**

لَّا يُصَدَّعُوْنَ عَنْهَا وَلَا يُنْزِفُوْنَ (٢٠)

**21. ಅವರು ಇಷ್ಟಪಟ್ಟು ಆಯ್ಕೆ ಮಾಡುವ ಹಣ್ಣುಹಂಪಲುಗಳನ್ನೂ**

وَفَاكِهَةٍ مِّمَّا يَتَخَيَّرُوْنَ (٢١)

**22. ಅವರು ಇಷ್ಟಪಡುವ ಹಕ್ಕಿಗಳ ಮಾಂಸವನ್ನೂ** (ಅವರಿಗೆ ಅಲ್ಲಿ ನೀಡಲಾಗುವುದು).

وَلَحْمِ طَيْرٍ مِّمَّا يَشْتَهُوْنَ (٢٢)

23. ವಿಶಾಲಾಕ್ಷಿಗಳಾದ ಸುಂದರಿಯರೂ (ಅಲ್ಲಿರುವರು) -

وَحُورٌ عِينٌ ﴿٢٢﴾

24. ಸುರಕ್ಷಿತವಾಗಿ ಮುಚ್ಚಿಟ್ಟ ಮುತ್ತುಗಳಂತೆ.

كَأَمْثَالِ اللُّؤْلُؤِ الْمَكْنُونِ ﴿٢٣﴾

25. (ಇವೆಲ್ಲ) ಅವರು ಗೈದ ಸತ್ಕರ್ಮಗಳಿಗೆ ತಕ್ಕ ಪ್ರತಿಫಲವಾಗಿದೆ.

جَزَاءً بِمَا كَانُوا يَعْمَلُونَ ﴿٢٤﴾

26. ಅವರು ಅಲ್ಲಿ ವ್ಯರ್ಥ ಅಥವಾ ಪಾಪಕರವಾದ ಮಾತನ್ನು ಆಲಿಸಲಾರರು -

لَا يَسْمَعُونَ فِيهَا لَغْوًا وَلَا تَأْثِيمًا ﴿٢٥﴾

27. 'ಸಲಾಮ್, ಸಲಾಮ್' (ಶಾಂತಿ, ಶಾಂತಿ) ಎಂಬ ಹಾರೈಕೆಯ ಮಾತುಗಳ ಹೊರತು.

إِلَّا قِيلًا سَلَامًا سَلَامًا ﴿٢٦﴾

28. ಮತ್ತೆ ಬಲಪಕ್ಷದವರು. ಬಲಪಕ್ಷದವರು ಎಂತಹವರು!

وَأَصْحَابُ الْيَمِينِ مَا أَصْحَابُ الْيَمِينِ ﴿٢٧﴾

29. ಅವರು ಮುಳ್ಳುರಹಿತವಾದ ಬೋರಿ ಮರಗಳ,

فِي سِدْرٍ مَخْضُودٍ ﴿٢٨﴾

30. ಒತ್ತೊತ್ತಾದ ಹಣ್ಣುಗಳ ಗೊನೆಗಳಿಂದ ಕೂಡಿದ ಬಾಳೆಮರಗಳ,

وَطَلْحٍ مَنْضُودٍ ﴿٢٩﴾

31. ವಿಸ್ತಾರವಾಗಿ ಹರಡಿರುವ ನೆರಳಿನ,

وَظِلٍّ مَمْدُودٍ ﴿٣٠﴾

32. ಹರಿಯುತ್ತಿರುವ ಜಲದ

وَمَاءٍ مَسْكُوبٍ ﴿٣١﴾

33. ಮತ್ತು ವಿಪುಲವಾದ ಹಣ್ಣುಗಳ ಮಧ್ಯೆಯಲ್ಲಿ ಇರುವರು -

وَفَاكِهَةٍ كَثِيرَةٍ ﴿٣٢﴾

34. ಮುಗಿಯದಂತಹದ್ದು ಮತ್ತು ನಿಷೇಧಿಸಲ್ಪಡದಂತಹದ್ದು.

لَا مَقْطُوعَةٍ وَلَا مَمْنُوعَةٍ ﴿٣٣﴾

35. ಅವರಿಗೆ ಕುಲೀನರಾದ ಸಹಧರ್ಮಿಣಿಯರೂ (ದೊರಕುವರು) -

وَفُرُشٍ مَرْفُوعَةٍ ﴿٣٤﴾

36. ಉತ್ತಮ ಸೃಷ್ಟಿಗಳನ್ನಾಗಿ ನಾವು ಅವರನ್ನು ಸೃಷ್ಟಿಸಿದ್ದೇವೆ.

إِنَّا أَنْشَأْنَاهُنَّ إِنْشَاءً ﴿٣٥﴾





37. ಅವರನ್ನು ನಿಸ್ತುಲ್ಯರನ್ನಾಗಿ ಮಾಡಿದ್ದೇವೆ -

فَجَعَلْنَاهُنَّ أَبْكَارًا ﴿٣٦﴾

38. ಒಲುಮೆಯ, ಸಮಪ್ರಾಯದ -

عُرُبًا أَتْرَابًا ﴿٣٧﴾

39. ಬಲಪಕ್ಷದವರಿಗೋಸ್ಕರ.

لِأَصْحَابِ الْيَمِينِ ﴿٣٨﴾

40. (ಅವರು - ಬಲ ಪಕ್ಷದವರು) ಪೂರ್ವ ಕಾಲದ ಒಂದು ದೊಡ್ಡ ಗುಂಪಿನವರು -

ثُلَّةٌ مِنَ الْأَوَّلِينَ ﴿٣٩﴾

41. ಮತ್ತು ಕೊನೆಯ ಕಾಲದ ಒಂದು ದೊಡ್ಡ ಗುಂಪಿನವರು (ಆಗಿದ್ದಾರೆ).

وَثُلَّةٌ مِنَ الْآخِرِينَ ﴿٤٠﴾

42. ಮತ್ತೆ ಎಡಪಕ್ಷದವರು. ಎಡಪಕ್ಷದವರು ಎಂತಹವರು!

وَأَصْحَابُ الشِّمَالِ مَا أَصْحَابُ الشِّمَالِ ﴿٤١﴾

43. (ಅವರು) ತೀಕ್ಷ್ಣವಾದ ಬಿಸಿಗಾಳಿ ಮತ್ತು ಕುದಿಯುತ್ತಿರುವ ನೀರು -

فِي سَمُومٍ وَحَمِيمٍ ﴿٤٢﴾

44. ಹಾಗೂ ಕಪ್ಪು ಧೂಮದ ನೆರಳಿನ ಮಧ್ಯದಲ್ಲಿರುವರು.

وَظِلٍّ مِنْ يَحْمُومٍ ﴿٤٣﴾

45. ಅದು ತಂಪಾಗಲಿ ಸುಖದಾಯಕವಾಗಲಿ ಅಲ್ಲ.

لَا بَارِدٍ وَلَا كَرِيمٍ ﴿٤٤﴾

46. ಅದಕ್ಕೆ ಮುಂಚೆ ಅವರು (ಭೂಲೋಕದಲ್ಲಿ) ಸುಖಲೋಲುಪರಾಗಿದ್ದರು.

إِنَّهُمْ كَانُوا قَبْلَ ذَٰلِكَ مُتْرَفِينَ ﴿٤٥﴾

47. ಅವರು ಮಹಾಪಾಪಗಳಲ್ಲಿ ಮುಳುಗಿದವರಾಗಿದ್ದರು.

وَكَانُوا يُصِرُّونَ عَلَى الْحِنْثِ الْعَظِيمِ ﴿٤٦﴾

48. ಅವರು ಕೇಳುತ್ತಿದ್ದರು: 'ಏನು, ನಾವು ಮೃತಪಟ್ಟು ಮಣ್ಣು ಮತ್ತು ಅಸ್ಥಿಗಳಾಗಿ ಪರಿವರ್ತಿತರಾದ ಬಳಿಕ ಕೂಡ ಎಬ್ಬಿಸಲ್ಪಡುವೆವೋ?

وَكَانُوا يَقُولُونَ أَئِذَا مِتْنَا وَكُنَّا تُرَابًا وَعِظَامًا أَإِنَّا لَمَبْعُوثُونَ ﴿٤٧﴾

49. 'ಹಾಗೆಯೇ ನಮ್ಮ ಪೂರ್ವಜರಾದ ತಂದೆ ತಾತಂದಿರು ಸಹ?'

أَوَآبَاؤُنَا الْأَوَّلُونَ ﴿٤٨﴾

50. ಹೇಳು: 'ಹೌದು, ಖಂಡಿತವಾಗಿಯೂ ಮೊದಲಿನವರು ಮತ್ತು ಕೊನೆಯವರು ಸಹ -

قُلْ إِنَّ الْأَوَّلِينَ وَالْآخِرِينَ ﴿٥٠﴾

51. 'ಒಂದು ನಿಶ್ಚಿತ ದಿನದಂದು ನಿರ್ದಿಷ್ಟ ವೇಳೆಯಲ್ಲಿ ಜಮಾಯಿಸಲ್ಪಡುವರು.'

لَمَجْمُوعُونَ إِلَىٰ مِيقَاتِ يَوْمٍ مَّعْلُومٍ ﴿٥١﴾

52. ಅನಂತರ, 'ಎಲೈ (ಸತ್ಯವನ್ನು) ನಿರಾಕರಿಸಿದ ಹಾದಿಗೆಟ್ಟವರೇ,

ثُمَّ إِنَّكُمْ أَيُّهَا الضَّالُّونَ الْمُكَذِّبُونَ ﴿٥٢﴾

53. 'ನೀವು ಖಂಡಿತವಾಗಿಯೂ ಝುಕ್ಕೂಮ್[451] ವೃಕ್ಷದಿಂದ ತಿನ್ನುವಿರಿ,

لَآكِلُونَ مِن شَجَرٍ مِّن زَقُّومٍ ﴿٥٣﴾

54. 'ಅದರಿಂದ ನೀವು ಹೊಟ್ಟೆ ತುಂಬಿಸುವಿರಿ.

فَمَالِئُونَ مِنْهَا الْبُطُونَ ﴿٥٤﴾

55. 'ಅದರ ಮೇಲೆ ನೀವು ಕುದಿಯುವ ನೀರನ್ನು ಕುಡಿಯುವಿರಿ;

فَشَارِبُونَ عَلَيْهِ مِنَ الْحَمِيمِ ﴿٥٥﴾

56. 'ದಾಹದಿಂದ ಬಳಲಿದ ಒಂಟೆಗಳಂತೆ ಕುಡಿಯುವಿರಿ.'

فَشَارِبُونَ شُرْبَ الْهِيمِ ﴿٥٦﴾

57. ನ್ಯಾಯ ತೀರ್ಮಾನ ದಿನದಂದು ಇದು ಅವರಿಗೆ ಸತ್ಕಾರವಾಗಿದೆ.

هَٰذَا نُزُلُهُمْ يَوْمَ الدِّينِ ﴿٥٧﴾

58. ನಾವೇ ನಿಮ್ಮನ್ನು ಸೃಷ್ಟಿಸಿದ್ದು. ಮತ್ತೆ ನೀವೇಕೆ ಅದನ್ನು ಒಪ್ಪುವುದಿಲ್ಲ?

نَحْنُ خَلَقْنَاكُمْ فَلَوْلَا تُصَدِّقُونَ ﴿٥٨﴾

59. ನೀವು ಸುರಿಸುವ ವೀರ್ಯದ ಬಗ್ಗೆ ಯೋಚಿಸಿದ್ದೀರಾ?

أَفَرَأَيْتُم مَّا تُمْنُونَ ﴿٥٩﴾

60. ಏನು ಅದನ್ನು ಸೃಷ್ಟಿಸುವವರು ನೀವೋ? ಅಥವಾ ಅದರ ಸೃಷ್ಟಿಕರ್ತರು ನಾವೋ?

أَأَنتُمْ تَخْلُقُونَهُ أَمْ نَحْنُ الْخَالِقُونَ ﴿٦٠﴾

61. ನಿಮ್ಮ ಮಧ್ಯೆ ಮರಣವನ್ನು ನಾವು ವಿಧಿಸಿರುವೆವು. ನಾವು ತಡೆಯಲ್ಪಡಲಾರೆವು -

نَحْنُ قَدَّرْنَا بَيْنَكُمُ الْمَوْتَ وَمَا نَحْنُ بِمَسْبُوقِينَ ﴿٦١﴾

451 ಒಂದು ಜಾತಿಯ ಕಳ್ಳಿಗಿಡ.





62. ನಿಮ್ಮನ್ನು ರೂಪಾಂತರಗೊಳಿಸಲಿಕ್ಕೂ ನಿಮಗೆ (ಈಗ) ತಿಳಿಯದ ಸ್ಥಿತಿಗೆ ನಿಮ್ಮನ್ನು ತಲಪಿಸಲಿಕ್ಕೂ (ನಾವು ಉದ್ದೇಶಿಸಿದರೆ).

عَلَىٰ أَن نُّبَدِّلَ أَمْثَالَكُمْ وَنُنشِئَكُمْ فِي مَا لَا تَعْلَمُونَ ﴿٦٢﴾

63. ಮೊದಲಿನ ಸೃಷ್ಟಿಯ ಕುರಿತು ನಿಮಗೆ ಗೊತ್ತಿದೆ. ಆದರೂ ನೀವೇಕೆ ಯೋಚಿಸುವುದಿಲ್ಲ?

وَلَقَدْ عَلِمْتُمُ النَّشْأَةَ الْأُولَىٰ فَلَوْلَا تَذَكَّرُونَ ﴿٦٣﴾

64. ನೀವು ಬಿತ್ತುವುದನ್ನು ನೀವು ನೋಡಿದ್ದೀರಾ?

أَفَرَأَيْتُم مَّا تَحْرُثُونَ ﴿٦٤﴾

65. ಅದನ್ನು ಬೆಳೆಸುವವರು ನೀವೋ ಅಥವಾ ಅದನ್ನು ಬೆಳೆಸುವವರು ನಾವೋ?

أَأَنتُمْ تَزْرَعُونَهُ أَمْ نَحْنُ الزَّارِعُونَ ﴿٦٥﴾

66. ನಾವು ಬಯಸಿದ್ದರೆ, ಅದನ್ನೆಲ್ಲ ನಾವು ನಾಶ ಮಾಡುತ್ತಿದ್ದೆವು. ಆಗ ನೀವು ಗೋಳಾಡುತ್ತಾ ಇರುತ್ತಿದ್ದಿರಿ:

لَوْ نَشَاءُ لَجَعَلْنَاهُ حُطَامًا فَظَلْتُمْ تَفَكَّهُونَ ﴿٦٦﴾

67. 'ನಾವು ಸಾಲದಲ್ಲಿ ಮುಳುಗಿದ್ದೇವೆ.

إِنَّا لَمُغْرَمُونَ ﴿٦٧﴾

68. 'ನಾವು ಹಾನಿಗೊಳಗಾಗಿದ್ದೇವೆ' (ಎಂಬಿತ್ಯಾದಿಯಾಗಿ).

بَلْ نَحْنُ مَحْرُومُونَ ﴿٦٨﴾

69. ನೀವು ಕುಡಿಯುವ ನೀರನ್ನು ನೀವು ನೋಡಿದ್ದೀರಾ?

أَفَرَأَيْتُمُ الْمَاءَ الَّذِي تَشْرَبُونَ ﴿٦٩﴾

70. ಅದನ್ನು ಮೇಘಗಳಿಂದ ಸುರಿಸುವವರು ನೀವೋ ಅಥವಾ ಸುರಿಸುವವರು ನಾವೋ?

أَأَنتُمْ أَنزَلْتُمُوهُ مِنَ الْمُزْنِ أَمْ نَحْنُ الْمُنزِلُونَ ﴿٧٠﴾

71. ನಾವು ಇಚ್ಛಿಸಿದ್ದರೆ, ಅದನ್ನು ನಾವು ಕಹಿಗೊಳಿಸುತ್ತಿದ್ದೆವು. ಮತ್ತೆ ನೀವೇಕೆ ಕೃತಜ್ಞರಾಗುವುದಿಲ್ಲ?

لَوْ نَشَاءُ جَعَلْنَاهُ أُجَاجًا فَلَوْلَا تَشْكُرُونَ ﴿٧١﴾

72. ನೀವು ಉರಿಸುವ ಬೆಂಕಿಯನ್ನು ನೀವು ನೋಡಿದ್ದೀರಾ?

أَفَرَأَيْتُمُ النَّارَ الَّتِي تُورُونَ ﴿٧٢﴾

**73.** ಅದಕ್ಕೆ ಬೇಕಾದ ಕಟ್ಟಿಗೆಮರಗಳನ್ನು ಉತ್ಪಾದಿಸುವವರು ನೀವೋ ಅಥವಾ ಉತ್ಪಾದಿಸುವವರು ನಾವೋ?

ءَاَنْتُمْ اَنْشَاْتُمْ شَجَرَتَهَآ اَمْ نَحْنُ الْمُنْشِـُٔوْنَ ﴿٧٢﴾

**74.** ನಾವು ಅದನ್ನು ಉಪದೇಶದಾಯಕ ಹಾಗೂ ಯಾತ್ರಿಕರಿಗೆ ಪ್ರಯೋಜನಕರವಾಗಿ ಮಾಡಿದ್ದೇವೆ.

نَحْنُ جَعَلْنٰهَا تَذْكِرَةً وَّمَتَاعًا لِّلْمُقْوِيْنَ ﴿٧٣﴾

**75.** ಆದ್ದರಿಂದ ಮಹತ್ವವಂತನಾದ ನಿನ್ನ ಪ್ರಭುವಿನ ನಾಮವನ್ನು ಕೊಂಡಾಡು.

فَسَبِّحْ بِاسْمِ رَبِّكَ الْعَظِيْمِ ﴿٧٤﴾

**76.** ನಕ್ಷತ್ರಗಳ ನೆಲೆಗಳ ಕುರಿತು ನಾನು ಪ್ರಮಾಣವಾಗಿ ಹೇಳುತ್ತೇನೆ.

فَلَآ اُقْسِمُ بِمَوٰقِعِ النُّجُوْمِ ﴿٧٥﴾

**77.** ನೀವು ತಿಳಿದಿದ್ದರೆ, ಖಂಡಿತವಾಗಿಯೂ ಇದೊಂದು ಮಹತ್ತಾದ ಪ್ರಮಾಣವಾಗಿದೆ.

وَاِنَّهٗ لَقَسَمٌ لَّوْ تَعْلَمُوْنَ عَظِيْمٌ ﴿٧٦﴾

**78.** ದಿಟವಾಗಿಯೂ ಇದು ಆದರಣೀಯವಾದ ಖುರ್‌ಆನ್ ಆಗಿದೆ -

اِنَّهٗ لَقُرْاٰنٌ كَرِيْمٌ ﴿٧٧﴾

**79.** ಸುರಕ್ಷಿತವಾದ ಗ್ರಂಥರೂಪದಲ್ಲಿ.

فِيْ كِتٰبٍ مَّكْنُوْنٍ ﴿٧٨﴾

**80.** ಪರಿಶುದ್ಧರಾದವರು ಹೊರತು ಬೇರ್‍ಯಾರೂ ಅದನ್ನು ಸ್ಪರ್ಶಿಸಲಾರರು.[452]

لَّا يَمَسُّهٗٓ اِلَّا الْمُطَهَّرُوْنَ ﴿٧٩﴾

**81.** ಸರ್ವಲೋಕಗಳ ಪ್ರಭುವಿನಿಂದ ಅದು ಅವತೀರ್ಣಗೊಂಡಿದೆ.

تَنْزِيْلٌ مِّنْ رَّبِّ الْعٰلَمِيْنَ ﴿٨٠﴾

**82.** ಏನು, ಈ ಮಾತನ್ನು ನೀವು ಕಡೆಗಣಿಸುತ್ತೀರಾ?

اَفَبِهٰذَا الْحَدِيْثِ اَنْتُمْ مُّدْهِنُوْنَ ﴿٨١﴾

**83.** ನೀವು (ಇದನ್ನು) ಸುಳ್ಳಾಗಿಸುವುದನ್ನು ನಿಮ್ಮ ಜೀವನೋಪಾಯವನ್ನಾಗಿ ಮಾಡಿದ್ದೀರಾ?

وَتَجْعَلُوْنَ رِزْقَكُمْ اَنَّكُمْ تُكَذِّبُوْنَ ﴿٨٢﴾

**84.** ಅದು (ಸಾಯುವ ಮನುಷ್ಯನ ಆತ್ಮ) ಗಂಟಲನ್ನು ತಲಪುವಾಗ,

فَلَوْلَآ اِذَا بَلَغَتِ الْحُلْقُوْمَ ﴿٨٣﴾

452. ಹೃದಯ ಶುದ್ಧಿಯುಳ್ಳವರು ಮಾತ್ರವೇ ಖುರ್‌ಆನಿನ ಗಹನವಾದ ತತ್ವಗಳನ್ನು ಗ್ರಹಿಸಬಲ್ಲರು ಎಂದು ತಾತ್ಪರ್ಯ.





**85.** ಆ ವೇಳೆಯಲ್ಲಿ ನೀವು ನೋಡುತ್ತಾ ಇರುತ್ತೀರಲ್ಲವೇ?

وَاَنْتُمْ حِيْنَىِٕذٍ تَنْظُرُوْنَ ﴿٨٤﴾

**86.** (ಆ ಸಂದರ್ಭದಲ್ಲಿ) ನಾವು ಅವನಿಗೆ ನಿಮಗಿಂತ ಹೆಚ್ಚು ಸಮೀಪದಲ್ಲಿರುತ್ತೇವೆ; ಆದರೆ ನೀವು ಕಾಣುವುದಿಲ್ಲ.

وَنَحْنُ اَقْرَبُ اِلَيْهِ مِنْكُمْ وَلٰكِنْ لَّا تُبْصِرُوْنَ ﴿٨٥﴾

**87.** (ನಮಗೆ) ನೀವು ಅಧೀನರಲ್ಲವಾಗಿದ್ದರೆ,

فَلَوْلَآ اِنْ كُنْتُمْ غَيْرَ مَدِيْنِيْنَ ﴿٨٦﴾

**88.** ನೀವು ಸತ್ಯವಂತರಾಗಿದ್ದಲ್ಲಿ ಆ ಜೀವವನ್ನು ಏಕೆ ಮರಳಿತರುವುದಿಲ್ಲ?

تَرْجِعُوْنَهَآ اِنْ كُنْتُمْ صٰدِقِيْنَ ﴿٨٧﴾

**89.** ಈಗ, ಅವನು (ಆ ಮೃತಪಟ್ಟವನು) ದೇವ ಸಾಮೀಪ್ಯವನ್ನು ಗಳಿಸಿದವರಲ್ಲಿ ಸೇರಿದವನಾದರೆ,

فَاَمَّآ اِنْ كَانَ مِنَ الْمُقَرَّبِيْنَ ﴿٨٨﴾

**90.** (ಅವನಿಗೆ) ಸುಖ ಸೌಕರ್ಯವುಳ್ಳ ಸುಗಂಧಮಯ ಆನಂದದಾಯಕ ಸ್ವರ್ಗವಿದೆ.

فَرَوْحٌ وَّرَيْحَانٌ ۙ وَّجَنَّتُ نَعِيْمٍ ﴿٨٩﴾

**91.** ಅವನು ಬಲಪಕ್ಷದವರಲ್ಲಿ ಸೇರಿದವನಾಗಿದ್ದರೆ,

وَاَمَّآ اِنْ كَانَ مِنْ اَصْحٰبِ الْيَمِيْنِ ﴿٩٠﴾

**92.** 'ಬಲಪಕ್ಷದವರಲ್ಲಿ ಸೇರಿದವನಾದ ನಿನ್ನ ಮೇಲೆ ಶಾಂತಿ ಇರಲಿ' (ಎಂದು ಅವನು ಹಾರೈಸಲ್ಪಡುವನು).

فَسَلٰمٌ لَّكَ مِنْ اَصْحٰبِ الْيَمِيْنِ ﴿٩١﴾

**93.** ಆದರೆ, ಅವನು (ಸತ್ಯವನ್ನು) ತಿರಸ್ಕರಿಸಿದ ಹಾದಿಗೆಟ್ಟವರಲ್ಲಿ ಸೇರಿದವನಾಗಿದ್ದರೆ,

وَاَمَّآ اِنْ كَانَ مِنَ الْمُكَذِّبِيْنَ الضَّاۤلِّيْنَ ﴿٩٢﴾

**94.** ಅವನಿಗೆ ಕುದಿಯುವ ನೀರಿನ ಸತ್ಕಾರವಿದೆ;

فَنُزُلٌ مِّنْ حَمِيْمٍ ﴿٩٣﴾

**95.** ಹಾಗೂ ನರಕದ ಅಗ್ನಿಯಿದೆ.

وَّتَصْلِيَةُ جَحِيْمٍ ﴿٩٤﴾

**96.** ನಿಶ್ಚಯವಾಗಿಯೂ ಇದು ಪರಮ ಸತ್ಯ ವಾಗಿದೆ.

اِنَّ هٰذَا لَهُوَ حَقُّ الْيَقِيْنِ ﴿٩٥﴾

**97.** ಆದ್ದರಿಂದ ಮಹತ್ವವಂತನಾದ ನಿನ್ನ ಪ್ರಭುವಿನ ನಾಮವನ್ನು ಕೊಂಡಾಡು.

فَسَبِّحْ بِاسْمِ رَبِّكَ الْعَظِيْمِ ﴿٩٦﴾

سُورَةُ الْحَدِيدِ مَدَنِيَّةٌ وَّهِيَ مَعَ الْبَسْمَلَةِ ثَلٰثُوْنَ اٰيَةً وَّ اَرْبَعُ رُكُوْعَاتٍ

# 57. ಅಲ್ ಹದೀದ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 30 ಆಯತ್‌ಗಳು ಹಾಗೂ 4 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

سَبَّحَ لِلّٰهِ مَا فِي السَّمٰوٰتِ وَالْاَرْضِ ۚ وَهُوَ الْعَزِيْزُ الْحَكِيْمُ ②

**2.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಸ್ತುತಿಕೀರ್ತನೆ ಮಾಡುತ್ತವೆ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.

لَهٗ مُلْكُ السَّمٰوٰتِ وَالْاَرْضِ ۚ يُحْيٖ وَيُمِيْتُ ۚ وَهُوَ عَلٰى كُلِّ شَيْءٍ قَدِيْرٌ ③

**3.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅವನದ್ದಾಗಿದೆ. ಅವನು ಬದುಕಿಸುತ್ತಾನೆ ಹಾಗೂ ಸಾಯಿಸುತ್ತಾನೆ. ಅವನು ಸರ್ವಸಾಮರ್ಥ್ಯವಂತನಾಗಿದ್ದಾನೆ.

هُوَ الْاَوَّلُ وَالْاٰخِرُ وَالظَّاهِرُ وَالْبَاطِنُ ۚ وَهُوَ بِكُلِّ شَيْءٍ عَلِيْمٌ ④

**4.** ಅವನೇ ಆದಿ, ಅವನೇ ಅಂತ್ಯ. ಅವನು ಪ್ರತ್ಯಕ್ಷನೂ ಗೌಪ್ಯನೂ ಆಗಿದ್ದಾನೆ. ಅವನು ಎಲ್ಲ ಸಂಗತಿಗಳನ್ನು ಬಲ್ಲವನೂ ಆಗಿದ್ದಾನೆ.

هُوَ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ اسْتَوٰى عَلَى الْعَرْشِ ۚ يَعْلَمُ مَا يَلِجُ فِي الْاَرْضِ وَمَا يَخْرُجُ مِنْهَا وَمَا يَنْزِلُ مِنَ السَّمَآءِ وَمَا يَعْرُجُ فِيْهَا ۚ وَهُوَ مَعَكُمْ اَيْنَ مَا كُنْتُمْ ۚ وَاللّٰهُ بِمَا تَعْمَلُوْنَ بَصِيْرٌ ⑤

**5.** ಆಕಾಶಗಳನ್ನು ಮತ್ತು ಭೂಮಿಯನ್ನು ಆರು ಹಂತಗಳಲ್ಲಿ ಸೃಷ್ಟಿಸಿದವನು ಅವನೇ. ಅನಂತರ ಅವನು ಸಿಂಹಾಸನಾರೂಢನಾದನು. ಭೂಮಿಯೊಳಗೆ ಏನು ಪ್ರವೇಶಿಸುತ್ತದೆ, ಅದರಿಂದ ಏನು ಹೊರಬರುತ್ತದೆ; ಆಕಾಶದಿಂದ ಏನು ಇಳಿಯುತ್ತದೆ, ಅದರೆಡೆಗೆ ಏನು ಮೇಲಕ್ಕೇರುತ್ತದೆ; ಎಲ್ಲವನ್ನೂ ಅವನು ಬಲ್ಲನು. ನೀವು ಎಲ್ಲಿದ್ದರೂ ಅವನು ನಿಮ್ಮ ಜೊತೆಗಿದ್ದಾನೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಕಾಣುತ್ತಾನೆ.

لَهٗ مُلْكُ السَّمٰوٰتِ وَالْاَرْضِ ۚ وَاِلَى اللّٰهِ تُرْجَعُ الْاُمُوْرُ ⑥

**6.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅವನದ್ದಾಗಿದೆ. ಎಲ್ಲ ವಿಚಾರಗಳೂ ಅಲ್ಲಾಹನೆಡೆಗೆ ಮರಳಿಸಲ್ಪಡುತ್ತವೆ.





يُوْلِجُ الَّيْلَ فِي النَّهَارِ وَيُوْلِجُ النَّهَارَ فِي الَّيْلِ ۚ وَهُوَ عَلِيْمٌ بِذَاتِ الصُّدُوْرِ ⑦

**7.** ಅವನು ರಾತ್ರಿಯನ್ನು ಹಗಲಿನಲ್ಲಿ ಪ್ರವೇಶಿಸುವಂತೆ ಮಾಡುತ್ತಾನೆ ಮತ್ತು ಹಗಲನ್ನು ರಾತ್ರಿಯಲ್ಲಿ ಪ್ರವೇಶಿಸುವಂತೆ ಮಾಡುತ್ತಾನೆ. ಹಾಗೂ ಹೃದಯಗಳೊಳಗೆ ಇರುವುದನ್ನೆಲ್ಲ ಅವನು ಸಂಪೂರ್ಣವಾಗಿ ಬಲ್ಲನು.

اٰمِنُوْا بِاللّٰهِ وَرَسُوْلِهٖ وَاَنْفِقُوْا مِمَّا جَعَلَكُمْ مُّسْتَخْلَفِيْنَ فِيْهِ ۚ فَالَّذِيْنَ اٰمَنُوْا مِنْكُمْ وَاَنْفَقُوْا لَهُمْ اَجْرٌ كَبِيْرٌ ⑧

**8.** ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ನಂಬಿರಿ. ಅಲ್ಲಾಹನು ನಿಮ್ಮನ್ನು ಯಾವುದಕ್ಕೆ ವಾರೀಸುದಾರರನ್ನಾಗಿ ಮಾಡಿರುವನೋ ಅದರಿಂದ (ಅಲ್ಲಾಹನ ಮಾರ್ಗದಲ್ಲಿ) ವೆಚ್ಚ ಮಾಡಿರಿ. ನಿಮ್ಮ ಪೈಕಿ ಯಾರು ನಂಬುತ್ತಾರೋ ಹಾಗೂ ವೆಚ್ಚ ಮಾಡುತ್ತಾರೋ ಅವರಿಗೆ ದೊಡ್ಡ ಪ್ರತಿಫಲವಿದೆ.

وَمَا لَكُمْ لَا تُؤْمِنُوْنَ بِاللّٰهِ ۚ وَالرَّسُوْلُ يَدْعُوْكُمْ لِتُؤْمِنُوْا بِرَبِّكُمْ وَقَدْ اَخَذَ مِيْثَاقَكُمْ اِنْ كُنْتُمْ مُّؤْمِنِيْنَ ⑨

**9.** ನೀವು ಅಲ್ಲಾಹನಲ್ಲಿ ವಿಶ್ವಾಸಹೊಂದದಿರಲು ನಿಮಗೆ ಕಾರಣವೇನಿದೆ? - ನಿಮ್ಮ ಪ್ರಭುವಿನಲ್ಲಿ ನಂಬಿಕೆಯಿಡಿರೆಂದು ಪ್ರವಾದಿ ನಿಮ್ಮನ್ನು ಕರೆಯುತ್ತಿರುವಾಗ ನೀವು ನಂಬದಿರಲಿಕ್ಕೆ ಕಾರಣವೇನು? ನೀವು ನಿಜವಾದ ಸತ್ಯ ವಿಶ್ವಾಸಿಗಳೆಂದಾದರೆ ಅವನು ನಿಮ್ಮಿಂದ ಒಡಂಬಡಿಕೆಯನ್ನು ಪಡೆದಿರುವನು (ಎಂದು ತಿಳಿಯಿರಿ).

هُوَ الَّذِيْ يُنَزِّلُ عَلٰى عَبْدِهٖۤ اٰيٰتٍۭ بَيِّنٰتٍ لِّيُخْرِجَكُمْ مِّنَ الظُّلُمٰتِ اِلَى النُّوْرِ ۚ وَاِنَّ اللّٰهَ بِكُمْ لَرَءُوْفٌ رَّحِيْمٌ ⑩

**10.** (ಎಲ್ಲ ವಿಧ) ಅಂಧಕಾರಗಳಿಂದ ಬೆಳಕಿನೆಡೆಗೆ ನಿಮ್ಮನ್ನು ಕರೆತರಲು ತನ್ನ ದಾಸನಿಗೆ ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸುವವನು ಅವನೇ. ನಿಶ್ಚಯವಾಗಿಯೂ ಅಲ್ಲಾಹನು ನಿಮ್ಮ ಮೇಲೆ ದಯೆದೋರುವವನೂ ಕಾರುಣ್ಯನಿಧಿಯೂ ಆಗಿದ್ದಾನೆ.

وَمَا لَكُمْ اَلَّا تُنْفِقُوْا فِيْ سَبِيْلِ اللّٰهِ وَلِلّٰهِ مِيْرَاثُ السَّمٰوٰتِ وَالْاَرْضِ ۚ لَا يَسْتَوِيْ مِنْكُمْ مَّنْ اَنْفَقَ مِنْ قَبْلِ الْفَتْحِ وَقَاتَلَ ۚ اُولٰٓئِكَ اَعْظَمُ دَرَجَةً مِّنَ الَّذِيْنَ اَنْفَقُوْا مِنْ بَعْدُ وَقَاتَلُوْا ۚ وَكُلًّا

**11.** ಅಲ್ಲಾಹನ ಮಾರ್ಗದಲ್ಲಿ ವೆಚ್ಚ ಮಾಡದಿರಲು ನಿಮಗೆ ಕಾರಣವೇನಿದೆ? ಆಕಾಶಗಳ ಮತ್ತು ಭೂಮಿಯ ಎಲ್ಲ ಹಕ್ಕುಗಳು ಅಲ್ಲಾಹನಿಗೆ ಸೇರುತ್ತವೆಯಲ್ಲವೇ? ವಿಜಯಕ್ಕೆ ಮುಂಚೆ ವೆಚ್ಚ ಮಾಡಿದವರು ಮತ್ತು ಯುದ್ಧ ಮಾಡಿದವರು (ಆ ಬಳಿಕ ವೆಚ್ಚ ಮಾಡಿದವರಿಗೆ ಮತ್ತು ಯುದ್ಧ ಮಾಡಿದವರಿಗೆ) ಸಮಾನರಲ್ಲ. ಆ ಮೇಲೆ (ವಿಜಯದ ಅನಂತರ) ವೆಚ್ಚ ಮಾಡಿದವರಿಗಿಂತಲೂ

ಯುದ್ಧ ಮಾಡಿದವರಿಗಿಂತಲೂ ಅವರು ಉನ್ನತ ಪದವಿಯಲ್ಲಿರುವವರು. ಆದಾಗ್ಯೂ ಎಲ್ಲರಿಗೂ ಅಲ್ಲಾಹನು ಒಳಿತನ್ನು ವಾಗ್ದಾನ ಮಾಡಿದ್ದಾನೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲನು.

وَّعَدَ اللّٰهُ الْحُسْنٰى ۭ وَاللّٰهُ بِمَا تَعْمَلُوْنَ خَبِيْرٌ ﴿١١﴾

12. ಅಲ್ಲಾಹನಿಗೆ ಉತ್ತಮವಾದ ಸಾಲವನ್ನು ನೀಡುವವನು ಯಾರು? ಹಾಗೆ ಕೊಡುವವನಿಗೆ ಅಲ್ಲಾಹನು ಅದನ್ನು ವೃದ್ಧಿಗೊಳಿಸಿಕೊಡುವನು. ಅವನಿಗೆ ಗೌರವಾರ್ಹ ಪ್ರತಿಫಲವೂ ಇದೆ.

مَنْ ذَا الَّذِيْ يُقْرِضُ اللّٰهَ قَرْضًا حَسَنًا فَيُضٰعِفَهٗ لَهٗ وَلَهٗٓ اَجْرٌ كَرِيْمٌ ﴿١٢﴾

13. ಸತ್ಯ ವಿಶ್ವಾಸಿಗಳನ್ನೂ ಸತ್ಯ ವಿಶ್ವಾಸಿನಿಯರನ್ನೂ ಅವರ ಪ್ರಕಾಶ ಅವರ ಮುಂದೆ ಮತ್ತು ಅವರ ಬಲಭಾಗದಲ್ಲಿ ಶೀಘ್ರವಾಗಿ ಚಲಿಸುತ್ತಿರುವ ಸ್ಥಿತಿಯಲ್ಲಿ ನೀನು ಕಾಣುವ ದಿನದ ಬಗ್ಗೆ ಯೋಚಿಸು. (ಅವರೊಡನೆ ಹೀಗೆ ಹೇಳಲಾಗುವುದು:) 'ಇಂದು ನಿಮಗೆ ಶುಭಾಶಯಗಳು. ಕೆಳಬದಿಯಲ್ಲಿ ಹೊಳೆಗಳು ಹರಿಯುತ್ತಿರುವ ಸ್ವರ್ಗೀಯ ತೋಟಗಳು ನಿಮಗಿವೆ. ಅಲ್ಲಿ ನೀವು ಶಾಶ್ವತವಾಗಿ ವಾಸಿಸುವಿರಿ. ಅದೇ ಮಹಾ ವಿಜಯವಾಗಿದೆ.

يَوْمَ تَرَى الْمُؤْمِنِيْنَ وَالْمُؤْمِنٰتِ يَسْعٰى نُوْرُهُمْ بَيْنَ اَيْدِيْهِمْ وَبِاَيْمَانِهِمْ بُشْرٰىكُمُ الْيَوْمَ جَنّٰتٌ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ۭ ذٰلِكَ هُوَ الْفَوْزُ الْعَظِيْمُ ﴿١٣﴾

14. ಕಪಟ ವಿಶ್ವಾಸಿಗಳೂ, ಕಪಟ ವಿಶ್ವಾಸಿನಿಯರೂ ಸತ್ಯವಿಶ್ವಾಸಿಗಳೊಡನೆ, 'ನಮ್ಮನ್ನೂ ಸ್ವಲ್ಪ ಗಮನಿಸಿರಿ. ನಿಮ್ಮ ಪ್ರಕಾಶದಿಂದ ನಾವು ಸಹ ಸ್ವಲ್ಪ ಪಡೆದುಕೊಳ್ಳುತ್ತೇವೆ' ಎಂದು ಹೇಳುವ ದಿನದಂದು. (ಆಗ ಅವರೊಡನೆ ಹೀಗೆ) ಹೇಳಲಾಗುವುದು: '(ಸಾಧ್ಯವಿದ್ದರೆ) ನೀವು (ಪೂರ್ವಲೋಕಕ್ಕೆ) ಮರಳಿ ಹೋಗಿ ಪ್ರಕಾಶವನ್ನು ಹುಡುಕಿರಿ.' ಆಗ ಅವರ ಮಧ್ಯೆ ತಡೆಯಾಗಿ ಒಂದು ಗೋಡೆ ಇರುವುದು. ಅದಕ್ಕೊಂದು ಬಾಗಿಲಿರುವುದು. ಅದರೊಳಗೆ (ಸರ್ವತ್ರ) ಕಾರುಣ್ಯವೂ ಅದರ ಹೊರಗೆ ಎದುರುಗಡೆ ಯಾತನೆಯೂ ಇರುವುದು.

يَوْمَ يَقُوْلُ الْمُنٰفِقُوْنَ وَالْمُنٰفِقٰتُ لِلَّذِيْنَ اٰمَنُوا انْظُرُوْنَا نَقْتَبِسْ مِنْ نُّوْرِكُمْ ۚ قِيْلَ ارْجِعُوْا وَرَاۗءَكُمْ فَالْتَمِسُوْا نُوْرًا ۭ فَضُرِبَ بَيْنَهُمْ بِسُوْرٍ لَّهٗ بَابٌ ۭ بَاطِنُهٗ فِيْهِ الرَّحْمَةُ وَظَاهِرُهٗ مِنْ قِبَلِهِ الْعَذَابُ ﴿١٤﴾

15. 'ನಾವು ನಿಮ್ಮೊಂದಿಗೆ ಇದ್ದಿರಲಿಲ್ಲವೇ?' ಎಂದು ಅವರು (ಸತ್ಯವಿಶ್ವಾಸಿಗಳೊಡನೆ) ಕರೆದು ಕೇಳುವರು. ಆಗ ಅವರು ಉತ್ತರಿಸುವವರು: 'ಹೌದು

يُنَادُوْنَهُمْ اَلَمْ نَكُنْ مَّعَكُمْ ۭ قَالُوْا بَلٰى وَلٰكِنَّكُمْ فَتَنْتُمْ اَنْفُسَكُمْ وَ





ಆದರೆ ನೀವು ನಿಮ್ಮನ್ನೇ ಪ್ರಲೋಭನೆಗೆ ಒಳಪಡಿಸಿದಿರಿ; ಹಿಂಜರಿದಿರಿ ಮತ್ತು ಸಂಶಯಗ್ರಸ್ತರಾದಿರಿ ಹಾಗೂ ವ್ಯಾಮೋಹಗಳು ನಿಮ್ಮನ್ನು ವಂಚಿಸಿದವು. ಹಾಗೆ ಅಲ್ಲಾಹನ ತೀರ್ಮಾನ ಜಾರಿಗೊಂಡಿತು. ಅಲ್ಲಾಹನ ವಿಚಾರದಲ್ಲಿ ಮೋಸಗಾರನು (ಶೈತಾನ) ನಿಮ್ಮನ್ನು ಮೋಸಗೊಳಿಸಿದನು.

تَرَبَّصْتُمْ وَارْتَبْتُمْ وَغَرَّتْكُمُ الْاَمَانِيُّ حَتّٰى جَاۗءَ اَمْرُ اللّٰهِ وَغَرَّكُمْ بِاللّٰهِ الْغَرُوْرُ ﴿١٥﴾

16. 'ಆದುದರಿಂದ ಇಂದು ನಿಮ್ಮಿಂದಾಗಲಿ ಅವಿಶ್ವಾಸಿಗಳಿಂದಾಗಲಿ ಯಾವ ಪ್ರಾಯಶ್ಚಿತ್ತವನ್ನೂ ಸ್ವೀಕರಿಸಲಾಗುವುದಿಲ್ಲ. ನಿಮ್ಮ ವಾಸಸ್ಥಳ ನರಕವಾಗಿದೆ. ಅದೇ ನಿಮ್ಮ ಮಿತ್ರ. ಆ ಗಮ್ಯಸ್ಥಾನ ಎಷ್ಟು ಕೆಟ್ಟದ್ದು!'

فَالْيَوْمَ لَا يُؤْخَذُ مِنْكُمْ فِدْيَةٌ وَّلَا مِنَ الَّذِيْنَ كَفَرُوْا ۭ مَاْوٰىكُمُ النَّارُ ۭ هِيَ مَوْلٰىكُمْ ۭ وَبِئْسَ الْمَصِيْرُ ﴿١٦﴾

17. ಅಲ್ಲಾಹನನ್ನೂ ಅವನಿಂದ ಅವತೀರ್ಣವಾದ ಸತ್ಯವನ್ನೂ ಸ್ಮರಿಸಿ ತಮ್ಮ ಹೃದಯಗಳು ಭಯವಿಹ್ವಲಗೊಳ್ಳಲಿಕ್ಕೂ ಮುಂಚೆ ಗ್ರಂಥ ನೀಡಲ್ಪಟ್ಟವರು ದೀರ್ಘ ಕಾಲಾವಧಿಯ ಬಳಿಕ ಅವರ ಹೃದಯಗಳು ಕಠೋರವಾಗಿ ಅವರಲ್ಲಿ ಹೆಚ್ಚಿನವರು ಆಜ್ಞೋಲ್ಲಂಘಕರಾದಂತೆ ಆಗದಿರಲಿಕ್ಕೂ ಸತ್ಯ ವಿಶ್ವಾಸಿಗಳಿಗೆ ಇನ್ನೂ ಸಮಯವಾಗಿಲ್ಲವೇ?

اَلَمْ يَاْنِ لِلَّذِيْنَ اٰمَنُوْٓا اَنْ تَخْشَعَ قُلُوْبُهُمْ لِذِكْرِ اللّٰهِ وَمَا نَزَلَ مِنَ الْحَقِّ ۙ وَلَا يَكُوْنُوْا كَالَّذِيْنَ اُوْتُوا الْكِتٰبَ مِنْ قَبْلُ فَطَالَ عَلَيْهِمُ الْاَمَدُ فَقَسَتْ قُلُوْبُهُمْ ۭ وَكَثِيْرٌ مِّنْهُمْ فٰسِقُوْنَ ﴿١٧﴾

18. ತಿಳಿದುಕೊಳ್ಳಿರಿ, ಖಂಡಿತವಾಗಿಯೂ ಅಲ್ಲಾಹನು ಭೂಮಿಯನ್ನು ಅದರ ನಿರ್ಜೀವಾವಸ್ಥೆಯ ಬಳಿಕ ಪುನಶ್ಚೇತನಗೊಳಿಸುತ್ತಾನೆ. ನೀವು ಮನವರಿಕೆ ಮಾಡಲಿಕ್ಕೋಸ್ಕರ ದೃಷ್ಟಾಂತಗಳನ್ನು ನಾವು ನಿಮಗೆ ಸ್ಪಷ್ಟಪಡಿಸುತ್ತೇವೆ.

اِعْلَمُوْٓا اَنَّ اللّٰهَ يُحْيِ الْاَرْضَ بَعْدَ مَوْتِهَا ۭ قَدْ بَيَّنَّا لَكُمُ الْاٰيٰتِ لَعَلَّكُمْ تَعْقِلُوْنَ ﴿١٨﴾

19. ದಾನ ಧರ್ಮ ನೀಡುವ ಪುರುಷರಿಗೂ ದಾನ ಧರ್ಮ ನೀಡುವ ಸ್ತ್ರೀಯರಿಗೂ ಮತ್ತು ಅಲ್ಲಾಹನಿಗೆ ಉತ್ತಮವಾದ ಸಾಲವನ್ನು ನೀಡುವವರಿಗೂ ಅದನ್ನು ವೃದ್ಧಿಗೊಳಿಸಿ ಕೊಡಲಾಗುತ್ತದೆ. ಅವರಿಗೆ ಗೌರವಾರ್ಹ ಪ್ರತಿಫಲವೂ ಇದೆ.

اِنَّ الْمُصَّدِّقِيْنَ وَالْمُصَّدِّقٰتِ وَاَقْرَضُوا اللّٰهَ قَرْضًا حَسَنًا يُّضٰعَفُ لَهُمْ وَلَهُمْ اَجْرٌ كَرِيْمٌ ﴿١٩﴾

20. ಯಾರು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕರನ್ನು ನಂಬುತ್ತಾರೋ, ಅವರು ತಮ್ಮ

وَالَّذِيْنَ اٰمَنُوْا بِاللّٰهِ وَرُسُلِهٖٓ اُولٰۗىِٕكَ هُمُ الصِّدِّيْقُوْنَ ڰ وَالشُّهَدَاۗءُ عِنْدَ

رَبِّهِمْ ۖ لَهُمْ اَجْرُهُمْ وَ نُوْرُهُمْ ۖ
وَ الَّذِيْنَ كَفَرُوْا وَ كَذَّبُوْا بِاٰيٰتِنَآ
اُولٰٓئِكَ اَصْحٰبُ الْجَحِيْمِ ﴿١٩﴾

ಪ್ರಭುವಿನ ದೃಷ್ಟಿಯಲ್ಲಿ ಸತ್ಯವಂತರೂ (ಸಿದ್ದೀಖ್), (ಸತ್ಯಕ್ಕೆ) ಸಾಕ್ಷ್ಯವಹಿಸುವವರೂ (ಶುಹದಾಅ್) ಆಗಿದ್ದಾರೆ. ಅವರಿಗೆ ತಮ್ಮ ಪ್ರತಿಫಲ ಮತ್ತು ಪ್ರಕಾಶ ಲಭಿಸುವುದು. ಆದರೆ ನಂಬದೆ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರು ನರಕವಾಸಿಗಳು.

اِعْلَمُوْٓا اَنَّمَا الْحَيٰوةُ الدُّنْيَا لَعِبٌ وَّ لَهْوٌ
وَّ زِيْنَةٌ وَّ تَفَاخُرٌۢ بَيْنَكُمْ وَ تَكَاثُرٌ فِى
الْاَمْوَالِ وَ الْاَوْلَادِ ۖ كَمَثَلِ غَيْثٍ
اَعْجَبَ الْكُفَّارَ نَبَاتُهٗ ثُمَّ يَهِيْجُ
فَتَرٰىهُ مُصْفَرًّا ثُمَّ يَكُوْنُ حُطٰمًا ۖ
وَ فِى الْاٰخِرَةِ عَذَابٌ شَدِيْدٌ ۙ وَّ مَغْفِرَةٌ
مِّنَ اللّٰهِ وَ رِضْوَانٌ ۖ وَ مَا الْحَيٰوةُ
الدُّنْيَآ اِلَّا مَتَاعُ الْغُرُوْرِ ﴿٢٠﴾

**21.** ತಿಳಿದುಕೊಳ್ಳಿರಿ, ಇಹಲೋಕ ಜೀವನ ಒಂದು ಆಟವೂ ವಿನೋದವೂ ಅಲಂಕಾರವೂ ನೀವು ಪರಸ್ಪರ ಡಂಭಾಚಾರ ಮಾಡುವುದೂ ಸಂಪತ್ತು ಮತ್ತು ಸಂತತಿಗಳಲ್ಲಿ ಹೆಮ್ಮೆಪಡುವುದೂ ಮಾತ್ರವಾಗಿದೆ. (ಇಹಲೋಕ ಜೀವನ) ಒಂದು ಮಳೆಯ ಹಾಗೆ. ಆ ಮೂಲಕ ಉತ್ಪನ್ನವಾದ ಬೆಳೆಯು ಕೃಷಿಕನನ್ನು ಸಂತೋಷಪಡಿಸುತ್ತದೆ. ಅನಂತರ ಅದು ಒಣಗಿ ಹೋದಾಗ, ಅದು ಹಳದಿ ಬಣ್ಣಕ್ಕೆ ತಿರುಗಿ ನೀನು ಕಾಣುವೆ. ಅನಂತರ ಅದು ಹುಲ್ಲು ಕಡ್ಡಿಗಳಾಗುತ್ತವೆ. ಪರಲೋಕದಲ್ಲಿ (ಅವಿಶ್ವಾಸಿಗಳಿಗೆ) ಕಠಿಣವಾದ ಶಿಕ್ಷೆ ಇದೆ. ಹಾಗೆಯೇ (ವಿಶ್ವಾಸಿಗಳಿಗೆ) ಅಲ್ಲಾಹನಿಂದ ಕ್ಷಮಾದಾನವೂ ಸಂತುಷ್ಟಿಯೂ ಇದೆ. ಐಹಿಕ ಜೀವನವು ವೋಸಗೊಳಿಸುವ (ತಾತ್ಕಾಲಿಕ) ಸುಖಾನುಭವ ಮಾತ್ರವಾಗಿದೆ.

سَابِقُوْٓا اِلٰى مَغْفِرَةٍ مِّنْ رَّبِّكُمْ وَ جَنَّةٍ
عَرْضُهَا كَعَرْضِ السَّمَآءِ وَ الْاَرْضِ ۙ
اُعِدَّتْ لِلَّذِيْنَ اٰمَنُوْا بِاللّٰهِ وَ رُسُلِهٖ ۖ
ذٰلِكَ فَضْلُ اللّٰهِ يُؤْتِيْهِ مَنْ يَّشَآءُ ۖ
وَ اللّٰهُ ذُو الْفَضْلِ الْعَظِيْمِ ﴿٢١﴾

**22.** ನೀವು ನಿಮ್ಮ ಪ್ರಭುವಿನಿಂದ ಕ್ಷಮಾದಾನ ಪಡೆಯಲಿಕ್ಕೋಸ್ಕರ ಹಾಗೂ ಆಕಾಶ ಮತ್ತು ಭೂಮಿಯ ವಿಶಾಲದಷ್ಟು ವಿಶಾಲವಾಗಿರುವ ಸ್ವರ್ಗವನ್ನು ಗಳಿಸಲಿಕ್ಕೋಸ್ಕರ ಪೈಪೋಟಿ ನಡೆಸಿರಿ. ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕರನ್ನು ನಂಬುವವರಿಗೋಸ್ಕರ ಅದನ್ನು (ಸ್ವರ್ಗವನ್ನು) ಸಿದ್ಧಪಡಿಸಿ ಇಡಲಾಗಿದೆ. ಅದು ಅಲ್ಲಾಹನ ಅನುಗ್ರಹವಾಗಿದೆ. ತಾನಿಚ್ಛಿಸುವವರಿಗೆ ಅದನ್ನು ಅವನು ದಯಪಾಲಿಸುವನು. ಅಲ್ಲಾಹನು ಅಪಾರವಾದ ಅನುಗ್ರಹದ ಒಡೆಯನಾಗಿದ್ದಾನೆ.

مَآ اَصَابَ مِنْ مُّصِيْبَةٍ فِى الْاَرْضِ وَلَا
فِيْٓ اَنْفُسِكُمْ اِلَّا فِيْ كِتٰبٍ مِّنْ قَبْلِ اَنْ
نَّبْرَاَهَا ۖ اِنَّ ذٰلِكَ عَلَى اللّٰهِ يَسِيْرٌ ﴿٢٢﴾

**23.** ಯಾವುದೇ ಆಪತ್ತು, ಅದು ಬಂದೆರಗುವುದಕ್ಕೆ ಮುಂಚೆಯೇ ಒಂದು ಗ್ರಂಥದಲ್ಲಿ ದಾಖಲಿಸಲ್ಪಡದೆ ಅದು ಭೂಮಿಯಲ್ಲಾಗಲಿ ನಿಮ್ಮಲ್ಲಾಗಲಿ ಸಂಭವಿಸುವುದಿಲ್ಲ. ಖಂಡಿತವಾಗಿಯೂ ಅದು ಅಲ್ಲಾಹನಿಗೆ ಸುಲಭಸಾಧ್ಯ.





لِّكَيْلَا تَاْسَوْا عَلٰى مَا فَاتَكُمْ وَ لَا
تَفْرَحُوْا بِمَآ اٰتٰىكُمْ ۖ وَ اللّٰهُ لَا يُحِبُّ
كُلَّ مُخْتَالٍ فَخُوْرِ ۙ ﴿٢٣﴾

**24.** (ಇದು) ನಿಮಗೆ ನಷ್ಟವಾದುದರ ಬಗ್ಗೆ ನೀವು ವ್ಯಥೆಪಡದಿರಲಿಕ್ಕೆ ಅಥವಾ ನಿಮಗೆ ಅವನು (ಅನುಗ್ರಹ) ನೀಡಿದ ಕಾರಣದಿಂದ ನೀವು ಅಮಿತಾನಂದಪಡದಿರಲಿಕ್ಕೆ ಆಗಿದೆ. ಆತ್ಮ ಪ್ರಶಂಸೆ ಮಾಡುವ ದುರಭಿಮಾನಿಗಳನ್ನು ಅಲ್ಲಾಹನು ಮೆಚ್ಚುವುದಿಲ್ಲ.

الَّذِيْنَ يَبْخَلُوْنَ وَ يَاْمُرُوْنَ النَّاسَ
بِالْبُخْلِ ۖ وَ مَنْ يَّتَوَلَّ فَاِنَّ اللّٰهَ هُوَ
الْغَنِيُّ الْحَمِيْدُ ﴿٢٤﴾

**25.** ಅವರು ಜಿಪುಣರೂ ಜಿಪುಣತೆ ತೋರಿಸಲು ಜನರಿಗೆ ಪ್ರೇರಣೆ ನೀಡುವವರೂ ಆಗಿದ್ದಾರೆ. ಯಾರಾದರೂ ಬೆನ್ನು ತಿರುಗಿಸಿ ಹೋದರೆ (ತಿಳಿದುಕೊಳ್ಳಿರಿ) ಅಲ್ಲಾಹನಾದರೋ ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

لَقَدْ اَرْسَلْنَا رُسُلَنَا بِالْبَيِّنٰتِ وَ
اَنْزَلْنَا مَعَهُمُ الْكِتٰبَ وَ الْمِيْزَانَ
لِيَقُوْمَ النَّاسُ بِالْقِسْطِ ۚ وَ اَنْزَلْنَا
الْحَدِيْدَ فِيْهِ بَاْسٌ شَدِيْدٌ وَّ مَنَافِعُ
لِلنَّاسِ وَ لِيَعْلَمَ اللّٰهُ مَنْ يَّنْصُرُهٗ وَ
رُسُلَهٗ بِالْغَيْبِ ۖ اِنَّ اللّٰهَ قَوِيٌّ عَزِيْزٌ ﴿٢٥﴾

**26.** ಸತ್ಯವಾಗಿಯೂ ನಮ್ಮ ಸಂದೇಶವಾಹಕರನ್ನು ನಾವು ಸ್ಪಷ್ಟವಾದ ಸಾಕ್ಷ್ಯಾಧಾರಗಳ ಸಹಿತ ಕಳುಹಿಸಿರುವೆವು. ಜನರು ನ್ಯಾಯನೀತಿಯಿಂದ ವರ್ತಿಸಲಿಕ್ಕೋಸ್ಕರ ಗ್ರಂಥವನ್ನೂ (ನ್ಯಾಯದ) ತಕ್ಕಡಿಯನ್ನೂ ಅವರೊಂದಿಗೆ ಇಳಿಸಿದ್ದೇವೆ. ನಾವು ಕಬ್ಬಿಣವನ್ನೂ (ನಿಮಗೆ ಅನುಗ್ರಹವಾಗಿ) ಇಳಿಸಿದ್ದೇವೆ. ಅದರಲ್ಲಿ ತೀವ್ರವಾದ ಮಾರಕ ಶಕ್ತಿಯೂ ಮನುಷ್ಯರಿಗೆ ಹಲವಿಧ ಪ್ರಯೋಜನಗಳೂ ಇವೆ. ತನಗೆ ಮತ್ತು ತನ್ನ ಸಂದೇಶವಾಹಕರಿಗೆ ಅಗೋಚರಾವಸ್ಥೆಯಲ್ಲೂ ನೆರವೀಯುವವರು ಯಾರೆಂದು ಅಲ್ಲಾಹನು ಗೊತ್ತುಹಚ್ಚಲಿಕ್ಕಾಗಿ (ಹೀಗೆ ಮಾಡಲಾಗಿದೆ). ಖಂಡಿತವಾಗಿಯೂ ಅಲ್ಲಾಹನು ಶಕ್ತಿವಂತನೂ ಪ್ರತಾಪಶಾಲಿಯೂ ಆಗಿದ್ದಾನೆ.

وَ لَقَدْ اَرْسَلْنَا نُوْحًا وَّ اِبْرٰهِيْمَ وَ
جَعَلْنَا فِيْ ذُرِّيَّتِهِمَا النُّبُوَّةَ وَ
الْكِتٰبَ فَمِنْهُمْ مُّهْتَدٍ ۚ وَ كَثِيْرٌ
مِّنْهُمْ فٰسِقُوْنَ ﴿٢٦﴾

**27.** ನಾವು ನೂಹ್‌ರನ್ನೂ ಇಬ್‌ರಾಹೀಮ್‌ರನ್ನೂ ಸಂದೇಶವಾಹಕರಾಗಿ ಕಳುಹಿಸಿದ್ದೇವೆ. ನಾವು ಅವರ ಸಂತತಿಗಳಲ್ಲಿ ಪ್ರವಾದಿತ್ವವನ್ನೂ ಗ್ರಂಥವನ್ನೂ ದಯಪಾಲಿಸಿದ್ದೇವೆ. ಹಾಗೆ ಅವರಲ್ಲಿ ಕೆಲವರು ಸತ್ಪಥ ದರ್ಶನವನ್ನು ಪಡೆದರು. ಆದರೆ ಅವರಲ್ಲಿ ಹೆಚ್ಚಿನವರು ಆಜ್ಞೋಲ್ಲಂಘಕರು.

ثُمَّ قَفَّيْنَا عَلٰٓى اٰثَارِهِمْ بِرُسُلِنَا وَ
قَفَّيْنَا بِعِيْسَى ابْنِ مَرْيَمَ وَاٰتَيْنٰهُ
الْاِنْجِيْلَ ۙ وَجَعَلْنَا فِيْ قُلُوْبِ الَّذِيْنَ
اتَّبَعُوْهُ رَاْفَةً وَّرَحْمَةً ؕ وَرَهْبَانِيَّةَ
ِۨابْتَدَعُوْهَا مَا كَتَبْنٰهَا عَلَيْهِمْ اِلَّا
ابْتِغَآءَ رِضْوَانِ اللّٰهِ فَمَا رَعَوْهَا
حَقَّ رِعَايَتِهَا ۚ فَاٰتَيْنَا الَّذِيْنَ اٰمَنُوْا
مِنْهُمْ اَجْرَهُمْ ۚ وَكَثِيْرٌ مِّنْهُمْ
فٰسِقُوْنَ ﴿۲۸﴾

**28. ಅನಂತರ ನಾವು ಅವರ ಹೆಜ್ಜೆಗಳನ್ನು ಅನುಸರಿಸುವ ಸಂದೇಶವಾಹಕರನ್ನು ಕಳುಹಿಸಿದೆವು. ಮರ್ಯಮರ ಪುತ್ರ ಈಸಾರನ್ನೂ ಅವರ ಅನುಗಾಮಿಯಾಗಿ ನಾವು ಕಳುಹಿಸಿದೆವು. ಅವರಿಗೆ ನಾವು ಇಂಜೀಲನ್ನು ನೀಡಿದೆವು. ಅವರನ್ನು ಅನುಸರಿಸಿದವರ ಹೃದಯಗಳಲ್ಲಿ ನಾವು ಸಹಾನುಭೂತಿಯನ್ನೂ ಕರುಣೆಯನ್ನೂ ಮೂಡಿಸಿದೆವು. ಆದರೆ ಅವರೇ[453] ಹೊಸದಾಗಿ ಆಚರಣೆ ತಂದ ಸಂನ್ಯಾಸವನ್ನು ನಾವು ಅವರಿಗೆ ಆಜ್ಞಾಪಿಸಿರಲಿಲ್ಲ. ಬದಲಾಗಿ, ಅಲ್ಲಾಹನ ಸಂತುಷ್ಟಿಯನ್ನು ಅರಸಬೇಕೆಂದೇ ನಾವು ಅವರಿಗೆ ಆದೇಶಿಸಿದ್ದೆವು. ಆದರೆ ಅದನ್ನು ಅವರು ಕ್ರಮಬದ್ಧವಾಗಿ ಅನುಷ್ಠಿಸಲಿಲ್ಲ. ಅಂತೂ ಅವರಲ್ಲಿ ಸತ್ಯವಿಶ್ವಾಸಿಗಳಿಗೆ ಅವರ ಪ್ರತಿಫಲವನ್ನು ನಾವು ನೀಡಿದೆವು. ಅವರಲ್ಲಿ ಹೆಚ್ಚಿನವರು ಆಜ್ಞೋಲ್ಲಂಘಕರಾಗಿದ್ದಾರೆ.**

يٰٓاَيُّهَا الَّذِيْنَ اٰمَنُوا اتَّقُوا اللّٰهَ وَ
اٰمِنُوْا بِرَسُوْلِهٖ يُؤْتِكُمْ كِفْلَيْنِ مِنْ
رَّحْمَتِهٖ وَيَجْعَلْ لَّكُمْ نُوْرًا تَمْشُوْنَ
بِهٖ وَيَغْفِرْ لَكُمْ ؕ وَاللّٰهُ غَفُوْرٌ رَّحِيْمٌ ﴿۲۹﴾

**29. ಎಲೈ ಸತ್ಯ ವಿಶ್ವಾಸಿಗಳೇ, ಅಲ್ಲಾಹನಿಗೆ ಭಯಪಡಿರಿ ಹಾಗೂ ಅವನ ಸಂದೇಶವಾಹಕನಲ್ಲಿ ವಿಶ್ವಾಸವಿರಿಸಿರಿ. ಹಾಗೆ ಮಾಡಿದರೆ ಅವನು** (ಅಲ್ಲಾಹನು) **ತನ್ನ ಕರುಣೆಯಲ್ಲಿ ನಿಮಗೆ ಎರಡು ಪಾಲನ್ನು ನೀಡುವನು. ಅವನು ನಿಮಗೆ ಒಂದು ಪ್ರಕಾಶವನ್ನೂ ನೀಡುವನು. ಅದರ ಮೂಲಕ ನೀವು ನಡೆಯುವಿರಿ. ಅವನು ನಿಮಗೆ ಕ್ಷಮಾದಾನವನ್ನೂ ನೀಡುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.**

لِّئَلَّا يَعْلَمَ اَهْلُ الْكِتٰبِ اَلَّا يَقْدِرُوْنَ
عَلٰى شَيْءٍ مِّنْ فَضْلِ اللّٰهِ وَ اَنَّ
الْفَضْلَ بِيَدِ اللّٰهِ يُؤْتِيْهِ مَنْ
يَّشَآءُ ؕ وَاللّٰهُ ذُو الْفَضْلِ الْعَظِيْمِ ﴿۳۰﴾

**30. ಇದು ಅಲ್ಲಾಹನ ಅನುಗ್ರಹದಿಂದ ಏನನ್ನೂ ಅವರಿಗೆ** (ವಿಶ್ವಾಸಿಗಳಿಗೆ) **ಪಡೆಯಲು ಸಾಧ್ಯವಿಲ್ಲವೆಂದು ಗ್ರಂಥ'ನೀಡಲ್ಪಟ್ಟವರು ಭಾವಿಸದಿರಲಿಕ್ಕಾಗಿದೆ. ವಾಸ್ತವದಲ್ಲಿ ಸರ್ವ ಅನುಗ್ರಹಗಳೂ ಅಲ್ಲಾಹನ ಕೈಯಲ್ಲಿವೆ. ತಾನಿಚ್ಛಿಸುವವರಿಗೆ ಅವನು ಅದನ್ನು ನೀಡುತ್ತಾನೆ. ಅಲ್ಲಾಹನು ಅಪಾರವಾದ ಅನುಗ್ರಹದ ಒಡೆಯನಾಗಿದ್ದಾನೆ.**

453. ಅಂದರೇ, ಪ್ರವಾದಿ ಈಸಾ (ಅಲೈಹಿಸ್ಸಲಾಂ) ರ ಅನುಯಾಯಿಗಳು.

سُوْرَةُ الْمُجَادَلَةِ مَدَنِيَّةٌ وَّهِيَ مَعَ الْبَسْمَلَةِ ثَلٰثٌ وَّعِشْرُوْنَ اٰيَةً وَّثَلٰثَةُ رُكُوْعَاتٍ

# 58. ಅಲ್‌ಮುಜಾದಲಃ

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 23 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ತನ್ನ ಪತಿಯ ಬಗ್ಗೆ ನಿನ್ನೊಡನೆ ವಾಗ್ವಾದ ಮಾಡುವ ಹಾಗೂ ಅಲ್ಲಾಹನಿಗೆ ದೂರು ಸಲ್ಲಿಸುವ ಆಕೆಯ ಮಾತನ್ನು ಅಲ್ಲಾಹನು ಕೇಳಿದ್ದಾನೆ. ಅಲ್ಲಾಹನು ನಿಮ್ಮಿಬ್ಬರ ಸಂಭಾಷಣೆಯನ್ನೂ ಕೇಳುತ್ತಾನೆ. ಅಲ್ಲಾಹನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ಕಾಣುವವನೂ ಆಗಿದ್ದಾನೆ.**

قَدْ سَمِعَ اللّٰهُ قَوْلَ الَّتِيْ
تُجَادِلُكَ فِيْ زَوْجِهَا وَتَشْتَكِيْٓ اِلَى اللّٰهِ ۖ
وَاللّٰهُ يَسْمَعُ تَحَاوُرَكُمَا ۭ اِنَّ اللّٰهَ
سَمِيْعٌۢ بَصِيْرٌ ﴿٢﴾

**3. ನಿಮ್ಮ ಪೈಕಿ ತಮ್ಮ ಪತ್ನಿಯರನ್ನು ತಮ್ಮ ಮಾತೆಯರೆಂದು ಸಾರುವವರು[454]** (ತಿಳಿದುಕೊಳ್ಳಲಿ) **- ಆ ಪತ್ನಿಯರು ಅವರ ಮಾತೆಯರಲ್ಲ. ಅವರ ಜನ್ಮದಾತೆಯರು ಮಾತ್ರವೇ ಅವರ ತಾಯಂದಿರು. ನಿಷಿದ್ಧ ಹಾಗೂ ಅಸತ್ಯ ಮಾತುಗಳನ್ನೇ ಅವರು ಆಡುತ್ತಾರೆ. ಆದರೆ ಅಲ್ಲಾಹನು ಖಂಡಿತವಾಗಿಯೂ ಪಾಪಗಳನ್ನು ಅಳಿಸಿಹಾಕುವವನೂ ಅತ್ಯಂತ ಕ್ಷಮಾಶೀಲನೂ ಆಗಿದ್ದಾನೆ.**

اَلَّذِيْنَ يُظٰهِرُوْنَ مِنْكُمْ مِّنْ نِّسَاۗىِٕهِمْ
مَّا هُنَّ اُمَّهٰتِهِمْ ۭ اِنْ اُمَّهٰتُهُمْ اِلَّا
الّٰۗـِٔيْ وَلَدْنَهُمْ ۭ وَاِنَّهُمْ لَيَقُوْلُوْنَ مُنْكَرًا
مِّنَ الْقَوْلِ وَزُوْرًا ۭ وَاِنَّ اللّٰهَ لَعَفُوٌّ غَفُوْرٌ ﴿٣﴾

**4. ತಮ್ಮ ಪತ್ನಿಯರನ್ನು ಮಾತೆಯರೆಂದು ಕರೆದು ಮತ್ತೆ ತಮ್ಮ ಮಾತಿನಿಂದ** (ಪೂರ್ವ ಸ್ಥಿತಿಗೆ) **ಮರಳುವವರು, ಅವರಿಬ್ಬರೂ ಪರಸ್ಪರ ಸ್ಪರ್ಶಿಸುವುದಕ್ಕೆ ಮುಂಚೆ** (ಪ್ರಾಯಶ್ಚಿತ್ತವಾಗಿ) **ಒಬ್ಬ ಗುಲಾಮನನ್ನು ಬಿಡುಗಡೆಮಾಡಬೇಕಾಗಿದೆ. ಇದು ನಿಮಗೆ ನೀಡಲ್ಪಡುವ ಉಪದೇಶವಾಗಿದೆ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ತಿಳಿಯುತ್ತಾನೆ.**

وَالَّذِيْنَ يُظٰهِرُوْنَ مِنْ نِّسَاۗىِٕهِمْ ثُمَّ
يَعُوْدُوْنَ لِمَا قَالُوْا فَتَحْرِيْرُ رَقَبَةٍ مِّنْ
قَبْلِ اَنْ يَّتَمَاۗسَّا ۭ ذٰلِكُمْ تُوْعَظُوْنَ
بِهٖ ۭ وَاللّٰهُ بِمَا تَعْمَلُوْنَ خَبِيْرٌ ﴿٤﴾

454. ಅಜ್ಞಾನ ಕಾಲದಲ್ಲಿ ಅರಬಿಯರೆಡೆಯಲ್ಲಿದ್ದ ظهار (ಳಿಹಾರ್) ಎಂಬ ದುಷ್ಟ ಸಂಪ್ರದಾಯವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಇದು, ಪತ್ನಿಯನ್ನು ಮಾತೆಗೆ ಸಮಾನವೆಂದು ಸಾರಿಕೊಂಡು ಆಕೆಯಿಂದ ಅಗಲಿ ನಿಲ್ಲುವ ಒಂದು ಕೆಟ್ಟ ಸಂಪ್ರದಾಯವಾಗಿದೆ.





**5. ಆದರೆ ಯಾರಿಗಾದರೂ ಹಾಗೆ ಮಾಡಲಾಗದಿದ್ದರೆ, ಅವರಿಬ್ಬರೂ ಪರಸ್ಪರ ಸ್ಪರ್ಶಿಸುವುದಕ್ಕೆ ಮುಂಚೆ ಎರಡು ಮಾಸಕಾಲ ನಿರಂತರವಾಗಿ ವ್ರತವನ್ನನುಷ್ಠಿಸಬೇಕಾಗಿದೆ. ಯಾರಿಗಾದರೂ ಅದು ಕೂಡ ಸಾಧ್ಯವಾಗದಿದ್ದರೆ, ಅರುವತ್ತು ನಿರ್ಗತಿಕರಿಗೆ ಆಹಾರ ನೀಡಬೇಕಾಗಿದೆ. ಇದು, ನೀವು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಪ್ರಾಮಾಣಿಕವಾಗಿ ನಂಬಲಿಕ್ಕಾಗಿದೆ. ಇವು ಅಲ್ಲಾಹನು ವಿಧಿಸಿದ ಕಟ್ಟಳೆಗಳಾಗಿವೆ. ಅವಿಶ್ವಾಸಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆ.**

فَمَنْ لَّمْ يَجِدْ فَصِيَامُ شَهْرَيْنِ
مُتَتَابِعَيْنِ مِنْ قَبْلِ اَنْ يَّتَمَاۗسَّا ۚ فَمَنْ
لَّمْ يَسْتَطِعْ فَاِطْعَامُ سِتِّيْنَ مِسْكِيْنًا ۭ
ذٰلِكَ لِتُؤْمِنُوْا بِاللّٰهِ وَرَسُوْلِهٖ ۭ وَتِلْكَ
حُدُوْدُ اللّٰهِ ۭ وَلِلْكٰفِرِيْنَ عَذَابٌ اَلِيْمٌ ﴿٥﴾

**6. ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ವಿರೋಧಿಸುವವರು, ಅವರಿಗಿಂತ ಮುಂಚೆ ಇದ್ದವರು ತುಚ್ಛೀಕರಿಸಲ್ಪಟ್ಟಂತೆಯೇ ತುಚ್ಛೀಕರಿಸಲ್ಪಡುವರು. ನಾವು ಸ್ಪಷ್ಟವಾದ ದೃಷ್ಟಾಂತಗಳನ್ನು ಸಹ ಇಳಿಸಿದ್ದೇವೆ. ಅವಿಶ್ವಾಸಿಗಳಿಗೆ ಅಪಮಾನಕರವಾದ ಶಿಕ್ಷೆ ಇದೆ.**

اِنَّ الَّذِيْنَ يُحَاۗدُّوْنَ اللّٰهَ وَرَسُوْلَهٗ
كُبِتُوْا كَمَا كُبِتَ الَّذِيْنَ مِنْ قَبْلِهِمْ
وَقَدْ اَنْزَلْنَآ اٰيٰتٍۢ بَيِّنٰتٍ ۭ وَلِلْكٰفِرِيْنَ
عَذَابٌ مُّهِيْنٌ ﴿٦﴾

**7. ಅವರನ್ನೆಲ್ಲ ಒಟ್ಟಾಗಿ ಅಲ್ಲಾಹನು ಎಬ್ಬಿಸುವ ದಿನದಂದು ಅವರ ಕೃತ್ಯಗಳ ಬಗ್ಗೆ ಅಲ್ಲಾಹನು ಅವರಿಗೆ ತಿಳಿಸುವನು. ಅವರು ಮರೆತಿದ್ದರೂ ಅಲ್ಲಾಹನು ಅದರ ಲೆಕ್ಕವಿಟ್ಟುಕೊಂಡಿದ್ದಾನೆ. ಅಲ್ಲಾಹನು ಎಲ್ಲಕ್ಕೂ ಸಾಕ್ಷಿಯಾಗಿದ್ದಾನೆ.**

يَوْمَ يَبْعَثُهُمُ اللّٰهُ جَمِيْعًا فَيُنَبِّئُهُمْ
بِمَا عَمِلُوْا ۭ اَحْصٰىهُ اللّٰهُ وَنَسُوْهُ ۭ
وَاللّٰهُ عَلٰي كُلِّ شَيْءٍ شَهِيْدٌ ﴿٧﴾

**8. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅಲ್ಲಾಹನು ಬಲ್ಲನು ಎಂದು ನಿನಗೆ ತಿಳಿಯದೇ? ಮೂವರ ಗೂಢಾಲೋಚನೆಯಲ್ಲಿ ಅವನು** (ಅಲ್ಲಾಹನು) **ಅವರ ಮಧ್ಯೆ ನಾಲ್ಕನೆಯವನಾಗಿ ಇರದೆ ಅದು ನಡೆಯುವುದಿಲ್ಲ. ಐವರ ಗೂಢಾಲೋಚನೆ ಅವನು ಅವರ ಮಧ್ಯೆ ಆರನೆಯವನಾಗಿ ಇರದೆಯೂ ನಡೆಯುವುದಿಲ್ಲ. ಅವರು ಅದಕ್ಕಿಂತ ಕಮ್ಮಿಯಿರಲಿ, ಹೆಚ್ಚಿರಲಿ - ಅವರು ಎಲ್ಲಿದ್ದರೂ - ಅವನು** (ಅಲ್ಲಾಹನು) **ಅವರ ಮಧ್ಯೆ ಇಲ್ಲದಿರುವುದಿಲ್ಲ. ಆ ಬಳಿಕ ಪುನರುತ್ಥಾನ ದಿನದಂದು ಅವರ ಕೃತ್ಯಗಳ ಬಗ್ಗೆ ಅವನು ಅವರಿಗೆ ತಿಳಿಯಪಡಿಸು**

اَلَمْ تَرَ اَنَّ اللّٰهَ يَعْلَمُ مَا فِي السَّمٰوٰتِ وَ
مَا فِي الْاَرْضِ ۭ مَا يَكُوْنُ مِنْ نَّجْوٰى ثَلٰثَةٍ
اِلَّا هُوَ رَابِعُهُمْ وَلَا خَمْسَةٍ اِلَّا هُوَ
سَادِسُهُمْ وَلَآ اَدْنٰى مِنْ ذٰلِكَ وَلَآ
اَكْثَرَ اِلَّا هُوَ مَعَهُمْ اَيْنَ مَا كَانُوْا ۚ ثُمَّ
يُنَبِّئُهُمْ بِمَا عَمِلُوْا يَوْمَ الْقِيٰمَةِ ۭ

إِنَّ اللَّهَ بِكُلِّ شَيْءٍ عَلِيمٌ ﴿٨﴾

ವನು. ಖಂಡಿತವಾಗಿಯೂ ಅಲ್ಲಾಹನು ಎಲ್ಲವನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

أَلَمْ تَرَ إِلَى الَّذِينَ نُهُوا عَنِ النَّجْوَىٰ ثُمَّ يَعُودُونَ لِمَا نُهُوا عَنْهُ وَيَتَنَاجَوْنَ بِالْإِثْمِ وَالْعُدْوَانِ وَمَعْصِيَتِ الرَّسُولِ ۖ وَإِذَا جَاءُوكَ حَيَّوْكَ بِمَا لَمْ يُحَيِّكَ بِهِ اللَّهُ ۙ وَيَقُولُونَ فِي أَنفُسِهِمْ لَوْلَا يُعَذِّبُنَا اللَّهُ بِمَا نَقُولُ ۚ حَسْبُهُمْ جَهَنَّمُ ۖ يَصْلَوْنَهَا ۖ فَبِئْسَ الْمَصِيرُ ﴿٩﴾

9. ಗೂಢಾಲೋಚನೆಯನ್ನು ನಿಷಿದ್ಧಗೊಳಿಸಲಾಗಿದ್ದು, ಆ ನಿಷಿದ್ಧಗೊಳಿಸಿದುದರ ಕಡೆಗೆ ಮರಳಿ ಪಾಪ, ಅತಿಕ್ರಮ ಮತ್ತು ಸಂದೇಶವಾಹಕನಿಗೆ ಅವಿಧೇಯತೆ ತೋರಿಸಲಿಕ್ಕೋಸ್ಕರ ಗೂಢಾಲೋಚನೆ ನಡೆಸುವವರನ್ನು ನೀನು ಕಂಡಿಲ್ಲವೇ? ಅವರು ನಿನ್ನ ಬಳಿಗೆ ಬರುವಾಗ ಅಲ್ಲಾಹನು ನಿನಗೆ ಒಸಗೆ (ಸಲಾಂ) ಹೇಳದಿರುವ ರೀತಿಯಲ್ಲಿ ಅವರು ನಿನಗೆ ಒಸಗೆ ಹೇಳುತ್ತಾರೆ. 'ನಾವು ಹೇಳುವ ಮಾತಿಗಾಗಿ ಅಲ್ಲಾಹನು ನಮ್ಮನ್ನು ಏಕೆ ಶಿಕ್ಷಿಸುವುದಿಲ್ಲ?' ಎಂದು ಅವರು ತಮ್ಮಲ್ಲೇ ಹೇಳಿಕೊಳ್ಳುತ್ತಾರೆ. ನರಕ ಅವರಿಗೆ ಸಾಕು. ಅಲ್ಲಿ ಅವರು ದಹಿಸಲ್ಪಡುವರು. ಆ ಗಮ್ಯಸ್ಥಾನ ಎಷ್ಟು ಕೆಟ್ಟದ್ದಾಗಿದೆ!

يَا أَيُّهَا الَّذِينَ آمَنُوا إِذَا تَنَاجَيْتُمْ فَلَا تَتَنَاجَوْا بِالْإِثْمِ وَالْعُدْوَانِ وَمَعْصِيَتِ الرَّسُولِ وَتَنَاجَوْا بِالْبِرِّ وَالتَّقْوَىٰ ۖ وَاتَّقُوا اللَّهَ الَّذِي إِلَيْهِ تُحْشَرُونَ ﴿١٠﴾

10. ಎಲೈ ಸತ್ಯ ವಿಶ್ವಾಸಿಗಳೇ, ನೀವು ರಹಸ್ಯವಾಗಿ ಸಮಾಲೋಚನೆ ನಡೆಸುವಾಗ, ಪಾಪಕೃತ್ಯ ಮಾಡಲಿಕ್ಕಾಗಲಿ, ಅತಿಕ್ರಮವಾಗಿ ವರ್ತಿಸಲಿಕ್ಕಾಗಲಿ, ಸಂದೇಶವಾಹಕನ ಆಜ್ಞೆಗಳನ್ನು ಉಲ್ಲಂಘಿಸಲಿಕ್ಕಾಗಲಿ ಗೂಢಾಲೋಚನೆ ಮಾಡಬೇಡಿರಿ. ಬದಲಿಗೆ, ಸತ್ಕರ್ಮ ಮಾಡಲಿಕ್ಕಾಗಿಯೂ ಭಯಭಕ್ತಿ ಹೊಂದಲಿಕ್ಕಾಗಿಯೂ ನೀವು ಪರಸ್ಪರ ಸಮಾಲೋಚನೆ ಮಾಡಿರಿ. ನೀವು ಅಲ್ಲಾಹನಿಗೆ ಭಯಪಡಿರಿ. ಅವನ ಸನ್ನಿಧಿಯಲ್ಲೇ ನೀವೆಲ್ಲರೂ ಒಟ್ಟಿಗೆ ಸೇರಿಸಲ್ಪಡುವಿರಿ.

إِنَّمَا النَّجْوَىٰ مِنَ الشَّيْطَانِ لِيَحْزُنَ الَّذِينَ آمَنُوا وَلَيْسَ بِضَارِّهِمْ شَيْئًا إِلَّا بِإِذْنِ اللَّهِ ۚ وَعَلَى اللَّهِ فَلْيَتَوَكَّلِ الْمُؤْمِنُونَ ﴿١١﴾

11. (ಪಾಪಕರವಾದ ವಿಚಾರಗಳಿಗೋಸ್ಕರ) ಗೂಢಾಲೋಚನೆ ಮಾಡುವುದು ಶೈತಾನಿಕವಾಗಿದೆ. ಆ ಮೂಲಕ ಅವನು ಸತ್ಯವಿಶ್ವಾಸಿಗಳನ್ನು ದುಃಖಕ್ಕೆ ಗುರಿಪಡಿಸುತ್ತಾನೆ. ಆದರೆ ಅಲ್ಲಾಹನ ಅನುಮತಿಯಿಲ್ಲದೆ ಅವರಿಗೆ ಏನೂ ಹಾನಿಯಾಗದು. ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆ ಮಾತ್ರವೇ ಭರವಸೆಯನ್ನಿಟ್ಟುಕೊಳ್ಳಲಿ.





يَا أَيُّهَا الَّذِينَ آمَنُوا إِذَا قِيلَ لَكُمْ تَفَسَّحُوا فِي الْمَجْلِسِ فَافْسَحُوا يَفْسَحِ اللَّهُ لَكُمْ ۖ وَإِذَا قِيلَ انشُزُوا فَانشُزُوا يَرْفَعِ اللَّهُ الَّذِينَ آمَنُوا مِنكُمْ وَالَّذِينَ أُوتُوا الْعِلْمَ دَرَجَاتٍ ۚ وَاللَّهُ بِمَا تَعْمَلُونَ خَبِيرٌ ﴿١٢﴾

12. ಎಲೈ ಸತ್ಯವಿಶ್ವಾಸಿಗಳೇ, ಸಭೆ ಕೂಟಗಳಲ್ಲಿ ಸರಿದು ಕುಳಿತು ಸ್ಥಳಾವಕಾಶ ನೀಡಲು ನಿಮ್ಮೊಡನೆ ಕೇಳಲಾದರೆ, ಸ್ಥಳಾವಕಾಶ ಮಾಡಿಕೊಡಿರಿ. ಅಲ್ಲಾಹನು ನಿಮಗೆ ಸ್ಥಳಾವಕಾಶ ಮಾಡಿಕೊಡುವನು. 'ಎದ್ದು ಹೋಗಿರಿ' ಎಂದು ನಿಮಗೆ ಆದೇಶಿಸಲಾದರೆ, ಎದ್ದು ಹೋಗಿರಿ. ಅಲ್ಲಾಹನು ನಿಮ್ಮ ಪೈಕಿ ಸತ್ಯ ವಿಶ್ವಾಸಿಗಳನ್ನೂ ಜ್ಞಾನ ನೀಡಲ್ಪಟ್ಟವರನ್ನೂ ಹಲವು ಪದವಿಗಳಿಗೇರಿಸುವನು. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

يَا أَيُّهَا الَّذِينَ آمَنُوا إِذَا نَاجَيْتُمُ الرَّسُولَ فَقَدِّمُوا بَيْنَ يَدَيْ نَجْوَاكُمْ صَدَقَةً ۚ ذَٰلِكَ خَيْرٌ لَّكُمْ وَأَطْهَرُ ۚ فَإِن لَّمْ تَجِدُوا فَإِنَّ اللَّهَ غَفُورٌ رَّحِيمٌ ﴿١٣﴾

13. ಎಲೈ ಸತ್ಯವಿಶ್ವಾಸಿಗಳೇ, ನೀವು ಪ್ರವಾದಿಯೊಂದಿಗೆ ಖಾಸಗಿ ಪರ್ಯಾಲೋಚನೆ ಮಾಡುವಾಗ, ನಿಮ್ಮ ಭೇಟಿಗೆ ಮುಂಚಿತವಾಗಿ (ಅಲ್ಲಾಹನ ಮಾರ್ಗದಲ್ಲಿ) ಏನನ್ನಾದರೂ ದಾನವಾಗಿ ನೀಡಿರಿ. ಅದು ನಿಮಗೆ ಗುಣಕರವೂ ಪವಿತ್ರವೂ ಆಗಿದೆ. ಆದರೆ (ನೀಡಲು) ನಿಮಗೇನೂ ಸಿಗದಿದ್ದರೆ (ದೋಷವಿಲ್ಲ); ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯ ನಿಧಿಯೂ ಆಗಿದ್ದಾನೆ.

أَأَشْفَقْتُمْ أَن تُقَدِّمُوا بَيْنَ يَدَيْ نَجْوَاكُمْ صَدَقَاتٍ ۚ فَإِذْ لَمْ تَفْعَلُوا وَتَابَ اللَّهُ عَلَيْكُمْ فَأَقِيمُوا الصَّلَاةَ وَآتُوا الزَّكَاةَ وَأَطِيعُوا اللَّهَ وَرَسُولَهُ ۚ وَاللَّهُ خَبِيرٌ بِمَا تَعْمَلُونَ ﴿١٤﴾

14. (ಪ್ರವಾದಿಯೊಂದಿಗೆ) ನಿಮ್ಮ ಖಾಸಗಿ ಪರ್ಯಾಲೋಚನೆಗೆ ಮುಂಚೆ ದಾನವಾಗಿ ಏನನ್ನಾದರೂ ಅರ್ಪಿಸುವುದರ ಬಗ್ಗೆ ನೀವು ಭಯಪಡುತ್ತೀರಾ?[455] ನೀವು (ಹಾಗೆ) ಮಾಡದಿದ್ದು, ಅಲ್ಲಾಹನು ನಿಮ್ಮ ಮೇಲೆ ಕೃಪೆದೋರಿರುವಾಗ, ನೀವು ನಮಾಝನ್ನು ನಿಷ್ಠೆಯಿಂದ ನಿರ್ವಹಿಸಿರಿ, ಝಕಾತ್ ನೀಡಿರಿ ಹಾಗೂ ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ಅನುಸರಿಸಿರಿ. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

أَلَمْ تَرَ إِلَى الَّذِينَ تَوَلَّوْا قَوْمًا غَضِبَ اللَّهُ عَلَيْهِم مَّا هُم مِّنكُمْ وَ

15. ಅಲ್ಲಾಹನ ಕೋಪಕ್ಕೆ ಗುರಿಯಾದ ಒಂದು ಕೋಮಿನವರನ್ನು ಮಿತ್ರರನ್ನಾಗಿ ಮಾಡಿದವರನ್ನು ನೀನು ಕಂಡಿಲ್ಲವೇ? ಅವರು ನಿಮ್ಮ ಪೈಕಿಯವರೂ ಅಲ್ಲ; ಅವರ

455. ನೀಡುವ ದಾನದ ಪ್ರಮಾಣ ಅಲ್ಲಾಹನ ಮೆಚ್ಚುಗೆಗೆ ಸಾಕಾದೀತೇ ಎಂಬ ಭಯ ಎಂದು ತಾತ್ಪರ್ಯ.

لَا مِنْهُمْ ۙ وَيَحْلِفُونَ عَلَى الْكَذِبِ وَهُمْ يَعْلَمُونَ ﴿١٥﴾

ಪೈಕಿಯವರೂ ಅಲ್ಲ. ಅವರು ತಿಳಿದುಕೊಂಡೇ ಸುಳ್ಳಿನ ಬಗ್ಗೆ ಪ್ರಮಾಣ ಮಾಡುತ್ತಾರೆ.

أَعَدَّ اللَّهُ لَهُمْ عَذَابًا شَدِيدًا ۖ إِنَّهُمْ سَاءَ مَا كَانُوا يَعْمَلُونَ ﴿١٦﴾

**16.** ಅಲ್ಲಾಹನು ಅವರಿಗೆ ಕಠೋರವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದಾನೆ. ಅವರ ಕೃತ್ಯಗಳು ಬಹಳ ಕೆಟ್ಟದ್ದಾಗಿದ್ದವು.

اتَّخَذُوا أَيْمَانَهُمْ جُنَّةً فَصَدُّوا عَنْ سَبِيلِ اللَّهِ فَلَهُمْ عَذَابٌ مُهِينٌ ﴿١٧﴾

**17.** ಅವರು ತಮ್ಮ ಪ್ರಮಾಣಗಳನ್ನು (ತಮ್ಮ ದುಷ್ಕೃತ್ಯಗಳಿಗೆ) ಗುರಾಣಿಯಾಗಿ ಮಾಡಿಕೊಂಡಿದ್ದಾರೆ. ಹಾಗೆ ಅವರು ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುತ್ತಾರೆ. ಆದುದರಿಂದ ಅವರಿಗೆ ಅಪಮಾನಕರವಾದ ಶಿಕ್ಷೆಯಿದೆ.

لَنْ تُغْنِيَ عَنْهُمْ أَمْوَالُهُمْ وَلَا أَوْلَادُهُمْ مِنَ اللَّهِ شَيْئًا ۚ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿١٨﴾

**18.** ಅವರ ಸಂಪತ್ತಾಗಲಿ ಅವರ ಸಂತತಿಗಳಾಗಲಿ ಅಲ್ಲಾಹನ ವಿರುದ್ಧವಾಗಿ ಅವರಿಗೆ ಏನೂ ಪ್ರಯೋಜನಕರವಾಗಲಿಕ್ಕಿಲ್ಲ. ಅವರು ನರಕವಾಸಿ ಗಳಾಗಿದ್ದಾರೆ. ಅಲ್ಲಿ ಅವರು ದೀರ್ಘಕಾಲ ವಾಸಿಸುವರು.

يَوْمَ يَبْعَثُهُمُ اللَّهُ جَمِيعًا فَيَحْلِفُونَ لَهُ كَمَا يَحْلِفُونَ لَكُمْ ۖ وَيَحْسَبُونَ أَنَّهُمْ عَلَىٰ شَيْءٍ ۚ أَلَا إِنَّهُمْ هُمُ الْكَاذِبُونَ ﴿١٩﴾

**19.** ಅಲ್ಲಾಹನು ಅವರನ್ನೆಲ್ಲ ಎಬ್ಬಿಸುವ ದಿನದಂದು ಅವರು (ಈಗ) ನಿಮ್ಮೊಡನೆ ಪ್ರಮಾಣ ಮಾಡುವ ರೀತಿಯಲ್ಲಿ (ಆ ದಿನ) ಅವನೊಡನೆ ಸಹ ಪ್ರಮಾಣ ಮಾಡುವರು. ಹಾಗೂ ತಮಗೆ (ನೆಲೆ ನಿಲ್ಲಲು) ಏನಾದರೂ ಇರಬಹುದೆಂದು ಅವರು ಭಾವಿಸುವರು. ತಿಳಿದುಕೊಳ್ಳಿರಿ, ಅವರು ಸುಳ್ಳು ನುಡಿಯುವವರೇ ಆಗಿದ್ದಾರೆ.

اسْتَحْوَذَ عَلَيْهِمُ الشَّيْطَانُ فَأَنْسَاهُمْ ذِكْرَ اللَّهِ ۚ أُولَٰئِكَ حِزْبُ الشَّيْطَانِ ۚ أَلَا إِنَّ حِزْبَ الشَّيْطَانِ هُمُ الْخَاسِرُونَ ﴿٢٠﴾

**20.** ಶೈತಾನ ಅವರನ್ನು ತನ್ನ ಅಧೀನಕ್ಕೆ ಒಳಪಡಿಸಿದ್ದಾನೆ. ಹಾಗೆ ಅವನು ಅಲ್ಲಾಹನ ಸ್ಮರಣೆ ಅವರಿಗೆ ಮರೆತು ಬಿಡುವಂತೆ ಮಾಡಿದನು. ಅವರು ಶೈತಾನನ ಪಂಗಡದವರು. ತಿಳಿದುಕೊಳ್ಳಿರಿ ಶೈತಾನನ ಪಂಗಡದವರು ಖಂಡಿತವಾಗಿಯೂ ನಷ್ಟಕ್ಕೆ ಗುರಿಯಾಗುವವರಾಗಿದ್ದಾರೆ.





إِنَّ الَّذِينَ يُحَادُّونَ اللَّهَ وَرَسُولَهُ أُولَٰئِكَ فِي الْأَذَلِّينَ ﴿٢١﴾

**21.** ಅಲ್ಲಾಹನನ್ನೂ ಅವನ ಸಂದೇಶ ವಾಹಕನನ್ನೂ ವಿರೋಧಿಸುವವರು ಖಂಡಿತವಾಗಿಯೂ ಅತ್ಯಂತ ಅಧಮರೇ ಆಗಿದ್ದಾರೆ.

كَتَبَ اللَّهُ لَأَغْلِبَنَّ أَنَا وَرُسُلِي ۚ إِنَّ اللَّهَ قَوِيٌّ عَزِيزٌ ﴿٢٢﴾

**22.** 'ನಾನೂ ನನ್ನ ಸಂದೇಶವಾಹಕರೂ ಖಂಡಿತವಾಗಿಯೂ ವಿಜಯಶಾಲಿಗಳಾಗುವೆವು' ಎಂದು ಅಲ್ಲಾಹನು (ವಿಧಿ) ಬರೆದಿರುವನು. ನಿಶ್ಚಯವಾಗಿಯೂ ಅಲ್ಲಾಹನು ಶಕ್ತಿಶಾಲಿಯೂ ಪ್ರತಾಪವಂತನೂ ಆಗಿದ್ದಾನೆ.

لَا تَجِدُ قَوْمًا يُؤْمِنُونَ بِاللَّهِ وَالْيَوْمِ الْآخِرِ يُوَادُّونَ مَنْ حَادَّ اللَّهَ وَرَسُولَهُ وَلَوْ كَانُوا آبَاءَهُمْ أَوْ أَبْنَاءَهُمْ أَوْ إِخْوَانَهُمْ أَوْ عَشِيرَتَهُمْ ۚ أُولَٰئِكَ كَتَبَ فِي قُلُوبِهِمُ الْإِيمَانَ وَأَيَّدَهُمْ بِرُوحٍ مِنْهُ ۖ وَيُدْخِلُهُمْ جَنَّاتٍ تَجْرِي مِنْ تَحْتِهَا الْأَنْهَارُ خَالِدِينَ فِيهَا ۚ رَضِيَ اللَّهُ عَنْهُمْ وَرَضُوا عَنْهُ ۚ أُولَٰئِكَ حِزْبُ اللَّهِ ۚ أَلَا إِنَّ حِزْبَ اللَّهِ هُمُ الْمُفْلِحُونَ ﴿٢٣﴾

**23.** ಅಲ್ಲಾಹನಲ್ಲೂ ಅಂತ್ಯ ದಿನದ ಬಗ್ಗೆಯೂ ವಿಶ್ವಾಸವುಳ್ಳವರು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ವಿರೋಧಿಸುವವರನ್ನು ಪ್ರೀತಿಸುವವರಾಗಿ ನೀನು ಕಾಣಲಾರೆ. ಅವರು (ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕನನ್ನು ವಿರೋಧಿಸುವವರು) ತಮ್ಮ ಪಿತರೋ ಸಂತಾನಗಳೋ ಸಹೋದರರೋ ತಮ್ಮ ನಿಕಟ ಸಂಬಂಧಿಗಳೋ ಆಗಿದ್ದರೂ ಸರಿ. ಅಲ್ಲಾಹನು ಅವರ (ವಿಶ್ವಾಸಿಗಳ) ಹೃದಯಗಳಲ್ಲಿ ಸತ್ಯ ವಿಶ್ವಾಸವನ್ನು ಅಚ್ಚೊತ್ತಿ ತನ್ನ ವಚನದಿಂದ ಅವರನ್ನು ಬಲಪಡಿಸಿದ್ದಾನೆ. ಅವರಿಗೆ ಅವನು ಕೆಳಬದಿಯಲ್ಲಿ ಹೊಳೆಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಪ್ರವೇಶ ನೀಡುವನು. ಅಲ್ಲೇ ಅವರು ಶಾಶ್ವತವಾಗಿ ವಾಸಿಸುವರು. ಅಲ್ಲಾಹನು ಅವರ ಬಗ್ಗೆ ಸಂತುಷ್ಟನಾಗಿರುತ್ತಾನೆ. ಅವರು ಸಹ ಅವನ ಬಗ್ಗೆ ಸಂತುಷ್ಟರಾಗಿರುತ್ತಾರೆ. ಅವರು ಅಲ್ಲಾಹನ ಪಂಗಡದವರು. ತಿಳಿದುಕೊಳ್ಳಿರಿ, ಅಲ್ಲಾಹನ ಪಂಗಡದವರೇ ಖಂಡಿತವಾಗಿಯೂ ವಿಜಯಶಾಲಿಗಳು.

سُورَةُ الْحَشْرِ مَدَنِيَّةٌ وَهِيَ مَعَ الْبَسْمَلَةِ خَمْسٌ وَعِشْرُونَ آيَةً وَثَلَاثُ رُكُوعَاتٍ

## 59. ಅಲ್‌ಹಶ್ರ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 25 ಆಯತ್‌ಗಳು ಹಾಗೂ 3 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಸ್ತುತಿಕೀರ್ತನೆ ಮಾಡುತ್ತವೆ. ಅವನು ಪ್ರತಾಪವಂತನೂ ವಿವೇಕಶಾಲಿಯೂ ಆಗಿದ್ದಾನೆ.**

سَبَّحَ لِلّٰهِ مَا فِي السَّمٰوٰتِ وَمَا فِي الْاَرْضِ ۚ وَهُوَ الْعَزِيْزُ الْحَكِيْمُ ②

**3. ಗ್ರಂಥ'ದವರ ಪೈಕಿ ಅವಿಶ್ವಾಸಿಗಳನ್ನು ಪ್ರಥಮವಾಗಿ ಗಡೀಪಾರು ಮಾಡಿದ ಸಂದರ್ಭದಲ್ಲಿ ಅವರ ಮನೆಗಳಿಂದ ಅವರು ಹೊರಡುವಂತೆ ಮಾಡಿದವನು ಅವನೇ** (ಅಲ್ಲಾಹನೇ) **ಆಗಿದ್ದಾನೆ.[456] ಅವರು ಹೊರ ಹೋಗುವರೆಂದು ನೀವು ಭಾವಿಸಿರಲಿಲ್ಲ. ತಮ್ಮ ಕೋಟೆಗಳು ಅಲ್ಲಾಹನಿಂದ ಅವರನ್ನು ರಕ್ಷಿಸುವುದೆಂದು ಅವರು ಭಾವಿಸಿದ್ದರು. ಆದರೆ, ಅವರು ನಿರೀಕ್ಷಿಸದಿದ್ದ ಕಡೆಯಿಂದ ಅಲ್ಲಾಹನು ಅವರ ಬಳಿಗೆ ಬಂದನು.[457] ಅವರ ಹೃದಯಗಳಲ್ಲಿ ಅವನು ಭೀತಿ ಹುಟ್ಟಿಸಿದನು. ಅವರು ತಮ್ಮ ಮನೆಗಳನ್ನು ಸ್ವಂತ ಕೈಗಳಿಂದ ನಾಶಪಡಿಸಿದರು. ವಿಶ್ವಾಸಿಗಳ ಕೈಗಳಿಂದಲೂ** (ಅವು ಧ್ವಂಸಗೊಳಿಸಲ್ಪಟ್ಟವು). **ಆದ್ದರಿಂದ ಎಲ್ಲೈ ಕಣ್ಣುಳ್ಳವರೇ, ನೀವು ಪಾಠ ಕಲಿಯಿರಿ.**

هُوَ الَّذِيْٓ اَخْرَجَ الَّذِيْنَ كَفَرُوْا مِنْ اَهْلِ الْكِتٰبِ مِنْ دِيَارِهِمْ لِاَوَّلِ الْحَشْرِ ؕ مَا ظَنَنْتُمْ اَنْ يَّخْرُجُوْا وَظَنُّوْٓا اَنَّهُمْ مَّانِعَتُهُمْ حُصُوْنُهُمْ مِّنَ اللّٰهِ فَاَتٰىهُمُ اللّٰهُ مِنْ حَيْثُ لَمْ يَحْتَسِبُوْا ۗ وَقَذَفَ فِيْ قُلُوْبِهِمُ الرُّعْبَ يُخْرِبُوْنَ بُيُوْتَهُمْ بِاَيْدِيْهِمْ وَاَيْدِي الْمُؤْمِنِيْنَ ۗ فَاعْتَبِرُوْا يٰٓاُولِي الْاَبْصَارِ ③

456. ಬನೂ ನಝೀರ್ ಎಂಬ ಯಹೂದ ಗೋತ್ರವನ್ನು ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ಮದೀನದಿಂದ ಗಡೀಪಾರು ಮಾಡಿದ ಘಟನೆಯನ್ನು ಇಲ್ಲಿ ಸೂಚಿಸಲಾಗಿದೆ.

457. ಅಲ್ಲಾಹನ ಶಿಕ್ಷೆ ಬಂತು ಎಂದು ತಾತ್ಪರ್ಯ.





**4. ಅಲ್ಲಾಹನು ಅವರಿಗೆ ಗಡೀಪಾರು ಶಿಕ್ಷೆ ವಿಧಿಸದಿರುತ್ತಿದ್ದರೆ, ಅವನು ಅವರನ್ನು ಇಹಲೋಕದಲ್ಲೇ** (ಬೇರೆ ರೀತಿಯಲ್ಲಿ) **ಶಿಕ್ಷಿಸುತ್ತಿದ್ದನು. ಪರಲೋಕದಲ್ಲಿ ಅವರಿಗೆ ನರಕ ಶಿಕ್ಷೆಯೂ ಇದೆ.**

وَلَوْلَآ اَنْ كَتَبَ اللّٰهُ عَلَيْهِمُ الْجَلَآءَ لَعَذَّبَهُمْ فِي الدُّنْيَا ؕ وَلَهُمْ فِي الْاٰخِرَةِ عَذَابُ النَّارِ ④

**5. ಇದು, ಅವರು ಅಲ್ಲಾಹನನ್ನೂ ಅವನ ಸಂದೇಶ ವಾಹಕನನ್ನೂ ವಿರೋಧಿಸಿದ ಕಾರಣಕ್ಕೋಸ್ಕರವಾಗಿದೆ. ಯಾವಾನಾದರೂ ಅಲ್ಲಾಹನನ್ನು ವಿರೋಧಿಸಿದರೆ** (ಅವನು ತಿಳಿದುಕೊಳ್ಳಲಿ) **ಖಂಡಿತವಾಗಿಯೂ ಅಲ್ಲಾಹನು ಶಿಕ್ಷಿಸುವುದರಲ್ಲಿ ಕಠಿಣನೇ ಸರಿ.**

ذٰلِكَ بِاَنَّهُمْ شَآقُّوا اللّٰهَ وَرَسُوْلَهٗ ۚ وَمَنْ يُّشَآقِّ اللّٰهَ فَاِنَّ اللّٰهَ شَدِيْدُ الْعِقَابِ ⑤

**6. ನೀವು ಯಾವ ಖರ್ಜೂರ ಮರಗಳನ್ನು ಕಡಿದು ಹಾಕಿದ್ದೀರೋ ಅಥವಾ ಅವುಗಳ ಬುಡಗಳಲ್ಲೇ ಅವುಗಳನ್ನು ನಿಲ್ಲಲು ಬಿಟ್ಟಿರುವಿರೋ ಅದು ಅಲ್ಲಾಹನ ಆಜ್ಞಾನುಸಾರವಾಗಿದೆ ಹಾಗೂ ಹದ್ದುಮೀರಿ ವರ್ತಿಸುವವರನ್ನು ಅಪಮಾನಿಸಲಿಕ್ಕೋಸ್ಕರವಾಗಿದೆ.**

مَا قَطَعْتُمْ مِّنْ لِّيْنَةٍ اَوْ تَرَكْتُمُوْهَا قَآئِمَةً عَلٰٓى اُصُوْلِهَا فَبِاِذْنِ اللّٰهِ وَلِيُخْزِيَ الْفٰسِقِيْنَ ⑥

**7. ಅಲ್ಲಾಹನು ಅವರಿಂದ** (ವಶಪಡಿಸಿ) **ತನ್ನ ಸಂದೇಶ ವಾಹಕನಿಗೆ ನೀಡಿದ ಸಂಪತ್ತಿಗೋಸ್ಕರ ನೀವು ಕುದುರೆಗಳನ್ನಾಗಲಿ ಒಂಟೆಗಳನ್ನಾಗಲಿ ಓಡಿಸಿರಲಿಲ್ಲ. ಆದರೆ ಅಲ್ಲಾಹನು ತನ್ನ ಸಂದೇಶವಾಹಕನನ್ನು ತಾನು ಉದ್ದೇಶಿಸುವವರ ಮೇಲಧಿಕಾರಿಗಳನ್ನಾಗಿ ಮಾಡುತ್ತಾನೆ. ಅಲ್ಲಾಹನು ಸರ್ವ ಸಾಮರ್ಥ್ಯವುಳ್ಳವನಾಗಿದ್ದಾನೆ.**

وَمَآ اَفَآءَ اللّٰهُ عَلٰى رَسُوْلِهٖ مِنْهُمْ فَمَآ اَوْجَفْتُمْ عَلَيْهِ مِنْ خَيْلٍ وَّلَا رِكَابٍ وَّلٰكِنَّ اللّٰهَ يُسَلِّطُ رُسُلَهٗ عَلٰى مَنْ يَّشَآءُ ؕ وَاللّٰهُ عَلٰى كُلِّ شَيْءٍ قَدِيْرٌ ⑦

**8. ಅಲ್ಲಾಹನು ಆ ಊರಿನವರಿಂದ ವಶಪಡಿಸಿ ತನ್ನ ಸಂದೇಶವಾಹಕನಿಗೆ ನೀಡಿದ ಸಂಪತ್ತು ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ನಿಕಟ ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ದಾರಿಹೋಕರಿಗೂ ಆಗಿದೆ - ಅದು ನಿಮ್ಮಲ್ಲಿರುವ ಧನಿಕರ ಮಧ್ಯೆ ಚಲಾವಣೆ ಆಗಬಾರದು. ಪ್ರವಾದಿ ನಿಮಗೆ ಏನನ್ನು ನೀಡುತ್ತಾರೋ ಅದನ್ನು ನೀವು ಸ್ವೀಕರಿಸಿರಿ. ಯಾವುದನ್ನು ಅವರು ನಿಮಗೆ ನಿಷಿದ್ಧಗೊಳಿಸುತ್ತಾರೋ ಅದರಿಂದ ದೂರವಿರಿ. ಅಲ್ಲಾಹನಿಗೆ ಭಯಪಡಿರಿ. ಅಲ್ಲಾಹನು ಶಿಕ್ಷಿಸುವುದರಲ್ಲಿ ಕಠಿಣನೇ ಸರಿ.**

مَآ اَفَآءَ اللّٰهُ عَلٰى رَسُوْلِهٖ مِنْ اَهْلِ الْقُرٰى فَلِلّٰهِ وَلِلرَّسُوْلِ وَلِذِي الْقُرْبٰى وَالْيَتٰمٰى وَالْمَسٰكِيْنِ وَابْنِ السَّبِيْلِ ۙ كَيْ لَا يَكُوْنَ دُوْلَةًۢ بَيْنَ الْاَغْنِيَآءِ مِنْكُمْ ؕ وَمَآ اٰتٰىكُمُ الرَّسُوْلُ فَخُذُوْهُ ۚ وَمَا نَهٰىكُمْ عَنْهُ فَانْتَهُوْا ۚ وَاتَّقُوا اللّٰهَ ؕ اِنَّ اللّٰهَ شَدِيْدُ الْعِقَابِ ⑧

**9.** ತಮ್ಮ ಮನೆಗಳಿಂದ ಹೊರಕ್ಕಟ್ಟಲ್ಪಟ್ಟು ಮತ್ತು ತಮ್ಮ ಸಂಪತ್ತಿನಿಂದ ವಿವಂಚಿತರಾಗಿ ವಲಸೆ ಬಂದ ನಿರ್ಗತಿಕರಿಗೂ (ಆ ಸಂಪತ್ತಿನಲ್ಲಿ ಪಾಲಿದೆ). ಅವರು ಅಲ್ಲಾಹನ ಅನುಗ್ರಹವನ್ನೂ ಸಂತುಷ್ಟಿಯನ್ನೂ ಆಶಿಸುತ್ತಾರೆ ಹಾಗೂ ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ನೆರವಾಗುತ್ತಾರೆ. ಅವರೇ ಸತ್ಯವಂತರು.

لِلْفُقَرَاۤءِ الْمُهٰجِرِيْنَ الَّذِيْنَ اُخْرِجُوْا مِنْ دِيَارِهِمْ وَاَمْوَالِهِمْ يَبْتَغُوْنَ فَضْلًا مِّنَ اللّٰهِ وَرِضْوَانًا وَّيَنْصُرُوْنَ اللّٰهَ وَرَسُوْلَهٗ ۗ اُولٰۤىِٕكَ هُمُ الصّٰدِقُوْنَ ﴿٩﴾

**10.** ಹಾಗೂ ಅವರ (ಮುಹಾಜಿರರ) ಆಗಮನಕ್ಕೆ ಮುಂಚಿತವಾಗಿಯೇ (ಮದೀನದಲ್ಲಿ) ಮನೆ ಕಟ್ಟಿ ವಾಸವಾಗಿದ್ದ, ಸತ್ಯ ವಿಶ್ವಾಸವನ್ನು ಸ್ವೀಕರಿಸಿದವರಿಗೂ (ಆ ಸಂಪತ್ತಿನಲ್ಲಿ ಪಾಲಿದೆ). ಅವರ ಬಳಿಗೆ ನಿರಾಶ್ರಿತರಾಗಿ ವಲಸೆ ಬಂದವರನ್ನು ಅವರು ಪ್ರೀತಿಸುತ್ತಾರೆ. ಅವರಿಗೆ (ನಿರಾಶ್ರಿತರಿಗೆ) ನೀಡಲ್ಪಟ್ಟುದರಲ್ಲಿ ಅವರು ತಮ್ಮ ಹೃದಯಗಳಲ್ಲಿ ಯಾವ ಆಶೆಯನ್ನೂ ಇಡುವುದಿಲ್ಲ. ತಮಗೆ ದಾರಿದ್ರ್ಯವಿದ್ದರೆ ಕೂಡ ಅವರು ತಮಗಿಂತ ಇತರರಿಗೆ ಆದ್ಯತೆ ನೀಡುತ್ತಾರೆ. ತಮ್ಮ ಮನಸ್ಸಿನ ಜಿಪುಣತೆಯಿಂದ ರಕ್ಷಿಸಲ್ಪಟ್ಟರೇ ವಿಜಯಶಾಲಿಗಳು.

وَالَّذِيْنَ تَبَوَّؤُ الدَّارَ وَالْاِيْمَانَ مِنْ قَبْلِهِمْ يُحِبُّوْنَ مَنْ هَاجَرَ اِلَيْهِمْ وَلَا يَجِدُوْنَ فِيْ صُدُوْرِهِمْ حَاجَةً مِّمَّآ اُوْتُوْا وَيُؤْثِرُوْنَ عَلٰٓى اَنْفُسِهِمْ وَلَوْ كَانَ بِهِمْ خَصَاصَةٌ ۗ وَمَنْ يُّوْقَ شُحَّ نَفْسِهٖ فَاُولٰۤىِٕكَ هُمُ الْمُفْلِحُوْنَ ﴿١٠﴾

**11.** ಅವರ ಬಳಿಕ ಬರುವವರಿಗೂ (ಆ ಸಂಪತ್ತಿನಲ್ಲಿ ಪಾಲಿದೆ). ಅವರು ಹೇಳುತ್ತಾರೆ (ಪ್ರಾರ್ಥಿಸುತ್ತಾರೆ): 'ನಮ್ಮ ಪ್ರಭೂ, ನೀನು ನಮಗೆ ಕ್ಷಮೆ ನೀಡು. ನಮಗೆ ಮುಂಚೆ ಸತ್ಯ ವಿಶ್ವಾಸ ಹೊಂದಿದ ನಮ್ಮ ಸಹೋದರರಿಗೂ (ಕ್ಷಮೆ ನೀಡು). ಸತ್ಯವಿಶ್ವಾಸಿಗಳ ವಿರುದ್ಧ ನಮ್ಮ ಹೃದಯಗಳಲ್ಲಿ ದ್ವೇಷವನ್ನೇನೂ ಹುಟ್ಟಿಸಬೇಡ. ನಮ್ಮ ಪ್ರಭೂ, ಖಂಡಿತವಾಗಿಯೂ ನೀನು ದಯದೋರುವವನೂ ಕಾರುಣ್ಯನಿಧಿಯೂ ಆಗಿರುವೆ.'

وَالَّذِيْنَ جَاۤءُوْ مِنْۢ بَعْدِهِمْ يَقُوْلُوْنَ رَبَّنَا اغْفِرْ لَنَا وَلِاِخْوَانِنَا الَّذِيْنَ سَبَقُوْنَا بِالْاِيْمَانِ وَلَا تَجْعَلْ فِيْ قُلُوْبِنَا غِلًّا لِّلَّذِيْنَ اٰمَنُوْا رَبَّنَآ اِنَّكَ رَءُوْفٌ رَّحِيْمٌ ﴿١١﴾

**12.** ಕಪಟಿಗಳನ್ನು ನೀನು ಕಂಡಿಲ್ಲವೇ? ಗ್ರಂಥದವರಲ್ಲಿ ಅವಿಶ್ವಾಸಿಗಳಾದ ತಮ್ಮ ಸಹೋದರರೊಡನೆ ಅವರು ಹೀಗೆ ಹೇಳುತ್ತಾರೆ: 'ನೀವು (ಮದೀನದಿಂದ) ಹೊರಕ್ಕಟ್ಟಲ್ಪಟ್ಟರೆ ಖಂಡಿತವಾಗಿಯೂ ನಾವು ಸಹ ನಿಮ್ಮೊಂದಿಗೆ ಹೊರಗೆ ಬರುವೆವು. ನಿಮ್ಮ

اَلَمْ تَرَ اِلَى الَّذِيْنَ نَافَقُوْا يَقُوْلُوْنَ لِاِخْوَانِهِمُ الَّذِيْنَ كَفَرُوْا مِنْ اَهْلِ الْكِتٰبِ لَىِٕنْ اُخْرِجْتُمْ لَنَخْرُجَنَّ





ವಿರುದ್ಧವಾಗಿ ನಾವು ಯಾರಿಗೂ ಎಂದಿಗೂ ವಿಧೇಯರಾಗಲಾರೆವು. ನಿಮ್ಮೊಡನೆ ಯುದ್ಧ ಮಾಡಲ್ಪಟ್ಟರೆ ನಾವು ನಿಮಗೆ ನೆರವಾಗುವೆವು. ಆದರೆ ಅವರು ಸುಳ್ಳು ಹೇಳುವವರೆಂದು ಅಲ್ಲಾಹನು ಸಾಕ್ಷ್ಯ ನೀಡುತ್ತಾನೆ.

مَعَكُمْ وَلَا نُطِيْعُ فِيْكُمْ اَحَدًا اَبَدًا ۙ وَّاِنْ قُوْتِلْتُمْ لَنَنْصُرَنَّكُمْ ۗ وَاللّٰهُ يَشْهَدُ اِنَّهُمْ لَكٰذِبُوْنَ ﴿١٢﴾

**13.** ಅವರು ಹೊರಕ್ಕಟ್ಟಲ್ಪಟ್ಟರೆ ಇವರು ಅವರ ಜೊತೆಗೆ ಎಂದಿಗೂ ಹೊರಗೆ ಹೋಗುವುದಿಲ್ಲ. ಅವರೊಡನೆ ಯುದ್ಧವಾಡಲಾದರೆ ಇವರು ಅವರಿಗೆಂದೂ ನೆರವಾಗುವುದಿಲ್ಲ. ಒಂದು ವೇಳೆ ಇವರು ಅವರ ನೆರವಿಗೆ ಬಂದರೆ ಕೂಡ ಖಂಡಿತವಾಗಿಯೂ ಇವರು ಹಿಂದಕ್ಕೋಡುವರು. ಅನಂತರ ಇವರಿಗೆ ಯಾವುದೇ ಸಹಾಯ ದೊರಕಲಾರದು.

لَىِٕنْ اُخْرِجُوْا لَا يَخْرُجُوْنَ مَعَهُمْ ۚ وَلَىِٕنْ قُوْتِلُوْا لَا يَنْصُرُوْنَهُمْ ۚ وَلَىِٕنْ نَّصَرُوْهُمْ لَيُوَلُّنَّ الْاَدْبَارَ ۙ ثُمَّ لَا يُنْصَرُوْنَ ﴿١٣﴾

**14.** ನಿಜವೇನೆಂದರೆ, ಅವರ ಹೃದಯಗಳಲ್ಲಿ ಅಲ್ಲಾಹನಿಗಿಂತ ಹೆಚ್ಚಾಗಿ ನಿಮ್ಮ ಭಯವಿದೆ. ಅವರು ಅವಿವೇಕಿ ಜನರಾಗಿರುವುದೇ ಅದಕ್ಕೆ ಕಾರಣ.

لَاَنْتُمْ اَشَدُّ رَهْبَةً فِيْ صُدُوْرِهِمْ مِّنَ اللّٰهِ ۗ ذٰلِكَ بِاَنَّهُمْ قَوْمٌ لَّا يَفْقَهُوْنَ ﴿١٤﴾

**15.** ಕೋಟೆಗಳಿರುವ ಸ್ಥಳಗಳಲ್ಲಾಗಲೀ ಗೋಡೆಗಳ ಮರೆಯಲ್ಲಿ ನಿಂತುಕೊಂಡಾಗಲಿ ಹೊರತು ಅವರು ನಿಮ್ಮ ವಿರುದ್ಧ ಒಗ್ಗಟ್ಟಾಗಿ ಯುದ್ಧಮಾಡಲಾರರು. ಅವರ ತಮ್ಮೊಳಗಿನ ಹೋರಾಟವೇ ತೀವ್ರವಾಗಿದೆ. ಅವರು ಒಗ್ಗಟ್ಟಿನಲ್ಲಿದ್ದಾರೆಂದು ನೀನು ಭಾವಿಸುವೆ. ಆದರೆ ಅವರ ಹೃದಯಗಳು ವಿಭಿನ್ನವಾಗಿವೆ. ಅವರು ಬುದ್ಧಿಯಿಲ್ಲದ ಕೋಮು ಆಗಿರುವುದೇ ಅದಕ್ಕೆ ಕಾರಣ.

لَا يُقَاتِلُوْنَكُمْ جَمِيْعًا اِلَّا فِيْ قُرًى مُّحَصَّنَةٍ اَوْ مِنْ وَّرَاۤءِ جُدُرٍ ۗ بَأْسُهُمْ بَيْنَهُمْ شَدِيْدٌ ۗ تَحْسَبُهُمْ جَمِيْعًا وَّقُلُوْبُهُمْ شَتّٰى ۗ ذٰلِكَ بِاَنَّهُمْ قَوْمٌ لَّا يَعْقِلُوْنَ ﴿١٥﴾

**16.** ಅವರ ಸ್ಥಿತಿ ಅವರಿಗೆ ನಿಕಟಪೂರ್ವದಲ್ಲಿದ್ದವರ ಸ್ಥಿತಿಯ ರೀತಿಯಲ್ಲಿದೆ. ಅವರ ದುರ್ವರ್ತನೆಗಳ ದೋಷಫಲಗಳನ್ನು ಅವರು ಅನುಭವಿಸಿದರು. (ಅಷ್ಟೇ ಅಲ್ಲ, ಪರಲೋಕದಲ್ಲಿ) ಅವರಿಗೆ ಯಾತನಾಮಯವಾದ ಶಿಕ್ಷೆಯೂ ಇದೆ.

كَمَثَلِ الَّذِيْنَ مِنْ قَبْلِهِمْ قَرِيْبًا ذَاقُوْا وَبَالَ اَمْرِهِمْ ۚ وَلَهُمْ عَذَابٌ اَلِيْمٌ ﴿١٦﴾

**17.** (ಅವರ ಸ್ಥಿತಿ) **ಶೈತಾನನ ಸ್ಥಿತಿಯ ಹಾಗೆ ಇದೆ. ಅವನು ಮನುಷ್ಯನೊಡನೆ 'ನೀನು ನಿರಾಕರಿಸು' ಎಂದು ಹೇಳುತ್ತಾನೆ. ಆದರೆ ಅವನು ನಿರಾಕರಿಸುವಾಗ, 'ನನಗೂ ನಿನಗೂ ನಂಟೇನೂ ಇಲ್ಲ; ಸರ್ವಲೋಕಗಳ ಪ್ರಭು ವಾದ ಅಲ್ಲಾಹನಿಗೆ ನಾನು ಭಯಪಡುತ್ತೇನೆ' ಎಂದು ಹೇಳುತ್ತಾನೆ.**

كَمَثَلِ الشَّيْطٰنِ اِذْ قَالَ لِلْاِنْسَانِ اكْفُرْ ۚ فَلَمَّا كَفَرَ قَالَ اِنِّيْ بَرِيْٓءٌ مِّنْكَ اِنِّيْٓ اَخَافُ اللّٰهَ رَبَّ الْعٰلَمِيْنَ ﴿۱۷﴾

**18. ಅವರೀರ್ವರ ಪರ್ಯವಸಾನವೇನೆಂದರೆ, ಅವರು ನರಕದಲ್ಲಿ ದೀರ್ಘಕಾಲ ವಾಸಿಸುವರು. ದುಷ್ಕರ್ಮಿಗಳಿಗೆ ಪ್ರತಿಫಲ ಅದೇ ಆಗಿದೆ.**

فَكَانَ عَاقِبَتَهُمَآ اَنَّهُمَا فِي النَّارِ خَالِدَيْنِ فِيْهَا ۚ وَ ذٰلِكَ جَزٰٓؤُا الظّٰلِمِيْنَ ﴿۱۸﴾

**19. ಎಲೈ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ಭಯಪಡಿರಿ. ನಾಳೆಗೋಸ್ಕರ ತಾನು ಏನನ್ನು ಸಿದ್ಧಪಡಿಸಿಟ್ಟಿದೆ ಎಂದು ಪ್ರತಿಯೊಂದು ಆತ್ಮವೂ ನೋಡಿಕೊಳ್ಳಲಿ. ನೀವು ಅಲ್ಲಾಹನ ಭಯಭಕ್ತಿ ಇರಿಸಿಕೊಳ್ಳಿರಿ. ನೀವು ಮಾಡುವುದನ್ನೆಲ್ಲ ಖಂಡಿತ ವಾಗಿಯೂ ಅಲ್ಲಾಹನು ಚೆನ್ನಾಗಿ ತಿಳಿಯುವವ ನಾಗಿದ್ದಾನೆ.**

يٰٓاَيُّهَا الَّذِيْنَ اٰمَنُوا اتَّقُوا اللّٰهَ وَلْتَنْظُرْ نَفْسٌ مَّا قَدَّمَتْ لِغَدٍ ۚ وَاتَّقُوا اللّٰهَ ؕ اِنَّ اللّٰهَ خَبِيْرٌۢ بِمَا تَعْمَلُوْنَ ﴿۱۹﴾

**20. ಅಲ್ಲಾಹನನ್ನು ಮರೆತುಬಿಟ್ಟವರಂತೆ ನೀವು ಆಗಬೇಡಿರಿ. ತತ್ಫಲವಾಗಿ ಅವರು ತಮ್ಮನ್ನೇ ಮರೆತು ಬಿಡುವಂತೆ ಅವನು** (ಅಲ್ಲಾಹನು) **ಮಾಡಿದ್ದನು. ಅವರೇ ಆಜ್ಞೋಲ್ಲಂಘಕರಾಗಿದ್ದಾರೆ.**

وَ لَا تَكُوْنُوْا كَالَّذِيْنَ نَسُوا اللّٰهَ فَاَنْسٰىهُمْ اَنْفُسَهُمْ ؕ اُولٰٓئِكَ هُمُ الْفٰسِقُوْنَ ﴿۲۰﴾

**21. ನರಕವಾಸಿಗಳು ಮತ್ತು ಸ್ವರ್ಗವಾಸಿಗಳು ಸಮಾನರಲ್ಲ. ಸ್ವರ್ಗವಾಸಿಗಳೇ ವಿಜಯಶಾಲಿಗಳು.**

لَا يَسْتَوِيْٓ اَصْحٰبُ النَّارِ وَ اَصْحٰبُ الْجَنَّةِ ؕ اَصْحٰبُ الْجَنَّةِ هُمُ الْفَآئِزُوْنَ ﴿۲۱﴾

**22. ನಾವು ಈ ಖುರ್‌ಆನನ್ನು ಒಂದು ಪರ್ವತದ[457A]ಮೇಲೆ ಅವತೀರ್ಣಗೊಳಿಸಿರುತ್ತಿದ್ದರೆ ಅಲ್ಲಾಹನ ಭಯದಿಂದ ಅದು ಕುಗ್ಗಿಬಿಡುವುದಾಗಿಯೂ**

لَوْ اَنْزَلْنَا هٰذَا الْقُرْاٰنَ عَلٰى جَبَلٍ لَّرَاَيْتَهٗ خَاشِعًا مُّتَصَدِّعًا مِّنْ خَشْيَةِ

457A. ಇಲ್ಲಿ ಪರ್ವತ ಎಂದರೆ ಭೌತಿಕ ಪರ್ವತವಲ್ಲ; ಪರ್ವತದಂತಹ ಮಹತ್ತರ ವ್ಯಕ್ತಿತ್ವವನ್ನು ಅದು ಸೂಚಿಸುತ್ತದೆ. ಇದೇ ವಚನದ ಕೊನೆಯಲ್ಲಿ ಇದೊಂದು ಉಪಮೆಯೆಂದು ಸ್ಪಷ್ಟಪಡಿಸಲಾಗಿದೆ.





**ಒಡೆದು ಹೋಗುವುದಾಗಿಯೂ ನೀನು ಕಾಣುತ್ತಿದ್ದೆ. ಈ ಉಪಮೆಗಳನ್ನು ಮನುಷ್ಯರಿಗೆ, ಅವರು ಚಿಂತನೆ ಮಾಡಲಿಕ್ಕೋಸ್ಕರ ನಾವು ವಿವರಿಸುತ್ತೇವೆ.**

اللّٰهِ ؕ وَتِلْكَ الْاَمْثَالُ نَضْرِبُهَا لِلنَّاسِ لَعَلَّهُمْ يَتَفَكَّرُوْنَ ﴿۲۲﴾

**23. ಅವನೇ ಅಲ್ಲಾಹನು. ಅವನು ಹೊರತು ಬೇರೆ ಆರಾಧ್ಯನಿಲ್ಲ. ಪರೋಕ್ಷವಾದುದನ್ನೂ ಪ್ರತ್ಯಕ್ಷ ವಾದುದನ್ನೂ ಅವನು ತಿಳಿಯುತ್ತಾನೆ. ಅವನು ದಯಾವಂತನೂ ಕಾರುಣ್ಯನಿಧಿಯೂ ಆಗಿದ್ದಾನೆ.**

هُوَ اللّٰهُ الَّذِيْ لَآ اِلٰهَ اِلَّا هُوَ ۚ عٰلِمُ الْغَيْبِ وَ الشَّهَادَةِ ۚ هُوَ الرَّحْمٰنُ الرَّحِيْمُ ﴿۲۳﴾

**24. ಅವನೇ ಅಲ್ಲಾಹನು. ಅವನ ಹೊರತು ಬೇರೆ ಆರಾಧ್ಯನಿಲ್ಲ.** (ಅವನು) **ಸಾರ್ವಭೌಮನೂ ಪರಮ ಪರಿಶುದ್ಧನೂ ಶಾಂತಿಯ ಸಾಮ್ರಾಟನೂ ಅಭಯ ದಾತನೂ ಸಂರಕ್ಷಕನೂ ಪ್ರತಾಪಶಾಲಿಯೂ ಒಡೆದು ದನ್ನು ಜೋಡಿಸುವವನೂ ಮಹೋನ್ನತನೂ ಆಗಿದ್ದಾನೆ. ಅವರು ಕಲ್ಪಿಸುವ ಸಹಭಾಗಿತ್ವದಿಂದೆಲ್ಲ ಅವನು ಪರಿಶುದ್ಧನು.**

هُوَ اللّٰهُ الَّذِيْ لَآ اِلٰهَ اِلَّا هُوَ ۚ اَلْمَلِكُ الْقُدُّوْسُ السَّلٰمُ الْمُؤْمِنُ الْمُهَيْمِنُ الْعَزِيْزُ الْجَبَّارُ الْمُتَكَبِّرُ ؕ سُبْحٰنَ اللّٰهِ عَمَّا يُشْرِكُوْنَ ﴿۲۴﴾

**25. ಅವನೇ ಅಲ್ಲಾಹನು.** ಅವನು **ಸೃಷ್ಟಿಕರ್ತನೂ ನಿರ್ಮಾಪಕನೂ ರೂಪಕೊಡುವವನೂ ಆಗಿದ್ದಾನೆ. ಬಲು ಸುಂದರವಾದ ನಾಮಗಳು ಅವನಿಗಿವೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅವನ ಸ್ತುತಿಕೀರ್ತನೆ ಮಾಡುತ್ತವೆ. ಅವನು ಪ್ರತಾಪಶಾಲಿಯೂ ವಿವೇಕವಂತನೂ ಆಗಿದ್ದಾನೆ.**

هُوَ اللّٰهُ الْخَالِقُ الْبَارِئُ الْمُصَوِّرُ لَهُ الْاَسْمَآءُ الْحُسْنٰى ؕ يُسَبِّحُ لَهٗ مَا فِي السَّمٰوٰتِ وَ الْاَرْضِ ۚ وَ هُوَ الْعَزِيْزُ الْحَكِيْمُ ﴿۲۵﴾

سُوْرَةُ الْمُمْتَحِنَةِ مَدَنِيَّةٌ وَّهِيَ مَعَ الْبَسْمَلَةِ اَرْبَعَ عَشْرَةَ اٰيَةً وَّرُكُوْعَانِ

# 60. ಅಲ್‌ಮುಮ್ತಹಿನಃ

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 14 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಎಲೈ ವಿಶ್ವಾಸಿಗಳೇ, ನನ್ನ ಮತ್ತು ನಿಮ್ಮ ಶತ್ರುಗಳಾದವರನ್ನು ನೀವು ಆಪ್ತ ಮಿತ್ರರನ್ನಾಗಿ ಮಾಡಬೇಡಿರಿ. ನೀವಾದರೋ ಅವರಿಗೆ ಸ್ನೇಹ ಸಂದೇಶವನ್ನು ಕಳುಹಿಸುತ್ತೀರಿ. ಆದರೆ ಅವರು ನಿಮಗೆ ಬಂದ ಸತ್ಯವನ್ನು ಅಲ್ಲಗಳೆಯುತ್ತಾರೆ. ನಿಮ್ಮ ಪ್ರಭುವಾದ ಅಲ್ಲಾಹನನ್ನು ನೀವು ನಂಬಿರುವ ಕಾರಣದಿಂದ ಪ್ರವಾದಿಯನ್ನೂ ನಿಮ್ಮನ್ನೂ ಅವರು ಹೊರಕ್ಕಟ್ಟುತ್ತಾರೆ. ನನ್ನ ಮಾರ್ಗದಲ್ಲಿ ಹೋರಾಡಲು ಮತ್ತು ನನ್ನ ಸಂತುಷ್ಟಿಯನ್ನು ಗಳಿಸಲು ನೀವು ಹೊರಟು ಗೋಪ್ಯವಾಗಿ ಅವರಿಗೆ ಸ್ನೇಹ ಸಂದೇಶವನ್ನು ಸಹ ಕಳುಹಿಸಿದರೆ, ನೀವು ರಹಸ್ಯವಾಗಿಡುವುದನ್ನೂ ಬಹಿರಂಗಪಡಿಸುವುದನ್ನೂ ನಾನು ಚೆನ್ನಾಗಿ ತಿಳಿಯುತ್ತೇನೆ.[458] ನಿಮ್ಮ ಪೈಕಿ ಯಾರಾದರೂ ಹಾಗೆ ಮಾಡಿದರೆ ಖಂಡಿತವಾಗಿಯೂ ಅವನು ಸತ್ಪಥದಿಂದ ದೂರಹೋಗುವವನಾಗಿದ್ದಾನೆ.**

يٰۤاَيُّهَا الَّذِيْنَ اٰمَنُوْا لَا تَتَّخِذُوْا عَدُوِّيْ وَعَدُوَّكُمْ اَوْلِيَآءَ تُلْقُوْنَ اِلَيْهِمْ بِالْمَوَدَّةِ وَقَدْ كَفَرُوْا بِمَا جَآءَكُمْ مِّنَ الْحَقِّ يُخْرِجُوْنَ الرَّسُوْلَ وَاِيَّاكُمْ اَنْ تُؤْمِنُوْا بِاللّٰهِ رَبِّكُمْ اِنْ كُنْتُمْ خَرَجْتُمْ جِهَادًا فِيْ سَبِيْلِيْ وَابْتِغَآءَ مَرْضَاتِيْ تُسِرُّوْنَ اِلَيْهِمْ بِالْمَوَدَّةِ وَاَنَا اَعْلَمُ بِمَاۤ اَخْفَيْتُمْ وَمَاۤ اَعْلَنْتُمْ وَمَنْ يَّفْعَلْهُ مِنْكُمْ فَقَدْ ضَلَّ سَوَآءَ السَّبِيْلِ ②

**3. ಅವರು ನಿಮ್ಮನ್ನು ಎಲ್ಲಿ ಕಂಡರೂ ನಿಮ್ಮ ಶತ್ರುಗಳಾಗಿಯೇ ಇರುವರು. ಅವರ ಕೈಗಳೂ**

اِنْ يَّثْقَفُوْكُمْ يَكُوْنُوْا لَكُمْ اَعْدَآءً وَّ

458. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮತ್ತು ಅನುಯಾಯಿಗಳು ಮಕ್ಕದ ಮೇಲೆ ವಿಜಯ ಯಾತ್ರೆ ಹೊರಡಲು ಸಿದ್ಧತೆ ನಡೆಸುತ್ತಿದ್ದಾಗ ಕೆಲವು ಮುಸ್ಲಿಮರು, ಮಕ್ಕದಲ್ಲಿರುವ ತಮ್ಮ ಸಂಬಂಧಿಕರನ್ನು ರಕ್ಷಿಸುವ ಉದ್ದೇಶದಿಂದ ಹಾಗೂ ಶತ್ರುಗಳ ಪ್ರೀತಿಯನ್ನು ಗಳಿಸಲಿಕ್ಕೋಸ್ಕರ, ಆ ಸಂಗತಿಯನ್ನು ಅವರಿಗೆ ತಿಳಿಸಲು ಗುಪ್ತವಾಗಿ ಓರ್ವ ಸ್ತ್ರೀಯನ್ನು ಒಂದು ಪತ್ರದೊಂದಿಗೆ ಕಳುಹಿಸಿದರು. ಆದರೆ ಅಲ್ಲಾಹನು ಆ ವಿಚಾರವನ್ನು ದಿವ್ಯವಾಣಿ ಮೂಲಕ ಪೈಗಂಬರರಿಗೆ ತಿಳಿಸಿದನು. ಹಾಗೆ ಆ ಗುಪ್ತಚಾರಿಣಿಯನ್ನು ಪತ್ತೆ ಹಚ್ಚಿ, ಸಂದೇಶ ಕಳುಹಿಸಿದವರನ್ನು ಹಿಡಿಯಲಾಯಿತು. ಆ ಘಟನೆಯನ್ನು ಇಲ್ಲಿ ಸೂಚಿಸಲಾಗಿದೆ.





**ನಾಲಗೆಗಳೂ ನಿಮ್ಮ ಕಡೆಗೆ ದುರುದ್ದೇಶದಿಂದ ಚಾಚಲ್ಪಡುವುವು. ನೀವು ಅವಿಶ್ವಾಸಿಗಳಾಗಲೆಂದು ಅವರು ಔತ್ಸುಕ್ಯದಿಂದ ಬಯಸುತ್ತಾರೆ.**

يَبْسُطُوْۤا اِلَيْكُمْ اَيْدِيَهُمْ وَاَلْسِنَتَهُمْ بِالسُّوْٓءِ وَوَدُّوْا لَوْ تَكْفُرُوْنَ ③

**4. ಪುನರುತ್ಥಾನ ದಿನದಂದು ನಿಮ್ಮ ಕೌಟುಂಬಿಕ ಸಂಬಂಧವಾಗಲಿ ನಿಮ್ಮ ಸಂತಾನಗಳಾಗಲಿ ನಿಮ್ಮ ಪ್ರಯೋಜನಕ್ಕೆ ಬರಲಾರವು. ನಿಮ್ಮ ಮಧ್ಯೆ ಅವನು ತೀರ್ಮಾನ ಮಾಡುವನು. ನಿಮ್ಮ ಕೃತ್ಯಗಳನ್ನೆಲ್ಲ ಅಲ್ಲಾಹನು ಚೆನ್ನಾಗಿ ನೋಡುತ್ತಾನೆ.**

لَنْ تَنْفَعَكُمْ اَرْحَامُكُمْ وَلَاۤ اَوْلَادُكُمْ يَوْمَ الْقِيٰمَةِ يَفْصِلُ بَيْنَكُمْ وَاللّٰهُ بِمَا تَعْمَلُوْنَ بَصِيْرٌ ④

**5. ಇಬ್‌ರಾಹೀಂ ಮತ್ತು ಅವರ ಜೊತೆಯಲ್ಲಿರುವವರಲ್ಲಿ ನಿಮಗೆ ಉತ್ತಮವಾದ ಆದರ್ಶವಿದೆ. ಅವರು ತಮ್ಮ ಜನರಿಗೆ ಹೇಳಿದರು: 'ನಾವು ನಿಮ್ಮಿಂದಲೂ ಅಲ್ಲಾಹನನ್ನು ಬಿಟ್ಟು ನೀವು ಆರಾಧಿಸುವವುಗಳಿಂದಲೂ ಬೇಸರಗೊಂಡಿದ್ದೇವೆ. ನಾವು ನಿಮ್ಮ** ನಂಬಿಕೆಗಳನ್ನು **ನಿರಾಕರಿಸುತ್ತೇವೆ. ನಮ್ಮ ಮತ್ತು ನಿಮ್ಮ ಮಧ್ಯೆ ವೈರ ಮತ್ತು ದ್ವೇಷವಿದೆ. ನೀವು ಅಲ್ಲಾಹನನ್ನು ಮಾತ್ರ ನಂಬುವ ತನಕ ಅದು ಮುಂದುವರಿಯುವುದು.'** (ಆದರೆ) **ಇಬ್‌ರಾಹೀಂ ತನ್ನ ತಂದೆಯೊಡನೆ ಹೇಳಿದ** (ಒಂದು) **ಮಾತು ಇದರಿಂದ ಹೊರತಾಗಿದೆ.**[459] (ಅವರು ಹೀಗೆ ಹೇಳಿದ್ದರು:) **'ನಾನು ಖಂಡಿತವಾಗಿಯೂ ತಮ್ಮ ಪಾಪ ವಿಮುಕ್ತಿಗೋಸ್ಕರ ಪ್ರಾರ್ಥಿಸುವೆನು.**[460] **ಆದರೆ ನಿಮ್ಮ ಪರವಾಗಿ ಏನನ್ನಾದರೂ ಅಲ್ಲಾಹನಿಂದ ಗಳಿಸಲು ನನಗೆ ಅಧಿಕಾರವಿಲ್ಲ.'** (ಅವರು ಪ್ರಾರ್ಥಿಸಿದರು:) **'ನಮ್ಮ ಪ್ರಭೂ, ನಾವು ನಿನ್ನ ಮೇಲೆ ಭರವಸೆ ಹೊಂದಿದ್ದೇವೆ. ನಿನ್ನ ಬಳಿಗೆಯೇ ನಾವು ಮರಳುತ್ತೇವೆ.** (ಕೊನೆಯ) **ಮರಳಿಕೆ ನಿನ್ನ ಬಳಿಗೆಯೇ ಆಗಿದೆ.**

قَدْ كَانَتْ لَكُمْ اُسْوَةٌ حَسَنَةٌ فِيْۤ اِبْرٰهِيْمَ وَالَّذِيْنَ مَعَهٗ اِذْ قَالُوْا لِقَوْمِهِمْ اِنَّا بُرَءٰٓؤُا مِنْكُمْ وَمِمَّا تَعْبُدُوْنَ مِنْ دُوْنِ اللّٰهِ كَفَرْنَا بِكُمْ وَبَدَا بَيْنَنَا وَبَيْنَكُمُ الْعَدَاوَةُ وَالْبَغْضَآءُ اَبَدًا حَتّٰى تُؤْمِنُوْا بِاللّٰهِ وَحْدَهٗۤ اِلَّا قَوْلَ اِبْرٰهِيْمَ لِاَبِيْهِ لَاَسْتَغْفِرَنَّ لَكَ وَمَاۤ اَمْلِكُ لَكَ مِنَ اللّٰهِ مِنْ شَيْءٍ رَبَّنَا عَلَيْكَ تَوَكَّلْنَا وَاِلَيْكَ اَنَبْنَا وَاِلَيْكَ الْمَصِيْرُ ⑤

**6. 'ನಮ್ಮ ಪ್ರಭೂ,** (ಸತ್ಯವನ್ನು) **ನಿರಾಕರಿಸುವವರಿಗೆ ನೀನು ನಮ್ಮನ್ನು ಪರೀಕ್ಷಾ ಸಾಧನವನ್ನಾಗಿ ಮಾಡಬೇಡ.**

رَبَّنَا لَا تَجْعَلْنَا فِتْنَةً لِّلَّذِيْنَ كَفَرُوْا

459. ಅದು ನಿಮಗೆ ಅನುಕರಣೀಯವಲ್ಲ ಎಂದರ್ಥ.

460. ಮುಂಚೆ ಪ್ರವಾದಿ ಇಬ್‌ರಾಹೀಂ (ಅಲೈಹಿಸ್ಸಲಾಂ) ಹಾಗೆ ವಾಗ್ದಾನ ಮಾಡಿದ್ದರು. ಆದರೆ ತನ್ನ ತಂದೆ ಸತ್ಯಧರ್ಮದ ಕಟ್ಟಾ ವಿರೋಧಿ ಎಂದು ತಿಳಿದ ಬಳಿಕ ಪ್ರಾರ್ಥಿಸಲಿಲ್ಲ. (ಪವಿತ್ರ ಖುರ್‌ಆನಿನ 9:114 ವಚನ ನೋಡಿರಿ)

ನಮ್ಮನ್ನು ಕ್ಷಮಿಸಿಬಿಡು. ನಮ್ಮ ಪ್ರಭೂ, ನೀನು ಪ್ರತಾಪ ಶಾಲಿಯೂ ವಿವೇಕವಂತನೂ ಆಗಿರುವೆ.'

وَاغْفِرْ لَنَا رَبَّنَا ۚ إِنَّكَ أَنتَ الْعَزِيزُ الْحَكِيمُ ﴿٦﴾

**7.** ನಿಜವಾಗಿಯೂ ಅವರಲ್ಲಿ ನಿಮಗೆ ಉತ್ತಮವಾದ ಮಾದರಿ ಇದೆ - ಅಲ್ಲಾಹ್ ಮತ್ತು ಅಂತ್ಯ ದಿನದ ಬಗ್ಗೆ ಭಯವುಳ್ಳವರಿಗೆ. ಇನ್ನು ಯಾವನಾದರೂ ಹಿಂತಿರುಗಿ ಹೋದರೆ (ಅವನು ತಿಳಿದುಕೊಳ್ಳಲಿ) ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

لَقَدْ كَانَ لَكُمْ فِيهِمْ أُسْوَةٌ حَسَنَةٌ لِّمَن كَانَ يَرْجُو اللَّهَ وَالْيَوْمَ الْآخِرَ ۚ وَمَن يَتَوَلَّ فَإِنَّ اللَّهَ هُوَ الْغَنِيُّ الْحَمِيدُ ﴿٧﴾ ع

**8.** ನಿಮಗೂ ಅವರ ಪೈಕಿ ನೀವು ದ್ವೇಷಿಸುವವರಿಗೂ ಮಧ್ಯೆ ಅಲ್ಲಾಹನು (ಮುಂದೊಮ್ಮೆ) ಪ್ರೀತಿಹುಟ್ಟಿಸಲೂ ಬಹುದು. ಅಲ್ಲಾಹನು ಸರ್ವಶಕ್ತನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯನಿಧಿಯೂ ಆಗಿದ್ದಾನೆ.

عَسَى اللَّهُ أَن يَجْعَلَ بَيْنَكُمْ وَبَيْنَ الَّذِينَ عَادَيْتُم مِّنْهُم مَّوَدَّةً ۚ وَاللَّهُ قَدِيرٌ ۚ وَاللَّهُ غَفُورٌ رَّحِيمٌ ﴿٨﴾

**9.** ಧರ್ಮದ ಕಾರಣದಿಂದ ನಿಮ್ಮೊಡನೆ ಯುದ್ಧ ಮಾಡದವರೊಡನೆ ಮತ್ತು ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಕ್ಕಟ್ಟದವರೊಡನೆ ನೀವು ಒಳಿತಿನಿಂದಲೂ ನ್ಯಾಯಯುತವಾಗಿಯೂ ವರ್ತಿಸುವುದನ್ನು ಅಲ್ಲಾಹನು ನಿಮಗೆ ವಿರೋಧಿಸುವುದಿಲ್ಲ. ಖಂಡಿತವಾಗಿಯೂ ನ್ಯಾಯ ಪಾಲಿಸುವವರನ್ನು ಅಲ್ಲಾಹನು ಪ್ರೀತಿಸುತ್ತಾನೆ.

لَّا يَنْهَاكُمُ اللَّهُ عَنِ الَّذِينَ لَمْ يُقَاتِلُوكُمْ فِي الدِّينِ وَلَمْ يُخْرِجُوكُم مِّن دِيَارِكُمْ أَن تَبَرُّوهُمْ وَتُقْسِطُوا إِلَيْهِمْ ۚ إِنَّ اللَّهَ يُحِبُّ الْمُقْسِطِينَ ﴿٩﴾

**10.** ಧರ್ಮದ ಕಾರಣದಿಂದ ನಿಮ್ಮೊಡನೆ ಯುದ್ಧ ಮಾಡುವವರೊಡನೆ, ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಕ್ಕಟ್ಟುವವರೊಡನೆ ಮತ್ತು ನಿಮ್ಮನ್ನು ಹೊರಕ್ಕಟ್ಟುವುದರಲ್ಲಿ (ಇತರ ಶತ್ರುಗಳಿಗೆ) ನೆರವು ನೀಡುವವರೊಡನೆ ಮಾತ್ರ ನೀವು ಸ್ನೇಹ ಬೆಳೆಸುವುದನ್ನು ಅಲ್ಲಾಹನು ವಿರೋಧಿಸುತ್ತಾನೆ. ಯಾರಾದರೂ ಅವರೊಡನೆ ಸ್ನೇಹ ಬೆಳೆಸಿದರೆ ಅವರು ಅಧರ್ಮಿಗಳೇ ಸರಿ.

إِنَّمَا يَنْهَاكُمُ اللَّهُ عَنِ الَّذِينَ قَاتَلُوكُمْ فِي الدِّينِ وَأَخْرَجُوكُم مِّن دِيَارِكُمْ وَظَاهَرُوا عَلَىٰ إِخْرَاجِكُمْ أَن تَوَلَّوْهُمْ ۚ وَمَن يَتَوَلَّهُمْ فَأُولَٰئِكَ هُمُ الظَّالِمُونَ ﴿١٠﴾

**11.** ಎಲ್ಲೈ ಸತ್ಯವಿಶ್ವಾಸಿಗಳೇ, ಸತ್ಯ ವಿಶ್ವಾಸಿನಿಯರು ನಿಮ್ಮ ಬಳಿಗೆ ಆಶ್ರಯಾರ್ಥಿಗಳಾಗಿ ಬಂದರೆ ಅವರನ್ನು ಪರೀಕ್ಷಿಸಿರಿ. ಅವರ ನಂಬಿಕೆಯ ಬಗ್ಗೆ ಅಲ್ಲಾಹನು ಚೆನ್ನಾಗಿ





ಬಲ್ಲನು. ಹಾಗೆ, ಅವರನ್ನು ನೀವು (ನಿಜವಾದ) ವಿಶ್ವಾಸಿನಿಯರನ್ನಾಗಿ ಕಂಡರೆ, ಅವರನ್ನು ಅವಿಶ್ವಾಸಿಗಳ ಬಳಿಗೆ ಮರಳಿಸಬೇಡಿರಿ. ಈ ಸ್ತ್ರೀಯರು ಅವರಿಗೆ ನ್ಯಾಯಬದ್ಧರಲ್ಲ. ಅವರು ಈ ಸ್ತ್ರೀಯರಿಗೂ ನ್ಯಾಯಬದ್ಧರಲ್ಲ. ಆದರೆ ಅವರು (ಆ ಸ್ತ್ರೀಯರ ಅವಿಶ್ವಾಸಿಗಳಾದ ಗಂಡಂದಿರು) ವೆಚ್ಚ ಮಾಡಿದುದನ್ನು ನೀವು ಅವರಿಗೆ ಕೊಟ್ಟುಬಿಡಿರಿ. ಅವರ ವಿವಾಹ ಧನವನ್ನು ನೀವು ಅವರಿಗೆ ನೀಡಿದರೆ, ಅವರನ್ನು ಮದುವೆಯಾಗುವುದರಲ್ಲಿ ನಿಮಗೆ ಪಾಪವೇನಿಲ್ಲ. ಅವಿಶ್ವಾಸಿಗಳಾದ ಸ್ತ್ರೀಯರು (ನಿಮ್ಮನ್ನು ಬಿಟ್ಟು ಅವಿಶ್ವಾಸಿಗಳ ಬಳಿಗೆ ಹೋದರೆ) ಅವರೊಂದಿಗೆ ನೀವು ವಿವಾಹ ಸಂಬಂಧವನ್ನು ಹಿಡಿದಿಟ್ಟುಕೊಳ್ಳಬೇಡಿರಿ. ಆದರೆ ನೀವು ವೆಚ್ಚ ಮಾಡಿದುದನ್ನು (ಅವಿಶ್ವಾಸಿಗಳಿಂದ) ಕೇಳಿ ಪಡೆಯಿರಿ. (ಅವಿಶ್ವಾಸಿಗಳ ಪತ್ನಿಯರು ಇಸ್ಲಾಂ ಸ್ವೀಕರಿಸಿ ಮುಸ್ಲಿಮರೊಂದಿಗೆ ಸೇರಿದರೆ) ಅವರು ಮಾಡಿದ ವೆಚ್ಚವನ್ನು (ಮುಸ್ಲಿಮರಿಂದ) ಅವರು ಸಹ ಕೇಳಿ ಪಡೆಯಲಿ. ಇದು ಅಲ್ಲಾಹನ ತೀರ್ಮಾನವಾಗಿದೆ. ಅವನು ನಿಮ್ಮ ಮಧ್ಯೆ ತೀರ್ಮಾನಿಸುತ್ತಾನೆ. ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

يَا أَيُّهَا الَّذِينَ آمَنُوا إِذَا جَاءَكُمُ الْمُؤْمِنَاتُ مُهَاجِرَاتٍ فَامْتَحِنُوهُنَّ ۖ اللَّهُ أَعْلَمُ بِإِيمَانِهِنَّ ۖ فَإِنْ عَلِمْتُمُوهُنَّ مُؤْمِنَاتٍ فَلَا تَرْجِعُوهُنَّ إِلَى الْكُفَّارِ ۖ لَا هُنَّ حِلٌّ لَّهُمْ وَلَا هُمْ يَحِلُّونَ لَهُنَّ ۖ وَآتُوهُم مَّا أَنفَقُوا ۚ وَلَا جُنَاحَ عَلَيْكُمْ أَن تَنكِحُوهُنَّ إِذَا آتَيْتُمُوهُنَّ أُجُورَهُنَّ ۚ وَلَا تُمْسِكُوا بِعِصَمِ الْكَوَافِرِ وَاسْأَلُوا مَا أَنفَقْتُمْ وَلْيَسْأَلُوا مَا أَنفَقُوا ۚ ذَٰلِكُمْ حُكْمُ اللَّهِ ۖ يَحْكُمُ بَيْنَكُمْ ۚ وَاللَّهُ عَلِيمٌ حَكِيمٌ ﴿١١﴾

**12.** ನಿಮ್ಮಲ್ಲಿ ಯಾರ ಪತ್ನಿಯರಾದರೂ ನಿಮ್ಮನ್ನು ಬಿಟ್ಟು ಅವಿಶ್ವಾಸಿಗಳೊಂದಿಗೆ ಸೇರಿಕೊಂಡರೆ, ಮತ್ತೆ (ಪರಿಹಾರಧನ ಪಡೆಯುವ) ನಿಮ್ಮ ಸರದಿ ಬಂದಾಗ, ಯಾರ ಪತ್ನಿಯರು ಬಿಟ್ಟು ಹೋಗಿದ್ದಾರೋ ಅವರು (ಆ ಪತ್ನಿಯರಿಗೆ) ವೆಚ್ಚ ಮಾಡಿದುದಕ್ಕೆ ಸಮವಾದುದನ್ನು ನೀವು ಅವರಿಗೆ ನೀಡಿರಿ.[461] ನೀವು ನಂಬುವ ಅಲ್ಲಾಹನಿಗೆ ನೀವು ಭಯಪಡಿರಿ.

وَإِن فَاتَكُمْ شَيْءٌ مِّنْ أَزْوَاجِكُمْ إِلَى الْكُفَّارِ فَعَاقَبْتُمْ فَآتُوا الَّذِينَ ذَهَبَتْ أَزْوَاجُهُم مِّثْلَ مَا أَنفَقُوا ۚ وَاتَّقُوا اللَّهَ الَّذِي أَنتُم بِهِ مُؤْمِنُونَ ﴿١٢﴾

**13.** ಎಲ್ಲೈ ಪ್ರವಾದಿ, ಸತ್ಯ ವಿಶ್ವಾಸಿನಿಯರು ನಿನ್ನ ಬಳಿಗೆ ಬಂದು, ತಾವು ಅಲ್ಲಾಹನಿಗೆ ಸಹಭಾಗಿತ್ವವನ್ನು ಕಲ್ಪಿಸಲಾರೆವು, ಕದಿಯಲಾರೆವು, ವ್ಯಭಿಚರಿಸಲಾರೆವು,

يَا أَيُّهَا النَّبِيُّ إِذَا جَاءَكَ الْمُؤْمِنَاتُ يُبَايِعْنَكَ عَلَىٰ أَن لَّا يُشْرِكْنَ بِاللَّهِ

461. ಈ ಆಜ್ಞೆ ಇಸ್ಲಾಮಿಕ ಆಡಳಿತೆಗೆ. ಸರಕಾರ ಪರಿಹಾರ ಧನ ನೀಡಬೇಕೆಂದು ತಾತ್ಪರ್ಯ.

شَيْـًٔا وَّلَا يَسْرِقْنَ وَلَا يَزْنِيْنَ وَلَا
يَقْتُلْنَ اَوْلَادَهُنَّ وَلَا يَاْتِيْنَ
بِبُهْتَانٍ يَّفْتَرِيْنَهٗ بَيْنَ اَيْدِيْهِنَّ وَ
اَرْجُلِهِنَّ وَلَا يَعْصِيْنَكَ فِيْ مَعْرُوْفٍ
فَبَايِعْهُنَّ وَاسْتَغْفِرْ لَهُنَّ اللّٰهَ ۗ اِنَّ
اللّٰهَ غَفُوْرٌ رَّحِيْمٌ ﴿١٢﴾

**ತಮ್ಮ ಸಂತಾನಗಳನ್ನು ಕೊಲ್ಲಲಾರೆವು, ಉದ್ದೇಶ ಪೂರ್ವಕವಾಗಿ ಸುಳ್ಳಾರೋಪವನ್ನು ಹೊರಿಸಲಾರೆವು ಮತ್ತು ಯಥೋಚಿತವಾದ ಯಾವುದೇ ವಿಚಾರದಲ್ಲಿ ನಿನಗೆ ಅವಿಧೇಯತೆ ತೋರಿಸಲಾರೆವು ಎಂಬ ನಿಬಂಧನೆಗಳೊಂದಿಗೆ ನಿನ್ನೊಡನೆ ಬೈಅತ್** (ಅನುಸರಣೆಯ ಪ್ರತಿಜ್ಞೆ) **ಮಾಡಲು ಬಯಸಿದರೆ, ನೀನು ಅವರ ಅನುಸರಣೆಯ ಪ್ರತಿಜ್ಞೆಯನ್ನು ಸ್ವೀಕರಿಸು ಹಾಗೂ ಅವರ ಪಾಪವಿಮುಕ್ತಿಗೋಸ್ಕರ ಪ್ರಾರ್ಥಿಸು. ಖಂಡಿತ ವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

يٰٓاَيُّهَا الَّذِيْنَ اٰمَنُوْا لَا تَتَوَلَّوْا قَوْمًا
غَضِبَ اللّٰهُ عَلَيْهِمْ قَدْ يَئِسُوْا مِنَ
الْاٰخِرَةِ كَمَا يَئِسَ الْكُفَّارُ مِنْ اَصْحٰبِ
الْقُبُوْرِ ﴿١٣﴾

**14. ಎಲೈ ವಿಶ್ವಾಸಿಗಳೇ, ಅಲ್ಲಾಹನ ಕ್ರೋಧಕ್ಕೆ ಪಾತ್ರವಾಗಿರುವ ಒಂದು ಜನತೆಯೊಂದಿಗೆ ನೀವು ಗೆಳೆತನ ಬೆಳೆಸಬೇಡಿರಿ. ಗೋರಿಗಳಲ್ಲಿ ಬಿದ್ದವರ ಬಗ್ಗೆ ಅವಿಶ್ವಾಸಿಗಳು ನಿರಾಶೆ ಹೊಂದಿರುವ ಪ್ರಕಾರ ಅವರು ಪರಲೋಕದ ಕುರಿತು ನಿರಾಶೆ ಹೊಂದಿದ್ದಾರೆ.**

سُوْرَةُ الصَّفِّ مَدَنِيَّةٌ وَّهِيَ مَعَ الْبَسْمَلَةِ خَمْسَ عَشْرَةَ اٰيَةً وَّرُكُوْعَانِ

# 61. ಅಸ್ಸಫ್ಫ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 15 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

2. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಪರಿಶುದ್ಧತೆಯನ್ನು ಪ್ರಕೀರ್ತನೆ ಮಾಡುತ್ತವೆ. ಅವನು ಪ್ರತಾಪವಂತನೂ ವಿವೇಕ ಶಾಲಿಯೂ ಆಗಿದ್ದಾನೆ.

سَبَّحَ لِلّٰهِ مَا فِي السَّمٰوٰتِ وَمَا فِي الْاَرْضِ ۚ وَهُوَ الْعَزِيْزُ الْحَكِيْمُ ②

3. ಎಲೈ ಸತ್ಯ ವಿಶ್ವಾಸಿಗಳೇ, ನೀವು ಮಾಡದಿರುವುದನ್ನು ನೀವೇಕೆ ಹೇಳುವಿರಿ?

يٰٓاَيُّهَا الَّذِيْنَ اٰمَنُوْا لِمَ تَقُوْلُوْنَ مَا لَا تَفْعَلُوْنَ ③

4. ನೀವು ಮಾಡದಿರುವುದನ್ನು ಹೇಳುವುದು ಅಲ್ಲಾಹನ ದೃಷ್ಟಿಯಲ್ಲಿ ಅತಿ ಅನಿಷ್ಟಕರವಾಗಿದೆ.

كَبُرَ مَقْتًا عِنْدَ اللّٰهِ اَنْ تَقُوْلُوْا مَا لَا تَفْعَلُوْنَ ④

5. ಎರಕ ಹೊಯ್ದ ಸೀಸದಿಂದ ಭದ್ರಪಡಿಸಲಾದ ಗೋಡೆಯಂತೆ ಪಂಕ್ತಿಬದ್ಧರಾಗಿ ಅವನ (ಅಲ್ಲಾಹನ) ಮಾರ್ಗದಲ್ಲಿ ಹೋರಾಡುವವರನ್ನು ಅಲ್ಲಾಹನು ಖಂಡಿತವಾಗಿಯೂ ಪ್ರೀತಿಸುತ್ತಾನೆ.

اِنَّ اللّٰهَ يُحِبُّ الَّذِيْنَ يُقَاتِلُوْنَ فِيْ سَبِيْلِهٖ صَفًّا كَاَنَّهُمْ بُنْيَانٌ مَّرْصُوْصٌ ⑤

6. ಮೂಸಾ ತನ್ನ ಜನತೆಯೊಡನೆ ಹೇಳಿದ ಸಂದರ್ಭ (ಜ್ಞಾಪಿಸು): 'ಎಲೈ ನನ್ನ ಜನರೇ, ನೀವೇಕೆ ನನ್ನನ್ನು ಪೀಡಿಸುತ್ತೀರಿ? ನಾನು ನಿಮ್ಮ ಬಳಿಗೆ (ನಿಯೋಜಿಸಲ್ಪಟ್ಟ) ಅಲ್ಲಾಹನ ಸಂದೇಶವಾಹಕನೆಂದು ನಿಮಗೆ ಗೊತ್ತಿದೆ.' ಹಾಗೆ ಅವರು ವಕ್ರಮಾರ್ಗವನ್ನವಲಂಬಿಸಿದಾಗ ಅಲ್ಲಾಹನು ಅವರ ಹೃದಯಗಳನ್ನು ವಕ್ರಗೊಳಿಸಿದನು. ಧಿಕ್ಕಾರಿಗಳಾದ ಜನರನ್ನು ಅಲ್ಲಾಹನು ಸತ್ಪಥದಲ್ಲಿ ನಡೆಸುವುದಿಲ್ಲ.

وَاِذْ قَالَ مُوْسٰى لِقَوْمِهٖ يٰقَوْمِ لِمَ تُؤْذُوْنَنِيْ وَقَدْ تَّعْلَمُوْنَ اَنِّيْ رَسُوْلُ اللّٰهِ اِلَيْكُمْ ۗ فَلَمَّا زَاغُوْٓا اَزَاغَ اللّٰهُ قُلُوْبَهُمْ ۗ وَاللّٰهُ لَا يَهْدِي الْقَوْمَ الْفٰسِقِيْنَ ⑥





7. ಮರ್ಯಮರ ಪುತ್ರ ಈಸಾ ಹೇಳಿದ ಸಂದರ್ಭವನ್ನೂ (ಜ್ಞಾಪಿಸು): 'ಎಲೈ ಇಸ್ರಾಈಲ್ ಸಂತತಿಗಳೇ, ನನ್ನ ಮುಂದೆ ಇರುವ ತೌರಾತನ್ನು ಸತ್ಯಪಡಿಸುವವನಾಗಿಯೂ ನನ್ನ ಅನಂತರ ಆಗಮಿಸುವ ಅಹ್ಮದ್ ಎಂಬ ಹೆಸರಿನ ಓರ್ವ ಸಂದೇಶವಾಹಕನ ಬಗ್ಗೆ ಶುಭವಾರ್ತೆಯನ್ನು ನೀಡುವವನಾಗಿಯೂ ನಾನು ನಿಮ್ಮ ಬಳಿಗೆ (ನಿಯೋಜಿಸಲ್ಪಟ್ಟ) ಅಲ್ಲಾಹನ ಸಂದೇಶವಾಹಕನಾಗಿದ್ದೇನೆ.' ಹಾಗೆ ಅವರು ಅವರ ಬಳಿಗೆ ಸ್ಪಷ್ಟವಾದ ಸಾಕ್ಷ್ಯಾಧಾರ ಸಹಿತ ಬಂದಾಗ, 'ಇದು ಸ್ಪಷ್ಟವಾದ ಮೋಸಗಾರಿಕೆಯಾಗಿದೆ' ಎಂದು ಅವರು ಹೇಳಿದರು.

وَاِذْ قَالَ عِيْسَى ابْنُ مَرْيَمَ يٰبَنِيْٓ اِسْرَاۤءِيْلَ اِنِّيْ رَسُوْلُ اللّٰهِ اِلَيْكُمْ مُّصَدِّقًا لِّمَا بَيْنَ يَدَيَّ مِنَ التَّوْرٰىةِ وَمُبَشِّرًاۢ بِرَسُوْلٍ يَّاْتِيْ مِنْۢ بَعْدِي اسْمُهٗٓ اَحْمَدُ ۗ فَلَمَّا جَاۤءَهُمْ بِالْبَيِّنٰتِ قَالُوْا هٰذَا سِحْرٌ مُّبِيْنٌ ⑦

8. ತಾನು ಇಸ್ಲಾಮಿನೆಡೆಗೆ ಆಹ್ವಾನಿಸಲ್ಪಡುತ್ತಿರುವಾಗ, ಅಲ್ಲಾಹನ ಮೇಲೆ ಸುಳ್ಳು ಸೃಷ್ಟಿಸಿ ಮಾಡಿ ಹೇಳುವವನಿಗಿಂತ ದೊಡ್ಡ ದುಷ್ಕರ್ಮಿ ಬೇರೆ ಯಾರು? ದುಷ್ಕರ್ಮಿಗಳಾದ ಜನರಿಗೆ ಅಲ್ಲಾಹನು ಮಾರ್ಗದರ್ಶನ ನೀಡುವುದಿಲ್ಲ.

وَمَنْ اَظْلَمُ مِمَّنِ افْتَرٰى عَلَى اللّٰهِ الْكَذِبَ وَهُوَ يُدْعٰٓى اِلَى الْاِسْلَامِ ۗ وَاللّٰهُ لَا يَهْدِى الْقَوْمَ الظّٰلِمِيْنَ ⑧

9. ತಮ್ಮ ಬಾಯಿಗಳಿಂದ (ಊದಿ) ಅಲ್ಲಾಹನ ಪ್ರಕಾಶವನ್ನು ನಂದಿಸಲು ಅವರು ಬಯಸುತ್ತಾರೆ. ಆದರೆ ಅವಿಶ್ವಾಸಿಗಳಿಗೆ ಅದೆಷ್ಟು ಅಪ್ರಿಯವಾದರೂ ಅಲ್ಲಾಹನು ತನ್ನ ಪ್ರಕಾಶವನ್ನು ಪರಿಪೂರ್ಣಗೊಳಿಸುವನು.

يُرِيْدُوْنَ لِيُطْفِـُٔوْا نُوْرَ اللّٰهِ بِاَفْوَاهِهِمْ وَاللّٰهُ مُتِمُّ نُوْرِهٖ وَلَوْ كَرِهَ الْكٰفِرُوْنَ ⑨

10. ಎಲ್ಲ ಧರ್ಮಗಳ ಮೇಲೆ ವಿಜಯ ಸಾಧಿಸಲಿಕ್ಕಾಗಿ ಅವನು ತನ್ನ ಸಂದೇಶವಾಹಕನನ್ನು ಸತ್ಪಥದರ್ಶನ ಮತ್ತು ಸತ್ಯಧರ್ಮದೊಂದಿಗೆ ನಿಯೋಜಿಸಿದ್ದಾನೆ. ಬಹುದೇವಾರಾಧಕರು ಅದನ್ನು ದ್ವೇಷಿಸಿದರೂ ಸರಿ.

هُوَ الَّذِيْٓ اَرْسَلَ رَسُوْلَهٗ بِالْهُدٰى وَدِيْنِ الْحَقِّ لِيُظْهِرَهٗ عَلَى الدِّيْنِ كُلِّهٖ وَلَوْ كَرِهَ الْمُشْرِكُوْنَ ⑩

11. ಎಲೈ ವಿಶ್ವಾಸಿಗಳೇ, ಯಾತನಾಮಯವಾದ ಶಿಕ್ಷೆಯಿಂದ ನಿಮ್ಮನ್ನು ಪಾರು ಮಾಡುವ ಒಂದು ವ್ಯಾಪಾರದ ಕುರಿತು ನಾನು ನಿಮಗೆ ತಿಳಿಯಪಡಿಸಲೇ?

يٰٓاَيُّهَا الَّذِيْنَ اٰمَنُوْا هَلْ اَدُلُّكُمْ عَلٰى تِجَارَةٍ تُنْجِيْكُمْ مِّنْ عَذَابٍ اَلِيْمٍ ⑪

12. (ಅದೇನೆಂದರೆ) ನೀವು ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನೂ ನಂಬಿರಿ ಹಾಗೂ ನಿಮ್ಮ ಸಂಪತ್ತಿನಿಂದಲೂ ದೇಹದಿಂದಲೂ ಅಲ್ಲಾಹನ

تُؤْمِنُوْنَ بِاللّٰهِ وَرَسُوْلِهٖ وَتُجَاهِدُوْنَ فِيْ سَبِيْلِ اللّٰهِ بِاَمْوَالِكُمْ وَاَنْفُسِكُمْ ۗ

ذٰلِكُمْ خَيْرٌ لَّكُمْ اِنْ كُنْتُمْ تَعْلَمُوْنَ ﴿١٢﴾

**ಮಾರ್ಗದಲ್ಲಿ ತೀವ್ರವಾಗಿ ಪರಿಶ್ರಮಿಸಿರಿ. ನೀವು ಮನಗಂಡರೆ ಅದು ನಿಮಗೆ ಗುಣಕರವಾಗಿದೆ.**

يَغْفِرْ لَكُمْ ذُنُوْبَكُمْ وَيُدْخِلْكُمْ جَنّٰتٍ
تَجْرِيْ مِنْ تَحْتِهَا الْاَنْهٰرُ وَمَسٰكِنَ
طَيِّبَةً فِيْ جَنّٰتِ عَدْنٍ ۚ ذٰلِكَ الْفَوْزُ
الْعَظِيْمُ ﴿١٣﴾

**13.** (ಹಾಗೆ ಮಾಡಿದರೆ) **ಅವನು ನಿಮ್ಮ ಪಾಪಗಳನ್ನು ಕ್ಷಮಿಸಿ ಬಿಡುವನು ಹಾಗೂ ಕೆಳಬದಿಯಲ್ಲಿ ಹೊಳೆಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಮತ್ತು ಶಾಶ್ವತ ವಾಸಕ್ಕಿರುವ ಸ್ವರ್ಗಗಳ ಪರಿಶುದ್ಧವಾದ ಭವನಗಳಲ್ಲಿ ನಿಮಗೆ ಪ್ರವೇಶ ನೀಡುವನು. ಅದೇ ಮಹತ್ವದ ವಿಜಯವು.**

وَاُخْرٰى تُحِبُّوْنَهَا ۚ نَصْرٌ مِّنَ اللّٰهِ وَفَتْحٌ
قَرِيْبٌ ۚ وَبَشِّرِ الْمُؤْمِنِيْنَ ﴿١٤﴾

**14. ನೀವು ಇಷ್ಟಪಡುವ ಬೇರೊಂದು ಅನುಗ್ರಹ ವನ್ನು ಸಹ ಅವನು ನಿಮಗೆ ದಯಪಾಲಿಸುವನು.** (ಅದೇನೆಂದರೆ) **ಅಲ್ಲಾಹನ ನೆರವು ಮತ್ತು ನಿಕಟವಾದ ವಿಜಯ.** (ಈ ಬಗ್ಗೆ) **ಸತ್ಯ ವಿಶ್ವಾಸಿಗಳಿಗೆ ಶುಭವಾರ್ತೆ ಅರುಹು.**

يٰۤاَيُّهَا الَّذِيْنَ اٰمَنُوْا كُوْنُوْۤا اَنْصَارَ اللّٰهِ
كَمَا قَالَ عِيْسَى ابْنُ مَرْيَمَ لِلْحَوَارِيّٖنَ
مَنْ اَنْصَارِيْۤ اِلَى اللّٰهِ ۚ قَالَ الْحَوَارِيُّوْنَ
نَحْنُ اَنْصَارُ اللّٰهِ فَاٰمَنَتْ طَّآئِفَةٌ مِّنْ
بَنِيْۤ اِسْرَآءِيْلَ وَكَفَرَتْ طَّآئِفَةٌ ۚ فَاَيَّدْنَا
الَّذِيْنَ اٰمَنُوْا عَلٰى عَدُوِّهِمْ فَاَصْبَحُوْا
ظٰهِرِيْنَ ﴿١٥﴾

**15. ಎಲೈ ಸತ್ಯ ವಿಶ್ವಾಸಿಗಳೇ, ನೀವು ಅಲ್ಲಾಹನ** (ಮಾರ್ಗದಲ್ಲಿ) **ಸಹಾಯಕರಾಗಿರಿ - ಮರ್ಯಮರ ಪುತ್ರ ಈಸಾ** (ತನ್ನ) **ಅನುಯಾಯಿಗಳೊಡನೆ, 'ಅಲ್ಲಾಹನ ಮಾರ್ಗದಲ್ಲಿ ನನಗೆ ಸಹಾಯ ನೀಡುವವರು ಯಾರು?' ಎಂದು ಕೇಳಿದಂತೆ. ಆಗ ಆ ಅನುಯಾಯಿಗಳು, 'ನಾವು ಅಲ್ಲಾಹನ** (ಮಾರ್ಗದಲ್ಲಿ) **ಸಹಾಯಕರಾಗಿದ್ದೇವೆ' ಎಂದು ಹೇಳಿದರು. ಹಾಗೆ ಇಸ್ರಾಈಲ್ ಸಂತತಿಗಳ ಪೈಕಿ ಒಂದು ಪಂಗಡದವರು ನಂಬಿದರು; ಇನ್ನೊಂದು ಪಂಗಡದವರು ನಂಬಲಿಲ್ಲ. ವಿಶ್ವಾಸಿಗಳಿಗೆ ಅವರ ಶತ್ರುಗಳ ವಿರುದ್ಧವಾಗಿ ನಾವು ಸಹಾಯ ನೀಡಿದೆವು. ಹಾಗೆ ಅವರು ವಿಜಯಿಗಳಾದರು.**

سُوْرَةُ الْجُمُعَةِ مَدَنِيَّةٌ وَّهِيَ مَعَ الْبَسْمَلَةِ اِثْنَتَا عَشْرَةَ اٰيَةً وَّرُكُوْعَانِ

# 62. ಅಲ್‌ಜುಮುಅಃ

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 12 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಸ್ತುತಿಗಾನ ಮಾಡುತ್ತವೆ.** (ಅವನು) **ಸಾರ್ವಭೌಮನೂ ಪರಿಶುದ್ಧನೂ ಪ್ರತಾಪಶಾಲಿಯೂ ವಿವೇಕವಂತನೂ ಆಗಿರುವನು.**

يُسَبِّحُ لِلّٰهِ مَا فِي السَّمٰوٰتِ وَمَا فِي الْاَرْضِ الْمَلِكِ الْقُدُّوْسِ الْعَزِيْزِ الْحَكِيْمِ ②

**3. ಅನಕ್ಷರಸ್ಥ ಜನರಲ್ಲಿ, ಅವರಿಂದಲೇ ಒಬ್ಬ ಸಂದೇಶವಾಹಕನನ್ನು ನಿಯುಕ್ತಿಗೊಳಿಸಿದವನು ಅವನೇ.** *ಆ ಸಂದೇಶವಾಹಕ* **ಅವನ** (ಅಲ್ಲಾಹನ) **ವಚನಗಳನ್ನು ಅವರಿಗೆ ವಾಚಿಸುತ್ತಾರೆ; ಅವರನ್ನು ಶುದ್ಧೀಕರಿಸುತ್ತಾರೆ ಹಾಗೂ ಅವರಿಗೆ ಗ್ರಂಥವನ್ನೂ ಜ್ಞಾನವನ್ನೂ ಕಲಿಸುತ್ತಾರೆ. ಮುಂಚೆಯಾದರೋ ಅವರು** (ಆ ಜನರು) **ಸ್ಪಷ್ಟವಾದ ತಪ್ಪು ಹಾದಿಯಲ್ಲಿದ್ದರು.**

هُوَ الَّذِيْ بَعَثَ فِي الْاُمِّيّٖنَ رَسُوْلًا مِّنْهُمْ يَتْلُوْا عَلَيْهِمْ اٰيٰتِهٖ وَيُزَكِّيْهِمْ وَيُعَلِّمُهُمُ الْكِتٰبَ وَالْحِكْمَةَ ۗ وَاِنْ كَانُوْا مِنْ قَبْلُ لَفِيْ ضَلٰلٍ مُّبِيْنٍ ③

**4. ಅವರೊಂದಿಗೆ ಇಷ್ಟರ ವರೆಗೆ ಸೇರಿಲ್ಲದ ಅವರ ಪೈಕಿಯ ಇನ್ನೊಂದು ಜನತೆಯಲ್ಲೂ.**[462] **ಅವನು ಪ್ರತಾಪಶಾಲಿಯೂ ವಿವೇಕವಂತನೂ ಆಗಿದ್ದಾನೆ.**

وَّاٰخَرِيْنَ مِنْهُمْ لَمَّا يَلْحَقُوْا بِهِمْ ۗ وَهُوَ الْعَزِيْزُ الْحَكِيْمُ ④

462. ಇದರ ವ್ಯಾಖ್ಯಾನವೆಂಬಂತೆ ಸಹೀಹ್ ಬುಖಾರಿ ಕಿತಾಬುತ್ತಫ್ಸೀರ್‌ನಲ್ಲಿ ಹೀಗೆ ಒಂದು ಹದೀಸ್ ಉಲ್ಲೇಖಿಸಲ್ಪಟ್ಟಿದೆ: "ಅಬೂಹುರೈರ(ರ) ವರದಿ ಮಾಡುತ್ತಾರೆ: ನಾವು ಮುಹಮ್ಮದ್ ಪೈಗಂಬರ್(ಸಲ್ಲಲ್ಲಾಹು ಅಲೈಹಿ ವಸಲ್ಲಂ)ರ ಸನ್ನಿಧಿಯಲ್ಲಿ ಕುಳಿತುಕೊಂಡಿದ್ದೆವು. ಆಗ 'ಸೂರತುಲ್‌ಜುಮುಅಃ' ಅವತೀರ್ಣವಾಗಲು ತೊಡಗಿತು. 'ವ ಆಖರೀನ ಮಿನ್‌ಹುಂ' ವರೆಗೆ ಪೈಗಂಬರ್(ಸ) ಪಠಿಸಿದರು. ನಾನು ಕೇಳಿದೆ: ಅಲ್ಲಾಹನ ಪ್ರವಾದಿಯವರೇ, ಅವರು ಯಾರು? ಪೈಗಂಬರ್(ಸ) ಮೊದಲು ಉತ್ತರವೇನೂ ಹೇಳಲಿಲ್ಲ. ಮೂರು ಸಲ ಪುನರಾವರ್ತಿಸಿ ಕೇಳಿದಾಗ ಪೈಗಂಬರ್(ಸ) ಅಲ್ಲೇ ಉಪಸ್ಥಿತರಿದ್ದ ಸಲ್ಮಾನುಲ್ ಫಾರಿಸಿ(ರ) ಅವರ ಮೇಲೆ ಕೈಯಿಟ್ಟುಕೊಂಡು ಹೀಗೆ ಉತ್ತರಿಸಿದರು: 'ಸತ್ಯವಿಶ್ವಾಸವು ಕಣ್ಮರೆಯಾಗಿ ಸುರಯ್ಯಾ(ಕೃತ್ತಿಕೆ) ನಕ್ಷತ್ರಕ್ಕೆ ಏರಿ ಹೋದರೂ ಇವರ (ಪರ್ಶಿಯನ್ ವಂಶಜ) ಪೈಕಿ ಓರ್ವ ವ್ಯಕ್ತಿ ಅಥವಾ ಕೆಲವು ವ್ಯಕ್ತಿಗಳು ಅದನ್ನು ಮರಳಿ ತರುವರು." ವಾಗ್ದತ್ತ ಮಹ್‌ದೀ ಮಸೀಹ್ ಆದ ಹಝ್ರತ್ ಅಹ್ಮದ್(ಅಲೈಹಿಸ್ಸಲಾಂ) ಈ ಭವಿಷ್ಯ ನುಡಿಯ ಈಡೇರಿಕೆಯಾಗಿದ್ದಾರೆ. ಅವರು ಪರ್ಶಿಯನ್ ವಂಶಜರು.





**5. ಅದು ಅಲ್ಲಾಹನ ಅನುಗ್ರಹವಾಗಿದೆ. ತಾನಿಚ್ಛಿಸುವವರಿಗೆ ಅವನು ಅದನ್ನು ದಯಪಾಲಿಸುತ್ತಾನೆ. ಅಲ್ಲಾಹನು ಅಪಾರವಾದ ಅನುಗ್ರಹದ ಒಡೆಯನಾಗಿದ್ದಾನೆ.**

ذٰلِكَ فَضْلُ اللّٰهِ يُؤْتِيْهِ مَنْ يَّشَآءُ ۗ وَاللّٰهُ ذُو الْفَضْلِ الْعَظِيْمِ ⑤

**6. ತೌರಾತ್ ಹೊರಿಸಲ್ಪಟ್ಟು ಅದನ್ನು** (ಸರಿಯಾಗಿ) **ಹೊರಲಾರದವರ ಸ್ಥಿತಿ, ಗ್ರಂಥಗಳನ್ನು ಹೊರುವ ಕತ್ತೆಯ ಸ್ಥಿತಿಯ ಹಾಗಿದೆ. ಅಲ್ಲಾಹನ ದೃಷ್ಟಾಂತಗಳನ್ನು ಸುಳ್ಳಾಗಿಸಿದ ಜನತೆಯ ಸ್ಥಿತಿ ಅದೆಷ್ಟು ನಿಕೃಷ್ಟ! ದುಷ್ಕರ್ಮಿಗಳಾದ ಜನರಿಗೆ ಅಲ್ಲಾಹನು ಮಾರ್ಗದರ್ಶನ ನೀಡುವುದಿಲ್ಲ.**

مَثَلُ الَّذِيْنَ حُمِّلُوا التَّوْرٰىةَ ثُمَّ لَمْ يَحْمِلُوْهَا كَمَثَلِ الْحِمَارِ يَحْمِلُ اَسْفَارًا ۗ بِئْسَ مَثَلُ الْقَوْمِ الَّذِيْنَ كَذَّبُوْا بِاٰيٰتِ اللّٰهِ ۗ وَاللّٰهُ لَا يَهْدِي الْقَوْمَ الظّٰلِمِيْنَ ⑥

**7. ಹೇಳು: 'ಎಲೈ ಯಹೂದ್ಯರೇ, ಬೇರೆ ಜನರಿಗಿಂತ ನೀವು ಅಲ್ಲಾಹನ ಮಿತ್ರತ್ವ ಹೊಂದಿರುವಿರೆಂದು ನೀವು ವಾದಿಸುತ್ತೀರಾದರೆ,** (ನಿಜವಾಗಿಯೂ) **ನೀವು ಸತ್ಯವಂತರೆಂದಾದರೆ ಮರಣವನ್ನು ಬಯಸಿರಿ'**[463].

قُلْ يٰۤاَيُّهَا الَّذِيْنَ هَادُوْۤا اِنْ زَعَمْتُمْ اَنَّكُمْ اَوْلِيَآءُ لِلّٰهِ مِنْ دُوْنِ النَّاسِ فَتَمَنَّوُا الْمَوْتَ اِنْ كُنْتُمْ صٰدِقِيْنَ ⑦

**8. ಆದರೆ ಅವರ ಪೂರ್ವ ಕೃತ್ಯಗಳ ಕಾರಣವಾಗಿ ಅವರು ಅದನ್ನು ಎಂದಿಗೂ ಬಯಸಲಾರರು. ಅಧರ್ಮಿಗಳ ಬಗ್ಗೆ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.**

وَلَا يَتَمَنَّوْنَهٗۤ اَبَدًا بِمَا قَدَّمَتْ اَيْدِيْهِمْ ۗ وَاللّٰهُ عَلِيْمٌۢ بِالظّٰلِمِيْنَ ⑧

**9. ಹೇಳು: 'ಯಾವ ಮರಣದಿಂದ ನೀವು ಓಡಿ ಹೋಗುತ್ತೀರೋ, ಖಂಡಿತವಾಗಿಯೂ ಅದು ನಿಮ್ಮನ್ನು ಸಂದಿಸುವುದು. ಅನಂತರ ಪರೋಕ್ಷ ಮತ್ತು ಪ್ರತ್ಯಕ್ಷವಾದ ಎಲ್ಲವನ್ನೂ ಬಲ್ಲವನ ಕಡೆಗೆ ನಿಮ್ಮನ್ನು ಹಿಂತಿರುಗಿಸಲಾಗುವುದು. ಆಗ ನಿಮ್ಮ ಕೃತ್ಯಗಳ ಕುರಿತು ಅವನು ನಿಮಗೆ ತಿಳಿಸುವನು.**

قُلْ اِنَّ الْمَوْتَ الَّذِيْ تَفِرُّوْنَ مِنْهُ فَاِنَّهٗ مُلٰقِيْكُمْ ثُمَّ تُرَدُّوْنَ اِلٰى عٰلِمِ الْغَيْبِ وَالشَّهَادَةِ فَيُنَبِّئُكُمْ بِمَا كُنْتُمْ تَعْمَلُوْنَ ⑨

**10. ಎಲೈ ಸತ್ಯ ವಿಶ್ವಾಸಿಗಳೇ, ಶುಕ್ರವಾರ ದಿನದಂದು ನಿಮ್ಮನ್ನು ಪ್ರಾರ್ಥನೆಗೆ ಕರೆಯಲಾದರೆ, ಅಲ್ಲಾಹನನ್ನು ಸ್ಮರಿಸಲಿಕ್ಕೋಸ್ಕರ ನೀವು ತ್ವರಿತವಾಗಿ ಹೋಗಿರಿ; ನಿಮ್ಮ ವ್ಯಾಪಾರ ವ್ಯವಹಾರವನ್ನೆಲ್ಲ ನಿಲ್ಲಿಸಿರಿ. ನೀವು ಮನವರಿಕೆ ಮಾಡಿದರೆ ಅದೇ ನಿಮಗೆ ಉತ್ತಮವಾದುದು.**

يٰۤاَيُّهَا الَّذِيْنَ اٰمَنُوْۤا اِذَا نُوْدِيَ لِلصَّلٰوةِ مِنْ يَّوْمِ الْجُمُعَةِ فَاسْعَوْا اِلٰى ذِكْرِ اللّٰهِ وَذَرُوا الْبَيْعَ ۗ ذٰلِكُمْ خَيْرٌ لَّكُمْ اِنْ كُنْتُمْ تَعْلَمُوْنَ ⑩

463. ಅಧ್ಯಾಯ 2 ವಚನ 95ರ ಟಿಪ್ಪಣಿ ನೋಡಿರಿ.

**11. ಪ್ರಾರ್ಥನೆ ಮುಗಿದ ಬಳಿಕ ನೀವು ಭೂಮಿಯಲ್ಲಿ ಚದುರಿ ಹೋಗಿ ಅಲ್ಲಾಹನ ಅನುಗ್ರಹವನ್ನು ಅರಸಿರಿ. ನೀವು ಯಶಸ್ಸುಗಳಿಸಲಿಕ್ಕೋಸ್ಕರ ಅಲ್ಲಾಹನ ಸ್ಮರಣೆಯನ್ನು ಹೆಚ್ಚಾಗಿ ಮಾಡಿರಿ.**

فَإِذَا قُضِيَتِ الصَّلٰوةُ فَانْتَشِرُوْا فِي
الْاَرْضِ وَابْتَغُوْا مِنْ فَضْلِ اللّٰهِ
وَاذْكُرُوا اللّٰهَ كَثِيْرًا لَّعَلَّكُمْ
تُفْلِحُوْنَ ﴿١١﴾

**12. ಯಾವುದಾದರೂ ವ್ಯಾಪಾರವನ್ನಾಗಲಿ ವಿನೋದವನ್ನಾಗಲಿ ಕಂಡರೆ ಅವರು** (ಕಪಟ ವಿಶ್ವಾಸಿಗಳು) **ಅದರೆಡೆಗೆ ಸೆಳೆಯಲ್ಪಟ್ಟು, ನಿನ್ನನ್ನು** (ಪ್ರವಚನಕ್ಕೆ) **ನಿಂತ ಸ್ಥಿತಿಯಲ್ಲೇ ಬಿಟ್ಟು ಹೋಗುವವರು. ಹೇಳು: 'ವಿನೋದ ಮತ್ತು ವ್ಯಾಪಾರಕ್ಕಿಂತ ಅಲ್ಲಾಹನ ಬಳಿಯಲ್ಲಿರುವುದು ಉತ್ತಮವಾದುದಾಗಿದೆ. ಅನ್ನದಾತರಲ್ಲಿ ಅಲ್ಲಾಹನು ಅತ್ಯುತ್ತಮನಾಗಿದ್ದಾನೆ.'**

وَإِذَا رَاَوْا تِجَارَةً اَوْ لَهْوًا ۨانْفَضُّوْٓا
اِلَيْهَا وَتَرَكُوْكَ قَآئِمًا ؕ قُلْ مَا عِنْدَ اللّٰهِ
خَيْرٌ مِّنَ اللَّهْوِ وَمِنَ التِّجَارَةِ ؕ وَاللّٰهُ
خَيْرُ الرّٰزِقِيْنَ ﴿١٢﴾ ع ٢ ١٢

سُوْرَةُ الْمُنٰفِقُوْنَ مَدَنِيَّةٌ وَّهِيَ مَعَ الْبَسْمَلَةِ اِثْنَتَا عَشَرَةَ اٰيَةً وَّرُكُوْعَانِ

# 63. ಅಲ್‌ಮುನಾಫಿಖೂನ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 12 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

بِسْمِ اللّٰهِ الرَّحْمٰنِ الرَّحِيْمِ ①

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

اِذَا جَآءَكَ الْمُنٰفِقُوْنَ قَالُوْا نَشْهَدُ اِنَّكَ لَرَسُوْلُ اللّٰهِ ۘ وَاللّٰهُ يَعْلَمُ اِنَّكَ لَرَسُوْلُهٗ ؕ وَاللّٰهُ يَشْهَدُ اِنَّ الْمُنٰفِقِيْنَ لَكٰذِبُوْنَ ②

**2.** ಕಪಟವಿಶ್ವಾಸಿಗಳು ನಿನ್ನ ಬಳಿಗೆ ಬರುವಾಗ 'ನೀವು ನಿಜವಾಗಿಯೂ ಅಲ್ಲಾಹನ ಸಂದೇಶವಾಹಕರೇ ಆಗಿದ್ದೀರೆಂದು ನಾವು ಸಾಕ್ಷ್ಯ ನೀಡುತ್ತೇವೆ' ಎಂದು ಹೇಳುತ್ತಾರೆ. ನೀನು ಅಲ್ಲಾಹನ ಸಂದೇಶವಾಹಕನೇ ಆಗಿರುವೆ ಎಂದು ಅಲ್ಲಾಹನಿಗೆ ಗೊತ್ತಿದೆ. ಆದರೆ ಕಪಟ ವಿಶ್ವಾಸಿಗಳು ಸುಳ್ಳು ಹೇಳುತ್ತಿದ್ದಾರೆಂದು ಅಲ್ಲಾಹನು ಸಾಕ್ಷ್ಯ ನೀಡುತ್ತಾನೆ.

اِتَّخَذُوْٓا اَيْمَانَهُمْ جُنَّةً فَصَدُّوْا عَنْ سَبِيْلِ اللّٰهِ ؕ اِنَّهُمْ سَآءَ مَا كَانُوْا يَعْمَلُوْنَ ③

**3.** ಅವರು ತಮ್ಮ ಪ್ರಮಾಣಗಳನ್ನು ಒಂದು ಗುರಾಣಿಯನ್ನಾಗಿ ಮಾಡಿಕೊಂಡಿರುವರು. ಹಾಗೆ ಅವರು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ. ನಿಶ್ಚಯವಾಗಿಯೂ ಅವರ ಕೃತ್ಯಗಳು ಬಲು ಕೆಟ್ಟದ್ದಾಗಿವೆ.

ذٰلِكَ بِاَنَّهُمْ اٰمَنُوْا ثُمَّ كَفَرُوْا فَطُبِعَ عَلٰى قُلُوْبِهِمْ فَهُمْ لَا يَفْقَهُوْنَ ④

**4.** ಅದು, ಅವರು ವಿಶ್ವಾಸ ಹೊಂದಿ ಅನಂತರ ಅವಿಶ್ವಾಸ ಹೊಂದಿದ ಕಾರಣದಿಂದಾಗಿದೆ. ಆದ್ದರಿಂದ ಅವರ ಹೃದಯಗಳಿಗೆ ಮುದ್ರೆ ಹಾಕಲಾಗಿದೆ. ತತ್ಫಲವಾಗಿ ಅವರು ಮನವರಿಕೆ ಮಾಡುವುದಿಲ್ಲ.

وَاِذَا رَاَيْتَهُمْ تُعْجِبُكَ اَجْسَامُهُمْ ؕ وَاِنْ يَّقُوْلُوْا تَسْمَعْ لِقَوْلِهِمْ ؕ كَاَنَّهُمْ خُشُبٌ مُّسَنَّدَةٌ ؕ يَحْسَبُوْنَ كُلَّ صَيْحَةٍ عَلَيْهِمْ ؕ هُمُ الْعَدُوُّ فَاحْذَرْهُمْ ؕ قٰتَلَهُمُ اللّٰهُ ؗ اَنّٰى يُؤْفَكُوْنَ ⑤

**5.** ನೀನು ಅವರನ್ನು ನೋಡುವಾಗ ಅವರ ದೇಹಾಕೃತಿಗಳು ನಿನ್ನನ್ನು ಕೌತುಕಗೊಳಿಸುತ್ತವೆ. ಅವರು ಮಾತನಾಡುವಾಗ ಅವರ ಮಾತನ್ನು ನೀನು ಆಲಿಸುವೆ. ಅವರು ಒಂದಕ್ಕೊಂದು ಆಸರೆಯಾಗಿಟ್ಟ ಒಣಮರದ ಕೊರಡುಗಳಂತೆ ಇದ್ದಾರೆ. ಪ್ರತಿಯೊಂದು ಕರೆಯೂ ತಮ್ಮ ವಿರುದ್ಧವೆಂದು ಅವರು ಭಾವಿಸುತ್ತಾರೆ. ಅವರು ಶತ್ರುಗಳೇ ಆಗಿದ್ದಾರೆ. ಆದ್ದರಿಂದ ಅವರ ಬಗ್ಗೆ ಜಾಗ್ರತೆ ವಹಿಸು. ಅಲ್ಲಾಹನ ಶಾಪ ಅವರ ಮೇಲಿರಲಿ. ಅವರು ಹೇಗೆ ಮಾರ್ಗಭ್ರಂಶರಾದರು!





وَاِذَا قِيْلَ لَهُمْ تَعَالَوْا يَسْتَغْفِرْ لَكُمْ رَسُوْلُ اللّٰهِ لَوَّوْا رُءُوْسَهُمْ وَرَاَيْتَهُمْ يَصُدُّوْنَ وَهُمْ مُّسْتَكْبِرُوْنَ ⑥

**6.** 'ಬನ್ನಿರಿ, ಅಲ್ಲಾಹನ ಸಂದೇಶವಾಹಕ ನಿಮ್ಮ ಪಾಪವಿಮುಕ್ತಿಗೋಸ್ಕರ ಪ್ರಾರ್ಥಿಸುವರು' ಎಂದು ಅವರೊಡನೆ ಹೇಳುವಾಗ ಅವರು ತಮ್ಮ ತಲೆಯನ್ನು ತಿರುಗಿಸುತ್ತಾರೆ. ಅವರು ಅಹಂಭಾವಿಗಳಾದುದರಿಂದ ಹಿಂತಿರುಗಿ ಹೋಗುವುದನ್ನು ನೀನು ಕಾಣುವೆ.

سَوَآءٌ عَلَيْهِمْ اَسْتَغْفَرْتَ لَهُمْ اَمْ لَمْ تَسْتَغْفِرْ لَهُمْ ؕ لَنْ يَّغْفِرَ اللّٰهُ لَهُمْ ؕ اِنَّ اللّٰهَ لَا يَهْدِى الْقَوْمَ الْفٰسِقِيْنَ ⑦

**7.** ನೀನು ಅವರಿಗೋಸ್ಕರ ಪಾಪವಿಮುಕ್ತಿಗಾಗಿ ಪ್ರಾರ್ಥಿಸಿದರೂ ಪ್ರಾರ್ಥಿಸದಿದ್ದರೂ ಅದು ಅವರಿಗೆ ಸಮವಾಗಿದೆ. ಅಲ್ಲಾಹನು ಅವರನ್ನು ಎಂದಿಗೂ ಕ್ಷಮಿಸಲಾರನು. ಧಿಕ್ಕಾರಿಗಳಾದ ಜನರಿಗೆ ಅಲ್ಲಾಹನು ಖಂಡಿತವಾಗಿಯೂ ಮಾರ್ಗದರ್ಶನ ನೀಡುವುದಿಲ್ಲ.

هُمُ الَّذِيْنَ يَقُوْلُوْنَ لَا تُنْفِقُوْا عَلٰى مَنْ عِنْدَ رَسُوْلِ اللّٰهِ حَتّٰى يَنْفَضُّوْا ؕ وَلِلّٰهِ خَزَآئِنُ السَّمٰوٰتِ وَالْاَرْضِ وَلٰكِنَّ الْمُنٰفِقِيْنَ لَا يَفْقَهُوْنَ ⑧

**8.** 'ಅಲ್ಲಾಹನ ಸಂದೇಶವಾಹಕನೊಂದಿಗೆ ಇರುವವರಿಗೋಸ್ಕರ ನೀವು ವೆಚ್ಚಮಾಡಬೇಡಿರಿ; ಹಾಗೆ ಅವರು ಬಿಟ್ಟುಹೋಗುವಂತಾಗಲಿ' ಎಂದು ಅವರು ಹೇಳುತ್ತಾರೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಖಜಾನೆಗಳು ಅಲ್ಲಾಹನಿಗೆ ಸೇರುತ್ತವೆ. ಆದರೆ ಕಪಟವಿಶ್ವಾಸಿಗಳು (ಅದನ್ನು) ಮನವರಿಕೆ ಮಾಡುವುದಿಲ್ಲ.

يَقُوْلُوْنَ لَئِنْ رَّجَعْنَآ اِلَى الْمَدِيْنَةِ لَيُخْرِجَنَّ الْاَعَزُّ مِنْهَا الْاَذَلَّ ؕ وَلِلّٰهِ الْعِزَّةُ وَلِرَسُوْلِهٖ وَلِلْمُؤْمِنِيْنَ وَلٰكِنَّ الْمُنٰفِقِيْنَ لَا يَعْلَمُوْنَ ⑨

**9.** 'ನಾವು ಮದೀನಕ್ಕೆ ಹಿಂತೆರಳಿದರೆ ಅತ್ಯಂತ ಮಹನೀಯ ವ್ಯಕ್ತಿಯೊಬ್ಬನು ಅತ್ಯಂತ ಹೀನನಾದ ಒಬ್ಬ ವ್ಯಕ್ತಿಯನ್ನು ಅಲ್ಲಿಂದ ಹೊರಕ್ಕಟ್ಟುವನು' ಎಂದು ಅವರು ಹೇಳುತ್ತಾರೆ.[464] (ನಿಜವಾದ) ಗೌರವವಾದರೋ ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ಸತ್ಯವಿಶ್ವಾಸಿಗಳಿಗೂ ಸಲ್ಲುತ್ತದೆ. ಆದರೆ ಕಪಟ ವಿಶ್ವಾಸಿಗಳು (ಅದನ್ನು) ತಿಳಿಯುವುದಿಲ್ಲ.

464. 'ಮುಸ್ತಲಖ್' ಯುದ್ಧದಲ್ಲಿ ಹಝ್ರತ್ ಪೈಗಂಬರ(ಸ)ರ ಜೊತೆಯಲ್ಲಿ ಸೇರಿಕೊಂಡಿದ್ದ ಕಪಟವಿಶ್ವಾಸಿಗಳಲ್ಲಿ ಅವರ ನಾಯಕ ಅಬ್ದುಲ್ಲಾಹಿಬ್ನು ಉಬಯ್ಯಿಬ್ನು ಸಲೂಲ್ ಎಂಬ ವ್ಯಕ್ತಿ ಮತ್ತು ಅವನ ಸಂಗಡಿಗರು ಪೈಗಂಬರರ ವಿರುದ್ಧವಾಗಿ ಆಡಿದ್ದ ಮಾತನ್ನು ಇಲ್ಲಿ ಸೂಚಿಸಲಾಗಿದೆ.

**10. ಎಲ್ಲೈ ಸತ್ಯ ವಿಶ್ವಾಸಿಗಳೇ, ನಿಮ್ಮ ಸಂಪತ್ತಾಗಲಿ ಸಂತಾನಗಳಾಗಲಿ ಅಲ್ಲಾಹನ ಸ್ಮರಣೆಯಿಂದ ನಿಮ್ಮನ್ನು ಪರಾಙ್ಮುಖಗೊಳಿಸದಿರಲಿ. ಯಾರಾದರೂ ಹಾಗೆ ಮಾಡಿದರೆ ಅವರು ನಷ್ಟ ಕ್ಕೀಡಾದವರೇ ಸರಿ.**

يَٰٓأَيُّهَا ٱلَّذِينَ ءَامَنُوا۟ لَا تُلْهِكُمْ أَمْوَٰلُكُمْ
وَلَآ أَوْلَٰدُكُمْ عَن ذِكْرِ ٱللَّهِ ۚ وَمَن يَفْعَلْ
ذَٰلِكَ فَأُو۟لَٰٓئِكَ هُمُ ٱلْخَٰسِرُونَ ﴿١٠﴾

**11.** (ಎಲ್ಲೈ ಸತ್ಯವಿಶ್ವಾಸಿಗಳೇ,) **ನಿಮ್ಮ ಪೈಕಿ ಯಾವನಿಗಾದರೂ ಮರಣ ಸನ್ನಿಹಿತವಾದಾಗ ಅವನು, 'ನನ್ನ ಪ್ರಭೂ, ಅಲ್ಪಕಾಲಕ್ಕಾದರೂ ನೀನು ನನಗೆ ಗಡುವು ನೀಡಿದರೆ ಎಷ್ಟು ಒಳ್ಳೆಯದಿತ್ತು; ಆಗ ನಾನು ದಾನಧರ್ಮ ನೀಡಿ ಸದ್ಧರ್ಮಿಗಳಲ್ಲಿ ಸೇರಬಲ್ಲೆ' ಎಂದು ಹೇಳುವ ಪರಿಸ್ಥಿತಿ ಬಂದೊದಗುವ ಮುಂಚಿತವಾಗಿ ನಾವು ನಿಮಗೆ ದಯಪಾಲಿಸಿದ ಸಂಪತ್ತಿನಿಂದ ವೆಚ್ಚಮಾಡಿರಿ.**

وَأَنفِقُوا۟ مِن مَّا رَزَقْنَٰكُم مِّن قَبْلِ أَن
يَأْتِىَ أَحَدَكُمُ ٱلْمَوْتُ فَيَقُولَ رَبِّ لَوْلَآ
أَخَّرْتَنِىٓ إِلَىٰٓ أَجَلٍ قَرِيبٍ فَأَصَّدَّقَ
وَأَكُن مِّنَ ٱلصَّٰلِحِينَ ﴿١١﴾

**12. ಯಾವುದೇ ಆತ್ಮದ ನಿಗದಿತ ಸಮಯ ಬಂದರೆ ಅಲ್ಲಾಹನು ಅದಕ್ಕೆ ಗಡುವು ನೀಡಲಾರನು. ನೀವು ಮಾಡುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ತಿಳಿಯುವವ ನಾಗಿದ್ದಾನೆ.**

وَلَن يُؤَخِّرَ ٱللَّهُ نَفْسًا إِذَا جَآءَ أَجَلُهَا ۚ
وَٱللَّهُ خَبِيرٌۢ بِمَا تَعْمَلُونَ ﴿١٢﴾ ع

سُوْرَةُ التَّغَابُنِ مَدَنِيَّةٌ وَّهِيَ مَعَ الْبَسْمَلَةِ تِسْعَ عَشَرَةَ اٰيَةً وَّرُكُوْعَانِ

# 64. ಅತ್ತಗಾಬುನ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 19 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ (١)

2. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನ ಪರಿಶುದ್ಧತೆಯನ್ನು ಕೊಂಡಾಡುತ್ತವೆ. ಆಧಿಪತ್ಯ ಅವನದ್ದಾಗಿದೆ. ಸ್ತುತಿಸ್ತೋತ್ರಗಳು ಅವನಿಗೆ ಸಲ್ಲುತ್ತವೆ. ಅವನು ಎಲ್ಲ ವಿಚಾರದಲ್ಲೂ ಸರ್ವ ಸಾಮರ್ಥ್ಯವಂತನಾಗಿದ್ದಾನೆ.

يُسَبِّحُ لِلّٰهِ مَا فِي السَّمٰوٰتِ وَمَا فِي الْاَرْضِ ۚ لَهُ الْمُلْكُ وَلَهُ الْحَمْدُ ۫ وَهُوَ عَلٰى كُلِّ شَيْءٍ قَدِيْرٌ (٢)

3. ನಿಮ್ಮನ್ನು ಸೃಷ್ಟಿಸಿದವನು ಅವನೇ. ನಿಮ್ಮಲ್ಲಿ ಕೆಲವರು ಅವಿಶ್ವಾಸಿಗಳಾಗುತ್ತಾರೆ; ಕೆಲವರು ವಿಶ್ವಾಸಿಗಳಾಗುತ್ತಾರೆ. ನಿಮ್ಮ ಕೃತ್ಯಗಳನ್ನೆಲ್ಲ ಅಲ್ಲಾಹನು ವೀಕ್ಷಿಸುತ್ತಾನೆ.

هُوَ الَّذِيْ خَلَقَكُمْ فَمِنْكُمْ كَافِرٌ وَّمِنْكُمْ مُّؤْمِنٌ ؕ وَاللّٰهُ بِمَا تَعْمَلُوْنَ بَصِيْرٌ (٣)

4. ಆಕಾಶಗಳನ್ನೂ ಭೂಮಿಯನ್ನೂ ಅವನು ಯಥೋಚಿತವಾಗಿ ಸೃಷ್ಟಿಸಿದನು. ಅವನು ನಿಮ್ಮನ್ನು ರೂಪಿಸಿ ನಿಮ್ಮ ರೂಪವನ್ನು ಸುಂದರಗೊಳಿಸಿದನು. ಅವನ ಬಳಿಗೆಯೇ ನಿಮ್ಮ ಮರಳಿಕೆಯಾಗಿದೆ.

خَلَقَ السَّمٰوٰتِ وَالْاَرْضَ بِالْحَقِّ وَصَوَّرَكُمْ فَاَحْسَنَ صُوَرَكُمْ ۚ وَاِلَيْهِ الْمَصِيْرُ (٤)

5. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವನ್ನೂ ಅವನು ಬಲ್ಲನು. ನೀವು ಮುಚ್ಚಿಡುವುದನ್ನೂ ಬಹಿರಂಗಪಡಿಸುವುದನ್ನೂ ಅವನು ತಿಳಿಯುತ್ತಾನೆ. ಹೃದಯಗಳಲ್ಲಿರುವುದನ್ನು ಸಹ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

يَعْلَمُ مَا فِي السَّمٰوٰتِ وَالْاَرْضِ وَيَعْلَمُ مَا تُسِرُّوْنَ وَمَا تُعْلِنُوْنَ ؕ وَاللّٰهُ عَلِيْمٌۢ بِذَاتِ الصُّدُوْرِ (٥)

6. ಮುಂಚೆ ಅವಿಶ್ವಾಸ ಹೊಂದಿದವರ ವಾರ್ತೆ ನಿಮಗೆ ತಲಪಲಿಲ್ಲವೇ? ತಮ್ಮ ಕೃತ್ಯದ ದುಷ್ಫಲವನ್ನು

اَلَمْ يَاْتِكُمْ نَبَؤُا الَّذِيْنَ كَفَرُوْا مِنْ





قَبْلُ ۫ فَذَاقُوْا وَبَالَ اَمْرِهِمْ وَلَهُمْ عَذَابٌ اَلِيْمٌ (٦)

ಅವರು ಅನುಭವಿಸಿದರು. ಅವರಿಗೆ ಯಾತನಾಮಯವಾದ ಶಿಕ್ಷೆಯೂ ಇದೆ.

ذٰلِكَ بِاَنَّهٗ كَانَتْ تَّاْتِيْهِمْ رُسُلُهُمْ بِالْبَيِّنٰتِ فَقَالُوْۤا اَبَشَرٌ يَّهْدُوْنَنَا ۫ فَكَفَرُوْا وَتَوَلَّوْا وَّاسْتَغْنَى اللّٰهُ ؕ وَاللّٰهُ غَنِيٌّ حَمِيْدٌ (٧)

7. ಅದಕ್ಕೆ ಕಾರಣವೇನೆಂದರೆ, ಅವರಿಗೆ ನಿಯೋಜಿಸಲ್ಪಟ್ಟ ಸಂದೇಶವಾಹಕರು ಅವರ ಬಳಿಗೆ ಸುಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಆಗಮಿಸಿದ್ದರು. ಆಗ ಅವರು, 'ಮರ್ತ್ಯರು ನಮಗೆ ಮಾರ್ಗದರ್ಶಕರೇ?' ಎಂದು ಉದ್ಗರಿಸಿದರು. ಅವರು ಅವಿಶ್ವಾಸ ಹೊಂದಿ ಬೆನ್ನು ತಿರುಗಿಸಿ ಹೋದರು. ಅಲ್ಲಾಹನಿಗೆ (ಅವರ) ಅಗತ್ಯವೇನೂ ಇರಲಿಲ್ಲ. ಅಲ್ಲಾಹನು ಸ್ವಯಂಪೂರ್ಣನೂ ಸ್ತುತ್ಯರ್ಹನೂ ಆಗಿದ್ದಾನೆ.

زَعَمَ الَّذِيْنَ كَفَرُوْۤا اَنْ لَّنْ يُّبْعَثُوْا ؕ قُلْ بَلٰى وَرَبِّيْ لَتُبْعَثُنَّ ثُمَّ لَتُنَبَّؤُنَّ بِمَا عَمِلْتُمْ ؕ وَذٰلِكَ عَلَى اللّٰهِ يَسِيْرٌ (٨)

8. ತಾವು ಎಂದಿಗೂ ಪುನರುತ್ಥಾನಗೊಳಿಸಲ್ಪಡಲಾರೆವೆಂದು ಅವಿಶ್ವಾಸಿಗಳು ಭಾವಿಸುತ್ತಾರೆ. ಹೇಳು: 'ಹಾಗಲ್ಲ; ನನ್ನ ಪ್ರಭುವಿನಾಣೆ, ನೀವು ಖಂಡಿತವಾಗಿಯೂ ಪುನರುತ್ಥಾನಗೊಳಿಸಲ್ಪಡುವಿರಿ. ಮತ್ತೆ ನಿಮ್ಮ ಕೃತ್ಯಗಳ ಬಗ್ಗೆ ನಿಮಗೆ ತಿಳಿಯಪಡಿಸಲಾಗುವುದು. ಅದು ಅಲ್ಲಾಹನಿಗೆ ಸುಲಭವಾದುದು.'

فَاٰمِنُوْا بِاللّٰهِ وَرَسُوْلِهٖ وَالنُّوْرِ الَّذِيْۤ اَنْزَلْنَا ؕ وَاللّٰهُ بِمَا تَعْمَلُوْنَ خَبِيْرٌ (٩)

9. ಆದ್ದರಿಂದ, ನೀವು ಅಲ್ಲಾಹನಲ್ಲೂ ಅವನ ಸಂದೇಶವಾಹಕನಲ್ಲೂ ನಾವು ಅವತೀರ್ಣಗೊಳಿಸಿದ ಪ್ರಕಾಶದಲ್ಲೂ ವಿಶ್ವಾಸವಿರಿಸಿರಿ. ನಿಮ್ಮ ಕೃತ್ಯಗಳನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

10. ಒಟ್ಟುಗೂಡಿಸುವ ದಿನದಂದು ಅವನು ನಿಮ್ಮನ್ನೆಲ್ಲ ಒಟ್ಟುಗೂಡಿಸುವನು. ಅದು ಜಯಾಪಜಯ ನಿರ್ಣಯದ ದಿನವಾಗಿರುವುದು. ಯಾವನು ಅಲ್ಲಾಹನಲ್ಲಿ ವಿಶ್ವಾಸವಿರಿಸುತ್ತಾನೋ ಹಾಗೂ ಸತ್ಕರ್ಮಗಳನ್ನು ಮಾಡುತ್ತಾನೋ, ಅವನ ಕೆಡುಕುಗಳನ್ನು ಅವನು (ಅಲ್ಲಾಹನು) ನಿವಾರಿಸಿ ಕೆಳಬದಿಯಲ್ಲಿ ಹೊಳೆಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಅವನಿಗೆ ಪ್ರವೇಶನೀಡುವನು. ಅಲ್ಲಿ ಅವರು ಶಾಶ್ವತವಾಗಿ ವಾಸಿಸುವರು. ಅದೇ ಮಹಾ ವಿಜಯವು.

يَوْمَ يَجْمَعُكُمْ لِيَوْمِ الْجَمْعِ ذٰلِكَ يَوْمُ التَّغَابُنِ ؕ وَمَنْ يُّؤْمِنْ بِاللّٰهِ وَيَعْمَلْ صَالِحًا يُّكَفِّرْ عَنْهُ سَيِّاٰتِهٖ وَيُدْخِلْهُ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَاۤ اَبَدًا ؕ ذٰلِكَ الْفَوْزُ الْعَظِيْمُ (١٠)

**11.** ಯಾರು ಅವಿಶ್ವಾಸ ಹೊಂದುತ್ತಾರೋ ಮತ್ತು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುತ್ತಾರೋ, ಅವರು ನರಕವಾಸಿಗಳು. ಅಲ್ಲಿ ಅವರು ದೀರ್ಘಕಾಲ ವಾಸಿಸುವರು. ಅದು ಬಲು ಕೆಟ್ಟ ಗಮ್ಯಸ್ಥಳವಾಗಿದೆ.

وَالَّذِينَ كَفَرُوا وَكَذَّبُوا بِآيَاتِنَا أُولَٰئِكَ أَصْحَابُ النَّارِ خَالِدِينَ فِيهَا ۖ وَبِئْسَ الْمَصِيرُ ﴿١١﴾

**12.** ಅಲ್ಲಾಹನ ಅನುಮತಿ ವಿನಾ ಯಾವುದೇ ಆಪತ್ತು (ಯಾರಿಗೂ) ಬಂದೆರಗುವುದಿಲ್ಲ. ಯಾವನು ಅಲ್ಲಾಹನಲ್ಲಿ ನಂಬಿಕೆಯಿಡುತ್ತಾನೋ, ಅವನ ಹೃದಯಕ್ಕೆ ಅವನು (ಅಲ್ಲಾಹನು) ಸತ್ಪಥದರ್ಶನ ನೀಡುತ್ತಾನೆ. ಅಲ್ಲಾಹನು ಎಲ್ಲ ವಿಚಾರಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ.

مَا أَصَابَ مِن مُّصِيبَةٍ إِلَّا بِإِذْنِ اللَّهِ ۗ وَمَن يُؤْمِن بِاللَّهِ يَهْدِ قَلْبَهُ ۚ وَاللَّهُ بِكُلِّ شَيْءٍ عَلِيمٌ ﴿١٢﴾

**13.** ಅಲ್ಲಾಹನಿಗೂ ಪ್ರವಾದಿಗೂ ವಿಧೇಯರಾಗಿರಿ. ಆದರೆ ನೀವು ಪರಾಙ್ಮುಖರಾದರೆ (ತಿಳಿದುಕೊಳ್ಳಿರಿ) ಸ್ಪಷ್ಟವಾದ ರೀತಿಯಲ್ಲಿ ಸಂದೇಶವನ್ನು ತಲುಪಿಸುವುದು ಮಾತ್ರವೇ ನಮ್ಮ ಸಂದೇಶವಾಹಕನ ಹೊಣೆ.

وَأَطِيعُوا اللَّهَ وَأَطِيعُوا الرَّسُولَ ۚ فَإِن تَوَلَّيْتُمْ فَإِنَّمَا عَلَىٰ رَسُولِنَا الْبَلَاغُ الْمُبِينُ ﴿١٣﴾

**14.** ಅಲ್ಲಾಹ್ - ಅವನ ಹೊರತು ಬೇರೆ ಆರಾಧ್ಯನಿಲ್ಲ. ಆದ್ದರಿಂದ ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆ ತಮ್ಮ ಭರವಸೆಯನ್ನಿಡಲಿ.

اللَّهُ لَا إِلَٰهَ إِلَّا هُوَ ۚ وَعَلَى اللَّهِ فَلْيَتَوَكَّلِ الْمُؤْمِنُونَ ﴿١٤﴾

**15.** ಎಲೈ ವಿಶ್ವಾಸಿಗಳೇ, ಖಂಡಿತವಾಗಿಯೂ ನಿಮ್ಮ ಪತ್ನಿಯರಲ್ಲೂ ನಿಮ್ಮ ಮಕ್ಕಳಲ್ಲೂ ನಿಮಗೆ ಕೆಲವು ಶತ್ರುಗಳಿದ್ದಾರೆ. ಆದ್ದರಿಂದ ಅವರ ಬಗ್ಗೆ ಜಾಗ್ರತೆ ವಹಿಸಿರಿ. ಆದರೆ ನೀವು ಮನ್ನಿಸಿ, (ದಂಡಿಸದೆ) ಕಡೆಗಣಿಸಿ ಕ್ಷಮೆ ನೀಡಿದರೆ (ತಿಳಿದುಕೊಳ್ಳಿರಿ) ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.

يَا أَيُّهَا الَّذِينَ آمَنُوا إِنَّ مِنْ أَزْوَاجِكُمْ وَأَوْلَادِكُمْ عَدُوًّا لَّكُمْ فَاحْذَرُوهُمْ ۚ وَإِن تَعْفُوا وَتَصْفَحُوا وَتَغْفِرُوا فَإِنَّ اللَّهَ غَفُورٌ رَّحِيمٌ ﴿١٥﴾

**16.** ನಿಶ್ಚಯವಾಗಿಯೂ ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತಾನಗಳು ನಿಮಗೆ ಪರೀಕ್ಷಾ ಸಾಧನಗಳಾಗಿವೆ. ಆದರೆ ಅಪಾರವಾದ ಪ್ರತಿಫಲ ಅಲ್ಲಾಹನ ಬಳಿಯಲ್ಲೇ ಇದೆ.

إِنَّمَا أَمْوَالُكُمْ وَأَوْلَادُكُمْ فِتْنَةٌ ۚ وَاللَّهُ عِندَهُ أَجْرٌ عَظِيمٌ ﴿١٦﴾





**17.** ಆದ್ದರಿಂದ ನೀವು ಅಲ್ಲಾಹನಿಗೆ ಅತಿಹೆಚ್ಚು ಭಯಪಡಿರಿ. ಗಮನಿಸಿ ಕೇಳಿರಿ; ಅನುಸರಿಸಿರಿ ಮತ್ತು (ಅವನ ಮಾರ್ಗದಲ್ಲಿ) ವೆಚ್ಚಮಾಡಿರಿ. ಅದು ನಿಮಗೆಯೇ ಗುಣಕರವಾಗಿದೆ. ತಮ್ಮ ಮನಸ್ಸಿನ ಲೋಭಿತ್ವದಿಂದ ಯಾರು ಪಾರಾಗುತ್ತಾರೋ ಅವರೇ ಜಯಶಾಲಿಗಳು.

فَاتَّقُوا اللَّهَ مَا اسْتَطَعْتُمْ وَاسْمَعُوا وَأَطِيعُوا وَأَنفِقُوا خَيْرًا لِّأَنفُسِكُمْ ۗ وَمَن يُوقَ شُحَّ نَفْسِهِ فَأُولَٰئِكَ هُمُ الْمُفْلِحُونَ ﴿١٧﴾

**18.** ನೀವು ಅಲ್ಲಾಹನಿಗೆ ಉತ್ತಮವಾದ ರೀತಿಯಲ್ಲಿ ಸಾಲ ನೀಡಿದರೆ, ಅವನು ಅದನ್ನು ನಿಮಗೆ ವೃದ್ಧಿಗೊಳಿಸಿ ಹಿಂತಿರುಗಿಸುವನು. ಅಲ್ಲಾಹನು (ತನ್ನ ದಾಸರ ಸತ್ಕರ್ಮಗಳನ್ನು) ಅತಿ ಹೆಚ್ಚು ಮೆಚ್ಚುವವನೂ ಸೈರಿಸುವವನೂ ಆಗಿದ್ದಾನೆ.

إِن تُقْرِضُوا اللَّهَ قَرْضًا حَسَنًا يُضَاعِفْهُ لَكُمْ وَيَغْفِرْ لَكُمْ ۚ وَاللَّهُ شَكُورٌ حَلِيمٌ ﴿١٨﴾

**19.** (ಅವನು) ಪರೋಕ್ಷ ಮತ್ತು ಪ್ರತ್ಯಕ್ಷವಾದ ಎಲ್ಲವನ್ನೂ ಬಲ್ಲವನಾಗಿದ್ದಾನೆ; ಪ್ರತಾಪವಂತ, ವಿವೇಕಶಾಲಿ.

عَالِمُ الْغَيْبِ وَالشَّهَادَةِ الْعَزِيزُ الْحَكِيمُ ﴿١٩﴾

سُوْرَةُ الطَّلَاقِ مَدَنِيَّةٌ وَّهِيَ مَعَ الْبَسْمَلَةِ ثَلٰثَ عَشْرَةَ اٰيَةً وَّرُكُوْعَانِ

## 65. ಅತ್ತಲಾಖ್

ಮದೀನದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 13 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಎಲೈ ಪ್ರವಾದಿ**[465] **ನೀವು ಸ್ತ್ರೀಯರ ವಿವಾಹ ವಿಚ್ಛೇದನ ಮಾಡುವಾಗ ಅವರ 'ಇದ್ದತ್'** (ನಿಶ್ಚಿತ ಕಾಲಾವಧಿ) **ಸಮಯವನ್ನನುಸರಿಸಿ ವಿವಾಹ ವಿಚ್ಛೇದನ ಮಾಡಿರಿ ಹಾಗೂ ಇದ್ದತನ್ನು ಲೆಕ್ಕಹಾಕಿರಿ, ನಿಮ್ಮ ಪ್ರಭು ವಾದ ಅಲ್ಲಾಹನಿಗೆ ಭಯಪಡಿರಿ. ಅವರ ಮನೆಗಳಿಂದ ನೀವು ಅವರನ್ನು ಹೊರಕ್ಕಟ್ಟಬಾರದು. ಅವರು ಸ್ವಯಂ ಹೊರಟು ಹೋಗುವುದಿಲ್ಲ - ಸ್ಪಷ್ಟವಾದ ಕೆಟ್ಟ ಕೆಲಸ ಮಾಡಿಕೊಂಡಲ್ಲದೆ.**[466] **ಇವೆಲ್ಲ ಅಲ್ಲಾಹನು ನಿಶ್ಚಯಿಸಿದ ಹದ್ದುಬಸ್ತುಗಳಾಗಿವೆ. ಯಾವನು ಅಲ್ಲಾಹನು ನಿಶ್ಚಯಿಸಿದ ಹದ್ದುಬಸ್ತುಗಳನ್ನು ಮೀರುತ್ತಾನೋ ಅವನು ತನ್ನ ಆತ್ಮಕ್ಕೆ ಹಾನಿ ಎಸಗುತ್ತಾನೆ. ನಿನಗೆ ತಿಳಿಯದು, ಅನಂತರ ಅಲ್ಲಾಹನು ಹೊಸತಾದ ಏನಾದರೂ ಸಂಭವಿಸುವಂತೆ ಮಾಡಲೂಬಹುದು.**

يٰٓاَيُّهَا النَّبِيُّ اِذَا طَلَّقْتُمُ النِّسَآءَ
فَطَلِّقُوْهُنَّ لِعِدَّتِهِنَّ وَاَحْصُوا الْعِدَّةَ ۚ
وَاتَّقُوا اللّٰهَ رَبَّكُمْ ۚ لَا تُخْرِجُوْهُنَّ مِنْۢ
بُيُوْتِهِنَّ وَلَا يَخْرُجْنَ اِلَّآ اَنْ يَّاْتِيْنَ
بِفَاحِشَةٍ مُّبَيِّنَةٍ ۗ وَتِلْكَ حُدُوْدُ اللّٰهِ ۗ
وَمَنْ يَّتَعَدَّ حُدُوْدَ اللّٰهِ فَقَدْ ظَلَمَ
نَفْسَهٗ ۗ لَا تَدْرِيْ لَعَلَّ اللّٰهَ يُحْدِثُ
بَعْدَ ذٰلِكَ اَمْرًا ①

**3. ಹಾಗೆ ಅವರ ಗಡುವು** (ನಿಶ್ಚಿತ ಕಾಲಾವಧಿ) **ಸಮೀಪಿಸಿದರೆ ಒಳ್ಳೆಯ ರೀತಿಯಲ್ಲಿ ಅವರನ್ನು ತಮ್ಮೊಂದಿಗೆ ಇರಿಸಿಕೊಳ್ಳಿರಿ; ಅಥವಾ ಒಳ್ಳೆಯ ರೀತಿಯಲ್ಲಿ ಅವರಿಂದ ಅಗಲಿರಿ. ಹಾಗೂ ನಿಮ್ಮ ಪೈಕಿಯ ಇಬ್ಬರು ನೀತಿವಂತರನ್ನು ಸಾಕ್ಷಿಗಳನ್ನಾಗಿ ಮಾಡಿರಿ.** (ಎಲೈ ಸಾಕ್ಷಿಗಳೇ,) **ನೀವು ಅಲ್ಲಾಹನಿಗೋಸ್ಕರ ಸಾಕ್ಷ್ಯನೀಡಿರಿ.**

فَاِذَا بَلَغْنَ اَجَلَهُنَّ فَاَمْسِكُوْهُنَّ
بِمَعْرُوْفٍ اَوْ فَارِقُوْهُنَّ بِمَعْرُوْفٍ وَّ
اَشْهِدُوْا ذَوَيْ عَدْلٍ مِّنْكُمْ وَاَقِيْمُوا
الشَّهَادَةَ لِلّٰهِ ۗ ذٰلِكُمْ يُوْعَظُ بِهٖ مَنْ كَانَ

465. ಇಲ್ಲಿ ಪ್ರವಾದಿಯನ್ನು ಸಂಬೋಧಿಸಲಾಗಿದ್ದರೂ ಪ್ರವಾದಿಯ ಅನುಯಾಯಿಗಳನ್ನು ಉದ್ದೇಶಿಸಿ ಹೇಳಲಾಗಿದೆ. ನಂತರದ 'ನೀವು' ಎಂಬ ಬಹುವಚನ ಪ್ರಯೋಗ ಅದನ್ನು ಸ್ಪಷ್ಟಪಡಿಸುತ್ತದೆ.

466. ಅರ್ಥಾತ್, ಅವಳು ಸ್ವಇಚ್ಛೆಯಿಂದ ಮನೆಬಿಟ್ಟು ಹೊರಟು ಹೋಗುವುದಾದರೆ ಅದು ದೊಡ್ಡ ದುಷ್ಕೃತ್ಯವಾಗುತ್ತದೆ.





**ಇದು ಅಲ್ಲಾಹನಲ್ಲಿ ಮತ್ತು ಅಂತ್ಯ ದಿನದ ಬಗ್ಗೆ ನಂಬಿಕೆಯಿಡುವವನಿಗೆ ನೀಡಲಾಗುವ ಉಪದೇಶವಾಗಿದೆ. ಯಾರಾದರೂ ಅಲ್ಲಾಹನ ಭಯಭಕ್ತಿ ಹೊಂದಿದ್ದರೆ ಅವನಿಗೆ ಅಲ್ಲಾಹನು** (ಸಂಕಷ್ಟಗಳಿಂದ) **ಪಾರಾಗುವ ಮಾರ್ಗವನ್ನು ಮಾಡಿಕೊಡುವನು.**

يُؤْمِنُ بِاللّٰهِ وَالْيَوْمِ الْاٰخِرِ ۗ وَمَنْ
يَّتَّقِ اللّٰهَ يَجْعَلْ لَّهٗ مَخْرَجًا ②

**4. ಅವನು ನಿರೀಕ್ಷಿಸದ ಕಡೆಯಿಂದ ಅಲ್ಲಾಹನು ಅವನಿಗೆ ಜೀವನೋಪಾಯವನ್ನು ದಯಪಾಲಿಸುವನು. ಯಾರು ಅಲ್ಲಾಹನ ಮೇಲೆ ಭರವಸೆ ಇಡುತ್ತಾನೋ ಅವನಿಗೆ ಅಲ್ಲಾಹನು ಸಾಕು. ಅಲ್ಲಾಹನು ತಾನು ಉದ್ದೇಶಿಸಿದ ಕಾರ್ಯವನ್ನು ಸಾಧಿಸುವವನಾಗಿದ್ದಾನೆ. ಪ್ರತಿಯೊಂದಕ್ಕೂ ಅಲ್ಲಾಹನು ನಿರ್ದಿಷ್ಟ ಪರಿಮಾಣವನ್ನು ನಿಶ್ಚಯಿಸಿದ್ದಾನೆ.**

وَّيَرْزُقْهُ مِنْ حَيْثُ لَا يَحْتَسِبُ ۗ وَمَنْ
يَّتَوَكَّلْ عَلَى اللّٰهِ فَهُوَ حَسْبُهٗ ۗ اِنَّ اللّٰهَ
بَالِغُ اَمْرِهٖ ۗ قَدْ جَعَلَ اللّٰهُ لِكُلِّ شَيْءٍ
قَدْرًا ③

**5. ನಿಮ್ಮ ಸ್ತ್ರೀಯರಲ್ಲಿ** (ಪ್ರಾಯಾಧಿಕ್ಯ ಕಾರಣ) **ಋತುಸ್ರಾವದ ಬಗ್ಗೆ ನಿರೀಕ್ಷೆಯಿಲ್ಲದವರ ಕುರಿತು, ನಿಮಗೆ ಸಂಶಯವಿದ್ದರೆ ಅವರ 'ಇದ್ದತ್' ಮೂರು ಮಾಸವಾಗಿದೆ. ಋತುಸ್ರಾವವಾಗದಿರುವ ಸ್ತ್ರೀಯರಿಗೂ** (ಇದು ಅನ್ವಯವಾಗುತ್ತದೆ). **ಗರ್ಭಿಣಿ ಸ್ತ್ರೀಯರಾದರೆ ಹೆರುವ ತನಕ ಅವರ ಗಡುವು** (ಇದ್ದತ್ ಕಾಲ) **ಆಗಿದೆ. ಯಾವನಾದರೂ ಅಲ್ಲಾಹನ ಭಯಭಕ್ತಿ ಹೊಂದಿದ್ದರೆ ಅಲ್ಲಾಹನು ಅವನ ಕಾರ್ಯದಲ್ಲಿ ಸೌಲಭ್ಯ ಉಂಟುಮಾಡಿಕೊಡುತ್ತಾನೆ.**

وَالّٰٓـِٔيْ يَئِسْنَ مِنَ الْمَحِيْضِ مِنْ نِّسَآئِكُمْ
اِنِ ارْتَبْتُمْ فَعِدَّتُهُنَّ ثَلٰثَةُ اَشْهُرٍ ۙ وَّالّٰٓـِٔيْ
لَمْ يَحِضْنَ ۗ وَاُولَاتُ الْاَحْمَالِ اَجَلُهُنَّ
اَنْ يَّضَعْنَ حَمْلَهُنَّ ۗ وَمَنْ يَّتَّقِ اللّٰهَ
يَجْعَلْ لَّهٗ مِنْ اَمْرِهٖ يُسْرًا ④

**6. ಇದು ಅಲ್ಲಾಹನು ನಿಮಗೆ ಅವತೀರ್ಣಗೊಳಿಸಿದ ಅವನ ಆಜ್ಞೆಯಾಗಿದೆ. ಯಾವನಾದರೂ ಅಲ್ಲಾಹನ ಭಯಭಕ್ತಿ ಹೊಂದಿದ್ದರೆ ಅವನ ಕೃತ್ಯಗಳ ದುಷ್ಪರಿಣಾಮಗಳನ್ನು ಅವನು** (ಅಲ್ಲಾಹನು) **ನೀಗಿಸಿ ಅವನಿಗೆ ಸಲ್ಲತಕ್ಕ ಪ್ರತಿಫಲವನ್ನು ವೃದ್ಧಿಗೊಳಿಸುವನು.**

ذٰلِكَ اَمْرُ اللّٰهِ اَنْزَلَهٗٓ اِلَيْكُمْ ۗ وَمَنْ يَّتَّقِ
اللّٰهَ يُكَفِّرْ عَنْهُ سَيِّاٰتِهٖ وَيُعْظِمْ لَهٗٓ
اَجْرًا ٥

**7. ಅವರನ್ನು** (ವಿವಾಹ ವಿಚ್ಛೇದಿತ ಸ್ತ್ರೀಯರನ್ನು ಅವರ 'ಇದ್ದತ್' ಕಾಲದಲ್ಲಿ) **ನಿಮ್ಮ ಶಕ್ತ್ಯಾನುಸಾರವುಳ್ಳ ನಿಮ್ಮ ವಾಸಸ್ಥಳದಲ್ಲಿ ವಾಸಮಾಡಲು ಬಿಡಿರಿ. ಅವರನ್ನು ಕಷ್ಟಕ್ಕೊಳಪಡಿಸುವ ಉದ್ದೇಶದಿಂದ ನೀವು ಅವರನ್ನು**

اَسْكِنُوْهُنَّ مِنْ حَيْثُ سَكَنْتُمْ مِّنْ
وُّجْدِكُمْ وَلَا تُضَآرُّوْهُنَّ لِتُضَيِّقُوْا

عَلَيْهِنَّ ۚ وَإِن كُنَّ أُولَاتِ حَمْلٍ فَأَنفِقُوا عَلَيْهِنَّ حَتَّىٰ يَضَعْنَ حَمْلَهُنَّ ۚ فَإِنْ أَرْضَعْنَ لَكُمْ فَآتُوهُنَّ أُجُورَهُنَّ ۖ وَأْتَمِرُوا بَيْنَكُم بِمَعْرُوفٍ ۖ وَإِن تَعَاسَرْتُمْ فَسَتُرْضِعُ لَهُ أُخْرَىٰ ﴿٦﴾

ಪೀಡಿಸಬಾರದು. ಅವರು ಗರ್ಭಿಣಿಯರಾಗಿದ್ದರೆ, ಹೆರುವ ತನಕ ನೀವು ಅವರಿಗೆ ಖರ್ಚುಕೊಡಿರಿ. ಅನಂತರ ನಿಮಗೋಸ್ಕರ ಅವರು (ಮಗುವಿಗೆ) ಮೊಲೆಯುಣ್ಣಿಸಿದರೆ, ನೀವು ಅವರಿಗೆ ಅವರ ಪ್ರತಿಫಲ ನೀಡಿರಿ. ಯಥೋಚಿತವಾಗಿ ನೀವು ಪರಸ್ಪರ ಸಮಾಲೋಚನೆ ಮಾಡಿ ತೀರ್ಮಾನಿಸಿರಿ. ಆದರಲ್ಲಿ ನಿಮಗೆ ಪರಸ್ಪರ ತೊಂದರೆಯುಂಟಾದರೆ ಅವನಿಗಾಗಿ (ತಂದೆಗಾಗಿ) ಮಗುವಿಗೆ ಬೇರೊಬ್ಬ ಸ್ತ್ರೀ ಮೊಲೆಯುಣ್ಣಿಸಲಿ.

لِيُنفِقْ ذُو سَعَةٍ مِّن سَعَتِهِ ۖ وَمَن قُدِرَ عَلَيْهِ رِزْقُهُ فَلْيُنفِقْ مِمَّا آتَاهُ اللَّهُ ۚ لَا يُكَلِّفُ اللَّهُ نَفْسًا إِلَّا مَا آتَاهَا ۚ سَيَجْعَلُ اللَّهُ بَعْدَ عُسْرٍ يُسْرًا ﴿٧﴾

8. ಧನಿಕನು ತನ್ನ ಶಕ್ತ್ಯಾನುಸಾರ ವೆಚ್ಚಮಾಡಲಿ. ಯಾವನಿಗಾದರೂ ಜೀವನೋಪಾಯ ಅಡಚಣೆಯಿಂದ ಕೂಡಿದ್ದರೆ ಅಲ್ಲಾಹನು ಅವನಿಗೆ ಒದಗಿಸಿಕೊಟ್ಟದ್ದರಿಂದ (ಶಕ್ತ್ಯಾನುಸಾರ) ಅವನು ವೆಚ್ಚಮಾಡಲಿ. ಅಲ್ಲಾಹನು ಒದಗಿಸಿದ್ದಕ್ಕೆ ಅನುಸಾರವಾಗಿ ವರ್ತಿಸಬೇಕೆಂದಲ್ಲದೆ ಯಾರ ಮೇಲೆಯೂ ಹೆಚ್ಚಿನ ಭಾರವನ್ನು ಅವನು ಹೊರಿಸುವುದಿಲ್ಲ. ಸಂಕಷ್ಟದ ಬಳಿಕ ಶೀಘ್ರವಾಗಿಯೇ ಅಲ್ಲಾಹನು ಸುಖವನ್ನು ದಯಪಾಲಿಸುವನು.

وَكَأَيِّن مِّن قَرْيَةٍ عَتَتْ عَنْ أَمْرِ رَبِّهَا وَرُسُلِهِ فَحَاسَبْنَاهَا حِسَابًا شَدِيدًا وَعَذَّبْنَاهَا عَذَابًا نُّكْرًا ﴿٨﴾

9. ತಮ್ಮ ಪ್ರಭುವಿನ ಮತ್ತು ಅವನ ಸಂದೇಶವಾಹಕರ ಆಜ್ಞೆಯನ್ನು ಧಿಕ್ಕರಿಸಿದ ಎಷ್ಟೆಷ್ಟು ನಾಡುಗಳು! ನಾವು ಅವುಗಳನ್ನು ಕಠಿಣವಾದ ವಿಚಾರಣೆಗೆ ಒಳಪಡಿಸಿದೆವು ಹಾಗೂ ಕಠೋರವಾದ ಶಿಕ್ಷೆಗೆ ಗುರಿಪಡಿಸಿದೆವು.

فَذَاقَتْ وَبَالَ أَمْرِهَا وَكَانَ عَاقِبَةُ أَمْرِهَا خُسْرًا ﴿٩﴾

10. ಹಾಗೆ ಅವು ತಮ್ಮ ಕರ್ಮದ ದುಷ್ಪರಿಣಾಮವನ್ನು ಅನುಭವಿಸಿದವು. ಅವುಗಳ ಕೃತ್ಯದ ಪರ್ಯವಸಾನ ನಷ್ಟಕರವಾಗಿತ್ತು.

أَعَدَّ اللَّهُ لَهُمْ عَذَابًا شَدِيدًا ۖ فَاتَّقُوا اللَّهَ يَا أُولِي الْأَلْبَابِ الَّذِينَ آمَنُوا ۚ قَدْ أَنزَلَ اللَّهُ إِلَيْكُمْ ذِكْرًا ﴿١٠﴾

11. ಅಲ್ಲಾಹನು ಅವರಿಗೆ ಕಠೋರವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದಾನೆ. ಆದ್ದರಿಂದ ಎಲೈ ಸತ್ಯವಿಶ್ವಾಸಿಗಳಾದ ಬುದ್ಧಿಶಾಲಿಗಳೇ, ನೀವು ಅಲ್ಲಾಹನ ಭಯಭಕ್ತಿಯುಳ್ಳವರಾಗಿರಿ. ಅಲ್ಲಾಹನು ನಿಮ್ಮ ಬಳಿಗೆ ಒಂದು ಉಪದೇಶವನ್ನು ಇಳಿಸಿದ್ದಾನೆ -





رَّسُولًا يَتْلُو عَلَيْكُمْ آيَاتِ اللَّهِ مُبَيِّنَاتٍ لِّيُخْرِجَ الَّذِينَ آمَنُوا وَعَمِلُوا الصَّالِحَاتِ مِنَ الظُّلُمَاتِ إِلَى النُّورِ ۚ وَمَن يُؤْمِن بِاللَّهِ وَيَعْمَلْ صَالِحًا يُدْخِلْهُ جَنَّاتٍ تَجْرِي مِن تَحْتِهَا الْأَنْهَارُ خَالِدِينَ فِيهَا أَبَدًا ۖ قَدْ أَحْسَنَ اللَّهُ لَهُ رِزْقًا ﴿١١﴾

12. (ಅಂದರೆ) ಓರ್ವ ಸಂದೇಶವಾಹಕನನ್ನು. ಅವರು ನಿಮಗೆ ಅಲ್ಲಾಹನ ಸ್ಪಷ್ಟವಾದ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಾರೆ - ವಿಶ್ವಾಸ ಹೊಂದಿ ಸತ್ಕರ್ಮನಿರತರಾದವರನ್ನು (ಎಲ್ಲ ವಿಧ) ಅಂಧಕಾರಗಳಿಂದ (ಪಾರು ಮಾಡಿ) ಪ್ರಕಾಶದೆಡೆಗೆ ಕೊಂಡೊಯ್ಯಲಿಕ್ಕೋಸ್ಕರ. ಯಾವನಾದರೂ ಅಲ್ಲಾಹನಲ್ಲಿ ನಂಬಿಕೆಯಿರಿಸಿ ಸತ್ಕರ್ಮಗಳನ್ನು ಗೈದರೆ, ಕೆಳಬದಿಯಲ್ಲಿ ಸರಿತ್ತುಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ಅಲ್ಲಾಹನು ಅವನಿಗೆ ಪ್ರವೇಶ ನೀಡುವನು. ಅಲ್ಲಿ ಅವರು ಶಾಶ್ವತವಾಗಿ ವಾಸಿಸುವರು. ಅಲ್ಲಾಹನು ಅಂಥವನಿಗೆ ಉತ್ತಮವಾದ ಆಹಾರವನ್ನು ಒದಗಿಸುತ್ತಾನೆ.

اللَّهُ الَّذِي خَلَقَ سَبْعَ سَمَاوَاتٍ وَمِنَ الْأَرْضِ مِثْلَهُنَّ يَتَنَزَّلُ الْأَمْرُ بَيْنَهُنَّ لِتَعْلَمُوا أَنَّ اللَّهَ عَلَىٰ كُلِّ شَيْءٍ قَدِيرٌ وَأَنَّ اللَّهَ قَدْ أَحَاطَ بِكُلِّ شَيْءٍ عِلْمًا ﴿١٢﴾

13. ಅಲ್ಲಾಹನು ಏಳು ಆಕಾಶಗಳನ್ನೂ ಭೂಮಿಯಲ್ಲಿ ಅವುಗಳಿಗೆ ಸಮಾನವಾದುದನ್ನೂ ಸೃಷ್ಟಿಸಿದವನಾಗಿದ್ದಾನೆ.[467] ಅವುಗಳ ಮಧ್ಯೆ (ಅಲ್ಲಾಹನ) ಆಜ್ಞೆಗಳು ಅವತೀರ್ಣಗೊಳ್ಳುತ್ತವೆ - ಅಲ್ಲಾಹನು ಎಲ್ಲ ವಿಚಾರಗಳಲ್ಲೂ ಸರ್ವ ಸಾಮರ್ಥ್ಯವುಳ್ಳವನೆಂದೂ ಅಲ್ಲಾಹನು ಎಲ್ಲವನ್ನು (ತನ್ನ) ಅರಿವಿನಿಂದ ಸುತ್ತುವರಿದಿದ್ದಾನೆಂದೂ ನಿಮಗೆ ತಿಳಿಯಪಡಿಸಲಿಕ್ಕೋಸ್ಕರ.

467. ಏಳು ಭೂಖಂಡಗಳೆಂದು ತಾತ್ಪರ್ಯ.

سُورَةُ التَّحْرِيمِ مَدَنِيَّةٌ وَّهِيَ مَعَ الْبَسْمَلَةِ ثَلٰثَ عَشْرَةَ اٰيَةً وَّرُكُوْعَانِ

## 66. ಅತ್ತಹ್ರೀಂ

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 13 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಎಲೈ ಪ್ರವಾದಿ, ಅಲ್ಲಾಹನು ನಿನಗೆ ಧರ್ಮಬದ್ಧಗೊಳಿಸಿರುವುದನ್ನು ನಿನ್ನ ಪತ್ನಿಯರ ಇಷ್ಟವನ್ನು ಬಯಸಿ ನೀನು** (ಸ್ವಂತಕ್ಕೆ) **ಏಕೆ ನಿಷಿದ್ಧಗೊಳಿಸುವೆ.**[468] **ಅಲ್ಲಾಹನಾದರೋ ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

يٰۤاَيُّهَا النَّبِيُّ لِمَ تُحَرِّمُ مَاۤ اَحَلَّ اللّٰهُ لَكَ ۚ تَبْتَغِيْ مَرْضَاتَ اَزْوَاجِكَ ۗ وَاللّٰهُ غَفُوْرٌ رَّحِيْمٌ ②

**3. ನಿಮ್ಮ** (ಈ ರೀತಿಯ) **ಪ್ರತಿಜ್ಞೆಗಳಿಂದ ಮುಕ್ತರಾಗುವುದನ್ನು ಅಲ್ಲಾಹನು ನಿಮಗೆ ಕಡ್ಡಾಯಗೊಳಿಸಿರುತ್ತಾನೆ. ಅಲ್ಲಾಹನು ನಿಮ್ಮ ರಕ್ಷಾಧಿಕಾರಿಯಾಗಿದ್ದಾನೆ. ಅವನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.**

قَدْ فَرَضَ اللّٰهُ لَكُمْ تَحِلَّةَ اَيْمَانِكُمْ ۚ وَاللّٰهُ مَوْلٰىكُمْ ۚ وَهُوَ الْعَلِيْمُ الْحَكِيْمُ ③

**4. ಪ್ರವಾದಿ ತನ್ನ ಓರ್ವ ಪತ್ನಿಯೊಡನೆ ಒಂದು ಸಂಗತಿಯನ್ನು ರಹಸ್ಯವಾಗಿ ಹೇಳಿದ್ದಾಗ, ಆಕೆ ಅದನ್ನು** (ಪತ್ನಿಯರಲ್ಲಿ ಇನ್ನೊಬ್ಬಾಕೆಗೆ) **ಹೇಳಿದಳು. ಆ ಸಂಗತಿಯನ್ನು ಅಲ್ಲಾಹನು ಪ್ರವಾದಿಗೆ ಬಹಿರಂಗಪಡಿಸಿದಾಗ, ಅವರು ಅದರ ಒಂದಂಶವನ್ನು** (ಆಕೆಗೆ) **ತಿಳಿಸಿ ಮತ್ತೊಂದಂಶವನ್ನು ಬಿಟ್ಟುಬಿಟ್ಟರು. ಹಾಗೆ ಆಕೆಗೆ ಆ ಸಂಗತಿಯನ್ನು ಪ್ರವಾದಿ ಹೇಳಿದಾಗ ತಮ್ಮೊಡನೆ ಇದು**

وَاِذْ اَسَرَّ النَّبِيُّ اِلٰى بَعْضِ اَزْوَاجِهٖ حَدِيْثًا ۚ فَلَمَّا نَبَّاَتْ بِهٖ وَاَظْهَرَهُ اللّٰهُ عَلَيْهِ عَرَّفَ بَعْضَهٗ وَاَعْرَضَ عَنْۢ بَعْضٍ ۚ فَلَمَّا نَبَّاَهَا بِهٖ قَالَتْ مَنْ

468. ಒಮ್ಮೆ ಹಝ್ರತ್ ಮುಹಮ್ಮದ್ ಪೈಗಂಬರ್(ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ತನ್ನ ಓರ್ವ ಪತ್ನಿಯ ಮನೆಯಲ್ಲಿ ಜೇನಿನ ಪಾನಕ ಕುಡಿದರು. ಹಾಗೆ ಅಲ್ಲಿ ಸ್ವಲ್ಪ ಹೆಚ್ಚು ಸಮಯ ಇದ್ದುಬಿಟ್ಟರು. ಇತರ ಪತ್ನಿಯರಿಗೆ ಅದಷ್ಟು ಹಿಡಿಸಲಿಲ್ಲ. ಜೇನು ಇಷ್ಟವಿಲ್ಲದ ಓರ್ವ ಪತ್ನಿಯಿಂದ ಪೈಗಂಬರರಿಗೆ: 'ಅಲ್ಲಾಹನ ಪ್ರವಾದಿಯವರೇ, ನಿಮ್ಮ ಬಾಯಿಂದ ದುರ್ವಾಸನೆ ಬರುತ್ತದೆ' ಎಂಬ ಮಾತು ಕೇಳಬೇಕಾಯಿತು. ಆಗ ಸೌಮ್ಯ ಸ್ವಭಾವದ ಪೈಗಂಬರರು, ತಾನು ಮುಂದೆಂದೂ ಜೇನು ಸೇವಿಸಲಾರೆ ಎಂದು ಮನಸ್ಸಿನಲ್ಲಿ ದೃಢ ನಿರ್ಧಾರ ಮಾಡಿದರು. ಆ ಸಂದರ್ಭದಲ್ಲಿ ಮೇಲಿನ ಆಯತ್ ಅವತೀರ್ಣವಾಯಿತು. ಅಂದರೆ, ಅಲ್ಲಾಹನು ಧರ್ಮಬದ್ಧಗೊಳಿಸಿದ ಜೇನನ್ನು ಯಾರಾದರೂ ಓರ್ವ ಪತ್ನಿಯ ಇಷ್ಟಾನುಸಾರ ನಿಷಿದ್ಧಗೊಳಿಸುವುದು ಸರಿಯಲ್ಲ. (ಫತ್‌ಹುಲ್ ಬಯಾನ್ ಸುಂಪುಟ 9)





**ಯಾರು ಹೇಳಿದ್ದು ಎಂದು ಆಕೆ ಕೇಳಿದಳು. 'ಸರ್ವಜ್ಞನೂ ಎಲ್ಲವನ್ನು ಅರಿಯುವವನೂ ಆದ ಅಲ್ಲಾಹನು ಇದನ್ನು ನನಗೆ ತಿಳಿಸಿದನು' ಎಂದು ಅವರು ಉತ್ತರಿಸಿದರು.**

اَنْۢبَاَكَ هٰذَا ۗ قَالَ نَبَّاَنِيَ الْعَلِيْمُ الْخَبِيْرُ ④

**5. ನೀವಿಬ್ಬರೂ**[469] **ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳುವಿರಾದರೆ** ಅದು ನಿಮಗೆ ಉತ್ತಮವಾಗಿರುವುದು. **ನಿಜವಾಗಿಯೂ ನಿಮ್ಮಿಬ್ಬರ ಹೃದಯಗಳು** (ಈಗಾಗಲೇ ಅದರೆಡೆಗೆ) **ಬಾಗಿವೆ. ಆದರೆ ನೀವಿಬ್ಬರೂ ಪ್ರವಾದಿಗೆ ವಿರುದ್ಧವಾಗಿ ಪರಸ್ಪರ ಬೆಂಬಲಿಸುವುದಾದರೆ,** (ತಿಳಿದುಕೊಳ್ಳಿರಿ) **ಅಲ್ಲಾಹನು ಅವರ** (ಪ್ರವಾದಿಯ) **ಮಿತ್ರನಾಗಿದ್ದಾನೆ. ಜಿಬ್ರೀಲ್ ಮತ್ತು ಸತ್ಯವಿಶ್ವಾಸಿಗಳ ಪೈಕಿಯ ಸಜ್ಜನರು ಸಹ. ಅಷ್ಟೇ ಅಲ್ಲ, ದಿವ್ಯದೂತರು ಅವರ ಬೆಂಬಲಿಗರೂ ಆಗಿದ್ದಾರೆ.**

اِنْ تَتُوْبَاۤ اِلَى اللّٰهِ فَقَدْ صَغَتْ قُلُوْبُكُمَا ۚ وَاِنْ تَظٰهَرَا عَلَيْهِ فَاِنَّ اللّٰهَ هُوَ مَوْلٰىهُ وَجِبْرِيْلُ وَصَالِحُ الْمُؤْمِنِيْنَ ۚ وَالْمَلٰۤئِكَةُ بَعْدَ ذٰلِكَ ظَهِيْرٌ ⑤

**6. ಅವರು** (ಪ್ರವಾದಿ) **ನಿಮ್ಮ ವಿವಾಹ ವಿಚ್ಛೇದನ ಮಾಡಿದರೆ ನಿಮ್ಮ ಬದಲಿಗೆ ನಿಮಗಿಂತ ಉತ್ತಮರಾದ ಪತ್ನಿಯರನ್ನು ಅವರಿಗೆ ಅವರ ಪ್ರಭು ನೀಡಲೂಬಹುದು- ಅಲ್ಲಾಹನಿಗೆ ಶರಣಾಗುವ, ಸತ್ಯವಿಶ್ವಾಸಿನಿಯರಾದ, ವಿಧೇಯರಾದ, ಪಶ್ಚಾತ್ತಾಪದಿಂದ ಅಲ್ಲಾಹನ ಕಡೆಗೆ ಬಾಗುವ, ನಿಷ್ಠೆಯಿಂದ ಆರಾಧಿಸುವ, ವ್ರತಾನುಷ್ಠಾನ ಮಾಡುವ ವಿಧವೆಯರಾದ ಅಥವಾ ಕನ್ಯೆಯರಾದ ಪತ್ನಿಯರನ್ನು.**

عَسٰى رَبُّهٗۤ اِنْ طَلَّقَكُنَّ اَنْ يُّبْدِلَهٗۤ اَزْوَاجًا خَيْرًا مِّنْكُنَّ مُسْلِمٰتٍ مُّؤْمِنٰتٍ قٰنِتٰتٍ تٰۤئِبٰتٍ عٰبِدٰتٍ سٰۤئِحٰتٍ ثَيِّبٰتٍ وَّاَبْكَارًا ⑥

**7. ಎಲೈ ವಿಶ್ವಾಸಿಗಳೇ, ನೀವು ನಿಮ್ಮನ್ನೂ ನಿಮ್ಮ ಕುಟುಂಬದವರನ್ನೂ ನರಕಾಗ್ನಿಯಿಂದ ರಕ್ಷಿಸಿರಿ. ಮನುಷ್ಯರೂ ಕಲ್ಲುಗಳೂ ಅದರ ಇಂಧನ. ನಿರ್ದಯರೂ ಕಠೋರರೂ ಆದ ಕೆಲವು ದಿವ್ಯದೂತರು ಅದರ ಮೇಲ್ನೋಟಗಾರರು. ಅಲ್ಲಾಹನ ಆಜ್ಞೆಯನ್ನು ಅವರು ಉಲ್ಲಂಘಿಸಲಾರರು; ಅವರು ಆಜ್ಞಾನುಸಾರ ವರ್ತಿಸುತ್ತಾರೆ.**

يٰۤاَيُّهَا الَّذِيْنَ اٰمَنُوْا قُوْۤا اَنْفُسَكُمْ وَاَهْلِيْكُمْ نَارًا وَّقُوْدُهَا النَّاسُ وَالْحِجَارَةُ عَلَيْهَا مَلٰۤئِكَةٌ غِلَاظٌ شِدَادٌ لَّا يَعْصُوْنَ اللّٰهَ مَاۤ اَمَرَهُمْ وَيَفْعَلُوْنَ مَا يُؤْمَرُوْنَ ⑦

**8.** (ಅಂದು ಅವಿಶ್ವಾಸಿಗಳೊಡನೆ ಹೀಗೆ ಹೇಳಲಾಗುವುದು:) **'ಎಲೈ ಅವಿಶ್ವಾಸಿಗಳೇ, ಇಂದು ನೀವು ನೆಪ**

يٰۤاَيُّهَا الَّذِيْنَ كَفَرُوْا لَا تَعْتَذِرُوا الْيَوْمَ ۗ

469. ಪ್ರವಾದಿಯ ಇಬ್ಬರು ಪತ್ನಿಯರು.

ವೇನೂ ಹೇಳಬೇಡಿರಿ. ನಿಮ್ಮ ದುಷ್ಕೃತ್ಯಗಳ ಪ್ರತಿಫಲವನ್ನು ಮಾತ್ರ ನಿಮಗೆ ಕೊಡಲಾಗುವುದು.'

إِنَّمَا تُجْزَوْنَ مَا كُنْتُمْ تَعْمَلُوْنَ ٨

9. ಎಲೈ ವಿಶ್ವಾಸಿಗಳೇ, ನೀವು ಪಶ್ಚಾತ್ತಾಪಪಟ್ಟು ಅಲ್ಲಾಹನ ಕಡೆಗೆ ಮರಳಿರಿ - ಪ್ರಾಮಾಣಿಕವಾದ ಪಶ್ಚಾತ್ತಾಪ. ನಿಮ್ಮ ಪ್ರಭು ನಿಮ್ಮ ಪಾಪಗಳನ್ನು ನಿವಾರಿಸಿ ಕೆಳಬದಿಯಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳಲ್ಲಿ ನಿಮಗೆ ಪ್ರವೇಶ ನೀಡಲೂಬಹುದು. ಅಂದು ಅಲ್ಲಾಹನು ಪ್ರವಾದಿಯನ್ನಾಗಲಿ ಅವರೊಂದಿಗಿರುವ ಸತ್ಯವಿಶ್ವಾಸಿಗಳನ್ನಾಗಲಿ ನಿಂದಿಸಲಾರ. ಅವರ ಮುಂಭಾಗದಲ್ಲೂ ಬಲಭಾಗದಲ್ಲೂ ಅವರ ಪ್ರಕಾಶ ಪ್ರಸರಿಸುವುದು. 'ನಮ್ಮ ಪ್ರಭೂ, ನಮ್ಮ ಪ್ರಕಾಶವನ್ನು ನೀನು ನಮಗೆ ಪರಿಪೂರ್ಣಗೊಳಿಸು; ನಮಗೆ ನೀನು ಕ್ಷಮೆ ನೀಡು. ಖಂಡಿತವಾಗಿಯೂ ನೀನು ಸರ್ವಸಮರ್ಥನಾಗಿರುವೆ' ಎಂದು ಅವರು ಪ್ರಾರ್ಥಿಸುವರು.

يَا أَيُّهَا الَّذِيْنَ آمَنُوْا تُوْبُوْا إِلَى اللّٰهِ تَوْبَةً
نَّصُوْحًا ۖ عَسٰى رَبُّكُمْ أَنْ يُّكَفِّرَ عَنْكُمْ
سَيِّاٰتِكُمْ وَيُدْخِلَكُمْ جَنّٰتٍ تَجْرِيْ مِنْ
تَحْتِهَا الْأَنْهٰرُ ۙ يَوْمَ لَا يُخْزِى اللّٰهُ
النَّبِيَّ وَالَّذِيْنَ آمَنُوْا مَعَهٗ ۚ نُوْرُهُمْ
يَسْعٰى بَيْنَ أَيْدِيْهِمْ وَبِأَيْمَانِهِمْ
يَقُوْلُوْنَ رَبَّنَا أَتْمِمْ لَنَا نُوْرَنَا وَ
اغْفِرْ لَنَا ۚ إِنَّكَ عَلٰى كُلِّ شَيْءٍ قَدِيْرٌ ٩

10. ಎಲೈ ಪ್ರವಾದಿ, ನೀನು ಅವಿಶ್ವಾಸಿಗಳ ಮತ್ತು ಕಪಟ ವಿಶ್ವಾಸಿಗಳ ವಿರುದ್ಧ ಹೋರಾಡು. ಅವರ ಬಗ್ಗೆ ಕಟ್ಟುನಿಟ್ಟಾಗಿ ವರ್ತಿಸು. ಅವರ ವಾಸಸ್ಥಳ ನರಕವಾಗಿದೆ. (ಅವರ) ಗಮ್ಯಸ್ಥಾನ ಬಲುಕೆಟ್ಟದ್ದಾಗಿದೆ.

يَا أَيُّهَا النَّبِيُّ جَاهِدِ الْكُفَّارَ وَ
الْمُنٰفِقِيْنَ وَاغْلُظْ عَلَيْهِمْ ۚ وَمَأْوٰهُمْ
جَهَنَّمُ ۖ وَبِئْسَ الْمَصِيْرُ ١٠

11. ನೂಹರ ಪತ್ನಿಯನ್ನೂ ಲೂತರ ಪತ್ನಿಯನ್ನೂ ಅವಿಶ್ವಾಸಿಗಳಿಗೆ ಉದಾಹರಣೆಯಾಗಿ ಅಲ್ಲಾಹನು ತೋರಿಸುತ್ತಾನೆ. ಆ ಇಬ್ಬರು ಸ್ತ್ರೀಯರೂ ನಮ್ಮ ಸಜ್ಜನರಾದ ಇಬ್ಬರು ಭಕ್ತದಾಸರ ಅಧೀನದಲ್ಲಿದ್ದರು. ಆದರೆ ಆ ಇಬ್ಬರು ಸ್ತ್ರೀಯರೂ ಅವರೀರ್ವರನ್ನೂ ವಂಚಿಸಿದರು. ಆದ್ದರಿಂದ ಅಲ್ಲಾಹನ ಶಿಕ್ಷೆಯಿಂದ ಪಾರುಮಾಡಲು ಆ ಇಬ್ಬರು ಸ್ತ್ರೀಯರಿಗೂ ಅವರೀರ್ವರೂ ಪ್ರಯೋಜನಕ್ಕೆ ಬೀಳಲಿಲ್ಲ. 'ನರಕವನ್ನು ಪ್ರವೇಶಿಸುವ ವರೊಂದಿಗೆ ನೀವಿಬ್ಬರೂ ಪ್ರವೇಶಿಸಿರಿ' ಎಂದು ಅವರೊಡನೆ ಹೇಳಲಾಯಿತು.

ضَرَبَ اللّٰهُ مَثَلًا لِّلَّذِيْنَ كَفَرُوا امْرَاَتَ
نُوْحٍ وَّامْرَاَتَ لُوْطٍ ۖ كَانَتَا تَحْتَ عَبْدَيْنِ
مِنْ عِبَادِنَا صَالِحَيْنِ فَخَانَتٰهُمَا فَلَمْ
يُغْنِيَا عَنْهُمَا مِنَ اللّٰهِ شَيْئًا وَّقِيْلَ ادْخُلَا
النَّارَ مَعَ الدّٰخِلِيْنَ ١١





12. ಫಿರ್‌ಔನನ ಪತ್ನಿಯನ್ನು ವಿಶ್ವಾಸಿಗಳಿಗೆ ಉದಾಹರಣೆಯಾಗಿಯೂ ಅಲ್ಲಾಹನು ತೋರಿಸುತ್ತಾನೆ. 'ನನ್ನ ಪ್ರಭೂ, ನಿನ್ನ ಬಳಿಯಲ್ಲಿರುವ ಸ್ವರ್ಗದಲ್ಲಿ ನನಗೊಂದು ಮನೆಯನ್ನು ಒದಗಿಸು. ಫಿರ್‌ಔನ್ ಮತ್ತು ಅವನ ಕೃತ್ಯಗಳಿಂದ ನೀನು ನನ್ನನ್ನು ಪಾರುಮಾಡು. ದುಷ್ಕರ್ಮಿಗಳಾದ ಜನರಿಂದಲೂ ನೀನು ನನ್ನನ್ನು ರಕ್ಷಿಸು' ಎಂದು ಆಕೆ ಪ್ರಾರ್ಥಿಸಿದಳು.

وَضَرَبَ اللّٰهُ مَثَلًا لِّلَّذِيْنَ آمَنُوا امْرَاَتَ
فِرْعَوْنَ ۘ إِذْ قَالَتْ رَبِّ ابْنِ لِيْ عِنْدَكَ
بَيْتًا فِي الْجَنَّةِ وَنَجِّنِيْ مِنْ فِرْعَوْنَ وَ
عَمَلِهٖ وَنَجِّنِيْ مِنَ الْقَوْمِ الظّٰلِمِيْنَ ١٢

13. ಇಮ್ರಾನ್[470] ಪುತ್ರಿ ಮರ್ಯಮನ್ನು ಸಹ (ಅಲ್ಲಾಹನು ವಿಶ್ವಾಸಿಗಳಿಗೆ ಉದಾಹರಣೆಯಾಗಿ ತೋರಿಸುತ್ತಾನೆ). ಆಕೆ ತನ್ನ ಪಾವಿತ್ರ್ಯವನ್ನು ಕಾಪಾಡಿಕೊಂಡಿದ್ದಳು. ಆಗ ನಾವು ಆಕೆಗೆ ನಮ್ಮ ವಾಣಿಯನ್ನು ಅರುಹಿದೆವು. ಆಕೆ ತನ್ನ ಪ್ರಭುವಿನ ವಚನಗಳನ್ನೂ ಗ್ರಂಥಗಳನ್ನೂ ಸತ್ಯಪಡಿಸಿದಳು. ಆಕೆ ಪೂರ್ಣವಾಗಿಯೂ ವಿಧೇಯಳಾಗಿದ್ದಳು.

وَمَرْيَمَ ابْنَتَ عِمْرٰنَ الَّتِيْ أَحْصَنَتْ
فَرْجَهَا فَنَفَخْنَا فِيْهِ مِنْ رُّوْحِنَا وَصَدَّقَتْ
بِكَلِمٰتِ رَبِّهَا وَكُتُبِهٖ وَكَانَتْ مِنَ
الْقٰنِتِيْنَ ١٣

470. "ಇಮ್ರಾನ್ ಮೂಸಾ ಪ್ರವಾದಿಯ ಪಿತರಾಗಿದ್ದಾರೆ. ಮರ್ಯಮ್‌ರಿಗೆ 1500 ವರ್ಷಗಳಿಗೆ ಮುಂಚೆ ಅವರು ಜನಿಸಿದ್ದರು. ಖುರ್‌ಆನ್ ಅವತೀರ್ಣಗೊಳಿಸಿದವರಿಗೆ ಇತಿಹಾಸ ಗೊತ್ತಿಲ್ಲ" ಎಂಬಿತ್ಯಾದಿಯಾಗಿ ಇಸ್ಲಾಮಿನ ಕೆಲವು ಶತ್ರುಗಳು ಆಕ್ಷೇಪಿಸುತ್ತಾರೆ. ಅಜ್ಞಾನದಿಂದ ಅವರು ಹಾಗೆ ಹೇಳುತ್ತಾರೆ. ಹಝ್ರತ್ ಮುಹಮ್ಮದ್ ಪೈಗಂಬರರ(ಸ) ಮುಂದೆ ಸಹ ಇಂತಹ ಆಕ್ಷೇಪವನ್ನು ಎತ್ತಲಾಗಿತ್ತು. ಪೈಗಂಬರರು ಮರು ನುಡಿದರು: ಇದರಲ್ಲಿ ಆಶ್ಚರ್ಯಪಡಲಿಕ್ಕೇನಿದೆ. ತಮ್ಮ ಸಮುದಾಯದ ಗತಿಸಿದ ಮಹಾತ್ಮರ ನಾಮಗಳನ್ನು ಗೌರವಾರ್ಥವಾಗಿ ತಮ್ಮ ಮಕ್ಕಳಿಗೆ ಇಡುವುದು ಎಲ್ಲೆಡೆ ಇರುವ ರೂಢಿಯಾಗಿದೆ. ಮರ್ಯಮರ ತಂದೆಯ ಹೆಸರು, ಅವರ ಪಿತ ಗೌರವ ಸೂಚಕವಾಗಿ ಇಮ್ರಾನ್ ಎಂದು ಇಟ್ಟಿದ್ದರೆ ಅದರಲ್ಲಿ ಅಚ್ಚರಿಯೇನಿಲ್ಲ.

سُوْرَةُ الْمُلْكِ مَكِّيَّةٌ وَّهِيَ مَعَ الْبَسْمَلَةِ اِحْدٰى وَّثَلٰثُوْنَ اٰيَةً وَّرُكُوْعَانِ

# 67. ಅಲ್‌ಮುಲ್ಕ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 31 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2. ಯಾರ ಕೈಯಲ್ಲಿ ಪ್ರಭುತ್ವವಿದೆಯೋ ಅವನು ಅನುಗ್ರಹಪೂರ್ಣನು.** (ತಾನಿಚ್ಛಿಸುವ) **ಎಲ್ಲ ಕಾರ್ಯಗಳಲ್ಲಿ ಅವನು ಸರ್ವಸಾಮರ್ಥ್ಯವಂತನಾಗಿದ್ದಾನೆ.**

تَبٰرَكَ الَّذِيْ بِيَدِهِ الْمُلْكُ ۡ وَهُوَ عَلٰى كُلِّ شَيْءٍ قَدِيْرُ (٢)

**3. ನಿಮ್ಮ ಪೈಕಿ ಕೃತ್ಯ ನಿರ್ವಹಣೆಯಲ್ಲಿ ಯಾರು ಅತ್ಯುತ್ತಮರೆಂದು ಪರೀಕ್ಷಿಸಲಿಕ್ಕೋಸ್ಕರ ಅವನು ಮರಣವನ್ನೂ ಜೀವನವನ್ನೂ ಸೃಷ್ಟಿಸಿದ್ದಾನೆ. ಅವನು ಪ್ರತಾಪವಂತನೂ ಕ್ಷಮಾಶೀಲನೂ ಆಗಿದ್ದಾನೆ.**

الَّذِيْ خَلَقَ الْمَوْتَ وَالْحَيٰوةَ لِيَبْلُوَكُمْ اَيُّكُمْ اَحْسَنُ عَمَلًا ۭ وَهُوَ الْعَزِيْزُ الْغَفُوْرُ (٣)

**4. ಅವನು ಏಳು ಆಕಾಶಗಳನ್ನು ಕ್ರಮಬದ್ಧವಾಗಿ ಸೃಷ್ಟಿಸಿರುವವನು. ಪರಮ ದಯಾವಂತನ** (ಅಲ್ಲಾಹನ) **ಸೃಷ್ಟಿಕಾರ್ಯದಲ್ಲಿ ಯಾವ ಅಸಂಬದ್ಧತೆಯನ್ನೂ ನೀನು ಕಾಣಲಾರೆ. ನೀನು ಪುನಃ ನೋಡು. ಏನಾದರೂ ಲೋಪದೋಷವಿದೆಯೇ?**

الَّذِيْ خَلَقَ سَبْعَ سَمٰوٰتٍ طِبَاقًا ۭ مَا تَرٰى فِيْ خَلْقِ الرَّحْمٰنِ مِنْ تَفٰوُتٍ ۭ فَارْجِعِ الْبَصَرَ ۙ هَلْ تَرٰى مِنْ فُطُوْرٍ (٤)

**5. ಪುನಃ ಎರಡು ಸಲ ದೃಷ್ಟಿ ಹರಿಸಿ ನೋಡು. ದೃಷ್ಟಿ ಸೋತು, ಬಳಲಿ ನಿನ್ನೆಡೆಗೆಯೇ ಮರಳುವುದು.**

ثُمَّ ارْجِعِ الْبَصَرَ كَرَّتَيْنِ يَنْقَلِبْ اِلَيْكَ الْبَصَرُ خَاسِئًا وَّهُوَ حَسِيْرٌ (٥)

**6. ಅತಿ ಕೆಳಗಿನ ಆಕಾಶವನ್ನು ದೀಪಗಳಿಂದ ನಾವು ಅಲಂಕರಿಸಿದ್ದೇವೆ. ಆ ಮೂಲಕ ಶೈತಾನ್‌ಗಳು ಒದ್ದೋಡಿಸಲ್ಪಡುವಂತೆ ನಾವು ಮಾಡಿದ್ದೇವೆ. ಜ್ವಲಿಸುತ್ತಿರುವ ಅಗ್ನಿಯ ಶಿಕ್ಷೆಯನ್ನು ನಾವು ಅವರಿಗೆ ಸಿದ್ಧಪಡಿಸಿಟ್ಟಿದ್ದೇವೆ.**

وَلَقَدْ زَيَّنَّا السَّمَاۗءَ الدُّنْيَا بِمَصَابِيْحَ وَجَعَلْنٰهَا رُجُوْمًا لِّلشَّيٰطِيْنِ وَاَعْتَدْنَا لَهُمْ عَذَابَ السَّعِيْرِ (٦)





**7. ಯಾರು ತಮ್ಮ ಪ್ರಭುವನ್ನು ನಂಬುವುದಿಲ್ಲವೋ ಅವರಿಗೆ ನರಕ ಶಿಕ್ಷೆಯಿದೆ. ಅದು ಬಲು ಕೆಟ್ಟ ತಂಗುದಾಣವಾಗಿದೆ.**

وَلِلَّذِيْنَ كَفَرُوْا بِرَبِّهِمْ عَذَابُ جَهَنَّمَ ۭ وَبِئْسَ الْمَصِيْرُ (٧)

**8. ಅವರು ಅದರಲ್ಲಿ ಹಾಕಲ್ಪಡುವಾಗ ಕುದಿಯುತ್ತಿರುವ ಅದರ ಭೋರ್ಗರೆತವನ್ನು ಅವರು ಕೇಳುವರು.**

اِذَآ اُلْقُوْا فِيْهَا سَمِعُوْا لَهَا شَهِيْقًا وَّهِيَ تَفُوْرُ (٨)

**9. ರೋಷಾವೇಶದಿಂದ ಅದು ಬಿರಿದು ಹೋಗುವಂತಾಗುವುದು. ಪ್ರತಿಯೊಂದು ಗುಂಪು ಜನರನ್ನು ಅದರಲ್ಲಿ ಹಾಕಲಾಗುವಾಗ ಅದರ ಕಾವಲುಗಾರರು ಅವರೊಡನೆ, 'ನಿಮ್ಮ ಬಳಿಗೆ ಮುನ್ನೆಚ್ಚರಿಕೆಗಾರ** (ದೇವಸಂದೇಶವಾಹಕ) **ಯಾರೂ ಬಂದಿರಲಿಲ್ಲವೇ?' ಎಂದು ಕೇಳುವರು.**

تَكَادُ تَمَيَّزُ مِنَ الْغَيْظِ ۭ كُلَّمَآ اُلْقِيَ فِيْهَا فَوْجٌ سَاَلَهُمْ خَزَنَتُهَآ اَلَمْ يَاْتِكُمْ نَذِيْرٌ (٩)

**10. ಅವರು ಉತ್ತರಿಸುವರು: "ಹೌದು, ನಮ್ಮ ಬಳಿಗೆ ಮುನ್ನೆಚ್ಚರಿಕೆಗಾರನ ಆಗಮನವಾಗಿತ್ತು. ಆದರೆ ನಾವು ಸುಳ್ಳಾಗಿಸಿದೆವು ಮತ್ತು 'ಅಲ್ಲಾಹನು ಏನನ್ನೂ ಅವತೀರ್ಣಗೊಳಿಸಿಲ್ಲ; ನೀನು ಬಲು ದೊಡ್ಡ ತಪ್ಪು ಹಾದಿಯಲ್ಲಿರುವೆ' ಎಂದು ನಾವು ಹೇಳಿದೆವು."**

قَالُوْا بَلٰى قَدْ جَاۗءَنَا نَذِيْرٌ ڏ فَكَذَّبْنَا وَقُلْنَا مَا نَزَّلَ اللّٰهُ مِنْ شَيْءٍ ښ اِنْ اَنْتُمْ اِلَّا فِيْ ضَلٰلٍ كَبِيْرٍ (١٠)

**11. ಅವರು** (ನರಕವಾಸಿಗಳು) **ಹೇಳುವರು: 'ನಾವು** (ಆ ಸಂದೇಶವನ್ನು) **ಕೇಳಿದ್ದರೆ ಅಥವಾ ಮನವರಿಕೆ ಮಾಡಿದ್ದರೆ ನಾವು ಈ ಜ್ವಲಿಸುವ ಅಗ್ನಿಯಲ್ಲಿ ದಹಿಸಲ್ಪಡುವವರಲ್ಲಿ ಸೇರುತ್ತಿರಲಿಲ್ಲ.'**

وَقَالُوْا لَوْ كُنَّا نَسْمَعُ اَوْ نَعْقِلُ مَا كُنَّا فِيْٓ اَصْحٰبِ السَّعِيْرِ (١١)

**12. ಹಾಗೆ ಅವರು ತಮ್ಮ ತಪ್ಪೊಪ್ಪಿಕೊಳ್ಳುವರು. ಆಗ 'ನರಕವಾಸಿಗಳಿಗೆ ಶಾಪ'** (ಎಂದು ಹೇಳಲ್ಪಡುವುದು).

فَاعْتَرَفُوْا بِذَنْۢبِهِمْ ۚ فَسُحْقًا لِّاَصْحٰبِ السَّعِيْرِ (١٢)

**13. ಕಣ್ಣಿಗೆ ಕಾಣದೆಯೂ ಯಾರು ತಮ್ಮ ಪ್ರಭುವಿನ ಭಯವಿರಿಸಿಕೊಳ್ಳುತ್ತಾರೋ ನಿಶ್ಚಯವಾಗಿಯೂ ಅವರಿಗೆ ಪಾಪವಿಮುಕ್ತಿ ಮತ್ತು ಬಲುದೊಡ್ಡ ಪ್ರತಿಫಲವಿದೆ.**

اِنَّ الَّذِيْنَ يَخْشَوْنَ رَبَّهُمْ بِالْغَيْبِ لَهُمْ مَّغْفِرَةٌ وَّاَجْرٌ كَبِيْرٌ (١٣)

**14.** ನಿಮ್ಮ ಮಾತುಗಳನ್ನು ನೀವು ಗೋಪ್ಯವಾಗಿರಿಸಿದರೂ ಅಥವಾ ಬಹಿರಂಗಪಡಿಸಿದರೂ ಅವನು (ಅಲ್ಲಾಹನು) ಹೃದಯಗಳೊಳಗಿರುವುದನ್ನೆಲ್ಲ ಚೆನ್ನಾಗಿ ಬಲ್ಲವನಾಗಿದ್ದಾನೆ.

وَاَسِرُّوْا قَوْلَكُمْ اَوِاجْهَرُوْا بِهٖ ؕ اِنَّهٗ عَلِيْمٌۢ بِذَاتِ الصُّدُوْرِ ﴿١٣﴾

**15.** ಸೃಷ್ಟಿಸಿದವನಿಗೆ ಅದು ಗೊತ್ತಿರುವುದಿಲ್ಲವೇನು? ಅವನು ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಬಲ್ಲವನೂ ಸರ್ವಜ್ಞನೂ ಆಗಿದ್ದಾನೆ.

اَلَا يَعْلَمُ مَنْ خَلَقَ ؕ وَهُوَ اللَّطِيْفُ الْخَبِيْرُ ﴿١٤﴾

**16.** ಅವನೇ ಭೂಮಿಯನ್ನು ನಿಮಗೆ ವಾಸಯೋಗ್ಯವನ್ನಾಗಿ ಮಾಡಿದವನು. ಆದ್ದರಿಂದ ಅದರ ಮಾರ್ಗಗಳಲ್ಲಿ ನೀವು ಸಂಚರಿಸಿರಿ ಹಾಗೂ ಅವನು ಒದಗಿಸಿದ ಆಹಾರಗಳಿಂದ ತಿನ್ನಿರಿ. ನಿಮ್ಮ ಪುನರುತ್ಥಾನ ಸಹ ಅವನ ಬಳಿಗೆಯೇ ಆಗಿದೆ.

هُوَ الَّذِيْ جَعَلَ لَكُمُ الْاَرْضَ ذَلُوْلًا فَامْشُوْا فِيْ مَنَاكِبِهَا وَكُلُوْا مِنْ رِّزْقِهٖ ؕ وَاِلَيْهِ النُّشُوْرُ ﴿١٥﴾

**17.** ಭೂಮಿ ಕಂಪಿಸುತ್ತಿರುವಾಗ ಆಕಾಶದಲ್ಲಿರುವವನು (ಅಲ್ಲಾಹನು) ನಿಮ್ಮನ್ನು ಭೂಮಿಯೊಳಗೆ ಹುಗಿದು ಬಿಡುವಂತೆ ಮಾಡುವ ಕುರಿತು ನೀವು ನಿಶ್ಚಿಂತರಾಗಿದ್ದೀರಾ?

ءَاَمِنْتُمْ مَّنْ فِي السَّمَآءِ اَنْ يَّخْسِفَ بِكُمُ الْاَرْضَ فَاِذَا هِيَ تَمُوْرُ ﴿١٦﴾

**18.** ಅಥವಾ ಆಕಾಶದಲ್ಲಿರುವವನು ನಿಮ್ಮ ಮೇಲೆ ಒಂದು ಮರಳ ಬಿರುಗಾಳಿ ಬೀಸುವಂತೆ ಮಾಡುವ ಕುರಿತು ನೀವು ನಿರ್ಭೀತರಾಗಿದ್ದೀರಾ? ನನ್ನ ಮುನ್ನೆಚ್ಚರಿಕೆ ಹೇಗಿದೆಯೆಂದು ಆಗ ನಿಮಗೆ ಗೊತ್ತಾಗಬಹುದು.

اَمْ اَمِنْتُمْ مَّنْ فِي السَّمَآءِ اَنْ يُّرْسِلَ عَلَيْكُمْ حَاصِبًا ؕ فَسَتَعْلَمُوْنَ كَيْفَ نَذِيْرِ ﴿١٧﴾

**19.** ನಿಜವಾಗಿಯೂ ಇವರಿಗಿಂತ ಮುಂಚೆ ಇದ್ದವರು ಸಹ (ಪ್ರವಾದಿಗಳನ್ನು) ಸುಳ್ಳಾಗಿಸಿದ್ದರು. ಆಗ ನನ್ನ ಶಿಕ್ಷೆ ಹೇಗಿತ್ತು!

وَلَقَدْ كَذَّبَ الَّذِيْنَ مِنْ قَبْلِهِمْ فَكَيْفَ كَانَ نَكِيْرِ ﴿١٨﴾

**20.** ಅವರ ಮೇಲಿನಿಂದ ಪಕ್ಷಿಗಳು[471] ರೆಕ್ಕೆಗಳನ್ನು ಹರಡಿ ಹಾರುತ್ತಿರುವುದನ್ನು ಅವರು ಕಾಣುವುದಿಲ್ಲವೇ? ಕೆಲವು ಸಲ (ಕೊಳ್ಳೆಯ ಮೇಲೆರಗಲಿಕ್ಕಾಗಿ) ಅವು ರೆಕ್ಕೆಗಳನ್ನು ಮುದುಡಿಸಿಕೊಳ್ಳುತ್ತವೆ. ಪರಮ ದಯಾವಂತನ (ಅಲ್ಲಾಹನ) ಹೊರತು ಬೇರೆ ಯಾರೂ ಅವುಗಳನ್ನು ತಡೆಯುವುದಿಲ್ಲ. ಅವನು ಸರ್ವವನ್ನೂ ಚೆನ್ನಾಗಿ ವೀಕ್ಷಿಸುತ್ತಾನೆ.

اَوَلَمْ يَرَوْا اِلَى الطَّيْرِ فَوْقَهُمْ صٰٓفّٰتٍ وَّيَقْبِضْنَ ؕۘ مَا يُمْسِكُهُنَّ اِلَّا الرَّحْمٰنُ ؕ اِنَّهٗ بِكُلِّ شَيْءٍۢ بَصِيْرٌ ﴿١٩﴾

471. ರಣಹದ್ದುಗಳೆಂದು ತಾತ್ಪರ್ಯ





**21.** ಅಥವಾ ಪರಮ ದಯಾವಂತನ ವಿರುದ್ಧವಾಗಿ ನಿಮಗೆ ಸಹಾಯ ಮಾಡಬಲ್ಲ ನಿಮ್ಮ ಆ ಸೇನೆ ಯಾವುದು? ಅವಿಶ್ವಾಸಿಗಳು ಕೇವಲ ಭ್ರಮೆಗೀಡಾಗಿದ್ದಾರೆ.

اَمَّنْ هٰذَا الَّذِيْ هُوَ جُنْدٌ لَّكُمْ يَنْصُرُكُمْ مِّنْ دُوْنِ الرَّحْمٰنِ ؕ اِنِ الْكٰفِرُوْنَ اِلَّا فِيْ غُرُوْرٍ ﴿٢٠﴾

**22.** ಅಥವಾ ಅವನು ನಿಮಗೆ ತನ್ನ (ಕಡೆಯಿಂದ ಒದಗಿಸುವ) ಆಹಾರವನ್ನು ತಡೆಹಿಡಿದರೆ ಮತ್ತೆ ನಿಮಗೆ ಆಹಾರ ಒದಗಿಸುವವನು ಯಾರು? ಆದರೆ ಅವರು ಅಹಂಕಾರ ಮತ್ತು ವಿರೋಧದಿಂದ ಹಟಮಾರಿತನ ತೋರಿಸುತ್ತಾರೆ.

اَمَّنْ هٰذَا الَّذِيْ يَرْزُقُكُمْ اِنْ اَمْسَكَ رِزْقَهٗ ۚ بَلْ لَّجُّوْا فِيْ عُتُوٍّ وَّنُفُوْرٍ ﴿٢١﴾

**23.** ಹೀನ ಸ್ಥಿತಿಯಲ್ಲಿ ಮೋರೆ ಕೆಳಗೆ ಹಾಕಿ ನಡೆಯುವವನು ಮಾರ್ಗದರ್ಶನ ಪಡೆದವನೋ ಅಥವಾ ನೇರವಾದ ಮಾರ್ಗದಲ್ಲಿ ಮುಖವೆತ್ತಿ ನೆಟ್ಟಗೆ ನಡೆಯುವವನೋ?

اَفَمَنْ يَّمْشِيْ مُكِبًّا عَلٰى وَجْهِهٖۤ اَهْدٰۤى اَمَّنْ يَّمْشِيْ سَوِيًّا عَلٰى صِرَاطٍ مُّسْتَقِيْمٍ ﴿٢٢﴾

**24.** ಹೇಳು: 'ಅವನೇ ನಿಮ್ಮನ್ನು ಅಸ್ತಿತ್ವಕ್ಕೆ ತಂದವನು ಹಾಗೂ ನಿಮಗೆ ಕಿವಿಗಳನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ದಯಪಾಲಿಸಿದವನು. ಆದರೆ ನೀವು ಕೃತಜ್ಞತೆ ಸಲ್ಲಿಸುವುದಿಲ್ಲ.'

قُلْ هُوَ الَّذِيْۤ اَنْشَاَكُمْ وَجَعَلَ لَكُمُ السَّمْعَ وَالْاَبْصَارَ وَالْاَفْـِٕدَةَ ؕ قَلِيْلًا مَّا تَشْكُرُوْنَ ﴿٢٣﴾

**25.** ಹೇಳು: 'ಅವನೇ ನಿಮ್ಮನ್ನು ಭೂಮಿಯಲ್ಲಿ ವೃದ್ಧಿಗೊಳಿಸಿದವನು. ಅವನ ಸನ್ನಿಧಿಯಲ್ಲೇ ನೀವು ಒಟ್ಟುಗೂಡಿಸಲ್ಪಡುವಿರಿ.'

قُلْ هُوَ الَّذِيْ ذَرَاَكُمْ فِي الْاَرْضِ وَاِلَيْهِ تُحْشَرُوْنَ ﴿٢٤﴾

**26.** 'ನೀವು ಸತ್ಯವಂತರೆಂದಾದರೆ ಈ ವಾಗ್ದಾನ ಯಾವಾಗ ಈಡೇರುವುದು?' ಎಂದು ಅವರು ಕೇಳುತ್ತಾರೆ.

وَيَقُوْلُوْنَ مَتٰى هٰذَا الْوَعْدُ اِنْ كُنْتُمْ صٰدِقِيْنَ ﴿٢٥﴾

**27.** ಹೇಳು: '(ಆ ಬಗ್ಗೆ) ತಿಳುವಳಿಕೆ ಅಲ್ಲಾಹನಿಗೆ ಮಾತ್ರವಿದೆ. ನಾನಾದರೋ, ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನು ಮಾತ್ರ.'

قُلْ اِنَّمَا الْعِلْمُ عِنْدَ اللّٰهِ ۪ وَاِنَّمَاۤ اَنَا نَذِيْرٌ مُّبِيْنٌ ﴿٢٦﴾

**28.** ಆದರೆ ಅವರು ಅದನ್ನು (ಆ ಶಿಕ್ಷೆಯನ್ನು) ಸಮೀಪದಲ್ಲಿ ಕಾಣುವಾಗ ಅವಿಶ್ವಾಸಿಗಳ ಮುಖಗಳು ಚಿಂತಾಕ್ರಾಂತವಾಗುವುವು. 'ನೀವು ಏನನ್ನು

فَلَمَّا رَاَوْهُ زُلْفَةً سِيْٓـَٔتْ وُجُوْهُ الَّذِيْنَ

كَفَرُوْا وَقِيْلَ هٰذَا الَّذِيْ كُنْتُمْ بِهٖ
تَدَّعُوْنَ ﴿۲۸﴾

ಕೇಳುತ್ತಿದ್ದಿರೋ ಅದೇ ಇದು' ಎಂದು ಅವರೊಡನೆ ಹೇಳಲಾಗುವುದು.

قُلْ اَرَءَيْتُمْ اِنْ اَهْلَكَنِيَ اللّٰهُ وَمَنْ مَّعِيَ
اَوْ رَحِمَنَا فَمَنْ يُّجِيْرُ الْكٰفِرِيْنَ مِنْ
عَذَابٍ اَلِيْمٍ ﴿۲۹﴾

29. ಹೇಳು: 'ಯೋಚಿಸಿ ನೋಡಿರಿ - ಅಲ್ಲಾಹನು ನನ್ನನ್ನೂ ನನ್ನ ಜೊತೆಯಲ್ಲಿರುವವರನ್ನೂ ನಾಶಮಾಡಬಹುದು. ಅಥವಾ ನಮ್ಮ ಮೇಲೆ ಕರುಣೆದೋರಬಹುದು. (ಆದರೆ) ಯಾತನಾಮಯವಾದ ಶಿಕ್ಷೆಯಿಂದ ಅವಿಶ್ವಾಸಿಗಳನ್ನು ಪಾರುಮಾಡುವವನು ಯಾರು?'

قُلْ هُوَ الرَّحْمٰنُ اٰمَنَّا بِهٖ وَعَلَيْهِ تَوَكَّلْنَا
فَسَتَعْلَمُوْنَ مَنْ هُوَ فِيْ ضَلٰلٍ مُّبِيْنٍ ﴿۳۰﴾

30. ಹೇಳು: 'ಅವನು ಪರಮ ದಯಾವಂತನು. ನಾವು ಅವನನ್ನು ನಂಬುತ್ತೇವೆ. ಅವನ ಮೇಲೆ ನಾವು ಭರವಸೆಯಿಟ್ಟಿದ್ದೇವೆ. ಅಂತೂ, ಸ್ಪಷ್ಟವಾದ ತಪ್ಪು ಹಾದಿಯಲ್ಲಿರುವವರು ಯಾರೆಂದು ಶೀಘ್ರದಲ್ಲೇ ನಿಮಗೆ ಮನವರಿಕೆಯಾಗುವುದು.'

قُلْ اَرَءَيْتُمْ اِنْ اَصْبَحَ مَآؤُكُمْ غَوْرًا فَمَنْ
يَّأْتِيْكُمْ بِمَآءٍ مَّعِيْنٍ ﴿۳۱﴾

31. ಹೇಳು: 'ಯೋಚಿಸಿ ನೋಡಿರಿ - ನಿಮ್ಮ ನೀರು (ಭೂಮಿಯ ತಳಕ್ಕೆ) ಇಂಗಿ ಹೋದರೆ, ಹರಿಯುವ ಶುದ್ಧ ಜಲವನ್ನು ನಿಮಗೆ ಒದಗಿಸುವವರು ಯಾರು?'

سُوْرَةُ الْقَلَمِ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّخَمْسُوْنَ اٰيَةً وَّرُكُوْعَانِ

# 68. ಅಲ್‌ಖಲಂ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 53 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. 'ನೂನ್'.[471A] ಲೇಖನಿಯಾಣೆ ಮತ್ತು ಅವರು ಏನನ್ನು ಬರೆಯುತ್ತಾರೋ ಅದರ ಆಣೆ.**

نٓ وَالْقَلَمِ وَمَا يَسْطُرُوْنَ ﴿٢﴾

**3. ನೀನು, ನಿನ್ನ ಪ್ರಭುವಿನ ದಯೆಯಿಂದ, ಹುಚ್ಚನಲ್ಲ.**

مَآ اَنْتَ بِنِعْمَةِ رَبِّكَ بِمَجْنُوْنٍ ﴿٣﴾

**4. ಖಂಡಿತವಾಗಿಯೂ ನಿನಗೆ ಎಂದಿಗೂ ಕೊನೆಗೊಳ್ಳದ ಪ್ರತಿಫಲವಿದೆ.**

وَاِنَّ لَكَ لَاَجْرًا غَيْرَ مَمْنُوْنٍ ﴿٤﴾

**5. ದಿಟವಾಗಿಯೂ ನೀನು ಮಹೋನ್ನತವಾದ ನೈತಿಕ ಗುಣಗಳನ್ನು ಹೊಂದಿರುವೆ.**

وَاِنَّكَ لَعَلٰى خُلُقٍ عَظِيْمٍ ﴿٥﴾

**6. ನೀನು ಶೀಘ್ರದಲ್ಲೇ ಕಾಣುವೆ. ಅವರು ಸಹ ಕಾಣುವರು -**

فَسَتُبْصِرُ وَيُبْصِرُوْنَ ﴿٦﴾

**7. ನಿಮ್ಮಲ್ಲಿ ಯಾರು ಚಿತ್ತಭ್ರಮಿಯೆಂದು.**

بِاَيِّيكُمُ الْمَفْتُوْنُ ﴿٧﴾

**8. ತನ್ನ ಮಾರ್ಗದಿಂದ ವ್ಯತಿಕ್ರಮಿಸಿದವರು ಯಾರೆಂದು ನಿನ್ನ ಪ್ರಭು ಚೆನ್ನಾಗಿ ಬಲ್ಲವನಾಗಿದ್ದಾನೆ. ಸತ್ಪಥ ಪಡೆದವರ ಬಗ್ಗೆ ಸಹ ಅವನು ಚೆನ್ನಾಗಿ ಬಲ್ಲವನಾಗಿದ್ದಾನೆ.**

اِنَّ رَبَّكَ هُوَ اَعْلَمُ بِمَنْ ضَلَّ عَنْ سَبِيْلِهٖ ۖ وَهُوَ اَعْلَمُ بِالْمُهْتَدِيْنَ ﴿٨﴾

**9. ಆದ್ದರಿಂದ** (ಸತ್ಯವನ್ನು) **ನಿರಾಕರಿಸುವವರ ಮಾತನ್ನು ನೀನು ಒಪ್ಪಬೇಡ.**

فَلَا تُطِعِ الْمُكَذِّبِيْنَ ﴿٩﴾

471A. "ನೂನ್" ಎಂಬ ಅಕ್ಷರ ಮಸಿಕುಡಿಕೆಯನ್ನು ಸೂಚಿಸುತ್ತದೆ. ಪ್ರವಾದಿ ಯೂನುಸ್ (ದುನ್ನೂನ್) ರ ಕುರಿತು ಸಹ ಇದು ಸೂಚಿಸುತ್ತದೆ.





**10. ನೀನು ಮೃದುತ್ವ ಪಾಲಿಸಿದರೆ ತಾವು ಸಹ ಮೃದುತ್ವ ಪಾಲಿಸುವೆವೆಂದು ಅವರು ಇಚ್ಛಿಸುತ್ತಾರೆ.**

وَدُّوْا لَوْ تُدْهِنُ فَيُدْهِنُوْنَ ﴿١٠﴾

**11. ಆದರೆ ಹೆಚ್ಚಾಗಿ ಆಣೆ ಹಾಕುವ ಯಾವ ನೀಚನ ಮಾತನ್ನೂ ನೀನು ಒಪ್ಪಬೇಡ.**

وَلَا تُطِعْ كُلَّ حَلَّافٍ مَّهِيْنٍ ﴿١١﴾

**12.** (ಹಾಗೆಯೇ) **ಪರದೂಷಣೆ ಮಾಡುವವನ, ಚಾಡಿಕೋರನ,**

هَمَّازٍ مَّشَّآءٍۢ بِنَمِيْمٍ ﴿١٢﴾

**13. ಒಳಿತನ್ನು ತಡೆಯುವವನ, ಹದ್ದುಮೀರಿ ವರ್ತಿಸುವವನ, ಪಾಪಿಯ,**

مَّنَّاعٍ لِّلْخَيْرِ مُعْتَدٍ اَثِيْمٍ ﴿١٣﴾

**14. ದುಃಸ್ವಭಾವಿಯ ಹಾಗೂ ಜಾರಜನ** (ಮಾತನ್ನೂ ನೀನು ಒಪ್ಪಬೇಡ).

عُتُلٍّۭ بَعْدَ ذٰلِكَ زَنِيْمٍ ﴿١٤﴾

**15. ತಾನು ಧಾರಾಳ ಐಶ್ವರ್ಯ ಮತ್ತು ಸಂತಾನ ಹೊಂದಿದವನೆಂಬ ಅಹಂಭಾವದಿಂದ,**

اَنْ كَانَ ذَا مَالٍ وَّبَنِيْنَ ﴿١٥﴾

**16. ನಮ್ಮ ವಚನಗಳನ್ನು ಅವನಿಗೆ ಓದಿ ಹೇಳುವಾಗ 'ಇವು ಪೂರ್ವಿಕರ ಕಟ್ಟು ಕಥೆಗಳು' ಎಂದು ಅವನು ಉದ್ಗರಿಸುತ್ತಾನೆ.**

اِذَا تُتْلٰى عَلَيْهِ اٰيٰتُنَا قَالَ اَسَاطِيْرُ الْاَوَّلِيْنَ ﴿١٦﴾

**17. ನಾವು ಬೇಗನೆ** (ಅವನ) **ಮುಸುಡಿನ ಮೇಲೆ ಮುದ್ರೆಯೊತ್ತುವೆವು.**

سَنَسِمُهٗ عَلَى الْخُرْطُوْمِ ﴿١٧﴾

**18. ದಿಟವಾಗಿಯೂ ಇವರನ್ನು ನಾವು ಪರೀಕ್ಷೆಗೆ ಗುರಿಪಡಿಸಿದೆವು - ಆ ತೋಟಗಾರರನ್ನು ನಾವು ಪರೀಕ್ಷೆಗೆ ಗುರಿಪಡಿಸಿದಂತೆ. 'ಖಂಡಿತವಾಗಿಯೂ ನಾವು ಬೆಳಗಿನ ಜಾವದಲ್ಲಿ ಅದರ ಹಣ್ಣುಗಳನ್ನೆಲ್ಲ ಕೊಯ್ಯುವೆವು' ಎಂದು ಅವರು ಶಪಥ ಹಾಕಿದ್ದರು.**

اِنَّا بَلَوْنٰهُمْ كَمَا بَلَوْنَآ اَصْحٰبَ الْجَنَّةِ ۚ اِذْ اَقْسَمُوْا لَيَصْرِمُنَّهَا مُصْبِحِيْنَ ﴿١٨﴾

**19. ಅವರು ಅದಕ್ಕೆ ಅಡಚಣೆಯನ್ನೇನೂ ಕಂಡಿರಲಿಲ್ಲ.**[472]

وَلَا يَسْتَثْنُوْنَ ﴿١٩﴾

472. ತಮ್ಮ ಸ್ವಂತ ಶಕ್ತಿ ಸಾಮರ್ಥ್ಯಗಳ ಮೇಲೆ ಭರವಸೆಹೊಂದಿ ಅವರು ಹಾಗೆ ಶಪಥ ಹಾಕಿದ್ದರು. ಹಾಗೆ ಅವರು "ಇನ್‌ಶಾ ಅಲ್ಲಾಹ್" (ಅಲ್ಲಾಹನು ಇಚ್ಛಿಸಿದರೆ) ಎಂದು ಹೇಳಿರಲಿಲ್ಲ.

**20.** ಹಾಗೆ ಅವರು ನಿದ್ರಿಸುತ್ತಿದ್ದಾಗ ನಿನ್ನ ಪ್ರಭುವಿನ ಕಡೆಯಿಂದ ಒಂದು ವಿಪತ್ತು ಅದರ ಮೇಲೆರಗಿತು.

فَطَافَ عَلَيْهَا طَآئِفٌ مِّن رَّبِّكَ وَهُمْ نَآئِمُونَ ٢٠

**21.** ತತ್ಪರಿಣಾಮವಾಗಿ (ಹಿಂದಿನ ರಾತ್ರಿ) ಕೊಯ್ದು ಹಾಕಲಾದ ಹೊಲದಂತೆ ಬೆಳಿಗ್ಗೆ ಅದು ಗೋಚರಿಸಿತು.

فَأَصْبَحَتْ كَالصَّرِيمِ ٢١

**22.** ಬೆಳಗಿನ ಜಾವ ಅವರು ಒಬ್ಬರಿನ್ನೊಬ್ಬರನ್ನು ಕರೆದು ಹೇಳಿದರು:

فَتَنَادَوْا مُصْبِحِينَ ٢٢

**23.** 'ನೀವು (ಬೆಳೆ) ಕೊಯ್ಯಲು ಬಯಸುವಿರಾದರೆ ನಿಮ್ಮ ತೋಟಗಳಿಗೆ ಬೆಳಿಗ್ಗೆ ಬೇಗನೆ ಹೋಗಿರಿ.'

أَنِ اغْدُوا عَلَىٰ حَرْثِكُمْ إِن كُنتُمْ صَارِمِينَ ٢٣

**24.** ಹಾಗೆ ಅವರು ಹೊರಟರು. ಅವರು ಪರಸ್ಪರ ಪಿಸುಗುಟ್ಟುತ್ತಿದ್ದರು:

فَانطَلَقُوا وَهُمْ يَتَخَافَتُونَ ٢٤

**25.** 'ಇಂದು ಅಲ್ಲಿ ನಿಮ್ಮ ಬಳಿಗೆ ಯಾವ ಬಡವನನ್ನೂ ಬರಲಿಕ್ಕೆ ಬಿಡಬಾರದು.'

أَن لَّا يَدْخُلَنَّهَا الْيَوْمَ عَلَيْكُم مِّسْكِينٌ ٢٥

**26.** ಹಾಗೆ ಅವರು (ಜಿಪುಣತೆಯಿಂದ) ತಮ್ಮ ಉದ್ದೇಶ ಸಾಧಿಸಲು ಸುಸಜ್ಜಿತರಾಗಿ ಮುಂಜಾನೆ ಹೊರಟರು.

وَغَدَوْا عَلَىٰ حَرْدٍ قَادِرِينَ ٢٦

**27.** ಹಾಗೆ ಅವರು ಅದನ್ನು (ಆ ತೋಟವನ್ನು) ಕಂಡಾಗ ಉದ್ಗರಿಸಿದರು: 'ಅಯ್ಯೋ ನಾವು ಸತ್ತೇಬಿಟ್ಟೆವು.'[472A]

فَلَمَّا رَأَوْهَا قَالُوا إِنَّا لَضَالُّونَ ٢٧

**28.** 'ಅಕಟಾ, ನಾವು ಎಲ್ಲವನ್ನೂ ಕಳ ಕೊಂಡಿದ್ದೇವೆ.'

بَلْ نَحْنُ مَحْرُومُونَ ٢٨

**29.** ಅವರ ಪೈಕಿ ಅತ್ಯುತ್ತಮನಾದವನು ಹೇಳಿದನು: 'ನೀವು (ಅಲ್ಲಾಹನ) ಸ್ತುತಿಸ್ತೋತ್ರ ಮಾಡಲಿಲ್ಲವೇಕೆ? ಎಂದು ನಾನು ನಿಮ್ಮೊಡನೆ ಕೇಳಿರಲಿಲ್ಲವೇ?'

قَالَ أَوْسَطُهُمْ أَلَمْ أَقُل لَّكُمْ لَوْلَا تُسَبِّحُونَ ٢٩

472A. ضَلَّ الرجلُ: ماتَ (المنجد)





**30.** (ಆಗ) ಅವರು, 'ನಮ್ಮ ಪ್ರಭುವಿನ ಪರಿಶುದ್ಧತೆಯನ್ನು ನಾವು ಕೊಂಡಾಡುತ್ತೇವೆ. ನಾವು ಅಧರ್ಮಿಗಳೇ ಸರಿ' ಎಂದು ಹೇಳಿದರು.

قَالُوا سُبْحَانَ رَبِّنَا إِنَّا كُنَّا ظَالِمِينَ ٣٠

**31.** ಮತ್ತೆ ಅವರು ಪರಸ್ಪರ ಆಕ್ಷೇಪಿಸುತ್ತಾ ಒಬ್ಬರಿಗೊಬ್ಬರು ತಿರುಗಿ ಬಿದ್ದರು.

فَأَقْبَلَ بَعْضُهُمْ عَلَىٰ بَعْضٍ يَتَلَاوَمُونَ ٣١

**32.** ಅವರು ಪ್ರಲಾಪಿಸಿದರು: 'ಅಕಟಾ! ನಾವು ಧಿಕ್ಕಾರಿಗಳಾಗಿ ಬಿಟ್ಟೆವಲ್ಲಾ!

قَالُوا يَا وَيْلَنَا إِنَّا كُنَّا طَاغِينَ ٣٢

**33.** 'ನಮ್ಮ ಪ್ರಭು ಇದಕ್ಕಿಂತ ಉತ್ತಮವಾದುದನ್ನು (ತೋಟವನ್ನು) ನಮಗೆ ಬದಲಿಗೆ ನೀಡಬಹುದು. ನಾವು ವಿನಮ್ರವಾಗಿ ನಮ್ಮ ಪ್ರಭುವಿಗೆ ಬೇಡಿಕೆಯನ್ನು ಸಲ್ಲಿಸುತ್ತೇವೆ.'

عَسَىٰ رَبُّنَا أَن يُبْدِلَنَا خَيْرًا مِّنْهَا إِنَّا إِلَىٰ رَبِّنَا رَاغِبُونَ ٣٣

**34.** (ಇಹಲೋಕದ) ಶಿಕ್ಷೆ ಹೀಗಿದೆ. ಪರಲೋಕದ ಶಿಕ್ಷೆ ಇದಕ್ಕಿಂತಲೂ ಕಠಿಣ. ಅವರು ಮನವರಿಕೆ ಮಾಡುತ್ತಿದ್ದರೆ!

كَذَٰلِكَ الْعَذَابُ ۖ وَلَعَذَابُ الْآخِرَةِ أَكْبَرُ ۚ لَوْ كَانُوا يَعْلَمُونَ ٣٤

**35.** ಖಂಡಿತವಾಗಿಯೂ ಸಜ್ಜನರಿಗೆ ತಮ್ಮ ಪ್ರಭುವಿನ ಬಳಿಯಲ್ಲಿ ಪರಮ ಸುಖದ ಸ್ವರ್ಗಗಳಿವೆ.

إِنَّ لِلْمُتَّقِينَ عِندَ رَبِّهِمْ جَنَّاتِ النَّعِيمِ ٣٥

**36.** ಏನು, ವಿಧೇಯತೆ ತೋರಿಸುವವರನ್ನು ತಪ್ಪಿತಸ್ಥರಂತೆ ನಾವು ಪರಿಗಣಿಸುವೆವೇ?

أَفَنَجْعَلُ الْمُسْلِمِينَ كَالْمُجْرِمِينَ ٣٦

**37.** ನಿಮಗೇನಾಗಿದೆ? ನೀವು ಹೇಗೆ ತೀರ್ಮಾನಿಸುವಿರಿ?

مَا لَكُمْ كَيْفَ تَحْكُمُونَ ٣٧

**38.** ಅಥವಾ ನೀವು ಓದುವ ಗ್ರಂಥವೇನಾದರೂ ನಿಮ್ಮ ಬಳಿ ಇದೆಯೇ?

أَمْ لَكُمْ كِتَابٌ فِيهِ تَدْرُسُونَ ٣٨

**39.** ನೀವು ಆಯ್ಕೆ ಮಾಡುವುದೆಲ್ಲ ಅದರಲ್ಲಿ ನಿಮಗೆ ಸಿಗುವುದೇ?

إِنَّ لَكُمْ فِيهِ لَمَا تَخَيَّرُونَ ٣٩

**40.** ಅಥವಾ ನೀವು ತೀರ್ಮಾನಿಸುವುದೆಲ್ಲ ನಿಮಗೆ ಲಭಿಸುವುದೆಂಬ ಅಂತ್ಯ ದಿನದ ವರೆಗೆ ಜಾರಿಯಲ್ಲಿರುವ,

أَمْ لَكُمْ أَيْمَانٌ عَلَيْنَا بَالِغَةٌ إِلَىٰ يَوْمِ

ನಮ್ಮನ್ನು ಬದ್ಧರನ್ನಾಗಿ ಮಾಡುವ ಒಪ್ಪಂದವೇನಾದರೂ ನಿಮ್ಮ ಬಳಿಯಲ್ಲಿದೆಯೇ?

الْقِيٰمَةِ ۙ اِنَّ لَكُمْ لَمَا تَحْكُمُوْنَ ۝٣٩

**41.** ಅವರ ಪೈಕಿ ಇದಕ್ಕೆ ಯಾರು ಜವಾಬ್ದಾರ ಎಂದು ಅವರೊಡನೆ ಕೇಳು.

سَلْهُمْ اَيُّهُمْ بِذٰلِكَ زَعِيْمٌ ۝٤٠

**42.** ಅಥವಾ ಅವರಿಗೆ (ದೇವ) ಸಹಭಾಗಿಗಳ್ಯಾರಾದರೂ ಇದ್ದಾರೆಯೇ? ಅವರು ಸತ್ಯವಂತರೆಂದಾದರೆ, ಅವರು ತಮ್ಮ ಸಹಭಾಗಿಗಳನ್ನು ತರಲಿ.

اَمْ لَهُمْ شُرَكَاۗءُ ۚ فَلْيَاْتُوْا بِشُرَكَاۗىِٕهِمْ اِنْ كَانُوْا صٰدِقِيْنَ ۝٤١

**43.** ಅವರು ಅತ್ಯಂತ ಗಾಬರಿಗೊಳ್ಳುವ[473] ಹಾಗೂ ಸಾಷ್ಟಾಂಗವೆರಗಲಿಕ್ಕೆ ಕರೆಯಲ್ಪಡುವ ದಿನದಂದು, ಅವರಿಗೆ ಅದು (ಸಾಷ್ಟಾಂಗವೆರಗುವಿಕೆ) ಸಾಧ್ಯವಾಗದು.

يَوْمَ يُكْشَفُ عَنْ سَاقٍ وَّيُدْعَوْنَ اِلَى السُّجُوْدِ فَلَا يَسْتَطِيْعُوْنَ ۝٤٢

**44.** ಅವರ ಕಣ್ಣುಗಳು ಅಧೋಮುಖವಾಗಿರುವುವು. ಅಪಮಾನ ಅವರನ್ನು ಆವರಿಸುವುದು. ಅವರು ಸುರಕ್ಷಿತರಾಗಿದ್ದಾಗ ಸಾಷ್ಟಾಂಗವೆರಗಲಿಕ್ಕೆ ಅವರನ್ನು ಕರೆಯಲಾಗಿತ್ತು. (ಆಗ ಅವರು ಅದಕ್ಕೆ ಒಪ್ಪಿರಲಿಲ್ಲ.)

خَاشِعَةً اَبْصَارُهُمْ تَرْهَقُهُمْ ذِلَّةٌ ۭ وَقَدْ كَانُوْا يُدْعَوْنَ اِلَى السُّجُوْدِ وَهُمْ سٰلِمُوْنَ ۝٤٣

**45.** ಆದ್ದರಿಂದ ನನ್ನನ್ನೂ ಈ ಸಂಗತಿಯನ್ನು ಸುಳ್ಳಾಗಿಸುವವರನ್ನೂ ಬಿಟ್ಟುಬಿಡು.[474] ಶೀಘ್ರದಲ್ಲೇ ಅವರಿಗೆ ತಿಳಿಯದಂತೆ ಹಂತ ಹಂತವಾಗಿ ಅವರನ್ನು ನಾವು ನಾಶದ ಕಡೆಗೆ ಒಯ್ಯುವೆವು.

فَذَرْنِيْ وَمَنْ يُّكَذِّبُ بِهٰذَا الْحَدِيْثِ ۭ سَنَسْتَدْرِجُهُمْ مِّنْ حَيْثُ لَا يَعْلَمُوْنَ ۝٤٤

**46.** ನಾನು ಅವರಿಗೆ ಕಾಲಾವಕಾಶ ನೀಡುತ್ತೇನೆ; ಖಂಡಿತವಾಗಿಯೂ ನನ್ನ ಯೋಜನೆ ಬಲಿಷ್ಠವಾದುದು.

وَاُمْلِيْ لَهُمْ ۭ اِنَّ كَيْدِيْ مَتِيْنٌ ۝٤٥

**47.** ನೀನು ಅವರಿಂದ ಪ್ರತಿಫಲವನ್ನೇನಾದರೂ ಕೇಳಿದ್ದೀಯಾ? ಆ ಕಾರಣದಿಂದ ಅವರು ಋಣ ಭಾರಕ್ಕೆ ಗುರಿಯಾಗಿದ್ದಾರೆಯೇ?

اَمْ تَسْـَٔــلُهُمْ اَجْرًا فَهُمْ مِّنْ مَّغْرَمٍ مُّثْقَلُوْنَ ۝٤٦

473. "ಅವರ ಮುಂದೆ ಸತ್ಯವನ್ನು ತೆರೆದಿಡುವ" ಎಂದು ಸಹ ಇದಕ್ಕೆ ಅರ್ಥವಿದೆ.

474. ಅಂದರೆ, ಸತ್ಯವನ್ನು ನಿರಾಕರಿಸುವವರಿಗೆ ನೀವೇನೂ ಶಿಕ್ಷೆ ಕೊಡುವ ಅಗತ್ಯವಿಲ್ಲ. ನಾನೇ ಅವರನ್ನು ನೋಡಿಕೊಳ್ಳುವೆನು ಎಂದರ್ಥ.





**48.** ಅಥವಾ ಅವರಿಗೆ ಅಗೋಚರ ಜ್ಞಾನವೇನಾದರೂ ಇದೆಯೇ? ಹಾಗೆ ಅವರು ಅದನ್ನು ಬರೆದಿಡುತ್ತಾರೆಯೇ?

اَمْ عِنْدَهُمُ الْغَيْبُ فَهُمْ يَكْتُبُوْنَ ۝٤٧

**49.** ಅಂತು, ನೀನು ನಿನ್ನ ಪ್ರಭುವಿನ ತೀರ್ಮಾನಕ್ಕೋಸ್ಕರ ತಾಳ್ಮೆಯಿಂದ ನಿರೀಕ್ಷಿಸುತ್ತಿರು. ನೀನು ಆ ಮತ್ಸ್ಯಗಾರನಂತೆ ಆಗಬಾರದು.[475] ಅವರು (ತನ್ನ ಪ್ರಭುವಿಗೆ) ಮೊರೆಯಿಡುವಾಗ ದುಃಖಭರಿತರಾಗಿದ್ದರು.

فَاصْبِرْ لِحُكْمِ رَبِّكَ وَلَا تَكُنْ كَصَاحِبِ الْحُوْتِ ۘ اِذْ نَادٰى وَهُوَ مَكْظُوْمٌ ۝٤٨

**50.** ತನ್ನ ಪ್ರಭುವಿನ ಅನುಗ್ರಹ ಅವರಿಗೆ ಲಭಿಸದಿರುತ್ತಿದ್ದರೆ ಅವರು ನಿಂದಿತರಾಗಿ ಬರಡು ನೆಲದಲ್ಲಿ ಎಸೆಯಲ್ಪಡುತ್ತಿದ್ದರು.

لَوْلَآ اَنْ تَدٰرَكَهٗ نِعْمَةٌ مِّنْ رَّبِّهٖ لَنُبِذَ بِالْعَرَاۗءِ وَهُوَ مَذْمُوْمٌ ۝٤٩

**51.** ಆದರೆ ತನ್ನ ಪ್ರಭು ಅವರನ್ನು ಆಯ್ಕೆ ಮಾಡಿದನು ಹಾಗೂ ಸಜ್ಜನರಲ್ಲಿ ಸೇರಿಸಿದನು.

فَاجْتَبٰىهُ رَبُّهٗ فَجَعَلَهٗ مِنَ الصّٰلِحِيْنَ ۝٥٠

**52.** ಅವಿಶ್ವಾಸಿಗಳು ಈ ಉಪದೇಶವನ್ನು ಕೇಳುವಾಗ ನಿನ್ನನ್ನು ಕೀಳಾಗಿಸಲಿಕ್ಕಾಗಿ ತಮ್ಮ ದ್ವೇಷದ ದೃಷ್ಟಿಯಿಂದ ದುರುಗುಟ್ಟಿ ನೋಡುತ್ತಾರೆ. 'ಇವನೊಬ್ಬ ಹುಚ್ಚನೇ ಸರಿ' ಎಂದು ಅವರು ಉದ್ಗರಿಸುತ್ತಾರೆ.

وَاِنْ يَّكَادُ الَّذِيْنَ كَفَرُوْا لَيُزْلِقُوْنَكَ بِاَبْصَارِهِمْ لَمَّا سَمِعُوا الذِّكْرَ وَيَقُوْلُوْنَ اِنَّهٗ لَمَجْنُوْنٌ ۝٥١

**53.** ವಾಸ್ತವದಲ್ಲಿ ಇದು ಸರ್ವ ಲೋಕಕ್ಕೋಸ್ಕರವಿರುವ ಒಂದು ಉಪದೇಶವಾಗಿದೆ.

وَمَا هُوَ اِلَّا ذِكْرٌ لِّلْعٰلَمِيْنَ ۝٥٢

475. ಪ್ರವಾದಿ ಯೂನುಸ್(ಅಲೈಹಿಸ್ಸಲಾಂ)ರನ್ನು ಇಲ್ಲಿ ಸೂಚಿಸಲಾಗಿದೆ. ತನ್ನ ವಿರೋಧಿಗಳಾದ ಜನರಿಗೆ ದೈವಿಕ ಶಿಕ್ಷೆ ಶೀಘ್ರದಲ್ಲೇ ಬಂದೆರಗಬೇಕೆಂದು ಕೋರಬಾರದೆಂದು ತಾತ್ಪರ್ಯ. ಯಥಾಸಮಯ ಅಲ್ಲಾಹನೇ ಆ ಬಗ್ಗೆ ತೀರ್ಮಾನಿಸುವನು.

سُوْرَةُ الْحَاقَّةِ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّخَمْسُوْنَ اٰيَةً وَّرُكُوْعَانِ

## 69. ಅಲ್‌ಹಾಖ್ಖಃ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 53 ಆಯತ್‌ಗಳು ಹಾಗೂ 2 ರುಕೂಉ್‌ಗಳು ಇವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

**2.** ಖಂಡಿತವಾಗಿಯೂ ಸಂಭವಿಸುವಂಥದ್ದು.

اَلْحَاقَّةُ ②

**3.** ಖಂಡಿತವಾಗಿಯೂ ಸಂಭವಿಸುವಂಥದ್ದೇನು?

مَا الْحَاقَّةُ ③

**4.** ಖಂಡಿತವಾಗಿಯೂ ಸಂಭವಿಸುವಂಥದ್ದೇನೆಂದು ನಿನಗೇನು ಗೊತ್ತು?

وَمَآ اَدْرٰىكَ مَا الْحَاقَّةُ ④

**5.** ಸಮೂದ್ ಗೋತ್ರದವರೂ ಆದ್ ಗೋತ್ರದವರೂ ಧ್ವಂಸಕಾರಿಯಾದ ಆ ವಿಪತ್ತನ್ನು ಸುಳ್ಳೆಂದು ಬಗೆದರು.

كَذَّبَتْ ثَمُوْدُ وَعَادٌ ۢبِالْقَارِعَةِ ⑤

**6.** ಆಗ ಸಮೂದ್ ಗೋತ್ರ ಮಹಾ ವಿಪತ್ತಿನಿಂದ ನಾಶವಾಯಿತು.

فَاَمَّا ثَمُوْدُ فَاُهْلِكُوْا بِالطَّاغِيَةِ ⑥

**7.** ಆದ್ ಗೋತ್ರವು ಅತಿ ತೀವ್ರವಾಗಿ ಬೀಸಿದ ಬಿರುಗಾಳಿಯಿಂದ ನಾಶವಾಯಿತು.

وَاَمَّا عَادٌ فَاُهْلِكُوْا بِرِيْحٍ صَرْصَرٍ عَاتِيَةٍ ⑦

**8.** ಅವರನ್ನು ಸರ್ವನಾಶಮಾಡಲಿಕ್ಕೋಸ್ಕರ ಅದು ಅವರ ಮೇಲೆ ಏಳು ರಾತ್ರಿ ಮತ್ತು ಎಂಟು ಹಗಲು (ನಿರಂತರವಾಗಿ) ಬೀಸುವಂತೆ ಅವನು (ಅಲ್ಲಾಹನು) ಮಾಡಿದನು. ಆಗ ಖರ್ಜೂರದ ಮರಗಳು ಬುಡಕಿತ್ತು ಬಿದ್ದಂತೋಪಾದಿಯಲ್ಲಿ ಆ ಜನರು ನೆಲಕಚ್ಚಿದ್ದನ್ನು ನಿನಗೆ ಕಾಣಬಹುದಾಗಿತ್ತು.

سَخَّرَهَا عَلَيْهِمْ سَبْعَ لَيَالٍ وَّثَمٰنِيَةَ اَيَّامٍ ۙ حُسُوْمًا ۙ فَتَرَى الْقَوْمَ فِيْهَا صَرْعٰى ۙ كَاَنَّهُمْ اَعْجَازُ نَخْلٍ خَاوِيَةٍ ⑧

**9.** ಅವರ ಯಾವುದಾದರೂ ಅವಶಿಷ್ಟವನ್ನು ನೀನು (ಈಗ) ಕಾಣುತ್ತಿದ್ದೀಯೋ?

فَهَلْ تَرٰى لَهُمْ مِّنْ ۢبَاقِيَةٍ ⑨





**10.** ಫಿರ್‌ಔನ್, ಅವನಿಗಿಂತ ಮುಂಚೆ ಇದ್ದವರು ಮತ್ತು ಅಡಿಮೇಲಾದ ಪಟ್ಟಣಗಳ ನಿವಾಸಿಗಳು (ಇದೇ ಪ್ರಕಾರ) ಪಾಪ ಮಾಡಿದರು.

وَجَآءَ فِرْعَوْنُ وَمَنْ قَبْلَهٗ وَالْمُؤْتَفِكٰتُ بِالْخَاطِئَةِ ⑩

**11.** ಅಂದರೆ, ಅವರು ತಮ್ಮ ಪ್ರಭುವಿನ ಸಂದೇಶ ವಾಹಕನನ್ನು ಧಿಕ್ಕರಿಸಿದರು. ಆದ್ದರಿಂದ ಅವನು (ಅಲ್ಲಾಹನು) ಅವರನ್ನು ಬಲವಾಗಿ ಹಿಡಿದು ಶಿಕ್ಷಿಸಿದನು.

فَعَصَوْا رَسُوْلَ رَبِّهِمْ فَاَخَذَهُمْ اَخْذَةً رَّابِيَةً ⑪

**12.** (ನೂಹ್‌ರ ಕಾಲದಲ್ಲಿ) ಜಲ ಪ್ರಳಯವಾದಾಗ ನಾವು ನಿಮ್ಮನ್ನು ಹಡಗಿನಲ್ಲಿ ಹೇರಿಸಿಕೊಂಡಿದ್ದೆವು -

اِنَّا لَمَّا طَغَا الْمَآءُ حَمَلْنٰكُمْ فِي الْجَارِيَةِ ⑫

**13.** ನಾವು ಅದನ್ನು (ಆ ಘಟನೆಯನ್ನು) ನಿಮ್ಮ ಜ್ಞಾಪಕಾರ್ಥವಾಗಿ ಹಾಗೂ ಆಲಿಸುವ ಕಿವಿಗಳು ಗಮನವಿಟ್ಟು ಆಲಿಸಲಿಕ್ಕೋಸ್ಕರ (ಇಲ್ಲಿ ಪ್ರಸ್ತಾಪಿಸುತ್ತಿದ್ದೇವೆ).

لِنَجْعَلَهَا لَكُمْ تَذْكِرَةً وَّتَعِيَهَآ اُذُنٌ وَّاعِيَةٌ ⑬

**14.** ಅಂತು, ಕಹಳೆಯಲ್ಲಿ ಒಮ್ಮೆ ಊದಲ್ಪಡುವಾಗ,

فَاِذَا نُفِخَ فِي الصُّوْرِ نَفْخَةٌ وَّاحِدَةٌ ⑭

**15.** (ಸಮತಟ್ಟಾದ) ನೆಲ ಮತ್ತು ಪರ್ವತಗಳು ಮೇಲಕ್ಕೆತ್ತಲ್ಪಟ್ಟು ಒಂದೇ ಹೊಡೆತಕ್ಕೆ ಛಿನ್ನ ಭಿನ್ನವಾಗುವಾಗ,

وَّحُمِلَتِ الْاَرْضُ وَالْجِبَالُ فَدُكَّتَا دَكَّةً وَّاحِدَةً ⑮

**16.** ಆ ದಿನದಂದು ಆ (ಮಹಾ) ಘಟನೆ ಸಂಭವಿಸುವುದು.

فَيَوْمَئِذٍ وَّقَعَتِ الْوَاقِعَةُ ⑯

**17.** ಆಕಾಶ ಹರಿದು ಹೋಗುವುದು; ಆ ದಿನ ಅದು ದುರ್ಬಲವಾದಂತಿರುವುದು.

وَانْشَقَّتِ السَّمَآءُ فَهِيَ يَوْمَئِذٍ وَّاهِيَةٌ ⑰

**18.** ದಿವ್ಯದೂತರು ಅದರ ಬದಿಗಳಲ್ಲಿ ಇರುವರು. ಅಂದು ಅವರೆಲ್ಲರಿಗಿಂತ ಮೇಲೆ ಎಂಟು ಮಂದಿ ನಿನ್ನ ಪ್ರಭುವಿನ ಸಿಂಹಾಸನವನ್ನು ಹೊತ್ತುಕೊಳ್ಳುವರು.

وَّالْمَلَكُ عَلٰٓى اَرْجَآئِهَا ۗ وَيَحْمِلُ عَرْشَ رَبِّكَ فَوْقَهُمْ يَوْمَئِذٍ ثَمٰنِيَةٌ ⑱

**19.** ಅಂದು ನಿಮ್ಮನ್ನು ದೇವಸನ್ನಿಧಿಯಲ್ಲಿ ಹಾಜರು ಪಡಿಸಲಾಗುವುದು; ನಿಮ್ಮ ಯಾವುದೇ ರಹಸ್ಯ ಗುಪ್ತವಾಗಿರದು.

يَوْمَئِذٍ تُعْرَضُوْنَ لَا تَخْفٰى مِنْكُمْ خَافِيَةٌ ⑲

فَأَمَّا مَنْ أُوتِيَ كِتٰبَهٗ بِيَمِيْنِهٖ فَيَقُوْلُ هَآؤُمُ اقْرَءُوْا كِتٰبِيَهْ ﴿٢٠﴾

**20. ಆಗ, ಯಾರ ಬಲಗೈಯಲ್ಲಿ ಆತನ ದಾಖಲೆ ಪುಸ್ತಕವನ್ನು ನೀಡಲಾಗುವುದೋ ಆತನು** (ತನ್ನ ಸಂಗಡಿಗರೊಡನೆ ಹೀಗೆ) **ಹೇಳುವನು: 'ಇದೋ ನನ್ನ ಪುಸ್ತಕವನ್ನು ಓದಿರಿ.**

إِنِّيْ ظَنَنْتُ أَنِّيْ مُلٰقٍ حِسَابِيَهْ ﴿٢١﴾

**21. 'ನನ್ನ ಬಗೆಗಿನ ವಿಚಾರಣೆಗೆ ನಾನು ಒಳಗಾಗುವೆನೆಂದು ನನಗೆ ಗೊತ್ತಿತ್ತು.'**

فَهُوَ فِيْ عِيْشَةٍ رَّاضِيَةٍ ﴿٢٢﴾

**22. ಹಾಗೆ ಅವನು ಹರ್ಷದಾಯಕ ಜೀವನವನ್ನು ಗಳಿಸುವನು -**

فِيْ جَنَّةٍ عَالِيَةٍ ﴿٢٣﴾

**23. ಉನ್ನತವಾದ ಸ್ವರ್ಗದಲ್ಲಿ.**

قُطُوْفُهَا دَانِيَةٌ ﴿٢٤﴾

**24. ಅಲ್ಲಿ ಧಾರಾಳ ಹಣ್ಣುಹಂಪಲುಗಳ ಗೊಂಚಲುಗಳು ಆತನ ಕೈಗೆಟಕುವಂತಿರುವುವು.**

كُلُوْا وَاشْرَبُوْا هَنِيْٓـًٔا بِمَآ أَسْلَفْتُمْ فِي الْأَيَّامِ الْخَالِيَةِ ﴿٢٥﴾

**25. 'ಗತಕಾಲದಲ್ಲಿ ನೀವು ಮಾಡಿದ ಸತ್ಕಾರ್ಯಗಳಿಗೆ ಪ್ರತಿಫಲವಾಗಿ ನೀವು ಸಂತೋಷದಿಂದ ತಿನ್ನಿರಿ ಹಾಗೂ ಕುಡಿಯಿರಿ'** (ಎಂದು ಅವರೊಡನೆ ಹೇಳಲಾಗುವುದು).

وَأَمَّا مَنْ أُوتِيَ كِتٰبَهٗ بِشِمَالِهٖ ۙ فَيَقُوْلُ يٰلَيْتَنِيْ لَمْ أُوْتَ كِتٰبِيَهْ ﴿٢٦﴾

**26. ಆದರೆ ಯಾರ ದಾಖಲೆ ಪುಸ್ತಕವನ್ನು ಅವನ ಎಡಗೈಯಲ್ಲಿ ನೀಡಲಾಗುವುದೋ ಅವನು ಹೀಗೆ ಪ್ರಲಾಪಿಸುವನು: 'ಅಕಟಾ! ನನಗೆ ನನ್ನ ಪುಸ್ತಕ ನೀಡದಿರುತ್ತಿದ್ದರೆ.!**

وَلَمْ أَدْرِ مَا حِسَابِيَهْ ﴿٢٧﴾

**27. 'ಹಾಗೂ ನನ್ನ ಲೆಕ್ಕವೇನೆಂದು ನನಗೆ ತಿಳಿಯದಿರುತ್ತಿದ್ದರೆ.!**

يٰلَيْتَهَا كَانَتِ الْقَاضِيَةَ ﴿٢٨﴾

**28. 'ಅಯ್ಯೋ, ಅದು** (ಮರಣ) **ಎಲ್ಲವನ್ನೂ ಕೊನೆಗೊಳಿಸುವಂತಿದ್ದರೆ!**

مَآ أَغْنٰى عَنِّيْ مَالِيَهْ ﴿٢٩﴾

**29. 'ನನ್ನ ಸಂಪತ್ತು ನನ್ನ ಪ್ರಯೋಜನಕ್ಕೆ ಬರಲಿಲ್ಲ.**

هَلَكَ عَنِّيْ سُلْطٰنِيَهْ ﴿٣٠﴾

**30. 'ನನ್ನ ಅಧಿಕಾರ ಶಕ್ತಿ ನನಗೆ ಇಲ್ಲದಾಯಿತು.'**

خُذُوْهُ فَغُلُّوْهُ ﴿٣١﴾

**31.** (ಆಗ ಈ ರೀತಿ ಆದೇಶಿಸಲಾಗುವುದು:) **'ಅವನನ್ನು ಹಿಡಿದು ಬಂಧಿಸಿರಿ.**





ثُمَّ الْجَحِيْمَ صَلُّوْهُ ﴿٣٢﴾

**32. 'ಮತ್ತೆ ಅವನನ್ನು ನರಕಕ್ಕೆ ದೂಡಿರಿ.**

ثُمَّ فِيْ سِلْسِلَةٍ ذَرْعُهَا سَبْعُوْنَ ذِرَاعًا فَاسْلُكُوْهُ ﴿٣٣﴾

**33. 'ಮತ್ತೆ ಅವನನ್ನು ಎಪ್ಪತ್ತು ಮೊಳ**[476] **ಉದ್ದದ ಸಂಕೋಲೆಯಿಂದ ಕಟ್ಟಿರಿ.**

إِنَّهٗ كَانَ لَا يُؤْمِنُ بِاللّٰهِ الْعَظِيْمِ ﴿٣٤﴾

**34. 'ದಿಟವಾಗಿಯೂ ಮಹಾಮಹಿಮನಾದ ಅಲ್ಲಾಹನನ್ನು ಅವನು ನಂಬಿರಲಿಲ್ಲ.**

وَلَا يَحُضُّ عَلٰى طَعَامِ الْمِسْكِيْنِ ﴿٣٥﴾

**35. ಬಡಜನರಿಗೆ ಆಹಾರ ನೀಡುವ ಬಗ್ಗೆ ಅವನು ಲಕ್ಷ್ಯಗೊಡುತ್ತಿರಲಿಲ್ಲ.**

فَلَيْسَ لَهُ الْيَوْمَ هٰهُنَا حَمِيْمٌ ﴿٣٦﴾

**36. 'ಆದ್ದರಿಂದ ಇಂದು ಇಲ್ಲಿ ಅವನಿಗೆ ಮಿತ್ರನಾರೂ ಇಲ್ಲ.**

وَلَا طَعَامٌ إِلَّا مِنْ غِسْلِيْنٍ ﴿٣٧﴾

**37. 'ಅವನಿಗೆ ಆಹಾರವೇನೂ ಇಲ್ಲ; ವ್ರಣಗಳನ್ನು ತೊಳೆಯುವುದರಿಂದ** ಉಂಟಾಗುವ ನೋವು **ಹೊರತು.**

لَّا يَأْكُلُهٗٓ إِلَّا الْخَاطِـُٔوْنَ ﴿٣٨﴾

**38. 'ಪಾಪಿಗಳು ಹೊರತು ಅದನ್ನು ತಿನ್ನಲಾರರು.'**

فَلَآ أُقْسِمُ بِمَا تُبْصِرُوْنَ ﴿٣٩﴾

**39. ಸಲ್ಲದು.** (ನೀವು ಮೋಸಕ್ಕೀಡಾಗಬಾರದು.) **ನಿಮಗೆ ಗೋಚರಿಸುವವುಗಳ ಮೇಲೆ ನಾನು ಆಣೆ ಹಾಕುತ್ತೇನೆ;**

وَمَا لَا تُبْصِرُوْنَ ﴿٤٠﴾

**40. ನಿಮಗೆ ಗೋಚರಿಸದವುಗಳ ಮೇಲೆ ಸಹ** (ನಾನು ಆಣೆ ಹಾಕುತ್ತೇನೆ).

إِنَّهٗ لَقَوْلُ رَسُوْلٍ كَرِيْمٍ ﴿٤١﴾

**41. ದಿಟವಾಗಿಯೂ, ಇದು ಓರ್ವ ಗೌರವಾನ್ವಿತ ಸಂದೇಶವಾಹಕನ ವಚನವಾಗಿದೆ.**

وَّمَا هُوَ بِقَوْلِ شَاعِرٍ ۚ قَلِيْلًا مَّا تُؤْمِنُوْنَ ﴿٤٢﴾

**42. ಇದು ಒಬ್ಬ ಕವಿಯ ವಚನವಲ್ಲ.** (ಆದರೆ) **ನೀವು ವಿಶ್ವಾಸಹೊಂದುವುದಿಲ್ಲ.**

وَلَا بِقَوْلِ كَاهِنٍ ۚ قَلِيْلًا مَّا تَذَكَّرُوْنَ ﴿٤٣﴾

**43. ಇದು ಒಬ್ಬ ಕಣಿ ಹೇಳುವವನ ಮಾತೂ ಅಲ್ಲ;** (ಆದರೆ) **ನೀವು ಗಮನಿಸುವುದಿಲ್ಲ.**

476. ತುಂಬಾ ಉದ್ದದ ಎಂದು ತಾತ್ಪರ್ಯ.

**44.** (ಇದು) **ಸರ್ವಲೋಕಗಳ ಪ್ರಭುವಿನಿಂದ ಅವತೀರ್ಣಗೊಂಡದ್ದಾಗಿದೆ.**

تَنۡزِيۡلٌ مِّنۡ رَّبِّ الۡعٰلَمِيۡنَ ﴿٤٤﴾

**45. ಆತನು** (ನಾವು ಅವತೀರ್ಣಗೊಳಿಸದ) **ಕೆಲವು ಸುಳ್ಳುಮಾತುಗಳನ್ನು ನಮ್ಮದೆಂದು ಹೇಳಿರುತ್ತಿದ್ದರೆ,**

وَلَوۡ تَقَوَّلَ عَلَيۡنَا بَعۡضَ الۡاَقَاوِيۡلِ ﴿٤٥﴾

**46. ನಾವು ಆತನನ್ನು ಬಲಗೈಯಿಂದ ಹಿಡಿಯುತ್ತಿದ್ದೆವು.**

لَاَخَذۡنَا مِنۡهُ بِالۡيَمِيۡنِ ﴿٤٦﴾

**47. ಅನಂತರ ನಾವು ಆತನ ಜೀವನಾಡಿಯನ್ನೇ ಕೊಯ್ದುಬಿಡುತ್ತಿದ್ದೆವು.**[477]

ثُمَّ لَقَطَعۡنَا مِنۡهُ الۡوَتِيۡنَ ﴿٤٧﴾

**48. ಆಗ ಅದನ್ನು ತಡೆಯಬಲ್ಲವನು ಯಾರೂ ನಿಮ್ಮಲ್ಲಿ ಇಲ್ಲ.**

فَمَا مِنۡكُمۡ مِّنۡ اَحَدٍ عَنۡهُ حٰجِزِيۡنَ ﴿٤٨﴾

**49. ನಿಸ್ಸಂದೇಹವಾಗಿಯೂ ಇದು** (ಖುರ್‌ಆನ್) **ಸಜ್ಜನರಿಗೆ ಒಂದು ಉದ್ಬೋಧಕವಾಗಿದೆ.**

وَاِنَّهٗ لَتَذۡكِرَةٌ لِّلۡمُتَّقِيۡنَ ﴿٤٩﴾

**50.** (ನಮ್ಮ ದೃಷ್ಟಾಂತಗಳನ್ನು) **ಸುಳ್ಳೆಂದು ಹೇಳುವವರು ಕೆಲವರು ನಿಮ್ಮ ಪೈಕಿ ಇದ್ದಾರೆಂದು ಖಂಡಿತವಾಗಿಯೂ ನಮಗೆ ಗೊತ್ತಿದೆ.**

وَاِنَّا لَنَعۡلَمُ اَنَّ مِنۡكُمۡ مُّكَذِّبِيۡنَ ﴿٥٠﴾

**51. ದಿಟವಾಗಿಯೂ ಇದು ಅವಿಶ್ವಾಸಿಗಳಿಗೆ ದುಃಖಮೂಲವಾಗಿದೆ.**

وَاِنَّهٗ لَحَسۡرَةٌ عَلَى الۡكٰفِرِيۡنَ ﴿٥١﴾

**52. ಇದು ನಿಸ್ಸಂದೇಹವಾದ ಸತ್ಯವಾಗಿದೆ.**

وَاِنَّهٗ لَحَقُّ الۡيَقِيۡنِ ﴿٥٢﴾

**53. ಆದ್ದರಿಂದ ಮಹಾಮಹಿಮನಾದ ನಿನ್ನ ಪ್ರಭುವಿನ ನಾಮದ ಸ್ತುತಿಕೀರ್ತನೆ ಮಾಡು.**

فَسَبِّحۡ بِاسۡمِ رَبِّكَ الۡعَظِيۡمِ ﴿٥٣﴾

477. ತನಗೆ ದೇವವಚನ ಅವತೀರ್ಣವಾಗುತ್ತದೆಂದು ಸುಳ್ಳುಹೇಳುವ ಮಿಥ್ಯಾವಾದಿಯನ್ನು ಅಲ್ಲಾಹನು ನಾಶಪಡಿಸುವನೆಂದು ತಾತ್ಪರ್ಯ.

سُوْرَةُ الْمَعَارِجِ مَكِّيَّةٌ وَهِيَ مَعَ الْبَسْمَلَةِ خَمْسٌ وَّاَرْبَعُوْنَ اٰيَةً وَّرُكُوْعَانِ

## 70. ಅಲ್‌ಮಆರಿಜ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 45 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಅನ್ವೇಷಕನೊಬ್ಬನು ಬರಲಿರುವ ಶಿಕ್ಷೆಯ ಬಗ್ಗೆ ವಿಚಾರಿಸುತ್ತಾನೆ -**

سَاَلَ سَآئِلٌ بِعَذَابٍ وَّاقِعٍ ②

**3. ಅವಿಶ್ವಾಸಿಗಳಿಗೆ** (ಬರಲಿರುವ ಶಿಕ್ಷೆಯ ಕುರಿತು); **ಅದನ್ನು ಯಾರೂ ತಡೆಯಲಾರರು.**

لِّلْكٰفِرِيْنَ لَيْسَ لَهٗ دَافِعٌ ③

**4. ಅದು** (ಆ ಶಿಕ್ಷೆ) **ಔನ್ನತ್ಯದ ಸೋಪಾನಗಳ ಪ್ರಭುವಿನಿಂದಾಗಿರುವುದು.**

مِّنَ اللّٰهِ ذِى الْمَعَارِجِ ④

**5. ಐವತ್ತು ಸಾವಿರ ವರ್ಷಗಳಷ್ಟು ದೀರ್ಘವಾದ ಕಾಲಾವಧಿಯ ಒಂದು ದಿನದಲ್ಲಿ ದಿವ್ಯದೂತರು ಮತ್ತು ರೂಹ್**[478] **ಅವನ ಕಡೆಗೆ ಏರಿ ಹೋಗುತ್ತಾರೆ.**

تَعْرُجُ الْمَلٰٓئِكَةُ وَالرُّوْحُ اِلَيْهِ فِىْ يَوْمٍ كَانَ مِقْدَارُهٗ خَمْسِيْنَ اَلْفَ سَنَةٍ ⑤

**6. ಆದ್ದರಿಂದ ನೀವು ಸಹನೆದೋರಿರಿ; ಶ್ಲಾಘ್ಯವಾದ ಸಹನೆ.**

فَاصْبِرْ صَبْرًا جَمِيْلًا ⑥

**7. ನಿಜವಾಗಿಯೂ ಅವರು ಅದನ್ನು ಬಲುದೂರವಾಗಿ ಕಾಣುತ್ತಾರೆ.**

اِنَّهُمْ يَرَوْنَهٗ بَعِيْدًا ⑦

**8. ಆದರೆ ನಾವು ಅದನ್ನು ಬಲು ಹತ್ತಿರವಾಗಿ ಕಾಣುತ್ತೇವೆ.**

وَّنَرٰىهُ قَرِيْبًا ⑧

**9. ಅಂದು ಆಕಾಶವು ಕರಗಿದ ತಾಮ್ರದಂತೆ ಆಗುವುದು.**

يَوْمَ تَكُوْنُ السَّمَآءُ كَالْمُهْلِ ⑨

**10. ಪರ್ವತಗಳು ಉಣ್ಣೆಯ ಪದರುಗಳಂತೆಯೂ ಆಗುವುವು;**

وَتَكُوْنُ الْجِبَالُ كَالْعِهْنِ ⑩

478. ರೂಹ್=ಆತ್ಮ. ದೇವದೂತ ಜಿಬ್ರೀಲ್(ಅ.)ರನ್ನು ಇಲ್ಲಿ ಉದ್ದೇಶಿಸಲಾಗಿದೆ.





**11. ಹಾಗೂ** (ಅಂದು) **ಒಬ್ಬ ಮಿತ್ರ ಮತ್ತೊಬ್ಬ ಮಿತ್ರನ ಬಗ್ಗೆ ವಿಚಾರಿಸಲಾರ.**

وَلَا يَسْـَٔلُ حَمِيْمٌ حَمِيْمًا ⑪

**12. ಅವರನ್ನು ಪರಸ್ಪರ ತೋರಿಸಲಾಗುವುದು. ತನ್ನ ಮಕ್ಕಳನ್ನು ಪ್ರಾಯಶ್ಚಿತ್ತವಾಗಿ ನೀಡಿ ಅಂದಿನ ಶಿಕ್ಷೆಯಿಂದ ಪಾರಾಗಲು ಪಾಪಿ ಬಯಸುವನು.**

يُّبَصَّرُوْنَهُمْ يَوَدُّ الْمُجْرِمُ لَوْ يَفْتَدِيْ مِنْ عَذَابِ يَوْمِئِذٍۢ بِبَنِيْهِ ⑫

**13.** (ಹಾಗೆಯೇ) **ತನ್ನ ಪತ್ನಿಯನ್ನೂ ತನ್ನ ಸಹೋದರನನ್ನೂ**

وَصَاحِبَتِهٖ وَاَخِيْهِ ⑬

**14. ತನಗೆ ಆಶ್ರಯ ನೀಡುವ ತನ್ನ ಕುಟುಂಬವನ್ನೂ**

وَفَصِيْلَتِهِ الَّتِىْ تُـْٔوِيْهِ ⑭

**15. ಭೂಮಿಯಲ್ಲಿರುವ ಎಲ್ಲರನ್ನೂ** (ಪ್ರಾಯಶ್ಚಿತ್ತವಾಗಿ ನೀಡಲು ಬಯಸುತ್ತಾನೆ) **ಹಾಗೂ ಅವು ಅವನನ್ನು ಪಾರುಮಾಡಬಹುದೆಂದೂ** (ಅವನು ಭಾವಿಸುತ್ತಾನೆ).

وَمَنْ فِى الْاَرْضِ جَمِيْعًا ثُمَّ يُنْجِيْهِ ⑮

**16. ಆದರೆ ಅದಾಗುವುದಿಲ್ಲ. ಖಂಡಿತವಾಗಿಯೂ ಅದು ಅಗ್ನಿಜ್ವಾಲೆಯಾಗಿದೆ -**

كَلَّا اِنَّهَا لَظٰى ⑯

**17. ಅಡಿಯಿಂದ ಮುಡಿಯ ವರೆಗೆ ಚರ್ಮ ಸುಲಿಯುವಂಥದ್ದು.**

نَزَّاعَةً لِّلشَّوٰى ⑰

**18. ಪರಾಙ್ಮುಖನಾದವನನ್ನೂ ಹಿಂದಕ್ಕೆ ಹೋದವನನ್ನೂ ಅದು ಕರೆಯುತ್ತದೆ.**

تَدْعُوْا مَنْ اَدْبَرَ وَتَوَلّٰى ⑱

**19. ಸಂಪತ್ತನ್ನು ಸಂಗ್ರಹಿಸಿ ದಾಸ್ತಾನು ಇಡುವವನನ್ನು ಸಹ** (ಅದು ಕರೆಯುತ್ತದೆ).

وَجَمَعَ فَاَوْعٰى ⑲

**20. ನಿಜವಾಗಿಯೂ ಮನುಷ್ಯನು ಚಂಚಲನಾಗಿ ಸೃಷ್ಟಿಸಲ್ಪಟ್ಟಿದ್ದಾನೆ.**

اِنَّ الْاِنْسَانَ خُلِقَ هَلُوْعًا ⑳

**21. ಅವನನ್ನು ಕೆಡುಕು ಸ್ಪರ್ಶಿಸಿದರೆ ಅವನು ವಿಲಾಪಿಸುತ್ತಾನೆ.**

اِذَا مَسَّهُ الشَّرُّ جَزُوْعًا ㉑

**22. ಅವನನ್ನು ಒಳಿತು ಸ್ಪರ್ಶಿಸಿದರೆ ಅವನು ಜಿಪುಣನಾಗುತ್ತಾನೆ -**

وَّاِذَا مَسَّهُ الْخَيْرُ مَنُوْعًا ㉒

**23. ಪ್ರಾರ್ಥನೆ ಮಾಡುವವರು ಹೊರತು.**

اِلَّا الْمُصَلِّيْنَ ㉓

**24.** **ಅವರು ತಮ್ಮ ಪ್ರಾರ್ಥನೆಯನ್ನು ನಿಯತ ನಿಷ್ಠೆಯಿಂದ ಸಲ್ಲಿಸುತ್ತಾರೆ.**

الَّذِينَ هُمْ عَلَىٰ صَلَاتِهِمْ دَائِمُونَ ﴿٢٣﴾

**25.** **ಅವರ ಸಂಪತ್ತಿನಲ್ಲಿ ನಿಶ್ಚಿತವಾದ ಹಕ್ಕಿದೆ -**

وَالَّذِينَ فِي أَمْوَالِهِمْ حَقٌّ مَّعْلُومٌ ﴿٢٤﴾

**26.** **ಯಾಚಿಸುವವರಿಗೂ ಯಾಚಿಸಲಾಗದವರಿಗೂ**[478A]

لِّلسَّائِلِ وَالْمَحْرُومِ ﴿٢٥﴾

**27.** **ಅವರು ನ್ಯಾಯತೀರ್ಮಾನ ದಿನವನ್ನು ಸತ್ಯವೆಂದು ನಂಬುತ್ತಾರೆ.**

وَالَّذِينَ يُصَدِّقُونَ بِيَوْمِ الدِّينِ ﴿٢٦﴾

**28.** **ಅವರು ತಮ್ಮ ಪ್ರಭುವಿನ ಶಿಕ್ಷೆಯ ಬಗ್ಗೆ ಭಯಪಡುತ್ತಾರೆ.**

وَالَّذِينَ هُم مِّنْ عَذَابِ رَبِّهِم مُّشْفِقُونَ ﴿٢٧﴾

**29.** **ಅವರ ಪ್ರಭುವಿನ ಶಿಕ್ಷೆ ಹೇಗಿದೆಯೆಂದರೆ** (ಸ್ವಂತ ಸಾಮರ್ಥ್ಯ ಮೂಲಕ) **ಅದರಿಂದ ಪಾರಾಗಲು ಸಾಧ್ಯವಿಲ್ಲ.**

إِنَّ عَذَابَ رَبِّهِمْ غَيْرُ مَأْمُونٍ ﴿٢٨﴾

**30.** **ಅವರು ತಮ್ಮ ಗುಪ್ತಾಂಗಗಳನ್ನು ಕಾಪಾಡುವವರಾಗಿದ್ದಾರೆ.**

وَالَّذِينَ هُمْ لِفُرُوجِهِمْ حَافِظُونَ ﴿٢٩﴾

**31.** (ಸ್ವತಂತ್ರ ಸ್ತ್ರೀಯರಾದ) **ತಮ್ಮ ಪತ್ನಿಯರೊಡನೆ ಅಥವಾ ತಮ್ಮ ಬಲಗೈಯ ಅಧೀನಕ್ಕೊಳಗಾದವರೊಡನೆ**[479] (ಅಂದರೆ ಗುಲಾಮ ಸ್ತ್ರೀಯರಾದ ಪತ್ನಿಯರೊಡನೆ) **ಹೊರತು** (ಅವರು ಲೈಂಗಿಕ ಸಂಪರ್ಕ ಹೊಂದಲಾರರು). **ಅಂಥವರು ದೋಷಾರೋಪಣೆಗೆ ಗುರಿಯಾಗುವುದಿಲ್ಲ-**

إِلَّا عَلَىٰ أَزْوَاجِهِمْ أَوْ مَا مَلَكَتْ أَيْمَانُهُمْ فَإِنَّهُمْ غَيْرُ مَلُومِينَ ﴿٣٠﴾

**32.** **ಆದರೆ ಅದನ್ನು ಮೀರಿ ಹೋಗಲು ಬಯಸುವವರು ಅತಿಕ್ರಮಿಗಳಾಗಿದ್ದಾರೆ.**

فَمَنِ ابْتَغَىٰ وَرَاءَ ذَٰلِكَ فَأُولَٰئِكَ هُمُ الْعَادُونَ ﴿٣١﴾

**33.** **ತಮ್ಮ ಅಮಾನತ್ತು ಮತ್ತು ತಮ್ಮ ಒಡಂಬಡಿಕೆಗಳ ಬಗ್ಗೆ ಜಾಗರೂಕತೆ ವಹಿಸುವವರು,**

وَالَّذِينَ هُمْ لِأَمَانَاتِهِمْ وَعَهْدِهِمْ رَاعُونَ ﴿٣٢﴾

**34.** **ಪ್ರಾಮಾಣಿಕವಾಗಿ ಸಾಕ್ಷ್ಯ ಹೇಳುವವರು,**

وَالَّذِينَ هُم بِشَهَادَاتِهِمْ قَائِمُونَ ﴿٣٣﴾

478A. ಸ್ವಾಭಿಮಾನ ನಿಮಿತ್ತ ಯಾಚಿಸಲು ಹಿಂಜರಿಯುವ ನಿರ್ಗತಿಕರು ಮತ್ತು ಬಡವರು ಹಾಗೂ ಯಾಚಿಸಲು ಸಾಧ್ಯವಾಗದ ಪ್ರಾಣಿ ಪಕ್ಷಿಗಳು.





**35.** **ತಮ್ಮ ಪ್ರಾರ್ಥನೆಗಳನ್ನು ನಿಷ್ಠೆಯಿಂದ ನಿರ್ವಹಿಸಿ ಕಾಪಾಡುವವರು -**

وَالَّذِينَ هُمْ عَلَىٰ صَلَاتِهِمْ يُحَافِظُونَ ﴿٣٤﴾

**36.** **ಈ ಜನರೇ ಸ್ವರ್ಗದಲ್ಲಿ ಆದರಿಸಲ್ಪಡುವವರು.**

أُولَٰئِكَ فِي جَنَّاتٍ مُّكْرَمُونَ ﴿٣٥﴾

**37.** **ಆದರೆ ಅವಿಶ್ವಾಸಿಗಳ ಗತಿಯೇನು? ಅವರು ನಿನ್ನ ಕಡೆಗೆ ತ್ವರಿತವಾಗಿ ಬರುತ್ತಾರೆ -**

فَمَالِ الَّذِينَ كَفَرُوا قِبَلَكَ مُهْطِعِينَ ﴿٣٦﴾

**38.** **ಗುಂಪು ಗುಂಪಾಗಿ ಬಲಗಡೆಯಿಂದಲೂ ಎಡಗಡೆಯಿಂದಲೂ.**

عَنِ الْيَمِينِ وَعَنِ الشِّمَالِ عِزِينَ ﴿٣٧﴾

**39.** **ಅವರಲ್ಲಿ ಪ್ರತಿಯೊಬ್ಬನೂ ಸುಖಾನಂದದ ಸ್ವರ್ಗದಲ್ಲಿ ಪ್ರವೇಶಿಸಲ್ಪಡುವನೆಂದು ಭರವಸೆ ಹೊಂದಿದ್ದಾನೆಯೇ?**

أَيَطْمَعُ كُلُّ امْرِئٍ مِّنْهُمْ أَن يُدْخَلَ جَنَّةَ نَعِيمٍ ﴿٣٨﴾

**40.** **ಎಂದಿಗೂ ಇಲ್ಲ. ಅವರಿಗೆ ತಿಳಿದಿರುವ ಒಂದು ವಸ್ತುವಿನಿಂದ ನಾವು ಅವರನ್ನು ಸೃಷ್ಟಿಸಿದ್ದೇವೆ.**

كَلَّا ۖ إِنَّا خَلَقْنَاهُم مِّمَّا يَعْلَمُونَ ﴿٣٩﴾

**41.** **ಎಚ್ಚರಿಕೆ, ನಾನು ಪೂರ್ವ ಮತ್ತು ಪಶ್ಚಿಮದ ಪ್ರಭುವಿನ ಆಣೆ ಹಾಕುತ್ತೇನೆ. ನಿಶ್ಚಯವಾಗಿಯೂ ನಮಗೆ ಸಾಮರ್ಥ್ಯವಿದೆ.**

فَلَا أُقْسِمُ بِرَبِّ الْمَشَارِقِ وَالْمَغَارِبِ إِنَّا لَقَادِرُونَ ﴿٤٠﴾

**42.** **ಅವರ ಬದಲು ಅವರಿಗಿಂತ ಉತ್ತಮರಾದವರನ್ನು ತರಲು ನಾವು ವಿಫಲರಾಗಲಾರೆವು.**

عَلَىٰ أَن نُّبَدِّلَ خَيْرًا مِّنْهُمْ وَمَا نَحْنُ بِمَسْبُوقِينَ ﴿٤١﴾

**43.** **ಆದ್ದರಿಂದ ನೀನು ಅವರನ್ನು ಅವರಷ್ಟಕ್ಕೆ ಬಿಟ್ಟು ಬಿಡು. ಅವರಿಗೆ ಮುನ್ನೆಚ್ಚರಿಕೆ ನೀಡಲಾದ ಅವರ ದಿನವನ್ನು ಅವರು ಸಂದಿಸುವ ತನಕ ಅವರು ನಿರರ್ಥಕ ಮಾತುಗಳನ್ನಾಡುತ್ತಲೂ ವಿನೋದಿಸುತ್ತಲೂ ಇರಲಿ.**

فَذَرْهُمْ يَخُوضُوا وَيَلْعَبُوا حَتَّىٰ يُلَاقُوا يَوْمَهُمُ الَّذِي يُوعَدُونَ ﴿٤٢﴾

**44.** **ಆ ದಿನ ಅವರು ತಮ್ಮ ಗೋರಿಗಳಿಂದ ಹೊರಗೆ ಬಂದು ತ್ವರಿತವಾಗಿ ಓಡುವರು - ಒಂದು ಗುರಿಯತ್ತ ಪೈಪೋಟಿ ನಡೆಸುವಂತೆ.**

يَوْمَ يَخْرُجُونَ مِنَ الْأَجْدَاثِ سِرَاعًا كَأَنَّهُمْ إِلَىٰ نُصُبٍ يُوفِضُونَ ﴿٤٣﴾

**45.** **ಅವರ ದೃಷ್ಟಿಗಳು ಅಧೋಮುಖವಾಗಿರುವುವು. ಅವಮಾನ ಅವರನ್ನು ಆವರಿಸುವುದು. ಅವರಿಗೆ ಮುನ್ನೆಚ್ಚರಿಕೆ ನೀಡಲ್ಪಟ್ಟ ದಿನ ಅದೇ ಆಗಿದೆ.**

خَاشِعَةً أَبْصَارُهُمْ تَرْهَقُهُمْ ذِلَّةٌ ۚ ذَٰلِكَ الْيَوْمُ الَّذِي كَانُوا يُوعَدُونَ ﴿٤٤﴾

479 23:7ರ ಟಿಪ್ಪಣಿ ನೋಡಿರಿ.

سُوْرَةُ نُوْحٍ مَّكِّيَّةٌ وَّهِيَ مَعَ الْبَسْمَلَةِ تِسْعٌ وَّعِشْرُوْنَ اٰيَةً وَّرُكُوْعَانِ

# 71. ನೂಹ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 29 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. 'ನಿನ್ನ ಜನರಿಗೆ ಯಾತನಾಮಯವಾದೊಂದು ಶಿಕ್ಷೆ ಬಂದೆರಗುವುದಕ್ಕಿಂತ ಮುಂಚೆ ನೀನು ಅವರಿಗೆ ಮುನ್ನೆಚ್ಚರಿಕೆ ನೀಡು'** (ಎಂಬ ಸಂದೇಶದೊಂದಿಗೆ) **ನಾವು ನೂಹ್‌ರನ್ನು ಅವರ ಜನರೆಡೆಗೆ ಕಳುಹಿಸಿದೆವು.**

اِنَّاۤ اَرْسَلْنَا نُوْحًا اِلٰى قَوْمِهٖۤ اَنْ اَنْذِرْ قَوْمَكَ مِنْ قَبْلِ اَنْ يَّاْتِيَهُمْ عَذَابٌ اَلِيْمٌ ﴿٢﴾

**3. ಅವರು ಹೇಳಿದರು: 'ನನ್ನ ಜನರೇ, ನಾನು ನಿಮಗೆ ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನಾಗಿದ್ದೇನೆ.**

قَالَ يٰقَوْمِ اِنِّيْ لَكُمْ نَذِيْرٌ مُّبِيْنٌ ﴿٣﴾

**4. 'ನೀವು ಅಲ್ಲಾಹನನ್ನು ಆರಾಧಿಸಿರಿ; ಅವನಿಗೆ ಭಯಪಡಿರಿ ಮತ್ತು ನನಗೆ ವಿಧೇಯರಾಗಿರಿ.**

اَنِ اعْبُدُوا اللّٰهَ وَاتَّقُوْهُ وَاَطِيْعُوْنِ ﴿٤﴾

**5. '**(ಹಾಗೆ ಮಾಡಿದರೆ) **ಅವನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ಒಂದು ನಿಶ್ಚಿತ ಸಮಯದ ವರೆಗೆ ನಿಮಗೆ ಕಾಲಾವಕಾಶ ನೀಡುವನು. ಅಲ್ಲಾಹನ ನಿಶ್ಚಿತ ಸಮಯ ಸನ್ನಿಹಿತವಾದರೆ ಅದು ಹಿಂದಕ್ಕೆ ಸರಿಸಲ್ಪಡಲಾರದು. ನೀವು** (ಅದನ್ನು) **ಮನವರಿಕೆ ಮಾಡುವವರಾಗಿದ್ದರೆ** (ಅದೆಷ್ಟು ಚೆನ್ನಾಗಿತ್ತು)**!'**

يَغْفِرْ لَكُمْ مِّنْ ذُنُوْبِكُمْ وَيُؤَخِّرْكُمْ اِلٰۤى اَجَلٍ مُّسَمًّى ۚ اِنَّ اَجَلَ اللّٰهِ اِذَا جَآءَ لَا يُؤَخَّرُ ۘ لَوْ كُنْتُمْ تَعْلَمُوْنَ ﴿٥﴾

**6. ಅವರು** (ನೂಹ್) **ಹೇಳಿದರು : "ನನ್ನ ಪ್ರಭೂ, ನಾನು ನನ್ನ ಜನರನ್ನು ರಾತ್ರಿಯಲ್ಲೂ ಹಗಲಿನಲ್ಲೂ ಕರೆಯುತ್ತಲಿದ್ದೆ.**

قَالَ رَبِّ اِنِّيْ دَعَوْتُ قَوْمِيْ لَيْلًا وَّنَهَارًا ﴿٦﴾

**7. "ಆದರೆ ನನ್ನ ಕರೆ ಅವರನ್ನು ನನ್ನಿಂದ ಇನ್ನೂ ಹೆಚ್ಚು ದೂರ ಓಡಿಸುವಂತಾಯಿತು.**

فَلَمْ يَزِدْهُمْ دُعَآءِيْۤ اِلَّا فِرَارًا ﴿٧﴾





**8. "ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲ ಅವರು ತಮ್ಮ ಬೆರಳುಗಳನ್ನು ತಮ್ಮ ಕಿವಿಗಳಿಗೆ ತುರುಕಿಸಿದರು ಮತ್ತು ತಮ್ಮ ವಸ್ತ್ರಗಳಿಂದ ತಮ್ಮನ್ನೇ ಮುಚ್ಚಿಕೊಂಡರು. ಅವರು** (ನಿರಾಕರಣೆಯಲ್ಲಿ) **ಪಟ್ಟು ಹಿಡಿದು ಮುಂದುವರಿದರು ಮತ್ತು ಅತಿಯಾದ ದುರಹಂಕಾರವನ್ನು ತೋರಿಸಿದರು.**

وَاِنِّيْ كُلَّمَا دَعَوْتُهُمْ لِتَغْفِرَ لَهُمْ جَعَلُوْۤا اَصَابِعَهُمْ فِيْۤ اٰذَانِهِمْ وَاسْتَغْشَوْا ثِيَابَهُمْ وَاَصَرُّوْا وَاسْتَكْبَرُوا اسْتِكْبَارًا ﴿٨﴾

**9. "**(ಆದರೆ) **ಮತ್ತೂ ನಾನು ಅವರನ್ನು ಉಚ್ಚ ಸ್ವರದಲ್ಲಿ** (ಸತ್ಯಪಥದೆಡೆಗೆ) **ಆಹ್ವಾನಿಸಿದೆನು.**

ثُمَّ اِنِّيْ دَعَوْتُهُمْ جِهَارًا ﴿٩﴾

**10. "ಪುನಃ ನಾನು ಬಹಿರಂಗವಾಗಿಯೂ ಗೋಪ್ಯವಾಗಿಯೂ ಅವರಿಗೆ ಉಪದೇಶಿಸಿದೆನು.**

ثُمَّ اِنِّيْۤ اَعْلَنْتُ لَهُمْ وَاَسْرَرْتُ لَهُمْ اِسْرَارًا ﴿١٠﴾

**11. "ನಾನು ಹೇಳಿದೆ: 'ನೀವು ಪಾಪ ವಿಮುಕ್ತಿಗೋಸ್ಕರ ನಿಮ್ಮ ಪ್ರಭುವಿಗೆ ಮೊರೆಯಿಡಿರಿ. ನಿಸ್ಸಂಶಯವಾಗಿಯೂ ಅವನು ಅತಿಯಾಗಿ ಕ್ಷಮೆ ನೀಡುವವನಾಗಿದ್ದಾನೆ.**

فَقُلْتُ اسْتَغْفِرُوْا رَبَّكُمْ ۚ اِنَّهٗ كَانَ غَفَّارًا ﴿١١﴾

**12. 'ಅವನು ನಿಮಗೆ ಧಾರಾಳ ಮಳೆ ನೀಡುವ ಮೋಡಗಳನ್ನು ಕಳುಹಿಸುವನು.**

يُّرْسِلِ السَّمَآءَ عَلَيْكُمْ مِّدْرَارًا ﴿١٢﴾

**13. 'ಸಂಪತ್ತಿನಿಂದಲೂ ಸಂತತಿಗಳಿಂದಲೂ ಅವನು ನಿಮಗೆ ನೆರವು ನೀಡುವನು. ತೋಟಗಳನ್ನೂ ನದಿಗಳನ್ನೂ ಅವನು ನಿಮಗೆ ದಯಪಾಲಿಸುವನು.**

وَّيُمْدِدْكُمْ بِاَمْوَالٍ وَّبَنِيْنَ وَيَجْعَلْ لَّكُمْ جَنّٰتٍ وَّيَجْعَلْ لَّكُمْ اَنْهٰرًا ﴿١٣﴾

**14. 'ನಿಮಗೇನಾಗಿದೆ? ನೀವು ಅಲ್ಲಾಹನ ಮಹಿಮೆಯನ್ನು ಗ್ರಹಿಸುವುದಿಲ್ಲ!**

مَا لَكُمْ لَا تَرْجُوْنَ لِلّٰهِ وَقَارًا ﴿١٤﴾

**15. 'ಅವನು ನಿಮ್ಮನ್ನು ಹಲವು ಹಂತಗಳಲ್ಲಿ ಸೃಷ್ಟಿಸಿದ್ದಾನೆ.**

وَقَدْ خَلَقَكُمْ اَطْوَارًا ﴿١٥﴾

**16. 'ಅಲ್ಲಾಹನು ಏಳು ಆಕಾಶಗಳನ್ನು ಹೇಗೆ ಕ್ರಮಬದ್ಧವಾಗಿ ಸೃಷ್ಟಿಸಿರುವನೆಂದು ನೀವು ನೋಡಲಿಲ್ಲವೇ?**

اَلَمْ تَرَوْا كَيْفَ خَلَقَ اللّٰهُ سَبْعَ سَمٰوٰتٍ طِبَاقًا ﴿١٦﴾

17. 'ಅಲ್ಲಿ ಅವನು ಚಂದ್ರನನ್ನು ಪ್ರಕಾಶವಾಗಿಯೂ ಸೂರ್ಯನನ್ನು ಪ್ರದೀಪವಾಗಿಯೂ ಇರಿಸಿರುವನು.

وَّجَعَلَ الْقَمَرَ فِيهِنَّ نُورًا وَّجَعَلَ الشَّمْسَ سِرَاجًا ﴿١٧﴾

18. 'ಅಲ್ಲಾಹನು ಭೂಮಿಯಿಂದ ಸಸ್ಯಗಳನ್ನು ಉತ್ಪಾದಿಸಿದಂತೆ ನಿಮ್ಮನ್ನು ಸೃಷ್ಟಿಸಿರುವನು.

وَاللّٰهُ أَنْبَتَكُمْ مِّنَ الْأَرْضِ نَبَاتًا ﴿١٨﴾

19. 'ಅನಂತರ ಅವನು ನಿಮ್ಮನ್ನು ಅದರೆಡೆಗೆ ಮರಳಿಸುವನು ಮತ್ತು ಅದರಿಂದಲೇ ನಿಮ್ಮನ್ನು ಹೊಸರೂಪದಲ್ಲಿ ಹೊರಡಿಸುವನು.

ثُمَّ يُعِيدُكُمْ فِيهَا وَيُخْرِجُكُمْ إِخْرَاجًا ﴿١٩﴾

20. 'ಅಲ್ಲಾಹನು ನಿಮಗೆ ಭೂಮಿಯನ್ನು ವಿಶಾಲಗೊಳಿಸಿರುವನು.

وَاللّٰهُ جَعَلَ لَكُمُ الْأَرْضَ بِسَاطًا ﴿٢٠﴾

21. 'ಅದರ ವಿಶಾಲವಾದ ಮಾರ್ಗಗಳಲ್ಲಿ ನೀವು ಸಂಚರಿಸಲಿಕ್ಕೋಸ್ಕರ.' "

لِّتَسْلُكُوا مِنْهَا سُبُلًا فِجَاجًا ﴿٢١﴾

22. ನೂಹ್ ಹೇಳಿದರು : "ನನ್ನ ಪ್ರಭೂ, ಅವರು ನನ್ನನ್ನು ಧಿಕ್ಕರಿಸಿದರು. ಯಾರ ಸಂಪತ್ತು ಮತ್ತು ಸಂತಾನ ಮೂಲಕ ತಮಗೆ ಹಾನಿಯೇ ಹೆಚ್ಚುವಂತಾಯಿತೋ ಅಂಥವರನ್ನು ಅವರು ಹಿಂಬಾಲಿಸಿದರು.

قَالَ نُوحٌ رَّبِّ إِنَّهُمْ عَصَوْنِي وَاتَّبَعُوا مَنْ لَّمْ يَزِدْهُ مَالُهُ وَوَلَدُهُ إِلَّا خَسَارًا ﴿٢٢﴾

23. "ಅವರೊಂದು ಬಲು ದೊಡ್ಡ ಷಡ್ಯಂತ್ರ ಹೂಡಿದ್ದಾರೆ.

وَمَكَرُوا مَكْرًا كُبَّارًا ﴿٢٣﴾

24. "ಅವರು (ಪರಸ್ಪರ) ಹೇಳಿದರು: 'ನಿಮ್ಮ ದೇವರುಗಳನ್ನು ನೀವೆಂದಿಗೂ ಬಿಟ್ಟುಬಿಡಬಾರದು. ವದ್ದ್, ಸುವಾಅ್, ಯಗೂಸ್, ಯವೂಖ್ ಮತ್ತು ನಸ್ರ್- ಇವರ್ಯಾರನ್ನೂ ನೀವು ಪರಿತ್ಯಜಿಸಬೇಡಿರಿ.'

وَقَالُوا لَا تَذَرُنَّ آلِهَتَكُمْ وَلَا تَذَرُنَّ وَدًّا وَّلَا سُوَاعًا ۙ وَّلَا يَغُوثَ وَيَعُوقَ وَنَسْرًا ﴿٢٤﴾

25. "ಅವರು ಬಹಳ ಜನರನ್ನು ತಪ್ಪು ಹಾದಿಗೆ ಎಳೆದಿದ್ದಾರೆ. ಈ ದುಷ್ಕರ್ಮಿಗಳಿಗೆ ನೀನು ಸೋಲನ್ನೇ ಹೆಚ್ಚಿಸು."

وَقَدْ أَضَلُّوا كَثِيرًا ۚ وَلَا تَزِدِ الظّٰلِمِينَ إِلَّا ضَلٰلًا ﴿٢٥﴾

26. (ಹಾಗೆ) ಅವರ ಪಾಪಕೃತ್ಯಗಳ ಹೇತುವಾಗಿ ಅವರು ಮುಳುಗಿಸಲ್ಪಟ್ಟರು ಮತ್ತು ನರಕದಲ್ಲಿ

مِّمَّا خَطِيٓـَٔاتِهِمْ أُغْرِقُوا فَأُدْخِلُوا نَارًا ۙ





ಪ್ರವೇಶಿಸಲ್ಪಟ್ಟರು. ಅಲ್ಲಾಹನ ವಿರುದ್ಧವಾಗಿ ತಮಗೆ ಸಹಾಯಕರಾಗಿ ಯಾರನ್ನೂ ಅವರು ಕಾಣಲಿಲ್ಲ.

فَلَمْ يَجِدُوا لَهُمْ مِّنْ دُونِ اللّٰهِ أَنْصَارًا ﴿٢٦﴾

27. ನೂಹ್ ಪ್ರಾರ್ಥಿಸಿದರು: 'ನನ್ನ ಪ್ರಭೂ ಈ ಪ್ರದೇಶದಲ್ಲಿ ಯಾವೊಬ್ಬ ಅವಿಶ್ವಾಸಿಯನ್ನಾಗಲಿ ನೀನು ಬದುಕಲು ಬಿಡಬೇಡ.

وَقَالَ نُوحٌ رَّبِّ لَا تَذَرْ عَلَى الْأَرْضِ مِنَ الْكٰفِرِينَ دَيَّارًا ﴿٢٧﴾

28. 'ಏಕೆಂದರೆ ನೀನು ಅವರನ್ನು ಬಿಟ್ಟರೆ, ಖಂಡಿತವಾಗಿಯೂ ಅವರು ನಿನ್ನ ದಾಸರನ್ನು ತಪ್ಪು ಹಾದಿಗೆಳೆಯುವರು. ಅವರು ಕೃತಘ್ನರಾದ ಪಾಪಿಗಳಿಗೆ ಹೊರತು ಇನ್ನಾರಿಗೂ ಜನ್ಮ ನೀಡುವುದಿಲ್ಲ.

إِنَّكَ إِنْ تَذَرْهُمْ يُضِلُّوا عِبَادَكَ وَلَا يَلِدُوا إِلَّا فَاجِرًا كَفَّارًا ﴿٢٨﴾

29. 'ನನ್ನ ಪ್ರಭೂ, ನನಗೂ ನನ್ನ ತಂದೆ ತಾಯಂದಿರಿಗೂ ವಿಶ್ವಾಸಿಯಾಗಿ ನನ್ನ ಮನೆಯನ್ನು ಪ್ರವೇಶಿಸುವವನಿಗೂ ವಿಶ್ವಾಸಿಗಳಾದ ಪುರುಷರಿಗೂ ವಿಶ್ವಾಸಿಗಳಾದ ಸ್ತ್ರೀಯರಿಗೂ ನೀನು ಕ್ಷಮೆ ನೀಡು. ದುಷ್ಕರ್ಮಿಗಳಿಗೆ ನೀನು ವಿನಾಶವನ್ನೇ ಹೊರತು ಇನ್ನೇನನ್ನೂ ಹೆಚ್ಚಿಸಬೇಡ.'

رَبِّ اغْفِرْ لِي وَلِوَالِدَيَّ وَلِمَنْ دَخَلَ بَيْتِيَ مُؤْمِنًا وَّلِلْمُؤْمِنِينَ وَالْمُؤْمِنٰتِ ۖ وَلَا تَزِدِ الظّٰلِمِينَ إِلَّا تَبَارًا ﴿٢٩﴾

سُورَةُ الْجِنِّ مَكِّيَّةٌ وَّهِيَ مَعَ الْبَسْمَلَةِ تِسْعٌ وَّعِشْرُوْنَ اٰيَةً وَّرُكُوْعَانِ

# 72. ಅಲ್‌ಜಿನ್ನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 29 ಆಯತ್‌ಗಳು ಹಾಗೂ 2 ರುಕೂಲ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** (ಎಲ್ಲೈ ಪ್ರವಾದಿ) **ಹೇಳು: "ಜಿನ್ನ್‌ಗಳ[478] ಪೈಕಿ ಒಂದು ತಂಡ** (ಖುರ್‌ಆನನ್ನು) **ಲಕ್ಷ್ಯಗೊಟ್ಟು ಆಲಿಸಿದರೆಂದೂ 'ಅದ್ಭುತಕರವಾದ ಒಂದು ಖುರ್‌ಆನನ್ನು ನಾವು ಆಲಿಸಿದೆವು' ಎಂದು ಅವರು** (ತಮ್ಮ ಜನರಿಗೆ) **ಹೇಳಿದರೆಂದೂ ನನಗೆ ದೈವಿಕ ಸಂದೇಶ ಲಭಿಸಿದೆ.**

قُلْ أُوْحِيَ إِلَيَّ أَنَّهُ اسْتَمَعَ نَفَرٌ مِّنَ الْجِنِّ فَقَالُوْا إِنَّا سَمِعْنَا قُرْاٰنًا عَجَبًا ﴿٢﴾

**3.** (ಜಿನ್ನ್‌ಗಳು ಹೇಳಿದರು:) **'ಅದು ಸತ್ಪಥದತ್ತ ಮಾರ್ಗದರ್ಶನ ಮಾಡುತ್ತದೆ. ಹಾಗೆ ನಾವು ಅದನ್ನು ನಂಬಿದೆವು. ನಮ್ಮ ಪ್ರಭುವಿಗೆ ನಾವು ಯಾರನ್ನೂ ಸಹಭಾಗಿಯನ್ನಾಗಿ ಮಾಡಲಾರೆವು.**

يَّهْدِيْٓ إِلَى الرُّشْدِ فَاٰمَنَّا بِهٖ ۖ وَلَنْ نُّشْرِكَ بِرَبِّنَآ أَحَدًا ﴿٣﴾

**4. 'ನಿಜವಾಗಿಯೂ ನಮ್ಮ ಪ್ರಭುವಿನ ಮಹತ್ವ ಅತ್ಯುನ್ನತವಾಗಿದೆ. ಅವನಿಗೆ ಪತ್ನಿಯಾಗಲಿ ಪುತ್ರನಾಗಲಿ ಇಲ್ಲ.[479]**

وَّأَنَّهُ تَعٰلٰى جَدُّ رَبِّنَا مَا اتَّخَذَ صَاحِبَةً وَّلَا وَلَدًا ﴿٤﴾

**5. 'ಖಂಡಿತವಾಗಿಯೂ ನಮ್ಮ ಪೈಕಿ ಅವಿವೇಕಿ ಗಳು ಅಲ್ಲಾಹನ ಕುರಿತು ಮಹಾ ಸುಳ್ಳನ್ನು ಹೇಳುತ್ತಿದ್ದರು.**

وَّأَنَّهُ كَانَ يَقُوْلُ سَفِيْهُنَا عَلَى اللّٰهِ شَطَطًا ﴿٥﴾

**6. 'ನಿಜವಾಗಿಯೂ ಇನ್ಸ್ ಮತ್ತು ಜಿನ್ನ್ ಅಲ್ಲಾಹನ ಕುರಿತು ಸುಳ್ಳುಹೇಳಲಾರರೆಂದು ನಾವು ಭಾವಿಸಿದ್ದೆವು.**

وَّأَنَّا ظَنَنَّآ أَنْ لَّنْ تَقُوْلَ الْإِنْسُ وَالْجِنُّ عَلَى اللّٰهِ كَذِبًا ﴿٦﴾

478. 'ಜಿನ್ನ್' ಎಂಬುದಕ್ಕೆ ವಿಶಾಲವಾದ ಅರ್ಥವ್ಯಾಪ್ತಿಯಿದೆ. 'ಜಿನ್ನ್' ಎಂಬುದರ ಶಬ್ದಾರ್ಥ ಮರೆಯಲ್ಲಿರುವವರು ಎಂದಾಗಿದೆ. ಇಲ್ಲಿ ಪ್ರಸ್ತಾಪಿಸಲಾಗಿರುವ ಜಿನ್ನ್‌ಗಳು ಮಕ್ಕದ ಹೊರವಲಯದಲ್ಲಿ ವಾಸಿಸುತ್ತಿದ್ದ ಕೆಲವು ಯಹೂದ್ಯರಾಗಿದ್ದರು. ಅವರು ಬಂದು ಮರೆಯಲ್ಲಿ ನಿಂತು ಗುಪ್ತವಾಗಿ ಖುರ್‌ಆನನ್ನು ಆಲಿಸುತ್ತಿದ್ದರು. ಅವರು ಮರೆಯಲ್ಲಿ ನಿಂತು ಖುರ್‌ಆನನ್ನು ಆಲಿಸಲು ಕಾರಣವೇನೆಂದರೆ ಇತರರ ಬಗ್ಗೆ ಅವರಿಗಿದ್ದ ಭಯವಾಗಿತ್ತು.

479. ಅವರು ಕ್ರೈಸ್ತ ಧರ್ಮದ ಪ್ರಭಾವಕ್ಕೆ ಒಳಗಾದ ಯಹೂದ್ಯ ಜನರಾಗಿದ್ದರೆಂದು ಇದರಿಂದ ತಿಳಿದುಕೊಳ್ಳಬಹುದು.





**7. 'ಇನ್ಸ್‌ಗಳ ಪೈಕಿ ಕೆಲವರು ಜಿನ್ನ್‌ಗಳ ಪೈಕಿ ಕೆಲವರ ಅಭಯ ಬಯಸುತ್ತಿದ್ದರು. ಹಾಗೆ ಇವರಿಂದ ಅವರ ಅಹಂಕಾರ ಹೆಚ್ಚುವಂತಾಯಿತು.**

وَّأَنَّهُ كَانَ رِجَالٌ مِّنَ الْإِنْسِ يَعُوْذُوْنَ بِرِجَالٍ مِّنَ الْجِنِّ فَزَادُوْهُمْ رَهَقًا ﴿٧﴾

**8. 'ಅಲ್ಲಾಹನು ಯಾರನ್ನೂ** (ಪ್ರವಾದಿಯಾಗಿ) **ನಿಯೋಜಿಸಲಾರನೆಂದು ನೀವು ಭಾವಿಸಿದ್ದಂತೆ ಅವರು ಸಹ ಭಾವಿಸಿದ್ದರು.**

وَّأَنَّهُمْ ظَنُّوْا كَمَا ظَنَنْتُمْ أَنْ لَّنْ يَّبْعَثَ اللّٰهُ أَحَدًا ﴿٨﴾

**9. 'ನಾವು ಆಕಾಶವನ್ನು ತಲಪಲು ಪ್ರಯತ್ನಿಸಿದೆವು.[480] ಆಗ ಬಲಿಷ್ಠರಾದ ಕಾವಲುಗಾರರಿಂದಲೂ ಉಲ್ಕೆಗಳಿಂದಲೂ ಅದು ತುಂಬಿರುವುದಾಗಿ ನಾವು ಕಂಡೆವು.**

وَّأَنَّا لَمَسْنَا السَّمَآءَ فَوَجَدْنٰهَا مُلِئَتْ حَرَسًا شَدِيْدًا وَّشُهُبًا ﴿٩﴾

**10. 'ನಾವು ಈ ಮೊದಲು** (ಆಕಾಶದ ಬಗ್ಗೆ) **ಆಲಿಸಲಿಕ್ಕಾಗಿ ಅಲ್ಲಿ** (ನಿರೀಕ್ಷಣಾಲಯದಲ್ಲಿ) **ಕುಳಿತುಕೊಳ್ಳುತ್ತಿದ್ದೆವು. ಈಗ ಯಾರಾದರೂ ಆಲಿಸಲು ಪ್ರಯತ್ನಿಸಿದರೆ ಒಂದು ಉಲ್ಕೆ ಅವನಿಗಾಗಿ ಹೊಂಚು ಹಾಕುವುದನ್ನು ಅವನು ಕಾಣುತ್ತಾನೆ.**

وَّأَنَّا كُنَّا نَقْعُدُ مِنْهَا مَقَاعِدَ لِلسَّمْعِ ۖ فَمَنْ يَّسْتَمِعِ الْاٰنَ يَجِدْ لَهٗ شِهَابًا رَّصَدًا ﴿١٠﴾

**11. 'ಭೂಮಿಯಲ್ಲಿರುವವರಿಗೆ ಕೇಡನ್ನು ಉದ್ದೇಶಿಸಲಾಗಿದೆಯೋ ಅಥವಾ ಅವರ ಪ್ರಭು ಅವರಿಗೆ ಋಜುಮಾರ್ಗವನ್ನು ತೋರಿಸಿಕೊಡಲು ಬಯಸುತ್ತಾನೋ ಎಂದು ನಮಗೆ ತಿಳಿಯುವುದಿಲ್ಲ.**

وَّأَنَّا لَا نَدْرِيْٓ أَشَرٌّ أُرِيْدَ بِمَنْ فِي الْأَرْضِ أَمْ أَرَادَ بِهِمْ رَبُّهُمْ رَشَدًا ﴿١١﴾

**12. 'ನಮ್ಮ ಪೈಕಿ ಕೆಲವು ಸಜ್ಜನರಿದ್ದಾರೆ. ಕೆಲವರು ಹಾಗಿಲ್ಲ. ನಾವು ವಿವಿಧ ಮಾರ್ಗಗಳನ್ನು ಅನುಸರಿಸಿದ್ದೇವೆ.**

وَّأَنَّا مِنَّا الصّٰلِحُوْنَ وَمِنَّا دُوْنَ ذٰلِكَ ۖ كُنَّا طَرَآئِقَ قِدَدًا ﴿١٢﴾

**13. 'ಭೂಮಿಯಲ್ಲಿ ಅಲ್ಲಾಹನನ್ನು** (ಅವನ ಯೋಜನೆಯನ್ನು) **ನಿಷ್ಫಲಗೊಳಿಸಲಿಕ್ಕಾಗಲಿ, ಅವನಿಂದ ಓಡಿ ಪಾರಾಗಲಿಕ್ಕಾಗಲಿ ನಮಗೆಂದಿಗೂ ಸಾಧ್ಯವಿಲ್ಲವೆಂದು ನಮಗೆ ಚೆನ್ನಾಗಿ ಮನವರಿಕೆಯಾಗಿದೆ.**

وَّأَنَّا ظَنَنَّآ أَنْ لَّنْ نُّعْجِزَ اللّٰهَ فِي الْأَرْضِ وَلَنْ نُّعْجِزَهٗ هَرَبًا ﴿١٣﴾

**14. 'ಸತ್ಪಥದ ಕರೆಯನ್ನು ಆಲಿಸಿದಾಗ, ನಾವು**

وَّأَنَّا لَمَّا سَمِعْنَا الْهُدٰٓى اٰمَنَّا بِهٖ ۖ فَمَنْ

480. ಖಗೋಳ ಶಾಸ್ತ್ರವನ್ನು ಕಲಿಯಲು ಪ್ರಯತ್ನಿಸಿದೆವು ಎಂದರ್ಥ.

ಅದನ್ನು ನಂಬಿದೆವು. ಯಾವಾತನು ತನ್ನ ಪ್ರಭುವನ್ನು ನಂಬುತ್ತಾನೋ ಅವನಿಗೆ ನಷ್ಟದ ಅಥವಾ ಅನ್ಯಾಯದ ಭೀತಿಯಿಲ್ಲ.

يُؤْمِنْ بِرَبِّهٖ فَلَا يَخَافُ بَخْسًا وَّلَا رَهَقًا ⑭

**15.** 'ನಮ್ಮಲ್ಲಿ ಕೆಲವರು (ಅಲ್ಲಾಹನಿಗೆ) **ಶರಣಾಗಿದ್ದಾರೆ; ಕೆಲವರು ಅಧರ್ಮಿಗಳಾಗಿದ್ದಾರೆ.'" ಯಾರು ಅಲ್ಲಾಹನಿಗೆ ಶರಣಾಗುತ್ತಾರೋ ಅವರು ಸತ್ಪಥವನ್ನು ಬಯಸುವವರು.**

وَّاَنَّا مِنَّا الْمُسْلِمُوْنَ وَمِنَّا الْقٰسِطُوْنَ ۭ فَمَنْ اَسْلَمَ فَاُولٰۗىِٕكَ تَحَرَّوْا رَشَدًا ⑮

**16. ಯಾರು ಅಧರ್ಮಿಗಳಾಗಿದ್ದಾರೋ ಅವರೇ ನರಕದ ಇಂಧನ.**

وَاَمَّا الْقٰسِطُوْنَ فَكَانُوْا لِجَهَنَّمَ حَطَبًا ⑯

**17. ಅವರು ಸತ್ಪಥದಲ್ಲಿ ಚಲಿಸಿದ್ದರೆ ನಾವು ಖಂಡಿತವಾಗಿಯೂ ಅವರಿಗೆ ಕುಡಿಯಲು ಧಾರಾಳ ನೀರನ್ನು ಒದಗಿಸುತ್ತಿದ್ದೆವು -**

وَّاَنْ لَّوِ اسْتَقَامُوْا عَلَي الطَّرِيْقَةِ لَاَسْقَيْنٰهُمْ مَّاۗءً غَدَقًا ⑰

**18. ಆ ಮೂಲಕ ನಾವು ಅವರನ್ನು ಪರೀಕ್ಷಿಸಲಿಕ್ಕಾಗಿ. ಯಾವಾತನು ತನ್ನ ಪ್ರಭುವಿನ ಸ್ಮರಣೆಯಿಂದ ಪರಾಙ್ಮುಖನಾಗುತ್ತಾನೋ ಅಂಥವನನ್ನು ಅವನು** (ಅಲ್ಲಾಹನು) **ಅತಿ ಕಠೋರವಾದ ಶಿಕ್ಷೆಗೆ ತಳ್ಳುವನು.**

لِّنَفْتِنَهُمْ فِيْهِ ۭ وَمَنْ يُّعْرِضْ عَنْ ذِكْرِ رَبِّهٖ يَسْلُكْهُ عَذَابًا صَعَدًا ⑱

**19. ಎಲ್ಲ ಮಸ್‌ಜಿದ್‌ಗಳು ಅಲ್ಲಾಹನದ್ದಾಗಿವೆ. ಆದ್ದರಿಂದ ಅಲ್ಲಾಹನೊಂದಿಗೆ ನೀವು ಬೇರೆ ಯಾರನ್ನೂ ಕರೆದು ಪ್ರಾರ್ಥಿಸಬಾರದು.**

وَّاَنَّ الْمَسٰجِدَ لِلّٰهِ فَلَا تَدْعُوْا مَعَ اللّٰهِ اَحَدًا ⑲

**20. ಅಲ್ಲಾಹನ ದಾಸ[481] ಅವನನ್ನು** (ಅಲ್ಲಾಹನನ್ನು) **ಪ್ರಾರ್ಥಿಸುತ್ತಾ ಎದ್ದು ನಿಂತಾಗ ಅವರು** (ಶತ್ರುಗಳು) **ಆತನ ಮೇಲೆ ಮುಗಿ ಬೀಳಲು ಉದ್ಯುಕ್ತರಾದರು.**

وَّاَنَّهٗ لَمَّا قَامَ عَبْدُ اللّٰهِ يَدْعُوْهُ كَادُوْا يَكُوْنُوْنَ عَلَيْهِ لِبَدًا ⑳

**21. ಹೇಳು: 'ನಾನು ನನ್ನ ಪ್ರಭುವನ್ನು ಮಾತ್ರ ಕರೆದು ಪ್ರಾರ್ಥಿಸುತ್ತೇನೆ. ಅವನಿಗೆ ಸಹಭಾಗಿಯನ್ನಾಗಿ ಯಾರನ್ನೂ ನಾನು ಕಲ್ಪಿಸುವುದಿಲ್ಲ.'**

قُلْ اِنَّمَآ اَدْعُوْا رَبِّيْ وَلَآ اُشْرِكُ بِهٖٓ اَحَدًا ㉑

**22. ಹೇಳು: 'ನಿಮಗೆ ಕೆಡುಕಾಗಲಿ ಒಳಿತಾಗಲಿ ಮಾಡಲಿಕ್ಕೆ ನನಗೆ ಸಾಮರ್ಥ್ಯವಿಲ್ಲ.'**

قُلْ اِنِّىْ لَآ اَمْلِكُ لَكُمْ ضَرًّا وَّلَا رَشَدًا ㉒

481. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ).





**23. ಹೇಳು: 'ಅಲ್ಲಾಹನಿಗೆ ವಿರುದ್ಧವಾಗಿ ನನ್ನನ್ನು ರಕ್ಷಿಸುವವನು ಯಾರೂ ಇಲ್ಲ. ಅವನ ಹೊರತು ನನಗೆ ಅಭಯ ನೀಡುವ ಯಾರನ್ನೂ ನಾನು ಕಾಣುವುದಿಲ್ಲ.**

قُلْ اِنِّىْ لَنْ يُّجِيْرَنِيْ مِنَ اللّٰهِ اَحَدٌ ڏ وَّلَنْ اَجِدَ مِنْ دُوْنِهٖ مُلْتَحَدًا ㉓

**24. 'ಅಲ್ಲಾಹನಿಂದಿರುವ** ವಚನಗಳನ್ನು **ಮತ್ತು ಸಂದೇಶಗಳನ್ನು ತಲಪಿಸುವುದು ಮಾತ್ರ ನನ್ನ ಕರ್ತವ್ಯವಾಗಿದೆ' ಯಾರು ಅಲ್ಲಾಹನಿಗೂ ಅವನ ಸಂದೇಶವಾಹಕನಿಗೂ ವಿಧೇಯರಾಗುವುದಿಲ್ಲವೋ ಅವರಿಗೆ ನರಕಾಗ್ನಿಯ ಶಿಕ್ಷೆಯಿದೆ. ಅಲ್ಲಿ ಅವರು ದೀರ್ಘಕಾಲ ವಾಸಿಸುವರು.**

اِلَّا بَلٰغًا مِّنَ اللّٰهِ وَرِسٰلٰتِهٖ ۭ وَمَنْ يَّعْصِ اللّٰهَ وَرَسُوْلَهٗ فَاِنَّ لَهٗ نَارَ جَهَنَّمَ خٰلِدِيْنَ فِيْهَآ اَبَدًا ㉔

**25. ಹಾಗೆ ಅವರಿಗೆ ಮುನ್ನೆಚ್ಚರಿಕೆ ನೀಡಲಾದುದನ್ನು** (ಶಿಕ್ಷೆಯನ್ನು) **ಅವರು ಕಾಣುವಾಗ ಯಾರ ಸಹಾಯಕರು ಬಲಹೀನರೆಂದೂ ಸಂಖ್ಯೆಯಲ್ಲಿ ಯಾರು ಕಡಿಮೆಯೆಂದೂ ಅವರಿಗೆ ಮನವರಿಕೆಯಾಗುವುದು.**

حَتّٰٓي اِذَا رَاَوْا مَا يُوْعَدُوْنَ فَسَيَعْلَمُوْنَ مَنْ اَضْعَفُ نَاصِرًا وَّاَقَلُّ عَدَدًا ㉕

**26. ಹೇಳು: 'ನಿಮಗೆ ನೀಡಲಾದ ಮುನ್ನೆಚ್ಚರಿಕೆ** (ಶಿಕ್ಷೆ) **ಶೀಘ್ರದಲ್ಲೇ ಬರುವುದೋ ಅಥವಾ ನನ್ನ ಪ್ರಭು ಅದಕ್ಕೆ ಒಂದು ದೀರ್ಘವಾದ ಕಾಲಾವಧಿಯನ್ನು ನಿಶ್ಚಯಿಸಿದ್ದಾನೋ ಎಂದು ನನಗೆ ತಿಳಿಯದು.'**

قُلْ اِنْ اَدْرِيْٓ اَقَرِيْبٌ مَّا تُوْعَدُوْنَ اَمْ يَجْعَلُ لَهٗ رَبِّيْٓ اَمَدًا ㉖

**27.** (ಅವನು) **ಅದೃಶ್ಯ ವಿಚಾರಗಳನ್ನು ಬಲ್ಲವನಾಗಿದ್ದಾನೆ. ಅವನು ತನ್ನ ರಹಸ್ಯಗಳನ್ನು ಯಾರಿಗೂ ಬಹಿರಂಗಪಡಿಸುವುದಿಲ್ಲ-**

عٰلِمُ الْغَيْبِ فَلَا يُظْهِرُ عَلٰي غَيْبِهٖٓ اَحَدًا ㉗

**28. ಅವನು ಮೆಚ್ಚುವ ತನ್ನ ಸಂದೇಶವಾಹಕನಿಗೆ ಹೊರತು. ಅನಂತರ** (ಸಂರಕ್ಷಣೆಗಾಗಿ) **ಅವರ ಮುಂದೆಯೂ ಹಿಂದೆಯೂ ಅವನು ಕಾವಲುಗಾರರನ್ನು** (ದಿವ್ಯದೂತರನ್ನು) **ಏರ್ಪಡಿಸುತ್ತಾನೆ.**

اِلَّا مَنِ ارْتَضٰى مِنْ رَّسُوْلٍ فَاِنَّهٗ يَسْلُكُ مِنْۢ بَيْنِ يَدَيْهِ وَمِنْ خَلْفِهٖ رَصَدًا ㉘

**29. ಇದು, ಅವರು** (ಸಂದೇಶವಾಹಕರು) **ತಮ್ಮ ಪ್ರಭುವಿನ ಸಂದೇಶಗಳನ್ನು ತಲಪಿಸಿದ್ದಾರೋ ಎಂದು ಅವನು** (ಅಲ್ಲಾಹನು) **ತಿಳಿಯಲಿಕ್ಕೋಸ್ಕರವಾಗಿದೆ. ಅವರಲ್ಲಿರುವ ಎಲ್ಲವನ್ನೂ ಅವನು ಸುತ್ತುವರಿಯುತ್ತಾನೆ. ಸರ್ವವನ್ನೂ ಅವನು ಎಣಿಸಿಟ್ಟಿರುತ್ತಾನೆ.**

لِّيَعْلَمَ اَنْ قَدْ اَبْلَغُوْا رِسٰلٰتِ رَبِّهِمْ وَاَحَاطَ بِمَا لَدَيْهِمْ وَاَحْصٰى كُلَّ شَيْءٍ عَدَدًا ㉙

## سُورَةُ الْمُزَّمِّلِ مَكِّيَّةٌ وَهِيَ مَعَ الْبَسْمَلَةِ إِحْدَى وَعِشْرُونَ آيَةً وَرُكُوعَانِ

# 73. ಅಲ್‌ಮುಸ್ಸಮ್ಮಿಲ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 21 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** ಎಲ್ಲೈ (ಹೊಣೆಗಾರಿಕೆಯ) ಚಾದರ ಹೊದಿಸಲ್ಪಟ್ಟವನೇ,

يٰٓاَيُّهَا الْمُزَّمِّلُ ﴿٢﴾

**3.** ರಾತ್ರಿ ಪ್ರಾರ್ಥನೆಗಾಗಿ ಎದ್ದು ನಿಲ್ಲು - ಸ್ವಲ್ಪ ಸಮಯ ಹೊರತುಪಡಿಸಿ.

قُمِ الَّيْلَ اِلَّا قَلِيْلًا ﴿٣﴾

**4.** ಅದರ (ರಾತ್ರಿಯ) ಅರ್ಧ ಸಮಯ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಮಾಡು.

نِّصْفَهٗٓ اَوِ انْقُصْ مِنْهُ قَلِيْلًا ﴿٤﴾

**5.** ಅಥವಾ ಅದಕ್ಕಿಂತ (ಸ್ವಲ್ಪ ಸಮಯ) ಹೆಚ್ಚು ಮಾಡು. ಖುರ್‌ಆನನ್ನು ಮಧುರ ಸ್ವರದಲ್ಲಿ ಪಠಿಸು.

اَوْ زِدْ عَلَيْهِ وَرَتِّلِ الْقُرْاٰنَ تَرْتِيْلًا ﴿٥﴾

**6.** ಭಾರವಾದ (ಹೊಣೆಗಾರಿಕೆಯಿಂದ ಕೂಡಿದ) ಒಂದು ವಚನವನ್ನು ನಾವು ನಿನಗೆ ಅವತೀರ್ಣಗೊಳಿಸಲಿದ್ದೇವೆ.

اِنَّا سَنُلْقِيْ عَلَيْكَ قَوْلًا ثَقِيْلًا ﴿٦﴾

**7.** ರಾತ್ರಿ ವೇಳೆಯ ಎದ್ದೇಳುವಿಕೆ ಖಂಡಿತವಾಗಿಯೂ ಆತ್ಮ ನಿಯಂತ್ರಣ ಹೊಂದಲು ಶಕ್ತಿಯುತ ಮಾರ್ಗವಾಗಿದೆ ಹಾಗೂ ಮಾತುಗಳನ್ನು ಋಜುಗೊಳಿಸಲು ಸಹಾಯಕವಾಗಿದೆ.

اِنَّ نَاشِئَةَ الَّيْلِ هِيَ اَشَدُّ وَطْاً وَّاَقْوَمُ قِيْلًا ﴿٧﴾

**8.** ಹಗಲು ಹೊತ್ತು ನಿನಗೆ ದೀರ್ಘವಾದ ಕಾರ್ಯಕ್ರಮಗಳಿರುತ್ತವೆ.

اِنَّ لَكَ فِى النَّهَارِ سَبْحًا طَوِيْلًا ﴿٨﴾

**9.** ನೀನು ನಿನ್ನ ಪ್ರಭುವಿನ ನಾಮಸ್ಮರಣೆ ಮಾಡುತ್ತಾ ಇರು ಹಾಗೂ ಎಲ್ಲವುಗಳಿಂದಲೂ ಬೇರ್ಪಟ್ಟು ಪೂರ್ಣವಾಗಿ ಅವನಿಗೆ ಸಮರ್ಪಿಸಿಕೋ.

وَاذْكُرِ اسْمَ رَبِّكَ وَتَبَتَّلْ اِلَيْهِ تَبْتِيْلًا ﴿٩﴾





**10.** (ಅವನು) ಪೂರ್ವ ಮತ್ತು ಪಶ್ಚಿಮದ ಪ್ರಭು. ಅವನ ಹೊರತು ಬೇರೆ ಆರಾಧ್ಯನಿಲ್ಲ. ಆದ್ದರಿಂದ ಅವನನ್ನೇ ನೀನು ಸಂರಕ್ಷಕನಾಗಿ ಮಾಡು.

رَبُّ الْمَشْرِقِ وَالْمَغْرِبِ لَآ اِلٰهَ اِلَّا هُوَ فَاتَّخِذْهُ وَكِيْلًا ﴿١٠﴾

**11.** ಅವರ ಮಾತುಗಳನ್ನು ನೀನು ಸೈರಿಸಿಕೋ ಹಾಗೂ ಸಭ್ಯವಾಗಿಯೇ ಅವರಿಂದ ದೂರವಾಗು.

وَاصْبِرْ عَلٰى مَا يَقُوْلُوْنَ وَاهْجُرْهُمْ هَجْرًا جَمِيْلًا ﴿١١﴾

**12.** ಸುಖಸೌಕರ್ಯಗಳಿಂದ ಮೆರೆಯುತ್ತಾ (ಸತ್ಯವನ್ನು) ಅಲ್ಲಗಳೆಯುತ್ತಿರುವವರ ವಿಚಾರವನ್ನು ನನಗೆ ಬಿಟ್ಟುಬಿಡು ಮತ್ತು ಅವರಿಗೆ ಸ್ವಲ್ಪ ಕಾಲಾವಕಾಶವನ್ನು ಕೊಡು.

وَذَرْنِيْ وَالْمُكَذِّبِيْنَ اُولِى النَّعْمَةِ وَمَهِّلْهُمْ قَلِيْلًا ﴿١٢﴾

**13.** ನಿಶ್ಚಯವಾಗಿಯೂ ಅವರಿಗೋಸ್ಕರ ನಮ್ಮ ಬಳಿ ಪಾದ ಸಂಕಲೆಗಳು ಇವೆ ಮತ್ತು ಜ್ವಲಿಸುವ ಅಗ್ನಿಯಿದೆ.

اِنَّ لَدَيْنَآ اَنْكَالًا وَّجَحِيْمًا ﴿١٣﴾

**14.** ಗಂಟಲಿನಲ್ಲಿ ಸಿಕ್ಕಿಕೊಳ್ಳುವ ಆಹಾರ ಮತ್ತು ಯಾತನಾಮಯವಾದ ಶಿಕ್ಷೆಯೂ ಅವರಿಗಿದೆ.

وَّطَعَامًا ذَا غُصَّةٍ وَّعَذَابًا اَلِيْمًا ﴿١٤﴾

**15.** ಅಂದು ಭೂತಳ ಮತ್ತು ಪರ್ವತಗಳು ತೀವ್ರವಾಗಿ ಕಂಪಿಸುವುವು. ಪರ್ವತಗಳು ಉದುರುವ ಮರಳಗುಡ್ಡೆಗಳಂತಾಗುವುವು.

يَوْمَ تَرْجُفُ الْاَرْضُ وَالْجِبَالُ وَكَانَتِ الْجِبَالُ كَثِيْبًا مَّهِيْلًا ﴿١٥﴾

**16.** ಫಿರ್‌ಔನನ ಬಳಿಗೆ ನಾವು ಒಬ್ಬ ಸಂದೇಶವಾಹಕನನ್ನು ಕಳುಹಿಸಿದಂತೆ, ನಿಶ್ಚಯವಾಗಿಯೂ ನಿಮಗೆ ಸಾಕ್ಷಿಯಾಗಿ ನಿಮ್ಮ ಬಳಿಗೆ ಒಬ್ಬ ಸಂದೇಶವಾಹಕನನ್ನು ನಾವು ಕಳುಹಿಸಿದ್ದೇವೆ.

اِنَّآ اَرْسَلْنَآ اِلَيْكُمْ رَسُوْلًا شَاهِدًا عَلَيْكُمْ كَمَآ اَرْسَلْنَآ اِلٰى فِرْعَوْنَ رَسُوْلًا ﴿١٦﴾

**17.** ಆದರೆ ಫಿರ್‌ಔನ್ ಆ ಸಂದೇಶವಾಹಕನನ್ನು ಧಿಕ್ಕರಿಸಿದನು. ಆದ್ದರಿಂದ ನಾವು ಅವನನ್ನು ಬಲವಾಗಿ ಹಿಡಿದು ಶಿಕ್ಷಿಸಿದೆವು.

فَعَصٰى فِرْعَوْنُ الرَّسُوْلَ فَاَخَذْنٰهُ اَخْذًا وَّبِيْلًا ﴿١٧﴾

**18.** ನೀವು ನಂಬುವುದಿಲ್ಲವಾದರೆ, ಮಕ್ಕಳನ್ನು ವೃದ್ಧರನ್ನಾಗಿ ಮಾಡುವ ಆ ದಿನದಿಂದ ನೀವು ಹೇಗೆ ಪಾರಾಗುವಿರಿ?

فَكَيْفَ تَتَّقُوْنَ اِنْ كَفَرْتُمْ يَوْمًا يَّجْعَلُ الْوِلْدَانَ شِيْبًا ﴿١٨﴾

**19.** (ಅಂದು) **ಆಕಾಶ ಸೀಳಲ್ಪಡುವುದು. ಅವನ** (ಅಲ್ಲಾಹನ) **ಮುನ್ನೆಚ್ಚರಿಕೆ** (ಶಿಕ್ಷೆ) **ಬಂದೇ ಬರುವುದು.**

السَّمَآءُ مُنْفَطِرٌۢ بِهٖ ؕ كَانَ وَعْدُهٗ
مَفْعُوْلًا ﴿١٩﴾

**20. ಖಂಡಿತವಾಗಿಯೂ ಇದೊಂದು ಉಪದೇಶವಾಗಿದೆ. ಆದ್ದರಿಂದ ಯಾವನಾದರೂ ಬಯಸುವುದಾದರೆ ತನ್ನ ಪ್ರಭುವಿನ ಕಡೆಗಿರುವ ಒಂದು ಮಾರ್ಗವನ್ನು ಅವನು ಅನುಸರಿಸಲಿ.**

اِنَّ هٰذِهٖ تَذْكِرَةٌ ۚ فَمَنْ شَآءَ اتَّخَذَ اِلٰى
رَبِّهٖ سَبِيْلًا ﴿٢٠﴾

**21. ನೀನು ಮತ್ತು ನಿನ್ನೊಂದಿಗಿರುವವರಲ್ಲಿ ಒಂದು ಗುಂಪು ಜನರು ಎದ್ದು ರಾತ್ರಿಯ ಮೂರರಲ್ಲಿ ಎರಡಂಶವಾಗಲಿ ಅದರ ಅರ್ಧಾಂಶವಾಗಲಿ ಅದರ ಮೂರರಲ್ಲಿ ಒಂದಂಶವಾಗಲಿ ಪ್ರಾರ್ಥಿಸುತ್ತಿರುವಿರಿ ಎಂದು ಖಂಡಿತವಾಗಿಯೂ ನಿನ್ನ ಪ್ರಭುವಿಗೆ ಗೊತ್ತಿದೆ. ರಾತ್ರಿಯನ್ನೂ ಹಗಲನ್ನೂ ಅಲ್ಲಾಹನು ನಿರ್ಣಯಿಸುತ್ತಾನೆ. ಅದರ ಪೂರ್ಣ ಗಣನೆ ಮಾಡಲು ನಿಮ್ಮಿಂದ ಸಾಧ್ಯವಿಲ್ಲವೆಂದು ಅವನು ಬಲ್ಲನು. ಆದ್ದರಿಂದ ಅವನು ನಿಮ್ಮ ಮೇಲೆ ಕೃಪೆ ತೋರಿಸಿದ್ದಾನೆ. ಆದುದರಿಂದ ನಿಮಗೆ ಖುರ್‌ಆನ್‌ನಿಂದ ಸುಲಭ ಸಾಧ್ಯವಾಗುವುದನ್ನು ಪಠಿಸಿರಿ. ನಿಮ್ಮ ಪೈಕಿ ಕೆಲವರು ರೋಗಿಗಳಾಗಿರಬಹುದೆಂದೂ ಬೇರೆ ಕೆಲವರು ಅಲ್ಲಾಹನ ಅನುಗ್ರಹವನ್ನು ಅರಸಿಕೊಂಡು** (ಜೀವನೋಪಾಯ ಹುಡುಕುತ್ತಾ) **ಭೂಮಿಯಲ್ಲಿ ಸಂಚರಿಸುವವರೂ ಮತ್ತೆ ಕೆಲವರು ಅಲ್ಲಾಹನ ಮಾರ್ಗದಲ್ಲಿ ಹೋರಾಡುವವರೂ ಇರಬಹುದೆಂದೂ ಅವನಿಗೆ ಗೊತ್ತಿದೆ. ಆದ ಕಾರಣ ಅದರಿಂದ** (ಖುರ್‌ಆನಿನಿಂದ) **ಸುಲಭ ಸಾಧ್ಯವಾಗುವುದನ್ನು ಪಠಿಸಿರಿ. ನಮಾಝುನ್ನು ನಿಷ್ಠೆಯಿಂದ ನಿರ್ವಹಿಸಿರಿ. ಝಕಾತ್ ನೀಡಿರಿ. ಅಲ್ಲಾಹನಿಗೆ ನೀವು ಉತ್ತಮವಾದ ಸಾಲವನ್ನು ಕೊಡಿರಿ. ನೀವು ನಿಮ್ಮ ಆತ್ಮಗಳಿಗೋಸ್ಕರ ಮುಂಚಿತವಾಗಿ ಮಾಡಿಡುವ ಯಾವುದೇ ಒಳಿತನ್ನು ನೀವು ಅಲ್ಲಾಹನ ಸನ್ನಿಧಿಯಲ್ಲಿ ಕಾಣುವಿರಿ. ಅದಕ್ಕೆ ಉತ್ತಮವಾದ ಹಾಗೂ ಮಹತ್ತರ ಪ್ರತಿಫಲವಿದೆ. ಅಲ್ಲಾಹನ ಕ್ಷಮೆಯಾಚಿಸಿರಿ. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕಾರುಣ್ಯವಂತನೂ ಆಗಿದ್ದಾನೆ.**

اِنَّ رَبَّكَ يَعْلَمُ اَنَّكَ تَقُوْمُ اَدْنٰى مِنْ ثُلُثَيِ
الَّيْلِ وَنِصْفَهٗ وَثُلُثَهٗ وَطَآئِفَةٌ مِّنَ
الَّذِيْنَ مَعَكَ ؕ وَاللّٰهُ يُقَدِّرُ الَّيْلَ وَ
النَّهَارَ ؕ عَلِمَ اَنْ لَّنْ تُحْصُوْهُ فَتَابَ
عَلَيْكُمْ فَاقْرَءُوْا مَا تَيَسَّرَ مِنَ الْقُرْاٰنِ ؕ
عَلِمَ اَنْ سَيَكُوْنُ مِنْكُمْ مَّرْضٰى ۙ وَ
اٰخَرُوْنَ يَضْرِبُوْنَ فِى الْاَرْضِ يَبْتَغُوْنَ
مِنْ فَضْلِ اللّٰهِ ۙ وَاٰخَرُوْنَ يُقَاتِلُوْنَ فِىْ
سَبِيْلِ اللّٰهِ ۖ فَاقْرَءُوْا مَا تَيَسَّرَ مِنْهُ ۙ وَ
اَقِيْمُوا الصَّلٰوةَ وَاٰتُوا الزَّكٰوةَ وَاَقْرِضُوا
اللّٰهَ قَرْضًا حَسَنًا ؕ وَمَا تُقَدِّمُوْا
لِاَنْفُسِكُمْ مِّنْ خَيْرٍ تَجِدُوْهُ عِنْدَ اللّٰهِ هُوَ
خَيْرًا وَّاَعْظَمَ اَجْرًا ؕ وَاسْتَغْفِرُوا اللّٰهَ ؕ اِنَّ
اللّٰهَ غَفُوْرٌ رَّحِيْمٌ ﴿٢١﴾

سُورَةُ الْمُدَّثِّرِ مَكِّيَّةٌ وَّهِيَ مَعَ الْبَسْمَلَةِ سَبْعٌ وَّخَمْسُوْنَ اٰيَةً وَّرُكُوْعَانِ

## 74. ಅಲ್‌ಮುದ್ದಸ್ಸಿರ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 57 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** بِسْمِ اللّٰهِ الرَّحْمٰنِ الرَّحِيْمِ (١)

**2. ಎಲೈ ಮೇಲಂಗಿ ಧರಿಸಿ ಸಿದ್ಧನಾಗಿರುವವನೇ,**[482] يٰۤاَيُّهَا الْمُدَّثِّرُ (٢)

**3. ಎದ್ದೇಳು ಮತ್ತು ಮುನ್ನೆಚ್ಚರಿಕೆ ನೀಡು.** قُمْ فَاَنْذِرْ (٣)

**4. ನಿನ್ನ ಪ್ರಭುವಿನ ಘನತೆಯನ್ನು ಘೋಷಿಸು.** وَرَبَّكَ فَكَبِّرْ (٤)

**5. ನಿನ್ನ ವಸ್ತ್ರಗಳನ್ನು** (ನಿನ್ನ ಸುತ್ತುಮುತ್ತಲಿರುವವರನ್ನು) **ಪರಿಶುದ್ಧಗೊಳಿಸು.** وَثِيَابَكَ فَطَهِّرْ (٥)

**6. ಮಾಲಿನ್ಯದಿಂದ ದೂರವಿರು.** وَالرُّجْزَ فَاهْجُرْ (٦)

**7. ಮರಳಿ ಹೆಚ್ಚು ಪಡೆಯುವ ಉದ್ದೇಶದಿಂದ ಉಪಕಾರ ಮಾಡದಿರು.** وَلَا تَمْنُنْ تَسْتَكْثِرُ (٧)

**8. ನಿನ್ನ ಪ್ರಭುವಿಗೋಸ್ಕರ** (ಪ್ರಭುವಿನ ಸಂತೃಪ್ತಿಗೋಸ್ಕರ) **ಸಹನೆದೋರು.** وَلِرَبِّكَ فَاصْبِرْ (٨)

**9. ಕಹಳೆ ಊದಲ್ಪಡುವಾಗ,** فَاِذَا نُقِرَ فِي النَّاقُوْرِ (٩)

**10. ಆ ದಿನವು ಕಠಿಣವಾದೊಂದು ದಿನ ವಾಗಿರುವುದು -** فَذٰلِكَ يَوْمَئِذٍ يَّوْمٌ عَسِيْرٌ (١٠)

**11. ಅವಿಶ್ವಾಸಿಗಳಿಗೆ ಅಸಹನೀಯವಾದುದು.** عَلَى الْكٰفِرِيْنَ غَيْرُ يَسِيْرٍ (١١)

482. 'ಮುದ್ದಸ್ಸಿರ್' ಎಂಬ ಪದಕ್ಕೆ ಸಾಮಾನ್ಯವಾಗಿ ಹೇಳುವ ಅರ್ಥ ಕಂಬಳಿ ಹೊದ್ದುಕೊಂಡವನು ಎಂದಾಗಿದೆ. ಕುದುರೆಯನ್ನೇರಲು ಸನ್ನದ್ಧನಾಗಿ ನಿಂತು ಅಪ್ಪಣೆಗೆ ಕಾಯುವವನು, ಮೇಲಂಗಿ ಧರಿಸಿ ಸಿದ್ಧನಾಗಿರುವವನು ಇತ್ಯಾದಿ ಅರ್ಥಗಳು ಸಹ ಅದಕ್ಕಿದೆ.





**12. ನಾನು ಯಾರನ್ನು ಸೃಷ್ಟಿಸಿದೆನೋ ಅವನ ವಿಚಾರದಲ್ಲಿ ನನ್ನನ್ನು ಒಬ್ಬನನ್ನೇ ಬಿಟ್ಟುಬಿಡು.**[483] ذَرْنِيْ وَمَنْ خَلَقْتُ وَحِيْدًا (١٢)

**13. ನಾನು ಅವನಿಗೆ ಹೇರಳವಾದ ಸಂಪತ್ತು ನೀಡಿದೆನು.** وَّجَعَلْتُ لَهٗ مَالًا مَّمْدُوْدًا (١٣)

**14. ಅವನ ಜೊತೆಯಲ್ಲೇ ಇರುವ ಮಕ್ಕಳನ್ನು ಸಹ.** وَّبَنِيْنَ شُهُوْدًا (١٤)

**15. ಅವನಿಗೋಸ್ಕರ ಎಲ್ಲ ಸೌಕರ್ಯಗಳನ್ನು ನಾನು ಒದಗಿಸಿದೆನು.** وَّمَهَّدْتُّ لَهٗ تَمْهِيْدًا (١٥)

**16.** (ಆದರೆ) **ನಾನು ಮತ್ತೂ ಹೆಚ್ಚು ಕೊಡಬೇಕೆಂದು ಅವನು ಬಯಸುತ್ತಾನೆ.** ثُمَّ يَطْمَعُ اَنْ اَزِيْدَ (١٦)

**17. ಅದು ಸಾಧ್ಯವಿಲ್ಲ. ಏಕೆಂದರೆ ಅವನು ನಮ್ಮ ದೃಷ್ಟಾಂತಗಳನ್ನು ವಿರೋಧಿಸುತ್ತಿದ್ದನು.** كَلَّا ؕ اِنَّهٗ كَانَ لِاٰيٰتِنَا عَنِيْدًا (١٧)

**18. ಹೆಚ್ಚುತ್ತಾ ಹೋಗುವ ಸಂಕಷ್ಟಗಳಿಗೆ ನಾನು ಅವನನ್ನು ಗುರಿಪಡಿಸುವೆನು.** سَاُرْهِقُهٗ صَعُوْدًا (١٨)

**19. ಅವನು ಯೋಚಿಸಿದನು ಹಾಗೂ ನಿರ್ಧರಿಸಿದನು.** اِنَّهٗ فَكَّرَ وَقَدَّرَ (١٩)

**20. ಅವನು ನಾಶವಾಗಲಿ ಅವನು ಹೇಗೆ ನಿರ್ಧರಿಸಿದನು!** فَقُتِلَ كَيْفَ قَدَّرَ (٢٠)

**21. ಮತ್ತೂ, ಅವನು ನಾಶವಾಗಲಿ, ಅವನು ಹೇಗೆ ನಿರ್ಧರಿಸಿಬಿಟ್ಟನು!** ثُمَّ قُتِلَ كَيْفَ قَدَّرَ (٢١)

**22. ಅವನು ಪುನರಾಲೋಚನೆ ಮಾಡಿದನು.** ثُمَّ نَظَرَ (٢٢)

**23. ಮತ್ತೆ ಅವನು ಹುಬ್ಬು ಗಂಟಿಕ್ಕಿದನು ಮತ್ತು ಮುಖ ಸಿಂಡರಿಸಿದನು.** ثُمَّ عَبَسَ وَبَسَرَ (٢٣)

**24. ಮತ್ತೆ ಅವನು ಬೆನ್ನು ತಿರುಗಿಸಿದನು ಮತ್ತು ಅಹಂಕಾರ ತೋರ್ಪಡಿಸಿದನು.** ثُمَّ اَدْبَرَ وَاسْتَكْبَرَ (٢٤)

483. ಅಂತಹ ಅವಿಶ್ವಾಸಿಗೆ ಪಾಠ ಕಲಿಸಲು ನಾನೇ ಸಾಕು ಎಂದರ್ಥ.

25. ಅವನು ಹೇಳಿದನು: 'ಇದು ಕೇವಲ ಪರಂಪರಾಗತವಾದ ಒಂದು ಮೋಸಗಾರಿಕೆಯಾಗಿದೆ.

فَقَالَ إِنْ هَٰذَآ إِلَّا سِحْرٌ يُؤْثَرُ ﴿٢٥﴾

26. 'ಇದು ಮನುಷ್ಯನ (ಸ್ವಯಂ ನಿರ್ಮಿತ) ವಚನ ಹೊರತು ಬೇರೇನೂ ಅಲ್ಲ.'

إِنْ هَٰذَآ إِلَّا قَوْلُ الْبَشَرِ ﴿٢٦﴾

27. ಅವನನ್ನು ನಾನು ಶೀಘ್ರದಲ್ಲೇ 'ಸಖರ'ಕ್ಕೆ ತಳ್ಳಿ ಬಿಡುವೆನು.

سَأُصْلِيهِ سَقَرَ ﴿٢٧﴾

28. ಸಖರವೇನೆಂದು ನಿನಗೆ ಗೊತ್ತೇ?

وَمَآ أَدْرَىٰكَ مَا سَقَرُ ﴿٢٨﴾

29. ಅದು ಏನನ್ನೂ ಬಾಕಿಯುಳಿಸದು, ಏನನ್ನೂ ಬಿಟ್ಟುಬಿಡದು.

لَا تُبْقِي وَلَا تَذَرُ ﴿٢٩﴾

30. ಅದು ಚರ್ಮವನ್ನು ಸುಟ್ಟುಹಾಕುವುದು.

لَوَّاحَةٌ لِّلْبَشَرِ ﴿٣٠﴾

31. ಅದರ ಕಾವಲುಗಾರರಾಗಿ ಹತ್ತೊಂಭತ್ತು ಮಂದಿ (ದಿವ್ಯದೂತರು) ಇದ್ದಾರೆ.

عَلَيْهَا تِسْعَةَ عَشَرَ ﴿٣١﴾

32. ಆ ನರಕದ ಮೇಲ್ನೋಟಗಾರರನ್ನಾಗಿ ನಾವು ದಿವ್ಯದೂತರನ್ನು ಹೊರತು ಬೇರೆ ಯಾರನ್ನೂ ನೇಮಿಸಿಲ್ಲ. ಅವಿಶ್ವಾಸಿಗಳನ್ನು ಪರೀಕ್ಷೆಗೊಳಪಡಿಸಲಿಕ್ಕೋಸ್ಕರ ಹೊರತು ನಾವು ಅವರ ಸಂಖ್ಯೆಯನ್ನು ನಿಗದಿಪಡಿಸಿಲ್ಲ. ತತ್ಫಲವಾಗಿ ಗ್ರಂಥ ನೀಡಲ್ಪಟ್ಟವರಿಗೆ ದೃಢವಿಶ್ವಾಸ ಉಂಟಾಗುತ್ತದೆ; ವಿಶ್ವಾಸಿಗಳಿಗೆ ತಮ್ಮ ನಂಬಿಕೆ ಇನ್ನೂ ವೃದ್ಧಿಗೊಳ್ಳುತ್ತದೆ; ಹಾಗೂ ಗ್ರಂಥ ನೀಡಲ್ಪಟ್ಟವರೂ ವಿಶ್ವಾಸಿಗಳೂ ಸಂಶಯಗ್ರಸ್ತರಾಗುವುದಿಲ್ಲ. ಆದರೆ ಹೃದಯಗಳಲ್ಲಿ ರೋಗವುಳ್ಳವರು ಮತ್ತು ಅವಿಶ್ವಾಸಿಗಳು, 'ಈ ಉದಾಹರಣೆಯಿಂದ ಅಲ್ಲಾಹನು ಏನನ್ನು ಉದ್ದೇಶಿಸುತ್ತಾನೆ' ಎಂದು ಕೇಳುವರು. ಹೀಗೆ ಅಲ್ಲಾಹನು ತಾನು ಉದ್ದೇಶಿಸುವವರನ್ನು ಹಾದಿ ತಪ್ಪಿದವರನ್ನಾಗಿಯೂ ತಾನು ಉದ್ದೇಶಿಸುವವರನ್ನು ಸತ್ಪಥದಲ್ಲಿ ನಡೆಯುವವರನ್ನಾಗಿಯೂ ಮಾಡುತ್ತಾನೆ. ನಿನ್ನ ಪ್ರಭುವಿನ ಸೈನ್ಯದ ಬಗ್ಗೆ ಅವನಿಗೆ ಹೊರತು ಬೇರೆ ಯಾರಿಗೂ ತಿಳಿಯದು. ಇದು ಮನುಷ್ಯನಿಗೆ ಒಂದು ಉಪದೇಶ ಮಾತ್ರವಾಗಿದೆ.

وَمَا جَعَلْنَآ أَصْحَٰبَ النَّارِ إِلَّا مَلَٰٓئِكَةً ۙ وَمَا جَعَلْنَا عِدَّتَهُمْ إِلَّا فِتْنَةً لِّلَّذِينَ كَفَرُوا۟ لِيَسْتَيْقِنَ الَّذِينَ أُوتُوا۟ الْكِتَٰبَ وَيَزْدَادَ الَّذِينَ ءَامَنُوٓا۟ إِيمَٰنًا ۙ وَلَا يَرْتَابَ الَّذِينَ أُوتُوا۟ الْكِتَٰبَ وَالْمُؤْمِنُونَ ۙ وَلِيَقُولَ الَّذِينَ فِي قُلُوبِهِم مَّرَضٌ وَالْكَٰفِرُونَ مَاذَآ أَرَادَ اللَّهُ بِهَٰذَا مَثَلًا ۚ كَذَٰلِكَ يُضِلُّ اللَّهُ مَن يَشَآءُ وَيَهْدِي مَن يَشَآءُ ۚ وَمَا يَعْلَمُ جُنُودَ رَبِّكَ إِلَّا هُوَ ۚ وَمَا هِيَ إِلَّا ذِكْرَىٰ لِلْبَشَرِ ﴿٣١﴾





33. ಆಲಿಸಿರಿ, ನಾವು ಚಂದ್ರನ ಮೇಲೆ ಆಣೆ ಹಾಕಿ ಹೇಳುತ್ತೇವೆ.

كَلَّا وَالْقَمَرِ ﴿٣٢﴾

34. ಕರಗಿ ಹೋಗುವ ರಾತ್ರಿಯಾಣೆ;

وَالَّيْلِ إِذْ أَدْبَرَ ﴿٣٣﴾

35. ಪ್ರಕಾಶಗೊಳ್ಳುತ್ತಿರುವ ಪ್ರಭಾತದಾಣೆ;

وَالصُّبْحِ إِذَآ أَسْفَرَ ﴿٣٤﴾

36. ಖಂಡಿತವಾಗಿಯೂ ಅದು ಮಹಾ ವಿಪತ್ತುಗಳ ಪೈಕಿ ಒಂದಾಗಿದೆ.

إِنَّهَا لَإِحْدَى الْكُبَرِ ﴿٣٥﴾

37. ಮನುಷ್ಯನಿಗೆ ಒಂದು ಮುನ್ನೆಚ್ಚರಿಕೆ ಯೆಂಬಂತೆ -

نَذِيرًا لِّلْبَشَرِ ﴿٣٦﴾

38. ನಿಮ್ಮ ಪೈಕಿ (ಒಳಿತಿನಲ್ಲಿ) ಮುನ್ನಡೆಯುವವರಿಗೆ ಅಥವಾ (ಕೆಡುಕಿನಿಂದ) ಹಿಂದೆ ಸರಿಯುವವರಿಗೋಸ್ಕರ.

لِمَن شَآءَ مِنكُمْ أَن يَتَقَدَّمَ أَوْ يَتَأَخَّرَ ﴿٣٧﴾

39. ಪ್ರತಿಯೊಂದು ಆತ್ಮ ಅದರ ಕೃತ್ಯಕ್ಕೆ ಒತ್ತೆಯಾಗಿದೆ -

كُلُّ نَفْسٍۭ بِمَا كَسَبَتْ رَهِينَةٌ ﴿٣٨﴾

40. ಬಲಪಕ್ಷದವರು ಹೊರತು.

إِلَّآ أَصْحَٰبَ الْيَمِينِ ﴿٣٩﴾

41. ಅವರು ಸ್ವರ್ಗದಲ್ಲಿದ್ದುಕೊಂಡು ಪರಸ್ಪರ ವಿಚಾರಿಸುವರು -

فِي جَنَّٰتٍ يَتَسَآءَلُونَ ﴿٤٠﴾

42. ಅಪರಾಧಿಗಳ ಬಗ್ಗೆ.

عَنِ الْمُجْرِمِينَ ﴿٤١﴾

43. (ಅಪರಾಧಿಗಳೊಡನೆ ಅವರು ಕೇಳುವರು:) 'ನೀವು ಸಖರ (ನರಕ)ಕ್ಕೆ ಗುರಿಯಾಗಲು ಕಾರಣವೇನು?'

مَا سَلَكَكُمْ فِي سَقَرَ ﴿٤٢﴾

44. ಅವರು ಉತ್ತರಿಸುವರು: 'ನಾವು ನಮಾಝ್ ಮಾಡುತ್ತಿರಲಿಲ್ಲ.

قَالُوا۟ لَمْ نَكُ مِنَ الْمُصَلِّينَ ﴿٤٣﴾

45. 'ಬಡವರಿಗೆ ನಾವು ಆಹಾರ ನೀಡುತ್ತಿರಲಿಲ್ಲ.'

وَلَمْ نَكُ نُطْعِمُ الْمِسْكِينَ ﴿٤٤﴾

وَكُنَّا نَخُوضُ مَعَ الْخَائِضِينَ ﴿٤٥﴾

46. 'ವ್ಯರ್ಥವಾದ ಮಾತುಕತೆಗಳಲ್ಲಿ ಮುಳುಗಿದವರೊಡನೆ ನಾವು ಸಹ ಮುಳುಗಿದ್ದೆವು.

وَكُنَّا نُكَذِّبُ بِيَوْمِ الدِّينِ ﴿٤٦﴾

47. 'ನ್ಯಾಯ ತೀರ್ಮಾನದ ದಿನವನ್ನು ನಾವು ಅಲ್ಲಗಳೆಯುತ್ತಿದ್ದೆವು -

حَتَّىٰ أَتَانَا الْيَقِينُ ﴿٤٧﴾

48. 'ನಮಗೆ ಮರಣ ಬರುವ ತನಕ.'

فَمَا تَنفَعُهُمْ شَفَاعَةُ الشَّافِعِينَ ﴿٤٨﴾

49. ಆದ್ದರಿಂದ ಶಿಫಾರಸುಗಾರರ ಶಿಫಾರಸೇನೂ ಅವರಿಗೆ ಉಪಯುಕ್ತವಾಗಲಾರದು.

فَمَا لَهُمْ عَنِ التَّذْكِرَةِ مُعْرِضِينَ ﴿٤٩﴾

50. ಅವರಿಗೇನಾಗಿದೆ, ಅವರು ಉಪದೇಶದಿಂದ ಮುಖ ತಿರುಗಿಸಿ ಹೋಗುತ್ತಿದ್ದಾರಲ್ಲವೇ?

كَأَنَّهُمْ حُمُرٌ مُّسْتَنفِرَةٌ ﴿٥٠﴾

51. ಹೆದರಿದ ಕತ್ತೆಗಳು

فَرَّتْ مِن قَسْوَرَةٍ ﴿٥١﴾

52. ಸಿಂಹವನ್ನು ನೋಡಿ ಓಡಿಹೋಗುವಂತೆ.

بَلْ يُرِيدُ كُلُّ امْرِئٍ مِّنْهُمْ أَن يُؤْتَىٰ صُحُفًا مُّنَشَّرَةً ﴿٥٢﴾

53. ವಾಸ್ತವವೇನೆಂದರೆ, ಅವರಲ್ಲಿ ಪ್ರತಿಯೊಬ್ಬನೂ ತನಗೆ ತೆರೆದ ಹಾಳೆಗಳು ಲಭಿಸಬೇಕೆಂದು ಆಶಿಸುತ್ತಾನೆ.

كَلَّا ۖ بَل لَّا يَخَافُونَ الْآخِرَةَ ﴿٥٣﴾

54. ಇಲ್ಲ, ಅವರೆಂದಿಗೂ ಪರಲೋಕದ ಬಗ್ಗೆ ಭಯಪಡುವುದಿಲ್ಲ.

كَلَّا إِنَّهُ تَذْكِرَةٌ ﴿٥٤﴾

55. ಆಲಿಸಿರಿ, ಇದೊಂದು ಉಪದೇಶವಾಗಿದೆ.

فَمَن شَاءَ ذَكَرَهُ ﴿٥٥﴾

56. ಬಯಸುವವರು ಅದನ್ನು ಪಡೆದುಕೊಳ್ಳಲಿ. (ಉಪದೇಶ ಸ್ವೀಕರಿಸಲಿ.)

وَمَا يَذْكُرُونَ إِلَّا أَن يَشَاءَ اللَّهُ ۚ هُوَ أَهْلُ التَّقْوَىٰ وَأَهْلُ الْمَغْفِرَةِ ﴿٥٦﴾

57. ಅಲ್ಲಾಹನು ಇಚ್ಛಿಸಿದರೆ ಹೊರತು ಅವರು ಅದನ್ನು ಪಡೆಯಲಾರರು. ಅವನೇ ಭಯಭಕ್ತಿಯ ಅಧಿಪತಿಯೂ ಕ್ಷಮಾದಾನದ ಅಧಿಪತಿಯೂ ಆಗಿದ್ದಾನೆ.

سُورَةُ الْقِيٰمَةِ مَكِّيَّةٌ وَّهِيَ مَعَ الْبَسْمَلَةِ اِحْدٰى وَّ اَرْبَعُوْنَ اٰيَةً وَّ رُكُوْعَانِ

# 75. ಅಲ್‌ಖಿಯಾಮಃ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 41 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ۝١

**2. ಅಲ್ಲ,[484] ನಾನು ಪುನರುತ್ಥಾನ ದಿನದ ಮೇಲೆ ಆಣೆ ಹಾಕುತ್ತೇನೆ.**

لَآ اُقْسِمُ بِيَوْمِ الْقِيٰمَةِ ۝٢

**3. ಅಲ್ಲ,[484] ಸ್ವಯಂ ದೂಷಿಸುವ ಆತ್ಮದ ಮೇಲೆಯೂ ಆಣೆ ಹಾಕುತ್ತೇನೆ.**

وَلَآ اُقْسِمُ بِالنَّفْسِ اللَّوَّامَةِ ۝٣

**4. ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸ ಲಾರೆವೆಂದು ಮನುಷ್ಯನು ಭಾವಿಸುತ್ತಾನೋ?**

اَيَحْسَبُ الْاِنْسَانُ اَلَّنْ نَّجْمَعَ عِظَامَهٗ ۝٤

**5. ಯಾಕಿಲ್ಲ, ಅವನ ಬೆರಳ ತುದಿಗಳನ್ನು ಸಹ ಪೂರ್ವಸ್ಥಿತಿಗೆ ಮತ್ತೆ ತರಲು ನಮಗೆ ಸಾಮರ್ಥ್ಯವಿದೆ.**

بَلٰى قٰدِرِيْنَ عَلٰٓى اَنْ نُّسَوِّيَ بَنَانَهٗ ۝٥

**6. ಮನುಷ್ಯನು, ತನ್ನ ಭಾವಿ ಜೀವಿತದಲ್ಲಿ ಸಹ ದುಷ್ಕೃತ್ಯದಲ್ಲೇ ಮುಂದುವರಿಯಲು ಬಯಸುತ್ತಾನೆ.**

بَلْ يُرِيْدُ الْاِنْسَانُ لِيَفْجُرَ اَمَامَهٗ ۝٦

**7. 'ಪುನರುತ್ಥಾನ ದಿನ ಯಾವಾಗ?' ಎಂದು ಅವನು ಕೇಳುತ್ತಾನೆ.**

يَسْـَٔلُ اَيَّانَ يَوْمُ الْقِيٰمَةِ ۝٧

**8.** (ಅದು) **ಕಣ್ಣು ಕೋರೈಸಲ್ಪಡುವಾಗ,**

فَاِذَا بَرِقَ الْبَصَرُ ۝٨

**9. ಚಂದ್ರ ಗ್ರಹಣ ಉಂಟಾಗುವಾಗ,**

وَخَسَفَ الْقَمَرُ ۝٩

484. ಅರ್ಥಾತ್, ಅವಿಶ್ವಾಸಿಗಳು ಹೇಳುವುದು ಸರಿಯಲ್ಲ.





**10. ಹಾಗೂ ಸೂರ್ಯ ಮತ್ತು ಚಂದ್ರ** (ಗ್ರಹಣಕ್ಕೆ ಸಂಬಂಧಿಸಿ) **ಒಂದುಗೂಡಿಸಲ್ಪಡುವಾಗ**[485]

وَجُمِعَ الشَّمْسُ وَالْقَمَرُ ۝١٠

**11. ಆ ದಿನದಂದು ಎಲ್ಲಿಗೆ ಓಡಿಹೋಗಿ ತಪ್ಪಿಸಿ ಕೊಳ್ಳುವುದೆಂದು ಮನುಷ್ಯನು ಕೇಳುವನು.**

يَقُوْلُ الْاِنْسَانُ يَوْمَئِذٍ اَيْنَ الْمَفَرُّ ۝١١

**12. ಇಲ್ಲ, ಅಂದು ಅಭಯ ಸ್ಥಳವೇನೂ ಇರ ಲಾರದು.**

كَلَّا لَا وَزَرَ ۝١٢

**13. ಆ ದಿನದಂದು ನಿನ್ನ ಪ್ರಭುವಿನ ಬಳಿ** (ಮಾತ್ರವೇ) **ನೆಲೆದಾಣವಿರುವುದು.**

اِلٰى رَبِّكَ يَوْمَئِذِ ۨالْمُسْتَقَرُّ ۝١٣

**14. ಮನುಷ್ಯನು** (ಮಾಡಬಾರದಾಗಿದ್ದ ದುಷ್ಕೃತ್ಯ) **ಮಾಡಿದ ಬಗ್ಗೆ ಮತ್ತು** (ಮಾಡಬೇಕಾಗಿದ್ದ ಸತ್ಕರ್ಮ) **ಮಾಡದಿದ್ದ ಬಗ್ಗೆ ಅಂದು ಅವನಿಗೆ ತಿಳಿಸಲಾಗುವುದು.**

يُنَبَّؤُا الْاِنْسَانُ يَوْمَئِذٍ بِمَا قَدَّمَ وَاَخَّرَ ۝١٤

**15. ವಾಸ್ತವದಲ್ಲಿ ಮನುಷ್ಯನು ತನ್ನ ಬಗ್ಗೆ ಚೆನ್ನಾಗಿ ತಿಳಿದುಕೊಂಡವನಾಗಿದ್ದಾನೆ -**

بَلِ الْاِنْسَانُ عَلٰى نَفْسِهٖ بَصِيْرَةٌ ۝١٥

**16. ಅವನು ಎಷ್ಟೇ ನೆಪಗಳನ್ನು ಒಡ್ಡಿದರೆ ಕೂಡ.**

وَّلَوْ اَلْقٰى مَعَاذِيْرَهٗ ۝١٦

**17. ನೀನು ತ್ವರೆಪಟ್ಟು ಇದಕ್ಕಾಗಿ** (ಖುರ್‌ಆನನ್ನು ಕಂಠಪಾಠ ಮಾಡಲಿಕ್ಕಾಗಿ) **ನಿನ್ನ ನಾಲಗೆಗೆ ಹೆಚ್ಚು ಶ್ರಮ ಕೊಡಬೇಡ.**

لَا تُحَرِّكْ بِهٖ لِسَانَكَ لِتَعْجَلَ بِهٖ ۝١٧

**18. ನಿಶ್ಚಯವಾಗಿಯೂ ಅದರ ಕ್ರೋಢೀಕರಣ ಮತ್ತು ಪಠನದ ಹೊಣೆ ನಮ್ಮದಾಗಿದೆ.**

اِنَّ عَلَيْنَا جَمْعَهٗ وَقُرْاٰنَهٗ ۝١٨

**19. ಹಾಗೆ ನಾವು ಅದನ್ನು ಪಠಿಸುವಾಗ ನೀನು ಸಹ ಅದರ ಪಠನವನ್ನು ಅನುಸರಿಸು.**

فَاِذَا قَرَاْنٰهُ فَاتَّبِعْ قُرْاٰنَهٗ ۝١٩

**20. ಅನಂತರ ಅದನ್ನು ವಿಶದಪಡಿಸಿ ಕೊಡುವುದು ಸಹ ನಮ್ಮ ಜವಾಬ್ದಾರಿಕೆಯಾಗಿದೆ.**

ثُمَّ اِنَّ عَلَيْنَا بَيَانَهٗ ۝٢٠

485. ಇದೊಂದು ಸುಪ್ರಧಾನವಾದ ಭವಿಷ್ಯ ನುಡಿಯಾಗಿದೆ. ಅಂತ್ಯಕಾಲದಲ್ಲಿ ಇಮಾಂ ಮಹ್‌ದಿ (ಅಲೈಹಿಸ್ಸಲಾಂ) ಅವರ ಆಗಮನದ ಸೂಚನೆಯಾಗಿ ಒಂದು ರಮಝಾನ್ ಮಾಸದಲ್ಲಿ ನಿಶ್ಚಿತ ದಿನಾಂಕಗಳಲ್ಲಿ ಚಂದ್ರಗ್ರಹಣ ಮತ್ತು ಸೂರ್ಯಗ್ರಹಣವಾಗುವುದೆಂದು ಮುಹಮ್ಮದ್ ಪೈಗಂಬರ್ (ಸ) ಭವಿಷ್ಯ ನುಡಿದಿರುವರು (ದಾರುಖುತ್ನಿ). ಅದನ್ನೇ ಇಲ್ಲಿ ಸೂಚಿಸಲಾಗಿದೆ. ಹಿಜರಿ ಶಕ 1311ರಲ್ಲಿ (ಕ್ರಿ. ಶ. 1894ರಲ್ಲಿ) ಮಹತ್ವಪೂರ್ಣವಾದ ಈ ಭವಿಷ್ಯನುಡಿ ಸತ್ಯವಾಯಿತು.

21. ಕೇಳಿರಿ! ನೀವಾದರೋ ಇಹಲೋಕವನ್ನು ಪ್ರೀತಿಸುತ್ತೀರಿ.

كَلَّا بَلْ تُحِبُّونَ الْعَاجِلَةَ ﴿٢١﴾

22. ಹಾಗೂ ಪಾರತ್ರಿಕವನ್ನು ನಿರ್ಲಕ್ಷಿಸುತ್ತೀರಿ.

وَتَذَرُونَ الْآخِرَةَ ﴿٢٢﴾

23. ಅಂದು ಹಲವು ವದನಗಳು ಪ್ರಸನ್ನವಾಗಿರುವುವು.

وُجُوهٌ يَوْمَئِذٍ نَاضِرَةٌ ﴿٢٣﴾

24. ಅವುಗಳ ಪ್ರಭುವಿನ ಕಡೆಗೆ ಅವು ನೋಡುತ್ತಾ ಇರುವುವು.

إِلَىٰ رَبِّهَا نَاظِرَةٌ ﴿٢٤﴾

25. ಮತ್ತೆ ಕೆಲವು ಮುಖಗಳು ಅಂದು ವಿಷಣ್ಣತೆಯಿಂದ ಕೂಡಿರುವುವು.

وَوُجُوهٌ يَوْمَئِذٍ بَاسِرَةٌ ﴿٢٥﴾

26. ಬೆನ್ನಮೂಳೆ ಮುರಿಯುವಂಥ ಒಂದು ಆಪತ್ತು ಅವುಗಳ ಮೇಲೆರಗುವುದೆಂದು ಅವು ಭಾವಿಸುವುವು.

تَظُنُّ أَنْ يُفْعَلَ بِهَا فَاقِرَةٌ ﴿٢٦﴾

27. ಆಲಿಸಿರಿ, ಪ್ರಾಣ ಗಂಟಲಿಗೆ ತಲಪುವಾಗ,

كَلَّا إِذَا بَلَغَتِ التَّرَاقِيَ ﴿٢٧﴾

28. '(ಅವನನ್ನು ರಕ್ಷಿಸುವ) ಮಂತ್ರವಾದಿ ಯಾರು?' ಎಂದು ಕೇಳಲ್ಪಡುವುದು.

وَقِيلَ مَنْ ۜ رَاقٍ ﴿٢٨﴾

29. ಇದು ಖಂಡಿತವಾಗಿಯೂ ಅಗಲಿಕೆ ಎಂದು ಅವನಿಗೆ ಮನದಟ್ಟಾಗುವುದು.

وَظَنَّ أَنَّهُ الْفِرَاقُ ﴿٢٩﴾

30. (ಆಗ ಪ್ರಾಣ ಸಂಕಟದಿಂದ) ಅವನು ಒಂದು ಕಣಕಾಲನ್ನು ಮತ್ತೊಂದು ಕಣಕಾಲಿಗೆ ತಿಕ್ಕುವನು.

وَالْتَفَّتِ السَّاقُ بِالسَّاقِ ﴿٣٠﴾

31. ಅಂದು ನಿನ್ನ ಪ್ರಭುವಿನ ಬಳಿಗೆಯೇ ಹೋಗಬೇಕಾದೀತು.

إِلَىٰ رَبِّكَ يَوْمَئِذٍ الْمَسَاقُ ﴿٣١﴾

32. ಅವನು (ಸತ್ಯವನ್ನು) ಸ್ವೀಕರಿಸಿರಲಿಲ್ಲ ಮತ್ತು ಪ್ರಾರ್ಥನೆ ಅನುಷ್ಠಿಸಿರಲಿಲ್ಲ.

فَلَا صَدَّقَ وَلَا صَلَّىٰ ﴿٣٢﴾

33. ಅವನು (ಸತ್ಯವನ್ನು) ಅಲ್ಲಗಳೆದಿದ್ದನು ಮತ್ತು ಬೆನ್ನು ತಿರುಗಿಸಿದ್ದನು.

وَلَٰكِنْ كَذَّبَ وَتَوَلَّىٰ ﴿٣٣﴾





34. ಅನಂತರ ಅವನು ಬಿಂಕದಿಂದ ತನ್ನ ಕುಟುಂಬದ ಕಡೆಗೆ ಹೋಗಿದ್ದನು.

ثُمَّ ذَهَبَ إِلَىٰ أَهْلِهِ يَتَمَطَّىٰ ﴿٣٤﴾

35. (ಆದ್ದರಿಂದ) ನಿನಗೆ ನಾಶದ ಮೇಲೆ ನಾಶ.

أَوْلَىٰ لَكَ فَأَوْلَىٰ ﴿٣٥﴾

36. ಮತ್ತೂ ನಿನಗೆ ನಾಶದ ಮೇಲೆ ನಾಶ.

ثُمَّ أَوْلَىٰ لَكَ فَأَوْلَىٰ ﴿٣٦﴾

37. ಮನುಷ್ಯನನ್ನು ನಿಯಂತ್ರಣವಿಲ್ಲದೆ ಬಿಟ್ಟು ಬಿಡಲಾಗುವುದೆಂದು ಅವನು ಭಾವಿಸುತ್ತಾನೋ?

أَيَحْسَبُ الْإِنْسَانُ أَنْ يُتْرَكَ سُدًى ﴿٣٧﴾

38. ಅವನು ಚಿಮ್ಮಲ್ಪಟ್ಟ ವೀರ್ಯದ ಒಂದು ಅಣುವಾಗಿರಲಿಲ್ಲವೇ?

أَلَمْ يَكُ نُطْفَةً مِنْ مَنِيٍّ يُمْنَىٰ ﴿٣٨﴾

39. ಅನಂತರ ಅದು (ಗರ್ಭಕೋಶದ ಭಿತ್ತಿಗೆ) ಅಂಟಿಕೊಳ್ಳುವ ಸ್ಥಿತಿಯನ್ನು ಹೊಂದಿತು. ಹಾಗೆ ಅವನು (ಅಲ್ಲಾಹನು) ಅದಕ್ಕೆ ರೂಪಗೊಟ್ಟು ಪರಿಪೂರ್ಣಗೊಳಿಸಿದನು.

ثُمَّ كَانَ عَلَقَةً فَخَلَقَ فَسَوَّىٰ ﴿٣٩﴾

40. ಆ ಬಳಿಕ ಅವನು (ಅಲ್ಲಾಹನು) ಅದರಿಂದ ಗಂಡು - ಹೆಣ್ಣು ಎಂಬ ಜೋಡಿಗಳನ್ನು ಸೃಷ್ಟಿಸಿದನು.

فَجَعَلَ مِنْهُ الزَّوْجَيْنِ الذَّكَرَ وَالْأُنْثَىٰ ﴿٤٠﴾

41. ಏನು, ಹಾಗೆ ಮಾಡಿದವನಿಗೆ ಮೃತರಾದವರನ್ನು ಜೀವಂತಗೊಳಿಸಲು ಸಾಮರ್ಥ್ಯವಿಲ್ಲವೇ?

أَلَيْسَ ذَٰلِكَ بِقَادِرٍ عَلَىٰ أَنْ يُحْيِيَ الْمَوْتَىٰ ﴿٤١﴾

سُوْرَةُ الدَّهْرِ مَكِّيَّةٌ وَّهِيَ مَعَ الْبَسْمَلَةِ اِثْنَتَانِ وَّثَلٰثُوْنَ اٰيَةً وَّرُكُوْعَانِ

# 76. ಅದ್ದಹ್ರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 32 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಮನುಷ್ಯನಿಗೆ, ಅವನು ಹೇಳತಕ್ಕ ಯಾವ ವಸ್ತುವೂ ಆಗಿರದಿದ್ದ ಕಾಲವೊಂದು ಬಂದಿರಲಿಲ್ಲವೇ?**

هَلْ اَتٰى عَلَى الْاِنْسَانِ حِيْنٌ مِّنَ الدَّهْرِ لَمْ يَكُنْ شَيْـًٔا مَّذْكُوْرًا ﴿٢﴾

**3. ದಿಟವಾಗಿಯೂ ನಾವು ಮನುಷ್ಯನನ್ನು** (ಹಲವು ಶಕ್ತಿಗಳಿಂದ) **ಮಿಶ್ರಿತವಾದ ವೀರ್ಯಾಣುವಿನಿಂದ ಸೃಷ್ಟಿಸಿದ್ದೇವೆ- ನಾವು ಅವನನ್ನು ಪರೀಕ್ಷೆಗೊಳಪಡಿಸಲಿಕ್ಕೋಸ್ಕರ. ಹಾಗೆ ನಾವು ಅವನನ್ನು ಕೇಳುವವನಾಗಿಯೂ ಕಾಣುವವನಾಗಿಯೂ ಮಾಡಿದೆವು.**

اِنَّا خَلَقْنَا الْاِنْسَانَ مِنْ نُّطْفَةٍ اَمْشَاجٍ ۖ نَّبْتَلِيْهِ فَجَعَلْنٰهُ سَمِيْعًا بَصِيْرًا ﴿٣﴾

**4. ನಾವು ಅವನಿಗೆ ದಾರಿ ತೋರಿಸಿ ಕೊಟ್ಟಿದ್ದೇವೆ- ಒಂದೋ ಅವನು ಕೃತಜ್ಞನಾಗುತ್ತಾನೆ, ಅಥವಾ ಕೃತಘ್ನನಾಗುತ್ತಾನೆ.**

اِنَّا هَدَيْنٰهُ السَّبِيْلَ اِمَّا شَاكِرًا وَّاِمَّا كَفُوْرًا ﴿٤﴾

**5. ಅವಿಶ್ವಾಸಿಗಳಿಗೆ ನಾವು ಸಂಕೋಲೆಗಳನ್ನೂ ಕೊರಳ ಪಟ್ಟಿಗಳನ್ನೂ ಜ್ವಲಿಸುವ ಬೆಂಕಿಯನ್ನೂ ಸಿದ್ಧಪಡಿಸಿಟ್ಟಿದ್ದೇವೆ.**

اِنَّآ اَعْتَدْنَا لِلْكٰفِرِيْنَ سَلٰسِلَا۟ وَاَغْلٰلًا وَّسَعِيْرًا ﴿٥﴾

**6. ಸಜ್ಜನರು ಕರ್ಪೂರ[486] ಮಿಶ್ರಿತ** (ಪಾನೀಯದ) **ಪಾತ್ರೆಯಿಂದ ಕುಡಿಯುವರು.**

اِنَّ الْاَبْرَارَ يَشْرَبُوْنَ مِنْ كَاْسٍ كَانَ مِزَاجُهَا كَافُوْرًا ﴿٦﴾

**7.** (ಅದು) **ಅಲ್ಲಾಹನ ದಾಸರು ಪಾನಮಾಡುವ ಒರತೆಯಾಗಿದೆ. ಅದು ಚೆನ್ನಾಗಿ ಉಕ್ಕಿ ಹರಿಯುವಂತೆ ಅವರು ಮಾಡುವರು.**

عَيْنًا يَّشْرَبُ بِهَا عِبَادُ اللّٰهِ يُفَجِّرُوْنَهَا تَفْجِيْرًا ﴿٧﴾

486. ಕರ್ಪೂರ ಕೆಡುಕನ್ನು ನಿವಾರಿಸುತ್ತದೆ.





**8. ಅವರು** (ತಮ್ಮ) **ಹರಕೆಗಳನ್ನು ಈಡೇರಿಸುತ್ತಾರೆ ಹಾಗೂ ಸರ್ವ ವ್ಯಾಪಕವಾದ ಆಪತ್ತಿನ ದಿನದ ಬಗ್ಗೆ ಭಯಪಡುತ್ತಾರೆ.**

يُوْفُوْنَ بِالنَّذْرِ وَيَخَافُوْنَ يَوْمًا كَانَ شَرُّهٗ مُسْتَطِيْرًا ﴿٨﴾

**9. ಅವನ** (ಅಲ್ಲಾಹನ) **ಸಂಪ್ರೀತಿಗೋಸ್ಕರ ಅವರು ಬಡವರಿಗೂ ಅನಾಥರಿಗೂ ಕೈದಿಗಳಿಗೂ ಅನ್ನದಾನ ಮಾಡುತ್ತಾರೆ.**

وَيُطْعِمُوْنَ الطَّعَامَ عَلٰى حُبِّهٖ مِسْكِيْنًا وَّيَتِيْمًا وَّاَسِيْرًا ﴿٩﴾

**10.** (ಅವರು ಹೀಗೆ ಹೇಳುತ್ತಾರೆ:) **'ಅಲ್ಲಾಹನ ಸಂತೃಪ್ತಿಗೋಸ್ಕರ ಮಾತ್ರ ನಾವು ನಿಮಗೆ ಆಹಾರ ನೀಡುತ್ತೇವೆ. ನಿಮ್ಮಿಂದ ಪ್ರತಿಫಲವನ್ನಾಗಲಿ ಕೃತಜ್ಞತೆಯನ್ನಾಗಲಿ ನಾವು ಬಯಸುವುದಿಲ್ಲ.**

اِنَّمَا نُطْعِمُكُمْ لِوَجْهِ اللّٰهِ لَا نُرِيْدُ مِنْكُمْ جَزَآءً وَّلَا شُكُوْرًا ﴿١٠﴾

**11. 'ನಾವು ನಮ್ಮ ಪ್ರಭುವಿನಿಂದ ಬರುವ ಅಸಹನೀಯ ಹಾಗೂ ಭೀಕರವಾದ ಒಂದು ದಿನದ ಬಗ್ಗೆ ಭಯಪಡುತ್ತೇವೆ.'**

اِنَّا نَخَافُ مِنْ رَّبِّنَا يَوْمًا عَبُوْسًا قَمْطَرِيْرًا ﴿١١﴾

**12. ಆದ್ದರಿಂದ ಆ ದಿನದ ವಿಪತ್ತಿನಿಂದ ಅಲ್ಲಾಹನು ಅವರನ್ನು ಕಾಪಾಡುವನು ಹಾಗೂ ಅವರಿಗೆ ಹರ್ಷೋಲ್ಲಾಸವನ್ನು ದಯಪಾಲಿಸುವನು.**

فَوَقٰىهُمُ اللّٰهُ شَرَّ ذٰلِكَ الْيَوْمِ وَلَقّٰىهُمْ نَضْرَةً وَّسُرُوْرًا ﴿١٢﴾

**13. ಅವರ ಸ್ಥಿರಚಿತ್ತತೆಗೆ ಅವನು ಅವರಿಗೆ ಸ್ವರ್ಗವನ್ನೂ ರೇಶ್ಮೆ ಬಟ್ಟೆಯನ್ನೂ ಪ್ರತಿಫಲವಾಗಿ ನೀಡುವನು.**

وَجَزٰىهُمْ بِمَا صَبَرُوْا جَنَّةً وَّحَرِيْرًا ﴿١٣﴾

**14. ಅಲ್ಲಿ ಅವರು ಪರ್ಯಂಕಗಳ ಮೇಲೆ** (ದಿಂಬುಗಳಿಗೆ) **ಒರಗಿ ಕುಳಿತುಕೊಳ್ಳುವರು. ಅವರು ಅಲ್ಲಿ ಅತ್ಯುಷ್ಣವನ್ನಾಗಲಿ ಅತಿಶೈತ್ಯವನ್ನಾಗಲ್ಲಿ ಅನುಭವಿಸಲಾರರು.**

مُّتَّكِـِٕيْنَ فِيْهَا عَلَى الْاَرَآئِكِ ۚ لَا يَرَوْنَ فِيْهَا شَمْسًا وَّلَا زَمْهَرِيْرًا ﴿١٤﴾

**15. 'ಅದರ ನೆರಳು ಅವರ ಮೇಲ್ಭಾಗದಲ್ಲಿ ಸಮೀಪವಾಗಿರುವುದು. ಅದರ ಹಣ್ಣು ಹಂಪಲುಗಳ ಗೊಂಚಲುಗಳು ಅವರ ಕೈಗೆಟಕುವಂತಿರುವುವು.'**

وَدَانِيَةً عَلَيْهِمْ ظِلٰلُهَا وَذُلِّلَتْ قُطُوْفُهَا تَذْلِيْلًا ﴿١٥﴾

**16. ಬೆಳ್ಳಿ ತಟ್ಟೆಗಳನ್ನು ಮತ್ತು ಗಾಜಿನ ಪಾನ**

وَيُطَافُ عَلَيْهِمْ بِاٰنِيَةٍ مِّنْ فِضَّةٍ وَّ

ಪಾತ್ರೆಗಳನ್ನು ಅವರ ಮಧ್ಯೆ ಸುತ್ತುತ್ತಾ ತರಲಾಗುವುದು.

اَكْوَابٍ كَانَتْ قَوَارِيْرَا۟ ۝١٥

**17.** ಗಾಜಿನಂತೆ ಹೊಳಪುಳ್ಳ ಬೆಳ್ಳಿ ತಟ್ಟೆಗಳು. ಅವುಗಳನ್ನು ಅವರು (ದೇವದೂತರು) ಅತಿ ನೈಪುಣ್ಯದಿಂದ ಮಾಡಿರುತ್ತಾರೆ.

قَوَارِيْرَا۟ مِنْ فِضَّةٍ قَدَّرُوْهَا تَقْدِيْرًا ۝١٦

**18.** ಶುಂಠಿ ಮಿಶ್ರಿತ ಪಾನೀಯದಿಂದ ತುಂಬಿದ ಪಾತ್ರೆಯನ್ನು ಅವರಿಗೆ ಕುಡಿಯಲು ನೀಡಲಾಗುವುದು -

وَيُسْقَوْنَ فِيْهَا كَاْسًا كَانَ مِزَاجُهَا زَنْجَبِيْلًا ۝١٧

**19.** ಅಲ್ಲಿರುವ ಸಲ್‌ಸಬೀಲ್ ಎಂಬ ಒರತೆಯಿಂದ.

عَيْنًا فِيْهَا تُسَمّٰى سَلْسَبِيْلًا ۝١٨

**20.** ಚಿರ ಯೌವ್ವನವುಳ್ಳ ಸೇವಕರು ಅವರ ಸಮೀಪದಲ್ಲಿ ಸುತ್ತುತ್ತಲಿರುವರು. ನೀನು ಅವರನ್ನು (ಸೇವಕರನ್ನು) ನೋಡುವಾಗ ಚದರಿದ ಮುತ್ತುಗಳಂತೆ ಕಾಣಿಸುವರು.

وَيَطُوْفُ عَلَيْهِمْ وِلْدَانٌ مُّخَلَّدُوْنَ ۚ اِذَا رَاَيْتَهُمْ حَسِبْتَهُمْ لُؤْلُؤًا مَّنْثُوْرًا ۝١٩

**21.** ನೀನು ನೋಡುವಾಗ ಅಲ್ಲಿ ಪರಮಾನಂದವನ್ನೂ ಮಹಾ ಸಾಮ್ರಾಜ್ಯವನ್ನೂ ಕಾಣುವೆ.

وَاِذَا رَاَيْتَ ثَمَّ رَاَيْتَ نَعِيْمًا وَّمُلْكًا كَبِيْرًا ۝٢٠

**22.** ಹಸಿರು ಬಣ್ಣದ ನುಣುಪಾದ ರೇಶ್ಮೆ ವಸ್ತ್ರವನ್ನೂ ಜರತಾರಿ ಬಟ್ಟೆಯನ್ನೂ ಅವರು (ಸಜ್ಜನರು) ಧರಿಸಿರುವರು. ಅವರಿಗೆ ಬೆಳ್ಳಿಯ ಕಂಕಣಗಳನ್ನು ತೊಡಿಸಿ ಅಲಂಕರಿಸಲಾಗುವುದು. ಅವರ ಪ್ರಭು ಅವರಿಗೆ ಪರಿಶುದ್ಧವಾದ ಒಂದು ಪಾನೀಯವನ್ನು ಕುಡಿಸುವನು.

عٰلِيَهُمْ ثِيَابُ سُنْدُسٍ خُضْرٌ وَّاِسْتَبْرَقٌ ۡ وَّحُلُّوْٓا اَسَاوِرَ مِنْ فِضَّةٍ ۚ وَسَقٰىهُمْ رَبُّهُمْ شَرَابًا طَهُوْرًا ۝٢١

**23.** 'ಇದು ನಿಮಗಿರುವ ಪ್ರತಿಫಲವಾಗಿದೆ. ನಿಮ್ಮ ಪ್ರಯತ್ನಗಳು ಪ್ರಶಂಸಾರ್ಹವಾಗಿದೆ' (ಎಂದು ಅವರೊಡನೆ ಹೇಳಲಾಗುವುದು).

اِنَّ هٰذَا كَانَ لَكُمْ جَزَآءً وَّكَانَ سَعْيُكُمْ مَّشْكُوْرًا ۝٢٢

**24.** ನಿನಗೆ ಸ್ವಲ್ಪಸ್ವಲ್ಪವಾಗಿ ಖುರ್‌ಆನನ್ನು ಅವತೀರ್ಣಗೊಳಿಸಿದ್ದು ನಾವೇ.

اِنَّا نَحْنُ نَزَّلْنَا عَلَيْكَ الْقُرْاٰنَ تَنْزِيْلًا ۝٢٣

**25.** ಆದ್ದರಿಂದ ನೀನು ನಿನ್ನ ಪ್ರಭುವಿನ ಆಜ್ಞೆಯನ್ನು ನಿರೀಕ್ಷಿಸುತ್ತಾ ತಾಳ್ಮೆ ವಹಿಸು. ಅವರ ಪೈಕಿ ಯಾವ ಪಾಪಿಗಾಗಲಿ ಕೃತಘ್ನನಿಗಾಗಲಿ ನೀನು ಮಣಿಯಬೇಡ.

فَاصْبِرْ لِحُكْمِ رَبِّكَ وَلَا تُطِعْ مِنْهُمْ اٰثِمًا اَوْ كَفُوْرًا ۝٢٤





**26.** ಮುಂಜಾವ ಮತ್ತು ಮುಸ್ಸಂಜೆ ಹೊತ್ತಿನಲ್ಲಿ ನಿನ್ನ ಪ್ರಭುವಿನ ನಾಮಸ್ಮರಣೆ ಮಾಡುತ್ತಿರು.

وَاذْكُرِ اسْمَ رَبِّكَ بُكْرَةً وَّاَصِيْلًا ۝٢٥

**27.** ರಾತ್ರಿಯ ಹೊತ್ತಿನಲ್ಲೂ ಅವನ ಮುಂದೆ ಸಾಷ್ಟಾಂಗ ಪ್ರಣಾಮ ಮಾಡು. ರಾತ್ರಿಯಲ್ಲಿ ದೀರ್ಘ ಕಾಲ ಅವನ ಪರಿಶುದ್ಧತೆಯನ್ನು ಕೊಂಡಾಡು.

وَمِنَ الَّيْلِ فَاسْجُدْ لَهٗ وَسَبِّحْهُ لَيْلًا طَوِيْلًا ۝٢٦

**28.** ಈ ಜನರು ಕ್ಷಣಿಕವಾದ ಐಹಿಕ ಜೀವನವನ್ನು ಪ್ರೀತಿಸುತ್ತಾರೆ ಹಾಗೂ ಅವರು ತಮ್ಮ ಮುಂದಿರುವ ಕಠಿಣವಾದ ದಿನವನ್ನು ನಿರ್ಲಕ್ಷಿಸುತ್ತಾರೆ.

اِنَّ هٰٓؤُلَآءِ يُحِبُّوْنَ الْعَاجِلَةَ وَيَذَرُوْنَ وَرَآءَهُمْ يَوْمًا ثَقِيْلًا ۝٢٧

**29.** ಅವರನ್ನು ಸೃಷ್ಟಿಸಿದ್ದು ಮತ್ತು ಅವರ ದೇಹಕ್ಕೆ ದಾರ್ಢ್ಯತೆ ನೀಡಿದ್ದು ನಾವೇ. ನಾವು ಇಚ್ಛಿಸಿದರೆ ಅವರಿಗೆ ಬದಲಾಗಿ ಅವರಂಥ ಬೇರೆ ಸೃಷ್ಟಿಗಳನ್ನು ತರಬಲ್ಲೆವು.

نَحْنُ خَلَقْنٰهُمْ وَشَدَدْنَآ اَسْرَهُمْ ۚ وَاِذَا شِئْنَا بَدَّلْنَآ اَمْثَالَهُمْ تَبْدِيْلًا ۝٢٨

**30.** ಇದೊಂದು ಉಪದೇಶವಾಗಿದೆ. ಆದ್ದರಿಂದ ಯಾವನಾದರೂ ಬಯಸುವುದಾದರೆ ಅವನು ತನ್ನ ಪ್ರಭುವಿನ ಕಡೆಗಿರುವ ಒಂದು ಮಾರ್ಗವನ್ನು ಅವಲಂಬಿಸಲಿ.

اِنَّ هٰذِهٖ تَذْكِرَةٌ ۚ فَمَنْ شَآءَ اتَّخَذَ اِلٰى رَبِّهٖ سَبِيْلًا ۝٢٩

**31.** ಆದರೆ ಅಲ್ಲಾಹನು ಇಚ್ಛಿಸಿದರೆ ಹೊರತು ನಿಮ್ಮ ಇಚ್ಛೆ ಸಫಲವಾಗದು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವೇಕಶಾಲಿಯೂ ಆಗಿದ್ದಾನೆ.

وَمَا تَشَآءُوْنَ اِلَّآ اَنْ يَّشَآءَ اللّٰهُ ۗ اِنَّ اللّٰهَ كَانَ عَلِيْمًا حَكِيْمًا ۝٣٠

**32.** ತಾನಿಚ್ಛಿಸುವವರಿಗೆ ಅವನು ತನ್ನ ಕಾರುಣ್ಯ ವಲಯದೊಳಗೆ ಪ್ರವೇಶ ನೀಡುತ್ತಾನೆ. ದುಷ್ಕರ್ಮಿಗಳಿಗೆ ಅವನು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಪಡಿಸಿಟ್ಟಿದ್ದಾನೆ.

يُّدْخِلُ مَنْ يَّشَآءُ فِيْ رَحْمَتِهٖ ۗ وَالظّٰلِمِيْنَ اَعَدَّ لَهُمْ عَذَابًا اَلِيْمًا ۝٣١

سُوْرَةُ الْمُرْسَلٰتِ مَكِّيَّةٌ وَّهِيَ مَعَ الْبَسْمَلَةِ اِحْدٰى وَّخَمْسُوْنَ اٰيَةً وَّ رُكُوْعَانِ

# 77. ಅಲ್‌ಮುರ್ಸಲಾತ್

ಮಕ್ಕದಲ್ಲಿ ಅವತೀರ್ಣವಾದುದು

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 51 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.)

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** (ಮೊದಲು) **ನಿಧಾನವಾಗಿ ಚಲಿಸಲ್ಪಡುವವರ ಆಣೆ.**[487]

وَالْمُرْسَلٰتِ عُرْفًا ﴿٢﴾

**3. ಮತ್ತೆ** (ಅವರು) **ಅತಿಶೀಘ್ರವಾಗಿ ಚಲಿಸುವವರು** (ಆಗಿದ್ದಾರೆ).

فَالْعٰصِفٰتِ عَصْفًا ﴿٣﴾

**4.** (ಅವರು) **ಉತ್ತಮವು ರೀತಿಯಲ್ಲಿ** (ಸತ್ಯ ಸಂದೇಶವನ್ನು) **ಪ್ರಚಾರ ಮಾಡುವವರೂ**

وَّالنّٰشِرٰتِ نَشْرًا ﴿٤﴾

**5. ತನ್ಮೂಲಕ** (ಸತ್ಯಾಸತ್ಯಗಳನ್ನು) **ಬೇರ್ಪಡಿಸಿ ತೋರಿಸುವವರೂ**

فَالْفٰرِقٰتِ فَرْقًا ﴿٥﴾

**6. ಉಪದೇಶವನ್ನು ವ್ಯಾಪಕವಾಗಿ ಎಲ್ಲೆಡೆ ತಲಪಿಸುವವರೂ** (ಆಗಿದ್ದಾರೆ).

فَالْمُلْقِيٰتِ ذِكْرًا ﴿٦﴾

**7. ಕರ್ತವ್ಯ ನಿರ್ವಹಣೆಗಾಗಿಯೂ ಮುನ್ನೆಚ್ಚರಿಕೆಯ ಸಲುವಾಗಿಯೂ** (ಅವರು ಹಾಗೆ ಮಾಡುತ್ತಾರೆ).

عُذْرًا اَوْ نُذْرًا ﴿٧﴾

**8. ನಿಮಗೆ ವಾಗ್ದಾನ ಮಾಡಲ್ಪಟ್ಟ ಸಂಗತಿ ಖಂಡಿತ ವಾಗಿಯೂ ಘಟಿಸುವುದು.**

اِنَّمَا تُوْعَدُوْنَ لَوَاقِعٌ ﴿٨﴾

**9. ನಕ್ಷತ್ರಗಳು ಪ್ರಕಾಶಹೀನವಾಗುವಾಗ** [488]

فَاِذَا النُّجُوْمُ طُمِسَتْ ﴿٩﴾

**10. ಆಕಾಶ ಸೀಳಲ್ಪಡುವಾಗ** [489]

وَاِذَا السَّمَآءُ فُرِجَتْ ﴿١٠﴾

487. 2 ರಿಂದ 6ರ ವರೆಗಿನ ವಚನಗಳಲ್ಲಿ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಸಂಗಡಿಗರ ಬಗ್ಗೆ ಸೂಚಿಸಲಾಗಿದೆ.

488. ಧರ್ಮ ಪಂಡಿತರು ಆಧ್ಯಾತ್ಮಿಕವಾಗಿ ಅಧಃಪತನಹೊಂದುವಾಗ ಎಂದು ತಾತ್ಪರ್ಯ.

489. ಪುನಃ ದೈವಿಕ ಸಂದೇಶ ಅವತೀರ್ಣಗೊಳ್ಳಲಾರಂಭಿಸುವಾಗ ಎಂದು ತಾತ್ಪರ್ಯ.





**11. ಪರ್ವತಗಳು ಛಿದ್ರಗೊಳಿಸಲ್ಪಡುವಾಗ**[490]

وَاِذَا الْجِبَالُ نُسِفَتْ ﴿١١﴾

**12. ಸಂದೇಶವಾಹಕರು ನಿಶ್ಚಿತ ಕಾಲದಲ್ಲಿ ಒಂದುಗೂಡಿಸಲ್ಪಡುವಾಗ**[491] (ಆ ವಾಗ್ದಾನ ಮಾಡಲಾದ ಸಂಗತಿ ಘಟಿಸುವುದು).

وَاِذَا الرُّسُلُ اُقِّتَتْ ﴿١٢﴾

**13.** (ಈ ಸಂಭವಗಳನ್ನೆಲ್ಲ) **ಯಾವ ದಿನಕ್ಕಾಗಿ ನಿಗದಿಪಡಿಸಲಾಗಿದೆ?-**

لِاَيِّ يَوْمٍ اُجِّلَتْ ﴿١٣﴾

**14. ತೀರ್ಮಾನ ಮಾಡಲಾಗುವ ದಿನಕ್ಕೋಸ್ಕರ.**

لِيَوْمِ الْفَصْلِ ﴿١٤﴾

**15. ಆ ತೀರ್ಮಾನ ಮಾಡಲಾಗುವ ದಿನದ ಬಗ್ಗೆ ನಿನಗೇನು ಗೊತ್ತು?**

وَمَآ اَدْرٰىكَ مَا يَوْمُ الْفَصْلِ ﴿١٥﴾

**16. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾ ನಾಶ.**

وَيْلٌ يَّوْمَئِذٍ لِّلْمُكَذِّبِيْنَ ﴿١٦﴾

**17. ಪೂರ್ವಿಕರನ್ನು ನಾವು ನಾಶಪಡಿಸಿರಲಿಲ್ಲವೇ?**

اَلَمْ نُهْلِكِ الْاَوَّلِيْنَ ﴿١٧﴾

**18. ಅನಂತರದವರು ಅವರನ್ನು ಹಿಂಬಾಲಿಸುವಂತೆ ನಾವು ಮಾಡುವೆವು.**

ثُمَّ نُتْبِعُهُمُ الْاٰخِرِيْنَ ﴿١٨﴾

**19. ಪಾಪಿಗಳೊಡನೆ ನಾವು ಹಾಗೆಯೇ ವರ್ತಿಸು ತ್ತೇವೆ.**

كَذٰلِكَ نَفْعَلُ بِالْمُجْرِمِيْنَ ﴿١٩﴾

**20. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾ ನಾಶ.**

وَيْلٌ يَّوْمَئِذٍ لِّلْمُكَذِّبِيْنَ ﴿٢٠﴾

**21. ನಾವು ನಿಮ್ಮನ್ನು ಕ್ಷುಲ್ಲಕವಾದೊಂದು ದ್ರವದಿಂದ ಸೃಷ್ಟಿಸಲಿಲ್ಲವೇ?**

اَلَمْ نَخْلُقْكُّمْ مِّنْ مَّآءٍ مَّهِيْنٍ ﴿٢١﴾

490. ರಾಜರುಗಳು ಸ್ಥಾನ ಭ್ರಷ್ಟಗೊಳಿಸಲ್ಪಡುವಾಗ ಎಂದು ತಾತ್ಪರ್ಯ.

491. ಆ ಕಾಲದಲ್ಲಿ ಎಲ್ಲ ಪ್ರವಾದಿಗಳ ಹೆಸರುಗಳಿಂದ ಕರೆಯಲ್ಪಡುವ ಓರ್ವ ಮಹಾಪುರುಷನನ್ನು ದೇವರು ನಿಯೋಜಿಸುವನು. ಅವರ ಆಗಮನದ ಬಗ್ಗೆ ಹ| ಮೂಸಾ, ಹ| ಈಸಾ, ಶ್ರೀ ಕೃಷ್ಣ, ಶ್ರೀ ರಾಮ, ಶ್ರೀ ಬುದ್ಧ ಮೊದಲಾದ ಪ್ರವಾದಿಗಳು (ಅಲ್ಲಾಹನ ಇಷ್ಟಾಶೀರ್ವಾದಗಳು ಅವರ ಮೇಲಿರಲಿ) ಭವಿಷ್ಯ ನುಡಿದಿದ್ದಾರೆ. ಅವರು ಆ ಮಹಾತ್ಮರುಗಳ ಆಧ್ಯಾತ್ಮಿಕ ಸ್ವಭಾವವನ್ನು ಹೊಂದಿದವರಾಗಿರುವರು.

فَجَعَلْنٰهُ فِيْ قَرَارٍ مَّكِيْنٍ ﴿٢١﴾

22. ಅನಂತರ ನಾವು ಅದನ್ನು ಸುರಕ್ಷಿತವಾದೊಂದು ಸ್ಥಳದಲ್ಲಿರಿಸಿದೆವು -

اِلٰى قَدَرٍ مَّعْلُوْمٍ ﴿٢٢﴾

23. ಒಂದು ನಿಶ್ಚಿತ ಕಾಲಾವಧಿಯ ವರೆಗೆ.

فَقَدَرْنَا فَنِعْمَ الْقٰدِرُوْنَ ﴿٢٣﴾

24. ಹಾಗೆ ನಾವು ಕಾಲಾವಧಿಯನ್ನು ನಿರ್ಣಯಿಸಿದೆವು. ಎಷ್ಟು ಉತ್ತಮವಾಗಿ ನಾವು (ಅದನ್ನು) ನಿರ್ಣಯಿಸುತ್ತೇವೆ!

وَيْلٌ يَّوْمَئِذٍ لِّلْمُكَذِّبِيْنَ ﴿٢٤﴾

25. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾನಾಶ.

اَلَمْ نَجْعَلِ الْاَرْضَ كِفَاتًا ﴿٢٥﴾

26. ನಾವು ಭೂಮಿಯನ್ನು ಅದು (ತನ್ನೆಡೆಗೆ) ಸೆಳೆದಿಟ್ಟುಕೊಳ್ಳುವಂತೆ ಮಾಡಲಿಲ್ಲವೇ?[492]

اَحْيَآءً وَّاَمْوَاتًا ﴿٢٦﴾

27. ಜೀವಿಗಳನ್ನೂ ನಿರ್ಜೀವಿಗಳನ್ನೂ.

وَّجَعَلْنَا فِيْهَا رَوَاسِيَ شٰمِخٰتٍ وَّاَسْقَيْنٰكُمْ مَّآءً فُرَاتًا ﴿٢٧﴾

28. ಅದರಲ್ಲಿ ನಾವು ಉನ್ನತವಾದ ಪರ್ವತಗಳನ್ನು ಇರಿಸಿದೆವು ಹಾಗೂ ನಿಮಗೆ ಕುಡಿಯಲಿಕ್ಕೆ ಸಿಹಿ ನೀರನ್ನು ಒದಗಿಸಿದೆವು.

وَيْلٌ يَّوْمَئِذٍ لِّلْمُكَذِّبِيْنَ ﴿٢٨﴾

29. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾನಾಶ.

اِنْطَلِقُوْٓا اِلٰى مَا كُنْتُمْ بِهٖ تُكَذِّبُوْنَ ﴿٢٩﴾

30. ನೀವು ಏನನ್ನು ಸುಳ್ಳೆಂದು ಬಗೆಯುತ್ತಿದ್ದಿರೋ ಅದರ ಕಡೆಗೆ ನೀವು ಹೋಗಿರಿ ;

اِنْطَلِقُوْٓا اِلٰى ظِلٍّ ذِيْ ثَلٰثِ شُعَبٍ ﴿٣٠﴾

31. (ಹೌದು) ಮೂರು ಶಾಖೆಗಳಿರುವ ಒಂದು ನೆರಳಿನ ಕಡೆಗೆ ನೀವು ಹೋಗಿರಿ.

لَّا ظَلِيْلٍ وَّلَا يُغْنِيْ مِنَ اللَّهَبِ ﴿٣١﴾

32. ಅದು ನೆರಳು ನೀಡದು ಹಾಗೂ ಜ್ವಾಲೆಯಿಂದ ರಕ್ಷಿಸದು.

اِنَّهَا تَرْمِيْ بِشَرَرٍ كَالْقَصْرِ ﴿٣٢﴾

33. (ಉನ್ನತವಾದ) ಕೋಟೆಗಳಷ್ಟು ಎತ್ತರಕ್ಕೆ ಅದು ಜ್ವಾಲೆಗಳನ್ನು ಹಬ್ಬಿಸುವುದು.

492. ಭೂಮಿಗೆ ಗುರುತ್ವಾಕರ್ಷಣ ಶಕ್ತಿ ಇದೆಯೆಂದು ತಾತ್ಪರ್ಯ.





كَاَنَّهٗ جِمٰلَتٌ صُفْرٌ ﴿٣٣﴾

34. ಅದು ಹಳದಿ ಬಣ್ಣದ ಒಂಟೆಗಳೋಪಾದಿಯಲ್ಲಿರುವುದು.

وَيْلٌ يَّوْمَئِذٍ لِّلْمُكَذِّبِيْنَ ﴿٣٤﴾

35. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾನಾಶ.

هٰذَا يَوْمُ لَا يَنْطِقُوْنَ ﴿٣٥﴾

36. ಆ ದಿನದಂದು ಅವರು ಮಾತನಾಡಲು ಅಶಕ್ತರು.

وَلَا يُؤْذَنُ لَهُمْ فَيَعْتَذِرُوْنَ ﴿٣٦﴾

37. ನೆಪವೊಡ್ಡಲು ಅವರಿಗೆ ಅನುಮತಿ ನೀಡಲ್ಪಡದು.

وَيْلٌ يَّوْمَئِذٍ لِّلْمُكَذِّبِيْنَ ﴿٣٧﴾

38. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾನಾಶ.

هٰذَا يَوْمُ الْفَصْلِ جَمَعْنٰكُمْ وَالْاَوَّلِيْنَ ﴿٣٨﴾

39. '(ಅವರೊಡನೆ ಹೀಗೆ ಹೇಳಲಾಗುವುದು:) 'ಇದು ತೀರ್ಮಾನ ಮಾಡುವ ದಿನವಾಗಿದೆ. ನಾವು ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಒಟ್ಟು ಸೇರಿಸಿದ್ದೇವೆ.

فَاِنْ كَانَ لَكُمْ كَيْدٌ فَكِيْدُوْنِ ﴿٣٩﴾

40. 'ನಿಮ್ಮ ಬಳಿ ತಂತ್ರವೇನಾದರೂ ಇದ್ದರೆ ಅದನ್ನು ನನ್ನ ವಿರುದ್ಧ ಪ್ರಯೋಗಿಸಿರಿ.'

وَيْلٌ يَّوْمَئِذٍ لِّلْمُكَذِّبِيْنَ ﴿٤٠﴾

41. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾನಾಶ.

اِنَّ الْمُتَّقِيْنَ فِيْ ظِلٰلٍ وَّعُيُوْنٍ ﴿٤١﴾

42. 'ನಿಸ್ಸಂಶಯವಾಗಿಯೂ ಸಜ್ಜನರು ನೆರಳು ಮತ್ತು ಕಾರಂಜಿಗಳ ಮಧ್ಯದಲ್ಲಿ ನೆಲೆಸುವರು.

وَّفَوَاكِهَ مِمَّا يَشْتَهُوْنَ ﴿٤٢﴾

43. ಅವರು ಬಯಸುವ ಹಣ್ಣುಹಂಪಲುಗಳೂ (ಅವರಿಗಿವೆ).

كُلُوْا وَاشْرَبُوْا هَنِيْٓـًٔا بِمَا كُنْتُمْ تَعْمَلُوْنَ ﴿٤٣﴾

44. 'ನೀವು ಗೈದ ಸತ್ಕರ್ಮಗಳ ಪ್ರತಿಫಲವಾಗಿ ನೀವು ಸಂತೋಷದಿಂದ ತಿನ್ನಿರಿ ಹಾಗೂ ಕುಡಿಯಿರಿ' (ಎಂದು ಅವರೊಡನೆ ಹೇಳಲಾಗುವುದು).

اِنَّا كَذٰلِكَ نَجْزِي الْمُحْسِنِيْنَ ﴿٤٤﴾

45. ನಿಸ್ಸಂದೇಹವಾಗಿಯೂ ಸತ್ಕರ್ಮಿಗಳಿಗೆ ಇದೇ ಪ್ರಕಾರ ನಾವು ಪ್ರತಿಫಲ ನೀಡುತ್ತೇವೆ.

**46. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾ ನಾಶ.**

وَيْلٌ يَّوْمَئِذٍ لِّلْمُكَذِّبِيْنَ ﴿٤٦﴾

**47.** (ಆ ಸುಳ್ಳಾಗಿಸುವವರೊಡನೆ ನಾವು ಹೇಳುತ್ತೇವೆ:) **'ನೀವು** (ಇಹಲೋಕದಲ್ಲಿ) **ಅಲ್ಪಕಾಲ ತಿಂದು ಸಂತೋಷಪಡಿರಿ; ನೀವು ಪಾಪಿಗಳೇ ಆಗಿದ್ದೀರಿ.'**

كُلُوْا وَتَمَتَّعُوْا قَلِيْلًا اِنَّكُمْ مُّجْرِمُوْنَ ﴿٤٧﴾

**48. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾ ನಾಶ.**

وَيْلٌ يَّوْمَئِذٍ لِّلْمُكَذِّبِيْنَ ﴿٤٨﴾

**49. 'ನೀವು** (ಅಲ್ಲಾಹನ ಮುಂದೆ) **ಶಿರಬಾಗಿರಿ' ಎಂದು ಅವರೊಡನೆ ಹೇಳಿದರೆ ಅವರು ಶಿರಬಾಗಲಾರರು.**

وَاِذَا قِيْلَ لَهُمُ ارْكَعُوْا لَا يَرْكَعُوْنَ ﴿٤٩﴾

**50. ಆ ದಿನದಂದು ಸುಳ್ಳಾಗಿಸುವವರಿಗೆ ಮಹಾ ನಾಶ.**

وَيْلٌ يَّوْمَئِذٍ لِّلْمُكَذِّبِيْنَ ﴿٥٠﴾

**51. ಇದರ ಬಳಿಕ**[493] **ಅವರು ಬೇರೆ ಯಾವ ವಚನವನ್ನು ನಂಬುವರು?**

فَبِاَيِّ حَدِيْثٍۢ بَعْدَهٗ يُؤْمِنُوْنَ ﴿٥١﴾

493. ಅಂದರೆ ಇದರ ವಿರುದ್ಧವಾಗಿ.

سُوْرَةُ النَّبَاِ مَكِّيَّةٌ وَّهِيَ مَعَ الْبَسْمَلَةِ اِحْدٰى وَ اَرْبَعُوْنَ اٰيَةً وَّرُكُوْعَانِ

# 78. ಅನ್ನಬಅ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 41 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ (١)

**2. ಯಾವುದರ ಬಗ್ಗೆ ಅವರು ಪರಸ್ಪರ ಪ್ರಶ್ನಿಸುತ್ತಿದ್ದಾರೆ?**

عَمَّ يَتَسَآءَلُوْنَ (٢)

**3. ಆ ಮಹಾ ಸಂಭವದ ವಾರ್ತೆಯ ಬಗ್ಗೆ-**[494]

عَنِ النَّبَاِ الْعَظِيْمِ (٣)

**4. ಅದರ ಕುರಿತು ಅವರು ಭಿನ್ನಾಭಿಪ್ರಾಯ ಹೊಂದಿದ್ದಾರೆ.**

الَّذِيْ هُمْ فِيْهِ مُخْتَلِفُوْنَ (٤)

**5. ಇಲ್ಲ; ಅವರು ಬೇಗನೇ ಮನಗಾಣುವರು.**

كَلَّا سَيَعْلَمُوْنَ (٥)

**6. ಪುನಃ** (ನಾವು ಹೇಳುತ್ತೇವೆ) **ಅವರು ತಿಳಿದುಕೊಂಡದ್ದು ಸರಿಯಲ್ಲ; ಅವರು ಶೀಘ್ರದಲ್ಲೇ ಮನವರಿಕೆಮಾಡುವರು.**

ثُمَّ كَلَّا سَيَعْلَمُوْنَ (٦)

**7. ನಾವು ಭೂಮಿಯನ್ನು ಹಾಸನ್ನಾಗಿ ಮಾಡಿಲ್ಲವೇ?**

اَلَمْ نَجْعَلِ الْاَرْضَ مِهٰدًا (٧)

**8. ಮತ್ತು ಪರ್ವತಗಳನ್ನು ಗೂಟಗಳನ್ನಾಗಿಯೂ?**

وَّالْجِبَالَ اَوْتَادًا (٨)

**9. ನಾವು ನಿಮ್ಮನ್ನು ಜೋಡಿಗಳಾಗಿ ಸೃಷ್ಟಿಸಿದ್ದೇವೆ.**

وَّخَلَقْنٰكُمْ اَزْوَاجًا (٩)

**10. ನಿಮ್ಮ ನಿದ್ರೆಯನ್ನು ನಾವು ವಿಶ್ರಾಮದಾಯಕ ವಾಗಿ ಮಾಡಿದ್ದೇವೆ.**

وَّجَعَلْنَا نَوْمَكُمْ سُبَاتًا (١٠)

**11. ನಾವು ರಾತ್ರಿಯನ್ನು ಹೊದಿಕೆಯ ವಸ್ತ್ರ ವನ್ನಾಗಿಯೂ ಮಾಡಿದ್ದೇವೆ.**

وَّجَعَلْنَا الَّيْلَ لِبَاسًا (١١)

494. ತೀರ್ಮಾನ ಮಾಡುವ ದಿನದ ಬಗ್ಗೆ, ಅಥವಾ ಅದರ ಕುರಿತು ಖುರ್‌ಆನಿನಲ್ಲಿ ಉಲ್ಲೇಖವಾದ ವಾರ್ತೆಯ ಬಗ್ಗೆ.





**12. ನಾವು ಹಗಲನ್ನು ಜೀವನೋಪಾಯಕ್ಕಾಗಿ ವ್ಯವಸ್ಥೆಗೊಳಿಸಿದ್ದೇವೆ.**

وَّجَعَلْنَا النَّهَارَ مَعَاشًا (١٢)

**13. ನಾವು ನಿಮ್ಮ ಮೇಲ್ಗಡೆ ಏಳು ಸುಭದ್ರ ಆಕಾಶಗಳನ್ನು ರಚಿಸಿದ್ದೇವೆ.**

وَّبَنَيْنَا فَوْقَكُمْ سَبْعًا شِدَادًا (١٣)

**14. ಪ್ರಕಾಶಮಾನವಾದ ಒಂದು ಪ್ರದೀಪವನ್ನೂ** (ಸೂರ್ಯನನ್ನೂ) **ನಾವು ರೂಪಿಸಿದ್ದೇವೆ.**

وَّجَعَلْنَا سِرَاجًا وَّهَّاجًا (١٤)

**15. ದಟ್ಟವಾದ ಮೋಡಗಳಿಂದ ಧಾರಾಕಾರವಾಗಿ ಮಳೆ ಸುರಿಯುವಂತೆಯೂ ನಾವು ಮಾಡಿದ್ದೇವೆ.**

وَّاَنْزَلْنَا مِنَ الْمُعْصِرٰتِ مَآءً ثَجَّاجًا (١٥)

**16. ಆ ಮೂಲಕ ದವಸಧಾನ್ಯಗಳನ್ನು ಮತ್ತು ಸಸ್ಯಾದಿಗಳನ್ನು ಉತ್ಪಾದಿಸಲಿಕ್ಕೋಸ್ಕರ.**

لِّنُخْرِجَ بِهٖ حَبًّا وَّنَبَاتًا (١٦)

**17. ಹಾಗೂ ಸಮೃದ್ಧವಾದ ತೋಟಗಳನ್ನು ಸಹ.**

وَّجَنّٰتٍ اَلْفَافًا (١٧)

**18. ಖಂಡಿತವಾಗಿಯೂ ತೀರ್ಮಾನ ಮಾಡುವ ದಿನವು ಒಂದು ನಿರ್ದಿಷ್ಟ ಕಾಲದಲ್ಲಿ ಬಂದೇ ಬರುವುದು.**

اِنَّ يَوْمَ الْفَصْلِ كَانَ مِيْقَاتًا (١٨)

**19. ಕಹಳೆ ಮೊಳಗಿಸಲ್ಪಡುವ ದಿನದಂದು. ಆಗ ನೀವು ಗುಂಪುಗುಂಪಾಗಿ** (ನಮ್ಮ ಸನ್ನಿಧಿಗೆ) ಬರುವಿರಿ.

يَّوْمَ يُنْفَخُ فِي الصُّوْرِ فَتَاْتُوْنَ اَفْوَاجًا (١٩)

**20. ಆಕಾಶ ತೆರೆಯಲ್ಪಟ್ಟು ಅದರಲ್ಲಿ ಹಲವು ಬಾಗಿಲುಗಳಾಗುವುವು.**

وَّفُتِحَتِ السَّمَآءُ فَكَانَتْ اَبْوَابًا (٢٠)

**21. ಪರ್ವತಗಳು ಚಲಿಸಲ್ಪಡುವುವು ಮತ್ತು ಮರೀಚಿಕೆಯಂತಾಗುವುವು.**

وَّسُيِّرَتِ الْجِبَالُ فَكَانَتْ سَرَابًا (٢١)

**22. ಖಂಡಿತವಾಗಿಯೂ ನರಕ** (ಪಾಪಿಗಳಿಗೋಸ್ಕರ) **ಹೊಂಚು ಹಾಕಿಕೊಂಡಿರುತ್ತದೆ.**

اِنَّ جَهَنَّمَ كَانَتْ مِرْصَادًا (٢٢)

**23. ಅದು ದುಷ್ಕರ್ಮಿಗಳ ತಂಗುದಾಣವಾಗಿದೆ.**

لِّلطّٰغِيْنَ مَاٰبًا (٢٣)

**24. ಅಲ್ಲಿ ಅವರು ವರ್ಷಗಟ್ಟಲೆ ನೆಲೆಸುವರು.**

لّٰبِثِيْنَ فِيْهَآ اَحْقَابًا (٢٤)

**25.** ಅವರು ಅಲ್ಲಿ ತಂಪನ್ನಾಗಲಿ, ಪಾನೀಯವನ್ನಾಗಲಿ ಸವಿಯಲಾರರು;

لَا يَذُوْقُوْنَ فِيْهَا بَرْدًا وَّلَا شَرَابًا ﴿٢٤﴾

**26.** ಕುದಿಯುವ ಜಲ ಅಥವಾ ಅತಿಶೈತ್ಯದ ನೀರು ಹೊರತು.

اِلَّا حَمِيْمًا وَّغَسَّاقًا ﴿٢٥﴾

**27.** ತಕ್ಕುದಾದ ಪ್ರತಿಫಲವೇ ಸರಿ.

جَزَآءً وِّفَاقًا ﴿٢٦﴾

**28.** ಅವರು ವಿಚಾರಣೆಯ ಬಗ್ಗೆ ಏನೂ ಭಯಪಟ್ಟಿರಲಿಲ್ಲ.

اِنَّهُمْ كَانُوْا لَا يَرْجُوْنَ حِسَابًا ﴿٢٧﴾

**29.** ಅವರು ನಮ್ಮ ದೃಷ್ಟಾಂತಗಳನ್ನು ಸಂಪೂರ್ಣವಾಗಿ ಸುಳ್ಳಾಗಿಸಿದ್ದರು.

وَّكَذَّبُوْا بِاٰيٰتِنَا كِذَّابًا ﴿٢٨﴾

**30.** ಎಲ್ಲ ಸಂಗತಿಗಳನ್ನೂ ನಾವು ಒಂದು ಪುಸ್ತಕದಲ್ಲಿ ದಾಖಲಿಸಿದ್ದೇವೆ.

وَكُلَّ شَيْءٍ اَحْصَيْنٰهُ كِتٰبًا ﴿٢٩﴾

**31.** ಆದ್ದರಿಂದ (ಅವರೊಡನೆ ಹೀಗೆ ಹೇಳಲಾಗುವುದು:) 'ನೀವು (ಶಿಕ್ಷೆಯನ್ನು) ಅನುಭವಿಸಿರಿ. ನಿಮ್ಮ ಶಿಕ್ಷೆಯನ್ನು ನಾವು (ಇನ್ನೂ) ಹೆಚ್ಚಿಸುವೆವು.'

فَذُوْقُوْا فَلَنْ نَّزِيْدَكُمْ اِلَّا عَذَابًا ﴿٣٠﴾

**32.** ಖಂಡಿತವಾಗಿಯೂ ಸಜ್ಜನರಿಗೆ ಜಯವಿದೆ.

اِنَّ لِلْمُتَّقِيْنَ مَفَازًا ﴿٣١﴾

**33.** ಉದ್ಯಾನಗಳೂ ದ್ರಾಕ್ಷೆಗಳೂ

حَدَآئِقَ وَاَعْنَابًا ﴿٣٢﴾

**34.** ಸಮಾನ ವಯಸ್ಕರಾದ ತರುಣಿಯರೂ

وَّكَوَاعِبَ اَتْرَابًا ﴿٣٣﴾

**35.** ತುಂಬಿದ ಪಾನಪಾತ್ರೆಗಳೂ.

وَّكَاْسًا دِهَاقًا ﴿٣٤﴾

**36.** ವ್ಯರ್ಥ ಮಾತನ್ನಾಗಲಿ ಹುಸಿ ನುಡಿಯನ್ನಾಗಲಿ ಅವರು ಅಲ್ಲಿ ಆಲಿಸಲಾರರು.

لَا يَسْمَعُوْنَ فِيْهَا لَغْوًا وَّلَا كِذّٰبًا ﴿٣٥﴾

**37.** (ಅದು) ನಿನ್ನ ಪ್ರಭುವಿನಿಂದಿರುವ ಪ್ರತಿಫಲ - ಅವರ ಕರ್ಮಗಳಿಗೆ ತಕ್ಕುದಾದ ಪಾರಿತೋಷಕ.

جَزَآءً مِّنْ رَّبِّكَ عَطَآءً حِسَابًا ﴿٣٦﴾





**38.** (ಅವನು) ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯದಲ್ಲಿರುವ ಎಲ್ಲವುಗಳ ಪ್ರಭು - ಪರಮ ದಯಾವಂತ. (ಅವನ ಅಪ್ಪಣೆ ವಿನಾ) ಅವನೊಡನೆ ಮಾತನಾಡುವ ಸಾಮರ್ಥ್ಯ ಅವರಿಗೆ ಇರದು.

رَّبِّ السَّمٰوٰتِ وَالْاَرْضِ وَمَا بَيْنَهُمَا الرَّحْمٰنِ لَا يَمْلِكُوْنَ مِنْهُ خِطَابًا ﴿٣٧﴾

**39.** ಆ ದಿನದಂದು ಆತ್ಮ ಮತ್ತು ದಿವ್ಯದೂತರು ಸಾಲಾಗಿ ನಿಲ್ಲುವಾಗ, ಪರಮ ದಯಾವಂತನ (ಅಲ್ಲಾಹನ) ಅನುಮತಿ ಪಡೆದ ಹಾಗೂ ಸರಿಯಾದುದನ್ನೇ ನುಡಿಯುವ ವ್ಯಕ್ತಿಯ ಹೊರತು ಬೇರೆ ಯಾರೂ ಮಾತನಾಡಲಾರರು.

يَوْمَ يَقُوْمُ الرُّوْحُ وَالْمَلٰٓئِكَةُ صَفًّا لَّا يَتَكَلَّمُوْنَ اِلَّا مَنْ اَذِنَ لَهُ الرَّحْمٰنُ وَقَالَ صَوَابًا ﴿٣٨﴾

**40.** ಸತ್ಯವಾಗಿಯೂ ಆ ದಿನ ಬಂದೇ ಬರುವುದು. ಆದ್ದರಿಂದ ಯಾವನಾದರೂ ಬಯಸುವುದಾದರೆ, ಅವನು ತನ್ನ ಪ್ರಭುವಿನೆಡೆಗಿರುವ ಮಾರ್ಗವನ್ನು ಅವಲಂಬಿಸಲಿ.

ذٰلِكَ الْيَوْمُ الْحَقُّ فَمَنْ شَآءَ اتَّخَذَ اِلٰى رَبِّهٖ مَاٰبًا ﴿٣٩﴾

**41.** ಸದ್ಯೋಭವಿಷ್ಯದಲ್ಲಿ ಎರಗಲಿರುವ ಒಂದು ಶಿಕ್ಷೆಯ ಬಗ್ಗೆ ನಾವು ನಿಮಗೆ ಮುನ್ನೆಚ್ಚರಿಕೆ ನೀಡಿದ್ದೇವೆ. ಆ ದಿನದಂದು ಮನುಷ್ಯನು ತಾನು ಮುಂಚೆ ಮಾಡಿದ ಕೃತ್ಯಗಳನ್ನು ಕಾಣುವನು. 'ಅಕಟಾ, ನಾನು ಮಣ್ಣಾಗಿ ಬಿಟ್ಟಿದ್ದರೆ ಎಷ್ಟು ಚೆನ್ನಾಗಿತ್ತು!' ಎಂದು ಅವಿಶ್ವಾಸಿ ಪ್ರಲಾಪಿಸುವನು.

اِنَّآ اَنْذَرْنٰكُمْ عَذَابًا قَرِيْبًا يَّوْمَ يَنْظُرُ الْمَرْءُ مَا قَدَّمَتْ يَدٰهُ وَيَقُوْلُ الْكٰفِرُ يٰلَيْتَنِيْ كُنْتُ تُرٰبًا ﴿٤٠﴾

سُوْرَةُ النّٰزِعٰتِ مَكِّيَّةٌ وَّهِيَ مَعَ الْبَسْمَلَةِ سَبْعٌ وَّ اَرْبَعُوْنَ اٰيَةً وَّ دُوْ رُكُوْعَانِ

## 79. ಅನ್ನಾಸಿಆತ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 47 ಆಯತ್‌ಗಳು ಹಾಗೂ 2 ರುಕೂಅ್‌ಗಳು ಇವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** (ಸತ್ಯವಿಶ್ವಾಸದೆಡೆಗೆ ಜನರನ್ನು) **ಶಕ್ತಿಯುತವಾಗಿ ಸೆಳೆಯುವವರಾಣೆ**[495] (ಅವರನ್ನು ನಾನು ಸಾಕ್ಷಿಯಾಗಿ ಮುಂದಿಡುತ್ತೇನೆ).

وَالنّٰزِعٰتِ غَرْقًا ﴿٢﴾

**3. ಅವರು ತಮ್ಮ ಕಟ್ಟುಗಳನ್ನು ಬಿಗಿಯಾಗಿ ಕಟ್ಟುವವರೂ**[496]

وَّالنّٰشِطٰتِ نَشْطًا ﴿٣﴾

**4. ದೂರ ದೂರ ಸಂಚರಿಸುವವರೂ**[497]

وَّالسّٰبِحٰتِ سَبْحًا ﴿٤﴾

**5. ಪೈಪೋಟಿ ನಡೆಸಿ ಮುಂದೆ ಮುಂದೆ ಸಾಗುವವರೂ**[498]

فَالسّٰبِقٰتِ سَبْقًا ﴿٥﴾

**6.** (ಐಹಿಕ) **ಕಾರ್ಯಗಳನ್ನು ಯೋಜನಾ ಬದ್ಧವಾಗಿ ನಿರ್ವಹಿಸುವವರೂ** (ಆಗಿದ್ದಾರೆ).[499]

فَالْمُدَبِّرٰتِ اَمْرًا ﴿٦﴾

**7. ಕಂಪಿಸುವಂಥದ್ದು ತೀವ್ರವಾಗಿ ಕಂಪಿಸುವ ದಿನದಂದು**[500]

يَوْمَ تَرْجُفُ الرَّاجِفَةُ ﴿٧﴾

495. 2 ರಿಂದ 6ರವರೆಗಿನ ವಚನಗಳಲ್ಲಿ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ರ ಸಂಗಡಿಗರ ಸ್ವಭಾವಗಳನ್ನು ಸೂಚಿಸಲಾಗಿದೆ.

496. ಅಲ್ಲಾಹನೊಡನೆ ಸುದೃಢವಾದ ಸಂಬಂಧವನ್ನು ಸ್ಥಾಪಿಸುವವರು.

497. ಸತ್ಯದ ಪ್ರಚಾರಕ್ಕೋಸ್ಕರ ದೂರ ದೂರದ ದೇಶಗಳಲ್ಲಿ ಸಂಚರಿಸುವವರು.

498. ಸತ್ಕಾರ್ಯದಲ್ಲಿ ಅತ್ಯಂತ ಉತ್ಸಾಹದಿಂದ ಮೇಲಾಟ ನಡೆಸುವವರು.

499. ಲೋಕ ಕಲ್ಯಾಣ ಮತ್ತು ಸುಧಾರಣೆಗೋಸ್ಕರ ಪ್ರಯತ್ನಿಸುವವರು.

500. ಆಲಂಕಾರಿಕ ಶೈಲಿಯಲ್ಲಿ ಕಂಪನದ ಅರ್ಥ ಯುದ್ಧ ಎಂದಾಗಿದೆ. (ಅಖ್‌ರಬ್). ಹಾಗೆ "ಯುದ್ಧ ಮಾಡುವವರು ಯುದ್ಧಕ್ಕೆ ಸನ್ನದ್ಧರಾಗುವ ದಿನದಂದು" ಎಂದು ಈ ವಚನಕ್ಕೆ ಅರ್ಥ ಹೇಳಬಹುದು. ಅಂದರೆ, ವೈರಿಗಳು ಮುಸ್ಲಿಮರನ್ನು ಆಕ್ರಮಿಸುವಾಗ ಅವರು ಅದನ್ನು ಎದುರಿಸಲು ಸಿದ್ಧರಾಗುತ್ತಾರೆ.





**8. ಬೆನ್ನಟ್ಟುವ ಇನ್ನೊಂದು** (ಕಂಪನ) **ಅದನ್ನು ಬೆನ್ನಟ್ಟುವುದು.**

تَتْبَعُهَا الرَّادِفَةُ ﴿٨﴾

**9. ಅಂದು** (ಕೆಲವು) **ಹೃದಯಗಳು ಕಂಪಿಸುವುವು.**[501]

قُلُوْبٌ يَّوْمَئِذٍ وَّاجِفَةٌ ﴿٩﴾

**10. ಅವರ ಕಣ್ಣುಗಳು ಭಯದಿಂದ ಅಧೋಮುಖಿ ವಾಗುವುವು.**

اَبْصَارُهَا خَاشِعَةٌ ﴿١٠﴾

**11. ಅವರು ಕೇಳುವರು: 'ನಮ್ಮನ್ನು** (ನಿಜವಾಗಿಯೂ ಮರಣದ ನಂತರ) **ಪೂರ್ವಸ್ಥಿತಿಗೆ ಮರಳಿಸಲಾಗುವುದೇ?**

يَقُوْلُوْنَ ءَاِنَّا لَمَرْدُوْدُوْنَ فِي الْحَافِرَةِ ﴿١١﴾

**12. 'ನಾವು ಕೊಳೆತ ಅಸ್ಥಿಗಳಾಗಿ ಮಾರ್ಪಟ್ಟರೆ ಕೂಡ?'**

ءَاِذَا كُنَّا عِظَامًا نَّخِرَةً ﴿١٢﴾

**13. ಅವರು ಹೇಳುವರು: 'ಹಾಗಿದ್ದರೆ ಅದು ಖಂಡಿತವಾಗಿಯೂ ಹಾನಿಕರವಾದ ಮರಳಿಕೆಯಾಗಿದೆ.'**

قَالُوْا تِلْكَ اِذًا كَرَّةٌ خَاسِرَةٌ ﴿١٣﴾

**14. ಅದೊಂದು** (ಪ್ರಥಮದ) **ಘೋರ ಶಬ್ದ ಮಾತ್ರವಾಗಿರುವುದು.**

فَاِنَّمَا هِيَ زَجْرَةٌ وَّاحِدَةٌ ﴿١٤﴾

**15.** (ಅನಂತರ) **ಅದೋ ಅವರು ಮೈದಾನದಲ್ಲಿ ನೆರೆಯುವರು.**

فَاِذَا هُمْ بِالسَّاهِرَةِ ﴿١٥﴾

**16. ಏನು, ನಿನಗೆ ಮೂಸಾರ ವೃತ್ತಾಂತ ತಲಪಿದೆಯೇ?**

هَلْ اَتٰىكَ حَدِيْثُ مُوْسٰى ﴿١٦﴾

**17. ಅವರ ಪ್ರಭು ಅವರನ್ನು ಪವಿತ್ರ ಕಣಿವೆ 'ತುವಾ'ದಲ್ಲಿ ಕರೆದ ಸಂದರ್ಭ** (ಹೀಗೆ ಹೇಳಿದನು:)

اِذْ نَادٰىهُ رَبُّهٗ بِالْوَادِ الْمُقَدَّسِ طُوًى ﴿١٧﴾

**18. "ನೀನು ಫಿರ್‌ಔನನ ಬಳಿಗೆ ಹೋಗು; ಅವನು ಧಿಕ್ಕಾರಿಯಾಗಿದ್ದಾನೆ.**

اِذْهَبْ اِلٰى فِرْعَوْنَ اِنَّهٗ طَغٰى ﴿١٨﴾

**19. "ಅವನೊಡನೆ ಹೇಳು: 'ನೀನು ಪರಿಶುದ್ಧ ಗೊಳಿಸಲ್ಪಡಲು ಬಯಸುತ್ತೀಯಾ?**

فَقُلْ هَلْ لَّكَ اِلٰۤى اَنْ تَزَكّٰى ﴿١٩﴾

501. ಆ ಸಂದರ್ಭದಲ್ಲಿ ಶತ್ರುಗಳು ಅಂಜುಬುರುಕರಾಗುವರೆಂದು ತಾತ್ಪರ್ಯ.

وَأَهْدِيَكَ إِلَىٰ رَبِّكَ فَتَخْشَىٰ ﴿٢٠﴾

**20.** 'ನಾನು ನಿನ್ನನ್ನು ನಿನ್ನ ಪ್ರಭುವಿನ ಬಳಿಗೆ ಕೊಂಡೊಯ್ಯುವೆನು. ತತ್ಫಲವಾಗಿ ನೀನು ಅವನಿಗೆ ಭಯಪಡುವವಂತಾಗುವುದು.' "

فَأَرَىٰهُ ٱلْءَايَةَ ٱلْكُبْرَىٰ ﴿٢١﴾

**21.** ಹಾಗೆ ಅವರು (ಫಿರ್‌ಔನನ ಬಳಿ ಹೋಗಿ) ಅವನಿಗೆ ಆ ಮಹಾ ದೃಷ್ಟಾಂತವನ್ನು ತೋರಿಸಿದರು.

فَكَذَّبَ وَعَصَىٰ ﴿٢٢﴾

**22.** ಆದರೆ ಅವನು ಸುಳ್ಳಾಗಿಸಿದನು ಮತ್ತು ಅವಿಧೇಯನಾದನು.

ثُمَّ أَدْبَرَ يَسْعَىٰ ﴿٢٣﴾

**23.** ಅನಂತರ ಅವನು ಬೆನ್ನು ತಿರುಗಿಸಿದನು ಮತ್ತು ಅವರನ್ನು ವಿರೋಧಿಸಲು ತೊಡಗಿದನು.

فَحَشَرَ فَنَادَىٰ ﴿٢٤﴾

**24.** ಅವನು ತನ್ನ ಜನರನ್ನು ಒಂದುಗೂಡಿಸಿದನು ಮತ್ತು ಘೋಷಿಸಿದನು -

فَقَالَ أَنَا رَبُّكُمُ ٱلْأَعْلَىٰ ﴿٢٥﴾

**25.** 'ನಾನೇ ಮಹೋನ್ನತನಾದ ನಿಮ್ಮ ಪ್ರಭು' ಎಂದು ಹೇಳುತ್ತಾ.

فَأَخَذَهُ ٱللَّهُ نَكَالَ ٱلْءَاخِرَةِ وَٱلْأُولَىٰ ﴿٢٦﴾

**26.** ಆದ್ದರಿಂದ ಅಲ್ಲಾಹನು ಅವನನ್ನು ಹಿಡಿದು ಪರಲೋಕದ ಮತ್ತು ಇಹಲೋಕದ ಶಿಕ್ಷೆಗೆ ಗುರಿಪಡಿಸಿದನು.

إِنَّ فِى ذَٰلِكَ لَعِبْرَةً لِّمَن يَخْشَىٰ ﴿٢٧﴾ ع

**27.** ಭಯಪಡುವವನಿಗೆ ಅದರಲ್ಲಿ ಖಂಡಿತ ವಾಗಿಯೂ ಒಂದು ಪಾಠವಿದೆ.

ءَأَنتُمْ أَشَدُّ خَلْقًا أَمِ ٱلسَّمَآءُ بَنَىٰهَا ﴿٢٨﴾

**28.** ಏನು, ನಿಮ್ಮನ್ನು ಸೃಷ್ಟಿಸುವುದು ಕಷ್ಟವೋ? ಅಥವಾ ಅವನು ಸೃಷ್ಟಿಸಿದ ಆಕಾಶವನ್ನೋ?

رَفَعَ سَمْكَهَا فَسَوَّىٰهَا ﴿٢٩﴾

**29.** ಅವನು ಅದರ ಎತ್ತರವನ್ನು ಬಹಳ ಹೆಚ್ಚಿಸಿದ್ದಾನೆ ಮತ್ತು ಅದನ್ನು ನ್ಯೂನತೆ ಇಲ್ಲದಂತೆ ಸೃಷ್ಟಿಸಿದ್ದಾನೆ.

وَأَغْطَشَ لَيْلَهَا وَأَخْرَجَ ضُحَىٰهَا ﴿٣٠﴾

**30.** ಅವನು ಅದರ ರಾತ್ರಿಯನ್ನು ಅಂಧಕಾರಮಯ ಗೊಳಿಸಿದ್ದಾನೆ ಮತ್ತು ಹಗಲನ್ನು ಪ್ರಕಾಶಮಯ ಗೊಳಿಸಿದ್ದಾನೆ.





وَٱلْأَرْضَ بَعْدَ ذَٰلِكَ دَحَىٰهَا ﴿٣١﴾

**31.** ಅದರೊಂದಿಗೆ ಭೂಮಿಯನ್ನು ಅವನು ಹರಡಿದನು.

أَخْرَجَ مِنْهَا مَآءَهَا وَمَرْعَىٰهَا ﴿٣٢﴾

**32.** ಅದರಿಂದ ಅವನು ನೀರನ್ನೂ ಮೇವನ್ನೂ ಹೊರಡಿಸಿದನು;

وَٱلْجِبَالَ أَرْسَىٰهَا ﴿٣٣﴾

**33.** ಪರ್ವತಗಳನ್ನು ಭದ್ರಪಡಿಸಿದನು.

مَتَٰعًا لَّكُمْ وَلِأَنْعَٰمِكُمْ ﴿٣٤﴾

**34.** ಇವೆಲ್ಲ ನಿಮಗೂ ನಿಮ್ಮ ಜಾನುವಾರುಗಳಿಗೂ ಜೀವನಾಧಾರವಾಗಿವೆ.

فَإِذَا جَآءَتِ ٱلطَّآمَّةُ ٱلْكُبْرَىٰ ﴿٣٥﴾

**35.** ಆದರೆ ಆ ಮಹಾ ವಿಪತ್ತು ಬಂದೆರಗಿದರೆ,

يَوْمَ يَتَذَكَّرُ ٱلْإِنسَٰنُ مَا سَعَىٰ ﴿٣٦﴾

**36.** ಅಂದು ಮನುಷ್ಯನು ತನ್ನ ಕೃತ್ಯಗಳ ಬಗ್ಗೆ ನೆನಪಿಸುವನು.

وَبُرِّزَتِ ٱلْجَحِيمُ لِمَن يَرَىٰ ﴿٣٧﴾

**37.** ಮನಗಾಣುವವನಿಗೆ ನರಕ ಪ್ರಕಟಗೊಳ್ಳುವುದು.

فَأَمَّا مَن طَغَىٰ ﴿٣٨﴾

**38.** ಯಾರು ಧಾರ್ಷ್ಟ್ಯ ತೋರಿಸುತ್ತಾನೋ

وَءَاثَرَ ٱلْحَيَوٰةَ ٱلدُّنْيَا ﴿٣٩﴾

**39.** ಹಾಗೂ ಇಹಲೋಕ ಜೀವನವನ್ನು ಆಯ್ಕೆ ಮಾಡುತ್ತಾನೋ,

فَإِنَّ ٱلْجَحِيمَ هِىَ ٱلْمَأْوَىٰ ﴿٤٠﴾

**40.** ಖಂಡಿತವಾಗಿಯೂ ನರಕ ಅವನ ವಾಸಸ್ಥಳ ವಾಗುವುದು.

وَأَمَّا مَنْ خَافَ مَقَامَ رَبِّهِۦ وَنَهَى ٱلنَّفْسَ عَنِ ٱلْهَوَىٰ ﴿٤١﴾

**41.** ಆದರೆ ಯಾರು ಅಲ್ಲಾಹನ ಮುಂದೆ ನಿಲ್ಲಲು ಭಯಪಡುತ್ತಾನೋ ಮತ್ತು ತನ್ನನ್ನು ಕೆಟ್ಟ ಆಶೆಗಳಿಂದ ತಡೆದುಕೊಳ್ಳುತ್ತಾನೋ,

فَإِنَّ ٱلْجَنَّةَ هِىَ ٱلْمَأْوَىٰ ﴿٤٢﴾

**42.** ಖಂಡಿತವಾಗಿಯೂ ಸ್ವರ್ಗ ಅವನ ವಾಸಸ್ಥಳವಾಗುವುದು.

يَسْـَٔلُونَكَ عَنِ ٱلسَّاعَةِ أَيَّانَ مُرْسَىٰهَا ﴿٤٣﴾

**43.** ಆ ನಿಶ್ಚಿತ ಗಳಿಗೆಯ ಬಗ್ಗೆ ಅವರು ನಿನ್ನೊಡನೆ ಕೇಳುತ್ತಾರೆ : 'ಅದು ಯಾವಾಗ ಬರುವುದು?' ಎಂದು.

**44. ಅದರ ಬಗ್ಗೆ ನೀನು ಹೇಗೆ ಹೇಳಬಲ್ಲೆ?**

فِيْمَ اَنْتَ مِنْ ذِكْرٰىهَا ﴿٤٤﴾

**45. ಅದರ ಸರಿಯಾದ ಜ್ಞಾನ ನಿನ್ನ ಪ್ರಭುವಿಗೆ ಮಾತ್ರವಿದೆ.**

اِلٰى رَبِّكَ مُنْتَهٰىهَا ﴿٤٥﴾

**46. ಅದರ ಬಗ್ಗೆ ಭಯಪಡುವವನಿಗೆ ನೀನು ಕೇವಲ ಮುನ್ನೆಚ್ಚರಿಕೆ ನೀಡುವವನು ಆಗಿರುವೆ.**

اِنَّمَآ اَنْتَ مُنْذِرُ مَنْ يَّخْشٰىهَا ﴿٤٦﴾

**47. ಅವರು ಅದನ್ನು ಕಾಣುವಾಗ,** (ಈ ಲೋಕದಲ್ಲಿ) **ಕೇವಲ ಒಂದು ಸಂಜೆಯಷ್ಟು ಕಾಲ ಅಥವಾ ಅದರ ಒಂದು ಮುಂಜಾನೆಯಷ್ಟು ಕಾಲ ಇದ್ದಂತೆ** ಅವರಿಗೆ ಭಾಸವಾಗುವುದು.

كَاَنَّهُمْ يَوْمَ يَرَوْنَهَا لَمْ يَلْبَثُوْٓا اِلَّا عَشِيَّةً اَوْ ضُحٰىهَا ﴿٤٧﴾

سُوْرَةُ عَبَسَ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّ اَرْبَعُوْنَ اٰيَةً وَّ رُكُوْعٌ وَّ كَذَا الخ

## 80. ಅಬಸ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 43 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**
بِسْمِ اللّٰهِ الرَّحْمٰنِ الرَّحِيْمِ (١)

**2. ಅವರು**[502] **ಹುಬ್ಬು ಗಂಟಿಕ್ಕಿ ಮುಖ ತಿರುಗಿಸಿದರು.**
عَبَسَ وَتَوَلّٰىٓ (٢)

**3. ಆ ಅಂಧ ಮನುಷ್ಯನು**[503] **ಅವರ ಕಡೆಗೆ ಬಂದುದಕ್ಕೆ.**
اَنْ جَآءَهُ الْاَعْمٰى (٣)

**4. ನಿನಗೆ ತಿಳಿಯುವುದಾದರೂ ಹೇಗೆ- ಆತನು ಸ್ವಯಂ ಪರಿಶುದ್ಧನಾಗಲು ಬಯಸಿರುವನೆಂದು?**
وَمَا يُدْرِيْكَ لَعَلَّهٗ يَزَّكّٰىٓ (٤)

**5. ಅಥವಾ ಆತನು ಉಪದೇಶವನ್ನು ಸ್ವೀಕರಿಸಿ, ಆ ಉಪದೇಶ ಆತನಿಗೆ ಉಪಯುಕ್ತವಾಗಬಹುದೆಂದು?**
اَوْ يَذَّكَّرُ فَتَنْفَعَهُ الذِّكْرٰى (٥)

**6. ಯಾರು ನಿರ್ಲಕ್ಷ್ಯದಿಂದಿರುವನೋ**
اَمَّا مَنِ اسْتَغْنٰى (٦)

**7. ಅವನ ಕಡೆಗೆ ನೀನು** (ಹೆಚ್ಚು) **ಗಮನ ಕೊಡಲು ಸಾಧ್ಯವೇ?**
فَاَنْتَ لَهٗ تَصَدّٰى (٧)

**8.** (ಆದರೆ) **ಅವನು ಪರಿಶುದ್ಧನಾಗದಿದ್ದರೆ ನಿನ್ನದೇನೂ ತಪ್ಪಿಲ್ಲ.**
وَمَا عَلَيْكَ اَلَّا يَزَّكّٰى (٨)

**9.** (ಆಕ್ಷೇಪಕರು ಹೇಳುತ್ತಾರೆ:) **ಯಾರು ಓಡುತ್ತಾ ನಿನ್ನ ಬಳಿಗೆ ಬರುತ್ತಾನೋ,**
وَاَمَّا مَنْ جَآءَكَ يَسْعٰى (٩)

**10. ಮತ್ತು ಅಲ್ಲಾಹನಿಗೆ ಭಯಪಡುತ್ತಾನೋ,**
وَهُوَ يَخْشٰى (١٠)

502. ಹಝ್ರತ್ ಮುಹಮ್ಮದ್ ಪೈಗಂಬರ್ (ಸ).
503. ಅಬ್ದುಲ್ಲಾಹಿಬ್ನು ಉಮ್ಮಿ ಮಕ್ತೂಮ್.





**11. ಆತನನ್ನು ನೀನು ನಿರ್ಲಕ್ಷಿಸುತ್ತಿರುವೆ**(ಎಂದು).
فَاَنْتَ عَنْهُ تَلَهّٰى (١١)

**12. ಎಂದಿಗೂ ಅಲ್ಲ** (ಈ ಆಕ್ಷೇಪ ಸರಿಯಲ್ಲ). **ಇದಾದರೋ** (ಖುರ್‌ಆನ್) **ಒಂದು ಉದ್ಬೋಧಕವಾಗಿದೆ.**
كَلَّآ اِنَّهَا تَذْكِرَةٌ (١٢)

**13. ಇಷ್ಟವುಳ್ಳವರು ಅದರ ಕಡೆಗೆ ಗಮನಕೊಡಲಿ.**
فَمَنْ شَآءَ ذَكَرَهٗ (١٣)

**14,15. ಆದರಣೀಯವೂ ಮಹೋನ್ನತವೂ ಪರಿಶುದ್ಧವೂ ಆದ ಹಾಳೆಗಳಲ್ಲಿ** (ಈ ಖುರ್‌ಆನ್ ದಾಖಲಿಸಲ್ಪಟ್ಟು) **ಇದೆ.**
فِيْ صُحُفٍ مُّكَرَّمَةٍ (١٤)
مَّرْفُوْعَةٍ مُّطَهَّرَةٍ (١٥)

**16, 17. ಗೌರವಾನ್ವಿತರೂ ಸಾತ್ವಿಕರೂ ಆದ ಬರಹಗಾರರ ಕೈಗಳಿಂದ.**
بِاَيْدِيْ سَفَرَةٍ (١٦)
كِرَامٍ بَرَرَةٍ (١٧)

**18.** (ಅವಿಶ್ವಾಸಿಯಾದ) **ಮನುಷ್ಯನಿಗೆ ನಾಶ. ಅವನು ಎಂಥಾ ಕೃತಘ್ನನು.**
قُتِلَ الْاِنْسَانُ مَآ اَكْفَرَهٗ (١٨)

**19. ಅವನನ್ನು ಯಾವ ವಸ್ತುವಿನಿಂದ ಅವನು** (ಅಲ್ಲಾಹನು) **ಸೃಷ್ಟಿಸಿದ್ದಾನೆ?** (ಎಂಬುದನ್ನು ಅವನು ಯೋಚಿಸಲಿ) **-**
مِنْ اَيِّ شَيْءٍ خَلَقَهٗ (١٩)

**20. ಒಂದು ವೀರ್ಯಾಣುವಿನಿಂದ! ಮತ್ತೆ ಅವನು** (ಅಲ್ಲಾಹನು) **ಒಂದು ಪರಿಮಾಣವನ್ನು ಅವನಿಗೆ ನಿರ್ಣಯಿಸುತ್ತಾನೆ.**
مِنْ نُّطْفَةٍ خَلَقَهٗ فَقَدَّرَهٗ (٢٠)

**21. ಅನಂತರ ಅವನು ಅವನಿಗೆ ಮಾರ್ಗವನ್ನು ಸುಗಮಗೊಳಿಸುತ್ತಾನೆ.**
ثُمَّ السَّبِيْلَ يَسَّرَهٗ (٢١)

**22. ಆ ಬಳಿಕ ಅವನು ಮೃತಪಡಿಸುತ್ತಾನೆ ಮತ್ತು ಸಮಾಧಿಗೊಳಿಸುತ್ತಾನೆ.**
ثُمَّ اَمَاتَهٗ فَاَقْبَرَهٗ (٢٢)

**23. ಅನಂತರ, ಅವನು** (ಅಲ್ಲಾಹನು) **ಇಚ್ಛಿಸುವಾಗ ಅವನನ್ನು ಪುನರುತ್ಥಾನಗೊಳಿಸುವನು.**
ثُمَّ اِذَا شَآءَ اَنْشَرَهٗ (٢٣)

**24. ಇಲ್ಲ, ಅಲ್ಲಾಹನು ಅವನಿಗೆ ಆಜ್ಞಾಪಿಸಿದ್ದನ್ನು ಅವನು ಪಾಲಿಸಲಿಲ್ಲ.**
كَلَّا لَمَّا يَقْضِ مَآ اَمَرَهٗ (٢٤)

فَلْيَنْظُرِ الْاِنْسَانُ اِلٰى طَعَامِهٖٓ ﴿٢٤﴾

**25.** ಅಂತು, ಮನುಷ್ಯನೊಮ್ಮೆ ತನ್ನ ಆಹಾರದ ಕಡೆಗೆ ನೋಡಲಿ!

اَنَّا صَبَبْنَا الْمَآءَ صَبًّا ﴿٢٥﴾

**26.** ನಾವು ಧಾರಾಕಾರವಾಗಿ ಮಳೆಯನ್ನು ಸುರಿಸಿದೆವು.

ثُمَّ شَقَقْنَا الْاَرْضَ شَقًّا ﴿٢٦﴾

**27.** ಅನಂತರ ನಾವು ಭೂಮಿಯನ್ನು ಸೀಳಿದೆವು.[504]

فَاَنْۢبَتْنَا فِيْهَا حَبًّا ﴿٢٧﴾

**28.** ಆ ಬಳಿಕ ನಾವು ಅದರಲ್ಲಿ ಧಾನ್ಯ ಮೊಳೆಯುವಂತೆ ಮಾಡಿದೆವು.

وَّعِنَبًا وَّقَضْبًا ﴿٢٨﴾

**29.** ದ್ರಾಕ್ಷಿಯನ್ನೂ ತರಕಾರಿಗಳನ್ನೂ

وَّزَيْتُوْنًا وَّنَخْلًا ﴿٢٩﴾

**30.** ಓಲಿವ್ ಮತ್ತು ಖರ್ಜೂರ ಮರಗಳನ್ನೂ

وَّحَدَآئِقَ غُلْبًا ﴿٣٠﴾

**31.** ಸಮೃದ್ಧವಾಗಿ ಬೆಳೆದ ತೋಟಗಳನ್ನೂ

وَّفَاكِهَةً وَّاَبًّا ﴿٣١﴾

**32.** ಹಣ್ಣು ಹಂಪಲು ಮತ್ತು ಪಯಿರು ಪಚ್ಚೆಗಳನ್ನೂ (ಬೆಳೆಯುವಂತೆ ನಾವು ಮಾಡಿದೆವು.) -

مَّتَاعًا لَّكُمْ وَلِاَنْعَامِكُمْ ﴿٣٢﴾

**33.** ನಿಮಗೂ ನಿಮ್ಮ ಜಾನುವಾರುಗಳಿಗೂ ಜೀವನಾಧಾರವಾಗಿ.

فَاِذَا جَآءَتِ الصَّآخَّةُ ﴿٣٣﴾

**34.** ಆದರೆ ಕಿವಿಗಡಚಿಕ್ಕುವ ಆ ಘೋರ ಶಬ್ದ ಕೇಳಿ ಬಂದರೆ,

يَوْمَ يَفِرُّ الْمَرْءُ مِنْ اَخِيْهِ ﴿٣٤﴾

**35.** ಮನುಷ್ಯನು ತನ್ನ ಸಹೋದರನಿಂದ ದೂರ ಓಡಿ ಹೋಗುವ ದಿನ -

وَاُمِّهٖ وَاَبِيْهِ ﴿٣٥﴾

**36.** ತನ್ನ ತಾಯಿ ಮತ್ತು ತಂದೆಯ ಬಳಿಯಿಂದಲೂ

وَصَاحِبَتِهٖ وَبَنِيْهِ ﴿٣٦﴾

**37.** ತನ್ನ ಪತ್ನಿ ಮತ್ತು ಪುತ್ರರ ಬಳಿಯಿಂದಲೂ.

لِكُلِّ امْرِئٍ مِّنْهُمْ يَوْمَئِذٍ شَاْنٌ يُّغْنِيْهِ ﴿٣٧﴾

**38.** ಅಂದು ಅವರ ಪೈಕಿ ಪ್ರತಿಯೊಬ್ಬನೂ ತನ್ನ ಬಗ್ಗೆ ಮಾತ್ರ ಲಕ್ಷ್ಯಗೊಡಬಲ್ಲನು.

504. ಕೃಷಿಯೋಗ್ಯವನ್ನಾಗಿ ಮಾಡಿದೆವೆಂದು ತಾತ್ಪರ್ಯ.





وُجُوْهٌ يَّوْمَئِذٍ مُّسْفِرَةٌ ﴿٣٨﴾

**39.** ಅಂದು ಕೆಲವು ಮುಖಗಳು ಪ್ರಸನ್ನತೆಯಿಂದ ಕೂಡಿರುವುವು.

ضَاحِكَةٌ مُّسْتَبْشِرَةٌ ﴿٣٩﴾

**40.** ನಗುನಗುತ್ತಲೂ ಆಹ್ಲಾದಪಡುತ್ತಲೂ.

وَوُجُوْهٌ يَّوْمَئِذٍ عَلَيْهَا غَبَرَةٌ ﴿٤٠﴾

**41.** ಬೇರೆ ಕೆಲವು ಮುಖಗಳು ಅಂದು ಧೂಳಿನಿಂದ ಮುಚ್ಚಿಕೊಂಡಿರುವುವು.

تَرْهَقُهَا قَتَرَةٌ ﴿٤١﴾

**42.** ಅಂಧಕಾರ ಅವುಗಳನ್ನು ಆವರಿಸುವುದು.

اُولٰٓئِكَ هُمُ الْكَفَرَةُ الْفَجَرَةُ ﴿٤٢﴾

**43.** ಅವರೇ ದುಷ್ಟರಾದ ಅವಿಶ್ವಾಸಿಗಳು.

## سُورَةُ التَّكْوِيرِ مَكِّيَّةٌ وَهِيَ مَعَ الْبَسْمَلَةِ ثَلَاثُونَ آيَةً

# 81. ಅತ್ತಕ್‌ವೀರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 30 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಸೂರ್ಯನು ಆಚ್ಛಾದಿಸಲ್ಪಡುವಾಗ,**[505.]

اِذَا الشَّمْسُ كُوِّرَتْ ②

**3. ನಕ್ಷತ್ರಗಳು ಕಾಂತಿಹೀನವಾಗುವಾಗ,**[506.]

وَاِذَا النُّجُوْمُ انْكَدَرَتْ ③

**4. ಪರ್ವತಗಳು ಚಲಿಸಲ್ಪಡುವಾಗ,**[507.]

وَاِذَا الْجِبَالُ سُيِّرَتْ ④

**5. ಹತ್ತುಮಾಸ ಗರ್ಭವುಳ್ಳ ಒಂಟೆಗಳು ತ್ಯಜಿಸಲ್ಪಡುವಾಗ,**[508.]

وَاِذَا الْعِشَارُ عُطِّلَتْ ⑤

**6. ವನ್ಯಮೃಗಗಳು ಜಮಾಯಿಸಲ್ಪಡುವಾಗ,**[509.]

وَاِذَا الْوُحُوْشُ حُشِرَتْ ⑥

505. 2 ರಿಂದ 19ರ ವರೆಗಿನ ವಚನಗಳಿಗೆ ಗಹನವಾದ ಅರ್ಥಗಳಿವೆ. ಪ್ರತಿಯೊಂದು ವಚನ ಸಹ ಮಹತ್ತರವಾದ ಭವಿಷ್ಯವಾಣಿಯನ್ನು ಒಳಗೊಂಡಿರುತ್ತದೆ. ಹಝ್ರತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರ ಬಳಿಕ ಕಾಲಾಂತರದಲ್ಲಿ ಇಸ್ಲಾಮಿಗೆ ಸಂಭವಿಸಲಿರುವ ಅವನತಿ ಮತ್ತು ಅದರ ಪುನರುದ್ಧಾರವಾಗುವ ಕಾಲದ ಬಗ್ಗೆ ಈ ವಚನಗಳಲ್ಲಿ ಸೂಚನೆಗಳಿವೆ. ಅಹ್ಮದಿಯಾ ಮುಸ್ಲಿಂ ಜಮಾಅತಿನ ದ್ವಿತೀಯ ಖಲೀಫ ಹಝ್ರತ್ ಮಿರ್ಝಾ ಬಶೀರುದ್ದೀನ್ ಮಹ್‌ಮೂದ್ ಅಹ್ಮದ್ (ರ) ಅವರು ಬರೆದ ತಫ್‌ಸೀರ್ ಸಗೀರ್ ಮತ್ತು ತಫ್‌ಸೀರ್ ಕಬೀರ್ ಗ್ರಂಥಗಳಲ್ಲಿ ಇದರ ಸವಿಸ್ತಾರವಾದ ವಿವರಣೆಗಳಿವೆ. "ಸೂರ್ಯನು ಆಚ್ಛಾದಿಸಲ್ಪಡುವಾಗ" ಅಂದರೆ, ಹಝ್ರತ್ ಮುಹಮ್ಮದ್ ಪೈಗಂಬರ್ (ಸ)ರ ಖ್ಯಾತಿಗೆ ಚ್ಯುತಿ ಬರುವ ಕಾಲ ಎಂದರ್ಥ. ಮುಹಮ್ಮದ್ ಪೈಗಂಬರ್ (ಸ)ರನ್ನು ಖುರ್‌ಆನಿನ ಬೇರೆಡೆಯಲ್ಲಿ ಆಲಂಕಾರಿಕವಾಗಿ ಸೂರ್ಯ ಎಂದು ಹೇಳಲಾಗಿದೆ. ಇಮಾಂ ಮಹ್‌ದಿಯ ಆಗಮನ ಕಾಲದ ಸೂಚಕವಾಗಿ ಸಂಭವಿಸಲಿದ್ದ ಸೂರ್ಯಗ್ರಹಣದ ಬಗ್ಗೆ ಸಹ ಈ ವಚನದಲ್ಲಿ ಸೂಚನೆಯಿದೆ.

506. ನಕ್ಷತ್ರಗಳು ಅಂದರೆ ಪೈಗಂಬರ್ (ಸ)ರ ಸಹಚರರು (ಸಹಾಬ) ಎಂದರ್ಥ.

507. ರಸ್ತೆ ನಿರ್ಮಾಣ, ನೆಲವನ್ನು ಸಮತಟ್ಟುಗೊಳಿಸುವುದು, ಖನಿಜೋದ್ಯಮ ಇತ್ಯಾದಿಗಳಿಗಾಗಿ ಪರ್ವತಗಳನ್ನು ಕಡಿದು ಸಾಗಿಸಲಾಗುವುದು ಎಂದರ್ಥ.

508. ಮೋಟಾರು ವಾಹನ, ರೈಲುಬಂಡಿ, ಹಡಗು, ವಿಮಾನ ಇತ್ಯಾದಿಗಳ ಆವಿಷ್ಕಾರದಿಂದಾಗಿ ಸಾರಿಗೆ ಸಂಚಾರಕ್ಕೋಸ್ಕರ ಒಂಟೆಗಳ ಉಪಯೋಗ ಇಲ್ಲದಾಗುವುದು ಎಂದರ್ಥ.

509. ಮೃಗಾಲಯಗಳ ಬಗ್ಗೆ ಸೂಚನೆ.





**7. ಸಮುದ್ರಗಳು ಹರಿಯಿಸಲ್ಪಟ್ಟು ಸಂಗಮಿಸಲ್ಪಡುವಾಗ,**[510.]

وَاِذَا الْبِحَارُ سُجِّرَتْ ⑦

**8. ಜನರು ಒಂದುಗೂಡಿಸಲ್ಪಡುವಾಗ,**[511]

وَاِذَا النُّفُوْسُ زُوِّجَتْ ⑧

**9. ಹೆಣ್ಣುಮಗುವನ್ನು ಜೀವಂತವಾಗಿ ದಫನ ಮಾಡಿದ ಬಗ್ಗೆ ವಿಚಾರಿಸಲ್ಪಡುವಾಗ -**

وَاِذَا الْمَوْءٗدَةُ سُئِلَتْ ⑨

**10. 'ಏಕೆ ಆ ಮಗು ಕೊಲ್ಲಲ್ಪಟ್ಟದ್ದು?' ಎಂದು.**[512]

بِاَيِّ ذَنْۢبٍ قُتِلَتْ ⑩

**11. ಪುಸ್ತಕಗಳು ವಿಪುಲವಾಗಿ ಪ್ರಚರಿಸಲ್ಪಡುವಾಗ,**[513]

وَاِذَا الصُّحُفُ نُشِرَتْ ⑪

**12. ಆಕಾಶದ ಚರ್ಮ ಸುಲಿಯಲ್ಪಡುವಾಗ,**[514]

وَاِذَا السَّمَآءُ كُشِطَتْ ⑫

**13. ನರಕಾಗ್ನಿ ಜ್ವಲಿಸಲ್ಪಡುವಾಗ,**[515]

وَاِذَا الْجَحِيْمُ سُعِّرَتْ ⑬

**14. ಸ್ವರ್ಗ ಸಮೀಪಗೊಳಿಸಲ್ಪಡುವಾಗ,**[516]

وَاِذَا الْجَنَّةُ اُزْلِفَتْ ⑭

**15. ಪ್ರತಿಯೊಂದು ಆತ್ಮ ತಾನು ತಂದದ್ದೇನೆಂದು ಅರಿಯುವುದು.**[517]

عَلِمَتْ نَفْسٌ مَّآ اَحْضَرَتْ ⑮

**16, 17. ಹಾಗೇನಲ್ಲ** (ನೀವು ಭಾವಿಸಿದಂತೆ ಅಲ್ಲ); **ಹಿಂದೆ ಸರಿಯುವ, ಮುಂದೆ ಹೋಗುವ ಮತ್ತು**

فَلَآ اُقْسِمُ بِالْخُنَّسِ ⑯

510. ಸುಯೇಜ್, ಪನಾಮ ಮೊದಲಾದ ಕಾಲುವೆಗಳ ನಿರ್ಮಾಣದ ಬಗ್ಗೆ ಸೂಚನೆ.

511. ಸಂಚಾರ ಸೌಕರ್ಯಗಳು ವೃದ್ಧಿಗೊಳ್ಳುವ ಕಾಲ ಎಂದರ್ಥ. ಜನರು ಸಂಘಟಿತರಾಗುವ ಕಾಲ ಎಂದು ಸಹ ಇದಕ್ಕೆ ಅರ್ಥವಿದೆ.

512. ಹೆಣ್ಣು ಭ್ರೂಣ ಹತ್ಯೆ, ಹೆಣ್ಣು ಶಿಶು ಹತ್ಯೆ ಇತ್ಯಾದಿಗಳು ಕಾನೂನು ರೀತ್ಯಾ ಅಪರಾಧವೆಂದು ಘೋಷಿಸಲ್ಪಡುವ ಕಾಲ.

513. ಕಾಗದ ಮತ್ತು ನವನವೀನ ಮುದ್ರಣ ಯಂತ್ರಗಳ ಆವಿಷ್ಕಾರದ ಬಗ್ಗೆ ಸೂಚನೆ.

514. ಬಾಹ್ಯಾಕಾಶ ವಿಜ್ಞಾನದ ಪ್ರಗತಿಯ ಸೂಚನೆ.

515. ಪಾಪಕರ್ಮಗಳ ಹೆಚ್ಚಳದ ಬಗ್ಗೆ ಸೂಚನೆ.

516. ಸರ್ವತ್ರ ಅಧರ್ಮ ವ್ಯಾಪಿಸುವ ಆ ಕಾಲದಲ್ಲಿ ಜನರನ್ನು ಸನ್ಮಾರ್ಗದಲ್ಲಿ ನಡೆಯಿಸಲು ಅಲ್ಲಾಹನ ಕಡೆಯಿಂದ ಓರ್ವ ಸಂದೇಶ ವಾಹಕನ (ಇಮಾಂ ಮಹ್‌ದಿ) ಆಗಮನವಾಗುವುದೆಂದೂ ಅವರನ್ನು ಸ್ವೀಕರಿಸುವ ಮೂಲಕ ಸ್ವರ್ಗ ಪ್ರಾಪ್ತಿಯಾಗುವುದೆಂದೂ ಇಲ್ಲಿ ಸೂಚಿಸಲಾಗಿದೆ.

517. ಪ್ರತಿಯೊಬ್ಬನ ಕರ್ಮಫಲ ಅಂದು ಪ್ರಕಟವಾಗುವುದು.

**ಕಣ್ಮರೆಯಾಗುವವುಗಳನ್ನು ನಾನು ಪ್ರಮಾಣ ಮಾಡುತ್ತೇನೆ.**[518] (ಅವುಗಳನ್ನು ಸಾಕ್ಷಿಗಳಾಗಿ ನಿಮ್ಮ ಮುಂದಿಡುತ್ತೇನೆ) **-**

الْجَوَارِ الْكُنَّسِ ﴿١٦﴾

**18, 19. ಕೊನೆಗೊಳ್ಳುವ ರಾತ್ರಿಯನ್ನೂ ಆರಂಭಗೊಳ್ಳುವ ಹಗಲನ್ನೂ** (ನಾನು ಸಾಕ್ಷಿ ಮಾಡುತ್ತೇನೆ).[519]

وَاللَّيْلِ إِذَا عَسْعَسَ ﴿١٧﴾
وَالصُّبْحِ إِذَا تَنَفَّسَ ﴿١٨﴾

**20. ದಿಟವಾಗಿಯೂ ಇದು ಆದರಣೀಯ ಸಂದೇಶವಾಹಕನೋರ್ವನ** (ಅವತೀರ್ಣ) **ವಚನ ವಾಗಿದೆ.**

إِنَّهُ لَقَوْلُ رَسُولٍ كَرِيمٍ ﴿١٩﴾

**21.** (ಆ ಸಂದೇಶವಾಹಕ) **ಶಕ್ತಿಶಾಲಿಯೂ ಸಿಂಹಾಸನದ ಅಧಿಪತಿಯೂ ಆದವನ** (ಅಲ್ಲಾಹನ) **ಮುಂದೆ ಸ್ಥಾನ ಪಡೆದವನೂ.**

ذِي قُوَّةٍ عِنْدَ ذِي الْعَرْشِ مَكِينٍ ﴿٢٠﴾

**22. ಅನುಸರಿಸಲ್ಪಡುವವನೂ ವಿಶ್ವಸ್ತನೂ ಆಗಿರುವನು.**

مُطَاعٍ ثَمَّ أَمِينٍ ﴿٢١﴾

**23. ನಿಮ್ಮ ಸಂಗಾತಿ ಹುಚ್ಚನಲ್ಲ.**

وَمَا صَاحِبُكُمْ بِمَجْنُونٍ ﴿٢٢﴾

**24. ನಿಸ್ಸಂಶಯವಾಗಿಯೂ ಆತನು ಅದನ್ನು**[520] **ತಿಳಿಯಾದ ಬಾನಂಚಿನಲ್ಲಿ** (ಪೂರ್ವದಿಗಂತದಲ್ಲಿ) **ಕಂಡಿದ್ದಾನೆ.**

وَلَقَدْ رَآهُ بِالْأُفُقِ الْمُبِينِ ﴿٢٣﴾

**25. ಆತನು ಅಗೋಚರ ವಿಷಯಗಳನ್ನು ತಿಳಿಸುವುದರಲ್ಲಿ ಜಿಪುಣನಲ್ಲ.**

وَمَا هُوَ عَلَى الْغَيْبِ بِضَنِينٍ ﴿٢٤﴾

518. ಅಧಃಪತನಗೊಳ್ಳುವ ಸಮುದಾಯದವರ ಮೂರು ಲಕ್ಷಣಗಳನ್ನು ಇಲ್ಲಿ ಸೂಚಿಸಲಾಗಿದೆ. 1. ಅವರು ಆಪತ್ಕಾಲದಲ್ಲಿ ಹಿಂದೆ ಸರಿಯುತ್ತಾರೆ. 2. ಪರಿಣಾಮದ ಕುರಿತು ಯೋಚಿಸದೆ ಅವಿವೇಕತನದಿಂದ ಮುನ್ನುಗ್ಗುತ್ತಾರೆ. 3. ಎಲ್ಲವನ್ನು ಬಿಟ್ಟು ಮನೆಯೊಳಗೆ ಸುಮ್ಮನೆ ಕುಳಿತುಕೊಳ್ಳುತ್ತಾರೆ.

519. ಕರಾಳ ರಾತ್ರಿಯ ಅಂತ್ಯವನ್ನೂ ಶುಭದಿನದ ಆರಂಭವನ್ನೂ ಇಲ್ಲಿ ಸೂಚಿಸಲಾಗಿದೆ. ಮುಸ್ಲಿಂ ಸಮುದಾಯವು ಕಾಲಾಂತರದಲ್ಲಿ ತೀವ್ರ ಅಧಃಪತನಕ್ಕೆ ಗುರಿಯಾದರೂ ಅದರ ಪುನರುದ್ಧಾರದ ವ್ಯವಸ್ಥೆ ಉಂಟಾಗುವುದೆಂಬ ಶುಭವಾರ್ತೆಯನ್ನು ಈ ವಚನದಲ್ಲಿ ಅಲ್ಲಾಹನು ನೀಡಿರುವನು.

520. ಅರ್ಥಾತ್ ಇಸ್ಲಾಮಿನ ವಿಜಯದ ಕುರಿತು ಮಹತ್ತರವಾದ ಭವಿಷ್ಯವಾಣಿಗಳ ನೆರವೇರಿಕೆಯನ್ನು.





**26. ಇದು ಅಟ್ಟಲ್ಪಟ್ಟ ಶೈತಾನನ ವಚನವೂ ಅಲ್ಲ.**

وَمَا هُوَ بِقَوْلِ شَيْطَانٍ رَجِيمٍ ﴿٢٥﴾

**27. ಹಾಗಿರುವಾಗ ನೀವೆಲ್ಲಿಗೆ ಹೋಗುವಿರಿ?**

فَأَيْنَ تَذْهَبُونَ ﴿٢٦﴾

**28. ಇದು ಸರ್ವಲೋಕಕ್ಕಿರುವ ಉದ್ಬೋಧಕವೇ ಆಗಿದೆ -**

إِنْ هُوَ إِلَّا ذِكْرٌ لِلْعَالَمِينَ ﴿٢٧﴾

**29. ನಿಮ್ಮ ಪೈಕಿ ಸತ್ಪಥದಲ್ಲಿ ಚಲಿಸಲು ಬಯಸುವವರಿಗೆ.**

لِمَنْ شَاءَ مِنْكُمْ أَنْ يَسْتَقِيمَ ﴿٢٨﴾

**30. ಸರ್ವಲೋಕಗಳ ಪ್ರಭುವಾದ ಅಲ್ಲಾಹನು ಇಚ್ಛಿಸಿದ ಹೊರತು ನಿಮ್ಮ ಇಚ್ಛೆ ಕೈಗೂಡದು.**

وَمَا تَشَاءُونَ إِلَّا أَنْ يَشَاءَ اللَّهُ رَبُّ الْعَالَمِينَ ﴿٢٩﴾

سُوْرَةُ الْاِنْفِطَارِ مَكِّيَّةٌ وَّهِيَ مَعَ الْبَسْمَلَةِ عِشْرُوْنَ اٰيَةً

## 82. ಅಲ್‌ಇನ್‌ಫಿತಾರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 20 ಆಯತ್‌ಗಳಿವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ (1)

**2.** ಆಕಾಶ ಒಡೆದು ಬಿರುಕು ಬಿಡುವಾಗ,[521]

اِذَا السَّمَآءُ انْفَطَرَتْ (2)

**3.** ನಕ್ಷತ್ರಗಳು ಚದರಿಹೋಗುವಾಗ,

وَاِذَا الْكَوَاكِبُ انْتَثَرَتْ (3)

**4.** ಸಮುದ್ರಗಳು (ಕಾಲುವೆಗಳ ಮೂಲಕ) ಹರಿಯಲ್ಪಡುವಾಗ,

وَاِذَا الْبِحَارُ فُجِّرَتْ (4)

**5.** ಸಮಾಧಿಗಳು ತೆರೆಯಲ್ಪಡುವಾಗ,

وَاِذَا الْقُبُوْرُ بُعْثِرَتْ (5)

**6.** ಪ್ರತಿಯೊಂದು ಆತ್ಮವು ತಾನು ಮಾಡಿದ ಮತ್ತು ಮಾಡದೆ ಬಿಟ್ಟ ಕೃತ್ಯಗಳ ಬಗ್ಗೆ ಅರಿಯುವುದು.

عَلِمَتْ نَفْسٌ مَّا قَدَّمَتْ وَاَخَّرَتْ (6)

**7.** ಎಲೈ ಮನುಷ್ಯನೇ, ದಯಾಮಯನಾದ ನಿನ್ನ ಪ್ರಭುವಿನ ಬಗ್ಗೆ ಧಾರ್ಷ್ಟ್ಯದಿಂದ ವರ್ತಿಸುವಂತೆ ನಿನ್ನನ್ನು ಮಾಡಿದ್ದು ಏನು?

يٰۤاَيُّهَا الْاِنْسَانُ مَا غَرَّكَ بِرَبِّكَ الْكَرِيْمِ (7)

**8.** ಅವನು ನಿನ್ನನ್ನು ಸೃಷ್ಟಿಸಿದನು; ನಿನ್ನನ್ನು ಪರಿಪೂರ್ಣಗೊಳಿಸಿದನು ಮತ್ತು ನಿನಗೆ ಶಕ್ತಿ ಸಾಮರ್ಥ್ಯವನ್ನು ನೀಡಿದನು.

الَّذِيْ خَلَقَكَ فَسَوّٰىكَ فَعَدَلَكَ (8)

**9.** ತಾನು ಇಚ್ಛಿಸಿದ ರೀತಿಯಲ್ಲಿ ಅವನು ನಿನಗೆ ರೂಪ ಕೊಟ್ಟನು.

فِيْۤ اَيِّ صُوْرَةٍ مَّا شَآءَ رَكَّبَكَ (9)

521. ಈ ಅಧ್ಯಾಯದಲ್ಲಿ ಸಹ ಹಿಂದಿನ ಅಧ್ಯಾಯದಲ್ಲಿರುವಂತೆ ಇಸ್ಲಾಮಿನ ಅವನತಿ ಮತ್ತು ಪುನರುದ್ಧಾರ ಕಾಲದ ಬಗ್ಗೆ ಸೂಚನೆಗಳಿವೆ. ಹೆಚ್ಚಿನ ವಿವರಣೆಗಾಗಿ ತಫ್‌ಸೀರ್ ಸಗೀರ್ ಮತ್ತು ತಫ್‌ಸೀರ್ ಕಬೀರ್ ನೋಡಿರಿ.





**10.** (ನೀವು ಭಾವಿಸಿಕೊಂಡಿರುವಂತೆ) ಅಲ್ಲ, ನೀವಾದರೋ ಶಿಕ್ಷೆ-ರಕ್ಷೆಯನ್ನು ಸುಳ್ಳೆಂದು ಹೇಳುತ್ತೀರಿ.

كَلَّا بَلْ تُكَذِّبُوْنَ بِالدِّيْنِ (10)

**11.** ನಿಶ್ಚಯವಾಗಿಯೂ ನಿಮ್ಮ ಮೇಲೆ ಕಾವಲುಗಾರರಿದ್ದಾರೆ.

وَاِنَّ عَلَيْكُمْ لَحٰفِظِيْنَ (11)

**12.** ಗೌರವಾನ್ವಿತರಾದ ಬರಹಗಾರರು,

كِرَامًا كَاتِبِيْنَ (12)

**13.** ನೀವು ಮಾಡುವುದನ್ನೆಲ್ಲ ಅವರು ಅರಿಯುತ್ತಾರೆ.

يَعْلَمُوْنَ مَا تَفْعَلُوْنَ (13)

**14.** ನಿಸ್ಸಂದೇಹವಾಗಿಯೂ ಸಜ್ಜನರು ಸುಖಾನುಭೂತಿಯನ್ನು ಹೊಂದುವರು.

اِنَّ الْاَبْرَارَ لَفِيْ نَعِيْمٍ (14)

**15.** ದುರ್ಜನರು ನರಕವನ್ನು ಪಡೆಯುವರು.

وَاِنَّ الْفُجَّارَ لَفِيْ جَحِيْمٍ (15)

**16.** ತೀರ್ಪಿನ ದಿನದಂದು ಅವರು ಅದರಲ್ಲಿ ಪ್ರವೇಶಿಸುವರು.

يَّصْلَوْنَهَا يَوْمَ الدِّيْنِ (16)

**17.** ಅವರು ಅದರಿಂದ ಪಾರಾಗಲಾರರು.

وَمَا هُمْ عَنْهَا بِغَآئِبِيْنَ (17)

**18.** ತೀರ್ಪು ದಿನವೇನೆಂದು ನಿನಗೇನು ಗೊತ್ತು?

وَمَاۤ اَدْرٰىكَ مَا يَوْمُ الدِّيْنِ (18)

**19.** ಪುನಃ (ನಾವು ಕೇಳುತ್ತೇವೆ) ತೀರ್ಪು ದಿನವೇನೆಂದು ನಿನಗೇನು ಗೊತ್ತು?

ثُمَّ مَاۤ اَدْرٰىكَ مَا يَوْمُ الدِّيْنِ (19)

**20.** ಅದು ಒಬ್ಬನು ಇನ್ನೊಬ್ಬನಿಗೋಸ್ಕರ ಏನೂ ಮಾಡಲಸಾಧ್ಯವಾದ ದಿನ. ಅಂದು ಎಲ್ಲ ತೀರ್ಮಾನ ಅಲ್ಲಾಹನ ಕೈಯಲ್ಲಿರುವುದು.

يَوْمَ لَا تَمْلِكُ نَفْسٌ لِّنَفْسٍ شَيْئًا ۗ وَالْاَمْرُ يَوْمَئِذٍ لِّلّٰهِ (20) ع

سُوْرَةُ الْمُطَفِّفِيْنَ مَكِّيَّةٌ وَّهِيَ مَعَ الْبَسْمَلَةِ سَبْعٌ وَّثَلٰثُوْنَ اٰيَةً

## 83. ಅಲ್‌ಮುತಫ್ಫಿಫೀನ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 37 ಆಯತ್‌ಗಳಿವೆ.

**1.** ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ۝١

**2.** ಅಳತೆಯಲ್ಲಿ ಕಮ್ಮಿ ಮಾಡಿ ಕೊಡುವವರಿಗೆ ಮಹಾನಾಶ.

وَيْلٌ لِّلْمُطَفِّفِيْنَ ۝٢

**3.** ಅವರು (ಬೇರೆ) ಜನರಿಂದ ಅಳೆದು ಪಡೆಯುವಾಗ ಪೂರ್ಣವಾಗಿ ಪಡೆಯುತ್ತಾರೆ.

الَّذِيْنَ اِذَا اكْتَالُوْا عَلَى النَّاسِ يَسْتَوْفُوْنَ ۝٣

**4.** ಆದರೆ ಅವರು ಬೇರೆಯವರಿಗೆ ಅಳೆದು ಅಥವಾ ತೂಕಮಾಡಿ ಕೊಡುವಾಗ ಕಡಿಮೆ ಮಾಡುತ್ತಾರೆ.

وَاِذَا كَالُوْهُمْ اَوْ وَّزَنُوْهُمْ يُخْسِرُوْنَ ۝٤

**5.** ಏನು, ಅವರು ಪುನರುತ್ಥಾನಗೊಳಿಸಲ್ಪಡುವರೆಂಬುದು ಅವರಿಗೆ ಗೊತ್ತಿಲ್ಲವೇ? -

اَلَا يَظُنُّ اُولٰٓئِكَ اَنَّهُمْ مَّبْعُوْثُوْنَ ۝٥

**6.** ಭಯಾನಕವಾದ ಒಂದು ದಿನ (ದಿನದ ತೀರ್ಮಾನ)ಕ್ಕೋಸ್ಕರ.

لِيَوْمٍ عَظِيْمٍ ۝٦

**7.** ಎಲ್ಲ ಜನರೂ ಸರ್ವ ಲೋಕಗಳ ಪ್ರಭುವಿನ ಸನ್ನಿಧಿಯಲ್ಲಿ (ಹಾಜರಾಗಿ) ನಿಲ್ಲುವ ದಿನ.

يَّوْمَ يَقُوْمُ النَّاسُ لِرَبِّ الْعٰلَمِيْنَ ۝٧

**8.** (ನಿಮ್ಮ ಭಾವನೆಯಂತೆ) ಅಲ್ಲ, ದುರ್ಜನರ ಕರ್ಮ ಪುಸ್ತಕ 'ಸಿಜ್ಜೀನ್'ನಲ್ಲಿದೆ.

كَلَّآ اِنَّ كِتٰبَ الْفُجَّارِ لَفِيْ سِجِّيْنٍ ۝٨

**9.** 'ಸಿಜ್ಜೀನ್' ಏನೆಂದು ನಿನಗೇನು ಗೊತ್ತು?

وَمَآ اَدْرٰىكَ مَا سِجِّيْنٌ ۝٩

**10.** ಅದು (ಎಲ್ಲ ವಿಷಯಗಳು ಅಡಕ ವಾಗಿರುವಂತೆ) ಬರೆಯಲ್ಪಟ್ಟ (ನರಕವಾಸಿಗಳ) ಒಂದು ಪುಸ್ತಕವಾಗಿದೆ.

كِتٰبٌ مَّرْقُوْمٌ ۝١٠





**11.** (ಸತ್ಯವನ್ನು) ಸುಳ್ಳಾಗಿಸುವವರಿಗೆ ಅಂದು ಮಹಾನಾಶ.

وَيْلٌ يَّوْمَئِذٍ لِّلْمُكَذِّبِيْنَ ۝١١

**12.** ಅವರು ತೀರ್ಪಿನ ದಿನವನ್ನು ಸುಳ್ಳಾಗಿಸುತ್ತಾರೆ.

الَّذِيْنَ يُكَذِّبُوْنَ بِيَوْمِ الدِّيْنِ ۝١٢

**13.** ಆಜ್ಞೋಲ್ಲಂಘಕನಾದ ಪಾಪಿ ಹೊರತು (ಬೇರಾರೂ) ಅದನ್ನು ಸುಳ್ಳಾಗಿಸುವುದಿಲ್ಲ.

وَمَا يُكَذِّبُ بِهٖٓ اِلَّا كُلُّ مُعْتَدٍ اَثِيْمٍ ۝١٣

**14.** ನಮ್ಮ ದೃಷ್ಟಾಂತಗಳನ್ನು ಅವನ ಮುಂದೆ ವಿವರಿಸುವಾಗ, 'ಪೂರ್ವಿಕರ ಕಟ್ಟು ಕಥೆಗಳು' ಎಂದು ಅವನು ಹೇಳುತ್ತಾನೆ.

اِذَا تُتْلٰى عَلَيْهِ اٰيٰتُنَا قَالَ اَسَاطِيْرُ الْاَوَّلِيْنَ ۝١٤

**15.** ಎಂದಿಗೂ ಅಲ್ಲ. ಆದರೆ ಅವರು ಗೈದ ದುಷ್ಕೃತ್ಯಗಳು ಅವರ ಹೃದಯಗಳಿಗೆ ತುಕ್ಕು ಹಿಡಿಯುವಂತೆ ಮಾಡಿವೆ.

كَلَّا بَلْ ٚ رَانَ عَلٰى قُلُوْبِهِمْ مَّا كَانُوْا يَكْسِبُوْنَ ۝١٥

**16.** (ಅವರ ಭಾವನೆ) ಎಂದಿಗೂ ಸರಿಯಲ್ಲ. ಅಂದು ತಮ್ಮ ಪ್ರಭುವಿನ ಸನ್ನಿಧಿಗೆ (ಬಾರದಂತೆ) ಅವರು ತಡೆಯಲ್ಪಡುವರು.

كَلَّآ اِنَّهُمْ عَنْ رَّبِّهِمْ يَوْمَئِذٍ لَّمَحْجُوْبُوْنَ ۝١٦

**17.** ಅನಂತರ ಅವರು ನರಕವನ್ನು ಪ್ರವೇಶಿಸುವರು.

ثُمَّ اِنَّهُمْ لَصَالُوا الْجَحِيْمِ ۝١٧

**18.** 'ಇದನ್ನೇ ನೀವು ಸುಳ್ಳೆಂದು ಹೇಳುತ್ತಿದ್ದುದು' ಎಂದು ಅವರೊಡನೆ ಹೇಳಲಾಗುವುದು.

ثُمَّ يُقَالُ هٰذَا الَّذِيْ كُنْتُمْ بِهٖ تُكَذِّبُوْنَ ۝١٨

**19.** (ನೀವು ಭಾವಿಸಿದಂತೆ) ಅಲ್ಲ. ಸಜ್ಜನರ ಕರ್ಮದಾಖಲೆ 'ಇಲ್ಲಿಯ್ಯೀನ್'ನಲ್ಲಿದೆ.

كَلَّآ اِنَّ كِتٰبَ الْاَبْرَارِ لَفِيْ عِلِّيِّيْنَ ۝١٩

**20.** 'ಇಲ್ಲಿಯ್ಯೀನ್' ಏನೆಂದು ನಿನಗೇನು ಗೊತ್ತು?

وَمَآ اَدْرٰىكَ مَا عِلِّيُّوْنَ ۝٢٠

**21.** ಅದು (ಎಲ್ಲ ವಿಷಯಗಳು ಅಡಕ ವಾಗಿರುವಂತೆ) ಬರೆಯಲ್ಪಟ್ಟ (ಸ್ವರ್ಗವಾಸಿಗಳ) ಒಂದು ಪುಸ್ತಕವಾಗಿದೆ.

كِتٰبٌ مَّرْقُوْمٌ ۝٢١

**22.** (ಅಲ್ಲಾಹನ) ಸಾಮೀಪ್ಯ ಪಡೆದವರು ಅದನ್ನು ಕಾಣುವರು.

يَّشْهَدُهُ الْمُقَرَّبُوْنَ ۝٢٢

**23. ಖಂಡಿತವಾಗಿಯೂ ಸಜ್ಜನರು ಸುಖಾನಂದದಲ್ಲಿ ಇರುವರು -**

إِنَّ الْأَبْرَارَ لَفِي نَعِيمٍ ﴿٢٢﴾

**24. ಪರ್ಯಂಕಗಳಲ್ಲಿ** ಪವಡಿಸಿ **ವೀಕ್ಷಿಸುತ್ತಾ.**

عَلَى الْأَرَائِكِ يَنظُرُونَ ﴿٢٣﴾

**25. ಅವರ ಮುಖಗಳಲ್ಲಿ ಸುಖಾನುಭೂತಿಯ ಪ್ರಸನ್ನತೆಯನ್ನು ನೀನು ಕಾಣುವೆ.**

تَعْرِفُ فِي وُجُوهِهِمْ نَضْرَةَ النَّعِيمِ ﴿٢٤﴾

**26. ಅವರಿಗೆ ಮೊಹರು ಹಾಕಲ್ಪಟ್ಟ ಪರಿಶುದ್ಧ ಪಾನೀಯವನ್ನು ಕುಡಿಸಲಾಗುವುದು.**

يُسْقَوْنَ مِن رَّحِيقٍ مَّخْتُومٍ ﴿٢٥﴾

**27. ಅದರ ಮೊಹರು ಕಸ್ತೂರಿಯಾಗಿದೆ. ಪೈಪೋಟಿ ನಡೆಸುವವರು ಇದಕ್ಕೋಸ್ಕರ ಪೈಪೋಟಿ ನಡೆಸಲಿ.**

خِتَامُهُ مِسْكٌ ۚ وَفِي ذَٰلِكَ فَلْيَتَنَافَسِ الْمُتَنَافِسُونَ ﴿٢٦﴾

**28. ಅದರ ಮಿಶ್ರಣ ತಸ್ನೀಮ್‌ನಿಂದಾಗಿದೆ.**[522]

وَمِزَاجُهُ مِن تَسْنِيمٍ ﴿٢٧﴾

**29. ಅದೊಂದು ಒರತೆಯಾಗಿದೆ. ದೇವ ಸಾಮೀಪ್ಯವನ್ನು ಪಡೆದವರು ಅದರಿಂದ ಕುಡಿಯುವರು.**

عَيْنًا يَشْرَبُ بِهَا الْمُقَرَّبُونَ ﴿٢٨﴾

**30. ಪಾಪಿಗಳಾದ ಜನರು ಸತ್ಯವಿಶ್ವಾಸಿಗಳನ್ನು ನೋಡಿ ಅಪಹಾಸ್ಯ ಮಾಡುತ್ತಿದ್ದರು.**

إِنَّ الَّذِينَ أَجْرَمُوا كَانُوا مِنَ الَّذِينَ آمَنُوا يَضْحَكُونَ ﴿٢٩﴾

**31. ಅವರ** (ಅವಿಶ್ವಾಸಿಗಳ) **ಸಮೀಪದಲ್ಲಿ ಇವರು** (ಸತ್ಯವಿಶ್ವಾಸಿಗಳು) **ನಡೆದು ಹೋಗುವಾಗ ಅವರು ಪರಸ್ಪರ** (ಪರಿಹಾಸಭಾವದಿಂದ) **ಕಣ್ಣು ಸನ್ನೆ ಮಾಡುತ್ತಿದ್ದರು.**

وَإِذَا مَرُّوا بِهِمْ يَتَغَامَزُونَ ﴿٣٠﴾

**32. ಅವರು** (ಅವಿಶ್ವಾಸಿಗಳು) **ತಮ್ಮ ಕುಟುಂಬದವರ ಬಳಿಗೆ ಮರಳುವಾಗ ವಿಜಯೋನ್ಮತ್ತರಾಗಿ ಹೋಗುತ್ತಿದ್ದರು.**

وَإِذَا انقَلَبُوا إِلَىٰ أَهْلِهِمُ انقَلَبُوا فَكِهِينَ ﴿٣١﴾

522. ತಸ್ನೀಮ್ ಎಂಬ ಶಬ್ದದ ಅರ್ಥ ಉತ್ಕೃಷ್ಟವಾದುದು ಎಂದಾಗಿದೆ. ತಸ್ನೀಮ್ ಮಿಶ್ರಿತ ಪಾನೀಯವನ್ನು ಸ್ವರ್ಗವಾಸಿಗಳಿಗೆ ನೀಡಲಾಗುವುದು ಎಂಬುದರ ತಾತ್ಪರ್ಯ ಅವರಿಗೆ ಅತ್ಯುತ್ಕೃಷ್ಟವಾದ ಸ್ಥಾನಮಾನ ಲಭಿಸುವುದು ಎಂದಾಗಿದೆ.





**33. ಅವರು** (ಅವಿಶ್ವಾಸಿಗಳು) **ಇವರನ್ನು ಕಂಡರೆ, 'ನಿಜವಾಗಿಯೂ ಇವರು ಹಾದಿಗೆಟ್ಟವರು' ಎಂದು** (ಪರಸ್ಪರ) **ಹೇಳುತ್ತಿದ್ದರು.**

وَإِذَا رَأَوْهُمْ قَالُوا إِنَّ هَٰؤُلَاءِ لَضَالُّونَ ﴿٣٢﴾

**34. ಆದರೆ ಅವರನ್ನು ಇವರ ಮೇಲ್ನೋಟಗಾರರನ್ನಾಗಿ ಕಳುಹಿಸಲಾಗಿರಲಿಲ್ಲ.**

وَمَا أُرْسِلُوا عَلَيْهِمْ حَافِظِينَ ﴿٣٣﴾

**35. ಆದ್ದರಿಂದ ಇಂದು** (ಪರಲೋಕದಲ್ಲಿ) **ವಿಶ್ವಾಸಿಗಳು ಅವಿಶ್ವಾಸಿಗಳನ್ನು ನೋಡಿ ನಗಾಡುವರು-**

فَالْيَوْمَ الَّذِينَ آمَنُوا مِنَ الْكُفَّارِ يَضْحَكُونَ ﴿٣٤﴾

**36. ಪರ್ಯಂಕಗಳಲ್ಲಿ** ಪವಡಿಸಿ **ವೀಕ್ಷಿಸುತ್ತಾ.**

عَلَى الْأَرَائِكِ يَنظُرُونَ ﴿٣٥﴾

**37. ಏನು, ಅವಿಶ್ವಾಸಿಗಳ ದುಷ್ಕೃತ್ಯಗಳಿಗೆ ತಕ್ಕುದಾದ ಪ್ರತಿಫಲ ಸಿಗಲಿಲ್ಲವೇ?**

هَلْ ثُوِّبَ الْكُفَّارُ مَا كَانُوا يَفْعَلُونَ ﴿٣٦﴾

سُوْرَةُ الْاِنْشِقَاقِ مَكِّيَّةٌ وَّهِيَ مَعَ الْبَسْمَلَةِ سِتٌّ وَّعِشْرُوْنَ اٰيَةً

## 84. ಅಲ್‌ಇನ್‌ಶಿಖಾಖ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 26 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಆಕಾಶ ಸೀಳಲ್ಪಡುವಾಗ,**

اِذَا السَّمَآءُ انْشَقَّتْ ﴿٢﴾

**3. ಹಾಗೂ ಅದು ತನ್ನ ಪ್ರಭುವಿನ ಆಜ್ಞೆಗೆ ಕಿವಿಗೊಡುವಾಗ - ಅದು ಅದರ ಕರ್ತವ್ಯವಾಗಿದೆ.**

وَاَذِنَتْ لِرَبِّهَا وَحُقَّتْ ﴿٣﴾

**4. ಭೂಮಿ ವಿಕಾಸಗೊಳಿಸಲ್ಪಡುವಾಗ,**

وَاِذَا الْاَرْضُ مُدَّتْ ﴿٤﴾

**5. ಹಾಗೂ ಅದರೊಳಗಿರುವುದನ್ನು ಅದು ಹೊರಗೆ ತಳ್ಳಿ ಅದು ಬರಿದಾಗುವಾಗ,**

وَاَلْقَتْ مَا فِيْهَا وَتَخَلَّتْ ﴿٥﴾

**6. ಹಾಗೂ ಅದು ತನ್ನ ಪ್ರಭುವಿನ ಆಜ್ಞೆಗೆ ಕಿವಿಗೊಡುವಾಗ - ಅದು ಅದರ ಕರ್ತವ್ಯವಾಗಿದೆ.**

وَاَذِنَتْ لِرَبِّهَا وَحُقَّتْ ﴿٦﴾

**7. ಎಲೈ ಮನುಷ್ಯನೇ, ನೀನು ನಿನ್ನ ಪ್ರಭುವಿನ ಬಳಿಗೆ ಅತಿ ಪ್ರಯತ್ನಪಟ್ಟು ತಲಪುವವನೂ ಅವನನ್ನು ಭೇಟಿಯಾಗುವವನೂ ಆಗಿರುವೆ.**

يٰۤاَيُّهَا الْاِنْسَانُ اِنَّكَ كَادِحٌ اِلٰى رَبِّكَ كَدْحًا فَمُلٰقِيْهِ ﴿٧﴾

**8. ಆಗ ಯಾರ ಕರ್ಮಪುಸ್ತಕವನ್ನು ಅವನ ಬಲಗೈಯಲ್ಲಿ ನೀಡಲಾಗುವುದೋ,**

فَاَمَّا مَنْ اُوْتِيَ كِتٰبَهٗ بِيَمِيْنِهٖ ﴿٨﴾

**9. ಅವನ ವಿಚಾರಣೆ ಬೇಗನೆ ಸುಲಭವಾಗಿ ಮುಗಿಯುವುದು.**

فَسَوْفَ يُحَاسَبُ حِسَابًا يَّسِيْرًا ﴿٩﴾

**10. ಅವನು ತನ್ನ ಕುಟುಂಬದವರ ಬಳಿಗೆ ಸಂತೋಷದಿಂದ ಮರಳುವನು.**

وَّيَنْقَلِبُ اِلٰۤى اَهْلِهٖ مَسْرُوْرًا ﴿١٠﴾





**11. ಆದರೆ ಯಾರ ಕರ್ಮಪುಸ್ತಕ ಅವನ ಬೆನ್ನ ಹಿಂದಿನಿಂದ ನೀಡಲಾಗುವುದೋ,**

وَاَمَّا مَنْ اُوْتِيَ كِتٰبَهٗ وَرَآءَ ظَهْرِهٖ ﴿١١﴾

**12. ಅವನು** (ತನ್ನ) **ನಾಶಕ್ಕೋಸ್ಕರ ಯಾಚಿಸುವನು.**

فَسَوْفَ يَدْعُوْا ثُبُوْرًا ﴿١٢﴾

**13. ಜ್ವಲಿಸುವ ಅಗ್ನಿಯಲ್ಲಿ ಅವನು ದಹಿಸಲ್ಪಡುವನು.**

وَّيَصْلٰى سَعِيْرًا ﴿١٣﴾

**14.** (ಹಿಂದೆ ಐಹಿಕ ಜೀವನದಲ್ಲಿ) **ಅವನಾದರೋ ತನ್ನ ಕುಟುಂಬದವರೊಂದಿಗೆ ಸಂತೋಷದಿಂದ ಇದ್ದನು.**

اِنَّهٗ كَانَ فِيْۤ اَهْلِهٖ مَسْرُوْرًا ﴿١٤﴾

**15. ತಾನೆಂದಿಗೂ** (ಅಲ್ಲಾಹನೆಡೆಗೆ) **ಮರಳಲಾರೆನೆಂದು ಅವನು ಭಾವಿಸಿದ್ದನು.**

اِنَّهٗ ظَنَّ اَنْ لَّنْ يَّحُوْرَ ﴿١٥﴾

**16. ಹೌದು, ಅವನ ಪ್ರಭು ನಿಸ್ಸಂದೇಹವಾಗಿಯೂ ಅವನನ್ನು ವೀಕ್ಷಿಸುತ್ತಿದ್ದನು.**

بَلٰۤى ۚ اِنَّ رَبَّهٗ كَانَ بِهٖ بَصِيْرًا ﴿١٦﴾

**17.** (ಅವನ ಭಾವನೆ) **ಸರಿಯಲ್ಲ, ಮುಸ್ಸಂಜೆಯ ಬೆಳಕನ್ನು ನಾನು ಸಾಕ್ಷಿ ಮಾಡುತ್ತೇನೆ.**

فَلَاۤ اُقْسِمُ بِالشَّفَقِ ﴿١٧﴾

**18. ಹಾಗೂ ರಾತ್ರಿಯನ್ನು ಮತ್ತು ಅದು ಮರೆಮಾಡುವ ಎಲ್ಲವನ್ನು ಸಹ** (ನಾನು ಸಾಕ್ಷಿ ಮಾಡುತ್ತೇನೆ).

وَالَّيْلِ وَمَا وَسَقَ ﴿١٨﴾

**19. ಪೂರ್ಣಿಮೆಯ ಚಂದ್ರನನ್ನೂ** (ನಾನು ಸಾಕ್ಷಿ ಮಾಡುತ್ತೇನೆ).

وَالْقَمَرِ اِذَا اتَّسَقَ ﴿١٩﴾

**20. ಖಂಡಿತವಾಗಿಯೂ ನೀವು ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಹಂತಹಂತವಾಗಿ ದಾಟಿ ಹೋಗುವಿರಿ.**

لَتَرْكَبُنَّ طَبَقًا عَنْ طَبَقٍ ﴿٢٠﴾

**21. ಆದರೆ ಅವರಿಗೇನಾಗಿದೆ? ಅವರು ನಂಬುವುದಿಲ್ಲವಲ್ಲ!**

فَمَا لَهُمْ لَا يُؤْمِنُوْنَ ﴿٢١﴾

**22. ಅವರ ಮುಂದೆ ಖುರ್‌ಆನನ್ನು ವಾಚಿಸುವಾಗ ಅವರು ಸಾಷ್ಟಾಂಗವೆರಗುವುದಿಲ್ಲ.**

وَاِذَا قُرِئَ عَلَيْهِمُ الْقُرْاٰنُ لَا يَسْجُدُوْنَ ﴿٢٢﴾

**23. ಬದಲಾಗಿ, ಅವಿಶ್ವಾಸಿಗಳಾದರೋ ಅದನ್ನು ಸುಳ್ಳಾಗಿಸುತ್ತಾರೆ.**

بَلِ الَّذِيْنَ كَفَرُوْا يُكَذِّبُوْنَ ﴿٢٣﴾

**24. ಅವರು** (ತಮ್ಮ ಮನಸ್ಸಿನಲ್ಲಿ) **ಬಚ್ಚಿಡುವುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.**

وَاللّٰهُ اَعْلَمُ بِمَا يُوْعُوْنَ ﴿٢٤﴾

**25. ಆದ್ದರಿಂದ ಅವರಿಗೆ ಯಾತನಾಮಯವಾದ ಶಿಕ್ಷೆಯ ಬಗ್ಗೆ ಮುನ್ನೆಚ್ಚರಿಕೆ ನೀಡು.**

فَبَشِّرْهُمْ بِعَذَابٍ اَلِيْمٍ ﴿٢٥﴾

**26. ಆದರೆ ಸತ್ಯವಿಶ್ವಾಸವನ್ನು ಹೊಂದಿ ಸತ್ಕರ್ಮ ನಿರತರಾಗಿರುವವರಿಗೆ ಅಂತ್ಯವಿಲ್ಲದ ಪ್ರತಿಫಲವಿದೆ.**

اِلَّا الَّذِيْنَ اٰمَنُوْا وَعَمِلُوا الصّٰلِحٰتِ لَهُمْ
اَجْرٌ غَيْرُ مَمْنُوْنٍ ﴿٢٦﴾ ع

سُوْرَةُ الْبُرُوْجِ مَكِّيَّةٌ وَّهِيَ مَعَ الْبَسْمَلَةِ ثَلٰثٌ وَّعِشْرُوْنَ اٰيَةً

## 85. ಅಲ್‌ಬುರೂಜ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 23 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ನಕ್ಷತ್ರ ರಾಶಿಗಳಿಂದ ಕೂಡಿದ ಆಕಾಶದಾಣೆ.**

وَالسَّمَآءِ ذَاتِ الْبُرُوْجِ ﴿٢﴾

**3. ವಾಗ್ದಾನ ನೀಡಲ್ಪಟ್ಟ ದಿನದಾಣೆ.**

وَالْيَوْمِ الْمَوْعُوْدِ ﴿٣﴾

**4. ಸಾಕ್ಷಿಯಾಣೆ ಮತ್ತು ಸಾಕ್ಷಿ ಹೇಳಲ್ಪಡುವವನಾಣೆ.**

وَشَاهِدٍ وَّمَشْهُوْدٍ ﴿٤﴾

**5. ಕಂದಕದ ಜನರು ನಾಶಹೊಂದಲಿ -**

قُتِلَ اَصْحٰبُ الْاُخْدُوْدِ ﴿٥﴾

**6. ಇಂಧನದಿಂದ ಬೆಂಕಿಯನ್ನು ಪ್ರಜ್ವಲಗೊಳಿಸುವವರು.**

النَّارِ ذَاتِ الْوَقُوْدِ ﴿٦﴾

**7. ಅವರು ಅದರ ಸಮೀಪ ಕುಳಿತು ಕೊಂಡಿರುವಾಗ,**

اِذْ هُمْ عَلَيْهَا قُعُوْدٌ ﴿٧﴾

**8. ಸತ್ಯವಿಶ್ವಾಸಿಗಳಿಗೆ ಅವರು ಏನು ಮಾಡಿದ್ದಾರೆಂಬುದಕ್ಕೆ ಅವರೇ ಸಾಕ್ಷಿಗಳಾಗಿದ್ದಾರೆ.**

وَّهُمْ عَلٰى مَا يَفْعَلُوْنَ بِالْمُؤْمِنِيْنَ شُهُوْدٌ ﴿٨﴾

**9. ಪ್ರತಾಪಶಾಲಿಯೂ ಸ್ತುತ್ಯರ್ಹನೂ ಆದ ಅಲ್ಲಾಹನನ್ನು ಅವರು ನಂಬುತ್ತಾರೆ ಎಂಬುದಕ್ಕೆ ಹೊರತು** (ಬೇರಾವುದಕ್ಕೂ) **ಅವರು ಅವರನ್ನು ದ್ವೇಷಿಸಿರಲಿಲ್ಲ.**

وَمَا نَقَمُوْا مِنْهُمْ اِلَّآ اَنْ يُّؤْمِنُوْا بِاللّٰهِ الْعَزِيْزِ الْحَمِيْدِ ﴿٩﴾





**10. ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ಅವನಿಗಿದೆ. ಅಲ್ಲಾಹನು ಸರ್ವಸಂಗತಿಗಳಿಗೂ ಸಾಕ್ಷಿಯಾಗಿದ್ದಾನೆ.**

الَّذِيْ لَهٗ مُلْكُ السَّمٰوٰتِ وَالْاَرْضِ ؕ وَاللّٰهُ عَلٰى كُلِّ شَيْءٍ شَهِيْدٌ ﴿١٠﴾

**11. ಯಾರು ಸತ್ಯವಿಶ್ವಾಸಿಗಳನ್ನೂ ಸತ್ಯವಿಶ್ವಾಸಿನಿಯರನ್ನೂ ಪೀಡಿಸುತ್ತಾರೋ ಹಾಗೂ ಆ ಬಗ್ಗೆ ಪಶ್ಚಾತ್ತಾಪಪಡುವುದಿಲ್ಲವೋ ಅವರಿಗೆ ಖಂಡಿತವಾಗಿಯೂ ನರಕ ಶಿಕ್ಷೆ ಇದೆ. ಅವರಿಗೆ ಉರಿಯುವ ಶಿಕ್ಷೆಯೂ ಇದೆ.**

اِنَّ الَّذِيْنَ فَتَنُوا الْمُؤْمِنِيْنَ وَالْمُؤْمِنٰتِ ثُمَّ لَمْ يَتُوْبُوْا فَلَهُمْ عَذَابُ جَهَنَّمَ وَلَهُمْ عَذَابُ الْحَرِيْقِ ﴿١١﴾

**12. ಆದರೆ ಯಾರು ಸತ್ಯವಿಶ್ವಾಸ ಹೊಂದಿ ಸತ್ಕರ್ಮನಿರತರಾಗಿರುವರೋ, ಅವರಿಗೆ ಕೆಳಬದಿಯಲ್ಲಿ ನದಿಗಳು ಹರಿಯುವ ಸ್ವರ್ಗೀಯ ತೋಟಗಳಿವೆ. ಅದು ಮಹಾ ವಿಜಯವಾಗಿದೆ.**

اِنَّ الَّذِيْنَ اٰمَنُوْا وَعَمِلُوا الصّٰلِحٰتِ لَهُمْ جَنّٰتٌ تَجْرِيْ مِنْ تَحْتِهَا الْاَنْهٰرُ ؕ ذٰلِكَ الْفَوْزُ الْكَبِيْرُ ﴿١٢﴾

**13. ನಿಸ್ಸಂದೇಹವಾಗಿಯೂ ನಿನ್ನ ಪ್ರಭುವಿನ ಹಿಡಿತ ಕಠಿಣವಾದುದು.**

اِنَّ بَطْشَ رَبِّكَ لَشَدِيْدٌ ﴿١٣﴾

**14. ಸೃಷ್ಟಿಯನ್ನು ಆರಂಭಿಸುವವನೂ ಅದನ್ನು ಪುನರಾವರ್ತನೆಗೊಳಿಸುವವನೂ ಅವನೇ.**

اِنَّهٗ هُوَ يُبْدِئُ وَيُعِيْدُ ﴿١٤﴾

**15. ಅವನು ಅತ್ಯಂತ ಕ್ಷಮಾಶೀಲನೂ ಅತಿಯಾಗಿ ಪ್ರೀತಿಸುವವನೂ ಆಗಿದ್ದಾನೆ -**

وَهُوَ الْغَفُوْرُ الْوَدُوْدُ ﴿١٥﴾

**16. ಸಿಂಹಾಸನದ ಒಡೆಯ, ಗೌರವದ ಅಧಿಪತಿ.**

ذُو الْعَرْشِ الْمَجِيْدُ ﴿١٦﴾

**17.** (ಅವನು) **ತಾನಿಚ್ಛಿಸುವುದನ್ನು ಕಾರ್ಯಗತಗೊಳಿಸುವವನು.**

فَعَّالٌ لِّمَا يُرِيْدُ ﴿١٧﴾

**18. ಆ ಸೈನ್ಯಗಳ ವೃತ್ತಾಂತ ನಿನಗೆ ತಲಪಿಲ್ಲವೇ?**

هَلْ اَتٰىكَ حَدِيْثُ الْجُنُوْدِ ﴿١٨﴾

**19. ಫಿರ್‌ಔನ್ ಮತ್ತು ಸಮೂದ್** (ವೃತ್ತಾಂತ).

فِرْعَوْنَ وَثَمُوْدَ ﴿١٩﴾

**20. ನಿಜವೇನೆಂದರೆ, ಅವಿಶ್ವಾಸಿಗಳು** (ಸತ್ಯವನ್ನು) **ತಿರಸ್ಕರಿಸುವುದರಲ್ಲೇ ನಿರತರಾಗಿರುತ್ತಾರೆ.**

بَلِ الَّذِيْنَ كَفَرُوْا فِيْ تَكْذِيْبٍ ﴿٢٠﴾

**21. ಅಲ್ಲಾಹನು ಅವರನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿಯುತ್ತಾನೆ.**

وَّاللّٰهُ مِنْ وَّرَاۤىِٕهِمْ مُّحِيْطٌ ۝٢١

**22. ಇದಾದರೋ ಮಹತ್ವಪೂರ್ಣವಾದ ಖುರ್‌ಆನ್ ಆಗಿದೆ.**

بَلْ هُوَ قُرْاٰنٌ مَّجِيْدٌ ۝٢٢

**23. ಸುರಕ್ಷಿತವಾಗಿರುವ ಫಲಕದಲ್ಲಿ.**[523]

فِيْ لَوْحٍ مَّحْفُوْظٍ ۝٢٣

523. ಅಂದರೆ, ಪವಿತ್ರ ಖುರ್‌ಆನ್ ಲೋಕಾಂತ್ಯದ ವರೆಗೂ ಯಾವುದೇ ಮಾರ್ಪಾಟಿಗೂ ಗುರಿಯಾಗದೆ ಸುರಕ್ಷಿತವಾಗಿರುವುದೆಂದು ತಾತ್ಪರ್ಯ.

سُوْرَةُ الطَّارِقِ مَكِّيَّةٌ وَّهِيَ مَعَ الْبَسْمَلَةِ ثَمَانِيَ عَشَرَةَ اٰيَةً

## 86. ಅತ್ತಾರಿಖ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 18 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ١

**2. ಆಕಾಶದಾಣೆ ಮತ್ತು ರಾತ್ರಿಯಲ್ಲಿ ಪ್ರಕಟಗೊಳ್ಳುವುದರ** ಆಣೆ.

وَالسَّمَآءِ وَالطَّارِقِ ١

**3. ರಾತ್ರಿಯಲ್ಲಿ ಪ್ರಕಟಗೊಳ್ಳುವುದೇನೆಂದು ನಿನಗೇನು ಗೊತ್ತು?**

وَمَآ اَدْرٰىكَ مَا الطَّارِقُ ٢

**4. ಅದು ಪ್ರಜ್ವಲಿಸುವ ನಕ್ಷತ್ರವಾಗಿದೆ.**

النَّجْمُ الثَّاقِبُ ٣

**5. ಒಬ್ಬ ಮೇಲ್ನೋಟಗಾರನು ನೇಮಿಸಲ್ಪಡದ ಯಾವುದೇ ಆತ್ಮವಿಲ್ಲ.**

اِنْ كُلُّ نَفْسٍ لَّمَّا عَلَيْهَا حَافِظٌ ٤

**6. ಆದ್ದರಿಂದ ತಾನು ಯಾವುದರಿಂದ ಸೃಷ್ಟಿಸಲ್ಪಟ್ಟದ್ದೆಂದು ಮನುಷ್ಯನು** (ಚಿಂತಿಸಿ) **ನೋಡಲಿ.**

فَلْيَنْظُرِ الْاِنْسَانُ مِمَّ خُلِقَ ٥

**7. ಚಿಮ್ಮುವ ಒಂದು ದ್ರವದಿಂದ ಅವನು ಸೃಷ್ಟಿಸಲ್ಪಟ್ಟಿದ್ದಾನೆ.**

خُلِقَ مِنْ مَّآءٍ دَافِقٍ ٦

**8. ಅದು ಬೆನ್ನೆಲುಬು ಮತ್ತುಪಕ್ಕೆಲುಬುಗಳ ಮಧ್ಯದಿಂದ ಹೊರಹೊರಡುತ್ತದೆ.**

يَّخْرُجُ مِنْ بَيْنِ الصُّلْبِ وَالتَّرَآئِبِ ٧

**9. ಖಂಡಿತವಾಗಿಯೂ ಅವನನ್ನು** (ಪುನರುಜ್ಜೀವನಗೊಳಿಸಿ) **ಮರಳಿ ತರಲು ಅವನು** (ಅಲ್ಲಾಹನು) **ಶಕ್ತನು -**

اِنَّهٗ عَلٰى رَجْعِهٖ لَقَادِرٌ ٨

**10. ರಹಸ್ಯಗಳು ಬಹಿರಂಗಗೊಳಿಸಲ್ಪಡುವ ದಿನದಂದು.**

يَوْمَ تُبْلَى السَّرَآئِرُ ٩





**11. ಆಗ ಅವನಿಗೆ ಶಕ್ತಿ ಸಾಮರ್ಥ್ಯವಾಗಲಿ ಸಹಾಯಕನಾಗಲಿ ಇರಲಿಕ್ಕಿಲ್ಲ.**

فَمَا لَهٗ مِنْ قُوَّةٍ وَّلَا نَاصِرٍ ١٠

**12. ಪದೇ ಪದೇ ಮಳೆಯನ್ನು ಸುರಿಸುವ ಮೋಡಗಳಾಣೆ.**

وَالسَّمَآءِ ذَاتِ الرَّجْعِ ١١

**13.** (ಸಸ್ಯಾದಿಗಳ ಮೊಳೆಯುವಿಕೆಯಿಂದ) **ಬಿರಿಯುವ ಭೂಮಿಯಾಣೆ.**

وَالْاَرْضِ ذَاتِ الصَّدْعِ ١٢

**14. ದಿಟವಾಗಿಯೂ ಇದೊಂದು ನಿರ್ಣಾಯಕ ವಚನವಾಗಿದೆ.**

اِنَّهٗ لَقَوْلٌ فَصْلٌ ١٣

**15. ಇದು ವ್ಯರ್ಥ ಮಾತಲ್ಲ.**

وَّمَا هُوَ بِالْهَزْلِ ١٤

**16. ಖಂಡಿತವಾಗಿಯೂ ಅವರೊಂದು ತಂತ್ರ ಹೂಡುತ್ತಾರೆ.**

اِنَّهُمْ يَكِيْدُوْنَ كَيْدًا ١٥

**17. ನಾನು ಸಹ ಒಂದು ತಂತ್ರ ಹೂಡುತ್ತೇನೆ.**

وَّاَكِيْدُ كَيْدًا ١٦

**18. ಆದ್ದರಿಂದ ಅವಿಶ್ವಾಸಿಗಳಿಗೆ ಕಾಲಾವಕಾಶ ನೀಡು.** (ಹೌದು) **ಅವರಿಗೆ ಸ್ವಲ್ಪ ಕಾಲಾವಕಾಶ ಕೊಡು.**

فَمَهِّلِ الْكٰفِرِيْنَ اَمْهِلْهُمْ رُوَيْدًا ١٧

سُورَةُ الْأَعْلَىٰ مَكِّيَّةٌ وَّهِيَ مَعَ الْبَسْمَلَةِ عِشْرُونَ آيَةً

## 87. ಅಲ್‌ಅಅ್‌ಲಾ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 20 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** بِسْمِ اللّٰهِ الرَّحْمٰنِ الرَّحِيْمِ ①

**2. ಸರ್ವೋನ್ನತನಾದ ನಿನ್ನ ಪ್ರಭುವಿನ ನಾಮವನ್ನು ಪ್ರಕೀರ್ತನ ಮಾಡು.** سَبِّحِ اسْمَ رَبِّكَ الْاَعْلَى ②

**3. ಅವನು ಸೃಷ್ಟಿಸುತ್ತಾನೆ ಮತ್ತು ಪರಿಪೂರ್ಣ ಗೊಳಿಸುತ್ತಾನೆ.** الَّذِيْ خَلَقَ فَسَوّٰى ③

**4. ಅವನು ರೂಪ ಕೊಡುತ್ತಾನೆ ಮತ್ತು ಮಾರ್ಗ ದರ್ಶನ ನೀಡುತ್ತಾನೆ.** وَالَّذِيْ قَدَّرَ فَهَدٰى ④

**5. ಅವನೇ ಮೇವನ್ನು ಹೊರಡಿಸುತ್ತಾನೆ.** وَالَّذِيْٓ اَخْرَجَ الْمَرْعٰى ⑤

**6. ಅನಂತರ ಅದನ್ನು ಕಪ್ಪು ಕಸಕಡ್ಡಿಗಳನ್ನಾಗಿ ಮಾಡುತ್ತಾನೆ.** فَجَعَلَهٗ غُثَاۗءً اَحْوٰى ⑥

**7. ನಾವು ನಿನಗೆ** (ಖುರ್‌ಆನನ್ನು) **ಕಲಿಸುವೆವು; ನೀನು ಅದನ್ನು ಮರೆತುಬಿಡಲಾರೆ -** سَنُقْرِئُكَ فَلَا تَنْسٰٓى ⑦

**8. ಅಲ್ಲಾಹನು ಇಚ್ಛಿಸುವುದರ ಹೊರತು.**[524] **ನಿಸ್ಸಂದೇಹವಾಗಿಯೂ ಬಹಿರಂಗವನ್ನೂ ಅಂತರಂಗ ವನ್ನೂ ಅವನು ಬಲ್ಲನು.** اِلَّا مَا شَاۗءَ اللّٰهُ ۭ اِنَّهٗ يَعْلَمُ الْجَهْرَ وَمَا يَخْفٰى ⑧

**9. ನಾವು ನಿನಗೆ** (ಎಲ್ಲಾ) **ಸೌಕರ್ಯಗಳನ್ನೂ ಸುಗಮಗೊಳಿಸಿ ಕೊಡುವೆವು.** وَنُيَسِّرُكَ لِلْيُسْرٰى ⑨

524. ಕಾಲಾಂತರದಲ್ಲಿ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರ ಅನುಯಾಯಿಗಳು ಖುರ್‌ಆನಿನ ಅಧ್ಯಾಪನಗಳನ್ನು ಮರೆತುಬಿಡುವ ಸಾಧ್ಯತೆಯನ್ನು ಇಲ್ಲಿ ಸೂಚಿಸಲಾಗಿದೆ.





**10. ಆದ್ದರಿಂದ ನೀನು ಉಪದೇಶಿಸು. ಖಂಡಿತ ವಾಗಿಯೂ ಉಪದೇಶ ಫಲ ನೀಡುವುದು.** فَذَكِّرْ اِنْ نَّفَعَتِ الذِّكْرٰى ⑩

**11. ಭಯಪಡುವವನು ಉಪದೇಶವನ್ನು ಸ್ವೀಕರಿಸು ವನು.** سَيَذَّكَّرُ مَنْ يَّخْشٰى ⑪

**12. ಆದರೆ ಪರಮ ಪಾಪಿಯು ಅದರಿಂದ ಮುಖ ತಿರುಗಿಸುವನು.** وَيَتَجَنَّبُهَا الْاَشْقَى ⑫

**13. ಅವನು ಕಠಿಣವಾದ ನರಕಾಗ್ನಿಯನ್ನು ಪ್ರವೇಶಿಸುವನು.** الَّذِيْ يَصْلَى النَّارَ الْكُبْرٰى ⑬

**14. ಅಲ್ಲಿ ಅವನು ಸಾಯಲಿಕ್ಕೂ ಇಲ್ಲ, ಬದುಕಲಿಕ್ಕೂ ಇಲ್ಲ.** ثُمَّ لَا يَمُوْتُ فِيْهَا وَلَا يَحْيٰى ⑭

**15. ಯಾರು ಪರಿಶುದ್ಧನಾಗುತ್ತಾನೋ ಅವನು ಜಯ ಹೊಂದುವನು -** قَدْ اَفْلَحَ مَنْ تَزَكّٰى ⑮

**16.** (ಅವನು) **ತನ್ನ ಪ್ರಭುವಿನ ನಾಮಸ್ಮರಣೆ ಮಾಡುವವನು ಮತ್ತು ಪ್ರಾರ್ಥನೆ ಸಲ್ಲಿಸುವವನು.** وَذَكَرَ اسْمَ رَبِّهٖ فَصَلّٰى ⑯

**17. ಆದರೆ ನೀವು ಐಹಿಕ ಜೀವನಕ್ಕೆ ಆದ್ಯತೆ ನೀಡುತ್ತೀರಿ.** بَلْ تُؤْثِرُوْنَ الْحَيٰوةَ الدُّنْيَا ⑰

**18. ವಾಸ್ತವದಲ್ಲಿ, ಪಾರತ್ರಿಕವು ಉತ್ತಮವಾದುದು ಮತ್ತು ಶಾಶ್ವತವಾದುದು.** وَالْاٰخِرَةُ خَيْرٌ وَّاَبْقٰى ⑱

**19. ನಿಜವಾಗಿಯೂ ಇವೆಲ್ಲ ಪೂರ್ವಿಕ ಗ್ರಂಥ ಗಳಲ್ಲಿವೆ -** اِنَّ هٰذَا لَفِي الصُّحُفِ الْاُوْلٰى ⑲

**20. ಇಬ್‌ರಾಹೀಂ ಮತ್ತು ಮೂಸಾರ ಗ್ರಂಥ ಗಳಲ್ಲಿ.** صُحُفِ اِبْرٰهِيْمَ وَمُوْسٰى ⑳

سُورَةُ الْغَاشِيَةِ مَكِّيَّةٌ وَهِيَ مَعَ الْبَسْمَلَةِ سَبْعٌ وَعِشْرُونَ آيَةً

# 88. ಅಲ್‌ಗಾಶಿಯಃ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 27 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಸರ್ವತ್ರ ವ್ಯಾಪಿಸುವ ಆ** ವಿಪತ್ತಿನ **ಬಗ್ಗೆ ನಿನಗೆ ವಿವರ ತಲಪಿದೆಯೇ?**

هَلْ اَتٰىكَ حَدِيْثُ الْغَاشِيَةِ ﴿٢﴾

**3. ಆ ದಿನ ಕೆಲವು ಮುಖಗಳು ಜೋಲು ಬೀಳುವುವು.**

وُجُوْهٌ يَّوْمَئِذٍ خَاشِعَةٌ ﴿٣﴾

**4.** (ಅವು) **ಕಷ್ಟಪಟ್ಟು ಬಳಲಿ ಬೆಂಡಾಗಿರುವುವು.**

عَامِلَةٌ نَّاصِبَةٌ ﴿٤﴾

**5.** (ಅವು) **ನರಕಾಗ್ನಿಯನ್ನು ಪ್ರವೇಶಿಸುವುವು.**

تَصْلٰى نَارًا حَامِيَةً ﴿٥﴾

**6. ಕುದಿಯುವ ಬುಗ್ಗೆಯಿಂದ ಅವುಗಳಿಗೆ ಕುಡಿಸಲಾಗುವುದು.**

تُسْقٰى مِنْ عَيْنٍ اٰنِيَةٍ ﴿٦﴾

**7. ಕಹಿಯಾದ ಒಣಗಿದ ಮುಳ್ಳುಗಿಡಗಳ ಹೊರತು ಅವರಿಗೆ ಆಹಾರವಾಗಿ ಬೇರೇನೂ ದೊರಕಲಾರದು.**

لَيْسَ لَهُمْ طَعَامٌ اِلَّا مِنْ ضَرِيْعٍ ﴿٧﴾

**8. ಅದು ಅವರನ್ನು ಪುಷ್ಟಿಗೊಳಿಸಲಾರದು; ಅವರ ಹಸಿವನ್ನು ತಣಿಸಲಾರದು.**

لَّا يُسْمِنُ وَلَا يُغْنِيْ مِنْ جُوْعٍ ﴿٨﴾

**9. ಅಂದು** (ಬೇರೆ) **ಕೆಲವು ಮುಖಗಳು ಹರ್ಷೋಲ್ಲಾಸದಿಂದಿರುವುವು.**

وُجُوْهٌ يَّوْمَئِذٍ نَّاعِمَةٌ ﴿٩﴾

**10. ಅವುಗಳ ದುಡಿಮೆಯಿಂದ ಅವು ಸಂತೃಪ್ತವಾಗಿರುವುವು -**

لِّسَعْيِهَا رَاضِيَةٌ ﴿١٠﴾





**11. ಉನ್ನತವಾದ ಸ್ವರ್ಗದಲ್ಲಿ.**

فِيْ جَنَّةٍ عَالِيَةٍ ﴿١١﴾

**12. ಅಲ್ಲಿ ಅವರು ವ್ಯರ್ಥ ಮಾತುಗಳನ್ನು ಆಲಿಸಲಾರರು.**

لَّا تَسْمَعُ فِيْهَا لَاغِيَةً ﴿١٢﴾

**13. ಅಲ್ಲೊಂದು ಹರಿಯುವ ಒರತೆ ಇದೆ.**

فِيْهَا عَيْنٌ جَارِيَةٌ ﴿١٣﴾

**14. ಅಲ್ಲಿ ಉನ್ನತವಾದ ಮಂಚಗಳೂ ಇವೆ.**

فِيْهَا سُرُرٌ مَّرْفُوْعَةٌ ﴿١٤﴾

**15. ಸಿದ್ಧಪಡಿಸಿಟ್ಟ ಪಾನಪಾತ್ರೆಗಳೂ ಇವೆ.**

وَّاَكْوَابٌ مَّوْضُوْعَةٌ ﴿١٥﴾

**16. ಸಾಲುಸಾಲಾಗಿಟ್ಟ ತಲೆದಿಂಬುಗಳೂ ಇವೆ.**

وَّنَمَارِقُ مَصْفُوْفَةٌ ﴿١٦﴾

**17. ಸುಂದರವಾಗಿ ಹಾಸಿದ ರತ್ನಗಂಬಳಿಗಳೂ ಇವೆ.**

وَّزَرَابِيُّ مَبْثُوْثَةٌ ﴿١٧﴾

**18. ಅವರು ಒಂಟೆಯ[525] ಕಡೆಗೆ ನೋಡುವುದಿಲ್ಲವೇ?- ಅದು ಹೇಗೆ ಸೃಷ್ಟಿಸಲ್ಪಟ್ಟಿದೆಯೆಂದು.**

اَفَلَا يَنْظُرُوْنَ اِلَى الْاِبِلِ كَيْفَ خُلِقَتْ ﴿١٨﴾

**19. ಆಕಾಶ ಹೇಗೆ ಉನ್ನತಗೊಳಿಸಲ್ಪಟ್ಟಿದೆಯೆಂದೂ?**

وَاِلَى السَّمَآءِ كَيْفَ رُفِعَتْ ﴿١٩﴾

**20. ಪರ್ವತಗಳು ಹೇಗೆ ಇರಿಸಲ್ಪಟ್ಟಿವೆಯೆಂದೂ?**

وَاِلَى الْجِبَالِ كَيْفَ نُصِبَتْ ﴿٢٠﴾

**21. ಭೂಮಿ ಹೇಗೆ ವಿಶಾಲಗೊಳಿಸಲ್ಪಟ್ಟಿದೆಯೆಂದೂ** (ಅವರು ನೋಡುವುದಿಲ್ಲವೇ)**?**

وَاِلَى الْاَرْضِ كَيْفَ سُطِحَتْ ﴿٢١﴾

**22. ಆದ್ದರಿಂದ ನೀನು ಉಪದೇಶಿಸು; ನೀನಾದರೋ ಕೇವಲ ಉಪದೇಶಕನಾಗಿರುವೆ.**

فَذَكِّرْ اِنَّمَآ اَنْتَ مُذَكِّرٌ ﴿٢٢﴾

**23. ನೀನು ಅವರ ಮೇಲೆ ಕಾವಲುಗಾರನಲ್ಲ.**

لَسْتَ عَلَيْهِمْ بِمُصَيْطِرٍ ﴿٢٣﴾

**24. ಆದರೆ ಯಾರಾದರೂ ಮುಖ ತಿರುಗಿಸಿ ನಿರಾಕರಿಸಿದರೆ,**

اِلَّا مَنْ تَوَلّٰى وَكَفَرَ ﴿٢٤﴾

525. 'ಇಬಿಲ್' ಎಂದರೆ ಮೋಡಗಳು ಎಂದು ಸಹ ಅರ್ಥವಿದೆ (ಮುಫ್ರದಾತ್).

فَيُعَذِّبُهُ اللّٰهُ الْعَذَابَ الْاَكْبَرَ ۝٢٥

**25. ಅಲ್ಲಾಹನು ಅವನನ್ನು ಕಠೋರ ಶಿಕ್ಷೆಗೆ ಗುರಿಪಡಿಸುವನು.**

اِنَّ اِلَيْنَآ اِيَابَهُمْ ۝٢٦

**26. ನಿಶ್ಚಯವಾಗಿಯೂ ಅವರ ಮರಳಿಕೆ ನಮ್ಮ ಬಳಿಗೆಯೇ ಆಗಿದೆ.**

ثُمَّ اِنَّ عَلَيْنَا حِسَابَهُمْ ۝٢٧

**27. ಮತ್ತೆ ಅವರ ವಿಚಾರಣೆ ಮಾಡುವ ಹೊಣೆಗಾರಿಕೆ ಖಂಡಿತವಾಗಿಯೂ ನಮ್ಮದೇ ಆಗಿದೆ.**

سُوْرَةُ الْفَجْرِ مَكِّيَّةٌ وَّهِيَ مَعَ الْبَسْمَلَةِ اِحْدٰى وَ ثَلٰثُوْنَ اٰيَةً

## 89. ಅಲ್‌ಫಜ್‌ರ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 31 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಪ್ರಭಾತದಾಣೆ.**[526]

وَالْفَجْرِ ﴿٢﴾

**3. ಹತ್ತು ರಾತ್ರಿಗಳಾಣೆ.**[527]

وَلَيَالٍ عَشْرٍ ﴿٣﴾

**4. ಜೋಡಿ ಮತ್ತು ಒಂಟಿಯಾಣೆ.**[528]

وَّالشَّفْعِ وَالْوَتْرِ ﴿٤﴾

**5. ಕೊನೆಗೊಳ್ಳುತ್ತಿರುವ ರಾತ್ರಿಯಾಣೆ.**[529]

وَالَّيْلِ اِذَا يَسْرِ ﴿٥﴾

526. ಹಝ್ರುತ್ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ಮದೀನಕ್ಕೆ ಹಿಜ್‌ರತ್ ಹೋಗುವುದನ್ನು ಇಲ್ಲಿ ಪ್ರಭಾತವೆಂದು ಸೂಚಿಸಲಾಗಿದೆ. ಇಸ್ಲಾಂ ಧರ್ಮದ ಶೋಚನೀಯ ಅಧಃಪತನದ ನಂತರ ಇಮಾಂ ಮಹ್‌ದೀ ಅಲೈಹಿಸ್ಸಲಾಮರ ಆವಿರ್ಭಾವದೊಂದಿಗೆ ಉಂಟಾಗುವ ಇಸ್ಲಾಮಿನ ಪುನರುತ್ಥಾನದ ಬಗ್ಗೆ ಸಹ ಇಲ್ಲಿ ಸೂಚನೆಯಿದೆ.

527. ಈ ಅಧ್ಯಾಯ ಅವತೀರ್ಣವಾದ ಬಳಿಕ ಪೈಗಂಬರರು (ಸ) ಹತ್ತು ವರ್ಷಕಾಲ ಮಕ್ಕದಲ್ಲಿ ವಾಸಿಸಿದ್ದರು. ಅದು ಬಹಳ ಕಷ್ಟ ಕಾರ್ಪಣ್ಯದ ಕಾಲವಾಗಿತ್ತು. ಆ ಹತ್ತು ವರ್ಷಗಳನ್ನು ಹತ್ತು ರಾತ್ರಿಗಳೆಂದು ಇಲ್ಲಿ ಬಣ್ಣಿಸಲಾಗಿದೆ. ಅನಂತರ ಪೈಗಂಬರರು (ಸ) ಹಿಜ್‌ರತ್ ಹೋದರು. ಹತ್ತು ರಾತ್ರಿಗಳೆಂಬುದು ಇಸ್ಲಾಮಿನ ಶೋಚನೀಯ ಅಧಃಪತನದ ಹತ್ತು ಶತಮಾನಗಳನ್ನು ಸಹ ಸೂಚಿಸುತ್ತದೆ. ಈ ಹತ್ತು ಶತಮಾನಗಳು ಹಝ್ರುತ್ ಮುಹಮ್ಮದ್ ಪೈಗಂಬರರ (ಸ) ನಂತರ ಅತ್ಯುತ್ತಮ ಶತಮಾನಗಳೆಂದು ಹೇಳಲಾದ ಮೂರು ಶತಮಾನಗಳ ಬಳಿಕ ಪ್ರಾರಂಭವಾದುವು.

528. ಹಿಜ್‌ರತ್ ವೇಳೆಯಲ್ಲಿ ಪೈಗಂಬರರ (ಸ) ಜೊತೆಯಲ್ಲಿ ಹಝ್ರುತ್ ಅಬೂಬಕರ್ ಸಿದ್ದೀಖ್ (ರ) ಸಹ ಇದ್ದರು. ಹಾಗೆ ಅವರು ಒಂದು ಜೋಡಿಯಾದರು. ಏಕನಾದ ಅಲ್ಲಾಹನು ಅವರ ಮಧ್ಯೆ ಇದ್ದನು. ಹಾಗೆ ಜೋಡಿ ಮತ್ತು ಒಂಟಿ ಅನ್ವರ್ಥಕವಾಯಿತು. ಈ ವಚನದ ಮತ್ತೊಂದು ಅರ್ಥವೇನೆಂದರೆ ಜೋಡಿ ಎಂಬುದು ಹಝ್ರುತ್ ಮುಹಮ್ಮದ್ ಪೈಗಂಬರ್ (ಸ) ಮತ್ತು ಅವರ ಪ್ರತಿಪುರುಷರಾದ ಹಝ್ರುತ್ ಇಮಾಂ ಮಹ್‌ದಿ (ಅ) ಹಾಗೂ ಒಂಟಿ ಎಂಬುದು ಇಸ್ಲಾಂ ಧರ್ಮದ ಸಂರಕ್ಷಕನಾದ ಅಲ್ಲಾಹ್ ಎಂದಾಗಿದೆ. (ವಿವರಣೆಗಾಗಿ ತಫ್‌ಸೀರ್ ಕಬೀರ್ ಸಂಪುಟ 8 ನೋಡಿರಿ.)

529. ಹಿಜ್‌ರತ್‌ನ ನಂತರ ಮದೀನದಲ್ಲಿ ಸಹ ತಾತ್ಕಾಲಿಕವಾಗಿ ಮುಸ್ಲಿಮರಿಗೆ ಕಷ್ಟಕಾರ್ಪಣ್ಯ ಬರಲಿದೆಯೆಂದೂ ಆದರೆ ಅದು ಬೇಗನೇ ನಿವಾರಿಸಲ್ಪಡುವುದೆಂದೂ ಇಲ್ಲಿ ಭವಿಷ್ಯನುಡಿಯಲಾಗಿದೆ.

ಈ ವಚನದ ಇನ್ನೊಂದು ಅರ್ಥವೇನೆಂದರೆ, ಇಸ್ಲಾಂ ಧರ್ಮದ ಪುನರುದ್ಧಾರಕ ಹಝ್ರುತ್ ಇಮಾಂ ಮಹ್‌ದೀ ಅಲೈಹಿಸ್ಸಲಾಮರ ಆವಿರ್ಭಾವದ ಬಳಿಕ ಸ್ವಲ್ಪ ಕಾಲದ ವರೆಗೆ ಸಹಜವಾಗಿಯೇ ಕೆಲವು ಅಡ್ಡಿ ಆತಂಕಗಳೂ ವಿರೋಧವೂ ಉಂಟಾಗುವುದಾದರೂ ಬೇಗನೇ ಅವು ನಿವಾರಿಸಲ್ಪಟ್ಟು ಇಸ್ಲಾಂ ಧರ್ಮಕ್ಕೆ ಶೋಭಾಯಮಾನವಾದ ವಿಜಯ ಸಿದ್ಧಿಸುವುದೆಂದಾಗಿದೆ.





**6. ಬುದ್ಧಿಶಾಲಿಗಳಿಗೆ ಇದರಲ್ಲಿ ಪ್ರಮಾಣವೇನೂ ಇಲ್ಲವೇ?**

هَلْ فِيْ ذٰلِكَ قَسَمٌ لِّذِيْ حِجْرٍ ﴿٦﴾

**7. ನಿನ್ನ ಪ್ರಭು ಆದ್ ಸಮುದಾಯದೊಡನೆ ಹೇಗೆ ವರ್ತಿಸಿದನೆಂದು ನೀನು ಕಂಡಿಲ್ಲವೇ?-**

اَلَمْ تَرَ كَيْفَ فَعَلَ رَبُّكَ بِعَادٍ ﴿٧﴾

**8. ಉನ್ನತವಾದ ಕಟ್ಟಡಗಳ ಯಜಮಾನರಾದ ಇರಮ್ ಗೋತ್ರದೊಡನೆ.**

اِرَمَ ذَاتِ الْعِمَادِ ﴿٨﴾

**9. ಅವುಗಳಿಗೆ ಸಮಾನವಾದ** ಕಟ್ಟಡಗಳು **ಆ ನಾಡುಗಳಲ್ಲಿ ಎಂದೂ ನಿರ್ಮಿಸಲ್ಪಟ್ಟಿರಲಿಲ್ಲ.**

الَّتِيْ لَمْ يُخْلَقْ مِثْلُهَا فِي الْبِلَادِ ﴿٩﴾

**10. ಕಣಿವೆಗಳಲ್ಲಿ ಬಂಡೆಗಳನ್ನು ಕೊರೆದು** (ಮನೆ ನಿರ್ಮಿಸುತ್ತಿದ್ದ) **ಸಮೂದ್ ಗೋತ್ರದೊಡನೆ**

وَثَمُوْدَ الَّذِيْنَ جَابُوا الصَّخْرَ بِالْوَادِ ﴿١٠﴾

**11. ಹಾಗೂ ವ್ಯಾಪಕವಾದ ಸೇನಾಶಿಬಿರಗಳ ಅಧಿಪತಿಯಾದ ಫಿರ್‌ಔನನೊಡನೆ** (ನಿನ್ನ ಪ್ರಭು ಹೇಗೆ ವರ್ತಿಸಿದವನೆಂದು ನೀನು ಕಂಡಿಲ್ಲವೇ)?

وَفِرْعَوْنَ ذِي الْاَوْتَادِ ﴿١١﴾

**12. ಆ ನಾಡುಗಳಲ್ಲಿ ಅವರು ಹದ್ದುಮೀರಿ ವರ್ತಿಸಿದ್ದರು.**

الَّذِيْنَ طَغَوْا فِي الْبِلَادِ ﴿١٢﴾

**13. ಹಾಗೆ ಅಲ್ಲಿ ಅವರು ಬಹಳ ಅಶಾಂತಿ ಹರಡಿದ್ದರು.**

فَاَكْثَرُوْا فِيْهَا الْفَسَادَ ﴿١٣﴾

**14. ತತ್ಫಲವಾಗಿ ನಿನ್ನ ಪ್ರಭು ಅವರ ಮೇಲೆ ಶಿಕ್ಷೆಯ ಚಾಟಿಯೇಟು ಪ್ರಯೋಗಿಸಿದನು.**

فَصَبَّ عَلَيْهِمْ رَبُّكَ سَوْطَ عَذَابٍ ﴿١٤﴾

**15. ಖಂಡಿತವಾಗಿಯೂ ನಿನ್ನ ಪ್ರಭು ಎದುರು ನೋಡುತ್ತಾ ಕಾಯುತ್ತಿದ್ದಾನೆ.**

اِنَّ رَبَّكَ لَبِالْمِرْصَادِ ﴿١٥﴾

**16. ಮನುಷ್ಯನಾದರೋ, ಅವನ ಸ್ಥಿತಿಯು, ತನ್ನ ಪ್ರಭು ಅವನನ್ನು ಪರೀಕ್ಷೆಗೊಳಪಡಿಸಿ, ಅವನನ್ನು ಗೌರವಿಸಿ, ಅವನಿಗೆ ಅನುಗ್ರಹಗಳನ್ನು ಪ್ರದಾನ ಮಾಡಿದರೆ, 'ನನ್ನ ಪ್ರಭು ನನ್ನನ್ನು ಗೌರವಿಸಿದ್ದಾನೆ' ಎಂದು ಅವನು ಹೇಳುತ್ತಾನೆ.**

فَاَمَّا الْاِنْسَانُ اِذَا مَا ابْتَلٰىهُ رَبُّهٗ فَاَكْرَمَهٗ وَنَعَّمَهٗ ۙ فَيَقُوْلُ رَبِّيْٓ اَكْرَمَنِ ﴿١٦﴾

**17. ಆದರೆ ಅವನು** (ಅಲ್ಲಾಹನು) **ಅವನನ್ನು** (ಮನುಷ್ಯನನ್ನು) **ಪರೀಕ್ಷೆಗೊಳಪಡಿಸಿ ಅವನ ಆಹಾರವನ್ನು ಅವನಿಗೆ ಕಡಿತಗೊಳಿಸಿದರೆ 'ನನ್ನ ಪ್ರಭು ನನ್ನನ್ನು ಅಪಮಾನಿಸಿದ್ದಾನೆ' ಎಂದು ಅವನು ಹೇಳುತ್ತಾನೆ.**

وَاَمَّآ اِذَا مَا ابْتَلٰىهُ فَقَدَرَ عَلَيْهِ رِزْقَهٗ ۙ فَيَقُوْلُ رَبِّيْٓ اَهَانَنِ ﴿١٧﴾

**18. ಅಲ್ಲ** (ನಿಮ್ಮ ಭಾವನೆ ಸರಿಯಲ್ಲ). **ನೀವಾದರೋ ಅನಾಥರನ್ನು ಗೌರವಿಸುವುದಿಲ್ಲ.**

كَلَّا بَلْ لَّا تُكْرِمُوْنَ الْيَتِيْمَ ﴿١٨﴾

**19. ನಿರ್ಗತಿಕರಿಗೆ ಆಹಾರ ನೀಡುವರೆ ನೀವು ಪರಸ್ಪರ ಪ್ರೇರೇಪಿಸುವುದಿಲ್ಲ.**

وَلَا تَحٰٓضُّوْنَ عَلٰى طَعَامِ الْمِسْكِيْنِ ﴿١٩﴾

**20. ವಾರೀಸು ಸೊತ್ತನ್ನೆಲ್ಲ ನೀವು ಕಬಳಿಸಿ ಬಿಡುತ್ತೀರಿ.**

وَتَاْكُلُوْنَ التُّرَاثَ اَكْلًا لَّمًّا ﴿٢٠﴾

**21. ನೀವು ಸಂಪತ್ತನ್ನು ಅಮಿತವಾಗಿ ಪ್ರೀತಿಸುತ್ತೀರಿ.**

وَّتُحِبُّوْنَ الْمَالَ حُبًّا جَمًّا ﴿٢١﴾

**22. ಆಲಿಸಿರಿ, ಭೂಮಿ ಛಿನ್ನ ಭಿನ್ನವಾಗಿ ನುಚ್ಚು ನೂರಾಗಿಸಲ್ಪಡುವಾಗ,**

كَلَّآ اِذَا دُكَّتِ الْاَرْضُ دَكًّا دَكًّا ﴿٢٢﴾

**23. ನಿನ್ನ ಪ್ರಭು ಮತ್ತು ಸಾಲುಸಾಲಾಗಿ ದಿವ್ಯದೂತರು ಆಗಮಿಸುವಾಗ,**

وَّجَآءَ رَبُّكَ وَالْمَلَكُ صَفًّا صَفًّا ﴿٢٣﴾

**24. ಅಂದು ನರಕ ಸಮೀಪಗೊಳಿಸಲ್ಪಡುವುದು. ಆ ದಿನ ಮನುಷ್ಯನು** (ಉಪದೇಶವನ್ನು) **ಸ್ಮರಿಸುವನು. ಆದರೆ ಅಂದು ಅವನು ಸ್ಮರಿಸುವುದರಿಂದ ಫಲವೇನು?**

وَجِايْٓءَ يَوْمَىِٕذٍۢ بِجَهَنَّمَ ۙ يَوْمَىِٕذٍ يَّتَذَكَّرُ الْاِنْسَانُ وَاَنّٰى لَهُ الذِّكْرٰى ﴿٢٤﴾

**25. ಆಗ ಅವನು, 'ಅಕಟಾ! ನಾನು ನನ್ನ ಜೀವನಕ್ಕಾಗಿ** (ಏನಾದರೂ) **ಮೊದಲೇ ಮಾಡಿರುತ್ತಿದ್ದರೆ ಎಷ್ಟು ಚೆನ್ನಾಗಿತ್ತು!' ಎಂದು ಪ್ರಲಾಪಿಸುವನು.**

يَقُوْلُ يٰلَيْتَنِيْ قَدَّمْتُ لِحَيَاتِيْ ﴿٢٥﴾

**26. ಆ ದಿನ ಅವನು** (ಅಲ್ಲಾಹನು) **ಶಿಕ್ಷಿಸುವ ಹಾಗೆ ಬೇರ್‍ಯಾರೂ ಶಿಕ್ಷಿಸಲಾರ.**

فَيَوْمَىِٕذٍ لَّا يُعَذِّبُ عَذَابَهٗٓ اَحَدٌ ﴿٢٦﴾

**27. ಅವನು ಬಂಧಿಸುವಂತೆ ಇನ್ನಾರೂ ಬಂಧಿಸಲಾರ.**

وَّلَا يُوْثِقُ وَثَاقَهٗٓ اَحَدٌ ﴿٢٧﴾





**28. ಸಜ್ಜನರೊಡನೆ** (ಅಲ್ಲಾಹನು ಹೇಳುವನು:) **'ಎಲೈ ಶಾಂತಿ ಪಡೆದ ಆತ್ಮವೇ,**

يٰٓاَيَّتُهَا النَّفْسُ الْمُطْمَىِٕنَّةُ ﴿٢٨﴾

**29. 'ನೀನು ಅಲ್ಲಾಹನ ಕಡೆಗೆ ಮರಳು - ನೀನು ಅವನಲ್ಲಿ ಸಂತೃಪ್ತನೂ ಅವನು ನಿನ್ನಲ್ಲಿ ಸಂತೃಪ್ತನೂ ಆದ ಸ್ಥಿತಿಯಲ್ಲಿ.**

ارْجِعِيْٓ اِلٰى رَبِّكِ رَاضِيَةً مَّرْضِيَّةً ﴿٢٩﴾

**30. 'ನನ್ನ ಭಕ್ತದಾಸರೊಂದಿಗೆ ಸೇರಿಕೋ.**

فَادْخُلِيْ فِيْ عِبٰدِيْ ﴿٣٠﴾

**31. ಹಾಗೂ ನನ್ನ ಸ್ವರ್ಗದಲ್ಲಿ ಪ್ರವೇಶಿಸಿಕೋ.'**

وَادْخُلِيْ جَنَّتِيْ ﴿٣١﴾

سُوْرَةُ الْبَلَدِ مَكِّيَّةٌ وَّهِيَ مَعَ الْبَسْمَلَةِ اِحْدٰى وَ عِشْرُوْنَ اٰيَةً

## 90. ಅಲ್‌ಬಲದ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 21 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಅಲ್ಲ** (ನಿಮ್ಮ ಭಾವನೆ ಸರಿಯಲ್ಲ). **ನಾನು ಈ ಪಟ್ಟಣದ ಪ್ರಮಾಣ ಮಾಡುತ್ತೇನೆ.**

لَآ اُقْسِمُ بِهٰذَا الْبَلَدِ ﴿٢﴾

**3. ನೀನು ಈ ಪಟ್ಟಣಕ್ಕೆ** (ವಿಜಯಿಯಾಗಿ ಮರಳಿ) **ಬಂದಿಳಿಯುವೆ.**[530]

وَاَنْتَ حِلٌّۢ بِهٰذَا الْبَلَدِ ﴿٣﴾

**4. ಪಿತ ಮತ್ತು ಪುತ್ರನ ಆಣೆ**[531]**.**

وَوَالِدٍ وَّمَا وَلَدَ ﴿٤﴾

**5. ನಿಸ್ಸಂಶಯವಾಗಿಯೂ ನಾವು ಮನುಷ್ಯನನ್ನು ಕಷ್ಟವನ್ನು** *ಎದುರಿಸಲಿಕ್ಕಾಗಿ* **ಸೃಷ್ಟಿಸಿದ್ದೇವೆ.**

لَقَدْ خَلَقْنَا الْاِنْسَانَ فِيْ كَبَدٍ ﴿٥﴾

**6. ಏನು, ತನಗಿಂತ ಶಕ್ತನು ಯಾರೂ ಇಲ್ಲವೆಂದು ಅವನು ಭಾವಿಸುತ್ತಾನೆಯೇ?**

اَيَحْسَبُ اَنْ لَّنْ يَّقْدِرَ عَلَيْهِ اَحَدٌ ﴿٦﴾

**7. 'ಅಪಾರ ಸಂಪತ್ತನ್ನು ನಾನು ವ್ಯಯ ಮಾಡಿದೆ' ಎಂದು ಅವನು ಹೇಳುತ್ತಾನೆ.**

يَقُوْلُ اَهْلَكْتُ مَالًا لُّبَدًا ﴿٧﴾

**8. ತನ್ನನ್ನು ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೇನು?**

اَيَحْسَبُ اَنْ لَّمْ يَرَهٗۤ اَحَدٌ ﴿٨﴾

**9. ನಾವು ಅವನಿಗೆ ಎರಡು ಕಣ್ಣುಗಳನ್ನು ದಯಪಾಲಿಸಲಿಲ್ಲವೇ?**

اَلَمْ نَجْعَلْ لَّهٗ عَيْنَيْنِ ﴿٩﴾

530. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ) ರಿಗೆ ಮಕ್ಕ ಪಟ್ಟಣವನ್ನು ತೊರೆದು ಹೋಗುವ ಸಂದರ್ಭ ಬರಬಹುದೆಂದೂ ಆದರೆ ಅವರು ವಿಜಯಿಯಾಗಿ ಮರಳುವರೆಂದೂ ಅಲ್ಲಾಹನು ಇಲ್ಲಿ ಸೂಚಿಸಿದ್ದಾನೆ.

531. ಮಕ್ಕ ಪಟ್ಟಣದ ಸ್ಥಾಪಕರಾದ ಹಝ್ರತ್ ಇಬ್‌ರಾಹೀಂ (ಅಲೈಹಿಸ್ಸಲಾಂ) ಮತ್ತು ಹಝ್ರತ್ ಇಸ್ಮಾಈಲ್ (ಅ).





**10. ಮತ್ತು ನಾಲಗೆಯನ್ನೂ ಎರಡು ತುಟಿಗಳನ್ನೂ** (ನೀಡಲಿಲ್ಲವೇ)?

وَلِسَانًا وَّشَفَتَيْنِ ﴿١٠﴾

**11.** (ಭೌತಿಕ ಮತ್ತು ಆಧ್ಯಾತ್ಮಿಕವಾದ) **ಎರಡು ಉನ್ನತ ಮಾರ್ಗಗಳನ್ನೂ ನಾವು ಅವನಿಗೆ ತೋರಿಸಿದ್ದೇವೆ.**

وَهَدَيْنٰهُ النَّجْدَيْنِ ﴿١١﴾

**12. ಆದರೂ ಅವನು ಆ 'ಅಖಬಃ'ವನ್ನು ಪಡೆಯಲು ಪ್ರಯತ್ನಿಸಲಿಲ್ಲ.**

فَلَا اقْتَحَمَ الْعَقَبَةَ ﴿١٢﴾

**13. ಆ 'ಅಖಬಃ' ಏನೆಂದು ನಿನಗೆ ಗೊತ್ತಿದೆಯೇ?**

وَمَآ اَدْرٰىكَ مَا الْعَقَبَةُ ﴿١٣﴾

**14. ಗುಲಾಮನನ್ನು ಬಿಡುಗಡೆ ಮಾಡುವುದು.**

فَكُّ رَقَبَةٍ ﴿١٤﴾

**15. ಅಥವಾ ಹಸಿವೆಯ ದಿನದಲ್ಲಿ ಅನ್ನ ನೀಡುವುದು-**

اَوْ اِطْعٰمٌ فِيْ يَوْمٍ ذِيْ مَسْغَبَةٍ ﴿١٥﴾

**16. ನಿಕಟ ಸಂಬಂಧಿಯಾದ ಅನಾಥನಿಗೆ -**

يَّتِيْمًا ذَا مَقْرَبَةٍ ﴿١٦﴾

**17. ಅಥವಾ ಅತಿ ನಿಕೃಷ್ಟ ಸ್ಥಿತಿಯಲ್ಲಿರುವ ಬಡವನಿಗೆ.**

اَوْ مِسْكِيْنًا ذَا مَتْرَبَةٍ ﴿١٧﴾

**18. ಹಾಗೂ ಅವನು ಸತ್ಯವಿಶ್ವಾಸ ಹೊಂದಿದವರಲ್ಲಿ ಸೇರಿದವನಾಗಿರಬೇಕು; ಅವನು ಸಹನೆದೋರಲು ಪರಸ್ಪರ ಉಪದೇಶಿಸುವ ಮತ್ತು ಕರುಣೆದೋರಲು ಅನ್ಯೋನ್ಯ ಬೋಧಿಸುವ** *ಜನರಲ್ಲಿ ಸೇರಿದವನೂ ಆಗಿರಬೇಕು.*

ثُمَّ كَانَ مِنَ الَّذِيْنَ اٰمَنُوْا وَتَوَاصَوْا بِالصَّبْرِ وَتَوَاصَوْا بِالْمَرْحَمَةِ ﴿١٨﴾

**19. ಅವರೇ ಬಲಪಕ್ಷದವರು.**

اُولٰٓئِكَ اَصْحٰبُ الْمَيْمَنَةِ ﴿١٩﴾

**20. ಆದರೆ, ಯಾರು ನಮ್ಮ ದೃಷ್ಟಾಂತಗಳನ್ನು ನಿರಾಕರಿಸುತ್ತಾರೋ ಅವರೇ ಎಡಪಕ್ಷದವರು.**

وَالَّذِيْنَ كَفَرُوْا بِاٰيٰتِنَا هُمْ اَصْحٰبُ الْمَشْئَمَةِ ﴿٢٠﴾

**21. ಅವರ ಮೇಲೆ ನರಕಾಗ್ನಿ ಆವರಿಸಿಕೊಂಡಿರುವುದು.**

عَلَيْهِمْ نَارٌ مُّؤْصَدَةٌ ﴿٢١﴾

سُورَةُ الشَّمْسِ مَكِّيَّةٌ وَّهِيَ مَعَ الْبَسْمَلَةِ سِتَّ عَشْرَةَ اٰيَةً

# 91. ಅಶ್ಶಮ್ಸ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 16 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಸೂರ್ಯ**[531] **ಮತ್ತು** (ಪೂರ್ವಾಹ್ನದ) **ಅದರ ಪ್ರಕಾಶದಾಣೆ.**

وَالشَّمْسِ وَضُحٰهَا ②

**3. ಚಂದ್ರನಾಣೆ**[532] **ಅದು ಅದನ್ನು** (ಸೂರ್ಯನನ್ನು) **ಅನುಗಮಿಸಿ ಬರುವಾಗ.**

وَالْقَمَرِ اِذَا تَلٰىهَا ③

**4. ಹಗಲಿನಾಣೆ - ಅದರ** (ಸೂರ್ಯನ) **ವೈಭವವನ್ನು ಅದು ಪ್ರಕಟಪಡಿಸುವಾಗ.**

وَالنَّهَارِ اِذَا جَلّٰىهَا ④

**5. ರಾತ್ರಿಯಾಣೆ - ಅದು ಅದನ್ನು** (ಸೂರ್ಯನನ್ನು) **ಮರೆಮಾಡುವಾಗ.**

وَالَّيْلِ اِذَا يَغْشٰىهَا ⑤

**6. ಆಕಾಶ ಮತ್ತು ಅದರ ನಿರ್ಮಾಣದಾಣೆ.**

وَالسَّمَآءِ وَمَا بَنٰىهَا ⑥

**7. ಭೂಮಿ ಮತ್ತು ಅದರ ವಿಸ್ತಾರದಾಣೆ.**

وَالْاَرْضِ وَمَا طَحٰىهَا ⑦

**8. ಮನುಷ್ಯಾತ್ಮ ಮತ್ತು ಅದರ ಪರಿಪೂರ್ಣತೆಯಾಣೆ.**

وَنَفْسٍ وَّمَا سَوّٰىهَا ⑧

**9. ಅವನು** (ಅಲ್ಲಾಹನು) **ಅದಕ್ಕೆ** (ಆತ್ಮಕ್ಕೆ) **ಅದರ ದುಷ್ಟತೆ ಮತ್ತು ಸಾತ್ವಿಕತೆಯ ಬಗ್ಗೆ ತಿಳಿಯಪಡಿಸಿದನು.**

فَاَلْهَمَهَا فُجُوْرَهَا وَتَقْوٰىهَا ⑨

531. ಇಲ್ಲಿ ಸೂರ್ಯ ಎಂಬುದರ ಆಧ್ಯಾತ್ಮಿಕ ಅರ್ಥ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ).

532. ಮುಹಮ್ಮದ್ ಪೈಗಂಬರ್ (ಸ)ರ ಅನುಗಾಮಿಯಾಗಿ ಮುಸ್ಲಿಂ ಸಮುದಾಯದಲ್ಲಿ ಆಗಮಿಸಲಿದ್ದ ಮಹಾನ್ ಆಧ್ಯಾತ್ಮಿಕ ಸುಧಾರಕ - ಇಮಾಂ ಮಹ್‌ದಿ (ಅ).





**10. ಅದನ್ನು** (ಆತ್ಮವನ್ನು) **ಪರಿಶುದ್ಧವಾಗಿರಿಸಿದವನು ಖಂಡಿತವಾಗಿಯೂ ಜಯಗಳಿಸಿದನು.**

قَدْ اَفْلَحَ مَنْ زَكّٰىهَا ⑩

**11. ಅದನ್ನು ಮಣ್ಣುಗೂಡಿಸಿದವನು ಖಂಡಿತವಾಗಿಯೂ ಪರಾಜಿತನಾದನು.**

وَقَدْ خَابَ مَنْ دَسّٰىهَا ⑪

**12. ಸಮೂದ್ ಗೋತ್ರ ತನ್ನ ಧಾರ್ಷ್ಟ್ಯದಿಂದ** (ಸತ್ಯವನ್ನು) **ಸುಳ್ಳಾಗಿಸಿತು.**

كَذَّبَتْ ثَمُوْدُ بِطَغْوٰىهَآ ⑫

**13. ಅವರಲ್ಲಿ ಅತಿ ದುಷ್ಟನು** (ಪ್ರವಾದಿಗೆ ವಿರುದ್ಧವಾಗಿ) **ಎದ್ದು ನಿಂತನು.**

اِذِ انْۢبَعَثَ اَشْقٰىهَا ⑬

**14. ಆಗ ಅಲ್ಲಾಹನ ಸಂದೇಶವಾಹಕ**[533] **ಅವರೊಡನೆ ಹೇಳಿದರು: 'ಅಲ್ಲಾಹನ ಒಂಟೆ-** (ಅದನ್ನು ಅದರಷ್ಟಕ್ಕೆ ಬಿಟ್ಟು ಬಿಡಿರಿ.) **ಮತ್ತು ಅದರ ಜಲಪಾನ-** (ಅದಕ್ಕೆ ತಡೆಯೊಡ್ಡಬೇಡಿರಿ)**'.**

فَقَالَ لَهُمْ رَسُوْلُ اللّٰهِ نَاقَةَ اللّٰهِ وَسُقْيٰهَا ⑭

**15. ಆದರೆ ಅವರು ಅವರ ಮಾತನ್ನು ಧಿಕ್ಕರಿಸಿದರು. ಹಾಗೆ ಅವರು ಅದರ ಹಿಂಗಾಲ ಸ್ನಾಯುರಜ್ಜುವನ್ನು ಕಡಿದು ಊನಗೊಳಿಸಿದರು. ಆಗ ಅವರ ಪಾಪ ಕಾರಣದಿಂದ ಅವರ ಪ್ರಭು ಅವರನ್ನು ಸಂಪೂರ್ಣವಾಗಿ ನಾಶಗೊಳಿಸಿದನು. ಹಾಗೆ ಅವರನ್ನು ಅವನು ನೆಲಸಮ ಮಾಡಿಬಿಟ್ಟನು.**

فَكَذَّبُوْهُ فَعَقَرُوْهَا ۙ۬ فَدَمْدَمَ عَلَيْهِمْ رَبُّهُمْ بِذَنْۢبِهِمْ فَسَوّٰىهَا ⑮

**16. ಅವನು** (ಅಲ್ಲಾಹನು) **ಅದರ ಪರಿಣಾಮವನ್ನು ಗಣ್ಯ ಮಾಡುವುದಿಲ್ಲ.**

وَلَا يَخَافُ عُقْبٰهَا ⑯

533. ಪ್ರವಾದಿ ಸಾಲಿಹ್ (ಅಲೈಹಿಸ್ಸಲಾಂ).

سُوْرَةُ الَّيْلِ مَكِّيَّةٌ وَّهِيَ مَعَ الْبَسْمَلَةِ اِثْنَتَانِ وَعِشْرُوْنَ اٰيَةً

# 92. ಅಲ್ಲೈಲ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 22 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಕತ್ತಲೆಯಾಣೆ[534]- ಅದು ಕವಿಯುವಾಗ.**

وَالَّيْلِ اِذَا يَغْشٰى ﴿٢﴾

**3. ಹಗಲಿನಾಣೆ[535]- ಅದು ಬೆಳಗುವಾಗ.**

وَالنَّهَارِ اِذَا تَجَلّٰى ﴿٣﴾

**4. ಗಂಡು ಹೆಣ್ಣಿನ ಸೃಷ್ಟಿಯಾಣೆ.**

وَمَا خَلَقَ الذَّكَرَ وَالْاُنْثٰٓى ﴿٤﴾

**5. ನಿಶ್ಚಯವಾಗಿಯೂ ನಿಮ್ಮ ಪರಿಶ್ರಮಗಳು ವಿಭಿನ್ನವಾಗಿವೆ.**

اِنَّ سَعْيَكُمْ لَشَتّٰى ﴿٥﴾

**6. ಆದ್ದರಿಂದ ಯಾರು** (ಅಲ್ಲಾಹನ ಮಾರ್ಗದಲ್ಲಿ) **ನೀಡುತ್ತಾನೋ ಮತ್ತು ಭಯಭಕ್ತಿ ತೋರಿಸುತ್ತಾನೋ**

فَاَمَّا مَنْ اَعْطٰى وَاتَّقٰى ﴿٦﴾

**7. ಹಾಗೂ ಋಜುವಾದುದನ್ನು ಸತ್ಯವೆಂದು ಒಪ್ಪುತ್ತಾನೋ,**

وَصَدَّقَ بِالْحُسْنٰى ﴿٧﴾

**8. ಅವನಿಗೆ ಖಂಡಿತವಾಗಿಯೂ ನಾವು ಸೌಲಭ್ಯಗಳನ್ನು ಒದಗಿಸುವೆವು.**

فَسَنُيَسِّرُهٗ لِلْيُسْرٰى ﴿٨﴾

**9. ಆದರೆ ಯಾರು ಕೃಪಣತೆ ತೋರಿಸುತ್ತಾನೋ ಮತ್ತು** (ತಿರಸ್ಕಾರ ಭಾವದಿಂದ) **ನಿರ್ಲಕ್ಷಿಸುತ್ತಾನೋ**

وَاَمَّا مَنْۢ بَخِلَ وَاسْتَغْنٰى ﴿٩﴾

**10. ಹಾಗೂ ಋಜುವಾದುದನ್ನು ಸುಳ್ಳಾಗಿಸುತ್ತಾನೋ,**

وَكَذَّبَ بِالْحُسْنٰى ﴿١٠﴾

534. ಆಧ್ಯಾತ್ಮಿಕ ಅಧಃಪತನ.
535. ಆಧ್ಯಾತ್ಮಿಕ ಸುಧಾರಕನ ಆಗಮನ.





**11. ಅವನಿಗೆ ನಾವು ಕಷ್ಟವನ್ನು ಕೊಡುವೆವು.**

فَسَنُيَسِّرُهٗ لِلْعُسْرٰى ﴿١١﴾

**12. ಅವನು ನಾಶಹೊಂದುವಾಗ ಅವನ ಸಂಪತ್ತು ಅವನಿಗೆ ಉಪಯುಕ್ತವಾಗಲಾರದು.**

وَمَا يُغْنِيْ عَنْهُ مَالُهٗٓ اِذَا تَرَدّٰى ﴿١٢﴾

**13. ನಿಶ್ಚಯವಾಗಿಯೂ ಮಾರ್ಗದರ್ಶನ ನಮ್ಮ ಹೊಣೆಯಾಗಿದೆ.**

اِنَّ عَلَيْنَا لَلْهُدٰى ﴿١٣﴾

**14. ಇಹಲೋಕ ಮತ್ತು ಪರಲೋಕದ ಒಡೆತನ ನಮಗಿದೆ.**

وَاِنَّ لَنَا لَلْاٰخِرَةَ وَالْاُوْلٰى ﴿١٤﴾

**15. ಆದ್ದರಿಂದ ಪ್ರಜ್ವಲಿಸುವ ನರಕಾಗ್ನಿಯ ಬಗ್ಗೆ ನಾನು ನಿಮಗೆ ಮುನ್ನೆಚ್ಚರಿಕೆ ನೀಡುತ್ತೇನೆ.**

فَاَنْذَرْتُكُمْ نَارًا تَلَظّٰى ﴿١٥﴾

**16. ಅತಿ ದುಷ್ಟನು ಹೊರತು ಅದನ್ನು ಪ್ರವೇಶಿಸುವುದಿಲ್ಲ.**

لَا يَصْلٰىهَآ اِلَّا الْاَشْقَى ﴿١٦﴾

**17. ಅವನಾದರೋ** (ಸತ್ಯವನ್ನು) **ಸುಳ್ಳಾಗಿಸಿದವನು ಮತ್ತು ಬೆನ್ನು ತಿರುಗಿಸಿ ಹೋದವನು.**

الَّذِيْ كَذَّبَ وَتَوَلّٰى ﴿١٧﴾

**18. ಆದರೆ ಧರ್ಮನಿಷ್ಠನು ಅದರಿಂದ ದೂರವಿರಿಸಲ್ಪಡುವನು.**

وَسَيُجَنَّبُهَا الْاَتْقَى ﴿١٨﴾

**19. ಅವನಾದರೋ ಪರಿಶುದ್ಧನಾಗಲು ತನ್ನ ಸಂಪತ್ತನ್ನು** (ಅಲ್ಲಾಹನ ಮಾರ್ಗದಲ್ಲಿ) **ವ್ಯಯಿಸುವವನು.**

الَّذِيْ يُؤْتِيْ مَالَهٗ يَتَزَكّٰى ﴿١٩﴾

**20. ಅವನ ಬಳಿ ಯಾರಿಗೂ ಪ್ರತಿಫಲದ ಋಣಭಾರವಿರುವ ಯಾವುದೇ ಉಪಕಾರವಿಲ್ಲ.**

وَمَا لِاَحَدٍ عِنْدَهٗ مِنْ نِّعْمَةٍ تُجْزٰٓى ﴿٢٠﴾

**21. ಅವನಾದರೋ ಸರ್ವೋನ್ನತನಾದ ತನ್ನ ಪ್ರಭುವಿನ ಪ್ರೀತಿಯನ್ನು ಮಾತ್ರ ಬಯಸುತ್ತಾನೆ.**

اِلَّا ابْتِغَآءَ وَجْهِ رَبِّهِ الْاَعْلٰى ﴿٢١﴾

**22. ಖಂಡಿತವಾಗಿಯೂ ಅವನು** (ಅಲ್ಲಾಹನು) **ಅವನಲ್ಲಿ ಸಂಪ್ರೀತನಾಗುವನು.**

وَلَسَوْفَ يَرْضٰى ﴿٢٢﴾

سُورَةُ الضُّحٰى مَكِّيَّةٌ وَّهِيَ مَعَ الْبَسْمَلَةِ اِثْنَتَا عَشْرَةَ اٰيَةً

## 93. ಅಝ್ಝುಹಾ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 12 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಪೂರ್ವಾಹ್ನದ ಪ್ರಕಾಶದಾಣೆ** [536]

وَالضُّحٰى ﴿٢﴾

**3. ರಾತ್ರಿಯಾಣೆ -** [537] **ಅದು ಎಲ್ಲೆಡೆ ಆವರಿಸುವಾಗ.**

وَالَّيْلِ اِذَا سَجٰى ﴿٣﴾

**4. ನಿನ್ನ ಪ್ರಭು ನಿನ್ನನ್ನು ಕೈಬಿಡಲಿಲ್ಲ; ನಿನ್ನ ಮೇಲೆ ಕೋಪಗೊಳ್ಳಲೂ ಇಲ್ಲ.**[538]

مَا وَدَّعَكَ رَبُّكَ وَمَا قَلٰى ﴿٤﴾

**5. ಖಂಡಿತವಾಗಿಯೂ ಮುಂದಿನ ಕಾಲ ಹಿಂದಿನದಕ್ಕಿಂತ ನಿನಗೆ ಉತ್ತಮವಾದುದಾಗಿದೆ.**

وَلَلْاٰخِرَةُ خَيْرٌ لَّكَ مِنَ الْاُوْلٰى ﴿٥﴾

**6. ನಿಶ್ಚಯವಾಗಿಯೂ ನಿನ್ನ ಪ್ರಭು ನಿನಗೆ** (ಹಲವು ಅನುಗ್ರಹಗಳನ್ನು) **ನೀಡುವನು. ಆಗ ನೀನು ಸಂತುಷ್ಟನಾಗುವೆ.**

وَلَسَوْفَ يُعْطِيْكَ رَبُّكَ فَتَرْضٰى ﴿٦﴾

**7. ಅವನು ನಿನ್ನನ್ನು ಅನಾಥನಾಗಿ ಕಂಡು ನಿನಗೆ ಆಶ್ರಯ ನೀಡಲಿಲ್ಲವೇ?**

اَلَمْ يَجِدْكَ يَتِيْمًا فَاٰوٰى ﴿٧﴾

**8.** (ತನ್ನನ್ನು) **ಹುಡುಕುತ್ತಾ ಅಲೆದಾಡುವವನಾಗಿ ಅವನು ನಿನ್ನನ್ನು ಕಂಡನು. ಆಗ ಅವನು** (ತನ್ನೆಡೆಗೆ) **ಮಾರ್ಗದರ್ಶನ ಮಾಡಿದನು.**

وَوَجَدَكَ ضَآلًّا فَهَدٰى ﴿٨﴾

536. ಪೂರ್ವಾಹ್ನದ ಪ್ರಕಾಶ ಅಂದರೆ ಇಸ್ಲಾಮಿನ ಹಂತ ಹಂತವಾದ ಅಭಿವೃದ್ಧಿ.

537. ರಾತ್ರಿ=ಕಾಲಾಂತರದಲ್ಲಿ ಇಸ್ಲಾಮಿಗೆ ಸಂಭವಿಸುವ ಅವನತಿ.

538. ಇಸ್ಲಾಮಿನ ಅವನತಿಯ ಬಳಿಕ ಮುಂದೆ ಅದರ ಪುನರುದ್ಧಾರವಾಗುವುದರ ಬಗ್ಗೆ ಇಲ್ಲಿ ಸೂಚನೆಯಿದೆ.





**9. ಅವನು ನಿನ್ನನ್ನು ನಿರ್ಗತಿಕನಾಗಿ ಕಂಡಾಗ ಐಶ್ವರ್ಯವಂತನಾಗಿ ಮಾಡಿದನು.**

وَوَجَدَكَ عَآئِلًا فَاَغْنٰى ﴿٩﴾

**10. ಆದ್ದರಿಂದ ನೀನು ಅನಾಥರೊಡನೆ ಕಾಠಿಣ್ಯದಿಂದ ವರ್ತಿಸಬೇಡ.**

فَاَمَّا الْيَتِيْمَ فَلَا تَقْهَرْ ﴿١٠﴾

**11. ಯಾಚಿಸುವವರನ್ನು ಝಂಕಿಸಬೇಡ.**

وَاَمَّا السَّآئِلَ فَلَا تَنْهَرْ ﴿١١﴾

**12. ನಿನ್ನ ಪ್ರಭುವಿನ ಅನುಗ್ರಹವನ್ನು ಪ್ರಕಟಗೊಳಿಸು.** (ಇತರರಿಗೂ ತಿಳಿಯಪಡಿಸು.)

وَاَمَّا بِنِعْمَةِ رَبِّكَ فَحَدِّثْ ﴿١٢﴾

سُوْرَةُ اَلَمْ نَشْرَحْ مَكِّيَّةٌ وَّهِيَ مَعَ الْبَسْمَلَةِ تِسْعُ اٰيٰتٍ

## 94. ಅಲಮ್‌ನಶ್‌ರಹ್[539]

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 9 ಆಯತ್‌ಗಳಿವೆ.

| | |
|---|---|
| **1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** | بِسْمِ اللّٰهِ الرَّحْمٰنِ الرَّحِيْمِ ١ |
| **2. ನಾವು ನಿನಗೆ ನಿನ್ನ ಹೃದಯವನ್ನು ವಿಶಾಲಗೊಳಿಸಿಕೊಡಲಿಲ್ಲವೇ?** | اَلَمْ نَشْرَحْ لَكَ صَدْرَكَ ٢ |
| **3. ಹಾಗೂ ನಾವು ನಿನ್ನ ಭಾರವನ್ನು ನಿನ್ನಿಂದ ಇಳಿಸಲಿಲ್ಲವೇ?-** | وَوَضَعْنَا عَنْكَ وِزْرَكَ ٣ |
| **4. ಅದು ನಿನ್ನ ಬೆನ್ನು ಮುರಿಯುವಂತಿತ್ತು.** | الَّذِيْٓ اَنْقَضَ ظَهْرَكَ ٤ |
| **5. ಹಾಗೂ ನಿನ್ನ ಕೀರ್ತಿಯನ್ನು ನಾವು ಉನ್ನತಿಗೇರಿಸಿದೆವು.** | وَرَفَعْنَا لَكَ ذِكْرَكَ ٥ |
| **6. ಖಂಡಿತವಾಗಿಯೂ ಕಷ್ಟದೊಂದಿಗೆ** (ಕಷ್ಟದ ಬಳಿಕ) **ಸುಖವಿದೆ.** | فَاِنَّ مَعَ الْعُسْرِ يُسْرًا ٦ |
| **7. ಹೌದು, ಖಂಡಿತವಾಗಿಯೂ ಕಷ್ಟದೊಂದಿಗೆ ಸುಖವಿದೆ.** | اِنَّ مَعَ الْعُسْرِ يُسْرًا ٧ |
| **8. ಆದ್ದರಿಂದ ನೀನು ಬಿಡುವು ದೊರೆತಾಗಲೆಲ್ಲ** (ದೇವಪ್ರಾಪ್ತಿಗಾಗಿ) **ಅತಿಯಾಗಿ ಪರಿಶ್ರಮಿಸು.** | فَاِذَا فَرَغْتَ فَانْصَبْ ٨ |
| **9. ಹಾಗೂ ನೀನು ನಿನ್ನ ಪ್ರಭುವಿನ ಕಡೆಗೆ ಲಕ್ಷ್ಯ ಹರಿಸಿಕೊಂಡು ತಿರುಗು.** | وَاِلٰى رَبِّكَ فَارْغَبْ ٩ |

539. ಈ ಅಧ್ಯಾಯಕ್ಕೆ "ಅಲ್‌ಇನ್‌ಶಿರಾಹ್" ಎಂಬ ಹೆಸರು ಸಹ ಇದೆ.

سُوْرَةُ التِّيْنِ مَكِّيَّةٌ وَّهِيَ مَعَ الْبَسْمَلَةِ تِسْعُ اٰيَاتٍ

## 95. ಅತ್ತೀನ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 9 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ①

**2. ಅತ್ತಿ[540] ಮತ್ತು ಇಪ್ಪೆಯ[541] ಆಣೆ.**

وَالتِّيْنِ وَالزَّيْتُوْنِ ②

**3. ಮತ್ತು ಸೀನಾಯ್ ಪರ್ವತದ[542]** ಆಣೆ.

وَطُوْرِ سِيْنِيْنَ ③

**4. ಮತ್ತು ನಿರ್ಭೀತಿಯ ಈ ಪಟ್ಟಣದ[543]** ಆಣೆ.

وَهٰذَا الْبَلَدِ الْاَمِيْنِ ④

**5. ನಿಸ್ಸಂಶಯವಾಗಿಯೂ ನಾವು ಮನುಷ್ಯನನ್ನು ಅತ್ಯುತ್ತಮವಾದ ಸ್ಥಿತಿಯಲ್ಲಿ ಸೃಷ್ಟಿಸಿದ್ದೇವೆ.**

لَقَدْ خَلَقْنَا الْاِنْسَانَ فِيْٓ اَحْسَنِ تَقْوِيْمٍ ⑤

**6. ಮತ್ತೆ** (ಅವನು ಅನ್ಯಾಯವಾಗಿ ವರ್ತಿಸಿದರೆ) **ಅವನನ್ನು ಅಧಮರಲ್ಲಿ ಅಧಮನಾಗಿ ಮಾಡುತ್ತೇವೆ -**

ثُمَّ رَدَدْنٰهُ اَسْفَلَ سٰفِلِيْنَ ⑥

**7. ಸತ್ಯ ವಿಶ್ವಾಸ ಹೊಂದಿ ಸತ್ಕರ್ಮ ನಿರತರಾದವರನ್ನು ಹೊರತು ಪಡಿಸಿ. ಅವರಿಗೆ ಕೊನೆಗೊಳ್ಳದ ಪ್ರತಿಫಲವಿದೆ.**

اِلَّا الَّذِيْنَ اٰمَنُوْا وَعَمِلُوا الصّٰلِحٰتِ فَلَهُمْ اَجْرٌ غَيْرُ مَمْنُوْنٍ ⑦

**8. ಹೀಗಿರುವಾಗ, ನ್ಯಾಯ ತೀರ್ಮಾನದ ಬಗ್ಗೆ ನಿನ್ನನ್ನು ಸುಳ್ಳಾಗಿಸಲು ಏನಿದೆ?**

فَمَا يُكَذِّبُكَ بَعْدُ بِالدِّيْنِ ⑧

**9. ಅಲ್ಲಾಹನು ತೀರ್ಪು ನೀಡುವವರಲ್ಲಿ ಅತ್ಯುತ್ತಮನಲ್ಲವೇ?**

اَلَيْسَ اللّٰهُ بِاَحْكَمِ الْحٰكِمِيْنَ ⑨

540. ಹಝ್ರತ್ ಆದಂ (ಅಲೈಹಿಸ್ಸಲಾಂ)ರ ಕಾಲದ ಸೂಚನೆ.

541. ಹಝ್ರತ್ ನೂಹ್ (ಅ)ರ ಕಾಲದ ಸೂಚನೆ.

542. ಹಝ್ರತ್ ಮೂಸಾ (ಅ)ರ ಕಾಲದ ಸೂಚನೆ.

543. ಮಕ್ಕ ಪಟ್ಟಣ.

سُوْرَةُ الْعَلَقِ مَكِّيَّةٌ وَّهِيَ مَعَ الْبَسْمَلَةِ عِشْرُوْنَ اٰيَةً

## 96. ಅಲ್‌ಅಲಖ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 20 ಆಯತ್‌ಗಳಿವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ (١)

2. (ಸರ್ವವನ್ನೂ) ಸೃಷ್ಟಿಸಿದ ನಿನ್ನ ಪ್ರಭುವಿನ ನಾಮದಿಂದ ಪಠಿಸು.

اِقْرَاْ بِاسْمِ رَبِّكَ الَّذِيْ خَلَقَ (٢)

3. ಅವನು ಮನುಷ್ಯನನ್ನು (ಗರ್ಭಾಶಯದಲ್ಲಿ) ಅಂಟಿಕೊಳ್ಳುವ ಮಾಂಸ ಪಿಂಡದಿಂದ ಸೃಷ್ಟಿಸಿದನು.

خَلَقَ الْاِنْسَانَ مِنْ عَلَقٍ (٣)

4. ಪಠಿಸು; ನಿನ್ನ ಪ್ರಭು ಅತಿ ಕೀರ್ತಿವಂತನಾಗಿದ್ದಾನೆ.

اِقْرَاْ وَرَبُّكَ الْاَكْرَمُ (٤)

5. (ಅವನು) ಲೇಖನಿಯಿಂದ ಕಲಿಸಿದವನು.

الَّذِيْ عَلَّمَ بِالْقَلَمِ (٥)

6. ಮನುಷ್ಯನಿಗೆ ತಿಳಿಯದಿದ್ದುದನ್ನು ಅವನಿಗೆ (ಮನುಷ್ಯನಿಗೆ) ಕಲಿಸಿದನು.

عَلَّمَ الْاِنْسَانَ مَا لَمْ يَعْلَمْ (٦)

7. ಎಚ್ಚರಿಕೆ, ನಿಜವಾಗಿಯೂ ಮನುಷ್ಯನು ಹದ್ದುಮೀರಿ ವರ್ತಿಸುತ್ತಾನೆ -

كَلَّاۤ اِنَّ الْاِنْسَانَ لَيَطْغٰۤى (٧)

8. ಏಕೆಂದರೆ ತಾನು ಸರ್ವಸ್ವತಂತ್ರನೆಂದು ಅವನು ಭಾವಿಸುತ್ತಾನೆ.

اَنْ رَّاٰهُ اسْتَغْنٰى (٨)

9. (ಎಲೈ ಮನುಷ್ಯನೇ) ನಿಶ್ಚಯವಾಗಿಯೂ ನಿನ್ನ ಪ್ರಭುವಿನ ಬಳಿಗೆಯೇ ನೀನು ಮರಳಬೇಕಾಗಿದೆ.

اِنَّ اِلٰى رَبِّكَ الرُّجْعٰى (٩)

10, 11. (ಅಲ್ಲಾಹನ) ಓರ್ವ ದಾಸನು ಪ್ರಾರ್ಥಿಸುವಾಗ ಆತನನ್ನು ತಡೆಯುವವನನ್ನು ನೀನು ಕಂಡಿದ್ದೀಯೋ?

اَرَءَيْتَ الَّذِيْ يَنْهٰى (١٠)
عَبْدًا اِذَا صَلّٰى (١١)





12, 13. ನೀನು ಯೋಚಿಸಿದ್ದೀಯೋ - ಆತನು (ಪ್ರಾರ್ಥಿಸುವಾಗ) ಸತ್ಪಥದಲ್ಲಿದ್ದರೆ, ಅಥವಾ ಭಯಭಕ್ತಿ ಹೊಂದಲಿಕ್ಕೋಸ್ಕರ (ಜನರಿಗೆ) ಉಪದೇಶಿಸುತ್ತಿದ್ದರೆ?

اَرَءَيْتَ اِنْ كَانَ عَلَى الْهُدٰۤى (١٢)
اَوْ اَمَرَ بِالتَّقْوٰى (١٣)

14. (ಮತ್ತೂ) ನೀನು ಯೋಚಿಸಿದ್ದೀಯೋ - ಅವನು (ತಡೆಯುವವನು) ಸತ್ಯವನ್ನು ಸುಳ್ಳಾಗಿಸುವವನೂ ಬೆನ್ನು ತಿರುಗಿಸಿ ಹೋಗುವವನೂ ಆಗಿದ್ದರೆ (ಅವನ ಗತಿ ಯೇನಾಗುವುದು)?

اَرَءَيْتَ اِنْ كَذَّبَ وَتَوَلّٰى (١٤)

15. ಅಲ್ಲಾಹನು (ಎಲ್ಲವನ್ನೂ) ವೀಕ್ಷಿಸುತ್ತಾನೆಂದು ಅವನಿಗೆ ಗೊತ್ತಿಲ್ಲವೇ?

اَلَمْ يَعْلَمْ بِاَنَّ اللّٰهَ يَرٰى (١٥)

16. ಎಚ್ಚರಿಕೆ, ಅವನು ವಿರಮಿಸದಿದ್ದರೆ ಖಂಡಿತ ವಾಗಿಯೂ ನಾವು (ಅವನ) ಮುಂಜುಟ್ಟನ್ನು ಬಿಗಿಯಾಗಿ ಹಿಡಿದೆಳೆಯುವೆವು -

كَلَّا لَئِنْ لَّمْ يَنْتَهِ ۙ لَنَسْفَعًا
بِالنَّاصِيَةِ (١٦)

17. ಸುಳ್ಳುಗಾರನಾದ ಮಹಾಪಾಪಿಯ ಮುಂಜುಟ್ಟು.

نَاصِيَةٍ كَاذِبَةٍ خَاطِئَةٍ (١٧)

18. ಅವನು ತನ್ನ ಬೆಂಬಲಿಗರನ್ನು ಕರೆದುಕೊಳ್ಳಲಿ.

فَلْيَدْعُ نَادِيَهٗ (١٨)

19. ನಾವು ಸಹ ನಮ್ಮ ದೂತರನ್ನು ಕರೆಯುವೆವು.

سَنَدْعُ الزَّبَانِيَةَ (١٩)

20. ಸಲ್ಲದು, ನೀನು ಅವನಿಗೆ ಮಣಿಯಬಾರದು. ನೀನು (ಅಲ್ಲಾಹನಿಗೆ) ಸಾಷ್ಟಾಂಗವೆರಗು ಮತ್ತು (ಅಲ್ಲಾಹನ) ಸಾಮೀಪ್ಯವನ್ನು ಗಳಿಸು.

كَلَّا ۗ لَا تُطِعْهُ وَاسْجُدْ وَاقْتَرِبْ (٢٠) ۩

سُوْرَةُ الْقَدْرِ مَكِّيَّةٌ وَّهِيَ مَعَ الْبَسْمَلَةِ سِتُّ اٰيَاتٍ

## 97. ಅಲ್‌ಖದ್‌ರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 6 ಆಯತ್‌ಗಳಿವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

اِنَّآ اَنْزَلْنٰهُ فِيْ لَيْلَةِ الْقَدْرِ ②

**2. ದಿಟವಾಗಿಯೂ ನಾವು ಇದನ್ನು** (ಖುರ್‌ಆನನ್ನು) **ಒಂದು** (ಮಹತ್ವಪೂರ್ಣವಾದ) **ನಿರ್ಣಯರಾತ್ರಿಯಲ್ಲಿ**[544] **ಅವತೀರ್ಣ ಗೊಳಿಸಿದ್ದೇವೆ.**

وَمَآ اَدْرٰىكَ مَا لَيْلَةُ الْقَدْرِ ③

**3.** (ಮಹತ್ವಪೂರ್ಣವಾದ) **ಆ ನಿರ್ಣಯರಾತ್ರಿಯೇನೆಂದು ನಿನಗೇನು ಗೊತ್ತು?**

لَيْلَةُ الْقَدْرِ ۙ خَيْرٌ مِّنْ اَلْفِ شَهْرٍ ④

**4.** (ಮಹತ್ವಪೂರ್ಣವಾದ) **ಆ ನಿರ್ಣಯರಾತ್ರಿಯು ಸಾವಿರ ಮಾಸಗಳಿಂತ ಶ್ರೇಷ್ಠವಾಗಿದೆ.**

تَنَزَّلُ الْمَلٰٓئِكَةُ وَالرُّوْحُ فِيْهَا بِاِذْنِ رَبِّهِمْ ۚ مِنْ كُلِّ اَمْرٍ ⑤

**5. ಅದರಲ್ಲಿ ದಿವ್ಯದೂತರು ಮತ್ತು ಆ ಪರಿಪೂರ್ಣಾತ್ಮ** (ರೂಹುಲ್ ಖುದ್‌ಸ್- ಜಿಬ್ರೀಲ್) **ಎಲ್ಲ ವಿಚಾರಗಳ ಬಗ್ಗೆ ತಮ್ಮ ಪ್ರಭುವಿನ ಆಜ್ಞೆಯಂತೆ ಇಳಿಯುವರು.**

سَلٰمٌ ۛ هِيَ حَتّٰى مَطْلَعِ الْفَجْرِ ⑥

**6. ಸರ್ವತ್ರ ಶಾಂತಿ - ಅದು ಪ್ರಭಾತೋದಯದ**[545] **ತನಕ ಇರುವುದು.**

544. ನಿರ್ಣಯರಾತ್ರಿ ಅಥವಾ ವಿಧಿ ನಿರ್ಣಾಯಕ ರಾತ್ರಿ ಅಂದರೆ ಪ್ರವಾದಿಗಳ ಆಗಮನ ಕಾಲ ಎಂದರ್ಥ. ಆ ಕಾಲವನ್ನು ರಾತ್ರಿಯೊಂದಿಗೆ ಉಪಮಿಸಲಾಗಿದೆ. ಆ ಕಾಲದಲ್ಲಿ ಆಧ್ಯಾತ್ಮಿಕ ಅಂಧಕಾರ ಸರ್ವತ್ರ ವ್ಯಾಪಿಸಿರುತ್ತದೆ. ಪ್ರವಾದಿಗಳ ಆಗಮನದಿಂದ ಭಾವಿ ಕಾಲದ ವಿಧಿ ನಿರ್ಣಯಿಸಲ್ಪಡುತ್ತದೆ.
"ಲೈಲತುಲ್ ಖದ್‌ರ್" ಎಂಬುದು ರಮಝಾನ್ ಮಾಸದ ಕೊನೆಯ ಹತ್ತರ ಬೆಸ ದಿನಗಳಲ್ಲಿ ಬರುವ ಒಂದು ಮಹತ್ವಪೂರ್ಣ ರಾತ್ರಿಯನ್ನು ಸಹ ಸೂಚಿಸುತ್ತದೆ.

545. ಪ್ರಭಾತೋದಯ = ಪ್ರವಾದಿಯ ಸಂಘಟನೆಗೆ ಸಿದ್ಧಿಸುವ ವಿಜಯದ ಪರಿಪೂರ್ಣತೆ.

سُورَةُ الْبَيِّنَةِ مَدَنِيَّةٌ وَهِيَ مَعَ الْبَسْمَلَةِ تِسْعُ آيَاتٍ

## 98. ಅಲ್‌ಬಯ್ಯಿನಃ

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 9 ಆಯತ್‌ಗಳಿವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللَّهِ الرَّحْمَٰنِ الرَّحِيمِ ﴿١﴾

2. ಗ್ರಂಥದವರ ಮತ್ತು ಬಹುದೇವಾರಾಧಕರ ಪೈಕಿಯ ಅವಿಶ್ವಾಸಿಗಳು ತಮ್ಮ ಬಳಿಗೆ ಸ್ಪಷ್ಟವಾದ ಪುರಾವೆ ಬಂದಿದ್ದರೂ (ಅವಿಶ್ವಾಸದಿಂದ) ದೂರಸರಿಯುವವರಾಗಿರಲಿಲ್ಲ.

لَمْ يَكُنِ الَّذِينَ كَفَرُوا مِنْ أَهْلِ
الْكِتَابِ وَالْمُشْرِكِينَ مُنْفَكِّينَ حَتَّىٰ
تَأْتِيَهُمُ الْبَيِّنَةُ ﴿٢﴾

3. ಅಲ್ಲಾಹನ ಓರ್ವ ಸಂದೇಶವಾಹಕ. ಆತನು ಪವಿತ್ರವಾದ ಹಾಳೆಗಳನ್ನು ಪಠಿಸುತ್ತಾನೆ.

رَسُولٌ مِنَ اللَّهِ يَتْلُو صُحُفًا مُطَهَّرَةً ﴿٣﴾

4. ಅದರಲ್ಲಿ ಶಾಶ್ವತವಾದ ಆಜ್ಞೆಗಳಿವೆ.

فِيهَا كُتُبٌ قَيِّمَةٌ ﴿٤﴾

5. ಗ್ರಂಥನೀಡಲ್ಪಟ್ಟವರು ತಮಗೆ ಸ್ಪಷ್ಟವಾದ ಪುರಾವೆ ಕಂಡುಬಂದ ಬಳಿಕವೇ ಹೊರತು ಭಿನ್ನಮತ ಹೊಂದಲಿಲ್ಲ.

وَمَا تَفَرَّقَ الَّذِينَ أُوتُوا الْكِتَابَ إِلَّا مِنْ
بَعْدِ مَا جَاءَتْهُمُ الْبَيِّنَةُ ﴿٥﴾

6. ಅಲ್ಲಾಹನಿಗೆ ಸಂಪೂರ್ಣ ವಿಧೇಯರಾಗಿದ್ದುಕೊಂಡು ಅವನನ್ನು ಆರಾಧಿಸಬೇಕೆಂದು, ಋಜುಮಾರ್ಗವನ್ನು ಅವಲಂಬಿಸಬೇಕೆಂದು, ಪ್ರಾರ್ಥನೆಯನ್ನು ನಿಷ್ಠೆಯಿಂದ ಸಲ್ಲಿಸಬೇಕೆಂದು, ಝಕಾತ್ ನೀಡಬೇಕೆಂದು ಹೊರತು ಅವರೊಡನೆ ಆಜ್ಞಾಪಿಸಲಾಗಿರಲಿಲ್ಲ. ಅದೇ ಶಾಶ್ವತವಾದ ಸತ್ಯಾಧಿಷ್ಠಿತ ಧರ್ಮ.

وَمَا أُمِرُوا إِلَّا لِيَعْبُدُوا اللَّهَ مُخْلِصِينَ
لَهُ الدِّينَ ۙ حُنَفَاءَ وَيُقِيمُوا الصَّلَاةَ وَ
يُؤْتُوا الزَّكَاةَ ۚ وَذَٰلِكَ دِينُ الْقَيِّمَةِ ﴿٦﴾





7. ನಿಶ್ಚಯವಾಗಿಯೂ, ಗ್ರಂಥದವರ ಮತ್ತು ಬಹುದೇವಾರಾಧಕರ ಪೈಕಿಯ ಅವಿಶ್ವಾಸಿಗಳು ನರಕಾಗ್ನಿಯನ್ನು ಪ್ರವೇಸಿಸುವರು. ಅಲ್ಲಿ ಅವರು ದೀರ್ಘಕಾಲ ಕಳೆಯುವರು. ಅವರೇ ಅತಿ ನಿಕೃಷ್ಟ ಜೀವಿಗಳು.

إِنَّ الَّذِينَ كَفَرُوا مِنْ أَهْلِ الْكِتَابِ وَ
الْمُشْرِكِينَ فِي نَارِ جَهَنَّمَ خَالِدِينَ فِيهَا ۚ
أُولَٰئِكَ هُمْ شَرُّ الْبَرِيَّةِ ﴿٧﴾

8. ನಿಸ್ಸಂದೇಹವಾಗಿಯೂ ಯಾರು ವಿಶ್ವಾಸ ಹೊಂದಿ ಸತ್ಕರ್ಮ ನಿರತರಾಗಿರುತ್ತಾರೋ, ಅವರೇ ಅತ್ಯುತ್ಕೃಷ್ಟ ಜೀವಿಗಳು.

إِنَّ الَّذِينَ آمَنُوا وَعَمِلُوا الصَّالِحَاتِ ۙ
أُولَٰئِكَ هُمْ خَيْرُ الْبَرِيَّةِ ﴿٨﴾

9. ಅವರ ಪ್ರಭುವಿನ ಬಳಿಯಲ್ಲಿ ಅವರಿಗೆ ಪ್ರತಿಫಲವಿದೆ. (ಅದೇನೆಂದರೆ) ಶಾಶ್ವತವಾದ ಸ್ವರ್ಗೀಯ ತೋಟಗಳು. ಅವುಗಳ ಕೆಳಬದಿಯಲ್ಲಿ ನದಿಗಳು ಹರಿಯುತ್ತವೆ. ಅಲ್ಲಿ ಅವರು ಶಾಶ್ವತವಾಗಿ ನೆಲೆಸುವರು. ಅಲ್ಲಾಹನು ಅವರ ಬಗ್ಗೆ ಸಂತೃಪ್ತನು. ಅವರು ಸಹ ಅವನ ಬಗ್ಗೆ ಸಂತೃಪ್ತರು. ತನ್ನ ಪ್ರಭುವಿಗೆ ಭಯಪಡುವವನಿಗಿರುವ ಪುರಸ್ಕಾರವದು.

جَزَاؤُهُمْ عِنْدَ رَبِّهِمْ جَنَّاتُ عَدْنٍ تَجْرِي
مِنْ تَحْتِهَا الْأَنْهَارُ خَالِدِينَ فِيهَا أَبَدًا ۖ
رَضِيَ اللَّهُ عَنْهُمْ وَرَضُوا عَنْهُ ۚ ذَٰلِكَ
لِمَنْ خَشِيَ رَبَّهُ ﴿٩﴾

سُوْرَةُ الزِّلْزَالِ مَكِّيَّةٌ وَّهِيَ مَعَ الْبَسْمَلَةِ تِسْعُ اٰيَاتٍ

## 99. ಅಲ್‌ಸ್ಸಿಲ್‌ಸಾಲ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 9 ಆಯತ್‌ಗಳಿವೆ.

بِسْمِ اللّٰهِ الرَّحْمٰنِ الرَّحِيْمِ ①

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

اِذَا زُلْزِلَتِ الْاَرْضُ زِلْزَالَهَا ②

**2. ಭೂಮಿ ತೀವ್ರವಾಗಿ ಕಂಪಿಸಲ್ಪಡುವಾಗ,**

وَاَخْرَجَتِ الْاَرْضُ اَثْقَالَهَا ③

**3. ಭೂಮಿ ಅದರ ಭಾರವನ್ನು ಹೊರದೂಡುವಾಗ,**

وَقَالَ الْاِنْسَانُ مَا لَهَا ④

**4. ಅದಕ್ಕೇನಾಯಿತು? ಎಂದು ಮನುಷ್ಯನು ಪ್ರಶ್ನಿಸುವಾಗ,**

يَوْمَئِذٍ تُحَدِّثُ اَخْبَارَهَا ⑤

**5. ಅಂದು ಅದು ತನ್ನ** (ಗುಪ್ತವಾದ) **ವೃತ್ತಾಂತಗಳನ್ನು ವಿವರಿಸುವುದು.**

بِاَنَّ رَبَّكَ اَوْحٰى لَهَا ⑥

**6. ಏಕೆಂದರೆ ನಿನ್ನ ಪ್ರಭು ಅದಕ್ಕೆ ಹಾಗೆ ನಿರ್ದೇಶಿಸಿರುವನು.**

يَوْمَئِذٍ يَّصْدُرُ النَّاسُ اَشْتَاتًا ۙ لِّيُرَوْا اَعْمَالَهُمْ ⑦

**7. ಅಂದು ಜನರು ವಿವಿಧ ಗುಂಪುಗಳಾಗಿ ಎದ್ದು ಬರುವರು - ತಂತಮ್ಮ ಕೃತ್ಯಗಳನ್ನು ಅವರು ಕಾಣುವಂತಾಗಲು.**

فَمَنْ يَّعْمَلْ مِثْقَالَ ذَرَّةٍ خَيْرًا يَّرَهٗ ⑧

**8. ಯಾರಾದರೂ ಒಂದು ಅಣುವಿನಷ್ಟು ಒಳಿತು ಮಾಡಿದ್ದರೂ ಅದನ್ನು ಅವನು ಕಾಣುವನು.**

وَمَنْ يَّعْمَلْ مِثْقَالَ ذَرَّةٍ شَرًّا يَّرَهٗ ⑨

**9. ಯಾರಾದರೂ ಒಂದು ಅಣುವಿನಷ್ಟು ಕೆಡುಕು ಮಾಡಿದ್ದರೂ ಅದನ್ನು ಸಹ ಅವನು ಕಾಣುವನು.**

سُوْرَةُ الْعٰدِيٰتِ مَكِّيَّةٌ وَّهِيَ مَعَ الْبَسْمَلَةِ اثْنَتَا عَشْرَةَ اٰيَةً

## 100. ಅಲ್‌ಆದಿಯಾತ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 12 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಘೂಂಕರಿಸುತ್ತಾ ತೀವ್ರಗತಿಯಲ್ಲಿ ಓಡುವ** ಕುದುರೆಗಳ **ಆಣೆ.**

وَالْعٰدِيٰتِ ضَبْحًا ﴿٢﴾

**3. ಹಾಗೂ** (ಗೊರಸುಗಳಿಂದ) **ಬೆಂಕಿಯ ಕಿಡಿಗಳನ್ನು ಹಾರಿಸುತ್ತಾ,**

فَالْمُوْرِيٰتِ قَدْحًا ﴿٣﴾

**4. ಪ್ರಭಾತ ವೇಳೆಯಲ್ಲಿ ಧಾಳಿಯಿಡುತ್ತಾ,**

فَالْمُغِيْرٰتِ صُبْحًا ﴿٤﴾

**5. ಹಾಗೆ ಅಲ್ಲೆಲ್ಲ ಧೂಳೆಬ್ಬಿಸುತ್ತಾ,**

فَاَثَرْنَ بِهٖ نَقْعًا ﴿٥﴾

**6. ಶತ್ರುಸೈನ್ಯದ ಮಧ್ಯಕ್ಕೆ ಮುನ್ನುಗ್ಗುವವುಗಳ** ಆಣೆ.[546]

فَوَسَطْنَ بِهٖ جَمْعًا ﴿٦﴾

**7. ದಿಟವಾಗಿಯೂ ಮನುಷ್ಯನು ತನ್ನ ಪ್ರಭುವಿಗೆ ಕೃತಘ್ನನಾಗಿದ್ದಾನೆ.**

اِنَّ الْاِنْسَانَ لِرَبِّهٖ لَكَنُوْدٌ ﴿٧﴾

**8. ನಿಜವಾಗಿಯೂ ಅವನೇ** (ಅವನ ವರ್ತನೆಯೇ) **ಅದಕ್ಕೆ ಸಾಕ್ಷಿ.**

وَاِنَّهٗ عَلٰى ذٰلِكَ لَشَهِيْدٌ ﴿٨﴾

**9. ಸಂಪತ್ತನ್ನು ಪ್ರೀತಿಸುವುದರಲ್ಲಿ ಅವನು ಅತ್ಯುತ್ಸಾಹಿಯಾಗಿದ್ದಾನೆ.**

وَاِنَّهٗ لِحُبِّ الْخَيْرِ لَشَدِيْدٌ ﴿٩﴾

546. 2ರಿಂದ 6ರ ವರೆಗಿನ ವಚನಗಳು ಬಾಹ್ಯಾರ್ಥದಲ್ಲಿ ಕುದುರೆ ಪಡೆಗಳಿಗೆ ಸಂಬಂಧಿಸಿದ್ದಾಗಿದ್ದರೂ ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ) ಮತ್ತು ಸಂಗಡಿಗರ ಸೈನ್ಯವನ್ನು ಉದ್ದೇಶಿಸಿ ಇಲ್ಲಿ ಪ್ರಸ್ತಾಪಿಸಲಾಗಿದೆ. ಅವರು ಆಕ್ರಮಣಕಾರಿ ಶತ್ರು ಸಮೂಹವನ್ನು ಎದುರಿಸಿ ಇಸ್ಲಾಂ ಮತ್ತು ಮುಸ್ಲಿಮರನ್ನು ರಕ್ಷಿಸಲಿಕ್ಕಾಗಿ ವೀರಾವೇಶದಿಂದ ಹೋರಾಡಿದರು.





**10. ಅವನಿಗೆ ಗೊತ್ತಿದೆಯೇ? - ಗೋರಿಗಳಲ್ಲಿರುವವರನ್ನು ಎಬ್ಬಿಸಲಾಗುವಾಗ,**

اَفَلَا يَعْلَمُ اِذَا بُعْثِرَ مَا فِى الْقُبُوْرِ ﴿١٠﴾

**11. ಮತ್ತು ಹೃದಯಗಳಲ್ಲಿರುವುದೆಲ್ಲ ಬಹಿರಂಗಗೊಳಿಸಲ್ಪಡುವಾಗ** (ಅವರ ಗತಿಯೇನಾಗುವುದೆಂದು).

وَحُصِّلَ مَا فِى الصُّدُوْرِ ﴿١١﴾

**12. ನಿಶ್ಚಯವಾಗಿಯೂ ಅವರ ಪ್ರಭು ಅವರ ಬಗ್ಗೆ ಅಂದು ಚೆನ್ನಾಗಿ ತಿಳಿದುಕೊಳ್ಳುವನು.**

اِنَّ رَبَّهُمْ بِهِمْ يَوْمَئِذٍ لَّخَبِيْرٌ ﴿١٢﴾

سُوْرَةُ الْقَارِعَةِ مَكِّيَّةٌ وَّهِيَ مَعَ الْبَسْمَلَةِ اِثْنَتَا عَشَرَةَ اٰيَةً

## 101. ಅಲ್‌ಖಾರಿಅಃ

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 12 ಆಯತ್‌ಗಳಿವೆ.

| | |
|---|---|
| **1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.** | بِسْمِ اللّٰهِ الرَّحْمٰنِ الرَّحِيْمِ ﴿١﴾ |
| **2. ಭಯಾನಕವಾದ ಆ ವಿಪತ್ತು.** | اَلْقَارِعَةُ ﴿٢﴾ |
| **3. ಆ ಭಯಾನಕ ವಿಪತ್ತು ಏನು?** | مَا الْقَارِعَةُ ﴿٣﴾ |
| **4. ಆ ಭಯಾನಕ ವಿಪತ್ತು ಏನೆಂದು ನಿನಗೇನು ಗೊತ್ತು?** | وَمَآ اَدْرٰىكَ مَا الْقَارِعَةُ ﴿٤﴾ |
| **5. ಅಂದು ಜನರು ಚದರಿಸಲ್ಪಟ್ಟ ಮಿಡಿತೆಗಳಂತಾಗುವರು.** | يَوْمَ يَكُوْنُ النَّاسُ كَالْفَرَاشِ الْمَبْثُوْثِ ﴿٥﴾ |
| **6. ಪರ್ವತಗಳು ಹಸನುಗೊಳಿಸಲಾದ ಉಣ್ಣೆಯಂತಾಗುವುವು.** | وَتَكُوْنُ الْجِبَالُ كَالْعِهْنِ الْمَنْفُوْشِ ﴿٦﴾ |
| **7. ಆಗ ಯಾರ** (ಸತ್ಕರ್ಮಗಳ) **ತಕ್ಕಡಿ ತಟ್ಟೆ ಭಾರವಾಗಿರುತ್ತದೆಯೋ,** | فَاَمَّا مَنْ ثَقُلَتْ مَوَازِيْنُهٗ ﴿٧﴾ |
| **8. ಅವನು ಸಂತೃಪ್ತ ಜೀವನವನ್ನು ಪಡೆಯುವನು.** | فَهُوَ فِيْ عِيْشَةٍ رَّاضِيَةٍ ﴿٨﴾ |
| **9. ಯಾರ** (ಸತ್ಕರ್ಮಗಳ) **ತಕ್ಕಡಿ ತಟ್ಟೆ ಹಗುರವಾಗಿರುತ್ತದೋ,** | وَاَمَّا مَنْ خَفَّتْ مَوَازِيْنُهٗ ﴿٩﴾ |
| **10. ಅವನ ತಾಯಿ** (ನೆಲೆ) **'ಹಾವಿಯ' ಆಗಿರುವುದು.** | فَاُمُّهٗ هَاوِيَةٌ ﴿١٠﴾ |
| **11. ಅದೇನೆಂದು ನಿನಗೇನು ಗೊತ್ತು?** | وَمَآ اَدْرٰىكَ مَا هِيَهْ ﴿١١﴾ |
| **12.** ಅದು **ಜ್ವಲಿಸುವ ಅಗ್ನಿ** (ನರಕ) **ಆಗಿದೆ.** | نَارٌ حَامِيَةٌ ﴿١٢﴾ ع |

سُوْرَةُ التَّكَاثُرِ مَكِّيَّةٌ وَّهِيَ مَعَ الْبَسْمَلَةِ تِسْعُ اٰيَاتٍ

## 102. ಅತ್ತಕಾಸುರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 9 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2.** (ಪ್ರಾಪಂಚಿಕ ಗಳಿಕೆಗೋಸ್ಕರ) **ನಿಮ್ಮ ಪರಸ್ಪರ ಪೈಪೋಟಿ** (ಅಲ್ಲಾಹನ ಬಗ್ಗೆ) **ನಿಮ್ಮನ್ನು ನಿರ್ಲಕ್ಷ್ಯರನ್ನಾಗಿ ಮಾಡಿದೆ.**

اَلْهٰىكُمُ التَّكَاثُرُ ﴿٢﴾

**3. ಎಷ್ಟರವರೆಗೆಂದರೆ** (ಅದೇ ಸ್ಥಿತಿಯಲ್ಲಿ) **ನೀವು ಗೋರಿಗಳನ್ನು ಕೂಡ ಸಂದರ್ಶಿಸುತ್ತೀರಿ.**

حَتّٰى زُرْتُمُ الْمَقَابِرَ ﴿٣﴾

**4. ಎಚ್ಚರಿಕೆ, ನೀವು ಬೇಗನೆ ತಿಳಿಯುವಿರಿ.**

كَلَّا سَوْفَ تَعْلَمُوْنَ ﴿٤﴾

**5. ಮತ್ತೊಮ್ಮೆ ಎಚ್ಚರಿಕೆ, ನೀವು ಬೇಗನೆ ತಿಳಿಯುವಿರಿ.**

ثُمَّ كَلَّا سَوْفَ تَعْلَمُوْنَ ﴿٥﴾

**6. ತಿಳಿದುಕೊಳ್ಳಿರಿ, ನೀವು ದೃಢಜ್ಞಾನದಿಂದ ಮನಗಂಡಿದ್ದರೆ,**

كَلَّا لَوْ تَعْلَمُوْنَ عِلْمَ الْيَقِيْنِ ﴿٦﴾

**7. ಖಂಡಿತವಾಗಿಯೂ ನೀವು** (ಇಹಲೋಕ ಜೀವಿತದಲ್ಲಿ) **ನರಕವನ್ನು ಕಾಣುವಿರಿ.**

لَتَرَوُنَّ الْجَحِيْمَ ﴿٧﴾

**8. ಅನಂತರ ಅದನ್ನು** (ಪರಲೋಕದಲ್ಲಿ) **ನೀವು ದೃಢದೃಷ್ಟಿಯಿಂದ** (ಕಣ್ಣಾರೆ) **ಕಾಣುವಿರಿ.**

ثُمَّ لَتَرَوُنَّهَا عَيْنَ الْيَقِيْنِ ﴿٨﴾

**9. ಮತ್ತೆ, ಖಂಡಿತವಾಗಿಯೂ ಅಂದು ನಿಮ್ಮೊಡನೆ** ಇಹಲೋಕದ **ಸುಖಗಳ ಬಗ್ಗೆ ಪ್ರಶ್ನಿಸಲಾಗುವುದು.**

ثُمَّ لَتُسْـَٔلُنَّ يَوْمَئِذٍ عَنِ النَّعِيْمِ ﴿٩﴾



سُوْرَةُ الْعَصْرِ مَكِّيَّةٌ وَّهِيَ مَعَ الْبَسْمَلَةِ اَرْبَعُ اٰيَاتٍ

## 103. ಅಲ್‌ಅಸ್ರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 4 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ﴿١﴾

**2. ಕಾಲದಾಣೆ,**

وَالْعَصْرِ ﴿٢﴾

**3. ಮನುಷ್ಯನು ನಷ್ಟಹೊಂದಿದವನಾಗಿದ್ದಾನೆ -**

اِنَّ الْاِنْسَانَ لَفِيْ خُسْرٍ ﴿٣﴾

**4. ಸತ್ಯವಿಶ್ವಾಸಹೊಂದಿ ಸತ್ಕರ್ಮ ನಿರತರಾಗಿದ್ದು, ಸತ್ಯಕ್ಕೋಸ್ಕರ ಪರಸ್ಪರ ಉಪದೇಶಿಸುವವರೂ ತಾಳ್ಮೆಗೋಸ್ಕರ ಅನ್ಯೋನ್ಯ ಉಪದೇಶಿಸುವವರೂ ಹೊರತು.**

اِلَّا الَّذِيْنَ اٰمَنُوْا وَعَمِلُوا الصّٰلِحٰتِ
وَتَوَاصَوْا بِالْحَقِّ ۙ وَتَوَاصَوْا بِالصَّبْرِ ﴿٤﴾

سُورَةُ الْهُمَزَةِ مَكِّيَّةٌ وَّهِيَ مَعَ الْبَسْمَلَةِ عَشْرُ آيَاتٍ

## 104. ಅಲ್‌ಹುಮಸಃ

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 10 ಆಯತ್‌ಗಳಿವೆ.

بِسْمِ اللّٰهِ الرَّحْمٰنِ الرَّحِيْمِ ①

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

وَيْلٌ لِّكُلِّ هُمَزَةٍ لُّمَزَةِ ②

2. ಪ್ರತಿಯೊಬ್ಬ ಬೆನ್ನ ಹಿಂದೆ ದೂಷಿಸುವವನಿಗೂ ಮಿಥ್ಯಾಪವಾದ ಹೊರಿಸುವವನಿಗೂ ವಿನಾಶ -

الَّذِيْ جَمَعَ مَالًا وَّعَدَّدَهٗ ③

3. ಸಂಪತ್ತನ್ನು ಶೇಖರಿಸಿಟ್ಟು ಅದನ್ನು ಎಣಿಸುತ್ತಾ ಇರುವವನು.

يَحْسَبُ اَنَّ مَالَهٗٓ اَخْلَدَهٗ ④

4. ತನ್ನ ಸಂಪತ್ತು ಅವನನ್ನು ಅಮರಗೊಳಿಸುವುದೆಂದು ಅವನು ಭಾವಿಸುತ್ತಾನೆ.

كَلَّا لَيُنْۢبَذَنَّ فِي الْحُطَمَةِ ⑤

5. (ಅವನು ಭಾವಿಸುವಂತೆ) ಅಲ್ಲ. ಖಂಡಿತವಾಗಿಯೂ ಅವನು 'ಹುತಮಃ'ಕ್ಕೆ ದೂಡಲ್ಪಡುವನು.

وَمَآ اَدْرٰىكَ مَا الْحُطَمَةُ ⑥

6. 'ಹುತಮಃ' ಏನೆಂದು ನಿನಗೇನು ಗೊತ್ತು?

نَارُ اللّٰهِ الْمُوْقَدَةُ ⑦

7. ಅದು ಅಲ್ಲಾಹನ ಜ್ವಲಿಸುವ ಅಗ್ನಿಯಾಗಿದೆ.

الَّتِيْ تَطَّلِعُ عَلَى الْاَفْـِٕدَةِ ⑧

8. ಅದು ಹೃದಯಗಳ ಮೇಲೆ ಎರಗುವುದು.

اِنَّهَا عَلَيْهِمْ مُّؤْصَدَةٌ ⑨

9. ಅದು ಅವರ ಸುತ್ತಲೂ ಆವರಿಸುವುದು.

فِيْ عَمَدٍ مُّمَدَّدَةٍ ⑩

10. ಎತ್ತರವಾದ ಸ್ತಂಭಗಳೋಪಾದಿಯಲ್ಲಿ.



سُورَةُ الْفِيلِ مَكِّيَّةٌ وَّهِيَ مَعَ الْبَسْمَلَةِ سِتُّ آيَاتٍ

## 105. ಅಲ್‌ಫೀಲ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 6 ಆಯತ್‌ಗಳಿವೆ.

بِسْمِ اللّٰهِ الرَّحْمٰنِ الرَّحِيْمِ ①

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

اَلَمْ تَرَ كَيْفَ فَعَلَ رَبُّكَ بِاَصْحٰبِ الْفِيْلِ ②

2. ನಿನ್ನ ಪ್ರಭು ಆ ಆನೆಯ ಜನರೊಡನೆ[549] ಹೇಗೆ ವರ್ತಿಸಿದನೆಂದು ನೀನು ಕಂಡಿಲ್ಲವೇ?

اَلَمْ يَجْعَلْ كَيْدَهُمْ فِيْ تَضْلِيْلٍ ③

3. ಅವನು ಅವರ ಕುತಂತ್ರ ವಿಫಲಗೊಳ್ಳುವಂತೆ ಮಾಡಲಿಲ್ಲವೇ?

وَّاَرْسَلَ عَلَيْهِمْ طَيْرًا اَبَابِيْلَ ④

4. ಅವನು ಅವರ ಮೇಲೆ ಗುಂಪು ಗುಂಪಾಗಿ ಪಕ್ಷಿಗಳನ್ನು[550] ಕಳುಹಿಸಿದನು.

تَرْمِيْهِمْ بِحِجَارَةٍ مِّنْ سِجِّيْلٍ ⑤

5. ಅವು ಕಲ್ಲುಗಳ ಮೇಲೆ ಅವರನ್ನು (ಅವರ ಶವಗಳನ್ನು) ಹೊಡೆಯುತ್ತಿದ್ದವು.[551]

فَجَعَلَهُمْ كَعَصْفٍ مَّأْكُوْلٍ ⑥

6. ಹಾಗೆ ಅವನು ಅವರನ್ನು (ಜಾನುವಾರುಗಳು) ತಿಂದು ಬಿಟ್ಟ ಹುಲ್ಲುಕಡ್ಡಿಗಳಂತೆ ಮಾಡಿಬಿಟ್ಟನು.

549. "ಆನೆಯ ಜನರು" (ಅಸ್‌ಹಾಬುಲ್ ಫೀಲ್) ಎಂಬುದು ಯಮನ್ ದೇಶದ ಗವರ್ನರ್ ಆಗಿದ್ದ ಅಬ್‌ರಹ ಎಂಬವನ ನಾಯಕತ್ವದಲ್ಲಿದ್ದ ಆನೆ ಪಡೆ. ಸುಮಾರು 60 ಸಾವಿರ ಸೈನಿಕರೊಂದಿಗೆ ಮಕ್ಕವನ್ನು ಆಕ್ರಮಿಸಿ ಕಅ್‌ಬವನ್ನು ನಿರ್ನಾಮಮಾಡಲು ಅವನು ಬಂದನು. ಆದರೆ ಅವನ ಉದ್ದೇಶ ಫಲಿಸಲಿಲ್ಲ. ಮಕ್ಕಕ್ಕೆ ಸಮೀಪ ತಲಪಿದಾಗ ಆ ಸೈನಿಕರಲ್ಲಿ ಹೆಚ್ಚಿನವರು ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿ ಗುಂಪು ಗುಂಪಾಗಿ ಸತ್ತು ಬಿದ್ದರು. ಉಳಿದವರು ಭಯಭೀತಿಯಿಂದ ಹಿಂದಿರುಗಿ ಓಡಿಹೋದರು. ಹಾಗೆ ಅಲ್ಲಾಹನು ಅವರ ಪ್ರಯತ್ನವನ್ನು ವಿಫಲಗೊಳಿಸಿದನು. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವ ಸಲ್ಲಂ)ರ ಜನನಕ್ಕೆ ಒಂದು ತಿಂಗಳು ಮುಂಚೆ ಈ ಘಟನೆ ನಡೆಯಿತು. ಇದು ಕಅ್‌ಬದ ನಿಜವಾದ ವಾರೀಸುದಾರ ಹಝ್ರತ್ ಮುಹಮ್ಮದ್ ಪೈಗಂಬರ್ (ಸ) ಗರ್ಭಸ್ಥ ಶಿಶುವಾಗಿದ್ದಾಗ ಅಲ್ಲಾಹನು ತೋರಿಸಿದ ಒಂದು ಅದ್ಭುತ ದೃಷ್ಟಾಂತವಾಗಿತ್ತು.

550. ಹೆಣಗಳನ್ನು ಮುಕ್ಕುವ ರಣಹದ್ದುಗಳು.

551. ಹೊಡೆದು ತಿನ್ನುತ್ತಿದ್ದವು ಎಂದು ಅರ್ಥ.

سُورَةُ قُرَيْشٍ مَكِّيَّةٌ وَهِيَ مَعَ الْبَسْمَلَةِ خَمْسُ آيَاتٍ

## 106. ಖುರೈಶ್

ಮಕ್ಕದಲ್ಲಿ ಅವತೀರ್ಣವಾದುದು.

ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 5 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللّٰهِ الرَّحْمٰنِ الرَّحِيْمِ ۝١

**2. ಖುರೈಶಿಗಳನ್ನು ಒಂದುಗೂಡಿಸಲಿಕ್ಕೋಸ್ಕರ.**

لِاِيْلٰفِ قُرَيْشٍ ۝٢

**3. ಚಳಿಗಾಲದ ಮತ್ತು ಬೇಸಿಗೆ ಕಾಲದ ಅವರ ಪ್ರಯಾಣದಲ್ಲಿ ಅವರನ್ನು ಒಲಿಸಲಿಕ್ಕೋಸ್ಕರ** (ನಾವು ಅಬ್‌ರಹನನ್ನು ನಿರ್ಮೂಲ ಮಾಡಿದೆವು).

اٖلٰفِهِمْ رِحْلَةَ الشِّتَآءِ وَالصَّيْفِ ۝٣

**4. ಆದ್ದರಿಂದ ಈ ಗೃಹದ [552] ಪ್ರಭುವನ್ನು ಅವನು ಆರಾಧಿಸಲಿ.**

فَلْيَعْبُدُوْا رَبَّ هٰذَا الْبَيْتِ ۝٤

**5. ಅವನು ಅವರಿಗೆ ಆಹಾರ ನೀಡಿ ಹಸಿವೆಯಿಂದ ಅವರನ್ನು** ರಕ್ಷಿಸಿದನು **ಮತ್ತು ಭಯದಿಂದ ಪಾರುಮಾಡಿ ಅವರಿಗೆ ಶಾಂತಿ ನೀಡಿದನು.**

الَّذِيْٓ اَطْعَمَهُمْ مِّنْ جُوْعٍ ۙ وَّاٰمَنَهُمْ مِّنْ خَوْفٍ ۝٥

552. ಕಅ್‌ಬದ.

سُوْرَةُ الْمَاعُوْنِ مَكِّيَّةٌ وَّهِيَ مَعَ الْبَسْمَلَةِ ثَمَانِيْ اٰيَاتٍ

## 107. ಅಲ್‌ಮಾಊನ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 8 ಆಯತ್‌ಗಳಿವೆ.

| | |
|---|---|
| 1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ. | بِسْمِ اللّٰهِ الرَّحْمٰنِ الرَّحِيْمِ ① |
| 2. ಧರ್ಮವನ್ನು ಸುಳ್ಳಾಗಿಸುವವನನ್ನು ನೀನು ಕಂಡೆಯಾ? | اَرَءَيْتَ الَّذِيْ يُكَذِّبُ بِالدِّيْنِ ② |
| 3. ಅನಾಥನನ್ನು ದೂರಕ್ಕಟ್ಟುವವನೇ ಅವನು. | فَذٰلِكَ الَّذِيْ يَدُعُّ الْيَتِيْمَ ③ |
| 4. ನಿರ್ಗತಿಕನಿಗೆ ಆಹಾರ ನೀಡಲು ಅವನು ಪ್ರೇರೇಪಿಸುವುದಿಲ್ಲ. | وَلَا يَحُضُّ عَلٰى طَعَامِ الْمِسْكِيْنِ ④ |
| 5, 6. ಅಂತು, ತಮ್ಮ ಪ್ರಾರ್ಥನೆಯ ಬಗ್ಗೆ ಶ್ರದ್ಧೆ ಇಲ್ಲದೆ ಪ್ರಾರ್ಥಿಸುವವರಿಗೆ ವಿನಾಶ. | فَوَيْلٌ لِّلْمُصَلِّيْنَ ⑤ الَّذِيْنَ هُمْ عَنْ صَلَاتِهِمْ سَاهُوْنَ ⑥ |
| 7. ಅವರು ತೋರಿಕೆಯ ಕೆಲಸ ಮಾಡುತ್ತಾರೆ. | الَّذِيْنَ هُمْ يُرَآءُوْنَ ⑦ |
| 8. ಅವರು ಅಲ್ಪವಾದ ಔದಾರ್ಯವನ್ನು (ಕೂಡ) ತಡೆಯುವವರಾಗಿದ್ದಾರೆ. | وَيَمْنَعُوْنَ الْمَاعُوْنَ ⑧ |



سُوْرَةُ الْكَوْثَرِ مَكِّيَّةٌ وَّهِيَ مَعَ الْبَسْمَلَةِ اَرْبَعُ اٰيَاتٍ

## 108. ಅಲ್‌ಕೌಸರ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 4 ಆಯತ್‌ಗಳಿವೆ.

| | |
|---|---|
| 1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ. | بِسْمِ اللّٰهِ الرَّحْمٰنِ الرَّحِيْمِ ① |
| 2. ನಿಶ್ಚಯವಾಗಿಯೂ ನಾವು ನಿನಗೆ 'ಕೌಸರ್'[553] ದಯಪಾಲಿಸಿದ್ದೇವೆ. | اِنَّآ اَعْطَيْنٰكَ الْكَوْثَرَ ② |
| 3. ಆದ್ದರಿಂದ ನೀನು ನಿನ್ನ ಪ್ರಭುವಿಗೆ ಪ್ರಾರ್ಥನೆ ಸಲ್ಲಿಸು ಮತ್ತು ತ್ಯಾಗ-ಬಲಿದಾನ ಮಾಡು. | فَصَلِّ لِرَبِّكَ وَانْحَرْ ③ |
| 4. ನಿಸ್ಸಂಶಯವಾಗಿಯೂ ನಿನ್ನ ಶತ್ರುವೇ ಸಂತಾನರಹಿತನು. | اِنَّ شَانِئَكَ هُوَ الْاَبْتَرُ ④ |

553. ಕೌಸರ್ = ಆಧಿಕ್ಯ, ಧಾರಾಳ ಒಳಿತುಗಳು, ಅಪಾರವಾದ ಅನುಗ್ರಹಗಳು.

سُورَةُ الْكَافِرُونَ مَكِّيَّةٌ وَهِيَ مَعَ الْبَسْمَلَةِ سَبْعُ آيَاتٍ

## 109. ಅಲ್‌ಕಾಫಿರೂನ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 7 ಆಯತ್‌ಗಳಿವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

2. ಹೇಳು: 'ಎಲ್ಲೈ ಅವಿಶ್ವಾಸಿಗಳೇ,

قُلْ يٰٓاَيُّهَا الْكٰفِرُوْنَ ②

3. 'ನೀವು ಆರಾಧಿಸುವುದನ್ನು ನಾನು ಆರಾಧಿಸುವುದಿಲ್ಲ.

لَآ اَعْبُدُ مَا تَعْبُدُوْنَ ③

4. 'ನಾನು ಆರಾಧಿಸುವವನನ್ನು ನೀವೂ ಆರಾಧಿಸುವುದಿಲ್ಲ.

وَلَآ اَنْتُمْ عٰبِدُوْنَ مَآ اَعْبُدُ ④

5. 'ಮತ್ತು ನೀವು ಆರಾಧಿಸುವುದನ್ನು ನಾನು ಆರಾಧಿಸುವವನಲ್ಲ.

وَلَآ اَنَا عَابِدٌ مَّا عَبَدْتُّمْ ⑤

6. 'ನಾನು ಆರಾಧಿಸುವವನನ್ನು ನೀವೂ ಆರಾಧಿಸುವವರಲ್ಲ.

وَلَآ اَنْتُمْ عٰبِدُوْنَ مَآ اَعْبُدُ ⑥

7. ನಿಮಗೆ ನಿಮ್ಮ ಧರ್ಮ; ನನಗೆ ನನ್ನ ಧರ್ಮ.'

لَكُمْ دِيْنُكُمْ وَلِيَ دِيْنِ ⑦



سُورَةُ النَّصْرِ مَدَنِيَّةٌ وَهِيَ مَعَ الْبَسْمَلَةِ أَرْبَعُ آيَاتٍ

## 110. ಅನ್ನಸ್ರ್

ಮದೀನದಲ್ಲಿ[554] ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 4 ಆಯತ್‌ಗಳಿವೆ.

1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ①

2. ಅಲ್ಲಾಹನ ಸಹಾಯ ಮತ್ತು ವಿಜಯ ಪ್ರಾಪ್ತಿಯಾದಾಗ,

اِذَا جَآءَ نَصْرُ اللّٰهِ وَالْفَتْحُ ②

3. ಹಾಗೂ ಅಲ್ಲಾಹನ ಧರ್ಮದಲ್ಲಿ ಜನರು ಗುಂಪು ಗುಂಪಾಗಿ ಬಂದು ಸೇರುವುದನ್ನು ನೀನು ಕಂಡಾಗ,

وَرَاَيْتَ النَّاسَ يَدْخُلُوْنَ فِيْ دِيْنِ اللّٰهِ اَفْوَاجًا ③

4. ನೀನು ನಿನ್ನ ಪ್ರಭುವಿನ ಸ್ತುತಿಕೀರ್ತನೆ ಮಾಡುವುದರೊಂದಿಗೆ ಅವನ ಪಾವಿತ್ರ್ಯವನ್ನು ಕೊಂಡಾಡು ಮತ್ತು ಅವನೊಡನೆ ಕ್ಷಮೆ ಯಾಚನೆ ಮಾಡು. ನಿಶ್ಚಯವಾಗಿಯೂ ಅವನು (ತನ್ನ ಭಕ್ತದಾಸರ ಕಡೆಗೆ) ಕನಿಕರದಿಂದ ಪದೇ ಪದೇ ತಿರುಗುವವನಾಗಿದ್ದಾನೆ.

فَسَبِّحْ بِحَمْدِ رَبِّكَ وَاسْتَغْفِرْهُ ؕ اِنَّهٗ كَانَ تَوَّابًا ④

554. ಈ ಅಧ್ಯಾಯ ಹಿಜ್‌ರತ್ ನಂತರ ಮಕ್ಕದಲ್ಲಿ (ಹಜ್ಜತುಲ್ ವಿದಾ ಸಂದರ್ಭದಲ್ಲಿ) ಅವತೀರ್ಣವಾಗಿದೆ. ಮುಹಮ್ಮದ್ ಪೈಗಂಬರ್ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ರ ಮದೀನ ಜೀವನ ಕಾಲದಲ್ಲಿ ಇದು ಅವತೀರ್ಣಗೊಂಡದ್ದರಿಂದ ಈ ಅಧ್ಯಾಯವನ್ನು "ಮದನಿಯ್ಯ" ಎಂದು ಹೇಳುತ್ತಾರೆ.

سُورَةُ اللَّهَبِ مَكِّيَّةٌ وَهِيَ مَعَ الْبَسْمَلَةِ سِتُّ آيَاتٍ

## 111. ಅಲ್ಲಹಬ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 6 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللَّهِ الرَّحْمَٰنِ الرَّحِيمِ ①

**2. ಅಬೂಲಹಬನ[555] ಎರಡು ಕೈಗಳೂ ನಾಶವಾದವು. ಅವನೂ ನಾಶವಾದನು.**

تَبَّتْ يَدَا أَبِي لَهَبٍ وَتَبَّ ②

**3. ಅವನ ಸಂಪತ್ತು ಮತ್ತು ಅವನ ಸಂಪಾದನೆ ಅವನಿಗೆ ಉಪಯುಕ್ತವಾಗಲಿಲ್ಲ.**

مَا أَغْنَىٰ عَنْهُ مَالُهُ وَمَا كَسَبَ ③

**4. ಶೀಘ್ರದಲ್ಲೇ ಅವನು ಜ್ವಲಿಸುವ ಅಗ್ನಿಯನ್ನು ಪ್ರವೇಶಿಸುವನು.**

سَيَصْلَىٰ نَارًا ذَاتَ لَهَبٍ ④

**5. ಇಂಧನವನ್ನು ಹೊರುವ ಅವನ ಪತ್ನಿ ಸಹ[556]** (ಅಗ್ನಿಯನ್ನು ಪ್ರವೇಶಿಸುವಳು).

وَامْرَأَتُهُ حَمَّالَةَ الْحَطَبِ ⑤

**6. ಅವಳ ಕೊರಳಲ್ಲಿ ಖರ್ಜೂರ ಮರದ ನಾರಿನಿಂದ ಹೆಣೆದ ಒಂದು ಹಗ್ಗವಿರುವುದು.[557]**

فِي جِيدِهَا حَبْلٌ مِّن مَّسَدٍ ⑥

555. ಅಬೂಲಹಬ್ = ಜ್ವಾಲೆಯ ಪಿತ. ಇಸ್ಲಾಮಿಗೆ ವಿರುದ್ಧವಾಗಿ ವಿದ್ವೇಷಾಗ್ನಿ ಹಬ್ಬಿಸುವವರೆಲ್ಲರೂ ಈ ಪದದ ವ್ಯಾಪಕಾರ್ಥದ ವ್ಯಾಪ್ತಿಯೊಳಗೆ ಬರುತ್ತಾರೆ.
ಇದು ಅಲ್ಲಾಹನ ವಚನವೆಂಬ ವಿಚಾರವನ್ನು ನಾವು ಗಮನಿಸುವಾಗ ಅಂತ್ಯಕಾಲದಲ್ಲಿ ಅಗ್ನಿ ಪ್ರಯೋಗದಿಂದ ಲೋಕದಲ್ಲಿ ಅತ್ಯಧಿಕ ಪ್ರಭಾವ ಬೀರಿ ನಾಶನಷ್ಟಗಳನ್ನುಂಟುಮಾಡುವ "ಯಅ್‌ಜೂಜ್ ಮಅ್‌ಜೂಜ್" ಎಂಬ ಎರಡು ಮಹಾಶಕ್ತಿಗಳ (ಅಮೇರಿಕ ಮತ್ತು ರಶ್ಯಾ ಬಣಗಳ) ಉದ್ಭವಕ್ಕೆ ಸಂಬಂಧಿಸಿದ ಭವಿಷ್ಯ ನುಡಿ ಸಹ ಇದರಲ್ಲಿ ಅಡಕವಾಗಿದೆ ಎಂದು ಮನವರಿಕೆಯಾಗುತ್ತದೆ.

556. ಪತ್ನಿ ಎಂದರೆ, ಮೇಲೆ ಹೇಳಿದ ಮಹಾಶಕ್ತಿಗಳ ಬಣಗಳಲ್ಲಿ ಸೇರಿದ ರಾಷ್ಟ್ರಗಳೆಂದು ತಾತ್ಪರ್ಯ. ಅವರೆಲ್ಲರೂ ಬಾಹ್ಯವಾಗಿ ಅಗ್ನಿಜ್ವಾಲೆಯ ಪ್ರಯೋಗದಲ್ಲಿ ಸಹಕರಿಸುವುದರೊಂದಿಗೆ ಇಸ್ಲಾಮಿಗೆ ವಿರುದ್ಧವಾಗಿ ಧಾರ್ಮಿಕವಾಗಿಯೂ ತಾತ್ವಿಕವಾಗಿಯೂ ಕುಪ್ರಚಾರದ ಅಗ್ನಿಯನ್ನು ಉರಿಸುತ್ತಾರೆ. ಆದರೆ ಅವರ ಪ್ರಯತ್ನಗಳೆಲ್ಲ ವಿಫಲವಾಗುವುದೆಂದೂ ಅವರು ನಾಶವಾಗುವರೆಂದೂ ಇಲ್ಲಿ ಭವಿಷ್ಯ ನುಡಿಯಲಾಗಿದೆ.

557. ಮಹಾಶಕ್ತಿಗಳ ಚೇಲಾ ರಾಷ್ಟ್ರಗಳು ತೋರಿಕೆಗೆ ಸ್ವತಂತ್ರರಂತೆ ಕಂಡರೂ ನಿಜವಾಗಿಯೂ ಅವರು ಸ್ವತಂತ್ರರಲ್ಲ ಎಂದು ತಾತ್ಪರ್ಯ.



سُورَةُ الْإِخْلَاصِ مَكِّيَّةٌ وَهِيَ مَعَ الْبَسْمَلَةِ خَمْسُ آيَاتٍ

## 112. ಅಲ್ ಇಖ್‌ಲಾಸ್

ಮಕ್ಕದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 5 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللَّهِ الرَّحْمَٰنِ الرَّحِيمِ ①

**2. ಹೇಳು: 'ಅವನು ಅಲ್ಲಾಹನು; ಏಕನು.**

قُلْ هُوَ اللَّهُ أَحَدٌ ②

**3. 'ಅವನು ನಿರಪೇಕ್ಷನು** (ಮತ್ತು ಸರ್ವರಿಗೂ ಆಶ್ರಯದಾತನು).

اللَّهُ الصَّمَدُ ③

**4. ಅವನು ಜನಕನಲ್ಲ; ಜಾತನೂ ಅಲ್ಲ.[558]**

لَمْ يَلِدْ وَلَمْ يُولَدْ ④

**5. 'ಅವನಿಗೆ ಸಮನಾಗಿ ಯಾರೂ ಇಲ್ಲ.'**

وَلَمْ يَكُن لَّهُ كُفُوًا أَحَدٌ ⑤

558. ಅವನು ಯಾರ ಪಿತನೂ ಅಲ್ಲ; ಪುತ್ರನೂ ಅಲ್ಲ.

## سُورَةُ الْفَلَقِ مَدَنِيَّةٌ وَهِيَ مَعَ الْبَسْمَلَةِ سِتُّ آيَاتٍ

## 113. ಅಲ್‌ಫಲಖ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 6 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللَّهِ الرَّحْمَٰنِ الرَّحِيمِ ①

**2. ಹೇಳು: 'ನಾನು ಸೃಷ್ಟಿ ಜಾಲಗಳ ಪ್ರಭುವಿನ ಅಭಯವನ್ನು ಯಾಚಿಸುತ್ತೇನೆ -**

قُلْ أَعُوذُ بِرَبِّ الْفَلَقِ ②

**3. ಅವನ ಸೃಷ್ಟಿಗಳ ದೋಷಗಳಿಂದೆಲ್ಲ.**

مِنْ شَرِّ مَا خَلَقَ ③

**4. ಅಂಧಕಾರ ಆವರಿಸುವಾಗ ಉಂಟಾಗುವ ದೋಷ ದಿಂದಲೂ**

وَمِنْ شَرِّ غَاسِقٍ إِذَا وَقَبَ ④

**5. ಗಂಟುಗಳ ಮೇಲೆ ಊದುವವರ[559] ಉಪದ್ರವ ದಿಂದಲೂ**

وَمِنْ شَرِّ النَّفَّاثَاتِ فِي الْعُقَدِ ⑤

**6. ಮತ್ಸರಿ ಮತ್ಸರ ಪಡುವಾಗ ಉಂಟಾಗುವ ಅವನ ಉಪದ್ರವದಿಂದಲೂ** (ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ)**.**

وَمِنْ شَرِّ حَاسِدٍ إِذَا حَسَدَ ⑥

559. ಅರ್ಥಾತ್, ಸಂಬಂಧಗಳನ್ನು ಕೆಡಿಸುವ ಉದ್ದೇಶದಿಂದ ಚಾಡಿಮಾತುಗಳ ವಿಷಬೀಜಗಳನ್ನು ಬಿತ್ತುವವರು.



## سُورَةُ النَّاسِ مَدَنِيَّةٌ وَهِيَ مَعَ الْبَسْمَلَةِ سَبْعُ آيَاتٍ

## 114. ಅನ್ನಾಸ್

ಮದೀನದಲ್ಲಿ ಅವತೀರ್ಣವಾದುದು.
ಈ ಅಧ್ಯಾಯದಲ್ಲಿ ಬಿಸ್ಮಿಲ್ಲಾಹ್ ಸಹಿತ 7 ಆಯತ್‌ಗಳಿವೆ.

**1. ಪರಮ ದಯಾವಂತನೂ ಕಾರುಣ್ಯನಿಧಿಯೂ ಆದ ಅಲ್ಲಾಹನ ನಾಮದಿಂದ.**

بِسْمِ اللَّهِ الرَّحْمَٰنِ الرَّحِيمِ ①

**2. ಹೇಳು: 'ನಾನು ಅಭಯ ಯಾಚಿಸುತ್ತೇನೆ - ಮನುಷ್ಯರ ಪ್ರಭುವಿನ,**

قُلْ أَعُوذُ بِرَبِّ النَّاسِ ②

**3. 'ಮನುಷ್ಯರ ಸಾರ್ವಭೌಮನ**

مَلِكِ النَّاسِ ③

**4. '**(ಮತ್ತು) **ಮನುಷ್ಯರ ಆರಾಧ್ಯನ.**

إِلَٰهِ النَّاسِ ④

**5. '**(ದುರ್ಬೋಧನೆ ಮಾಡಿ) **ಹಿಂದೆ ಸರಿಯುವ ದುರ್ಬೋಧಕನ ಉಪದ್ರವದಿಂದ** (ನಾನು ಅಭಯ ಯಾಚಿಸುತ್ತೇನೆ)**.**

مِنْ شَرِّ الْوَسْوَاسِ الْخَنَّاسِ ⑤

**6. 'ಅವನು** (ಆ ದುರ್ಬೋಧಕನು) **ಮನುಷ್ಯ ಹೃದಯಗಳಲ್ಲಿ ಸಂಶಯ ಮೂಡಿಸುತ್ತಾನೆ.**

الَّذِي يُوَسْوِسُ فِي صُدُورِ النَّاسِ ⑥

**7.** ಅವನು **ಜಿನ್ನ್** (ಅಸಾಮಾನ್ಯ) **ಮತ್ತು ಇನ್ಸ್** (ಸಾಮಾನ್ಯ) **ವರ್ಗದಲ್ಲಿ ಸೇರಿದವನಾಗಿರುತ್ತಾನೆ.'**

مِنَ الْجِنَّةِ وَالنَّاسِ ⑦

# دُعَاءُ خَتْمِ الْقُرْاٰنِ

## ಖುರ್‌ಆನ್ ಪಾರಾಯಣ ಸಮಾಪ್ತಗೊಂಡಾಗ ಮಾಡುವ ಪ್ರಾರ್ಥನೆ

اَللّٰهُمَّ اٰنِسْ وَحْشَتِيْ فِيْ قَبْرِيْ
اَللّٰهُمَّ ارْحَمْنِيْ بِالْقُرْاٰنِ الْعَظِيْمِ
وَاجْعَلْهُ لِيْ اِمَامًا وَّ نُوْرًا
وَّ هُدًى وَّ رَحْمَةً اَللّٰهُمَّ
ذَكِّرْنِيْ مِنْهُ مَا نَسِيْتُ وَ
عَلِّمْنِيْ مِنْهُ مَا جَهِلْتُ
وَارْزُقْنِيْ تِلَاوَتَهٗ اٰنَآءَ الَّيْلِ وَ
اٰنَآءَ النَّهَارِ وَاجْعَلْهُ لِيْ
حُجَّةً يَّا رَبَّ الْعٰلَمِيْنَ

ಓ ಅಲ್ಲಾಹ್, ನನ್ನ ಗೋರಿಯಲ್ಲಿ ನನಗುಂಟಾಗುವ ಭಯವನ್ನು ನೀನು ನಿವಾರಿಸು. ಓ ಅಲ್ಲಾಹ್, ಈ ಮಹತ್ತಾದ ಖುರ್‌ಆನಿನ ಅನುಗ್ರಹ ದಿಂದ ನನ್ನ ಮೇಲೆ ಕರುಣೆ ವರ್ಷಿಸು. ಅದನ್ನು ನನಗೆ ಮಾದರಿಯನ್ನಾಗಿಯೂ ಪ್ರಕಾಶವನ್ನಾಗಿಯೂ ಮಾರ್ಗದರ್ಶಕವನ್ನಾಗಿಯೂ ಅನುಗ್ರಹವನ್ನಾಗಿಯೂ ಮಾಡು. ಓ ಅಲ್ಲಾಹ್, ನಾನು ಅದರಿಂದ ಮರೆತು ಬಿಟ್ಟದ್ದನ್ನು ನೀನು ನನಗೆ ನೆನಪಿಸಿಕೊಡು ಹಾಗೂ ನನಗೆ ಅದರಲ್ಲಿ ತಿಳಿಯದಿರುವುದನ್ನು ನೀನು ನನಗೆ ಕಲಿಸಿಕೊಡು. ರಾತ್ರಿ ಹಗಲು ಅದನ್ನು ಪಾರಾಯಣ ಮಾಡುವ ಸೌಭಾಗ್ಯವನ್ನು ನೀನು ನನಗೆ ದಯಪಾಲಿಸು. ಸರ್ವಲೋಕಗಳ ಪ್ರಭೂ, ನೀನು ಅದನ್ನು ನನಗೆ ಒಳಿತಿನ ಪ್ರಮಾಣವನ್ನಾಗಿ ಮಾಡು.